ಚಿತ

# ಕುಮಾ ... ರಾಮಾಯಣ

ಸಂಪುಟ ೨

ತೊರ

ಗದ್ಯಾನುವಾದ :

ಕೆ. ಎಸ್. ಕೃಷ್ಣಮೂರ್ತಿ

ಗ

ಕೆ. ಎಸ್.



ಕನ್ನಡ ಸಾಹಿತ್ಯ ಪರಿಷತ್ತು

ಚಾಮರಾಜಪೇಟೆ : : ಬೆಂಗಳೂರು-18.

1977

ಟವಾಗುವ ಕಾವ್ಯಗಳು

* ಆದಿಪುರಾಣ * ಗದಾಯುದ್ಧ
ನಾಥ ಪುರಾಣ (ಕರ್ಣಪಾರ್ಯ)
ಮಿನಾಥ ಪುರಾಣ (ನೇಮಿಚಂದ್ರ)
ಶೋಧರ ಚರಿತೆ * ಅನಂತನಾಥ
ಪುರಾಣ * ಧರ್ಮಾಮೃತ
ಕರ್ಣಾಟಕ ಕಾದಂಬರಿ
ಪಂಚತಂತ್ರ * ನಳಚಂಪು
ಗಿರಿಜಾಕಲ್ಯಾಣ ಮಹಾಪ್ರಬಂಧ
ನ್ನಾಥ ವಿಜಯ * ಕಬ್ಬಿಗರ ಕಾವ
ವಿಲಾಸ * ಹರಿಹರನ ರಗಳೆಗಳು

[ಮುಂದುವರಿಸಿದೆ]

ಹದಿನೈದು ರೂಪಾಯಿಗಳು

ವಜ್ರಮಹೋತ್ಸವ ವರ್ಷ

ಪಂಚವಾರ್ಷಿಕ ಯೋಜನೆಯ ಪುಸ್ತಕಮಾಲೆ-109

ಕುಮಾರ ವಾಲ್ಮೀಕಿ ವಿರಚಿತ

# ತೊರವೆ ರಾಮಾಯಣ

ಸಂಪುಟ ೨ II

ಗದ್ಯಾನುವಾದ :
ಕೆ. ಎಸ್. ಕೃಷ್ಣಮೂರ್ತಿ



ಕನ್ನಡ ಸಾಹಿತ್ಯ ಪರಿಷತ್ತು
ಚಾಮರಾಜಪೇಟೆ : : ಬೆಂಗಳೂರು-18.
1977

TORAVE RAMAYANA Vol. II by Kumara Valmiki. Original with Prose rendering by Sri K. S. Krishna Murthy, First Published in 1977. Kannada Sahitya Parishat, Bangalore-560 018 in Commemoration of its Diamond Jubilee, Demy Octavo Pages xvi+782 Price Rs. 15-00



ಮೊದಲನೆಯ ಮುದ್ರಣ : 1977

ಸಂಪುಟ-೨

ಬೆಲೆ : ಹದಿನೈದು ರೂಪಾಯಿಗಳು

ಪ್ರತಿ ಸಂಪುಟಕ್ಕೆ ಹನ್ನೆರಡು ರೂಪಾಯಿ ಬೆಲೆಯಂತೆ ಮೂರು ಸಂಪುಟಗಳಲ್ಲಿ ತರಬೇಕಾಗಿದ್ದ ಈ ಗ್ರಂಥವನ್ನು ಕಡಿಮೆ ಬೆಲೆಗೆ ಕೊಡುವ ದೃಷ್ಟಿಯಿಂದ ಎರಡು ಸಂಪುಟ ಬರುವಂತೆ ಬೈಂಡ್ ಮಾಡಿ ಒಂದೊಂದು ಸಂಪುಟದ ಬೆಲೆಯನ್ನು 15-00 ರೂ. ಇಡಲಾಗಿದೆ.

ಪ್ರಕಾಶಕರು : ಕನ್ನಡ ಸಾಹಿತ್ಯ ಪರಿಷತ್ತು, ಚಾಮರಾಜಪೇಟೆ, ಬೆಂಗಳೂರು-560 018

ಮುದ್ರಣ : ಶ್ರೀ ಮೀರಾ ಪ್ರಿಂಟರ್ಸ್, ಶಿವರಾಂಪೇಟೆ, ಮೈಸೂರು-570 001

# ಪ್ರಸ್ತಾವನೆ

ಕನ್ನಡದ ಪ್ರಾಚೀನ ಕಾವ್ಯಸಂಪತ್ತು ಅಮೂಲ್ಯವಾಗಿದೆ. ಈ ಸಂಪತ್ತನ್ನು ಈಗಿನ ಕನ್ನಡ ಜನತೆ ಓದಿ ತಿಳಿದುಕೊಳ್ಳುವುದು ಅತ್ಯಾವಶ್ಯಕವಾಗಿದೆ. ಆದರೆ ಈ ಕಾವ್ಯಗಳು ಜನಸಾಮಾನ್ಯರಿಗೆ ಕಠಿಣವಾಗಿ ತೋರುವುದರಿಂದ ಇವುಗಳ ವ್ಯಾಸಂಗದಲ್ಲಿ ಉತ್ಸಾಹಪೂರ್ಣವಾದ ಪ್ರವೃತ್ತಿ ಕಂಡುಬರುತ್ತಿಲ್ಲ. ಅನೇಕ ಸಂದರ್ಭಗಳಲ್ಲಿ ಮೂಲ ಗ್ರಂಥಗಳೂ ದೊರೆಯುವುದಿಲ್ಲ. ಎಷ್ಟೋವೇಳೆ ವಿಶ್ವವಿದ್ಯಾನಿಲಯದವರು ಪ್ರಾಚೀನ ಕಾವ್ಯಗಳನ್ನು ಕನ್ನಡ ಬಿ. ಎ., ಎಂ. .ಎ. ಪದವಿಪರೀಕ್ಷೆಗಳಿಗೆ ಪಠ್ಯಪುಸ್ತಕಗಳಾಗಿ ಇಟ್ಟಾಗಲಂತೂ ಮೂಲಗ್ರಂಥಗಳ ಅಭಾವ ವಿಶೇಷವಾಗಿ ಕಂಡುಬರುತ್ತದೆ.

ಆದ್ದರಿಂದ ಈ ಕೊರತೆಯನ್ನು ನಿವಾರಣೆ ಮಾಡಲು ಕನ್ನಡ ಸಾಹಿತ್ಯ ಪರಿಷತ್ತು ತನ್ನ ಪಂಚವಾರ್ಷಿಕ ಯೋಜನೆಯಲ್ಲಿ ಹಳಗನ್ನಡ ಕಾವ್ಯಗಳ ಪುನರ್ಮುದ್ರಣಕ್ಕೆ ವಿಶೇಷ ಗಮನಹರಿಸಿ ಅದಕ್ಕಾಗಿ ಪ್ರತ್ಯೇಕ ಯೋಜನೆಯನ್ನು ಹಾಕಿಕೊಂಡಿತು. ಆರಿಸಿದ ಹಳಗನ್ನಡ ಹಾಗೂ ನಡುಗನ್ನಡ ಕಾವ್ಯಗಳನ್ನು ಹೊಸಗನ್ನಡ ಗದ್ಯದಲ್ಲಿ ಅನುವಾದಿಸಿ, ಆ ಅನುವಾದದೊಡನೆ ಮೂಲಪಾಠವನ್ನು ಪ್ರಕಟಿಸಿ ಪುಸ್ತಕರೂಪದಲ್ಲಿ ಹೊರತರುವುದು ಮತ್ತು ಸರ್ಕಾರದ ಸಹಾಯ ಪಡೆದು ಆ ಪುಸ್ತಕಗಳು ಸಾಧ್ಯವಾದಮಟ್ಟಿಗೆ ಸುಲಭ ಬೆಲೆ ಯಲ್ಲಿ ದೊರೆಯುವಂತೆ ಮಾಡುವುದು, ಈ ಯೋಜನೆಯ ಮುಖ್ಯ ಅಂಶಗಳು.

ಈ ಯೋಜನೆಯ ಕಾರ್ಯನಿರ್ವಹಣೆಗಾಗಿ ಪರಿಷತ್ತು ಮೊದಲು ಅನೇಕ ವಿದ್ವಾಂಸರಿಗೆ ಪ್ರಾರ್ಥನಾಪತ್ರಗಳನ್ನು ಕಳಿಸಿ ಯಾವ ಯಾವ ಕಾವ್ಯಗಳನ್ನು ಹೊಸ ಗನ್ನಡ ಗದ್ಯಾನುವಾದಕ್ಕೆ ತೆಗೆದುಕೊಳ್ಳಬಹುದು ಎಂದು ತಿಳಿಸುವಂತೆ ಕೇಳಿಕೊಳ್ಳ ಲಾಯಿತು. ಆ ಪಂಡಿತರ ಸಹಾನುಭೂತಿಯುತವಾದ ಮತ್ತು ಮೆಚ್ಚುಗೆಯ ಸೂಚನೆ ಗಳು ಬಂದಮೇಲೆ ಅನುವಾದಗ್ರಂಥಗಳ ಪಟ್ಟಿಯೊಂದನ್ನು ಪರಿಷತ್ತು ಸಿದ್ಧಪಡಿಸಿತು. ಆ ಪಟ್ಟಿಯಲ್ಲಿ ಸುಮಾರು ಅರವತ್ತಕ್ಕೂ ಮಿಕ್ಕು ಕಾವ್ಯಗಳು ಇದ್ದುವು.

ತರುವಾಯ ಆ ವಿದ್ವಜ್ಜನರ ಒಂದು ಸಭೆಯನ್ನು ದಿನಾಂಕ 23-9-73ನೆಯ ಭಾನುವಾರ ಬೆಳಗ್ಗೆ 10 ಗಂಟೆಗೆ ಕನ್ನಡ ಸಾಹಿತ್ಯ ಪರಿಷತ್ತಿನಲ್ಲಿ ಕರೆಯಲಾಯಿತು. ಆ ಸಭೆ ಬೆಳಗ್ಗೆಯಿಂದ .ಸಂಜೆಯವರೆಗೆ ನಡೆದು ಅನುವಾದಕಾರ್ಯದ ವಿಷಯವನ್ನು ಕುರಿತು ಕೂಲಂಕಷವಾಗಿ ಸಮಾಲೋಚಿಸಿ ಈ ಕೆಳಕಂಡ ತೀರ್ಮಾನಗಳನ್ನು ಕೈಗೊಂಡಿತು.

1. ಭಾರತೀಯ ಜ್ಞಾನಪೀಠದವರು, ವಿಶ್ವವಿದ್ಯಾನಿಲಯದವರು, ಖಾಸಗಿ ಪ್ರಕಾಶಕರು ಪರಿಷತ್ತಿನ ಉದ್ದೇಶದಂತೆ ಈಗಾಗಲೆ ಕನ್ನಡ ಕಾವ್ಯಗಳನ್ನು ಅನುವಾದ

ಮಾಡಲು ಕಾರ್ಯ ಕೈಗೊಂಡಿದ್ದರೆ, ಅಂಥ ಕಾವ್ಯಗಳನ್ನು ಪರಿಷತ್ತು ಅನುವಾದಕ್ಕೆ ತೆಗೆದುಕೊಳ್ಳಬೇಕಾಗಿಲ್ಲ.

2. ಅಗತ್ಯ ಕಂಡ ಕಡೆ ಮೂಲವನ್ನು ಪರಿಷ್ಕರಿಸಿ ಅನುವಾದವನ್ನು ಕೈಗೊಳ್ಳ ತಕ್ಕದ್ದು.

3. ಈ ಕೆಳಗೆ ಕಾಣಿಸಿದ ಹಳಗನ್ನಡ ಮತ್ತು ನಡುಗನ್ನಡ ಕಾವ್ಯಗಳನ್ನು ಸದ್ಯ ದಲ್ಲಿ ಅನುವಾದಕ್ಕೆ ಆರಿಸಿಕೊಳ್ಳತಕ್ಕದ್ದು :

**ಹಳಗನ್ನಡ :** ವಿಕ್ರಮಾರ್ಜುನವಿಜಯ, ಆದಿಪುರಾಣ, ಗದಾಯುದ್ಧ, ನೇಮಿ ನಾಥಪುರಾಣ (1. ಕರ್ಣಪಾರ್ಯ 2. ನೇಮಿಚಂದ್ರ), ಯಶೋಧರಚರಿತೆ, ಅನಂತನಾಥ ಪುರಾಣ, ಧರ್ಮಾಮೃತ, ಕಾದಂಬರಿ, ಪಂಚತಂತ್ರ, ನಳಚಂಪು, ವಡ್ಡಾರಾಧನೆ, ಗಿರಿಜಾ ಕಲ್ಯಾಣ, ಜಗನ್ನಾಥವಿಜಯ, ಕಬ್ಬಿಗರಕಾವ, ಶಬರಶಂಕರವಿಳಾಸ, ಹರಿಹರನ ರಗಳೆ ಗಳು, ಕೆಳದಿನೃಪವಿಜಯ, ದಮಯಂತೀಸ್ವಯಂವರ, ಶಾಂತಿಪುರಾಣ, ಚಂದ್ರಪ್ರಭ ಪುರಾಣ, ಉದ್ಭಟಕಾವ್ಯಂ, ಕುಸುಮಾವಳಿ ಕಾವ್ಯ, ಅಭಿನವ ದಶಕುಮಾರಚರಿತೆ, ಮಲ್ಲಿ ನಾಥಪುರಾಣ, ರಾಜಶೇಖರವಿಳಾಸ, ಚಿಕ್ಕದೇವರಾಜ ವಂಶಾವಳಿ, ದಿವ್ಯಸೂರಿ ಚರಿತೆ.

**ನಡುಗನ್ನಡ :** ಸಿದ್ಧರಾಮಚಾರಿತ್ರ, ಬಸವಪುರಾಣ, ಪ್ರಭುಲಿಂಗಲೀಲೆ, ತೊರವೆ ರಾಮಾಯಣ, ರಾಮನಾಥಚರಿತೆ, ಭರತೇಶವೈಭವ, ಅನುಭವಾಮೃತ, ಗೀತಗೋಪಾಲ, ಹದಿಬದೆಯಧರ್ಮ, ನಳಚರಿತ್ರೆ, ಅದ್ಭುತರಾಮಾಯಣ, ಚೆನ್ನಬಸವ ಪುರಾಣ, ಭಾಗವತ, ಹರಿಕಥಾಮೃತಸಾರ, ಭಿಕ್ಷಾಟನಚರಿತೆ, ಮೋಹನತರಂಗಿಣಿ.

4. ಅನುವಾದಕಾರ್ಯವನ್ನು ನಡೆಸಲು ಪರಿಷತ್ತಿನ ಪ್ರಕಟಣಾ ಸಮಿತಿ ಆಶ್ರಯದಲ್ಲಿ ಎರಡು ಅನುವಾದಕ ಮಂಡಲಿಗಳು ಇರತಕ್ಕದ್ದು ; ಒಂದು ಬೆಂಗಳೂರಿ ನಲ್ಲಿ, ಇನ್ನೊಂದು ಮೈಸೂರಿನಲ್ಲಿ. ಅನುವಾದಕಾರ್ಯವನ್ನು ನಡೆಸಿಕೊಡಲು ಒಪ್ಪಿರುವ ಪಂಡಿತರು ಈ ಎರಡು ಅನುವಾದಕ ಮಂಡಲಿಗಳ ಪೈಕಿ ತಮಗೆ ಹತ್ತಿರ ವಿರುವ ಮಂಡಲಿಯ ಸದಸ್ಯರಾಗಬಹುದು.

5. ಮಂಡಲಿಯ ಸದಸ್ಯರಾದ ಅನುವಾದಕರು ಕನ್ನಡದಲ್ಲಿ ವಿದ್ವಾಂಸರಾಗಿದ್ದು ಆಧುನಿಕರಿಗೆ ಹಿತಕರವಾದ ಹೊಸಗನ್ನಡ ಶೈಲಿಯನ್ನು ಚೆನ್ನಾಗಿ ಬಲ್ಲವರಾಗಿರಬೇಕು. ಅವರಿಗೆ ಹಳಗನ್ನಡ ಮತ್ತು ಸಂಸ್ಕೃತ ಸಾಹಿತ್ಯವಾಙ್ಮಯದಲ್ಲಿ ಉತ್ತಮವಾದ ಪರಿಣತಿ ಇರಬೇಕು. ಒಂದೊಂದು ಅನುವಾದಕ ಮಂಡಲಿಗೂ ಒಬ್ಬೊಬ್ಬ ಅಧ್ಯಕ್ಷರಿದ್ದು ಆ ಮಂಡಲಿಯ ಸಲಹೆಯಂತೆ ಅನುವಾದಕಾರ್ಯವು ನಡೆಯತಕ್ಕದ್ದು.

6. ಮೈಸೂರಿನ ಅನುವಾದಕ ಮಂಡಲಿಗೆ ಶ್ರೀ ಕೆ. ವೆಂಕಟರಾಮಪ್ಪ ಅವರು ಅಧ್ಯಕ್ಷರಾಗಿರಬೇಕೆಂದೂ ಬೆಂಗಳೂರಿನ ಅನುವಾದಕ ಮಂಡಲಿಗೆ ವಿದ್ವಾನ್ ಎನ್.

ರಂಗನಾಥಶರ್ಮಾ ಅವರು ಅಧ್ಯಕ್ಷರಾಗಿರಬೇಕೆಂದೂ ಪರಿಷತ್ತಿನ ಅಧ್ಯಕ್ಷರು ನೀಡಿದ ಸೂಚನೆಗೆ ಸಭೆ ತನ್ನ ಸಮ್ಮತಿ ನೀಡಿತು.

7. ಒಂದು ತಿಂಗಳಿಗೆ ಕನಿಷ್ಠಪಕ್ಷದಲ್ಲಿ ಮೂರು ಸಲವಾದರೂ ಈ ಅನುವಾದಕ ಮಂಡಲಿಯು ಆಯಾ ಊರಿನಲ್ಲಿ ಸಭೆ ಸೇರಿ ಕಾರ್ಯವಿಧಾನವನ್ನೂ ಕಾರ್ಯಪ್ರಗತಿಯನ್ನೂ ಪರಿಶೀಲಿಸತಕ್ಕದ್ದು. ಅನುವಾದಕಾರ್ಯದಲ್ಲಿ ಸಂಭವಿಸಬಹುದಾದ ಎಡರು ತೊಡರು, ಸಂದೇಹಗಳನ್ನು ಪರಸ್ಪರವಾಗಿ ಚರ್ಚಿಸಿ ಪರಿಹರಿಸಿಕೊಳ್ಳತಕ್ಕದ್ದು.

(ಅ) ಒಬ್ಬೊಬ್ಬ ಅನುವಾದಕನಿಗೆ ಒಂದೊಂದು ಕಾವ್ಯವನ್ನು ಪೂರ್ತಿಯಾಗಿ ಅನುವಾದಿಸುವ ಕಾರ್ಯವನ್ನು ವಹಿಸಿಕೊಡಬೇಕು. ವಿಶೇಷ ಸಂದರ್ಭದಲ್ಲಿ ಒಂದು ಪುಸ್ತಕವನ್ನು ಇಬ್ಬರು ಮೂವರು ಅನುವಾದಕರಿಗೆ ವಹಿಸಿಕೊಡಬಹುದು.

(ಆ) ಅನುವಾದದಲ್ಲಿ ಏಕರೂಪತೆ ಇರಬೇಕು. ಮಧ್ಯದಲ್ಲಿ ವಿಚ್ಛಿನ್ನತೆ ಕಾಣಬಾರದು. ಕಥೆಯಂತೆ ಓದಿಸಿಕೊಂಡು ಹೋಗಬೇಕು.

(ಇ) ಅನುವಾದವು ಆಧುನಿಕರಿಗೆ ಪ್ರಿಯವಾಗುವ ಹೊಸಗನ್ನಡ ಗದ್ಯದಲ್ಲಿ ಇರಬೇಕು.

(ಈ) ಭಾಷೆಯು ಸರಳವಾಗಿಯೂ ಶುದ್ಧವಾಗಿಯೂ ಇರಬೇಕು. ಅನುವಾದವು ಮೂಲದಿಂದ ದೂರ ಹೋಗಬಾರದು ಮತ್ತು ಮೂಲವನ್ನು ಬಿಡಲೂಬಾರದು.

(ಉ) ಇದು ಪ್ರಾಚೀನ ಕಾವ್ಯಗಳ ಅನುವಾದವಾದದ್ದರಿಂದ ವಿಷಯದ ಗಂಭೀರತೆ ಪವಿತ್ರತೆಗಳಿಗೆ ಅನುಗುಣವಾಗಿ ಭಾಷೆಯು ಲಲಿತಗಂಭೀರವಾಗಿ ಇರಬೇಕು.

(ಊ) ಪ್ರತಿಯೊಬ್ಬ ಅನುವಾದಕನೂ ತಾನು ಅನುವಾದಿಸಿದ ಗ್ರಂಥಕ್ಕೆ ಒಂದು ಉಪೋದ್ಘಾತ, ಶಬ್ದಾರ್ಥಕೋಶ, ಅನುಬಂಧಗಳನ್ನು ತಯಾರಿಸಿ ಕೊಡಬೇಕು. ಉಪೋದ್ಘಾತದಲ್ಲಿ ಪ್ರಸ್ತುತ ಕವಿಯ ದೇಶಕಾಲಾದಿ ಪರಿಚಯ, ಪ್ರಸ್ತುತ ಕಾವ್ಯದ ವಿಮರ್ಶೆ ಮುಂತಾದವು ಸಂಕ್ಷೇಪವಾಗಿ ಇರಬೇಕು. ಕಾವ್ಯದಲ್ಲಿ ಬಂದಿರುವ ನ್ಯಾಯಗಳು, ಗಾದೆಗಳು, ಪೂರ್ವಕಥೆಗಳು ಮುಂತಾದುವುಗಳ ವಿವರಣೆ ಅನುಬಂಧದಲ್ಲಿ ಇರಬೇಕು, ವಿವರಣೆ ಸಂಕ್ಷಿಪ್ತವಾಗಿದ್ದರೆ ಆಯಾ ಪುಟದ ಅಡಿಟಿಪ್ಪಣಿಯಲ್ಲಿ ಬರಬಹುದು.

(ಋ) ಅನುವಾದಕನು ಮೂಲ ಪರಿಷ್ಕೃತ ಪಾಠವನ್ನೂ ಅದರ ಕೆಳಗಡೆ ಅನುವಾದವನ್ನೂ ಕೊಡಬೇಕು.

(ೠ) ಉಪೋದ್ಘಾತದಲ್ಲಿ ಅನುವಾದಕನು ತನ್ನ ಸ್ವಂತ ವಿಷಯವೇನನ್ನೂ ಪ್ರಸ್ತಾಪಿಸಕೂಡದು.

(ಎ) ಯಾವೊಬ್ಬ ಅನುವಾದಕನ ಅನುವಾದಕಾರ್ಯ ಮಂಡಲಿಗೆ ತೃಪ್ತಿಕರವಾಗಿ ಕಂಡುಬಾರದಿದ್ದಲ್ಲಿ ಅಥವಾ ಅನುವಾದಕ ತಾನಾಗಿ ಒಪ್ಪಿಸಿದ ಕಾರ್ಯಮಾಡಲು ತನ್ನಿಂದ ಸಾಧ್ಯವಿಲ್ಲವೆಂದು ತಿಳಿಸಿದ ಸಂದರ್ಭದಲ್ಲಿ ಆ ಅನುವಾದಕಮಂಡಲಿಯು

ಅಧ್ಯಕ್ಷರು ಪರಿಷತ್ತಿನ ಅಧ್ಯಕ್ಷರಿಗಾಗಲೀ ಅಥವಾ ಪರಿಷತ್ತಿನ ಪ್ರಕಟಣ ಸಮಿತಿ ಪ್ರಧಾನ ಸಂಪಾದಕರಿಗಾಗಲೀ ಆ ವಿಷಯವನ್ನು ತಿಳಿಸಿ ಆ ಕಾರ್ಯಕ್ಕೆ ಬೇರೊಬ್ಬ ವಿದ್ವಾಂಸರನ್ನು ಗೊತ್ತುಮಾಡಹುದು. ಹಾಗೆಯೇ ಅನುವಾದಕ ಮತ್ತು ಅನುವಾದಕ ಮಂಡಲಿ ಅಧ್ಯಕ್ಷರ ಮಧ್ಯೆ ಉದ್ಭವಿಸಬಹುದಾದ ಸಮಸ್ಯೆಗಳನ್ನು ಪರಿಷತ್ತಿನ ಅಧ್ಯಕ್ಷರು ಅಥವಾ ಪ್ರಕಟಣ ಸಮಿತಿಯ ಪ್ರಧಾನ ಸಂಪಾದಕರು ಪರಿಹರಿಸತಕ್ಕದ್ದು.

(ಬಿ) ನಿಯಮದಂತೆ ಗ್ರಂಥದ ಅನುವಾದಕಾರ್ಯ ಮುಗಿದಕೂಡಲೆ ಮಂಡಲಿಯ ಅಧ್ಯಕ್ಷರು ಅದನ್ನು ಅನುವಾದಕರಿಂದ ಪಡೆದು ತಮ್ಮ ಸಲಹೆಯೊಡನೆ ಅದನ್ನು ಪರಿಷತ್ತಿನ ಅಧ್ಯಕ್ಷರಿಗೆ ಕಳುಹಿಸಕೊಡತಕ್ಕದ್ದು.

8. ಹೀಗೆ ಅನುವಾದಕಾರ್ಯವನ್ನು ವಿದ್ವಾಂಸರಿಂದ ಮಾಡಿಸಿದಾಗ ಅವರಿಗೆ ಯುಕ್ತಸಂಭಾವನೆಯನ್ನು ಕೊಡುವ ಬಗ್ಗೆ ಸಭೆ ತೀರ್ಮಾನ ಕೈಗೊಂಡು, ಸಂಭಾವನೆ ಗ್ರಂಥದ ಪರಿಮಾಣದ ಆಧಾರದ ಮೇಲೆ ಸಲ್ಲಬೇಕೆಂದು ನಿರ್ಣಯಿಸಿ, ಗ್ರಂಥದ 400 ಅಕ್ಷರಗಳಿಗೆ ಒಂದು ಘಟಕವೆಂದೂ ಒಂದು ಘಟಕಕ್ಕೆ 2 ರೂ.ನಂತೆ ಸಂಭಾವನೆ ನೀಡ ಬೇಕೆಂದೂ ನಿಶ್ಚಯಿಸಲಾಯಿತು. ಮತ್ತು ಅನುವಾದಕ ಮಂಡಲಿಯ ಅಧ್ಯಕ್ಷರಿಗೆ ಅನುವಾದಕರಿಗೆ ಸಲ್ಲುವ ಸಂಭಾವನೆಯ ಶೇಕಡ 15ರಷ್ಟನ್ನು ಸಂಭಾವನೆಯಾಗಿ ಕೊಡ ತಕ್ಕದ್ದೆಂದೂ ಸಭೆ ನಿರ್ಣಯಿಸಿತು. ಮತ್ತು ಅವರು ಮೂಲಪಾಠ ಪರಿಷ್ಕರಣ, ಮುನ್ನುಡಿ, ಉಪೋದ್ಘಾತ, ಶೋಧನೆ, ಮೇಲ್ವಿಚಾರಣೆ ಇತ್ಯಾದಿ ಕಾರ್ಯಗಳನ್ನು ಗಮನದಲ್ಲಿಟ್ಟುಕೊಂಡು ಹಸ್ತಪ್ರತಿಯನ್ನು ಸಿದ್ಧಮಾಡಿ ಪರಿಷತ್ತಿಗೆ ಒಪ್ಪಿಸತಕ್ಕದ್ದೆಂದೂ ತೀರ್ಮಾನಿಸಲಾಯಿತು.

9. ಅನುವಾದಕರಿಗೆ ಅನುವಾದಕಾರ್ಯಕ್ಕಾಗಿ ಹಣ ಸಂದಾಯವಾದಮೇಲೆ ಆ ಗ್ರಂಥದ ಪೂರ್ಣ ಹಕ್ಕು ಪರಿಷತ್ತಿಗೆ ಸೇರುತ್ತದೆ. ಪುಸ್ತಕ ಪ್ರಕಟಣೆಯಾದ ಮೇಲೆ ಅನುವಾದಕರಿಗೆ ಗೌರವಧನ ನೀಡುವ ಪ್ರಶ್ನೆ ಬರುವುದಿಲ್ಲ. ಪುಸ್ತಕ ಅಚ್ಚಾದಮೇಲೆ ಅನುವಾದಕರಿಗೆ ಆ ಗ್ರಂಥದ ಹತ್ತು ಪ್ರತಿಗಳನ್ನೂ, ಮಂಡಲಿಯ ಅಧ್ಯಕ್ಷರಿಗೆ ಎರಡು ಪ್ರತಿಗಳನ್ನೂ ಉಚಿತವಾಗಿ ನೀಡತಕ್ಕದ್ದು.

ಮೇಲ್ಕಂಡ ತೀರ್ಮಾನದಂತೆ ಅನುವಾದಕಾರ್ಯ ಕೈಗೊಳ್ಳಲು ಪರಿಷತ್ತು ಮೈಸೂರಿನಲ್ಲಿ ಮತ್ತು ಬೆಂಗಳೂರಿನಲ್ಲಿ ಅನುವಾದಕ ಮಂಡಲಿಗಳನ್ನು ರಚಿಸಿ ಅವಕ್ಕೆ ಬೇಕಾದ ಸಲಕರಣೆಗಳನ್ನು ಒದಗಿಸಿಕೊಟ್ಟಿದೆ. ಯೋಜನೆಯ ಪ್ರಕಾರ ಅನುವಾದ ಕಾರ್ಯ ಎರಡೂ ಕಡೆಯೂ ನಡೆಯುತ್ತಿದೆ. ವಿದ್ವಾಂಸರು ಅನುವಾದಕ ಮಂಡಲಿ ಅಧ್ಯಕ್ಷರೊಡನೆ ಸಹಕರಿಸುತ್ತಿದ್ದಾರೆ. ಅನುವಾದಕ ಮಂಡಲಿ ಅಧ್ಯಕ್ಷರು ವಿಶೇಷ ಆಸಕ್ತಿ

ವಹಿಸಿ ಅನುವಾದಕಾರ್ಯ ಅಚ್ಚುಕಟ್ಟಾಗಿ ನಡೆಯುವಂತೆ ಶ್ರಮಿಸುತ್ತಿದ್ದಾರೆ. ಪರಿಷತ್ತಿನ ಪ್ರಕಟಣ ಸಮಿತಿಯ ಪ್ರಧಾನ ಸಂಪಾದಕರಾದ ಡಾ|| ರಂ. ಶ್ರೀ. ಮುಗಳಿಯವರು ಅಷ್ಟೇ ಮುತುವರ್ಜಿಯಿಂದ ಅನುವಾದಕರಿಗೆ, ಮಂಡಲಿ ಅಧ್ಯಕ್ಷರಿಗೆ ತಮ್ಮ ಸಲಹೆ ಸೂಚನೆಗಳನ್ನು ನೀಡಿ ಸಹಕರಿಸುತ್ತಿದ್ದಾರೆ. ಒಟ್ಟಿನಲ್ಲಿ ಈ ಎಲ್ಲ ವಿದ್ವನ್ಮಣಿಗಳೂ ಇದೊಂದು ಕನ್ನಡ ನುಡಿಯ ಮಹತ್ತರವಾದ ಸೇವೆ ಎಂಬ ಭಾವನೆಯಿಂದ ದುಡಿಯುತ್ತಿದ್ದಾರೆ. ಇವರೆಲ್ಲರಿಗೂ ಪರಿಷತ್ತಿನ ಪರವಾಗಿ ಕೃತಜ್ಞತೆಗಳನ್ನು ಸಲ್ಲಿಸುತ್ತೇವೆ.

ಈಗ 20 ಗ್ರಂಥಗಳ ಅನುವಾದಕಾರ್ಯ ಮುಗಿದು ಅವು ಅಚ್ಚಿಗೆ ಹೋಗಿವೆ. 1977ನೆಯ ಏಪ್ರಿಲ್ ತಿಂಗಳಿನಲ್ಲಿ ನಡೆಯುವ ಕನ್ನಡ ಸಾಹಿತ್ಯ ಪರಿಷತ್ತಿನ ವಜ್ರ ಮಹೋತ್ಸವ ಸಂದರ್ಭದಲ್ಲಿ ಈ ಗ್ರಂಥಗಳು ಹೊರಬಿದ್ದು ಸಾರ್ವಜನಿಕರ ಕೈಗೆ ಸೇರುವಂತೆ ಮಾಡಬೇಕೆಂದು ಪರಿಷತ್ತು ನಿಶ್ಚಯಿಸಿದೆ. ಆ ವೇಳೆಗೆ ಈ ಎಲ್ಲ ಗ್ರಂಥಗಳನ್ನು ಮುದ್ರಿಸಿಕೊಡುವ ಜವಾಬ್ದಾರಿಯನ್ನು ಮೈಸೂರಿನ ಶ್ರೀ ಮೀರಾ ಪ್ರಿಂಟರ್ಸ್ ಮಾಲೀಕರಾದ ಶ್ರೀ ಕೆ.ಪಿ. ಪುಟ್ಟಸ್ವಾಮಿಯವರು ವಹಿಸಿಕೊಂಡಿದ್ದಾರೆ. ಅದಕ್ಕಾಗಿ ಅವರು ಈ ವರ್ಷ ಬೇರೆ ಯಾವ ಮುದ್ರಣ ಕೆಲಸಗಳನ್ನೂ ತೆಗೆದುಕೊಳ್ಳದೆ ಪರಿಷತ್ತಿನ ಈ ಅನುವಾದ ಗ್ರಂಥಗಳ ಮುದ್ರಣಕ್ಕೇ ವಿಶೇಷ ಗಮನಕೊಟ್ಟಿದ್ದಾರೆ. ಇವರಿಗೆ ಪರಿಷತ್ತು ಎಷ್ಟು ಕೃತಜ್ಞತೆಯನ್ನು ಅರ್ಪಿಸಿದರೂ ಸಾಲದು. ಇಂಥ ಗ್ರಂಥಗಳ ಕರಡಚ್ಚು ತಿದ್ದುವ ಕಾರ್ಯ ಎಷ್ಟು ಕಷ್ಟಕರವಾದುದು ಎಂಬುದನ್ನು ಪ್ರತ್ಯೇಕವಾಗಿ ಹೇಳಬೇಕಾಗಿಲ್ಲ. ಇದರ ಹೊಣೆಯನ್ನು ಮೈಸೂರು ವಿಶ್ವವಿದ್ಯಾನಿಲಯದ ಪ್ರಸಾರಾಂಗದ ಉಪನಿರ್ದೇಶಕರಾದ ಶ್ರೀ ಆರ್. ಎಲ್. ಅನಂತರಾಮಯ್ಯನವರು ಮತ್ತು ಕನ್ನಡ ಅಧ್ಯಯನ ಸಂಸ್ಥೆಯ ಸಂಪಾದನ ವಿಭಾಗದ ಸಹಾಯಕ ನಿರ್ದೇಶಕರಾದ ಶ್ರೀ ಬಿ. ಎಸ್. ಸಣ್ಣಯ್ಯನವರು ಹೊತ್ತುಕೊಂಡು ತಮಗಾಗುವ ಅಪಾರ ಶ್ರಮವನ್ನು ಲೆಕ್ಕಿಸದೆ ಪ್ರೀತಿಯಿಂದ ದುಡಿಯುತ್ತಿದ್ದಾರೆ. ಈ ಮಹನೀಯರಿಗೆ ಪರಿಷತ್ತು ತುಂಬಾ ಆಭಾರಿಯಾಗಿದೆ.

ಈ ಅನುವಾದ ಗ್ರಂಥಗಳು ಕನ್ನಡ ಜನತೆಗೆ ಸುಲಭ ಬೆಲೆಯಲ್ಲಿ ದೊರೆಯಬೇಕೆಂಬ ಪರಿಷತ್ತಿನ ಆಶೆಯು ಸರ್ಕಾರದ ನೆರವಿನಿಂದ ಕೈಗೂಡಿದೆ ಎಂದು ತಿಳಿಸಲು ಸಂತೋಷಿಸುತ್ತೇನೆ. ವಜ್ರಮಹೋತ್ಸವದ ವೇಳೆಗೆ ಬಿಡುಗಡೆಯಾಗಲಿರುವ 20 ಅನುವಾದ ಗ್ರಂಥಗಳಿಗೆ ತಗಲುವ ವೆಚ್ಚ ಸುಮಾರು 4 ಲಕ್ಷ ರೂಪಾಯಿಗಳೆಂದು ಅಂದಾಜು ಮಾಡಲಾಗಿದೆ. ಈ ಅಂದಾಜಿನಂತೆ ಅನುವಾದಕೃತಿಗಳ ಬೆಲೆಯನ್ನು ಗೊತ್ತುಮಾಡುವುದಾದರೆ ಈಗ ಇಟ್ಟಿರುವ ಬೆಲೆಯು ಮೂರು ಅಥವಾ ನಾಲ್ಕುಪಟ್ಟು ಹೆಚ್ಚಾಗುತ್ತದೆ. ಅನುವಾದಕೃತಿ ಎಷ್ಟೇ ಪುಟವಿರಲಿ 10 ರೂಪಾಯಿಗಳಿಗಿಂತ ಹೆಚ್ಚು ಬೆಲೆ ಇಡಕೂಡದು, ಪುಸ್ತಕದ ಬೆಲೆಯನ್ನು ನೋಡಿಯಾದರೂ ಜನರು ಈ ಗ್ರಂಥಗಳನ್ನು ಕೊಂಡು ಓದಲಿ ಎನ್ನುವ ದೃಷ್ಟಿಯಿಂದ ಉದಾರ ಧನಸಹಾಯಕ್ಕಾಗಿ ಈ ಯೋಜನೆ

ಯನ್ನು ರಾಜ್ಯಸರ್ಕಾರದ ಮುಂದಿಡಲಾಯಿತು. ರಾಜ್ಯಸರ್ಕಾರ ಅನುವಾದಕೃತಿಗಳ ಮಹತ್ವವನ್ನರಿತು, ಪರಿಷತ್ತಿನ ಕೋರಿಕೆಯನ್ನು ಸಹಾನುಭೂತಿಯಿಂದ ಪರಿಶೀಲಿಸಿ ಉಚಿತ ಪ್ರಮಾಣದಲ್ಲಿ ಧನಸಹಾಯ ನೀಡಲು ಒಪ್ಪಿದೆ. ಇದರಿಂದ ಈ ಪುಸ್ತಕಗಳನ್ನು ಸುಲಭ ಬೆಲೆಗೆ ಕೊಡಲು ಸಾಧ್ಯವಾಗಿದೆ. ಈ ಸಹಾಯಕ್ಕಾಗಿ ಕನ್ನಡ ಸಾಹಿತ್ಯ ಪರಿಷತ್ತು ನಾಡಿನ ಜನತೆಯ ಪರವಾಗಿ ರಾಜ್ಯಸರ್ಕಾರಕ್ಕೆ ತನ್ನ ಅಪಾರ ಕೃತಜ್ಞತೆಗಳನ್ನು ಅರ್ಪಿಸುತ್ತದೆ.

ಕನ್ನಡಿಗರು ಈ ಅಮೂಲ್ಯವಾದ ಕೃತಿಗಳನ್ನು ಉತ್ಸಾಹದಿಂದ ಬರಮಾಡಿಕೊಂಡು ಇವುಗಳ ಪೂರ್ಣ ಪ್ರಯೋಜನ ಪಡೆಯಬೇಕೆಂದು ಪರಿಷತ್ತು ಬಯಸುತ್ತದೆ.

ಬೆಂಗಳೂರು
ದಿನಾಂಕ : 2–10–76
ಗಾಂಧಿ ಜಯಂತಿ

**ದೇಶಹಳ್ಳಿ ಜಿ. ನಾರಾಯಣ**
ಅಧ್ಯಕ್ಷ
ಕನ್ನಡ ಸಾಹಿತ್ಯ ಪರಿಷತ್ತು

# ಬಿನ್ನಹ

'ಕುಮಾರವಾಲ್ಮೀಕಿ' ಎಂಬ ಕಾವ್ಯನಾಮವನ್ನು ಧರಿಸಿದ ತೊರವೆಯ ನರಹರಿಯು ವಾಲ್ಮೀಕಿ ರಾಮಾಯಣದ ಕಥೆಯನ್ನೇ ಹೆಚ್ಚಾಗಿ ಅನುಸರಿಸಿದ್ದರೂ ಅಧ್ಯಾತ್ಮರಾಮಾಯಣದಿಂದಲೂ ಪ್ರಭಾವಿತನಾಗಿದ್ದಾನೆ. ಉಮಾಮಹೇಶ್ವರ ಸಂವಾದ ರೂಪವಾದ ಹಲವು ಅಂಶಗಳನ್ನು ನರಹರಿ ತನ್ನ ಕೃತಿಯಲ್ಲಿ ಹೊಂದಿಸಿಕೊಂಡಿರುವುದು ಸುವೇದ್ಯವಾಗಿದೆ. ಬಾಲಕಾಂಡದಿಂದ ತೊಡಗಿ ಶ್ರೀರಾಮ ಪಟ್ಟಾಭಿಷೇಕದವರೆಗಿನ ಕಥೆಯನ್ನು ಹೇಳಿ ನರಹರಿ ತನ್ನ ರಾಮಾಯಣಕಾವ್ಯಕ್ಕೆ ಮಂಗಳ ಹಾಡಿದ್ದಾನೆ; ಉತ್ತರಕಾಂಡವನ್ನು ಕೈಬಿಟ್ಟಿದ್ದಾನೆ. ಶ್ರೀರಾಮನೇ ಮಹಾವಿಷ್ಣುವೆಂದು ನಿರೂಪಿಸಹೊರಟು ಕವಿ ಭಕ್ತಿಪರವಶನಾದ ಭಾಗವತನೇ ಆಗಿಬಿಟ್ಟಿದ್ದಾನೆ, ಕೆಲವು ಸಂದರ್ಭಗಳಲ್ಲಿ. ಕುಮಾರವ್ಯಾಸನ ಕಾವ್ಯಶೈಲಿಯನ್ನು ಮನಸಾರಮೆಚ್ಚಿ ಆ ದಾರಿಯಲ್ಲಿಯೇ ನರಹರಿ ತನ್ನ ಕಾವ್ಯವನ್ನು ನಡೆಸಿದ್ದಾನೆ.

ತೊರವೆಯ ರಾಮಾಯಣದಲ್ಲಿ ಉಳಿದ ಕಾಂಡಗಳಿಗಿಂತ ಯುದ್ಧಕಾಂಡವೇ ಬಹಳ ದೊಡ್ಡದು. ಯುದ್ಧವರ್ಣನೆ ಮಾಡುವಾಗ ನರಹರಿ ಕುಮಾರವ್ಯಾಸನಂತೆಯೇ ವೀರಾಲಾಪಗಳ ಸೊಗಸನ್ನು ತುಂಬಿ ಯುದ್ಧಕಥೆಯಲ್ಲಿಯೂ ಸ್ವಾರಸ್ಯವನ್ನು ತುಂಬಲು ವಿಶೇಷವಾಗಿ ಶ್ರಮಿಸಿದ್ದಾನೆ. ವಿಜಯನಗರದ ದೊರೆಗಳಿಗೂ ಆದಿಲ್‌ಷಾಹಿಯವರಿಗೂ ನಡೆದಿದ್ದ ಯುದ್ಧವನ್ನು ಕವಿ ಕಂಡಿರಬಹುದೆಂಬ ಊಹೆ ತೋರುತ್ತದೆ–ಅವನ ಯುದ್ಧವರ್ಣನೆಗಳನ್ನು ಓದುವಾಗ. ಕೋಟೆಗಳಿಗೆ ಲಗ್ಗೆ ಹತ್ತಿ ಮಾಡುತ್ತಿದ್ದ ಕಾಳಗಗಳ ಕಥನ ನರಹರಿಗೆ ಪ್ರೀತಿಯ ವಸ್ತು. ಪುಣ್ಯಕ್ಕೆ ಈತನು ಬಿಜಾಪುರದ ಫೌಜಿನ ಭಾಷೆಯನ್ನು ಹೆಚ್ಚಾಗಿ ಬಳಸಿಲ್ಲ. ಆದರೂ ಹಲವು ಅಪೂರ್ವಶಬ್ದಗಳು ಈತನ ಕೃತಿಯಲ್ಲಿ ಅಲ್ಲಲ್ಲಿ ಓದುಗರನ್ನು ಪೇಚಿಗೆ ಸಿಕ್ಕಿಸುತ್ತವೆ. ಆದರೆ ಪ್ರೊ॥ ಕೆ. ಎಸ್. ಕೃಷ್ಣಮೂರ್ತಿಯವರು ಬಹಳ ಮುತುವರ್ಜಿ ವಹಿಸಿ ಓದುಗರಿಗೆ ಕ್ಲೇಶವಾಗದಂತೆ ಎಚ್ಚರವಹಿಸಿ ನಾನಾ ಮೂಲಗಳಿಂದ ಈ ಕ್ಲಿಷ್ಟಪದಗಳ ಅರ್ಥವನ್ನು ಶೋಧಿಸಿ ತೆಗೆದುಕೊಟ್ಟಿದ್ದಾರೆ. ಅವರ ಹೊಸಗನ್ನಡ ಅನುವಾದ ಓದುಗರಿಗೆ ರಾಮಣೀಯಕವೂ ಉಪಯುಕ್ತವೂ ಆಗುವುದರಲ್ಲಿ ಸಂಶಯವಿಲ್ಲ. ಶ್ರೀಯುತರು ಮೈಸೂರಿನ ಸೇಂಟ್‌ಫಿಲೋಮಿನಾ ಕಾಲೇಜಿನಲ್ಲಿ ಕನ್ನಡ ಪ್ರಾಧ್ಯಾಪಕರಾಗಿದ್ದು ಸಾವಿರಾರು ವಿದ್ಯಾರ್ಥಿಗಳಿಗೆ ಕನ್ನಡ ದೀಕ್ಷೆಕೊಟ್ಟು ಜನಪ್ರಿಯರೂ

ಮಾನ್ಯರೂ ಆದ ಶ್ರೇಷ್ಠ ಉಪಾಧ್ಯಾಯರು. ಅವರು ದೀರ್ಘಕಾಲ ಕನ್ನಡ ಕಾವ್ಯ ಪಾಠ ಹೇಳಿದ ಅನುಭವವುಳ್ಳವರಾದ್ದರಿಂದ ವಾಚಕರಿಗೆ ಎಲ್ಲಿ ಕ್ಲೇಶವೆನಿಸಬಹುದೆಂದು ಸುಲಭವಾಗಿ ಊಹಿಸಬಲ್ಲವರು. ಎಂಥ ಸುಕುಮಾರಮತಿಗಳಿಗೂ ಸುಲಭಗ್ರಾಹ್ಯವಾಗುವಂತೆ, ಮೂಲಕೃತಿಯ ಅರ್ಥಗಾಂಭೀರ್ಯಕ್ಕೆ ಸ್ವಲ್ಪವೂ ಕುಂದುಬಾರದಂತೆ, ಬಹಳ ಸರಳ ಭಾಷೆಯಲ್ಲಿ ಅನುವಾದ ಮಾಡಿದ್ದಾರೆ. ಈ ಶ್ರದ್ಧಾಳುಗಳಾದ ಪಂಡಿತರ ಸೇವೆ ಈ ಕೃತಿಯ ಅನುವಾದ ಕಾರ್ಯಕ್ಕೆ ಒದಗಿಬಂದದ್ದು ಬಹಳ ಸಂತೋಷದ ವಿಚಾರ. ಈ ಅನುವಾದ ಕೃತಿಯನ್ನು ಕನ್ನಡಿಗರು ಆದರದಿಂದ ಬರಮಾಡಿಕೊಂಡು ಅಕ್ಕರೆಯಿಂದ ಓದಿ ಆನಂದಿಸಲೆಂದು ಹಾರೈಸುತ್ತೇನೆ.

**ಕೆ. ವೆಂಕಟರಾಮಪ್ಪ**

ಅಧ್ಯಕ್ಷ, ಅನುವಾದಕ ಸಮಿತಿ

ಮೈಸೂರು

# ಮುನ್ನುಡಿ

ಕನ್ನಡ ಸಾಹಿತ್ಯದ ಅಭಿವೃದ್ಧಿಗಾಗಿ ಶ್ರಮಿಸುತ್ತಿರುವ ಕನ್ನಡ ಸಾಹಿತ್ಯ ಪರಿಷತ್ತು ಸಾಹಿತ್ಯದ ಸಂರಕ್ಷಣೆಗಾಗಿಯೂ ಕೆಲಸ ಮಾಡಬೇಕಾಗಿದೆ. ಕನ್ನಡ ಸಾಹಿತ್ಯ ಚರಿತ್ರೆಯನ್ನು ಅಭ್ಯಾಸ ಮಾಡಿದವರಿಗೆ ಸಾಹಿತ್ಯದಲ್ಲಿ ವಿವಿಧ ರೀತಿಯ ಆಂದೋಲನಗಳು ನಡೆದಿರುವುದು ಗೋಚರವಾಗದೆ ಇರದು. ಚಂಪೂರೂಪದಲ್ಲಿ ಬರವಣಿಗೆ ಕೆಲವು ಕಾಲ ನಡೆದು ವಚನ, ರಗಳೆ, ಷಟ್ಪದಿ, ಸಾಂಗತ್ಯ ಈ ಮುಂತಾದ ಪ್ರಕಾರಗಳು ತರುವಾಯ ಬಳಕೆಗೆ ಬಂದುದನ್ನು ನಾವು ಖಚಿತವಾಗಿ ಗುರುತಿಸಬಹುದು. ಅಲ್ಲಿಂದ ನವೋದಯಂದ ಕಾಲದಲ್ಲಿ ಇಂಗ್ಲಿಷ್ ಸಾಹಿತ್ಯದ ಪ್ರಭಾವದಿಂದ ಹೊಸ ಛಂದಸ್ಸೂ 'ಭಾವಗೀತೆ'ಗಳ ಧಾಟಿಯಲ್ಲಿ ಬಂದದ್ದನ್ನೂ ನಾವು ನೋಡುತ್ತೇವೆ. ಈಚೆಗೆ ಮುಕ್ತ ಛಂದಸ್ಸೂ, ನವ್ಯ ಕಾವ್ಯ'ದ ಧಾಟಿಯ ಗದ್ಯ ಛಂದಸ್ಸೂ ಬಳಕೆಯಲ್ಲಿವೆ. ಈ ರೀತಿಯ ಮಾರ್ಪಾಡು ಸಾಹಿತ್ಯರಚನೆಯಲ್ಲಿ ಅನಿವಾರ್ಯ ಮತ್ತು ಅವಶ್ಯ. ಇದು ಸಾಹಿತಿಗಳ ಪ್ರಗತಿಪರ ಮನೋಭಾವವನ್ನೂ ಸಾಮಾಜಿಕ ಪ್ರಜ್ಞೆಯನ್ನೂ ಪ್ರದರ್ಶಿಸುತ್ತದೆ. ಈ ಹೊಸ ದೃಷ್ಟಿ ಮೂಡಿದಂತೆ ಹಳೆಯುದರ ಕಡೆ ಜನ ದೃಷ್ಟಿ ಹರಿಸುವುದು ಅಪರೂಪ. ಛಂದಸ್ಸಿನ ಬಗ್ಗೆ ಈ ಮಾತು ಹೇಗೆ ಅನ್ವಯಿಸುತ್ತದೆಯೋ ಹಾಗೆಯೇ ಕಾವ್ಯವಸ್ತುವಿಗೂ ಅನ್ವಯಿಸುತ್ತದೆ. ದೇವರು, ಪುರಾಣ, ಶ್ಲೀಲ, ಅಶ್ಲೀಲ, ಈ ವಿಷಯಗಳಲ್ಲಿಯೂ ಜನತೆಯ ಕಲ್ಪನೆ ಮತ್ತು ಅವುಗಳಿಗೆ ನೀಡುವ ಮೌಲ್ಯ ವ್ಯತ್ಯಾಸವಾಗುತ್ತಲೇ ಹೋಗುತ್ತವೆ. ಆ ಹಳೆಯ ಸಾಹಿತ್ಯ ಪ್ರಕಾರಗಳು ಮತ್ತು ವಿಷಯಗಳು ಇಂದಿನ ದೃಷ್ಟಿಗೆ ದಾರಿ ಮಾಡಿಕೊಟ್ಟಿವೆ ಎಂಬುದನ್ನು ನಾವು ಮರೆಯಬಾರದು. ಹೊಸ ಸಾಹಿತ್ಯಸೃಷ್ಟಿಯ ಮೋಹದಲ್ಲಿ ಹಳೆಯದು ನಮ್ಮ ಕೈಬಿಟ್ಟು ಹೋಗಬಾರದು ಎಂಬುದನ್ನು ನಾವು ಅರಿಯಬೇಕು, ಏಕೆಂದರೆ ಈಚೆಗೆ ಪಂಪಾದಿ ಕವಿಗಳ ಕಾವ್ಯಾಭ್ಯಾಸ ಪದವಿಪರೀಕ್ಷೆಗಳಲ್ಲಿ ಬಿಟ್ಟರೆ ಉಳಿದ ಕಡೆ ಕಡಮೆ ಆಗುತ್ತಿದೆ. ಅದನ್ನು ಉಳಿಸಿಕೊಳ್ಳಬೇಕು, ನಮ್ಮ ಜನಕ್ಕೆ ಅದು ಎಟುಕುವಂತಿರಬೇಕು ಎಂಬ ಉದ್ದೇಶದಿಂದ ಪರಿಷತ್ತು ಹಳಗನ್ನಡ ಕಾವ್ಯಗಳನ್ನು ಹೊಸಗನ್ನಡಕ್ಕೆ ಅನುವಾದಿಸಿ ಮೂಲಪಾಠಗಳೊಡನೆ ಸುಲಭ ಬೆಲೆಗೆ ಕೊಡಲು ಯೋಜನೆಯೊಂದನ್ನು ಹಾಕಿಕೊಂಡಿದೆ. ಇದರ ವಿವರ ಪರಿಷತ್ತಿನ ಅಧ್ಯಕ್ಷರ ಪ್ರಸ್ತಾವನೆಯಲ್ಲಿ ವಿವರವಾಗಿ ಬಂದಿದೆ.

ಹಳಗನ್ನಡ ಕಾವ್ಯಗಳನ್ನು ಹಳೆಯ ಮಾದರಿಯಲ್ಲಿ ಓದಿ, ವ್ಯಾಸಂಗ ಮಾಡಿ ಅದರಲ್ಲಿ ಪಾಂಡಿತ್ಯವನ್ನು ಸಂಪಾದಿಸಿಕೊಂಡಿರುವ ಜನ ನಮ್ಮಲ್ಲಿ ಈಗ ಕಡಮೆ. ಆದರೂ ಆ ರೀತಿಯ ಪಾಂಡಿತ್ಯವುಳ್ಳವರನ್ನು ಪರಿಷತ್ತು ಆರಿಸಿ, ಅವರಿಂದ ಈ ಅನುವಾದ ಕಾರ್ಯಗಳನ್ನು ಮಾಡಿಸಿದೆ. ಕಾವ್ಯವನ್ನು ಅಭ್ಯಾಸ ಮಾಡಿದವರು, ಪಾಠ ಹೇಳಿದವರು, ಕವಿಯ ಮನೋಭಾವವನ್ನು ಅರಿತವರು, ಹೊಸಗನ್ನಡವನ್ನು ಬಲ್ಲವರು ನಮಗೆ ಈ ಅನುವಾದಕಾರ್ಯವನ್ನು ಮಾಡಿಕೊಟ್ಟಿದ್ದಾರೆ. ಅವರೆಲ್ಲರಿಗೆ ಪರಿಷತ್ತು ತನ್ನ ಹೃತ್ಪೂರ್ವಕವಾದ ವಂದನೆಯನ್ನು ಸಲ್ಲಿಸುತ್ತದೆ. ಶ್ರೀ ಕೆ. ಎಸ್. ಕೃಷ್ಣಮೂರ್ತಿ ಅವರು ತೊರವೆ ರಾಮಾಯಣವನ್ನು ಅನುವಾದಿಸಿ ಕೊಟ್ಟಿದ್ದಾರೆ. ಭಾಮಿನಿ ಷಟ್ಪದಿಯಲ್ಲಿ ನಡುಗನ್ನಡದ ಭಾಷೆಯಲ್ಲಿ ರಚಿತವಾದ ಈ ಕಾವ್ಯ ಸರಳವಾಗಿದ್ದರೂ ಶ್ರೀ ಮೂರ್ತಿಯವರು ಇದರ ಹೊಸಗನ್ನಡದ ಸರಳ ಗದ್ಯಾನುವಾದದಿಂದ ಇನ್ನಷ್ಟು ಸುಲಭಗೊಳಿಸಿದ್ದಾರೆ. ಅವರು ಮೈಸೂರಿನ ಸೇಂಟ್ ಫಿಲೋಮಿನಾ ಕಾಲೇಜಿನಲ್ಲಿ ಮೂವತ್ತು ವರ್ಷಕ್ಕೂ ಮೇಲ್ಪಟ್ಟು ಕನ್ನಡದ ಪಾಠ ಹೇಳಿ ಕನ್ನಡವನ್ನು ಚೆನ್ನಾಗಿ ರೂಢಿಸಿಕೊಂಡಿದ್ದಾರೆ.

'ತೊರವೆ ರಾಮಾಯಣ'ವನ್ನು ಪೂರ್ತಿಯಾಗಿ ಒಂದು ಸಂಪುಟದಲ್ಲಿ ತರುವುದು ಬಹು ಪ್ರಯಾಸವಾದದ್ದರಿಂದ ಮತ್ತು ಪುಸ್ತಕ ಬಹಳ ದೊಡ್ಡದಾಗುವದರಿಂದ ಎರಡು ಸಂಪುಟಗಳಲ್ಲಿ ತರಲಾಗಿದೆ. ಇದು ಎರಡನೆಯ ಸಂಪುಟ. ಇದರಲ್ಲಿ ಯುದ್ಧಕಾಂಡ ಮಾತ್ರ ಇದೆ.

ಶ್ರೀ ಕೆ. ವೆಂಕಟರಾಮಪ್ಪನವರು ಈ ಅನುವಾದ ನೋಡಿ, ಅವಶ್ಯವಾದ ಕಡೆಗಳಲ್ಲಿ ತಿದ್ದಿ ಪರಿಷತ್ತಿನ ಪ್ರಕಟಣೆಗಾಗಿ ಕೊಟ್ಟಿದ್ದಾರೆ. ಹೀಗೆ ಘನ ವಿದ್ವಾಂಸರಿಬ್ಬರು ತಮ್ಮ ಪೂರ್ಣ ಪಾಂಡಿತ್ಯದಿಂದ ಈ ಅನುವಾದ ಕಾರ್ಯವನ್ನು ನೆರವೇರಿಸಿ ಕೊಟ್ಟಿದ್ದಾರೆ. ಹೀಗಿದ್ದರೂ ಆ ಕಾವ್ಯಗಳ ಕೆಲವು ಘಟ್ಟಗಳಲ್ಲಿ, ಸಂದರ್ಭಗಳಲ್ಲಿ ಅರ್ಥ ಕ್ಲಿಷ್ಟವಾಗಿ ಅಭಿಪ್ರಾಯ ಚರ್ಚೆಗೆ ಅವಕಾಶವನ್ನು ಒದಗಿಸಬಹುದು. ಅಂಥ ಸ್ಥಿತಿ ಅನಿವಾರ್ಯ. ಆದ್ದರಿಂದ ಅಲ್ಲಿ ವ್ಯಕ್ತಪಡಿಸಿರುವ ಅಭಿಪ್ರಾಯ ಪರಿಷತ್ತಿನದೆಂದು ಯಾರೂ ಭಾವಿಸಬಾರದು. ಅದು ಪಂಡಿತರ ಅಭಿಪ್ರಾಯ. ಅದರಲ್ಲಿ ಭಿನ್ನಾಭಿಪ್ರಾಯವಿದ್ದರೆ ವಿದ್ವಾಂಸರು ಸೂಚಿಸಬಹುದು. ಏಕೆಂದರೆ 'ಜಗನ್ನಾಥ ವಿಜಯ', 'ರಾಜಶೇಖರ ವಿಳಾಸ', 'ಪಂಪಭಾರತ' ಮುಂತಾದ ಕಾವ್ಯಗಳ ಅಭಿಪ್ರಾಯವನ್ನು ಇಂದು ಖಚಿತವಾಗಿ ಹೇಳುವುದು ಕಷ್ಟಕರವಾದುದೇ.

ಇವರ ಅನುವಾದಶೈಲಿಯು ಸರಳವಾಗಿದ್ದು ಜನಸಾಮಾನ್ಯಕ್ಕೆ ಕುಮಾರ ವಾಲ್ಮೀಕಿಯ ತೊರವೆ ರಾಮಾಯಣದ ರಸವನ್ನು ಸವಿಯಲು ಸಹಾಯಕವಾಗಿದೆಯೆಂದೂ ನಂಬಿದ್ದೇನೆ.

ಅನುವಾದವನ್ನು ಮಾಡಿಕೊಟ್ಟ ಅನುವಾದಕರಿಗೂ, ಅನುವಾದ ನೋಡಿ ಪರಿಶೀಲಿಸಿ ಕೊಟ್ಟ ವಿದ್ವಾನ್ ಶ್ರೀ ಕೆ. ವೆಂಕಟರಾಮಪ್ಪ ಅವರಿಗೂ ನಮ್ಮ ಅಭಿನಂದನೆಗಳು. ಕನ್ನಡಿಗರು ಇದರ ಉಪಯೋಗವನ್ನು ಪಡೆಯುತ್ತಾರೆಂದು ನಂಬಿದ್ದೇನೆ.

ರಂ. ಶ್ರೀ. ಮುಗಳಿ
ಪ್ರಧಾನ ಸಂಪಾದಕ

ಬೆಂಗಳೂರು
2–10–76

# ವಿಷಯಸೂಚಿ

## ಯುದ್ಧಕಾಂಡ

# ಯುದ್ಧಕಾಂಡ

## ಒಂದನೆಯ ಸಂಧಿ

ಸೂಚನೆ॥ ದೇವ ರಾಘವನಧಿಕಬಲ ಖಳ । ರಾವಣನ ವಧೆಗೆಂದು ಕಪಿ ಸು
ಗ್ರೀವ ಬಲಸಹಿತೈದಿದನು ನಿರುಪಮ ಮಹಾರ್ಣವವ

ದಾಶರಥಿಸುತ ಕೇಳು ಬಳಿಕ ದಿ । -ನೇಶನುದಯದಲರಸ ಸಲೆ ಪ್ರ
ತ್ಯೂಷಕರ್ಮವ ರಚಿಸಿ ನಡೆತಂದಿತ್ತನೋಲಗವ
ಕೀಶಕುಲಕಮಲಾರ್ಕ ಮುಖ್ಯ ಮ । ಹಾಸುಭಟರೈತಂದು ಕರವಿ
ನ್ಯಾಸಮಸ್ತಕರಾಗಿ ಕುಳ್ಳಿರ್ದರು ಸರಾಗದಲಿ ೧

ನಡೆದುದೀ ಪರಿಯಂತ ಕಾರ್ಯದ । ಕಡುಹು ಕುಂದದೆ ಮುಂದಣಿನ ಮುಂ
ಗುಡಿಯು ದಾಯಕೆ ದಾರಿಯಾವುದು ವೀರ ಹೇಳೆಂದು
ನುಡಿಯಲಿನಸುತ ಕೈಮುಗಿದು ದಳ । ನಡೆಯಲೆಣಿಕೆಗಿದೇನು ದೊಡ್ಡಿತು
ಕೊಡಲಿಯೇಕೆಳೆಗೊನೆಗೆ ಕಾರ್ಯದ ಬೆಗಡದೇನೆಂದ ೨

ಜೀಯ ನಮ್ಮಾ ದಳಕೆ ನೀಲನ । ನಾಯಕನ ಮಾಡಿರಲಿ ಸೇವೆಗೆ
ವಾಯುವಿನನಂದನನು ದೇವರ ಪಾದಪಂಕಜದ
ರಾಯಕುವರನ ನಿಲಿಸಿ ನಿಜಬಲ । ದಾಯತದ ರಕ್ಷಣೆಗೆ ಮೇಲಣ
ದಾಯುದನುಭವಕಜಸುತನ ಕೈವಿಡಿದುಕೊಳಿಯೆಂದ ೩

ಸೂಚನೆ॥ ರಾಘವದೇವನು ಅಧಿಕ ಬಲಶಾಲಿ ರಾವಣಾಸುರನ ವಧೆಗಾಗಿ ವೀರ ಸುಗ್ರೀವನ ಸೈನ್ಯವನ್ನೊಡಗೊಂಡು ವಿಸ್ತಾರ ಸಾಗರದ ಬಳಿಗೆ ಬಂದನು. ೧. ದಾಶರಥಿಯ ಮಗನೇ ಕೇಳು, ಮಾರನೆಯ ದಿನ ಸೂರ್ಯೋದಯದಲ್ಲಿ ರಾಮನು ಬೆಳಗಿನ ಕರ್ಮಗಳನ್ನು ಮುಗಿಸಿಕೊಂಡು ಆಸ್ಥಾನಕ್ಕೆ ಬಂದನು. ಕಪಿವಂಶಕಮಲಕ್ಕೆ ಸೂರ್ಯನಾದ ಸುಗ್ರೀವನೇ ಮೊದಲಾದ ಮಹಾವೀರರು ಬಂದು ಹಣೆಯಮೇಲೆ ಕೈಯಿಟ್ಟುಕೊಂಡು ಸುಖಾಸೀನರಾದರು. ೨. "ಶೀಘ್ರಗತಿಯಿಂದ ಕಾರ್ಯವು ಇಲ್ಲಿಯವರೆವಿಗೆ ನಡೆಯಿತು. ಇನ್ನು ದಂಡನ್ನು ನಡೆಸಿಕೊಂಡು ಹೋಗುವ ಮುಂದಿನ ಕಾರ್ಯಕ್ಕೆ ದಾರಿಯಾವುದು ? ವೀರ, ಹೇಳು" ಎಂದು ರಾಮನು ನುಡಿಯಲು ಸುಗ್ರೀವನು ಕೈಮುಗಿದು, "ಸೈನ್ಯವು ಪ್ರಯಾಣಮಾಡಲಿ. ಯೋಚಿಸಲು ಇದೇನು ಮಹಾದೊಡ್ಡದು. ಎಳೆಗೊನೆಯನ್ನು ಕಡಿಯಲು ಕೊಡಲಿ ಏತಕ್ಕೆ ? ಕಾರ್ಯದಲ್ಲಿ ಅಂಜಿಕೆಯೇನು" ಎಂದ ಸುಗ್ರೀವ. ೩. "ಸ್ವಾಮಿ, ನಮ್ಮ ಈ ಸೈನ್ಯಕ್ಕೆ ನೀಲನನ್ನು ನಾಯಕನನ್ನಾಗಿ ಮಾಡಿ. ಸ್ವಾಮಿ ಯವರ ಪಾದಕಮಲಗಳ ಸೇವೆಗೆ ಹನುಮಂತನನ್ನು ಇರಿಸಿಕೊಳ್ಳಿ. ನಮ್ಮ ವಿಶಾಲವಾದ ಸೈನ್ಯದ ರಕ್ಷಣೆಗೆ ಅಂಗದನನ್ನು ನೇಮಿಸಿ. ಮುಂದಿನ ಸೇನೆಯ ಚಾಲನೆಗೆ ಅನುಭವಿ

ಆದುದಾ ಮರಿಯಾದೆಯಲಿ ಸಂ । ಪಾದಿಸಿತು ಸೇನಾಧಿಪತ್ಯಕೆ
ವೈದಿಕೋಕ್ತದ ವಿವಿಧ ಪರಿಕರವಗ್ನಿನಂದನಗೆ
ಐದಿತಮರಕದಂಬವಂಬರ । ವೈದದೆನೆ ಸುರಮುನಿಗಳಿಳಿದರು
ಮೇದಿನಿಗೆ ಮಾಂಗಲ್ಯ ತೂರ್ಯತ್ರಯದ ರಭಸದಲಿ ೪

ಗುರುವಿನಭಿಮತಲಗ್ನದಲಿ ಸು । ಸ್ಥಿರ ಸುಲಗ್ನದೊಳಾಯ್ತು ವೈಶ್ವಾ
ನರಸುತಂಗಭಿಷೇಕ ಕಪಿಸೇನಾಧಿಪತ್ಯಕದ
ಹರಸಿ ಸೇಸೆಯ ಹಾಯ್ಕಿದರು ಸುರ । ತರುಣಿಯರು ಹೂವಳೆಯ ಹೊನಲು
ಬ್ಬರಿಸಿದುದು ಪೊದಜಿ³ದ್ದುದಾ ಪ್ರಸ್ಥಾನವಾದ್ಯರವ ೫

ಪರಿಬಲವನತಿಹರುಷದಲಿ ಸಿಂ । ಗರಿಸಿದನು ಸುರರಾಜನುಚಿತಾ
ಭರಣ ದಿವ್ಯ ಸುಗಂಧ ಮಾಲ್ಯಾಂಬರ ಸಮಗ್ರದಲಿ
ಶಿರವ ಮಣಿದಣಿಮಾದಿ ಸಿದ್ಧಿಗ । ಳರಸನಂಘ್ರಿಗೆ ಬೀಳುಗೊಂಡನು
ಸುರಗಣದ ಸಮ್ಮೇಳದಿಂದಮರಾವತೀಪುರಿಗೆ ೬

ಬಳಿಕಲುತ್ತರ ಫಲ್ಗುಣೀ ಸ । ಮ್ಮಿಳಿತ ವಿಶ್ರುತ ಮಾರ್ಗಶಿರದು
ಜ್ವಲಿತ ಶುದ್ಧಾಷ್ಟಮಿಯುಲಭ್ರದ್ಯೋತನಂಬರದ
ವಳಯಮಧ್ಯದಲಿರಲು ತಾರಾ । ಬಲದ ಬಲದುಸುರಿನಲಿ ನೀಲೋ
ತ್ಪಲನಿಭಾಂಗನು ತೆರಳಿದನು ವಿಜಯಾಭಿಯೋಗದಲಿ ೭

ಯಾದ ಜಾಂಬವನನ್ನು ನಿಲ್ಲಿಸಿಕೊಳ್ಳಿ" ಎಂದನು. ೪. ಅಗ್ನಿಪುತ್ರ ನೀಲನ ಸೇನಾಧಿಪತ್ಯದ ಮಂಗಳಕಾರ್ಯಕ್ಕೆ ಶಿಷ್ಟಾಚಾರದಂತೆ ವೇದದಲ್ಲಿ ಹೇಳಿರುವ ಪ್ರಕಾರ ವಿವಿಧ ಸಲಕರಣೆಗಳನ್ನು ಸಂಗ್ರಹಿಸಲಾಯಿತು. ಆಕಾಶದಲ್ಲಿ ಸ್ಥಳ ಸಾಲದು ಎನ್ನುವಂತೆ ದೇವತೆಗಳು ಬಂದು ನೆರೆದರು. ಮಂಗಳಕರವಾದ ಗಾನ ನೃತ್ಯ ವಾದ್ಯಗಳ ಮೇಳವು ಭೋರ್ಗರೆಯುತ್ತಿರಲು ದೇವಮುನಿಗಳು ಭೂಮಿಗೆ ಇಳಿದುಬಂದರು. ೫. ಗುರುವು ಒಪ್ಪಿ ಸೂಚಿಸಿದ ಲಗ್ನದಲ್ಲಿ ಸ್ಥಿರಶುಭಲಗ್ನದಲ್ಲಿ ಅಗ್ನಿಪುತ್ರ ನೀಲನಿಗೆ ಕಪಿಸೇನಾಧಿಪತ್ಯದ ಅಭಿಷೇಕ ನಡೆಯಿತು. ದೇವತಾಸ್ತ್ರೀಯರು ಹರಸಿ ಅಕ್ಷತೆಯನ್ನು ತಳಿದರು. ಹೂಮಳೆಯ ಪ್ರವಾಹ ಉಕ್ಕಿತು. ಪ್ರಯಾಣಭೇರಿಗಳ ಶಬ್ದವು ಒಟ್ಟಾಗಿ ಭೋರ್ಗರೆಯಿತು. ೬. ದೇವೇಂದ್ರನು ಬಹಳ ಸಂತೋಷದಿಂದ ಉಚಿತಾಭರಣಗಳಿಂದಲೂ ದಿವ್ಯ ಸುಗಂಧ ಮತ್ತು ಹೂವಿನ ಹಾರಗಳಿಂದಲೂ ಕಪಿಸೈನ್ಯವನ್ನು ಒಟ್ಟಿಗೆ ಅಲಂಕರಿಸಿದನು. ಅಣಿಮಾದಿ ಅಷ್ಟಸಿದ್ಧಿಗಳನ್ನು ಪಡೆದುಕೊಂಡ ರಾಮನ ಪಾದಗಳಿಗೆ ತಲೆಬಾಗಿ ನಮಸ್ಕರಿಸಿ ದೇವೇಂದ್ರನು ದೇವಗಣದೊಡನೆ ರಾಮನನ್ನು ಬೀಳ್ಕೊಂಡು ಅಮರಾವತಿ ಪಟ್ಟಣಕ್ಕೆ ಹೋದನು. ೭. ತರುವಾಯ ಮಾರ್ಗಶಿರಮಾಸದ ಶುಕ್ಲಪಕ್ಷದ ಅಷ್ಟಮಿ ಉತ್ತರಫಲ್ಗುಣೀನಕ್ಷತ್ರದ ಸಂಯೋಗವಿರುವ ದಿವಸ ರವಿಯು ಗಗನಮಧ್ಯದಲ್ಲಿರಲು ತಾರಾಬಲದ ಬೆಂಬಲದೊಡನೆ ನೀಲಮೇಘಶ್ಯಾಮನು ವಿಜಯಾಭಿಲಾಷೆಯಿಂದ

ಎದ್ದುದೊಡನೆ ಸಮಸ್ತಬಲ ಲಳಿ । ಯೆದ್ದ ಲಹರಿಯ ಲುಳಿಯ ಶರಧಿಯ
ಕದ್ದಿಯಲಿ ಕುಜಕುಧರದುಬ್ಬರದಾಯುಧಂಗಳಲಿ
ಗದ್ದುಗೆಯನಿಳಿದಬುಜಭವನವ । ರಿದ್ದ ಬೀಡಿಗೆ ಬಂದು ವಿನಮಿತ
ಮುದ್ರೆಯಲಿ ಮುಗಿದಿರ್ದನನುಪಮ ಕರಪುಟಾಂಜಲಿಯ ೮

ಜಯಜಯಧ್ವನಿ ಜಡಿಯೆ ಲಂಕಾ । ಜಯನುರುಸ್ಕಂಧದಲಿ ರಿಪುನಿ
ರ್ಭಯನು ಮಂಡಿಸಿದನು ಮರುದ್ಗಣರಾಜಸುತಸುತನ
ನಿಯತ ನಿಜಕಂಧರದಲಬುಜ । ಪ್ರಿಯಕುಲಾನುಜನೊಪ್ಪಿ ರವಿಜಾ
ಜ್ಞೆಯಲಿ ನಡೆದುದು ದಂಡು ಕದನೋದ್ದಂಡ ರಾಘವನ ೯

ಅರರೆ ರಘುರಾಜೇಂದ್ರಸೈನ್ಯದ । ಸಿರಿಯನೇವಣ್ಣಿಸುವೆನಗ್ಗದ
ಕರಡಿಗಳೆ ಕರಿಘಟೆಗಳಾ ಮುಸುಗಳೆ ತುರಂಗಚಯ
ಕರಿಯ ಕಪಿಗಳೆ ತೇರುಗಳು ತರು । ಚರರು ಪದಚರರಾಯ್ತಲೈ ಹೊಸ
ಪರಿಯ ಚತುರಂಗದ ಗಡಾವಣೆ ಘಾಡಿಸಿತು ಜಗವ ೧೦

ತೋಳುಗಳೆ ಪರಿಘಾಳಿ ನೀಡುಲಾಂ । ಗೂಲವೇ ಸಬಳಂಗಳುಗ್ರ ಕ
ರಾಳನಖವಸಿಧನುವು ದಂಷ್ಟ್ರಗಳುರುಕೃಪಾಣಗಳು
ಮೋಲುಗೈದುಗಳುಳಿದ ಗಿರಿತರು । ಕೇಳಿದೈ ಕುಶ ನೆರಹಿದಮೃತಫ
ಲಾಳಿ ಕೊಟ್ಟಿಗೆಯೆನಲು ಕಂಗೊಳಿಸಿತ್ತು ಕಪಿಸೇನೆ ೧೧

ಪ್ರಯಾಣ ಹೊರಟನು, ೮. ಅಲೆಗಳು ರಭಸದಿಂದ ಮೇಲಕ್ಕೆ ಚಿಮ್ಮುವ ಸಮುದ್ರದಂತೆ ಉತ್ಸಾಹದಿಂದ ಮರ ಕಲ್ಲುಗುಂಡುಗಳ ಅತಿಶಯವಾದ ಆಯುಧಗಳನ್ನು ಹಿಡಿದುಕೊಂಡು ಸಮಸ್ತ ಕಪಿಸೈನ್ಯವು ಮೇಲೆದ್ದಿತು. ಪೀಠದಿಂದ ಇಳಿದು ಜಾಂಬವಂತನು ರಾಮಲಕ್ಷ್ಮಣರಿದ್ದ ಬೀಡಿಗೆ ಬಂದು ನಮ್ರಭಾವದಿಂದ ಕೈಗಳನ್ನು ಮುಗಿದನು. ೯. ಜಯ ಜಯಧ್ವನಿಯು ವ್ಯಾಪಿಸಲು ಶತ್ರುಭಯಂಕರ ರಾಮನು ಲಂಕಾವಿಜಯಿ ಹನುಮಂತನ ಹೆಗಲನ್ನೇರಿ ಕುಳಿತನು. ಇಂದ್ರಪುತ್ರನಾದ ವಾಲಿಯ ಮಗ ಅಂಗದನ ಹೆಗಲನ್ನೇರಿ ರವಿಕುಲರಾಮನ ತಮ್ಮ ಲಕ್ಷ್ಮಣನು ಕುಳಿತನು. ಸುಗ್ರೀವನ ಅಪ್ಪಣೆಯಂತೆ ಕದನಪ್ರಚಂಡ ರಾಘವನ ಸೈನ್ಯವು ಮುನ್ನಡೆಯಿತು. ೧೦. ಅಬ್ಬಬ್ಬ, ರಘುರಾಮನ ಸೈನ್ಯಸಂಪತ್ತನ್ನು ಏನೆಂದು ವರ್ಣಿಸಲಿ. ಬಲಶಾಲಿ ಕರಡಿಗಳೆ ಆನೆಗಳ ಸೈನ್ಯ, ಕರಿಮುಖದ ಕೋತಿಗಳಾದ ಮುಸುಗಳು ಕುದುರೆದಳ, ಕರಿಯ ಕಪಿಗಳು ರಥಗಳು, ವಾನರರು ಕಾಲ್ಬಲ. ಹೀಗೆ ನವೀನವಾದ ಚತುರಂಗಸೈನ್ಯದ ಗಲಾಟೆ ಜಗತ್ತನ್ನು ತುಂಬಿತು. ೧೧. ತೋಳುಗಳೆ ಲಾಳವಿಂಡಿಗೆಗಳು, ಉದ್ದವಾದ ಬಾಲಗಳೇ ಈಟಿಗಳು, ಕ್ರೂರವಾದ ಭಯಂಕರ ಉಗುರುಗಳು ಕತ್ತಿ ಮತ್ತು ಬಿಲ್ಲುಗಳು, ಕೋರೆದಾಡೆಗಳು ಕೃಪಾಣಗಳು, ಬಂಡೆ ಮತ್ತು ಮರಗಳು ಉಳಿದ ಪ್ರಬಲ ಆಯುಧಗಳು. ಕೇಳಿದೆಯಾ ಕುಶ, ಸಂಗ್ರಹಿಸಿದ ಅಮೃತಫಲಗಳು ಕಣಜ. ಈ ರೀತಿಯಲ್ಲಿ ಕಪಿಸೈನ್ಯವು

ನಡೆದುದೈ ಬಲ ಬಳಿಕ ಬಲಿಮುಖ । ಪಡೆಯ ಪದಹತಿಗಹಿಪನಸುವ
ಕ್ಕುಡಿಸೆ ಕುಲಗಿರಿ ಜರಿಯೆ ಕೂರುಮನಸುರು ಕಂಠದಲಿ
ಮಿಡುಕೆ ಮದದಿಗುದಂತಿಕುಲ ತಲೆ । ಗೊಡಹೆ ಕಮಲಭವಾಂಡಮಂಡಲ
ಜಡಿಯೆ ಜರಿದುದು ಧರಣಿ ಸೇನಾಗಣದ ಭಾರದಲಿ ೧೨

ಕೀಲು ಕಳಚಿದವಮರಶೈಲದ । ಮೇಲುಜಗವೊಗ್ಗುಡಿಸಿದವು ದಿಗು
ಮೂಲೆ ಹರಿಯಲು ಬಿಟ್ಟುದತಳದ ಬೆಸುಗೆ ಭೂತಳದ
ತಾಳುವವರಿನ್ನಾರೊಯೆನುತಾಂ । ದೋಳಮಾನಸನಾಗಿ ಬೆಂಬಿಡ
ದೋಲಗಿಸಿ ಬರುತಿರ್ದನಜನಂಭೋಜಲೋಚನನ ೧೩

ಹರಿ ಚಮೂಚರಣ ಪ್ರಹತಪದದು । ಬ್ಬರದ ರಜದಲಿ ಮುಳುಗಿತಗ್ಗದ
ಹರಿಪದವು ಹರಿಬಿಂಬ ಹರಿಪದ ಹರಿಜನಸ್ಥಾನ
ಹರಿಯವೊಲು ಹರಿಸೂನು ನಿರ್ಮಿತ । ತರತರದ ಭುವನಗಳ ಜಠರಾಂ
ತರದೊಳಳವಡಿಸಿತ್ತು ಹೊಗಳುವೆನೇಸನದ್ಭುತವ ೧೪

ಕಟಕವೀಪರಿ ನಡೆದು ಹರಗಿರಿ । ಕಟಕದಲಿ ಬಿಟ್ಟುದು ಕಣಾ ಗಿರಿ
ತಟದೊಳಾಯಿತು ಪಯಣ ಮಱುದಿನ ಮೇಚಕಾಹ್ವಯದ
ಅಟವಿ ತಳಪಟವಾಗೆ ನಡೆದು । ಗ್ಗಟದ ಮಲೆಯಾದ್ರಿಯಲಿ ಬಿಟ್ಟುದು
ಪಟುಪರಾಕ್ರಮಿ ನೀಲನಾಜ್ಞೆಯಲಾ ಮಹಾಸೇನೆ ೧೫

ಕಂಗೊಳಿಸಿತು. ೧೨. ಬಳಿಕ ಸೈನ್ಯವು ಮುನ್ನಡೆಯಿತು. ವಾನರಸೈನ್ಯದ ಹೆಜ್ಜೆಯೇಟಿಗೆ ಆದಿಶೇಷನ ಪ್ರಾಣವು ಕುಗ್ಗಿತು, ಕುಲಪರ್ವತವು ಕುಸಿಯಿತು, ಕೂರ್ಮನ ಉಸಿರು ಕೊರಳಿನಲ್ಲಿ ಕಂಪಿಸಿತು, ಮದಿಸಿದ ದಿಗ್ಗಜಗಳು ತಲೆ ಕೊಡವಿದವು, ಬ್ರಹ್ಮಾಂಡವು ನಡುಗಿತು, ವಾನರಸೈನ್ಯದ ಭಾರಕ್ಕೆ ನೆಲ ಕುಸಿಯಿತು. ೧೩. ಮೇರುಪರ್ವತದ ಕೀಲು ಕಳಚಿತು, ಮೇಲಿನ ಲೋಕಗಳು ಒಂದರ ಮೇಲೊಂದು ಬಿದ್ದವು, ದಿಕ್ಕಿನ ಮೂಲೆ ಹರಿದುಹೋಗಲು ಭೂಮಿ ಮತ್ತು ಪಾತಾಳಗಳ ಬೆಸುಗೆ ಬಿಟ್ಟುಕೊಂಡಿತು. ಇದನ್ನು ತಡೆದುಕೊಳ್ಳುವವರು ಯಾರೋ ತಿಳಿಯದು ಎನ್ನುತ್ತ ಅನಿಶ್ಚಿತ ಮನಸ್ಸಿನಿಂದ ಬ್ರಹ್ಮನು ಕಮಲಾಕ್ಷ ಶ್ರೀಹರಿಯನ್ನು ಅಗಲದೆ ಸೇವೆಮಾಡುತ್ತ ಬರುತ್ತಿದ್ದನು. ೧೪. ಕಪಿಸೈನ್ಯದ ಹೆಜ್ಜೆಗಳ ತುಳಿತದಿಂದೆದ್ದ ಧೂಳಿನ ರಾಶಿಯಲ್ಲಿ ಆಕಾಶ, ಸೂರ್ಯಬಿಂಬ, ಆಕಾಶಗಂಗೆ ಮತ್ತು ಸತ್ಯಲೋಕಗಳು ಮುಳುಗಿದವು. ಬ್ರಹ್ಮಸೃಷ್ಟಿಯ ವಿವಿಧ ಲೋಕಗಳೊಳಭಾಗಕ್ಕೆ ವಾಯುವಿನಂತೆ ಧೂಳು ವ್ಯಾಪಿಸಿತು. ೧೫. ಈ ರೀತಿಯಲ್ಲಿ ವಾನರಸೈನ್ಯವು ಪ್ರಯಾಣಮಾಡಿ ಕೈಲಾಸಪರ್ವತದ ತಪ್ಪಲಲ್ಲಿ ಪಾಳಯವನ್ನು ಹಾಕಿತು. ಮೂರನೆಯ ದಿವಸ ಮೇಚಕಪರ್ವತದ ತಪ್ಪಲಿನಲ್ಲಿ ಪ್ರಯಾಣವನ್ನು ಮುಂದುವರೆಸಿತು. ಕಾಡೆಲ್ಲ ರಣರಂಗವೋ ಎನ್ನುವಂತೆ ನಡೆದು ಅತಿಶಯವಾದ ಮಲಯಾದ್ರಿಯಲ್ಲಿ ನೀಲನ ಅಪ್ಪಣೆಯಂತೆ ವಾನರಮಹಾಸೈನ್ಯವು ಬೀಡುಬಿಟ್ಟಿತು.

ಪಯಣ ನಾಲ್ಕಕೆ ಸಾರಿದರು ಶರ । ಧಿಯ ತಟಾಕವನವಮ ನೆಲನಾ
ನಿಯುತಬಲ ಜಲರಾಶಿಯಲಿ ಮುಳುಗಿತು ಕ್ಷಣಾರ್ಧದಲಿ
ಭಯದ ಭಾರಣೆಯಿಂದ ಸೀತಾ । ಪ್ರಿಯನ ಚರಣಕೆ ಮೌಕ್ತಿಕದ ಮಣಿ
ಮಯವ ಕಾಣಿಕೆಗೊಡುವವೊಲು ಕಡಲುಬ್ಬಿತಿದಿರಿನಲಿ ೧೬

ತೆರೆಯ ಗುಡಿಗಳ ಫೇನ ಪಿಂಡೋ । ತ್ಕರದ ಧವಳಚ್ಛತ್ರದುರುಸೀ
ಕರದ ಚಾಮರದಮಳ ಸಲಿಲಾವರ್ತ ನರ್ತನದ
ಭರಿತ ರವ ಘುಳುಘುಳು ನಿನಾದದ । ಪೊರೆವ ಭೇರಿಯಲಿದಿರುಗೊಂಬಂ
ತರರೆ ಮೆಱೆದುದು ಶರಧಿ ವಸುಧಾಧೀಶ ರಘುಪತಿಯ ೧೭

ಒದೆದು ವೇಲಾಚಲವನಭ್ರದ । ತುದಿಗೆ ಲಂಘಿಸಿ ಮುರಿದು ವಿತಳವ
ಕದುಬಿ ಭೋರೆಂದುಲಿದು ದಿಗುಭಿತ್ತಿಗಳೆ ಹೊಯ್ದಲೆದು
ಮದದಹಂಕಾರದಲಿ ತನಗಿ । ಲ್ಲಿದಿರಹ ಪ್ರತಿಭಟನೆನುತ ಹರು
ಷದಲಿ ಮಲದೊಲದಾಡುತಿರ್ದುದು ಜಲಧಿ ಧೃತಜಲಧಿ ೧೮

ಬೀಡು ಬಿಟ್ಟುದು ಸಕಲ ನಾಯಕ । ವಾಡಿಗಳ ಗುಡಿಹೊಯ್ದವಸುರ ವಿ
ಭಾಡಗೆಳಿದಲಿರುಗಳ ಹೊದಕೆಯ ರಾಜವೈಭವದ
ನೋಡಿ ಶರಧಿಗೆ ಪಡಿಸಮುದ್ರದ । ಪಾಡು ಮೆಱೆದುದು ಪಾಳೆಯವು ತೆಗ
ದೋಡಿತಲ್ಲಿಯು ಠಾಣೆಯುದ ಖಳರಸುರಪುರವರಕೆ ೧೯

೧೬. ನಾಲ್ಕು ಪ್ರಯಾಣಗಳ ಬಳಿಕ ಸಮುದ್ರದ ದಡವನ್ನು ಸೇರಿದರು. ಮರುಕ್ಷಣದಲ್ಲಿ ಆ ಬಹುದೊಡ್ಡ ಸಂಖ್ಯೆಯ ಸೈನ್ಯಸಾಗರದಿಂದ ನೆಲವು ಮುಚ್ಚಿಹೋಯಿತು. ಭಯಾಧಿಕ್ಯದಿಂದ ಸೀತಾಪತಿಯ ಪಾದಗಳಿಗೆ ಮುತ್ತಿನ ಮಣಿಗಳ ಕಾಣಿಕೆಯನ್ನೊಪ್ಪಿಸುವ ರೀತಿಯಲ್ಲಿ ಎದುರಿನಲ್ಲಿ ಸಮುದ್ರವು ಉಬ್ಬಿತು. ೧೭. ಅಲೆಗಳೇ ಧ್ವಜಗಳು, ನೊರೆಗಳೇ ಶ್ವೇತಚ್ಛತ್ರಿ, ತುಂತುರುಹನಿಗಳ ಚಾಮರ, ನೀರಿನ ಸುಳಿಗಳ ನರ್ತನ ಮತ್ತು ಕಡಲಿನ ಘುಳು ಘುಳು ಶಬ್ದದ ಭೇರಿಗಳೊಡನೆ ರಾಜಾರಾಮನನ್ನು ಎದುರುಗೊಳ್ಳುತ್ತಿರುವಂತೆ ಸಮುದ್ರವು ಪ್ರಕಾಶಿಸಿತು! ೧೮. ತೀರದ ಪರ್ವತವನ್ನು ಒದ್ದು, ಆಕಾಶದ ತುದಿಗೆ ನೆಗೆದು, ಅಲ್ಲಿಂದ ಹಿಂತಿರುಗಿ ಪಾತಾಳವನ್ನು ಅಮುಕಿ, ಭೋರೆಂದು ಆರ್ಭಟಿಸುತ್ತ ದಿಗ್ಭಿತ್ತಿಗಳಿಗೆ ಅಪ್ಪಳಿಸಿ ಅಹಂಕಾರದಿಂದ ಮದಿಸಿ ತನ್ನನ್ನು ಎದುರಿಸುವ ವೀರನಿಲ್ಲ ಎನ್ನುತ್ತ ಹರ್ಷದಿಂದ ಬೀಗಿ ಅಪಾರಜಲರಾಶಿಯಿಂದ ಸಾಗರವು ಒಲೆದಾಡುತ್ತಿತ್ತು. ೧೯. ಸಮಸ್ತ ಸೇನಾಮುಖಂಡರ ಬಿಡಾರ ಏರ್ಪಟ್ಟಿತು, ಎಳೆಚಿಗುರುಗಳನ್ನು ಹೊದಿಸಿದ ರಾಜವೈಭವೋಪೇತವಾದ ಕುಟೀರವನ್ನು ಅಸುರಾರಿ ರಾಮನಿಗೆ ನಿರ್ಮಿಸಲಾಯಿತು. ವಾನರಸೇನಾಪಾಳೆಯವು ಸಮುದ್ರಕ್ಕೆ ಪ್ರತಿಸಮುದ್ರವೋ ಎಂಬಂತೆ ಕಂಗೊಳಿಸಿತು.

ಎಲೆ ರಘುಕ್ಷಿತಿನಾಥಸುತ ಕೇಳ್ । ಖಳಶಿರೋಮಣಿ ಸುಪ್ರತಾಪಾ
ನಲನ ತೇಜದ ತೀವ್ರ ಶೌರ್‍ಯದ ಸಕಲ ವೈಭವದ
ಕಲಿತ ಮದದುಬ್ಬಿನಲಿ ಸುಭಟಾ । ವಳಿ ಸಹಿತಲೋಲಗದಲಿರೆ ತಂ
ದಿಳುಹಿದರು ಭಯಭರಿತ ಬೀಜದ ಹೊಱೆಯನಾ ಖಳರು ೨೦

ಜೀಯ ಬಂದಿದೆ ಬಹಳ ಕಪಿಕಟ । ಕಾಯಕಲ್ಪಿತ ಕಾಮರೂಪಿನ
ಕಾಯದತಿಬಲರಿಂದ್ರ ಯಮ ವರುಣಾದಿ ನಿರ್ಜರರ
ಆಯತವನಣಕಿಸುವ ಕುಲಶೈ । ಲಾಯುಧರು ಕಣ್ಣಿಕ್ಕಲಸದಳ
ವಾಯಿತೆಮಗೆಲೆ ಜೀಯಯೆಂದರು ಖಳರು ಕೈಮುಗಿದು ೨೧

ಎತ್ತ ನೋಡಿದಡತ್ತ ವಿಲಯದ । ಲೆತ್ತಿದಂಬುಧಿಯಂತೆ ಬಲವಿದೆ
ಕೃತ್ತಿವಾಸಂಗಸುರಹರ ಕಮಲಜರಿಗಸದಳದ
ಮೃತ್ಯುಮುಖದವರದೆ ಮಹೀಜವ । ಕಿತ್ತು ನಮ್ಮಾ ಪುರವನಗ್ನಿಗೆ
ತುತ್ತುಗೊಟ್ಟವನಂದದವರದೆ ಕೋಟಿಸಂಖ್ಯೆಯಲಿ ೨೨

ದೇವರಂದೆಳತಂದ ಸೀತಾ । ದೇವಿಯರಸನ ದಂಡು ಗಡ ಸು
ಗ್ರೀವನೆಂಬ ಕಪೀಂದ್ರನಾ ದಳಭಾರಕೊಡೆಯು ಗಡ
ಆವುದಭಿಮತ ರಾಜಕಾರ್‍ಯದ । ಜೀವಳವನದ ದೇವರೇ ಸಂ
ಭಾವಿಸುವುದಾವ್ ಬಂದ ಹದನಿದುಯೆಂದರಾ ಖಳರು ೨೩

ಅಲ್ಲಿ ಠಾಣ್ಯ ಹೂಡಿದ್ದ ರಾಕ್ಷಸರು ಲಂಕಾಪಟ್ಟಣಕ್ಕೆ ಓಡಿಹೋದರು. ೨೦. ರಘು ಭೂಪಾಲಕನ ಮಗನೇ ಕೇಳು, ಪರಾಕ್ರಮಾಗ್ನಿಯ ತೇಜಸ್ಸಿನಿಂದಲೂ ಸಾಹಸಾತಿಶಯದ ವೈಭವದಿಂದಲೂ ಮದಿಸಿದ ರಾಕ್ಷಸಶ್ರೇಷ್ಠನು ವೀರರೊಡನೆ ಅಸ್ಥಾನ ಮಂಟಪದಲ್ಲಿದ್ದನು. ಕಡಲ ತೀರದಿಂದ ಹೋದ ರಾಕ್ಷಸರು ರಾವಣನ ಎದುರಿಗೆ ಭಯ ತುಂಬಿದ ಬೀಜದ ಹೊರೆಯನ್ನು ಹೊತ್ತು ತಂದಿಳಿಸಿದರು. ೨೧. "ಸ್ವಾಮಿ, ಬಯಸಿದ ರೂಪ ಧರಿಸಬಲ್ಲ ಮಹಾಬಲಯುತ ದೇಹಗಳ ಬಹಳ ದೊಡ್ಡ ಕಪಿ ಸೈನ್ಯವು ಬಂದಿದೆ. ಇಂದ್ರ, ಯಮ, ವರುಣನೇ ಮೊದಲಾದ ದೇವತೆಗಳನ್ನು ಅತಿಶಯವಾಗಿ ಅಣಕಿಸುವ ಬಂಡೆಗಳನ್ನು ಆಯುಧಗಳನ್ನಾಗಿ ಹಿಡಿದ ವೀರರ ಸಮೂಹವನ್ನು ನೋಡಲು ನಮ್ಮ ದೃಷ್ಟಿಗಳು ಸಾಲದಾದುವು, ಪ್ರಭು!" ಎಂದು ರಾಕ್ಷಸರು ಕೈಮುಗಿದುಕೊಂಡು ನುಡಿದರು. ೨೨. "ಎತ್ತೆತ್ತ ದೃಷ್ಟಿ ಹಾಯಿಸಿದರೂ ಪ್ರಳಯ ಕಾಲದಲ್ಲಿ ಉಕ್ಕಿ ಬಂದ ಸಾಗರದಂತೆ ಸೈನ್ಯವಿದೆ. ಶಿವ ವಿಷ್ಣು ಬ್ರಹ್ಮ ಇವರುಗಳಿಗೂ ಸಾಧ್ಯವಾಗದ ಮೃತ್ಯುವಿನ ಬಾಯಿಯು ಸೈನ್ಯವಿದೆ. ಅಶೋಕವನದ ಮರಗಳನ್ನು ಕಿತ್ತು ನಮ್ಮ ಈ ಲಂಕಾಪಟ್ಟಣವನ್ನು ಬೆಂಕಿಗೆ ಆಹುತಿಯಾಗಿ ಕೊಟ್ಟವನಂಥವರು ಕೋಟಿಸಂಖ್ಯೆಯಲ್ಲಿದ್ದಾರೆ. ೨೩. "ಪ್ರಭುಗಳು ಅಂದು ಎಳೆದುತಂದ ಸೀತಾ ದೇವಿಯರಸನ ಸೈನ್ಯವದು ; ಸುಗ್ರೀವನೆಂಬ ಕಪಿಗಳೊಡೆಯನು ಆ ಭಾರಿ ಸೈನ್ಯದೊಡೆಯ. ನಿಮಗೆ ಒಪ್ಪಿಗೆಯಾದ ಸತ್ವಯುತವಾದ ರಾಜಕಾರ್ಯವೇನೆಂಬುದನ್ನು

ಹುಲುನೃಪಾಲನ ಹಗೆತನದ ಹೆ । ಕ್ಕಳವ ಹೇಳುವ ಹಂದೆಗಳ ಬಾ
ಯ್ಗಳನು ಹೊಯ್ ಹೊಯ್ಯೆನುತ ರಕ್ಕಸರರಸ ಕೋಪದಲಿ
ಇಳಿದು ಸಿಂಹಾಸನವ ಪರಿಮಿತ । ನಿಳಯಕಭಿಮುಖನಾಗಿ ಕರಸಿದ
ನಳುಕಿನಲಿ ಬಳಿಕಾ ಪ್ರಹಸ್ತ ಸುರೇಂದ್ರಜಿತು ಖಳರ ೨೪

ಇಂದಿನುತ್ತರದೆಸೆಯ ವಾರ್ತೆಯ । ಚಂದವನು ಕೇಳಿದಿರೆ ಸೀತೆಯ
ಹಿಂದಣರಸನು ಹೊಳಕಿದನು ಗಡ ಹೊರದ ವೈರದಲಿ
ಅಂದು ನಮ್ಮಯ ಪುರವನುರಿಯಲಿ । ಸಂಧಿಸಿದ ಕಪಿಯಂದದಲಿ ಭಟ
ವೃಂದ ನೆಱೆದುದು ಗಡಯಿದಕಿನ್ನೇನು ಹದನೆಂದ ೨೫

ಅಱಿಯಬಾರದು ಜೀಯ ರಿಪುನೃಪ । ರಿಱಿತಕೆಮ್ಮೊಳಗೊದಗುವುದು ಕಡು
ವೆಱಗು ಕದನದಲಿಂದುಧರನಳುಕುವನು ದೇವರಿಗೆ
ಮಱೆದುಕೊಂಡಿರಲೇಕೆ ನಾವೆ । ಚ್ಚಱುವವೀ ಸಮಯದಲಿ ನಮ್ಮನು
ಕೊಱತೆ ನೆಮ್ಮಿಹುದಾಗಿಯೆಂದಾ ಸಚಿವಪತಿ ನುಡಿದ ೨೬

ಸಮನು ಸಮನಲಿ ಬಿಟ್ಟಿಹನು ವಿ । ಕ್ರಮವಿಹೀನನು ಕೆತ್ತಿಹನು ಸಂ
ಭ್ರಮಿಸುವನು ಸತ್ವಾಧಿಕನು ಸಪ್ತಾಂಗವೈಭವಕೆ
ಕ್ರಮವಿದೀಗೆಲೆ ಜೀಯ ವಸುಧಾ । ರಮಣರಿಗೆ ದಂಡೆತ್ತಿ ಬಹುದಿದು
ಸಮತೆಗನುನಯವಱಿಯಬೇಹುದು ರಾಜಕಾರಿಯವ ೨೭

ಪ್ರಭುಗಳು ಯೋಚಿಸಬೇಕು. ನಾವು ಬಂದ ಕಾರಣವಿದು" ಎಂದು ಆ ರಾಕ್ಷಸರು ಹೇಳಿದರು. ೨೪. "ಆ ಕ್ಷುದ್ರರಾಜನ ದ್ವೇಷವನ್ನು ಅತಿಶಯವಾಗಿ ಹೊಗಳುವ ಹೇಡಿಗಳ ಬಾಯಿಗಳನ್ನು ಹೊಡಿ ಹೊಡಿ" ಎನ್ನುತ್ತ ರಾಕ್ಷಸರಾಜನು ಕೋಪದಿಂದ ಸಿಂಹಾಸವನ್ನಿಳಿದು ಮಂತ್ರಾಲೋಚನಾಗೃಹಕ್ಕೆ ಹೋಗಿ ಮನಸ್ಸಿನಲ್ಲಿ ಅಳುಕುತ್ತ ಪ್ರಹಸ್ತ ಮತ್ತು ಇಂದ್ರಜಿತುಗಳನ್ನು ಕರೆಸಿದನು. ೨೫. "ಈ ದಿನ ಉತ್ತರದಿಕ್ಕಿನಿಂದ ಬಂದ ಸುದ್ದಿಯನ್ನು ಕೇಳಿದಿರಾ ? ಸೀತೆಯ ಹಿಂದಿನ ಪತಿಯು ಹಗೆತನವನ್ನು ಹೊತ್ತು ಕಾಣಿಸಿಕೊಂಡಿದ್ದಾನಂತೆ. ಹಿಂದೆ ನಮ್ಮ ರಾಜಧಾನಿಗೆ ಬೆಂಕಿಯಿಟ್ಟ ಕಪಿಯಂಥ ವೀರರ ಸಮೂಹವು ಗುಂಪುಕೂಡಿದೆಯಂತೆ. ಇದಕ್ಕೆ ಉಪಾಯವೇನು ?" ಎಂದು ರಾವಣನು ಪ್ರಶ್ನಿಸಿದನು. ೨೬. "ಏನೆಂದು ಅರ್ಥವಾಗುತ್ತಿಲ್ಲ ಪ್ರಭು. ಶತ್ರುರಾಜರು ನಮ್ಮ ಮೇಲೆ ಯುದ್ಧಕ್ಕೆ ಬರುವುದು ಅತ್ಯಾಶ್ಚರ್ಯ. ಕಾಳಗದಲ್ಲಿ ಶಿವನೂ ಕೂಡ ಸ್ವಾಮಿಯವರಿಗೆ ಅಂಜುವನು. ನಮ್ಮಲ್ಲಿ ಕುಂದಿರುವುದರಿಂದ ನಾವು ಈ ಸಮಯದಲ್ಲಿ ಎಚ್ಚರ ತಪ್ಪಿರಬಾರದು, ಜಾಗೃತರಾಗೋಣ" ಎಂದು ಪ್ರಧಾನ ಸಚಿವನು ನುಡಿದನು. ೨೭. ಸರಿಸಮಾನನಾದವನು ತನಗೆ ಸಮಾನನಾದವನೊಡನೆ ಸೇರದಿರುವನು. ಬಲಶಾಲಿಯಲ್ಲದವನು ತನಗಿಂತ ಬಲಶಾಲಿಗೆ ನಡುಗವನು ; ಆದರೆ ಅಧಿಕಶಕ್ತಿಶಾಲಿಯು ಸ್ವಾಮಿ, ಅಮಾತ್ಯ, ಜನಪದ, ದುರ್ಗ, ಕೋಶ, ಸೈನ್ಯ ಮತ್ತು ಮಿತ್ರ ಎಂಬ ರಾಜ್ಯದ ಸಪ್ತಾಂಗ ವೈಭವಗಳನ್ನು ಪಡೆಯಲು ಉತ್ಸಾಹಿಸುವನು.

ಅದಱಿನಹಿತನ ಬಲದ ಮಹಿಮೆಯ । ಹದನನಾ ಬಲದೊಳು ರಣೋತ್ಸವ
ದಭಟರನು ರಣದಭಟರೊಳು ಹೆಸರುಳ್ಳ ಸಾಹಸರ
ವಿದಿತ ಸಾಹಸರೊಳು ಸುಮಂತ್ರಾ । ಸ್ಪದರನಾಮಂತ್ರಜ್ಞರೊಳಗ
ಗ್ಗದ ವಿಶುದ್ಧ ವಿರೋಧ ವಿಭವರನಱಿಯಬೇಕೆಂದ ೨೮

ಅಱಿದು ನೆಗಳುವ ರಾಜಕಾರ್ಯಕೆ । ಕೊಱತೆ ಹೊಗದೆಲೆ ಜೀಯ ಲೋಕಕೆ
ಬೆಱಗು ಕೋಡಗವಿಂದು ಕೂಡುವುದವನಿಪಾಲರಿಗೆ
ಮಱಿಯದೈಸಲ್ಲವೆ ವಿಚಾರಿಸೆ । ಹೊಱದಿರದು ಹಗೆಪಾಡು ನೀತಿಯ
ದಱಿಸುವಡೆ ಬಲ್ಲಿದನ ಬೇಹಿಗೆ ಬೆಸಸಬೇಕೆಂದ ೨೯

ಅಹುದು ನೀತಿಯಿದೆಂದು ಮನದಲಿ । ವಹಿಸಿ ಖಳ ಬಳಿಕಾ ಪ್ರಹಸ್ತನ
ವಿಹಿತ ವಚನಕೆ ಮೆಚ್ಚಿ ಕಳುಹಿದನಾಪ್ತಗುಪ್ತಿಗರ
ಅಹಿಮಕರಕುಲನೆಡೆಗೆ ಮಂತ್ರಿಯ । ಗೃಹಕೆ ಕಳುಹಿದು ತಂದೆ ಮಕ್ಕಳು
ರಹವ ಮಾಡಿದರೆಲೆ ಕುಮಾರರು ಕೇಳಿರೈಯೆಂದ ೩೦

ಇದು ರಾಜರುಗಳಿಗೆ ಕ್ರಮ. ಈಗ ದಂಡೆತ್ತಿ ಬಂದಿರುವುದನ್ನು ನೋಡಿದರೆ ಶತ್ರು ಸಮಾನನೆಂಬುದನ್ನು ಅರಿತು ರಾಜಕಾರ್ಯದ ನೀತಿಯನ್ನರಿಯಬೇಕು. ೨೮. ಆದುದರಿಂದ ಶತ್ರುವಿನ ಸೈನ್ಯದ ಮಹಿಮೆಯ ರೀತಿಯನ್ನೂ, ಆ ಸೈನ್ಯದಲ್ಲಿರುವ ಯುದ್ಧೋತ್ಸಾಹೀ ವೀರರನ್ನೂ, ಯುದ್ಧವೀರರಲ್ಲಿ ಹೆಸರಾಂತ ಸಾಹಸಿಗರ ವಿವರವನ್ನೂ, ಹೆಸರಾಂತ ಸಾಹಸಿಗಳಲ್ಲಿರುವ ಯುದ್ಧತಂತ್ರಜ್ಞರನ್ನೂ, ಆ ತಂತ್ರಜ್ಞರಲ್ಲಿ ಯಾರು ಪರಿಶುದ್ಧ ವಿರೋಧಭಾವವುಳ್ಳವರು ಎಂಬುದನ್ನೂ ತಿಳಿದುಕೊಳ್ಳಬೇಕು" ಎಂದು ಪ್ರಹಸ್ತ ಹೇಳಿದ. ೨೯. "ತಿಳಿದುಕೊಂಡು ಕೈಗೊಳ್ಳುವ ರಾಜಕಾರ್ಯದಲ್ಲಿ ಕುಂದುಂಟಾಗುವುದಿಲ್ಲ. ಪೃಥ್ವಿಯ ರಾಜರೊಡನೆ ಕಪಿಸೈನ್ಯವು ಸೇರುವುದು ಜಗತ್ತಿಗೇ ಆಶ್ಚರ್ಯಕರ. ಆಲೋಚಿಸಿ ನೋಡಿದರೆ ಇದೊಂದು ಮರೆಮೋಸದಂತಿದೆ. ಶತ್ರುವಿನ ಸ್ಥಿತಿ ಇವನ್ನು ಸಹಿಸಿಕೊಂಡಿರಲಾರದು. ರಾಜನೀತಿಯನ್ನು ಅನುಸರಿಸುವ ಪಕ್ಷದಲ್ಲಿ ಸಮರ್ಥರಾದ ಗುಪ್ತಚಾರರಿಗೆ ಅಪ್ಪಣೆ ಮಾಡಿ" ಎಂದು ಪ್ರಹಸ್ತ ಹೇಳಿದ. ೩೦. "ಹೌದು, ಇದು ಸರಿಯಾದ ನೀತಿ" ಎಂದು ಮನಸ್ಸಿನಲ್ಲಿ ಭಾವಿಸಿ ರಾವಣನು ಪ್ರಹಸ್ತನ ಯೋಗ್ಯವಾದ ಮಾತುಗಳಿಗೆ ಮೆಚ್ಚಿ ಆಪ್ತರಾದ ಗುಪ್ತಚಾರರನ್ನು ರವಿಕುಲ ರಾಮನ ಹತ್ತಿರಕ್ಕೆ ಕಳುಹಿಸಿದನು. ಅನಂತರ ಮಂತ್ರಿಯನ್ನು ಮನೆಗೆ ಕಳುಹಿಸಿ ತಂದೆ ಮಕ್ಕಳು ಗುಟ್ಟುಮಾತಿಗೆ ತೊಡಗಿದರು. ಲವಕುಶಕುಮಾರರೇ ಕೇಳಿ ಎಂದು

ಭೂರಿಭುವನದ ಬಹಳ ಭುಜಬಲ । ಭಾರಕರು ನಾವೀ ನೆಲೆಗೆ ನವು
ಗಾರು ಸರಿ ನಾವಂಜಲೇಕೀ ಬಣಗು ಭೂಪತಿಗೆ
ವೈರದಲಿ ನಮ್ಮುವನು ಗೆಲಿದೀ । ನಾರಿಯನು ಕೊಂಡೊಯ್ವ ಭಟನ ವಿ
ಕಾರವನು ನಾವಱಿವೆವೆನುತುಬ್ಬಿದರು ತಮ್ಮೊಳಗೆ ೩೧

ಒನದುದನಿತಱ ಮೇಲೆ ತನ್ನಯ । ಮನದ ಸಂಶಯ ಬೀಳುಕೊಟ್ಟನು
ಮನೆಗೆ ಮಗನನು ತಗ್ಗದಿರದಿನ್ನಸುರವಲ್ಲಭನ
ಘನತರದ ಬಾಹುಪ್ರತಾಪದ । ವಿನುತ ದೀಪಕವೆನಲು ಬಿದ್ದುದು
ವನಧಿಯೊಳಗಿನಬಿಂಬವಂಬರದಿಂದ ಪಶ್ಚಿಮದ ೩೨

ವಾಲ್ಮೀಕಿಗಳು ನುಡಿದರು. ೩೧. "ಈ ಮಹಾಲೋಕದ ಭಾರಿ ತೋಳ್ಬಲವುಳ್ಳವರು ನಾವು. ನಮ್ಮ ಸಮಕ್ಕೆ ಯಾರು ನಿಲ್ಲಬಲ್ಲರು. ಈ ಅಲ್ಪರಾಜನಿಗೆ ನಾವೇಕೆ ಹೆದರ ಬೇಕು. ಹಗೆತನದಿಂದ ಬಂದು ನಮ್ಮನ್ನು ಗೆದ್ದು ಸೀತೆಯನ್ನು ಕರೆದುಕೊಂಡು ಹೋಗುವ ವೀರನ ರೂಪವನ್ನು ನಾವರಿತಿದ್ದೇವೆ' ಎನ್ನುತ್ತ ತಂದೆಮಕ್ಕಳು ತಮ್ಮ ತಮ್ಮಲ್ಲಿ ಉತ್ಸಾಹದಿಂದ ಮಾತಾಡಿಕೊಂಡರು. ೩೨. ಇಷ್ಟಾದ ಬಳಿಕ ರಾವಣನ ಮನಸ್ಸಿನ ಸಂಶಯವು ತೂರಿಹೋಯಿತು. ಮನೆಗೆ ಮಗನನ್ನು ಕಳುಹಿಸಿಕೊಟ್ಟನು. ಇನ್ನು ರಾಕ್ಷಸರೊಡೆಯನ ಅತಿಶಯವಾದ ತೋಳ್ಬಲದ ದೀಪವು ಕುಸಿದುಬೀಳದೆ ಇರದು ಎನ್ನುವಂತೆ ಸೂರ್ಯಬಿಂಬವು ಆಕಾಶದಿಂದ ಪಶ್ಚಿಮಸಾಗರದೊಳಕ್ಕೆ ಬಿದ್ದಿತು.

# ಎರಡನೆಯ ಸಂಧಿ

ಸೂಚನೆ॥ ಹಲವು ನಯನೀತಿಯಲಿ ರಾಮನ । ಲಲನೆಯನು ಬಿಡಹೇಳಲನುಜನ
ಹೊಳಲ ಹೊಱವಡಿಸಿದನು ಕನಲಿದು ಕಲಿದಶಗ್ರೀವ

ಕೇಳಿದೈ ಕೋಸಲಧರಿತ್ರೀ । ಪಾಲಸುತ ಸುರವಂಶಕುಲಹೃ
ತ್ಶೂಲನೆದೆಯಲಿ ಹುಣುಬುದೋಱಿತು ಹಗೆಯ ಹಮ್ಮುಗೆಯ
ಏಳುತೊಱಗುತ ಕುಳ್ಳಿರುತ ಚಿಂ । ತಾಲತಾಂಗಿಯ ರತಿಯ ಕೃತ ಸ
ಮ್ಮೇಳದಲಿ ನೂಕಿದನು ನಿಶಿಯನು ನಿಂದ ನಿದ್ರೆಯಲಿ ೧

ಕಮಲಿನೀ ವಿಕಸಿತ ಮನೋವಿ । ಭ್ರಮವಿಲೋಕನನನ್ಯರಜನೀ
ರಮಣಿಯಸಿತಾಂಬರ ನಿಕರುಷಣಕರ ಚಮತ್ಕಾರ
ಅಮರರಾಜ ದಿಶಾಂಗನಾರತಿ । ಸುಮುಖನುಪ್ಪವಡಿಸಿದನತಿಸಂ
ಭ್ರಮದಿನುದಯನಗೇಂದ್ರಮಣಿ ಪರಿಯಂಕಪೀಠದಲಿ ೨

ಉಲಿವ ಮಂಗಳಪಾಠಕರ ಕಳ । ಕಳಿಕೆಯಲಿ ಮಣಿಮಯದ ಮಂಚವ
ನಿಳಿದು ಶುಕ್ರಾಚಾರ್ಯಹರ ಕಮಲಜರ ಹರಕೆಗಳ
ತಳೆದು ತತ್ಕಾಲೋಚಿತದ ಸ । ಮ್ಮಿಳಿತ ಸತ್ಕರ್ಮಪ್ರಪಂಚವ
ನೆಳವಡಿಸಿ ಖಳದೇವ ಪೂಜಾಲಯಕೆ ನಡೆತಂದ ೩

ಸೂಚನೆ॥ ರಾಮನ ಪತ್ನಿಯನ್ನು ಕಳುಹಿಸಿಬಿಡುವಂತೆ ಹಲವು ನ್ಯಾಯವಾದ ಮಾತುಗಳಿಂದ ವಿಭೀಷಣನು ನೀತಿಯನ್ನು ಹೇಳಲು ಕೆರಳಿದ ದಶಕಂಠನು ತಮ್ಮನನ್ನು ಲಂಕಾನಗರದಿಂದ ಹೊರಡಿಸಿಬಿಟ್ಟನು. ೧. ಕೇಳಿದೆಯಾ ಕೋಸಲರಾಜಕುಮಾರ, ದೇವತೆಗಳಿಗೆ ಹೃದಯಬೇನೆಯಾದ ರಾವಣನ ಎದೆಯಲ್ಲಿ ಶತ್ರುವಿನ ಗರ್ವದ ಬಾಣವು ನಾಟಿಕೊಂಡಿತು. ರಾತ್ರಿ ನಿದ್ದೆಬಾರದೆ ಏಳುತ್ತ ಮಲಗುತ್ತ ಎದ್ದುಕೂರುತ್ತ ಚಿಂತಾರತಿಯ ಸಹವಾಸದಲ್ಲಿ ರಾತ್ರಿಯನ್ನು ಕಳೆದನು. ೨. ಕಮಲಿನಿಯು (ತಾವರೆಯ ಹೂವು) ಅರಳುವುದನ್ನು ಬೆಡಗಿನಿಂದ ನೋಡುತ್ತ, ಬೇರೊಬ್ಬ ರಮಣಿಯಾದ ರಾತ್ರಿಯೆಂಬುವಳ ಕಪ್ಪುವಸ್ತ್ರವನ್ನು ಕಿರಣವೆಂಬ ಕೈಗಳಿಂದ ಚಮತ್ಕಾರಪೂರ್ವಕ ಸೆಳೆದು, ಪೂರ್ವದಿಕ್ಕೆಂಬ ರತಿಯನ್ನು ಪ್ರೀತಿಯಿಂದ ನೋಡುತ್ತ ಸೂರ್ಯನು ಉದಯ ಪರ್ವತವೆಂಬ ಇಂದ್ರನೀಲಮಣಿಯ ಸುಪ್ಪತ್ತಿಗೆಯಿಂದ ಸಂಭ್ರಮಪೂರ್ವಕವಾಗಿ ಮೇಲಕ್ಕೆದ್ದನು. ೩. ಸುಪ್ರಭಾತಗೀತೆಗಳನ್ನು ಹಾಡುವ ಶಬ್ದವನ್ನು ಕೇಳಿ ರಾವಣನು ಎದ್ದು ರತ್ನದಮಂಚದಿಂದ ಇಳಿದುಬಂದು ಗುರು ಶುಕ್ರಾಚಾರ್ಯರು, ಶಿವ ಮತ್ತು ಬ್ರಹ್ಮ ಇವರ ಆಶೀರ್ವಾದಗಳನ್ನು ಪಡೆದು ಪ್ರಾತಃಕಾಲದ ದಿನಚರಿಯ

ನವವಿಧದ ಭಕ್ತಿಯಲಿ ನಿರುಪಮ । ಶಿವನ ಸರ್ವೇಶನ ಭವಾನೀ
ಧವನ ಭರ್ಗನ ಭವನನಭವನ ಭಾಳಲೋಚನನ
ದಿವಿಜಕುಲವಂದಿತನ ಸಾಮೋ । ದ್ಭವ ಸುರಾರಿ ಮದೇಭಕಂಠೀ
ರವನನರ್ಚಿಸಿ ಬಳಿಕ ನಡೆತಂದಿತ್ತನೋಲಗವ ೪

ವೀರ ಕೇಳೈ ಕುಶನೆ ರಾಕ್ಷಸ । ವೀರನೋಲಗಕತುಳಬಲ ಜಂ
ಭಾರಿಜಿತು ಮಂತ್ರಿ ಪ್ರಹಸ್ತಪ್ರಮುಖ ನಾಯಕರು
ಸಾರತರ ರತ್ನಪ್ರಭಾ ಕೋ । ಟೀರಬದ್ಧ ನಿಯುದ್ಧಬಲ ಜ
ಜ್ಝಾರ ಭಟಕೋಟಿಗಳು ನಡೆತಂದುದು ಸರಾಗದಲಿ ೫

ಜಡಿದು ಖಡುಗದ ತೊಡವಲಗೆಗಳ । ಮುಡುಹುಗಳ ಝಣರವದ ತೊಡರಿನ
ಕಡೆಯ ಹೀರಾವಳಿಯ ದಿವ್ಯ ಸುಗಂಧಪರಿಮಳದ
ಮುಡಿಯಲರ ಸುಭಟಾವಳಿಯ ವಂ । ಗಡದ ವೈಭವ ಮಿಗಲು ನೆಲನು
ಗ್ಗಡಣೆಯಲಿ ಬಂದನು ವಿಭೀಷಣನಣ್ಣನೋಲಗಕೆ ೬

ಬಂದ ತಮ್ಮನನಸುರಪತಿ ಮುದ । ದಿಂದ ಮಂದಸ್ಮಿತ ಮುಖಾವಳಿ
ಯಿಂದ ಪರಮಸ್ನೇಹರಸವಚನಾನುರಾಗದಲಿ
ಸಂದಣಿಯ ಕೈಸನ್ನೆಯಲಿ ಕೆಲ । ಕೊಂದಿಸುತ ಬಾಯಿತ್ತ ಬಾರೈ
ಯೆಂದು ಕುಳ್ಳಿರಿಸಿದನು ಕೆಲದಲಿ ತನ್ನ ಗದ್ದುಗೆಯ ೭

ಕರ್ಮಗಳನ್ನು ಮುಗಿಸಿಕೊಂಡು ಪೂಜಾಗೃಹಕ್ಕೆ ಬಂದನು. ೪. ಉಪಮೆಗೆ ಸಿಲುಕದ ಶಿವನನ್ನು, ಸರ್ವೇಶ್ವರನನ್ನು, ಪಾರ್ವತೀರಮಣನನ್ನು, ಭರ್ಗ ಭವ ಅಭವ ಹಣೆಗಣ್ಣ ಎಂಬುದಾಗಿ ನಾನಾ ಹೆಸರಿನಿಂದ ಕರೆಸಿಕೊಳ್ಳುವ, ದೇವತೆಗಳ ವಂದನೆಗಳನ್ನು ಕೈಗೊಳ್ಳುವ, ಸಾಮಗಾನದಿಂದ ಹುಟ್ಟಿದ, ರಾಕ್ಷಸರೆಂಬ ಮದಿಸಿದ ಆನೆಗಳಿಗೆ ಸಿಂಹನಾದ ಈಶ್ವರನನ್ನು ಒಂಬತ್ತು ವಿಧವಾದ ಭಕ್ತಿಯಿಂದ ಪೂಜಿಸಿದನು. ಅನಂತರ ರಾವಣನು ಆಸ್ಥಾನಕ್ಕೆ ಬಂದು ಸಭೆ ನಡೆಸಿದನು. ೫. ವೀರಕುಶ ಕೇಳು, ಅತಿಶಯ ಬಲಶಾಲಿ ಇಂದ್ರಜಿತು, ಮಂತ್ರಿಪ್ರಹಸ್ತ ಮೊದಲಾದ ಮುಖ್ಯ ನಾಯಕರು ಹಾಗೂ ಉತ್ಕೃಷ್ಟವಾದ ರತ್ನಗಳ ಕಾಂತಿಯಿಂದ ಹೊಳೆಯುವ ಕಿರೀಟಧರಿಸಿದ ಮತ್ತು ಮಲ್ಲಯುದ್ಧವೀರರಾದ ಅಸಂಖ್ಯಾತ ಯೋಧರು ರಾಕ್ಷಸವೀರ ರಾವಣನ ಸಭೆಗೆ ಬಂದರು. ೬. ಖಡ್ಗವನ್ನು ಝಳಪಿಸುತ್ತ ಹೆಗಲಿನಲ್ಲಿ ಗುರಾಣಿ ಧರಿಸಿ ವಜ್ರದ ಹಾರ ಹಾಕಿಕೊಂಡು ದಿವ್ಯಸುಗಂಧಗಳನ್ನೂ ಪರಿಮಳಗಳನ್ನೂ ಪೂಸಿಕೊಂಡು ಮುಡಿಗೆ ಹೂವನ್ನು ಅಲಂಕರಿಸಿಕೊಂಡ ವಿಭೀಷಣನು ಕಾಲಿನ ಆಭರಣ ಮತ್ತು ಒಡವೆಗಳು ಝಣ ಝಣ ಶಬ್ದಮಾಡಲು ಹೊಗಳುಭಟರ ಪರಾಕಿನ ಘೋಷಣೆಯೊಡನೆ ವೀರರುಗಳ ಗುಂಪಿನಲ್ಲಿ ಅಣ್ಣನ ಆಸ್ಥಾನಕ್ಕೆ ಬಂದನು. ೭. ರಾಕ್ಷಸರಾಜನು ಆಸ್ಥಾನಕ್ಕೆ ಬಂದ ತನ್ನ ತಮ್ಮನ ಕಡೆಗೆ ಸಂತೋಷವಾದ ತನ್ನ ಹತ್ತುಮುಖಗಳಿಂದಲೂ ಮುಗುಳ್ನಗೆಯನ್ನು ಬೀರಿದನು. ಅತಿಶಯ ಸ್ನೇಹತುಂಬಿದ ಪ್ರೀತಿಯ ಮಾತುಗಳಿಂದ ಮಾತನಾಡಿಸಿ

ಎಸೆದುದೋಲಗವಮರರಾಯನ । ಯೆಸಕಕಿಂ ಮಿಗಿಲೆನಲು ಮಿಗೆ ರಂ
ಜಿಸುವ ಭಟರೊಗ್ಗಿನಲಿ ಮಣಿಭೂಷಣದ ಬೆಳಗಿನಲಿ
ಕುಶನೆ ಕೇಳಾ ಸಮಯದಲಿ ರಾ । ಕ್ಷಸಶಿರೋಮಣಿ ಮಂದಹಾಸದ
ಲಸಮವೀರರ ಮೊಗವನೀಕ್ಷಿಸಿ ನುಡಿದನಿಂತೆಂದು ೮

ನಾವು ತಂದಂಗನೆಯ ಪತಿಗತಿ । ಹೇವ ಬಲಿದಭಿಮಾನದಲಿ ಸು
ಗ್ರೀವ ಸೈನ್ಯಸಮೇತ ನಡೆತಂದನು ಗಡಾಹವಕೆ
ಆವುದಿದಕನುಮಾನ ರಣಸಂ । ಭಾವನೋಚಿತ ಕಾರ್ಯದೆಣಿಕೆಗೆ
ನೀವದೇನನು ಕಂಡಿರೆಂದನು ನಗುತ ದಶಕಂಠ ೯

ಏನ ಬೆಸಸಿದೆ ಜೀಯ ಮನದನು । ಮಾನವೇಕಿದಕೇನು ದೊಡ್ಡಿತು
ಹಾನಿಯಾವುದು ನಿಮಗೆ ತೋಱಿದ ನಿಮಗೆ ರಾಜಕಾರ್ಯದಲಿ
ವೈನತೇಯನ ವಿಲಗಕಹಿಕುಲ । ವಾನಲಾಪವೆ ಜೀಯ ಹೇಳದಿ
ರೀ ನರೇಂದ್ರನನೆನುತ ಕಿದಱಿತು ಕೂಡೆ ಭಟನಿಕರ ೧೦

ತಲೆಯ ತರಹೇಳಂತಕನ ಬಾ । ಳ್ವಲೆಯ ತರಹೇಳಜನಸತಳಕೆ
ನಿಲಿಸಹೇಳಮರೇಂದ್ರನಗರವನುರಗವಲ್ಲಭನ
ಪೊಳಲ ಕಿತ್ತಮರೇಂದ್ರನಗರದೊ । ಳಿಳುಹಹೇಳಿಲೆ ಜೀಯ ಮತ್ತೇ
ನುಳಿದಡುಳ್ಳಡೆ ಬೆಸಸೆನುತ ರಭಳಿಪಿಸಿದರುಬ್ಬಣವ ೧೧

ಕೈಗಳಿಂದ ಸಂಜ್ಞೆಮಾಡಿ ಪಕ್ಕವನ್ನು ತೋರಿಸುತ್ತ, 'ಬಾ, ಇತ್ತ ಬಾರೈ' ಎಂದು ತನ್ನ ಸಿಂಹಾಸನದ ಪಕ್ಕದಲ್ಲಿ ಕೂರಿಸಿದನು. ೮. ರಂಜಿಸುವ ಯೋಧರ ಸಾಲಿನಿಂದ ಕೂಡಿ ಅವರ ರತ್ನದ ಆಭರಣಗಳ ಬೆಳಕಿನಲ್ಲಿ ದೇವೇಂದ್ರನ ವೈಭವವನ್ನೂ ಮೀರಿಸಿ ರಾವಣನ ಆಸ್ಥಾನವು ಪ್ರಕಾಶಿಸಿತು. ಕುಶನೆ ಕೇಳು, ಆ ಸಮಯದಲ್ಲಿ ರಾಕ್ಷಸಶ್ರೇಷ್ಠ ರಾವಣನು ಮಂದಹಾಸದಿಂದ ಅಸಮಾನ ವೀರರ ಮುಖವನ್ನು ನೋಡುತ್ತ ಹೀಗೆಂದು ನುಡಿದನು. ೯. "ನಾವು ಕರೆತಂದ ಹೆಂಗಸಿನ ಗಂಡನಲ್ಲಿ ದ್ವೇಷವೊಳೆತು ಗರ್ವದಿಂದ ಸುಗ್ರೀವನ ಸೈನ್ಯದೊಡನೆ ಯುದ್ಧಕ್ಕೆ ಹೊರಟುಬಂದಿದ್ದಾನಂತೆ. ಇದಕ್ಕೆ ಯುಕ್ತಿಯೇನು ? ಯುದ್ಧಕ್ಕೆ ಸೂಕ್ತವಾದ ಕಾರ್ಯಕೈಗೊಳ್ಳುವ ವಿಚಾರದಲ್ಲಿ ನಿಮ್ಮ ಅಭಿಪ್ರಾಯವೇನು ?" ಎಂದು ನಗುತ್ತ ರಾವಣನು ಕೇಳಿದ. ೧೦. "ಏನನ್ನು ಅಪ್ಪಣೆಕೊಡಿಸಿದಿರಿ ಪ್ರಭು ? ಇದಕ್ಕೇಕೆ ಮನಸ್ಸಿನಲ್ಲಿ ಸಂಶಯ ? ಇದೇನು ಮಹಾದೊಡ್ಡದು ! ನಿಮಗೆ ಕಂಡುಬಂದಿರುವ ರಾಜಕಾರ್ಯದಲ್ಲಿ ಹಾನಿಯೇನಿದೆ ? ಗರುಡನ ಕಾಟವನ್ನು ಸರ್ಪಗಳು ಎದುರಿಸಬಲ್ಲವೇ ? ಈ ಮಾನವರಾಜನ ವಿಷಯವನ್ನು ಹೇಳಬೇಡಿ" ಎಂದು ವೀರರು ವಿಜೃಂಭಿಸಿದರು. ೧೧. "ಯಮನ ತಲೆಯನ್ನು ತರಲು ಹೇಳು. ಬ್ರಹ್ಮನ ತಲೆಯನ್ನು ಜೀವಸಹಿತ ತೆಗೆದುಕೊಂಡು ಬರಲು ಹೇಳು. ದೇವೇಂದ್ರನ ಪಟ್ಟಣ ಅಮರಾವತಿಯನ್ನು ಪಾತಾಳದಲ್ಲಿಡುವಂತೆ ಹೇಳು. ಆದಿಶೇಷನ ನಗರವನ್ನು ಕಿತ್ತು ದೇವೇಂದ್ರನಗರದಲ್ಲಿಡ ಹೇಳು. ಪ್ರಭು, ಇನ್ನೇನಾದರೂ ಇದ್ದರೆ ಅಪ್ಪಣೆಮಾಡು" ಎನ್ನುತ್ತ ಲಾಳವಿಂಡಿಗೆ

ಅಸುರಪತಿ ಚಿತ್ತೈಸು ಕಾಲಂ । ಗಸದಳದ ಕಲ್ಪಾಂತರುದ್ರನ
ವಿಷಮ ನಯನಜ್ವಾಲೆಗಳುಕದ ವೀರಭಟರೊಡನೆ
ಉಸುರಬಹುದೇ ಜೀಯ ಹುಲುಮಾ । ನಿಸರ ಮೃದುರಣರಾಜಕಾರ್ಯವ
ನಿಶಿತ ಕರ್ಕಶ ರಕ್ಕಸರೊಳೆಂದಿಂದ್ರಜಿತು ನುಡಿದ ೧೨

ಈತಗಳು ಪರಿಯಂತಲೇಕಿಲೆ । ತಾತ ಕೇಳ್ ತವಛತ್ರಧರ ನರ
ನಾತ ನರಮೃಗವಿಂಡ ಬೆದಱಿಸಿ ಬರಲಿ ಮತ್ತೇನು
ಸೀತೆ ದೇವರಿಗೊಲಿವುಪಾಯದ । ಮಾತನಾಡುವುದಲ್ಲದೀ ನುಡಿ
ಯೇತಕೀಯಾಸ್ಥಾನದೊಳಗೆಂದೊಗಿಸಿದನು ನಗೆಯ ೧೩

ಆವನ ಹಾಸ್ಯರಸೋಕ್ತಿ ವಿಮಲ । ಶ್ರವಣಪಥದಲಿ ಬೀಳೆ ಭುಗಿಲೆಂ
ದವತರಿಸಿದುದು ಕೋಪಶಿಖಿ ಮುಖಮಂಡಲಾಗ್ರದಲಿ
ಖಿಖಿವಿಸಿ ನಗುತಾ ವಿಭೀಷಣ । ನವಯವವನೊಲದೊಲದಿದೇನೇ
ನೆವಗೆ ತಿಳಿಯದು ತಿಳಿಯಹೇಳಾವ್ ಕೇಳಬೇಕೆಂದ ೧೪

ಖರೆಯನಹೆ ಮಾಮಾ ಪರಾಕ್ರಮ । ಭರಿತನಲ್ಲಾ ನೀನು ನಿನ್ನಯ
ಪರಿ ನಮಗೆ ನೂತನವೆ ನಾವಿದಕಾಣೆಯಿಡಲೇಕೆ
ದೊರೆಗಳಿವರೇನಱಿಯರೇ ಕಣ್ । ಗುರುಡರೇ ನಾವಮಮ ರಿಪುನೃಪ
ಚರನ ಕದನದೊಳೊದಗಿದವ ನೀನಲ್ಲದಾರೆಂದ ೧೫

ಯನ್ನು ಬೀಸಿದರು. ೧೨. "ರಾಕ್ಷಸಾಧಿಪತಿಯೇ ಆಲಿಸು. ಯಮನಿಗೆ ದಕ್ಕದ, ಪ್ರಳಯಕಾಲದ ರುದ್ರನ ಹಣೆಗಣ್ಣಿನ ಜ್ವಾಲೆಗೆ ಹೆದರದ ತೀವ್ರಕಠಿನರಾದ ವೀರಯೋಧರೊಡನೆ ಕ್ಷುದ್ರಮಾನವರು ನಡೆಸಬೇಕಾದ ಹಗುರವಾದ ಯುದ್ಧದ ರಾಜಕಾರ್ಯವನ್ನು ನುಡಿಯಬಹುದೇ ಸ್ವಾಮಿ" ಎಂದು ಇಂದ್ರಜಿತು ನುಡಿದ. ೧೩. "ಈ ವೀರರುಗಳವರೆಗೆ ಏತಕ್ಕೆ ಹೋಗಬೇಕು, ತಂದೆ ಕೇಳು. ನಿಮ್ಮ ಕೊಡೆಹಿಡಿಯುವವನು ಮನುಷ್ಯ. ಆತನು ಈ ಮಾನವಮೃಗಗಳ ಹಿಂಡನ್ನು ಬೆದರಿಸಿ ಬರಲಿ. ಸೀತೆಯು ಪ್ರಭುಗಳಿಗೆ ಒಲಿಯುವ ಉಪಾಯವೇನು ಎಂಬ ಬಗ್ಗೆ ಇಲ್ಲಿ ಮಾತನಾಡುವುದಲ್ಲದೆ, ಈ ಮಾತು ಈ ಸಭೆಯಲ್ಲಿ ಏತಕ್ಕೆ ?" ಎಂದು ನುಡಿದು ಇಂದ್ರಜಿತು ನಗೆಯೆಬ್ಬಿಸಿದನು. ೧೪. ಇಂದ್ರಜಿತುವಿನ ಹಾಸ್ಯರಸದ ನುಡಿಗಳು ಪವಿತ ಕಿವಿಗಳ ಮೇಲೆ ಬೀಳಲು ಕೋಪಾಗ್ನಿಯು ವಿಭೀಷಣನ ನೆತ್ತಿಗೇರಿತು. ಖಿಖಿವಿಸಿ ನಗುತ್ತ ವಿಭೀಷಣನು ಶರೀರವನ್ನು ಅತ್ತಿತ್ತ ತೂಗಾಡಿಸುತ್ತ, "ಇದೇನು ಇದೇನು ? ನಮಗೆ ತಿಳಿಯದು. ತಿಳಿಯುವಂತೆ ಹೇಳು, ನಾವು ಕೇಳಬೇಕು" ಎಂದ. ೧೫. "ನೀನು ಸತ್ಯವಂತ ! ಅಬ್ಬಬ್ಬ, ಮಹಾಪರಾಕ್ರಮಶಾಲಿಯಲ್ಲವೇ ನೀನು. ನಿನ್ನ ರೀತಿ ನಮಗೆ ಹೊಸದೇನು ? ನಾವೇತಕ್ಕೆ ಇದಕ್ಕೆ ಆಣೆಯಿಡಬೇಕು. ಈ ಅರಸರಿಗೇನು ಗೊತ್ತಿಲ್ಲವೇ. ನಾವು ಕಣ್ಣಿದ್ದೂ ಕುರುಡರೇ. ಶತ್ರುವಿನ ದೂತನೊಡನೆ ಯುದ್ಧಕ್ಕೆ ಹೋದವನು ನೀನಲ್ಲದೆ ಮತ್ತಾರು" ? ಎಂದ ವಿಭೀಷಣ.

ಇವರು ಪರಿಯಂತೇಕೆ ಸತ್ತಿಗೆ । ಯುವನು ಸಾಲದೆಯೆಂಬ ಸಾಹಸ
ದವಗಡೆಯತನವಾರಿಗುಂಟೀ ನೆರೆದ ಭಟರೊಳಗೆ
ಇವದಿರೇ ಬಗುಳುವರು ಹೊಗಳುವ । ನಿವನೆ ಶಿವಶಿವ ನರಿಯ ಗೀತಕೆ
ಕಿವಿಯನಿತ್ತರೆ ಮರುಳು ತಲೆದೂಗುವವೊಲಾಯ್ತೆಂದ ೧೬

ತರಳತನ ಮೇಲುಬ್ಬುಗೊಬ್ಬಿನ । ಭರದ ಜವ್ವನ ಸುಪ್ರತಾಪ
ಜ್ವರದ ತಾಮಸವದಜಿ ಮೇಲಾಸುರಕುಲಾತಿಶಯ
ದೊರಕಲಿವು ಬಳಿಕೇನು ಬಾಯಿಗೆ । ಬರದಿಹುದೆ ತಾ ಪಾಪ ಬಗುಳುವು
ದರಿದೆ ನೆನೆಯಾ ನಿನ್ನ ರಣಸಂಗತಿಯ ನೀನೆಂದ ೧೭

ಅಕ್ಷಮೊದಲಾದಖಿಳ ಭುಜಬಲ । ರಾಕ್ಷಸರ ರಣರಂಗದಿಳೆಯಲಿ
ಕುಕ್ಷಿಯನು ಬಗಿದಸುವನುಗಿದ ಕಪೀಂದ್ರನಿದಿರಿನಲಿ
ಯಕ್ಷ ಗಂಧರ್ವಾಮರೇಂದ್ರರ । ಶಿಕ್ಷಿಸಿದ ಬಲುಹಂದಿನಾಶ್ರಯ
ಭಕ್ಷಣನ ಭೋಜನದಲೇನಾಯ್ತೆಂದು ಬೆಸಗೊಂಡ ೧೮

ಈ ಮಹಾಬಳ ಕುಂಭನೀ ನಿ । ಸ್ಸೀಮ ದೇವಾಂತಕ ನರಾಂತಕ
ರೀ ಮಹೋದರ ವಜ್ರದಂಷ್ಟ್ರ ಪ್ರಮುಖನಾಯಕರು
ಈ ಮಹಾನಗರವನು ಮಾರುತಿ । ಹೋಮಗೈವಂದೇನ ಮಾಡಿದ
ರೀ ಮದಿತ ಹಾನಿಗಳ ಮಾತೇಕರಸ ನಿನಗೆಂದ ೧೯

೧೬. "ಈ ಯೋಧರವರೆಗೇಕೆ, ಕೊಡೆಹಿಡಿಯುವವನು ಸಾಲದೆ ಎಂಬುದಾಗಿ ಹೇಳುವ ಸಾಹಸದ ಹೀಯಾಳಿಕೆ ಇಲ್ಲಿ ಸೇರಿದ ವೀರರಲ್ಲಿ ಯಾರಿಗಿದೆ ? ಇವರುಗಳೇ ಬೊಗಳುವವರು, ಹೊಗಳುವವನು ಇವನೇ ! ಶಿವಶಿವ, ನರಿಯ ಹಾಡಿಗೆ ಕಿವಿಗೊಟ್ಟು ಅರೆದೆವ್ವ ತಲೆದೂಗುವಂತಾಯಿತು !" ಎಂದ ವಿಭೀಷಣ. ೧೭. "ಹುಡುಗತನ, ಇದರ ಮೇಲೆ ಯೌವನದ ಅತಿಕೊಬ್ಬು, ಇದಕ್ಕೂ ಮೇಲೆ ಪರಾಕ್ರಮಜ್ವರದ ತಮೋಗುಣ, ಅದನ್ನು ಮೀರಿಸಿದ ಶ್ರೇಷ್ಠಕುಲದಮದ–ಇವುಗಳೆಲ್ಲ ಸೇರಿದ್ದ ಮೇಲೆ ಬಾಯಿಗೆ ಮಾತಾಡುವುದನ್ನು ಹೇಳಿಕೊಡಬೇಕೇನು ? ಪಾಪ, ಬೊಗಳುವುದು ಕಷ್ಟವೇ ! ನೀನು ಮಾಡಿದ ಯುದ್ಧದ ಸಂಗತಿಯನ್ನೇ ಸ್ಮರಿಸಿಕೋ ನೀನು" ಎಂದ ವಿಭೀಷಣ. ೧೮. ಅಕ್ಷನೇ ಮೊದಲಾದ ಪ್ರತಾಪಶಾಲಿ ರಾಕ್ಷಸರನ್ನು ರಣರಂಗದ ನೆಲದಮೇಲೆ ಹಾಕಿಕೊಂಡು ಹೊಟ್ಟೆಯನ್ನು ಬಗೆದು ಪ್ರಾಣವನ್ನು ಹೊರಕ್ಕೆ ತೆಗೆದ ವಾನರಶ್ರೇಷ್ಠನ ಎದುರಿನಲ್ಲಿ ಬೆಂಕಿಯು ನಗರವನ್ನು ಆಹುತಿ ತೆಗೆದುಕೊಳ್ಳುತ್ತಿದ್ದಾಗ ಯಕ್ಷ ಗಂಧರ್ವ ದೇವೇಂದ್ರರೇ ಮೊದಲಾದವರನ್ನು ದಂಡಿಸಿದ ನಿಮ್ಮ ಕೆಚ್ಚು ಏನಾಯಿತು ?" ಎಂದು ವಿಭೀಷಣ ಪ್ರಶ್ನೆ ಹಾಕಿದ. ೧೯. "ಈ ಮಹಾಬಲಶಾಲಿ ಕುಂಭ, ಈ ಅಸಮಾನರಾದ ದೇವಾಂತಕ ನರಾಂತಕರು, ಈ ಮಹೋದರ ವಜ್ರದಂಷ್ಟ್ರನೇ ಮೊದಲಾದ ಮುಖ್ಯ ಮುಖಂಡರು ಅಂದು ಈ ಲಂಕಾ ಪಟ್ಟಣವನ್ನು ಮಾರುತಿಯು ಹೋಮ ಮಾಡುತ್ತಿರುವಾಗ ಏನು ಮಾಡಿದರು ? ಈ

ಅಣ್ಣ ಕೇಳೀತಗಳ ಮಾತಿನ । ಬಣ್ಣನೆಗಳಂತಿರಲಿ ಭೂಮಿಯ
ತಿಣ್ಣವನು ತಿದ್ದಲಿಕೆ ಹರಿ ನರನಾಗಿ ರೂಹಿಸಿದ
ಹೆಣ್ಣ ನೆವದಲಿ ನಮ್ಮನೆಲ್ಲರ । ಮಣ್ಣ ಕೂಡಿಸದಿರನು ನಾವಿ
ನ್ನುಣ್ಣದುರಿಯಲು ಬೇಡ ಸೀತೆಯ ಬಿಟ್ಟು ಕಳುಹೆಂದ ೨೦

ಏಕೆ ನಿನಗೀ ಭ್ರಮೆ ವಿದೇಹಜೆ । ಸೋಕುವವಳಲ್ಲರಸ ಕೇಳವಿ
ವೇಕಿಯಾಗದಿರೀ ಮದೋನ್ಮತ್ತರುಗಳುಬ್ಬಿದರೆ
ಆ ಕಕುತ್ಸ್ಥಜ ಮನುಜನಲ್ಲ ವ । ನೌಕಸರು ಮೃಗರಲ್ಲ ತಾನಿದು
ಲೋಕಕಂಟಕರಳವಿಗೊಡ್ಡಿದ ಬೀಸುವಲೆಯೆಂದ ೨೧

ಅಱಿಯಬಾರದೆ ನಿನಗೆ ನಿನ್ನನು । ಜಱಿದ ಹರಕೋದಂಡವನು ಜಗ
ವಱಿಯೆ ಮುಱಿದವನಿಜೆಯ ಪರಿಣಯವಾದ ಪದ್ಧತಿಯ
ಕಿಱಿಯತನದಲಿ ತಾಟಕಿಯ ತಲೆ । ಗುಱಿಯ ಮಾಡಿದ ಪರಿಯನಾ ಹೊ
ಮ್ಮಱಿಯ ರೂಪಿನ ರಕ್ಕಸನನಿಕ್ಕಿದುದ ನೀನೆಂದ ೨೨

ಖರನು ಸಾಮಾನ್ಯನೆ ಖರಾನುಜ । ಹುರುಳುಗೇಡಿಯೆ ದೂಷಣಾಸುರ
ಧುರದರಿದ್ರನೆ ಬಣಗನೇ ಭುಜಶೌರ್ಯದಲಿ ವಾಲಿ
ಅರಸ ಕೇಳೈ ಶೂರ್ಪಣಖಿ ಬಡ । ತರುಣಿಯೇ ತೊಳಸಾಟವಿದು ಗೋ
ಚರಿಸಲಱಿಯದು ಗೋಮಿನೀಧವನೊಡನೆ ನಿನಗೆಂದ ೨೩

ಮದಿಸಿದ ಕುಡುಕರ ಮಾತೇಕೆ ನಿನಗೆ ಪ್ರಭು ?" ಎಂದ ವಿಭೀಷಣ. ೨೦. "ಅಣ್ಣ ಕೇಳು, ಇವರ ಬಣ್ಣಬಣ್ಣದ ಮಾತುಗಳು ಹಾಗಿರಲಿ. ಭೂಮಿಯ ಭಾರವನ್ನು ಇಳಿಸಲು ಹರಿಯು ಮಾನವನಾಗಿ ಅವತಾರವೆತ್ತಿದ್ದಾನೆ. ಹೆಣ್ಣಿನ ನೆಪದಿಂದ ನಮ್ಮನ್ನೆಲ್ಲ ಮಣ್ಣುಗೂಡಿಸದೆ ಇರನು. ನಾವಿನ್ನು ಅನುಭವಿಸಿ ಹಾಳಾಗುವುದು ಬೇಡ. ಸೀತೆಯನ್ನು ಬಂಧನದಿಂದ ಬಿಡಿಸಿ ಕಳುಹಿಸು" ಎಂದ ವಿಭೀಷಣ. ೨೧. "ಏತಕ್ಕೆ ನಿನಗೆ ಈ ಭ್ರಮೆ ? ವೈದೇಹಿಯು ನಿನ್ನನ್ನು ಮುಟ್ಟುವವಳೂ ಅಲ್ಲ. ರಾಜನೇ ಕೇಳು, ಮದಿಸಿ ಬುದ್ಧಿ ಭ್ರಮಣೆಗೊಂಡ ಇವರು ಉಬ್ಬಿಸಿದರೆಂದು ಅವಿವೇಕಿಯಾಗಬೇಡ. ಆ ರಾಮನು ಮಾನವನಲ್ಲ, ಕಪಿಗಳು ಮೃಗಗಳಲ್ಲ. ಲೋಕದ ದುಷ್ಟರ ಶಕ್ತಿಯನ್ನು ಪರೀಕ್ಷಿಸಲು ಒಡ್ಡಿದ ಬೀಸುಬಲೆ ಇದು" ಎಂದ. ೨೨. "ನಿನ್ನನ್ನು ಅವಮಾನಪಡಿಸಿದ ಶಿವಧನುಸ್ಸನ್ನು ಜಗಜಾಹೀರಾಗುವಂತೆ ಮುರಿದು ಸೀತೆಯನ್ನು ವರಿಸಿದ ವಿಷಯ ನಿನಗೆ ತಿಳಿಯದೆ ? ಹುಡುಗತನದಲ್ಲಿಯೇ ತಾಟಕಿಯ ತಲೆಯನ್ನು ತನ್ನ ಬಾಣಕ್ಕೆ ಗುರಿಮಾಡಿದ ರೀತಿಯನ್ನಾಗಲಿ, ಚಿನ್ನದ ಜಿಂಕೆರೂಪ ಧರಿಸಿದ ಮಾರೀಚರಾಕ್ಷಸನನ್ನು ಕೊಂದುದನ್ನಾಗಲಿ ನೀನು ತಿಳಿಯೆಯಾ ?" ಎಂದ ವಿಭೀಷಣ. ೨೩. "ಖರನು ಸಾಮಾನ್ಯನೇ ? ಖರನ ತಮ್ಮ ಸತ್ವಹೀನನೇ ? ದೂಷಣಾಸುರ ಕದನದಲ್ಲಿ ಬಲಹೀನನೇ ? ಬಾಹುಬಲದಲ್ಲಿ ವಾಲಿ ಅಲ್ಪನೇ ? ರಾವಣನೇ ಕೇಳು, ಶೂರ್ಪಣಖಿ ಬಡ ಹೆಂಗಸೇ ? ಲಕ್ಷ್ಮೀಪತಿಯೊಡನೆ

ಕುಲದಲಲ್ಪನೆ ನೀನು ಮುನಿಕುಲ । ತಿಲಕ ಪೌಲಸ್ತ್ಯಜನಲಾ ನಡ
ವಳಿಯಲಧಮನೆ ನೀನು ಶಿವಪೂಜಾಪ್ರಸಿದ್ಧನಲ
ತಿಳಿವಿನಲಿ ಬಱಡನೆ ಬಹುಶ್ರುತಿ । ಗಳು ಮುಖೋದ್ಗತ ನಿನಗೆಯಿನ್ನೇ
ಕಿಳಿಯ ಜಾರರ ಜೋಕೆ ಬಿಡು ಜಾನಕಿಯ ನೀನೆಂದ ೨೪

ಜಾರೆಯೋ ಜಾನಕಿ ಜಗತ್ರಯ । ವೀರ ಪಾತಿವ್ರತೆ ಕಣಾ ನರ
ನಾರಿಯೋ ವೈದೇಹಿ ನಾರಾಯಣನ ಪತ್ನಿಕಣ
ಶ್ರೀರಮಣಿ ಚಂಚಲೆ ಕಣಾ ಕೈ । ಸಾರಿದಳು ನಿನಗೆಂಬ ಮನದ ವಿ
ಕಾರವೇಕೆಲೆ ಜೀಯ ಬಿಡು ಜಾನಕಿಯ ನೀನೆಂದ ೨೫

ಮರುಳು ಹತ್ತಿತೆ ತಮ್ಮ ನೆರೆ ನಿ । ಷ್ಠುರತೆ ನಿನಗೇಕಿನಿತು ಭಟರಂ
ತರವನಱಿಯದೆ ನುಡಿವರೇ ಗರ್ವಾಪಹಾರದಲಿ
ಹಿರಿದು ನಮ್ಮೊಡನಂಜಿಕೆಯ ನೀ । ಹರಹಿ ಮಾತಾಡುವುದು ತಾನಿದು
ಗರುವರಂಗವೆ ಗಾಱುಗೆಡುವುದು ಗುಣವೆ ನಿನಗೆಂದ ೨೬

ಗಾಱುಗೆಡುವವನೇ ವಿವೇಕದ । ಜಾಱುಗಂಡಿಯ ಬಣುಗನೇ ಕಲಿ
ಯೋಱಿಸಿಯೆ ರಕ್ಕಸರು ನುಡಿದರೆ ಹಿತವರೇ ನಿನಗೆ
ತೋಱುವೀ ಸಚರಾಚರದ ವೈ । ದೋಱಿಕೆಯ ಮಹಿಮನು ಕಣಾ ಮತಿ
ದೋಱದಕಟಾ ನಿನಗೆ ನೀನೇ ನೋಡಿಕೋಯೆಂದ ೨೭

ನಿನಗೆ ಕಾಳಗವು ಸಾಧ್ಯವಿಲ್ಲ" ಎಂದ. ೨೪. "ನೀನು ಹೀನಕುಲದವನೆ ? ಮುನಿಶ್ರೇಷ್ಠ ಪುಲಸ್ತ್ಯನ ಪುತ್ರನಲ್ಲವೇ ? ನಡೆವಳಿಕೆಯಲ್ಲಿ ನೀಚನೇ ? ನೀನು ಪ್ರಸಿದ್ಧ ಶಿವಾರಾಧಕ. ತಿಳಿವಳಿಕೆಯಲ್ಲಿ ಅಪ್ರಯೋಜಕನೇ ಎಂದರೆ ವೇದಗಳು ನಿನಗೆ ಕಂಠಪಾಠವಾಗಿವೆ. ನಿನಗೇಕೆ ಜಗತ್ತಿನ ವ್ಯಭಿಚಾರಿಗಳ ನಡತೆ. ಜಾನಕಿಯನ್ನು ಬಿಟ್ಟುಬಿಡು" ಎಂದ ವಿಭೀಷಣ. ೨೫. "ಜಾನಕಿ ವ್ಯಭಿಚಾರಿಣಿಯೆ ? ಮೂರುಲೋಕದ ಪತಿವ್ರತಾ ಶ್ರೇಷ್ಠಳು. ಮಾನವಸ್ತ್ರೀಯೇ ವೈದೇಹಿ ? ನಾರಾಯಣನ ಪತ್ನಿಯಲ್ಲವೇ ಅವಳು. ಲಕ್ಷ್ಮಿಯು ಚಂಚಲಸ್ವಭಾವದವಳು. ಅವಳು ನಿನ್ನ ವಶವಾದಳು ಎಂಬ ಮನೋವಿಕಾರವೇಕೆ ನಿನಗೆ ದೇವ ಜಾನಕಿಯನ್ನು ಕಳುಹಿಸಿಬಿಡು" ಎಂದ. ೨೬. "ತಮ್ಮ ನಿನಗೆ ಹುಚ್ಚು ಹಿಡಿಯಿತೇ ? ನೀನೇಕೆ ಇಷ್ಟು ಕಠಿಣನಾದೆ. ವೀರಯೋಧರ ಮನಸ್ಸನ್ನು ತಿಳಿಯದೆ ಅಭಿಮಾನಭಂಗದ ಮಾತುಗಳನ್ನಾಡುತ್ತಾರೆಯೆ ? ನಮ್ಮಲ್ಲಿ ವಿಶೇಷವಾಗಿ ಹೆದರಿಕೆಯನ್ನು ಹುಟ್ಟಿಸಿ ಮಾತನಾಡುವುದು ಅಭಿಮಾನಶಾಲಿಗಳಿಗೆ ಯೋಗ್ಯವೇ. ನಿಂದಿಸಿ ಮಾತನಾಡುವುದು ಧರ್ಮವೇ ?" ಎಂದು ರಾವಣ ಪ್ರಶ್ನಿಸಿದ. ೨೭. "ನಾನು ನಿಂದಿಸಿ ನುಡಿವವನೇ ? ವಿವೇಕದ ಜಾರುಗಂಡಿಯ ಮೂಲಕ ನಾನು ನುಣುಚಿಕೊಳ್ಳುವವನೇ ? ನಿನ್ನ ಪರಾಕ್ರಮವನ್ನು ಹೊಗಳಿ ಉಕ್ಕಿಸಿ ರಾಕ್ಷಸರು ಮಾತನಾಡಿದರೆ ನಿನಗೆ ಹಿತವೇ? ಈ ಸಚರಾಚರ ಜಗತ್ತಿನಲ್ಲಿ ಪ್ರತ್ಯಕ್ಷವಾಗಿ ಕಾಣಿಸುವ ಮಹಿಮೆಯುಳ್ಳವನು ರಾಮನು. ನಿನಗೆ ಬುದ್ಧಿ ತಿಳಿಯದಲ್ಲ, ನೀನೇ ನೋಡಿಕೋ" ಎಂದ ವಿಭೀಷಣ.

ಮನುಜನಲ್ಲ ಕಣಾ ರಘುಕ್ಷಿತಿ । ಜನಪನಾದಿಯಲೀ ಚರಾಚರ
ವನಲಮುಖದಲಿ ತೀರಲುಬ್ಬಿತು ನೀರು ನೀರಿನಲಿ
ವನರುಹಾಂಬಕನಿರಲು ಕಿವಿಯಲಿ । ಜನಿಸಿದರು ಮಧುಕೈಟಭರು ಮದ
ಜನಿತ ಗರ್ವದಲಳಿದರವರೆಲೆಯಣ್ಣ ಕೇಳೆಂದ ೨೮

ಅಱಿದು ನಾಭೀಕಮಲದಲಿ ಕಂ । ದೆಱೆದ ಕಮಲಭವಂಗೆ ಸೇರಿತು
ನೆಱೆ ಚತುರ್ದಶಭುವನದುದ್ಭವದಾಧಿಪತ್ಯತನ
ಅಱಿಕೆಯೇ ಪ್ರಾಧಾನ್ಯ ಹರಿಯೆಂ । ದಱಿದು ಭಜಿಸದವಂದಿರೂಟದ
ಕುಱಿಗಳಾಗರೆ ಮೃತ್ಯುದೇವತೆಗರಸ ಕೇಳೆಂದ ೨೯

ಕೃತಯುಗದೊಳಜನೊಡನೆ ಗರ್ವಿಸಿ । ಶ್ರುತಿಯ ಕದ್ದೊಯ್ದವನ ಮತ್ಸ್ಯಾ
ಕೃತಿಯಲಳಿದನು ತಳೆದನಂಬುಧಿಮಥನದಲಿ ಗಿರಿಯ
ಕ್ರತುಭುಜರ ರಕ್ಷಿಸಲು ಕೂರ್ಮಾ । ಕೃತಿಯಲವನಿಯ ಕದ್ದು ತಳಕಿಳಿ
ದತುಳಬಲ ಖಳರೆನಲು ಮುಱಿದನು ಕ್ರೋಡರೂಪಿನಲಿ ೩೦

ಶಿಶುವ ಸಲಹಿದು ಸುರವಿರೋಧಿಯ । ಬಸುರ ಬಗಿದೆಳೆಗರುಳನುಗುರಲಿ
ಸಸಿದು ಕೊರಳಲಿ ಹಾಯ್ಕಿದನು ನರಹರಿಯ ರೂಪಿನಲಿ
ವಸುಧೆಗತಿಬಲನೆಂದು ಮಿಗೆ ಗ । ರ್ವಿಸಿದ ಬಲಿಯನು ಬಿಗಿಬಿಗಿದು ಬಂ
ಧಿಸಿದನೀ ರಘುರಾಮ ವಾಮನನಾಗಿ ಜಗವಱಿಯೆ ೩೧

೨೮. "ರಘುರಾಮನು ಮಾನವನಲ್ಲ. ಆದಿಯಲ್ಲಿ ಈ ಸಚರಾಚರವು ಅಗ್ನಿಯಲ್ಲಿ ಲಯವಾಗಲು ನೀರು ಉಕ್ಕೇರಿ ಬಂದಿತು. ಆ ನೀರಿನಲ್ಲಿ ಕಮಲಾಕ್ಷನಿರಲು ಅವನ ಕಿವಿಯಲ್ಲಿ ಮಧು ಕೈಟಭರೆಂಬುವರು ಹುಟ್ಟಿದರು. ಸೊಕ್ಕಿನಿಂದಾದ ಗರ್ವದಿಂದ ಅವರು ನಾಶವಾದರು, ಕೇಳಣ್ಣ" ಎಂದ ವಿಭೀಷಣ. ೨೯. "ನಾರಾಯಣನ ಹೊಕ್ಕುಳಿನ ಕಮಲದಲ್ಲಿ ತಿಳಿದು ಕಣ್ತೆರೆದ ಬ್ರಹ್ಮನಿಗೆ ಹದಿನಾಲ್ಕು ಲೋಕಗಳಲ್ಲಿಯ ಸೃಷ್ಟಿಕಾರ್ಯದ ಆಧಿಪತ್ಯವುಂಟಾಯಿತು. ಜ್ಞಾನವೇ ಮುಖ್ಯ, ಜ್ಞಾನರೂಪಿಯೇ ಹರಿ ಎಂಬುದನ್ನು ಅರಿತುಕೊಂಡು ಶ್ರೀಹರಿಯನ್ನು ಆರಾಧಿಸದವರು ಮೃತ್ಯುದೇವತೆಗೆ ಊಟದ ಕುರಿಗಳು" ಎಂದು ನುಡಿದ. ೩೦. "ಕೃತಯುಗದಲ್ಲಿ ಬ್ರಹ್ಮನೊಡನೆ ಗರ್ವಿಸಿ ವೇದಗಳನ್ನು ಅಪಹರಿಸಿಕೊಂಡು ಹೋದವನನ್ನು ಮೀನಿನ ರೂಪದಿಂದ ನಾಶಮಾಡಿದನು. ಸಮುದ್ರವನ್ನು ದೇವಾಸುರರು ಕಡೆದಾಗ ದೇವತೆಗಳನ್ನು ರಕ್ಷಿಸಲು ಕೂರ್ಮಾವತಾರದಿಂದ ಮಂದರಪರ್ವತವನ್ನು ತನ್ನ ಬೆನ್ನಮೇಲೆ ಧರಿಸಿದನು. ಭೂಮಿಯನ್ನು ಕದ್ದುಕೊಂಡು ಪಾತಾಳಕ್ಕೆ ಹೋದ ಅಸುರ ಹಿರಣ್ಯಾಕ್ಷನನ್ನು ವರಾಹರೂಪದಿಂದ ಕೊಂದನು. ೩೧. ನರಸಿಂಹನ ರೂಪದಿಂದ ಅವತರಿಸಿ ಶಿಶು ಪ್ರಹ್ಲಾದನನ್ನು ರಕ್ಷಿಸಿ ಅಸುರ ಹಿರಣ್ಯಕಶಿಪುವಿನ ಹೊಟ್ಟೆಯನ್ನು ಬಗಿದು ಕರುಳುಗಳನ್ನು ಹೊರಕ್ಕೆ ಕಿತ್ತು ತೆಗೆದು ಅವನ ಕೊರಳಿಗೆ ಮಾಲೆಹಾಕಿದನು. ಲೋಕಕ್ಕೆ ತಾನು ಮಹಾಪ್ರರಾಕ್ರಮಿ ಎಂದು ಅಹಂಕಾರಪಟ್ಟ ಬಲಿಯನ್ನು ರಘುರಾಮನು ವಾಮನನ ರೂಪಿನಿಂದ ಅವತರಿಸಿ ಬಿಗಿಯಾಗಿ ಕಟ್ಟಿ

ಹೆಚ್ಚಿದವನೀಭಾರಕರಸುಱೆ । ಕೊಚ್ಚಿದನು ಕೊಡಲಿಯಲಿ ವಿಪ್ರರ
ಹೆಚ್ಚಿಸಿದನೀ ರಾಮ ಭಾರ್ಗವರಾಮನಾಮದಲಿ
ಮುಚ್ಚುಮಱೆಯೇಕಣ್ಣ ತಿಣ್ಣದ । ಕಿಚ್ಚುದೋಱಿದೆ ನಮಗೆ ನಾವಿ
ನ್ನೆಚ್ಚಱುವಡಿದು ಸಮಯ ಸೀತೆಯ ಬಿಟ್ಟು ಕಳುಹೆಂದ ೩೨

ನಿನಗೆ ನಾಚಿಕೆಯಾದಡದಕೇ । ನೆನಗೆ ನೇಮಿಸು ಜಗದ ಮಾತೆಯ
ನಿನಕುಲೇಂದ್ರಂಗಿತ್ತು ಮನ್ನಿಸಿಕೊಂಡು ಬಹೆ ಬಳಿಕ
ನಿನಗೆ ಜಗದಲಿ ಕೀರ್ತಿ ಕೈರವ । ವನಜಸಖರುಳ್ಳನ್ನಬರ ದು
ರ್ಜನರ ಗರುಡಿಯೊಳಾಡಬೇಡಸುರೇಂದ್ರ ಕೇಳೆಂದ ೩೩

ಏನೆಲವೊ ನಿನಗಿನಿತು ಹೊಗಳುವ । ದೇನಹನೊ ನೀನಾ ನರೇಂದ್ರನ
ಸೂನುವೋ ಮೊಮ್ಮಗನೊ ಮಱಿಮಗನೋ ವಿಚಾರಿಸಲು
ಹಾನಿ ಹಿಂದಣ ಹಂದೆಗರಿಗಾ । ದೀ ನುಡಿಯ ನುಡಿದೆಮ್ಮನಂಜಿಸಿ
ಜಾನಕಿಯ ನೀ ಬಿಡಿಸುವವನೇ ಭ್ರಷ್ಟ ಹೋಗೆಂದ ೩೪

ಬಲ್ಲೆವಾವ್ ಸಾಕಿನ್ನು ನಿನ್ನಯ । ಬಲ್ಲವಿಕೆ ಬಾಯ್ ಬಡಿಯದಿರು ರಣ
ಮಲ್ಲರಿವರಿದಿರಿನಲಿ ನಿನ್ನನು ಕರೆದು ಕೇಳಿದರೆ
ಬಳ್ಳಿಗೆಡುವುದೆ ಚಂದ ಚೌಪಟ । ಮಲ್ಲ ಚಾಪಳವಿದ್ಯವಿದು ನ
ಮ್ಮಲ್ಲಿ ಸೊಗಸದು ಸಾಕು ಗಳಹದೆ ಕೆಲಕೆ ಸಾರೆಂದ ೩೫

ಹಾಕಿದನು. ೩೨. ಈ ರಾಮನು ಪರಶುರಾಮಾವತಾರದಲ್ಲಿ ಭೂಮಿಗೆ ಹೊರೆಯಾದವರು ಹೆಚ್ಚಿದಾಗ ಅವರನ್ನು ಕೊಡಲಿಯಿಂದ ಕೊಚ್ಚಿಹಾಕಿ ಬ್ರಾಹ್ಮಣರನ್ನು ಹೆಚ್ಚಿಸಿದನು. ಇದರಲ್ಲಿ ಮುಚ್ಚುಮರೆಯೇಕಣ್ಣ. ನಮಗೆ ತೀವ್ರವಾದ ಬೆಂಕಿಯು ಕಾಣಿಸಿಕೊಂಡಿದೆ. ನಾವು ಎಚ್ಚತ್ತುಕೊಳ್ಳಲು ಇದು ಸಮಯ. ಸೀತೆಯನ್ನು ಬಿಟ್ಟು ಕಳುಹಿಸಿಕೊಡು" ಎಂದನು ವಿಭೀಷಣ. ೩೩. "ನಿನಗೆ ನಾಚಿಕೆಯಾಗುವುದಾದರೆ ಅದಕ್ಕೇಕೆ ಯೋಚನೆ. ನನಗೆ ಅಪ್ಪಣೆಕೊಡು. ಜಗನ್ಮಾತೆ ಸೀತೆಯನ್ನು ರವಿಕುಲೇಂದ್ರ ರಾಮನಿಗೆ ಒಪ್ಪಿಸಿ ಕ್ಷಮೆ ಪಡೆದುಕೊಂಡು ಬರುತ್ತೇನೆ. ಅನಂತರ ಸೂರ್ಯಚಂದ್ರರು ಇರುವವರೆಗೆ ಜಗತ್ತಿನಲ್ಲಿ ನಿನ್ನ ಕೀರ್ತಿಯು ನಿಲ್ಲುವುದು. ದುಷ್ಟರ ಸಹವಾಸದಲ್ಲಿರಬೇಡ, ಕೇಳು ರಾಕ್ಷಸರೊಡೆಯ" ಎಂದ ವಿಭೀಷಣ. ೩೪. "ಏನೋ, ನೀನು ಅವನನ್ನು ಇಷ್ಟರ ಮಟ್ಟಿಗೆ ಹೊಗಳಬೇಕಾಗಿದ್ದರೆ ಅವನು ನಿನಗೆ ಏನಾಗಬೇಕು ? ನೀನು ಮಾನವರರಸನ ಮಗನೋ, ಮೊಮ್ಮಗನೋ, ಮರಿಮಗನೋ ? ಹಿಂದಿನ ಕಾಲದ ಹೇಡಿಗಳಿಗೆ ಹಾನಿಯೊದಗಿದ ಮಾತನ್ನು ನಮ್ಮೆದುರಿಗೆ ಹೇಳಿ ಹೆದರಿಸಿ ಜಾನಕಿಯನ್ನು ನಮ್ಮಿಂದ ಬಿಡಿಸಬಲ್ಲವನೇ ನೀನು. ಭ್ರಷ್ಟ ಹೋಗು" ಎಂದ ರಾವಣ. ೩೫. "ನಿನ್ನ ಜ್ಞಾನವನ್ನು ಬಲ್ಲೆವು. ಸಾಕು, ಬಾಯ್‌ಬಡಿಯಬೇಡ. ಈ ಯುದ್ಧವೀರರ ಎದುರಿನಲ್ಲಿ ನಿನ್ನನ್ನು ಕರೆದು ಕೇಳಿದರೆ ನರಿಯಂತೆ ಕೂಗಿಕೊಳ್ಳುವುದು ಚಂದವೇ ? ಜಗಜಟ್ಟಿ, ನಿನ್ನ ಚಂಚಲವಿದ್ಯೆ ನಮಗೆ ರುಚಿಸುವುದಿಲ್ಲ. ಸಾಕು ಹರಟದೆ ಪಕ್ಕಕ್ಕೆ ತೊಲಗು"

ಗಳಹುವವನೇ ನಾನವರ್ಮಾರ್ಗ । ಸ್ಥಳದ ತಾಮಸ ನಿನ್ನ ಹೃದಯುಕೆ
ನಿಳಯವಾದುದು ನೀತಿಗೇಡುಗರಂಗ ನಿನಗಾಯ್ತು
ನಳಿನನಾಭನ ಕೂಡೆ ವೈರವ । ಬೆಳಸಿ ಕೆಟ್ಟೆ ನಿರರ್ಥ ನೀನಿ
ನ್ನುಳಿವುಪಾಯುವ ಕಾಣೆನಿದು ಸಿದ್ಧಾಂತಮತವೆಂದ ೩೬

ಹಿತವ ನುಡಿವರು ಮುಂದೆ ಹಿಂದಪ । ಕೃತಿಯನೆಣಿಸುವರಿದುವೆ ಕುಜನರ
ಕೃತಕ ಬೇಡಕಟಕಟ ಸಾರಿದೆ ಬಿಡು ಮಹೀಸುತೆಯ
ಶ್ರುತಿಮತವಿದೀಗಜ್ಞತನದನು । ಚಿತವನಂಗೀಕರಿಸಬೇಡ
ಚ್ಯುತನ ಮಹಿಮೆಯ ಕೇಳು ಕಷ್ಟವನೆಸಗಬೇಡೆಂದ ೩೭

ಆದಡಾತನ ಮುಖದಲಮರೇಂ । ದ್ರಾದಿ ದೇವರು ನಯನದಲಿ ರವಿ
ಪಾದದಲಿ ಭೂದೇವಿ ಮನಸಿನಲಿಂದು ಕಿವಿಗಳಲಿ
ಈ ದಿಶಾವಳಿ ನಾಭಿಯಲಿ ನಭ । ವಾದುದು ಶ್ವಾಸದಲಿ ಮಾರುತ
ನಾದನವತರಿಸಿದವು ಶಿರದಲಿ ಸುರರು ಜಗವೆಂದ ೩೮

ಶರಧಿ ನಿದ್ರೆಯೊಳಾಯ್ತು ಮಾಯಾ । ತರುಣಿ ನಗೆಯಲಿ ಜನಿಸಿದಳು ಸರ
ಸಿರುಹಭವನುದಿಸಿದನು ನಾಭೀಕಮಲಮಧ್ಯದಲಿ
ಸ್ಪರುಷ ರೂಪರಸಾದಿ ಭೂತದ । ನೆರವಿ ನೆನಹಿನೊಳಾಯ್ತು ತೋಜಿದ
ವರಸ ಕೇಳ್ ನಾಮಕ್ರಿಯಾ ರೂಪಕವು ಬಳಿಕೆಂದ ೩೯

ಎಂದ ರಾವಣ. ೩೬. "ನಾನು ಹರಟುವವನೇ ? ದುರ್ಮಾರ್ಗಿಯ ಅಜ್ಞಾನಾಂಧಕಾರ ನಿನ್ನ ಹೃದಯದಲ್ಲಿ ಮನೆಮಾಡಿದೆ. ನೀತಿಗೇಡಿಗಳ ಸ್ಥಿತಿ ನಿನ್ನದಾಗಿದೆ. ಕಮಲನಾಭ ಹರಿಯೊಡನೆ ವೈರವನ್ನು ಬೆಳೆಸಿ ವ್ಯರ್ಥವಾಗಿ ಕೆಟ್ಟೆ. ನೀನು ಬದುಕುವ ಉಪಾಯ ವನ್ನು ನಾನು ಕಾಣೆ. ಇದು ನನ್ನ ನಿಶ್ಚಿತಾಭಿಪ್ರಾಯ" ಎಂದು ವಿಭೀಷಣ ರಾವಣನಿಗೆ ಹೇಳಿದ. ೩೭. "ಎದುರಿಗೆ ಪ್ರಿಯವಾದುದನ್ನು ನುಡಿಯುತ್ತಾರೆ, ಹಿಂದಣಿಂದ ಅಪಕಾರವನ್ನೆಣಿಸುತ್ತಾರೆ. ಆದುದರಿಂದ ದುರ್ಜನರ ಮೋಸದ ವರ್ತನೆಯನ್ನು ತ್ಯಜಿಸು. ಅಯ್ಯೊ, ಸಾರಿ ಹೇಳುತ್ತೇನೆ ; ಬಿಟ್ಟುಬಿಡು ವೈದೇಹಿಯನ್ನು. ಇದೇ ವೇದ ಗಳ ಮತ. ಅಜ್ಞಾನದ ಅನುಚಿತ ನಡೆವಳಿಕೆಯನ್ನು ತಾಳಬೇಡ. ಅಚ್ಯುತನ ಮಹಿಮೆ ಯನ್ನು ಕೇಳು. ಕೆಟ್ಟದ್ದನ್ನು ಮಾಡಬೇಡ." ಎಂದ ವಿಭೀಷಣ. ೩೮. "ಆತನ ಮುಖ ದಲ್ಲಿ ದೇವೇಂದ್ರಾದಿ ದೇವತೆಗಳು, ಕಣ್ಣಿನಲ್ಲಿ ಸೂರ್ಯ, ಪಾದದಲ್ಲಿ ಭೂದೇವಿ, ಮನಸ್ಸಿನಲ್ಲಿ ಚಂದ್ರ, ಕಿವಿಗಳಲ್ಲಿ ಅಷ್ಟದಿಕ್ಕುಗಳು, ಹೊಕ್ಕಳಿನಲ್ಲಿ ಆಕಾಶ, ಉಸುರಿನಲ್ಲಿ ಗಾಳಿಗಳು ಜನಿಸಿದವು. ಆತನ ತಲೆಯಲ್ಲಿ ದೇವತೆಗಳು ಮತ್ತು ಜಗತ್ತು ಅವತರಿಸಿದವು. ೩೯. ಅವನ ನಿದ್ದೆಯಲ್ಲಿ ಸಮುದ್ರ ಹುಟ್ಟಿತು. ಶ್ರೀ ಹರಿಯ ನಗೆಯಿಂದ ಮಾಯೆ ಉದಿಸಿದಳು. ಅವನ ಹೊಕ್ಕುಳಿನಿಂದ ಉದಿಸಿದ ಕಮಲದಲ್ಲಿ ಬ್ರಹ್ಮನು ಜನಿಸಿದನು. ಶಬ್ದ ಸ್ಪರ್ಶ ರೂಪ ರಸ ಗಂಧಗಳೆಂಬ ಪಂಚವಿಷಯಗಳಿಂದ ಕೂಡಿದ ಸಕಲ ಜೀವಿಗಳು ಅವನ ಸ್ಮರಣೆಯಿಂದ ಹುಟ್ಟಿದವು. ರಾವಣ ಕೇಳು, ನಾಮ ಕ್ರಿಯಾರೂಪಗಳು

ಶ್ರುತಿಗಳಾತನ ಮಾತು ವಿಮಳ । ಸ್ಮೃತಿಗಳಾತನ ಶಿಕ್ಷೆ ಜೀವ
ಪ್ರತತಿಯಾತನ ಸೂತ್ರದಾಟದ ಬೊಂಬೆಯೀ ಜಗದ
ಸ್ಥಿತಿಲಯೋದಯವಿವು ನಿಜ ಭ್ರೂ । ಲತೆ ವಿಲಾಸ ಪ್ರೌಢಿ ವೈರ
ಸ್ಥಿತಿಗೆ ಠಾವನು ಕಾಣೆ ತಾಮಸವೇಕೆ ನಿನಗೆಂದ ೪೦

ಉಳಿದುದಿಲ್ಲೀತನ ವಿರೋಧದ । ಳಳಿದುದಿಲ್ಲೊಲುಮೆಯಲಿ ಶ್ರುತಿಮತ
ದುಲುಹು ತಾನಿದು ನಿಗ್ರಹಾನುಗ್ರಹ ಮಹಾಶಕುತಿ
ಉಳಿದ ದೇವರಿಗುಂಟೆ ನಿನ್ನಳ । ಬಳವ ನೀ ತಾನರಿಯೆ ಕೆಡಬೇ
ಡಿಳೆಯುಮಗಳನು ಕೊಟ್ಟು ಸುಖಿಯಾಗೆಂದನಗ್ರಜಗೆ ೪೧

ಎಲವೊ ನೀನೀಗೆಂದ ದೈವದ । ತಲೆಪಿಡಿದು ಪಾದಾಂತ ಪರಿಯಂ
ತಿಳಿದ ದೇವಸಮೂಹ ನಂಟರೊ ಭಂಟರೋ ತನಗೆ
ತಿಳಿಯಲೀ ಭುವನಂಗಳೊಡೆತನ । ಕೆಲಬರದೊ ತನ್ನದೊ ವಿವೇಕಿಸಿ
ಗಳಹದಾದೆ ಗಯಾಳವಿದ್ಯವೆ ನಮ್ಮ ಕೂಡೆಂದ ೪೨

ಆದಡೆಲೆ ಖಳರಾಯ ಕೇಳ್ ಖರ । ಸೂದನನ ಸೂರ್ಯಾನ್ವಯನ ಸಂ
ಪಾದಕದ ಶರಪರಶು ನಿನ್ನಯ ಕೊರಳ ಹಳುವದಲಿ
ಬೀದಿವರಿವುದು ಪುತ್ರಮಿತ್ರ ಸ । ಹೋದರರು ಸಾವರು ನೃಪಾಲ ತ
ಳೋದರಿಯ ನೀನೀಯದಿರೆ ನಿಶ್ಚಯವಿದೀಗೆಂದ ೪೩

ಅನಂತರ ವಿಕಾಸಗೊಂಡವು. ೪೦. ವೇದಗಳು ಶ್ರೀಹರಿಯ ನುಡಿಗಳು. ಧರ್ಮ ಶಾಸ್ತ್ರಗಳು ಅವನ ಬೋಧನೆ. ಜೀವಸಮೂಹವು ಅವನ ಬೊಂಬೆಗಳ ಸೂತ್ರದಾಟ. ಈ ಜಗತ್ತಿನ ಸೃಷ್ಟಿ ಸ್ಥಿತಿ ಲಯಕಾರ್ಯಗಳು ಅವನ ಹುಬ್ಬಿನೆಸಳಿನ ಕುಣಿತ. ಅವನೊಡನೆ ಹಗೆತನಕ್ಕೆ ಅವಕಾಶವೇ ಇಲ್ಲ. ನಿನಗೆ ಅಜ್ಞಾನವೇಕೆ ?" ಎಂದ ವಿಭೀಷಣ. ೪೧. "ಶ್ರೀಹರಿಯ ವಿರೋಧದಿಂದ ನಾಶವಾಗದೆ ಬದುಕಿದುದಿಲ್ಲ, ಆತನ ಮೇಲಿನ ಭಕ್ತಿಯಿಂದ ನಾಶವಾದುದು ಯಾವುದೂ ಇಲ್ಲ-ಇದು ವೇದೋಕ್ತಿ. ದಂಡನೆ ಮತ್ತು ರಕ್ಷಣೆಯ ಮಹಾಶಕ್ತಿ ಉಳಿದ ದೇವರಿಗುಂಟೆ ? ನಿನ್ನ ಸಾಮರ್ಥ್ಯವೆಷ್ಟೆಂಬುದನ್ನು ನೀನರಿಯೆ. ಸುಮ್ಮನೆ ಕೆಟ್ಟುಹೋಗಬೇಡ. ಭೂಸುತೆಯನ್ನು ರಾಮನಿಗೆ ಒಪ್ಪಿಸಿ ಕೊಟ್ಟು ಸುಖಿಯಾಗು" ಎಂದು ವಿಭೀಷಣನು ಅಣ್ಣನಿಗೆ ಹೇಳಿದ. ೪೨. "ಎಲವೋ, ನೀನು ಈಗ ಹೇಳಿದ ದೇವರ ತಲೆಯಿಂದ ಕಾಲಿನವರೆಗೂ ಜನಿಸಿದ ಸಮಸ್ತ ದೇವತೆಗಳು ನಮಗೆ ನಂಟರೋ, ಸೇವಕರೋ? ನೋಡಿದರೆ ಈ ಲೋಕಗಳ ಒಡೆತನ ಕೆಲವರಿಗೆ ಸೇರಿದ್ದೋ, ಇಲ್ಲ ನನಗೆ ಸೇರಿದ್ದೋ ? ಆಲೋಚನೆ ಮಾಡಿ ಹರಟದಾದೆ. ನಮ್ಮೊಡನೆ ಈ ಅಂಜುಬುರುಕವಿದ್ಯವೇ ?" ಎಂದು ಪ್ರಶ್ನಿಸಿದ ರಾವಣ. ೪೩. "ಹಾಗಿದ್ದರೆ ರಾಕ್ಷಸರಾಜ, ಕೇಳು. ಖರನ ವಧೆಗೈದ ಸೂರ್ಯವಂಶದ ರಾಮನು ಪಡೆದುಕೊಂಡ ಬಾಣವೆಂಬ ಕೊಡಲಿ ನಿನ್ನ ಕತ್ತುಗಳ ಅರಣ್ಯದಲ್ಲಿ ಸ್ವೇಚ್ಛೆಯಾಗಿ ಮುನ್ನುಗ್ಗುವುದು. ನಿನ್ನ ಮಕ್ಕಳು ಮತ್ತು ಅಣ್ಣತಮ್ಮಂದಿರು ಸಾಯುವರು. ರಾಜಾರಾಮನ ಪತ್ನಿಯನ್ನು

ಬೀಳಲಾ ನುಡಿ ಕರ್ಣದಲಿ ಲಯ । ಭಾಳನೇತ್ರನ ಭೀಮರೌದ್ರ ಕ
ರಾಳಕಿಂ ಮಿಗಿಲೆನಲು ಕಟಿದನು ಕಂಗಳಲಿ ಕಿಡಿಯ
ಬೀಳಹೊಯ್ ಹೊಯ್ ಬಾಯ ಬಗುಳುವ । ನಾಲಗೆಯ ಕೊಯ್ ಕಾಲ ಹಿಡಿದೆಳೆ
ಕಾಳಮೂಳನನೆನುತ ಝಡಿದನು ಚಂದ್ರಹಾಸಕವ ೪೪

ಕೊರಳ ಕಡಿತದಲಾಡುವುದು ಗಡ । ಧರಣಜೆಯ ಬಿಡದಿರಲು ರಾಮನ
ಸರಳು ಸೋದರ ಪುತ್ರ ಮಿತ್ರ ಜ್ಞಾತಿ ಬಾಂಧವರ
ಹರಣವನು ಹೋಗಾಡುವವು ಗಡ । ಹರಮಹಾದೇವಿವನ ಬಾಯನು
ಹರಿಯ ಕೊಯ್ವವರಿಲ್ಲಲಾಯೆನುತೌಡನೊಡೆಯುಗಿದ ೪೫

ಕೊಲುವೆನೇ ಕೈಕಸೆಯ ಬಸುರಿಂ । ದಿಳಿದನೆಂಬೀ ಬಿಡೆಯ ಜಿಹ್ವೆಯ
ನಿಳಿಯಕೊಯ್ವೆನೆ ಸೈರಿಸಲು ಬೇಕಪಶಯಸ್ಥಿತಿಗೆ
ತಲೆಯ ಹಿಡಿದೀ ನಾಯ ನಮ್ಮಯ । ಹೊಳಲ ಹೊಱವಡಿಸೆಂದು ಹರಿಹಯ
ನಳವ ಮುಱಿದಸುರಂಗೆ ನೇಮಿಸಿ ನೂಕುನೂಕೆಂದ ೪೬

ನೂಕಲೇತಕೆ ನಮ್ಮ ನಾವೇ । ನೂಕಿಕೊಂಬೆವೆನುತ್ತ ಸುಜನಜ
ನೈಕಚೂಡಾಮಣಿ ಮಹೋತ್ಸಾಹದಲಿ ಮನದೊಳಗೆ
ಶ್ರೀಕುಚಾಗ್ರ ಸುಕುಂಕುಮಾಂಕಿತ । ಸೌಕುಮಾರೋರಸ್ಥಳನ ಲೋ
ಕೈಕವಂದ್ಯನ ನೆನೆವುತಾ ಸಭೆಯಿಂದ ಹೊಱವಂಟ ೪೭

ಹಿಂತಿರುಗಿಸದಿದ್ದರೆ ಇದು ಖಂಡಿತ" ಎಂದನು ವಿಭೀಷಣ. ೪೪. ಆ ಮಾತು ಕಿವಿಗೆ ಬಿದ್ದಿತೋ ಇಲ್ಲವೋ ಪ್ರಳಯಕಾಲದ ಹಣೆಗಣ್ಣನ ಪ್ರಚಂಡ ಭೀಕರತೆಗೆ ಎರಡರಷ್ಟು ಎನ್ನುವಂತೆ ರಾವಣನು ಕಣ್ಣುಗಳಿಂದ ಕಿಡಿಕಾರಿದನು. "ಹೊಡೆದು ಬೀಳಿಸು. ಬಾಯಿಯ ಮೇಲೆ ಹೊಡೆ, ಬೊಗಳುವ ನಾಲಗೆಯನ್ನು ಕತ್ತರಿಸು, ಆ ದುಷ್ಟ ತಿಳಿಗೇಡಿಯ ಕಾಲು ಗಳನ್ನು ಹಿಡಿದು ಎಳೆ" ಎನ್ನುತ್ತ ರಾವಣನು ಚಂದ್ರಹಾಸಖಡ್ಗವನ್ನು ಝಳಪಿಸಿದನು. ೪೫. "ಸೀತೆಯನ್ನು ಬಿಡದೆ ಇದ್ದರೆ ರಾಮನ ಬಾಣ ಕೊರಳನ್ನು ಕತ್ತರಿಸುವುದಲ್ಲವೇ ! ಅಣ್ಣತಮ್ಮಂದಿರು ಮಕ್ಕಳು ಮಿತ್ರರು ದಾಯಾದಿಗಳು ನೆಂಟರುಗಳ ಪ್ರಾಣವನ್ನು ತೆಗೆಯುವುದಲ್ಲವೇ ! ಶಿವ ಶಿವ ಮಹಾದೇವ ! ಇವನ ಬಾಯಿ ಹರಿಯುವಂತೆ ಕತ್ತರಿಸು ವವರಿಲ್ಲವಲ್ಲಾ !" ಎನ್ನುತ್ತ ರಾವಣ ಔಡುಗಚ್ಚಿದ. ೪೬. "ಇವನನ್ನು ಕೊಲ್ಲುವೆ ನೆಂದರೆ ಕೈಕಸೆಯ ಹೊಟ್ಟೆಯಿಂದ ಹುಟ್ಟಿದನೆಂಬ ದಾಕ್ಷಿಣ್ಯ. ನಾಲಗೆಯನ್ನು ಕತ್ತರಿಸುವೆನೆ ಅಪಖ್ಯಾತಿಗೆ ಹೆದರಬೇಕಾಗಿದೆ. ತಲೆಯನ್ನು ಹಿಡಿದು ಈ ನಾಯನ್ನು ನಮ್ಮ ನಗರ ದಿಂದ ಹೊರಡಿಸು" ಎಂದು ಇಂದ್ರನ ಸಾಮರ್ಥ್ಯವನ್ನು ಮುರಿದ ಇಂದ್ರಜಿತುವಿಗೆ ಅಪ್ಪಣೆಮಾಡಿ "ಅವನನ್ನು ನೂಕು ನೂಕು" ಎಂದ ರಾವಣ. ೪೭. "ನಮ್ಮನ್ನು ಏತಕ್ಕೆ ನೂಕಬೇಕು, ನಮ್ಮನ್ನು ನಾವೇ ನೂಕಿಕೊಳ್ಳುವೆವು" ಎನ್ನುತ್ತ ಸಜ್ಜನಶ್ರೇಷ್ಠ ವಿಭೀಷಣನು ಉತ್ಸಾಹದಿಂದ ಲಕ್ಷ್ಮಿಯ ಅಪ್ಪುಗೆಯಿಂದ ಅವಳ ಸ್ತನಗಳ ಕುಂಕುಮವು ಅಚ್ಚೊತ್ತಿದ ಸುಂದರವಾದ ಎದೆಯುಳ್ಳ ಜಗದ್ವಂದ್ಯನಾದ ಶ್ರೀಹರಿಯನ್ನು ಮನಸ್ಸಿ

ಎಲವೊ ನೀನೀ ಮುನಿದ ಕಯ್ಯಲಿ । ಕಲಹಕಾ ರಾಘವನ ತಾರದೆ
ತೊಲಗಿದರೆ ನಿನ್ನಂದದಸುರರ ಹಿಂದೆ ಹರಿದೆಯಲ
ತಿಳುಹಿ ನಿನ್ನನು ತಂದೆನಾದರೆ । ಬಳಿಕ ತನಗದು ಸೂರುಳೆಂದೆಡ
ಬಲದವರ ಕೈವೊಯ್ದನುಬ್ಬಿನ ನಗೆಯಲಸುರೇಂದ್ರ ೪೮

ಆಗಲದಕೇನೆಮಗೆ ನಿಮ್ಮವೊ । ಲಾಗದೀಯಾಯತಿಕೆ ನೀವ
ಭ್ಯಾಗವಿಕರರಿಗಳಲಿ ನಾವೇ ಶರಣಾಗತಿಕರಲೆ
ಮೇಗೆ ಬರಲದಱಿಂದ ಬಂದುದ । ಭೋಗಿಸುವೆನೆನುತೊತ್ತಬಜಿದ ವಿ
ರಾಗದಲಿ ಹರಿಶರಣ ಬಂದನು ತಾಯ ಮಂದಿರಕೆ ೪೯

ಮಗನೆ ಬಂದೈ ಕೇಳಿದೆನು ಹೆ । ಮ್ಮಗನು ನುಡಿದ ದುರುಕ್ತಿಗಳನೀ
ನಗರ ನಿನ್ನದು ಮಱೆಯೊಗುವಡಿದು ಸಮಯ ರಾಘವನ
ಅಗಲದಾಯುವನೈಶ್ವರಿಯವನು । ಹೊಗಿಸುವನು ನಿನ್ನೊಳಗೆ ನೀನೆಮ
ಗೊಗಿಸು ತಿಲಸಲಿಲಾಂಜಲಿಯನೆಂದಪ್ಪಿದಳು ಮಗನ ೫೦

ಹಿಂದ ಮಱೆ ನಡೆಯೆಂದು ಕಂಬನಿ । ದಂದು ಮೋಹದಿ ಮಗನ ಬೀಳ್ಕೊಡೆ
ಸಂದಣಿಸುವಶ್ರುಗಳಲಂಘ್ರಿಗೆ ನಮಿಸಿ ಮಣಿಮಯದ
ಸ್ಯಂದನವನೇಱಿದನು ಬಳಿಕರ । ವಿಂದನಾಭನ ನೆನೆದು ಸನ್ಮುದ
ದಿಂದ ನಭಕುಪ್ಪರಿಸಿದನು ನಿಜಭಾವಶುದ್ಧಿಯಲಿ ೫೧

ನಲ್ಲಿ ಸ್ಮರಿಸುತ್ತ ಸಭೆಯಿಂದ ಹೊರಟನು. ೪೮. "ಎಲವೋ ಹೀಗೆ ಕೋಪಿಸಿಕೊಂಡಿರುವಾಗ ಆ ರಾಘವನನ್ನು ಯುದ್ಧಕ್ಕೆ ಕರೆದುಕೊಂಡು ಬರದೆ ಹೋದರೆ ನಿನ್ನಂಥ ಹಿಂದಿನ ರಾಕ್ಷಸರ ಹಿಂದೆ ಹೋದವನು ನೀನು. ಸಮಾಧಾನಪಡಿಸಿ ನಿನ್ನನ್ನು ಹಿಂದಕ್ಕೆ ಕರೆತಂದರೆ ನನ್ನ ಆಣೆ" ಎಂದು ಸಂತೋಷದಿಂದ ಉಬ್ಬಿ ನಗುತ್ತ ರಾಕ್ಷಸರೊಡೆಯನು ತನ್ನ ಎಡ ಬಲದಲ್ಲಿದ್ದವರ ಕೈ ತಟ್ಟಿದನು. ೪೯. "ಆಗಲಿ ಅದಕ್ಕೇನು, ನಿಮ್ಮ ಯೋಗ್ಯತೆ ನಮಗಿಲ್ಲ. ನೀವು ಶತ್ರುಗಳೊಡನೆ ಹಗೆತನವುಳ್ಳವರು. ನಾವು ಶತ್ರುಗಳಿಗೆ ಶರಣಾಗತರಾದವರು. ಇದರ ಮೇಲೆ ಬಂದದ್ದು ಬರಲಿ, ಅನುಭವಿಸುತ್ತೇನೆ" ಎನ್ನುತ್ತ ವೈರಾಗ್ಯದಿಂದ ಆತುರವಾಗಿ ಹರಿಭಕ್ತ ವಿಭೀಷಣನು ತಾಯ ಮನೆಗೆ ಬಂದನು. ೫೦. "ಮಗನೆ ಬಂದೆಯಾ ? ಹಿರಿಯ ಮಗನಾಡಿದ ಕೆಟ್ಟಮಾತುಗಳನ್ನು ಕೇಳಿದೆ. ಈ ನಗರ ನಿನ್ನದು. ರಾಘವನ ಮರೆಹೊಗಲು ಇದು ತಕ್ಕ ಸಮಯ. ಆತನು ಆಯುಸ್ಸನ್ನೂ ಐಶ್ವರ್ಯವನ್ನೂ ಬಿಡದೆ ನಿನಗೆ ಸೇರುವಂತೆ ಮಾಡುತ್ತಾನೆ. ನೀನು ನಮಗೆ ಎಳ್ಳು ನೀರನ್ನು ಒದಗಿಸು" ಎಂದು ಮಗನನ್ನು ಅಪ್ಪಿಕೊಂಡಳು. ೫೧. 'ಹಿಂದಾದುದನ್ನು ಮರೆತು ಬಿಡು, ಹೋಗು' ಎಂದು ಕಣ್ಣೀರು ತಂದುಕೊಂಡು ಪ್ರೀತಿಯಿಂದ ಮಗನನ್ನು ಬೀಳ್ಕೊಡಲು ವಿಭೀಷಣನು ಕಣ್ಣುಗಳಲ್ಲಿ ನೀರು ತುಂಬಿಕೊಂಡು ತಾಯಿಯ ಪಾದಗಳಿಗೆ ನಮಸ್ಕರಿಸಿ ರತ್ನದ ರಥವನ್ನು ಏರಿದನು. ಬಳಿಕ ಕಮಲನಾಭ ಶ್ರೀಹರಿಯನ್ನು ಪರಿಶುದ್ಧ

ನುಡಿವವಿನ್ನೊಮ್ಮೆಗೆ ಕರುಳ್ಗಳು । ತೊಡಕಿಕೊಂಡಿಹವಾಗಿ ತನ್ನಯ
ನುಡಿಗಳವು ಸರಳಾಗೆ ಬಳಿಕಿಮ್ಮಡಿಸಿ ನೂಕನಲೆ
ಕಡೆಗೆ ಕವಲಸಖಾನ್ವಯನ ಮೃ । ಲ್ಲಡಿಗಳೇ ಗತಿಯೆನುತ ಗಗನದ
ನಡೆಯ ರಥದಲಿ ಬಂದನಣ್ಣನ ಸಭೆಯ ಸರಿಸದಲಿ ೫೨

ಹೋಗಹೇಳವನೇಕೆ ಬಂದನು । ಬಾಗಿಲನು ಹೊಗಲೀಸದಿರಿಯೆನೆ
ಕೈಗಡಿಗೆಗಳ ಖಳರು ತಡಬಿದರಾ ವಿಭೀಷಣನ
ನೀಗಲವರಸುಗಳನು ಗದೆಯಲಿ । ತಾಗಿಸುತ ತನ್ನವಗೆ ನುಡಿದನು
ಕೂಗಿ ಮಾರಿಯ ಕರೆದುಕೊಂಬುದು ಕಣೆಯವಲ್ಲೆಂದ ೫೩

ಬಿಡುವುದೊಳ್ಳಿತು ಸೀತೆಯನು ಕೈ । ವಿಡಿವುದೊಳ್ಳಿತು ಕೀರ್ತಿಕಾಂತೆಯ
ತೊಡವುದೊಳ್ಳಿತು ತೋಟಿಕೆಯ ತನುಮನದ ಕಿಲ್ಬಿಷವ
ನುಡಿಯಿದೀಗ ಸಮಸ್ತ ನಿಗಮದ । ನುಡಿಗಳೆಂದಱಿ ಬೇಡ ಕೆಡಬೇ
ಡಿಡಲುಬೇಡುಂಗುರವ ಲಯಕನ್ನಿಕೆಗೆ ನೀನೆಂದ ೫೪

ಹೇಳಕರೆದೆವೆ ತನ್ನ ನಾಯುವೊ । ಲೂಳದತ್ತಲೆ ಹೋಗಹೇಳೆಂ
ದಾಳಿಕಾಱರ ಗಂಡ ಗರ್ಜಿಸಲೈಸಲೇಯೆನುತ
ಭಾಳದಲಿ ಬೆರಳಿಟ್ಟು ಕರ್ಮಫ । ಲಾಳಿಯಿದು ನಿನಗೆನುತ ವೈಷ್ಣವ
ಮೌಳಿಮಣಿ ಮುರಿದಿಳಿದನಾ ಲಂಕಾಮಹಾಪುರವ ೫೫

ಭಾವದಿಂದ ಸ್ಮರಿಸಿಕೊಳ್ಳುತ್ತ ಆನಂದದಿಂದ ಆಕಾಶಕ್ಕೆ ನೆಗೆದನು. ೫೨. 'ಇನ್ನೊಂದು ಬಾರಿ ಅಣ್ಣನೊಡನೆ ಮಾತನಾಡೋಣ. ನಮ್ಮ ಕರುಳುಗಳ ಸಂಬಂಧ ತೊಡಕಿಕೊಂಡಿದೆ. ನನ್ನ ಮಾತುಗಳು ಬಾಣದಂತೆ ಚುಚ್ಚಿದರೆ ರಾವಣನು ಪುನಃ ಇಮ್ಮಡಿಯಾಗಿ ನೂಕಿ ಬಿಡುತ್ತಾನೆಯಲ್ಲವೆ ? ಕಟ್ಟಕಡೆಗೆ ರವಿಕುಲ ರಾಮನ ಮೃದುಪಾದಗಳೇ ನನಗೆ ಗತಿ' ಎನ್ನುತ್ತ ಆಕಾಶದಲ್ಲಿ ರಥವನ್ನು ನಡೆಸಿಕೊಂಡು ವಿಭೀಷಣನು ಅಣ್ಣನ ಸಭೆಯ ಸಮೀಪಕ್ಕೆ ಬಂದನು. ೫೩. "ಹೋಗಲಿ ಹೇಳಿ, ಅವನು ಏತಕ್ಕೆ ಬಂದ ? ಬಾಗಿಲೊಳಕ್ಕೆ ಬಿಡಬೇಡಿ" ಎನ್ನಲು ರಾಕ್ಷಸರು ಕೈಬಡಿಗೆಗಳಿಂದ ವಿಭೀಷಣನನ್ನು ಅಡ್ಡಗಟ್ಟಿದರು. ಗದೆ ಬೀಸಿ ಅವರ ಪ್ರಾಣಗಳನ್ನು ತೆಗೆದು ಅಣ್ಣನ ಎದುರಿಗೆ ಬಂದು "ಮಾರಿಯನ್ನು ಕೂಗಿ ಕರೆದುಕೊಳ್ಳುವುದು ಕ್ರಮವಲ್ಲ" ಎಂದು ಹೇಳಿದನು. ೫೪. "ಸೀತೆಯನ್ನು ಬಿಟ್ಟು ಕಳುಹಿಸುವುದೊಳ್ಳೆಯದು ; ಕೀರ್ತಿಲಕ್ಷ್ಮಿಯ ಕೈಹಿಡಿಯುವುದೊಳ್ಳೆಯದು ; ಡಂಭದಿಂದ ಕೂಡಿದ ತನುಮನದ ಕೊಳೆಯನ್ನು ತೊಡೆದುಹಾಕುವುದೊಳ್ಳೆಯದು. ಇದು ಸಮಸ್ತ ವೇದಗಳು ಹೇಳಿರುವ ಮಾತೆಂದು ತಿಳಿ. ಬೇಡ, ಕೆಟ್ಟುಹೋಗಬೇಡ. ಪ್ರಳಯಕನ್ನಿಕೆಗೆ ಉಂಗುರ ತೊಡಿಸಬೇಡ" ಎಂದ ವಿಭೀಷಣ. ೫೫. "ಇದನ್ನು ಹೇಳಲು ಕರೆದೆವೆ ? ನಾಯಿಯ ಹಾಗೆ ಬಗುಳದೆ ಅತ್ತ ಹೋಗಲು ಹೇಳು" ಎಂದು ಕಪಟಿಗಳೊಡೆಯನು ಗರ್ಜಿಸಿದನು. 'ಹಾಗೇನು !' ಎನ್ನುತ್ತ ಹಣೆಯ ಮೇಲೆ ಬೆರಳಿಟ್ಟುಕೊಂಡು, "ನಿನಗೆ ಇದು ನಿನ್ನ ಕರ್ಮಗಳ ಫಲ" ಎನ್ನುತ್ತ ವೈಷ್ಣವಭಕ್ತಶಿರೋಮಣಿಯು ಮುಖ

ಆ ವಿಭೀಷಣನಗಲಿಕೆಗೆ ಕೇ । ಳೈ ವಿಭಾಕರಕುಲಜ ಲಂಕಾ
ಶ್ರೀವನಿತೆ ಸಿಂಪಿಸಿದಳುಗುರಲಿ ತೆಗೆದು ಕಂಬನಿಯ
ರಾವಣನ ಬಾಹುಪ್ರತಾಪದ । ದೀವಿಗೆಯ ಕಡೆವತ್ತಿ ಸಿಡಿದವೊ
ಲಾ ವಿಯದ್ಭಾಗದಲಿ ತೋಱಿತು ಬಿಂಬ ದಿನಮಣಿಯ ೫೬

ತಿರುಗಿಸಿ ಲಂಕಾಪಟ್ಟಣವನ್ನು ಬಿಟ್ಟು ಹೊರಟನು. ೫೬. ಕೇಳಯ್ಯ ಸೂರ್ಯವಂಶಜ. ವಿಭೀಷಣನು ಅಗಲಿಹೋದುದನ್ನು ಕಂಡು ಲಂಕಾನಗರಲಕ್ಷ್ಮಿಯು ಉಗುರಿನಿಂದ ಕಣ್ಣೀರನ್ನು ಮಿಡಿದಳು. ರಾವಣನ ತೋಳ್ಬಲದ ದೀಪದ ಕೊನೆಯ ಬತ್ತಿ ಸಿಡಿದು ಹೋದಹಾಗೆ ಆಕಾಶದಲ್ಲಿ ಸೂರ್ಯಬಿಂಬವು ತೋರಿತು.

# ಮೂರನೆಯ ಸಂಧಿ

ಸೂಚನೆ॥ ಶರಣು ಹೊಕ್ಕ ವಿಭೀಷಣನ ಪತಿ । ಕರಿಸಿ ಲಂಕಾವನಿಯ ಜನಪದ
ದರಸುತನವನು ಕೊಟ್ಟು ಮನ್ನಿಸಿದನು ರಘುಪ್ರಭವ

ಕೇಳಿದೈ ರಘುವಂಶದವನೀ । ಪಾಲಸುತ ಭವಗೋಟಲೆಯ ಕೈ
ಗೋಳ ಕಳಚಿದ ಕಲಿವಿಭೀಷಣದೇವ ನಿರ್ಗಮವ
ಕೇಳಿಬಂದರು ತನ್ನ ಪೂರ್ವದ । ನಾಲುವರು ಮಂತ್ರಿಗಳು ಬಳಿವಿಡಿ
ದೋಲಗಿಪ ಚಾತುರ್ವಿಧದ ಪುರುಷಾರ್ಥದಂದದಲಿ ೧

ದಾಟಿದನು ಲವ ಕೇಳು ಘೋರ ನಿ । ಶಾಟಬಲ ಕಲುಷಾಂಬುಧಿಯನುಜಿ
ದಾಟುವಂತೆ ಸಮುದ್ರವನು ಶತಯೋಜನಾಂತರದ
ಪಾಟಿಯಾರೀತಂಗೆ ಪೂರ್ವದ । ಕೂಟದುತ್ತಮ ವೈಷ್ಣವರೊಳಿಂ
ದಾಟದಲಿ ನಾರದನು ನರ್ತಿಸಿದನು ನಭೋಗ್ರದಲಿ ೨

ಹರಿಬಲಾಂಬುಧಿ ಪಾಲ್ಗಡಲ ಮೈ । ಸಿರಿಯವೊಲು ರಘುನಾಥ ಲಕ್ಷ್ಮೀ
ವರನವೊಲು ಭುಜಲಕ್ಷ್ಮಿ ಲಕ್ಷ್ಮೀದೇವಿಯಂದದಲಿ
ವರಸುಮಿತ್ರಾಸೂನು ಶೇಷನ । ಪರಮ ವೈಭವದಂತೆ ಮಾರುತಿ
ಗರುಡನವೊಲೆಸೆದಿರ್ದನಿದಿರಿನೊಳಾ ವಿಭೀಷಣನ ೩

ಸೂಚನೆ ॥ ತನಗೆ ಶರಣುಬಂದ ವಿಭೀಷಣನನ್ನು ರಾಘವನು ಅಂಗೀಕರಿಸಿ ಅವನಿಗೆ ಲಂಕಾರಾಜ್ಯದ ಅರಸುತನವನ್ನು ಕೊಟ್ಟು ಗೌರವಿಸಿದನು. ೧. ಕೇಳಿದೆಯಾ ರಘುವಂಶರಾಜಕುಮಾರ, ಈ ಸಂಸಾರದ ಕಾಟವೆಂಬ ಕೈಯ ಬೇಡಿಯನ್ನು ಕಳಚಿ ಹಾಕಿದ ವೀರ ವಿಭೀಷಣದೇವನು ಹೊರಟುಹೋದುದನ್ನು ಕೇಳಿದ ಅವನ ಹಿಂದಿನ ನಾಲ್ವರು ಮಂತ್ರಿಗಳು ಧರ್ಮ ಅರ್ಥ ಕಾಮ ಮೋಕ್ಷಗಳೆಂಬ ಚತುರ್ವಿಧ ಪುರುಷಾರ್ಥಗಳಂತೆ ವಿಭೀಷಣನನ್ನು ಹಿಂಬಾಲಿಸಿ ಬಂದರು. ೨. ರಾಕ್ಷಸಸೈನ್ಯವೆಂಬ ಘೋರವಾದ ಪಾಪಸಾಗರವನ್ನು ದಾಟುವಂತೆ ನೂರು ಯೋಜನದಗಲದ ಸಮುದ್ರವನ್ನು ವಿಭೀಷಣನು ದಾಟಿದನು. ಹಿಂದಿನ ಶ್ರೇಷ್ಠ ವಿಷ್ಣುಭಕ್ತರಲ್ಲಿ ಇವನಿಗೆ ಸಮಾನರಾರು ಎಂದು ಆಕಾಶದಲ್ಲಿ ನಾರದನು ನಲಿಯುತ್ತ ನರ್ತಿಸಿದನು. ೩. ಕಪಿಸೈನ್ಯಸಾಗರವು ಕ್ಷೀರಸಮುದ್ರದ ಸೊಬಗಿನಂತೆ, ರಘುನಾಥನು ಲಕ್ಷ್ಮೀಪತಿಯಂತೆ, ಅವನ ಭುಜ ಲಕ್ಷ್ಮಿಯು ಲಕ್ಷ್ಮೀದೇವಿಯಂತೆ, ಸೌಮಿತ್ರಿಯು ಆದಿಶೇಷನ ಅತುಳ ವೈಭವದಂತೆ,

ವರದ ಸದ್ಯೋಜಾತ ಘನ ತ । ತ್ಪುರುಷ ನಿರ್ಮಳ ವಾಮದೇವ
ಸ್ಫುರದಘೋರ ಮಹಾಮಹೀಶಾನಪ್ರವಿಸ್ತರದ
ಹರನವೊಲು ನಾಲ್ದೆಸೆಯ ಮಂತ್ರೀ । ಶ್ವರರು ಸಹಿತ ವಿಭೀಷಣನು ಭಾ
ಸುರತೆ ಮಿಗಲೆಸೆದಿರ್ದನಾ ಕಪಿಬಲದ ಕಣ್ಮನಕೆ ೪

ಅವಧರಿಸು ನೃಪಸೂನು ವರವೈ । ಷ್ಣವದ ವಿಮಲಪ್ರಭೆಗೆ ಭುವನದೊ
ಳವಧಿಯಾವುದು ಮುಸುಕಿಕೊಂಡುದು ನಿಮ್ಮವರ ಬಲವ
ತವಕದಲಿ ತುದಿಪಾಳೆಯದ ಕಪಿ । ನಿವಹ ಭೋಯೆಂದೆದ್ದು ಮುತ್ತಿದ
ರವನಿಜೌಘದಲಧಿಕ ನಾರಾಯಣ ಪರಾಯಣನ ೫

ಶರಣುಜನಸುರಧೇನು ಸುದಯಾ । ಪರ ಸದಾರ್ತಜನೌಘರಕ್ಷಾ
ಕರ ಕೃಪಾಕರ ದೇವ ದೀನಾನತಜನೋದ್ಧರಣ
ಶರಣು ಸರ್ವೇಶ್ವರ ಸನಾತನ । ಶರಣು ಸಗುಣ ಸುಧಾರ್ಮಿಕಶ್ರುತ
ಶರಣು ರಘುಪತಿ ಶರಣು ಶರಣೆನುತಿರ್ದನಸುರೇಂದ್ರ ೬

ಶ್ರುತಿಶಿರೋಮಣಿ ಶರಣು ಶರಣ । ಪ್ರತಿಮ ಶರಣು ಸಮಸ್ತ ದಿವಿಜ
ಪ್ರತತಿವಂದಿತ ಶರಣು ಸನಕಾದ್ಯಖಿಳ ಮುನಿನಿಕರ
ನುತವಚೋವಿಸ್ತರಣ ಶರಣಾ । ಗತಜನೌಘ ಮನೋಭಿವಾಂಛಿತ
ವಿತತ ವರದಾನಂದಬಂಧುವೆ ಶರಣು ಶರಣೆಂದ ೭

ಮಾರುತಿ ಗರುಡನಂತೆ ವಿಭೀಷಣನ ಮುಂದೆ ಪ್ರಕಾಶಿಸಿದರು. ೪. ವರ ಕೊಡುವ ಸದ್ಯೋಜಾತ, ಶ್ರೇಷ್ಠ ತತ್ಪುರುಷ, ನಿರ್ಮಲ ವಾಮದೇವ, ಕಾಂತಿಯುತ ಅಘೋರ, ಈಶಾನ ಎಂಬ ಪಂಚಬ್ರಹ್ಮರೂಪದ ಶಿವನಂತೆ ನಾಲ್ಕು ದಿಕ್ಕಿನಲ್ಲಿ ನಿಂತ ನಾಲ್ಕು ಜನ ಮಂತ್ರಿಗಳೊಡನೆ ವಿಭೀಷಣನು ಕಪಿಸೈನ್ಯದ ಕಣ್ಣುಮನಸ್ಸುಗಳಿಗೆ ತೋರಿಬಂದನು. ೫. ರಾಜಕುಮಾರ ಆಲಿಸು. ಅತಿಶಯ ವೈಷ್ಣವಕಾಂತಿಗೆ ಜಗತ್ತಿನಲ್ಲಿ ಎಲ್ಲೆಯುಂಟೇ. ನಿಮ್ಮವರ ಸೈನ್ಯವನ್ನು ವಿಭೀಷಣನ ವೈಷ್ಣವಪ್ರಭೆಯು ಆವರಿಸಿತು. ಕೊನೆಯ ಪಾಳಯದಲ್ಲಿದ್ದ ಕಪಿಗಳು ಕಾತರದಿಂದ ಭೋ ಎಂದು ಕೂಗುತ್ತ ಎದ್ದುಬಂದು ನಾರಾಯಣನ ಸ್ಮರಣೆಯಲ್ಲಿ ನಿರತನಾದ ವಿಭೀಷಣನನ್ನು ಮರಗಳೊಡನೆ ಮುತ್ತಿದರು. ೬. "ಮರೆಹೊಕ್ಕವರ ಕಾಮಧೇನು, ದಯಾಶಾಲಿ, ದುಃಖಿಗಳ ರಕ್ಷಕ, ಕೃಪಾಳು, ದೇವ, ದೀನರನ್ನೂ ಶರಣಾಗತರನ್ನೂ ಉದ್ಧರಿಸುವವನೇ ಶರಣು, ಸರ್ವೇಶ್ವರ ಶರಣು, ಶಾಶ್ವತನೇ ಶರಣು, ಗುಣಪರಿಪೂರ್ಣ ಶರಣು, ಸದ್ಧರ್ಮಜ್ಞಾನಿಯೇ ಶರಣು, ರಘುಪತಿ ಶರಣು ಶರಣು" ಎನ್ನುತ್ತ ಸ್ತುತಿಸುತ್ತಿದ್ದ ವಿಭೀಷಣ. ೭. "ವೇದಶ್ರೇಷ್ಠನೇ ಶರಣು. ಭಕ್ತಶ್ರೇಷ್ಠ ಶರಣು, ಸಮಸ್ತ ದೇವತೆಗಳ ವಂದನೆಗಳನ್ನು ಸ್ವೀಕರಿಸುವವನೇ ಶರಣು, ಸನಕ ಸನಂದಾದಿ ಸಕಲ ಮುನಿಜನಗಳ ಸ್ತುತಿಗೊಳಗಾದವನೇ ಶರಣು, ಶರಣಾಗತ ಜನರ ಅಭಿಲಾಷೆಯನ್ನು ಈಡೇರಿಸುವವನೇ ಶರಣು, ವರವನ್ನು ಕೊಡುವ ಆನಂದ ಸ್ವರೂಪಿ ಬಂಧುವೇ ಶರಣು ಶರಣು" ಎಂದು ವಿಭೀಷಣ ಸ್ತೋತ್ರಮಾಡಿದ.

ಶರಣು ಶರಣೆಂದೊದಱಲಾ ಹರಿ । ಶರಣನೆಂಬಭಿಧಾನವನು ವಿ
ಸ್ತರಿಸಿದರು ಸನಕಾದಿಗಳು ಸಜ್ಜನಶಿರೋಮಣಿಗೆ
ಸುರರು ಗುಡಿಗಟ್ಟಿದರು ಮುತ್ತಿದ । ತರುಚರರು ಹಿಮ್ಮೆಟ್ಟಿದರು ಸಿರಿ
ಹರಿಪರಾಯಣರೇನು ಜಗದಲಿ ಧನ್ಯರೋಯೆಂದ ೮

ಒಸೆದು ಹೊಗಳುವ ಶ್ರುತಿತತಿಯನಾ । ಲಿಸದ ದೈವದ ಕರ್ಣದಲಿ ಸೊಗ
ಯಿಸಿತಲೈ ಶರಣನ ಸುಧಾಸಂಭೃತ ವಚೋಲಹರಿ
ಎಸಳುಗಂಗಳನುರುಕೃಪೋದಯ । ದೆಸಕದಲಿ ನೋಡಿದನು ನೂತನ
ಪಶುಪತಿಯಪೊಲು ಮೆಱೆವ ತೇಜೋಮಯ ವಿಭೀಷಣನ ೯

ಮನದ ಹರುಷದಲರಸ ಬಳಿಕಾ । ತನನು ಕಾಣಿಸಿಕೊಂಬೆನೆಂಬೀ
ನೆನಹನೇ ನಿಶ್ಚಯಿಸಿ ನೋಡಿದನನಿಲಜನ ಮೊಗವ
ಹನುಮನಾಳ್ದನ ಬಗೆಯಱಿದು ಹರಿ । ತನುಜಸೂನು ಸಮೇತ ನೂತನ
ವನರುಹಾಕ್ಷನ ದಾಸನಿದ್ದೆಡೆಗಾಗಿ ಲಂಘಿಸಿದ ೧೦

ತುಂಗಬಲ ಬಳಿಕಾಗಲಾ ಗಗ । ನಾಂಗಣದ ಗಮನದ ನಿಜೈಕ್ಯನ
ನಿಂಗಿತದಲಱಿದಱಿದನಂದಿನಪೂರ್ವ ದರುಶನವ
ಹೊಂಗಿದಾನಂದಾಶ್ರುಗಳಲಾ । ಲಿಂಗನಂಗೈದುಭಯಸಖ ಸುಖ
ಸಂಗದಲ್ಲಿ ಸಂದಣಿಸಿ ನಗುತಿಂತೆಂದನಸುರಂಗೆ ೧೧

೮. ವಿಭೀಷಣನು 'ಶರಣು ಶರಣು' ಎಂದು ಉಚ್ಚರಿಸುತ್ತಿರಲು ಸನಕಾದಿ ಮುನಿ ಶ್ರೇಷ್ಠರು ಸಜ್ಜನಶ್ರೇಷ್ಠ ರಾಮನಿಗೆ ಇವನು ಹರಿಭಕ್ತನೆಂಬ ವಿವರಣೆಯನ್ನು ಕೊಟ್ಟರು, ದೇವತೆಗಳು ರೋಮಾಂಚಗೊಂಡರು, ವಿಭೀಷಣನನ್ನು ಮುತ್ತಿದ ವಾನರರು ಹಿಂದಕ್ಕೆ ಸರಿದರು. ಶ್ರೀಹರಿಯ ಭಕ್ತಿಯಲ್ಲಿ ನಿರತನಾದವನು ಜಗತ್ತಿನಲ್ಲಿ ಏನು ಧನ್ಯನೋ ! ಎಂದು ವಾಲ್ಮೀಕಿಗಳು ವಿವರಿಸಿದರು. ೯. ಭಗವಂತನ ಮಹಿಮೆಯನ್ನು ಅಕ್ಕರೆಯಿಂದ ಸ್ತೋತ್ರಮಾಡುವ ವೇದಗಳನ್ನು ಕಿವಿಯಿಂದ ಕೇಳಿದ ಭಗವಂತನ ಕಿವಿಗಳಿಗೆ ಭಕ್ತನ ಅಮೃತ ತುಂಬಿದ ಮಾತುಗಳು ಸೊಗಸಿದವು. ಕಮಲದಳದಂತೆ ಕಣ್ಣುಳ್ಳ ರಾಮನು ನೂತನ ಶಿವನಂತೆ ಮೆರೆಯುವ ತೇಜಸ್ವಿ ವಿಭೀಷಣನನ್ನು ಕರುಣೆಯಿಂದ ದೃಷ್ಟಿಸಿದನು. ೧೦. ಮನಸ್ಸಿನ ಹರ್ಷದಿಂದ ಆತನನ್ನು ಕಾಣುವೆನೆಂಬ ಆಲೋಚನೆಯನ್ನು ನಿಶ್ಚಯಿಸಿ ರಾಮನು ಆಂಜನೇಯನ ಮುಖವನ್ನು ನೋಡಿದನು. ಹನುಮಂತನು ಒಡೆಯನ ಇಂಗಿತವನ್ನರಿತು ಅಂಗದನೊಡನೆ ಕಮಲಾಕ್ಷನ ಹೊಸ ಭಕ್ತ ವಿಭೀಷಣನ ಬಳಿಗೆ ನೆಗೆದನು. ೧೧. ಉಚ್ಚಬಲಶಾಲಿ ಹನುಮಂತನು ಆಕಾಶದಲ್ಲಿ ಬರುತ್ತಿದ್ದ ಭಕ್ತಿಪರವಶನಾದ ವಿಭೀಷಣನನ್ನು ಮುಖದಿಂದಲೇ ಅರಿತುಕೊಂಡನು ; ಅಂದು ತಾನು ಲಂಕೆಯಲ್ಲಿದ್ದಾಗ ಕಂಡ ಅಪೂರ್ವ ವ್ಯಕ್ತಿ ಇವನೇ ಎಂಬುದನ್ನು ತಿಳಿದು ಉಬ್ಬಿದನು. ಸಂತೋಷದ ಕಣ್ಣೀರು ಸುರಿಸುತ್ತ ವಿಭೀಷಣನನ್ನು ಅಪ್ಪಿಕೊಂಡು ಸ್ನೇಹದ ಸಹವಾಸಸುಖದಿಂದ ರೋಮಾಂಚಗೊಂಡನು, ಬಳಿಕ ನಗುತ್ತ ವಿಭೀಷಣನನ್ನು

ಬರವಿದೇನಿದ್ದಿದ್ದು ದಶಕಂ । ಧರನಸುಜ್ಞೆಯೊ ಮೇಣ್ ವಿವೇಕ
ಸ್ಫುರಣದುದಿತ ಭವಿಷ್ಯದನುಭವಗತಿಯ ಘಾಡಿಕೆಯೊ
ಎರಡರೊಳಗೇನೆಂದು ಬೆಸಗೊಳೆ । ವಿರಚಿಸಿದನುಭಯಾನುಮತ ವಿ
ಸ್ತರಣವನು ಬಳಿಕಾ ವಿಭೀಷಣನನಿಲತನಯಂಗೆ ೧೨

ಐಸೆ ಮತ್ತೇನೆಂದು ವೀರ ವಿ । ಭೀಷಣನ ಕಾಹಿಂಗೆ ವಾನರ
ವಾಸವನ ನಂದನನನಂಬಕಸಂಜ್ಞೆಯಿಂದಿರಿಸಿ
ಆ ಶರಣಜನವತ್ಸಲನ ನಿಜ । ದಾಸವರ್ಗಪ್ರಿಯನ ಮಾನವ
ವೇಷದಚ್ಯುತನೆಡೆಗೆ ಬಂದಿಂತೆಂದನಾ ಹನುಮ ೧೩

ಜೀಯ ಬಂದವನೀಗ ರಕ್ಕಸ । ರಾಯನನುಜನು ನೀತಿವಿದನಸ
ಹಾಯಶೂರನುದಾರ ಧೀರ ಗಭೀರ ಧಾರ್ಮಿಕನು
ಮಾಯೆ ಹೊಗದೀತನಲಿ ಹಿಂದೆ ಸ । ಹಾಯ ವಚನದಲೆನ್ನ ಬಂಧನ
ದಾಯತವ ಬಿಡಿಸಿದನು ತಪ್ಪಿಲ್ಲಸುರನೊಳಗೆಂದ ೧೪

ಮನಮುನಿಸು ಬಳಿಕಾಯ್ತು ಗಡ ಖಳ । ಜನಪನೊಡನೀತಂಗೆ ದೇವರ
ವನಿತೆಯನು ಬಿಡಹೇಳಿದರೆ ಬಿಡದೀ ವಿಭೀಷಣನ
ಅನುಜನೆಂದೋವದೆ ವಿರೋಧಿಸಿ । ಕನಲಿ ನೂಕಿದ ಗಡ ಭವತ್ಪದ
ವನರುಹವನೋಲೈಸಿ ಬದುಕಲು ಬಂದ ಗಡಯೆಂದ ೧೫

ಕುರಿತು ಈ ಮುಂದಿನಂತೆ ನುಡಿದನು. ೧೨. "ನಿನ್ನ ಬರವಿಗೆ ಏನು ಕಾರಣ ? ದಶಕಂಠನ ಅಪ್ಪಣೆಯೋ ಅಥವಾ ಮುಂದಿನ ಆಗುಹೋಗುಗಳ ತೀವ್ರ ಕಷ್ಟದ ವಿವೇಕಾನುಭವವೋ ? ಈ ಎರಡರೊಳಗೆ ಯಾವುದು ಕಾರಣ ?" ಎಂದು ಕೇಳಲು ವಿಭೀಷಣನು ತಮ್ಮಿಬ್ಬರ ನಡುವೆ ಉಂಟಾದ ಅಭಿಪ್ರಾಯಭೇದವನ್ನು ಆಂಜನೇಯನಿಗೆ ವಿಸ್ತರಿಸಿ ಹೇಳಿದನು. ೧೩, "ಹೌದೆ, ಮತ್ತೇನು ?" ಎಂದು ನುಡಿದು ಹನುಮಂತನು ಅಂಗದನನ್ನು ವೀರ ವಿಭೀಷಣನ ಕಾವಲಿಗೆ ಕಣ್ಣು ಸಂಜ್ಞೆಯಿಂದ ಇರಿಸಿ ಭಕ್ತಪ್ರಿಯ ಕಿಂಕರರಪ್ರೇಮಿ ಮಾನವವೇಷದ ಅಚ್ಯುತನಾದ ರಾಮನ ಬಳಿಗೆ ಬಂದು ಹೇಳಿದನು. ೧೪. "ಸ್ವಾಮಿ, ಈಗ ಬಂದಿರುವವನು ರಾಕ್ಷಸರಾಜ ರಾವಣನ ತಮ್ಮನು. ಇವನು ನೀತಿಜ್ಞ, ಅಸಹಾಯ ಶೂರ, ಉದಾರಿ, ಧೀರ, ಅತಿಶಯ ಧರ್ಮಿಷ್ಠ. ಇವನನ್ನು ಮಾಯೆ ಸೇರದು. ಹಿಂದೆ ನಾನು ಲಂಕೆಗೆ ಹೋಗಿದ್ದಾಗ ನನಗೆ ಬೆಂಬಲವಾಗಿ ನುಡಿದು ನನ್ನ ಬಂಧನವನ್ನು ಬಿಡಿಸಿದನು. ಇವನಲ್ಲಿ ತಪ್ಪಿಲ್ಲ" ಎಂದ ಹನುಮಂತ. ೧೫. "ರಾಕ್ಷಸರಾಜನಿಗೂ ಇವನಿಗೂ ಮನಸ್ತಾಪವುಂಟಾಯಿತು. ಸ್ವಾಮಿಯವರ ಪತ್ನಿಯನ್ನು ಬಿಟ್ಟುಬಿಡು ಎಂದು ಹೇಳಿದರೆ ಬಿಟ್ಟು ಕಳುಹಿಸದೆ ಈ ವಿಭೀಷಣನು ತನ್ನ ತಮ್ಮನೆಂಬುದನ್ನೂ ನೋಡದೆ ರಾವಣನು ವಿರೋಧಿಸಿ ಕೆರಳಿ ಇವನನ್ನು ನೂಕಿಬಿಟ್ಟನು. ಈತನು ಈಗ ತಮ್ಮ ಪಾದಕಮಲಗಳಿಗೆ ಸೇವೆ ಸಲ್ಲಿಸಲು

ಅಹುದು ಮತ್ತೇನೆಂದು ಜಾಂಬವ । ಮಿಹಿರಸುತ ಕೇಸರಿ ಸುಷೇಣರ
ವಿಹಿತ ವಚನಪ್ರೌಢಿಗಳನಾರೈದು ನಿಜಮತವ
ಸಹಭವನಲಱಿದುಳಿದ ಘನ ವಿ । ಗ್ರಹ ಸಮರ್ಥರಿಗೊರೆದು ರಿಪುಭಯ
ರಹಿತ ಬೋಳೆಯರಾಯ ಬಳಿಕಿಂತೆಂದನುಚಿತದಲಿ ೧೬

ಧುರದೊಳಿದಿರಾದವರನಿಱಿವುದು । ಶರಣುಹೊಕ್ಕರ ಸಲಹುವುದು ಪತಿ
ಕರಿಸುವುದು ಧರ್ಮವನಧರ್ಮವನಳಿವುದವನಿಯಲಿ
ಅರಸುಗಳಿಗಿದು ನಯವಿನಿತು ಗೋ । ಚರಿಸದಿರೆ ಹಗರಣದ ನಾಟಕ
ದರಸರೆನಿಸರೆ ಜಗದಲೆಂದನು ನಗುತ ರಘುನಾಥ ೧೭

ತೋಳ ಬಲುಹೆಮಗಿಲ್ಲದಿರೆ ಭಯ । ದೋಲಗವು ನಮಗೈಸಲೇ ದಿಟ
ಕೀಳು ಬಲರೊಳಹೊಕ್ಕು ಮಾಡುವುದೇನು ನಮ್ಮಾವನು
ಮೇಲೆ ಮಱಿಯೊಕ್ಕವರ ಸಲಹುವ । ಶೀಲ ನಮ್ಮದು ಬಂದವನನಾ
ಳೋಲಯಿಸಿಕೊಂಡಱಿವೆವೆಂದನು ದೂಷಣಧ್ವಂಸಿ ೧೮

ಇನತನೂಭವ ಕೇಳು ತನ್ನಯ । ತನುವನಿತ್ತಾದರೆಯು ಮಱಿಯೊ
ಕ್ಕನನು ಮನ್ನಿಸುವುದೆ ಮಹಾಕ್ಷತ್ರಿಯರ ಧರ್ಮ ಕಣ
ನಿನಗೆ ಹೇಳುವುದೇನು ನೀನ । ಜ್ಞನೆ ವಿಚಾರಿಸಿ ಕೇಳಿದಱಿಯಾ
ವಿನುತ ವಿಮಳ ಕಪೋತಚರಿತವನೆಂದನಾ ರಾಮ ೧೯

ಬಂದಿದ್ದಾನೆ" ಎಂದ ಹನುಮಂತ. ೧೬. "ಹೌದು ಮತ್ತೇನು !" ಎಂದು ಜಾಂಬವ, ಸುಗ್ರೀವ, ಕೇಸರಿ, ಸುಷೇಣ ಇವರುಗಳ ಉನ್ನತ ಅಭಿಪ್ರಾಯಗಳನ್ನು ವಿಚಾರಮಾಡಿ ನೋಡಿ ತಮ್ಮನೊಡನಾಲೋಚಿಸಿ ತನ್ನ ಅಭಿಪ್ರಾಯವನ್ನು ದೃಢ ಪಡಿಸಿಕೊಂಡು ಇತರ ಯುದ್ಧವೀರರಿಗೆ ಅದನ್ನು ತಿಳಿಸಿ ದೇವರುಗಳೊಡೆಯ ರಾಮನು ಮುಂದಿನ ರೀತಿಯಲ್ಲಿ ಯೋಗ್ಯವಾದ ಮಾತುಗಳನ್ನಾಡಿದನು. ೧೭. "ಯುದ್ಧ ದಲ್ಲಿ ಎದುರಿಸಿದವರನ್ನು ಕೊಲ್ಲುವುದು, ಶರಣಾಗತರನ್ನು ರಕ್ಷಿಸುವುದು, ಜಗತ್ತಿನಲ್ಲಿ ಧರ್ಮವನ್ನು ಅಂಗೀಕರಿಸಿ ಅಧರ್ಮವನ್ನು ನಾಶಪಡಿಸುವುದು-ಇದು ರಾಜರ ನೀತಿ. ಇಷ್ಟೂ ಅವರಿಗೆ ತೋರದಿದ್ದರೆ ಅಂಥವರು ಈ ಲೋಕದಲ್ಲಿ ನಾಟಕದ ನಟನೆಯ ವೇಷಹಾಕಿದ ರಾಜರು ಎನ್ನಿಸುವುದಿಲ್ಲವೇ ?" ಎಂದ ನಗುತ್ತ ರಘುನಾಥ. ೧೮. "ನಮಗೆ ತೋಳ್ಬಲವಿಲ್ಲದಿದ್ದ ಪಕ್ಷಕ್ಕೆ ನಾವು ಭಯವನ್ನಾಶ್ರಯಿಸಬೇಕು. ಅಲ್ಪ ಬಲವುಳ್ಳವರು ನಮ್ಮಲ್ಲಿ ಸೇರಿಕೊಂಡು ನಮ್ಮನ್ನು ಏನು ಮಾಡಬಲ್ಲರು. ಇದಕ್ಕೂ ಮಿಗಿಲಾಗಿ ಮರೆಹೊಕ್ಕವರನ್ನು ರಕ್ಷಿಸುವ ಚಾರಿತ್ರ್ಯ ನಮ್ಮದು. ನಮ್ಮ ಬಳಿಗೆ ಬಂದವನ ಸೇವೆಯನ್ನು ನೋಡಿ ತಿಳಿಯೋಣ" ಎಂದ ದೂಷಣನನ್ನು ಕೊಂದ ರಾಮ. ೧೯. "ಸೂರ್ಯಸುತ ಸುಗ್ರೀವ ಕೇಳು, ಸ್ವಂತ ದೇಹವನ್ನಿತ್ತಾದರೂ ಶರಣು ಬಂದವನನ್ನು ಕಾಪಾಡುವುದೇ ಮಹಾಕ್ಷತ್ರಿಯರ ಧರ್ಮ. ನಿನಗೆ ಹೇಳಬೇಕೇನು, ನೀನು ತಿಳಿಯದವನೆ ? ಸುಪ್ರಸಿದ್ಧವಾದ ಕಪೋತದ ಕಥೆಯನ್ನು ಕೇಳಿಲ್ಲವೇ ?"

ದೇವ ನಿಮ್ಮಯ ಮೈಸಿರಿಯ ಸೊಬ । ಗಾವ ದೇವರಿಗುಂಟು ದೇವರ
ದೇವನಲ್ಲಾ ನೀನು ಪ್ರಾಕೃತ ನರನೆ ನಾಟಕದ
ಏವವೆಮ್ಮಯ ಮತಿಗಳಖಿಳ ಕ । ಲಾವಿಶೇಷನೊಳೆಂದು ಕಲಿ ಸು
ಗ್ರೀವ ಜಾಂಬವ ಹನುಮ ನೀಲಾದಿಗಳು ಹೊಗಳಿದರು ೨೦

ಕರಸಿದನು ಬಳಿಕಿನಸುತಾದ್ಯರ । ವರ ವಚೋಭಿಪ್ರಾಯದಲಿ ನಿಜ
ಶರಣನನು ಶರಣಾಗತವ್ರಜಬಂಧು ಹರುಷದಲಿ
ತರುಣ ಕೇಳೈ ಕುಶನೆ ಗಗನದ । ತರಣಿ ಧರಣೀಮಂಡಲಕ್ಕವ
ತರಿಸಿತೆಂಬಂತಿಳಿದುದಾ ರಥವಾ ವಿಭೀಷಣನ ೨೧

ಆಯುಧವ ತನ್ನವರಿಗಿತ್ತು ನ । ಗಾಯತನು ಮಣಿಖಚಿತ ಕನಕದ
ಸಾಯಕವನಂಘ್ರಿಗೆ ಸಮರ್ಪಿಸಿ ಚಾಚಿದನು ಶಿರವ
ಕಾಯಬೇಕೆಲೆ ದೇವ ಭವಗತ । ಕಾಯನನು ಭವದೀಯ ಭಕ್ತನಿ
ಕಾಯ ಕರುಣಾಸ್ಪದನನೆಂದಡಗೆಡೆದನಂಘ್ರಿಯಲಿ ೨೨

ರಕ್ಷಿಸೆನ್ನನನಾಥಬಂಧುವೆ । ರಕ್ಷಿಸೈ ಕಾರುಣ್ಯಸಿಂಧುವೆ
ರಕ್ಷಿಸೈ ರಾಕ್ಷಸವಿಭೂಷಣನನು ವಿಭೀಷಣನ
ಅಕ್ಷಯನೆ ಅಭವನೆ ಜಗತ್ರಯ । ರಕ್ಷಕನೆ ರೌರವಪರಾಯಣ
ಶಿಕ್ಷಕನೆ ಶರಣಾಗತನ ಸಲಹೆಂದನಸುರೇಂದ್ರ ೨೩

ಎಂದನು ರಾಮ. ೨೦. "ಸ್ವಾಮಿ, ನಿಮ್ಮ ಹಾಗೆ ದೇಹಸೌಂದರ್ಯದ ಸೊಬಗು ಯಾವ ದೇವರಿಗಿದೆ. ನೀನು ದೇವರುಗಳ ದೇವನಲ್ಲವೇ. ನಾಟಕದ ಸಾಧಾರಣ ಮಾನವನೇ ನೀನು. ಸಮಸ್ತ ಕಲಾಗುಣಗಳುಳ್ಳವನಲ್ಲಿ ನಮ್ಮ ಬುದ್ಧಿಗಳೆಲ್ಲ ಏನು ಮಾಡಬಲ್ಲವು" ಎಂದು ವೀರ ಸುಗ್ರೀವ ಜಾಂಬವ ಹನುಮಂತ ನೀಲನೇ ಮೊದಲಾದವರು ಹೊಗಳಿದರು. ೨೧. ಬಳಿಕ ಸುಗ್ರೀವನೇ ಮೊದಲಾದವರ ಅಭಿಪ್ರಾಯದಂತೆ ಮರೆಹೊಕ್ಕವರ ಬಂಧುವಾದ ಶ್ರೀರಾಮನು ಸಂತೋಷದಿಂದ ತನ್ನ ಭಕ್ತನನ್ನು ಕರೆಸಿದನು. ತರುಣ ಕುಶನೇ ಕೇಳು, ಆಕಾಶದ ಸೂರ್ಯನು ಭೂಮಿಗೆ ಇಳಿಯಿತೋ ಎಂಬಂತೆ ವಿಭೀಷಣನ ರಥವು ಇಳಿದುಬಂದಿತು. ೨೨. ಆಯುಧವನ್ನು ತನ್ನ ಕಡೆಯವರ ಕೈಗೆ ಕೊಟ್ಟು ಪರ್ವತಸದೃಶ ವಿಭೀಷಣನು ರತ್ನಖಚಿತವಾದ ಚಿನ್ನದ ಕತ್ತಿಯನ್ನು ರಾಮಚಂದ್ರನ ಪಾದಗಳಲ್ಲಿಟ್ಟು ತಲೆಯನ್ನು ಚಾಚಿ ನಮಸ್ಕರಿಸಿದನು. "ದೇವ, ಮನೆ ಬಿಟ್ಟು ಬಂದ ಈ ನಿನ್ನ ಭಕ್ತರ ಕರುಣೆಗೆ ಆಶ್ರಯನಾದ ನನ್ನನ್ನು ಕಾಪಾಡಬೇಕು" ಎಂದು ಹೇಳುತ್ತ ಪಾದಗಳ ಮೇಲೆ ಬಿದ್ದನು. ೨೩. "ಅನಾಥಬಂಧು, ನನ್ನನ್ನು ರಕ್ಷಿಸು ; ಕರುಣಾಸಾಗರನೆ ರಕ್ಷಿಸಯ್ಯ ; ರಾಕ್ಷಸರಿಗಲಂಕಾರಪ್ರಾಯನಾದ ವಿಭೀಷಣನನ್ನು ರಕ್ಷಿಸು. ನಾಶರಹಿತನೆ, ಜನ್ಮವಿಹೀನನೇ, ಮೂರು ಲೋಕಗಳ ರಕ್ಷಕನೇ, ರೌರವನರಕನಿರತನನ್ನು ತಿದ್ದುವವನೇ ಶರಣು ಬಂದವನನ್ನು ಕಾಪಾಡು"

ನೀಲಮೇಘಶ್ಯಾಮ ನೀರಜ । ಲೋಲಲೋಚನ ಕಂಬುಕಂಠ ವಿ
ಶಾಲವಕ್ಷಸ್ಥಳ ಮನೋಹರವದನವಾರಿರುಹ
ಸ್ಥೂಲಕಂಧರ ಕಲಿತಮದಶುಂ । ಡಾಲಕರ ಕರಯುಗಳ ಸೀತಾ
ಲೋಲ ರಕ್ಷಿಸು ರಕ್ಷಿಸೈ ಶರಣಾಗತನನೆಂದ ೨೪

ಧ್ರುವನ ರಕ್ಷಿಸಿದಂತೆ ರವಿಸು । ಭವನ ರಕ್ಷಿಸಿದಂತೆ ದಿತಿಸಂ
ಭವ ಸುರೇಂದ್ರ ಮುನೀಂದ್ರ ಮಾರ್ಕಂಡೇಯ ನಾರದರ
ವಿವಿಧ ವಿಕೃತೋಪದ್ರಕೋಟಿಯ । ತವಿಸಿ ರಕ್ಷಿಸಿದಂತೆ ಮಾಯಾ
ಜವನಿಕೆಯ ಮಧುಕೈಟಭಾಂತಕ ರಕ್ಷಿಸುವುದೆಂದ ೨೫

ವರಗಜೇಂದ್ರನನಂಬರೀಶನ । ದುರಿತಶೀಲನಜಾಮಿಳನ ಶುಭ
ಚರಿತ ಧರ್ಮಾಂಗದನ ಕನಕಾಂಗದನನಂಗದನ
ಕರುಣದಲಿ ಕೈವಿಡಿದಪೊಲು ತವ । ಚರಣಕಮಲವನೆನ್ನ ಶಿರದೊಳ
ಗಿರಿಸಿ ವರಿಸು ವಿಲಾಸಮುಖದಿಂದೆನ್ನ ನೀನೆಂದ ೨೬

ಏಳು ಭಯಬೇಡೆಲೆ ವಿಭೀಷಣ । ಕೇಳು ಲಕ್ಷ್ಮಣನಂತೆ ಕಾಂಬೆ ನೃ
ಪಾಲ ದಶರಥನಾಣೆ ಮನದಲಿ ಚಿಂತೆ ಬೇಡೆಂದ
ಮೌಳಿಯನು ನೆಗಹಿದನು ಸೀತಾ । ಬಾಲಕಿಯನಪ್ಪುವ ಸುಕೋಮಲ
ತೋಳಿನಲಿ ತೆಗೆದಪ್ಪಿದನು ನಗುತಾ ವಿಭೀಷಣನ ೨೭

ಎಂದು ಕೇಳಿಕೊಂಡನು ವಿಭೀಷಣ. ೨೪. "ನೀಲಮೇಘಶ್ಯಾಮ, ಕಮಲನಯನ, ಶಂಖದಂತೆ ಕೊರಳುಳ್ಳವನೇ. ಅಗಲವಾದ ಎದೆಯುಳ್ಳವನೇ. ಮನೋಹರ ಮುಖ ಕಮಲವುಳ್ಳವನೇ, ಬಲವಾದ ಭುಜಗಳುಳ್ಳವನೇ, ಮದಿಸಿದ ಆನೆಗಳ ಸೊಂಡಿಲುಗಳಿಗೆ ಸಮಾನವಾದ ಎರಡು ಕೈಗಳುಳ್ಳವನೇ, ಸೀತಾಪ್ರಿಯನೇ ರಕ್ಷಿಸು, ಶರಣಾಗತನನ್ನು ರಕ್ಷಿಸಯ್ಯ" ಎಂದು ಪ್ರಾರ್ಥಿಸಿದನು ವಿಭೀಷಣ. ೨೫. "ಅನೇಕ ರೀತಿಯ ಅಸಂಖ್ಯಾತ ಅನಿಷ್ಟಗಳನ್ನು ನಾಶಗೊಳಿಸಿ ಧ್ರುವನನ್ನು ರಕ್ಷಿಸಿದ ಹಾಗೆ, ಸುಗ್ರೀವನನ್ನು ರಕ್ಷಿಸಿದ ಹಾಗೆ, ಪ್ರಹ್ಲಾದ ದೇವೇಂದ್ರರುಗಳನ್ನು ಕಾಪಾಡಿದಂತೆ ಮುನಿಶ್ರೇಷ್ಠರಾದ ಮಾರ್ಕಂಡೇಯರನ್ನು ಶಿವನು ರಕ್ಷಿಸಿದಂತೆ, ನಾರದನನ್ನು ರಕ್ಷಿಸಿದಂತೆ, ಮಾಯಾ ರೂಪ ಧರಿಸಿದವನೇ ಮಧು ಕೈಟಭಾಸುರವಿನಾಶಕನೇ ರಕ್ಷಿಸು" ಎಂದು ಕೇಳಿಕೊಂಡ ವಿಭೀಷಣ. ೨೬. "ಗಜೇಂದ್ರ, ಅಂಬರೀಶ, ದುಷ್ಟಚಾರಿತ್ರ್ಯದ ಅಜಾಮಿಳ, ಸನ್ನಡತೆಯ ಧರ್ಮಾಂಗದ, ರುಕ್ಮಾಂಗದ, ಅಂಗದ ಮೊದಲಾದವರನ್ನು ದಯೆಯಿಂದ ಉದ್ಧರಿಸಿದಂತೆ ನಿನ್ನ ಪಾದಕಮಲಗಳನ್ನು ನನ್ನ ತಲೆಯಲ್ಲಿಟ್ಟು ಅನುಗ್ರಹಿಸು, 'ನನ್ನನ್ನು ಹರ್ಷಚಿತ್ತನಾಗಿ ಸ್ವೀಕರಿಸು" ಎಂದು ಕೇಳಿಕೊಂಡ. ೨೭. "ಏಳು, ಅಂಜಿಕೆಯನ್ನು ಬಿಡು. ವಿಭೀಷಣ ಕೇಳು. ದಶರಥರಾಜನಾಣೆ ನಿನ್ನನ್ನು ಲಕ್ಷ್ಮಣನಂತೆ ಕಾಣುತ್ತೇನೆ, ಮನಸ್ಸಿನ ಚಿಂತೆಯನ್ನು ಬಿಡು" ಎಂದು ಹೇಳಿ ರಾಮನು ವಿಭೀಷಣನ ತಲೆಯನ್ನು ಎತ್ತಿದನು. ಸೀತೆಯನ್ನು ಆಲಿಂಗಿಸಿಕೊಳ್ಳುವ

ಅರಸ ರಾಮನ ಕರುಣದಳತೆಯ । ಹರುಹನಱಿದಿನಸೂನು ಜಾಂಬವ
ಹರಿತನುಜ ನಳ ನೀಲ ಮುಖ್ಯ ಸಮಸ್ತ ನಾಯಕರು
ಬರಸೆಳೆದು ಬಿಗಿಯಪ್ಪಿ ಬಿಡದಾ । ದರಿಸಿದರು ಸುರರುಬ್ಬಿ ಹೂವಿನ
ಸರಿಯ ಸುರಿದರು ಮೊಳಗುವಾನಕರವದ ರಭಸದಲಿ ೨೮

ಕರೆದು ರಘುಪತಿ ಬಳಿಕ ನಿಜವಿ । ಷ್ಟರದ ಕೆಲದಲಿ ನಿಲಿಸಿ ವಿಕಸಿತ
ವರವದನ ಸರಸಿಜದಿನೊಯ್ಯನೆ ಕೇಳ್ದನುಚಿತದಲಿ
ಪುರಜನಂಗಳು ಸುಖಿಗಳೇ ದಶ । ಶಿರನು ಪದುಳಿಗನೇ ನಿಜಾಗ್ರಜ
ವಿರಹವೇನು ನಿಮಿತ್ತ ಸಂಭವಿಸಿದುದು ನಿವಗೆಂದ ೨೯

ಜಗದ ವೀರರೊಳಗ್ಗಳನು ಸಂ । ಯುಗಸಮರ್ಥನು ಸುರನರೋರಗ
ಜಗತಿಗೊಡೆಯನು ಸುಪ್ರಸಿದ್ಧನು ಸಿರಿಯ ಸೊಂಪಿನಲಿ
ನಗಸುತಾವರನೊಲುಮೆ ನೆಟ್ಟನೆ । ಸೊಗಸಿಹುದು ನಿನ್ನಗ್ರಜಗೆ ನೀ
ನಗಲಿಬಹುದಿದು ಚಿತ್ರವೆಂದನು ರಾಮ ನಸುನಗುತ ೩೦

ಆವ ದೇಶದಲಾದಡೆಯು ಸತಿ । ಮಾವ ಸುತ ದೌಹಿತ್ರ ಮಿತ್ರಜ
ನಾವಳಿಯ ಜೋಡಿಸಲು ಬಹುದಗ್ರಜ ಸಹೋದರರ
ಆವ ಪರಿಯಲಿ ಗಳಿಸಬಹುದೀ । ಭೂವಳಯದಲಿ ನಿನ್ನ ಬರವಿನ
ಭಾವ ನಮಗೇನಱಿಯಬಂದಿರದೆಂದನಾ ರಾಮ ೩೧

ಕೋಮಲವಾದ ತೋಳುಗಳಿಂದ ವಿಭೀಷಣನನ್ನು ನಗುತ್ತ ಅಪ್ಪಿಕೊಂಡನು. ೨೮. ರಾಜಾರಾಮನ ಕರುಣೆಯ ವೈಶಾಲ್ಯದ ಪ್ರಮಾಣವನ್ನು ಅರಿತುಕೊಂಡು ಸುಗ್ರೀವ, ಜಾಂಬವ, ಅಂಗದ, ನಳ, ನೀಲ ಮೊದಲಾದ ಮುಖ್ಯನಾಯಕರು ವಿಭೀಷಣನನ್ನು ಹತ್ತಿರಕ್ಕೆ ಕರೆದು ಗಾಢಾಲಿಂಗನಪೂರ್ವಕ ಗೌರವಿಸಿದರು. ದೇವತೆಗಳು ಆನಂದದಿಂದ ಭೇರಿಯನ್ನು ಧ್ವನಿ ಮಾಡುತ್ತ ಹೂವಿನಮಳೆಗರೆದರು. ೨೯. ರಘುಪತಿಯು ವಿಭೀಷಣನನ್ನು ಹತ್ತಿರಕ್ಕೆ ಕರೆದು ತನ್ನ ಪೀಠದ ಪಕ್ಕದಲ್ಲಿ ಇರಿಸಿಕೊಂಡು ಪ್ರಸನ್ನಮುಖಕಮಲದಿಂದ "ಲಂಕಾಪುರವಾಸಿಗಳು ಸುಖಿಗಳೇ ? ದಶಕಂಠನು ಕ್ಷೇಮವೇ ? ಅಣ್ಣನನ್ನು ಅಗಲಲು ಏನು ಕಾರಣವುಂಟಾಯಿತು ?" ಎಂದು ಯೋಗ್ಯವಾದ ರೀತಿಯಲ್ಲಿ ಪ್ರಶ್ನಿಸಿದನು. ೩೦. "ನಿನ್ನ ಅಣ್ಣನು ಜಗತ್ತಿನ ವೀರರಲ್ಲಿ ಶ್ರೇಷ್ಠನು, ಯುದ್ಧದಲ್ಲಿ ಸಮರ್ಥನು, ದೇವ ಮಾನವ ಉರಗಲೋಕಗಳಿಗೊಡೆಯನು, ಸಂಪತ್ತಿನ ಸಮೃದ್ಧಿಯಲ್ಲಿ ಹೆಸರಾಂತವನು, ಗಿರಿಜಾವಲ್ಲಭನಲ್ಲಿ ಭಕ್ತಿ ನೆಲೆಸಿದವನು. ಇಂಥ ಅಣ್ಣನನ್ನು ಬಿಟ್ಟುಬರುವುದು ಆಶ್ಚರ್ಯ" ಎಂದನು ನಸುನಗುತ್ತ ರಾಮ. ೩೧. "ಹೆಂಡತಿ, ಮಾವ, ಮಗ, ಮೊಮ್ಮಗ, ಗೆಳೆಯರುಗಳನ್ನು ಯಾವ ದೇಶದಲ್ಲಾದರೂ ಸೇರಿಸಬಹುದು. ಅಣ್ಣ ಮತ್ತು ಸಹೋದರರನ್ನು ಜಗತ್ತಿನಲ್ಲಿ ಯಾವ ರೀತಿಯಲ್ಲಾದರೂ ಪಡೆಯಬಹುದು. ಆದರೆ ನಿನ್ನ ಬರುವಿಕೆಯ ಅಭಿಪ್ರಾಯವು ನಮ್ಮ

ದೇವ ಕೇಳ್ಪರನಾದರೆಯು ಹಿತ । ವಾವಗುಂಟವ ಬಂಧು ಬಂಧುವಿ
ಗಾವನಹಿತನು ಪರನು ತಾನದು ಸುಪ್ರಸಿದ್ಧವಲೆ
ಈವುದೇ ನಿಜಹಿತವ ತನ್ನ ಕ । ಳೇವರದ ರುಜೆಯಡವಿಯೌಷಧ
ವೀವವೊಲು ರಾಜೇಂದ್ರ ಚಿತ್ತೈಸೆಂದನಸುರೇಂದ್ರ ೩೨

ದೇವ ಕೇಳಿನ್ನೊಂದು ಜಗದಲಿ । ಜೀವಿಸುವುದುಂಟಾದಡಡವಿಯ
ಜೀವನವ ಕೊಂಡಿಹುದು ಮೆಲುವುದು ಗೆಡ್ಡೆಗೆಣಸುಗಳ
ಸೇವಿಸುವುದು ಚಮೂರ ಸಿಂಹ ಮೃ । ಗಾವಳಿಯನತಿಮೂರ್ಖ ದುಷ್ಕೃತ
ಜೀವಿಗಳ ಬಳಿವಿಡಿದು ಬದುಕುವುದುಚಿತವಲ್ಲೆಂದ ೩೩

ಬಾಳಬೇಕೆಂಬಾಸೆಯುಳ್ಳಡೆ । ಕೀಳುಗೃಹವೀಥಿಯಲಿ ಭಿಕ್ಷದ
ಕೂಳ ತಿರಿತಂದುಂಡು ಬದುಕುವುದಧಿಕಸೌಖ್ಯತರ
ಕೇಳಿದೈ ರಾಜೇಂದ್ರ ಮೂರ್ಖರ । ಮೇಳಮೇಳದ ಸುಖದಿ ಜೀವಿಪ
ಖೂಳ ವೃತ್ತಿಯ ಬದುಕು ಕಷ್ಟಕೆ ಕಷ್ಟತರವೆಂದ ೩೪

ಅದರಿನಘಸಂಘಾತವಣ್ಣನೊ । ಳುದಿಸಲುಳ್ಳಡೆ ಬಿಡುವುದೊಳ್ಳಿತೊ
ಹುದುಗಿ ದುರ್ಗತಿಗಿಳಿವುದೊಳ್ಳಿತೊ ದೇವ ಚಿತ್ತೈಸು
ವಿದಿತ ವೈದಿಕ ಲೌಕಿಕವ ಮೀ । ರಿದುದು ನಡವಳಿಯಣ್ಣಗೆಂಬೀ
ಪದನರಿದು ನಿಮ್ಮಂಘ್ರಿಕಮಲವ ಸಾರ್ದೆ ನಾನೆಂದ ೩೫

ಮನಸ್ಸಿಗೆ ತಿಳಿದುಬರುತ್ತಿಲ್ಲ” ಎಂದನು ರಾಮ. ೩೨. “ಸ್ವಾಮಿ, ಆಲಿಸು, ಹೊರಗಿನವನಾದರೂ ಯಾವನು ಹಿತವನೋ ಅವನು ಬಂಧು ; ಬಂಧುವಿಗೆ ಯಾವನು ಅಹಿತನೋ ಅವನು ಅನ್ಯನು. ಇದು ಜಗತ್ತಿನಲ್ಲಿ ಸುಪ್ರಸಿದ್ಧ. ಕಾಡಿನ ಔಷಧಿ ದೇಹಕ್ಕೆ ಹಿತವನ್ನುಂಟುಮಾಡುವಂತೆ ತನ್ನ ದೇಹದಲ್ಲಿ ಹುಟ್ಟಿದ ಕಾಹಿಲೆಯು ದೇಹಕ್ಕೆ ಸುಖವನ್ನು ಕೊಡುವುದೇ ? ಕೇಳು ರಾಜೇಂದ್ರ” ಎಂದ ವಿಭೀಷಣ. ೩೩. “ದೇವ ಕೇಳು, ಇನ್ನೊಂದು ಲೋಕದಲ್ಲಿ ಬದುಕುವುದು ಎನ್ನುವುದು ಇದ್ದ ಪಕ್ಷದಲ್ಲಿ ಈಗ ಅರಣ್ಯದಲ್ಲಿ ವಾಸಮಾಡಿಕೊಂಡು ಗೆಡ್ಡೆಗೆಣಸುಗಳನ್ನು ತಿಂದುಕೊಂಡು ಹುಲಿ ಸಿಂಹ ಮೊದಲಾದ ಮೃಗಗಳ ಸೇವೆಮಾಡಿಕೊಂಡಿರುವುದು ಉತ್ತಮ. ದುಷ್ಟಕಾರ್ಯಗಳನ್ನು ಮಾಡಿಕೊಂಡಿರುವವರನ್ನು ಅನುಸರಿಸಿ ಬದುಕುವುದು ಯೋಗ್ಯವಲ್ಲ” ಎಂದ ವಿಭೀಷಣ. ೩೪. “ಬದುಕಬೇಕು ಎಂಬ ಆಸೆಯಿದ್ದಲ್ಲಿ ಕೀಳುಜನರ ಮನೆಗಳಿರುವ ಬೀದಿಯಲ್ಲಿ ಭಿಕ್ಷೆ ಬೇಡಿ ಕೂಳು ತಿಂದು ಬದುಕುವುದು ಹೆಚ್ಚು ಸುಖಕರ. ಮೂರ್ಖರೊಡನೆ ವಿನೋದಗೋಷ್ಠಿಯಲ್ಲಿ ಸುಖದಿಂದ ಜೀವಿಸುವ ನೀಚವೃತ್ತಿಯ ಬಾಳು ಕಷ್ಟದಿಂದ ಅತಿಕಷ್ಟ” ಎಂದ ವಿಭೀಷಣ. ೩೫. “ಆದುದರಿಂದ ಪಾಪಕಾರ್ಯಗಳು ಅಣ್ಣನಿಂದ ನಡೆಯುವ ಹಾಗಿದ್ದರೆ ಅವನನ್ನು ಬಿಡುವುದು ಒಳ್ಳೆಯದೋ, ಅವನ ಮರೆಯಲ್ಲಿದ್ದುಕೊಂಡು ದುರ್ಗತಿಗೆ ಇಳಿಯುವುದು ಒಳ್ಳೆಯದೋ ? ನೀವು ಹೇಳಿ ದೇವ. ಆದುದರಿಂದ

ಐಸೆ ಮತ್ತೇನಾದಡೆಮ್ಮಯ । ಭಾಷೆಯನು ಕೇಳೆಲೆ ವಿಭೀಷಣ
ದೋಷಕಾರಿಯನಳಿದು ಲಂಕಾರಾಜ್ಯದೊಡೆತನವ
ಈ ಸರೋರುಹಬಂಧುವೀ ತಾ । ರೇಶನೀಧರೆ ರಾಮಕಥೆ ತಾ
ನೇಸುದಿನವುಳ್ಳನ್ನಬರ ನಿನಗಿತ್ತೆ ನಾನೆಂದ ೩೩

ಬಲುಹ ಬಲ್ಲುದರಿಂದ ಕಪಿಕುಲ । ತಿಲಕನಾಯೆಂದುಬ್ಬಿದನು ನೃಪ
ನೊಳಗ ಬಲ್ಲುದರಿಂದ ಜಾಂಬವದೇವ ಹಿಗ್ಗಿದನು
ಉಳಿದ ನೀಲಾಂಗದ ಭಟಾಳಿಗ । ಳೊಲಿದು ಕೊಂಡಾಡಿದರು ಲೇಸೆಂ
ದೊಲಿದು ಹೊಗಳಿದರಾಗ ತುಂಬುರ ನಾರದಾದಿಗಳು ೩೭

ಸುರರದೇನರಿಯರೆ ಸುಮಾಯಾ । ಚರಿತನೆಂಬುದನಮರಚಕ್ರೇ
ಶ್ವರನು ಬಳಿಕಿಳಿತಂದನಾಶಾಧೀಶರೊಗ್ಗಿನಲಿ
ಸುರಮುನಿಗಳೊಗ್ಗಾಯ್ತು ಸುಮನಸ । ತರುಣಿಯರು ಸಂದಣಿಸಿದರು ಪರಿ
ಪರಿಯ ಪರಮಾರ್ಧಾಭಿಷೇಕದ ವಸ್ತುಕಾರದಲಿ ೩೮

ಸವೆದುದರಮನೆ ವಿಶ್ವಕರ್ಮನ । ವಿವಿಧ ಚಿತ್ರೋತ್ಕರದಲಾನಕ
ನಿವಹವಬ್ಬರಿಸಿದವು ಮಂಗಳವಸ್ತುಕಾರದಲಿ
ದಿವಿಜಸತಿಯರು ಸಂದಣಿಸಿದರು । ನಿವಡಿಸಿದ ಸುಮುಹೂರ್ತದಲಿ ವೈ
ಭವದೊಳಾಯ್ತಭಿಷೇಕವಾ ರಾಜೇಂದ್ರಶರಣಂಗೆ ೩೯

ಎಲ್ಲರಿಗೂ ಗೊತ್ತಿರುವ ವೈದಿಕ ಲೌಕಿಕ ನಡೆವಳಿಕೆಯನ್ನು ಅಣ್ಣನು ಮೀರುವನೆಂಬುದನ್ನು ಅರಿತು ನಾನು ನಿಮ್ಮ ಪಾದಕಮಲಗಳ ಮರೆಹೊಕ್ಕೆ" ಎಂದ ವಿಭೀಷಣ. ೩೩. "ಹಾಗಿದ್ದರೆ ಮತ್ತೇನು ವಿಭೀಷಣ, ನಮ್ಮ ಪ್ರತಿಜ್ಞೆಯನ್ನು ಕೇಳು. ಪಾಪಿ ರಾವಣನನ್ನು ಕೊಂದು ಲಂಕಾರಾಜ್ಯದ ಆಧಿಪತ್ಯವನ್ನು ಈ ಸೂರ್ಯ ಈ ಚಂದ್ರ, ಈ ರಾಮಕಥೆ ಇರುವಷ್ಟು ದಿನಗಳೂ ನಿನಗೆ ವಹಿಸಿಕೊಟ್ಟೆ" ಎಂದ ರಾಮ. ೩೭. ರಾಮನ ಸಾಮರ್ಥ್ಯವನ್ನು ಬಲ್ಲ ಕಪಿಕುಲತಿಲಕ ಸುಗ್ರೀವನು 'ಆ' ಎಂದು ಸಂತೋಷದಿಂದ ಉಬ್ಬಿದನು. ರಾಮನ ಅಂತಃಸತ್ವವನ್ನು ತಿಳಿದಿದ್ದುದರಿಂದ ಜಾಂಬವನು ಹಿಗ್ಗಿದನು. ಇನ್ನು ಉಳಿದ ನೀಲ. ಅಂಗದ ಮೊದಲಾದ ವೀರರು ಆನಂದದಿಂದ ರಾಮನನ್ನು ಕೊಂಡಾಡಿದರು. ತುಂಬುರ ನಾರದರು ಶುಭವೆಂದು ಹೊಗಳಿ ಹರ್ಷಿಸಿದರು. ೩೮. ಈತನು ಮಾಯಾರೂಪಕನೆಂಬುದನ್ನು ದೇವತೆಗಳು ತಿಳಿಯದೆ ದೇವೇಂದ್ರನು ದಿಕ್ಪತಿಗಳ ಸಮೂಹದೊಡನೆ ಭೂಮಿಗೆ ಬಂದನು, ದೇವಋಷಿಗಳು ಗುಂಪುಗೂಡಿದರು. ವಿಧವಿಧವಾದ ಅಭಿಷೇಕದ ವಸ್ತುಗಳನ್ನು ತೆಗೆದುಕೊಂಡು ದೇವತಾ ಸ್ತ್ರೀಯರು ಬಂದು ನೆರೆದರು. ೩೯. ವಿಶ್ವಕರ್ಮನು ತರಹೇವಾರಿಯ ಚಿತ್ರಗಳಿಂದ ಅಲಂಕರಿಸಿ ಅರಮನೆಯನ್ನು ಸೃಷ್ಟಿಸಿದನು. ಭೇರಿಗಳು ಭೋರ್ಗರೆದವು. ಮಂಗಳ ವಸ್ತುಗಳೊಡನೆ ದೇವತಾಸ್ತ್ರೀಯರು ಬಂದರು. ಆರಿಸಿದ ಮುಹೂರ್ತದಲ್ಲಿ ಶ್ರೀರಾಮ

ಸೂಸಿದರು ಸೇಸೆಯನು ಸುರರ ಸು । ವಾಸಿನಿಯರಾರತಿಯ ಬೆಳಗುಜಿ
ಬಾಸಣಿಸೆ ಸುಳಿಸಿದರು ಬಣ್ಣದ ಸೊಡರ ಸೊಗಸಿನಲಿ
ವಾಸವಾದಿ ಸಮಸ್ತ ಸುರರು ವಿ । ಭೀಷಣನನಪ್ಪಿದರು ಜಾಂಬವ
ಕೀಶಪತಿ ಲಕ್ಷ್ಮಣರು ತಕ್ಕೈಸಿದರು ತವಕದಲಿ ೪೦

ವರವಿಭೀಷಣದೇವ ಲಂಕಾ । ಪುರದರಸನೆಂದಮರಪತಿ ಡಂ
ಗುರವ ಹೊಯ್ಸಿದನಮರ ವಾನರಕಟಕವೆರಡರಲಿ
ತರಣಿವಂಶದ ರಾಯ ತೊರವೆಯ । ನರಹರಿಯ ಸಿರಿಪಾದದಲಿ ನಿಜ
ಶಿರವ ಮಣಿದಮರೇಂದ್ರನಮರಾವತಿಗೆ ಬೀಳ್ಕೊಂಡ ೪೧

ಚಂದ್ರನ ಭಕ್ತನಿಗೆ ವೈಭವದಿಂದ ಅಭಿಷೇಕವು ನೆರವೇರಿತು. ೪೦. ದೇವತಾಸ್ತ್ರೀಯರು ಅಕ್ಷತೆಯನ್ನು ವಿಭೀಷಣನ ಮೇಲೆ ತಳಿದರು ; ಬಣ್ಣದ ದೀಪಗಳನ್ನು ಬೆಳಗಿ ಆರತಿಯನ್ನು ಎತ್ತಿದರು. ದೇವೇಂದ್ರನೇ ಮೊದಲಾದ ಸಮಸ್ತ ದೇವತೆಗಳು ವಿಭೀಷಣನನ್ನು ಆಲಿಂಗಿಸಿದರು. ಜಾಂಬವ, ವಾನರರೊಡೆಯ ಸುಗ್ರೀವ, ಲಕ್ಷ್ಮಣರು ಕುತೂಹಲದಿಂದ ಅಪ್ಪಿಕೊಂಡರು. ೪೧. "ವರವಿಭೀಷಣದೇವನು ಲಂಕಾಪುರದ ಅರಸ" ಎಂಬುದಾಗಿ ದೇವೇಂದ್ರನು ದೇವತೆಗಳ ಹಾಗೂ ವಾನರರ ಸೈನ್ಯಸಮೂಹಗಳೆರಡರಲ್ಲಿಯೂ ಡಂಗುರ ಹೊಡಿಸಿದನು. ತೊರವೆಯ ನರಹರಿಯ ಅವತಾರ ತಾಳಿದ ರವಿಕುಲದ ಅರಸ ರಾಮನ ಶ್ರೀಪಾದಗಳಿಗೆ ನಮಸ್ಕರಿಸಿ ದೇವೇಂದ್ರನು ಅಮರಾವತಿಗೆ ಹೊರಟನು.

# ನಾಲ್ಕನೆಯ ಸಂಧಿ

ಸೂಚನೆ ॥ ತುಡುಕಿದಂಬಿನಮೊನೆಯಲಬುಧಿಯ । ಕಡುಹ ಭಂಗಿಸಿ ಸೇತುಬಂಧನ
ಕೊಡಬಡಿಸಿದನು ವೀರ ಧೀರೋದ್ಧಾತ ರಘುನಾಥ

ತರಣಿವಂಶಲಲಾಮಸುತ ಕೇ । ಳರಿಯ ಬಳಿಯಿಂ ಬಂದ ನಿಜಪದ
ಶರಣಗಮಳಾಭ್ಯುದಯದೊಸಗೆಯಮೇಲೆ ರಘುನಾಥ
ಹೊರದ ಹರುಷದಲೊಯ್ಯನಟವೀ । ಚರಕುಲೇಂದ್ರನ ಮೊಗವನೀಕ್ಷಿಸು
ತರಿವಧಃಪ್ರಾರಂಭದಾಹವಕೇನು ಹದನೆಂದ ೧

ಅರಸ ಚಿತ್ತೈಸೈಸಲೇ ಸಂ । ಗರದ ಬಿಡಯಕೆ ಬೀದಿಯಿದೆ ಸುರ
ಸರಣಿ ಬೆಳವಡೆ ಬೇಹ ಭಟರಿದೆ ಬೇಡಿದಂದದಲಿ
ಗಿರಿತರುಗಳಿವೆ ಕೈದುಗಳಿಗು । ಬ್ಬರದ ತೋಳಿವೆ ತೋಟಿಗಬುಧಿಯ
ಹರುಹ ಹೇಳದಿರೊಂದು ನಿಮಿಷಕೆ ಹೂಳಿಸುವೆನೆಂದ ೨

ತೋಱಿಸುವೆನಹಿತನನು ದೇವರ । ತೂಱುಗಣೆ ತುದಿಗಱಿಯ ಜೀವವ
ಜಾಱಿಸಲಿ ಮೇಣುಳುಹಲಾ ಶರವಸಮಸಮರದಲಿ
ಬೇಱೆ ದೇವರ ಮತಿಯ ಮೈಸಿರಿ । ತೋಱಲದ ನಾನಱಿಯೆನೀ ಪರಿ
ತೋಱಿ ನುಡಿದುದಕೋಸರಿಸಿದಡೆ ಭೃತ್ಯನಲ್ಲೆಂದ ೩

ಸೂಚನೆ। ಹೂಡಿದ ಬಾಣದ ಮೊನೆಯಿಂದ ಸಾಗರನ ದರ್ಪವನ್ನು ಮುರಿದು ಸೇತುವೆಯನ್ನು ಕಟ್ಟಲು ಉನ್ನತ ಧೈರ್ಯಶಾಲಿಯಾದ ವೀರ ರಘುನಾಥನು ಅವನನ್ನು ಒಪ್ಪಿಸಿದನು. ೧. ಸೂರ್ಯವಂಶಭೂಷಣನ ಪುತ್ರನೇ ಕೇಳು, ಶತ್ರುವಿನ ಬಳಿಯಿಂದ ಬಂದ ತನ್ನ ಭಕ್ತನಿಗೆ ಮಂಗಳದ ಏಳಿಗೆಯನ್ನು ನೆರವೇರಿಸಿದ ಅನಂತರ ರಘುನಾಥನು ಹರ್ಷಗೊಂಡು ಕಪಿಕುಲದೊಡೆಯ ಸುಗ್ರೀವನ ಮುಖವನ್ನು ನೋಡುತ್ತ, "ಶತ್ರುವಧೆಗಾಗಿ ಯುದ್ಧವನ್ನಾರಂಭಿಸಲು ಮುಂದಕ್ಕೆ ಏನು ಕ್ರಮವನ್ನು ಕೈಗೊಳ್ಳಬೇಕು ?" ಎಂದು ಪ್ರಶ್ನಿಸಿದನು. ೨. "ಅರಸ, ಆಲಿಸು. ಸಂಗ್ರಾಮದ ಸೆಣಸಾಟಕ್ಕೆ ದಾರಿಯಿದೆ. ಆಕಾಶದೆತ್ತರಕ್ಕೆ ಬೆಳೆಯುವಂಥ ವೀರರು ಬೇಕಾದಹಾಗೆ ಇದ್ದಾರೆ. ಆಯುಧಗಳಿಗೆ ಕೊರತೆಯೇ, ಬೇಕಾದಷ್ಟು ಬೆಟ್ಟಮರಗಳಿವೆ. ಯುದ್ಧಮಾಡಲು ಬಲವಾದ ತೋಳುಗಳಿವೆ. ಈ ಸಮುದ್ರದ ವಿಸ್ತಾರವನ್ನು ಕುರಿತು ಹೇಳುವೆಯ? ಒಂದು ನಿಮಿಷಕ್ಕೆ ಇದನ್ನು ಮುಚ್ಚಿಸಿಬಿಡುವೆ" ಎಂದ ಸುಗ್ರೀವ. ೩. "ನಾನು ಶತ್ರುವನ್ನು ತೋರಿಸಿಕೊಡುವೆನು ; ಪ್ರಭುಗಳ ತುದಿಯಲ್ಲಿ ಗರಿಯುಳ್ಳ ಎಸೆಬಾಣಗಳು ಅಸಾಧಾರಣ ಯುದ್ಧದಲ್ಲಿ ಶತ್ರುವಿನ ಜೀವವನ್ನು ತೆಗೆಯಲಿ ಅಥವಾ ಉಳಿಸಲಿ. ಸ್ವಾಮಿಯವರ ಆಲೋಚನೆ ಬೇರೆಯಾದರೆ ನನಗೆ ತಿಳಿಯದು. ಈ ರೀತಿ ನುಡಿದು ಹಿಂಜರಿದರೆ ನಾನು ನಿನ್ನ ಸೇವಕನಲ್ಲ" ಎಂದ

ಎಲೆ ಕಪೀಶ್ವರ ನುಡಿದ ನುಡಿಯಿದು । ಕಲಿಗಳಂಗವೆ ಹೂಳಲೇಕೀ
ಜಲಧಿಯನು ತೋಱಿಸಲದೇಕೀ ರಾಘವೇಂದ್ರಂಗೆ
ಹುಲುಪರಿಯ ರಕ್ಕಸನನಿದು ಬಡ । ಕೆಲಸ ಕೇಳೀ ಬಾಲವಂದನೆ
ಕಳುಹಿ ಹಿಡಿತರಿಸುವೆನೆನುತ್ತ ಗವಾಕ್ಷ ಗರ್ಜಿಸಿದ ೪

ಕೆಲಕೆ ಸಾರ್ಕಟ್ಟಾಳುತನದ । ಗ್ಗಳಿಕೆಯೋ ರಿಪುಭಟನನೊಬ್ಬನ
ನೆಳೆದುತಹುದಿದು ಪಂಥವೇ ಪೌರುಷದ ಪದ್ಧತಿಗೆ
ಖಳನನಾ ಖಳಬಲವನಾ ಹಗೆ । ಹೊಳಲ ನಿಮಿಷದಲಿದಿರಿನಲಿ ತಂ
ದಿಳುಹದಿರೆ ತಾ ಬಂಟನಲ್ಲೆಂದೊದಱಿದನು ಗವಯ ೫

ಕಡಲನುಳುಹಿ ವಿರೋಧಿಯನು ಖಳ । ಪಡೆಸಹಿತ ಪುರಸಹಿತ ತಂದೀ
ತಡಿಯಲಿಳಿಸುವುದಾವ ಕೀರ್ತಿ ಭಟಂಗೆ ಭುವನದಲಿ
ಕೊಡನಮಗನಂದದಲಿ ಜಲಧಿಯ । ಕುಡಿದು ರಿಪುರಾವಣನ ತಲೆಯನು
ಹೊಡೆದು ತಂದೊಪ್ಪಿಸುವೆನೆಂದುರಿದೆದ್ದನಾ ಶರಭ ೬

ಕುಡಿವುದರಿದಲ್ಲಂಬುನಿಧಿಯನು । ಪೊಡೆವುದರಿದಲ್ಲರಿಯ ತಲೆಯನು
ಬೆಡಗಿದೇತಱಿದೆಲೆ ವನೌಕಸರರಸ ಚಿತ್ತೈಸು
ಒಡೆವೆನೀ ಬ್ರಹ್ಮಾಂಡಭಾಂಡವ । ನಡಿಮುಗುಚುವೆನು ಧರೆಯನರಿಭಟ
ನೆಡೆಯ ಕೆಲಸವಿದೇನೆನುತ ಚುಬುಕಿಱಿದನಾ ನೀಲ ೭

ಸುಗ್ರೀವ. ೪. "ಅಯ್ಯಾ ವಾನರರಾಜ, ನೀನಾಡಿದ ಮಾತು ವೀರರಿಗೆ ಯೋಗ್ಯವೇ. ಈ ಸಮುದ್ರವನ್ನು ಹೂತುಹಾಕಬೇಕೇಕೆ. ನೀಚ ರಾಕ್ಷಸನನ್ನು ರಾಘವೇಂದ್ರನಿಗೆ ಏತಕ್ಕೆ ತೋರಿಸಬೇಕು. ಇದು ಸಣ್ಣ ಕೆಲಸ. ಈ ಬಾಲ ಒಂದನ್ನೇ ಕಳುಹಿಸಿ ಶತ್ರುವನ್ನು ಹಿಡಿತರಿಸುವೆನು" ಎನ್ನುತ್ತ ಗವಾಕ್ಷ ಗರ್ಜಿಸಿದ. ೫. "ಆಚೆ ಹೋಗು. ನೀನು ಹೇಳಿದುದು ಮಹಾವೀರರಿಗೆ ದೊಡ್ಡಸ್ತಿಕೆಯೋ ? ಶತ್ರುವೀರನೊಬ್ಬನನ್ನು ಈ ರೀತಿ ಎಳೆದುತರುವೆನೆಂದು ಪ್ರತಿಜ್ಞೆಮಾಡುವುದು ಸಾಹಸಿಗಳಿಗೆ ಪದ್ಧತಿಯೇ ? ಆ ರಾಕ್ಷಸನನ್ನೂ ರಾಕ್ಷಸಸೈನ್ಯವನ್ನೂ ಶತ್ರುನಗರವನ್ನೂ ಒಂದು ನಿಮಿಷದಲ್ಲಿ ಇಲ್ಲಿಗೆ ಹೊತ್ತುತಂದಿಳಿಸದಿದ್ದರೆ ನಾನು ವೀರನೇ ಅಲ್ಲ" ಎಂದು ಗವಯ ಕೂಗಿದನು. ೬. "ಸಾಗರವನ್ನು ಉಳಿಸಿ ಶತ್ರುವನ್ನು ರಾಕ್ಷಸಸೈನ್ಯ ಸಮೇತ ಅವನ ನಗರ ಸಮೇತ ಈ ಸಾಗರದ ದಡದಲ್ಲಿ ತಂದಿಳಿಸುವುದು ಈ ಲೋಕದಲ್ಲಿ ವೀರನಿಗೆ ಕೀರ್ತಿ ತರುವುದೇ ? ಅಗಸ್ತ್ಯನಂತೆ ಸಮುದ್ರವನ್ನು ಕುಡಿದು ಶತ್ರು ರಾವಣನ ತಲೆಯನ್ನು ಕತ್ತರಿಸಿ ತಂದೊಪ್ಪಿಸುವೆನು" ಎಂದು ಶರಭ ಕೋಪದಿಂದ ನುಡಿದನು. ೭. "ಸಮುದ್ರವನ್ನು ಕುಡಿಯುವುದೇನಸಾಧ್ಯವಲ್ಲ ; ಶತ್ರುವಿನ ತಲೆಯನ್ನು ಕಡಿಯುವುದೂ ಅಸಾಧ್ಯವಲ್ಲ. ಎಲೈ ಕಪೀಂದ್ರನೇ ಕೇಳು, ಇದೇನು ಮಹಾ ಆಶ್ಚರ್ಯ. ನಾನಾದರೊ ಈ ಬ್ರಹ್ಮಾಂಡವೆಂಬ ಮಡಕೆಯನ್ನು ಒಡೆದುಹಾಕುವೆನು. ಈ ಭೂಮಿಯನ್ನು ಅಡಿಮೇಲು ಮಾಡುವೆನು. ಶತ್ರುವೀರನ ಬಳಿಯ ಕೆಲಸವೇನು ದೊಡ್ಡದು"

ಅಂಗವೇತಱದಿದುವೆ ಸುಭಟರೋ । ತುಂಗರಿಗೆ ಕೇಳಲಿ ಕಪೀಶ್ವರ
ನುಂಗುವೆನು ನೀರಜಭವಾಂಡವನಾ ಬಹಿರ್ಜಲವ
ಇಂಗಿಸುವೆ ಮತ್ತುಳಿದ ಕೆಲಸವ । ಜಂಗುಳವದೇನುಂಟು ಹೇಳೆಂ
ದಂಗದನು ಗರ್ಜಿಸಿದನೂರ್ಜಿತ ಶೌರ‍್ಯದೇಳ್ಗೆಯಲಿ ೮

ಕೇಳಿದೈ ಬಳಿಕುಳಿದ ಶತಬಲಿ । ವಾಲಿಸುತ ಗಜ ವೃಷಭ ಸಮರಾ
ಭೀಳ ಮೈಂದ ದ್ವಿವಿಧ ದುರ್ಮುಖ ಸುಮುಖರೆಂಬುವರು
ತೂಳುವಬುಧಿಯ ಸಬುದದವೊಲು । ಬ್ಬೇಳುವಗ್ಗದ ಗಾಡಿಕೆಯ ಕ
ಟ್ಟಾಳುತನವನು ಮೆಱದರಿದಿರಲಿ ರಾಘವೇಶ್ವರನ ೯

ಭಟರ ಹೊಳಕೆಯ ಪಂಥದುಬ್ಬಿನ । ಪಟುಪರಾಕ್ರಮದುದಿತ ವಾಕ್ಯ
ಸ್ಫುಟ ಪರಿಗ್ರಹಕರಸ ಹಿಗ್ಗಿದನಧಿಕಹರುಷದಲಿ
ಘಟನೆಯಾವುದೊ ತಮ್ಮ ನುಡಿವು । ತ್ಕಟ ಮನಃಪ್ರುಷ್ಟತೆಯ ರಣಸಂ
ಘಟನೆಗೆಂದವನೀಶ ನೋಡಿದನನುಜನಾನನವ ೧೦

ಅರಸ ಚಿತ್ತೈಸೇಳು ಶರಧಿಯ । ಹೊಱಗಿರಲಿ ರಿಪುಪುರವಜಾಂಡದ
ಶಿರದ ಮೇಲಿರಲಲ್ಲಿಗಿಲ್ಲಿಗೆ ಬಾಣಪಂಜರವ
ವಿರಚಿಸುವೆನಮರಾದ್ರಿಯನು ಕಿ । ತ್ತಿರಿಸಲಣುವಿಗೆ ತಗ್ಗಿದರೆ ತವ
ಚರಣಸೇವಕನಲ್ಲ ಮೇಲೇನುಂಟು ಬೆಸಸೆಂದ ೧೧

ಎಂದು ನೀಲನು ಹೇಳಿದ್ದನು. ೮. "ಶ್ರೇಷ್ಠವೀರರಿಗೆ ಇದೆಂಥ ಸಾಹಸ. ಸುಗ್ರೀವ ಕೇಳು, ಬ್ರಹ್ಮಾಂಡವನ್ನು ನುಂಗುವೆನು ; ಮೇಲಿನ ನೀರನ್ನು ಬತ್ತಿಸುವೆನು. ಇನ್ನುಳಿದ ಅತಿಶಯವಾದ ಕೆಲಸವದೇನುಂಟು ಅದನ್ನು ಹೇಳು" ಎಂದು ಅಂಗದನು ಪರಾಕ್ರಮಾತಿಶಯದಿಂದ ಗರ್ಜಿಸಿದನು. ೯. ಕೇಳಿದೆಯಾ ಕುಶ, ಅನಂತರ ಇನ್ನುಳಿದ ಶತಬಲಿ, ವಾಲಿಕುಮಾರ, ಗಜ, ವೃಷಭ, ಕದನಭಯಂಕರ ಮೈಂದ, ದ್ವಿವಿಧ, ದುರ್ಮುಖ ಸುಮುಖರೆಂಬ ವೀರರು ಮುನ್ನುಗ್ಗಿಬರುವ ಸಮುದ್ರದ ಘೋರ್ಗರೆತದಂತೆ ಉಕ್ಕಿ ಮೇಲೇಳುವ ಅತಿಶಯ ಪರಾಕ್ರಮವನ್ನು ರಾಘವೇಶ್ವರನ ಎದುರಿನಲ್ಲಿ ಪ್ರದರ್ಶಿಸಿದರು. ೧೦. ಕಪಿವೀರರು ಪ್ರಕಟಿಸಿದ ಸ್ಪರ್ಧೆಯಿಂದ ಕೂಡಿದ ಉತ್ಸಾಹಪೂರಿತವಾದ ಉತ್ಕಟ ಪರಾಕ್ರಮದ ಶಪಥದ ಸ್ಪಷ್ಟ ಮಾತುಗಳನ್ನು ಕೇಳಿ ಆತ್ಮಾನಂದದಿಂದ ರಾಮನು ಹಿಗ್ಗಿದನು. "ಅತ್ಯಂತ ಬುದ್ಧಿಮತ್ತೆಯ ಯುದ್ಧಕಾರ್ಯಕ್ಕೆ ಮುಂದೆ ಮಾಡಬೇಕಾದ ಕಾರ್ಯವೇನು, ಲಕ್ಷ್ಮಣ ಹೇಳು" ಎಂದು ರಾಮನು ತಮ್ಮನ ಮುಖವನ್ನು ನೋಡಿದ. ೧೧. "ರಾಜಾರಾಮನೇ ಕೇಳು, ಶತ್ರುನಗರವು ಸಮುದ್ರದ ಹೊರಗಿರಲಿ, ಬ್ರಹ್ಮಾಂಡದ ನೆತ್ತಿಯಲ್ಲಿರಲಿ, ಅಲ್ಲಿಂದ ಇಲ್ಲಿಗೆ ಬಾಣಗಳಿಂದ ಪಂಜರವನ್ನು ನಿರ್ಮಿಸಿಬಿಡುವೆನು. ಮೇರು ಪರ್ವತವನ್ನು ಕಿತ್ತಿಡುವೆನು. ಒಂದು ಅಣುವಿಗೆ ಹೆದರಿದರೂ ನಿನ್ನ ಪಾದಸೇವಕನಲ್ಲ;

ಅನುಜನಧಿಕಪರಾಕ್ರಮದ ನುಡಿ । ಗಿನಕುಲೇಂದ್ರನು ಹಿಗ್ಗಿ ಹನುಮನ
ಮನವ ನೋಡುವೆನೆನುತ ನುಡಿದನು ಪವನತನುಜಂಗೆ
ನಿನಗೆ ತೋಚಿದ ಮತಿಯು ಹದನೇ । ನೆನೆ ಸಮೀರಜನೆದ್ದು ಕೈಮುಗಿ
ದಿನಕುಲದ ರಾಯಂಗೆ ಬಿನ್ನಹ ಮಾಡಿದನು ಬಳಿಕ ೧೨

ಏತಜಿವನಾನೀ ಕಪೀಂದ್ರ । ಖ್ಯಾತರಲಿ ಬಿನ್ನಹವ ಮಾಡುವ
ಮಾತದಾವುದು ಜೀಯ ದೇವರ ನೇಮವೆನಿತನಿತ
ಓತು ಶಿರದಲಿ ಧರಿಸಿ ನಡೆಸುವು । ದೇ ತನಗೆ ಕರ್ತವ್ಯವೆಂದು ವಿ
ಧೂತರಿಪು ಬಿನ್ನೈಸಿದನು ಭಾಸ್ಕರಕುಲೇಂದ್ರಂಗೆ ೧೩

ಮೆಚ್ಚಿದನು ಪವನಜನ ಬಿನ್ನಹ । ದೊಚ್ಚತಕೆ ಹಿರಿದಾಗಿ ಮನದಲಿ
ಹೆಚ್ಚಿದನು ಹನುಮಂತದೇವನ ಬಲದ ಭಾರಣೆಗೆ
ಒಚ್ಚತದ ನಿಜಸತಿಯನೊಯ್ದನ । ಬಿಚ್ಚಿ ಬಂದವನಲಿ ವಿಶೇಷವ
ನುಚ್ಚಿನೋಡುವೆನೆನುತ ನುಡಿಸಿದನಾ ವಿಭೀಷಣನ ೧೪

ಏನು ನಿನ್ನಭಿಮತ ಮಹೋದಧಿ । ಗೇನುಪಾಯ ದಶಾನನನ ವಧೆ
ಗೇನು ಬುದ್ಧಿ ವಿಚಾರವಾವುದು ರಾಜಕಾರಿಯದ
ನೀನು ನಮ್ಮೊಳಗೈಸಲೇ ಸಂ । ಧಾನ ಸಮಯೋಚಿತದ ಕೃತ್ಯಕೆ
ದೇನು ಮನದಲಿ ಕಂಡೆಯೆಂದನು ನಗುತ ರಘುನಾಥ ೧೫

ಇದರ ಮೇಲಿನ್ನೇನು" ಎಂದು ಲಕ್ಷ್ಮಣನು ಪ್ರಶ್ನಿಸಿದನು. ೧೨. ತಮ್ಮನ ಪರಾಕ್ರಮಾತಿಶಯದ ಮಾತುಗಳನ್ನು ಕೇಳಿ ರವಿವಂಶದೊಡೆಯನು ಹಿಗ್ಗಿ ಹನುಮಂತನ ಮನಸ್ಸನ್ನು ನೋಡೋಣ ಎಂದು ಹನುಮಂತನನ್ನು "ನಿನ್ನ ಬುದ್ಧಿಗೆ ಏನು ತೋರುತ್ತದೆ ?" ಎಂದು ಪ್ರಶ್ನಿಸಿದನು. ಆಗ ಹನುಮಂತನು ಎದ್ದು ಕೈಮುಗಿದುಕೊಂಡು ಸೂರ್ಯವಂಶದರಸ ರಾಮನಿಗೆ ವಿಜ್ಞಾಪನೆ ಮಾಡಿದನು. ೧೩. "ಈ ಹೆಸರಾಂತ ಕಪಿನಾಯಕರುಗಳಲ್ಲಿ ನಾನೆಷ್ಟರವನು. ನಾನು ವಿನಂತಿಮಾಡಿಕೊಳ್ಳುವ ಮಾತು ಯಾವುದಿದೆ ? ಸ್ವಾಮಿ, ತಮ್ಮ ಅಪ್ಪಣೆ ಎಷ್ಟೋ ಅಷ್ಟನ್ನು ಭಕ್ತಿಯಿಂದ ತಲೆಯ ಮೇಲೆ ಹೊತ್ತು ನಡೆಸುವುದೇ ನನ್ನ ಕರ್ತವ್ಯ" ಎಂದು ಅಂಜಿಸುವವರ ಶತ್ರುವಾದ ಹನುಮಂತನು ರವಿಕುಲದೊಡೆಯನಿಗೆ ಬಿನ್ನಹಮಾಡಿದನು. ೧೪. ಮಾರುತಿಯ ವಿನಂತಿಯ ಸತ್ಯಕ್ಕೆ ರಾಮನು ಮೆಚ್ಚಿದನು ; ಹನುಮಂತದೇವನ ಅತಿಶಯ ಸಾಮರ್ಥ್ಯಕ್ಕೆ ಮನಸ್ಸಿನಲ್ಲಿ ವಿಶೇಷವಾಗಿ ಉಬ್ಬಿದನು. ತನ್ನ ಪ್ರಿಯಪತ್ನಿಯನ್ನು ಕದ್ದೊಯ್ದ ರಾವಣನನ್ನು ಬಿಟ್ಟು ಬಂದವನನ್ನು ಪರೀಕ್ಷಿಸಿ ನೋಡುವೆನು ಎನ್ನುತ್ತ ವಿಭೀಷಣನನ್ನು ಮಾತನಾಡಿಸಿದನು. ೧೫. "ನಿನ್ನ ಅಭಿಪ್ರಾಯವೇನು ? ಈ ಮಹಾಸಾಗರಕ್ಕೆ ಏನುಪಾಯ ? ದಶಕಂಠನನ್ನು ಕೊಲ್ಲಲು ಏನು ಯೋಚನೆ ? ರಾಜಕಾರ್ಯದ ಬಗ್ಗೆ ನಿನ್ನ ವಿಚಾರವೇನು ? ನೀನು ನಮ್ಮನ್ನು ಸೇರಿದವನಲ್ಲವೇ? ಸಮಯೋಚಿತವಾದ ಸಂಧಿಕಾರ್ಯದ ಬಗ್ಗೆ, ನಿನ್ನ ಮನಸ್ಸಿ

ದೇವ ನಿಮ್ಮಯ ಮನದ ಮಹಿಮೆಯ । ನಾವನೈ ಬಲ್ಲವನು ನೀ ಮನು
ಜಾವತಾರದ ವಿಷ್ಣುವೆಂದೇನಱಿಯದೇ ಲೋಕ
ಆವನೈ ಹಗೆಗೊಂಡು ನಿನ್ನಲಿ । ಜೀವಿಸಿದ ಜೀವಿಗಳು ಜಗದೊಳ
ಗಾವನೈ ನೀ ಕೊಂದ ಹಗೆಗಳ ಸಲಹಿದವನೆಂದ ೧೬

ಆದಡೆಯು ನರನಾಟಕದ ಸಂ । ಪಾದನೆಗೆ ಕಂಡನಿತ ದೇವರ
ಪಾದಕುಸುರುವೆನಿದುವೆ ಚಿತ್ತಕೆ ಬರಲಿ ಬರದಿರಲಿ
ಭೇದದಂಡವಿದೀಗ ಮೇಲಣ । ಹಾದಿ ಮಂತ್ರಜ್ಞರಿಗೆ ಮೊದಲು ವಿ
ವಾದವಿರಹಿತ ಸಾಮದಾನಗಳೆಂದನಸುರೇಂದ್ರ ೧೭

ಶರಧಿಯೆಂತಜದೀ ಪರಾಕ್ರಮ । ಶರಧಿಗಳಿಗೆಲೆ ಜೀಯ ದಶಕಂ
ಧರನ ವಧೆಗೇನಱಿದು ದೇವರು ನೆನೆದ ಮೈಸಿಂಗೆ
ಕರೆದು ಬಟ್ಟೆಯ ಬೇಡುವುದು ಸಾ । ಗರನ ಸಂಧಿಗೆ ಕಳುಹಿ ಕದನದ
ಪರಿಯನಱಿವುದು ಕಣೆಯವಿದು ನಮಗೆನುತ ಕೈಮುಗಿದ ೧೮

ಪಥವನಂಬುಧಿ ತೋಱದಿರೆ ಸುರ । ಮಥನ ಸೀತೆಯನೀಯದಿರೆ ನಿ
ಶ್ಶಿಥಿಲವಲ್ಲಾ ಮೇಲೆ ನೆಗಳುವ ದಾಯ ದೇವರಿಗೆ
ಪೃಥುಳಬಲ ನೀ ನಿನ್ನ ಬಾಣ । ವ್ಯಥೆಗೆ ನರಳದನಾವನೆಂದಾ
ಪ್ರಥಿತ ಶರಣಾಭರಣ ಬಿನ್ನೈಸಿದನು ರಘುಪತಿಗೆ ೧೯

ನಲ್ಲಿ ಏನು ಹೊಳೆದಿದೆ ?" ಎಂದು ಕೇಳಿದನು, ನಸುನಗುತ್ತ ರಾಮ. ೧೬. "ದೇವ, ನಿಮ್ಮ ಮನಸ್ಸಿನ ಮಹಿಮೆಯನ್ನು ಬಲ್ಲವರಾರು ? ನೀವು ಮನುಷ್ಯಾವತಾರದ ವಿಷ್ಣು ಎಂಬುದನ್ನು ಜಗತ್ತು ತಿಳಿಯದೆ. ನಿಮ್ಮೊಡನೆ ದ್ವೇಷ ಸಾಧಿಸಿ ಬದುಕಿದ ಜೀವಿಗಳಾರಿದ್ದಾರೆ ! ನೀವು ಕೊಂದ ಶತ್ರುಗಳನ್ನು ಕಾಪಾಡಿದವರಾರಿದ್ದಾರೆ?" ಎಂದ ವಿಭೀಷಣ. ೧೭. ಆದರೂ ನರನಾಟಕದ ನಡವಳಿಕೆಯಲ್ಲಿ ಕಂಡಷ್ಟನ್ನು ತಮ್ಮ ಮನಸ್ಸಿಗೆ ಬರಲಿ ಬರದೆ ಇರಲಿ, ಸ್ವಾಮಿಯವರ ಪಾದಗಳಲ್ಲಿ ಅರಿಕೆಮಾಡಿಕೊಳ್ಳುವೆನು. ಭೇದ ದಂಡ ಎಂಬ ಉಪಾಯಗಳು ಮುಂದಿನ ಮಾರ್ಗ. ರಾಜನೀತಿ ತಿಳಿದವರಿಗೆ ವಿವಾದವುಂಟುಮಾಡದ ಸಾಮದಾನಗಳು ಮೊದಲು ಮುಖ್ಯ" ಎಂದನು ವಿಭೀಷಣ. ೧೮. "ಈ ಪರಾಕ್ರಮಸಾಗರರಿಗೆ ಈ ಸಮುದ್ರ ಎಷ್ಟರದು. ಸ್ವಾಮಿಯವರು ಉದ್ದೇಶಿಸುವಲ್ಲಿ ತಮ್ಮ ಬಲಸಂಪತ್ತಿಗೆ ದಶಕಂಠನನ್ನು ಕೊಲ್ಲುವುದೇನಸಾಧ್ಯ. ಸಾಗರನನ್ನು ಕರೆದು ದಾರಿಯನ್ನು ಕೊಡು ಎಂದು ಕೇಳುವುದು. ಸಂಧಿಗೆ ಜನರನ್ನು ಕಳುಹಿಸಿ ಯುದ್ಧದ ಕ್ರಮವನ್ನು ತಿಳಿದುಕೊಳ್ಳುವುದು. ಇದು ನಮಗೆ ನ್ಯಾಯವಾಗಿರುವುದು" ಎಂದು ಕೈಮುಗಿದು ವಿಭೀಷಣನು ನುಡಿದನು. ೧೯. "ಸಾಗರವು ದಾರಿಯನ್ನು ಕೊಡದೆ ಹೋದರೆ, ರಾವಣಾಸುರನು ಸೀತೆಯನ್ನು ಒಪ್ಪಿಸದೆ ಇದ್ದರೆ ಆಗ ಸ್ವಾಮಿಯವರಿಗೆ ಮುಂದಿನ ಏರ್ಪಾಟು ಬಿಗಿಯಾಗುವುದಲ್ಲವೇ ? ನೀವು ಮಹಾಬಲಶಾಲಿಗಳು, ನಿಮ್ಮ ಬಾಣದೇಟಿಗೆ ನರಳದೆ ಇರುವವನಾರು ?" ಎಂದು ಖ್ಯಾತ ಭಕ್ತಶ್ರೇಷ್ಠನು ರಘುಪತಿಗೆ ವಿನಂತಿ ಮಾಡಿಕೊಂಡನು.

ಮತವಹುದು ತಪ್ಪಿಲ್ಲ ಶರಣಾ । ಗತನ ಸೂಕ್ತಿ ನಯೋಕ್ತಿಯಿಂದಜ
ಸುತ ಸುಷೇಣಕ ಕೇಸರಿಗಳೊಪ್ಪಿದರು ಹರುಷದಲಿ
ಮತವನದನೊಡಬಟ್ಟನಾ ರಘು । ಪತಿ ಬಳಿಕ್ಕ ಮಹೋದಧಿಗೆ ಸು
ವ್ರತವ ಕೈಗೊಂಡನು ಮಹಾಪ್ರಾಯೋಪವೇಶನದ ೨೦

ಶೋಧಿಸಿತು ಬಳಿಕವನಿ ನಿರುಪಮ । ವೈದಿಕೋಕ್ತಿಯಲೊಡನೆ ಬಲಿದುದು
ವೇದಿ ದರ್ಭಾಸ್ತರಣ ಸಂಪ್ರೋಕ್ಷಣ ಸುಸಾಂಗದಲಿ
ಆದಿನಾರಾಯಣನು ನರರೋ । ಪಾದಿಯಲಿ ಕೈಕೊಂಡನಾಗ ಮ
ಹೋದಧೀಶಂಗಧಿಕತಪವನು ತರುಣ ಕೇಳೆಂದ ೨೧

ವರಸಮಾಧಿಯಲಮಳರತ್ನಾ । ಕರ ಪರಿಧ್ಯಾನದಲಿ ದೃಷ್ಟಿಯ
ನಿರಿಸಿದನು ನಾಸಾಗ್ರದಲಿ ನಳಿನಾಸನವ ಬಿಗಿದು
ಭರಿತ ಪೂರಕ ರೇಚಕಾದಿ । ಸ್ಫುರಿತ ಮೂಲಾಧಾರ ಮಾರ್ಗಾಂ
ತರದಲಿರ್ದನು ನಿರಶನವ್ರತದಲಿ ದಿನತ್ರಯವ ೨೨

ಕುಶನೆ ಬಲ್ಲೈ ಹಿಂದೆ ಶುಕನೆಂ । ಬಸುರ ಬೇಹಿಗೆ ಬಂದುದನು ರಾ
ಕ್ಷಸಶರೀರವ ಮಱೆಸಿ ಮರ್ಕಟರೂಪ ಕೈಕೊಂಡು
ಹೆಸರೆನಿಪ ಕಪಿನಾಯಕರ ಸಾ । ಹಸವನವರಭಿಧಾನ ಶೌರ್ಯದ
ಪಸರಿಕೆಯನಱಿದಿರ್ದನವನರೆಮಾಸ ಪರಿಯಂತ ೨೩

೨೦. 'ಶರಣಾಗತನಾದ ವಿಭೀಷಣನ ಅಭಿಪ್ರಾಯದಲ್ಲಿ ತಪ್ಪಿಲ್ಲ, ಅವನ ಒಳ್ಳೆಯ ನುಡಿಗಳು ನೀತಿವಚನಗಳಾಗಿವೆ' ಎಂದು ಜಾಂಬವ ಸುಷೇಣಕ ಕೇಸರಿಗಳು ಸಂತೋಷದಿಂದ ತಮ್ಮ ಒಪ್ಪಿಗೆಯನ್ನಿತ್ತರು. ಆ ಅಭಿಪ್ರಾಯಕ್ಕೆ ರಘುಪತಿ ಒಪ್ಪಿಗೆ ಕೊಟ್ಟನು. ಅನಂತರ ರಾಮನು ಸಾಗರವನ್ನುದ್ದೇಶಿಸಿ ಮಹಾ ಉಪವಾಸವ್ರತವನ್ನು ಕೈಗೊಂಡನು. ೨೧. ಅನಂತರ ಭೂಮಿಯನ್ನು ಶೋಧಿಸಿ ವೇದಗಳಲ್ಲಿ ಹೇಳಿರುವ ಕ್ರಮದಲ್ಲಿ ಜಗಲಿಯನ್ನು ರಚಿಸಿ ದರ್ಭೆಯನ್ನು ಅದರ ಮೇಲೆ ಹಾಸಿ ಶುದ್ಧಿಗಾಗಿ ಮಂತ್ರಜಲವನ್ನು ಸಾಂಗವಾಗಿ ಸಂಪ್ರೋಕ್ಷಿಸಲಾಯಿತು. ಆದಿನಾರಾಯಣನು ಮಾನವರಂತೆ ಕಡಲನ್ನು ಕುರಿತು ತಪಸ್ಸನ್ನು ಕೈಕೊಂಡನು. ೨೨. ರಾಮನು ಸಮಾಧಿಯಲ್ಲಿ ಪದ್ಮಾಸನಹಾಕಿ ಕುಳಿತು ಸಾಗರವನ್ನು ಧ್ಯಾನಿಸುತ್ತ ಮೂಗಿನ ತುದಿಯಲ್ಲಿ ದೃಷ್ಟಿಯನ್ನು ಕೇಂದ್ರೀಕರಿಸಿದನು, ಪ್ರಾಣಾಯಾಮಕ್ರಮದಲ್ಲಿ ಪೂರಕ ರೇಚಕ ಕುಂಭಕಾದಿ ಮೂರು ಕ್ರಮಗಳನ್ನೂ (ಉಸಿರು ತುಂಬಿಕೊಳ್ಳುವ, ತಡೆಹಿಡಿಯುವ, ಉಸಿರನ್ನು ಹೊರಕ್ಕೆ ಬಿಡುವ ಕ್ರಮಗಳನ್ನು) ಅನುಸರಿಸುತ್ತ ನಾಡಿಯನ್ನು ಮೂಲಾಧಾರಚಕ್ರಕ್ಕೆ ಏರಿಸುವ ಸಾಧನೆಯನ್ನು ಕೈಗೊಂಡು ಉಪವಾಸವ್ರತದಲ್ಲಿ ಮೂರು ದಿನಗಳನ್ನು ಕಳೆದನು. ೨೩. ರಾಕ್ಷಸದೇಹವನ್ನು ಅಡಗಿಸಿ ಕಪಿರೂಪವನ್ನು ಧರಿಸಿ ಶುಕನೆಂಬ ರಾಕ್ಷಸನು ಗೂಢಚರ್ಯೆಗಾಗಿ ಹಿಂದೆ ಬಂದುದನ್ನು ನೀನು ಬಲ್ಲೆಯಾ ಕುಶ ? ಹೆಸರಾಂತ ಕಪಿನಾಯಕರ ಸಾಹಸವನ್ನೂ, ಅವರ ಹೆಸರು ಮತ್ತು ಪರಾಕ್ರಮದ ವಿವರಗಳನ್ನೂ ತಿಳಿದುಕೊಳ್ಳುತ್ತ ಅರ್ಧತಿಂಗಳವರೆಗೆ ಇದ್ದನು.

ತಪವನೀ ರಘುನಾಥ ಕೈಕೊಂ । ಡಪರದಲಿ ಗಿಳಿಯಾಗಿ ಸೂರ್ಯನ
ತಪವನಪಹರಿಸುತ್ತ ಶುಕನುಪ್ಪರಿಸಿದನು ನಭಕೆ
ಕಪಿಬಲಾಂಬುಧಿ ಕೂಡೆ ಪಕ್ಷದ । ವಿಪುಳ ತೇಜದಲಮಳ ಮರಕತ
ದುಪಲವರ್ಣವನೈದಿಕೊಂಡಿರೆ ಕಂಡನಾ ರವಿಜ ೨೪

ಎಲೆ ವಿಭೀಷಣ ನೋಡು ಪಚ್ಚೆಯ । ಕುಲಶಿಲೋಚ್ಚಯವೆದ್ದವೊಲು ಕಂ
ಗೊಳಿಸುತಿದೆ ಮಾಯಾವಿಲಾಸವಿದಲ್ಲಲೇ ಖಳರ
ಗಿಳಿಯ ರೂಪಿನ ಗುಪ್ತಚರನೆಂ । ದುಲುಕುತಿದೆ ಚಿತ್ತದಲಿ ಚಿತ್ತವ
ತಿಳುಹೆನಲು ಕಂಡರಿದು ಬೇಹಿನ ದೂತನಿವನೆಂದ ೨೫

ಇವನು ಶುಕನೆಂಬಸುರನೀ ಕಟ । ಕವನು ನೋಡಲು ಬಂದನಿಂದಿ
ವಿವನ ಹಿಡಿಯದೆ ಬಿಟ್ಟಿವಾದರೆ ಬಹುದಪಖ್ಯಾತಿ
ಇವನು ಸುಖಮುಖದಿಂದ ಲಂಕಾ । ಯುವತಿಯರಸನ ಕಂಡನಾದರೆ
ಭುವನನಿಧಿ ತಾ ಕಟ್ಟುವಡೆವುದಸಾಧ್ಯವೆಮಗೆಂದ ೨೬

ತಪ್ಪದೆನುತಿನಸೂನು ಕಪಿ ಕಂ । ದರ್ಪನಾನನವನು ನಿರೀಕ್ಷಿಸ
ಲುಪ್ಪರಿಸಿ ಮಾರ್ಜಾಲ ಲೀಲಾಗತಿಯ ಗಾಡಿಯಲಿ
ಒಪ್ಪವಭ್ರದ ಶುಕನ ಕಂಠದ । ಕಪ್ಪಿನೆಡೆಯನು ಹಿಡಿಯೆ ಖಳನಸು
ಕುಪ್ಪಳಿಸಿದುದು ಕಳವಳದಲಿ ಕುಮಾರ ಕೇಳೆಂದ ೨೭

೨೪. ರಘುನಾಥನು ತಪಸ್ಸನ್ನು ಕೈಕೊಂಡ ಅನಂತರದಲ್ಲಿ ಶುಕನು ಗಿಳಿಯ ರೂಪವನ್ನು ಧರಿಸಿ ಸೂರ್ಯನ ಬೇಗೆಯನ್ನು ನಿವಾರಿಸುತ್ತ ಆಕಾಶಕ್ಕೆ ನೆಗೆದು ಹಾರುತ್ತ ಬಂದನು. ಗಿಳಿಯ ರೆಕ್ಕೆಯ ಅಪಾರಪ್ರಭೆಯಿಂದ ಇಡೀ ವಾನರಸೈನ್ಯಕ್ಕೆ ಪಚ್ಚೆಯಶಿಲೆಯ ಬಣ್ಣ ಬಂದಿರಲು ಅದನ್ನು ಸುಗ್ರೀವನು ನೋಡಿದನು. ೨೫. "ಅಯ್ಯಾ ವಿಭೀಷಣ ನೋಡು, ಪಚ್ಚೆಯ ಕುಲಪರ್ವತವು ಎದ್ದುಬಂದಂತೆ ಕಣ್ಣಿಗೆ ಕಾಣಿಸುತ್ತಿದೆ. ಇದು ಗಿಳಿಯ ರೂಪದ ಗುಪ್ತಚಾರ ಎಂಬ ಶಂಕೆ ಮನಸ್ಸಿನಲ್ಲುಂಟಾಗುತ್ತಿದೆ. ನನಗೆ ವಿಷಯವನ್ನು ತಿಳಿಸು" ಎಂದು ಸುಗ್ರೀವನು ಹೇಳಲು ವಿಭೀಷಣನು ನೋಡಿ ತಿಳಿದುಕೊಂಡು, "ಇವನು ಗುಪ್ತಚಾರ" ಎಂದ. ೨೬. "ಇವನು ಶುಕನೆಂಬ ರಾಕ್ಷಸನು. ಈ ಸೈನ್ಯವನ್ನು ನೋಡಲು ಬಂದಿದ್ದಾನೆ. ಇವನನ್ನು ಹಿಡಿಯದೆ ಬಿಟ್ಟ ಪಕ್ಷಕ್ಕೆ ನಮಗೆ ಕೆಟ್ಟ ಹೆಸರು. ಇವನು ನಿರಾಯಾಸವಾಗಿ ಲಂಕೆಯೊಡೆಯನನ್ನು ಕಂಡದ್ದೇ ಆದರೆ ಸಮುದ್ರವು ನಮ್ಮ ಕಟ್ಟಿಗೆ ಸಿಕ್ಕುವುದಸಾಧ್ಯ" ಎಂದ ವಿಭೀಷಣ. ೨೭. "ಇದು ಖಂಡಿತ" ಎನ್ನುತ್ತ ಸುಗ್ರೀವನು ವಾನರಮನ್ಮಥನಾದ ಅಂಗದನ ಮುಖವನ್ನು ನೋಡಲು ಅವನು ಆಕಾಶಕ್ಕೆ ನೆಗೆದು ಬೆಕ್ಕಿನ ಗತಿಯ ಬೆಡಗಿನಿಂದ ಬಂದು ಆಕಾಶದಲ್ಲಿದ್ದ ಶುಕನ ಕೊರಳಿನಲ್ಲಿ ಕಪ್ಪು ಪಟ್ಟೆಯಿದ್ದ ಸ್ಥಳವನ್ನು ಹಿಡಿದುಕೊಂಡನು. ಆಗ ಚಡಪಡಿಸುತ್ತ ರಾಕ್ಷಸನ ಪ್ರಾಣವು

ಕೊರಳ ಪದರಿಸಲೌಕಿ ಹಿಡಿದೊಡೆ । ಮುರಿದು ರೆಕ್ಕೆಯನಿಳುಹಿ ತಂದನು
ಹರಿಕುಲೇಂದ್ರನ ಬಳಿಗೆ ಹೊದಕುಳಿಗುಟ್ಟಲಾ ಶುಕನ
ವರವಿಭೀಷಣ ಲವನ ಮೇಲಣ । ಕರುಣದಲಿ ಕೊಲಲೀಸದವನನು
ಸೆರೆಮನೆಗೆ ನೂಕಿಸಿದನಭಿಮತದಿಂದ ರವಿಸುತನ ೨೮

ಸವದವಾದಿನಕುರುತಪಸ್ಸಿನ । ದಿವಸ ನಾಲುಕು ಬಳಿಯ ನಿಮ್ಮಯ
ಭುವನಪತಿ ಕಂದೆಱೆದು ನೋಡಿದನಾ ಮಹೋದಧಿಯ
ಇವನು ನಮ್ಮನು ಬಗೆಯದಾದನೆ । ಶಿವಶಿವಾ ನಾವಾವ ಸದರವೊ
ಶಿವಮಹಾದೇವೆನುತ ರೌದ್ರಾವೇಶಮನನಾದ ೨೯

ಪಟುತರಾಗ್ನಿಯನೊಗುವ ನಾಸಾ । ಪುಟದ ನಯನದ ವಿಸ್ಫುಲಿಂಗೋ
ತ್ಕಟದ ರೋಮೋದ್ಧೂತ ಧೂಮೋದ್ರೇಕ ವಿಗ್ರಹದ
ಛಟುಳ ವಿಲಯಾನಲಶಿಖಾಸಂ । ಘಟಿತ ಸತ್ಕ್ರೋಧಪ್ರಭಾಧೂ
ರ್ಜಟಿವಿಡಂಬನನೆದ್ದು ಬೇಡಿದನನುಜನನು ಧನುವ ೩೦

ಬಳಿಕಲೇವೇಳುವೆನು ಧನು ಕರ । ತಳಕೆ ಸಾರಲು ಸೇರಿದುದು ಮೈ
ವಳಿಯಲಬುಜಭವಾಂಡಗರ್ಭದ ಜೀವರಾಶಿಗಳು
ಉಲುಕಿದುದು ಸುರಚಾಪಮೌರ್ವಿಯು । ಲಿಳುಹೆ ಶರವನು ಸಪ್ತಸಾಗರ
ಏಳಿದವಾಕ್ಷಣ ಮಹಿಮೆಯೆಂತುಟೊ ಮನುಕುಲೇಶ್ವರನ ೩೧

ತುಡಿಯಲಾರಂಭಿಸಿತು. ೨೮. ಶುಕನ ಕತ್ತನ್ನು ಮುಷ್ಟಿಯಲ್ಲಿ ಅಮುಕಿಹಿಡಿದು ರೆಕ್ಕೆಯನ್ನು ಬಿಚ್ಚಿ ತಿರುಗಿಸಿ ಅವನು ವ್ಯಥೆಪಡುತ್ತಿರಲು ಸುಗ್ರೀವನ ಬಳಿಗೆ ಇಳಿಸಿತಂದನು. ವಿಭೀಷಣನು ಅವನ ಮೇಲೆ ಕರುಣೆದೋರಿ ಅವನನ್ನು ಕೊಲ್ಲಲು ಅವಕಾಶ ಕೊಡದೆ ಸುಗ್ರೀವನ ಅಭಿಪ್ರಾಯಕ್ಕನುಸಾರವಾಗಿ ಸೆರೆಮನೆಗೆ ಹಾಕಿಸಿದನು. ೨೯. ರಾಮನ ಉಗ್ರ ತಪಸ್ಸಿನ ನಾಲ್ಕು ದಿವಸಗಳು ಆ ದಿನಕ್ಕೆ ಮುಗಿದವು. ನಿಮ್ಮ ರಾಜನು ಮಹಾಸಾಗರವನ್ನು ಕಣ್ಣು ಬಿಟ್ಟು ನೋಡಿದನು. "ಇವನು ನಮ್ಮನ್ನು ಅಲಕ್ಷಿಸಿದನೆ. ಶಿವಶಿವಾ, ನಾವು ಇವನಿಗೆ ಲೆಕ್ಕಕಿಲ್ಲದೆಹೋದೆವೋ, ಶಿವಶಿವ ಮಹಾದೇವ !" ಎನ್ನುತ್ತ ರೋಷದಿಂದ ಭಯಂಕರನಾದನು. ೩೦. ಜ್ವಲಿಸುವ ಬೆಂಕಿಯನ್ನು ಉಗುಳುವ ಮೂಗಿನ ಹೊಳ್ಳೆಗಳ, ಕಿಡಿಗಳನ್ನು ಸೂಸುವ ಕಣ್ಣುಗಳ, ಕೂದಲುಗಳಿಂದ ತೀವ್ರವಾದ ಹೊಗೆಯನ್ನು ಏಳಿಸುವ ದೇಹದ, ಚುರುಕಾದ ಪ್ರಳಯಾಗ್ನಿಜ್ವಾಲೆಯಿಂದ ರೋಷಗೊಂಡ ಶಿವನನ್ನು ಮೀರಿಸುವ ಭಂಗಿಯಲ್ಲಿ ರಾಮನು ಎದ್ದು ಧನುಸ್ಸನ್ನು ಕೊಡುವಂತೆ ತಮ್ಮನನ್ನು ಕೇಳಿದ. ೩೧. ಮುಂದಿನದನ್ನು ಏನು ಹೇಳಲಿ. ಬಿಲ್ಲು ಕೈಗೆ ಬರಲು ಬ್ರಹ್ಮಾಂಡಗರ್ಭದಲ್ಲಿನ ಜೀವರಾಶಿಗಳ ಅಧೀನವಾಗಿ ಬಂದು ಸೇರಿದವು : ಕಾಮನಬಿಲ್ಲು ನಡುಗಿತು. ಬಿಲ್ಲಿನ ಹಗ್ಗಕ್ಕೆ ಬಾಣವನ್ನು ಹೂಡಲು ಏಳು ಸಮುದ್ರಗಳು ಇಳಿದುಹೋದವು. ಮನುಕುಲದೊಡೆಯ

ಹುಟ್ಟಿತುರಿ ಶರಮುಖದೊಳಣೆದುದು । ತುಟ್ಟತುದಿಯುಲಜಾಂಡಭಾಂಡವ
ದಟ್ಟವಿಸಿತುರಿ ಹರಿದು ದಿಗುಭಿತ್ತಿಗಳ ಬಳಿವಿಡಿದು
ಬಿಟ್ಟರೂರ್ವಿಯನಹಿಪ ಕೂರುಮ । ರೊಟ್ಟುಗಿಟ್ಟಿನ ಸೆಕಳಿಯಲಿ ತನು
ತುಟ್ಟಿಸಿದುದನುತಾಪದಲಿ ಶಂಕರ ವಿರಿಂಚಿಗಳ ೩೨

ಉರಿಯ ಕರಡಿಗೆಯಂತೆ ಶಿಖಿ ಡಾ । ವರಿಸಿತಬುಜಭವಾಂಡಭವನವ
ನಿರದೆ ಸಚರಾಚರಗಳಡಗಿದವಜನ ಗರ್ಭದಲಿ
ಧರೆ ಮಹೋದಕ ಗಗನವಾಯುಗ । ಳಿರದೆ ವಹ್ನಿಯೊಳಡಗಿದವು ಸಂ
ಹರಣ ತೇಜೋಮೂರ್ತಿಯವೊಲಸುರಾರಿ ರಂಜಿಸಿದ ೩೩

ಇಳಿದುದುರಿ ಬಗಿದಂಬುನಿಧಿಯೊಡ । ಲೊಳಗೆ ತೆರೆ ಬಳಿದೆರೆಯೊಳಗೆ ಬಗಿ
ದಿಳಿದುದುತ್ಕಟ ಛಟಛಟತ್ಕೃತಿಗಳ ಛಡಾಳದಲಿ
ತುಳುಕಿ ತೂಜುವ ತುಂತುರಿನ ಕಿಡಿ । ಹಳಚಿದವು ಹೊದಜಿ³ದ್ದ ವಡಬಾ
ನಳನನೊಡೆದುದು ರಾಮಚಂದ್ರನ ಭೀಮಬಾಣಾಗ್ನಿ ೩೪

ಹುರಿಮಳಲ ರಾಶಿಯಲಿ ರತುನಗ । ಳರಳಿದವು ಜಲಜಂತುಗಳು ಸೀ
ಕರಿಗಳಾದವು ಶಿಖಿಗೆ ಪಥವಾದುದು ರಸಾತಳಕೆ
ವರುಣನರಮನೆ ಹನುಮ ದಹಿಸಿದ । ಪುರವ ಪೋಲ್ದುದು ಕೂಡೆ ದಳ್ಳುರಿ
ವೆರಸಿದಂತಃಪುರದ ಸತಿಯರ ತನುಲತಾವಳಿಯು ೩೫

ರಾಮನ ಮಹಿಮೆ ಎಂಥದೋ ! ೩೨. ಬಾಣದ ತುದಿಯಲ್ಲಿ ಉರಿ ಹುಟ್ಟಿತು : ಬ್ರಹ್ಮಾಂಡದ ತುತ್ತತುದಿಯನ್ನು ವ್ಯಾಪಿಸಿತು. ಬೆಂಕಿಯ ಜ್ವಾಲೆಯು ದಿಕ್ಕುಗಳ ಕೊನೆಯವರೆಗೆ ದಟ್ಟವಾಗಿ ಆವರಿಸಿತು. ಆದಿಶೇಷ, ಕೂರ್ಮರು ಹೊತ್ತಿದ್ದ ಭೂಮಿಯನ್ನು ತ್ಯಜಿಸಿದರು. ಈಶ್ವರ ಬ್ರಹ್ಮರ ದೇಹಗಳು ಬೆಂಕಿಯ ಧಗೆಯಿಂದ ಸಂತಾಪಗೊಂಡು ಶಕ್ತಿಗುಂದಿದವು. ೩೩. ಉರಿಯ ಭರಣಿಯಂತೆ ಬೆಂಕಿಯು ಬ್ರಹ್ಮಾಂಡಲೋಕವನ್ನು ಆವರಿಸಿತು. ಸಚರಾಚರವು ಬ್ರಹ್ಮನ ಹೊಟ್ಟೆಯಲ್ಲಿ ಅಡಗಿಕೊಂಡಿತು. ಭೂಮಿ, ಸಾಗರ, ಆಕಾಶ, ವಾಯುಗಳು ಬೆಂಕಿಯಲ್ಲಿ ಮುಚ್ಚಿಹೋದವು. ಪ್ರಳಯದ ತೇಜೋಮೂರ್ತಿಯಂತೆ ರಾಮನು ಕಂಗೊಳಿಸಿದನು. ೩೪. ಉರಿ ಸಮುದ್ರದ ಒಡಲನ್ನು ಬಗಿದುಕೊಂಡು ಒಳಕ್ಕೆ ಇಳಿಯಿತು ; ಛಟಛಟ ಎಂದು ಅಧಿಕ ಶಬ್ದ ಮಾಡುತ್ತ ಒಂದರ ಹಿಂದೆ ಒಂದರಂತೆ ಹಿಂಬಾಲಿಸಿ ಬರುವ ಅಲೆಗಳ ಶ್ರೇಣಿಗಳನ್ನು ಸೀಳಿಕೊಂಡು ಒಳಕ್ಕೆ ಇಳಿಯಿತು. ಹೊರ ಚೆಲ್ಲಿ ಎರಚುವ ತುಂತುರಿನ ಕಿಡಿಗಳು ಅಪ್ಪಳಿಸಿದವು. ಗುಂಪಾಗಿ ಮೇಲೆದ್ದ ವಡಬಾಗ್ನಿಯನ್ನು ರಾಮಚಂದ್ರನ ಭಯಂಕರ ಬಾಣದ ಬೆಂಕಿಯು ಒಡೆದು ಹಾಕಿತು. ೩೫. ಬೆಂಕಿಯಿಂದ ಹುರಿದಂತಾದ ಮಳಲುಗಳ ರಾಶಿಯಲ್ಲಿ ರತ್ನಗಳು ಅರಳಾದವು. ನೀರಿನಲ್ಲಿಯ ಪ್ರಾಣಿಗಳು ಸುಟ್ಟು ಕರಿಕಾದವು. ಅಗ್ನಿಯು ಪಾತಾಳಕ್ಕೆ ಹೋಗಲು ದಾರಿಯಾಯಿತು. ಧಗಧಗಿಸುವ ಉರಿಯು ಅಂತಃಪುರದ ಸ್ತ್ರೀಯರ ಕೋಮಲಶರೀರಗಳನ್ನು ಆವರಿಸಲು

ಕೇಸುರಿಯು ಕಬ್ಬೊಗೆಯು ಶಿಖಿ ವೆ । ದ್ಧೈಸಿತಬುಧಿಯ ಮದದ ಘಾಡಿಕೆ
ಘಾಸಿಯಾದುದು ಗಾಳುಮೇಳುಪ್ಪರಿಸಿತಂಬರವ
ಹಾ ಸರಿತ್ಪತಿಯೆನುತ ಮೇಲುದಿ । ನೋಸರದ ಬಡುಮುಡಿಯ ಬಾಯ್ಗಳ
ಬಾಸುಳಿನ ವನಿತೆಯರು ಬೆರಸಿದರಾ ನಿಜೇಶ್ವರನ ೩೬

ಪಾಪಿ ಹೋಜವದು ವಿಶ್ವರೂಪನ । ಕೋಪದಲಿ ಗಂಭೀರತನದಾ
ಳಾಪ ಕೊಂಬುದೆ ಕಮಲಜಾಂಡೋದರನ ಮುಳಿಸಿನಲಿ
ರೂಪುಗೆಡಬೇಡಕಟ ನಡೆಯೆನು । ತಾಪಗಾವನಿತೆಯರು ಮಾನವ
ರೂಪಿನಚ್ಯುತನೆಡೆಗೆ ಹಿಡಿದೆಳೆತಂದರಂಬುಧಿಯ ೩೭

ಯಮುನೆ ಭಾಗೀರಥಿ ಸರಸ್ವತಿ । ವಿಮಲ ನರ್ಮದೆ ಸರಯು ವರ ಗೌ
ತಮಿ ಕವೇರಿ ಕುಮಾರಿ ಕೌಶಿಕೆ ಭದ್ರೆ ವೇದವತಿ
ಸುಮತಿ ಭೀಮರತಿಪ್ರಮುಖ ನಿಜ । ರಮಣಿಯರು ನಿಂದಿರಿಸಿದರು ವಿ
ಭ್ರಮದ ನೀರಸಮುಖದ ನಿಜಪತಿಯನು ಸರಾಗದಲಿ ೩೮

ಎಡದಕೈಯಲಿ ಕರ್ಣಪತ್ರವ । ಹಿಡಿದು ಬಲಗೈಯಂಗುಲಿಯ ಬಾ
ಯ್ಗಡಸಿ ಬಳಲುವ ಬಾಯ್ದೆರೆಯ ನಿಜ ದೈನ್ಯಭಾವದಲಿ
ಅಡಿಗೆ ಚಾಚಿದಳನುಪಮದ ಸೋ । ಮ್ಮಡಿಯನೀ ಸೌಭಾಗ್ಯವಿಭವವ
ನುಡುಗಿಸಲುಬೇಡೆಂದು ಜಾಹ್ನವಿ ಜಾನಕೀಪತಿಗೆ ೩೯

ವರುಣನ ಅರಮನೆಯು ಹನುಮಂತನು ಬೆಂಕಿಹಾಕಿದ ಲಂಕಾಪುರದಂತೆ ತೋರಿತು. ೩೬. ಕೆಂಪು ಉರಿಯ, ಕಪ್ಪುಹೊಗೆಯ ಬೆಂಕಿಯು ಮುತ್ತಿತು. ಸಾಗರದ ಉತ್ಕಟಗರ್ವವು ಪೆಟ್ಟು ತಿಂದಿತು ; ಅವ್ಯವಸ್ಥೆ ಆಕಾಶಕ್ಕೆ ನೆಗೆಯಿತು. 'ಅಯ್ಯೋ, ನದಿಗಳೊಡೆಯ' ಎನ್ನುತ್ತ ಜಾರಿದ ಮೇಲುಹೊದಿಕೆಯ, ಕೆದರಿದ ಕೂದಲಿನ, ಬಾಸುಂಡೆಯೆದ್ದ ಬಾಯ್ಗಳ ಸಾಗರನ ಸ್ತ್ರೀಯರು ತಮ್ಮ ಪತಿಯ ಬಳಿಗೆ ಬಂದರು. ೩೭. "ಪಾಪಿ, ಹೊರಡು, ವಿಶ್ವ ರೂಪಿ ವಿಷ್ಣುವಿನ ಕೋಪವು ಗಾಂಭೀರ್ಯದ ಮಾತನ್ನು ಒಪ್ಪುವುದೆ ? ಪದ್ಮನಾಭನ ಕೋಪದಿಂದ ನಾಶವಾಗಬೇಡ, ನಡೆ" ಎನ್ನುತ್ತ ಸಾಗರನ ಹೆಂಡಂದಿರು ಮಾನವರೂಪ ದಲ್ಲಿ ಅವತರಿಸಿದ ಅಚ್ಯುತನ ಬಳಿಗೆ ಸಾಗರನನ್ನು ಹಿಡಿದು ಎಳೆದುಕೊಂಡು ಬಂದರು. ೩೮. ಯಮುನೆ, ಭಾಗೀರಥಿ, ಸರಸ್ವತಿ, ನರ್ಮದೆ, ಸರಯು, ಗೌತಮಿ, ಕಾವೇರಿ, ಕುಮಾರಿ, ಕೌಶಿಕೆ, ಭದ್ರೆ, ವೇದವತಿ, ಸುಮತಿ, ಭೀಮರತಿ ಮೊದಲಾದ ಪ್ರಮುಖ ನದೀ ನಾರಿಯರು ಭ್ರಾಂತಿಗೀಡಾದ ನಿಸ್ತೇಜಮುಖದ ಪತಿಯನ್ನು ರಾಮನ ಎದುರಿಗೆ ನಿಲ್ಲಿಸಿ ದರು. ೩೯. ಎಡಗೈಯಲ್ಲಿ ಕಿವಿಯ ಆಭರಣವನ್ನು ಹಿಡಿದುಕೊಂಡು ಬಲಗೈಯ ಬೆರಳನ್ನು ಬಾಯಮೇಲಿಟ್ಟು, ಇಳಿದಿದ್ದ ತುಟಿಯೊಡನೆ ದೈನ್ಯಭಾವದಿಂದ ಜಾಹ್ನವಿಯು "ಈ ಸೌಭಾಗ್ಯದ ವೈಭವವನ್ನು ಕುಗ್ಗಿಸಬೇಡ" ಎಂದು ಸುಂದರವಾದ ಸಡಿಲವಾದ

ಮಗಳಲಾಯೆಲೆದೇವ ನಿನಗೀ । ಯುಗಡುತನವೇಕಯ್ಯ ತನ್ನಲಿ
ಸಗರವಂಶೋದ್ಭವೆಯಲಾ ಮೇಣೀಚೆಯಲಿ ನಿನಗೆ
ಮಗಳು ಮಗಳಿಗೆ ತಂದೆ ಮುನಿದರೆ । ನಗದಿಹರೆ ಬಲ್ಲವರು ಕರುಣಾ
ಳುಗಳದೇವಂಗೇತಕೀ ಮುನಿಸೆಂದಳಯ್ಯಂಗೆ ೪೦

ಈತ ಲಕ್ಷ್ಯವೆ ನಿನಗೆ ನೀನ । ಖ್ಯಾತನೇ ಭೂಮ್ಯಾದಿ ಪಂಚೀ
ಭೂತವಾರಿಂದುದಯವಾರಿಂದಡಗುವುದು ಕಡೆಗೆ
ಏತಕೀ ನರನಾಟಕದ ಮಾ । ಯಾತಿರೋಧಾನತೆಯಿದಾರ್ಗೆ ನಿ
ಶಾತಶರಸಂಧಾನಸಮಯವಿದೆಂದಳಯ್ಯಂಗೆ ೪೧

ಶರಣುಹೊಕ್ಕರೆ ಸಲಹುವಗ್ಗದ । ಬಿರುದಲಾ ದೇವತ್ವದಲಿ ಭೂ
ವರಪತಿತ್ವದಲಾವನೈ ಸರಿ ಶರಣಾಗತಿಕರಲಿ
ಶರಣುವೊಗಬಂದವನೊ ಮೇಣ್ ಮ । ತ್ಸರಿಸಬಂದವನೋ ಮಹೋದಧಿ
ಯಿರವ ನೋಡೆಲೆ ದೇವ ನೀನೆಂದಳು ಕೃಪಾನಿಧಿಗೆ ೪೨

ಸೆಱಗ ನೆಲದಲಿ ಹಾಸಿ ತನತನ । ಗೊಱಲಿದರು ಮಾಂಗಲ್ಯಸೂತ್ರವ
ಹಱಿಯಬೇಡೆಲೆ ತಂದೆಯೆಂದು ಸಮಸ್ತ ನಾರಿಯರು
ಮಱಿಯ ಮಾಯಾನರನ ಕೃಪೆ ಕಂ । ದೆಱೆದುದೈ ಬಳಿಕನಿತರಲಿ ಶರ
ದುಱುಗಲಿನ ಶಿಖಿ ಸಂತವಿಸಿದುದು ಝಳದ ಝಾಡಣೆಯ ೪೩

ಮುಡಿಯನ್ನು ರಾಮನ ಪಾದಗಳ ಮೇಲಿಟ್ಟು ಬೇಡಿಕೊಂಡಳು. ೪೦. "ನಾನು ನಿನ್ನ ಮಗಳಲ್ಲವೇ ಸ್ವಾಮಿ. ನಿನಗೆ ನನ್ನೊಡನೆ ಈ ತುಂಟಾಟವೇಕಯ್ಯ ? ನಾನು ಸಗರವಂಶದಲ್ಲಿ ಹುಟ್ಟಿದವಳಲ್ಲವೇ? ಅಲ್ಲದೆ ನಾನು ನಿನಗೆ ಮಗಳು. ಮಗಳ ಮೇಲೆ ತಂದೆ ಕೋಪ ಮಾಡಿಕೊಂಡರೆ ತಿಳಿದವರು ನಗದಿರುವರೆ ? ಕರುಣಾಳುಗಳೊಡೆಯನಿಗೇಕೆ ಈ ಮುನಿಸು" ಎಂದು ತಂದೆಯಾದ ರಾಮನನ್ನು ಕುರಿತು ಜಾಹ್ನವಿ ಕೇಳಿಕೊಂಡಳು. ೪೧. "ಈತನು ನಿನಗೆ ಲೆಕ್ಕವೇ ? ನೀನು ಅಪ್ರಸಿದ್ಧನೇ ? ಭೂಮಿ, ಆಕಾಶ, ಅಗ್ನಿ, ಜಲ, ಗಾಳಿ ಎಂಬ ಪಂಚಭೂತಗಳ ಹುಟ್ಟು ಯಾರಿಂದ, ಕೊನೆಗೆ ಯಾರಿಂದ ಅಂತ್ಯವಾಗುವುದು ? ಏತಕ್ಕೆ ಈ ನರನಾಟಕದ ಮಾಯೆಯ ನೆಪ ? ಹರಿತವಾದ ಬಾಣಪ್ರಯೋಗದ ನೇಮವು ಯಾರ ಮೇಲೆ ?" ಎಂದು ಜಾಹ್ನವಿ ತಂದೆಯನ್ನು ಕೇಳಿದಳು. ೪೨. "ಮರೆಹೊಕ್ಕವರನ್ನು ಕಾಪಾಡುವ ಹಿರಿಯ ಬಿರುದು ನಿನ್ನದು. ಶರಣಾದವರನ್ನು ರಕ್ಷಿಸುವಲ್ಲಿ ದೇವರುಗಳಲ್ಲಿಯಾಗಲಿ ಭೂಮಿಯಮೇಲಿನ ರಾಜರುಗಳಲ್ಲಿಯಾಗಲಿ ನಿನಗೆ ಯಾರು ಸರಿ ? ಮರೆಹೊಗಲು ಬಂದಿರತಕ್ಕವನೋ, ಇಲ್ಲ ನಿನ್ನ ಮೇಲೆ ದ್ವೇಷ ಸಾಧಿಸಲು ಬಂದವನೋ ಈ ಸಾಗರ, ನೀನು ನೋಡು ಸ್ವಾಮಿ" ಎಂದಳು ಗಂಗೆ, ಕರುಣಾಸಾಗರ ರಾಮನಿಗೆ. ೪೩. ಸೆರಗುಗಳನ್ನು ನೆಲದಲ್ಲಿ ಹಾಸಿ ಸಾಗರನ ಸಮಸ್ತ ಸ್ತ್ರೀಯರು "ನಮ್ಮ ಮಾಂಗಲ್ಯ ಸೂತ್ರಗಳನ್ನು ಕಿತ್ತುಹಾಕಬೇಡ, ತಂದೆ !" ಎಂದು ಒಬ್ಬೊಬ್ಬರೂ ಬೇಡಿಕೊಂಡರು. ಮಾನವರೂಪಧಾರಿ ಹರಿಯ ಕರುಣೆಯ ಕಣ್ಣು ತೆರೆಯಿತು. ಅಷ್ಟರಲ್ಲಿ ರಾಮನ

ಕರುಣದಳತೆಯ ಕಂಡು ಜಾಂಬವ । ತರಣಿಜಾದ್ಯರು ಬೇಡಿಕೊಂಡರು
ಕರಸರೋಜವ ಮುಗಿದು ಶರಧಿಯ ಸಲಹಬೇಕೆಂದು
ತರುಣ ಕೇಳೈ ಬಳಿಕ ಜಲನಿಧಿ । ಕೊರಗಿದಾನನದಳಿದ ಹಮ್ಮಿನ
ಕರುಣಭಾವದಲೊಡಲ ಚಾಚಿದನಂಘ್ರಿಯಲಿ ನೃಪನ ೪೪

ದೇವ ದೇವ ಜಗನ್ಮಯನೆ ಲ । ಕ್ಷ್ಮೀವಿಲಾಸ ವಿನೋದವೈಭವ
ಭಾವಕನೆ ಭಕ್ತಪ್ರಿಯನೆ ಭಾಗೀರಥೀಪಿತನೆ
ದೇವ ನರನಾಟಕವಿನೋದ ಕ । ಲಾವಿದನೆ ಕಮನೀಯತರ ಲೀ
ಲಾವತಾರನೆ ಕಲುಷಕಾಯನ ಕಾಯಬೇಕೆಂದ ೪೫

ಸ್ಖಲಿತನನು ದುಶ್ಚರಿತ ನಿಗಮ । ಕ್ರಮಿತನನು ವಿಭ್ರಮಣ ಶೀಲ
ಭ್ರಮಿತನನು ಕ್ಷುದ್ರಾತ್ಮನನು ಗ್ರಹಬದ್ಧವಿಗ್ರಹನ
ಅಮಿತಪಂಕ ಸುಸಂಭೃತನ ಸಂ । ಕ್ರಮಿತ ದೋಷಾಕರನ ಗರ್ವನ
ಕ್ಷಮಿಸಬೇಕಪರಾಧಶತವನು ಮಱದು ನೀನೆಂದ ೪೬

ಪ್ರಣವರೂಪಸ್ವರೂಪ ನಿರ್ಗುಣ । ಗುಣ ನಿತಾಂತಪ್ರಕೃತಿ ಪತಿತ
ಪ್ರಣಯ ಮಾಯಾಪ್ರಕೃತಿರಹಿತಾದ್ಯಂತಲಯಶೂನ್ಯ
ಅಣುಮಹತ್ಪರಿಪೂರ್ಣ ಚಂದ್ರಾ । ರುಣ ಹುತಾಶನತೇಜ ರಿಪು ರಾ
ವಣವಧಾಸಂಭೂತಕಾರಣ ಕಾಯಬೇಕೆಂದ ೪೭

ಬಾಣದಿಂದ ಎದ್ದ ಬೆಂಕಿಯು ಉರಿಯನ್ನು ಮುಂದೆ ಹಬ್ಬದಂತೆ ಸಮಾಧಾನಗೊಳಿಸಿತು. ೪೪. ರಾಮನ ಕರುಣದ ಅಳತೆಯನ್ನು ಕಂಡು ಜಾಂಬವ ಸುಗ್ರೀವ ಮೊದಲಾದವರು ಸಮುದ್ರನನ್ನು ಕಾಪಾಡಬೇಕೆಂದು ಕರಕಮಲಗಳನ್ನು ಜೋಡಿಸಿಕೊಂಡು ಪ್ರಾರ್ಥಿಸಿದರು. ತರುಣ ಲವನೇ ಕೇಳಯ್ಯ, ತರುವಾಯ ಕೊರಗಿದ ಮುಖದ ಗರ್ವ ಮುರಿದ ಸಾಗರನು ಕರುಣಾಭಾವದಿಂದ ರಾಮನ ಪಾದಗಳಲ್ಲಿ ದೇಹವನ್ನಿಟ್ಟು ನಮಸ್ಕರಿಸಿದನು. ೪೫. "ದೇವದೇವನೆ, ಜಗತ್ತನ್ನಾವರಿಸಿರುವವನೇ, ಲಕ್ಷ್ಮಿಯೊಡನೆ ಸರಸವಾಡುವ ಸೊಗಸುಳ್ಳವನೇ, ಭಕ್ತಪ್ರಿಯನೇ, ಭಾಗೀರಥಿಯ ತಂದೆಯೇ, ಸ್ವಾಮಿ, ನರನಾಟಕ ವಿನೋದದಲ್ಲಿ ಕುಶಲಿಯೇ, ಮನೋಹರ ಅವತಾರಗಳಲ್ಲಿ ವಿನೋದಗೊಳ್ಳುವವನೇ. ಪಾಪಿಯಾದ ನನ್ನನ್ನು ಸಲಹಬೇಕು" ಎಂದು ಸಾಗರನು ಬೇಡಿಕೊಂಡ. ೪೬. ಕೆಟ್ಟ ನಡತೆಯಲ್ಲಿ ಸಿಕ್ಕಿಕೊಂಡ, ವೇದಗಳನ್ನು ಮೀರಿದ, ತಪ್ಪು ತಿಳಿವಳಿಕೆಯಿಂದ ನಡತೆಗೆಟ್ಟ, ಅಲ್ಪಾತ್ಮನಾದ, ಗ್ರಹಹಿಡಿದ, ಆಳವಾದ ಕೆಸರಿನಲ್ಲಿ ಬಿದ್ದ, ದೋಷದಿಂದ ಮುಂದುವರಿದ ಈ ಗರ್ವಿಷ್ಠನ ನೂರು ತಪ್ಪುಗಳನ್ನು ಮರೆತು ಕ್ಷಮಿಸಬೇಕು" ಎಂದು ಪ್ರಾರ್ಥಿಸಿದ. ೪೭. "ಓಂಕಾರಸ್ವರೂಪಿಯೇ, ನಿರ್ಗುಣವೇ ಗುಣವಾಗುಳ್ಳವನೇ, ಸಮಸ್ತ ಜೀವಿಗಳ ನ್ನೊಳಕೊಂಡವನೇ, ಪಾಪಿಗಳಲ್ಲಿ ಪ್ರೀತಿಯುಳ್ಳವನೇ, ಮಾಯಾ ನಿಸರ್ಗಸ್ಥಿತಿಗಳಿಲ್ಲ ದವನೇ, ಆದಿ ಅಂತ್ಯಲಯಗಳನ್ನು ಮೀರಿದವನೇ, ಅಣು ಮಹತ್ತುಗಳು ಪರಿಪೂರ್ಣ ವಾಗಿರುವವನೇ, ಚಂದ್ರ, ಸೂರ್ಯ, ಅಗ್ನಿಗಳ ತೇಜಸ್ಸನ್ನು ಹೊಂದಿದವನೇ, ಶತ್ರು

ಅನುಪಮಾನಂದಾತ್ಮನದ್ವಯ । ನನಘನವಿತನಸಾಧ್ಯನಗಣಿತ
ನನವಸಾನನಜಾತನಪ್ರಯನಭವನನಸೂಯ
ಘನಮಹಿಮ ಘನತೇಜ ಘನಗುಣ । ಘನತರೋದ್ಧತ್ ಪ್ರಬಲ ಘನನಿ
ರ್ಘನ ಘನಾಯುತ ದೇವ ತನ್ನನು ಕಾಯಬೇಕೆಂದ ೪೮

ವಿಶ್ವತೋಮುಖ ವಿಶ್ವಲೋಚನ । ವಿಶ್ವತೋಭುಜ ವಿಶ್ವವಿಗ್ರಹ
ವಿಶ್ವವಿಶ್ರುತ ವಿಶ್ವಪಾದಪ ವಿಶ್ವ ವಿಶ್ವಪತಿ
ವಿಶ್ವಚೇತನ ವಿಶ್ವಭಾವನ । ವಿಶ್ವನುತ ವಿಶ್ವೇಶ ವಿಶ್ವಗ
ವಿಶ್ವ ವಿಶ್ವಾತ್ಮಕ ಜಡಾತ್ಮನ ಕಾಯಬೇಕೆಂದ ೪೯

ಆವನಿಂದುದಿಸಿಹವು ಬಹುಭುವ । ನಾವಳಿಗಳೆಲೆದೇವ ಚಿತ್ತೈಸ
ಸಾವನಿಂ ಪರಿರಕ್ಷಣವು ತೋರ್ಪೀ ಜಗತ್ರಯದ
ಆವನಲಿ ಲಯಭೂತ ಪಂಚಕ । ವಾವನಾಜ್ಞಾಮಾತ್ರವದ ಸಂ
ಭಾವಿಸದೆ ಸಂಹರಿಸಬಗೆವರೆ ದೇವ ನೀನೆಂದ ೫೦

ಕೋಟಿ ಕಮಲಭವಾಂಡಗರ್ಭನೊ । ಳಾಟವಿಕತನ ಸಲುವುದೇ ಶತ
ಕೋಟಿಕಾಲ ಪರಾಕ್ರಮನೊಳುದ್ದಂಡವೇ ತನಗೆ
ಕೋಟಿರುದ್ರರ ರೌದ್ರದಲಿ ಮುಳಿ । ಸಾಟವೇ ಸಂವರ್ತಹುತವಹ
ಕೋಟಿತೇಜನೊಳಿದಿರೆ ತಾ ತನಗೇಕೆ ಶರವೆಂದ ೫೧

ರಾವಣನ ವಧೆಗೆ ಕಾರಣನಾದವನೇ ಕಾಪಾಡಬೇಕು" ಎಂದು ಕೇಳಿಕೊಂಡ. ೪೮. ಉಪಮಾರಹಿತ, ಆನಂದಾತ್ಮ, ಅಭೇದ, ದೋಷರಹಿತ, ಅಳತೆಮೀರಿದ, ಅಸಾಧ್ಯ, ಲೆಕ್ಕಕ್ಕೆ ಸಿಗದ, ಮರಣವಿಲ್ಲದ, ಹುಟ್ಟಿಲ್ಲದ, ನಾಶವಿಲ್ಲದ, ಪುನರ್ಜನ್ಮರಹಿತ, ಅಸೂಯೆಯಿಲ್ಲದ, ಘನಮಹಿಮ, ಘನತೇಜ, ಘನಗುಣ. ಘನಪರಾಕ್ರಮಿ, ತೂಕವುಳ್ಳ ಆದರೆ ತೂಕವಿಲ್ಲದ ಅತಿಶಯ ಬಲಶಾಲಿಯಾದ ದೇವ ನನ್ನನ್ನು ಸಲಹು" ಎಂದ. ೪೯. "ಸರ್ವದಿಕ್ಕುಗಳಲ್ಲಿಯೂ ಮುಖವುಳ್ಳ, ಎಲ್ಲ ಕಡೆಗಳಲ್ಲಿಯೂ ಕಣ್ಣುಳ್ಳ, ಎಲ್ಲ ಕಡೆಗಳಲ್ಲೂ ತೋಳುಗಳುಳ್ಳ, ಸಮಸ್ತಲೋಕಗಳೇ ಶರೀರವಾಗುಳ್ಳ ಸುಪ್ರಸಿದ್ಧ ನಾದ, ವಿಶ್ವವೃಕ್ಷನಾದ, ಸಮಸ್ತಲೋಕಗಳ ಪ್ರಭುವಾದ, ವಿಶ್ವವೇ ಆತ್ಮವಾಗುಳ್ಳವ ನಾದ, ವಿಶ್ವಕಲ್ಪನೆಯುಳ್ಳವನಾದ, ಸಕಲ ಲೋಕಗಳಿಂದ ಹೊಗಳಿಸಿಕೊಳ್ಳುವ, ವಿಶ್ವದೊಡೆಯ, ವಿಶ್ವಸ್ಥಿತ, ವಿಶ್ವವಿಶ್ವಾತ್ಮಕ ದೇವ ಈ ಜಡಜೀವಿಯನ್ನು ಸಲಹಬೇಕು" ಎಂದು ಪ್ರಾರ್ಥಿಸಿದ, ೫೦. "ಸ್ವಾಮಿ ಆಲಿಸು, ಬಹುಸಂಖ್ಯೆಯ ಲೋಕಗಳು ಯಾರಿಂದ ಹುಟ್ಟಿವೆಯೋ, ಈ ಮೂರು ಲೋಕಗಳ ರಕ್ಷಣೆಯು ಯಾರಿಂದ ಆಗುತ್ತಿದೆಯೋ, ಯಾವನಿಂದ ಲಯವಾಗುವುದೋ, ಪಂಚ ಭೂತಗಳು ಯಾವನ ಆಜ್ಞೆಯನ್ನು ಪಾಲಿಸುತ್ತವೆಯೋ ಅದನ್ನು ಆಲೋಚಿಸದೆ ನೀನು ಕೊಲ್ಲಲು ಮನಸ್ಸು ಕೊಡುವುದುಂಟೇ ದೇವ ?" ಎಂದನು ಸಾಗರ. ೫೧. "ಕೋಟಿ ಬ್ರಹ್ಮಾಂಡಗಳನ್ನೊಳಗೊಂಡಿರುವವನೊಡನೆ ಧೂರ್ತತನ ಸಲ್ಲುವುದೇ ? ನೂರು ಕೋಟಿ ಯಮರ ಪರಾಕ್ರಮವುಳ್ಳವನೊಡನೆ ನನಗೆ ಅಹಂಕಾರದ ಮಾತೇ ? ಕೋಟಿ

ಮೇರುವೆತ್ತಣುವೆತ್ತ ಸಿಡಿಲ ಕ । ಠೋರನಿಸ್ವನವೆತ್ತ ಜಂಬುಕ
ನಾರುಭಟೆ ತಾನೆತ್ತ ತರಣಿಯ ಕಿರಣದುಬ್ಬರದ
ಧಾರೆಯೆತ್ತಲು ಮಿಂಚುಬುಳುವಿನ । ದಾರತೆಯ ಬೆಳಗೆತ್ತ ವಿಶ್ವಾ
ಧಾರನೇ ತಾನೆತ್ತ ಸರಳಿನಗುಚಿತವೇಯೆಂದ ೫೨

ಸಿಡಿಲಿನುಱುಬೆಯನಾನಬಲ್ಲುದೆ । ಕೊಡೆ ಲಯಾಗ್ನಿಯ ತೂಱುಗಿಡಿಗಳ
ತಡೆವುದೇ ತೃಣವಕಟ ಕಲ್ಪದ ಕಡಲ ಕಡುಹಿಂಗೆ
ಕೊಡನು ಕೊಂಬುದೆ ದೇವ ನೀ ಮುನಿ । ದಡೆಯಲಾನೇ ನಿನಗೆ ಗುರಿ ನಗೆ
ಗೆಡೆಯ ಹೊತ್ತೆ ನಿರರ್ಥ ಲೋಕದೊಳೆಂದನಾ ಜಲಧಿ ೫೩

ಈ ಸಮುದ್ರ ಕುಲಾದ್ರಿ ಭೂವ್ಯಾ । ಕಾಶ ಚಂದ್ರಾದಿತ್ಯ ವಾಯು ಹು
ತಾಶನ ಗ್ರಹರಾಶಿ ತಾರೆಗಳಾರ ತೇಜದಲಿ
ಈ ಶರೀರದ ರೋಮಕೂಪನಿ । ವಾಸಿಗಳಲಾ ದೇವ ತಾ ನಿನ
ಗೇಸಱವನಂಬೇಕೆ ದಾಟಲು ಬಾರದೇಯೆಂದ ೫೪

ಹನುಮ ದಾಟಿದಡೇನ ಮಾಡಿದೆ । ಮುನಿದೆನೇ ನಾನಾತನಲಿ ಮುನಿ
ಮುನಿದು ಕುಡಿದಂದೇನಮಾಡಿದೆನಾ ಮುನೀಂದ್ರಂಗೆ
ಕನಲಿ ಭಾರ್ಗವ ಕೋಪಿಸಿದಡಾ । ತನಲಿ ಸಂಕಟಗೊಂಡೆನೇ ಸಲೆ
ಹನನಕಂಗೈಸುವುದು ಯೋಗ್ಯವೆ ದೇವ ನಿನಗೆಂದ ೫೫

ರುದ್ರರ ರೋಷವುಳ್ಳವನೊಡನೆ ನಾನು ಕೋಪಗೊಳ್ಳಬಹುದೇ ? ಕೋಟಿ ಪ್ರಳಯಾಗ್ನಿಗಳ ತೇಜಸ್ಸನ್ನುಳ್ಳವನಿಗೆ ನಾನು ವಿರೋಧ ತೋರಿಸಬಹುದೇ ? ನನ್ನ ಮೇಲೇಕೆ ಬಾಣ ?" ಎಂದ ಸಾಗರ. ೫೨. "ಮೇರುವೆಲ್ಲಿ ಅಣುವೆಲ್ಲಿ ? ಸಿಡಿಲಿನ ಕಠೋರ ಶಬ್ದವೆಲ್ಲಿ, ನರಿಯ ಕೂಗು ತಾನೆಲ್ಲಿ ? ಸೂರ್ಯನ ಪ್ರಖರವಾದ ಕಿರಣಗಳೆಲ್ಲಿ, ಮಿಂಚುಹುಳುವಿನ ಸಹ್ಯವಾದ ಬೆಳಕೆಲ್ಲಿ ? ವಿಶ್ವಕ್ಕೆ ಆಧಾರಸ್ವರೂಪನಾದ ನೀನೆಲ್ಲಿ ನಾನೆಲ್ಲಿ ? ನನ್ನ ಮೇಲೆ ಬಾಣಪ್ರಯೋಗವು ಉಚಿತವಾದುದೇ ?" ಎಂದ. ೫೩. "ಸಿಡಿಲಿನ ರಭಸದ ಹೊಡೆತವನ್ನು ಕೊಡೆಯು ತಡೆಯಬಲ್ಲುದೆ ? ಪ್ರಳಯಾಗ್ನಿಯಿಂದ ಸಿಡಿಯುವ ಕಿಡಿಗಳನ್ನು ಹುಲ್ಲು ತಡೆಯುವುದೇ ? ಪ್ರಳಯಸಾಗರದ ಉಂಡೆಯನ್ನು ಕೊಡ ತುಂಬಿಕೊಳ್ಳಬಲ್ಲುದೇ ? ಸ್ವಾಮಿ, ನೀನು ಕೋಪಗೊಂಡರೆ ನಾನು ನಿನಗೆ ಗುರಿಯಾಗಬಲ್ಲೆನೆ ? ಲೋಕದಲ್ಲಿ ವ್ಯರ್ಥವಾಗಿ ನಗೆಗೀಡಾದೆ" ಎಂದನು ಸಾಗರ. ೫೪. "ಈ ಸಮುದ್ರ, ಕುಲಪರ್ವತ, ಭೂಮಿ, ಆಕಾಶ, ಚಂದ್ರ, ಸೂರ್ಯ, ವಾಯು, ಅಗ್ನಿ, ಗ್ರಹಗಳು, ನಕ್ಷತ್ರಗಳು ಯಾರ ತೇಜಸ್ಸಿನಿಂದ ಈ ಶರೀರದ ಕೂದಲ ಕುಳಿಗಳಲ್ಲಿ ವಾಸಮಾಡುವರೋ ಆ ಸ್ವಾಮಿಯಾದ ನಿನಗೆ ನಾನೆಷ್ಟರವನು ? ನೀನು ಬಾಣವನ್ನು ಹಿಡಿಯಬೇಕೇ, ಸಮುದ್ರವನ್ನು ನೀನು ದಾಟಬಾರದೇ ?" ಎಂದು ಕೇಳಿದ. ೫೫. "ಹನುಮಂತನು ಸಾಗರವನ್ನು ದಾಟಿದಾಗ ನಾನೇನು ಮಾಡಿದೆ ? ಕೋಪಿಸಿಕೊಂಡೆನೇ ? ಕಡುಗೋಪದಿಂದ ಅಗಸ್ತ್ಯನು ಸಮುದ್ರವನ್ನು ಕುಡಿದಾಗ ನಾನೇನು

ತಾನು ಜಡಮುಖನಾದಡಜ್ಞನೆ । ನೀನು ನೀ ತಾ ಮುನಿಯಲಹುದೇ
ಹೀನನಲಿ ಹಿರಿದಾ ಪ್ರಯತ್ನವಿದೇಕೆ ನಿನಗಿನಿತು
ಹೇನನೊರಸುವದೇಕೆ ಶರಸಂ । ಧಾನವಕಟಾ ನಗದಿಹರೆ ವಿ
ಜ್ಞಾನಮುಖವುಳ್ಳವರು ನಿನಗಿದು ಗುಣವೆ ಹೇಳೆಂದ ೫೬

ಅಂಬುನಿಧಿ ಕೇಳ್ ನಿನದೇನೆಂ । ದೆಂಬ ಪರಿ ನಾವಪಸರಣೆ ನುಡಿ
ಗಿಂಬುಗೊಡುವವರಲ್ಲ ಜಗಕನ್ಯಾಯಕೃತರಲ್ಲ
ಇಂಬು ಬೇಡಲಿಕೋಸುಗವೆ ತಪ । ವೆಂಬುದನು ಕೈಕೊಂಡೆವದ ನೀ
ನಿಂಬುಗೊಡದಿರೆ ಬಳಿಕ ಬರಿಸಿದೆವೈಸೆ ನಾವೆಂದ ೫೭

ದೇವರಾವೆಂದೆಮ್ಮನುದ್ಧಕೆ । ನೀವು ನೆಗಹಿದಡಾವು ಮರ್ತ್ಯರು
ದೇವತನ ನಮಗುಳ್ಳಡೀಯಪಶ್ಲಾಘ್ಯವೇ ನಮಗೆ
ನೀವು ಘನಗಂಭೀರರೆಂಬುದ । ನಾವು ಬಲ್ಲೆವು ಪಥವ ಕರುಣಿಸಿ
ನೀವು ಸುಖದಲಿ ಬಿಜಯಮಾಡುವುದೆಂದನಾ ರಾಮ ೫೮

ಬಲ್ಲೆ ನಿನ್ನಂತರವ ಸಾಕಿ । ನ್ನೆಲ್ಲಿ ಪರಿಯಂತರವು ಮುಜ಼್ ನಮ
ಗಲ್ಲವೇತಕೆ ಕಟ್ಟುಗೊಂಬೆನು ನಳನ ಕೈಯಿಂದ
ಕಲ್ಲಿನಲಿ ನಳನೀಗ ನಿರ್ಜರ । ರಲ್ಲಿ ಕೃತಮುಖ ವಿಶ್ವಕರ್ಮನು
ಬಲ್ಲೆ ನೀನೀ ಹದನ ಹೇಳುವುದೇನು ತಾನೆಂದ ೫೯

ಮಾಡಿದೆ ? ಸಿಟ್ಟಿಗೆದ್ದು ಪರಶುರಾಮನು ಕೋಪಿಸಿದರೆ ನಾನು ಅವನಿಂದ ಬಾಧೆಯಾದುದಕ್ಕೆ ಸಂಕಟಪಟ್ಟೆನೇ ? ನನ್ನನ್ನು ಕೊಲ್ಲಲು ಬಯಸುವುದು ಯೋಗ್ಯವೆ ಸ್ವಾಮಿ ?" ಎಂದ. ೫೬. "ನಾನು ಮಂದಬುದ್ಧಿಯುವ (ನೀರಿನ ಮುಖವುಳ್ಳವನು) ನಾದ ಪಕ್ಷಕ್ಕೆ ನೀನು ಅಜ್ಞಾನಿಯೇ ? ನನ್ನಂಥ ಅಲ್ಪನ ಮೇಲೆ ನೀನು ಕಠಿಣವಾಗಿ ಕೋಪಗೊಳ್ಳಬಹುದೇ ? ನಿನಗೇಕೆ ಈ ಮಹಾಪ್ರಯತ್ನ ? ಹೇನನ್ನು ಸಾಯಿಸಲು ಬಾಣ ಪ್ರಯೋಗವೇ ? ವಿಶೇಷಜ್ಞಾನಿಗಳು ನೋಡಿ ನಗುವುದಿಲ್ಲವೇ ? ನಿನಗಿದು ತಕ್ಕುದೇ ಹೇಳು" ಎಂದ ಸಮುದ್ರ. ೫೭. "ಸಾಗರ ಕೇಳು, ನೀನು ಏನು ಮಾತಾಡಿದರೂ ನಾವು ತಪ್ಪುಮಾತಿಗೆ ಅವಕಾಶ ಕೊಡುವವರಲ್ಲ, ಜಗತ್ತಿಗೆ ಅನ್ಯಾಯ ಮಾಡುವವರೂ ಅಲ್ಲ. ನಿನ್ನಲ್ಲಿ ಎಡೆಯನ್ನು ಕೇಳುವ ಉದ್ದೇಶದಿಂದಲೇ ತಪಸ್ಸನ್ನು ಆರಂಭಿಸಿದೆವು. ನೀನು ಎಡೆಯನ್ನು ಕೊಡಲಿಲ್ಲವಾದುದರಿಂದ ನಿನ್ನನ್ನು ಬರುವಂತೆ ಮಾಡಿದೆವು ನಾವು" ಎಂದ ರಾಮ. ೫೮. "ನಮ್ಮನ್ನು ದೇವರು ಎಂದು ನೀವು ಆಕಾಶಕ್ಕೇರಿಸಿ ಹೊಗಳಿದರೂ ನಾವು ಮಾನವರು. ದೇವತನವು ನಮಗಿದ್ದ ಪಕ್ಷದಲ್ಲಿ ನಮಗೆ ಈ ಕೇಡು ಸಂಭವಿಸಬಹುದೇ ? ನೀವು ಶ್ರೇಷ್ಠ ಗಂಭೀರವ್ಯಕ್ತಿಗಳೆಂಬುದನ್ನು ನಾವು ಬಲ್ಲೆವು. ನಮಗೆ ದಾರಿಯನ್ನು ಕರುಣಿಸಿ ನೀವು ಸುಖವಾಗಿ ದಯಮಾಡಬಹುದು" ಎಂದ ರಾಮ. ೫೯. "ನೀನು ಅವತಾರಪುರುಷನೆಂಬ ಭೇದವನ್ನು ನಾನು ಬಲ್ಲೆ. ಇನ್ನೆಲ್ಲಿಯವರೆಗೆ ಈ ಗುಟ್ಟು. ಇದು ನಮಗಲ್ಲ. ಇನ್ನೇತಕ್ಕೆ ಮಾತು. ನಳನ ಕೈಯಿಂದ ಸೇತುವೆಯ ಬಂಧನಕ್ಕೆ ಒಳಪಡುವನು. ಕಲ್ಲಿನ ಕೆಲಸದಲ್ಲಿ ಇಲ್ಲಿ ನಳ ಮತ್ತು ದೇವತೆಗಳಲ್ಲಿ

ಜೀಯ ನಮ್ಮನು ಪತಿಕರಿಸಿದವೊ । ಲೀಯಗಾಧ ಸಮುದ್ರನನು ತಲೆ
ಗಾಯಬೇಕೆಂದೆಜಿಗಿದರು ತರುಚರ ನಿಶಾಚರರು
ರಾಯನನಿತಜವೇಲೆ ರಾಘವ । ರಾಯನಬುಧಿಗೆ ತೊಟ್ಟ ಘನಶಿಖಿ
ಸಾಯಕಾಗ್ರದೊಳುಗಿಸಿದನು ಕರುಣಾಮೃತಾಂಬುಧಿಯ ೬೦

ನುಡಿಗೆ ತೊಡಿಗೆಗೆ ಕೃಪೆಗೆ ವಿಕ್ರಮ । ದೆಡೆಗೆ ಪಲ್ಲಟವುಂಟೆ ನಿಮ್ಮಯ
ಪೊಡವಿಪತಿಗೆಲೆ ಕೇಳಿದೈ ಕಾಕುತ್ಸ್ಥನೃಪಸೂನು
ಕಡಲಿಗೆಂದನು ಬಳಿಕ ಕರುಣದ । ನುಡಿಯಲರಿಭಟರುಳ್ಳರವರಿ
ದ್ದೆಡೆಯ ಹೇಳಸುಗೊಂಬೆನಂಜದಿರಿನ್ನು ನೀನೆಂದ ೬೧

ಹೇಳಿದನು ಹಗೆಗಳನು ರಘುಭೂ । ಪಾಲಗಂಬುಧಿ ರಾಮನಾ ನುಡಿ
ಗೇಳುತಾಕ್ಷಣ ಬಿಟ್ಟನಾಯೆಡೆಗಾ ಮಹಾಶರವ
ಹೇಳಲೇನದನಳಿದುದೆಂಬ । ತ್ತೇಳುಕೋಟಿ ನಿಶಾಚರರು ತೃಣ
ವೇಳದವೊಲಾ ದ್ವೀಪ ಮರುವನವಾಯ್ತು ನಿಮಿಷದಲಿ ೬೨

ಸುರರು ಸುಮ್ಮಾನಿಸಿದರಬುಧಿಯ । ತರುಣಿಯರು ರತುನಾರತಿಯ ವಿ
ಸ್ತರಿಸಿದರು ರಿಪುವಿಜಯನಾಗೆಂದುಗಿಸಿ ಸೇಸೆಯನು
ಚರಣಕಾನತನಾಗಿ ರಘುಕುಲ । ದರಸ ತೊರವೆಯರಾಯ ನರಕೇ
ಸರಿಯ ಬೀಳ್ಕೊಂಡನು ಸಮುದ್ರನು ಸಕಲ ವಿಭವದಲಿ ೬೩

ವಿಶ್ವಕರ್ಮರ ಕಾರ್ಯಸಾಧಕರು. ನಿನಗೆ ಈ ವಿಷಯ ಗೊತ್ತು. ನಾನು ಹೇಳುವುದೇನಿದೆ" ಎಂದ ಸಾಗರ. ೬೦. "ಸ್ವಾಮಿ, ನಮ್ಮ ಮೇಲೆ ದಯೆತೋರಿದಂತೆ ಈ ಮಹಾಸಾಗರವನ್ನು ರಕ್ಷಿಸಬೇಕು" ಎಂದು ವಾನರರೂ ವಿಭೀಷಣನ ಕಡೆಯ ರಾಕ್ಷಸರೂ ರಾಮನ ಪಾದಗಳಿಗೆರಗಿದರು. ತರುವಾಯ ರಾಘವರಾಯನು ಸಮುದ್ರದ ಮೇಲೆ ಪ್ರಯೋಗಿಸಲು ತೊಟ್ಟ ಮಹಾ ಅಗ್ನಿಯಬಾಣದ ತುದಿಯನ್ನು ಕರುಣಾಮೃತಸಾಗರದಿಂದ ನೆನೆಸಿದನು. ೬೧. ಮಾತು ಕೊಡುವಲ್ಲಿ, ಆಭರಣಗಳನ್ನೀಯುವಲ್ಲಿ, ಕೃಪೆದೋರುವಲ್ಲಿ, ಪರಾಕ್ರಮವನ್ನು ಮೆರೆಯುವಲ್ಲಿ ನಿಮ್ಮ ರಾಜಾರಾಮನು ವ್ಯತ್ಯಾಸ ಮಾಡುವನೆ, ಕೇಳು ಕಕುತ್ಸ್ಥಕುಲದ ರಾಜಕುಮಾರ. ಅನಂತರ ರಾಮನು "ನಿನಗೆ ಹಗೆಗಳಿದ್ದರೆ ಅವರಿರುವ ಸ್ಥಳವನ್ನು ತೋರಿಸು, ಅವರ ಪ್ರಾಣವನ್ನು ತೆಗೆಯುತ್ತೇನೆ ಇನ್ನು ಅಂಜಬೇಡ" ಎಂದು ಸಮುದ್ರನಿಗೆ ಕರುಣೆಯಿಂದ ನುಡಿದನು. ೬೨. ಸಾಗರನು ತನ್ನ ಶತ್ರುಗಳನ್ನು ರಾಮನಿಗೆ ತಿಳಿಸಿದನು. ಆ ಮಾತನ್ನು ಕೇಳಿದ ತಕ್ಷಣ ರಾಮನು ಶತ್ರುಗಳ ಸ್ಥಳಕ್ಕೆ ಮಹಾಸ್ತ್ರವನ್ನು ಬಿಟ್ಟನು. ಅದನ್ನು ಏನೆಂದು ವರ್ಣಿಸಲಿ, ಎಂಬತ್ತೇಳು ಕೋಟಿ ರಾಕ್ಷಸರು ನಾಶವಾದರು ; ಹುಲ್ಲು ಕೂಡ ಏಳದಂತೆ ಆ ದ್ವೀಪವು ಆ ನಿಮಿಷದಲ್ಲಿ ಮರುಭೂಮಿಯಾಯಿತು. ೬೩. ದೇವತೆಗಳು ಆನಂದಿಸಿದರು. ಸಮುದ್ರನ ಪತ್ನಿಯರು ರತ್ನದ ಆರತಿಯನ್ನು ಎತ್ತಿ "ರಿಪುವಿಜಯನಾಗು" ಎಂದು ಹರಸಿ ಅಕ್ಷತೆಯನ್ನು ತಳಿದರು. ತೊರವೆಯಧಿಪತಿ ನರಸಿಂಹನ ಅವತಾರಪುರುಷ ರಾಮನನ್ನು ಸಮುದ್ರನು ಸಕಲ ವೈಭವಗಳಿಂದ ಬೀಳ್ಕೊಂಡನು.

# ಐದನೆಯ ಸಂಧಿ

ಸೂಚನೆ॥ ನಳನು ರಿಪುಸಂಹಾರಕಾಲಾ । ನಳನು ಕಾರುಣ್ಯದಲಿ ಬಿಗಿದನು
ಜಲನಿಧಿಗೆ ಸೇತುವನು ಸಕಲ ಸುರೌಘ ನಲಿದಾಡೆ

ಎಲೆ ಭಗೀರಥವಂಶವಾರುಧಿ । ನಳಿನರಿಪುಸುತ ಕೇಳು ಕರುಣಾ
ಜಲಧಿಯಲ್ಲಾ ಕಾಯ್ದನನ್ವಯನಾಮಧಾರಕನ
ಇಳೆಯನರನೇ ನೋಡು ರಘುಪತಿ । ಸುಲಭನಲ್ಲಾ ಭಕ್ತರಿಗೆ ಹೆ
ಕ್ಕಳವ ಕೇಳ್ಳೈ ಹೇಳುವಡೆ ಬೆಜಗಾ ಮಹೋದಧಿಯ ೧

ಜಗದ ಜನನ ಲಯಂಗಳೆಡೆಯಾ । ಟಗಳಲಡಗುವವಾ ಮಹಾತ್ಮನ
ದೃಗುನಿರೀಕ್ಷೆಯಲುಬ್ಬಲಱಿದೇನಿದ್ದುದಂಬುನಿಧಿ
ಹಗೆಗೆ ಹರಿವನು ಕಂಡ ಭಟರು । ಬ್ಬುಗಳವೋಲುಬ್ಬಿದನು ತೆರೆಗಳು
ಗಗನವನು ಗುಮ್ಮಿದವು ಝಷಾದಿಯ ಜಲಚರಂಗಳಲಿ ೨

ಸುಳಿಸುಳಿಯಲಣದಾಡಿದವು ಘುಳು । ಘುಳುಘುಳುಧ್ವನಿ ಗುಡಿಯಿಱಿದು ಮಂ
ಡಳಿಸಿ ಮುಗಿಲಲಿ ಹಳಚಿದವು ಹೊದಱಿನ ತುಷಾರದಲಿ
ತೊಲಗಲೆಚ್ಚನು ಟಱಿದೆ ಬಾಣವ । ನೊಳಗಱಿಯದಕಟೆನುತ ನೃಪ ಕಳ
ವಳಿಸಲುಬ್ಬಿದುದಬುಧಿ ವಿಬುಧರ ಲೋಕಪರಿಯಂತ ೩

ಸೂಚನೆ॥ ಶತ್ರುಗಳನ್ನು ಸಂಹರಿಸುವ ಪ್ರಳಯಾಗ್ನಿಯಾದ ನಳನು ಕರುಣೆಯಿಂದ ಸಮುದ್ರಕ್ಕೆ ಸೇತುವೆಯನ್ನು ಕಟ್ಟಿದನು. ಆಗ ಸಮಸ್ತ ದೇವತೆಗಳೂ ನಲಿದಾಡಿದರು. ೧. ಭಗೀರಥನವಂಶವೆಂಬ ಸಾಗರಕ್ಕೆ ಚಂದ್ರನಾದ ರಾಮನ ಸುತನೇ ಕೇಳು. ರಾಮನು ಕರುಣಾಜಲಧಿಯಲ್ಲವೇ. ವಂಶಪ್ರಸಿದ್ಧಿ ಪಡೆದ ಸಮುದ್ರನನ್ನು ರಾಮನು ರಕ್ಷಿಸಿದನು. ಈ ಜಗತ್ತಿನ ಮಾನವನೇ ಅವನು. ರಘುಪತಿಯು ಭಕ್ತರಿಗೆ ಸುಲಭನಲ್ಲವೇ. ಮಹಾಸಾಗರದ ಉತ್ಸಾಹವನ್ನು ಕೇಳು, ವರ್ಣಿಸಲು ಆಶ್ಚರ್ಯಕರ. ೨. ಆ ಮಹಾತ್ಮನಾದ ಶ್ರೀಹರಿಯ ದೃಷ್ಟಿ ಬಿದ್ದರೆ ಸಾಕು ಜಗತ್ತಿನ ಹುಟ್ಟು ಸಾವುಗಳು ಅಡಗಿಹೋಗುವವು. ಸಾಗರವು ಉಬ್ಬುವುದು ಏನು ಅಸಾಧ್ಯ. ಶತ್ರುನಾಶವನ್ನು ಕಂಡ ಯೋಧರು ಸಂತೋಷದಿಂದ ಉಬ್ಬುವಂತೆ ಸಮುದ್ರನು ಉಬ್ಬಿದನು. ಸಮುದ್ರದ ಅಲೆಗಳು ನೀರಿನ ಪ್ರಾಣಿಗಳ ಸಮೇತ ಆಕಾಶದೆತ್ತರಕ್ಕೆ ನೆಗೆದವು. ೩. ಸುಳಿಗಳು ಸುಳಿಗಳೊಡನೆ ಕುಣಿದಾಡಿದವು, ಘುಳುಘುಳುಧ್ವನಿಯು ಗಾಢವಾಗಿ ಮೇಲೆದ್ದು ನೀರಿನ ತುಂತುರುಗಳೊಡನೆ ಆಕಾಶದಲ್ಲಿ ಅಪ್ಪಳಿಸಿತು. ಮನಸ್ಸಿನ ಒಳಗನ್ನು ತಿಳಿಯದೆ ದಾರಿ ಬಿಡಲಿ ಎಂದು ಸುಮ್ಮನೆ ಬಾಣವನ್ನು ಬಿಟ್ಟೆನಲ್ಲ ಎಂದು ರಾಮನು ಕಳವಳಿಸುವ ಹಾಗೆ

ಕರೆಸಿ ನಳನಿಂದಱಿವೆವೀತನ । ಪರಿಯನಾತನಲಾಗದಿರೆ ಬಳಿ
ಕುರಿಗೆ ಕುಡಿನೀರೈಸಲೇಯೆನುತತುಳಬಲ ನಳನ
ಬರಿಸೆ ಕೈಮುಗಿದೇನು ಬೆಸಸೆನೆ । ಹರುಹ ಕಂಡ್ಯೆ ಸಾಗರನ ಸಡ
ಗರವ ಕಂಡ್ಯೆ ಕಾಣಿಸಲಿ ನಿನ್ನದಟತನವೆಂದ ೪

ಎನೆ ಹಸಾದವೆನುತ್ತ ಲಂಕೆಗೆ । ಹನುಮ ಹಾರಿದ ಗಿರಿಗೆ ಲಂಘಿಸಿ
ವನಧಿ ಕಂಪಿಸೆ ಕಿತ್ತುತಂದಂಬುಧಿಯ ನೆತ್ತಿಯಲಿ
ಅನಿಮಿಷರು ಭ್ಲಾಪೆನಲು ಹೊಱಿಸಿದ । ನನಿತಕಂಡಸುರಾರಿ ನಸುನಗು
ತಿನತನುಜ ಕೇಳುತ್ತರಾಯ್ತ್ನಮಗಂಬುನಿಧಿಯೆಂದ ೫

ಐಸಲೇ ತಾನೇನು ವೆಗ್ಗಳ । ವೈಸರಲಿ ನಳನೆಂದು ಕಿತ್ತನು
ಮಾಸಿಪಾಡಿನಲದ್ರಿಯನು ದಶಯೋಜನಾಂತರದ
ದಾಶರಥಿಸುತ ಕೇಳು ಬೊಬ್ಬಿಱಿ । ದಾ ಸಮುದ್ರದೊಳಿಳುಹಿದನು ಜಲ
ರಾಶಿ ಜಡಿಯಲು ಝುಡಿತೆಯಲಿ ಶತಬಲಿ ಸಗಾಢದಲಿ ೬

ಇಳುಹಿದದ್ರಿಯ ಕಾಣುತೆರೆಯೆಂ । ದಿಳುಹಿತೊಡಲಲಿ ತಿಮಿ ತಿಮಿಂಗಿಲ
ನಳವಡಿಸಿದುದು ತಿಮಿಯನುಱೆ ಬಳಿಕಾ ತಿಮಿಂಗಿಲನ
ಗುಳಿಗೆಗೊಂಡುದು ಘನತಿಮಿಂಗಿಲ । ನುಳಿಯೆ ಬಳಿಕಾ ಮಾನನುದರಾ
ನಲಗೆ ಕೊಟ್ಟೊಡನಱಿಸಿತೆರೆಯನು ಮಕರವಬ್ಧಿಯಲಿ ೭

ಸ್ವರ್ಗಲೋಕದವರೆಗೂ ಸಮುದ್ರವು ಹೆಚ್ಚಿತು. ೪. "ನಳನನ್ನು ಕರೆಸಿ ಈತನ ರೀತಿಯನ್ನು ಆತನಿಂದ ತಿಳಿದುಕೊಳ್ಳುವೆನು, ಅವನಿಂದ ಸಾಧ್ಯವಾಗದಿದ್ದರೆ ಅಗ್ನಿಗೆ ಸಮುದ್ರದ ನೀರನ್ನು ಕುಡಿಸುವೆನು" ಎನ್ನುತ್ತ ರಾಮನು ಮಹಾಬಲಶಾಲಿ ನಳನನ್ನು ಕರೆಸಿದನು. ನಳನು ಬಂದು ಕೈಮುಗಿದುಕೊಂಡು 'ಏನು ಅಪ್ಪಣೆ ?' ಎಂದು ಕೇಳಲು "ಸಮುದ್ರದ ವಿಸ್ತಾರವನ್ನೂ ಸಡಗರವನ್ನೂ ನೋಡಿದೆಯ ? ನಿನ್ನ ಶಕ್ತಿಯನ್ನು ತೋರಿಸು" ಎಂದನು ರಾಮ. ೫. ರಾಮನ ಮಾತಿಗೆ 'ಮಹಾಪ್ರಸಾದ' ಎಂದು ಹೇಳಿ ಲಂಕೆಗೆ ಹನುಮಂತನು ಹಾರುವಾಗ ಅವನು ಪಾದವನ್ನೂರಿ ನಿಂತಿದ್ದ ಮಹೇಂದ್ರ ಪರ್ವತಕ್ಕೆ ನೆಗೆದು ಸಾಗರವು ನಡುಗುತ್ತಿರಲು ಬೆಟ್ಟವನ್ನು ಕಿತ್ತು ತಂದು ಸಮುದ್ರದ ಮೇಲೆ ಹಾಕಿದರು. ಇದನ್ನು ನೋಡಿ ದೇವತೆಗಳು 'ಭಲಾ !' ಎಂದರು. ಇದನ್ನು ನೋಡಿದ ರಾಮನು ನಸುನಗುತ್ತ, "ಸುಗ್ರೀವ ಕೇಳು, ಸಾಗರವು ನಮಗೆ ಮಾರಿದುದು" ಎಂದು ಹೇಳಿದನು. ೬. 'ನಳನು ಇದರಲ್ಲಿ ತಾನೇನು ಹೆಚ್ಚು' ಎಂದು ಆಣೆಹಾಕುತ್ತ ಶತಬಲಿಯು ಹತ್ತುಯೋಜನ ಪ್ರಮಾಣದ ಬೆಟ್ಟವನ್ನು ಕಿತ್ತನು. ದಾಶರಥಿಸುತ ಕೇಳು, ಶತಬಲಿಯು ಬೊಬ್ಬಿರಿದು ಬೆಟ್ಟವನ್ನು ರಭಸದಿಂದ ಸಮುದ್ರದೊಳಕ್ಕೆ ಇಳಿಸಿದ ಕೂಡಲೇ ನೀರು ಅಪ್ಪಳಿಸಿತು. ೭. ಸಮುದ್ರದೊಳಕ್ಕೆ ಇಳಿಸಿದ ಬೆಟ್ಟವನ್ನು ತನಗೆ ಹಾಕಿದ ಆಹಾರ (ಎರೆ) ಎಂದು ಅದನ್ನು ತಿಮಿಯು ಹೊಟ್ಟೆಯೊಳಕ್ಕೆ ಇಳಿಸಿತು. ಆ ತಿಮಿಯನ್ನು ತಿಮಿಂಗಿಲವು ನುಂಗಿತು. ಅನಂತರ ಆ ತಿಮಿಂಗಿಲವನ್ನು ದೊಡ್ಡ

ಒಡನೆ ಗಜ ಗವಯಾದಿ ನಾಯಕ । ರಡಸಿ ಹಾಯ್ಕಿದರದ್ರಿಗಳನವ
ನೊಡನೊಡನೆ ನುಂಗಿದವು ನೆರೆದವು ಮತ್ತೆ ಮಕರಚಯ
ಕಡಲು ಕಲಕಿತು ನೆಗಳುಗಳ ಬಲು । ಗಡಿಯ ಮೀನಿನ ಬವರದಲಿ ಜಗ
ದೊಡೆಯ ರಘುರಾಜೇಂದ್ರಚಂದ್ರಮ ಕಂಡು ಬೆಜಗಾದ ೮

ಬಳಿಕ ಕಪಿಪತಿ ಕರೆದು ಸುಭಟಾ । ವಳಿಗೆ ನುಡಿದನು ನಿಮ್ಮ ಭುಜಬಲ
ದಳವ ಮೆಱೆಯಿ ದಶಾನನನ ಸಂಗ್ರಾಮಸಮಯದಲಿ
ಅಳವು ನಳನೊಡನೇಕೆ ಸಾಕಿದ । ರೞಿಕೆ ನಮ್ಮದೆನುತ್ತ ವಾಸಿಯ
ಬಲುಹ ಬಿಡಿಸಿದು ಬಳಿಯ ನಿಂದಿದನಬುಜಸಖಸೂನು ೯

ಕರೆದು ನೀಲಾಂಗದರ ಹಸುಗೆಗೆ । ಹರಿಬಲವನೆರಡಾಗಿ ಸೇರಿಸಿ
ಗಿರಿಗಳಿಗೆ ಬೆಸಸಿದನು ಬಂದನು ಸಾಗರದ ತಡಿಗೆ
ಸರಸಿಜಾಸನಸುತನ ಮತವಿ । ಸ್ತರಣದಲಿ ದಶಯೋಜನದ ಪರಿ
ಸರದ ಪಾರಾವಾರವನು ಸೂತ್ರಿಸಿದನಗಲದಲಿ ೧೦

ಬಳಿಗೆಲಸದವರಿವರು ಗಿರಿಸಂ । ಕುಲವ ನೀಡುವರಿವರು ಕಲುಸಂ
ಕಲೆಯುವರು ಸಂವರಣೆಯುವರಿವರೆಂದು ಬಲುಭಟರ
ಹೊಳಕೆಗಳ ಹೊಮ್ಮೞಿದು ಕೊಟ್ಟನು । ನಳನ ವಶಕೇನೆಂಬೆ ಬೊಬ್ಬೆಯ
ಕಳಕಳಕೆ ಕಡುಹಾಯ್ತು ಕಾಲ್ದುಳಿಯಲಿ ಕಪೀಶ್ವರರ ೧೧

ತಿಮಿಂಗಿಲವು ಗುಳಿಗೆಯಂತೆ ನುಂಗಿಹಾಕಿತು. ಅನಂತರ ಮಕರವು ಆ ದೊಡ್ಡ ತಿಮಿಂಗಿಲವನ್ನು ಹೊಟ್ಟೆಯ ಬೆಂಕಿಗೆ ಆಹುತಿಕೊಟ್ಟು ಪುನಃ ಎರೆ ದೊರಕುವುದೇನೋ ಎಂದು ಸಮುದ್ರದಲ್ಲಿ ಹುಡುಕಿತು. ೮. ಗಜ ಗವಯನೇ ಮೊದಲಾದ ಕಪಿನಾಯಕರು ಬಂಡೆಗಳನ್ನು ಎತ್ತಿ ಸಮುದ್ರದೊಳಕ್ಕೆ ಹಾಕಿದರು. ಕೂಡಲೆ ಅವುಗಳನ್ನು ನುಂಗಿ ಮತ್ತಷ್ಟು ಮಕರಗಳು ಬಂದು ಸೇರಿದವು. ಮೊಸಳೆಗಳ ಮತ್ತು ದೊಡ್ಡ ಬಲಶಾಲಿ ಮೀನುಗಳ ನಡುವೆ ನಡೆಯುತ್ತಿದ್ದ ಕಾದಾಟವನ್ನು ಕಾಣುತ್ತ ರಘುರಾಮನು ಬೆರಗಾದನು. ೯. ಅನಂತರ ಸುಗ್ರೀವನು ಕಪಿವೀರರನ್ನು ಕರೆದು, "ರಾವಣನ ಮೇಲೆ ನಡೆಯುವ ಯುದ್ಧದ ಸಂದರ್ಭದಲ್ಲಿ ನಿಮ್ಮ ತೋಳ್ಬಲದ ಕೆಚ್ಚನ್ನು ತೋರಿಸಿ. ನಳನೊಡನೆ ನಿನ್ನ ಸಾಮರ್ಥ್ಯ ಪ್ರದರ್ಶನವೇಕೆ ? ಸಾಕು, ಈ ಬಂಡೆಗಳನ್ನು ತಂದಿಳಿಸುವ ಕೆಲಸ ನಮ್ಮದು" ಎಂದು ಹೇಳಿ ಅವರ ಮೇಲಾಟವನ್ನು ನಿಲ್ಲಿಸಿ ಪಕ್ಕದಲ್ಲಿ ನಿಂತುಕೊಂಡನು. ೧೦. ನೀಲ ಮತ್ತು ಅಂಗದರನ್ನು ಕರೆದು ಕಪಿಸೈನ್ಯವನ್ನು ಎರಡು ಭಾಗ ಮಾಡಿ ಅವರ ವಶಕ್ಕೆ ಕೊಟ್ಟು ಬಂಡೆಗಳನ್ನು ತರುವ ಕಾರ್ಯವನ್ನು ಅವರಿಗೆ ನೇಮಿಸಿದನು. ಅಲ್ಲಿಂದ ಸಾಗರದ ದಡಕ್ಕೆ ಬಂದು ಜಾಂಬವನ ಅಭಿಪ್ರಾಯಕ್ಕನುಗುಣವಾಗಿ ಸಮುದ್ರದ ಹತ್ತು ಯೋಜನ ಅಗಲವನ್ನು ಅಳತೆಮಾಡಿ ಗುರುತಿಸಿದನು. ೧೧. ಇವರು ಬಳಿಗೆಲಸದವರು, ಇವರು ಬಂಡೆಗಳನ್ನು ಕೊಡುವವರು, ಇವರು ಕಲ್ಲುಗಳನ್ನು ಕಲೆಹಾಕುವವರು, ಇವರು ಸಿದ್ಧಗೊಳಿಸುವವರು ಎಂದು ವೀರರನ್ನು ತೋರಿಕೆಯಿಂದ ಅವರ ಸಾಮರ್ಥ್ಯವನ್ನು ಅರಿತುಕೊಂಡು ನಳನ ವಶಕ್ಕೆ ಒಪ್ಪಿಸಿಕೊಟ್ಟನು. ಕಪಿನಾಯಕರ ಕಾಲುಗಳ ತುಳಿತದಿಂದ ಭಾರಿ

ಕರೆದು ರಾಕ್ಷಸಸಾರ್ವಭೌಮನ । ನಿರಿಸಿದನು ಪ್ರತ್ಯೂಹ ದಶಕಂ
ಧರನ ದೆಸೆಯಿಂದಾಗದವೊಲಂಬುಧಿಯ ದಕ್ಷಿಣದ
ಪರಿಸರದ ವೇಲಾಚಲದ ಬಂ । ಧುರದ ಬಹಿರಾವರಣದಲಿ ವಾ
ನರವಿಶಾರದ ಭಟರ ಪರುಟವ ಪಾರುಪತ್ಯದಲಿ ೧೨

ಬಳಿಕಲೇವೇಳುವೆನು ಕಪಿಬಲ । ದುಲುಹಿಗುಡಿದದ್ರಿಗಳ ಬೇರ್ಗಳು
ಕಳಚಿಬಿದ್ದವು ಬೀದಿವರಿಗಳ ಬೆರಳ ಸೋಂಕಿನಲಿ
ತಳಮುಗುಚಿದವು ತೋರಗಿರಿ ಕರ । ತಳದ ಬಿಗುಹಿಗೆ ಕುಲಮಹೀಧರ
ಕಳಲಿದವು ಕಡುಹೆಂತೊ ಕಪಿರಾಜೇಂದ್ರಸೈನಿಕದ ೧೩

ಸಾರಕಟ್ಟಿತು ಸಾಗರಕೆ ವ್ಯಂ । ದಾರಕಾಚಲವಿಡಿದು ಗಿರಿಗಳ
ಭಾರಕಿಳೆ ಕಡು ತಗ್ಗುತಿರ್ದುದು ನಿಮಿಷ ನಿಮಿಷದಲಿ
ಆರು ಬದುಕುವವರಮಮ ಫಣಿಪತಿ । ಕೂರುಮರ ಕೊರಳೆಡೆಗಳಲಿ ಬೀ
ಡಾರವಾದುದು ಹೃದಯಗತಸಪ್ರಾಣ ಮಾರುತನ ೧೪

ಬೀಳುತಿರ್ದವು ಬೆಟ್ಟ ಕಪಿಗಳ । ತೋಳನೆಗಹಿನಲದ್ರಿಘಾತದ
ಲೇಳುತಿರ್ದವು ತೆರೆಗಳೊದೆದಂಬರದ ತುದಿವರೆಗೆ
ತೂಳಿ ತೇರೈಸುವ ಜಲೋಗ್ರ । ವ್ಯಾಳ ಗಜ ಪಾಠೀನಕುಲ ಮಕ
ರಾಳಿ ಮೈಮರೆಸಿದವು ಮದವಕ್ಕುಡಿಸಿತಂಬುಧಿಯ ೧೫

ಗಲಾಟೆಯಾಯಿತು. ಇದನ್ನು ಏನೆಂದು ವರ್ಣಿಸಲಿ. ೧೨. ರಾಕ್ಷಸಚಕ್ರವರ್ತಿ ವಿಭೀಷಣ ನನ್ನು ಕರೆದು ದಶಕಂಠನ ಕಡೆಯಿಂದ ವಿಘ್ನ ಬರದಂತೆ ನೋಡಿಕೊಳ್ಳುವಂತೆ ಹೇಳಿ ಸಮುದ್ರದ ದಕ್ಷಿಣಪ್ರದೇಶದ ದಡದ ಪರ್ವತದ ಹೊರಾವರಣದಲ್ಲಿ ವಾನರಶ್ರೇಷ್ಠರ ವಿಸ್ತೃತ ಮೇಲ್ವಿಚಾರಣೆಯಲ್ಲಿ ಅವನನ್ನು ನಿಯಮಿಸಿದನು. ೧೩. ಆ ಮೇಲಿನದನ್ನು ಏನು ಹೇಳಲಿ. ಕಪಿಸೈನ್ಯದ ಕೂಗಿಗೆ ಬೆಟ್ಟಗಳು ಮುರಿದು ಬೇರು ಕಳಚಿ ಕೆಳಕ್ಕೆ ಬಿದ್ದವು, ಸ್ವೇಚ್ಛೆಯಾಗಿ ಓಡಾಡುವ ಕಪಿವೀರರ ಬೆರಳು ತಗುಲಿ ದೊಡ್ಡಪರ್ವತಗಳು ಅಡಿ ಮೇಲಾದವು. ಕೈಯ ಬಿಗಿಹಿಡಿತಕ್ಕೆ ಕುಲಪರ್ವತಗಳು ಕುಸಿದವು. ಕಪಿಗಳೊಡೆಯ ಸುಗ್ರೀವನ ಸೈನ್ಯದ ಪರಾಕ್ರಮವೆಷ್ಟೋ! ೧೪. ಮೇರುಪರ್ವತದಿಂದ ಹಿಡಿದು ಸಾಗರಕ್ಕೆ ಸೇತುವೆ ಕಟ್ಟಿದರು. ಸೇತುವೆಗೆ ಹಾಕಿದ ಬಂಡೆಗಳ ಭಾರಕ್ಕೆ ನಿಮಿಷ ನಿಮಿಷಕ್ಕೂ ಭೂಮಿಯು ತಗ್ಗುತ್ತಿತ್ತು. ಈ ಭಾರಕ್ಕೆ ಯಾರುತಾನೆ ಬದುಕುವರು! ಆದಿಶೇಷ ಕೂರ್ಮರ ಪ್ರಾಣ ಹತ್ತಿಕೊಂಡು ಬಂದು ಕೊರಳಲ್ಲಿ ಉಸಿರು ಸಿಕ್ಕಿಕೊಂಡಿತು. ೧೫. ಕಪಿಗಳು ತೋಳು ಗಳನ್ನು ಮೇಲಕ್ಕೆತ್ತಿದ ರಭಸಕ್ಕೆ ಬಂಡೆಗಳು ಬೀಳುತ್ತಿದ್ದವು. ಬಂಡೆಗಳು ನೀರಿಗೆ ಬಿದ್ದ ಏಟಿಗೆ ಅಲೆಗಳು ಆಕಾಶದ ತುದಿಯವರೆಗೆ ಏರುತ್ತಿದ್ದವು. ನೀರಿನ ಜತೆಯಲ್ಲಿ ಮೇಲಕ್ಕೆ ಹಾರಿ ಕೆಳಗೆ ಬೀಳುವ ಸಮುದ್ರದ ಉಗ್ರವಾದ ನೀರಿನ ಹಾವುಗಳು, ನೀರಾನೆಗಳು, ಮೀನುಗಳು, ಮೊಸಳೆಗಳು ಅಲ್ಲಿನವರನ್ನು ಮೂರ್ಛೆಗೊಳಿಸಿದವು ಸಮುದ್ರದ ದಪ್ಪ

ಕಡಲ ಕಾಹುರಕಳ್ಳೆವೊಯ್ಲ್ಲನ । ಲಡಗುತರುಹಿಸುತಿರ್ದನಗ್ಗದ
ವಡಬನಘುಮರುಷಣದಲಿರ್ದನು ಮೇಲೆ ಕಮಲಸಖ
ನಡುಗುತಿರ್ದನು ಶೀತದಲಿ ಮೇ । ಲ್ಗಡೆಗೆ ಮಳಲುಬ್ಬರಿಸುತಿರ್ದುದು
ನುಡಿವಡರಿದದನಣುಗ ಕೇಳಾ ಸಿಂಧುಬಂಧನವ ೧೬

ತೀರಿದವು ಗಿರಿ ಮರು ಯವನ ಗಾಂ । ಧಾರ ಗುಜ್ಜರ ಗೌಳ ಮಾಳವ
ಪಾರಸಿಕ ಪಾಂಚಾಲ ಸೇವಣ ಸಿಂಧು ಕಾಂಬೋಜ
ಕೇರಳಾಂಧ್ರ ಕರೂಷ ಕುರು ಹ । ಮ್ಮಾರ ವಂಗ ಕಳಿಂಗದೇಶದ
ಭೂರಿ ಭೂಧರನಿಕರ ನಳನ ಸಮುದ್ರಬಂಧದಲಿ ೧೭

ಹರಿದುದಲ್ಲಿಂ ಮೇಲೆ ಬಲ ಮೋ । ಹರಿಸಿ ಹೊಕ್ಕುದು ಕಿನ್ನರರ ಕಿಂ
ಪುರುಷ ಗುಹ್ಯಕ ಯಕ್ಷ ವಿಧ್ಯಾಧರರ ಖೇಚರರ
ಗರುಡ ಗಂಧರ್ವಾದಿ ನಾನಾ । ಧರಣಿಗಳ ಕುಧರಾಳಿಗಳನಾ
ಶರಧಿಗಡಕಿತು ಸೇನೆ ರಘುರಾಜೇಂದ್ರಚಂದ್ರಮನ ೧೮

ಗಿರಿಗಳೋ ಗೀರ್ವಾಣಶರಧಿಯ । ಸರಿಗಳೋ ಸಂವರ್ತ ಮೇಘದ
ಕರಗಳೋ ಕಾಕುತ್ಸ್ಥವಂಶಶ್ರೀನಿತಂಬಿನಿಯ
ವಿರಚಿತಾಲಂಕೃತೆಯ ಲಾಸ್ಯದ । ಕರತಳದ ಕಂತುಕವೊಯೆನಲು
ಪ್ಪರಿಸಿ ಕೊಪ್ಪರಿಸುತ್ತಲಿರ್ದವು ಗಿರಿ ಸಮುದ್ರದಲಿ ೧೯

ಕುಗ್ಗಿತು. ೧೬. ಸಮುದ್ರದ ರಭಸಕ್ಕೆ ಬಡಬಾಗ್ನಿಯು ಅಳ್ಳೆ ಹೊಡೆದುಕೊಳ್ಳುತ್ತ ಅಡಗಿಕೊಂಡು ಕುಗ್ಗಿ ನೀರಿನ ಸ್ನಾನದಲ್ಲಿದ್ದನು. ಗಗನದ ಸೂರ್ಯನು ಶೀತದಿಂದ ನಡುಗುತ್ತಿದ್ದನು. ಆಕಾಶಕ್ಕೆ ಸಮುದ್ರದ ಮರಳು ಎರಚುತ್ತಿತ್ತು. ಸಮುದ್ರಕ್ಕೆ ಸೇತುವೆ ಕಟ್ಟುವುದನ್ನು ವರ್ಣಿಸುವುದು ಅಸಾಧ್ಯ, ಕೇಳು ಕುಮಾರ ಎಂದು ವಾಲ್ಮೀಕಿ ವಿವರಿಸಿದನು. ೧೭. ಮರು, ಯವನ, ಗಾಂಧಾರ, ಗುರ್ಜರ, ಗೌಡ, ಮಾಳವ, ಪಾರಸಿಕ, ಪಾಂಚಾಲ, ಸೇವಣ, ಸಿಂಧು, ಕಾಂಭೋಜ, ಕೇರಳ, ಆಂಧ್ರ, ಕರೂಷ, ಕುರು, ಹಮ್ಮೀರ, ವಂಗ, ಕಳಿಂಗದೇಶಗಳ ಭಾರಿ ಪರ್ವತಗಳ ಬಂಡೆಗಳು ನಳನು ಸಮುದ್ರಕ್ಕೆ ಕಟ್ಟಿದ ಸೇತುವೆಗೆ ಮುಗಿದುಹೋದವು. ೧೮. ಕಪಿಸೈನ್ಯವು ಅಲ್ಲಿಂದ ಹೊರಟು ಗುಂಪುಕೂಡಿ ಕಿನ್ನರ, ಕಿಂಪುರುಷ, ಗುಹ್ಯಕ, ಯಕ್ಷ, ವಿದ್ಯಾಧರ, ಖೇಚರ, ಗರುಡ, ಗಂಧರ್ವವೇ ಮೊದಲಾದ ದೇಶಗಳನ್ನು ಪ್ರವೇಶಿಸಿತು. ರಘುರಾಮಚಂದ್ರನ ಸೈನ್ಯವು ಆ ದೇಶಗಳ ಬೆಟ್ಟಗಳನ್ನು ಸಮುದ್ರಕ್ಕೆ ತಂದು ರಾಶಿಹಾಕಿತು. ೧೯. ದೇವ ಲೋಕದ ಸಾಗರದ ಮಳೆಗಳೋ, ಪ್ರಳಯಮೇಘದ ಕೈಗಳೋ, ಕಾಕುತ್ಸ್ಥವಂಶ ಲಕ್ಷ್ಮಿಯು ಸರ್ವಾಲಂಕೃತಳಾಗಿ ನರ್ತಿಸುತ್ತ ಕೈಗಳಿಂದೆಸೆಯುತ್ತಿರುವ ಚಂಡೋ ಅಥವಾ ಇವು ಬಂಡೆಗಳೋ ಎನ್ನುವಂತೆ ಬಂಡೆಗಳು ಹಾರುತ್ತ ಒಂದಕ್ಕೊಂದು ಬಡಿಯುತ್ತ

ಗಿರಿಗಿರಿಯ ಹೋರಟೆಗೆ ಜಲ ಸೀ । ಕರಗಳಣೆದವು ಧ್ರುವನ ಭವನದ
ಶಿರವ ಮುಗುಳುಪ್ಪರಿಸಿ ಬೀಳುವ ಶೈಲದುಱುಬೆಯಲಿ
ಜರುಹಿದವು ತೆರೆ ದಿಗುತಟವ ಬಲು । ಗಿರಿಯಲಂಬುಧಿ ಗುಮ್ಮುತಿರ್ದುದು
ಸುರರ ಕಡಹದ ಕಡಲ ರಭಸಕೆ ಕೋಟಿಮಡಿಯೆನಲು ೨೦

ಇಡುವ ಗಿರಿಘಾತದ ವಿಘಾತಿಯ । ಕಡಲ ರಭಸಕಜಾಂಡಘಟ ಗು
ಮ್ಮಿಡುತಲಿರ್ದುದು ತೂಗುತಿರ್ದುದು ತನುವನಿಳೆ ಬಳುಕಿ
ಸಿಡಿವ ಸೀರ್ವನಿದಾಗಿನಲಿ ಸೆಡೆ । ದಡಸಿದುದು ಮೇಲ್ವಗಕೆ ಜರುಹಿದ
ವಡಿಗಿಳಿದ ಗಿರಿಯುರಗರಾಯನ ಜಗದ ಜೋಡಿಗಳ ೨೧

ಇಟ್ಟ ಗಿರಿಗಳ ಹಿಡಿಹಿಡಿದು ನಳ । ನೊಟ್ಟಿದನು ಮೆಟ್ಟಿದನು ಕಟ್ಟಿದ
ನಿಟ್ಟಣಿಸಿ ಬಹ ಗಿರಿಯನಾ ಬಳಿಸಲಿಸಿ ಬಹ ಗಿರಿಯ
ಕೊಟ್ಟ ಗಿರಿಗಳ ಕೊಡುವ ಗಿರಿಗಳ । ಕಟ್ಟೆಯಲಿ ಕೌಚಿಕ್ಕಿ ಕೋಪದ
ದಿಟ್ಟಿಯಲಿ ಗಿರಿ ಬರಲಿ ಬೇಗೆಂದದುಹಿದನು ಭಟರ ೨೨

ತನುಜ ಕೇಳೈ ಕೇಳಿದೀ ಮಾ । ತಿನ ಗಡಾವಣೆಗಾ ವನೌಕಸ
ಜನಪನೆದ್ದನು ಹೊದ್ದಿದನು ಬಳಿಕುದಯಪರ್ವತವ
ಕನಲಿ ಕಿತ್ತಸ್ತಾಚಲಕೆ ಲಂ । ಘನೆಯು ಕೊಂಡದ ಕಿತ್ತು ತಂದಿ
ತ್ತನು ನಳಂಗೆ ಸುರೌಘದಬ್ಬರವಱೆಯ ಬೊಬ್ಬೆಯಲಿ ೨೩

ಸಮುದ್ರದಲ್ಲಿ ಬಿದ್ದವು. ೨೦. ಬಂಡೆ ಬಂಡೆಗಳು ಅಪ್ಪಳಿಸಿ ನೀರಿನ ತುಂತುರುಗಳು ಎರಚಿದವು. ಧ್ರುವಲೋಕದ ತುದಿಗೆ ಹಾರಿ ಪುನಃ ಕೆಳಕ್ಕೆ ಬೀಳುವ ಬೆಟ್ಟಗಳ ರಭಸಕ್ಕೆ ಭಾರಿ ಅಲೆಗಳು ಎದ್ದು ದಿಕ್ತಟವನ್ನು ಜರುಗಿಸಿದವು ಭಾರಿ ಬಂಡೆಗಳ ಅಪ್ಪಳಿಸುವಿಕೆಯಿಂದ ಸಮುದ್ರವು ದೇವಾಸುರರು ಕಡೆದ ಕಡಲಿನ ರಭಸಕ್ಕೆ ಕೋಟಿಸಲ ಹೆಚ್ಚು ಎನ್ನುವಂತೆ ಒತ್ತರಿಸಿ ನುಗ್ಗಿತು. ೨೧. ವಾನರರು ಎಸೆಯುವ ಬಂಡೆಗಳು ಅಪ್ಪಳಿಸಿದ ಸಮುದ್ರದ ಅಬ್ಬರಕ್ಕೆ ಬ್ರಹ್ಮಾಂಡವು ಒತ್ತರಿಸುತ್ತಿತ್ತು ; ಭೂಮಿಯು ಬಳುಕಿ ಒಲೆದಾಡುತ್ತಿತ್ತು. ಸಿಡಿಯುವ ತುಂತುರುಹನಿಗಳ ಏಟಿಗೆ ಬಂಡೆಗಳು ಹಾರಿ ಮೇಲುಲೋಕವನ್ನು ಮುತ್ತಿದವು. ನೆಲದಡಿಗಿಳಿದ ಬಂಡೆಗಳಿಂದಾಗಿ ಪಾತಾಳಲೋಕಗಳ ಸೇತುವೆಯು ಜರುಗಿತು. ೨೨. ವಾನರರು ಎಸೆದ ಬಂಡೆಗಳನ್ನು ಆತುಕೊಂಡು ನಳನು ಅವುಗಳನ್ನು ಸಮುದ್ರದಲ್ಲಿ ರಾಶಿಹಾಕಿ ಚೆನ್ನಾಗಿ ತುಳಿದು ಸೇತುವೆ ಕಟ್ಟಿದನು. ಒಟ್ಟಾಗಿ ಬರುವ, ಒಂದರ ಮೇಲೆ ಒಂದರಂತೆ ಬರುವ, ಕೈಗೆ ಕೊಟ್ಟ ಮತ್ತು ಕೊಡುವ ಬಂಡೆಗಳನ್ನು ಕಟ್ಟೆಯಲ್ಲಿ ಕವುಚಿ ಹಾಕಿ ಕೋಪದಿಂದ ದೃಷ್ಟಿಸುತ್ತ ವಾನರವೀರರನ್ನು 'ಬಂಡೆ ಬರಲಿ' ಎನ್ನುತ್ತ ಗದರಿಸಿದನು. ೨೩. ಕುಮಾರನೇ ಕೇಳು, ನಳನ ಈ ಮಾತಿನ ಗದ್ದಲವನ್ನು ಕೇಳಿ ಕಪಿಗಳೊಡೆಯ ಸುಗ್ರೀವನು ಎದ್ದು ಉದಯಪರ್ವತಕ್ಕೆ ಬಂದನು. ಕೆರಳಿ ಅದನ್ನು ಕಿತ್ತು ಅಲ್ಲಿಂದ ಪಶ್ಚಿಮಪರ್ವತಕ್ಕೆ ನೆಗೆದು ಅದನ್ನೂ ಕಿತ್ತು ದೇವತೆಗಳ ದೊಡ್ಡ ನಗಾರಿಗಳ ಬೊಬ್ಬೆ

ಮೇಲೆ ಮೇಲಬ್ಬರಿಸಿದವು ನಿ । ಸ್ಸಾಳತತಿ ತಳಮಗುಚುವಗಣಿತ
ಶೈಲದೆಡೆಗಳಲಟ್ಟುಗಹಳೆಗಳಟ್ಟಣಿಸಿ ಹರಿವ
ಧಾಳಿಗಳಲೊದಱದವು ಗಿರಿಗಳ । ಬೀಳಿಕೆಯುಲಬ್ಬರಿಸಿದವು ಸಂ
ಬಾಳಿಸಿತು ಸೌರಂಭ ಸುರರನು ಸೇತುಬಂಧನದ ೨೪

ವಿನುತ ಕಪಿ ಶತಕೂಟಪರ್ವತ । ವನು ಸುಷೇಣ ಸುದರ್ಶನಾದ್ರಿಯು
ಪನಸನಗ್ಗದ ಪಾರಿಯಾತ್ರ ಮಹಾಮಹೀಧರವ
ಘನವೃಷಾಧಿಪ ವೃಷಭ ಗೋವ । ರ್ಧನವ ಗವಯ ಗವಾಕ್ಷ ಬಳಿಕಂ
ಜನವನರ್ಧವನುಳುಹಿ ತಂದೊಟ್ಟಿದರು ಜಲಧಿಯಲಿ ೨೫

ಸುಮುಖ ದುರ್ಮುಖ ತಾರ ದಧಿಮುಖ । ಕುಮುದ ಮೈಂದ ದ್ವಿವಿಧ ಶತಬಲಿ
ರುಮ ರುಮಣ್ವ ಜ್ಯೋತಿಮುಖ ಗಜಗಂಧಮಾದನರು
ಅಮರಶೈಲದ ಸಾಗರದ ಮ । ಧ್ಯಮದ ಗಿರಿಕೋಟಿಗಳನಹಿಪತಿ
ಕಮಠರೊದಱಲು ಕಿತ್ತು ತಂದೊಟ್ಟಿದರು ಜಲಧಿಯಲಿ ೨೬

ಆರರೆ ಶಿವಶಿವ ಹೊಗಳುವಡೆ ಸಾ । ಸಿರಗಳೆರಡಱ ನಾಲಗೆಯು ಸಡ
ಗರದ ಶೇಷನ ಪಾಡದೇನೈ ಕೇಳಿದೈ ಕುಶನೆ
ಗಿರಿಗಳೋ ತಿರಿಕಲ್ಲಗಳೋ ವಾ । ನರರೊ ವಜ್ರಾಯುಧವೊ ವಿಶ್ವಂ
ಭರೆಯೊ ವಿಗಳಿತ ಜೇನಹುಟ್ಟಿಯೊ ಹೇಳಲೇನೆಂದ ೨೭

ಯಾಗುತ್ತಿರಲು ತಂದು ನಳನಿಗೆ ಕೊಟ್ಟನು. ೨೪. ಬಂಡೆಗಳನ್ನು ಅಡಿಮೇಲಾಗಿ ಉರುಳಿಸುವ ಸಮಯದಲ್ಲಿ ಭೇರಿಗಳು ಮೇಲಿಂದ ಮೇಲೆ ಭೋರ್ಗರೆದವು. ಕಪಿವೀರರು ಒತ್ತಾಗಿ ಮುನ್ನುಗುವ ಸಮಯದಲ್ಲಿ ಅಟ್ಟುಗಹಳೆಗಳು ಶಬ್ದಮಾಡಿದವು. ಬಂಡೆಗಳು ಬೀಳುವಾಗ ವಾದ್ಯಗಳು ಅಬ್ಬರಿಸಿದವು. ಸೇತುವೆಯನ್ನು ಕಟ್ಟುವ ಸಡಗರವು ದೇವತೆಗಳನ್ನು ಸಮಾಧಾನಗೊಳಿಸಿತು. ೨೫. ಕಪಿನಾಯಕನು ಶತಕೂಟಪರ್ವತವನ್ನೂ, ಸುಷೇಣನು ಸುದರ್ಶನಪರ್ವತವನ್ನೂ, ಪನಸನು ಪಾರಿಯಾತ್ರ ಮಹಾಪರ್ವತವನ್ನೂ; ವೃಷಾಧಿಪ ವೃಷಭರು ಗೋವರ್ಧನವನ್ನೂ ತಂದು ರಾಶಿಹಾಕಿದರು. ಬಳಿಕ ಗವಯ ಗವಾಕ್ಷರು ಅಂಜನಪರ್ವತವನ್ನು ಅರ್ಧ ಉಳಿಸಿ ಉಳಿದರ್ಧವನ್ನು ತಂದು ಸಮುದ್ರದಲ್ಲಿ ಗುಡ್ಡೆ ಹಾಕಿದರು. ೨೬. ಸುಮುಖ, ದುರ್ಮುಖ, ತಾರ, ದಧಿಮುಖ, ಕುಮುದ. ಮೈಂದ, ದ್ವಿವಿದ, ಶತಬಲಿ, ರುಮ, ರುಮಣ್ವ, ಜ್ಯೋತಿಮುಖ, ಗಜ, ಗಂಧಮಾದನ-ಮೊದಲಾದ ಕಪಿನಾಯಕರು ಮೇರುಪರ್ವತದ ಸಾಗಂಮಧ್ಯದ ಕೋಟ್ಯಾಂತರ ಬಂಡೆಗಳನ್ನು ಕಿತ್ತು ತಂದು ಸಾಗರದಲ್ಲಿ ರಾಶಿಹಾಕಿದರು. ಬಂಡೆಗಳನ್ನು ಕೀಳುವಾಗ ಆದಿಶೇಷ ಕೂರ್ಮರು ಕಿರುಚಿಕೊಂಡರು. ೨೭. ಕೇಳು ಕುಶ, ಶಿವಶಿವ, ಹೊಗಳಲು ಎರಡು ಸಾವಿರ ನಾಲಗೆಗಳ ಆದಿಶೇಷನ ಕೈಯಲ್ಲಿ ಸಾಧ್ಯವೇ. ಬಂಡೆಗಳೋ, ಅಣ್ಣೆಕಲ್ಲಿನ ಆಟವೋ, ವಾನರರೋ ವಜ್ರಾಯುಧವೋ, ಭೂಮಿಯೋ ಜೇನಿನಗೂಡೋ !

ಆರ ಹವಣಲ್ಲಮಮ ವಾಲಿಕು । ಮಾರನುಬ್ಬಟೆ ಮೀಱಿದುದು ಜಂ
ಭಾರಿಪೌತ್ರನಲಾ ಪರಾಕ್ರಮಚಕ್ರವರ್ತಿಯಲ
ಧಾರುಣಿಯ ಮೇಲುದ್ದಿ ಕರವ ನಿ । ಹಾರದಲಿ ಬೊಬ್ಬಿಱಿದು ಹಾರಿದ
ನಾರೆ ಸುರರನುಪಮ ಮಹಾಕೈಲಾಸಪರ್ವತಕೆ ೨೮

ಸಾಕಿದೀ ಗಿರಿಯೆನುತ ತೋಳ್ಗಳ । ಲೌಕಿ ಝಡಿದಲ್ಲಾಡಲಾ ಜಗ
ದೇಕನಾಥನ ನಗರ ಬೆದಱಿತು ನೆನೆದು ರಾವಣನ
ಈ ಕುತೂಹಲವೇನಿದೆನುತ ಪಿ । ನಾಕಿ ದಿವ್ಯಜ್ಞಾನದಿಂದಱಿ
ದಾ ಕಪಿಯ ಬಳಿಗೈದಿದನು ಹರಗಣದ ಗಡಣದಲಿ ೨೯

ಆರು ನೀನೀ ಗಿರಿಯ ಕೀಳಲಿ । ಕಾರ ಹೇಳಿಕೆ ಕೆಲಕೆ ಸಾರ್ ತ್ರಿಪು
ರಾರಿ ಕೇಳಿದನಾದಡಿಂತಿದು ಬಱಿದೆ ಹೋಗದಲೆ
ಸಾರೆನಲು ಸಾರೆಂಬ ಸಲುಗೆಯ । ನಾರು ಕೊಟ್ಟರು ನಿನಗೆನುತ್ತಡಿ
ಬೇರುಬಿಡೆ ಕಿತ್ತೆತ್ತಿದನು ಕೈಲಾಸಪರ್ವತವ ೩೦

ಪುರಮಥನ ಬೆಱಗಾಗಿ ಬಳಿಕಾ । ಹರಿಸುತಾತ್ಮಜಗೆಂದನೀ ಗಿರಿ
ವರವು ನಮ್ಮದು ನಾವು ಮಿತ್ರರು ನಿಮ್ಮ ರಾಮಂಗೆ
ನಿರುತವಿದು ಹುಸಿಯಲ್ಲ ನೀನಾ । ದರಿಸಿ ನೋಡೈ ನಮ್ಮನೆನುತಾ
ಹರನು ಮೈದೋಱಿದನು ಪಂಚಬ್ರಹ್ಮವಕ್ತ್ರದಲಿ ೩೧

ಏನೆಂದು ವರ್ಣಿಸಲಿ ಎಂದ ವಾಲ್ಮೀಕಿ. ೨೮. ವಾಲಿಕುಮಾರನ ಅತಿಶಯ ಪರಾಕ್ರಮವು ಯಾರ ಕೈಯಲ್ಲಿ ಸಾಧ್ಯ : ಅಬ್ಬಬ್ಬ ! ಇಂದ್ರನ ಮೊಮ್ಮಗನಲ್ಲವೇ, ಪರಾಕ್ರಮಚಕ್ರವರ್ತಿಯಲ್ಲವೇ ? ಕೈಯನ್ನು ನೆಲದ ಮೇಲುಜ್ಜಿ ಬೊಬ್ಬಿರಿದು ಮಹಾಕೈಲಾಸಪರ್ವತಕ್ಕೆ ಹಾರಲು ದೇವತೆಗಳು ಗಟ್ಟಿಯಾಗಿ ಕೂಗಿದರು. ೨೯. ಈ ಪರ್ವತ ಸಾಕು ಎನ್ನುತ್ತ ಬೆಟ್ಟವನ್ನು ತೋಳುಗಳಲ್ಲಿ ಹಿಡಿದೆಳೆದು ಅಲ್ಲಾಡಿಸಲು ಹಿಂದೆ ರಾವಣನು ಕೈಲಾಸವನ್ನು ಅಲ್ಲಾಡಿಸಿದುದನ್ನು ನೆನೆಸಿಕೊಂಡು ಈಶ್ವರನ ನಗರವು ಹೆದರಿಕೊಂಡಿತು. ಇದೇನು ಕುತೂಹಲ ಎನ್ನುತ್ತ ಪಿನಾಕಧರ ಶಿವನು ತನ್ನ ದಿವ್ಯಜ್ಞಾನದಿಂದ ವಿಷಯವನ್ನು ತಿಳಿದುಕೊಂಡು ಶಿವಗಣಗಳೊಡನೆ ಅಂಗದನ ಬಳಿಗೆ ಬಂದನು. ೩೦. "ಯಾರು ನೀನು ? ಈ ಪರ್ವತವನ್ನು ಕೀಳಲು ಯಾರು ಹೇಳಿದರು ? ಅತ್ತ ಹೋಗು" ಎಂದು ಶಿವನು ಕೇಳಿದನು. ಅದಕ್ಕೆ ಅಂಗದನು, "ಇದು ಸುಮ್ಮನೆ ಆಗದು, ಅರುಗಾಗು ಅತ್ತ ಹೋಗು ಎಂಬ ಸಲಿಗೆಯ ಮಾತನ್ನು ನಿನಗೆ ಯಾರು ಹೇಳಿಕೊಟ್ಟರು ?" ಎನ್ನುತ್ತ ಆದರ ಬೇರು ಕಿತ್ತುಬರುವಂತೆ ಕೈಲಾಸಪರ್ವತವನ್ನು ಕಿತ್ತೆತ್ತಿದನು. ೩೧. ತ್ರಿಪುರಾರಿಯು ಆಶ್ಚರ್ಯದಿಂದ ವಾಲಿಪುತ್ರನನ್ನು ಕುರಿತು, "ಈ ಮಹಾಪರ್ವತವು ನಮ್ಮದು, ನಾವು ನಿಮ್ಮ ರಾಮನ ಮಿತ್ರರು. ಇದು ಸತ್ಯ, ಸುಳ್ಳಲ್ಲ. ನೀನು ನಮ್ಮನ್ನು ಗೌರವದಿಂದ ಕಾಣು"

ಬಲ್ಲೆನಿದನಾನಜ್ಞನೇ ಸರಿ । ಯಿಲ್ಲ ನಿನಗೆಂಬುದನು ದಿಟ ನೀವ್
ಸಲ್ಲಿರೇ ರಘುಪತಿಗೆ ಬಿಡೆವಾವ್ ಸ್ವಾಮಿಕಾರಿಯವ
ಎಲ್ಲವೇತಕೆ ದೂರವೇ ರಘು । ವಲ್ಲಭನಲಪ್ಪಣೆ ಬರಲ್ಕಿದ
ನಿಲ್ಲಿ ಬಿಸುಟಾವ್ ಬಂದ ಗತಿಯಲಿ ಗಮಿಸದಿರೆವೆಂದ ೩೨

ಎನೆ ಮಹೇಶ್ವರ ನಗುತ ಮನದು । ಬ್ಬಿನಲಿ ಹರಿಯ ಮಹಾಮಹಿಮೆಗಾ
ನನವನೊಲಿದೀಕ್ಷಿಸಿದನಿದಿರಿನ ಗುಹ ಗಣಾಧಿಪರ
ಇನಕುಲೇಂದ್ರನ ಮೂರ್ತಿಯನು ಟಳಿ । ಕನುಕರಿಸಿ ಕರೆದಂಗದಂಗೆಂ
ದನು ಮುಗುಳ್ನಗೆ ಮಿನುಗೆ ವಿನುತ ವಚೋವಿಲಾಸದಲಿ ೩೩

ತನುಜ ಕೇಳೀ ವಿಶ್ವರೂಪನ । ತನುವಿಗೆನಗೆ ವಿಭಿನ್ನವೇ ಶ್ರುತಿ
ವಿನುತ ವಾಕ್ಯಾರ್ಥಪ್ರಪಂಚವನಱಿದುದಿಲ್ಲವಲ
ಎನಲು ಜೀಯ ಹಸಾದವೆಮಗದ । ರನುಭವವದೇಕೆನುತ ಕೆಲಬಲ
ಕೊನೆಯದಂತಿರೆ ಹಾಯ್ಕಿ ಹವಣಿಸಿಕೊಂಡನುಬ್ಬಟೆಯ ೩೪

ಮುಱಿದನಾ ಪರ್ವತದ ಸುತ್ತಣ । ಹೊಱವಳಯದುಪಪರ್ವತಂಗಳ
ನಿಱುಕಿ ಬಳಿಕೀ ಮಾತನೆಂದನು ಮದನರಿಪುವಿಂಗೆ
ಅಱಿಯದಾನುದ್ದಂಡಿಸಿದುದನು । ಮಱೆವುದದೆ ಗಿರಿ ನಿಮ್ಮದೆಂದೆ
ಚ್ಚಱಿಸಿ ವಹಿಲದೊಳೈದಿ ಬಂದಿತ್ತನು ಮಹೀಧರವ ೩೫

ಎಂದು ನುಡಿದು ಪಂಚಬ್ರಹ್ಮಮುಖಿಗಳನ್ನು ತೋರಿ ಪ್ರತ್ಯಕ್ಷನಾದನು. ೩೨. "ಇದು ನನಗೆ ಗೊತ್ತು : ನಾನು ಅಜ್ಞಾನಿಯೇ ? ನಿನಗೆ ಸಮಾನರಿಲ್ಲ ಎಂಬುದು ನಿಜ: ನೀವು ರಘುಪತಿಗೆ ಮಾನ್ಯರಿರಬಹುದು, ಆದರೆ ನಾವು ಮಾತ್ರ ಸ್ವಾಮಿಕಾರ್ಯವನ್ನು ಬಿಡುವುದಿಲ್ಲ. ಈ ಮಾತೆಲ್ಲ ಏಕೆ ? ರಘುಪತಿ ದೂರವೇ ? ಅವನ ಅಪ್ಪಣೆ ಬಂದರೆ ಇದನ್ನು ಇಲ್ಲಿಯೇ ಬಿಟ್ಟು ನಾವು ಬಂದ ದಾರಿಯನ್ನು ಹಿಡಿದು ಹೋಗುತ್ತೇವೆ" ಎಂದ ಅಂಗದ. ೩೩. ಅಂಗದನ ಮಾತನ್ನು ಕೇಳಿ ಮಹೇಶ್ವರನು ನಗುತ್ತ ಹರಿಯ ಮಹಾಮಹಿಮೆಗೆ ಮನಸ್ಸಿನಲ್ಲಿ ಹರ್ಷಿಸಿ ಎದುರಿನಲ್ಲಿದ್ದ ಗುಹಗಣಪತಿಗಳ ಮುಖವನ್ನು ನೋಡಿದನು. ಶ್ರೀರಾಮನ ಮೂರ್ತಿಯ ರೂಪವನ್ನು ಧರಿಸಿ ಮುಗುಳುನಗುತ್ತ ಮನೋಹರವಾದ ಮಾತುಗಳನ್ನು ಅಂಗದನಿಗೆ ಹೇಳಿದನು. ೩೪. "ಮಗನೇ ಕೇಳು, ಈ ವಿಶ್ವರೂಪಿ ಶ್ರೀಹರಿಯ ದೇಹಕ್ಕೂ ನನಗೂ ಭೇದವೇ ? ವೇದಗಳಲ್ಲಿಯ ಮಾತಿನ ಅರ್ಥವಿಸ್ತಾರವನ್ನು ನೀನು ತಿಳಿಯಲಿಲ್ಲವಲ್ಲ" ಎಂದು ಶಿವನು ಹೇಳಲು, "ಸ್ವಾಮಿ, ಮಹಾಪ್ರಸಾದ. ನಮಗೇಕೆ ಅದರ ಅನುಭವ" ಎಂದು ಹೇಳಿ ಅಂಗದನು ಕೈಲಾಸವು ಆಚೆ ಈಚೆ ಅಲ್ಲಾಡದಂತೆ ಅಲ್ಲಿಯೇ ಇಟ್ಟು ಮುಂದಿನ ಸಾಹಸಕ್ಕೆ ಸಿದ್ಧತೆ ಮಾಡಿಕೊಂಡನು. ೩೫. ಕೈಲಾಸ ಪರ್ವತದ ಹೊರವಲಯದಲ್ಲಿ ಸುತ್ತ ಹಬ್ಬಿದ್ದ ಸಣ್ಣ ಸಣ್ಣ ಬೆಟ್ಟಗಳನ್ನು ಮುರಿದು ಇರುಕಿಕೊಂಡು, "ತಿಳಿಯದೆ ನಾನು ಮೀರಿ ನಡೆದುದನ್ನು ಮರೆಯುವುದು. ಅದೋ ನಿಮ್ಮ ಪರ್ವತ" ಎಂದು ಈಶ್ವರನಿಗೆ ಎಚ್ಚರಿಕೆ ಹೇಳಿ ಅಲ್ಲಿಂದ ಶೀಘ್ರವಾಗಿ ಹೊರಟು

ಇತ್ತ ಗಿರಿಗಳ ನಳನು ಕಟ್ಟೆಗೆ । ಪತ್ತಿಸಿದನಳವಡಿಕೆಯಲಿ ನಡೆ
ಯಿತ್ತು ಸೇತು ಸಮುದ್ರದಲಿ ದಶಯೋಜನಾಂತರವ
ಮತ್ತೆ ಕೇಳೆಲೆ ಕುಶನೆ ನೀಲನು । ದಾತ್ತಚರಿತವನಮಮ ಹಾರಿದ
ನುತ್ತರದ ಮಂದರಮಹಾಗಿರಿಗಮರರಬ್ಬರಿಸೆ ೩೬

ಪಟುಪರಾಕ್ರಮಿಯಲ್ಲವೇ ಕಪಿ । ಕಟಕದಲಿ ನೀಲನಲಿ ನೀರಧಿ
ಘಟವೆನಲುಗಿದು ಗಿರಿಯನಿಕ್ಕೈಗೊಂಡು ಕೀಳುತಿರೆ
ನಿಟಿಲು ನಿಳಿಲೆಂದುಬ್ಬೆ ರಂಭಾ । ವಿಟನ ಕೇಳಿಸಲಿಳಿದು ಕರಸಂ
ಪುಟದಲೀತನ ಬೇಡಿಕೊಂಡನು ಮಧುರವಚನದಲಿ ೩೭

ಈ ಮಹಾಗಿರಿಯಗ್ರದಲಿ ನಾ । ನಾಮರಾವಳಿಯಿದೆ ಸಿಧಾನಿಸ
ಲೀ ಮಹಾಗಿರಿಯಗಲದಲಿ ದಿವ್ಯೌಷಧಂಗಳಿವೆ
ಗೋಮಿನೀಧವ ಸುಪ್ರತಿಷ್ಠಾ । ರಾಮಣೀಯಕಶೈಲವಿದು ಸಿರಿ
ರಾಮಭೃತ್ಯರು ಮುಱಿಯಲನುಚಿತವೆಂದನಮರೇಂದ್ರ ೩೮

ಆರು ನೀನೆನಲಿಂದ್ರನೆಂದೆನೆ । ಲೋರೆಗಣ್ಣನಲಿಂದ್ರನಾಗು ಪು
ರಾರಿಯಾಗಜನಾಗೆನುತ ಬಗೆಗೊಳದೆ ಕೀಳುತಿರೆ
ವೀರ ಬಿಡು ಪರ್ವತವನಿದು ದೈ । ತ್ಯಾರಿ ಸಂಸ್ಥಿತಶೈಲವೆಂದಾ
ನಾರದನು ನಡೆತಂದು ಕೈಮುಗಿದೆಂದನೀ ಹದನ ೩೯

ಬಂದು ಬಂಡೆಗಳನ್ನು ನಳನಿಗೆ ಕೊಟ್ಟನು. ೩೬. ಅಂಗದನು ಕೊಟ್ಟ ಬಂಡೆಗಳನ್ನು ನಳನು ಕಟ್ಟೆಗೆ ಸೇರಿಸಿದನು. ಇದರಿಂದ ಹತ್ತುಯೋಜನ ದೂರ ಸೇತುವೆಯು ಸಮುದ್ರದಲ್ಲಿ ಭದ್ರವಾಗಿ ರಚಿತವಾಯಿತು. ಮುಂದೆ ನೀಲನ ಉನ್ನತ ಸಾಹಸವನ್ನು ಕೇಳು ಕುಶ. ಅಬ್ಬಬ್ಬ ನೀಲನು ಉತ್ತರದಿಕ್ಕಿನ ಮಂದರಮಹಾಪರ್ವತಕ್ಕೆ ಹಾರಿದನು, ನೀಲನ ಸಾಹಸವನ್ನು ನೋಡಿ ದೇವತೆಗಳು ಗಟ್ಟಿಯಾಗಿ ಕೂಗುಹಾಕಿದರು. ೩೭. ಕಪಿಸೈನ್ಯದಲ್ಲಿ ವೀರ ನೀಲನು ಮಹಾಪರಾಕ್ರಮಿಯಲ್ಲವೇ. ಸಮುದ್ರದ ಗಡಿಗೆಯೆಂಬಂತೆ ಸೆಳೆದು ಎರಡು ಕೈಗಳಿಂದಲೂ ಬೆಟ್ಟವನ್ನು ಕೀಳುತ್ತಿರಲು ನಿಳಿನಿಟಿಲೆಂಬ ಶಬ್ದವೆದ್ದಿತು. ದೇವೇಂದ್ರನಿಗೆ ಇದು ಕೇಳಿಸಲು ಇಳಿದುಬಂದು ಕೈಮುಗಿದುಕೊಂಡು ಮಧುರವಾದ ಮಾತುಗಳಿಂದ ನೀಲನನ್ನು ಬೇಡಿಕೊಂಡನು. ೩೮. "ಈ ಮಹಾಪರ್ವತದ ಮೇಲೆ ನಾನಾ ದೇವತೆಗಳಿದ್ದಾರೆ. ತಿಳಿದುನೋಡಿದರೆ ಈ ಪರ್ವತದಲ್ಲೆಲ್ಲ ದಿವ್ಯಮೂಲಿಕೆಗಳಿವೆ. ಲಕ್ಷ್ಮೀಪತಿಯು ಹೆಮ್ಮೆಯ ಸುಂದರಪರ್ವತವಿದು. ಶ್ರೀರಾಮನ ಕಿಂಕರರು ಇದನ್ನು ಮುರಿಯುವುದು ಯೋಗ್ಯವಲ್ಲ" ಎಂದ ದೇವೇಂದ್ರ. ೩೯. "ಯಾರು ನೀನು ?" ಎಂದು ನೀಲನು ಪ್ರಶ್ನಿಸಿದನು. ಅದಕ್ಕೆ "ನಾನು ಇಂದ್ರ" ಎಂದು ಉತ್ತರಿಸಲು ನೀಲನು ಓರೆಗಣ್ಣಿನಿಂದ ನೋಡಿ, "ನೀನು ಇಂದ್ರನಾಗು, ತ್ರಿಪುರಾರಿಯಾಗು, ಬ್ರಹ್ಮನೇ ಆಗು" ಎನ್ನುತ್ತ ಲಕ್ಷಿಸದೆ ಬೆಟ್ಟವನ್ನು ಕೀಳತೊಡಗಿದನು. ಆಗ "ವೀರ ಬಿಡು, ಈ ಪರ್ವತವು ಅಸುರಾರಿಯಿಂದ ಸ್ಥಾಪಿತವಾದುದು" ಎಂದು ನಾರದನು ಬಂದು ಕೈಮುಗಿದು ಹೇಳಿ

ನುಡಿದು ತಪ್ಪೆವು ನಾವು ನಿಮಗೆಮ । ಗೊಡೆಯನಲ್ಲಾ ರಾಮ ರಾಮನು
ಪೊಡೆಯಲರನೆಂದರಿಯಬಾರದೆ ನಿನಗೆ ಹರವಸವೆ
ಬಿಡುಬಿಡೆನಲಾ ಗಿರಿಯನಲ್ಲಿಯೆ । ಮಡಗಿ ತದ್ಗಿರಿಶಿರಗಳೆಂಟುವ
ನುಡಿದು ತಂದಿತ್ತನು ನಳಂಗೆ ನರೇಂದ್ರ ಬೆಱಗಾಗೆ ೪೦

ಆತ ತಂದದ್ರಿಯಲಿ ನಡೆದುದು । ಸೇತು ದಶಯೋಜನವನಜಸಂ
ಜಾತ ನೆನೆದುದ್ಯೋಗವನು ಕೇಳೈ ಕುಮಾರಕನೆ
ಏತಱವು ಮಿಕ್ಕದ ಸುಭಟ । ವ್ರಾತದುಬ್ಬಟೆ ಹಾಯ್ದುದವನಿ ರ
ಸಾತಳಕೆ ಮೈಗುಂದೆ ವಿಂಧ್ಯಾಚಲವನುತ್ತರಿಸಿ ೪೧

ನೆಗಹಿ ಜೋಲುವ ಜೂಬುಗೂದಲ । ನಗಲಿಸುತ ನೋಡಿದನು ಕಂಡನು
ನಗಕುಲೇಂದ್ರನ ಶಿಶಿರಸಾಂದ್ರನ ಪಾರ್ವತೀಪಿತನ
ಹೊಗುವಡುತ್ತರಪಥಕೆ ಚೈತ । ನ್ಯಗಳು ನಮಗಿಲ್ಲಾವು ವೃದ್ಧರು
ನಗುವವರು ನಗಲೆಮಗಿದೇ ಸಾಕೆಂದು ಮಂಡಿಸಿದ ೪೨

ಎರಡು ಸಾವಿರದಗಲಯೋಜನ । ವೆರಡು ಸಾವಿರ ಉದ್ದವೈವ
ತ್ತೆರಡು ಸಾವಿರ ನೀಳದದ್ರಿಯನಮರರಬ್ಬರಿಸೆ
ಉರಗರಾಯನ ಹೆಡೆಯನುಗುರು । ಪ್ಪರಿಸೆ ಕುಕ್ಕಿದನವನಿ ಬಿಕ್ಕನೆ
ಬಿರಿಯೆ ಸಾಗರ ಜರಿಯೆ ಜಾಂಬವದೇವ ಝಡಿತೆಯಲಿ ೪೩

ದನು. ೪೦. "ನಾವು ನಿಮಗೆ ಸುಳ್ಳು ಹೇಳುವುದಿಲ್ಲ. ರಾಮನು ನಮ್ಮ ಪ್ರಭುವಲ್ಲವೇ. ರಾಮನು ಕಮಲನಾಭ ವಿಷ್ಣುವೆಂದರಿಯಬಾರದೆ ನೀನು ? ವೈಮರವೆ ನಿನಗೆ ? ಬಿಟ್ಟು ಬಿಡು" ಎಂದು ನಾರದನು ಹೇಳಲು ನೀಲನು ಪರ್ವತವನ್ನು ಅಲ್ಲಿಯೇ ಇಟ್ಟು ಆ ಪರ್ವತದ ಎಂಟು ಶಿಖರಗಳನ್ನು ಮುರಿದು ತೆಗೆದುಕೊಂಡು ಬಂದು ನಳನಿಗೆ ಕೊಟ್ಟನು. ಇದನ್ನು ನೋಡಿ ರಾಮನು ಬೆರಗಾದನು. ೪೧. ನೀಲನು ತಂದುಕೊಟ್ಟ ಬಂಡೆಗಳಿಂದ ನೂರು ಯೋಜನ ಸೇತುವೆ ಮುಂದುವರಿಯಿತು. ಬ್ರಹ್ಮಪುತ್ರ ಜಾಂಬವನು ಯೋಚಿಸಿದ ಪ್ರಯತ್ನವನ್ನು ಕೇಳು ಕುಮಾರ. ಉಳಿದ ವೀರರ ಪರಾಕ್ರಮಗಳು ಅವನ ಮುಂದೆ ಎಷ್ಟರವು. ಭೂಮಿಯು ಪಾತಾಳಕ್ಕೆ ಕುಸಿಯುವಂತೆ ವಿಂಧ್ಯಪರ್ವತವನ್ನು ದಾಟಿ ನಡೆದನು. ೪೨. ಜೋತಾಡುವ ಹುಬ್ಬಿನ ಮೇಲಿನ ಪೊದೆಗೂದಲನ್ನು ಎತ್ತಿ ಜಾಂಬವನು ನೋಡಿದನು. ಮಂಜು-ಮುಸುಕಿದ ಪಾರ್ವತಿಯ ತಂದೆಯಾದ ಪರ್ವತಗಳೊಡೆಯ ಹಿಮಾಲಯವನ್ನು ಕಂಡನು. ಇನ್ನು ಉತ್ತರದ ದಿಕ್ಕಿಗೆ ಹೋಗಲು ನಮಗೆ ಚೈತನ್ಯವಿಲ್ಲ. ನಾವು ಮುದುಕರು. ನಗುವವರು ನಗಲಿ. ನಮಗೆ ಈ ಪರ್ವತವೇ ಸಾಕು" ಎಂದು ಅಲ್ಲಿಯೇ ಕುಳಿತುಕೊಂಡನು. ೪೩. ಎರಡು ಸಾವಿರ ಯೋಜನ ಅಗಲ ಎರಡು ಸಾವಿರ ಯೋಜನ ಉದ್ದ ಹಾಗೂ ಐವತ್ತೆರಡು ಸಾವಿರ ಯೋಜನ ನೀಳವಾದ ಬೆಟ್ಟವನ್ನು ಜಾಂಬವದೇವನು ಒಡನೆ ಕೈಯಿಂದ ಕುಕ್ಕಿದನು. ಆಗ ದೇವತೆಗಳು ಕೂಗಿಕೊಂಡರು. ಆದಿಶೇಷನ ಹೆಡೆಯನ್ನು ಜಾಂಬವನ ಉಗುರು

ಎತ್ತಲೊಲೆದುದು ಮೇರು ಮೇನಕೆ । ಹತ್ತಿರಕೆ ನಡೆತಂದು ಬಾಯ ಬಿ
ಡುತ್ತ ಬಿನ್ನಹ ಮಾಡಿದಳು ತದ್ಬ್ರಹ್ಮಪುತ್ರಂಗೆ
ಕೃತ್ತಿವಾಸನ ದಾಸ ನೀ ತಾ । ಹೆತ್ತಮಗಳುಮೆ ನೋಡಿಕೋ ನಿ
ನ್ನುತ್ತಮಿಕೆಗಪಕೀರ್ತಿ ಬರದೋಲೆಂದಳಾ ಕಾಂತೆ ೪೪

ಮುರಿದು ನೋಡಿದನದ್ರಿರಾಜನ । ತರುಣಿಯನು ತಪ್ಪುವುದಲಾ ಶಂ
ಕರನ ಚಿತ್ತಕೆ ದೂರವಹುದನುಚಿತವಲಾಯೆನುತ
ಇರಿಸಿ ಗಿರಿಯನು ತೆರಳಿ ನೀವೆಂ । ದೆರಡು ಕೈಗಳ ಮುಗಿದು ಸುತ್ತಣ
ಗಿರಿಗಳನು ಕಿತ್ತೆತ್ತಿ ಹೊತ್ತನು ಹೊಗಳೆ ಸುರನಿಕರ ೪೫

ಶಿರದೊಳೆಂಟದ್ರಿಯನು ನಿಜಭುಜ । ಶಿರವೆರಡಜಲಿ ನಾಲ್ಕು ಕಂಕುಳ
ಲೆರಡೆರಡು ಕರತಳದಲೊಂದೊಂದನು ನಿಜಾಂಘ್ರಿಯುಲಿ
ಎರಡೆರಡನುರುಳಿಸುತ ತಂದನು । ಸುರರು ಸೈವೆಜಿಗಾಗೆ ರಘುಭೂ
ವರನು ವಿಸ್ಮಿತನಾಗೆ ನಳನೆಡೆಗಬುಜಭವಸೂನು ೪೬

ಇದಿರುವಂದತಿಭಕ್ತಿಭಯಭಾ । ರದಲಿ ಜಾಂಬವ ತಂದ ಗಿರಿಗಳ
ನದುರದವೊಲುಪ್ಪರಿಸಿ ಧರಿಸಿ ಸಮುದ್ರಮಧ್ಯದಲಿ
ಹದಸರಿಸಿ ಹವಣಿಸಿದನೆಡೆಗೆಡೆ । ಗಿದಿರುಕಲುಗಳ ಬೆಣೆಗಳಲಿ ನಡೆ
ದುದು ನಿಜೋನ್ನತ ಸೇತುಬಂಧನ ಹತ್ತು ಯೋಜನವ ೪೭

ಮೇಲಕ್ಕೆಬ್ಬಿತು, ಭೂಮಿ ಸೀಳುಬಿಟ್ಟಿತು, ಸಾಗರ ಹಿಂದೆಗೆಯಿತು. ೪೪. ಹಿಮಾಲಯಂವನ್ನು ಜಾಂಬವನು ಎತ್ತಲು ಮೇರುಪರ್ವತವು ಅಲ್ಲಾಡಿತು. ಆಗ ಹಿಮವಂತನ ಪತ್ನಿ ಮೇನಾದೇವಿಯು ಜಾಂಬವನ ಹತ್ತಿರಕ್ಕೆ ಬಂದು ದೈನ್ಯದಿಂದ "ಈಶ್ವರನ ಭಕ್ತ ನೀನು. ನನ್ನ ಮಗಳು ಉಮಾದೇವಿ ಈಶ್ವರನ ಪತ್ನಿ. ನಿನ್ನ ಶ್ರೇಷ್ಠತೆಗೆ ಅಪಕೀರ್ತಿ ಬರದಂತೆ ನೀನೇ ನೋಡಿಕೋ" ಎಂದು ಬಿನ್ನವಿಸಿಕೊಂಡಳು. ೪೫. ಹಿಮವಂತನ ರಾಣಿಯನ್ನು ತಿರುಗಿ ನೋಡಿದನು. ತಪ್ಪಾಗುವುದಲ್ಲವೇ, ಶಂಕರನ ಮನಸ್ಸಿಗೆ ದೂರವಾಗುವುದು ಯೋಗ್ಯವಲ್ಲ ಎಂದು ಯೋಚಿಸಿದ ಜಾಂಬವನು ಹಿಮವತ್ಪರ್ವತವನ್ನು ಅಲ್ಲಿಯೇ ಇಟ್ಟು, "ನೀವು ಹೋಗಿ ಬನ್ನಿ" ಎಂದು ಮೇನಾದೇವಿಗೆ ಎರಡು ಕೈಗಳನ್ನೂ ಮುಗಿದು ಹೇಳಿದನು. ಅನಂತರ ಹಿಮಾಲಯದ ಸುತ್ತಿನ ಬೆಟ್ಟಗಳನ್ನು ಕಿತ್ತು ಹೊತ್ತುಕೊಂಡು ಹೋದನು. ಆಗ ದೇವತೆಗಳು ಜಾಂಬವನನ್ನು ಹೊಗಳಿದರು. ೪೬. ತಲೆಯ ಮೇಲೆ ಎಂಟು ಬೆಟ್ಟಗಳನ್ನೂ ಎರಡು ಹೆಗಲುಗಳಲ್ಲಿ ನಾಲ್ಕು ಬೆಟ್ಟಗಳನ್ನೂ ಹೊತ್ತುಕೊಂಡು ಎರಡು ಕಂಕುಳುಗಳಲ್ಲಿ ಎರಡೆರಡು ಬೆಟ್ಟಗಳನ್ನು ಇರುಕಿಕೊಂಡು, ಒಂದೊಂದು ಕೈಯಲ್ಲಿ ಒಂದೊಂದನ್ನು ಹಿಡಿದುಕೊಂಡು ಕಾಲುಗಳಿಂದ ಎರಡೆರಡನ್ನು ಉರುಳಿಸುತ್ತ ಜಾಂಬವನು ಬೆಟ್ಟಗಳನ್ನು ನಳನ ಬಳಿಗೆ ತಂದನು. ಇದನ್ನು ಕಂಡು ದೇವತೆಗಳು ಅಚ್ಚರಿಗೊಂಡರು, ರಾಮನು ಬೆರಗಾದನು. ೪೭. ನಳನು ಜಾಂಬವನನ್ನು ಎದುರುಗೊಂಡು ಅತ್ಯಂತ ಭಯಭಕ್ತಿಗಳಿಂದ ಅವನು ತಂದ ಬಂಡೆಗಳನ್ನು ಸ್ವಲ್ಪವೂ ಅಲ್ಲಾಡದಂತೆ ನೆಗೆದು ತೆಗೆದುಕೊಂಡು ಸಮುದ್ರದ

ಬೆಱಗ ಕೇಳ್ಕೆ ಸ್ವಾಮಿಕಾರ್ಯದ । ಹೊಱಗೆವಾಳನ ಕೆಲಸವನು ಬೊ
ಬ್ಬಿಱಿದು ಹಾರಿದನನಿಲಸುತನಮರಾದ್ರಿಯಿದ್ದೆಡೆಗೆ
ಹಱೆಗಳಬ್ಬರಿಸಿದವು ಸುರರು । ಬ್ಬಿಱಿತದಲಿ ಸುಮ್ಮಾನ ಮಿಗೆ ಕಡು
ನಿಱಿಸಿನಿಂದೀಕ್ಷಿಸಿದನಾ ಗಿರಿಯಗ್ರಪರಿಯಂತ ೪೮

ಲಕ್ಷಯೋಜನದುದ್ದ ಗಿರಿಯದು । ಲಕ್ಷಯೋಜನದಗಲದಂಬುಧಿ
ಸಕ್ಕಸಮಮೀ ಗಿರಿಯನಳವಡಿಸುವೆನು ಶರಧಿಯಲಿ
ರಕ್ಕಸಾರಿಯ ಕೀರ್ತಿ ಸಲಿಲಜ । ನೊಕ್ಕತನ ಪರಿಯಂತ ಕೆಲಸವಿ
ದೆಕ್ಕಸರವೆನುತನಿಲಸುತ ಬೆಳೆದನು ನಭಾಂತರಕೆ ೪೯

ಅಬ್ಬರಿಸಿ ಕೈಚಪ್ಪಳೆಯ ಬಡಿ । ದೆಬ್ಬಿಸಿದನಾ ಗಿರಿಯ ಶಿಖರದ
ಹಬ್ಬುಗೆಯ ಪುತಭೋಜನರನಜಲೋಕ ಪರಿಯಂತ
ತಬ್ಬಿದನು ತದ್ಗಿರಿಯನತಿಬಲ । ನುಬ್ಬುಗವಳವಕೊಂಡವೊಲು ಬಲು
ಬೊಬ್ಬೆಯಲಿ ಬೇರುಡಿಯೆ ರ್ಘುಡಿದಲ್ಲಾಡಿದನು ಗಿರಿಯ ೫೦

ಒಱಲಿತಂಬರವವನಿತಳ ಬಾ । ಯ್ದೆಱೆದುದಬುಜಭವಾಂಡವಳಿಪಾ
ಯ್ದೆಱಗಿದಂಬುಜದಂತೆ ತೊನೆದಲ್ಲಾಡಿತೆಡಬಲಕೆ
ಅಱೆಗಳಲಿ ನಳ ಬಿಗಿದ ಕಟ್ಟೆಯು । ಕುಱುಹು ಮುಳುಗಿತು ಮುದುಡಿಬಿದ್ದನು
ಮುಱುಕದಬುಜಜನೊಲೆದು ನಿಜ ಸಿಂಹಾಸನಾಗ್ರದಲಿ ೫೧

ಮಧ್ಯೆ ಹದವಾಗಿ ಇಟ್ಟು ನಡು ನಡುವೆ ಎದುರುಕಲ್ಲುಗಳ ಬೆಣೆಕೊಟ್ಟು ನಿಲ್ಲಿಸಿದನು. ಸೇತುವೆಯು ಮುಂದಕ್ಕೆ ಹತ್ತು ಯೋಜನ ಸಿದ್ಧವಾಯಿತು. ೪೮. ಸ್ವಾಮಿಕಾರ್ಯದಲ್ಲಿ ಆಪ್ತಭೃತ್ಯನ ಕೆಲಸದ ಆಶ್ಚರ್ಯವನ್ನು ಕೇಳು ಲವ. ಹನುಮಂತನು ಗರ್ಜಿಸಿ ಮೇರು ಪರ್ವತಕ್ಕೆ ನೆಗೆದನು. ದೇವತೆಗಳು ಹಿಗ್ಗಿನಿಂದ ನಗಾರಿಗಳನ್ನು ಬಾರಿಸಿದರು. ಅತ್ಯಾನಂದದಿಂದ ಪರ್ವತವನ್ನು ತುದಿತನಕ ತೀವ್ರವಾಗಿ ದೃಷ್ಟಿಸಿದನು. ೪೯. ಲಕ್ಷ ಯೋಜನ ಉದ್ದವಾದ ಪರ್ವತ ಅದು, ಲಕ್ಷಯೋಜನ ಅಗಲವಾದ ಸಮುದ್ರವಿದು, ಸರಿಸಮವಾಗುತ್ತದೆ. ಆದುದರಿಂದ ಈ ಬೆಟ್ಟವನ್ನು ಸಮುದ್ರದಲ್ಲಿ ಹೊಂದಿಸಿ ಇಡುತ್ತೇನೆ. ಬ್ರಹ್ಮನ ಆಯುರ್ದಾಯವಿರುವತನಕ ಅಸುರಾರಿಯಾದ ರಾಮನ ಕೀರ್ತಿ ಶಾಶ್ವತವಾಗಿರುವುದು ಮತ್ತು ಈ ಕಾರ್ಯವು ಸತತವಾಗಿ ಉಳಿಯುವುದು ! ಎಂದು ಯೋಚಿಸಿ ಹನುಮಂತನು ಆಕಾಶದೆತ್ತರಕ್ಕೆ ಬೆಳೆದನು.' ೫೦. ಆ ಪರ್ವತದ ಶಿಖರದ ಮೇಲೆ ಹರಡಿಕೊಂಡಿದ್ದ ದೇವತೆಗಳನ್ನು ಕೈಚಪ್ಪಾಳೆ ಹೊಡೆದು ಅಬ್ಬರಿಸಿ ಬ್ರಹ್ಮಲೋಕದವರೆಗೆ ಬಡಿದು ಓಡಿಸಿದನು. ಅತಿಬಲಶಾಲಿ ಹನುಮಂತನು ಉತ್ತೇಜಕ ವಾದ ತುತ್ತನ್ನು ತೆಗೆದುಕೊಳ್ಳುವಂತೆ ಆ ಬೆಟ್ಟವನ್ನು ತಬ್ಬಿದನು. ದೊಡ್ಡದಾಗಿ ಆರ್ಭಟಿಸುತ್ತ ಬೇರು ಮುರಿಯುವಂತೆ ಬೆಟ್ಟವನ್ನು ಹಿಡಿದು ಅಲ್ಲಾಡಿಸಿದನು. ೫೧. ಆಕಾಶವು ಅರಚಿಕೊಂಡಿತು, ಭೂಮಿ ಬಾಯ್ ಬಿಟ್ಟಿತು, ಬ್ರಹ್ಮಾಂಡವು ತುಂಬಿ ಹಾರಿ ಕುಳಿತ ಕಮಲದಂತೆ ಎಡಬಲಕ್ಕೆ ಒಲೆದಾಡಿತು. ಬಂಡೆಗಳನ್ನು ಸೇರಿಸಿ ನಳ ಬಿಗಿಮಾಡಿದ ಕಟ್ಟೆಯ ಗುರುತು ಮುಳುಗಿತು. ಧೈರ್ಯದಿಂದ ಇದ್ದ ಬ್ರಹ್ಮನು

ಏನಿದಚ್ಚರಿ ವಿಲಯದುರು ಪವ । ಮಾನನುದ್ಭವದಂತೆ ಜಗವವ
ಸಾನಕೆನುತಜನಮಳ ದಿವ್ಯಜ್ಞಾನದಿಂದರಿದು
ಶ್ರೀನಿವಾಸನ ಮನುಜಲೀಲಾ । ನೂನನಾಟಕ ರಚನೆಗಿದಲಾ
ವಾನರರಿಗೀ ಬಲುಹದೆಲ್ಲಿಯದೆನುತಲಿಳಿತಂದ ೫೨

ಕಂಡನೀ ಪವಮಾನತನುಜನ । ದಂಡಿಸರವನಿದೇನಿದೇನು
ದ್ದಂಡ ಮರುಳನೊ ಮೂರ್ಖನೋ ಮರ್ಕಟರ ಕಟಕದಲಿ
ಚಂಡಕರವಂಶಾಧಿಪನ ಹಗೆ । ಗೊಂಡವನೊ ಪೇಳ್ ಸೇವಕನೊ ಕೈ
ಕೊಂಡ ಕೆಲಸವಿದೇನು ಹೇಳದ ಕೇಳ್ವೆವಾವೆಂದ ೫೩

ಕೇಳಿ ಮಾಡುವುದೇನು ಕೇಳದೆ । ಹೇಳಿ ಮಾಡುವುದೇನು ನಿಮಗೆ
ಮ್ಮಾಳಿಗದ ತೆರನೇಕೆ ಹಿಗ್ಗಿಸಿ ನುಡಿಯಲೇಕೆಮ್ಮ
ಹೇಳಿ ನಿಮ್ಮಯ ಮಾತ ಮೀರಿಯದೆ । ಕೇಳುವವರಿಗೆನುತ್ತ ಬಗೆಗೊಳ
ದಾಳುಗಳ ಬಲ್ಲಹನು ಬರಸೆಳೆದೊಲೆದನಾ ಗಿರಿಯ ೫೪

ತರಳನೈ ನೀನಕಟ ದಿಟವೀ । ಗಿರಿಯ ಕಿತ್ತರೆ ಕೀಳದಿಹುದೇ
ಸುರನರೋರಗಜಗದ ಜನಗಳ ಜೀವಜಾಲಲತೆ
ತರತರದ ಭುವನಾವಳಿಯ ವಿ । ಸ್ತರದ ಸೂತ್ರಸ್ತಂಭವಿದು ನಿ
ಮ್ಮರಸನಭಿವೃದ್ಧಿಯ ವಿಚಾರಿಸದಾದೆ ನೀನೆಂದ ೫೫

ಅಲ್ಲಾಡಿ ತನ್ನ ಸಿಂಹಾಸನದ ಮೇಲೆ ಮುದುಡಿಕೊಂಡು ಬಿದ್ದನು. ೫೨. ಏನಿದಾಶ್ಚರ್ಯ, ಜಗತ್ತಿನ ನಾಶಕ್ಕೆ ಪ್ರಳಯಕಾಲದ ಬಿರುಗಾಳಿ ಹುಟ್ಟಿದಂತೆ ಕಾಣುತ್ತಿದೆ ಎಂದುಕೊಳ್ಳುತ್ತ ಬ್ರಹ್ಮನು ತನ್ನ ಪರಿಶುದ್ಧ ದಿವ್ಯಜ್ಞಾನದಿಂದ ವಿಷಯವನ್ನು ತಿಳಿದುಕೊಂಡನು. "ಶ್ರೀನಿವಾಸನ ಮಾನವಲೀಲೆಯ ಶ್ರೇಷ್ಠ ನಾಟಕದ ಮಹಿಮೆ ಇದಲ್ಲವೇ, ವಾನರರಿಗೆ ಈ ಪರಾಕ್ರಮವೆಲ್ಲಿಯದು !" ಎಂದುಕೊಳ್ಳುತ್ತ ಬ್ರಹ್ಮನು ಕೆಳಕ್ಕೆ ಇಳಿದುಬಂದನು. ೫೩. ಈ ವಾಯುಪುತ್ರನ ಚಾಪಲ್ಯವನ್ನು ಬ್ರಹ್ಮನು ನೋಡಿದನು, "ಇದೇನು, ಇದೇನು, ವಾನರರ ಸೈನ್ಯದಲ್ಲಿ ನೀನು ಮರುಳನೋ, ಮೂರ್ಖನೋ ? ಸೂರ್ಯ ವಂಶದರಸನ ಶತ್ರುವೋ ಅಥವಾ ಅವನ ಸೇವಕನೋ ? ನೀನು ಕೈಗೊಂಡ ಕೆಲಸ ಇದೇನು ? ಹೇಳು ಅದನ್ನು ನಾವು ಕೇಳುವೆವು" ಎಂದನು ಬ್ರಹ್ಮ. ೫೪. "ನೀವು ಕೇಳಿ ಏನನ್ನು ಮಾಡುವುದಿದೆ ? ಕೇಳದೆ ಇದ್ದರೂ ನಾನು ಹೇಳಿ ಮಾಡುವುದೇನಿದೆ ? ನಾವು ಹೇಗೆ ಸೇವೆ ಸಲ್ಲಿಸುವೆವು ಎಂಬುದನ್ನು ಕಟ್ಟಿಕೊಂಡು ನಿಮಗೇನು ? ನಮ್ಮನ್ನು ಕುರಿತು ಅತಿಯಾಗಿ ಏಕೆ ನುಡಿಯಬೇಕು ? ನಿಮ್ಮ ಮಾತನ್ನು ತಪ್ಪದೆ ಕೇಳುವಂಥವರಿಗೆ ಹೋಗಿ ಹೇಳಿ" ಎನ್ನುತ್ತ ಬ್ರಹ್ಮನ ಮಾತುಗಳನ್ನು ಲಕ್ಷಿಸದೆ ಭೃತ್ಯರಪ್ರಭು ಹನುಮಂತನು ಬೆಟ್ಟವನ್ನು ಹಿಡಿದೆಳೆದು ಅಲ್ಲಾಡಿಸಿದನು. ೫೫ "ನೀನು ಚಂಚಲಸ್ವಭಾವದ ಹುಡುಗನೆಂಬುದು ನಿಜ. ನೀನು ಈ ಪರ್ವತವನ್ನು ಕಿತ್ತರೆ ಸ್ವರ್ಗ ಮರ್ತ್ಯ ಪಾತಾಳದ ಜಗಗಳ ಪ್ರಾಣಲತೆಯು ಕಿತ್ತುಹೋಗುವುದಿಲ್ಲವೇ ? ವಿವಿಧ ರೀತಿಯ ಲೋಕಗಳನ್ನು ಬಂಧಿಸಿಟ್ಟಿರುವ ಮೂಲಸ್ತಂಭವಿದು. ನೀನೇ ನಿಮ್ಮ ಒಡೆಯನ ಏಳಿಗೆಯನ್ನು

ಗಿರಿಯಿದನು ಕೀಳಲ್ಕೆದೆಲ್ಲಿಯು । ಶರಧಿ ನೀ ತಾನೆಲ್ಲಿ ದಿಟ ನಿ
ಮ್ಮರಸನಾವೆಡೆ ಲಂಕೆಯೆತ್ತಣದೆಲ್ಲಿ ಜನಕಸುತೆ
ಅರಿಗಳಾರ ವಿಚಾರ ನಿನ್ನನು । ಹೊರೆದುಕೊಂಡಿದೆ ಮೊದಲುಗೆಟ್ಟಿಹ
ಹರದ ಕಾಬನೆ ಲಬ್ಧಿಯನು ಮತಿಬಜಿಡ ಹೋಗೆಂದ ೫೬

ಐಸಲೇ ನಿಮ್ಮರಿತ ನಿಮಗೆ ವಿ । ಶೇಷತರ ವಿಜ್ಞಪ್ತಿಯುಂಟೆಂ
ದೀಸುದಿನ ನಾವ್ ಮಾಡಿಕೊಂಡಿದ್ದೆವು ಮನಸ್ಸಿನಲಿ
ಈ ಸುರಾಚಲದಂತೆ ಬಾಲದ । ಲೀ ಸಕಲ ಲೋಕವನು ಧರಿಸುವೆ
ನೀಶ ಕಂದೆಱೆವನ್ನೆಬರ ನೀನಂಜಬೇಡೆಂದ ೫೭

ಬಾಲವಿರುತಿರಲಿಲ್ಲಿ ರಘುಭೂ । ಪಾಲನೋಲಗಕಾವು ನಿಲುವೆವು
ಮೇಲಣುತ್ತರವಾವುದಿದಕೆಂದಜನ ಬಗೆಗೊಳದೆ
ಕೇಳುತಿರೆ ಕೈವಿಡಿದು ನಾಲುಕು । ಮೌಳಿಗಳ ಚಾಚಿದನು ಸೀತಾ
ಲೋಲಭೃತ್ಯನ ಜಠರದಲಿ ಕಾರ್ಪಣ್ಯಭಾವದಲಿ ೫೮

ಹನುಮ ಕೇಳೀ ಕಲ್ಪದಭಿರಂ । ಜನೆಗೆ ಕರ್ತೃಗಳಾವು ಮುಂದಣ
ನೆನಹು ನಿನ್ನದು ನಿನ್ನ ರಾಜಸತನದಲೊಲಿದಂತೆ
ಅನುಕರಿಸು ನಿನ್ನೀ ಪ್ರತಿಜ್ಞೆಯ । ನನುಸರಿಸು ಪುರುಷಾರ್ಥವಿದು ನೀ
ನೆನಗೆ ಮಾಡುವ ಲೇಸಿದೀಗೆನುತಪ್ಪಿದನು ಕಪಿಯ ೫೯

ಆಲೋಚಿಸಲಾರದವನಾಗಿದ್ದೀಯೆ" ಎಂದ ಬ್ರಹ್ಮ. ೫೬. "ಈ ಮೇರುಪರ್ವತವನ್ನು ಕಿತ್ತರೆ ಇನ್ನೆಲ್ಲಿಯ ಸಮುದ್ರ, ಇನ್ನು ನೀನು ನಾನು ಉಳಿಯುವುದೆಲ್ಲಿ, ನಿಮ್ಮೊಡೆಯನೆಲ್ಲಿ, ಲಂಕೆಯೆಲ್ಲಿ, ಜಾನಕಿಯೆಲ್ಲಿ? ಶತ್ರುಗಳು ಯಾರು ಎಂಬುದನ್ನು ವಿಚಾರಮಾಡಿದ್ದೀಯಾ ? ಬಂಡವಾಳವನ್ನು ಕಳೆದುಕೊಂಡ ವ್ಯಾಪಾರಿಯು ಲಾಭವನ್ನು ಕಾಣುವನೆ ? ಬುದ್ಧಿಹೀನ ಹೋಗು" ಎಂದ ಬ್ರಹ್ಮ. ೫೭. "ಇಷ್ಟೇನೇ ನಿಮ್ಮ ತಿಳಿವಳಿಕೆ. ನಿಮಗೆ ವಿಶೇಷ ಮಾಹಿತಿ ಗೊತ್ತು ಎಂದು ಇಷ್ಟುದಿವಸ ಮನಸ್ಸಿನಲ್ಲಿ ಮಾಡಿಕೊಂಡಿದ್ದೆವು. ಈ ಮೇರು ಪರ್ವತ ಹೇಗೋ ಹಾಗೆ-ಈ ನನ್ನ ಬಾಲದಿಂದ ಸಮಸ್ತ ಲೋಕಗಳನ್ನೂ ಈಶ್ವರನು ಕಣ್ಣು ತೆರೆಯುವವರೆಗೆ ಹಿಡಿದು ನಿಲ್ಲಿಸುವೆನು, ನೀವು ಹೆದರಬೇಡಿ" ಎಂದ ಹನುಮಂತ. ೫೮. "ಇಲ್ಲಿ ನಮ್ಮ ಬಾಲವನ್ನು ನಿಲ್ಲಿಸಿ ರಘುರಾಮನ ಸೇವೆಗೆ ಅಲ್ಲಿ ನಿಲ್ಲುವೆವು. ಇದರ ಮೇಲೆ ನೀವು ಏನು ಹೇಳುತ್ತೀರಿ ?" ಎಂದು ನುಡಿದು ಹನುಮಂತನು ಬ್ರಹ್ಮನನ್ನು ಲಕ್ಷಿಸದೆ ಬೆಟ್ಟವನ್ನು ಹಿಡಿದು ಕೀಳುತ್ತಿರಲು ಸೀತಾರಾಮನ ಕಿಂಕರನ ಹೊಟ್ಟೆಯ ಮೇಲೆ ದೈನ್ಯಭಾವದಿಂದ ಬ್ರಹ್ಮನು ತನ್ನ ನಾಲ್ಕೂ ಕಿರೀಟಗಳನ್ನು ಇರಿಸಿದನು. ೫೯. "ಹನುಮಂತ ಕೇಳು, ಈ ಯುಗದ ಪ್ರಕಾಶಕ್ಕೆ ನಾವು ಸೃಷ್ಟಿಕರ್ತರು ; ಮುಂದಿನ ಆಲೋಚನೆ ನಿನಗೆ ಸೇರಿದ್ದು. ನಿನ್ನ ರಜೋಗುಣಕ್ಕೆ ಅನುಸಾರವಾಗಿ ನಿನ್ನ ಇಷ್ಟ ಬಂದಂತೆ ಮಾಡು. ನಿನ್ನ ಪ್ರತಿಜ್ಞೆಯನ್ನು ನೆರವೇರಿಸು. ಇದೇ ಪುರುಷಾರ್ಥ, ಇದು ನೀನು ನನಗೆ ಮಾಡುವ ಒಳ್ಳೆಯ ಕಾರ್ಯ" ಎಂದು ಬ್ರಹ್ಮನು ಹನುಮಂತನನ್ನು

ಆದಡೊಮ್ಮಿಗೆ ನಿಮ್ಮನುಜ್ಞೆಯ । ನಾದರಿಸಿದೆನು ಬಿಜಯಮಾಡಿ ವಿ
ವಾದವೇ ನಿಮ್ಮೊಡನೆ ನೀವೆಮಗಯ್ಯನೋಪಾದಿ
ಕೈದೆಗೆದೆವಾವಿನಿತುಪದ್ರದ । ಹಾದಿಯವರಲ್ಲೆನುತ ನೆಗಹಿ
ದ್ದಾ ದಿವೌಕಸನಗವನಿಳುಹಿದನುರಗದಂದದಲಿ ೬೦

ತೆರಳಿ ನೀವೆಂದಜನ ಬೀಳ್ಕೊ । ಟ್ಟರಿದಿಶಾಪಟವುಲ್ಲ ಕಿತ್ತನು
ಸುರಗಿರಿಯ ಶಿರದವುಳ ಮಣಿಬಂಧುರದ ಕಾಂಚನದ
ಸುರುಚಿರದ ಶಿಖರವನು ಜಂಗಮ । ಗಿರಿಯವೊಲು ಝುಡಿತೆಯಲಿ ನಡೆತಂ
ದೆರಡು ತಡಿಗಳವಡಿಸಿದನು ಸುರರುಲಿಯೆ ಸಾಗರದ ೬೧

ಆ ಗಿರಿಯ ಬೆಂಬಳಿಯ ನಳ ಕೈ । ಲಾಗಿನಲಿ ಸಂಧಿಸಿದನಿಮ್ಮೈ
ದಾಗಿನಲಿ ಭಟರಿತ್ತ ಬಲು ಕುಲಪರ್ವತಂಗಳಲಿ
ಆ ಗಗನದಿಂದಿಳಿದು ಸೇತುವ । ಸಾಗಿಸಿದನಳವಡಿಕೆಯಲಿ ಶತ
ಯಾಗವರ್ಧಕಿ ವಿಶ್ವಕರ್ಮನನೇಕ ರಚನೆಯಲಿ ೬೨

ಆಡಲಚ್ಚರಿ ಶರಧಿ ಶಿರದಲಿ । ಸೂಡಿದುದು ಸೇತುವನು ಜಗದಲಿ
ನಾಡೆ ಬಲ್ಲಿದರೆಸಗಿದಸದಳಕಾರ್ಯಕಿದಿರೇನು
ಕೂಡೆ ಮುಗಿದುದು ಸೇತು ಬಳಿಕಿಡೆ । ಯಾಡುವದ್ರಿಯ ಬೇಡವೆನಲೀ
ಡಾಡಿತಲ್ಲಿಯದಲ್ಲಿ ವಾನರರಾಜಭಟನಿಕರ ೬೩

ಅಪ್ಪಿಕೊಂಡನು. ೬೦. "ಹಾಗಿದ್ದರೆ ಇದೊಂದು ಸಲಕ್ಕೆ ನಿಮ್ಮ ಅಪ್ಪಣೆಯನ್ನು ಗೌರವಿಸುವೆನು, ದಯವಿಟ್ಟು ತೆರಳಿ. ನಿಮ್ಮೊಡನೆ ಚರ್ಚೆಯೇ ? ನೀವು ನನಗೆ ತಂದೆಯಂತೆ. ಇಗೋ ಕೈಬಿಟ್ಟೆ, ನಾವು ತೊಂದರೆ ಕೊಡುವ ಸ್ವಭಾವದವರಲ್ಲ" ಎಂದು ಹೇಳಿ ಹನುಮಂತನು ಎತ್ತಿದ್ದ ಮೇರುಪರ್ವತವನ್ನು ಪಕ್ಕಕ್ಕೆ ಹಾವಿನಂತೆ ಕೆಳಕ್ಕಿಟ್ಟನು. ೬೧. 'ನೀವು ಹೋಗಿ ಬನ್ನಿ' ಎಂದು ಬ್ರಹ್ಮನನ್ನು ಕಳುಹಿಸಿಕೊಟ್ಟು ಶತ್ರುಗಳನ್ನು ದಿಕ್ಕು ದಿಕ್ಕಿಗೆ ಓಡಿಸುವ ವೀರಹನುಮಂತನು ಮೇರುಪರ್ವತದ ನೆತ್ತಿಯ ರತ್ನಗಳಿಂದ ಮನೋಹರವಾದ ಚಿನ್ನದ ಶಿಖರವನ್ನು ಕಿತ್ತುಕೊಂಡನು. ನಡೆದಾಡುವ ಪರ್ವತವೋ ಎನ್ನುವಂತೆ ವೇಗವಾಗಿ ಬಂದು ಸಮುದ್ರದ ಎರಡು ದಡಗಳಿಗೂ ಆ ಶಿಖರವನ್ನು ತಂದಿಟ್ಟನು. ೬೨. ಹನುಮಂತನು ತಂದುಹಾಕಿದ ಬೆಟ್ಟಕ್ಕೆ ಬೆಂಬಲವಾಗಿ ವೀರರು ಕೊಟ್ಟ ಕುಲ ಪರ್ವತಗಳ ಬಂಡೆಗಳನ್ನು ಎರಡೂ ಕಡೆಗಳಿಗೆ ಕೌಶಲ್ಯದಿಂದ ನಳನು ಸೇರಿಸಿದನು ಇಂದ್ರನ ಬಡಗಿ ಆಕಾಶದಿಂದ ಇಳಿದುಬಂದು ಅನೇಕ ರೀತಿಯ ರಚನೆಗಳಿಂದ ಹೊಂದಿಕೆಯಾಗಿ ಸೇತುವೆಯನ್ನು ಕಟ್ಟಿದನು. ೬೩. ನುಡಿಯಲು ಇದು ಆಶ್ಚರ್ಯ. ಸಾಗರವು ಸೇತುವೆಯನ್ನು ತಲೆಯ ಮೇಲೆ ಧರಿಸಿತು. ಜಗತ್ತಿನಲ್ಲಿ ಸಮರ್ಥರು ನಡೆಸಿದ ಅಸಾಧಾರಣ ಕಾರ್ಯಕ್ಕೆ ಇದಿರುಂಟೇ ? ಒಡನೆ ಸೇತುವೆಯು ಕಟ್ಟಿ ಮುಗಿಯಿತು. ಬಳಿಕ ನಡುವೆ ತಂದ ಬಂಡೆಗಳನ್ನು ಇನ್ನು ಬೇಡವೆನ್ನಲು ಸುಗ್ರೀವನ ಕಪಿವೀರರು ಅಲ್ಲಲ್ಲೇ

ವೊಳಗಿದವು ನಿಸ್ಸಾಳತತಿ ನಭ । ದೊಳಗೆ ಸುರಪನ ನೇಮದಲಿ ಹೂ
ವಳೆಯು ಹೊನಲುಪ್ಪರಿಸಿದವು ಕಪಿಕಟಕದಗಲದಲಿ
ಸುಳಿದವಾರತಿ ತೊರವೆಯರಸನ । ಬಳಿಯಲರಿವಿಜಯಾಭಿವಚನದ
ವಿಲಸದಮರಸುವಾಸಿನಿಯರಕ್ಷತೆಯ ಹರಕೆಯಲಿ ೬೪

ಎಸೆದುಬಿಟ್ಟರು. ೬೪. ಆಕಾಶದಲ್ಲಿ ನಗಾರಿಗಳು ಭೋರ್ಗರೆದವು. ಇಂದ್ರನ ಅಪ್ಪಣೆಯ ಮೇರೆಗೆ ಕಪಿಸೈನ್ಯದ ಮೇಲೆ ಹೂವಿನ ಮಳೆ ಸುರಿಯಿತು, ದೇವತಾಸ್ತ್ರೀಯರು ಶತ್ರುಗಳನ್ನು ಜಯಿಸು ಎಂದು ಹರಸಿ ಅಕ್ಷತೆಯನ್ನು ತಳಿದು ತೊರವೆಯೊಡೆಯನಿಗೆ ಆರತಿಯೆತ್ತಿದರು.

# ಆರನೆಯ ಸಂಧಿ

ಸೂಚನೆ॥ ಅಂಕದಲಿ ಕಪಿಬಲ ಸಹಿತ ನಿ । ಶ್ಯಂಕ ರಘುಪತಿ ಬಂದುಬಿಟ್ಟನು
ಲಂಕೆಯೊತ್ತಿನಲಸುರಪತಿ ನೆರಹಿದನು ನಿಜಬಲವ

ಕುಶನೆ ಕೇಳ್ಳೈ ಪುಷ್ಯಶುದ್ಧದ । ದಶಮಿಯಲಿ ದಿವಮುಖದಲಾರಂ
ಭಿಸಿತು ಮುಗಿದುದು ಸೇತು ದಿನನಾಲ್ಕಱ ಸಮಾಪ್ತಿಯಲಿ
ಒಸಗೆವಱ ವೊಳಗಿದವು ದೇವ । ಪ್ರಸರದಲಿ ಕಪಿಸಾರ್ವಭೌಮಕ
ನಸುರಹರನಿದ್ದೆಡೆಗೆ ಬಂದನು ಭಟರ ಗಡಣದಲಿ ೧

ಜಲಧಿಗಾದುದು ಸೇತು ಕರುಣಾ । ಜಲಧಿ ಚಿತ್ತೈಸೆಂದು ವಿಕ್ರಮ
ಜಲಧಿ ಜಲಜಪ್ರಿಯತನೂಭವ ಮಾಡೆ ಬಿನ್ನಹವ
ಕಲಿತ ಹರುಷದ ನಗೆಮುಖದ ಮಂ । ಡಲದಲನುಜನ ಕೈವಿಡಿದು ಬಳಿ
ಕಿಳಿದನನುಪಮ ಸಿಂಹವಿಷ್ಟರವನು ರಘುಪ್ರಭವ ೨

ಸುರರು ಜಯಜಯುವೆನಲು ಸುರಮುನಿ । ವರರು ನುತಿಸಲು ಸಕಲ ವಿದ್ಯಾ
ಧರರು ಹೊಗಳಲು ಸೂತಮಾಗಧ ವಂದಿಸಂದೋಹ
ಬಿರುದನುಚ್ಚಾರಿಸಲು ಮಾರುತಿ । ಧಿರುರೆ ಪಾಯವಧಾರೆನಲು ಬಂ
ಧುರದ ಬಹಳಿತ ಸೇತುವಿದ್ದೆಡೆಗಾಗಿ ನಡೆತಂದ ೩

ಸೂಚನೆ॥ ಯುದ್ಧವಿಜಯದಲ್ಲಿ ನಿಸ್ಸಂದೇಹಿಯಾದ ರಘುಪತಿಯು ಕಪಿಸೈನ್ಯ ಸಮೇತ ಲಂಕಾನಗರದ ಬಳಿಯಲ್ಲಿ ಪಾಳಯವನ್ನು ಹೂಡಿದನು. ಇತ್ತ ರಾವಣನು ತನ್ನ ಸೈನ್ಯವನ್ನು ಸೇರಿಸಿದನು. ೧. ಕುಶನೆ ಕೇಳು, ಪುಷ್ಯಮಾಸದ ಶುಕ್ಲಪಕ್ಷದ ದಶಮಿಯ ದಿವಸ ಬೆಳಗ್ಗೆ ಸೇತುವೆಯ ಕೆಲಸವನ್ನು ಆರಂಭಿಸಿ ನಾಲ್ಕು ದಿವಸಗಳು ಮುಗಿಯುವ ಹೊತ್ತಿಗೆ ಪೂರ್ಣಗೊಳಿಸಲಾಯಿತು. ದೇವತೆಗಳ ಗುಂಪಿನಲ್ಲಿ ಮಂಗಳವಾದ್ಯಗಳು ಭೋರ್ಗರೆದವು. ವಾನರಚಕ್ರವರ್ತಿ ಸುಗ್ರೀವನು ಸೈನಿಕರೊಡನೆ ರಾಮನ ಬಳಿಗೆ ಬಂದನು. ೨. "ಕರುಣಾ ಸಾಗರ ಕೇಳು. ಸಾಗರಕ್ಕೆ ಸೇತುವೆಯನ್ನು ಕಟ್ಟಿಯಾಯಿತು" ಎಂದು ಪರಾಕ್ರಮಸಾಗರ ನಾದ ಸೂರ್ಯಪುತ್ರ ಸುಗ್ರೀವನು ರಾಮನಿಗೆ ಬಿನ್ನವಿಸಿಕೊಂಡನು. ಆಗ ರಾಮನು ಹರ್ಷಿತನಾಗಿ ನಗುಮುಖದಿಂದ ತಮ್ಮನ ಕೈಹಿಡಿದುಕೊಂಡು ಸಿಂಹಾಸನದಿಂದ ಇಳಿದು ಬಂದನು. ೩. ದೇವತೆಗಳು ಜಯಜಯ ಎನ್ನುತ್ತಿರಲು, ದೇವಮುನಿಗಳು ಸ್ತುತಿಸು ತ್ತಿರಲು, ಸಮಸ್ತ ವಿದ್ಯಾಧರರು ಹೊಗಳುತ್ತಿರಲು, ಸೂತ ವಂದಿಮಾಗದ ಮೊದಲಾದ ಹೊಗಳುಭಟರು ಬಿರುದನ್ನು ಘೋಷಿಸುತ್ತಿರಲು, ಹನುಮಂತನು 'ಧಿರುರೆ, ಪಾಯ ವಧಾರು' ಎನ್ನುತ್ತಿರಲು ಸುಂದರವಾದ ಭಾರಿ ಸೇತುವೆಯ ಬಳಿಗೆ ರಾಮನು ಬಂದನು.

ಅರಸ ನಿಂದಿದಿರಿನಲಿ ತಾರಕಿ । ದೊರೆಯವೊಲು ಬಲುಸೇತು ಸಾಗರ
ನೊರೆಯನುಗಿದುಬ್ಬಣದವೊಲು ಯಾದಸಕುಲಾಧಿಪನ
ಪುರದ ಪಥದವೊಲರಿದಶಾಸ್ಯನ । ಕರೆದು ಪೋದುವ ಮೃತ್ಯು ನೀಡಿದ
ಕರದವೊಲ್ಕಣ್ಗೆಸೆದುದನುಪಮ ಸೇತು ಸಾಗರದ ೪

ಕೀಶಬಲದೋರ್ವಲ ಶಿಲಾ ಪರಿ । ಶಾಸನವೊ ರಘುಪತಿಯ ಕೀರ್ತಿ
ಶ್ರೀಸತಿಯ ಸೀಮಂತವೋ ಶಿವಶಿವ ಮಹಾದೇವ
ಪಾಶಧರನುದಿತಪ್ರತಾಪ ವಿ । ಲಾಸ ವಿಜಯಸ್ತಂಭವೋಯೆನ
ಲಾ ಸುರಾಳಿಗೆ ಬೆಜಿಗ ಬೀರಿದುದಾ ಮಹಾಸೇತು ೫

ವಿಜಯರಾಘವನಹಿತವಿಜಯಕೆ । ಬಿಜಯಮಾಡುವನೆಂದು ಬಂದಜ
ರಜಕ ರಚಿಸಿದ ಮೆಲ್ಲಡಿಯ ಮಡಿವಾಸಿನತಿಶಯವೊ
ತ್ರಿಜಗದಧಿದೇವತೆಯನಂಬುಧಿ । ಭಜಿಸಿ ಭಾಳದಲಿಟ್ಟ ತಿಲಕವೊ
ಗಜಗಲಿಸಿತಿದಿರಿನಲಿ ಸೇತು ಭವಾಬ್ಧಿಸೇತುವಿನ ೬

ನೋಡಿ ರಘುಪತಿ ಮೆಚ್ಚಿ ಮಿಗೆ ಕೊಂ । ಡಾಡುತಿತ್ತನು ಬಳಿಕ ಮುದದಲಿ
ಮೂಡಣಾಶಾಧೀಶಪದವಿಯ ನಳ ಕಪೀಂದ್ರಂಗೆ
ಬೀಡು ಬಳಿಕಿತ್ತಿದುದು ಮೊಳಗುವ । ಮೋಡಗಂಡಂಬುಧಿಯವೊಲು ಕಡು
ಹಾಡಿದವು ನಭದೊಳಗೆ ನಿಸ್ಸಾಳದಲಿ ನಿರ್ಜರರ ೭

೪. ಚಂದ್ರನಂತೆ, ಒರೆಯನ್ನು ಕಳಚಿದ ಕತ್ತಿಯಂತೆ, ವರುಣನ ಪಟ್ಟಣದ ದಾರಿಯಂತೆ, ಶತ್ರು ರಾವಣನನ್ನು ಕರೆದು ಹೊಡೆಯಲು ನೀಡಿದ ಮೃತ್ಯುವಿನ ಕೈಯಂತೆ ಅಸಾಮಾನ್ಯವಾದ ಮಹಾಸಾಗರದ ಸೇತುವೆಯು ರಾಮನ ಎದುರಿನಲ್ಲಿ ಕಂಗೊಳಿಸಿತು. ೫. ವಾನರ ಸೈನ್ಯದ ತೋಳ್ಬಲವನ್ನು ಕೊಂಡಾಡುವ ಶಿಲಾಶಾಸನವೋ! ರಘುಪತಿಯ ಕೀರ್ತಿ ಲಕ್ಷ್ಮಿಯ ಬೈತಲೆಯೋ! ಶಿವಶಿವ ಮಹಾದೇವ! ಯಮನ ಪ್ರತಾಪದ ವಿಜಯ ಸ್ತಂಭವೋ! ಎನ್ನುವಂತೆ ಮಹಾಸೇತುವೆಯು ದೇವತೆಗಳಿಗೆ ಸೋಜಿಗವನ್ನುಂಟು ಮಾಡಿತು. ೬. ವಿಜಯರಾಘವನು ಶತ್ರುವಿಜಯಕ್ಕೆ ದಯಮಾಡಿಸುವನೆಂದು ಬ್ರಹ್ಮನೆಂಬ ಅಗಸನು ಬಂದು ಹಾಸಿದ ಮೃದುವಾದ ನಡೆಮುಡಿಯೋ, ಸಮುದ್ರನು ಮೂರು ಲೋಕಗಳ ಅಧಿದೇವತೆಯನ್ನು ಪೂಜಿಸಿ ಹಣೆಗೆ ಇಟ್ಟ ತಿಲಕವೋ ಎನ್ನುವಂತೆ ಸಂಸಾರ ಸಾಗರದ ಸೇತುವೆಯಂತೆ ಮಹಾಸೇತುವೆಯು ಎದುರಿನಲ್ಲಿ ಪ್ರಕಾಶಿಸಿತು. ೭. ರಘುಪತಿಯು ಸೇತುವೆಯನ್ನು ಮೆಚ್ಚಿ ಅತಿಶಯವಾಗಿ ಕೊಂಡಾಡಿ ನಳನಿಗೆ ಪೂರ್ವದಿಕ್ಕಿನ ಒಡೆತನದ ಪದವಿಯನ್ನು ಸಂತೋಷದಿಂದ ಕೊಟ್ಟನು. ಗುಡುಗುವ ಮೋಡವನ್ನು ಕಂಡ ಸಮುದ್ರದಂತೆ ವಾನರಸೈನ್ಯವು ಪಾಳೆಯವನ್ನು ತೆಗೆಯಿತು. ಆಕಾಶದಲ್ಲಿ ದೇವತೆ

ಬಲದ ಮುಂಗುಡಿ ನೀಲನದು ಹಿಂ । ಗಲಿಯ ಕಾಹು ಸುಷೇಣನದು ತ
ದ್ಬಲದ ಮೇಲಾರೈಕೆ ನಳ ಶತಬಲಿ ಗವಾಕ್ಷರದು
ಖಳರ ಕಳ್ಳೇರುಗಳ ವ್ಯೆಗಾ । ವಲು ವಿಭೀಷಣದೇವನದು ಪಡಿ
ಬಲದ ತೆರಳಿಕೆ ಕೇಸರಿಯ ವಶವಾಯ್ತು ಪಯಣದಲಿ ೮

ಏನು ಮಹಿಮೆಯೊ ಕಂದ ಕೇಳ್ ಲ । ಕ್ಷ್ಮೀನಿವಾಸನ ನಿರುಪಮದ ಲೀ
ಲಾನಟಣೆಯಭಿನವದ ನರರೂಪಕದ ರಾಜಸದ
ಆ ನಳಿನಭವ ಶಂಕರರ ಸು । ಯ್ಯಾನವಾಯ್ತು ಸಕಲ ವಾನರ
ಸೇನೆಗಿಂದ್ರಾದಿಗಳು ಸೇವಕರಾಯ್ತು ಪಯಣದಲಿ ೯

ಅಮಲ ತಾರೆಯಲಹಿತಜಯ ಸಂ । ಕ್ರಮಿತಲಗ್ನದಲರಸನುದಧಿ
ಕ್ರಮನುರುಸ್ಕಂಧಾವಲಂಬನನಾದನೊಲವಿನಲಿ
ಅಮರಪತಿ ಮೊದಲಾದ ದಿವಿಜ । ಪ್ರಮುಖರುಗ್ಘಡಣೆಯಲಿ ಗಮನೋ
ದ್ಯಮವ ಮಾಡಿದನಖಿಳ ಕಪಿನಾಯಕರ ಗಡಣದಲಿ ೧೦

ಪಡೆಯ ಪದಘಟ್ಟಣೆಯ ದಟ್ಟಣೆ । ಗಡಿಗಡಿಗೆ ಸಂಗವಿಸಿದಬುಧಿಯ
ಹಡಗಿನವೊಲೊಲೆದಾಡುತಿರ್ದುದು ಕಟ್ಟೆ ಕಡಲಿನಲಿ
ನಡೆವರಿಟ್ಟೆಡೆಯಾಗಿ ಕದನದ । ಕಡುಗಲಿಗಳುಬ್ಬೆದ್ದು ಲಯದಲಿ
ಘುಡುಘುಡಿಪ ಮುಗಿಲಂತೆ ಮುಂಚಿತು ಮಾರುತಾಧ್ವದಲಿ ೧೧

ಗಳ ನಗಾರಿಗಳು ಧ್ವನಿಗೈದವು. ೮. ಪ್ರಯಾಣದಲ್ಲಿ ವಾನರಸೈನ್ಯದ ಮುಂಭಾಗವು ನೀಲನಿಗೆ ಸೇರಿತು. ಸೈನ್ಯದ ಹಿಂಭಾಗದ ರಕ್ಷಣೆಯ ಜವಾಬ್ದಾರಿ ಸುಷೇಣನದು. ಆ ಸೈನ್ಯದ ಮೇಲುಗಾವಲು ನಳ ಶತಬಲಿ ಗವಾಕ್ಷರಿಗೆ ಸೇರಿತು. ರಾಕ್ಷಸರ ಕಪಟಯುದ್ಧ ದಿಂದ ರಕ್ಷಿಸುವ ಕೆಲಸ ವಿಭೀಷಣನ ಪಾಲಿಗೆ ಬಂದಿತು. ಪ್ರತಿಬಲದ ಮುನ್ನಡೆಯು ಕೇಸರಿಯ ವಶಕ್ಕೆ ಬಂದಿತು. ೯. ಲಕ್ಷ್ಮೀನಿಲಯನ ರಜೋಗುಣದಿಂದ ಕೂಡಿದ ಅಸಾಧಾರಣವಾದ ಮಾನವರೂಪದ ಹೊಸಪರಿಯ ಲೀಲೆಯ ನಟನೆಯ ಮಹಿಮೆ ಯನ್ನು ಏನೆಂದು ಹೇಳೋಣ, ಕೇಳು ಲವ. ಬ್ರಹ್ಮ ಶಿವರು ವಾನರಸೈನ್ಯಕ್ಕೆ ಕಾವ ಲಾದರು. ಪ್ರಯಾಣದಲ್ಲಿ ಸಮಸ್ತ ವಾನರಸೈನ್ಯಕ್ಕೆ ಇಂದ್ರಾದಿ ದೇವತೆಗಳು ಸೇವಕ ರಾದರು. ೧೦. ಶುಭನಕ್ಷತ್ರದಲ್ಲಿ ಶತ್ರುಜಯಲಗ್ನದಲ್ಲಿ ರಾಮನು ಲಂಕೆಗೆ ಸಮುದ್ರ ವನ್ನು ದಾಟಿದ ಹನುಮಂತನ ಹೆಗಲನ್ನು ಏರಿದನು. ದೇವೇಂದ್ರನೇ ಮೊದಲಾದ ಪ್ರಮುಖ ದೇವತೆಗಳು ಬಿರುದಾವಳಿಗಳನ್ನು ಹೊಗಳುತ್ತಿರಲು ವಾನರನಾಯಕರ ಸಮೂಹದೊಡನೆ ರಾಮನು ಪ್ರಯಾಣಮಾಡಿದನು. ೧೧. ವಾನರಸೈನ್ಯದ ಹೆಜ್ಜೆಯ ತುಳಿತದ ದಟ್ಟಣೆಗೆ ಸಮುದ್ರದ ಮೇಲಿನ ಹಡಗಿನಂತೆ ಸೇತುವೆಯು ತೂಗಾಡಿತು. ಸೇತುವೆಯ ಮೇಲೆ ನಡೆಯುವವರ ಇಕ್ಕಟ್ಟಿನಿಂದಾಗಿ ಯುದ್ಧವೀರರು ಉತ್ಸಾಹದಿಂದ

ನೆಱೆಯದಾಯ್ತಾಕಾಶ ಗಿರಿಗಳ । ಹೊಱೆಗೆವಾಳರ ಹೆಮ್ಮರಂಗಳ
ನಿಱಿಕಿದತಿಮಸದತುಳಬಲರುತ್ತಾಳ ಗಮನದಲಿ
ಕರದ ಮುಡುಹಿನ ಗಿರಿಗಳಣಹಿನ । ಗುಱುಬುಗಳ ಕೈಕಾಲುಮೆಟ್ಟಿನ
ತುಱಿಸು ತೋಟಿಯ ಭಟರ ಧೃತಿಗೆಡಿಸಿದುದು ಮೂಜಗವ ೧೨

ಈಸಿ ಹಾಯ್ದರು ಕೆಲರು ಬಾಲವ । ಬೀಸಿ ಹಾಯ್ದರು ಕೆಲರು ಬೆಂಗೊ
ಟ್ಟಾಸುರದಿ ನಡೆಸಿದರು ತಂತಮ್ಮಖಿಳ ಸೈನಿಕವ
ಏಸು ಬಲ್ಲಿದ ಭಟರೊ ಹರಿಯ ವಿ । ಲಾಸವೈಚಿತ್ರಕದ ಘನತೆಯ
ಮೈಸಿರಿಯದೆಂತುಟೊ ಮಹಾದೇವೆಂದುದಮರಗಣ ೧೩

ಜಗದ ವಿಲಯದ ಮುಗಿಲ ಮೋಹರ । ದೆಗೆದವೊಲು ನಭವೈದೆ ಶಾಖಾ
ಮೃಗದಮಯವಾಯ್ತಣುಗ ಕೇಳುಬ್ಬರದ ಕಪಿಬಲದ
ನೆಗಳಿಕೆಯ ಗಮನದಲಿ ಕತ್ತಲೆ । ಬಿಗಿದು ಬಿಡದಿರುತಿರ್ದುದೈ ನರ
ಜಗತಿಯನು ದಿವರಾತ್ರಿ ಕಾಣಿಸದಾಯ್ತು ಜಗಕೆಂದ ೧೪

ಮೂಱುದಿನ ಪರಿಯಂತ ಹಾಯ್ದುದು । ತಾಱುಘಟ್ಟಿನಲಂಬುಧಿಯ ಮೇ
ಲಾಱುದಿನ ಪರಿಯಂತ ಬಿಟ್ಟುದು ಬೀಡು ಕಪಿಬಲದ
ಬೇಱೆ ಸೃಷ್ಟಿಯನಬುಜಭವ ಮುಖ । ದೋಱಿಸಿದುದಿಲ್ಲೆಂಬವೊಲು ಮೈ
ದೋಱಿದುದು ಕಪಿಸೇನೆ ನೆಲನೆನಿತನಿತಱಗಲದಲಿ ೧೫

ನೆಗೆದು ಪ್ರಳಯಕಾಲದಲ್ಲಿ ಗುಡುಗುವ ಮೋಡದಂತೆ ಆಕಾಶದಲ್ಲಿ ಮುನ್ನಡೆದರು. ೧೨. ಬಂಡೆಗಳನ್ನು ಹೊತ್ತ ಭಟರ ಮತ್ತು ಭಾರಿ ಮರಗಳನ್ನು ಕಂಕುಳುಗಳಲ್ಲಿ ಇರುಕಿಕೊಂಡ ಉತ್ಸಾಹಿ ಬಲಶಾಲಿಗಳ ಚುರುಕು ನಡಿಗೆಗೆ ಆಕಾಶದಲ್ಲಿ ಸ್ಥಳ ಸಾಲದಾಯಿತು. ಕೈಗಳಿಂದ ಬಂಡೆಗಳನ್ನೆಬ್ಬುವ, ಹೆಗಲಿನ ಮೇಲೆ ಬೆಟ್ಟಗಳನ್ನು ಹೊರುವ, ಬಂಡೆಗಳನ್ನು ತಳ್ಳುವ, ಕೈಕಾಲುಗಳಿಂದ ಒದ್ದು ನೂಕುವ ಕಪಿವೀರರ ಭಯಂಕರ ಚೇಷ್ಟೆಯು ಮೂರು ಲೋಕಗಳನ್ನೂ ಧೈರ್ಯಗೆಡಿಸಿತು. ೧೩. ಕೆಲವರು ಈಜಕೊಂಡು ಬಾಲವನ್ನು ಬೀಸುತ್ತ ಕೆಲವರು ಹಿಂದುಗಡೆಯಿಂದ ಜಬರಿಸಿ ತಂತಮ್ಮ ಸೈನ್ಯವನ್ನು ನಡೆಸಿದರು. 'ಎಂಥ ಸಮರ್ಥವೀರರೋ. ಶ್ರೀಹರಿಯ ಸುಂದರವಾದ ಘನತೆಯ ಸೊಬಗು ಎಷ್ಟು ಮಟ್ಟಿನದೋ. ಮಹಾದೇವ !' ಎಂದರು ದೇವತೆಗಳು. ೧೪. ಜಗತ್ಪ್ರಳಯದ ಮೋಡವು ಗುಂಪುಕೂಡಿದಂತೆ ಆಕಾಶವು ವಾನರರಿಂದ ತುಂಬಿಹೋಯಿತು. ಅತಿಶಯವಾದ ಕಪಿಸೈನ್ಯದ ಪ್ರಸಿದ್ಧ ಪ್ರಯಾಣದಿಂದ ಕತ್ತಲೆ ಜಗತ್ತನ್ನು ಬಿಡದೆ ಮುಚ್ಚಿಕೊಂಡಿತು. ಜಗತ್ತಿಗೆ ಹಗಲು ರಾತ್ರಿ ಎಂಬ ವ್ಯತ್ಯಾಸವು ಗೊತ್ತಾಗದೆಹೋಯಿತು. ೧೫. ಮೂರು ದಿನಗಳವರೆಗೆ ಕಪಿಸೈನ್ಯವು ಚೆಲ್ಲಾಪಿಲ್ಲಿಯಾಗಿ ಸಮುದ್ರವನ್ನು ದಾಟಿತು; ಅನಂತರ ಆರುದಿನಗಳವರೆಗೆ ಪಾಳೆಯವನ್ನು ಹಾಕಿತು. ಬ್ರಹ್ಮನು ಬೇರೆ ಸೃಷ್ಟಿಕಾರ್ಯಕ್ಕೆ ಮುಖವನ್ನು ತೋರಿಸಲಿಲ್ಲವೆಂಬಂತೆ ನೆಲದಷ್ಟಗಲಕ್ಕೂ ಕಪಿಸೈನ್ಯವು ಕಣ್ಣಿಗೆ ಕಾಣಿಸಿತು.

ತೆರಳಿತಲ್ಲಿಂ ಮೇಲೆ ಬಲ ಮೋ । ಹರಿಸಿ ಮುಂಗಾರಿನ ಮುಗಿಲ್ಗಳ
ಮೊರಹದಬ್ಬರಣೆಯಿಲಿ ಸಂವರಣೆಯಲಿ ತರುಗಿರಿಯ
ಶರಧಿ ವಿಲಯದಲಮರಶೈಲದ । ಶಿರವನೊದೆದುಬ್ಬೇಳ್ವವೊಲು ನಿ
ಷ್ಕರತೆಯಲಿ ಮುಂಬರಿದು ಮುಂಚಿತು ವೈರಿಜನಪದವ ೧೬

ತೊಲಗದೆಡೆಗೆಡೆಗಿರುವ ತಲೆಗಾ । ವಲಿನ ರಕ್ಕಸಭಟರ ತಲೆಗಳ
ತೊಲಗಹಾಯ್ಕುತ ಕೋಣೆಕುತ್ತುಜಿ ಕೂಡೆ ಶೋಧಿಸುತ
ಅಳಿಬಲರ ತಲೆಗಾಯ್ದು ಲಂಕೆಗೆ । ಕಳುಹುತೊತ್ತಂಬರಿಸಿ ಜನಪದ
ದೊಳಗೆ ನಡೆದುದು ರಘುವರೂಥಿನಿ ರಾವಣಾಸುರನ ೧೭

ಉಸುರಲಚ್ಚರಿ ಸುರನರೋರಗ । ವಿಷಯವೀಥಿಯ ವಿಮಲಲಕ್ಷ್ಮಿಯ
ನೊಸಲ ಮಾಣಿಕದಂತೆ ಮೆಱೆದುದು ರಾಷ್ಟ್ರ ರಾವಣನ
ಪಶುಗಳೇ ಸುರಪಶು ಮಹೀಜ । ಪ್ರಸರವೇ ಗೀರ್ವಾಣಕುಜ ಘನ
ರಸವೆ ನಿರುಪಮ ಸಿದ್ಧರಸವೆನೆ ಸಕಲ ವಿಭವದಲಿ ೧೮

ಕಳವೆಮಯವಾ ನೆಲನು ಕಬ್ಬಿನ । ಹಳುವಮಯವಾ ಹೊಲನು ನಂದನ
ವಳಯಮಯವವನಿಚಯ ಕೃತಕಾಚಲಮಹಾದ್ರಿಚಯ
ಹೊಳಲಮಯವಾ ಮಾರ್ಗ ಮಂದಾ । ನಿಲನಮಯ ದಿಗುವರ್ಗಸಿರಿಯೊ
ಬ್ಬುಳಿಯಮಯವಾ ವಿಷಯವೀಥಿ ಕುಬೇರಸಹಭವನ ೧೯

೧೬. ಮುಂಗಾರಿನ ಮೋಡಗಳ ಗುಡುಗಿನಂತೆ ಗದ್ದಲ ಮಾಡುತ್ತ ಬೆಟ್ಟ ಮರಗಳನ್ನು ಸಿದ್ಧಪಡಿಸಿಕೊಂಡು ಕಪಿಸೈನ್ಯವು ಅಲ್ಲಿಂದ ಮುಂದಕ್ಕೆ ಪ್ರಯಾಣ ಹೊರಟಿತು. ಪ್ರಳಯದಲ್ಲಿ ಸಾಗರವು ಮೇರುಪರ್ವತದ ಮೇಲೆ ಬಿದ್ದು ಅಪ್ಪಳಿಸುವಂತೆ ಸೈನ್ಯವು ನಿರ್ದಯತೆಯಿಂದ ವೈರಿರಾಜ್ಯದೊಳಕ್ಕೆ ನುಗ್ಗಿ ಮುಂದುವರಿಯಿತು. ೧೭. ಅಲ್ಲಲ್ಲಿ ಕಾವಲು ಕಾಯುತ್ತಿದ್ದ ರಾಕ್ಷಸಯೋಧರ ತಲೆಗಳನ್ನು ಕತ್ತರಿಸಿ ಹಾಕುತ್ತ, ಮೂಲೆಮೂಲೆಗಳನ್ನು ಶೋಧಿಸುತ್ತ, ಬಲಹೀನರನ್ನು ರಕ್ಷಿಸಿ ಅವರನ್ನು ಲಂಕೆಗೆ ಕಳುಹಿಸುತ್ತ, ರಾವಣಾಸುರನ ರಾಜ್ಯವನ್ನು ಆಕ್ರಮಿಸುತ್ತ ರಾಮನ ಸೈನ್ಯವು ಮುನ್ನಡೆಯಿತು. ೧೮. ವರ್ಣಿಸಲು ಆಶ್ಚರ್ಯ! ದೇವ ಮಾನವ ನಾಗಲೋಕಗಳ ಲಕ್ಷ್ಮಿಯ ಹಣೆಯ ಮಾಣಿಕ್ಯದಂತೆ ರಾವಣನ ದೇಶವು ಕಂಗೊಳಿಸಿತು. ಅಲ್ಲಿ ಹಸುಗಳು ಕಾಮಧೇನುಗಳು, ಮರಗಳೆಲ್ಲ ಕಲ್ಪವೃಕ್ಷಗಳು, ಸತ್ವಯುತವಾದ ರಸಗಳೆಲ್ಲ ಸಿದ್ಧರಸಗಳು ಎನ್ನುವಂತೆ ಸಮಸ್ತ ವೈಭವಗಳಿಂದೊಡಗೂಡಿತ್ತು, ರಾವಣನ ರಾಜ್ಯ. ೧೯. ಎಲ್ಲಿ ನೋಡಿದರೂ ನೆಲವೆಲ್ಲ ಭತ್ತದ ಪೈರು, ಹೊಲಗಳೆಲ್ಲ ಕಬ್ಬಿನ ವನ, ಭೂಮಿಯೆಲ್ಲ ನಂದನವನ, ಕ್ರೀಡಾಪರ್ವತಗಳೆಲ್ಲ ಮಹಾಪರ್ವತಗಳು, ಲಂಕಾರಾಜ್ಯದ ದಾರಿಗಳೆಲ್ಲ ಪಟ್ಟಣಮಯ, ದಿಕ್ಕುಗಳೆಲ್ಲ ಮಂದ ಮಾರುತಮಯ, ಕುಬೇರನ ಸಹೋದರ ರಾವಣನ ರಾಜ್ಯದ ಬೀದಿಗಳೆಲ್ಲ ಸಂಪತ್

ಕಳಿಯಲಮ್ಮವು ಕೂಡೆ ಕುಜದಲಿ । ಫಲನಿಚಯ ನೀರ್ದೆಗೆಯಲಮ್ಮವು
ಕೊಳಗಳಲಿ ಹೂಬೀಯಲಮ್ಮವು ಗಿಡು ಲತಾಳಿಯಲಿ
ಬೆಳೆಯಲಮ್ಮವು ಕಾಮರನು ಕಾ । ಡೊಳಗೆ ಕಾಮನಮಿತ್ರನಲ್ಲದೆ
ಸುಳಿಯಲಮ್ಮವು ಋತುಗಳಾ ರಾವಣನ ರಾಜ್ಯದಲಿ ೨೦

ಕರೆದೊಡೋಯೆನುತಿಹುದು ಸಿರಿ ದಶ । ಶಿರನ ಘನವಿಷಯಾಂತರಾಳದೊ
ಳರಸುತನದಗ್ಗಳಿಕೆಯೆಂತುಟೊ ಶಿವಮಹಾದೇವ
ದೊರೆಯೆನಿಸಿತಾ ಬಲಿಯ ರಾಜ್ಯದ । ಪರಮ ವಿಭವಕೆ ಮೂಜಗದಲಿ
ಸರಿಯದಾರ್ಬೈ ಸಿರಿಯೊಳಾ ಲಂಕಾಧಿನಾಥಂಗೆ ೨೧

ಕೆಡುವುದೇನಜಿದಯ್ಯ ಮಾರ್ಗದಿ । ನಡೆವ ರಾಯರ ದೆಸೆಯ ಲಂಕಾ
ಪೊಡವಿ ತಳಪಟವಾಯ್ತು ಕಪಿವಾಹಿನಿಯ ಕಾಲ್ತುಳಿಗೆ
ಒಡೆದವಖಿಳಗ್ರಾಮ ಪುರ ಖ । ರ್ವಡ ಮಡಂಬ ಸುಖೇಡವಗಲಕೆ
ಹುಡಿಯಲದ್ದುದು ಹರಿಬಲದ ಹರಿಧಾಳಿಯಲಿ ಧರಣಿ ೨೨

ಪಯಣ ಪಯಣಕೆ ನಿಮ್ಮ ಸೀತಾ । ಪ್ರಿಯನ ಬೀಡಿಕೆಗರಮನೆಯ ಹರಿ
ಹಯನ ನೇಮದಲಮರವರ್ಧಕಿ ಮಾಡಿದನು ಮನದ
ಭಯವನುಳಿದಮರೇಂದ್ರನಾ ಪಾ । ಳಿಯಕೆ ಕಲ್ಪದ್ರುಮದ ಫಲಸಮು
ದಯವ ಕಳುಹುತ್ತಿರ್ದನನುಚರರಿಂದ ನಂದನದ ೨೩

ಸಮೃದ್ಧಿಯಿಂದ ತುಂಬಿದ್ದುವು. ೨೦. ಮರಗಳಲ್ಲಿ ಹಣ್ಣುಗಳು ತೀರಿಹೋಗುವ ಧೈರ್ಯಮಾಡಲಾರವು, ಕೊಳಗಳಿಗೆ ಬತ್ತಿಹೋಗಲು ಧೈರ್ಯವಿಲ್ಲ, ಗಿಡಬಳ್ಳಿಗಳಲ್ಲಿ ಹೂವುಗಳು ಮುಗಿದುಹೋಗಲಾರವು, ಕಾಡಿನಲ್ಲಿ ಕೆಟ್ಟ ಮರಗಳಿಗೆ ಬೆಳೆಯಲು ಧೈರ್ಯವಿಲ್ಲ. ರಾವಣನ ರಾಜ್ಯದಲ್ಲಿ ಮನ್ಮಥಮಿತ್ರನಾದ ವಸಂತನಲ್ಲದೆ ಬೇರೆ ಋತುಗಳು ಸುಳಿಯಲು ಧೈರ್ಯಮಾಡಲಾರವು. ೨೧. ದಶಕಂಠನ ರಾಜ್ಯದಲ್ಲಿ ಕರೆದಕೂಡಲೇ ಸಂಪತ್ತು ಓ ಎಂದು ಉತ್ತರ ಕೊಡುವುದು; ಅವನ ರಾಜ್ಯಭಾರಕ್ರಮದ ಹಿರಿಮೆಯನ್ನು ಏನೆಂದು ಹೇಳೋಣ, ಶಿವ ಮಹಾದೇವ! ಬಲಿಯ ರಾಜ್ಯದ ವೈಭವಕ್ಕೆ ಸರಿಜೋಡಿಯೆನಿಸಿತು ರಾವಣನ ರಾಜ್ಯ. ಸಂಪತ್ತಿನಲ್ಲಿ ಲಂಕೆಯ ಒಡೆಯನಿಗೆ ಮೂರು ಲೋಕಗಳಲ್ಲೂ ಯಾರು ಸಮ? ೨೨. ಸಂಪ್ರದಾಯದ ದಾರಿಯಲ್ಲಿ ನಡೆಯುತ್ತಿದ್ದ ರಾಜರುಗಳಿದ್ದ ಲಂಕಾರಾಜ್ಯವು ಈಗ ಕೆಡುವುದೇನಸಾಧ್ಯವೇ? ಕಪಿಸೈನ್ಯದ ಕಾಲ್ತುಳಿತಕ್ಕೆ ಸಿಕ್ಕಿ ಬಯಲಾಯಿತು. ಸಮಸ್ತ ಹಳ್ಳಿ ಪಟ್ಟಣ ಊರು ಪುರ ಗ್ರಾಮಗಳು ಒಡೆದು ಹೋದುವು. ಕಪಿಸೈನ್ಯದ ರಭಸದ ದಾಳಿಯಿಂದ ಭೂಮಿಯು ವ್ಯಾಪಕವಾಗಿ ಧೂಳಿನಲ್ಲಿ ಮುಚ್ಚಿಹೋಯಿತು. ೨೩. ಪ್ರಯಾಣದಲ್ಲಿ ಒಂದೊಂದು ತಂಗುದಾಣಕ್ಕೂ ಇಂದ್ರನ ಅಪ್ಪಣೆಯಂತೆ ದೇವತೆಗಳ ಬಡಗಿ ವಿಶ್ವಕರ್ಮನು ಶ್ರೀರಾಮನಿಗೆ ಅರಮನೆಗಳನ್ನು ನಿರ್ಮಿಸಿದನು. ದೇವೇಂದ್ರನು ರಾವಣನ ಹೆದರಿಕೆಯನ್ನು ತ್ಯಜಿಸಿ ಶ್ರೀರಾಮನ ಪಾಳಯಗಳಿಗೆ ಕಲ್ಪವೃಕ್ಷದ ಹಣ್ಣುಗಳನ್ನು ನಂದನವನದ ಸೇವಕರ ಮೂಲಕ ಕಳುಹಿಸಿಕೊಡು

ದಿವಸ ಮೂಱಕೆ ಬಂದು ಬಿಟ್ಟುದು । ಭುವನಗಿರಿಯಲಿ ಪಾಳೆಯವು ಪಾ
ರ್ಥಿವ ಮಹಾನ್ವಯ ಕುಮುದ ರಘುರಾಜೇಂದ್ರಚಂದ್ರಮನ
ಶಿವಿವ ತೀವ್ರ ಮಣಿದ್ಯುತಿಯ ಖವ । ಖವಿಪ ಹೇಮಪ್ರಭೆಯಲಿನನನು
ಗವಸಣಿಗೆಯಿಂದುಗಿದವೊಲ್ಕಣ್ಗೆಸೆದುದರಿನಗರ ೨೪

ಜೀಯ ಲಂಕೆಯಿದೀಗ ರಕ್ಕಸ । ರಾಯನರಮನೆ ತೋಱುತಿದೆ ಪೂ
ರ್ಣಾಯತದ ನಿರುಪಮ ನಿಶಾಕರಬಿಂಬದಂದದಲಿ
ಆಯಿತೊಂದೇ ಪಯಣ ಸಮರೋ । ದ್ದಾಯಕರು ಸಂವರಿಸಿಕೊಳಲಸ
ಹಾಯಶೂರನ ಸಮರಕೆಂದಸುರೇಂದ್ರ ಕೈಮುಗಿದ ೨೫

ಬಂದರಾ ಸಮಯದಲಿ ಸನಕ ಸ । ನಂದನಾದ್ಯರು ಗುಪ್ತದಲಿ ರಘು
ನಂದನಂಗಾಮ್ನಾಯವಿಧಿ ವಿಜಯಾಭಿಷೇಚನವ
ಅಂದು ವಿರಚಿಸಿ ಹಾಯ್ದರವರರ । ವಿಂದಸಂಭವಸಭೆಗೆ ಬಳಿಕ
ಲ್ಲಿಂದ ಮೇಲಿನಬಿಂಬ ಲಂಬಿಸಿತಪರಜಲಧಿಯಲಿ ೨೬

ಬೀಡು ಬಿಟ್ಟುದು ಬಳಿಕ ಸಿಡಿಲ ಸ । ಗಾಢ ಸಬುದದ ನಿಶಿತ ಗಿರಿಗಳ
ಕೋಡುಗಲ್ಗಳ ಖಣಿಖಟಿಲ ಕಡುಹುಗಳಲಿನಸುತನ
ಗಾಡಿಸಿದುದೀ ವಾರ್ತೆ ವಿಬುಧ ವಿ । ಭಾಡಸಭೆಯಲಿ ಸಾರಣನ ಖಳ
ನೋಡಕಳುಹಲು ಬಂದನವ ತರುಮೃಗದ ರೂಪಿನಲಿ ೨೭

ತ್ತಿದ್ದನು. ೨೪. ರಾಜರುಗಳ ಶ್ರೇಷ್ಠಕುಲಗಳೆಂಬ ಕನ್ನೈದಿಲೆಗಳಿಗೆ ಚಂದ್ರನಾದ ರಘು ರಾಮನ ಪಾಳೆಯವು ಮೂರುದಿವಸಗಳಲ್ಲಿ ಪ್ರಯಾಣಮಾಡಿ ಬಂದು ಭುವನಗಿರಿಯಲ್ಲಿ ಬೀಡುಬಿಟ್ಟಿತು. ಕಣ್ಣುಕುಕ್ಕುವ ವಜ್ರಗಳ ಕಾಂತಿಯಿಂದಲೂ ತಳತಳಿಸುವ ಚಿನ್ನದ ಪ್ರಭೆಯಿಂದಲೂ ಕೂಡಿದ ಶತ್ರುರಾಜಧಾನಿಯು ಮುಸುಕಿನಿಂದ ಹೊರತೆಗೆದ ಸೂರ್ಯನಂತೆ ಪ್ರಕಾಶಿಸಿತು. ೨೫. "ಸ್ವಾಮಿ, ಇದೇ ಲಂಕೆ. ಹುಣ್ಣಿಮೆಯ ಪೂರ್ಣಚಂದ್ರಬಿಂಬದಂತೆ ರಾಕ್ಷಸರಾಜನ ಅರಮನೆಯು ಕಾಣಿಸುತ್ತಿದೆ. ಇನ್ನು ಇರುವುದು ಒಂದು ಮಜಲಿನ ಪ್ರಯಾಣ. ಆದುದರಿಂದ ರಣಗಲಿಗಳು ಅಸಮವೀರ ರಾವಣನೊಡನೆ ಯುದ್ಧಕ್ಕೆ ಸಿದ್ಧತೆಮಾಡಿಕೊಳ್ಳಲಿ" ಎಂದು ಕೈಮುಗಿದು ಹೇಳಿದ ವಿಭೀಷಣ. ೨೬. ಆ ಸಮಯದಲ್ಲಿ ಸನಕ ಸನಂದಾದಿ ದೇವಋಷಿಗಳು ಗುಟ್ಟಾಗಿ ಬಂದರು. ರಾಮನಿಗೆ ಸಂಪ್ರದಾಯಾನುಸಾರವಾಗಿ ವಿಜಯಾಭಿಷೇಕವನ್ನು ಮಾಡಿ ಬ್ರಹ್ಮನ ಸಭೆಗೆ ಹೊರಟು ಹೋದರು. ಅನಂತರ ಸೂರ್ಯನು ಪಶ್ಚಿಮಸಮುದ್ರಕ್ಕೆ ಇಳಿದನು. ೨೭. ಭಾರಿ ಸಿಡಿಲಿನ ಶಬ್ದದೊಡನೆ ಹರಿತವಾದ ಬಂಡೆಗಳನ್ನೂ ಕೋಡುಗಲ್ಲುಗಳನ್ನೂ ಹಿಡಿದು ಖಣಿಖಟಿಲೆಂದು ಶಬ್ದಮಾಡುತ್ತ ಪರಾಕ್ರಮದಿಂದ ಸುಗ್ರೀವನ ಸೈನ್ಯವು ಬೀಡು ಬಿಟ್ಟಿತು. ಈ ಸುದ್ದಿಯು ರಾವಣಾಸುರನ ಸಭೆಯಲ್ಲಿ ಹಬ್ಬಿತು. ರಾವಣನು ಇದನ್ನು ನೋಡಿಕೊಂಡು ಬರುವಂತೆ ಸಾರಣನನ್ನು ಕಳುಹಿಸಿದನು. ಅವನು ವಾನರರೂಪಿನಿಂದ ಬಂದನು.

ಅಂದಿನಿರುಳೋಲಗದೊಳವನನು । ಹಿಂದೆ ಸಿಕ್ಕಿದ ಶುಕನನಿಬ್ಬರ
ನಿಂದಿರಿಸಿದರು ಹಿಡಿದು ಬಳಿಯಲಿ ರಾಘವೇಶ್ವರನ
ಇಂದು ಬಂದವನಿವನು ಬೇಹಿಗೆ । ಹಿಂದೆ ಬಂದವನಿವನು ಚಿತ್ತೈ
ಸೆಂದು ಕಪಿಪತಿ ತೋಱಿದನು ರಘುಪತಿಗೆ ಕೈಮುಗಿದು ೨೮

ದೂತರಹುದೇಯೆಂದು ರಿಪುನಿ । ರ್ಘಾತಧೂಳೀಪಟಲ ರಿಪುಸಹ
ಜಾತನನು ಬೆಸಗೊಳಲು ಕೈಮುಗಿದಂಜುತಹುದೆನಲು
ಭೂತಳಾಧಿಪನವರನಾಗ ಕೃ । ಪಾತಿಶಯದಲಿ ನುಡಿಸಿದನು ನೀ
ವೇತಕಿಲ್ಲಿಗೆ ಬಂದಿರೆಂದಭಿಭಾವವಚನದಲಿ ೨೯

ಜೀಯ ನಿಮ್ಮಯ ಬಳಿಗೆ ರಕ್ಕಸ । ರಾಯ ಕಳುಹಿದನೆಮ್ಮ ನಿಮ್ಮಬು
ಜಾಯತಾಕ್ಷಿಯ ಮನವಚನಕಾಯದಲಿ ಕಾಮಿಸದೆ
ಕಾಯುವನು ಕೈಗಾವ ನೀತಿಯ । ದಾಯುವನೆ ಕೈವಿಡಿದು ಕಪಿಕಟ
ಕಾಯ ಸಹಿತವೆ ಹೋಗಹೇಳಿದನೆಂದರರಸಂಗೆ ೩೦

ಹೇಳುವದೆ ನಾವ್ ಸ್ವಾಮಿಸಂಪದ । ದಾಳುತನದಲಿ ನುಡಿವರಲ್ಲ ನೃ
ಪಾಲ ಚಿತ್ತೈಸೀ ಚತುರ್ದಶಭುವನವಾವಂಗೆ
ಆಳುವದು ತೆತ್ತೀಸರಾವಂ । ಗಾಳುತನವಾಗಿಪರು ನೀವಿದ
ರೇಳಿಗೆಯನಱಿದಱಿದು ಬಹರೇ ಬವರಕರಿಭಟನ ೩೧

೨೮. ಅಂದಿನ ರಾತ್ರಿ ನಡೆದ ಸಭೆಯಲ್ಲಿ ಅವನನ್ನೂ ಹಿಂದೆ ಗೂಢಚಾರನಾಗಿ ಬಂದು ಸಿಕ್ಕಿಕೊಂಡಿದ್ದ ಶುಕನನ್ನೂ ಹಿಡಿದುತಂದು ರಾಮನ ಬಳಿಯಲ್ಲಿ ನಿಲ್ಲಿಸಿದರು. "ಈದಿನ ಬಂದವನು ಇವನು. ಗೂಢಚಾರನಾಗಿ ಹಿಂದೆ ಬಂದವನು ಇವನು, ನೋಡು" ಎಂದು ಕಪಿಗಳೊಡೆಯ ಸುಗ್ರೀವನು ರಾಮನಿಗೆ ಕೈಮುಗಿದು ತೋರಿಸಿದನು. ೨೯. ಶತ್ರುಗಳನ್ನು ಸೋಲಿಸಿ ಪುಡಿಪುಡಿಮಾಡುವ ಶ್ರೀರಾಮನು ರಾವಣನ ತಮ್ಮನನ್ನು ಕುರಿತು "ಇವರು ದೂತರೆಂಬುದು ನಿಜವೇ ?" ಎಂದು ಪ್ರಶ್ನಿಸಿದನು. ವಿಭೀಷಣನು ಕೈಮುಗಿದುಕೊಂಡು ಹೆದರುತ್ತ "ಹೌದು" ಎಂದನು. ಆಗ ರಾಮನು ಅವರನ್ನು ಅತಿಶಯ ಕರುಣೆಯಿಂದ "ನೀವೇತಕ್ಕೆ ಇಲ್ಲಿಗೆ ಬಂದಿರಿ ?" ಎಂದು ತಿರಸ್ಕಾರವಾಗಿ ಪ್ರಶ್ನಿಸಿದನು. ೩೦. "ಸ್ವಾಮಿ, ರಾಕ್ಷಸರಾಜನು ನಮ್ಮನ್ನು ನಿಮ್ಮ ಬಳಿಗೆ ಕಳುಹಿಸಿದನು ನಿಮ್ಮ ಕಮಲಲೋಚನೆ ಸೀತೆಯನ್ನು ಮನಸ್ಸು, ಮಾತು ಮತ್ತು ದೇಹಗಳಿಂದ ಬಯಸದೆ ನಿಮ್ಮ ದೇಹವನ್ನು ರಕ್ಷಿಸಿಕೊಳ್ಳುವ ನೀತಿಯ ಏರ್ಪಾಡನ್ನು ಸ್ವೀಕರಿಸಿ ಕಪಿಸೈನ್ಯದೊಡನೆ ಹೊರಟುಹೋಗಬೇಕೆಂದು ನಿಮಗೆ ಹೇಳಿಕಳುಹಿಸಿದನು" ಎಂದು ಅವರು ರಾಮನಿಗೆ ಹೇಳಿದರು. ೩೧. "ನಾವು ಪ್ರಭುವಿನ ಸಂಪತ್ತಿಗೆ ದಾಸರಾಗಿ ನಿನಗೆ ಹೀಗೆ ಹೇಳಬೇಕೆಂದು ಮಾತನಾಡುತ್ತಿಲ್ಲ, ರಾಜನೇ ಗಮನಿಸು. ಹದಿನಾಲ್ಕು ಲೋಕಗಳು ಯಾರ ಆಳ್ವಿಕೆಗೆ ಒಳಪಟ್ಟಿವೆಯೋ, ಮೂವತ್ತುಮೂರುಕೋಟಿ ದೇವತೆಗಳು ಯಾರಿಗೆ ಆಳಾಗಿದ್ದಾರೋ ಅವನ ಹಿರಿಮೆಯನ್ನು ತಿಳಿದೂ ತಿಳಿದೂ ಹಗೆಯೊಡನೆ ಯುದ್ಧಕ್ಕೆ ಬರುತ್ತಾರೆಯೇ ?

ಹಿಂದೆ ವೈರವನೆಸಗಿ ನೊಂದ ಪು । ರಂದರಾದ್ಯರು ಬಂಟಕೆಲಸಕೆ
ಸಂದರೆಂಬುದನಱಿಯೆಬೇಹುದು ಕೇಳಿ ನಿಮ್ಮೆಡೆಗೆ
ಬಂದ ವೀರ ವಿಭೀಷಣಾಸುರ । ನಿಂದ ವಿಕ್ರಮದರಿಭಟರ ತೃಣ
ವೆಂದು ಬಗೆವವನಲ್ಲ ಚಿತ್ತೈಸೆಂದರರಸಂಗೆ ೩೨

ಕೆಣಕಿ ಹೆಂಡಿರ ಬಿಟ್ಟು ಸಮರಾಂ । ಗಣದೊಳಗೆ ಶರಣೆಂದು ಶೂರಾ
ಗ್ರಣಿಗಳಸುವನು ಸಲಹಿಕೊಂಡರು ಸುರನರೋರಗರು
ಮಣಿದು ಬದುಕಿದರಿಂದ್ರ ಯಮ ದಿನ । ಮಣಿ ವಿರಿಂಚಾದಿಗಳು ನಿಮ್ಮದಿ
ಯೆಣಿಕೆ ಲೇಸಾಗಿರದು ಚಿತ್ತೈಸೆಂದರರಸಂಗೆ ೩೩

ಮಲೆತು ನಿಮ್ಮನರಣ್ಯಭೂಪತಿ । ತಲೆಯ ತೆತ್ತುದನಱಿಯಿರೇ ದಿಟ
ಹಳಚಿ ಹದುಳದಿ ಹೋಗಬಲ್ಲಿರೆ ಹಗೆಯ ಹರಿಬದಲಿ
ಬಲವಿದನು ನೀವ್ ನಚ್ಚಿ ರಿಪುವನು । ಗೆಲ ಸಮರ್ಥರೆ ಕ್ಲೂಸಲಿನ ಪರಿ
ಮಳಕೆ ಸಿಕ್ಕಿರ್ದಿಲಿಯ ತೆರನಹುದೆಂದರರಸಂಗೆ ೩೪

ಭ್ರಮೆಯಿದೇಕೆಲೆ ಜೀಯ ನೆರೆದೀ । ದ್ರುಮ ಮೃಗಂಗಳಿಗಳುಕುವರೆ ಹರ
ಕಮಲಭವರನು ಬಗೆಯದತಿಮನದಭಟ ರಕ್ಕಸರು
ಚಮತುಕಾರದ ಚಟುಳ ಜಂಘಾ । ಕ್ರಮವೆ ಕೊಗ್ಗಿಯ ಜೇನಕೊನೆಮರ
ದಮಳಫಲರಾಜಿಗಳೆ ರಕ್ಕಸರೆಂದರರಸಂಗೆ ೩೫

೩೨. ಹಿಂದೆ ಹಗೆತನದಿಂದ ಯುದ್ಧದಲ್ಲಿ ನೊಂದ ದೇವೇಂದ್ರನೇ ಮೊದಲಾದವರು ರಾವಣನಿಗೆ ಸೇವಕರಾದರು ಎಂಬುದನ್ನು ನಿಮ್ಮ ಬಳಿಗೆ ಬಂದಿರುವ ವೀರ ವಿಭೀಷಣಾಸುರನಿಂದ ಕೇಳಿ ತಿಳಿದುಕೊಳ್ಳಿ. ಅವರನ್ನು ವಿರೋಧಿಸಿದ ಶತ್ರುವೀರರನ್ನು ಹುಲ್ಲಿಗೆ ಸಮವಾಗಿಯೂ ಲಕ್ಷಿಸುವುದಿಲ್ಲ, ಆಲಿಸು” ಎಂದು ಶುಕ ಸಾರಣರು ರಾಮನಿಗೆ ಹೇಳಿದರು. ೩೩. “ರಾವಣನನ್ನು ಕೆಣಕಿ ತಮ್ಮ ಹೆಂಡಂದಿರನ್ನು ಬಿಟ್ಟು ರಣಾಂಗಣದಲ್ಲಿ ಶರಣು ಎಂದು ದೇವತೆಗಳು ಮಾನವರು ನಾಗರು ಪ್ರಾಣಗಳನ್ನು ಕಾಪಾಡಿಕೊಂಡರು. ಸೋತು ಶರಣಾಗಿ ಇಂದ್ರ ಯಮ ಸೂರ್ಯ ಬ್ರಹ್ಮನೇ ಮೊದಲಾದವರು ಬದುಕಿಕೊಂಡರು. ನಿಮ್ಮ ಆಲೋಚನೆ ಒಳ್ಳೆಯದಲ್ಲ, ಗಮನಿಸು” ಎಂದರು ರಾಮನಿಗೆ. ೩೪. “ಗರ್ವಿಸಿದ ನಿಮ್ಮ ಅನರಣ್ಯರಾಜನು ತಲೆಯನ್ನೊಪ್ಪಿಸಿದುದನ್ನು ನೀವು ತಿಳಿಯಿರೇ ? ಶತ್ರುವನ್ನು ಯುದ್ಧದಲ್ಲಿ ಎದುರಿಸಿ ಕ್ಷೇಮವಾಗಿ ನೀವು ಹಿಂದಿರುಗಿ ಹೋಗಬಲ್ಲಿರೇ ? ಈ ವಾನರ ಸೈನ್ಯವನ್ನು ನೆಚ್ಚಿಕೊಂಡು ಶತ್ರುವನ್ನು ಗೆಲ್ಲಲು ಸಮರ್ಥರೇ ? ಎಳ್ಳುಕಡಲೆಗಳ ತಿಂಡಿಯ ಸುವಾಸನೆಗೆ ಸಿಕ್ಕಿಹಾಕಿಕೊಂಡ ಇಲಿಯ ಹಾಗಾಗುವಿರಿ” ಎಂದು ಶುಕ ಸಾರಣರು ರಾಮನಿಗೆ ಹೇಳಿದರು. ೩೫. “ಸ್ವಾಮಿ, ನಿಮಗೇಕೆ ಈ ಭ್ರಾಂತಿ ? ಈಶ್ವರ ಬ್ರಹ್ಮರುಗಳನ್ನು ಲೆಕ್ಕಿಸದ ದೃಢನಿಶ್ಚಯದ ವೀರ ರಾಕ್ಷಸರು ಮರಗಳಲ್ಲಿ ಸಂಚರಿಸುವ ಈ ಕಪಿಗಳಿಗೆ ಹೆದರುತ್ತಾರೆಯೆ ? ಚಮತ್ಕಾರದಿಂದ ನೆಗೆಯಬಲ್ಲ ಚಂಚಲರೇ ರಾಕ್ಷಸರು. ಕೊಗ್ಗಿ ಜೇನೆಮರಗಳ ಹಣ್ಣುಗಳೇ ರಾಕ್ಷಸರು, ಉದುರಿಸಲಿಕ್ಕೆ ?” ಎಂದು ನುಡಿದರು

ಗಿರಿಯು ಪಡೆಗಲ್ಲವಕೆ ನಿಜಮಂ । ದಿರವಣಲ್ಗಳೆ ಸಂಬಳವು ಸಿಂ
ಗರಕೆ ನಾಣಿನ ತಾಣದುದಿಗೆಗೆ ಬಾಲ ಬೇಟೆಗರ
ಸರಳ ಕಂಡರೆ ಹಲುಗಿಜಿದು ಗಿರಿ । ಗಿರಿಕುಗುಟ್ಟುವವಿವರ ಬಲದಲಿ
ಧುರವ ಜಯಿಸುವುದರಿದು ದೇವರಿಗೆಂದರಾ ಚರರು ೩೬

ಊರ ಕೊಂಡುಂಬಳಿಯನುಂಡುಪ । ಚಾರಣೆಗೆ ಹೊಕ್ಕಿಜಿವನೊಬ್ಬನೆ
ವೀರ ಶತಸಾವಿರಕೆ ಸಂಧಿಸಿಡಸವು ಸಮರದಲಿ
ಊರಕೊಳದುಂಬಳಿಯನುಣ್ಣದೆ । ಹೋರಿ ಸಾವರೆ ಸಂಗರದಲಿ ವಿ
ಚಾರ ನಿಮಗುಂಟಲ್ಲವೋ ಹೇಳೆಂದರರಸಂಗೆ ೩೭

ಜನಪ ಚಿತ್ತೈಸಿವರದಂತಿರ । ಲನುವರವದಂತಿರಲಿ ರಾವಣ
ನನುಜ ನಿಮಗತಿಹಿತವನೆಂದೇ ಮನಕೆ ತೋಜಿತಲ
ಕೊನೆಯಲಜಿವಿರಿ ಕಪಟದಭಿಗತ । ಘನತರದ ಕಾರ್ಯವನು ನಮಗೇ
ಕಿನಿತು ಕಷ್ಟದ ಮಾತು ಹೋಗಲಿಯೆಂದರಾ ಚರರು ೩೮

ಈತನೀಗಳು ನಿಮ್ಮ ಕೈಯುಲ । ರಾತಿಭಟರನು ಕೊಲಿಸಿ ಕಡೆಯಲಿ
ಕೈತವದಲೊಳಹೊಕ್ಕುಪಾಯವ ನೆನೆದು ನೀವಾಳ್ವ
ಭೂತಳವನೆಮ್ಮಾತನಾಳ್ವ ವು । ಹೀತಳವನೋದಾಗಿ ಸಿಕ್ಕಿದ
ಸೀತೆ ಸಹಿತವೆ ಸೆಳೆವ ಬುದ್ಧಿಗೆ ಮಾಡುವನು ಮನವ ೩೯

ರಾಮನಿಗೆ. ೩೬. "ಬೆಟ್ಟದ ಕಲ್ಲುಪೊಟರೆಗಳು ಇವುಗಳಿಗೆ ಮನೆಗಳು. ದವಡೆಗಳೇ ಬುತ್ತಿ, ಅಲಂಕರಿಸಿಕೊಳ್ಳುವುದಕ್ಕೂ ಗೋಪ್ಯಸ್ಥಳವನ್ನು ಮುಚ್ಚಿಕೊಳ್ಳುವುದಕ್ಕೂ ಇವುಗಳಿಗೆ ಬಾಲವೇ ಗತಿ, ಬೇಟೆಗಾರರ ಬಾಣವನ್ನು ಕಂಡರೆ ಹಲ್ಲುಕಿರಿದು ಗಿರಿಕು ಗುಟ್ಟುವುವು. ಇಂಥವುಗಳ ಸೈನ್ಯದಿಂದ ಯುದ್ಧವನ್ನು ಗೆಲ್ಲುವುದು ಸ್ವಾಮಿಯವರಿಗೆ ಅಸಾಧ್ಯ ?" ಎಂದರು ಆ ಗುಪ್ತಚಾರರು. ೩೭. "ಊರನ್ನು ಜಹಗೀರಿ ಪಡೆದು ಉಂಬಳಿ ಯನ್ನು ಅನುಭವಿಸಿ ಒದಗಿಬಂದ ಅಸಾಧಾರಣ ಯುದ್ಧದಲ್ಲಿ ಸೇವಾಮನೋಭಾವ ದಿಂದ ಹೋಗಿ ಯುದ್ಧಮಾಡುವ ವೀರನು ನೂರು ಸಾವಿರಕ್ಕೆ ಒಬ್ಬ. ಊರನ್ನು ಪಡೆ ಯದೆ ಉಂಬಳಿಯನ್ನು ಅನುಭವಿಸದೆ ಇರುವವರು ಯುದ್ಧದಲ್ಲಿ ಹೋರಾಡಿ ಸಾಯು ವರೆ ? ಈ ವಿಚಾರ ನಿಮಗೆ ತಿಳಿದಿಲ್ಲವೋ ಹೇಳಿ" ಎಂದು ಗುಪ್ತಚಾರರು ರಾಮನಿಗೆ ಹೇಳಿದರು. ೩೮. "ಅರಸ ಆಲಿಸು, ಈ ಕಪಿಸೈನಿಕರು ಹಾಗಿರಲಿ, ಯುದ್ಧವೂ ಹಾಗಿರಲಿ, ರಾವಣನ ತಮ್ಮ ವಿಭೀಷಣನು ನಿಮಗೆ ಬಹಳ ಹಿತವನೆಂದು ಮನಸ್ಸಿಗೆ ಅನ್ನಿಸಿದೆಯಲ್ಲ. ಮಹಾಮೋಸದ ಕೆಲಸವನ್ನು ನೀವು ಕೊನೆಯಲ್ಲಿ ಕಾಣುವಿರಿ. ನಮಗೇಕೆ ಇಷ್ಟೊಂದು ಕಷ್ಟದ ಮಾತು, ಹೋಗಲಿ" ಎಂದರು ಆ ಗುಪ್ತಚಾರರು. ೩೯. "ಈಗ ಈತನು ನಿಮ್ಮ ಕೈಯಿಂದ ಶತ್ರುವೀರರನ್ನು ಕೊಲ್ಲಿಸಿ, ಕೊನೆಯಲ್ಲಿ ಮೋಸದಿಂದ ನಿಮ್ಮೊಳ್ಳಹೊಕ್ಕು ಉಪಾಯವನ್ನು ಯೋಚಿಸಿ ನೀವು ಆಳುವ ರಾಜ್ಯವನ್ನೂ ನಮ್ಮ ರಾವಣನು ಆಳುವ ಭೂಮಿಯನ್ನೂ ಒಟ್ಟಿಗೆ ಸೀತೆಯು ಸಮೇತವಾಗಿ ಸೆಳೆದುಕೊಳ್ಳುವ ಯೋಚನೆ

ಲಲನೆಗೋಸುಗ ರಣದೊಳಣ್ಣನ । ಕೊಲಿಸಿದವನಂಗನೆಯ ಭೋಗಿಸ
ದಲಗಿಗೊಡಲೊಡ್ಡುವನೆ ಹುಸಿಯದು ದೇವ ಚಿತ್ತೈಸು
ಗಲಭೆಯನು ಗಂಟಿಕ್ಕಿ ಹಗೆವನ । ಕೊಳುಗುಳಕೆ ಗುರಿಮಾಡಿ ಮೆಲ್ಲನೆ
ತೊಲಗಲುಳ್ಳವನೀ ಕಪೀಶ್ವರನೆಂದರರಸಂಗೆ ೪೦

ಆತು ಮೆಲ್ಲನೆ ರಾಜಕಾರ್ಯದ । ರೀತಿಯನು ನಿಶ್ಚೈಸಿ ನೆಗಳುವ
ದಾತುರದ ಸಂಗ್ರಾಮ ಸುಖವಾಗಿರದು ನಿಮ್ಮಡಿಗೆ
ಈತಗಳ ನಂಬದಿರಿ ಸೇರುವ । ಸೀತೆ ಹುಸಿ ಕೈಯಿಕ್ಕಿ ಸಿಕ್ಕಿದ
ಕೋತಿಗಳ ಕಥೆಯಹುದು ದೇವರಿಗೆಂದರಾ ಚರರು ೪೧

ಧರಣಿಪತಿ ಕೇಳದರಿನೊಯ್ಯನೆ । ತೆರಳುವುದು ನಿಜಪುರಿಗೆ ನೃಪರನು
ನೆರಹುವುದು ನೆಲೆಗೊಳಿಸುವುದು ನಿಜರಾಜಸೈನಿಕವ
ಅರಸಿ ಬೇಕಾದರೆ ಮಹಾಸಂ । ಗರಕೆ ನಿಲುವುದು ಕಾದಿ ಗೆಲುವುದು
ಪರಮಮಂತ್ರವಿದೆನಲು ಕಪಿರಾಜೇಂದ್ರ ಕೋಪಿಸಿದ ೪೨

ಬಾಯ ಹೊಯ್ ಬಗುಳುವ ನಿಶಾಚರ । ನಾಯಿಗಳನೆಂದನಿಲಜಗೆ ಕಪಿ
ರಾಯ ನೇಮಿಸೆ ಕಂಡು ತಪ್ಪೇನೆಂದು ರಘುನಾಥ
ವಾಯುಜನ ನಿಲಿಸಿದನು ದೂತರ । ನೋಯಿಸುವುದಪಕೀರ್ತಿ ನಮಗಿದ
ರಾಯತಿಕೆಯೇಕೆಂದು ಮಿಗೆ ಮನ್ನಿಸಿದನವರುಗಳ ೪೩

ಮಾಡುವನು. ೪೦. "ಹೆಣ್ಣಿಗಾಗಿ ಯುದ್ಧದಲ್ಲಿ ಅಣ್ಣನನ್ನು ಕೊಲ್ಲಿಸಿದವನು ಹೆಣ್ಣನ್ನು ಕೂಡಿ ಸುಖಿಸದೆ ಖಡ್ಗಕ್ಕೆ ದೇಹವನ್ನು ಒಡ್ಡುವನೆ, ಅದು ಸುಳ್ಳು ಸ್ವಾಮಿ. ಜಗಳವನ್ನು ಗಂಟುಹಾಕಿ ಶತ್ರುವನ್ನು ಯುದ್ಧಕ್ಕೆ ಗುರಿಮಾಡಿ ಮೆಲ್ಲಗೆ ಜಾರಿಕೊಳ್ಳುವನು ಈ ಕಪಿಗಳೊಡೆಯ ಸುಗ್ರೀವ" ಎಂದರು ರಾಮನಿಗೆ. ೪೧. "ಆಶ್ರಯಿಸಿ ಮೆಲ್ಲಗೆ ರಾಜಕಾರ್ಯದ ರೀತಿಯನ್ನು ನಿಶ್ಚಯಿಸಿ ಕಾರ್ಯಕ್ಕೈಗೊಳ್ಳುವ ಆತುರದ ಯುದ್ಧವು ನಿಮಗೆ ಸುಖವುಂಟುಮಾಡದು. ಇವರುಗಳನ್ನು ನಂಬಬೇಡಿ, ಸೀತೆ ದೊರಕುವುದು ಸುಳ್ಳು. ಕೈಹಾಕಿ ಸಿಕ್ಕಿಹಾಕಿಕೊಂಡ ಕೋತಿಗಳ ಕಥೆಯಾಗುತ್ತದೆ ತಮಗೆ" ಎಂದರು, ಆ ಗುಪ್ತಚಾರರು. ೪೨. "ಆದುದರಿಂದ ರಾಜಾರಾಮನೇ ಕೇಳು, ತಕ್ಷಣ ನಿನ್ನ ರಾಜಧಾನಿಗೆ ಹೋಗಿ ರಾಜರನ್ನು ಸೇರಿಸು. ನಿನ್ನ ರಾಜ್ಯದ ಸೈನ್ಯವನ್ನು ಸಿದ್ಧಪಡಿಸಿಕೋ. ನಿನ್ನ ರಾಣಿ ನಿನಗೆ ಬೇಕಾದರೆ ಮಹಾಯುದ್ಧಕ್ಕೆ ನಿಲ್ಲು. ಯುದ್ಧದಲ್ಲಿ ಕಾದಿ ಗೆಲುವನ್ನು ಸಂಪಾದಿಸು. ಇದು ಶ್ರೇಷ್ಠವಾದ ಉಪಾಯ" ಎಂದು ಗುಪ್ತಚಾರರು ಹೇಳಲು ವಾನರರಾಜ ಸುಗ್ರೀವನು ಕೋಪಿಸಿಕೊಂಡನು. ೪೩. "ಬೊಗಳುವ ರಾಕ್ಷಸನಾಯಿಗಳ ಬಾಯಿಯ ಮೇಲೆ ಹೊಡೆ" ಎಂದು ಸುಗ್ರೀವನು ಹನುಮಂತನಿಗೆ ಅಪ್ಪಣೆಮಾಡಿದನು. ಅದನ್ನು ನೋಡಿ "ಇದರಲ್ಲಿ ತಪ್ಪೇನು" ಎಂದು ರಘುನಾಥನು ಹನುಮಂತನನ್ನು ತಡೆದನು. "ದೂತರನ್ನು ನೋಯಿಸುವುದು ನಮಗೆ ಕೆಟ್ಟ ಹೆಸರನ್ನು ತರುವುದು.

ಚರರು ತಮ್ಮತಮ್ಮರಸುಗಳ ಭುಜ । ಸಿರಿಯನಾಹವದುಬ್ಬುಗೊಬ್ಬಿನ
ಹರುಹನೂರ್ಜಿತ ಸುಪ್ರತಾಪವನಧಿಕ ವೈಭವವ
ಪರಮಕೀರ್ತಿಯ ವೈರಿರಾಯರ । ಲೊರೆವುದೇ ಭೂಷಣವಲಾ ನೀ
ಕರಿಸಿ ನುಡಿವುದು ನಮಗೆ ಗುಣವಲ್ಲೆಂದನಿನಜಂಗೆ ೪೪

ಶರಧಿ ಕಾಣಿಕೆಗೊಟ್ಟ ರತ್ನಾ । ಭರಣಗಳನವರ್ಗಿತ್ತು ನುಡಿದನು
ಧುರಕೆ ನೀವ್ ನಿಂದಿರಿಸಿಕೊಂಡಿರಿ ನಿಮ್ಮ ನಿಜಪತಿಯ
ಚರರು ನೀವೆಮಗೀಗ ನಮ್ಮಯ । ಬರವ ನಿಮ್ಮವಗಱುಹಿಸುವುದೆಂ
ದರಿದಿಶಾಪಟಮಲ್ಲನುಚಿತದಲವರ ಬೀಳ್ಕೊಟ್ಟ ೪೫

ನೋಡಲಿವರಿಗೆ ತೋಱಿ ನಮ್ಮಯ । ಬೀಡಿನತಿಬಲ ಭಟರನೆಲ್ಲರ
ನೋಡಲಂಜದೆ ಕಳುಹು ಬಳಿಕೆಂದನಿಲಸಂಭವಗೆ
ಖೋಡಿ ಹೊಗದಪಜಯವು ಜನುಗದ । ಖೇಡತನ ಬಾರಿಸದ ನೃಪವರ
ನಾಡಿ ತೋಱಿಸಿ ಕಳುಹೆ ಕಂಡರು ಬಂದು ರಾವಣನ ೪೬

ಅಸುರಪತಿ ಶುಕ ಸಾರಣರ ನೀ । ರಸದ ಮುಖಚೇಷ್ಟೆಗಳನಾ ಭಯ
ರಸದ ಬಳಿಯಿಂಗಿತವ ಮನದನುಮಾನ ಮಾರ್ಗದಲಿ
ಸಸಿನವಿರದೀ ರಾಜಕಾರ್ಯದ । ವಿಷಯವೆಂದಱಿದವರ ಮಾತಾ
ಡಿಸದೆ ಕೈಸನ್ನೆಯಲಿ ಕಳುಹಿದನಖಿಳ ಪರಿಜನವ ೪೭

ನಮಗೆ ಈ ಧಾಷ್ಟ್ಯವೇಕೆ ?" ಎಂದು ಆ ಗುಪ್ತಚಾರರನ್ನು ಕ್ಷಮಿಸಿದನು. ೪೪. "ಸೇವಕರು ತಮ್ಮ ತಮ್ಮ ಪ್ರಭುಗಳ ತೋಳ್ಬಲವನ್ನೂ, ಯುದ್ಧದ ಅತಿಶಯ ಗರ್ವವನ್ನೂ, ಮಹಾಪರಾಕ್ರಮವನ್ನೂ, ಅಧಿಕ ವೈಭವವನ್ನೂ, ಅನುಪಮ ಯಶಸ್ಸನ್ನೂ ಶತ್ರು ರಾಜರಲ್ಲಿ ಹೊಗಳುವುದೇ ಭೂಷಣ. ಅವರನ್ನು ಧಿಕ್ಕರಿಸುವುದು ನಮಗೆ ಯೋಗ್ಯವಲ್ಲ" ಎಂದು ರಾಮನು ಸುಗ್ರೀವನಿಗೆ ಹೇಳಿದನು. ೪೫. ಸಮುದ್ರನು ಕಾಣಿಕೆಯಾಗಿ ತಂದು ಕೊಟ್ಟಿದ್ದ ರತ್ನಾಭರಣಗಳನ್ನು ರಾವಣನ ಗುಪ್ತಚಾರರಿಗೆ ಕೊಟ್ಟು, "ಯುದ್ಧಕ್ಕೆ ನಿಮ್ಮ ಒಡೆಯನನ್ನು ಸಿದ್ಧಪಡಿಸಿಕೊಂಡಿರಿ, ಈಗ ನೀವು ನಮ್ಮ ಪರವಾದ ದೂತರಾಗಿ ನಾವು ಬಂದಿರುವ ವಿಚಾರವನ್ನು ನಿಮ್ಮ ರಾಜನಿಗೆ ತಿಳಿಸಿ" ಎಂದು ಅವರಿಗೆ ಹೇಳಿ ಶತ್ರುಗಳನ್ನು ದಿಕ್ಪಾಪಾಲಾಗಿ ಚದುರಿಸುವ ವೀರ ರಾಮನು ಅವರನ್ನು ಯೋಗ್ಯರೀತಿಯಲ್ಲಿ ಕಳುಹಿಸಿ ಕೊಟ್ಟನು. ೪೬. "ಇವರು ನಮ್ಮ ಪಾಳೆಯದ ಬಲಶಾಲಿ ವೀರರನ್ನು ನೋಡಲಿ. ಎಲ್ಲರನ್ನೂ ಭಯಗೊಳ್ಳದೆ ನೋಡಲಿ" ಎಂದು ನಿರ್ದೋಷನಾದ, ಸೋಲಿನ ಕಷ್ಟವಿಲ್ಲದ, ನಿರ್ಭೀತನಾದ ರಾಜಾರಾಮನು ಆಂಜನೇಯನಿಗೆ ಹೇಳಿದನು. ಪಾಳೆಯವನ್ನು ತೋರಿಸಿ ಕಳುಹಿಸಲು ಶುಕ ಸಾರಣರು ಬಂದು ರಾವಣನನ್ನು ಕಂಡರು. ೪೭. ರಾಕ್ಷಸ ರಾಜನು ಶುಕ ಸಾರಣರ ಬಣ್ಣಗೆಟ್ಟ ಮುಖವರ್ತನೆಯನ್ನೂ ಭಯದ ಸೂಚನೆಯನ್ನೂ ಮನಸ್ಸಿನಲ್ಲಿ ಊಹಿಸಿ ತಿಳಿದು 'ಇವರು ಹೋಗಿದ್ದ ರಾಜಕಾರ್ಯದ ವಿಷಯವು ನೆಟ್ಟಗಿದ್ದಂತೆ ಕಾಣುವುದಿಲ್ಲ' ಎಂದು ತಿಳಿದುಕೊಂಡನು. ಅವರನ್ನು ಮಾತನಾಡಿಸದೆ ಕೈಸನ್ನೆ

ಹರೆದುದೋಲಗವಾಕ್ಷಣದೊಳಾ । ಚರರನೊಳಮಂದಿರಕೆ ರಾವಣ
ಕರೆಸಿಕೊಂಡರಿಭಟರ ಗಮನಸ್ಥಿತಿಯ ಬೆಸಗೊಳಲು
ಹರಹಿದರು ಬಳಿಕವದಿರದ್ಭುತ । ಭರಿತ ಭಯಭಾರಣೆಯ ಜಯಸಂ
ಗರದ ಹಸರವನಿದಿರಿನಲಿ ಲಂಕಾಪುರಾಧಿಪನ ೪೮

ನೆರೆದು ಬಂದಿದೆ ಜೀಯ ಜವನು । ಬ್ಬರದ ಲಯಭೈರವನ ಕಲ್ಪದ
ಹರನ ಕಲ್ಪಾಂತದ ಕಠೋರದ ಘನಕೃಶಾನುವಿನ
ಹರಹಿನಗ್ಗದ ಸೇನೆ ಮಂದರ । ಸುರಶಿಲೋಚ್ಚಯ ತಾರಕಾದ್ರಿಯ
ಸರಿಸದೆಪ್ಪತ್ತೇಳು ಕೋಟಿ ಕಪೀಂದ್ರರೊಗ್ಗಿನಲಿ ೪೯

ಆ ವನೌಕಸಬಲಕೆ ಕಾಲ । ಗ್ರೀವಗೆಣೆಯೆನಿಪತುಳಬಲ ಸು
ಗ್ರೀವನೆಂಬ ಕಪೀಂದ್ರಪತಿಯಾ ಕಪಿಕುಲೇಂದ್ರಂಗೆ
ದೇವ ರಾಘವನೊಡೆಯನಾತನ । ವೈವಳಿಯಲದೆ ಜೀಯ ಬಾಳೆನು
ತಾ ವಿರಿಂಚಿಪ್ರಮುಖ ದಿವಿಜಗಣಂಗಳಿದಿರಿನಲಿ ೫೦

ಸುಳಿಯಲಂಜುವರಾ ನೃಪಾಲನ । ಬಲದೊಳಗೆ ಜವ ಮೃತ್ಯುಗಿತ್ಯುಗ
ಳುಲುಕಲಂಜವರಭವ ಕಮಲಭವಾಮರೇಶ್ವರರು
ಬೆಳಗಲಂಜುವನಬುಜಸಖನುಱೆ । ತೊಳಲಲಂಜುವನನಿಲನೇನ
ಗ್ಗಳನೊ ರಾಯರೊಳಮಮ ರಾಘವರಾಯನವನಿಯಲಿ ೫೧

ಯಿಂದ ಅಲ್ಲಿದ್ದ ಪರಿವಾರದವರನ್ನು ಆಚೆಗೆ ಕಳುಹಿಸಿದನು. ೪೮. ಆಕ್ಷಣದಲ್ಲಿ ಸಭೆಯು ಚದುರಿತು. ಆ ಚಾರರನ್ನು ರಾವಣನು ಒಳಕೋಣೆಗೆ ಕರೆಸಿಕೊಂಡು ಶತ್ರುಸೈನ್ಯದ ಆಗಮನದ ಸ್ಥಿತಿಯನ್ನು ಪ್ರಶ್ನಿಸಿದನು. ಅನಂತರ ಶುಕ ಸಾರಣರು ಅದ್ಭುತ ಭಯಂಕರವಾದ ವಿಜಯಸೇನೆಯ ವಿಸ್ತಾರವನ್ನು ಲಂಕಾನಗರದೊಡೆಯನೆದುರಿಗೆ ವಿವರಿಸಿದರು. ೪೯. ದರ್ಪಿಷ್ಠಯಮ, ಪ್ರಳಯಕಾಲದ ಭೈರವ, ಯುಗಪ್ರಳಯದ ಶಿವ ಮತ್ತು ಯುಗಾಂತ್ಯದ ಭಯಂಕರ ಅಗ್ನಿ ಇವರುಗಳಂತೆ ವಿಸ್ತಾರವಾದ ಮಹಾಸೈನ್ಯವು ಮಂದರ ಪರ್ವತ ಮತ್ತು ತಾರಕಾದ್ರಿಗಳಿಗೆ ಸಮಾನರಾದ ಎಪ್ಪತ್ತೇಳು ಕೋಟಿ ಕಪೀಂದ್ರರುಗಳೊಡನೆ ಒಟ್ಟಾಗಿ ಬಂದಿದೆ. ೫೦. ನೀಲಕಂಠನಿಗೆ ಸಮಾನನಾದ ಮಹಾಬಲಶಾಲಿ ಸುಗ್ರೀವನೆಂಬುವನು ಆ ಕಪಿಸೈನ್ಯಕ್ಕೆ ರಾಜನಾಗಿದ್ದಾನೆ. ಆ ಕಪಿಕುಲದೊಡೆಯನಿಗೆ ರಾಘವದೇವನು ಪ್ರಭು. ಆತನ ಎದುರಿನಲ್ಲಿ 'ಜೀಯ, ಬಾಳು!' ಎಂದು ಹೊಗಳುತ್ತಿರುವ ಬ್ರಹ್ಮಾದಿ ಪ್ರಮುಖ ದೇವತೆಗಳು ಅವನ ಅಧೀನದಲ್ಲಿದ್ದಾರೆ. ೫೧. ಆ ರಾಜನ ಸೈನ್ಯದಲ್ಲಿ ಯಮ ಮೃತ್ಯುಗಿತ್ಯುಗಳು ಸುಳಿಯಲು ಅಂಜುವರು; ಬ್ರಹ್ಮ ಶಿವ ದೇವೇಂದ್ರರು ಮಿಸುಕಾಡಲು ಹೆದರುವರು; ಸೂರ್ಯನು ಆ ಸೈನ್ಯದ ಮೇಲೆ ಬಿಸಿಲು ಬೀರಲು ಹೆದರುವನು; ವಾಯುವು ಬೀಸಲು ಹೆದರುವನು, ಅಬ್ಬಬ್ಬ, ಜಗತ್ತಿನ

ಪೊಗಬಹುದು ಲಯಪಾವಕನ ನಾ । ಲಗೆಗಳಿರುಬಿನ ನಡುವೆ ನಡುಗದೆ
ಹೊಗಬಹುದು ಹೊಗೆದೋಳ್ವ ಹಾಲಾಹಲದ ನಡುಗಡಲ
ಹೊಗಬಹುದು ಮೃತ್ಯುವಿನ ಬಲುತಾ । ಳಿಗೆಯೊಳಗೆ ಹೊಗಬಾರದಾ ಸಂ
ಯುಗಭಯಂಕರ ರಾಘವೇಂದ್ರನ ರಾಜಸೈನಿಕವ ೫೨

ಎಲೆ ನಿಶಾಚರರಾಯ ಕೇಳ । ಗ್ಗಳನು ನಿನಗಿಂದಾ ನರಾಧಿಪ
ನಲಘುಬಲ ನೀನೆಂದು ಬಗೆದಿಹೆ ನಿನ್ನ ಚಿತ್ತದಲಿ
ತಿಳಿವಡರಿದಾದುದು ನಿಯುದ್ಧಕೆ । ನಿಲುಕುವುದು ಬೆಱಗಲ್ಲವೇ ಜಯ
ದುಳುಹ ನಿನ್ನಲಿ ಕಾಣೆನೆಂದನು ಸಾರಣನು ನಗುತ ೫೩

ಸಾಕು ಗಳಹದಿರತ್ತ ಸಾರ್ನೀ । ನೇಕೆ ತಡೆದೆಯೊ ಶುಕಯೆನಲು ಲೋ
ಕೈಕಬಲ ಚಿತ್ತೈಸು ತನ್ನಯ ವಿಧಿಯನಿಲ್ಲಿಂದ
ಈ ಕಡಲನುತ್ತರಿಸಿ ವೀರ ವ । ನೌಕಸರ ಕಟಕವನು ಹೊಕ್ಕೆನು
ಕೈಕಸೆಯ ಮಗನಿಂದ ಬಂಧನವಾಯ್ತು ತನಗೆಂದ ೫೪

ಕಟ್ಟಿದನು ನಿನ್ನವಗೆ ಲಂಕೆಯ । ಪಟ್ಟವನು ಪತಿಕರಿಸಿ ರಘುಪತಿ
ತೊಟ್ಟ ಬಾಣಕೆ ಬಂದ ಶರಧಿಯ ಹೂಳಿ ಶೈಲದಲಿ
ಕಟ್ಟಿದರು ಸೇತುವನು ಕಪಿಗಳು । ಬಿಟ್ಟರೀಚೆಯ ತಡಿಯಲಮರರು
ಕಟ್ಟಿದರು ಬಳಿಕರಮನೆಗಳನು ಪಯಣ ಪಯಣದಲಿ ೫೫

ರಾಜರಲ್ಲಿ ರಾಘವರಾಯನು ಏನು ಶ್ರೇಷ್ಠನೋ ! ೫೨. ಪ್ರಳಯಾಗ್ನಿಯ ಉರಿನಾಲಗೆಗಳ ನಡುವೆ ಹೋಗಬಹುದು ; ಹೊಗೆಯಾಡುವ ವಿಷದ ಕಡಲಿನ ನಡುವೆ ನಡುಗದೆ ಮುಳುಗಬಹುದು ; ಮೃತ್ಯುವಿನ ಗಂಟಲಿನೊಳಕ್ಕೆ ಪ್ರವೇಶಿಸಬಹುದು. ಆದರೆ ರಣಭಯಂಕರ ರಾಘವೇಂದ್ರನ ರಾಜಸೈನ್ಯವನ್ನು ಪ್ರವೇಶಿಸುವುದಾಗದು. ೫೩. ಅಯ್ಯಾ ರಾಕ್ಷಸರಾಜ, ಕೇಳು. ಆ ಮಾನವರರಸನು ನಿನಗಿಂತ ಶ್ರೇಷ್ಠನು. ನೀನು ಮಹಾಬಲಶಾಲಿಯೆಂದು ನಿನ್ನ ಮನಸ್ಸಿನಲ್ಲಿ ನಂಬಿದ್ದೀಯೆ. ತಿಳಿದುನೋಡಿದರೆ ದ್ವಂದ್ವಯುದ್ಧಕ್ಕೆ ನೀನು ಎಟುಕಲಾರೆ ; ಇದು ಆಶ್ಚರ್ಯವೇ ಸರಿ. ಜಯಶಾಲಿಯಾಗುವುದು ನಿನ್ನಲ್ಲಿ ಕಂಡುಬರುತ್ತಿಲ್ಲ" ಎಂದು ಸಾರಣನು ನಗುತ್ತ ನುಡಿದನು. ೫೪. "ಸಾಕು, ಹರಟಬೇಡ, ತೊಲಗು" ಎಂದು ಸಾರಣನನ್ನು ಗದರಿಸಿ ಕಳುಹಿಸಿ "ನೀನೇಕೆ ಇಷ್ಟು ದಿನ ಮಾಡಿದೆ ಶುಕ ?" ಎಂದು ರಾವಣನು ಪ್ರಶ್ನಿಸಿದನು. ಆಗ ಶುಕನು "ಜಗದೇಕವೀರನೇ, ನನ್ನ ವಿಧಿಯನ್ನು ಆಲಿಸು. ಇಲ್ಲಿಂದ ಹೊರಟು ಸಮುದ್ರವನ್ನು ದಾಟಿ ಕಪಿವೀರರ ಸೈನ್ಯವನ್ನು ಪ್ರವೇಶಿಸಿದೆ. ಕೈಕಸೆಯ ಮಗ ವಿಭೀಷಣನಿಂದ ಬಂಧನಕ್ಕೊಳಗಾದೆ" ಎಂದನು. ೫೫. "ರಾಮನು ನಿನ್ನ ತಮ್ಮನನ್ನು ಅನುಗ್ರಹಿಸಿ ಅವನಿಗೆ ಲಂಕೆಯ ಪಟ್ಟವನ್ನು ಕಟ್ಟಿದನು. ರಘುಪತಿಯು ಹೂಡಿದ ಬಾಣಕ್ಕೆ ಹೆದರಿ ಬಂದ ಸಮುದ್ರವನ್ನು ಬಂಡೆಗಳಿಂದ ಮುಚ್ಚಿ ಕಪಿಗಳು ಸೇತುವೆಯನ್ನು ಕಟ್ಟಿದರು. ಸೇತುವೆಯನ್ನು ದಾಟಿ ಈಚೆ ದಡದಲ್ಲಿ ಬೀಡು ಬಿಟ್ಟರು. ಒಂದೊಂದು ಪ್ರಯಾಣದ ತುಂಗುದಾಣದಲ್ಲೂ

ಕಲಿಲಲಾಟ ಲಲಾಮ ಕೇಳಾ । ಬಲದ ಮೇಲಾರೈಕೆ ಶೂಲಿಯ
ಕೆಲಸವಾ ಬಲದಂಗರಕ್ಷಣೆ ಕಮಲಗರ್ಭನದು
ನಿಲುಕಡೆಯ ಪಾಳೆಯದ ಶೋಧನೆ । ಬಲಿದಿಹುದು ನಿನ್ನವಗೆ ಚಕ್ರಿಯ
ಕಲೆ ನೆಲಸಿಕೊಂಡಿದೆ ನೃಪಾಲಂಗರಸ ಕೇಳೆಂದ ೫೬

ಹೂಳಿತಂಬುಧಿ ಕಪಿಬಲದ ಕಾ । ಲ್ಧೂಳಿಯಲಿ ನೀನಾಳ್ದ ರಾಜ್ಯವ
ಕೇಳಿಕೋಯೇನಾದುದೆಂಬುದನಿಂದು ನಾಳಿನಲಿ
ಧೂಳಿಗೋಟೆಯ ಕೊಂಡು ಲಂಕೆಯ । ಹಾಳುಮಾಡಿ ನರೇಂದ್ರ ತನ್ನಯ
ಬಾಲಕಿಯ ಕೊಂಡೊಯ್ಯದಿರನಿದ ನೋಡಿಕೋಯೆಂದ ೫೭

ನೀನು ಬಲ್ಲಡೆ ಮುಂಚಿತಾಗಿ ಮ । ಹಾನರೇಂದ್ರನ ಮಾನ್ಯಮಾರ್ಗದ
ಮಾನಿನಿಯ ಕೊಂಡೊಯ್ದುಕೊಡು ರಕ್ಷಿಸುವನಿದು ಸಿದ್ಧ
ಹಾನಿ ಹೊಗದಿನಿತರಲಿ ನಿನ್ನ ನಿ । ಜಾನುಜನ ಕರೆತಂದು ರಾಜ್ಯವ
ನೀನು ಸುಖದಿಂದಾಳುವುದು ಕರ ಲೇಸು ಲೇಸೆಂದ ೫೮

ಎಲವೊ ಶುಕ ಕೇಳಿನ್ನುದಯವಿಡಿ । ದಿಲಿತನಕ ಸಮಬಲರ ಕಾಣದೆ
ಕಲಹ ನೆಜೆ ಭಂಡಾರಿಸಿರ್ದುದು ಲೇಸ ಸೂಚಿಸಿದೆ
ಲಲನೆಯನು ಮರಳಿತ್ತು ಜೀವವ । ಸಲಹಿಕೊಂಬೀ ಹೇಸಿಕೆಯ ಕ
ಕ್ಕುಲಿತೆಯವನೇ ಕಾಳುಗೆಡೆಯದೆ ಕೆಲಕೆ ಸಾರೆಂದ ೫೯

ಅವರಿಗೆ ದೇವತೆಗಳು ಅರಮನೆಗಳನ್ನು ಕಟ್ಟಿಕೊಟ್ಟರು. ೫೬. ವೀರರ ಹಣೆಯ ತಿಲಕನೇ ಕೇಳು. ಆ ಕಪಿಸೈನ್ಯದ ಪೋಷಣೆಯ ಕೆಲಸ ಈಶ್ವರನದು. ಆ ಸೈನ್ಯದ ಅಂಗರಕ್ಷಣೆ ಬ್ರಹ್ಮನ ಹೊಣೆ. ಸೈನ್ಯವು ಬೀಡುಬಿಟ್ಟೆಡೆಗಳಲ್ಲಿ ಪಾಳೆಯದ ಶೋಧನೆಯ ಜವಾಬ್ದಾರಿ ನಿನ್ನ ತಮ್ಮನದು. ಆ ಮಾನವರರಸನಲ್ಲಿ ಚಕ್ರವರ್ತಿಯ ಲಕ್ಷಣಗಳಿವೆ" ಎಂದು ಶುಕನು ಹೇಳಿದನು. ೫೭. "ಕಪಿಸೈನ್ಯದ ಕಾಲಿನಿಂದೆದ್ದ ಧೂಳಿನಲ್ಲಿ ಸಮುದ್ರವು ಮುಚ್ಚಿಹೋಯಿತು, ಇವತ್ತು ನಾಳೆಯಲ್ಲಿ ಏನಾಯಿತೆಂಬುದನ್ನು ನಿನ್ನ ರಾಜ್ಯದ ಜನರನ್ನು ಕೇಳಿಕೋ, ನಿನಗೆ ತಿಳಿಯುವುದು. ನಿನ್ನ ಕೋಟೆಯನ್ನು ಪುಡಿ ಪುಡಿ ಮಾಡಿ ಲಂಕೆಯನ್ನು ಹಾಳುಮಾಡಿ ರಾಮನು ತನ್ನ ಪತ್ನಿಯನ್ನು ಕರೆದು ಹೋಗದೆ ಇರುವುದಿಲ್ಲ, ನೋಡಿಕೊ" ಎಂದ ಶುಕ. ೫೮. "ನೀನು ಒಪ್ಪುವುದಾದರೆ ಮುಂಚಿತವಾಗಿ ಆ ಮಹಾರಾಜನ ಪತ್ನಿಯನ್ನು ಗೌರವದಿಂದ ಕರೆದುಕೊಂಡುಹೋಗಿ ಒಪ್ಪಿಸು. ಅವನು ನಿನ್ನನ್ನು ರಕ್ಷಿಸುವನು, ಇದು ಖಂಡಿತ. ಇದರಿಂದ ನಿನಗೆ ಹಾನಿಯಾಗುವುದು ತಪ್ಪುವುದು. ನಿನ್ನ ತಮ್ಮನನ್ನು ಕರೆದುಕೊಂಡುಬಂದು ನೀನು ರಾಜ್ಯವನ್ನು ಸುಖದಿಂದಾಳುವುದು ತುಂಬ ಒಳ್ಳೆಯದು" ಎಂದನು ಶುಕ. ೫೯. "ಲೋ ಶುಕ, ಕೇಳು. ನಾನು ಹುಟ್ಟಿದಂದಿನಿಂದ ಇಲ್ಲಿಯತನಕ ನನ್ನ ಸಮಾನ ಬಲಶಾಲಿಗಳನ್ನು ಕಾಣದೆ ಇದುವರೆಗೆ ಯುದ್ಧವನ್ನು ಮುಚ್ಚಿಟ್ಟಂತಾಗಿತ್ತು. ಒಳ್ಳೆಯದನ್ನೇ ನನಗೆ ಸೂಚಿಸಿದ್ದೀಯೆ. ಸೀತೆಯನ್ನು ಹಿಂದಿರುಗಿಸಿ ಈ ಜೀವವನ್ನು ರಕ್ಷಿಸಿಕೊಳ್ಳುವ

ವೀರರರಸುವರೇನನಗ್ಗದ । ವೀರರತ್ನವನೈಸಲೇ ಸಿಂ
ಗಾರವಿದು ಶೂರರಿಗೆ ಸಮರಸಭಾರಕೇಳಿಯಲಿ
ಭಾರಿಭುಜ ಕಂಡುವಿನ ತಿಮಿರವಿ । ಕಾರವನು ಪರಿಹರಿಸಿಕೊಂಬೆ ವಿ
ಚಾರಿಸಲದೇಕೀಗ ನಿನ್ನನೆ ಮೆಚ್ಚಿಸುವೆನೆಂದ ೬೦

ಎಂದು ಶುಕ ಸಾರಣರನವದಿಱ । ಮಂದಿರಕೆ ಕಳುಹಿದನು ಕರೆಸಿದ
ನಂದಿನಿರುಳಿನಲಾ ಪ್ರಹಸ್ತನ ವಿನಯವಿಸ್ತರನ
ಬಂದ ಗಡ ವನಿತೆಯನು ಬಿಡಿಸುವೆ । ನೆಂದು ರಣಕಿನವಂಶನಿದಕೇ
ನೆಂದು ತೋಱಿದುದೆಣಿಕೆ ಮನಸಿನಲೆಂದನಸುರೇಂದ್ರ ೬೧

ಎಣಿಕೆ ತಪ್ಪಿತು ಜೀಯ ಮಾವನ । ಗುಣವಚನವನು ದಾಂಟಿ ಧಾರ್ಮಿಕ
ಗುಣನಿಧಿಯ ಮಾನಿನಿಯ ಮಱಿಯಿಸಿ ತಂದ ಕಾಲದಲಿ
ಮಣಿದರೀಚೆಯಲಾಪ್ತಸಚಿವಾ । ಗ್ರಣಗಳುಚಿತೋಕ್ತಿಗಳು ಹನುಮನ
ಮಣಿಹದಲಿ ಕೈಮಱೆವುದಿತ್ತಲು ಖೂಳತನವೆಂದ ೬೨

ಜಡಿದು ಮುಂದೆ ವಿಭೀಷಣಾಸುರ । ನುಡಿದ ಪರಮಹಿತೋಕ್ತಿಯನು ನೀ
ನೆಡಹಿಕಳೆದೆ ವಿಚಾರವಿನ್ನೇಕರಸ ರಿಪುಭಯದ
ಖಡುಗಮುಖದಲಿ ನಿಲುವುದೇ ವು । ಗ್ಗಡದ ಮತವೀ ಹೊತ್ತಿಗೆನೆ ಕೈ
ಹೊಡೆದು ಬಳಿಕೀ ಮಾತನೆಂದನು ಕಲಿ ಪ್ರಹಸ್ತಂಗೆ ೬೩

ಹೇಸಿಕೆಯ ಹಂಬಲದವನೇ ನಾನು. ಹರಟದೆ ಅತ್ತ ಹೋಗು" ಎಂದ ರಾವಣ. ೬೦. "ವೀರರು ಏನನ್ನು ಹುಡುಕುತ್ತಾರೆ ? ಶ್ರೇಷ್ಠವೀರರತ್ನವನ್ನು ತಾನೇ. ಯುದ್ಧ ದಾಟದಲ್ಲಿ ಶೂರರಿಗೆ ವೀರರತ್ನವೇ ಅಲಂಕಾರ. ನನ್ನ ಈ ಭಾರಿ ತೋಳತೀಟೆಯೆಂಬ ಕತ್ತಲೆಯ ಚಿಂತೆಯನ್ನು ಹೋಗಲಾಡಿಸಿಕೊಳ್ಳುತ್ತೇನೆ. ಆ ವಿಚಾರವೇಕೆ ಈಗ. ನಿನ್ನ ಮಾತಿನಂತೆಯೆ ನಿನ್ನನ್ನು ಮೆಚ್ಚಿಸುವೆನು" ಎಂದ ರಾವಣ. ೬೧. ಹೀಗೆ ನುಡಿದು ರಾವಣನು ಶುಕ ಸಾರಣರನ್ನು ಅವರ ಮನೆಗಳಿಗೆ ಕಳುಹಿಸಿದನು. ಅಂದು ರಾತ್ರಿ ವಿನಯಶಾಲಿ ಪ್ರಹಸ್ತನನ್ನು ಕರೆಸಿ, "ಸೂರ್ಯಕುಲದವನು ಸೀತೆಯನ್ನು ಬಿಡಿಸಿ ಕೊಳ್ಳುವೆನೆಂದು ಬಂದಿದ್ದಾನೆ. ಇದಕ್ಕೆ ಏನು ಮಾಡಬೇಕೆಂಬುದು ನಿನ್ನ ಮನಸ್ಸಿನ ಯೋಚನೆ ?" ಎಂದು ರಾಕ್ಷಸರಾಜನು ಕೇಳಿದನು. ೬೨. "ಮಾವ ಮಾರೀಚನ ಒಳ್ಳೆಯ ಮಾತನ್ನು ಮೀರಿ ಧಾರ್ಮಿಕಗುಣನಿಧಿಯಾದ ರಾಮನ ಹೆಂಡತಿಯನ್ನು ಮೋಸದಿಂದ ತಂದಾಗ ನಮ್ಮ ಊಹೆ ತಪ್ಪಾಯಿತು. ಇತ್ತ ನಮ್ಮ ಆಪ್ತಸಚಿವೋ ತ್ತಮರು ಅವರಿಗೆ ಶರಣಾದರು. ಹನುಮಂತನು ಕಾರ್ಯಭಾರದಲ್ಲಿ ದೂತನಾಗಿ ಬಂದಾಗ ಆಡಿದ ಯೋಗ್ಯವಚನವನ್ನು ತಿರಸ್ಕರಿಸಿ ಬಿಗಿನೀತಿಯನ್ನನುಸರಿಸಿದುದಂ ದುಷ್ಟತನವಾಯಿತು" ಎಂದ ಪ್ರಹಸ್ತ. ೬೩. "ಗದರಿಸಿ ನಿಮ್ಮ ಮುಂದೆ ವಿಭೀಷಣನು ನುಡಿದ ಅತಿಹಿತವಾದ ಮಾತುಗಳನ್ನು ಮೀರಿ ಮುಗ್ಗರಿಸಿದಿರಿ. ಇನ್ನು ಶತ್ರುವಿನ ಭಯದ ಬಗ್ಗೆ ಆಲೋಚನೆಯೇಕೆ ? ಕತ್ತಿ ಹಿಡಿದು ಶತ್ರುವನ್ನು ಎದುರಿಸುವುದೇ

ಬಲಿಸು ದುರ್ಗವನಸ್ತ್ರಶಸ್ತ್ರಾ । ವಳಿಗಳನು ಮೇಳೈಸು ನೆರಹ
ಗ್ಗಳದ ರಕ್ಕಸನಾಯಕರನಿಭಹಯ ರಥಾವಳಿಯ
ನಿಲಿಸು ರಣಮುಖಕಿನ್ನದೇಕಳಿ । ಜುಳುಕು ಹೋಗೆಂದಾ ಪ್ರಹಸ್ತನ
ಕಳುಹಿ ಕಳಿದನು ರಾತ್ರಿಯನಃ ಕಳವಳದ ಕರಣದಲಿ ೬೪

ಈ ಹೊತ್ತಿಗೆ ಇರುವ ಉತ್ತಮ ಆಲೋಚನೆ" ಎಂದು ಪ್ರಹಸ್ತನು ಹೇಳಲು, ರಾವಣನು ಪ್ರಹಸ್ತನ ಕೈತಟ್ಟಿ ಈ ಮುಂದಿನ ಮಾತನ್ನಾಡಿದನು. ೬೪. "ಕೋಟೆಯನ್ನು ಬಿಗಿಮಾಡಿಸು. ಅಸ್ತ್ರಶಸ್ತ್ರಗಳನ್ನು ಸಂಗ್ರಹಿಸು. ವೀರ ರಾಕ್ಷಸನಾಯಕರನ್ನು ಕೂಡಿಸು. ಆನೆ ಕುದುರೆ ರಥಗಳನ್ನು ತಂದು ನಿಲ್ಲಿಸು. ಇನ್ನು ಯುದ್ಧಮಾಡಲು ಏಕೆ ಹೀನಾಯವಾಗಿ ಹಿಂಜರಿಯಬೇಕು ಹೋಗು" ಎಂದು ಪ್ರಹಸ್ತನನ್ನು ಕಳಿಸಿ ಚಿಂತೆಯ ಆತಂಕದಿಂದ ರಾತ್ರಿಯನ್ನು ಕಳೆದನು.

# ಏಳನೆಯ ಸಂಧಿ

ಸೂಚನೆ॥ ನೆರಹಿ ನಿಜಸೈನಿಕವ ದುರ್ಗದ । ಧುರದ ಕಡೆಗಟ್ಟಿನ ಸಗಾಢದ
ಸರಭಸದಲಸುರೇಂದ್ರನಿರ್ದನು ಸಮರಭಾರದಲಿ

ವೀರ ಧೀರೋದಾತ್ತ ರಾಜಕು । ಮಾರ ಕೇಳಾಯಿರುಳಿನಗ್ರದ
ವಾರಿರುಹಬಾಂಧವನ ತಲೆದೋಱಿಕೆಯುಲೈತಂದು
ಆ ರಜೋಗುಣಭರಿತನಾ ರಣ । ಧೀರ ಲಂಕಾನಾಥನಧಿಕ ಚ
ಮೂರವಾಣನೋಲಗವನಿತ್ತನು ತನ್ನ ನಿರ್ಣಯದ ೧

ಕರೆಸಿ ಮಯನನು ವಿಶ್ವಕರ್ಮನ । ಬರಿಸಿ ಬವರಕೆ ದುರ್ಗವನು ವಿ
ಸ್ತರಿಸಹೇಳಿದು ನೇಮವಿತ್ತು ಸಮಸ್ತ ಭುವನಗಳ
ಅರಸುಗಳ ಬರಹೇಳಿಯೋಲೆಯ । ಬರೆಸಿ ಕಳುಹಿದನತುಳಬಲ ಖಳ
ಚರರ ಕರಿ ರಥ ತುರಗ ಪಾಯ್ದಳ ಸಹಿತ ಸಂಗರಕೆ ೨

ಬಳಿಕಲಾ ಮಯ ವಿಶ್ವಕರ್ಮರು । ಬಲಿದರಾ ದುರ್ಗವನು ಬಹುವಿಧ
ಗಳ ಭಯಾನಕದುಬ್ಬರದ ಕೌಶಲದ ಕೌತುಕದ
ಕೆಲಸದಲಿ ಕಂದೆಱಿದರಮರಾ । ವಳಿಯ ಕಣ್ಣೆವೆ ಸೀವವೊಲು ಕೈ
ನಿಲುಕಲಜ ಹರಿಹರರಿಗರಿದೆನೆ ವಿವಿಧ ರಚನೆಯಲಿ ೩

ಸೂಚನೆ॥ ಸೈನ್ಯವನ್ನು ಕೂಡಿಸಿ ಕೋಟೆಯ ಯುದ್ಧದ ಠಾಣ್ಯಗಳಲ್ಲಿ ಚುರುಕಾಗಿ ಚಲಿಸುತ್ತ ಯುದ್ಧೋದ್ಯಮದಲ್ಲಿ ರಾವಣನು ಮಗ್ನನಾದನು. ೧. ಧೀರನೂ ಉದಾರಿಯೂ ಆದ ವೀರ ರಾಜಕುಮಾರ ಲವ ಕೇಳು, ಆ ರಾತ್ರಿಯನ್ನು ಕಳೆದು ಸೂರ್ಯೋದಯದಲ್ಲಿ ಬಂದು ರಜೋಗುಣ ತುಂಬಿದ ಭಾರಿ ಸೈನ್ಯದೊಡೆಯ ಲಂಕಾಪತಿ ರಣಧೀರ ರಾವಣನು ತನ್ನ ನಿರ್ಧಾರವನ್ನು ಕಾರ್ಯಗತಮಾಡುವ ಉದ್ದೇಶದಿಂದ ಸಭೆಯನ್ನು ಏರ್ಪಡಿಸಿದನು. ೨. ಮಯನನ್ನು ಕರೆಸಿ ವಿಶ್ವಕರ್ಮನನ್ನು ಬರಮಾಡಿಕೊಂಡು ಯುದ್ಧಕ್ಕೆ ಕೋಟೆಯನ್ನು ನಿರ್ಮಿಸಲು ಅಪ್ಪಣೆಯಿತ್ತನು; ಸಮಸ್ತ ಲೋಕಗಳ ರಾಜರುಗಳನ್ನು ಆನೆ ರಥ ಕುದುರೆ ಕಾಲಾಳುಗಳ ಸಹಿತ ಯುದ್ಧಕ್ಕೆ ಬರುವಂತೆ ಪತ್ರಗಳನ್ನು ಬರೆಸಿ ಮಹಾಬಲಶಾಲಿಗಳಾದ ರಾಕ್ಷಸದೂತರನ್ನು ರಾವಣನು ಕಳುಹಿಸಿದನು. ೩. ಅನಂತರ ಮಯ ವಿಶ್ವಕರ್ಮರು ಭಯಂಕರವಾದ ಅತಿಶಯವಾದ ಬಹುವಿಧದ ಕೋಟೆಯನ್ನು ಕುತೂಹಲಕರವಾದ ರೀತಿಯಲ್ಲಿ ಕೌಶಲಪೂರ್ಣವಾಗಿ ನಿರ್ಮಿಸಿದರು. ದೇವತೆಗಳ ಕಣ್ಣೆವೆಗಳು ಸೀದುಹೋಗುವಂತೆ, ಬ್ರಹ್ಮ ವಿಷ್ಣು ಮಹೇಶ್ವರರ ಕೈಗೆ ಎಟುಕಲು ಅಸಾಧ್ಯವೆಂಬಂತೆ ಕಂಗೊಳಿಸುವ ಕೋಟೆಯ ಕೆಲಸವನ್ನು ನಿರ್ವಹಿಸಿ

ನಿಲುಕಿದವು ರವಿಮಂಡಲವನ । ಟ್ಟಳೆಯ ಸಾಲುಗಳೆಡೆಯೆಡೆಗೆ ಕೊ
ತ್ತಳಗಳೊತ್ತಂಬರಿಸಿದವು ದಿಗುತಟದ ಭಿತ್ತಿಗಳ
ವಳಯ ವಳಯದ ವಂಕಗಳ ಬಾ । ಗಿಲುಗಳುಪ್ಪರಿಗೆಗಳು ಚಂದ್ರನ
ಕಲಶವೆನಲೊಪ್ಪಿದವು ನೆಲೆನೆಲೆಗಳ ವಿಲಾಸದಲಿ ೪

ಎಸೆದವಗಳಂಬೋನಿಧಿಯನೇ । ಳಿಸುವ ಬಿಂಕದಲತಳವನು ಗಾ
ಡಿಸುವ ಘನತರದಿಂದ ಯೋಜನ ಹತ್ತಅಗಲದಲಿ
ಅಸದಳದ ಪಡಿಗೋಟೆ ಪಡಿಯಗ । ಳಸಮರಣ ರಾಟಾಳಸೂತ್ರ
ಪ್ರಸರದಲಿ ನೆಲಗೋಟೆ ಬೆದಱಿಸಿತಮರಸಂತತಿಯ ೫

ಮೇಲುದುರ್ಗದ ಕೋಟೆ ಕೊತ್ತಲ । ದೇಳುಸುತ್ತಿನ ಕನಕಬದ್ಧರ
ದಾಳುವೇರಿಯ ವಿವಿಧ ರತ್ನದ ತೆನೆಯ ತಿಂಥಿಣಿಯ
ಸಾಲ ಸಬಳದ ಹರಿಗೆಗಳ ಕರ । ವಾಳುಗಳ ಹೇರಿಟ್ಟಿಗಳ ಹೇ
ರಾಳ ಕೈದುಗಳಿಂದ ಕೈಗೈದೆಸೆದುದಾ ದುರ್ಗ ೬

ಮರುಳುಕೈ ಡೆಂಕಣಿ ಶತಘ್ನಿಗ । ಳುರುಳುಗಲ್ಲಱೆಗವಣೆ ಹುರಿಮಳ
ಲುರಿಯರಗು ಸಿಡಿಲಂಬು ಡಬ್ಬುಕ ಜತ್ತರಟ್ಟಿಗಳ
ಸುರಗಿ ಕಕ್ಕಡೆ ಕುಂತ ಧನು ಮು । ದ್ಗರ ಮುಸುಂಡಿ ಕೃಪಾಣ ಪಟ್ಟಿಸ
ಪರಶು ಪಂಘ ಗದಾದಿ ಶಸ್ತ್ರದಿನೆಸೆದುದಾ ದುರ್ಗ ೭

ದರು. ೪. ಕೋಟೆಯ ಮೇಲುಗಡೆ ಅಟ್ಟಣೆಯ ಸಾಲುಗಳು ಸೂರ್ಯಮಂಡಲಕ್ಕೆ ಎಟುಕುವಂತಾದವು. ನಡುನಡುವೆ ಕೊತ್ತಲಗಳು ದಿಕ್ಕಿನ ಕೊನೆಯವರೆಗೆ ಆವರಿಸಿದವು. ಅಲ್ಲಲ್ಲಿ ನಡುನಡುವೆ ಮೂತಿಗಳ ಬಾಗಿಲುಗಳು ರಚಿತವಾದವು. ನೆಲೆನೆಲೆಗಳಲ್ಲಿ ಸುಂದರವಾಗಿ ಕಟ್ಟಿದ ಉಪ್ಪರಿಗೆಗಳು ಚಂದ್ರನ ಕಲಶಗಳಂತೆ ಶೋಭಿಸಿದವು. ೫. ಸಮುದ್ರವನ್ನು ತಿರಸ್ಕರಿಸುವಂತಿದ್ದ ಅಗಳು ಪಾತಾಳದ ಆಳವನ್ನು ಮೀರಿಸುತ್ತ ಹತ್ತು ಯೋಜನ ಅಗಲ ವಿಸ್ತರಿಸಿತ್ತು. ಅಸಾಧಾರಣವಾದ ಪ್ರತಿಕೋಟೆ, ಪ್ರತಿ ಅಗಳು, ಯುದ್ಧರಾಟೆ, ಹಗ್ಗ, ನೆಲಗೋಟೆಗಳು ದೇವತೆಗಳನ್ನು ಹೆದರಿಸಿದವು. ೬. ಮೇಲು ದುರ್ಗದ ಏಳು ಸುತ್ತಿನ ಕೋಟೆ ಕೊತ್ತಲ, ಚಿನ್ನದ ಆನೆ, ಆಳ್ವೇರಿ, ವಿವಿಧ ರತ್ನಗಳ ಕೋಟೆತೆನೆಗಳ ಸಾಲುಗಳು ಕಂಗೊಳಿಸಿದವು. ಸಾಲಾಗಿ ಇಟ್ಟ ಈಟಿಗಳು, ಗುರಾಣಿಗಳು, ಕತ್ತಿಗಳು, ದೊಡ್ಡ ಈಟಿಗಳು ಮೊದಲಾದ ಅಪಾರ ಆಯುಧಗಳಿಂದ ಅಲಂಕೃತವಾದ ದುರ್ಗವು ಪ್ರಕಾಶಿಸಿತು. ೭. ಮರುಳುಕೈ, ಡೆಂಕಣಿ, ಶತಘ್ನಿ, ಉರುಳುಗಲ್ಲು, ಅರೆ ಗವಣೆ, ಹುರಿದ ಮಳಲು, ಉರಿಯುವ ಅರಗು, ಸಿಡಿಲುಬಾಣ, ಡಬ್ಬುಕ, ಜತ್ತರಟ್ಟಿ, ಸುರಗಿ, ಕಕ್ಕಡೆ, ಈಟಿ, ಬಿಲ್ಲು, ಮುದ್ಗರ, ಮುಸುಂಡಿ, ಖಡ್ಗ, ಪಟ್ಟಿಸ, ಕೊಡಲಿ,

ಅರೆದ ಸಾಸುವೆಗೊಡನು ಹಾವಿನ । ಹರವಿ ಕಾಸಿದ ಮೇಣಗಳ ಕೊ
ಪ್ಪರಿಗೆ ಕಾದುಕ್ಕಿನ ಕಠೋರದ ಗುಂಡು ಜಂತ್ರಗಳ
ಹರಹಿನಲಿ ಹರಿ ಶರಭ ವೃಕ ಸೂ । ಕರ ಮಹೋಗ್ರ ವ್ಯಾಘ್ರಕುಲದು
ಬ್ಬರದ ಸಂವರಣೆಯಲಿ ಸಂತತ ಬೀರಿದುದು ಭಯವ ೮

ದಸಿಗಳಲಿ ತಲೆನೇಣಿನಲಿ ವಿಷ । ರಸದ ಜೀರ್ಕೊಳವಿಗಳಲಡಗಿ
ರ್ದೆಸೆವ ಕಂಡಿಯ ಕಣೆಯ ರಾಶಿಯ ಕವಣೆಗಲ್ಲುಗಳ
ಮಸೆದಲಗು ತೆತ್ತಿಸಿದ ತೊಲೆಗಳ । ಬಸಿದ ಶೂಲದ ನೂಕುಗಲ್ಲಿನ
ಹಸರದಲಿ ಹರಗಿರಿಯನೇಡಿಸುತಿರ್ದುದಾ ದುರ್ಗ ೯

ಇಡುವ ಗುಂಡಡೆಗಲ್ಲು ಗಾಣದ । ಗಡಿಸುವಲೆ ಗಂಗಸದ ಸಿಲುಕಿನ
ದಡಿವಲೆಯ ಪಿಡಿವಲೆಯ ಗಾಡಿಯ ಗಣೆಗಳುರುಲುಗಳ
ತೊಡಕುಗಳ ಕಣ್ಣಿಗಳ ತಳುಕಿನ । ದಡಿಯ ದಾಣೆಯ ಲಕುಡಪಾಣಿಯ
ಕಡುಹುಕಾಜಿರಿನೆಸೆದುದಗ್ಗದ ದುರ್ಗ ದಶಶಿರನ ೧೦

ಕಡುದುರುವಿನುಬ್ಬರದ ಕೆಂಜಿಗೆ । ಗೊಡನ ತೊನಸೆಯ ಹರವಿಗಳ ಬಿಸಿ
ಯಡಲಿಗಳ ಕಾದೆಣ್ಣೆಗಳ ಹರವಿಗಳ ಕಬ್ಬುನದ
ಬಡಿಗೆಗಳ ನಸುಗುನ್ನಿ ತುರುಚಿಯ । ಪುಡಿಯ ತೀವಿದ ತಿತ್ತಿಗಳ ಕಾ
ಲ್ದೊಡಕುಗಳ ಹಗ್ಗಗಳ ಹರಹಿನಲೆಸೆದುದಾ ದುರ್ಗ ೧೧

ಪರಿಘ, ಗದೆ–ಮೊದಲಾದ ಶಸ್ತ್ರಗಳಿಂದ ಆ ದುರ್ಗವು ಪ್ರಕಾಶಿಸಿತು. ೮. ಅರೆದ ಸಾಸುವೆಯ ಕೊಡ, ಹಾವಿನ ಗಡಿಗೆ, ಕಾಸಿದ ಮೇಣದ ಕೊಪ್ಪರಿಗೆ, ಕೆಂಪಗೆ ಕಾದ ಉಕ್ಕಿನ ಗುಂಡು, ಯಂತ್ರಗಳು, ಅಲ್ಲದೆ ಸಿಂಹ, ಶರಭ, ತೋಳ, ಹಂದಿ, ಭಯಂಕರ ಹುಲಿ ಮೊದಲಾದ ಮೃಗಗಳು ನೋಡುವವರಿಗೆ ಭಯವನ್ನು ಹುಟ್ಟಿಸುತ್ತಿದ್ದವು. ೯. ದಸಿಗಳು, ತಲೆನೇಣುಗಳು, ವಿಷರಸವನ್ನು ಚಿಮ್ಮಿಸುವ ಜೀರ್ಕೊಳವಿ, ಮರೆಯಾಗಿ ಅಡಗಿದ್ದು ಕೊಂಡು ರಂಧ್ರಗಳ ಮೂಲಕ ಎಸೆಯುವ ಬಾಣಗಳು, ಕವಣೆಕಲ್ಲುಗಳ ರಾಶಿ, ಸಾಣೆ ಹಿಡಿದ ಕತ್ತಿ, ಒತ್ತಾಗಿ ಪೇರಿಸಿದ ತೊಲೆಗಳು, ಚೂಪಾದ ಶೂಲ, ನೂಕುಗಲ್ಲು–ಇವು ಗಳ ಸಮೂಹಗಳಿಂದ ಆ ದುರ್ಗವು ಕೈಲಾಸವನ್ನು ತಿರಸ್ಕರಿಸುತ್ತಿತ್ತು. ೧೦. ಎಸೆ ಗುಂಡು, ಅರೆಯುವ ಕಲ್ಲು, ಗಾಳದ ಗಡಸುಬಲೆ, ಗಂಗಸ (?), ತೊಡರಿಕೊಳ್ಳುವ ಪಡಿವಲೆ, ಸಿಡಿಬಲೆ, ಗಾಡಿಗಳು. ಗಣೆಗಳು (ಗಳುಗಳು), ಉರುಲುಗಳು, ತೊಡರಿಕೊಳ್ಳುವ ಹಗ್ಗಗಳು, ಹೊಡೆದೊಣ್ಣೆಗಳು, ಹಗ್ಗಗಳು, ಬಡಿಗೆಗಳು–ಇವೇ ಮೊದಲಾದುವನ್ನು ಕೈ ಗಳಲ್ಲಿ ಹಿಡಿದುಕೊಂಡ ವೀರರಿಂದ ದಶಮುಖನ ಮಹಾದುರ್ಗವು ಪ್ರಕಾಶಿಸಿತು. ೧೧. ಕಣಜ ಮತ್ತು ಉರಿಕೆಂಜಿಗೆಗಳು ತುಂಬಿದ ಕೊಡ, ತೊಣಚಿಗಳು ತುಂಬಿದ ಗಡಿಗೆಗಳು, ಬಿಸಿಕೆಸರು ಮತ್ತು ಕಾದೆಣ್ಣೆಗಳ ಹರವಿಗಳು. ಕಬ್ಬಿಣದ ಬಡಿಗೆಗಳು, ನಸುಗುನ್ನಿ ಮತ್ತು ತುರುಚಿಪುಡಿಗಳು ತುಂಬಿದ ಚರ್ಮದ ಚೀಲಗಳು, ಕಾಲನ್ನು ತೊಡರಿಸುವ

ಬೆಟ್ಟುವೊಳೆಗಳ ಡಾಣೆಗಳ ಬೆ । ನ್ನಟ್ಟಿ ಪೋದುವ ಮರುಳುತಂಡದ
ಚಿಟ್ಟಟಿಸಿದು ಚಪ್ಪಟಿಸಿದು ನುಂಗುವ ಭೂತಕೋಟಿಗಳ
ನಟ್ಟಿ ಶೂಲದ ಸೂತ್ರಜಂತ್ರದ । ಜಟ್ಟಿಗರ ಬಲು ಬೊಮ್ಮ ರಕ್ಕಸ
ರಿಟ್ಟಣಿಯಲೆವೆ ಸೀವವೊಲು ಸಂಭ್ರಮಿಸಿತಾ ದುರ್ಗ ೧೨

ಲಾಳವಿಂಡಿಗೆಗಳಲಿ ಬಂಡಿಯ । ಗಾಲಿಗಳ ಗಾಡಣೆಗಳಲಿ ನಿಡು
ಮೇಳೆಯುದ ಬತ್ತಳಿಕೆಗಳ ಬಲುಬದ್ಧರಂಗಳಲಿ
ತೋಳ ಸಿಂಹ ವರಾಹ ಕರಿ ಶಾ । ರ್ದೂಲ ಘೂಕಧ್ವಾಂಕ್ಷಮುಖದ ಕ
ರಾಳ ರಕ್ಕಸಭಟರಿಗಕ್ಕಜವಾದುದಾ ದುರ್ಗ ೧೩

ತೆನೆತೆನೆಯ ಸಂದಿಯಲಿ ಮೋಹಿದ । ಮೊನೆಯ ಸಬಳದ ಹೊನ್ನರಸ್ನದ
ಘನತರದ ಸಾಲಟ್ಟಳೆಯಲಿಡುವೀಟಿ ಕಕ್ಕಡೆಯ
ಧನುಸರಳ ಸಕಳಾಯುಧಂಗಳ । ತನಿವೆಳಗುಗಳ ಹರಿಗೆ ಹಲಗೆಯ
ಕನಕ ಕವಚದ ಸೀಸಕದ ಭಟರಿಂದ ಬಾರಿಸಿತು ೧೪

ತೇರುಗಳ ತೇಜಿಗಳ ಬಲು ಮದ । ವಾರಣಂಗಳ ತೆರಳಿಕೆಯ ರಣ
ಚೋರಗಂಡಿಯ ಹುಲಿಮುಖದ ಹೊಱನುಸುಳುಗಂಡಿಗಳ
ಭೇರಿ ಪಟಹ ಮೃದಂಗ ತಂಬಟ । ವೀರಣಾನಕ ಮುಖ್ಯ ನಾನಾ
ವೀರವಱಿಗಳ ರಭಸದಲಿ ರಂಜಿಸಿದುದಾ ದುರ್ಗ ೧೫

ಹಗ್ಗಗಳು ಆ ದುರ್ಗದಲ್ಲಿ ಅಪಾರವಾಗಿದ್ದವು. ೧೨. ಚುಚ್ಚುಮೊಳೆಗಳು, ದೊಣ್ಣೆಗಳು, ಬೆನ್ನಟ್ಟಿಕೊಂಡು ಹೋಗಿ ಹೊಡೆಯುವ ದೆವ್ವಗಳ ಸಮೂಹ, ಸುಗಂಧ ಬಳಿದು ಕೊಂಡು ಚಪ್ಪರಿಸುತ್ತ ನುಂಗುವ ಕೋಟ್ಯಾಂತರ ಭೂತಗಳು, ನಟ್ಟಿ ?, ಶೂಲ, ಸೂತ್ರ ಮತ್ತು ಯಂತ್ರಗಳನ್ನು ಹಿಡಿದ ಜಟ್ಟಿಗಳು, ಭಾರಿ ಬ್ರಹ್ಮ ರಾಕ್ಷಸರ ಸಮೂಹ—ಇವುಗಳಿಂದ ನೋಡುವವರ ಕಣ್ಣೆವೆಗಳು ಸೀದುಹೋಗುವಂತೆ ಆ ದುರ್ಗವು ಸಂಭ್ರಮದಿಂದ ಕೂಡಿತ್ತು. ೧೩. ಲಾಳವಿಂಡಿಗೆಗಳು, ಬಂಡಿಯಗಾಲಿಗಳ ಸಾಲುಗಳು, ಉದ್ದುದ್ದವಾಗಿ ಬತ್ತಳಿಕೆಗಳನ್ನು ಹೇರಿದ ಗೂಳಿಗಳು ಇವುಗಳನ್ನು ನೋಡಿ ತೋಳ ಸಿಂಹ ಹಂದಿ ಹುಲಿ ಗೂಬೆ ಕಾಗೆಗಳ ಮುಖದ ಭಯಂಕರರಾಕ್ಷಸರಿಗೆ ಆಶ್ಚರ್ಯ ವಾಯಿತು. ೧೪. ಕೋಟೆಯ ಪ್ರತಿ ತೆನೆಯ ಸಂದಿನಲ್ಲೂ ಮೊನಚಾದ ಭರ್ಜಿಗಳನ್ನು ಗುರಿಯಿಟ್ಟು ಕುಳಿತ ಭಟರಿಂದಲೂ, ಚಿನ್ನರತ್ನಗಳ ಸಾಲಾದ ಅಟ್ಟಣೆಯ ಮೇಲೆ ಈಟಿ, ಕಠಾರಿ, ಬಿಲ್ಲು, ಬಾಣ ಮೊದಲಾದ ಹೊಳೆಯುವ ಸಮಸ್ತ ಆಯುಧಗಳನ್ನು ಹಿಡಿದ ಹಾಗೂ ಹರಿಗೆ ಹಲಗೆಗಳನ್ನು ಹೊಂದಿದ ಚಿನ್ನದ ಕವಚ ಶಿರಸ್ತ್ರಾಣಗಳನ್ನು ಧರಿಸಿದ ಯೋಧರುಗಳಿಂದಲೂ ಆ ದುರ್ಗವು ನೋಡುವವರನ್ನು ನಡುಗಿಸಿತು. ೧೫. ರಥಗಳು, ಕುದುರೆಗಳು ಮತ್ತು ಮದ್ದಾನೆಗಳ ಸಂಚಾರದಿಂದಲೂ, ಯುದ್ಧದ ಸಮಯದಲ್ಲಿ ಉಪ ಯೋಗಿಸುವ ಕಳ್ಳಗಂಡಿ, ಹುಲಿಮುಖದ ಹೆಬ್ಬಾಗಿಲು ಮತ್ತು ಹೊರಕ್ಕೆ ನುಸುಳುವ ಕಂಡಿಗಳಿಂದಲೂ, ಭೇರಿ, ನಗಾರಿ, ಮೃದಂಗ, ತಮಟೆ, ವೀರಣ ಎಂಬ ಜೋಡುತಮಟೆ,

ಹತ್ತುವರಿಗಾಕಾಶ ಮುಳಿದುಱೆ । ಮುತ್ತುವರಿಗುರಿಗೋಟೆ ಬಾಗಿಲು
ಮೃತ್ಯುವಿನ ಬಾಯಿಗಳು ನಂಜಿನ ಮಂಜಿನುಬ್ಬರಣೆ
ಸುತ್ತ ಕತ್ತರಿವಾಣ ಪಡಿಯಗ । ಳುತ್ತರಿಸಲಮರಾಳಿಗರಿದೆನೆ
ಕೊತ್ತಳದ ಹುಲಿಮುಖದ ಪರಹಿನಲೆಸೆದುದಾ ದುರ್ಗ ೧೬

ಕುಣಿವ ಪಲ್ಲವ ಝಲ್ಲರಿಯ ಡೆಂ । ಕಣಿಯ ತಲೆ ಚಮರಿಗಳ ಗಗನಾಂ
ಗಣವನಣೆವ ಪತಾಕೆಗಳ ಸಡಕುಗಳ ಸೀಗುರಿಯ
ಹಣೆದ ಕುಱಿಗಳ ಕೋಣಗಳ ದಾ । ಸಣದ ಬೇವಿನ ದಂಡೆಗಳ ಭಾ
ರಣೆಯ ಬೊಗ್ಗಿನ ಲಗ್ಗೆವಱೆಗಳಲೆಸೆದುದಾ ದುರ್ಗ ೧೭

ಕಾದುವರೆ ಬರಹೇಳು ಭಾಳದ । ಲೈದು ಕಂಗಳನುಳ್ಳವನ ಹದಿ
ನೈದು ಮಕ್ಕಳ ಹೊಕ್ಕುಳಲಿ ಹೆತ್ತವನನುಳಿದವರು
ಐದೆ ನಂಟರು ಬಂಟರಡವಿಯ । ಹಾದಿಗರ ಹೇಳದಿರೆನುತ್ತವೆ
ಹೊಯ್ದುದಾ ದುರ್ಗದಲಿ ಡಂಗುರವು ಡಾವರಿಸೆ ನಭವ ೧೮

ವೀರನಲ್ಲಾ ಮೂಱು ಲೋಕದ । ವೀರರಲಿ ದಶಕಂಠ ಹೇಳಿತ
ನಾರು ಮಾಡರು ದನುಜ ದಿವಿಜ ಭುಜಂಗರೊಗ್ಗಿನಲಿ
ತಾರಕನ ಜಂಭನ ನಿಕುಂಭನ । ತಾರಕಾಕ್ಷನ ತಮನ ನಮುಚಿಯ
ಸೇರುವೆಯ ಸುರವೈರಿಗಳು ಬರುತಿರ್ದರಗಲದಲಿ ೧೯

ಆನಕ, ಇವೇ ಮೊದಲಾದ ನಾನಾ ರೀತಿಯ ವೀರವಾದ್ಯಗಳ ಭೋರ್ಗರೆತದಿಂದಲೂ ಆ ದುರ್ಗವು ರಂಜಿಸಿತು. ೧೬. ಕೋಟೆಯನ್ನು ಹತ್ತಲು ಪ್ರಯತ್ನಿಸುವವರಿಗೆ ಆಕಾಶವೇ ಸರಿ. ಕೆರಳಿ ಮುತ್ತಿಗೆ ಹಾಕುವವರಿಗೆ ಉರಿಗೋಟೆ, ಬಾಗಿಲುಗಳು ಮೃತ್ಯುವಿನ ಬಾಯಿಗಳು, ಇಲ್ಲವೇ ವಿಷದ ಮಂಜಿನ ಜ್ವಾಲೆ, ಸುತ್ತಲಿನ ಬಾಗಿಲುಗಳು ಸೋಕಿದರೆ ಕೈಕತ್ತರಿಸುವ ವಿಷಜಲ. ದಾಟಲು ದೇವತೆಗಳಿಗೂ ಅಸಾಧ್ಯವೆನ್ನುವಂಥ ಕೋಟೆಯ ಬುರುಜುಗಳು ಮತ್ತು ಹುಲಿಮುಖಗಳು. ಹೀಗೆ ದುರ್ಗವು ಪ್ರಕಾಶಿಸಿತು. ೧೭. ಮೇಲಕ್ಕೆ ಕೆಳಕ್ಕೆ ಆಡುವ ಚಿಗುರಿನ ಗೊಂಚಲುಗಳಿಂದ, ಕೋಟೆಯ ಮೇಲೆ ಧ್ವಜಸ್ತಂಭ ವಿರುವ ಸ್ಥಳದ ಚಾಮರಗಳಿಂದ, ಆಕಾಶಕ್ಕೆ ತಗಲುವ ಬಾವುಟ, ಕುಚ್ಚು ಮತ್ತು ಚವರಿಗಳಿಂದ ಕತ್ತರಿಸಿದ ಕುರಿ ಕೋಣಗಳಿಂದ ಕೂಡಿ ದಾಸವಾಳ ಮತ್ತು ಬೇವಿನ ಸೊಪ್ಪಿನ ದಂಡೆಗಳಿಂದಲಂಕರಿಸಿದ ದುರ್ಗವು ದೊಡ್ಡ ದೊಡ್ಡ ರಣವಾದ್ಯಗಳು ಭೋರ್ಗರೆಯುತ್ತಿರಲು ಕಣ್ಣುಗಳಿಗೆ ಶೋಭಿಸಿತು. ೧೮. "ಯುದ್ಧ ಮಾಡುವುದಾದರೆ ಹಣೆಯಲ್ಲಿ ಐದು ಕಣ್ಣುಗಳುಳ್ಳವನನ್ನಾಗಲಿ ಹದಿನೈದು ಮಕ್ಕಳನ್ನು ಹೊಟ್ಟೆಯಲ್ಲಿ ಹೆತ್ತವನನ್ನಾಗಲಿ ಬರಹೇಳು. ಉಳಿದವರು ನಂಟರೋ ಸೇವಕರೋ ಇರಬೇಕು, ಕಾಡುಪಾಲಾದವರನ್ನು ಕುರಿತು ಹೇಳಬೇಡ" ಎನ್ನುತ್ತ ಆಕಾಶವನ್ನು ಆವರಿಸುವಂತೆ ದುರ್ಗದಲ್ಲಿ ಡಂಗುರ ಹೊಡೆದರು. ೧೯. ಮೂರು ಲೋಕಗಳ ವೀರರಲ್ಲಿ ವೀರನಲ್ಲವೇ ದಶಕಂಠ. ರಾಕ್ಷಸರು ದೇವತೆಗಳು ನಾಗರುಗಳಲ್ಲಿ ಅವನು ಹೇಳಿದುದನ್ನು ಯಾರು ತಾನೆ

ಇಳೆಯಮೇಲಿನಖಿಳ ಭಟರಿ । ಟ್ಟಳಿಸಿ ಬಂದುದು ಹರಿಪಯಾದ್ಯರ
ಬಳಿಯ ಭಾರಿಯ ಭೂರಿರಕ್ಕಸರೈದಿತೊಗ್ಗಿನಲಿ
ತಳವು ಮೇಲಣ ಜಗದ ಜೋಡಿಯ । ಹಲವು ಕಾಲದ ದೈತ್ಯ ದನುಜಾ
ವಳಿ ನಿಶಾಚರನಿಕರ ಬಂದುದು ಭೂಮಿಯುಗಲದಲಿ ೨೦

ಜವನ ಜಗದವಸಾನದುರುಭೈ । ರವನ ಭಣಿತೆಯ ಭಟರನುಚ್ಚೈ
ಶ್ರವದ ತೂಕದ ತೇಜಿಗಳ ತರಣಿಯ ರಥೋಪಮದ
ನವ ವರೂಥಾವಳಿಯ ಸುರಪನ । ಧವಳದಂತಿಯ ವಿಗಡ ಸಾಮೋ
ದ್ಭವ ಘಟಾಳಿಯ ಗರುವಸೇನೆಯ ಕಾಣಲಾಯ್ತಲ್ಲಿ ೨೧

ಹರಿಯ ಚಕ್ರದ ಹರನ ಶೂಲದ । ಹರಿಹಯನ ವಜ್ರದ ಕೃತಾಂತನ
ಪರಿಘ ದಂಡದ ಪಾಶಪಾಣಿಯನುರುಪರಶ್ವಥದ
ಹರನ ಮಿತ್ರನ ಗದೆಯ ವೈಶ್ವಾ । ನರನ ಖಡ್ಗದ ವಾಯುವಿನ ಬಲು
ಸರಳ ಸರಿಸದ ಕೈದುಗಳ ನೆಜಿ ಕಾಣಲಾಯ್ತಲ್ಲಿ ೨೨

ಧರೆಯನದಿಮುಗುಚುವ ದಿಶಾಸಿಂ । ಧುರದ ದಾಡೆಯನುಗಿವ ಫಣಿಪನ
ಕೊರಳಗಿಕ್ಕುವ ಕಮಲಜಾಂಡ ಕಟಾಹ ಖರ್ಪರವ
ಬಿರಿಯಲೊದೆವ ಮೃಗಾಂಕ ತರಣಿಯ । ತಿರಿದು ಕುಂಡಲವಿಕ್ಕುವತಿಬಲ
ದುರುಪರಾಕ್ರಮಭಟರ ಸಂಖ್ಯೆಯ ಕಾಣಲಾಯ್ತಲ್ಲಿ ೨೩

ಮಾಡುವುದಿಲ್ಲ. ತಾರಕ, ಜಂಭ, ನಿಕುಂಭ, ತಾರಕಾಕ್ಷ, ತಮ, ನಮುಚಿಗಳಿಗೆ ಸಮಾನರಾದ ರಾಕ್ಷಸರು ಗುಂಪಾಗಿ ಬರುತ್ತಿದ್ದರು. ೨೦. ಭೂಮಿಯ ಮೇಲಿನ ಸಮಸ್ತ ವೀರರು ಗುಂಪಾಗಿ ಬಂದರು. ಇಂದ್ರನೇ ಮೊದಲಾದವರ ಬಳಿಯ ವೀರರಾಕ್ಷಸರು ಒಟ್ಟಾಗಿ ಬಂದರು. ಕೆಳಗಿನ ಮತ್ತು ಮೇಲುಲೋಕಗಳ ಹಲವುಕಾಲದ ದೈತ್ಯರು, ದನುಜರು, ನಿಶಾಚರರು ಅಪಾರವಾಗಿ ಬಂದರು. ೨೧. ಜಗತ್ತಿನ ಲಯಕಾಲದ ಉಗ್ರ ಭೈರವನ ಮತ್ತು ಯಮನ ಧ್ವನಿಯ ಭಟರನ್ನು, ಇಂದ್ರನ ಉಚ್ಚೈಶ್ರವಸ್ಸಿಗೆ ಸಮಾನವಾದ ಕುದುರೆಗಳನ್ನು, ಸೂರ್ಯನ ತೇರಿಗೆ ಸಮಾನವಾದ ಹೊಸ ರಥಗಳ ಸಾಲನ್ನು, ಇಂದ್ರನ ಬಿಳಿಯ ಆನೆಯಾದ ಐರಾವತದಂತಿರುವ ಬಲಶಾಲಿ ಆನೆಗಳ ಸೈನ್ಯವನ್ನು ಹೊಂದಿದ ಶ್ರೇಷ್ಠ ಸೈನ್ಯವನ್ನು ಅಲ್ಲಿ ಕಾಣಲಾಯಿತು. ೨೨. ವಿಷ್ಣುವಿನ ಚಕ್ರಾಯುಧ, ಶಿವನ ಶೂಲ, ಇಂದ್ರನ ವಜ್ರಾಯುಧ, ಯಮನ ಪರಿಘಾಯುಧ ಮತ್ತು ದಂಡ, ವರುಣನ ಕೈಗೊಡಲಿ, ಕುಬೇರನ ಗದೆ, ಅಗ್ನಿಯ ಖಡ್ಗ, ವಾಯುವಿನ ತೀಕ್ಷ್ಣಬಾಣ–ಇವುಗಳಿಗೆ ಸರಿಸಮಾನವಾದ ಆಯುಧಗಳೇ ಅಲ್ಲಿ ಕಂಡುಬಂದುವು. ೨೩. ಭೂಮಿಯನ್ನು ತಲೆ ಕೆಳಗು ಮಾಡುವ, ದಿಗ್ಗಜಗಳ ದಂತವನ್ನು ಮುರಿಯುವ, ಆದಿಶೇಷನ ಕತ್ತನ್ನು ಹಿಡಿಯುವ, ಬ್ರಹ್ಮಾಂಡದ ಕೊಪ್ಪರಿಗೆಯನ್ನು ಬಿರಿಯುವಂತೆ ಒದೆಯುವ, ಚಂದ್ರಸೂರ್ಯರನ್ನು ತಿರುಚಿ ಕುಣಿಕೆಯನ್ನು ಹಾಕುವ ಮಹಾಬಲಶಾಲಿಗಳಾದ ಯೋಧರು ಅಪಾರ

ಎಣಿಕೆಗೇಳ್ನೂಱಾದುದಕ್ಷೋ । ಹಿಣಿ ದಶಾಸ್ಯನ ಮೂಲಬಲ ಪರಿ
ಗಣನೆಯನು ನಾನಱಿಯೆ ನೆರೆದ ಸಮಸ್ತ ರಕ್ಕಸರ
ಹಣೆಯ ಲಿಪಿಯನಿಬರಿಗೆ ತೀರಿತು । ಗುಣನಿಧಿಯೆ ಕೇಳಘಯುತರ ಸು
ಪ್ರಣಯ ಸಂಗವದೇನ ಮಾಡದು ಲೋಕದೊಳಗೆಂದ ೨೪

ಬಳಿಕ ಶಾರ್ದೂಲನನು ಸುರಕುಲ । ಪ್ರಳಯಭೈರವ ಕಳುಹಿದನು ರಿಪು
ನಳಿನವನವಾರಣನ ಬಳಿಗಾಹವಕೆ ಬರಹೇಳಿ
ಇಳಿದನವ ನವಮೇಘಕಾಲದ । ಕುಲಿಶದುಬ್ಬರದಂತೆ ಗಗನ
ಸ್ಥಳದ ಗತಿಯಲಿ ಗಗನಮಣಿವಂಶಜನ ಸರಿಸದಲಿ ೨೫

ಉಪ್ಪರಿಸಿ ಕಪಿಭಟರು ಕದನದ । ದರ್ಪದಬ್ಬರದುಬ್ಬರದ ಬಲು
ಚಪ್ಪರಣೆಯಲಿ ಮುಸುಕಿದರು ಮುಷ್ಟಿಗಳ ನೆಗಹಿನಲಿ
ತಪ್ಪದಿವ ಕಾಳಗಕೆ ಕರೆಯಲು । ಬಪ್ಪ ಬಲುಭಟನೆಂದಱಿದು ಕೈ
ತಪ್ಪಮಾಡಲು ಬೇಡೆನುತ ರಘುರಾಯ ನೇಮಿಸಿದ ೨೬

ತಂದು ನಿಲಿಸಿದರವನನವ ಬಳಿ । ಕೆಂದನೆಲೆ ರಾಜೇಂದ್ರ ರಣದಲಿ
ನೊಂದು ಹಿಂಗದ ಮುನ್ನ ಹಂಬಲಿಸದೆ ಮಹೀಸುತೆಯ
ಮುಂದಱಿದು ತೆರಳುವುದು ಸುಖ ನಿಮ । ಗೆಂದು ಹೇಳಿದನಿದುವೆ ಚಿತ್ತಕೆ
ಬಂದಿರದೊಡಾಹವಕೆ ಬರಹೇಳಿದನು ಬೇಗೆಂದ ೨೭

ಸಂಖ್ಯೆಯಲ್ಲಿ ಅಲ್ಲಿ ಕಾಣಿಸಿದರು. ೨೪. ರಾವಣನ ಮೂಲಸೈನ್ಯವೇ ಏಳುನೂರು ಅಕ್ಷೋಹಿಣಿ, ಇನ್ನು ಅಲ್ಲಿ ಸೇರಿದ ಇತರ ರಾಕ್ಷಸರ ಲೆಕ್ಕವನ್ನು ನಾನರಿಯೆ. ಗುಣನಿಧಿಯಾದ ಕುಮಾರನೇ ಕೇಳು. ಇಷ್ಟು ಜನರಿಗೆ ಹಣೆಯಬರಹವು ತೀರಿತು. ಪಾಪಿಗಳ ಸಹವಾಸವು ಜಗತ್ತಿನಲ್ಲಿ ಏನನ್ನು ತಾನೆ ಮಾಡದು ಎಂದು ವಾಲ್ಮೀಕಿಗಳು ನುಡಿದರು. ೨೫. ಅನಂತರ ದೇವತೆಗಳಿಗೆ ಪ್ರಳಯಭೈರವನಾದ ರಾವಣನು ಯುದ್ಧಕ್ಕೆ ಆಹ್ವಾನ ಕೊಟ್ಟು ಶತ್ರುಗಳೆಂಬ ಕಮಲಗಳ ಸಮೂಹಕ್ಕೆ ಆನೆಯಾದ ರಾಮನ ಬಳಿಗೆ ಶಾರ್ದೂಲನನ್ನು ಕಳುಹಿಸಿದನು. ಅವನು ಹೊಸ ಕಾರ್ಗಾಲದ ಮೋಡಗಳಿಂದುದಿಸುವ ಸಿಡಿಲಿನಂತೆ ಆಕಾಶದಿಂದ ಹೊರಟು ರವಿಕುಲದ ರಾಮನ ಬಳಿಗೆ ಇಳಿದುಬಂದನು. ೨೬. ಕಪಿವೀರರು ನೆಗೆದು ಯುದ್ಧೋತ್ಸಾಹದಿಂದ ಬೊಬ್ಬಿರಿದು ಗದರಿಸುತ್ತ ಮುಷ್ಟಿಗಳನ್ನೆತ್ತಿಕೊಂಡು ಶಾರ್ದೂಲನನ್ನು ಮುತ್ತಿದರು. ಇವನು ಯುದ್ಧಕ್ಕೆ ಕರೆಯಲು ಬಂದಿರುವ ವೀರನೆನ್ನುವುದು ಖಂಡಿತ ಎಂಬುದನ್ನು ತಿಳಿದುಕೊಂಡ ರಘುರಾಮನು ಕೈತಪ್ಪುಮಾಡಬೇಡಿ ಎಂದು ಕಪಿವೀರರಿಗೆ ಅಪ್ಪಣೆಮಾಡಿದನು. ೨೭, ಶಾರ್ದೂಲನನ್ನು ಕರೆತಂದು ರಾಮನ ಎದುರಿಗೆ ನಿಲ್ಲಿಸಿದರು. ಶಾರ್ದೂಲನು, "ಅಯ್ಯಾ ರಾಜೇಂದ್ರ, ಯುದ್ಧದಲ್ಲಿ ಗಾಯಗೊಂಡು ಹಿಂದೆಗೆಯುವುದಕ್ಕೆ ಮುಂಚೆಯೇ ಸೀತೆಗಾಗಿ ಹಂಬಲಿಸದೆ ಮುಂದಾಗುವುದನ್ನು ತಿಳಿದುಕೊಂಡು ಹೊರಟುಹೋಗುವುದು ನಿನಗೆ ಸುಖ ಎಂದು ರಾವಣನು ಹೇಳಿದನು. ಇದು ನಿಮ್ಮ ಮನಸ್ಸಿಗೆ ಬರದೆ ಇದ್ದರೆ ಯುದ್ಧಕ್ಕೆ ಬರಹೇಳಿದನು"

ನಗುತ ರಾಘವರಾಯನೆದ್ದನು । ಗಗನಚರರುಗ್ಘಡಿಸೆ ಶಾಖಾ
ಮೃಗಕಟಕ ಕಡಲುಪ್ಪರಿಸಿದವೊಲಸುರಪುರಿಗಾಗಿ
ನಗಮಹೀರುಹದುಬ್ಬರದ ಬೊ । ಬ್ಬೆಗಳಲಿಳೆ ಕಳವಳಿಸೆ ನಡೆದುದು
ಜಗದರಸನೈತಂದನಿನಜಾದಿಗಳ ಗಡಣದಲಿ ೨೮

ಅರರೆ ಜಂಗಮಗಿರಿಗಳೋ ಮೇಣ್ । ಧರೆಯನವಲಂಬಿಸುವ ಲಯಜಲ
ಧರಕದಂಬವೊ ಕಾಲದಗ್ರದ ಕಡಲ ಕಾಹುರವೊ
ಹರಿಬಲವೊಯೆನೆ ಬಂದುದಸುರೇ । ಶ್ವರನ ನಗರದ ಜನದ ಬಾಯಲಿ
ಕರಿಸೆ ಹಾಯಲು ಕರಣ ಕಳವಳಿಸಲು ದಶಾನನನ ೨೯

ಬಾರಿಸಿದ ಬಲುಭೀತಿಯಲಿ ಹೊಱ । ಕೇರಿ ಹೊಕ್ಕುದು ದುರ್ಗವನು ಪ್ರಾ
ಕಾರದೊಳಮೈಗಳಲಿ ಹೂಡಿದರಖಿಳ ಜಂತ್ರಗಳ
ಭೇರಿಗಳ ಹೊಯ್ಲಿನಲಿ ಖಳಪರಿ । ವಾರ ಪಡಿತಳಿಸಿದುದು ಕೇಳಿ ಕು
ಮಾರಕರು ಸಹಿತಸುರಪತಿ ಹೊಱವಂಟನರಮನೆಯ ೩೦

ಕರೆದು ವೀರ ಮಹೋದರನ ತ । ತ್ಪುರದ ತೆಂಕಣಭಾಗಕವನನು
ಪರುಟವಿಸಿ ಪಡುವಲು ಸುರೇಂದ್ರವಿರೋಧಿಯನು ಬೆಸಸಿ
ಹರಿಹಯನ ದೆಸೆಗಾ ಪ್ರಹಸ್ತನ । ಹುರಿಕೊಳಿಸಿ ಬಳಿಕುತ್ತರದ ಗೋ
ಪುರಕೆ ನಡೆತಂದಿತ್ತನೋಲಗವನು ದಶಗ್ರೀವ ೩೧

ಎಂದು ಹೇಳಿದನು. ೨೮. ನಗುತ್ತ ರಾಮನು ಏಳಲು ಆಕಾಶದಲ್ಲಿದ್ದ ದೇವತೆಗಳು ಗಟ್ಟಿಯಾಗಿ ಧ್ವನಿಮಾಡಿದರು, ದೇವೇಂದ್ರನ ಅಮರಾವತಿಗೆ ಸಮುದ್ರವು ಉಕ್ಕಿದಂತೆ ಕಪಿಸೈನ್ಯವು ಬಂಡೆ ಮತ್ತು ಮರಗಳನ್ನು ಅಪ್ಪಳಿಸಿ ಬೊಬ್ಬೆಹಾಕುತ್ತ ಹೊರಟಿತು. ಈ ಬೊಬ್ಬೆಗೆ ಭೂಮಿಯು ತಳಮಳಗೊಂಡಿತು. ರಾಮನು ಸುಗ್ರೀವಾದಿಗಳ ಸಮೂಹದೊಡನೆ ಬಂದನು. ೨೯. ಅಬ್ಬಬ್ಬ ನಡೆದಾಡುವ ಬೆಟ್ಟಗಳೋ ಅಥವಾ ಪ್ರಳಯಕಾಲದ ಮೋಡಗಳ ಸಮೂಹವೋ, ಪ್ರಳಯಸಮುದ್ರದ ರಭಸವೋ, ಕಪಿಸೈನ್ಯವೋ ಎಂಬುದಾಗಿ ರಾವಣನ ನಗರದ ಜನರು ಬಾಯಲ್ಲಿ ಜೊಲ್ಲು ಸುರಿಸುತ್ತ ನುಡಿಯಲು ಕಪಿಸೈನ್ಯವು ಬಂದಿತು. ರಾವಣನು ಚಿಂತಾಕ್ರಾಂತನಾದನು. ೩೦. ಅಧಿಕವಾಗಿ ಭಯಗೊಂಡ ಕೋಟೆಯ ಹೊರಕೇರಿಯಲ್ಲಿದ್ದ ಜನರು ದುರ್ಗದೊಳಕ್ಕೆ ಹೋಗಿ ಸೇರಿಕೊಂಡರು. ಕೋಟೆಯ ಒಳಗಡೆಯಲ್ಲಿ ಯುದ್ಧದ ಸಮಸ್ತ ಯಂತ್ರಗಳನ್ನೂ ಹೂಡಿದರು. ಭೇರಿಗಳನ್ನು ಬಾರಿಸುತ್ತಿರಲು ರಾಕ್ಷಸಸೈನ್ಯವು ಆಕ್ರಮಣಕ್ಕೆ ಸಿದ್ಧವಾಯಿತು. ಇದನ್ನು ಕೇಳಿದ ರಾವಣನು ತನ್ನ ಮಕ್ಕಳೊಡನೆ ಅರಮನೆಯಿಂದ ಹೊರಟನು. ೩೧. ವೀರ ಮಹೋದರನನ್ನು ಕರೆದು ಲಂಕಾನಗರದ ದಕ್ಷಿಣದಿಕ್ಕನ್ನು ಅವನಿಗೆ ಒಪ್ಪಿಸಿ, ಪಶ್ಚಿಮದಿಕ್ಕಿಗೆ ಇಂದ್ರಜಿತುವನ್ನು ನೇಮಿಸಿ, ಪೂರ್ವದಿಕ್ಕಿಗೆ ಪ್ರಹಸ್ತನನ್ನು ಹುರಿದುಂಬಿಸಿ ನಿಲ್ಲಿಸಿ

ಬರುತಲೇ ಮುತ್ತಿಗೆಯನಿಕ್ಕಿದ । ರೆರಡು ಪ್ಯೆಯಲಿ ಬೀದಿವರಿದೊಡ
ಮುರಿದು ಪೆಡ್ಡೈಸಿದರು ಸುರಪರ್ವತವನಂಬುಧಿಯು
ಉರವಣಿಸುವವೊಲೇನನೆಂಬೆನು । ತಿರುಗಿಬರೆ ಶತಯೋಜನದ ವಿ
ಸ್ತರದ ವಳಯದಲಿದ್ದುದದ್ಭುತರಸದ ಲಹರಿಯಲಿ ೩೨

ಇರಿಸಿದನು ಸುಯ್ಯಾನಕಮರೇ । ಶ್ವರನ ಮೊಮ್ಮನ ಕರೆದು ತೆಂಕಲು
ಹರಿಸುತನ ಪಡುವಲು ಪುರಂದರದೆಸೆಗೆ ಪಾವಕನ
ವರಕುಮಾರನನಿರಿಸಿ ತಾನು । ತ್ತರದದಿಕ್ಕಗೆ ರಾಯದಳ ಸಹಿ
ತರಿಯುಮನ ನಂದನನು ನಿಂದನು ಸಮರಭಾರದಲಿ ೩೩

ಉತ್ತರದಿಕ್ಕಿನ ಗೋಪುರಕ್ಕೆ ಬಂದು ದಶಕಂಠನು ಸಭೆಯನ್ನು ನಡೆಸಿದನು. ೩೨. ಬರುತ್ತಲೇ ಕಪಿಸೈನ್ಯವು ಎರಡು ಕಡೆಯಿಂದಲೂ ಮುನ್ನುಗ್ಗಿ ಭಂಗಿಸುತ್ತ ಮೇರು ಪರ್ವತವನ್ನು ಸಮುದ್ರವು ಮುತ್ತುವಂತೆ ಸುತ್ತುವರಿಯಿತು. ಏನೆಂದು ವರ್ಣಿಸಲಿ, ಸೈನ್ಯವು ಅದ್ಭುತವಾಗಿ ನೂರುಯೋಜನ ವಿಸ್ತಾರವಾದ ಪ್ರದೇಶವನ್ನು ಆವರಿಸಿತು. ೩೩. ಇಂದ್ರನ ಮೊಮ್ಮಗ ಅಂಗದನನ್ನು ಕರೆದು ದಕ್ಷಿಣದಿಕ್ಕಿನ ರಕ್ಷಣೆಗೆ ನಿಲ್ಲಿಸಿದನು. ವಾಯುಸುತನನ್ನು ಪಶ್ಚಿಮದಿಕ್ಕಿಗೂ ಅಗ್ನಿಕುಮಾರ ನೀಲನನ್ನು ಪೂರ್ವದಿಕ್ಕಿಗೂ ಇರಿಸಿ ಸೂರ್ಯಪುತ್ರ ಸುಗ್ರೀವನು ರಾಜನ ಸೈನ್ಯಸಮೇತ ಉತ್ತರದಿಕ್ಕಿನ ಯುದ್ಧಕಾರ್ಯಭಾರ ವನ್ನು ಹೊತ್ತನು.

# ಎಂಟನೆಯ ಸಂಧಿ

ಸೂಚನೆ॥ ರಾಯ ರಘುರಾಜೇಂದ್ರ ಸೇನಾ । ನಾಯಕರ ಬಲಸಹಿತ ರಕ್ಕಸ
ರಾಯ ದಶಕಂಠಂಗೆ ಶುಕ ವಿಸ್ತರಿಸಿ ತೋರಿಸಿದ

ಇತ್ತನೋಲಗವನು ಬಲಾರಿಗೆ । ಹತ್ತುಮುಡಿ ತೇಜದಲಿ ಖಳನೆಂ
ಬತ್ತು ಕೋಟಿ ಕಿರೀಟವರ್ಧನರುಗಳ ಗದಣದಲಿ
ಮೃತ್ಯುಜವನಿವರುಗಳ ಬಗೆಯದ । ಚಿತ್ತದುನ್ಮದದುಬ್ಬರದ ಸಂ
ಪತ್ತಿನಲಿ ಸುರಯುವತಿಯರ ಚಾಮರದ ಚಲನೆಯಲಿ ೧

ಕರೆದು ಶುಕನನು ಕೇಳಿದನು ಮೋ । ಹರದ ಮೊದಲಿಗ ನಾಯಕರದಾ
ರರಸನಾರೀ ಬಲಕೆ ಬಲ್ಲಿದರಾರು ಬವರದಲಿ
ಧುರವ ಜಯಿಸಲು ಬಂದ ಬಿರುದಿನ । ನರಪತಿಯದಾರೆಂಬುದನು ವಿ
ಸ್ತರಿಸಿ ಹೇಳೆನಲೆದ್ದು ಶುಕನಿಂತೆಂದನಸುರಂಗೆ ೨

ಅರಸ ನೋಡಾದಡೆ ರಘುಕ್ಷಿತಿ । ವರನ ದಳಪತಿಯುವನು ವೈಶ್ವಾ
ನರನ ಮಗನವ ನೀಲನೆಂಬಭಿಧಾನವಾ ಕಪಿಗೆ
ಹರಿಬಲದ ಮುಂಭಾಗದಲಿ ಸಂ । ಗರಕೆ ನಿಂದವ ನಮ್ಮ ನಗರವ
ನೊರೆಸಿ ಪೋದುವ ಮೋಡಿ ಮೋಜಿಯೊಳವನಲದೆಯೊಂದ ೩

ಸೂಚನೆ॥ ರಾಜಾರಾಮನ ಸೇನಾನಾಯಕರನ್ನು ಅವರವರ ಸೈನ್ಯಸಮೇತವಾಗಿ ಶುಕನು ರಾಕ್ಷಸರಾಜ ರಾವಣನಿಗೆ ವಿವರವಾಗಿ ತೋರಿಸಿದನು. ೧. ಇಂದ್ರನಿಗೆ ಹತ್ತರಷ್ಟು ತೇಜಸ್ಸಿನಿಂದ ಎಂಬತ್ತುಕೋಟಿ ಸಾಮಂತರಾಜರುಗಳ ನಡುವೆ ಯಮ ಮೃತ್ಯುಗಳನ್ನು ಲಕ್ಷಿಸದ ರಾವಣನು ದೇವತಾಸ್ತ್ರೀಯರು ಚಾಮರವನ್ನಿಕ್ಕುತ್ತಿರಲು ಅತಿಶಯ ದರ್ಪದಿಂದ ರಾಜಸಭೆಯನ್ನು ನಡೆಸಿದನು. ೨. "ಸೈನ್ಯದ ಪ್ರಧಾನ ನಾಯಕರು ಯಾರು, ಈ ಸೈನ್ಯದ ಪ್ರಭು ಯಾರು, ಯುದ್ಧದಲ್ಲಿ ಸಮರ್ಥರು ಯಾರು, ಯುದ್ಧವನ್ನು ಗೆಲ್ಲಲು ಬಂದ ಹೆಸರಾಂತ ಭೂಪತಿ ಯಾರು ? ಎಂಬುದನ್ನು ಹೇಳು" ಎಂದು ರಾವಣನು ಶುಕನನ್ನು ಕರೆದು ಕೇಳಲು ಶುಕನು ರಾವಣನಿಗೆ ಎಲ್ಲವನ್ನೂ ವಿವರವಾಗಿ ಹೇಳಿದನು. ೩. "ಆದರೆ ರಾಜನೇ ನೋಡು, ರಘುಭೂಪತಿಯ ದಳಪತಿ ಅವನು ಅಗ್ನಿಯ ಮಗ. ನೀಲನೆಂದು ಆ ಕಪಿಯ ಹೆಸರು. ಕಪಿಸೈನ್ಯದ ಮುಂದುಗಡೆ ಯಲ್ಲಿ ಕದನಕ್ಕೆ ನಿಂತಿರುವವನಲ್ಲಿ ನಮ್ಮ ಲಂಕಾನಗರವನ್ನು ಸುಟ್ಟು ನಾಶಮಾಡಿದವನ

ನಿಲವ ನೋಡವನಂಜನಾದ್ರಿಯ । ನಿಲವಿಗೊಮ್ಮೊಳ ಮಿಗಿಲು ನೋಡವ
ನಳವದೆಂತುಟೊ ಕಯ್ಯಲದೆ ಗಿರಿ ಹತ್ತುಯೋಜನದ
ಕಲಹವಿವನೊಳು ಜಯಿಸುವುದು ಹುಸಿ । ಖಳಶಿರೋಮಣಿ ಚಿತ್ತವಿಸು ಹೆಡ
ತಲೆಯ ಮೃತ್ಯುವೊ ಕಪಿಯೊ ನೀನೇ ನೋಡಿಕೋಯೆಂದ ೪

ಕಾಲನಳುಕುವನವಗೆ ಕಲ್ಪಕ । ಪಾಲಿ ಹಣುಗುವನವಗೆ ವಿಕ್ಕಿನ
ತೋಳುವಲರಿದುರಿನಲಿ ನಿಲುವರ ಕಾಣೆನಾಜಿಯಲಿ
ಆಳುತನವುಳ್ಳವನೆ ನೋಡೆರ । ಡಾಲಿ ನಮ್ಮವು ಜೀಯ ಕಥೆಗಳ
ಕೇಳಿಕೆಯ ಮಾತಲ್ಲ ಮುಚಿಯೇಕರಸ ನೋಡೆಂದ ೫

ಅವನ ದಳವದೆ ನೋಡು ಗರಳಾ । ರ್ಣವದ ಗಾಡಿಯ ಮೋಡಿಯಲಿ ಸಾ
ಕಿವನ ಬಿಡು ನೋಡತ್ತ ರಾಕ್ಷಸವನದವಾನಳನ
ಭುವನನಿಧಿ ವಡಬಾನಳನ ರಿಪು । ನಿವಹಕಾಲಾನಳನ ರಘುಸಂ
ಭವನ ಮೆಚ್ಚಿನ ನಳನ ವಾನರರೂಪಿನತಿಬಲನ ೬

ಹೇಳಲಚ್ಚರಿಯಿವನ ಸಾಹಸ । ದೇಳಿಗೆಯನಂಬುಧಿಯ ನೆತ್ತಿಯ
ಮೇಲೆ ಬೆಟ್ಟವನೊಟ್ಟಿ ನಡೆಸಿದನವನಿಪಾಲಕನ
ಪಾಳಯವನಿದನಿವನವೂಲು ಕ । ಟ್ಟಾಳದಾರೈ ಲೋಕದಲಿ ರಣ
ದೂಳಿಗದೊಳಿನ್ನೇನ ನೆನೆವನೊ ನೋಡಿಕೋಯೆಂದ ೭

ಮುಖಲಕ್ಷಣವಿದೆ" ಎಂದ ಶುಕ. ೪. "ಅವನ ನಿಲುವನ್ನು ನೋಡು, ಅಂಜನಾದ್ರಿಗಿಂತ ಒಂದು ಮೊಳ ಹೆಚ್ಚು. ಅವನ ಸಾಮರ್ಥ್ಯವೆಷ್ಟೆಂಬುದನ್ನು ನೋಡು, ಅವನ ಕೈಯಲ್ಲಿ ಹತ್ತು ಯೋಜನ ವಿಸ್ತಾರದ ಬೆಟ್ಟವಿದೆ. ರಾಕ್ಷಸಶ್ರೇಷ್ಠನೇ ಕೇಳು, ಇವನೊಡನೆ ಯುದ್ಧದಲ್ಲಿ ಗೆಲ್ಲುವುದು ಸುಳ್ಳು. ಹೆಡತಲೆಯ ಮೃತ್ಯುವೋ ಕಪಿಯೋ ಇವನು, ನೀನೇ ನೋಡಿಕೋ" ಎಂದ ಶುಕ. ೫. "ಯಮನು ಅವನನ್ನು ಕಂಡು ಅಂಜುವನು. ಪ್ರಳಯಶಿವನು ಅವನನ್ನು ಕಂಡು ಅಡಗಿಕೊಳ್ಳುವನು. ಯುದ್ಧದಲ್ಲಿ ಅವನನ್ನೆದುರಿಸಿ ನಿಲ್ಲುವ ಉಳಿದ ಬಲಶಾಲಿಗಳನ್ನು ನಾನು ಕಾಣೆ. ಅವನ ಆಳುತನವನ್ನು ನೋಡಲು ನಮ್ಮ ಎರಡು ಕಣ್ಣುಗಳು ಸಾಕೆ? ಸ್ವಾಮಿ, ಇದು ಕಥೆಗಳಲ್ಲಿ ಕೇಳಿದ ಮಾತಲ್ಲ, ಮುಚ್ಚುಮರೆಯೇನಿದರಲ್ಲಿ, ನೀನೇ ನೋಡು" ಎಂದು ನುಡಿದ ಶುಕ. ೬. "ವಿಷಸಮುದ್ರದ ಬೆಡಗಿನಂದದಲ್ಲಿ ಅವನ ಸೈನ್ಯವಿದೆ ನೋಡು. ಸಾಕು, ಇವನನ್ನು ಬಿಡು. ರಾಕ್ಷಸರ ಅರಣ್ಯಕ್ಕೆ ಕಾಡುಕಿಚ್ಚಾದ, ಸಾಗರಕ್ಕೆ ಬಾಡಬಾಗ್ನಿಯಾದ, ಶತ್ರುಸಮೂಹಕ್ಕೆ ಪ್ರಳಯಾಗ್ನಿಯಾದ ನಳನನ್ನು ನೋಡು. ಅತುಳಬಲಶಾಲಿಯಾದ ವಾನರರೂಪಿನ ನಳನು ರಾಮನಿಗೆ ತುಂಬ ನೆಚ್ಚಿನವನಾಗಿದ್ದಾನೆ. ೭. ಇವನ ಅತಿಶಯ ಸಾಹಸವು ಆಶ್ಚರ್ಯಕಾರಕವಾದುದು. ಸಮುದ್ರದ ತಲೆಯ ಮೇಲೆ ಬೆಟ್ಟವನ್ನು ರಾಶಿಹಾಕಿ ಕಟ್ಟಿದ ಸೇತುವೆಯ ಮೇಲೆ ರಾಮನ ಸೈನ್ಯವನ್ನು ದಾಟಿಸಿದನು. ಇವನಂಥ ಗಟ್ಟಿಗರಾರಿದ್ದಾರೆ ಜಗತ್ತಿನಲ್ಲಿ! ಯುದ್ಧದಲ್ಲಿ ಇನ್ನೆಷ್ಟು ಪರಾಕ್ರಮ ತೋರುವನೋ,

ಎರಡು ಯೋಜನದುದಿತದಲಿ ಹ । ನ್ನೆರಡು ಯೋಜನದುದ್ದದಲಿ ಗಿರಿ
ಪರಿಘದವೊಲದ ಧರಿಸಿ ಹೆಗಲೊಳಗೆರಡು ಕಂಕುಳಲಿ
ಎರಡು ಯೋಜನದೊಂದು ಕೆಚ್ಚಿನ । ಮರದ ಬಾಲದಲೈದು ಯೋಜನ
ಗಿರಿ ಸಹಿತ ತೋರ್ಪಾತ ನಳನತಿಬಲನು ನೋಡೆಂದ ೮

ಸಾಕಿವನ ನೋಡದಿರು ನೋಡು ವ । ನೌಕಸರವಲ್ಲಭನ ತನುಜನ
ಪಾಕಶಾಸನನಂದನನ ನಂದನನನಂಗದನ
ಈ ಕುಮಾರನ ಮೇಲೆ ಘನ ಲೋ । ಕೈಕನಾಥನ ಮೋಹವಿವನ ಸ
ಮಾಕಳಾನುವ ಭಟರ ನಿನ್ನಲಿ ಕಾಣೆ ನಾನೆಂದ ೯

ಉಗುರು ಸೋಂಕಿನಲಬುಜಜಾಂಡದ । ಬಿಗುಹು ಬಿಡುವುದು ತಳ ವಿಘಾತಿಗೆ
ಜಗತಿ ಜರಿವುದು ಜಾನುಹತಿಗಡಿಮಗುಚುವುದು ಮೇರು
ಹೊಗಳಲೇನಿವನಯ್ಯನೀ ತ್ರೈ । ಜಗಕೆ ವೀರನಲಾ ವಿವೇಕಿಸು
ತೆಗೆದುಹೋದಭಿಮಾನವನು ಪೂರ್ವದಲಿ ನೀನೆಂದ ೧೦

ರಜತಶೈಲದವೋಲು ಕಯ್ಯಲಿ । ಸೃಜಿಸುತಿದೆ ಗಿರಿ ಸಂಚಯಂಗಳ
ನಜನಲೋಕಕೆ ಬಾಲ ನಿಲುಕುತಿದೇ ನಿರೀಕ್ಷಿಸಲು
ಗಜ ತುಳಿದ ಬಾಳೆಯುವೊಲೀ ಪುರ । ವಜಗಿಜಿಯ ಮಾಡುವನು ಪಾಪವ
ಭಜಿಸಿ ಕೆಟ್ಟೆಯಲಾ ದಶಾನನ ನೋಡು ನೀನೆಂದ ೧೧

ನೀನೇ ನೋಡಿಕೋ" ಎಂದ ಶುಕ. ೮. "ಎರಡು ಯೋಜನ ಅಗಲ ಹನ್ನೆರಡು ಯೋಜನ ಉದ್ದದ ಬೆಟ್ಟವನ್ನು ಪರಿಘಾಯುಧದಂತೆ ಹೆಗಲಿನಲ್ಲಿ ಹೊತ್ತುಕೊಂಡು, ಎರಡು ಕಂಕುಳುಗಳಲ್ಲೂ ಎರಡು ಯೋಜನದ ಹೆಮ್ಮರಗಳನ್ನು ಇರುಕಿಕೊಂಡು, ಬಾಲದಲ್ಲಿ ಐದು ಯೋಜನದ ಬೆಟ್ಟವನ್ನು ಸುತ್ತಿಕೊಂಡು ಇರುವವನು ಅತಿಬಲನಾದ ನಳ, ಅವನನ್ನು ನೋಡು" ಎಂದ ಶುಕ. ೯. "ಇವನನ್ನು ನೋಡಿದ್ದು ಸಾಕು. ಇಲ್ಲಿ ನೋಡು, ಕಪಿಗಳೊಡೆಯ ಸುಗ್ರೀವನ ಅಣ್ಣ ವಾಲಿಯ ಮೊಮ್ಮಗ ಅಂಗದನನ್ನು. ಈ ಅಂಗದಕುಮಾರನ ಮೇಲೆ ಲೋಕದೊಡೆಯ ರಾಮನಿಗೆ ಅಕ್ಕರೆ. ಯುದ್ಧದಲ್ಲಿ ಇವನನ್ನು ಎದುರಿಸುವ ವೀರರನ್ನು ನಿನ್ನ ಬಳಿ ನಾನು ಕಾಣೆ" ಎಂದ. ೧೦. ಅವನ ಉಗುರು ತಗುಲಿದರೆ ಸಾಕು ಬ್ರಹ್ಮಾಂಡ ಬಿರುಕು ಬಿಡುವುದು. ಅವನ ಪಾದದ ಏಟಿಗೆ ಜಗತ್ತು ಜರುಗುವುದು. ಮೊಳಕಾಲಿನಿಂದ ಹೊಡೆದರೆ ಮೇರುಪರ್ವತವು ತಲೆಕೆಳಕಾಗುವುದು! ಇವನನ್ನು ಏನು ಹೊಗಳುವುದು! ಇವನ ತಂದೆಯು ಮೂರುಲೋಕಗಳ ವೀರನಲ್ಲವೇ? ಹಿಂದೆ ವಾಲಿಯಿಂದ ನಿನ್ನ ಗರ್ವಭಂಗವಾದುದನ್ನು ವಿಚಾರಮಾಡು" ಎಂದ ಶುಕ. ೧೧. "ಬೆಳ್ಳಿಬೆಟ್ಟದಂತೆ ಕೈಯಲ್ಲಿ ಪರ್ವತವು ಮೆರೆಯುತ್ತಿದೆ. ಬ್ರಹ್ಮಲೋಕಕ್ಕೆ ಬಾಲ ಎಟುಕುತ್ತಿದೆ. ಈ ಲಂಕಾನಗರವನ್ನು ಇವನು ಆನೆ ತುಳಿದ ಬಾಳೆಯ ತೋಟದಂತೆ ಅಜಗಿಜಿ ಮಾಡುವನು. ಪಾಪಕಾರ್ಯಕ್ಕೆ ಮನಸ್ಸುಕೊಟ್ಟು ಕೆಟ್ಟೆಯಲ್ಲಾ, ದಶಮುಖ,

ಉಸುರಲೇನಿವನಗ್ಗಳದ ಸಾ । ಹಸವನಿದ ನೀ ಕಾಬೆ ಪೋಹಿದ
ವಿಷಮ ರಣದಲಿ ಹೊಗಳಲೇನಕ್ಕರಿಗನೇ ತಾನು
ಅಸುರಪತಿ ಕೇಳಿವನ ಬಿಡು ಕಲಿ । ವೃಷಭನೆಂಬ ಕಪೀಶ್ವರನನೀ
ಕ್ಷಿಸು ವೃಷಧ್ವಜನಂದದಲಿ ತೋರ್ಪವನ ನೀನೆಂದ ೧೨

ಹರನ ಸಭೆಯೊಳಗಿವನನೇಡಿಸಿ । ಹುರುಡುಗೆಡಿಸಿದೆ ಗಡ ಬಳಿಕ್ಕವ
ತರುಚರರ ರೂಪಿನಲಿ ಕೈಸೆರವಾಗಿ ಬಂದ ಗಡ
ಮೊರೆವುತಹನವ ನಿನ್ನ ಮೇಲಣ । ಹರಿಬದಲಿ ಜಗದಳಿವಿನಗ್ರದ
ಹರನವೊಲು ಹರಗಣದವೊಲು ಬಲವವನೊಳದೆಯೆಂದ ೧೩

ಚಲಿಸದೀಕ್ಷಿಸು ಮುಂದೆ ಕದನದ । ಕಲಿಯು ಕಲಿಗಳ ಛಲಿಯು ಛಲಿಗಳ
ಬಲಿಯು ಬಾಹಾದಂಡ ಚಂಡಮರೀಚಿ ಶತಬಲಿಯು
ಲಲನೆಯನು ನೀನೊಯ್ದುದನೆಂದಜಿ । ಸಲು ಕುಬೇರನ ನಗರವನು ಹೊ
ಕ್ಕಲಸದಜಿಸಿದ ಭುಜಬಲಾನ್ವಿತನೀಗಲವನೆಂದ ೧೪

ಅವನ ಬಿಡು ನೋಡಿತ್ತ ಸೀತಾ । ಯುವತಿಯನು ನೀನೊಯ್ದುದಜಿಸಲು
ಭುವನವನು ಶೋಧಿಸುತ ವರಕೈಲಾಸಪರ್ವತವ
ಗವಲಿಕಾಜಿರ ಗಲಿದು ಗೌರೀ । ಧವಗೆ ಮೂಗುಬ್ಬಸವ ಮಾಡಿದ
ಭುವನ ಮೂಜಿಜ ವೀರನೀತನ ನೋಡು ನೀನೆಂದ ೧೫

ನೋಡು ನೀನು" ಎಂದ ಶುಕ. ೧೨. "ಇವನ ಮಹಾಸಾಹಸವನ್ನು ನಾನು ಏನು ಹೇಳಲಿ. ಭಯಂಕರ ಯುದ್ಧದ ಕಾದಾಟದಲ್ಲಿ ಇದನ್ನು ನೀನೇ ನೋಡುವೆ. ಹೊಗಳಲು ನಾನೇನು ವಿದ್ವಾಂಸನೇ ? ರಾಕ್ಷಸರಾಜನೇ ಇವನು ಹಾಗಿರಲಿ, ಇತ್ತ ಶಿವನಂತೆ ಕಾಣಿಸುತ್ತಿರುವ ವೀರ ವೃಷಭನೆಂಬ ಕಪಿನಾಯಕನನ್ನು ನೋಡು" ಎಂದ ಶುಕ. ೧೩. "ಶಿವನ ಸಭೆಯಲ್ಲಿ ಇವನನ್ನು ನಿಂದಿಸಿ ಅವನ ಸತ್ವಗುಂದಿಸಿದೆ. ಅನಂತರ ಅವನು ವಾನರರೂಪಿನಲ್ಲಿ ಸಹಾಯವಾಗಿ ಬಂದಿದ್ದಾನೆ. ನಿನ್ನ ಮೇಲೆ ಯುದ್ಧಕ್ಕೆ ಮೊರೆಯುತ್ತಿದ್ದಾನೆ. ಲಯಕಾರಕನಾದ ಶಿವನಂತೆ, ಶಿವಗಣದಂತೆ ಅವನ ಬಳಿ ಸೈನ್ಯವಿದೆ" ಎಂದ ಶುಕ. ೧೪. "ರಣಗಲಿಗಳಲ್ಲಿ ಕಲಿಯಾದ, ಹಟಗಾರರಲ್ಲಿ ಹಟಗಾರನಾದ, ಶೂರರ ತೋಳ್ಬಲಗಳ ಸೂರ್ಯನಾದ ಶತಬಲಿಯನ್ನು ಅಲ್ಲಾಡದೆ ನೋಡು. ನೀನು ಸೀತೆಯನ್ನು ಕದ್ದುಕೊಂಡು ಬಂದುದನ್ನು ತಿಳಿದು ಅವಳನ್ನು ಹುಡುಕಲು ಕುಬೇರನ ಪಟ್ಟಣವನ್ನು ಪ್ರವೇಶಿಸಿ ದಣಿವನ್ನು ಲಕ್ಷಿಸದೆ ಹುಡುಕಿದ ಮಹಾಬಲಶಾಲಿ ಅವನು" ಎಂದ ಶುಕ. ೧೫. "ಅವನನ್ನು ಬಿಟ್ಟು ಇತ್ತ ನೋಡು. ಸೀತೆಯನ್ನು ನೀನು ಕದ್ದೊಯ್ದ ಮೇಲೆ ಲೋಕದಲ್ಲೆಲ್ಲ ಹುಡುಕುತ್ತ ಬಂದು ಕೈಲಾಸಪರ್ವತವನ್ನು ಶೋಧಿಸಿ ಯಮದೂತರನ್ನು ಗೆದ್ದು ಶಿವನಿಗೆ ತೊಂದರೆ ಕೊಟ್ಟ ತ್ರಿಲೋಕವೀರನಿವನು,

ಜವನ ನೀ ದಿಗ್ವಿಜಯದಲಿ ಪರಿ । ಭವಿಸಿ ನೋಯಿಸಿ ಗೆಲಿದೆ ಗಡ ಹಂ
ಗವನಲಿದಿರ್ದ ರಾಘವೇಂದ್ರನ ರಾಜಕಾರಿಯಕೆ
ಗವಯ ಗಜನು ಗವಾಕ್ಷ ಶರಭ । ಪ್ರವರ ರಣದಲಿ ಗಂಧಮಾದನ
ರವಣಿ ರಣವಾಯ್ತಂತಕಂಗವರೀಗ ನೋಡೆಂದ ೧೬

ಮಿತ್ತು ತಾನೀ ರಾಮನುದ್ಭವ । ದತ್ತ ಜನಿಸಿದಳಸುರರಸುಗಳ
ತುತ್ತಲೋಸುಗ ಸುಮುಖ ದುರ್ಮುಖರೆಂಬ ಹೆಸರಿನಲಿ
ಹೊತ್ತುತದೆ ಕೋಪಾಗ್ನಿ ವಿಲಯದ । ಕೃತ್ತಿವಾಸನ ಖತಿಯವೊಲು ರಣ
ದುತ್ತರಣ ನಿನಗಹುದು ಲೋಕಕೆ ಚಿತ್ರತರವೆಂದ ೧೭

ಅರಸ ಚಿತ್ತೈಸಧಿಕಕೋಪವ । ಧರಿಸದಿರು ಮನದಲಿ ರಘುಕ್ಷಿತಿ
ವರನ ಕಟಕದ ಮಾತು ಹುಸಿಯೋ ನಿಜವೊ ನಾನರಿಯೆ
ಧುರದೊಳಳಿದವರಿವನ ಕರಸಂ । ಸ್ಪರುಶನದೊಳೇಳುವರು ಗಡ ಸರ
ಸಿರುಹಭವಗಿದು ತೀರುವುದೆ ಹೇಳರಸ ನೀನೆಂದ ೧೮

ವಾನರರಲಿ ಸುಷೇಣನೆಂಬಭಿ । ಧಾನವಿವಗಿವ ಪೂರ್ವದಲಿ ಸುರ
ಸೇನೆಯನು ಸಂಜೀವಿನಿಯೊಳೆಬ್ಬಿಸಿದ ವೈದ್ಯ ಗಡ
ನೀನವನ ನೋಡಾ ತ್ರಿಯಂಬಕ । ನಾನಿಕೆಯ ಭಟನಹನೆ ಮುಂದಣ
ಸೇನೆಯಲಿ ನೋಡರಿಭಯಂಕರ ಕಪಿಪಿತಾಮಹನ ೧೯

ಇವನನ್ನು ನೋಡು" ಎಂದ ಶುಕ. ೧೬. "ಯಮನನ್ನು ನೀನು ದಿಗ್ವಿಜಯದ ಸಮಯದಲ್ಲಿ ಸೋಲಿಸಿ ನೋವುಂಟುಮಾಡಿ ಗೆದ್ದೆಯಲ್ಲವೇ. ಈ ರಾಮನ ರಾಜಕಾರ್ಯದ ಋಣವನ್ನು ಹೊತ್ತಿರುವ ಗವಯ, ಗಜ, ಗವಾಕ್ಷ, ಶರಭ, ಗಂಧಮಾದನ ಮೊದಲಾದವರು ಯಮನೊಡನೆ ಯುದ್ಧಮಾಡಿದರು. ೧೭. ರಾಮನ ಅವತಾರವಾದ ನಂತರ ಸುಮುಖ ದುರ್ಮುಖರೆಂಬ ಹೆಸರಿನಿಂದ ಮೃತ್ಯುವು ರಾಕ್ಷಸರ ಪ್ರಾಣಗಳನ್ನು ಕಬಳಿಸುವ ಸಲುವಾಗಿ ಹುಟ್ಟಿದಳು. ಪ್ರಳಯರುದ್ರನ ಕ್ರೋಧದಂತೆ ಕೋಪದ ಬೆಂಕಿಯು ಹತ್ತಿಕೊಳ್ಳುತ್ತಿದೆ, ಯುದ್ಧವನ್ನು ನೀನು ಹೇಗೆ ಗೆಲ್ಲುತ್ತೀಯೆ ಎಂಬುದು ಆಶ್ಚರ್ಯಕರ" ಎಂದ ಶುಕ. ೧೮. "ರಾಜನೇ ಕೇಳು, ಅತಿಯಾಗಿ ಮನಸ್ಸಿನಲ್ಲಿ ಕೋಪಗೊಳ್ಳಬೇಡ. ರಘುರಾಮನ ಸೈನ್ಯದ ಮಾತು ಸುಳ್ಳೋ ನಿಜವೋ ನಾನು ತಿಳಿಯೆ. ಇವನೊಡನೆ ಯುದ್ಧಮಾಡಿ ಮಡಿದವರು ಇವನ ಕೈಸೋಕಿನಿಂದ ಪುನಃ ಜೀವಗೊಳ್ಳುವರು. ಬ್ರಹ್ಮನಿಗೆ ಕೂಡ ಇದು ಸಾಧ್ಯವೇ ಕೇಳು ಅಸುರರಾಜ" ಎಂದ. ೧೯. "ವಾನರರಲ್ಲಿ ಸುಷೇಣನೆಂಬುವನಿವನು. ಹಿಂದೆ ದೇವತೆಗಳ ಸೈನ್ಯವನ್ನು ಸಂಜೀವಿನಿಯಿಂದ ಬದುಕಿಸಿದ ವೈದ್ಯನು. ನೀನು ಅವನನ್ನುನೋಡು, ಮುಕ್ಕಣ್ಣನನ್ನು ಎದುರಿಸುವ ವೀರನಾಗಿದ್ದಾನೆ. ಮುಂದಿನ ಸೈನ್ಯದಲ್ಲಿ ಶತ್ರುಭಯಂಕರನಾದ ವಾನರಬ್ರಹ್ಮ ಜಾಂಬ

ನುಡಿದ ಮಾತಿಗೆ ಜೀಯ ಖಾತಿಯ । ಹಿಡಿಯದಿರು ಕಂಡೆನಿಕೆಯಿದು ಕಾ
ವಡೆಯ ಕಾಣೆನು ರಾಮ ಮುನಿದರೆ ಸುಪ್ರಸಿದ್ಧವಿದು
ನುಡಿವುದನುಚಿತವೆನಗೆ ನೋಡಾ । ದಡೆ ನಿಶಾಚರರಾಯ ಬೆಱಗಿನ
ಬೆಡಗ ಚಿತ್ತೈಸಜನ ಚೊಚ್ಚಲಮಗನ ನೀನೆಂದ ೨೦

ಇವನ ಜನನದ ಮೇಲೆ ಜನಿಸಿದು । ದವನಿ ಗಡ ಬಳಿಕಾದವೀ ತ್ರೈ
ಭುವನ ಗಡ ಸಲೆ ಜಗದೊಳೀತಗೆ ಹಿರಿಯರಿಲ್ಲ ಗಡ
ಶಿವನ ಮದುವೆಯಲೀತ ಜವ್ವನ । ದವನು ಗಡ ಚಿತ್ತೈಸು ವಿಲಯದ
ಜವನ ಜೂಜಿಗೆ ಸಿಕ್ಕ ಗಡ ಲೇಸಾಗಿ ನೋಡೆಂದ ೨೧

ತರಣಿಯಲಿ ಮತ್ಸರಿಸಿ ಜವ್ವನ । ಜರಿಯದಂದೀ ಜಾಂಬವನು ಸುರ
ಗಿರಿಯ ಸುತ್ತಿದನೆರಡು ಬಾರಿಯಲೊಂದು ದಿವಸದಲಿ
ತರುಮೃಗಂಗಳಿಗೀ ಬಲುಹು ನಿ । ರ್ಜರರಿಗುಂಟೇ ಜೀಯ ಮೃತ್ಯುವ
ಸರಕು ಮಾಡದ ಸುಭಟರಹರೆಲೆ ನೋಡು ನೀನೆಂದ ೨೨

ತೋಱಲಮ್ಮೆನು ರಾಮನೋಲೆಯ । ಕಾಱನೊಬ್ಬನ ನಿನಗೆ ನಿನ್ನೇ
ಳ್ನೂಱು ಮಕ್ಕಳನಕ್ಷಮೊದಲಾದತುಳ ರಕ್ಕಸರ
ಏಱಿಸಿದನಂತಕನ ದುರ್ಗವ । ನೂಱಿಸಿದನುರಿಯಿಂದ ನಗರವ
ನಾಱಿಸಿದನವನಿಜೆಯ ಶೋಕಾನಲನನವನೆಂದ ೨೩

ವಂತನಿದ್ದಾನೆ. ೨೦. ನಾನು ಹೇಳುವ ಮಾತಿಗೆ ಕೋಪಗೊಳ್ಳಬೇಡ ಅಸುರರಾಜ, ನಾನು ಕಂಡ ವಿಚಾರ ಇದು. ರಾಮನು ಕೋಪಿಸಿಕೊಂಡರೆ ಕಾಪಾಡುವವರನ್ನು ಕಾಣೆ, ಇದು ಸುಪ್ರಸಿದ್ಧ. ನಾನು ಹೀಗೆ ಹೇಳುವುದು ಯೋಗ್ಯವಲ್ಲ. ಆದರೆ ಬ್ರಹ್ಮನ ಚೊಚ್ಚಲ ಮಗನ ಸೋಜಿಗದ ಸಂಗತಿಯನ್ನು ಕೇಳು" ಎಂದ. ೨೧. "ಇವನು ಹುಟ್ಟಿದ ಅನಂತರ ಭೂಮಿ ಹುಟ್ಟಿತು. ಆಮೇಲೆ ಈ ಮೂರು ಲೋಕಗಳು ಸೃಷ್ಟಿಯಾದವು. ಜಗತ್ತಿನಲ್ಲಿ ಇವನಿಗಿಂತ ಹಿರಿಯರಿಲ್ಲ. ಶಿವನ ಮದುವೆಯಲ್ಲಿ ಈತನು ಹರೆಯದವನು. ಇವನು ಪ್ರಳಯದ ಯಮನ ಜೂಜಿಗೆ ಸಿಕ್ಕಿಕೊಳ್ಳುವವನಲ್ಲ. ಚೆನ್ನಾಗಿ ತಿಳಿದು ನೋಡು" ಎಂದ. ೨೨. "ಹರೆಯ ಇನ್ನೂ ಇರುವಾಗ ಸೂರ್ಯನೊಡನೆ ಸ್ಪರ್ಧಿಸಿ ಈ ಜಾಂಬವನು ಒಂದು ದಿವಸದಲ್ಲಿ ಎರಡು ಬಾರಿ ಮೇರುಪರ್ವತವನ್ನು ಬಳಸಿದನು. ಕಪಿಗಳ ಈ ಸಾಮರ್ಥ್ಯವು ದೇವತೆಗಳಿಗುಂಟೇ ? ಸ್ವಾಮಿ, ಮೃತ್ಯುವನ್ನು ಲಕ್ಷಿಸದ ವೀರರಿವರು, ನೀನು ನೋಡು" ಎಂದು ಹೇಳಿದ ರಾವಣನಿಗೆ. ೨೩. "ರಾಮನ ಕಿಂಕರನೊಬ್ಬನನ್ನು ನಿನಗೆ ತೋರಿಸಲು ಅಂಜುತ್ತೇನೆ. ಇವನು ಅಕ್ಷನೇ ಮೊದಲಾದ ನಿನ್ನ ಏಳುನೂರು ಜನ ವೀರ ರಾಕ್ಷಸಕುಮಾರರನ್ನು ಯಮನ ಕೋಟೆಗೆ ಕಳುಹಿಸಿಕೊಟ್ಟನು. ಲಂಕಾನಗರವನ್ನು ಬೆಂಕಿಯಿಂದ ಉರಿಸಿದನು. ಸೀತೆಯ ದುಃಖದ ಬೆಂಕಿಯನ್ನು ಆರಿಸಿದನು" ಎಂದ.

ನೆಱೆಯದವನ ಪರಾಕ್ರಮದ ಕ । ಟ್ಟಳೆತಕೆಮ್ಮ ಮೂಲಬಲವವ
ನುಱುಬೆಗಾನುವರಿಲ್ಲ ವೀರರು ದನುಜ ದಿವಿಜರಲಿ
ಬಱಿದೆ ಮದನನ ಗರುಡಿಯಂಬಿನ । ಗುಱಿಗೆ ತುತ್ತಹುದನುಚಿತವು ನಿನ
ಗಱುಹಿಸುವರಿಲ್ಲಕಟ ಕೆಟ್ಟೆ ನಿರರ್ಥ ನೀನೆಂದ ೨೪

ಪರ್ವಿಕೊಂಡಿದೆ ನಿನ್ನ ನಗರದ । ದೋರ್ವಳರ ಸದೆಬಡಿದೆನೆಂಬೀ
ಗರ್ವಲತೆ ಶಿರವಿಡಿದು ಪಾದಾಂಗುಷ್ಠ ಪರಿಯಂತ
ನಿರ್ವಹಿಸದಿವನಿರಲು ರಿಪುಜಯ । ಪರ್ವ ನಿನಗಿದು ತಥ್ಯ ಖಳ ನೀ
ಚರ್ವಣನ ನುಡಿಗೆಂದು ಗುಂಡಿತಗೊಳಲು ಬೇಡೆಂದ ೨೫

ಹನುಮನೆಂಬಭಿಧಾನವವಗವ । ನನುವರಕೆ ಶಿವನಂಜುವನು ಮಿ
ಕ್ಕಿನ ಸರೋಜಭವಾಮರಾಸುರ ನರ ಭುಜಂಗಮರ
ಮನದೊಳಾರನು ಹುಲ್ಲಕಡ್ಡಿಯ । ಕೊನೆಗೆ ಲೆಕ್ಕಿಸದಾತನಾತನ
ನೆಸಹಿಗಿಮ್ಮಿಗಿಲದಟರದೆ ನೋಡವರ ನೀನೆಂದ ೨೬

ನಿರುತವಿದು ನೋಡವನನಗ್ಗದ । ಶರಭನವನು ರುಮಣ್ವನವ ಕೇ
ಸರಿಯು ಮೈಂದ ದ್ವಿವಿದ ರಂಭ ರುಮಾದಿ ಭಟರವರು
ಅರಸ ನೋಡವ ದಧಿಮುಖನು ದು । ರ್ಧರುಶ ಪನಸ ಪ್ರಮುಖ ವಾನರ
ರರಸರದೆ ಕೋಟಾನುಕೋಟಿಗಳತ್ತ ನೋಡೆಂದ ೨೭

೨೪. "ಅವನ ಪರಾಕ್ರಮದ ಯುದ್ಧಕ್ಕೆ ನಮ್ಮ ಮೂಲಸೈನ್ಯವು ಸಾಲದು. ಅವನ ರಭಸದ ಮುತ್ತಿಗೆಯನ್ನು ಎದುರಿಸುವ ವೀರರು ಅಸುರರಲ್ಲಿ ಮತ್ತು ಸುರರಲ್ಲಿ ಇಲ್ಲ. ವ್ಯರ್ಥವಾಗಿ ಮನ್ಮಥವೀರನ ಬಾಣಕ್ಕೆ ಈಡಾಗಿ ಅದಕ್ಕೆ ತುತ್ತಾಗುವುದು ನಿನಗೆ ಉಚಿತವಲ್ಲ. ನಿನಗೆ ತಿಳುವಳಿಕೆ ಕೊಡುವವರಿಲ್ಲ, ಅಯ್ಯೋ ಸುಮ್ಮನೆ ಕೆಟ್ಟೆ ನೀನು" ಎಂದು ನುಡಿದ ರಾವಣನಿಗೆ. ೨೫. "ನಿನ್ನ ನಗರದ ತೋಳಬಲವುಳ್ಳ ವೀರರನ್ನು ಸದೆಬಡಿದೆ ಎಂಬ ಗರ್ವವು ಇವನ ತಲೆಯಿಂದ ಹಿಡಿದು ಕಾಲಿನ ಹೆಬ್ಬೆರಳಿನವರೆಗೆ ಹಬ್ಬಿಕೊಂಡಿದೆ. ಇವನು ಇರುವಲ್ಲಿ ಯುದ್ಧವನ್ನು ಗೆಲ್ಲುವ ಹಬ್ಬ ನಿನ್ನಿಂದ ಸಾಧ್ಯವಿಲ್ಲ. ನಿನಗೆ ರಾಕ್ಷಸ ರಾಜನೇ ಇದು ಸತ್ಯ. ಈ ಮಾತಾಳಿಯಾದ ನನ್ನ ಮಾತುಗಳಿಗೆ ನೀನು ಎದೆಗುಂದಬೇಡ" ಎಂದ. ೨೬. "ಅವನಿಗೆ ಹನುಮ ಎಂಬುದಾಗಿ ಹೆಸರು. ಅವನೊಡನೆ ಕದನಕ್ಕೆ ಶಿವನು ಹೆದರುವನು. ಬ್ರಹ್ಮ, ದೇವ, ದಾನವ, ಮಾನವ, ನಾಗರುಗಳಲ್ಲಿ ಯಾರನ್ನೂ ಹುಲ್ಲು ಕಡ್ಡಿಯ ತುದಿಗೂ ಲೆಕ್ಕಿಸುವುದಿಲ್ಲ. ಅವನಿಗಿಂತ ಇಮ್ಮಡಿ ಪರಾಕ್ರಮಿಗಳಿದ್ದಾರೆ, ಅವರನ್ನು ನೀನು ನೋಡು" ಎಂದ. ೨೭. "ಇದು ಸತ್ಯ ನೋಡು, ಅವನು ಹೆಸರಾಂತ ಶರಭ, ಅವನು ರುಮಣ್ವ, ಅವನು ಕೇಸರಿ, ಮೈಂದ, ದ್ವಿವಿದ, ರಂಭ, ರುಮಾದಿ ವೀರರವರು. ರಾಕ್ಷಸರಾಜ, ನೋಡು. ಅವನು ದಧಿಮುಖ, ಪ್ರತಿಭಟಿಸಲಸಾಧ್ಯನಾದ ಪನಸ ಮೊದ

ಮುಸುಗಳವೆ ಕಾಲದ ಕಪರ್ದಿಯ । ನೊಸಲಕಣ್ಣಿನ ಕಿಡಿಯವೊಲು ಲಳಿ
ಮಸಗಿ ಕೋಡಗವಿಂದು ಕಾಣಿಸುತಿದೆ ಲಯಾನಲನ
ರಸನೆಗಳ ಕಾಹುರದವೊಲ್ ಕ । ಣ್ಗೆಸೆವುತಿವೆ ನೋಡಿರುಳು ಮೋಡದ
ಲಸದಳಿಪ ಸಿಡಿಲಂತೆ ಸೇನೆಯ ಸಿಂಗಳೀಕಗಳ ೨೮

ಕರಡಿಗಳೊ ಕಗ್ಗವಿಯ ಬಲು ಹೆ । ಮ್ಮೆರಡಿಗಳೊ ದನಿಗೊಡುವ ಸಿಡಿಲಿನ
ಗರುಡಿಗಳೊ ಗಃವಿಡಿದ ಕಲ್ಪದ ಮೇಘದೊಡ್ಡುಗಳೊ
ಹೊರಳಿಗಳು ಹೊಸತಲ್ಲವೇ ಸಂ । ಗರಕೆ ಬಹುದಿದು ಜೀಯ ನೋಡ
ಚ್ಚರಿಯ ಚತುರಂಗದ ಭಡಾಳ ಗಡಾವಣೆಯನೆಂದ ೨೯

ಕರಿ ತುರಗ ರಥ ಪಾಯದಳದು । ಬ್ಬರದ ಹಂಗಿನಿತುಂಟೆ ಸಲೆ ಸಂ
ವರಿಸಿಕೊಂಡಿಹ ಕಟ್ಟಳೆಯ ಕೈದುಗಳು ಬೇಱುಂಟೆ
ಅರಸ ಚಿತ್ತೈಸಾಳ್ದನಿಕ್ಕುವ । ಧುರದ ಜೀವಿತವುಂಟೆ ರಣದು
ಬ್ಬರಕೆ ಹಿಂಗುವ ಹೇಡಿತನ ತಾನುಂಟೆ ಹೇಳೆಂದ ೩೦

ತಡೆವರಿಲ್ಲೀತಗಳನಬುಜಜ । ಮೃಡ ಸುರೇಂದ್ರಾದಿಗಳು ಫಣಿಪನ
ಪೊಡವಿವಿಡಿದಜಲೋಕಪರಿಯಂತಾವ ಕಾಲದಲಿ
ಕಡುಹು ನಿನ್ನೀ ಸಾವು ಕೇಡಿಂ । ಗೊಡಲುಗೊಡುವ ಸಮರ್ಥರಿಗೆ ತೋ
ಳೆಡೆಯ ಪೂಜಿಸಿಕೊಂಬ ಸುಭಟರಿಗುಂಟೆ ಹೇಳೆಂದ ೩೧

ಲಾದ ಕೋಟ್ಯಾನುಕೋಟಿ ವಾನರನಾಯಕರಿದ್ದಾರೆ, ನೋಡು” ಎಂದ. ೨೮. “ಲಯಕಾಲದ ಶಿವನ ಹಣೆಗಣ್ಣಿನ ಕಿಡಿಗಳಂತೆ ಮುಸುವಗಳು (ಕಪ್ಪುಮುಖದ ಕೋತಿಗಳು) ಇವೆ. ಪ್ರಳಯಾಗ್ನಿಯ ಧಗಧಗಿಸುವ ಕೆನ್ನಾಲಗೆಗಳಂತೆ ಹುರುಪಿನ ಕೋಡಗಗಳ ಸಮೂಹವು ಕಾಣಿಸುತ್ತಿದೆ. ರಾತ್ರಿಯ ಮೋಡದಿಂದ ಹೊಡೆಯುವ ಭಾರಿ ಸಿಡಿಲಿನಂತೆ ಸಿಂಗಳೀಕಗಳ ಸೈನ್ಯವು ಕಂಗೊಳಿಸುತ್ತಿದೆ. ೨೯. ಕರಡಿಗಳೋ ಕಗ್ಗತ್ತಲೆಯ ಗವಿಗಳಿಂದ ತುಂಬಿದ ಭಾರಿ ಕಲ್ಲುಗುಡ್ಡಗಳೋ. ಪ್ರತಿಧ್ವನಿಸುವ ಸಿಡಿಲಿನ ಕಸರತ್ತುಗಳೋ, ಮುನ್ನುಗ್ಗುವ ಪ್ರಳಯದ ಮೋಡಗಳ ಗುಂಪೋ ! ಈ ಸೈನ್ಯಸಮೂಹಗಳು ಯುದ್ಧಕ್ಕೆ ಬರುವುದು ಹೊಸತಲ್ಲವೇ ? ಪ್ರಭುವೇ, ಈ ಆಶ್ಚರ್ಯಕರವಾದ ಚತುರಂಗಸೈನ್ಯದ ಭಾರಿ ಬೊಬ್ಬೆಯನ್ನು ನೋಡು” ಎಂದ ಶುಕ. ೩೦. ಆನೆ ಕುದುರೆ ರಥ ಕಾಲಾಳುಗಳ ಹೆಚ್ಚಿನ ಹಂಗೇನಾದರೂ ಇವರಿಗೆ ಇದೆಯೆ ? ಸಿದ್ಧಪಡಿಸಿಕೊಂಡ ಸಂಪ್ರದಾಯದ ಆಯುಧಗಳು ಬೇರೆ ಬೇಕೆ? ರಾಕ್ಷಸರಾಯ ಕೇಳು, ಒಡೆಯನು ಕೊಡುವ ಸೈನ್ಯದ ವೇತನ ಇವರಿಗುಂಟೇ ? ಕೊನೆಗೆ ಎದುರಿಸಬೇಕಾದ ಕಡುಕದನದಲ್ಲಿ ಹಿಂಜರಿಯುವ ಹೇಡಿತನವುಂಟೇ ? ೩೧. ಪಾತಾಳದಿಂದ ಹಿಡಿದು ಬ್ರಹ್ಮಲೋಕದವರೆವಿಗೆ ಯಾವ ಸಮಯದಲ್ಲೂ ಬ್ರಹ್ಮ ಈಶ್ವರ ದೇವೇಂದ್ರಾದಿಗಳಲ್ಲಿ ಇವರನ್ನು ತಡೆಯುವವರಿಲ್ಲ. ನಿನ್ನ ಸಾವಿಗೂ ಕೇಡಿಗೂ ದೇಹವನ್ನು ಒಪ್ಪಿಸಲು ಸಿದ್ಧರಿರುವ ತಮ್ಮ ತೋಳುಗಳಿಗೆ ಪೂಜೆ ಮಾಡಿಸಿಕೊಳ್ಳುವ ಈ ನಿನ್ನ ವೀರರಿಗೆ ಇಂಥ ಪರಾಕ್ರಮವುಂಟೇ ಹೇಳು” ಎಂದ ಶುಕ.

ಗಿರಿಗಳವೆ ನೂಱಾಱು ಕಪಿಗಳ । ಕರಗಳಲಿ ಬಾಲದಲಿ ಸುತ್ತಿದ
ಮರಗಳವೆ ಕೋಟಾನುಕೋಟಿಗಳಸಮ ಸಂಗರಕೆ
ಅರಸ ಚಿತ್ತೈಸೆಮ್ಮ ಸುಭಟರು । ಧರಿಸಬಲ್ಲರೆ ನೋಡಿವರು ದು
ರ್ಧರ ಧುರಂಧರರಹರೆ ನೆಱೆ ಲೇಸಾಗಿ ನೋಡೆಂದ ೩೨

ಬೇಱೆ ನೋಡಸುರೇಂದ್ರ ನೆರೆದದೆ । ತೋಱಿಕೆಯ ಜವ್ವನದ ಭಟರೇ
ಳ್ನೂಱು ಕೋಟಿಗಳವಱ ಮಹಿಮೆಯ ಹೊಗಳಲಱಿದೆನಗೆ
ತೋಱುತಿದೆ ಬೇಱಿತ್ತ ಸಿಡಿಲು । ಬ್ಬೇಱಿ ನೆರೆದಂದದಲಿ ಸಿಂಹದ
ಚೀಱಿಕೆಯವೊಲು ನೋಡು ಮಱಿಗೋಡಗವ ನೀನೆಂದ ೩೩

ನೆಗೆನೆಗೆದು ನಭಕುಪ್ಪರಿಸಿ ತಾ । ರೆಗಳ ತಿಱಿದಂಭೋಜಮಿತ್ರನ
ಮೊಗಕೆ ಹುಬ್ಬಕ್ಕುವವು ಜಬ್ಬಿದು ಜವನನಡಗಟ್ಟಿ
ಜಗಳವಾಡುವವಮರರಾಯನ । ನಗರದಬಲಾಜನವನೇಡಿಸಿ
ನಗಿಸುವವು ನಿರ್ಜರಕದಂಬವನರಸ ನೋಡೆಂದ ೩೪

ದಾಟುವವು ಕಡಲೇಳನವನಿಯ । ಮೀಟುವವು ಮುಳಿದಡೆ ಕಪರ್ದಿಯ
ಗೋಟುಗೊಳಿಸುವ ಸಾಹಸವು ಕೋಪಿಸಿದಡಬುಜಜನ
ಪಾಟಿಸಿದ ಖರ್ಪರ ಕಟಾಹವ । ದೂಟಿಸುವ ವಿಕ್ರಮವು ನಿಮ್ಮ ನಿ
ಶಾಟರಲಿ ತೋಱಿನಿತು ಮಹಿಮೆಯನೆಂದನಸುರಂಗೆ ೩೫

೩೨. “ಈ ಕಡುಕದನಕ್ಕೆ ನೂರಾರು ಕಪಿಗಳ ಕೈಗಳಲ್ಲಿ ಬೆಟ್ಟಗಳಿವೆ. ಬಾಲಗಳಲ್ಲಿ ಸುತ್ತಿ ಹಿಡಿದ ಕೋಟ್ಯಾನುಕೋಟಿ ಮರಗಳು ಇವೆ. ಪ್ರಭು, ನಮ್ಮ ವೀರರು ಇವರನ್ನು ಎದುರಿಸಬಲ್ಲರೆ ? ನೋಡು ಇವರು ಅಸಾಧ್ಯ ಕದನಸಮರ್ಥ ಕಪಿನಾಯಕರು, ಚೆನ್ನಾಗಿ ನೋಡು” ಎಂದ. ೩೩. “ರಾಕ್ಷಸೇಂದ್ರ, ಅತ್ತ ನೋಡು, ಹೆಸರಾಂತ ಹರೆಯದ ಏಳು ನೂರು ಕೋಟಿ ವೀರರು ಸಂಗ್ರಹಿಸಿದ್ದಾರೆ. ಅವರ ಮಹಿಮೆಯನ್ನು ನಾನು ಹೊಗಳಲರಿಯೆ. ಇತ್ತಕಡೆ ಸಿಡಿಲುರಭಸದಿಂದ ಗುಂಪುಕೂಡಿದಂತೆ ಮತ್ತು ಸಿಂಹದ ಗರ್ಜನೆಯಂತೆ ಕೂಗುತ್ತಿರುವ ಮರಿಕೋಡಗಗಳು ಕಾಣಿಸುತ್ತಿವೆ ನೋಡು” ಎಂದ. ೩೪. “ಕಪಿಗಳು ನೆಗೆನೆಗೆದು ಆಕಾಶಕ್ಕೆ ಹಾರಿ ನಕ್ಷತ್ರಗಳನ್ನು ಕಿತ್ತು ಸೂರ್ಯನನ್ನು ನೋಡಿ ಹುಬ್ಬು ಗಂಟುಹಾಕುವುವು ; ಯಮನನ್ನು ಗದರಿಸಿ ಅಡ್ಡಹಾಕಿ ಜಗಳವಾಡುವುವು ; ದೇವಲೋಕದ ಸ್ತ್ರೀಯರನ್ನು ಅಣಕಿಸಿ ದೇವತೆಗಳನ್ನು ನಗಿಸುವುವು, ನೋಡು ರಾವಣ” ಎಂದ ಶುಕ. ೩೫. “ಸಪ್ತಸಾಗರಗಳನ್ನು ದಾಟುವ, ಭೂಮಿಯನ್ನು ಮೀಟುವ, ಕೋಪ ಬಂದರೆ ಶಿವನನ್ನು ತೊಂದರೆಗೀಡುಮಾಡುವ ಸಾಹಸ ಮತ್ತು ಕೆರಳಿದರೆ ಬ್ರಹ್ಮಸೃಷ್ಟಿಯ ಕೊಪ್ಪರಿಗೆಯನ್ನು ಎಗರಿಸುವ ಪ್ರತಾಪ ಈ ಕಪಿಗಳಿಗೆ. ಇಂಥ ಮಹಿಮೆ

ಕುಲಗಿರಿಗಳಲ್ಲಾಡುವವು ಹಿಡಿ । ದೊಲೆದಡೀ ಕಪಿಶಿಶುಗಳಬುಧಿಯ
ಕಲಕುವವು ನೀರಾಟದಲಿ ಹಾರಿಕೆಯು ಗುತ್ತಿನಲಿ
ಚಲಿಸುವವು ಉದಯಾಸ್ತಮಾನದ । ಕುಲಶಿಲೋಚ್ಚಯು ನಿನ್ನ ದುರ್ಗದ
ಬಲುಹ ಹೇಳದಿರನಿತಕದಟುಳ್ಳವರ ನೋಡೆಂದ ೩೬

ಅರಸ ಕೇಳ್ ಕಪಿಪೋತಕಂಗಳ । ನೆರವಿ ತಾನಿದೆ ನೋಡು ನರಕೇ
ಸರಿಗೆ ಮಾರ್ಮಲೆವಂತೆ ಕಾಲನ ಕೋಣನುಲಿವಂತೆ
ಭರವಸದಲಿವೆ ನೋಡು ಹಿಮವ । ದ್ಗಿರಿಯ ಮೆಟ್ಟಿದು ಹಾರುವವು ಸುರ
ಗಿರಿಯ ತುದಿಗುತ್ತಾನಪಾದಜಪುರಿಗೆ ನೋಡೆಂದ ೩೭

ಮಾಯೆಯಿದು ತಾನೈಸೆ ಸಿರಿನಾ । ರಾಯಣನ ನಾಡಾಡಿ ಕೋಡಗ
ಕೀಯಶೇಷ ಗುಣಂಗಳುಂಟೇ ಪೂರ್ವಕಾಲದಲಿ
ರಾಯನೀ ರಕ್ಕಸರಕುಲಕಸ । ಹಾಯಶೂರನು ನೀನು ನಿನ್ನೊಡ
ನಾಯತದ ರಣಕೊದಗುವದು ಚೋಜಿಗಲ್ಲವೇಯೆಂದ ೩೮

ಮುತ್ತಿಕೊಂಡಿದೆ ನೋಡು ದುರ್ಗವ । ಹೊತ್ತ ಗಿರಿತರು ಸಹಿತ ಬಿಡಿಸುವ
ಮುತ್ತಿಗೆಯ ಭಟರುಂಟೆ ನುಡಿಯಲಿ ತನ್ನ ಮುಂದೀಗ
ಇತ್ತು ಕಳೆ ಸೀತೆಯ ನಿರರ್ಥಕೆ । ಸತ್ತುಹೋಗಲು ಬೇಡ ನಾಲಿಗೆ
ಯೆತ್ತಿ ನುಡಿವವರಿಲ್ಲ ಹಿತವರು ನಿನ್ನ ಕೂಡೆಂದ ೩೯

ಯನ್ನು ನಿಮ್ಮ ರಾಕ್ಷಸರಲ್ಲಿ ತೋರಿಸು ನೋಡೋಣ" ಎಂದ ಖರ. ೩೬. ಈ ಮರಿಕಪಿಗಳು ಹಿಡಿದು ಅಲ್ಲಾಡಿಸಿದರೆ ಕುಲಪರ್ವತಗಳು ಅಲ್ಲಾಡುವವು ; ನೀರಾಟದ ನೆವದಲ್ಲಿ ಸಮುದ್ರವನ್ನು ಕಲಕಿಹಾಕುವವು ; ಅವು ಸ್ಥಳದಿಂದ ಸ್ಥಳಕ್ಕೆ ಹಾರುವ ರಭಸದಲ್ಲಿ ಪೂರ್ವಪಶ್ಚಿಮಗಳ ಕುಲಪರ್ವತಗಳು ಚಲಿಸುವವು. ಇದರ ಮೇಲೆ ನಿನ್ನ ಕೋಟೆಯ ಸಾಮರ್ಥ್ಯವನ್ನು ಕುರಿತು ಹೇಳಬೇಡ. ಅಷ್ಟು ಸಮರ್ಥರಾದವರನ್ನು ನಿಮ್ಮ ವೀರರಲ್ಲಿ ನೋಡು" ಎಂದ. ೩೭. ರಾಕ್ಷಸರಾಜ ಕೇಳು, ಮರಿಗಪಿಗಳ ಸಮೂಹವನ್ನು ನೋಡು. ನರಸಿಂಹನಿಗೆ ಎದುರುಬೀಳಲೋ ಎನ್ನುವಂತೆ ಯಮನ ಕೋಣನ ಅರಚುವಿಕೆಯಂತೆ ಕೂಗುತ್ತ ಉತ್ಸಾಹದಿಂದಿವೆ ನೋಡು. ಹಿಮವತ್‌ಪರ್ವತವನ್ನು ಮೆಟ್ಟಿ ನಿಂತು ಅಲ್ಲಿಂದ ಮೇರುಪರ್ವತದ ತುದಿಗೆ ಮತ್ತು ಅಲ್ಲಿಂದ ಧ್ರುವನ ಪಟ್ಟಣಕ್ಕೆ ಹಾರುವುವು, ನೋಡು" ಎಂದ ಶುಕ. ೩೮. "ಇದು ಶ್ರೀಮನ್ನಾರಾಯಣನ ಮಾಯೆ ನಿಜ. ಸಾಧಾರಣ ಕೋಡಗಗಳಿಗೆ ಹಿಂದಿನ ಕಾಲದಲ್ಲಿ ಇಂಥ ಮಹಾಗುಣಗಳಿದ್ದುವೇ? ರಾಕ್ಷಸರ ಸಮೂಹಕ್ಕೆ ನೀನು ರಾಜ ಮತ್ತು ಅಸಹಾಯ ಶೂರ. ನಿನ್ನೊಡನೆ ಕಡುಕದನಕ್ಕೆ ಸಿದ್ಧವಾಗುವುದು ಆಶ್ಚರ್ಯವಲ್ಲವೇ ?" ಎಂದ. ೩೯. "ಬೆಟ್ಟಗಳನ್ನೂ ಮರಗಳನ್ನೂ ಹಿಡಿದ ಕಪಿಸೈನ್ಯವು ದುರ್ಗಕ್ಕೆ ಮುತ್ತಿಗೆಹಾಕಿದೆ. ಈ ಮುತ್ತಿಗೆಯನ್ನು ತೆಗೆಯುವ ವೀರರು ಇದ್ದರೆ ನಿನ್ನ ಮುಂದೆ ಬಂದು ಈಗ ಹೇಳಲಿ. ಸೀತೆಯನ್ನು ಒಪ್ಪಿಸಿಬಿಡು. ವ್ಯರ್ಥವಾಗಿ ಸತ್ತುಹೋಗಬೇಡ. ಧೈರ್ಯವಾಗಿ ಹಿತವನ್ನು ನುಡಿಯುವ ಆಪ್ತರು ನಿನಗಿಲ್ಲ"

ಸೂಸೆನನೃತವ ಕೇಳು ವೈರದ । ವಾಸಿಕಾಜಿನ ಕೀಶಬಲವಾ
ರಾಶಿ ಮಧ್ಯದಲಹನೆ ನೋಡಮರೇಂದ್ರಗಿರಿಯಂತೆ
ದಾಶರಥಿಯ ಯಶೋವಿಲಾಸ । ಶ್ರೀಸತಿಯ ಸುಗ್ರೀವ ಶೋಭಾ
ಭೂಷಣದ ಮಣಿಗಣದ ನಾಯಕರತುನನವನೆಂದ ೪೦

ರಣಕೆ ನೀಲಗ್ರೀವ ರಿಪುಮಾ । ರಣಕೆ ಕಾಲಗ್ರೀವ ರಾಮಾ
ಯಣ ಮಹಾಮಾಲಾಸುರತ್ನಾವಳಿಗೆ ಸುಗ್ರೀವ
ಸೆಣಸು ಸುಖವಲ್ಲಿವನೊಡನೆ ಮನ । ದೆಣಿಕೆಯನು ಬಿಡು ತಿದ್ದಿಕೊಂಬುದು
ಗುಣವಲೇ ಗಹ್ವರಿಯ ತನುಜೆಯನಿತ್ತು ಕಳೆಯೆಂದ ೪೧

ಇನಿತಱೊಳು ಹರಿಯೆಂದು ರಾಮನ । ನನುಕರಿಸಬೇಕಬುಧಿ ಬೆಟ್ಟಕೆ
ತನುವ ತೆಱುವುದೆ ವನಚರರು ಕೈಗಟ್ಟ ಕಾಳಗಕೆ
ಅನಿಮಿಷಾಂತಕರೊಡನೆ ನಿಲುವವೆ । ಮನುಜಕಿಂಕರರಾಗಿ ಬುದ್ಧಿಯ
ನಿನಗೆ ಹೇಳಲಿಕಾವ್ ಸಮರ್ಥರೆಯೆಂದನಸುರಂಗೆ ೪೨

ಏನೆಲವೊ ಶುಕ ನಮ್ಮೊಡನೆ ಮಾ । ಯಾನಿಬದ್ಧೋಕ್ತಿಗಳೆ ತನ್ನನು
ನೀನಱಿಯದವನೇ ವಿಚಾರಿಸಿ ಗಳಹದಾದೆಯಲ
ವಾನರರ ಕಾಪೇಯ ಕುಶಲವಿ । ಧಾನವನು ನೆಱೆ ಕಲಿತಲಾ ಬಿಡು
ಮಾನವೇಂದ್ರನ ತೋಱು ಸಾಕಾ ಮಾತದೇಕೆಂದ ೪೩

ಎಂದ. ೪೦. "ನಾನು ಸುಳ್ಳು ಹೇಳುವುದಿಲ್ಲ. ಹಗೆತನದ ಪಂಥವನ್ನು ಹಿಡಿದವನು ಮೇರುಪರ್ವತದಂತೆ ವಾನರಸೈನ್ಯಸಾಗರದ ನಡುವೆ ಇದ್ದಾನೆ, ನೋಡು. ದಾಶರಥಿಯ ಕೀರ್ತಿಲಕ್ಷ್ಮಿಯ ಕೊರಳಿನ ಒಡವೆಗಳಲ್ಲಿನ ವಜ್ರಗಳ ನಡುವಿನ ನಾಯಕರತ್ನದಂತೆ ಸುಗ್ರೀವನು ಕಂಗೊಳಿಸುವುದನ್ನು ನೋಡು" ಎಂದ. ೪೧. "ಯುದ್ಧಕ್ಕೆ ವಿಷಕಂಠ (ನೀಲಗ್ರೀವ), ಶತ್ರುಸಂಹಾರಕ್ಕೆ ರುದ್ರ (ಕಾಲಗ್ರೀವ), ರಾಮಾಯಣವೆಂಬ ಅನುಪಮ ರತ್ನಾವಳೀಹಾರ ಧರಿಸುವ ಸುಂದರ ಕೊರಳುಳ್ಳವನು (ಸುಗ್ರೀವ) ರಾಮ. ಇವನೊಡನೆ ಹೋರಾಟವು ಸುಖಕರವಲ್ಲ. ನಿನ್ನ ಯೋಚನೆಯನ್ನು ಕೈಬಿಡು. ಈಗಲೂ ತಿದ್ದಿ ಕೊಳ್ಳುವುದೊಳ್ಳೆಯದು. ಭೂಜಾತೆ ಸೀತೆಯನ್ನು ಕಳುಹಿಸಿಬಿಟ್ಟು ನಿನ್ನ ಭಾರವನ್ನು ಕಳೆದುಕೋ" ಎಂದ. ೪೨. "ಶ್ರೀಹರಿಯೆಂಬುದಾಗಿ ರಾಮನನ್ನು ಎಲ್ಲವೂ ಅನುಸರಿಸ ಬೇಕು. ಇಲ್ಲದಿದ್ದರೆ ಸಮುದ್ರವು ಸೇತುವೆಕಟ್ಟಲು ತನ್ನಲ್ಲಿ ಬೆಟ್ಟಕ್ಕೆ ಅವಕಾಶ ಕೊಡು ವುದೆ ? ಮಾನವನ ಸೇವಕರಾಗಿ ಕಪಿಗಳು ರಾಕ್ಷಸರೊಡನೆ ಯುದ್ಧಕ್ಕೆ ಕೈಕಟ್ಟಿಕೊಂಡು ನಿಲ್ಲುವುವೆ ? ನಿನಗೆ ಬುದ್ಧಿ ಹೇಳಲು ನಾವು ಸಮರ್ಥರೆ ?" ಎಂದು ಶುಕ ರಾವಣನನ್ನು ಪ್ರಶ್ನಿಸಿದನು. ೪೩. "ಏನೋ ಶುಕ, ನಮ್ಮೊಡನೆ ಮಾಯಾವಿಲಾಸದ ಮಾತುಗಳ ನ್ನಾಡುವೆಯಲ್ಲ. ನಮ್ಮನ್ನು ನೀನು ಅರಿಯದವನೇ? ಯೋಚಿಸಿ ಮಾತಾಡದೆ ಹೋದೆ ಯಲ್ಲ. ಕಪಿಗಳ ತಂತ್ರದ ಅತಿಬುದ್ಧಿವಂತಿಕೆಯನ್ನು ಕಲಿತೆಯಲ್ಲ ? ಆ ಮಾತನ್ನು ಬಿಡು.

ಆದರೀಕ್ಷಿಸು ಮನದ ಭಯವದ ನಿ । ಹಾದಿಯಲಿ ನಿಗಮಪ್ರಸಿದ್ಧನ
ಭೂದಿವಾನಲ ಸಲಿಲ ಸೂರ್ಯಾತ್ಮಕನನಚ್ಯುತನ
ಆದಿನಾರಾಯಣನ ನಿನ್ನ ಸ । ಹೋದರನ ರಕ್ಷಿಸಿದವನ ದೂ
ರ್ವಾದಳಶ್ಯಾಮಳನ ರಾಮನ ನೋಡು ನೀನೆಂದ ೪೪

ಎಡದ ತೋಳನು ನಿನ್ನ ತಮ್ಮನ । ಮುಡುಹಿಗಾನಿಸಿ ತನ್ನ ತಮ್ಮನ
ಖಡುಗಹಸ್ತದ ಮೇಲೆ ಸಿರಿಹಸ್ತವನು ಸಂಘಟಿಸಿ
ಜಡಿವ ಹೆಗಲಿನ ಮೂಡಿಗೆಯು ಕೈ । ಹೊಡೆಯಲಸುರೇಶ್ವರನು ಹೇಳುವ
ನುಡಿಗೆ ಕಿವಿಗೊಟ್ಟಾತನಗ್ಗದರಾತಿಭಟನೆಂದ ೪೫

ಬೇಡುತದೆ ಬೊಬ್ಬಿಡುದು ರಾಮನ । ಮೂಡಿಗೆಯು ಕವಲಂಬು ಹಗೆಗಳ
ತೋಡಿ ರಕುತವ ಸುರಿವ ಭರದಲಿ ವೀರಲಕ್ಷ್ಮಣನ
ಝಾಡಣೆಯ ಖಂಡೆಯದ ಕಿಡಿ ಕುಣಿ । ದಾಡುತವೆ ಖದ್ಯೋತಮಾಲೆಯ
ಮೋಡಿಯಲಿ ಮಱೆಮಾತದೇನಸುರೇಂದ್ರ ನೋಡೆಂದ ೪೬

ಕರ್ತನಾಗಿಹನಮರರಿಗೆ ಸಮ । ವರ್ತಿಯಾಗಿಹನಸುರರಿಗೆ ಕಡು
ಧೂರ್ತನಾಗಿಹನಣಕರಿಗೆ ನಿಶ್ಚೈಕಶರಣರಿಗೆ
ಭರ್ತೃವಾಗಿಹನವರವರಿಗವ । ವರ್ತಿಸಲು ನೋಡರಸ ನಾನಾ
ಮೂರ್ತಿಯಲಿ ತೋರ್ಪಾತನೀ ರಘುನಾಥ ನೋಡೆಂದ ೪೭

ಮಾನವೇಂದ್ರನನ್ನು ತೋರಿಸು, ಸಾಕು" ಎಂದು ನುಡಿದ ರಾವಣ. ೪೪. "ಹಾಗಿದ್ದರೆ ಮನಸ್ಸಿನ ಭಯವನ್ನು ತೊಲಗಿಸಿ ನೋಡು. ವೇದಪ್ರಸಿದ್ಧನಾದ ಭೂಮಿ, ಆಕಾಶ, ಅಗ್ನಿ, ಜಲ, ಸೂರ್ಯರುಗಳು ತಾನೇ ಆದ ನಾಶರಹಿತನನ್ನು ನೋಡು. ನಿನ್ನ ಸಹೋದರನನ್ನು ರಕ್ಷಿಸಿದ ಗರಿಕೆಯ ಎಸಳಿನಂತೆ ಶ್ಯಾಮಲವರ್ಣದವನಾದ ಆದಿನಾರಾಯಣ ರಾಮನನ್ನು ನೋಡು" ಎಂದ ಶುಕ. ೪೫, "ಎಡತೋಳನ್ನು ನಿನ್ನ ತಮ್ಮ ವಿಭೀಷಣನ ಹೆಗಲಮೇಲಿರಿಸಿ, ಖಡ್ಗ ಹಿಡಿದ ತಮ್ಮ ಲಕ್ಷ್ಮಣನ ಕೈಯಮೇಲೆ ಬಲಹಸ್ತವನ್ನಿಟ್ಟು ಬಾಣದ ಗರಿ ಮೇಲೆವಿದ್ದು ತೋರುವ ಬತ್ತಳಿಕೆಯನ್ನು ಹೆಗಲಿಗೆ ಕಟ್ಟಿದ ಹಾಗೂ ವಿಭೀಷಣನು ಹೇಳುವ ಮಾತುಗಳನ್ನು ಕಿವಿಗೊಟ್ಟು ಆಲಿಸುತ್ತಿರುವ ಆ ಶ್ರೇಷ್ಠ ವೀರನೇ ರಾಮ" ಎಂದ. ೪೬. "ರಾಮನ ಬತ್ತಳಿಕೆಯಲ್ಲಿರುವ ಕವಲುಬಾಣವು ಹಗೆಗಳನ್ನು ಕೊಂದು ಅವನ ದೇಹವನ್ನು ತೋಡಿ ರಕ್ತವನ್ನು ಚೆಲ್ಲುವ ಉತ್ಸಾಹದಿಂದ ಬೊಬ್ಬೆ ಹಾಕಿ ಬೇಡಿಕೊಳ್ಳುತ್ತಿದೆ. ವೀರಲಕ್ಷ್ಮಣನ ಝಳಪಿಸುವ ಖಡ್ಗದ ಕಿಡಿಗಳು ಮಿಂಚುಹುಳುಗಳಂತೆ ಕುಣಿದಾಡುತ್ತಿವೆ. ಇದರಲ್ಲಿ ಮರೆಮಾತೇನು ರಾಕ್ಷಸರಾಜ" ಎಂದ ಶುಕ. ೪೭. "ದೇವತೆಗಳಿಗೆ ಪ್ರಭುವಾಗಿದ್ದಾನೆ, ರಾಕ್ಷಸರಿಗೆ ಯಮನಾಗಿದ್ದಾನೆ, ತನ್ನನ್ನು ಹೀಯಾಳಿಸುವವರಿಗೆ ದುಷ್ಟನಾಗಿದ್ದಾನೆ, ಒಮ್ಮನಸ್ಸಿನ ಭಕ್ತರಿಗೆ ಪೋಷಕನಾಗಿದ್ದಾನೆ. ಹೀಗೆ ವಿಚಾರಮಾಡಿ ನೋಡಿದರೆ ಅವರವರಿಗೆ ತಕ್ಕಂತೆ ನಾನಾ ಮೂರ್ತಿಗಳ ರೂಪದಲ್ಲಿ

ಸಾವು ನಿನಗಿಲ್ಲಜನು ನೀಲ । ಗ್ರೀವರಿತ್ತಾಯುಷ್ಯವುಂಟಿಂ
ಬೀ ವಿಚಾರವ ಬಿಟ್ಟು ಕಳೆ ಕಮಲಜಭವಾದಿಗಳ
ದೇವನಲ್ಲಾ ದೈತ್ಯರಿಪು ಮನ । ಕಾವ ಸಂಶಯ ಬೇಡ ಸೀತಾ
ದೇವಿಯರನೊಯ್ದಿತ್ತು ಮಱೆಯೊಗು ರಾಘವೇಶ್ವರನ ೪೮

ವೀರನೀ ರಘುನಾಥ ಶೌರ್ಯೋ । ದ್ಧಾರನೀ ರಘುನಾಥ ಕರುಣಾ
ಸಾರನೀ ರಘುನಾಥ ಶರಣಾಗತಜನಾವಳಿಗೆ
ಚಾರುತರ ಸುರಧೇನುವೆಂಬೀ । ಸ್ಫೈರಣೆಯ ಸಿರಿ ಮೈಯಲದೆ ಕ
ಣ್ಣಾರೆ ನೋಡೆಲೆಯರಸ ಕೇಡುಗತನವನುಳಿದೇದ ೪೯

ಚಲುವನಹನೇ ನೋಡು ಸೀತಾ । ಲಲನೆಗಗ್ಗಳದಾಜಿರಂಗಕೆ
ಬಲುಹನುಳ್ಳವನಹನೆ ನಿನಗಿಂದಖಿಳ ಗುಣಗಳಲಿ
ಒಲಿವುದಗ್ಗದ ಧರ್ಮ ಧರ್ಮದ । ಬಳಗೆ ಕೋಡಗ ಕೂಡಿತಾಜಿಗೆ
ಸಲೆ ಸಹೋದರ ಬಿಟ್ಟುಹೋದನು ನಿನ್ನನೀಗೆಂದ ೫೦

ಪರಸತಿಯರೀ ರಾಮಭದ್ರಂ । ಗರಸ ಕೇಳೊಡಹುಟ್ಟಿದರು ದು
ಶ್ಚರಿತವೀತನಲಣುದಶಾಂಶವು ಹೊದ್ದದಿದು ಸಿದ್ಧ
ಸುರರಿಗೀತನು ಕಲ್ಪತರು ಭೂ । ಸುರರಿಗೀತನು ದೇವಮಣಿ ಕ
ರ್ಬುರರಿಗೀತನು ಕಾಲಭೈರವನಹನೆ ನೋಡೆಂದ ೫೧

ಈ ರಘುನಾಥ ಕಾಣಿಸಿಕೊಳ್ಳುತ್ತಾನೆ" ಎಂದ ಶುಕ. ೪೮. "ನನಗೆ ಸಾವಿಲ್ಲ ; ಬ್ರಹ್ಮ ಮತ್ತು ಮಹೇಶ್ವರರು ಕೊಟ್ಟ ಆಯುಸ್ಸಿದೆ ಎಂಬ ಆಲೋಚನೆಯನ್ನು ಬಿಟ್ಟುಬಿಡು. ಅಸುರಾರಿಯು ಬ್ರಹ್ಮ ಮಹೇಶ್ವರರ ಮೇಲಿನ ದೇವನು. ಇದರಲ್ಲಿ ನಿನ್ನ ಮನಸ್ಸಿನಲ್ಲಿ ಸಂಶಯಕ್ಕೆಡೆಗೊಡಬೇಡ. ಸೀತಾದೇವಿಯರನ್ನು ಕರೆದುಕೊಂಡು ಹೋಗಿ ಒಪ್ಪಿಸಿ ರಾಘವೇಶ್ವರನ ಮರೆಹೊಗು" ಎಂದನು. ೪೯. "ವೀರನು ಈ ರಘುನಾಥ, ಪರಾಕ್ರಮವನ್ನೆತ್ತಿಹಿಡಿಯುವವನು ಈ ರಘುನಾಥ, ಕರುಣಾಸಾರನು ಈ ರಘುನಾಥ, ಶರಣು ಬಂದ ಜನರಿಗೆ ಸುಂದರತಮ ಕಾಮಧೇನು" ಎಂಬ ತೇಜಸ್ಸಂಪತ್ತು ಅವನ ಶರೀರದಲ್ಲಿ ಎದ್ದುತೋರುತ್ತಿದೆ. ನಿನ್ನ ದುಷ್ಟತನವನ್ನು ಬಿಟ್ಟು ಕಣ್ಣಾರೆ ನೋಡು ಪ್ರಭು" ಎಂದ ಶುಕ. ೫೦. "ಸೀತಾನಾರಿಗೆ ಇವನು ಚೆಲುವನಲ್ಲವೇ ನೋಡು. ಸಮಸ್ತ ಗುಣಗಳಿಂದ ನಿನಗಿಂತಲೂ ಯುದ್ಧರಂಗಕ್ಕೆ ಹೆಚ್ಚು ಸಮರ್ಥನಾಗಿದ್ದಾನೆ. ಧರ್ಮವಿದ್ದಲ್ಲಿಗೆ ಉತ್ತಮ ಧರ್ಮವು ಒಲಿಯುವುದು. ಕಪಿಗಳು ಯುದ್ಧಕ್ಕೆ ಬಂದು ಒದಗಿದ್ದಾರೆ. ನಿನ ತಮ್ಮ ನಿನ್ನನ್ನು ಬಿಟ್ಟುಹೋದನು. ೫೧. ಈ ರಾಮಭದ್ರನಿಗೆ ಪರಸ್ತ್ರೀಯರು ಒಡಹುಟ್ಟಿದವರು. ಈತನಲ್ಲಿ ಕೆಟ್ಟನಡತೆಯು ಹತ್ತರಲ್ಲಿ ಒಂದಂಶವಾಗಲಿ ಒಂದಣು ವಿನಷ್ಟಾಗಲಿ ಸೇರುವುದಿಲ್ಲ, ಇದು ಖಂಡಿತ. ದೇವತೆಗಳಿಗೆ ಈತನು ಕಲ್ಪವೃಕ್ಷ, ಬ್ರಾಹ್ಮಣರಿಗೆ ಬೇಡಿದ್ದನ್ನು ಕೊಡುವ ಚಿಂತಾಮಣಿ, ರಾಕ್ಷಸರಿಗೆ ಕಾಲಭೈರವನಾಗಿದ್ದಾನೆ,

ಅಸುರರೀತನ ಹೊದ್ದಿ ಜಗದಲಿ । ಹೆಸರುಪಡೆದವರಿಲ್ಲವೇ ಭಾ
ವಿಸಿದಡೀಯನೆ ಲೋಕಪಾಲತ್ವವನು ನೈರುತಿಗೆ
ಅಸಮಬಲ ಬಲಿಗೀಯನೇ ಹವ । ಣಿಸದ ಪಾತಾಳವ ಹಿರಣ್ಯಕ
ಶಿಶುವಿಗೀಯನೆ ಸಾರ್ವಭೌಮತ್ವವನು ವೈಷ್ಣವದ ೫೨

ಸುರರಿಗಮೃತವನೆಱೆವ ದಿನದಲಿ । ಶರಣುಹೊಗೆ ಸುಧೆಯಿತ್ತು ಶಶಿ ಸೂ
ರ್ಯರ ಸಮಾನಗ್ರಹದ ಪದವಿಯನಿತ್ತು ಮನ್ನಿಸನೆ
ಧರೆಯುಱಿಯೆ ರಾಹುವನು ತೊಡೆಯೊಳ । ಗಿರಿಸಿಕೊಳನೆ ಹಿರಣ್ಯಕನ ಮೂ
ರ್ಖರಮನೋದ್ಯಮ ಬೇಡ ಬಿಡು ವೈರವನು ನೀನೆಂದ ೫೩

ಹೋಗಲಂದಿನ ಮಾತು ಮಲೆತವ । ರೇಗಿದರು ಖರ ದೂಷಣಾದಿಗ
ಳೀಗ ಸೇರಿದು ಕೆಟ್ಟನೇ ಸುಗ್ರೀವ ನೋಡವನ
ಹೋಗು ಹಗೆಯೆಡೆಗೆಂದು ನೂಕಲು । ಮೈಗುಱುಹ ಕಂಡಱಿಯದನ ಲೇ
ಸಾಗಿ ಮನ್ನಿಸಿಕೊಡನೆ ಲಂಕೆಯನರಸ ಕೇಳೆಂದ ೫೪

ಮೇರೆ ಯಾವುದು ನೋಡು ವಾನರ । ವಾರುಧಿಗೆ ದಶಕಂಠ ಜಗದಲ
ದಾರು ಸರಿ ನಿನಗೆಂಬೆ ಸೈನ್ಯ ಸಮಾಜದೆಣಿಕೆಯಲಿ
ವೀರ ನೀನೋ ರಾಘವನೊ ರಣ । ಧೀರ ನೀನೋ ರಾಘವನೊ ಶೃಂ
ಗಾರವಾವುದು ನೋಡು ರಣಸನ್ನಾಹಸಂಭ್ರಮವ ೫೫

ನೋಡು" ಎಂದ. ೫೨, "ಇವನ ಮರೆಹೊಕ್ಕು ಹೆಸರಾಂತ ಅಸುರರು ಜಗತ್ತಿನಲ್ಲಿ ಇಲ್ಲವೇ ? ನಿರ್ಋತಿಗೆ ದಿಕ್ಕಿನ ಒಡೆತನವನ್ನು ಕೊಡಲಿಲ್ಲವೇ ? ಅಸಾಧಾರಣ ಬಲಶಾಲಿಯಾದ ಬಲಿಗೆ ಪಾತಾಳಲೋಕವನ್ನು ಕೊಡಲಿಲ್ಲವೇ ? ಹಿರಣ್ಯಕಶಿಪುವಿನ ಮಗ ಪ್ರಹ್ಲಾದನಿಗೆ ವೈಷ್ಣವಲೋಕದ ಸಾರ್ವಭೌಮಪದವಿಯನ್ನು ಕೊಡಲಿಲ್ಲವೇ ? ೫೩. ಶ್ರೀವಿಷ್ಣುವು ದೇವತೆಗಳಿಗೆ ಅಮೃತವನ್ನು ಹಂಚುವ ದಿವಸ ಮರೆಹೊಕ್ಕ ರಾಹುವಿಗೆ ಅಮೃತವನ್ನು ಕೊಟ್ಟು ಸೂರ್ಯಚಂದ್ರರಿಗೆ ಸಮಾನವಾದ ಗ್ರಹದ ಪದವಿಯನ್ನಿತ್ತು ಗೌರವಿಸಲಿಲ್ಲವೇ ? ನರಸಿಂಹಾವತಾರದಲ್ಲಿ ಹಿರಣ್ಯಕಶಿಪುವನ್ನು ತನ್ನ ತೊಡೆಯೇರಿಸಿಕೊಳ್ಳಲಿಲ್ಲವೇ ? ಮೂರ್ಖರ ಮನೋಭಾವವನ್ನು ತ್ಯಜಿಸು, ವೈರವನ್ನು ಬಿಡು" ಎಂದು ಶುಕ ರಾವಣನಿಗೆ ಹೇಳಿದ. ೫೪. "ಹಿಂದಿನ ಕಾಲದ ಮಾತು ಹೋಗಲಿ. ರಾಮನನ್ನು ಎದುರಿಸಿದ ಖರ ದೂಷಣ ಮೊದಲಾದವರು ಏನು ಸಾಧಿಸಿದರು ? ಸುಗ್ರೀವನು ರಾಮನ ಜತೆ ಸೇರಿ ಕೆಟ್ಟುಹೋದನೇ ? ಶತ್ರುವಿನ ಬಳಿಗೇ ಹೋಗು ಎಂದು ವಿಭೀಷಣನನ್ನು ನೀನು ಅಟ್ಟಲು ಆದುವರೆಗೂ ಗುರುತುಪರಿಚಯವಿಲ್ಲದವನನ್ನು ರಾಮನು ಗೌರವಿಸಿ ಲಂಕಾಧಿಪತ್ಯವನ್ನು ಅವನಿಗೆ ಕೊಡಲಿಲ್ಲವೇ ? ಕೇಳು ರಾಕ್ಷಸರಾಜ" ಎಂದ ಶುಕ. ೫೫. "ವಾನರಸೇನಾಸಾಗರಕ್ಕೆ ಎಲ್ಲಿಯಿದೆಯೋ ನೋಡು. ಲೆಕ್ಕಹಿಡಿದರೆ ನಿನ್ನ ಬಳಿಯ ಸೈನ್ಯದ ಮೊತ್ತದಲ್ಲಿ ನಿನಗೆ ಸರಿಯಾರು ? ವೀರ ನೀನೋ ರಾಘವನೋ ? ಕದನಶೂರ ನೀನೋ ರಾಘವನೋ ? ಯುದ್ಧಸಿದ್ಧತೆಯ ಸಂಭ್ರಮ

ನಿನ್ನ ಶೌರ್ಯದ ಸುಪ್ರತಾಪದ । ಬಿನ್ನಣವ ಕೊಂಡಾಡೆ ರಘುಪತಿ
ಖಿನ್ನನಾದನೆ ಖತಿಯ ತಾಳ್ದನೆ ಕಾಂತಿಹಿಂಗಿದನೆ
ತನ್ನೊಡೆಯನನು ಹೊಗಳುವವನ । ತ್ಯುನ್ನತನು ನೃಪದೂತರೊಳಗೆಂ
ದೆನ್ನ ಕೊಂಡಾಡಿದನು ತಲೆದೂಗಿದನು ನಿನಗೆಂದ ೫೬

ನಿದ್ರೆಗನಸಿನಲಳಿವ ಕಂಡವ । ರೆದ್ದು ಕುಳ್ಳಿರದಿಹರೆ ನಿನಗಾ
ಹೊದ್ದಿಗೆಯ ಹವಣಾಯ್ತು ಹೇಳುವ ಹಿತವರಿಲ್ಲಕಟ
ಮದ್ದು ಕಯ್ಯಾಗಿಹುದು ಮೊದಲದ । ಮೆದ್ದರದಗುವುದುದರವನು ಹೊ
ದ್ದಿದ್ದ ರುಜೆ ಮಾತೆಮ್ಮದೀಪರಿಯರಸ ಕೇಳೆಂದ ೫೭

ಹರಿಯೊಡನೆ ಹಗೆತನವು ಸಲ್ಲದು । ಸರಸ ಮಾರಿಯು ಕೂಡೆ ಲೇಸ
ಲ್ಲೆರಳೆ ತೋಳನ ತೆಗೆದು ಜೀವಿಪುದೇ ಮಹಾದೇವ
ಕರುಣಿ ರಘುರಾಜೇಂದ್ರಚಂದ್ರನ । ಮಱೆಯಹೊಗು ಕೆಡಬೇಡ ಬೇಡೆಂ
ದೊರೆದು ಶುಕ ಸಾರಣರು ಬಳಿಯಲಿ ಕಲಿ ದಶಾನನನ ೫೮

ಏಕೆ ನಿನಗೀ ಮಾತು ಮಾನವ । ಕಾಕ ಕೋಡಗವಿಂದ ಹೊಗಳಿದ
ದಾಕಳಿಗೆ ಹುಲಿಯಂಜುವುದೆ ಹವಣಱಿಯದಾದೆಯಲ
ನೂಕಿ ನೋಡಲಿ ರಣದಲನಿಬರ । ನಾಕನಿಳಯರ ಮಾಡದಿರೆ ಲೋ
ಕೈಕವೀರನೆನಿಪ್ಪ ಬಿರಿದನು ಹಱಿದುಬಿಸುಡೆಂದ ೫೯

ದಲ್ಲಿ ಯಾವ ಕಡೆ ಹೆಚ್ಚು ಶೋಭಾಯಮಾನವಾಗಿ ಕಾಣುತ್ತದೆ ನೋಡು" ಎಂದ, ೫೬. ನಾನು ಗುಪ್ತಚಾರನಾಗಿ ಹೋಗಿ ರಾಮನ ಎದುರಿನಲ್ಲಿ ನಿನ್ನ ಶೌರ್ಯ ಪರಾಕ್ರಮಗಳನ್ನು ಹೊಗಳಿದಾಗ ರಾಮನು ಚಿಂತಿತನಾದನೆ ? ಕೋಪಗೊಂಡನೆ ? ಕಾಂತಿಗುಂದಿದನೆ ? ತನ್ನ ಪ್ರಭುವನ್ನು ಹೊಗಳುವ ದೂತನು ರಾಜದೂತರಲ್ಲಿ ಅತಿಶ್ರೇಷ್ಠನು ಎಂದು ನನ್ನನ್ನು ಹೊಗಳಿ ನಿನ್ನ ಬಗ್ಗೆ ಮೆಚ್ಚಿಕೆಯಿಂದ ತಲೆದೂಗಿದನು. ೫೭. ನಿದ್ದೆ ಮಾಡುವಾಗ ಕನಸಿನಲ್ಲಿ ಮರಣವನ್ನು ಕಂಡವರು ತಕ್ಷಣ ಎದ್ದು ಕುಳಿತುಕೊಳ್ಳದೆ ಇರುತ್ತಾರೆಯೆ ? ಇದಕ್ಕೆ ಸಮನಾಯಿತು ನಿನ್ನ ರೀತಿ. ನಿನಗೆ ಬುದ್ಧಿ ಹೇಳುವ ಹಿತ ಚಿಂತಕರು ಇಲ್ಲವಾಯಿತೇ ? ಔಷಧಿಯು ತಿನ್ನಲು ಮೊದಲು ಕಹಿಯಾಗಿರುವುದು. ಅದನ್ನು ತಿಂದರೆ ಹೊಟ್ಟೆಯನ್ನು ಹೊಕ್ಕ ರೋಗವು ವಾಸಿಯಾಗುವುದು. ನಮ್ಮ ಮಾತು ಈ ರೀತಿಯದು" ಎಂದ ಶುಕ. ೫೮. "ಶ್ರೀಹರಿಯೊಡನೆ ಹಗೆತನವು ಕೂಡದು. ಮಾರಿಯೊಡನೆ ಸರಸ ಕ್ಷೇಮವಲ್ಲ. ಜಿಂಕೆಯು ತೋಳನನ್ನು ಕೊಂದು ಬದುಕಬಲ್ಲುದೆ ? ದಯಾನಿಧಿಯಾದ ರಘುರಾಮಚಂದ್ರನ ಶರಣುಹೋಗು, ಕೆಡಬೇಡ ಬೇಡ" ಎಂದು ಶುಕ ಸಾರಣರು ರಾವಣನಿಗೆ ಹೇಳಿದರು. ೫೯. "ಏತಕ್ಕೆ ನಿನಗೆ ಈ ಮಾತು. ನೀಚ ಮಾನವನನ್ನೂ ಕಪಿಗಳ ಹಿಂಡನ್ನೂ ಹೊಗಳುವುದೇ ? ಹಸುವಿಗೆ ಹುಲಿ ಹೆದರುವುದೆ ? ನನ್ನ ಸಾಮರ್ಥ್ಯವನ್ನು ತಿಳಿಯಲಾರದೆಹೋದೆಯಲ್ಲ. ನನ್ನಮೇಲೆ ಬಿದ್ದು ನೋಡಲಿ, ಯುದ್ಧದಲ್ಲಿ ಅಷ್ಟು ಜನರನ್ನೂ ಸ್ವರ್ಗಕ್ಕೆ ಕಳುಹಿಸದಿದ್ದರೆ ಲೋಕೈಕವೀರ ಎಂಬ ನನ್ನ

ಎಂದು ಹಲುಮೊಱೆದಸುರ ಹೂಂಕೃತಿ । ಯಿಂದ ಘರ್ಜಿಸಲುದುರಿದವು ನಭ
ದಿಂದ ತಾರಕಿ ತಳಮಗುಚಿತಂಬುಧಿ ಸುರಾಲಯ ದ
ಮಂದಿ ಮುಮ್ಮಳಿಯಾಯಿತೀ ಕಪಿ । ವೃಂದ ಕಂಪಿಸಿತೇನಿದದ್ಭುತ
ವೆಂದು ತೊರವೆಯರಾಯನೀಕ್ಷಿಸಿದನು ವಿಭೀಷಣನ ೬೦

ಬಿರುದನ್ನು ಕಿತ್ತು ಬಿಸಾಡು" ಎಂದು ರಾವಣ ನುಡಿದ. ೬೦. ಎಂದು ಹಲ್ಲು ಮಸೆದು ರಾವಣನು ಹೂಂಕಾರಮಾಡಿ ಆರ್ಭಟಿಸಲು ಆಕಾಶದಿಂದ ನಕ್ಷತ್ರಗಳು ಉದುರಿದವು, ಸಮುದ್ರ ಅಡಿ ಮೇಲಾಯಿತು, ದೇವಲೋಕದವರು ಭಯಂಕರ ಸಾವಿಗೀಡಾದರು, ಕಪಿಗಳ ಸಮೂಹವು ನಡುಗಿತು, ಇದೇನದ್ಭುತ ಎಂದು ರಾಮನು ವಿಭೀಷಣನ ಕಡೆಗೆ ನೋಡಿದನು.

# ಒಂಬತ್ತನೆಯ ಸಂಧಿ

ಸೂಚನೆ॥ ವೀರ ಲಂಕಾಧಿಪನ ಘನವಿ । ಸ್ತಾರ ವಿಮಲಚ್ಛತ್ರವನು ರಘು
ವೀರ ಕಡಿದನು ಕೆಣಕಿದನು ಕಪಿಪತಿ ದಶಾನನನ

ಕೇಳಿದೈ ರಘುವಂಶಲಕ್ಷ್ಮೀ । ಲೋಲಸುತ ರಾವಣನ ಹೂಂಕೃತಿ
ಕೇಳಿಸಿತು ಕಪಿಕಟಕದಲಿ ಕೈಯೊಡನೆ ದಶಮುಖನ
ಬಾಳ ಬೆಳಗಳ್ಳಿಱಿದುದಖಿಳ ದಿ । ಶಾಳಿಯನು ಬಳಿಕಾ ಖರಾಂತಕ
ಕೇಳಿದನು ಬಂದಸುರನಾರೆಂದಾ ವಿಭೀಷಣನ ೧

ಜೀಯ ಬಂದವನೀಗ ರಕ್ಕಸ । ರಾಯನಮಲಪುಲಸ್ತ್ಯನೆಂಬ ಮ
ಹಾಯತೀಂದ್ರನ ಪೌತ್ರಪುತ್ರನು ವಿಶ್ರವಸುವಿಂಗೆ
ರಾಯ ಚಿತ್ತೈಸಿವನ ವಿಕ್ರಮ । ದಾಯತಕೆ ಸರಿ ಸುಭಟರಸುರನಿ
ಕಾಯ ನಿರ್ಜರ ನರ ಭುಜಂಗಮರೊಳಗೆಯಿಲ್ಲೆಂದ ೨

ಇವನ ಖಂಡೆಯಕಳುಕಿ ದಿವಿಜರ । ಯುವತಿಯರು ಸೆಱೆಯಾಯ್ತು ತೆತ್ತರು
ವಿವಿಧ ವಸ್ತುಪ್ರಚಯವನು ಸುರ ನರ ಭುಜಂಗಮರು
ಭವ ವಿರಿಂಚಿ ಪ್ರಮುಖ ನಿರ್ಜರ । ರಿವನ ಕೈವಶವಾಯ್ತು ತಾರಸು
ಲವಕೆ ದೇವರು ಬಂದ ಬವರದ ಭಯವ ಮನಕೆಂದ ೩

ಸೂಚನೆ॥ ಲಂಕೇಶ್ವರ ವೀರ ರಾವಣನ ಬೆಳ್ಗೊಡೆಯನ್ನು ರಾಮನು ಕತ್ತರಿಸಿದನು. ಕಪಿಗಳೊಡೆಯ ಸುಗ್ರೀವನು ದಶಮುಖನನ್ನು ಕೆಣಕಿದನು. ೧. "ರಘುವಂಶಲಕ್ಷ್ಮೀಪತಿಯಪುತ್ರನೇ ಕೇಳಿದೆಯಾ, ರಾವಣನ ಹೂಂಕಾರವು ಕಪಿಸೈನ್ಯದಲ್ಲಿ ಕೇಳಿಸಿತು. ಅದರೊಡನೆ ರಾವಣನ ಕತ್ತಿಯ ಕಾಂತಿ ಅಷ್ಟದಿಕ್ಕುಗಳಿಗೂ ವ್ಯಾಪಿಸಿತು. ಆಗ ಖರನನ್ನು ಕೊಂದ ರಾಮನು 'ಈ ಬಂದ ರಾಕ್ಷಸನಾರು ?' ಎಂದು ವಿಭೀಷಣನನ್ನು ಪ್ರಶ್ನಿಸಿದನು. ೨. "ಸ್ವಾಮಿ, ಈಗ ಬಂದವನು ರಾಕ್ಷಸರಾಜ. ಪುಲಸ್ತ್ಯಮಹಾಮುನಿಯ ಮೊಮ್ಮಗ, ವಿಶ್ರವಸುವಿನ ಮಗ. ರಾಜನೇ ಆಲಿಸು, ಇವನ ಪರಾಕ್ರಮಾತಿಶಯಕ್ಕೆ ಸಮಾನರಾದ ವೀರರು ರಾಕ್ಷಸರು, ದೇವತೆಗಳು, ಮಾನವರು ಹಾಗೂ ಪಾತಾಳಲೋಕದವರಲ್ಲಿಲ್ಲ" ಎಂದ ವಿಭೀಷಣ. ೩. "ಇವನ ಖಡ್ಗಕ್ಕೆ ಹೆದರಿ ದೇವಲೋಕದ ಸ್ತ್ರೀಯರು ಸೆರೆಯಾದರು, ದೇವತೆಗಳು ಮಾನವರು ಸರ್ಪರು ನಾನಾ ವಿಧವಾದ ವಸ್ತುಗಳನ್ನು ಇವನಿಗೆ ಒಪ್ಪಿಸಿದರು, ಶಿವ ಬ್ರಹ್ಮನೇ ಮೊದಲಾದ ದೇವತೆಗಳು ಇವನ ಕೈವಶವಾದರು. ಸ್ವಾಮಿಯವರು ಬಂದಿರುವ ಯುದ್ಧದ ಭಯವು ಇವನ ಮನಸ್ಸಿಗೆ

ಅರಸ ಚಿತ್ತೈಸಿಂದ್ರ ಶಿಖಿ ಯಮ । ನಿರುತಿ ವರುಣ ಸಮೀರ ಹರಸಖ
ಸರಸಿರುಹಭವ ಸರ್ಪರಾಜನ ರಾಜಲಾಂಛನದ
ಸುರುಚಿರದ ಕಾಂಚನದ ರತ್ನೋ । ತ್ಕರದ ಮಕುಟಚ್ಛತ್ರವದೆ ದಶ
ಶಿರನ ಶಿರದಗ್ರದಲಿ ಸಿರಿಯಿನಿತಾರಿಗುಂಟೆಂದ ೪

ಜನಪ ಚಿತ್ತೈಸದೆ ಮಹಾಹವ । ವೆನಗೆ ತನಗೆಂದುಬ್ಬುವಾತಿನ
ಕೊನರ್ವ ಕೋಪದ ಖಿಂಡೆಯುದ ಝಡಪುಗಳ ಝಾಡಣೆಯು
ದಿನಪತೇಜವ ಜಜಿ‌ವ ಮಣಿಮಯು । ಕನಕಖಚಿತ ಕಿರೀಟಬದ್ಧದ
ಘನಬಲಾಯುತ ಸುಭಟರದೆ ಸುತ್ತಲು ದಶಾನನನ ೫

ಮಲೆವ ಮಾರಿಯು ಖಾತಿಯುಂದದ । ಕಳಿವಜಿ‌ವ ಕಡುಗೋಪದುಬ್ಬಿನ
ಕಲಿತ ಕರ್ಕಶಕಾಯುದರುಣಚ್ಛವಿಯಃ ಲೋಚನದ
ಬೇಗಿಡುವ ದಾಡೆಗಳ ಶೌರ್ಯದ । ಝಳದ ಝಾಡಿಯು ವೋಡಿಯುವನ
ಗ್ಗಳ ಪರಾಕ್ರಮಿ ಶಕ್ರಜಿತುವೆಲೆ ದೇವ ನೋಡೆಂದ ೬

ಹೊಗೆದೆಗೆದ ಹೆಬ್ಬುಲಿಯುವೊಲು ಝಗ । ಝಗಿಪ ತೇಜದ ಸುಪ್ರತಾಪದ
ಮೊಗದ ಕೋಪದ ತಾಪಕದ ತನಿಗಿಡಿಯು ದಾಡೆಗಳ
ಹೊಗರ ಹೊಸಜವ್ವನದ ಜವಗಿವ । ರುಗಳ ಲೆಕ್ಕಿಸದದಟನೀಗವ
ಮಗ ನರಾಂತಕನಸುರರಾಯುಂಗರಸ ಕೇಳೆಂದ ೭

ಸ್ವಲ್ಪವೂ ಇಲ್ಲ" ಎಂದ ವಿಭೀಷಣ. ೪. "ರಾಜಾರಾಮನೇ ನೋಡು. ಇಂದ್ರ, ಅಗ್ನಿ, ಯಮ, ನಿರ್ಋತಿ, ವರುಣ, ವಾಯು, ಕುಬೇರ, ಬ್ರಹ್ಮ, ಆದಿಶೇಷ ಇವರುಗಳ ರಾಜ ಚಿಹ್ನೆ ಇರುವ ಚಿನ್ನದ ಮತ್ತು ರತ್ನಗಳ ಕಿರೀಟಗಳು ಮತ್ತು ಕೊಡೆಗಳು ದಶಮುಖನ ತಲೆಯಮೇಲಿವೆ. ಇಷ್ಟೊಂದು ಸಂಪತ್ತು ಇನ್ನಾರಿಗುಂಟು" ಎಂದ ವಿಭೀಷಣ. ೫. "ರಾಜಾರಾಮ ನೋಡು, ಮಹಾಯುದ್ಧವು ನನಗೆ ತನಗೆ ಎಂದು ಉತ್ಸಾಹದಿಂದ ಮಾತನಾಡುವ, ಕೋಪದಿಂದ ಉರಿಯುವ, ಹೊಳೆಯುವ ಖಡ್ಗಗಳನ್ನು ಝಳಪಿಸುವ, ಸೂರ್ಯನ ತೇಜಸ್ಸನ್ನು ನಿಂದಿಸುವ, ರತ್ನಗಳಿಂದಲಂಕರಿಸಿದ ಚಿನ್ನದ ಕಿರೀಟಗಳನ್ನು ಧರಿಸಿದ ಮಹಾಬಲಶಾಲಿ ಯೋಧರು ರಾವಣನ ಸುತ್ತ ನೆರೆದಿದ್ದಾರೆ. ೬. ವಿರೋಧಿಸಿದ ಮಾರಿಯ ಕ್ರೋಧದಂತೆ ಮಿತಿಮೀರಿದ ಕೋಪದಿಂದ ಕೂಡಿದ, ದುಂಡುದುಂಡಾದ ಗಟ್ಟಿದೇಹದ ಕೆಂಗಣ್ಣುಗಳ, ಹೊಳೆಯುವ ಕೋರೆಹಲ್ಲುಗಳ, ಪರಾಕ್ರಮದ ಬಿಸಿಯ ಠೀವಿ ಯುಂದಿರುವ ಮಹಾವೀರನು ಇಂದ್ರಜಿತು, ನೋಡಿ ಪ್ರಭು" ಎಂದ. ೭. ರೋಷಗೊಂಡ ಹೆಬ್ಬುಲಿಯಂತೆ ಝಗಝಗಿಸುವ ತೇಜಸ್ಸಿನಿಂದ ಕೂಡಿ ಮುಖದಲ್ಲಿ ಶೌರ್ಯವುಕ್ಕು ತ್ತಿರುವ, ಕೋಪತಾಪ ಸೂಸುತ್ತ ಕೋರೆಹಲ್ಲುಗಳಿಂದ ಕಿಡಿಗಳು ಹಾರುತ್ತಿರುವ, ಯೌವನದ ಹೊಸಕಾಂತಿಯನ್ನು ಬೀರುತ್ತ ಯಮಗಿಮರುಗಳನ್ನು ಲಕ್ಷಿಸದ ಪರಾಕ್ರಮಿ

ಸುರರ ಬಿರುದಿನ ಬಾವುಲಿಯು ಸುರು । ಚಿರದ ಮಣಿಮಂಡನದ ಕರ್ಕಶ
ತರದ ಬಂಡೆಯುದುಪ್ಪರದ ಮುಪ್ಪುರಿಯು ಹುಬ್ಬುಗಳ
ಮುರಿದ ಮಿಾಸೆಯು ಮೇಚಕಾದ್ರಿಯು । ಸರಿಸನವನವನೀಗ ಮಂಡೋ
ದರಿಯ ಮಗನವನೀಗ ದೇವಾಂತಕನು ನೋಡೆಂದ ೮

ಹರಿಹರಬ್ರಹ್ಮರನು ಮೋಹಿದ । ಧುರದೊಳಣುವಿಗೆ ತಾರದುನ್ಮದ
ಭರಿತ ಭೀಷಣದುಗ್ರ ವಿಕ್ರಮದಾನನತ್ರಯುದ
ಧುರಕೆ ತಾ ವೀಳಿಯವನೆಂದು । ಪ್ಪರದ ಕರದಲಿ ಬೇಡುವವನೀ
ಗರಿಭಯಂಕರ ಭಾರಿ ವೀರ ತ್ರಿಶಿರ ನೋಡೆಂದ ೯

ಅರಸ ನೋಡೆಡವಂಕದಲಿ ವಿ । ಸ್ತರಣ ವಿಮಲಾಭರಣಕಾಂತಿಯ
ಕರಮರೀಚಿಪ್ರಭೆಯನುಗುಳುವ ನಿಶಿತ ದಾಡೆಗಳ
ವರುಷಕಾಲದ ಕಾರ್ಮುಗಿಲ ಬಂ । ಧುರದ ಬಣ್ಣದ ಸುಪ್ರತಾಪದ
ಸಿರಿಯನುಳ್ಳವನೀಗ ಕೋಮಲಕಾಯನತಿಕಾಯ ೧೦

ದೇವ ನೋಡು ನಿಶಾಚರೇಂದ್ರಂ । ಗೈವರವರೀಗ ಪ್ರಧಾನರು
ಕೋವಿದರು ಸಮರದಲಿ ಕಂಪನು ವಜ್ರದಂಷ್ಟ್ರಕರು
ದೇವರಿಪು ಧೂಮ್ರಾಕ್ಷ ನಯಸಂ । ಭಾವಿತನು ವೀರಪ್ರಹಸ್ತ ಮ
ಹಾವಿಕೃತಬಲ ಕಲಿ ಮಹೋದರರೀಗಲವರೆಂದ ೧೧

ನರಾಂತಕನನ್ನು ನೋಡು, ಅವನು ರಾಕ್ಷಸರಾಜನ ಮಗ. ೮. ದೇವತೆಗಳ ಬಿರುದು ಬಾವಲಿಗಳಿಂದಲೂ ರತ್ನದೊಡವೆಗಳಿಂದಲೂ ಅಲಂಕರಿಸಿಕೊಂಡು ಕ್ರೂರವಾದ ಕತ್ತಿಯನ್ನೆತ್ತಿ ಹಿಡಿದು ಹುರಿಗೊಂಡ ಹುಬ್ಬು ಮತ್ತು ತಿರುವಿದ ಮಿಾಸೆಗಳಿಂದ ಕಪ್ಪುಬಣ್ಣದ ಪರ್ವತಕ್ಕೆ ಸರಿಸಮಾನವಾಗಿ ಕಾಣುವ ಅವನು ಮಂಡೋದರಿಯ ಮಗ ದೇವಾಂತಕ, ನೋಡು. ೯. ಹೋರಾಡಲು ಬಂದ ಹರಿಹರಬ್ರಹ್ಮರನ್ನು ಕದನದಲ್ಲಿ ಅಣುವಿಗೂ ಕೀಳಾಗಿ ಕಾಣುವ ಮದಿಸಿದ ಭಯಂಕರವಾದ ಮೂರು ಮುಖಗಳ ಭಾರಿ ವೀರತ್ರಿಶಿರನು 'ಯುದ್ಧಕ್ಕೆ ವೀಳೆಯವನ್ನು ಕೊಡು' ಎಂದು ಕೈಯೆತ್ತಿ ಬೇಡಿಕೊಳ್ಳುತ್ತಿದ್ದಾನೆ ನೋಡು" ಎಂದ ವಿಭೀಷಣ, ೧೦. "ರಾಮ.ನೋಡು, ವಿವಿಧಾಭರಣಗಳ ಕಾಂತಿಯಿಂದ ಶೋಭಿಸುತ್ತ ಸೂರ್ಯಪ್ರಕಾಶವನ್ನು ಬೀರುವ ಕೋರೆದಾಡೆಗಳ, ಮಳೆಗಾಲದ ಕಾರ್ಮುಗಿಲಿನ ಮೈಬಣ್ಣದ ಮಹಾಪ್ರತಾಪಶಾಲಿ ಕೋಮಲಶರೀರಿ ಅತಿಕಾಯನು ರಾವಣನ ಎಡಗಡೆಯಲ್ಲಿದ್ದಾನೆ. ನೋಡು. ೧೧. ಸ್ವಾಮಿ, ಅಲ್ಲಿ ನೋಡಿ, ಅವರು ರಾಕ್ಷಸೇಂದ್ರನಿಗೆ ಕದನಕಲಿಗಳಾದ ಐದುಜನ ಮಂತ್ರಿಗಳು, ಕಂಪನ ವಜ್ರದಂಷ್ಟ್ರಕರುಗಳವರು. ದೇವತೆಗಳ ಶತ್ರು ಧೂಮ್ರಾಕ್ಷ, ನ್ಯಾಯಜ್ಞ ಧೀರ ಪ್ರಹಸ್ತ, ಮಹಾಪರಾಕ್ರಮಶಾಲಿ ಮಹೋದರರು

ಶುಕನು ಕುಂಭ ನಿಕುಂಭ ಮಾಯಾ । ಮಕರನಯನ ಸುಮಾಲಿ ಯೂಪಾಂ
ಬಕ ಸುಬಾಹು ಸುಪಾರ್ಶ್ವ ಸಾರಣ ಶ್ರೋಣಿತಾಂಬಕರು
ವಿಕಟ ಯುದ್ಧೋನ್ಮತ್ತ ಮಾಯಾ । ಪ್ರಕಟ ವಿದ್ಯುಜ್ಜಿಹ್ವ ಖಳನಾ
ಯಕರ ನೆಱವಿಯ ನೋಡು ನೋಡೆಲೆ ಜೀಯ ನೀನೆಂದ ೧೨

ಅದೆ ದುರಂಧರ ಸಮರಶೀಲ । ಪ್ರದ ಮಹಾಪಾರ್ಶ್ವಾದಿ ಭಟರ
ಗ್ಗದ ಬಲಿಷ್ಠರನುಸುರಲೇನದ ದೇವ ಚಿತ್ತೈಸು
ತುದಿಗೆ ನಮ್ಮಾ ಸೇನೆ ಸಮರದೊ । ಳೊದಗುವುದು ಕಡು ಚಿತ್ರವಿವರೊಳು
ಕದನದಭಿಗತಭಾರ ಬಿದ್ದುದು ನಿಮ್ಮ ಮೇಲೆಂದ ೧೩

ಇವನಲೊಂದದೆ ಕೊಱತೆ ಸೀತಾ । ಯುವತಿಯನು ಕದ್ದೊಯ್ದನೆಂಬೀ
ಹವಣೆನದಱಿಂದೇನಹನೊ ನಾನಱಿಯೆನುಳಿದಂತೆ
ಇವನ ಗೆಲುವ ಸಮರ್ಥರಿಲ್ಲೀ । ಭುವನ ಮೂಱಱೊಳೆನಲು ನಸುನಗು
ತವನಿಪತಿ ನೋಡಿದನು ಬೇಡಿದನನುಜನನು ಧನುವ ೧೪

ಉಗಿದು ಗವಸಣಿಗೆಯನು ಚಾಪದ । ಹೆಗಲುಗಳನಾರೈದು ತಿರುವನು
ನೆಗಹಿ ಬೆರಳಿನಲೇಱಿಸಿದನುದ್ದಂಡ ಕಾರ್ಮುಕವ
ಉಗಿದು ಬತ್ತಳಿಕೆಯಲಿ ನಿಶಿತಾ । ಶುಗಸಹಿತ ನೀಡಿದನು ರಘುಪತಿ
ನಗೆಮೊಗದಲೊಂದಂಬ ಕಳುಹಿದನಸುರನಿದ್ದೆಡೆಗೆ ೧೫

ಇವರು" ಎಂದ. ೧೨. "ಶುಕ, ಕುಂಭ, ನಿಕುಂಭ, ಮಾಯಾವಿ ಮಕರಾಕ್ಷ, ಸುಮಾಲಿ, ಯೂಪಾಂಬಕ, ಸುಬಾಹು, ಸುಪಾರ್ಶ್ವ, ಸಾರಣ, ಶೋಣಿತಾಂಬಕ, ಯುದ್ಧೋನ್ಮತ್ತನೂ ಮಾಯಾವಿಯೂ ಆದ ವಿದ್ಯುಜ್ಜಿಹ್ವ ಮೊದಲಾದ ರಾಕ್ಷಸನಾಯಕರ ಸಮೂಹವನ್ನು ನೋಡಿ ಪ್ರಭು, ನೋಡಿ" ಎಂದು ತೋರಿಸಿದ ವಿಭೀಷಣ. ೧೩. "ಅಗೋ ಆ ಯುದ್ಧಕುಶಲರಾದ ಮಹಾಪಾರ್ಶ್ವನೇ ಮೊದಲಾದ ಬಲಿಷ್ಠ ವೀರರನ್ನು ಏನು ·ಹೇಳಲಿ ದೇವ. ಕೊನೆಗೆ ನಮ್ಮ ಈ ಸೈನ್ಯವು ಕದನಕ್ಕೆ ಒದಗುವುದು ಸೋಜಿಗವಾಗಿದೆ. ಈಗ ಕೂಡಿಬಂದ ಕಾಳಗದ ಭಾರವು ನಿಮ್ಮ ಮೇಲೆ ಬಿದ್ದಿದೆ" ಎಂದ ವಿಭೀಷಣ. ೧೪. "ಸೀತೆಯನ್ನು ಕದ್ದುಕೊಂಡು ಹೊದನೆಂಬ ಕೊರತೆಯೊಂದು ಇವನನ್ನು ಸೇರಿಕೊಂಡಿದೆ. ಅದರಿಂದ ಇವನು ಏನಾಗುವನೋ ನಾನು ತಿಳಿಯೆ. ಅದನ್ನು ಬಿಟ್ಟರೆ ಈ ಮೂರು ಲೋಕಗಳಲ್ಲಿ ಇವನನ್ನು ಗೆಲ್ಲುವ ಸಮರ್ಥರಿಲ್ಲ" ಎಂದು ವಿಭೀಷಣನು ನುಡಿಯಲು ರಾಮನು ನಸುನಗುತ್ತ ಲಕ್ಷ್ಮಣನನ್ನು ನೋಡಿ ಧನುಸ್ಸನ್ನು ಕೊಡುವಂತೆ ಕೇಳಿದನು. ೧೫. ಚೀಲದಿಂದ ಹೊರತೆಗೆದು ಬಿಲ್ಲಿನ ಎರಡು ತುದಿಗಳನ್ನೂ ಪರೀಕ್ಷಿಸಿ ಹಗ್ಗವನ್ನು ಒಡಿದೆತ್ತಿ ಬೆರಳುಗಳಿಂದ ಆ ಪ್ರಚಂಡ ಬಿಲ್ಲಿಗೆ ಏರಿಸಿದನು. ಬತ್ತಳಿಕೆಯಿಂದ ಹರಿತವಾದ ಬಾಣವನ್ನು ಸೆಳೆದು ರಾಮನ ಕೈಗೆ ಕೊಟ್ಟನು. ರಘುಪತಿಯು ನಗುಮುಖದಿಂದ ಒಂದು

ಕುಶನೆ ಕೇಳೈ ತರುಣ ತರಣಿಯ । ರಸುಮೆಗಳನುಗುಳುವ ಸುರತ್ನ
ಪ್ರಸರ ಮುಕ್ತಾಫಲವಿಕೀರ್ಣಪ್ರಭೆಯ ಪಲ್ಲವದ
ಮಿಸುಪ ಧವಳಚ್ಛತ್ರಪಂಗ್ತಿಯ । ಪಸರಿಕೆಯ ಪಂಟಿಸಿತು ಬೆದಱಿದು
ದಸುರಬಲವಲ್ಲಲ್ಲಿ ಬಿರುದಿನ ಬಲುಭಟಸ್ತೋಮ ೧೬

ತೆರಳಿ ಕೈಯೊಡನಂಬು ಸಂಧಿಸಿ । ತಿರುಗಿ ಬಾರದ ಮುನ್ನ ವಾನರ
ರರಸ ಲಂಘಿಸಿ ಹೊಯ್ದನಾ ದಶಶಿರನ ಮಸ್ತಕವ
ಉರುಳಿದನು ನೆಲಕುಪ್ಪರಿಸೆ ಜ । ಜ್ಝರಿತವಾದುದು ಕೆದಱಿ ಕೈದುವ
ಪರಹಿದರು ಹರಿದಶ್ವತನುಜನ ಮೇಲೆ ಭಟನಿಕರ ೧೭

ಒತ್ತಿ ಗಂಟಲನಸುರರಸೆಯನ । ನೆತ್ತಿ ನೆಗ್ಗಲು ಬೊಬ್ಬಿಱಿದು ಕಪಿ
ಕಿತ್ತನನುಪಮ ರಾಜಚಿಹ್ನದ ರತ್ನಬದ್ಧರದ
ಹತ್ತು ಮುಕುಟವನೆಡಬಲದ ಸುಭ । ಟೋತ್ತಮರ ಸದೆಬಡಿದು ತಂದವ
ನಿತ್ತನಂಘ್ರಿಸರೋಜಯುಗಳಕೆ ರಾಘವೇಶ್ವರನ ೧೮

ಉಡಿದು ಗಗನಕೆ ನೆಗಹಿ ಛತ್ರವ । ಕೆಡಹಿದುದು ಶರವಿಳೆಗೆ ಕಪಿಗಳ
ಗಡಣ ನಲಿಯಲು ಬಂದು ಬೆಸನೇನೆನುತ ರಘುಪತಿಯ
ಎಡೆಗೆ ಬರೆ ಬಾಣಧಿಯೊಳನ್ನಬ । ರಡಗಿರೆಂದಸುರಾರಿ ನೇಮಿಸೆ
ನುಡಿದನತ್ತಲು ರಾವಣನು ಸಸುಭಯದ ಬೆಱಗಿನಲಿ ೧೯

ಬಾಣವನ್ನು ಹೂಡಿ ರಾವಣನ ಬಳಿಗೆ ಬಿಟ್ಟನು. ೧೬. ಕುಶನೆ ಕೇಳು, ಬಾಲಸೂರ್ಯನ ಕಿರಣಗಳನ್ನು ಚೆಲ್ಲುವ ರತ್ನಗಳಿಂದ ಶೋಭಿಸಿ ಮುತ್ತಿನ ಕಾಂತಿಯೇ ಚಿಗುರಿದಂತೆ ಹೊಳೆಯುವ ಬಿಳಿಯ ಕೊಡೆಗಳ ಸಾಲನ್ನು ರಾಮನ ಬಾಣವು ಕೆಳಕ್ಕೆ ಕೆಡವಿತು. ರಾಕ್ಷಸ ಸೈನ್ಯವೂ ಹೆಸರಾಂತ ವೀರರೂ ಇದ್ದಲ್ಲೇ ಬೆದರಿದರು. ೧೭. ರಾಮನ ಬಾಣವು ಹೋಗಿ ರಾವಣನ ಛತ್ರಿಯನ್ನು ಬೀಳಿಸಿ ಹಿಂದಿರುಗುವ ಮೊದಲೇ ವಾನರರಾಜ ಸುಗ್ರೀವನು ನೆಗೆದು ರಾವಣನ ತಲೆಗೆ ಹೊಡೆದನು. ರಾವಣನು ನೆಲಕ್ಕೆ ಉರುಳಿಬಿದ್ದು ಮೇಲಕ್ಕೇಳಲು ಕೂದಲು ಕೆದರಿ ಸಡಿಲವಾಯಿತು. ರಾಕ್ಷಸಯೋಧರು ಸುಗ್ರೀವನ ಮೇಲೆ ಆಯುಧಗಳನ್ನು ಎಸೆದರು. ೧೮. ಸುಗ್ರೀವನು ರಾವಣನ ಗಂಟಲನ್ನು ಅಮುಕಿ, ಅವನ ನೆತ್ತಿ ನೆಗ್ಗುವಂತೆ ಆರ್ಭಟಿಸಿ ರಾಜಚಿಹ್ನೆಯ ರತ್ನ ವಜ್ರಗಳ ಹತ್ತು ಕಿರೀಟಗಳನ್ನೂ ಕಿತ್ತುಕೊಂಡನು. ಎಡ ಬಲಗಡೆಗಳಲ್ಲಿದ್ದ ರಾಕ್ಷಸಯೋಧರನ್ನು ಸದೆಬಡಿದು ರಾಘವೇಶ್ವರನ ಪಾದಕಮಲಗಳಿಗೆ ಆ ಕಿರೀಟಗಳನ್ನು ಸಮರ್ಪಿಸಿದನು. ೧೯. ರಾವಣನ ಬೆಳ್ಗೊಡೆಯನ್ನು ಮುರಿದು ಆಕಾಶಕ್ಕೆತ್ತಿ ಬಾಣವು ನೆಲಕ್ಕೆ ಕೆಡವಿತು. ಕಪಿಸಮೂಹವು ಸಂತೋಷಿಸುತ್ತಿರಲು ಬಾಣವು ಅಪ್ಪಣೆಯೇನು ಎನ್ನುತ್ತ ರಘುಪತಿಯ ಬಳಿಗೆ ಬಂದಿತು. ಅಗತ್ಯ ಬರುವವರೆಗೆ ಬತ್ತಳಿಕೆಯಲ್ಲಿ ಅಡಗಿರು ಎಂದು ರಾಮನು ಬಾಣಕ್ಕೆ ಅಪ್ಪಣೆ ಮಾಡಿದನು. ಅತ್ತ

ಖೋಡಿಯಿಲ್ಲದ ವೀರನಹ ರಣ । ಹೇಡನಲ್ಲದ ಶೌರ್ಯನಹ ನುಡಿ
ದಾಡಬೇಹುದು ಗುಣವ ಹಗೆಯಾದಡೆಯು ಕಂಡುದನು
ರೂಢಿಸಿದ ಬಿಲುವಿದ್ಯೆಯಲಿ ಪರಿ । ಪಾಡು ಶಿವನಲಿ ನಿನಗೆನುತ ಕೊಂ
ಡಾಡಿದನು ದಶಶಿರನು ದಶರಥರಾಯನಂದನನ ೨೦

ಮದವಳಿದು ಮನಗುಂದಿ ಚಿಂತೆಯ । ಕದಡುಮನದಲಿ ಸರಿದನಾ ಖಳ
ಸದನಕತ್ತಲು ರಾಮನಿತ್ತಲು ಕಪಿಪತಿಯ ನೋಡಿ
ತುದಿವೆರಳನಲ್ಲಾಡಿ ಕೆಡಿಸಿದೆ । ತುದಿಗೆ ನಮ್ಮನು ರಾಜನೀತಿಯ
ನೊದೆದೆ ನಾವಿನ್ನೆಂಬುದೇನೆಂದರಸ ಕೋಪಿಸಿದ ೨೧

ಅರಸು ನೀನೀ ಬಲಕೆ ರಿಪುಭಟ । ರರಸನಲಿ ಸಿಕ್ಕಿದರೆ ನಿಜಬಲ
ದರಸ ಕಟ್ಟಿದ ಕರುವಿನಂತಹುದೆಮ್ಮ ಬಲ ಬಳಿಕ
ಅರಸುನೀತಿಯಿದಲ್ಲ ಮಂತ್ರ । ಜ್ಞರಿಗೆ ಮಾರ್ಗವಿದಲ್ಲ ಕಟ್ಟಾ
ಸುರದ ಕರ್ಮವ ನೆನೆದೆ ನಾವಿನ್ನೆಂಬುದೇನೆಂದ ೨೨

ದೇವರಂಘ್ರಿಯ ಕರುಣವುಳ್ಳರಿ । ಗಾವ ಭಯವೇಗುವವು ತಾ ನಿ
ರ್ದೈವನೇ ಚಿತ್ತೈಸದಿರಿ ರಣದಪಜಯಸ್ಥಿತಿಯ
ಈ ವಿಘಳಿಗೆಯೊಳುಗಿದುಬಿಸುಡುವೆ । ನೀ ವಿಬುಧ ವಿದ್ವಿಷನ ವೀರ
ಶ್ರೀವಧುವಿನೋಲೆಯನು ಬೆಸಸಿನ್ನೇಕೆ ತಡವೆಂದ ೨೩

ರಾವಣನೂ ತುಸ ಹೆದರಿ ಆಶ್ಚರ್ಯದಿಂದ ಮುಂದಿನಂತೆ ನುಡಿದನು. ೨೦. "ದೋಷವಿಲ್ಲದ ವೀರನಾಗಿದ್ದರೆ, ರಣಹೇಡಿಯಲ್ಲದ ಶೂರನಾಗಿದ್ದರೆ ಅವನು ಶತ್ರುವಾದರೂ ಕೂಡ ತಾನು ನೋಡಿದ ಗುಣವನ್ನು ಎತ್ತಿ ನುಡಿಯಬೇಕು, ಬಿಲ್ವಿದ್ಯಾಪರಿಣತಿಯಲ್ಲಿ ಶಿವನಿಗೆ ಪೂರ್ಣಸಮಾನ ನೀನು" ಎಂದು ದಶರಥರಾಜನ ಮಗನನ್ನು ದಶಕಂಠನು ಕೊಂಡಾಡಿದನು. ೨೧. ಗರ್ವ ಮುರಿದು ಮನಸ್ಸು ಕುಂದಿ ಚಿಂತೆಯಿಂದ ಕದಡಿದ ಮನಸ್ಸಿನಲ್ಲಿ ರಾವಣನು ತನ್ನ ಅರಮನೆಗೆ ಹೋದನು. ಇತ್ತ ರಾಮನು ಕಪಿಗಳೊಡೆಯ ಸುಗ್ರೀವನನ್ನು ನೋಡಿ ತುದಿಬೆರಳನ್ನು ತೂಗಿ, "ಕೊನೆಗೆ ನಮ್ಮನ್ನು ಕೆಡಿಸಿದೆ. ರಾಜನೀತಿಯನ್ನು ಹಾಳು ಮಾಡಿದೆ. ನಾವಿನ್ನು ಹೇಳುವುದೇನಿದೆ" ಎಂದು ಕೋಪಿಸಿದನು. ೨೨. "ನೀನು ಈ ಸೈನ್ಯದೊಡೆಯ. ಶತ್ರುರಾಜನಿಗೆ ನಮ್ಮ ಸೈನ್ಯದೊಡೆಯನು ಸಿಕ್ಕಿದರೆ ನಮ್ಮ ಸೈನ್ಯವು ಕಟ್ಟಿಹಾಕಿದ ಕರುವಿನಂತಾಗುವುದು. ಇದು ರಾಜನೀತಿಯಲ್ಲ. ಸಲಹೆಯೀಯಬೇಕಾದವನ ಮಾರ್ಗವಿದಲ್ಲ. ಉಗ್ರ ಕಾರ್ಯವನ್ನು ಕೈಗೊಂಡೆ ನೀನು. ನಾವಿನ್ನೇನು ಹೇಳೋಣ" ಎಂದ ರಾಮ. ೨೩. "ಸ್ವಾಮಿಯವರ ಪಾದಗಳ ಕರುಣವುಳ್ಳವರಿಗೆ ಯಾವ ಭಯ ಏನು ಮಾಡಬಲ್ಲುದು. ನಾನು ದೇವರ ಕೃಪೆಯಿಲ್ಲದವನೇ? ಯುದ್ಧದಲ್ಲಿ ಸೋಲಾಗುವುದೆಂಬ ವಿಷಯವನ್ನು ಯೋಚಿಸಬೇಡಿ. ಈ ಅಸುರನ ಪರಾಕ್ರಮಲಕ್ಷ್ಮಿಯ ಓಲೆಯನ್ನು ಈ

ಎಂಬ ಮಾತಿಗೆ ಯೂಥನಾಥಕ । ದಂಬ ಕೈಗೈದಬ್ಬರಿಸಿದುದು
ಕೊಂಬುಗಿದ ಹೆಮ್ಮರ ಶಿಲೋಚ್ಚಯ ಶಿಖರಿ ಸಮಿತಿಯಲಿ
ಲಂಬಿಸಿತು ಲಳಿಯೇಳಿ ಲಗ್ಗೆಯ । ರ್ಕೊಂಬಿಸಿತು ಮೇಲೆದ್ದು ರಿಪುನಿಕು
ರುಂಬದಸ್ತ್ರಾವಳಿಯ ಚೂಣಿಯ ಚಟುಳ ಭಟನಿಕರ ೨೪

ಸೈರಿಸನ್ನಬರರಸುನೀತಿಯ । ಸಾರವಿನ್ನೊಂದುಂಟು ಹಗೆಯಲಿ
ಸೇರಿ ಸಿಕ್ಕಿದ ವಸ್ತುವಿಗೆ ಸಂಧಾನಕೃತಸಮಯ
ನಾರಿಯನು ಬೇಡಿಸುವನದಱ ನಿ । ವಾರಣೆಯ ಮುಖವಱಿದು ಮೇಲುಪ
ಚಾರಣೆಯ ಪಂಥದಲಿ ಪಡಿತಳಿಸುವುದು ನೀನೆಂದ ೨೫

ಮನಕೆ ನಿನಗದು ಬಹಡೆ ರಾಕ್ಷಸ । ಜನಪನಲ್ಲಿಗೆ ಕಳುಹು ಸಂಧಿಗೆ
ವಿನುತ ನಯಚರಿತಜ್ಞನನು ಪಟುಭಾಷಿತಜ್ಞನನು
ಅನುವರಪ್ರಜ್ಞನನು ನಿರ್ಭಯ । ಮನನ ಶೀಲಜ್ಞನನು ನಮ್ಮಯ
ಮನದಲಿದ್ದಭಿಮತವಿದೀಗೆಂದಸುರಹರ ನುಡಿದ ೨೬

ಲೇಸು ದೇವರು ನೆನೆದ ರೀತಿಯ । ಮೈಸಿರಿಯ ಪರಿಯೆಂದು ಜಾಂಬವ
ಕೇಸರಿಗಳೊಪ್ಪಿದರು ತಪ್ಪಲ್ಲೆಂದನಸುರೇಂದ್ರ
ಈಸು ದೊಡ್ಡಿತು ಮಾಡಲೇನಾ । ಭಾಸನನು ಸಾಕೆಂದು ವಾಲಿ ಹು
ತಾಶನರ ನಂದನರು ಕೆದಱಿದರುರುಪರಾಕ್ರಮವ ೨೭

ಕ್ಷಣ ಕಿತ್ತು ಬಿಸಾಡುವೆನು. ಅಪ್ಪಣೆ ಮಾಡಿ, ತಡವೇಕೆ" ಎಂದ ವಿಭೀಷಣ. ೨೪. ವಿಭೀಷಣನ ಮಾತನ್ನು ಕೇಳಿ ಸೇನಾನಾಯಕರು ಉತ್ಸಾಹದಿಂದ ಅಬ್ಬರಿಸಿದರು ; ಕೊಂಬೆಗಳನ್ನು ಕಿತ್ತ ದೊಡ್ಡಮರ ಮತ್ತು ಪರ್ವತಗಳ ಮೇಲೆ ತೂಗಾಡಿದರು. ಶತ್ರುಗಳ ಅಸ್ತ್ರಗಳನ್ನು ಎದುರಿಸಿ ನಿಂತ ಮುಂಚೂಣಿಯ ಚುರುಕಿನ ವೀರರು ಉತ್ಸಾಹದಿಂದ ಆಕ್ರಮಣವನ್ನು ಬಯಸಿದರು. ೨೫. "ರಾಜನೀತಿಯ ಅಂಶ ಇನ್ನೊಂದುಂಟು ; ಅಲ್ಲಿಯವರೆಗೆ ಸೈರಿಸು. ಶತ್ರುವಿನ ಬಳಿ ಸೇರಿಹೋಗಿರುವ ವಸ್ತುವಿಗಾಗಿ ಸಂಧಾನವನ್ನು ಏರ್ಪಡಿಸುವುದು ನಿಯಮ. ಸೀತೆಯನ್ನು ಪಡೆದುಕೊಳ್ಳುವುದಕ್ಕಾಗಿ ಯುದ್ಧಮಾಡುವವನು ಯುದ್ಧನಿವಾರಣೆಯ ಕ್ರಮವನ್ನು ತಿಳಿಯಬೇಕು. ಆದುದರಿಂದ ಮೊದಲು ಸಂಧಿಯ ಆದರಣೆಯ ಮಾರ್ಗವನ್ನು ನೀನು ಪ್ರಯತ್ನಿಸಿ ತಿಳಿಯಬೇಕು" ಎಂದ ರಾಮ. ೨೬. "ನಿನ್ನ ಮನಸ್ಸಿಗೆ ಇದು ಬಂದ ಪಕ್ಷಕ್ಕೆ ರಾಕ್ಷಸರಾಜನ ಬಳಿಗೆ ರಾಜನೀತಿವಿಶಾರದನೂ, ದಕ್ಷಮಾತಾಳಿಯೂ, ಕದನಶಾಸ್ತ್ರಜ್ಞನೂ, ನಿರ್ಭಯ ಮನಸ್ಸಿನವನೂ ಆಚಾರವಂತನೂ ಆದವನನ್ನು ಸಂಧಿಗೆ ಕಳುಹಿಸು. ಇದು ನಮ್ಮ ಮನಸ್ಸಿನಲ್ಲಿದ್ದ ಅಭಿಪ್ರಾಯ" ಎಂದು ಅಸುರಾರಿ ರಾಮನು ನುಡಿದ. ೨೭. "ಪ್ರಭುಗಳ ಆಲೋಚನಾಕ್ರಮವು ಸರಿ" ಎಂದು ಜಾಂಬವ ಕೇಸರಿಗಳು ಒಪ್ಪಿದರು; 'ಇದು ತಪ್ಪಲ್ಲ' ಎಂದ ವಿಭೀಷಣ. 'ಆ ಹದ್ದನ್ನು ಇಷ್ಟು ದೊಡ್ಡದು ಮಾಡಬೇಕೇ ? ಸಾಕು' ಎಂದು ವಾಲಿ ನೀಲರು ತಮ್ಮ ಪರಾಕ್ರಮ

ಜೀಯ ನಿಮ್ಮೆಯ ಮತವೆ ಮತವಿದ । ರಾಯತಿಕೆ ನಮಗೇಕೆ ನೀವೆಂ
ದೀಯಶೇಷ ಗುಣಂಗಳಂಗದನಂಗಶೋಭೆಯಲಿ
ಸ್ಥಾಯಿಯಾಗಿದೆ ಜೀಯಯೆನೆ ರಘು । ರಾಯನಹುದೆಂದೊಪ್ಪಿದನು ದಿನ
ನಾಯಕನು ಸಾರಿದನು ಬಳಿಕ ಪರಾಂಗನಾಸತಿಯ ೨೮

ವಾರಿಜಾಸನನಮರ ಮನುಜ ಮ । ಹೋರಗರ ನೆರೆಯಾಳ್ವ ರಕ್ಕಸ
ವೀರ ದಶಕಂಧರನು ಪಡೆದಾಯುಷ್ಯರಾಶಿಗಳ
ತೀರಲಳಿದಪರಾಂಬುರಾಶಿಯ । ತೀರದಲಿ ತಂದಿಳುಹಿದನುಪಮ
ಸಾರತರ ಮಣಿಮಯದ ಕೊಳಗವಿದೆನಲು ರವಿ ಮೆರೆದ ೨೯

ಸವೆದವೀಚೆಯಲರಸಗರವುನೆ । ತವಗಸಭೆ ಲಕ್ಷ್ಮಣ ವಿಭೀಷಣ
ರವಿಸುತಾದಿ ಸಮಸ್ತ ಸೇನಾಧಿಪರಿಗೊತ್ತಿನಲಿ
ಭವನವಾ ಭವನಗಳ ಬಾಹೆಯ । ಲವತರಿಸಿದವು ಕೋಟೆ ಪಡಿಯಗ
ಳವನಿಜಾಸುತ ಕೇಳು ಸುರವರ್ಧಕಿಯ ಕೆಲಸದಲಿ ೩೦

ಬಿಜಯಮಾಡಿದನರಸನನಿಲಾ । ತ್ಮಜನ ಕೈವಿಡಿದಮರರಾಯನ
ಗಜರು ಗಹಳೆಯ ಸನ್ನೆಯಲಿ ಸೇನಾಧಿಪರು ಸಹಿತ
ನಿಜನಿವಾಸಕೆ ವಿಶ್ವಕರ್ಮನ । ಭಜನೆಯನು ಕೈಕೊಂಡು ಬೀಡಿಕೆ
ಗಜತನುಜ ಸುಗ್ರೀವ ಮುಖ್ಯರ ಕಳುಹಿದನು ಬಳಿಕ ೩೧

ವನ್ನು ತೋರಿದರು. ೨೮. "ಸ್ವಾಮಿ ನಿಮ್ಮ ಅಭಿಪ್ರಾಯವೇ ನಿಜಾಭಿಪ್ರಾಯ. ಇದರ ವ್ಯಾಖ್ಯಾನ ನಮಗೇಕೆ ? ನೀವು ಹೇಳಿದ ಸಮಸ್ತ ಗುಣಗಳೂ ಅಂಗದನಲ್ಲಿ ಸ್ಥಿರವಾಗಿವೆ" ಎಂದು ಹೇಳಲು ರಘುರಾಮನು ಅಹುದು ಎಂದು ಒಪ್ಪಿಕೊಂಡನು. ಅಷ್ಟುಹೊತ್ತಿಗೆ ಸೂರ್ಯನು ಪಶ್ಚಿಮದಿಕ್ಕೆಂಬ ಹೆಂಡತಿಯ ಬಳಿಗೆ ಹೋದನು (ಸೂರ್ಯನು ಮುಳುಗಿ ದನು.) ೨೯. ಸುರರು, ನರರು ಮತ್ತು ಉರಗರನ್ನು ಆಳುವ ರಾಕ್ಷಸವೀರ ದಶಕಂಠನ ಆಯುಷ್ಯರಾಶಿಗಳನ್ನು ಬ್ರಹ್ಮನು ಅಳಿದು ಮುಗಿಸಿ ಪಶ್ಚಿಮ ಸಮುದ್ರತೀರದಲ್ಲಿ ತಂದಿಟ್ಟ ಸುಮನೋಹರ ರತ್ನದ ಕೊಳಗವೋ ಎನ್ನುವಂತೆ ಸೂರ್ಯನು ಪ್ರಕಾಶಿಸಿದನು, ೩೦. ಇತ್ತ ರಾಮನಿಗೆ ಅರಮನೆ ಮತ್ತು ಆಸ್ಥಾನಮಂಟಪಗಳು ದೇವತೆಗಳ ಬಡಗಿಯಿಂದ ನಿರ್ಮಿತವಾದವು. ಅಲ್ಲದೆ ಲಕ್ಷ್ಮಣ, ವಿಭೀಷಣ, ಸುಗ್ರೀವ ಮತ್ತು ಸಕಲ ಸೇನಾಪತಿ ಗಳಿಗೆ ರಾಮನ ಅರಮನೆಯ ಪಕ್ಕದಲ್ಲಿ ಭವನಗಳು ಕಟ್ಟಲ್ಪಟ್ಟುವು. ಆ ಭವನಗಳ ಹೊರ ಪಾರ್ಶ್ವದಲ್ಲಿ ಕೋಟೆ ಮತ್ತು ಬಾಗಿಲುಗಳನ್ನು ದೇವತೆಗಳ ಬಡಗಿಯು ಕಟ್ಟಿದನು. ೩೧. ದೇವೇಂದ್ರನ ಕಹಳೆಯು ಧ್ವನಿಮಾಡಿ ಸನ್ನೆಮಾಡಲು ಸೇನಾಧಿಪತಿಗಳ ಸಮೇತ ರಾಮನು ಹನುಮಂತನ ಕೈಹಿಡಿದುಕೊಂಡು ತನ್ನ ಬಿಡಾರಕ್ಕೆ ಬಂದನು. ಬಳಿಕ ವಿಶ್ವ ಕರ್ಮನನ್ನು ಹೊಗಳುತ್ತ ಬ್ರಹ್ಮನ ಮಗ ಜಾಂಬವಂತ ಸುಗ್ರೀವ ಮೊದಲಾದ ಪ್ರಮುಖ

ತೀರಿತಂದಿನ ರಜನಿ ರಜನೀ । ಚಾರಿಯಾಯುವಿನಂತೆ ನರ್ತಿಸಿ
ತಾ ರಘುಕ್ಷಿತಿಪ ಪ್ರತಾಪಕದಂತೆ ದಿನಮಣಿಯ
ಚಾರುತರ ತೇಜೋವಿಲಾಸ ಬ । ಲಾರಿದಿಗ್ಭಾಗದ ಮಹೋನ್ನತ
ಧಾರುಣೀಧರದಗ್ರದಲಿ ದೇದೀಪ್ಯಮಾನದಲಿ ೩೨

ವಾನರವೀರರನ್ನು ಅವರವರ ಬೀಡಿಗೆ ಕಳುಹಿಸಿಕೊಟ್ಟನು. ೩೨. ಅಂದಿನ ರಾತ್ರಿಯು ಕಳ್ಳನ ಆಯುಸ್ಸಿನಂತೆ ಕಳೆಯಿತು. ಪೂರ್ವದಿಕ್ಕಿನ ಅತ್ಯುನ್ನತವಾದ ಪರ್ವತದ ತುದಿಯಲ್ಲಿ ಸೂರ್ಯನ ತೇಜಸ್ಸು ಶ್ರೀರಾಮನ ಪ್ರತಾಪದಂತೆ ಅತ್ಯುಜ್ವಲವಾಗಿ ಪ್ರಕಾಶಿಸಿತು.

# ಹತ್ತನೆಯ ಸಂಧಿ

ಸೂಚನೆ॥ ವೀರ ವಿಜಯಭುಜಪ್ರತಾಪನು । ದಾರ ಸಾಹಸಮಲ್ಲ ವಾಲಿಕು
ಮಾರ ಸಂಧಿಗೆ ಹೋಗಿ ಸವರಿದನಖಿಳ ರಾಕ್ಷಸರ

ಕೇಳಿದೈ ರಾಜೇಂದ್ರಸುತ ದಶ । ಮೌಳಿಯಿಂದೀ ಜಗದೊಳಗೆ ಕಡು
ಖೂಳರುಂಟೆಂದೆಣಿಸಬೇಡತಿಶಯದ ಮೂರ್ಖರಿಗೆ
ಕೇಳಿಕೆಯ ಮನಛತ್ರಭಂಗದ । ಮೇಲೆ ಮುರಿಯದೆ ಛಲಪದದ ಪರಿ
ಪಾಳಿಯಿಂದುಪ್ಪವಡಿಸಿದನುಪ್ಪರದ ಗರ್ವದಲಿ ೧

ಉದಯಮುಖದಲಿ ಪೂರ್ವಸಂಧ್ಯಾ । ವಿದಿತಕರ್ಮವ ರಚಿಸಿ ಭರ್ಗನ
ಪದವ ಭಜಿಸಿ ಬೃಹಸ್ಪತಿಯ ಜೋಯಿಸವನನುಕರಿಸಿ
ತ್ರಿದಶ ಕೈವಾರಿಗಳ ಕಳಕಳ । ದದುಭುತದ ನೆಲನುಗ್ಘಡಣೆಯಲಿ
ಸದಮದದಲಸುರೇಂದ್ರ ನಡೆತಂದಿತ್ತನೋಲಗವ ೨

ಬಂದುದೋಲಗಕಸುರ ಸುರಮುನಿ । ವೃಂದ ಕಿನ್ನರ ಯಕ್ಷ ರಾಕ್ಷಸ
ದಂದಶೂಕ ಪಿಶಾಚ ಗುಹ್ಯಕ ಗರುಡ ಗಂಧರ್ವ
ವೃಂದ ವಾಯು ಕುಬೇರ ವರುಣ ಪು । ರಂದರಾಗ್ನಿ ಮಹೇಶ ಯಮನರ
ವಿಂದಜಾದಿ ಸಮಸ್ತ ಸುರಗಣವಾ ದಶಾನನನ ೩

ಸೂಚನೆ॥ ಪ್ರಚಂಡ ತೋಳ್ಬಲದ ಮಹೋನ್ನತ ಸಾಹಸಿ ವಿಜಯವೀರ ವಾಲಿ ಕುಮಾರ ಅಂಗದನು ಸಂಧಿಗಾಗಿ ಹೋಗಿ ಸಮಸ್ತ ರಾಕ್ಷಸರನ್ನೂ ಕೊಂದನು. ೧. ಕೇಳಿದೆಯಾ ರಘುರಾಜೇಂದ್ರಕುಮಾರ ? ಈ ಜಗತ್ತಿನಲ್ಲಿ ರಾವಣನಿಗಿಂತ ಅತಿ ದುಷ್ಟರಿದ್ದಾರೆ ಎಂದು ಭಾವಿಸಬೇಡ. ಅತಿಶಯ ಮೂರ್ಖರಿಗೆ ಇತರರ ಮಾತಿಗೆ ಕಿವಿಗೊಡುವ ಮನಸ್ಸು. ತನ್ನ ಬಿಳಿಯ ಛತ್ರಿ ಮುರಿದ ಮೇಲೆ ಮನಸ್ಸು ಕೆಡಿಸಿ ಕೊಳ್ಳದೆ ತನ್ನ ದೃಢಹಟದ ಸ್ವಭಾವದಿಂದ ಅತಿಶಯ ಗರ್ವದಿಂದ ರಾವಣನು ಮಾರನೆಯಬೆಳಗ್ಗೆ ನಿದ್ದೆಯಿಂದ ಎದ್ದನು. ೨. ಸೂರ್ಯೋದಯವಾದಂತೆ ಬೆಳಗಿನ ಕರ್ಮವನ್ನು ಮುಗಿಸಿ ಈಶ್ವರನನ್ನು ಪೂಜಿಸಿದನು. ಬಳಿಕ ಬೃಹಸ್ಪತ್ಯಾಚಾರ್ಯನ ಜ್ಯೋತಿಷ್ಯವನ್ನು ಅನುಸರಿಸಿ ದೇವಲೋಕದ ಹೊಗಳುಭಟರು ಬಿರುದಾವಳಿ ಗಳನ್ನು ಹೊಗಳುವ ಗಲಾಟೆಯೊಡನೆ ದರ್ಪದಿಂದ ಆಸ್ಥಾನಮಂಟಪಕ್ಕೆ ಬಂದು ಸಭೆ ನಡೆಸಿದನು. ೩. ಅಸುರಮುನಿಗಳು, ದೇವರ್ಷಿಗಳು, ಕಿನ್ನರರು, ಯಕ್ಷರು, ರಾಕ್ಷಸರು, ಸರ್ಪರು, ಪಿಶಾಚರು, ಗುಹ್ಯಕರು, ಗರುಡರು, ಗಂಧರ್ವರು, ವಾಯು, ಕುಬೇರ, ವರುಣ, ಇಂದ್ರ, ಅಗ್ನಿ, ಈಶ್ವರ, ಯಮ, ಬ್ರಹ್ಮನೇ ಮೊದಲಾದ

ಬಲದಭಾಗದ ಭದ್ರಪೀಠಂ । ಗಳಲಿ ಭವಭವನಜಭವಾದಿಗ
ಳೊಲವು ಮಿಗೆ ಕುಳ್ಳಿದರು ಸನಕಾದಿಗಳ ಗಡಣದಲಿ
ಲಲಿತ ಶಾಂತರಸಪ್ರವಾಹದ । ಸುಲಭತೆಯ ಸುಮ್ಮಾನದಲಿ ನಿ
ಶ್ಚಲಿತ ನಿರ್ಭಯ ಭುಜಬಲಾನ್ವಿತ ರಾಕ್ಷಸೇಶ್ವರನ ೪

ವಾಮದಲಿ ಸುರನಾಥ ಮುಖ್ಯ ಸ । ನಾಮ ಸುಮನಸರೊಬ್ಬರೊಬ್ಬರ
ಮೈಮಱೆಯ ಮುಸುಡುಗಳ ಮುಕುಳಿತ ಕರದ ಕಂಪನದ
ಕೋಮಲದ ಕೊಂಕುಗಳ ಮಕುಟ । ಸ್ತೋಮದೋಸರಿಕೆಗಳ ವಿಗತೋ
ದ್ದಾಮರಿರ್ದರು ಭೂರಿಭಯರಸಭರಿತಭಾವದಲಿ ೫

ವೀರ ರಾವಣಿ ಕುಂಭ ತ್ರಿಶಿರನು । ದಾರ ದೇವಾಂತಕ ನಿಕುಂಭ ನ
ರಾರಿ ಖಳನತಿಕಾಯ ಮುಖ್ಯ ಕುಮಾರರಿದಿರಿನಲಿ
ಚೂರಿಸುವ ಖಂಡೆಯದ ಕಡುಹಿನ । ಭಾರಣೆಯ ಭಾರಂಕರಿದ್ದುದು
ಭೂರಿಭೂಷಣಭರಿತ ವೀರಾವೇಶದುಬ್ಬಿನಲಿ ೬

ಕಲಿ ಮಹೋದರ ಧುರವಿಜಯ ದೋ । ರ್ಬಲ ಸುಪಾರ್ಶ್ವಕ ಸುಪ್ರತಾಪಾ
ನಳ ಮಹಾಮಂತ್ರಿ ಪ್ರಹಸ್ತಪ್ರಮುಖ ನಾಯಕರು
ಹೊಳೆವ ದಾಡೆಯ ಹೊಗರು ಮೋಱೆಯ । ತಳಿತ ರೋಮದ ತೋಳ ಬಿಗುಹಿನ
ಕಲಿಗಳಿದ್ದುದು ಕಲಿತ ಘನ ರೌದ್ರಾತಿರೇಕದಲಿ ೭

ಸಮಸ್ತ ದೇವತೆಗಳು ರಾವಣನ ಸಭೆಗೆ ಬಂದರು. ೪. ಭುಜಪರಾಕ್ರಮಿ ನಿರ್ಭೀತ ಧೀರ ರಾಕ್ಷಸರಾಜನ ಬಲಭಾಗದಲ್ಲಿ ಮಂಗಳಪೀಠಗಳಲ್ಲಿ ಷಣ್ಮುಖ, ಬ್ರಹ್ಮ, ಈಶ್ವರರು ಸನಕನೇ ಮೊದಲಾದವರೊಡನೆ ಮನೋಹರ ಶಾಂತರಸವನ್ನು ಬೀರುತ್ತ ಆರಾಮವಾಗಿ ಸಂತೋಷದಿಂದ ಕುಳಿತಿದ್ದರು. ೫. ರಾವಣನ ಎಡಭಾಗದಲ್ಲಿ ದೇವೇಂದ್ರನೇ ಮೊದಲಾದ ಹೆಸರಾಂತ ದೇವತೆಗಳು ಒಬ್ಬೊಬ್ಬರೂ ಇನ್ನೊಬ್ಬರ ಮೈಹಿಂದೆ ಮುಖಮರೆಸಿಕೊಂಡು ಕೈಮುಗಿದುಕೊಂಡು ಕುಳಿತಿದ್ದರು. ಅವರು ಕೋಮಲವಾದ ರೀತಿಯಲ್ಲಿ ಮೈಬಾಗಿಸಿ ಕಿರೀಟಗಳನ್ನು ಒಂದು ಕಡೆಗೆ ವಾಲಿಸಿಕೊಂಡು ತಮ್ಮ ಘನತೆಯನ್ನು ಕಳೆದುಕೊಂಡು ಅತಿಶಯವಾದ ಭಯದ ಭಾವದಿಂದ ಇದ್ದರು. ೬. ವೀರ ಇಂದ್ರಜಿತು, ಕುಂಭ, ತ್ರಿಶಿರ, ಶ್ರೇಷ್ಠ ದೇವಾಂತಕ. ನಿಕುಂಭ, ನರಾಂತಕ, ಅತಿಕಾಯ-ಇವರೇ ಮೊದಲಾದ ಅತಿಶಯ ಪರಾಕ್ರಮದ ಭಾರಿ ಜಟ್ಟಿಗಳಾದ ಅಮೋಘ ಒಡವೆಗಳನ್ನು ಧರಿಸಿದ ರಾವಣನ ಪ್ರಮುಖ ಕುಮಾರರು ಖಡ್ಗವನ್ನು ಝುಳಪಿಸುತ್ತ ವೀರಾವೇಶದಿಂದ ರಾವಣನ ಎದುರುಗಡೆಯಲ್ಲಿದ್ದರು. ೭. ವೀರ ಮಹೋದರ, ಯುದ್ಧಗೆಲ್ಲುವ ಬಾಹುಬಲದ ಸುಪಾರ್ಶ್ವಕ, ಪ್ರತಾಪಾಗ್ನಿಯ ಮಹಾಮಂತ್ರಿ ಪ್ರಹಸ್ತ ಮೊದಲಾದ ತೋಳ ಶಕ್ತಿಯ ಮುಖ್ಯನಾಯಕರು ಹೊಳೆಯುವ ಕೋರೆಹಲ್ಲು ಮತ್ತು ಕಾಂತಿಯುಕ್ತ ಮುಖ

ಮಸಗಿದಂಬಿನಲುಬ್ಬಣದ ಮೊನೆ । ಮಿಸುಕಿದೆಡೆಯಲಿ ಸುರಗಿ ಸುಳಿದೆ
ಬ್ಬಿಸಿದ ತಾಣದಲಂಬು ಲಂಬಿಸೆ ಹೊಕ್ಕ ಹೊದಱಿನಲಿ
ಮಸೆಮುಖದೊಳೊಂದೇಱುಗೈವಡಿ । ಕುಸುರಿಗಳ ತೋಱುವ ಮಹಾದ್ಭುತ
ರಸದ ರಕ್ಕಸರಾಯರಿರ್ದರು ಕೋಟಿಸಂಖ್ಯೆಯಲಿ ೮

ಹರಿಯ ಹಳಚಿ ಗದಾಯುಧವನೀ । ಶ್ವರನ ಜರದಜಗರವನಿಂದ್ರನ
ಪರಿಭವಿಸಿ ರುಜುರೋಹಿತವನಂತಕನ ಸದೆಬಡಿದು
ಪರಿಘವನು ಪವಮಾನ ಪಾವಕ । ವರುಣ ನಿರುತಿ ಕುಬೇರರಸ್ತ್ರವ
ಧರಿಸಿದತಿಬಲರಿರ್ದರುದಿತ ಮಹೋಗ್ರತೇಜದಲಿ ೯

ಧನಪನಪಜಯದಭಿನಯವ ಸುರ । ಪನ ಪಲಾಯನ ನರ್ತನವ ರವಿ
ತನಯನೋಟದ ನಾಟಕವ ಪವನನ ಪರಾಭವವ
ವನಧಿಪನ ಸೋಲವನುಪಚರಿಸಿ । ತನಿನಗೆಯನುಬ್ಬಿಸುವ ಹಾಸ್ಯದ
ವಿನುತ ಪರಿಹಾಸಕರಿನೆಸೆದುದು ಸಭೆ ದಶಾನನನ ೧೦

ಗುರುನಿತಂಬದ ಸೋಗೆದುಱುಬಿನ । ಸರಸವಚನದ ವದನದುಬ್ಬಿನ
ತಿರುಹುಗಂಗಳ ಹಾಯಿಕುವ ಹುಬ್ಬುಗಳ ಹೊಸನಗೆಯ
ಸರಿವ ಮೇಲುದಿನಂಗಗಳ ತುದಿ । ವೆರಳ ಮಾತಿನ ಭಾವಭಂಗಿಯ
ಸುರರ ಸೂಳೆಯರಿರ್ದರಪರಾಂಗದಲಿ ರಾವಣನ ೧೧

ಗಳಿಂದ ಮೆರೆಯುತ್ತ ರೋಮಾಂಚಗೊಂಡು ವೀರಾವೇಶದಿಂದಿದ್ದರು. ೮. ಬಾಣಗಳು ಕೆರಳಿದೆಡೆಗಳಲ್ಲಿ, ಕತ್ತಿಯಮೊನೆ ಝಳಪಿಸಿದ ಕಡೆಗಳಲ್ಲಿ, ಸುರಗಿ ತಾಗಿ ಹಗೆಗಳನ್ನು ಎಬ್ಬಿಸಿದ ಸ್ಥಳಗಳಲ್ಲಿ, ಬಾಣವು ಒಳನುಗ್ಗಿದ ಶತ್ರುಗಳ ಗುಂಪಿನಲ್ಲಿ ಎಲ್ಲೆಡೆಯೂ ಇರುತ್ತ ಮಸೆದ ಹರಿತವಾದ ಬಾಣದಿಂದ ಒಂದು ಏಟಿಗೆ ಐದರಷ್ಟು ಕೊಚ್ಚಿಹಾಕುವ ಮಹಾ ಅದ್ಭುತರಸದ ರಾಕ್ಷಸರಾಜರು ರಾವಣನ ಆಸ್ಥಾನದಲ್ಲಿ ಕೋಟಿಸಂಖ್ಯೆಯಲ್ಲಿದ್ದರು. ೯. ವಿಷ್ಣುವನ್ನು ಎದುರಿಸಿ ಗದಾಯುಧವನ್ನು, ಈಶ್ವರನನ್ನು ಧಿಕ್ಕರಿಸಿ ಸರ್ಪಾಸ್ತ್ರವನ್ನು, ಯಮನನ್ನು ಸದೆಬಡಿದು ಪರಿಘಾಯುಧವನ್ನು, ವಾಯು ಅಗ್ನಿ ವರುಣ ನಿರ್ಋತಿ ಕುಬೇರರ ಅಸ್ತ್ರಗಳನ್ನು ಸೆಳೆದುಕೊಂಡ ಮಹಾಪರಾಕ್ರಮಶಾಲಿಗಳು ಉಗ್ರ ತೇಜಸ್ಸಿನಿಂದ ರಾವಣನ ಸಭೆಯಲ್ಲಿದ್ದರು. ೧೦. ಕುಬೇರನ ಸೋಲನ್ನು ಅಭಿನಯಿಸುವ, ದೇವೇಂದ್ರನು ಪರಾರಿಯಾದುದನ್ನು ನರ್ತಿಸಿ ತೋರಿಸುವ, ಯಮನು ಸೋತು ಓಡಿದುದನ್ನು ನಾಟಕರೂಪದಲ್ಲಿ ನಟಿಸುವ, ವಾಯುವಿನ ಅಪಜಯ ಮತ್ತು ವರುಣನ ಸೋಲನ್ನು ಅಣಕಿಸುವ ಹಾಸ್ಯಗಾರರು ನಗುವಿನ ಅಲೆಯನ್ನೆಬ್ಬಿಸುತ್ತ ರಾವಣನ ಸಭೆಯಲ್ಲಿ ಮೆರೆದರು. ೧೧. ತೋರವಾದ ಜಘನಗಳ, ನವಿಲಿನ ಗರಿಯಂತೆ ಕಟ್ಟಿದ ಮುಡಿಗಳ ದೇವಲೋಕದ ವೇಶ್ಯೆಯರು ಪ್ರಸನ್ನಮುಖದಿಂದ ಸರಸವಾಗಿ ಮಾತನಾಡುತ್ತ ಕಣ್ಣುಗಳನ್ನು ಆಕಡೆ ಈಕಡೆ ತಿರುಗಿಸುತ್ತ ಹುಬ್ಬು ಕುಣಿಸುತ್ತ ಹೊಸ ರೀತಿಯಲ್ಲಿ ನಗೆಬೀರುತ್ತ ರಾವಣನ ಹಿಂಭಾಗದಲ್ಲಿದ್ದರು. ಅವರು ಮೇಲ್ಸೆರಗನ್ನು ಸರಿಸಿ

ಹೊಗರೊಗುವ ಜವ್ವನದ ಸೊಂಪಿನ । ನಿಗುರಿಸಿದ ನಿಡುದೋಳುಗಳ ಸೆ
ಳ್ಳುಗುರ ಮಣಿಮುದ್ರಿಕೆಯು ಘನಶೃಂಗಾರದುಬ್ಬುಗಳ
ನಗೆಯ ನಯನದ ಸನ್ನೆವಾತಿನ । ಸೊಗಸಿನಬಲಾಜನದ ಕೈಗಳ
ಲಗಿವ ಚಾಮರವೆಸೆದವಿದ್ದೆಸೆಯಲಿ ದಶಾನನನ ೧೨

ಕರೆಸಿ ಕಾರಾಗೃಹದ ರಾಯರ । ಕರುಣದಲಿ ಬಿಡುತಿರ್ದನಗ್ಗದ
ಭರತಖಂಡದ ರಮ್ಯಕದ ಜನಪದದಿಳಾವೃತದ
ಹರಿವರುಷ ಕಿಂಪುರುಷದೇಶದ । ಕುರು ಹಿರಣ್ಮಯಕೇತುಮಾಲಾ
ಧರಣಿಗಳ ಧರಣಿಪರನಾ ಸಮಯದಲಿ ದಶಕಂಠ ೧೩

ಸಚಿವ ಸೇನಾನಾಥರಾಪ್ತ । ಪ್ರಚಯ ನಿಯತ ನಿಯೋಗಿಜನ ಪರಿ
ರಚಿತ ಸೇನಾಸಂಧಿವಿಗ್ರಹ ವಾಹಕವ್ರಾತ
ಪ್ರಚುರ ಕವಿ ವರವಾಗ್ಮಿ ವಾದಿ । ಪ್ರಚಯ ಮುಖ್ಯ ಸಮಸ್ತರಿರ್ದುದು
ವಚಿಸಲೇನದನಮಮ ನವರಸದಧಿಕಸೊಂಪಿನಲಿ ೧೪

ಹಗೆಗಳೈತಂದಂಜಿಕೆಯನಣು । ವಿಗೆ ಮನೋವಚನದಲಿ ತಾರದೆ
ವಿಗಡ ರಕ್ಕಸರಾಯನಿದ್ದನು ಕೇಳಿದೈ ಕುಶನೆ
ಸಗರವಂಶಜನಿತ್ತಲೊದ್ದೋ । ಲಗವನಿತ್ತಲು ವಿಶ್ವಕರ್ಮನು
ನಿಗುರಿಸಿದ ನಿರುಪಮ ನಿತಾಂತ ಸಭಾಂತರಾಳದಲಿ ೧೫

ಅಂಗಗಳನ್ನು ಪ್ರದರ್ಶಿಸುತ್ತ, ತುದಿಬೆರಳನ್ನಾಡಿಸಿ ಮಾತನಾಡುತ್ತ ಬೆಡಗಿನಿಂದ ಮೆರೆದರು. ೧೨. ಎತ್ತಿದ ನೀಳವಾದ ತೋಳುಗಳ, ಚೂಪಾದ ಹೊಳೆಯುವ ಉಗುರುಗಳ ಬೆರಳಿಗೆ ರತ್ನದುಂಗುರಗಳನ್ನು ಧರಿಸಿದ, ಒಡವೆಗಳಿಂದಲಂಕರಿಸಿಕೊಂಡ ನಗೆಗಣ್ಣಿನ, ಕಣ್ಸನ್ನೆ ಯಲ್ಲೇ ಪರಸ್ಪರ ಮಾತಾಡಿಕೊಳ್ಳುತ್ತಿದ್ದ ನವಯೌವನದ ಕಾಂತಿಬೀರುವ ಸುಂದರಿ ಯರು ಚಾಮರಗಳನ್ನು ಬೀಸುತ್ತ ರಾವಣನ ಎರಡೂ ಕಡೆಗಳಲ್ಲಿ ಶೋಭಿಸಿದರು. ೧೩. ಕಾರಾಗೃಹಗಳ ಅಧಿಪತಿಗಳನ್ನು ಕರೆಸಿ ಭರತಖಂಡ ರಮ್ಯಕದೇಶಗಳ ಇಳಾವೃತ, ಹರಿವರ್ಷ, ಕಿಂಪುರುಷ, ಕುರು, ಹಿರಣ್ಮಯ, ಕೇತುಮಾಲ ರಾಜ್ಯಗಳ ರಾಜರುಗಳನ್ನು ಆ ಸಮಯದಲ್ಲಿ ದಶಕಂಠನು ಕರುಣೆಯಿಂದ ಬಿಡುಗಡೆ ಮಾಡಿಸಿದನು. ೧೪. ಸಚಿವರು, ಸೇನಾಧಿಪತಿಗಳು, ಆಪ್ತವರ್ಗದವರು, ವಿಶೇಷ ಅಧಿಕಾರಿಗಳು, ಸೈನ್ಯ ಸಂಧಿ ಯುದ್ಧ ವಿಶಾರದ ಮಂತ್ರಿಗಳು, ಪ್ರಸಿದ್ಧ ಕವಿಗಳು, ವಾಗ್ಮಿಗಳು, ತರ್ಕಮಾಡುವವರು–ಇವರೇ ಮೊದಲಾದ ಮುಖ್ಯಸ್ಥರು ನವರಸಗಳು ಒಂದುಗೂಡಿದಂತೆ ರಾವಣನ ಆಸ್ಥಾನದಲ್ಲಿ ದ್ದರು. ಇದನ್ನು ಏನೆಂದು ವರ್ಣಿಸಲಿ. ೧೫. ಶತ್ರುಗಳು ಬಂದರೆಂಬ ಅಂಜಿಕೆಯನ್ನು ತುಸವಾದರೂ ಮನಸ್ಸಿಗೆ ತಂದುಕೊಳ್ಳದೆ ಮಾತಿನಲ್ಲಿ ತೋರಿಸದೆ ವೀರ ರಾಕ್ಷಸರಾಜ ನಿದ್ದನು, ಕೇಳಿದೆಯಾ ಕುಶ. ಇತ್ತ ವಿಶ್ವಕರ್ಮನು ನಿರ್ಮಿಸಿದ ವಿಸ್ತಾರವಾದ ಸುಂದರ

ಓಲಗಕೆ ನಡೆತಂದರಾ ಕಪಿ । ಪಾಲ ಪದ್ಮಜಸೂನು ಕೇಸರಿ
ಶೂಲಿ ಸಮಬಲ ಹನುಮ ಹರಿಸುತಸುತ ಸುಷೇಣಕರು
ನೀಲ ನಳ ಗಜ ಗವಯ ಕಪಿಶಾ । ರ್ದೂಲ ಶತಬಲಿ ಶರಭ ರಾಕ್ಷಸ
ಮೌಳಿಮಣಿ ವೈಷ್ಣವಶಿರೋಮಣಿಗಳು ಮಹೀಪತಿಯ ೧೬

ವೀರರಗ್ಗದ ಶೂರರಾಹವ । ಧೀರರತಿಬಲಸಾರರದ್ರಿ ಮ
ಹೀರುಹದ ಕೈದುಗಳ ಕರ್ಕಶದುಬ್ಬಿನುಬ್ಬರದ
ಭಾರಿಭಟ ಯೂಥಾದಿ ಪತಿಗಳು । ದಾರ ತೇಜೋಗರ್ವದಲಿ ರಘು
ವೀರನಂಘ್ರಿಗೆ ಕೈಮುಗಿದು ನಿಂದಿರ್ದರಿದಿರಿನಲಿ ೧೭

ಜವನನಣುವಿಗೆ ತಾರದಗ್ಗದ । ಶಿವನ ಲೆಕ್ಕಿಸದಾ ಪ್ರಳಯಭೈ
ರವನ ಬಗೆಯದ ಭಾರಿಭಟರೊತ್ತೊತ್ತೆ ಜಡಿವುತಿರೆ
ರವಿಕುಲೋದ್ಭವನಾ ಸಮಯದಲಿ । ರವಿಸುತನ ಮೊಗ ನೋಡಿ ನಮಗೀ
ಹವಣಿಗಾವುದು ಮತವು ನಿನ್ನನುಮಾನವೇನೆಂದ ೧೮

ಆವುದಿದಕನುಮಾನ ಚಿತ್ತದೊ । ಳಾವುದನುಮತ ದೇವರಿಗೆ ಸೇ
ವಾವಿಷಯಸಂಭೂತರಾವ್ ಬೇಜುಂಟೆ ಮತ ನಮಗೆ
ದೇವರೆಸಿತನು ಬೆಸಸಿದನಿತನು । ನಾವು ಮಾಡುವರೈಸೆನಲು ಮೊದ
ಲಾವು ನಿನಗೂಹಿಸಿದ ಮತವನೆ ಮಾಡಿನೋಡೆಂದ ೧೯

ಸಭಾಭವನದಲ್ಲಿ ಸಗರವಂಶದವನಾದ ರಾಮನು ಸಭೆಯನ್ನು ನಡೆಸಿದನು. ೧೬. ಕಪಿಗಳೊಡೆಯ ಸುಗ್ರೀವ, ಬ್ರಹ್ಮಪುತ್ರ ಜಾಂಬವ, ಕೇಸರಿ, ಬಲದಲ್ಲಿ ಶಿವನಿಗೆ ಸಮಾನನಾದ ಹನುಮಂತ, ವಾಲಿಯ ಮಗ ಅಂಗದ, ಸುಷೇಣಕ, ನೀಲ, ನಳ, ಗಜ, ಗವಯ, ಕಪಿವ್ಯಾಘ್ರ ಶತಬಲಿ, ಶರಭ, ರಾಕ್ಷಸಶ್ರೇಷ್ಠ ವಿಭೀಷಣ, ವಿಷ್ಣುಭಕ್ತರು ಶ್ರೀರಾಮನ ರಾಜಸಭೆಗೆ ಬಂದರು. ೧೭. ವೀರರು, ಶ್ರೇಷ್ಠಶೂರರು, ಕದನಪರಾಕ್ರಮಿಗಳು, ಮಹಾಬಲಶಾಲಿಗಳು, ಬೆಟ್ಟ ಮತ್ತು ಮರಗಳ ಆಯುಧಗಳನ್ನು ಹಿಡಿದ ಬಲಿಷ್ಠರಾದ ಭಾರಿಯೋಧರ ಸೈನ್ಯಗಳ ಸೇನಾಧಿಪತಿಗಳು ಅತಿಶಯ ತೇಜಸ್ಸು ಗರ್ವಗಳಿಂದ ರಘುಪತಿಯ ಪಾದಗಳಿಗೆ ಕೈಮುಗಿದುಕೊಂಡು ಅವನ ಎದುರುಗಡೆ ನಿಂತಿದ್ದರು. ೧೮. ಯಮನನ್ನು ಅಣುವಿನ ಸಮಕ್ಕೂ ಎಣಿಸದ, ಮಹಾಶಿವನನ್ನು ಲೆಕ್ಕಿಸದ, ಪ್ರಳಯಭೈರವನನ್ನು ಲಕ್ಷ್ಯಕ್ಕೆ ತಾರದ ಭಾರಿ ಯೋಧರು ಒತ್ತರಿಸಿ ಗುಂಪಾಗಿ ನಿಂತಿದ್ದರು. ಆಗ ರವಿಕುಲದ ರಾಮನು ಸುಗ್ರೀವನ ಮುಖವನ್ನು ನೋಡುತ್ತ "ನಮ್ಮ ಈಗಿನ ಕಾರ್ಯದ ಬಗ್ಗೆ ನಿನ್ನ ಅಭಿಪ್ರಾಯವೇನು? ನಿನ್ನ ಆಲೋಚನೆಯೇನು ?" ಎಂದು ಪ್ರಶ್ನಿಸಿದನು. ೧೯. "ಇದರ ವಿಷಯದಲ್ಲಿ ಸ್ವಾಮಿಯವರ ಆಲೋಚನೆ ಯಾವುದೋ ಅಭಿಪ್ರಾಯ ಯಾವುದೋ ಅದೇ ತಮ್ಮ ಸೇವೆಗೆ ಮೀಸಲಾದ ನಮ್ಮ ಅಭಿಪ್ರಾಯ, ಬೇರೆ ಅಭಿಪ್ರಾಯ ನಮಗುಂಟೇ ? ಸ್ವಾಮಿಯವರು ಏನ್ನನ್ನು ಮಾಡೆಂದು ಅಪ್ಪಣೆಮಾಡುತ್ತಾರೋ ಅಷ್ಟನ್ನು ನೆರವೇರಿಸುವವರು ನಾವು" ಎಂದು ಸುಗ್ರೀವನು ಹೇಳಿದನು. "ಮೊದಲು ನಾವು

ಕಳುಹು ಸಂಧಿಗೆ ರಾಕ್ಷಸೇಂದ್ರನ । ಬಳಿಗೆ ಚಿತ್ತದಲರಿಭಟನು ನಮ
ಗಳುಕುವುದು ಹುಸಿಯಾದಡೆಯು ರಾಜೋಪಚಾರವಿದು
ಎಳೆದುಬಿಡಲೀ ಮಾತ ನಮ್ಮಯ । ಬಳಿಗೆ ಬಂದರೆ ಕಾವೆವಲ್ಲದ
ಡಳವಡಿಸಿಕೊಂಡಿರಲಿ ಕದನವನೆಂಬುದವಗೆಂದ ೨೦

ಅಹುದು ಮತ್ತೇನೆಂದು ಕರೆದನು । ಮಿಹಿರಸುತನಂದನನ ನೀ ಹೋ
ಗಹಿತನೆಡೆಗೀತೆಂದು ನುಡಿ ನಿಜರಾಜಕಾರಿಯವ
ಮಹಿಜೆಯನು ತಂದಿತ್ತು ನಿಜ ವಿ । ಗ್ರಹವ ರಕ್ಷಿಸಿಕೊಂಬುದೆಂಬುದು
ಕುಹಕಿಗೀಮಾತುಜಿಸದಿರೆ ಬಳಿಕೆಂಬುದೀ ಹದನ ೨೧

ನೆರಹಿಕೊಂಡಿರು ಪುತ್ರಮಿತ್ರಾ । ದ್ಯರನು ನಿಜಬಲಸಹಿತ ಕಾಲನ
ಪುರಿಗೆ ಪಯಣವ ಮಾಡಿಕೊಂಡಿರಹೇಳು ಬೇಗದಲಿ
ಶರಣುಹೊಗದಿರೆ ಮಾತಿದೆರಡನು । ಸುರವಿರೋಧಿಯ ಕೂಡೆ ನುಡಿದನು
ವರವ ತೊಡಗದೆ ತಿರುಗುವುದು ಹೋಗೆಂದನಾ ರವಿಜ ೨೨

ಹೈ ಹಸಾದವೆನುತ್ತ ಕೈಮುಗಿ । ದಾ ಹರೀಶ್ವರಸೂನು ವರವೈ
ದೇಹಿಯರಸನ ಸರಸಿಜಾಂಘ್ರಿದ್ವಯಕೆ ತಲೆವಾಗಿ
ಮಿಹಿರಜಂಗಭಿನಮಿಸಿ ಬಳಿಕು । ತ್ಸಾಹ ಮಿಗೆ ಮಣಿಮಕುಟ ಮುಖ್ಯ ಮ
ಹಾಹಿರಣ್ಯಾಭರಣಭೂಷಿತನಾದನೊಲವಿನಲಿ ೨೩

ಯೋಚಿಸಿ ತಿಳಿಸಿದ ಅಭಿಪ್ರಾಯದಂತೆ ನಡೆದುನೋಡಿ” ಎಂದ ರಾಮ. ೨೦. “ರಾಕ್ಷಾಸಾಧಿಪತಿಯ ಬಳಿಗೆ ಸಂಧಿಗೆ ರಾಯಭಾರಿಯನ್ನು ಕಳುಹಿಸು. ಶತ್ರುವೀರನು ನಮಗೆ ಹೆದರುವುದು ಸುಳ್ಳಾದರೂ ಕೂಡ ಇದು ರಾಜನೀತಿ. ನಮ್ಮ ಆಶ್ರಯ ಕೇಳಿಬಂದರೆ ರಕ್ಷಿಸುವೆವು ; ಇಲ್ಲದಿದ್ದರೆ ಯುದ್ಧಕ್ಕೆ ಸಿದ್ಧನಾಗಿರಲಿ ಎಂದು ಅವನಿಗೆ ಖಂಡಿತವಾಗಿ ಈ ಮಾತನ್ನು ಹೇಳಿಬಿಡಲಿ” ಎಂದ ರಾಮ. ೨೧. ‘ಹಾಗೆಯೆ ಆಗಲಿ’ ಎಂದು ಸುಗ್ರೀವನು ವಾಲಿಯಮಗ ಅಂಗದನನ್ನು ಕರೆದು “ನೀನು ಶತ್ರುರಾಜನ ಬಳಿಗೆ ಹೋಗು. ಸೀತೆಯನ್ನು ತಂದು ಒಪ್ಪಿಸಿ ನಿನ್ನ ಶರೀರವನ್ನು ರಕ್ಷಿಸಿಕೋ ಎಂದು ರಾಜಕಾರ್ಯದ ಮಾತನ್ನು ರಾವಣನಿಗೆ ನುಡಿ. ಆ ಮೋಸಗಾರನಿಗೆ ಈ ಮಾತು ಸೇರದಿದ್ದರೆ ಮುಂದಿನ ರೀತಿಯಲ್ಲಿ ಅವನಿಗೆ ತಿಳಿಸು. ೨೨. ‘ನಿನ್ನ ಮಕ್ಕಳು ಸ್ನೇಹಿತರು ಮೊದಲಾದವರನ್ನು ಜತೆಗೂಡಿಸಿಕೊಂಡಿರು. ನಿನ್ನ ಸೈನ್ಯಸಮೇತ ನೀವೆಲ್ಲ ಯಮಪುರಕ್ಕೆ ಪ್ರಯಾಣಕ್ಕೆ ಸಿದ್ಧಮಾಡಿಕೊಂಡಿರಿ’ ಎಂದು ರಾವಣನಿಗೆ ಹೇಳು. ರಾವಣನು ಶರಣುಬರದಿದ್ದರೆ ಈ ಎರಡು ಮಾತುಗಳನ್ನು ರಾಕ್ಷಸರಾಜನಿಗೆ ನುಡಿದು ಅಲ್ಲಿ ಕಾದಾಟಕ್ಕೆ ತೊಡಗದೆ ಹಿಂದಿರುಗಿ ಬಾ, ಹೋಗು” ಎಂದು ಸುಗ್ರೀವನು ಹೇಳಿದನು. ೨೩. ‘ಆಗಲಿ, ಮಹಾಪ್ರಸಾದ !’ ಎನ್ನುತ್ತ ಅಂಗದನು ಸೀತಾಪತಿಯ ಪಾದಕಮಲಗಳಿಗೆ ತಲೆಬಾಗಿ ನಮಿಸಿ, ಸುಗ್ರೀವನಿಗೆ ನಮಸ್ಕರಿಸಿ ಅತ್ಯುತ್ಸಾಹದಿಂದ ರತ್ನದ ಕಿರೀಟವನ್ನು

ಧರಿಸಿದನು ಯೋಜನದ ನೀಳದ । ಗಿರಿಶಿರವ ಹೆಗಲಿನಲಿ ಕಟ್ಟಿನ
ಮರನನೌಕಿದನೆಡದ ಕಂಕುಳಲರ್ಧಯೋಜನದ
ಹರಿಯ ಸಿರಿಚರಣವನು ನೆನೆದು । ಪ್ಪರಿಸಿದನು ಗಗನಕ್ಕೆ ಗರುಡನ
ಗರುವಿಕೆಯ ಗಾಢಿಕೆಯ ಗಮನದ ಗಮಕದುಬ್ಬಿನಲಿ ೨೪

ಕೂಡೆ ವಾನರಕಟಕ ಬೊಬ್ಬೆಯ । ಗಾಡಿಕೆಯಲುಬ್ಬೇಳುತಿರ್ದುದು
ನೋಡಿ ನಿರ್ಜರನಿಕರ ನಲವಿನಲಿರ್ದುದಭ್ರದಲಿ
ಕೂಡೆ ಕಳಕಳ ಮಸಗಿ ದಿವಿಜವಿ । ಭಾಡಪುರ ಭಯರಸದೊಳಿರ್ದುದು
ಮೋಡದಿಂದಿಳಿತಪ್ಪ ಸಿಡಿಲವೊಲಿಳಿದನಾ ಪುರಿಗೆ ೨೫

ತೋಳ ಗಾಳಿಗೆ ತೂಳಿದವು ಸೌ । ಧಾಳಿ ಸೊಗಸಿನ ಗೋಪುರಂಗಳು
ಕಾಲುಗುರದಾಗಿನಲಿ ಸಿಡಿಲೊಡೆದದ್ರಿಯಂದದಲಿ
ಧೂಳಿಗೆದಱಿದವಮಮ ತೋರಣ । ದೋಳಿ ನೆಲಕೊಱಗಿದವು ಕಪಿ ರೋ
ಮಾಳಿ ಸೋಂಕಿನಲಂಜಿ ತಳವೆಳಗಾದುದಖಿಳಜನ ೨೬

ನಿಳಯ ನಿಳಯದಲಿಕ್ಕಿದವು ಮು । ಚ್ಚಳ ನಿಶಾಚರ ಸತಿಯರಟ್ಟುಂ
ಬೊಲೆಗಳನು ನಂದಿಸಿದರವುಚಿದರುಡುವ ಸೀರೆಗಳ
ಕೆಲರು ಹೊಕ್ಕರಗೆಗಳ ಬಾವಿಗ । ಳೊಳಗೆ ಕೇಡಾಯ್ತೆಂದು ಬಂದವ
ಸುಳಿದನೇಗುವವೆನುತ ಸಂವರಿಸಿದರು ಸರಕುಗಳ ೨೭

ಧರಿಸಿ ಚಿನ್ನದ ಒಡವೆಗಳಿಂದ ಅಲಂಕರಿಸಿಕೊಂಡನು. ೨೪. ಒಂದು ಯೋಜನದುದ್ದದ ಬೆಟ್ಟದ ಶಿಖರವನ್ನು ಹೆಗಲಿನಲ್ಲಿಟ್ಟುಕೊಂಡನು. ಅರ್ಧ ಯೋಜನ ವಿಸ್ತಾರದ ಗಟ್ಟಿ ಮರವನ್ನು ಎಡ ಕಂಕುಳಿನಲ್ಲಿ ಇರುಕಿಕೊಂಡನು. ಅನಂತರ ಅಂಗದನು ಶ್ರೀಹರಿಯ ಪಾದಗಳನ್ನು ಸ್ಮರಿಸಿ ಗರುಡನ ಅದ್ಭುತಚಲನೆಯ ರೀತಿಯಿಂದ ಆಕಾಶಕ್ಕೆ ನೆಗೆದನು. ೨೫. ಒಡನೆ ವಾನರಸೈನ್ಯವು ಭಾರಿ ಬೊಬ್ಬೆ ಹಾಕುತ್ತ ಆನಂದದಿಂದ ಉಬ್ಬಿತು. ಅಂಗದನು ಆಕಾಶಕ್ಕೆ ಹಾರಿದುದನ್ನು ನೋಡಿ ಗಗನದಲ್ಲಿದ್ದ ದೇವತೆಗಳು ಹರ್ಷಿಸಿದರು. ಲಂಕಾನಗರವು ಭಯದಲ್ಲಿ ಮುಳುಗಿತು. ಮೋಡದಿಂದ ಸಿಡಿದುಬರುವ ಸಿಡಿಲಿನಂತೆ ಅಂಗದನು ಲಂಕಾನಗರದಲ್ಲಿಳಿದನು. ೨೬. ಅಂಗದನು ಬೀಸಿದ ತೋಳುಗಳ ಗಾಳಿಗೆ ಲಂಕಾನಗರದ ಉಪ್ಪರಿಗೆಮನೆಗಳು ಹಿಂದಕ್ಕೆ ಜರಿದವು ; ಸಿಡಿಲು ಹೊಡೆದ ಬೆಟ್ಟದಂತೆ ಅಂಗದನ ಕಾಲುಗುರುಗಳು ತಗುಲಿ ಗೋಪುರಗಳು ನೆಲಕ್ಕೆ ಉರುಳಿಬಿದ್ದವು. ಅಬ್ಬಬ್ಬ ! ಅಂಗದನ ಕೂದಲುಗಳು ಸೋಕಿ ತೋರಣಗಳ ಸಾಲು ಭೂಮಿಗೆ ಒರಗಿತು. ಲಂಕಾನಗರದ ಸಮಸ್ತ ಜನಗಳು ಅಂಜಿ ದಿಗ್ಭ್ರಮೆಗೊಂಡರು. ೨೭. ಮನೆ ಮನೆಗಳ ಕದಗಳನ್ನು ಮುಚ್ಚಿದರು. ರಾಕ್ಷಸಹೆಂಗಸರು ಅಡಿಗೆಯೊಲೆಗಳನ್ನು ಆರಿಸಿದರು. ಕೆಲವರು ಕೇಡಾಯಿತೆಂದು ಉಡುವ ಸೀರೆಗಳನ್ನು ಕೊಳಗಳಲ್ಲಿ ಬಾವಿಗಳಲ್ಲಿ ಬಚ್ಚಿಟ್ಟರು. 'ಲಂಕಾನಗರವನ್ನು ಪ್ರವೇಶಿಸಿದವನು ಬರುತ್ತಿದ್ದಾನೆ, ಏನು ಮಾಡೋಣ ?' ಎಂದು ತಂತಮ್ಮ

ತಡೆದ ಬಾಗಿಲು ಬಾಗಿಲುಗಳು । ಗ್ಗಡದ ಖಳರನು ಹೆಮ್ಮರನ ಹೆ
ಬ್ಬಡದಲೆಜಿಗುತ ಹೊಕ್ಕನೋಲಗವನು ಸರಾಗದಲಿ
ಎಡಬಲದ ಖಂಡೆಯದ ಆಟನದ । ಕಡುಹಿನಸುರರನೆರಡುಭಾಗದ
ಮುಡುಹುಗಳಲಣಿವುತ್ತ ನಿಂದಿದನಿದಿರಿನಲಿ ಖಳನ ೨೮

ಬೆಗಡುಗೊಂಡುದು ಹನುಮನೆಂದೇ । ಬಗೆದು ಮನದಲಿ ನೊಂದ ಭಟರೆದೆ
ದೆಗೆದು ಕೆಲರು ಕೆಲರೊಳಸರಿದರಲ್ಲಲ್ಲಿ
ಬಿಗುಹಿನಂಕದ ಬಿರುದಿನತಿಬಲ । ದಗಡುರಕ್ಕಸರುಚ್ಚಿದಸಿಧೇ
ನುಗಳಲಂಕರಿಸಿದರು ಸರಿಸದಲಿಂದ್ರುಸುತಸುತನ ೨೯

ಹೋಹೊ ಕಳಕಳವೇಕೆ ಕದನೋ । ತ್ಸಾಹಿಗಳು ನಾವಲ್ಲ ರಿಪು ರವಿ
ರಾಹುವಿನ ನೈಶಾಟಕುಲಕಾನನ ಹುತಾಶನನ
ಬೇಹ ಚರರಾವ್ ಜಗದ ದೈವ । ದ್ರೋಹಿ ರಕ್ಕಸನೊಡನೆ ನಮ್ಮವ
ರೂಹಿಸಿದುದನು ಹೇಳಿಹೋಗಲು ಬಂದೆವೈಸೆಂದ ೩೦

ಮದದ ಮೋಡಿಯು ಮಂದಹಾಸದ । ಮುದದ ಮನದ ಸ್ವಾಮಿಕಾರ್ಯಾ
ಸ್ಪದದ ಸಂಪತ್ತಿನ ಸಘಾಡದಲಸುರನಿದಿರಿನಲಿ
ಹುದಿದ ಗರ್ವದ ಗೌರವದಿ ಕು । ಳ್ಳಿದನು ಕುಂಡಲಿಯಂತೆ ಲಾಂಗೂ
ಲದವರಾಸನದಲಿ ನಿರೀಕ್ಷಿಸುತರಿಭಟಾವಳಿಯ ೩೧

ಸರಕುಗಳನ್ನು ಒಟ್ಟುಗೂಡಿಸಿಕೊಂಡರು ಕೆಲವರು. ೨೮. ರಾವಣನ ಅರಮನೆಯ ಬಾಗಿಲು ಬಾಗಿಲುಗಳಲ್ಲಿ ತನ್ನನ್ನು ತಡೆದ ಪ್ರಬಲರಾಕ್ಷಸರನ್ನು ಭಾರಿ ಮರದ ದಪ್ಪ ಬುಡದಿಂದ ಅಪ್ಪಳಿಸಿ ಅಂಗದನು ಸರಾಗವಾಗಿ ಆಸ್ಥಾನವನ್ನು ಪ್ರವೇಶಿಸಿದನು. ಎಡ ಬಲಗಳಲ್ಲಿ ಕತ್ತಿಹಿಡಿದು ನಿಂತ ಸೊಕ್ಕಿದ ರಾಕ್ಷಸರನ್ನು ತನ್ನ ಎರಡೂ ಕಡೆಯ ಭುಜಗಳಿಂದ ತಿವಿಯುತ್ತ ಬಂದು ರಾವಣನ ಎದುರಿನಲ್ಲಿ ನಿಂತುಕೊಂಡನು. ೨೯. ಹಿಂದೆ ನೋವನ್ನ ನುಭವಿಸಿದ್ದ ರಾಕ್ಷಸಭಟರು ಹನುಮಂತನೇ ಬಂದನೆಂದು ಭಾವಿಸಿ ಧೈರ್ಯಗೆಟ್ಟು ದಿಗಿಲುಗೊಂಡರು. ಕೆಲವರು ಇದ್ದಿದ್ದಲ್ಲಿಯೇ ಒಳಗಡೆಗೆ ಜಾರಿಕೊಂಡರು. ಬಿಗಿಯುದ್ಧ ದಲ್ಲಿ ಬಿರುದಾಂತ ಬಲಶಾಲಿ ತುಂಟ ರಾಕ್ಷಸರು ಕಿರುಗತ್ತಿಗಳನ್ನು ಹಿಡಿದು ಅಂಗದನ ಸಮೀಪದಲ್ಲಿ ನಿಂತರು. ೩೦. "ಹೋ ಹೋ, ಗದ್ದಲವೇಕೆ ? ಯುದ್ಧೋತ್ಸಾಹದಿಂದ ನಾವು ಬಂದಿಲ್ಲ. ಶತ್ರುಸೂರ್ಯನ ರಾಹುವಾಗಿರುವ ರಾಕ್ಷಸವಂಶದ ಕಾಳ್ಗಿಚ್ಚಾಗಿರುವ ರಾಮನಿಗೆ ಬೇಕಾದ ದೂತರು ನಾವು. ಜಗತ್ತಿನ ದೇವರಿಗೆ ದ್ರೋಹ ಬಗೆದ ರಾಕ್ಷಸ ನೊಡನೆ ನಮ್ಮವರು ಹೇಳಿಕಳುಹಿಸಿರುವುದನ್ನು ತಿಳಿಸಿಹೋಗಲು ಬಂದೆವಷ್ಟೆ" ಎಂದ ಅಂಗದ. ೩೧. ದರ್ಪದ ಠೀವಿಯಿಂದ ಮನಸ್ಸಿನಲ್ಲಿ ಹರ್ಷಿಸುತ್ತ ಮಂದಹಾಸವನ್ನು ಬೀರಿ ಸ್ವಾಮಿಕಾರ್ಯಾಸಕ್ತಿಯ ಗಾಂಭೀರ್ಯ ಮತ್ತು ಗರ್ವದ ಗೌರವದಿಂದ ಬಾಲವನ್ನು ಸುತ್ತಿ ಆಸನವನ್ನಾಗಿ ಮಾಡಿಕೊಂಡು ಸುತ್ತ ಇದ್ದ ರಾಕ್ಷಸವೀರರನ್ನು ನೋಡುತ್ತ

ಮುಖಚತುಷ್ಟಯದಾತನಾರೀ । ಮುಖಗಳೈದಱ ಮಹಿಮನಾರೀ
ಮುಖವೆರಡು ಮೂಱಾಱು ನೋಡಲು ಹತ್ತು ಪರಿಯಂತ
ಮುಖಗಳಿವೆ ತಾನಿದಱೊಳಗೆ ಶಶಿ । ಮುಖಿಯ ಮಾಯೆಯ ಬಳಸಿ ರಜನೀ
ಮುಖದೊಳಗೆ ತಂದಧಮರಕ್ಕಸನಿವರೊಳಾರೆಂದ ೩೨

ಹೇಳಲಾಗದೆ ಬಲ್ಲವರು ಭೂ । ಪಾಲ ಹೇಳಿದು ಕಳುಹಿದನಿತನು
ಹೇಳಿಪೋಗಲು ಬಂದೆವಾವ್ ಪ್ರತಿಭಟರು ನಾವಲ್ಲ
ಲೋಲನಯನೆಯ ತಂದ ರಕ್ಕಸ । ಖೂಳನಿವನೀಗೆಂದು ನಮ್ಮೊಡ
ನೊಳಬಾರದೆ ಹಿರಿದು ನಾಚಿಕೆಯೇಕೆ ನಿಮಗೆಂದ ೩೩

ನಗರದಹನದ ಕಪಿಯ ಮೋಡಿಯ । ಮಿಗಿಸುತಿದೆ ಮಾತಿನಲಿ ಮೋಱೆಯ
ಹೊಗರು ಹೊಸಪರಿಯಾಗಿ ತೋಱುತಿದೇ ವಿವೇಕಿಸಲು
ವಿಗಡನಿವನಹುದೆಂದು ಮನದಲಿ । ಬಗೆಯುಱಿದು ಬಳಿಕಾ ಪ್ರಹಸ್ತನು
ಮುಗುಳುನಗೆಯುಲಿ ನುಡಿದನಾ ಕಪಿರಾಜಪುತ್ರಂಗೆ ೩೪

ಆರು ನೀನಾರವನು ನಿನ್ನನ । ದಾರು ಕಳುಹಿದರಿತ್ತ ಬರವೇ
ನಾರೊಡೆಯರಾರುಂಟು ನಿನಗೀ ನಮ್ಮ ನಗರದಲಿ
ಆರ ಮಗ ಹೆಸರೇನು ಬರವಿಗೆ । ಕಾರಣವದೇನೆಮ್ಮ ರಾಜ
ದ್ವಾರವನು ನೀ ಹೊಕ್ಕ ಹದನೇನೆಂದು ಬೆಸಗೊಂಡ ೩೫

ಅಂಗದನು ಕುಳಿತನು. ೩೨. "ಈ ನಾಲ್ಕು ಮುಖದವನಾರು ? ಐದು ಮುಖಗಳ ಈ ಮಹಿಮಾವಂತನಾರು ? ಎರಡು, ಮೂರು, ಆರು, ಕೊನೆಗೆ ಹತ್ತರವರೆಗಿನ ಮುಖಗಳನ್ನು ಹೊಂದಿದವರು ಇಲ್ಲಿದ್ದಾರೆ. ಸಂಜೆಯಹೊತ್ತಿನಲ್ಲಿ ಮಾಯೆಯನ್ನು ಬೀಸಿ ಸೀತೆಯನ್ನು ತಂದ ನೀಚರಾಕ್ಷಸನು ಇವರಲ್ಲಿ ಯಾರು ?" ಎಂದು ಅಂಗದ ಕೇಳಿದ. ೩೩. "ಇಲ್ಲಿರುವ ತಿಳಿದವರು ಹೇಳಲಾಗುವುದಿಲ್ಲವೆ ? ಶ್ರೀರಾಮನು ಹೇಳಿಕಳುಹಿಸಿದುದನ್ನು ಹೇಳಿಹೋಗಲು ನಾವು ಬಂದೆವು. ವಿರೋಧಿಸಲು ಬಂದ ವೀರರು ನಾವಲ್ಲ. ಚಂಚಲನೇತ್ರೆ ಸೀತೆಯನ್ನು ತಂದ ದುಷ್ಟರಾಕ್ಷಸನಿವನು ಎಂದು ಬೊಗಳಬಾರದೆ ? ನಿಮಗೆ ಈ ಅತಿಯಾದ ನಾಚಿಕೆಯೇಕೆ ?" ಎಂದ ಅಂಗದ. ೩೪. "ಲಂಕಾನಗರವನ್ನು ಸುಟ್ಟ ಕಪಿಯ ದರ್ಪವನ್ನು ಮಾತಿನಲ್ಲಿ ಈ ಕಪಿ ಮೀರಿಸುತ್ತಿದೆ. ಯೋಚಿಸಿ ನೋಡಿದರೆ ಮುಖದ ತೇಜಸ್ಸು ಹೊಸರೀತಿಯಾಗಿ ಕಾಣಿಸುತ್ತಿದೆ. ಇವನು ಧೈರ್ಯಶಾಲಿಯಹುದು" ಎಂದು ಮನಸ್ಸಿನಲ್ಲಿ ಭಾವಿಸಿ ಪ್ರಹಸ್ತನು ಮುಗುಳು ನಗುತ್ತ ವಾನರರಾಜಕುಮಾರನನ್ನು ಮಾತನಾಡಿಸಿದನು. ೩೫. "ನೀನು ಯಾರ ಕಡೆಯವನು ? ನಿನ್ನನ್ನು ಕಳುಹಿಸಿದವರು ಯಾರು ? ಇಲ್ಲಿಗೆ ಏನುಕಾರಣ ಬಂದೆ ? ನಮ್ಮ ನಗರದಲ್ಲಿ ನಿನಗೆ ಯಾರು ಬೇಕಾದವರು ? ನೀನು ಯಾರ ಮಗ ? ನಿನ್ನ ಹೆಸರೇನು ? ನೀನು ಬರಲು ಕಾರಣವೇನು ? ನಮ್ಮ ರಾಜಧಾನಿಯ ಬಾಗಿಲನ್ನು ನೀನು ಪ್ರವೇಶಿಸಿದ ಉದ್ದೇಶವೇನು ?" ಎಂದು ಪ್ರಹಸ್ತ ಪ್ರಶ್ನಿಸಿದ.

ಲೇಸು ಕೇಳುವ ಕಥೆಯಿದಭಿನವ । ನ್ಯಾಸವೊಳ್ಳಿತು ಕೇಳು ಲಂಕಾ
ಧೀಶನೆಂಬ ನಿಶಾಚರೇಂದ್ರನ ನಿಜಸಹೋದರಿಯ
ನಾಸಿಕವ ಕೊಯ್ದವನ ರಣದಲಿ । ದೂಷಣಾದ್ಯರ ಶಿರವನಿಳುಹಿದ
ದಾಶರಥಿಯನು ಕೇಳಿಬಲ್ಲೈ ಹಿಂದೆ ನೀನೆಂದ ೩೬

ಕೇಳಿಬಲ್ಲೈ ನಿಮ್ಮ ಲಂಕಾ । ಪಾಲಕನ ಮಾತುಳನ ಕೊರಳಲಿ
ಕೋಲ ಕುಣಿಸಿದ ಕದನಕರ್ಕಶ ರಾಯರಾಘವನ
ಮೇಲೆ ನಿಮ್ಮಾಳುದನ ತಮ್ಮನ । ಪಾಲಿಸಿದ ಪರಮಪ್ರತಾಪದ
ಬೋಳೆಯರ ಬಲ್ಲಹನನಾತನ ದೂತ ತಾನೆಂದ ೩೭

ಅಲ್ಲ ಸಾನಾವವನನೊಪ್ಪಚಿ । ಬಲ್ಲೆವವ ನಿನ್ನಿಂದ ಬಾಯಲಿ
ಬಲ್ಲಿದನು ಬಾಯ್ಬಡಿಕತನದಲಿ ಬಗುಳಿ ಬಾಲವನು
ಕೊಳ್ಳಿಗಿಡಿಯಲಿ ಸುಡಿಸಿಕೊಂಡವ । ನಿಲ್ಲದೋಡಿದನಂದಿನವ ನೀ
ನಲ್ಲ ಹೊಸಬನು ನೀನು ನಿನ್ನಯ ಹೆಸರದೇನೆಂದ ೩೮

ಹೇಳಲೇನದನವನ ವಿಧಿಯನು । ಕೇಳಿತಿಲ್ಲವಲಾ ಕಪೀಂದ್ರನ
ಪಾಳೆಯವ ಹೊಗಗೊಡದೆ ಕಪಿಪೋತಂಗಳುಬ್ಬೆಱಿದು
ಬಾಲಸುಡುಕನ ತೆವರಲಾ ಕಪಿ । ಯಾಳಿಗವು ನಮಗಾಯ್ತು ನಮ್ಮಾ
ಬಾಲವನು ನೀವ್ ಕೆಣಕಿನೋಡಿದಡಱಿಯಬಹುದೆಂದ ೩೯

೩೬. "ನೀನು ಪ್ರಶ್ನಿಸುವ ಕಥಾಭಿನಯ ಸೊಗಸಾಗಿದೆ, ಕೇಳು ಹೇಳುತ್ತೇನೆ. ಲಂಕಾಧಿಪತಿ ಎಂಬ ರಾಕ್ಷಸರಾಜನ ಸಹೋದರಿಯ ಮೂಗನ್ನು ಕೊಯ್ದು ಯುದ್ಧದಲ್ಲಿ ಖರ ದೂಷಣಾದಿಗಳ ಕತ್ತು ಕತ್ತರಿಸಿದ ದಾಶರಥಿಯ ವಿಷಯವನ್ನು ಹಿಂದೆ ಕೇಳಿಬಲ್ಲೆಯಾ ? ೩೭. ನಿಮ್ಮ ಲಂಕೆಯೊಡೆಯನ ಸೋದರಮಾವ ಮಾರೀಚನ ಕೊರಳಿನಲ್ಲಿ ಬಾಣವನ್ನು ಕುಣಿಸಿದ ರಣದಲ್ಲಿ ಯಮರೂಪಿಯಾದ ರಾಘವರಾಯನನ್ನು ಕೇಳಿಬಲ್ಲೆಯಾ ? ಇದರ ಮೇಲೆ ನಿಮ್ಮ ಅರಸನ ತಮ್ಮನಿಗೆ ಆಶ್ರಯವಿತ್ತು ರಕ್ಷಿಸಿದ ಮಹಾಪ್ರತಾಪಶಾಲಿಯಾದ ದೇವತೆಗಳೊಡೆಯನ ದೂತನು ನಾನು" ಎಂದು ನುಡಿದ ಅಂಗದ. ೩೮. "ಬೇಡ ನಾಯಿಯಾದವನನ್ನು ಒಮ್ಮೆ ಬಲ್ಲೆವು. ಅವನು ನಿನಗಿಂತ ಮಾತಿನಲ್ಲಿ ಹೆಚ್ಚು ಶೂರ. ಬಡಾಯಿಕೊಚ್ಚಿಕೊಂಡು ಬಾಯಿಗೆ ಬಂದಂತೆ ಬೊಗಳಿ ತನ್ನ ಬಾಲವನ್ನು ಕೊಳ್ಳಿಯ ಬೆಂಕಿಯಿಂದ ಸುಡಿಸಿಕೊಂಡು ನಿಲ್ಲದೆ ಓಡಿದನು. ಅಂದು ಬಂದಿದ್ದವನಲ್ಲ ನೀನು. ನೀನು ಹೊಸಬ. ನಿನ್ನ ಹೆಸರೇನು ?" ಎಂದು ಪ್ರಹಸ್ತ ಕೇಳಿದ. ೩೯. "ಅವನ ಹಣೆಯಬರಹವನ್ನು ಏನು ಹೇಳೋಣ. ನೀವು ಕೇಳಿಲ್ಲವೇ ? ವಾನರರೊಡೆಯನ ಪಾಳೆಯಕ್ಕೆ ಸೇರಿಸದೆ ಮರಿಕೋತಿಗಳು ಸೊಕ್ಕಿನಿಂದ ಬಾಲ ಸುಟ್ಟುಕೊಂಡವನನ್ನು ಓಡಿಸಲು ಆ ಕಪಿಯ ಸೇವಾ ಕಾರ್ಯದ ಭಾರವು ನಮ್ಮ ಮೇಲೆ ಬಿದ್ದಿತು. ನಮ್ಮ ಈ ಬಾಲವನ್ನು ನೀವು ಕೆಣಕಿ

ಹೊಸಬ ನೀನಹೆ ಕಂಗಳಿಗೆ ಹರ । ವಸವೆ ಬಲ್ಲಿದನಹುದು ಕಡುಕ
ರ್ಕಶತೆಯಲಿ ಕಂಡಱಿಯಬಾರದೆ ಹೋಗಲದಕೇನು
ಹೆಸರದೇನಂಗದನು ಪಿತನಾ । ರಸುರ ಕೇಳಾದಡೆ ದಶಾನನ
ನಸುವ ಸಲಹಿದ ವಾಲಿಯಾತನ ತನುಜ ತಾನೆಂದ ೪೦

ಅಕಟ ಕೆಡಿಸಿದೆ ಪಾಪಿ ತನುಘಾ । ತಕನಲಾ ನೀ ನಿನ್ನ ತಂದೆಯ
ಸಕಲ ಜಗವನ್ಯಾಯವೆನೆ ಕೊಲಿಸಿದ ದುರಾತ್ಮಕನ
ಪ್ರಕಟಿಸದೆ ಕೊಂದಧಮನರನಾ । ಯಕನನಕಟಾ ಸೇರಿ ಕಡುಹೇ
ಸಿಕೆಯ ಹೊತ್ತೆ ನಿರರ್ಥ ನಿನ್ನನು ನೋಡುವರೆಯೆಂದ ೪೧

ಹಗೆಗಳವದಿರು ನಿನಗೆ ನೆವದಲಿ । ಹೊಗೆವ ಕೊಳ್ಳಿಯ ಹೊಱಗೆ ಹಾಯ್ಕಿದ
ರಗಲಿಸಿದರಳಿವಿಂಗೆ ಕೊಲುವವರಲ್ಲ ನಾವ್ ನಿನ್ನ
ತೆಗೆದುಕೊಂಬೆವು ನೀನೆಮಗೆ ದಾ । ಯಿಗನು ನಿನ್ನಯ ತಂದೆಯಾಳುವ
ನಗರವನು ಸೇರಿಸುವೆವಂಜದಿರಿನ್ನು ನೀನೆಂದ ೪೨

ಗಹಗಹಿಸಿದನು ಲೇಸುಮಾಡಿದಿ । ರಹಿತರೇ ನೀವ್ ನಮಗೆ ನಿಮಗೀ
ಬಹಳಭುಜಬಲವುಳ್ಳರಡಗಿಸಿ ರೂಹ ರುಂಹರಿಯ
ದುಹಿತೆಯನು ಕಳವಿನಲಿ ವನದಲಿ । ತಹಿರೆ ರಾಮನ ಬಳಿಗೆ ನಿಮ್ಮವ
ಬಹನೆ ಭಾಷ್ಪಳಗೆಡುವುದುಚಿತವೆ ನಮ್ಮ ಕೂಡೆಂದ ೪೩

ನೋಡಿದರೆ ನಿಮಗೇ ತಿಳಿಯುವುದು" ಎಂದ ಅಂಗದ. ೪೦. ಪ್ರಹಸ್ತ: ನೀನು ಹೊಸಬ. ಅಂಗದ: ನಿಮ್ಮ ಕಣ್ಣುಗಳು ಎಚ್ಚರದಪ್ಪಿವೆಯೆ ? ಪ್ರಹಸ್ತ: ನೀನು ಶೂರನಹುದು. ಅಂಗದ: ದೇಹದ ಗಟ್ಟಿ ಮೈಕಟ್ಟನ್ನು ನೋಡಿ ತಿಳಿದುಕೊಳ್ಳಬಾರದೆ ? ಹೋಗಲಿ, ಅದಕ್ಕೇನು. ಪ್ರಹಸ್ತ: ನಿನ್ನ ಹೆಸರೇನು ? ಅಂಗದ: ಅಂಗದ ಎಂದು. ಪ್ರಹಸ್ತ: ನಿನ್ನ ತಂದೆ ಯಾರು ? ಅಂಗದ: ರಾಕ್ಷಸನೇ ಕೇಳು, ದಶಮುಖನ ಪ್ರಾಣವನ್ನು ಕಾಪಾಡಿದ ವಾಲಿಯ ಮಗ ನಾನು. ೪೧. "ಅಯ್ಯೋ, ಕೆಡಿಸಿದೆ ಪಾಪಿ. ನೀನು ಕೊಲೆಗಾರನಾದೆಯಲ್ಲ. ಸಮಸ್ತ ಜನಗಳು ಅನ್ಯಾಯವೆನ್ನುತ್ತಿದ್ದರೂ ನಿನ್ನ ತಂದೆಯನ್ನು ಕೊಲ್ಲಿಸಿದ ಪಾಪಿಯನ್ನೂ ಮರೆಯಲ್ಲಿ ಅಡಗಿಕುಳಿತು ಕೊಂದ ನೀಚ ಮಾನವಾಧಿಪತಿಯನ್ನೂ ಸೇರಿ ವ್ಯರ್ಥವಾಗಿ ಅಸಹ್ಯನಾದೆ, ನಿನ್ನನ್ನು ನೋಡಬಹುದೇ ?" ಎಂದ ಪ್ರಹಸ್ತ. ೪೨. "ಸುಗ್ರೀವ ರಾಮಾದಿಗಳು ನಿನಗೆ ಶತ್ರುಗಳು. ಅದೊಂದು ನೆಪದಿಂದ ಹೊಗೆಯಾಡುವ ಕೊಳ್ಳಿ (ವಾಲಿ)ಯನ್ನು ಹೊರಗೆ ಹಾಕಿದರು, ಅತ್ಯಾಸೆಗೊಳಗಾಗಿ ನಿನ್ನ ತಂದೆಯನ್ನು ಕೊಂದರು. ನಾವು ನಿನ್ನನ್ನು ಕೊಲ್ಲುವುದಿಲ್ಲ. ನಿನ್ನನ್ನು ನಮ್ಮ ಕಡೆಗೆ ಸೇರಿಸಿಕೊಳ್ಳುತ್ತೇವೆ. ನೀನು ನಮಗೆ ದಾಯಾದಿ. ನಿನ್ನ ತಂದೆ ವಾಲಿ ಆಳುತ್ತಿದ್ದ ರಾಜ್ಯವನ್ನು ಕೊಡಿಸುತ್ತೇವೆ. ಇನ್ನು ನೀನು ಹೆದರಬೇಡ" ಎಂದ ಪ್ರಹಸ್ತ. ೪೩. ಅಂಗದನು ಈ ಮಾತನ್ನು ಕೇಳಿ ಗಹಗಹಿಸಿ ನಕ್ಕನು. "ಒಳ್ಳೆಯದು ಮಾಡಿದಿರಿ. ನೀವೇನು ನಮಗೆ ವಿರೋಧಿಗಳೇ ? ಇಷ್ಟೊಂದು ಪ್ರತಾಪಶಾಲಿಗಳಾದವರು ವೇಷ

ತಂದೆ ಪರಸತಿಗೋತ ಕಾರಣ । ಸಂದನಸ್ತ್ರಮಯಕ್ಕೆ ಕೊರಳಿಗೆ
ಬಂದಿದೆಯಲಾ ನಿಮ್ಮವಗೆ ನಮ್ಮಯ್ಯನೋಪಾದಿ
ಒಂದೆರಡು ದಿನದಂತರವು ನಾ । ವೆಂದ ನುಡಿ ಕೇಳೆಲವೊ ಸೀತೆಯ
ತಂದವನ ತೋಱಿದರೆ ನಮಗದು ರಾಜ್ಯಪದವೆಂದ ೪೪

ಎಲವೊ ಕಪಿ ನೋಡಾದಡೀಕ್ಷಿಸು । ಕಲಿಲಲಾಮನ ಕದನಕರ್ಕಶ
ಕುಲಿಶಕಾಯನ ವೈರಿ ವರಯುವತೀಜನಸ್ಮರನ
ವಿಲಸದಪ್ರತಿಮ ಪ್ರತಾಪಾ । ನಲನ ರಾಕ್ಷಸರಾಜಮೌಳಿಯ
ಮಲೆವ ರಿಪುನೃಪಸೂಱೆಕಾಱನ ನೋಡು ನೀನೆಂದ ೪೫

ಈತನೀಗ ಸಮಸ್ತ ದಿವಿಜ । ವ್ರಾತಮಸ್ತಕಮಂಡಲಾಗ್ರ ಮ
ಹಾತಿಬಲನಧಿಪತಿ ಜಗಂಗಳಿಗಜಭವಾದಿಗಳ
ಈತ ಬಯಸಿದ ಸುರ ನರೋರಗ । ಜಾತದಬಲಾಜನವನೊಲಿಸುವ
ದೂತಿ ವಿಜಯಶ್ರೀ ವಿಚಾರಿಸಿ ಮಾತನಾಡೆಂದ ೪೬

ತಂಗಿಯಭಿಮಾನವ ನಿರರ್ಥಕ । ಭಂಗಬಡಿಸಿದ ಹೇವದಲಿ ಹಗೆ
ಯಂಗನೆಯ ತಂದಾತನೀತನು ಸೋದರತ್ರಯದ
ಹಿಂಗಿದಸುವಿಂಗಸುಗೊಳಲು ರಣ । ರಂಗದಲಿ ನಿಂದಿರುವ ಸುಭಟತೋ
ತ್ತುಂಗನೀತನು ನೀನು ಬಂದುದ ಬಗುಳಿ ಹೋಗೆಂದ ೪೭

ಮರೆಸಿಕೊಂಡು ಪೃಥ್ವಿಯ ಮಗಳನ್ನು ಕಾಡಿನಿಂದ ಕದ್ದು ತಂದಿರೆ ? ರಾಮನ ಬಳಿಗೆ ನಿಮ್ಮವನು ಬರುವನೆ ? ನಮ್ಮೊಡನೆ ಅಸಂಬದ್ಧವಾಗಿ ಮಾತನಾಡುವುದು ಯೋಗ್ಯವೇ?" ಎಂದ ಅಂಗದ. ೪೪. "ನನ್ನ ತಂದೆಯು ಪರಸ್ತ್ರೀಯನ್ನು ಪ್ರೀತಿಸಿದುದರಿಂದ ಸಾವಿಗೀಡಾದನು. ನಮ್ಮಯ್ಯನಂತೆಯೇ ನಿಮ್ಮವನ ಕತ್ತಿಗೂ ಸಂಚಕಾರ ಬಂದಿದೆಯಲ್ಲ. ನಾವು ಹೇಳಿದ ಮಾತು ನಿಜವಾಗಲು ಒಂದೆರಡು ದಿನವಷ್ಟೆ. ಕೇಳೋ, ಸೀತೆಯನ್ನು ತಂದವನನ್ನು ತೋರಿಸಿಕೊಟ್ಟರೆ ನಮಗೆ ರಾಜ್ಯಪದವಿಯನ್ನು ಕೊಟ್ಟಂತೆ" ಎಂದು ನುಡಿದ ಅಂಗದ. ೪೫. "ಲೋ ಕಪಿ, ಹಾಗಿದ್ದರೆ ನೋಡು. ವೀರರ ತಿಲಕ, ಕಾಳಗದ ಯಮ ವಜ್ರಾಯುಧಶರೀರಿ, ಶತ್ರುಸ್ತ್ರೀಯರ ಮನ್ಮಥ, ಅಸಾಧಾರಣ ಪರಾಕ್ರಮಾಗ್ನಿ ಉದ್ಧಟ ಶತ್ರುರಾಜರ ಸೂರೆಕಾರ–ಹೀಗೆ ಮೆರೆಯುವ ರಾಕ್ಷಸರಾಜಶ್ರೇಷ್ಠನನ್ನು ನೀನು ನೋಡು" ಎಂದು ರಾವಣನನ್ನು ತೋರಿಸಿದ ಪ್ರಹಸ್ತ. ೪೬. "ಈತನು ಸಮಸ್ತದೇವತೆಗಳ ತಲೆಯ ಮೇಲಿನ ಶಕ್ತಿಶಾಲಿ ಮಹಾಯುಧ, ಬ್ರಹ್ಮ ಶಿವ ಇವರುಗಳ ಲೋಕಗಳಿಗೊಡೆಯ, ಈತನು ಬಯಸಿದ ದೇವತಾಸ್ತ್ರೀಯರು, ಮಾನವಸ್ತ್ರೀಯರು ಮತ್ತು ಉರಗನಾರಿಯರುಗಳನ್ನು ಒಲಿಸುವಂತೆ ಮಾಡುವ ದೂತಿಯ ವಿಜಯಲಕ್ಷ್ಮಿ. ಆದುದರಿಂದ ಈತನೊಡನೆ ಯೋಚಿಸಿ ಮಾತನಾಡು" ಎಂದ ಪ್ರಹಸ್ತ. ೪೭. "ನಿಷ್ಕಾರಣವಾಗಿ ತಂಗಿಯ ಅಭಿಮಾನವನ್ನು ಮುರಿದ ಕಾರಣ ಸೇಡಿನಿಂದ ಶತ್ರುವಿನ ಹೆಂಡತಿಯನ್ನು ಈತನು ತಂದನು. ಮೂರು ಜನ ಸಹೋದರರ ಹೋದ ಪ್ರಾಣಗಳಿಗೆ ಬದಲಾಗಿ ಪ್ರಾಣ

ಕೋಪ ನಿಮಗೇಕಿನಿತು ಸೈರಿಸ । ಲಾಪವೇ ನಾವೀ ನಿಶಾಟನ
ರೂಪಿನವರುಂಟಾಗೆ ಕೇಳಿದೆವೈಸೆ ತಪ್ಪೇನು
ಆ ಪರಂತಪಬಲಿಯ ಭವನದ । ಕ್ಷ್ಮಾಪರೆಯ ನಾರಿಯರ ವಚನಾ
ಲಾಪಹಾಸ್ಯದ ಭಿಕ್ಷದವನಿವನಲ್ಲಲೇಯೆಂದ ೪೮

ಘನಪರಾಕ್ರಮಿ ಕಾರ್ತವೀರ್ಯಾ । ರ್ಜುನನೊಡನೆ ಮತ್ಸರಿಸಿ ಸಲೆ ಸೆಜಿ
ವನೆಯೊಳಗೆ ಸಿಕ್ಕಿರ್ದ ರಕ್ಕಸನೀತನಲ್ಲವಲೆ
ವನಿತೆ ವೇದಾವತಿಯ ಶಾಪಕೆ । ತನುವ ತೆತ್ತವನೀತನಲ್ಲಲೆ
ಮನದ ಭಯ ನಿಮಗೇಕೆ ತಪ್ಪದೆ ಹೇಳಿ ನೀವೆಂದ ೪೯

ತೋಳದರ್ಪದಲುಬ್ಬಿ ವಾಲಿಯ । ಬಾಲಕನ ಬಚ್ಚರಣೆದೊಟ್ಟಿಲ
ಕಾಲ ದೆಸೆಯಲಿ ಕಟ್ಟುವಡೆದವನೀತನಲ್ಲವಲೆ
ಶೂಲಿಯಲಿ ಗರ್ವಿಸಿ ಮಹೀಧರ । ಮೂಲದಲಿ ಕೈಸಿಕ್ಕಿ ನಾಯವೊ
ಲೂಳಿದವ ತಾನೀತನಲ್ಲಲೆ ಹೇಳಿ ತನಗೆಂದ ೫೦

ಜನಕಜೆಯ ಮದುವೆಯಲಿ ಶೂಲಿಯ । ಧನುವಿನಲಿ ನರಿ ಸಿಕ್ಕಿಸಿಕ್ಕಿದ
ಶುನಕ ತಾನಿವನಲ್ಲಲೇ ಶಿರಪತ್ತ ವೈಮಜಿಸಿ
ಜನಪನಿಲ್ಲದ ಹಿಂದೆ ಜನಕನ । ತನುಜೆಯನು ಕದ್ದೊಯ್ದ ಕಾಮುಕ
ರನುಚರರಿಗೆಡೆಬಂಟನಲ್ಲಲೆ ಹೇಳಿ ತನಗೆಂದ ೫೧

ವನ್ನು ತೆಗೆದುಕೊಳ್ಳಲು ಯುದ್ಧಕ್ಕೆ ನಿಂತಿರುವ ಮಹಾವೀರನೀತನು. ನೀನು ಬಂದ ಕಾರಣವನ್ನು ಬಗುಳಿ ಹೋಗು" ಎಂದ ಪ್ರಹಸ್ತ. ೪೮. "ಇಷ್ಟೊಂದು ಕೋಪ ನಿಮಗೇಕೆ ? ಇದನ್ನು ನಾವು ಸಹಿಸಬಲ್ಲೆವೇ ? ಈ ರಾಕ್ಷಸನ ರೂಪಿನವರು ಇತರರು ಇದ್ದರಾದುದರಿಂದ ನಾವು ಕೇಳಿದೆವು. ಇದರಲ್ಲಿ ತಪ್ಪೇನು. ಆ ಶತ್ರುವಿಜಯಿ ವೀರಬಲಿಯ ಮನೆಯ ಸ್ತ್ರೀಯರು ಚಪ್ಪಾಳೆ ತಟ್ಟಿಕೊಂಡು ಹಾಸ್ಯಮಾಡಿ ತಮಾಷೆಯ ಮಾತನಾಡುತ್ತಿದ್ದರಲ್ಲ, ಆ ಭಿಕ್ಷದವನು ಇವನಲ್ಲವೇ ?" ಎಂದ. ೪೯. "ಮಹಾಪರಾಕ್ರಮಶಾಲಿಯಾದ ಕಾರ್ತವಿರ್ಯಾರ್ಜುನನೊಡನೆ ದ್ವೇಷ ಬೆಳೆಸಿ ಸೆರೆಮನೆಯಲ್ಲಿ ಸಿಕ್ಕಿಹಾಕಿಕೊಂಡ ರಾಕ್ಷಸನೀತನಲ್ಲವೇ ? ವೇದಾವತಿಯ ಶಾಪಕ್ಕೀಡಾದವನೀತನಲ್ಲವೇ ? ಮನಸ್ಸಿನ ಭಯ ನಿಮಗೇಕೆ, ತಪ್ಪದೆ ಹೇಳಿ" ಎಂದ ಅಂಗದ. ೫೦. "ತೋಳ್ಬಲದ ಮದದಿಂದ ಗರ್ವಿಸಿ ವಾಲಿಯ ಮಗನ ವಜ್ರದ ಕೆತ್ತನೆಯ ತೊಟ್ಟಿಲಿನ ಕಾಲಬುಡದಲ್ಲಿ ಕಟ್ಟಿಸಿಕೊಂಡವನು ಇವನಲ್ಲವೆ ? ಶಿವನ ಮೇಲಿನ ಅಹಂಕಾರದಿಂದ ಕೈಲಾಸದ ಬುಡಕ್ಕೆ ಕೈಸಿಕ್ಕಿಕೊಂಡು ನಾಯಿಯ ಹಾಗೆ ಅರಚಿಕೊಂಡವನು ಇವನಲ್ಲವೇ ಹೇಳಿ ನನಗೆ" ಎಂದ ಅಂಗದ. ೫೧. ಜಾನಕಿಯ ಸ್ವಯಂವರದಲ್ಲಿ ನರಿಯು ಸಿಕ್ಕಿಸಿ ಹಾಕಿದ ನಾಯಿಯಂತೆ ಶಿವಧನುಸ್ಸಿಗೆ ಸಿಕ್ಕಿಕೊಂಡ ನಾಯಿ ಇವನಲ್ಲವೇ? ತಲೆ ಕೈ ಮೈಗಳನ್ನು ಮರೆಸಿಕೊಂಡು ರಾಮನಿಲ್ಲದೆ ಇದ್ದಾಗ ಸೀತೆಯನ್ನು ಕದ್ದುಕೊಂಡು ಹೋದ ಇವನು ಕಾಮುಕರ ಸೇವಕರ ಬಳಿದೊತ್ತಲ್ಲವೆ

ಆಗಲಾಗದೆ ಮಾಣಲಿವನೊಡ । ನಾ ಗಭೀರ ಪರಾಕ್ರಮನು ಪೇ
ಳ್ದಾಗಮವನಿವಗೆಂಬ ಮಿಕ್ಕಿನ ಮಾತದೇಕೆಮಗೆ
ರೋಗಿಗೌಷಧಿ ಸೊಗಸೆ ಹಿತಕರ । ವಾಗಿರವು ನಮ್ಮುಕ್ತಿಗಳು ಕಿವಿ
ದಾಗಿಸುವವಾವೊಮ್ಮೆ ಕೇಳಲಿ ಕೇಳದಿರಲೆಂದ ೫೨

ಆದಡೆಲೆ ಖಳ ಕೇಳು ನಾಸಾ । ಛೇದವಾದವಳಿಂದ ನೀ ಮರು
ಳಾದ ಕಾಮುಕತನದಿ ಕಂಗಾಣದೆ ವಿಭೀಷಣನ
ವೇದಮಾರ್ಗದ ಮಧುರವಚನವ । ನಾದರಿಸದುಚಿ ಕೆಟ್ಟೆ ನೀನಿ
ನ್ನಾದಡೆಯು ರಘುಪತಿಯ ಸಾರಿದು ಬದುಕುಬಾಯೆಂದ ೫೩

ಪ್ರೇಮ ಘನ ನಿನ್ನವನ ಮೇಲೆ ಸ । ನಾಮನವನಾ ಬಿಡೆಯುದಲಿ ನಿಜ
ಭಾಮಿನಿಯ ಬಿಡೆ ಬಿಡುವೆನೆಂದನು ತಿರುಗಿ ಪಾಳೆಯವ
ರಾಮನಾಡಿದ ನುಡಿಯಿದೀಗಿದು । ಕಾಮಿತಕೆ ಕೈಗೂಡದಿರೆ ಲಯ
ಭಾಮಿನಿಯ ಪಾಣಿಗ್ರಹಣಕನುವಾಗು ಬೇಗೆಂದ ೫೪

ಈ ನುಡಿಯನೇ ಕರುಣಮುಖದಲಿ । ಭಾನುಸುತ ಸೂಚಿಸಿದನೀ ವಚ
ನಾನುಗುಣವನೆ ನಿನ್ನ ಸಹಭವನಾಡಿ ತೋಱಿಸಿದ
ಏನು ನಿನ್ನಂಗವಣೆ ಮನದನು । ಮಾನವಾವುದು ಹೋಗಬೇಕಾವ್
ಮಾನವೇಂದ್ರನ ಬಳಿಗೆ ಬೇಗದಿ ಹೇಳು ನೀನೆಂದ ೫೫

ಇವನು, ನನಗೆ ಹೇಳಿ" ಎಂದ. ೫೨. "ಆಗಲಿ ಆಗದೆ ಇರಲಿ, ಇವನೊಡನೆ ಶ್ರೀರಾಮನ ಗಾಢ ಪರಾಕ್ರಮವನ್ನು ವರ್ಣಿಸಿ ತಿಳುವಳಿಕೆಯನ್ನು ಕೊಟ್ಟನೆಂಬ ಹೆಚ್ಚಿನ ಮಾತು ನಮಗೇಕೆ ? ರೋಗಿಗೆ ಔಷಧವು ಸೊಗಸುವುದೆ ? ನಮ್ಮ ಮಾತುಗಳು ಹಿತಕರವಾಗಿರಲಾರವು. ಆದರೂ ನಾವು ಹೇಳಿದುದನ್ನು ಕೇಳಲಿ, ಕೇಳದೆ ಇರಲಿ. ಕಿವಿಯ ಮೇಲೆ ಹಾಕಿಬಿಡುವುದು ನಮ್ಮ ಪಾಲಿನ ಕೆಲಸ" ಎಂದ ಅಂಗದ, ೫೩. "ಅಯ್ಯಾ ಅಸುರ, ಕೇಳು. ಮೂಗು ಕೊಯ್ಯಿಸಿಕೊಂಡವಳ ಕಾರಣದಿಂದ ಮರುಳಾದ ನೀನು ಕಾಮುಕನಾಗಿ ಮುಂದುಗಾಣದೆ ವಿಭೀಷಣನು ಹೇಳಿದ ವೇದ ಮತಾನುಸಾರಿಯಾದ ಹಿತಕರವಾದ ಮಾತುಗಳನ್ನು ಗೌರವಿಸದೆ ಕೆಟ್ಟೆ. ಇನ್ನಾದರೂ ರಘುಪತಿಯ ಆಶ್ರಯವನ್ನು ಪಡೆದು ಬದುಕು ಬಾ" ಎಂದ ಅಂಗದ. ೫೪. "ಶ್ರೀರಾಮನಿಗೆ ನಿನ್ನ ತಮ್ಮನ ಮೇಲೆ ತುಂಬ ಪ್ರೀತಿ. ನೀನು ಸತಿ ಸೀತೆಯನ್ನು ಬಿಟ್ಟು ಕಳುಹಿಸಿದರೆ ಪಾಳೆಯದಿಂದ ಹಿಂದಿರುಗಿಹೋಗುವೆನೆಂದು ಕರುಣೆಯಿಂದ ಆ ಮಹಾನುಭಾವನು ಹೇಳಿದ್ದಾನೆ. ಇದು ರಾಮನಾಡಿದ ಮಾತು. ಇದು ನಿನ್ನ ಮನಸ್ಸಿಗೆ ಇಷ್ಟವಿಲ್ಲದಿದ್ದರೆ ಮರಣಲಕ್ಷ್ಮಿಯೊಡನೆ ಮದುವೆಗೆ ಬೇಗ ಸಿದ್ಧನಾಗು" ಎಂದ ಅಂಗದ. ೫೫. ಈ ಮಾತನ್ನೇ ಕರುಣೆಯಿಂದ ರವಿಸುತ ಸುಗ್ರೀವನು ಸೂಚಿಸಿದನು. ನಿನ್ನ ತಮ್ಮನು ಈ ಮಾತಿಗೆ ಅನುಸಾರವಾಗಿ ಹೇಳಿಕಳುಹಿಸಿದ್ದಾನೆ. ಇದರಲ್ಲಿ ನಿನ್ನ ಅಭಿಪ್ರಾಯವೇನು ? ನಿನ್ನ ಮನಸ್ಸಿನ ಯೋಚನೆಯೇನು ? ಬೇಗ

ಎನೆ ಘನ ಕ್ರೋಧಾಗ್ನಿಮುಖದಲಿ । ಮಿನುಗಿದುದು ಮೀಸೆಗಳು ಕುಣಿದವು
ಕನಲಿದವು ಕಂಗಳು ಕಳೇವರ ಕಂಪಿಸಿತು ಖಳನ
ತೊನೆದು ಖಡುಗವನೆಲವೊ ನಿಮ್ಮಯ । ಜನಪ ರಾಘವ ರವಿಸುತಾದ್ಯರು
ತನುಜರಸು ಹೆಸರಿಟ್ಟಡೆಯು ಬಿಡೆ ಜಾನಕಿಯನೆಂದ ೫೬

ಮೀಱಿ ನಮ್ಮೊಡನಣಕಸಣಕವ । ಗಾಱುಗೆಡೆದಡೆ ಬಾಯ ಹೊಯ್ಯುವೆ
ಸಾರು ಕೆಲಸಾರತ್ತ ಹೋಗುತ್ತರದ ನಾಯವೊಲು
ಚೀಱಿಕೊಳದೇಳೆನಲು ಬಳಿಕು । ಬ್ಬೇಱಿ ನಿಂದನು ಕೋಪದಲಿ ಕಾ
ಹೇಱಿ ನಡೆ ಕಾಳಗಕೆನುತ ಕೈದುಡುಕಿದನು ಖಳನ ೫೭

ತೋಳುಗಳ ಹಿಡಿದೆಳೆಯೆ ಖಳ ಕರ । ವಾಳದಲಿ ಚಿಮ್ಮಿದನು ಬಿದ್ದವು
ಮೇಲೆ ಖಂಡೆಯವಂಗರಕ್ಷಣೆಗಸುರನಾಯಕರು
ತೂಳದಿಭದೊಡ್ಡಿನಲಿ ಹೊಯ್ದು । ಬ್ಬೇಳುವಗ್ಗದ ಹರಿಯವೊಲು ಗಿರಿ
ಚೂಳಿಕೆಯಲೇ ಚೆಲ್ಲಬಡಿದನು ಚಟುಳ ಪಟುಭಟರ ೫೮

ಕೆದಱಿತಾ ಸಭೆ ಕೈದುಕಾಱರು । ಹೊದೆಸಿದರು ಹೊಳೆಹೊಳೆವ ಹೊಗರಿನ
ಹೊದಱುವೆಳಗಿನ ಹಲವು ಶಸ್ತ್ರಂಗಳಲಿ ಕಪಿಭಟನ
ಸದೆದನೊಳಹೊಕ್ಕವರನುಳಿದರ । ಕೆದಱಿದನು ಮಂಟಪವನೊದೆದಿಳೆ
ಗುದುರಿಸಿದನಜಿಯಟ್ಟಿ ಸದೆದನು ಸರಿಗ ರಕ್ಕಸರ ೫೯

ಹೇಳು, ನಾವು ಶ್ರೀರಾಮಚಂದ್ರನ ಬಳಿಗೆ ಹೋಗಬೇಕು" ಎಂದ ಅಂಗದ. ೫೬. ಅಂಗದನ ಮಾತನ್ನು ಕೇಳಿ ರಾವಣನ ಮುಖದಲ್ಲಿ ಕೋಪದ ಬೆಂಕಿಯೆದ್ದಿತು ; ಮೀಸೆಗಳು ಕುಣಿದವು ; ಕಣ್ಣುಗಳು ಕೋಪದಿಂದ ಉರಿದವು ; ದೇಹವು ನಡುಗಿತು. ಕತ್ತಿಯನ್ನು ತೂಗಿ "ಲೋ ನಿಮ್ಮ ರಾಜಾರಾಮ, ಸುಗ್ರೀವ ಮೊದಲಾದವರು ಮಕ್ಕಳಿಗೆ ನನ್ನ ಹೆಸರಿಟ್ಟರೂ ಜಾನಕಿಯನ್ನು ಬಿಡುವುದಿಲ್ಲ" ಎಂದನು. ೫೭. "ನಮ್ಮನ್ನು ಅಪಹಾಸ್ಯಮಾಡಿ ಮಿತಿಮೀರಿ ಧಿಕ್ಕರಿಸಿ ನುಡಿದರೆ ಬಾಯಮೇಲೆ ಹೊಡೆಸುತ್ತೇನೆ. ಹೋಗು, ಅತ್ತ ಹೋಗು. ಉತ್ತರದ ನಾಯಿಯಂತೆ ತೊಲಗು. ಕಿರುಚಿಕೊಳ್ಳದೆ ಏಳು" ಎನ್ನಲು ಅಂಗದನು ಉತ್ಸಾಹದಿಂದ ನಿಂತುಕೊಂಡನು; ಕೋಪದಿಂದ ಉರಿದು "ಕಾಳಗಕ್ಕೆ ನಡೆ" ಎನ್ನುತ್ತ ರಾವಣನನ್ನು ಹಿಡಿದುಕೊಂಡನು, ೫೮. ಅಂಗದನು ರಾವಣನ ತೋಳುಗಳನ್ನು ಹಿಡಿದೆಳೆಯಲು ರಾವಣನು ಕತ್ತಿಯಿಂದ ಅಂಗದನನ್ನು ಚಿಮ್ಮಿದನು. ರಾಕ್ಷಸನಾಯಕರು ರಕ್ಷಣೆಗಾಗಿ ಕತ್ತಿಯನ್ನು ಹಿರಿದು ಅಂಗದನ ಮೇಲೆ ಬಿದ್ದರು. ಆಕ್ರಮಣ ಮಾಡಿದ ಆನೆಗಳನ್ನು ಬಡಿದು ಹಿಗ್ಗುವ ಹೆಬ್ಬುಲಿಯಂತೆ ಮೇಲೆಬಿದ್ದ ರಾಕ್ಷಸಯೋಧರನ್ನು ಕೈಯಲ್ಲಿ ಹಿಡಿದ ಬೆಟ್ಟದ ತುದಿಯಿಂದ ಚೆಲ್ಲಾಪಿಲ್ಲಿಯಾಗುವಂತೆ ಬಡಿದನು. ೫೯. ಸಭೆಯು ಚದುರಿತು. ಯೋಧರು ಹೊಳೆಹೊಳೆಯುವ ತೇಜಃಪುಂಜವಾದ ಹಲವು ಶಸ್ತ್ರಗಳಿಂದ ಕಪಿವೀರನನ್ನು ಮುಚ್ಚಿದರು, ಅಂಗದನು ಒಳಹೊಕ್ಕವರನ್ನು ಬಡಿದನು,

ಕೂಡೆ ಕಳಕಳವಾಯ್ತು ಹಯಕುಲ । ಜೋಡಿಸಿದವಾನೆಗಳು ಹಣ್ಣಿದ
ವಾಡಲೇನದ ತೇರು ತೇರ್ಯೈಸಿದವು ನಿಮಿಷದಲಿ
ಕೂಡಿತಸುರಪದಾತಿ ಲಗ್ಗೆಯ । ಮಾಡಿ ಮುತ್ತಿದರಂಗದನ ಮು
ಮ್ಮೋಡ ಮುಱಿದುಪ್ಪರಿಸಿ ತರಣಿಯ ತುಡುಕುವಂದದಲಿ ೬೦

ತುಡುಕಿ ತೂಳುವ ಗಜಘಟಾಳಿಯ । ನಿಡಿಕಿದನು ನಭಕೌಕುವಿದಿರಿನ
ಕಡುಮನದ ಕುದುರೆಗಳ ಕೊಡಹಿದನಖಿಳ ದೆಸೆದೆಸೆಗೆ
ಅಡಸಿಬಹ ತೇರುಗಳನೊದೆದನು । ಮಡದಲಜಗಿಜಿಯಾಗಲಸುಗಳ
ಸಡಿಲಿಸಿದನಿಭ ಹಯ ರಥಾರೋಹಕ ಪದಾತಿಗಳ ೬೧

ಕೆರಳಿ ಹೊಱವಂಡಿಸಿದನಜ ಶಂ । ಕರರ ಸಂಗರವೆಮ್ಮದತಿನಿ
ಷ್ಠುರವು ನಿಂದಿರಬೇಡ ನೋವಿರಿ ನಡೆಯಿ ನೀವೆಂದ
ತೆರಳಿಚಿದ ನೀವಿನ್ನು ದಶಕಂ । ಧರನ ಬಳಿಗೈತಂದಿರಾದರೆ
ಕರುಳನುಚ್ಚುವೆನೆನುತೆ ತೆವರಿದನುಳಿದ ನಿರ್ಜರರ ೬೨

ಮುರಿದು ನೋಡಿದನೊತ್ತಬರಿಸುವ । ಬಿರುದಿನಗ್ಗದ ಭಟರ ಬೀದಿಯ
ಲರುಣಜಲ ಹೊನಲೇಳೆ ಹರಹಿನ ಹೆಣನ ಹೊರಳಿಯಲಿ
ಪುರದಹನಕಿಮ್ಮಡಿಯ ಕಡುಕಾ । ಹುರವ ಮೆಱೆದನು ಕದನದಲಿ ಕೈ
ನೆರವ ಬಯಸುವ ಭಟನ ಬಱಿಕೈದನು ಚತುರ್ಬಲವ ೬೩

ಉಳಿದವರನ್ನು ಚದುರಿಸಿದನು, ಒದ್ದು ಮಂಟಪವನ್ನು ಉರುಳಿಸಿದನು, ಸಮಾನ ಬಲಶಾಲಿ ರಾಕ್ಷಸರನ್ನು ಅಟ್ಟಿಸಿಕೊಂಡು ಹೋಗಿ ಹೊಡೆದನು. ೬೦. ಒಡನೆ ಗಲಾಟೆ ಯೆದ್ದಿತು. ಒಂದು ನಿಮಿಷದಲ್ಲಿ ಕುದುರೆಗಳು ಬಂದು ನಿಂತವು, ಆನೆಗಳು ಸಿದ್ಧವಾದವು, ರಥಗಳು ಗುಂಪಾದವು, ರಾಕ್ಷಸಕಾಲುಬಲವು ಬಂದಿತು. ಎಲ್ಲರೂ ಸೇರಿ ದಾಳಿಮಾಡಿ ಅಂಗದನನ್ನು ಮುತ್ತಿದರು. ಇದನ್ನು ನೋಡಿದಾಗ ಮುಂದುಗಡೆಯ ಮೋಡವು ತಿರುಗಿ ನೆಗೆದು ಸೂರ್ಯನನ್ನು ಹಿಡಿಯುವಂತೆ ತೋರಿತು. ೬೧. ತನ್ನನ್ನು ಹಿಡಿಯಲು ಮುನ್ನುಗ್ಗುವ ಆನೆಗಳ ಸಮೂಹವನ್ನು ಅಂಗದನು ಬಡಿದು ನೂಕಿದನು. ಎದುರುಗಡೆಯಿಂದ ಮೇಲೆ ಹಾರುವ ಸೊಕ್ಕಿದ ಕುದುರೆಗಳನ್ನು ದಿಕ್ಕುದಿಕ್ಕಿಗೆ ಕೊಡವಿಬಿಟ್ಟನು ನುಗ್ಗಿಬರುವ ತೇರುಗಳನ್ನು ಹಿಮ್ಮಡಿಯಿಂದ ಒದ್ದನು. ಆನೆ ಕುದುರೆ ರಥಗಳ ಸವಾರರ ಮತ್ತು ಕಾಲಾಳುಗಳ ಪ್ರಾಣಗಳನ್ನು ದೇಹಗಳಿಂದ ಒದ್ದೋಡಿಸಿದನು. ೬೨. ಕೋಪಗೊಂಡ ಅಂಗದನು, "ನಮ್ಮ ಯುದ್ಧವು ಬಹಳ ಕಠಿಣವಾದುದು, ಇಲ್ಲಿರಬೇಡಿ. ಇಲ್ಲಿದ್ದರೆ ನೋವನ್ನು ಅನುಭವಿಸಬೇಕಾಗುವುದು" ಎಂದು ಹೇಳಿ ಬ್ರಹ್ಮ ಮಹೇಶ್ವರರನ್ನು ಅಲ್ಲಿಂದ ಹೊರಡಿಸಿದನು. ಇಲ್ಲಿಂದ ಹೊರಟುಹೋದ ನೀವು ಪುನಃ ದಶಕಂಠನ ಬಳಿಗೆ ಬಂದದ್ದೇ ಆದರೆ ನಿಮ್ಮ ಕರುಳನ್ನು ಹೊರತೆಗೆಯುತ್ತೇನೆ ಎಂದು ಉಳಿದ ದೇವತೆಗಳನ್ನು ಹೆದರಿಸಿ ಓಡಿಸಿದನು. ೬೩. ಬೀದಿಯಲ್ಲಿ ಹೆಣಗಳ ರಾಶಿ ಹರಡಿ ರಕ್ತದ ಪ್ರವಾಹವು ಹರಿಯುತ್ತಿರಲು ವೇಗದಿಂದ ಬರುತ್ತಿರುವ ರಾಕ್ಷಸವೀರರನ್ನು ಅಂಗದನು ಮೈತಿರುಗಿಸಿ ನೋಡಿ

ಹೇಳಲೇನದ ವಾಲಿಜನ ಕ । ಟ್ಟಾಳುತನದಗ್ಗಳಿಕೆಯನು ಕಾ
ಲಾಳು ತುರಗಗಳಾಂತು ಕರಿಘಟೆಗಳಿಗೆ ಕೈಯಿಕ್ಕಿ
ಕಾಲುವಿಡಿವಿಡಿದಿಟ್ಟನಾ ದಿಗು । ಜಾಲ ತುಂಬಲು ರಾಕ್ಷಸೇಂದ್ರನ
ಮೇಳವದ ಚತುರಂಗಬಲ ನಿಮಿಷದಲಿ ಬಯಲಾಗೆ ೬೪

ಬೀಳುತಿರ್ದವು ವಾಲಿಜನ ಮೈ । ಹಾಳಿಯಲಿ ನಭದಿಂದ ರಾಮನ
ಪಾಳೆಯದಲಿಭ ಹಯ ವರೂಥ ಪದಾತಿ ಸರಗೊಳಿಸಿ
ಕಾಳುಮಾಡಿದೆವಕಟ ಸಂಧಿ ಏ । ತಾಳಿಸಿತು ಕೈಯೊಡೆಯ ಶಿಶು ರಣ
ಕೇಳಿಯಲಿ ನಿಲಲಱಿದೆನುತ ಬಾಯಾಱಿದನು ರಾಮ ೬೫

ಮಗನದೇನಾದನೊ ಮನಸ್ಸಿನ । ಬಗೆಯನಱಿಯದೆ ಬೀಳುಕೊಟ್ಟೆವು
ಹಗೆಯೆಡೆಗೆ ಹನುಮಂತ ಹೋಗುಳಿದಿರ್ದಡಂಗದನ
ತೆಗೆದು ತಾ ಹೋಗಯ್ಯ ನೀನೆನೆ । ನೆಗೆದು ಪವನ ಪಥಾಂತರದಲರಿ
ನಗರಕಭಿಮುಖನಾಗಿ ಕಂಡನಖಂಡಬಲ ಕಪಿಯ ೬೬

ಲೇಸು ಲೇಸೈ ಸುಭಟ ಸಮರವಿ । ಲಾಸ ಬಿಡು ಬದುಕಲಿ ಯಮಾಲಯ
ವಾಸಿಗಳ ಮಾಡದಿರು ಕೆಡುವುದು ರಾಘವೇಶ್ವರನ
ವಾಸಿ ಮುಂದಕೆಯೆನಲು ಕೊಲೆಗತಿ । ಹೇಸಿ ಹಿಮ್ಮೆಟ್ಟಿದನು ಲಂಕಾ
ಧೀಶನಿದಿರಲಿ ನಿಂದು ನೀರದರವದಲಿಂತೆಂದ ೬೭

ದನು. ಲಂಕಾದಹನಕ್ಕೆ ಎರಡರಷ್ಟು ಕ್ರೋಧವನ್ನು ಅಂಗದನು ತೋರಿಸಿ ಕಾಳಗದಲ್ಲಿ ಸಹಾಯ ಬಯಸುವ ವೀರನ ಚತುರಂಗಸೈನ್ಯವನ್ನು ಪೂರ್ಣ ನಾಶಮಾಡಿದನು. ೬೪. ವಾಲಿಯ ಮಗನ ಪರಾಕ್ರಮದ ಹಿರಿಮೆಯನ್ನು ಏನೆಂದು ಹೇಳಲಿ. ಕಾಲಾಳು ಕುದುರೆಗಳನ್ನು ಹಿಡಿದು, ಆನೆಗಳಿಗೆ ಕೈಹಾಕಿ ಕಾಲುಗಳನ್ನು ಹಿಡಿಹಿಡಿದು ಎಸೆಯಲು ದಿಕ್ಕುಗಳು ತುಂಬಿಹೋದವು, ರಾಕ್ಷಸೇಶ್ವರ ರಾವಣನ ಚತುರಂಗಸೈನ್ಯವು ಒಂದು ನಿಮಿಷದಲ್ಲಿ ನಾಶವಾಯಿತು. ೬೫. ವಾಲಿಯ ಮಗನ ರಣಸಂಹಾರದಿಂದಾಗಿ ಆನೆ, ಕುದುರೆ, ರಥ, ಕಾಲಾಳುಗಳು ಶಬ್ದಮಾಡುತ್ತ ಆಕಾಶದಿಂದ ರಾಮನ ಪಾಳಯದಲ್ಲಿ ಬಿದ್ದವು. "ಅಯ್ಯೋ ತಪ್ಪು ಮಾಡಿದೆವು, ಸಂಧಿ ತಪ್ಪಿಹೋಯಿತು. ನಮ್ಮ ಕೈಗೆ ಒಪ್ಪಿಸಿದ ಮಗು ಯುದ್ಧದಾಟದಲ್ಲಿ ನಿಲ್ಲಲಾರದು" ಎಂದು ರಾಮನು ಚಿಂತೆಯಿಂದ ಗಟ್ಟಿಯಾಗಿ ಕೂಗಿಕೊಂಡನು. ೬೬. "ಮಗನು ಏನಾದನೋ ? ಅವನ ಮನಸ್ಸಿನ ರೀತಿಯನ್ನು ತಿಳಿಯದೆ ಶತ್ರುವಿನ ಬಳಿಗೆ ಕಳುಹಿಸಿಕೊಟ್ಟೆವು. ಹನುಮಂತ, ಲಂಕೆಗೆ ಹೋಗಿ ಬದುಕಿದ್ದರೆ ಅಂಗದನನ್ನು ಕರೆದುಕೊಂಡು ಬಾ ಹೋಗಪ್ಪ" ಎಂದು ರಾಮನು ಹೇಳಿದನು. ಕೂಡಲೆ ಹನುಮಂತನು ನೆಗೆದು ಆಕಾಶದ ಮಾರ್ಗವಾಗಿ ಲಂಕಾನಗರದ ಕಡೆಗೆ ಬರುತ್ತ ಕುಂದದ ಬಲದ ಅಂಗದನನ್ನು ಕಂಡನು. ೬೭. "ವೀರನೇ, ನಿನ್ನ ಕಾಳಗದಾಟವು ಸೊಗಸಾಯಿತು. ಅವರನ್ನು ಬಿಟ್ಟುಬಿಡು, ಬದುಕಿಕೊಳ್ಳಲಿ. ಅವರನ್ನು ಯಮಲೋಕದಲ್ಲಿ ವಾಸಮಾಡಲು ಕಳುಹಿಸಬೇಡ. ರಾಘವೇಶ್ವರನ ಪ್ರತಿಜ್ಞೆಯು ಮುಂದಕ್ಕೆ

ಏನೆಲವೊ ದಶಕಂಠ ರಣದನು । ಮಾನ ಮನಸಿಗೆ ಬಾರದೇ ಹದ
ನೇನು ಹೇಳಾವ್ ಹೋಗಬೇಡವೆ ಹೊತ್ತುಹೋಗುತಿದೆ
ಏನು ನಿನ್ನಂಗವಣೆ ಹೇಳು ನಿ । ಧಾನವನು ಭಯವುಂಟೆ ನುಡಿ ನಮ
ಗೇನ ಹೇಳುವೆ ಹೇಳು ನಾವದ ಹೇಳಬೇಕೆಂದ ೬೮

ಮನಕೆ ಬಾರದೆ ನಿನಗೆ ಮಱೆಯೊಗು । ವನುನಯವು ರಘುಪತಿಯ ನೀನಿಂ
ದಿನಲಿ ಜೀವಶ್ರಾದ್ಧವನು ವಿಧಿವಿಹಿತ ಮಾರ್ಗದಲಿ
ಅನುಕರಿಸಿಕೊಂಡಿರು ನಿಜಾನುಜ । ತನುಜ ಮಿತ್ರಜ್ಞಾತಿಬಾಂಧವ
ಜನ ನಿನಗೆ ಬಳಿಕಿಲ್ಲ ಕೇಳೆನುತಡರಿದನು ನಭವ ೬೯

ಆವನೊಡನೆ ಮಾತೇಕೆ ಬಾಯೆಂ । ದವನಿಜಾವರನಂಘ್ರಿಸಲಿಲೋ
ದ್ಭವ ಪರಾಗಭ್ರಮರನಮರಕುಲೇಂದ್ರಸಂಭವನ
ಕುವರನನು ಕೈವಿಡಿದು ತೆಗೆದು । ತ್ಸವದಿ ಬಂದನು ಹಗೆಯ ಕೈದುವ
ನವನಿಪನ ಪದಕಿತ್ತು ನಮಿಸಿದನಿಂದ್ರಸುತಸೂನು ೭೦

ಕಂದ ಬಂದ್ಯೆ ಸುಬಲಲತಿಕಾ । ನಂದ ಬಂದ್ಯೆ ವೀರರಸದು
ಕ್ಕಂದ ಬಂದ್ಯೆ ನಮ್ಮ ಪುಣ್ಯದಲೆಂದು ಕರುಣದಲಿ
ಕೊಂದ ರಕ್ಕಸಭಟರ ರಕುತದ । ಬಿಂದುಗಳ ಮೈದೆಗಿಪನತುಳಾ
ನಂದ ನಯನೋದಕ ಝುಡಿಯ ತಡವರಿಸಿದನು ರಾಮ ೭೧

ಕೆಟ್ಟುಹೋಗುವುದು" ಎಂದು ಹನುಮಂತನು ಹೇಳಲು ಅಂಗದನು ಕೊಲೆ ಮಾಡಲು ಹೇಸಿ ಹಿಂದಕ್ಕೆ ಒಂದು ಲಂಕೇಶ್ವರನ ಎದುರಿನಲ್ಲಿ ನಿಂತುಕೊಂಡು ಗುಡುಗಿನ ಶಬ್ದದಿಂದ ಮುಂದಿನಂತೆ ಹೇಳಿದನು. ೬೮. "ಏನೋ, ಲೋ ದಶಕಂಠ, ಯುದ್ಧದ ಕಲ್ಪನೆ ಮನಸ್ಸಿಗೆ ಬರಲಿಲ್ಲವೇ ? ಏನು ವಿಷಯ ಹೇಳು. ನಾವು ರಾಮನ ಬಳಿಗೆ ಹೋಗಬೇಡವೆ, ಹೊತ್ತಾಗುತ್ತಿದೆ. ನಿನ್ನ ಬಯಕೆಯೇನು ? ನಿನ್ನ ಉದ್ದೇಶವೇನು ಹೇಳು. ಭಯಬೇಡ, ನಮಗೇನನ್ನು ಹೇಳುತ್ತೀಯೋ ಅದನ್ನು ನುಡಿ. ನಾವು ಅದನ್ನು ರಾಮನಿಗೆ ತಿಳಿಸಬೇಕು" ಎಂದ. ೬೯. "ರಘುಪತಿಗೆ ಶರಣುಹೋಗುವ ಕ್ರಮವು ನಿನ್ನ ಮನಸ್ಸಿಗೆ ಬರದೆ ಇದ್ದ ಪಕ್ಷದಲ್ಲಿ ಕ್ರಮಪ್ರಕಾರವಾಗಿ ಜೀವಸಹಿತವಿರುವಾಗಲೇ ನಿನ್ನ ತಿಥಿಯನ್ನು ಮಾಡಿಕೊಂಡುಬಿಡು. ಏತಕ್ಕೆಂದರೆ ತಮ್ಮಂದಿರು, ಮಕ್ಕಳು, ಸ್ನೇಹಿತರು, ದಾಯಾದಿಗಳು, ನಂಟರು ಯಾರೂ ನಿನಗೆ ಉಳಿದಿರುವುದಿಲ್ಲ" ಎಂದು ಹೇಳಿ ಅಂಗದನು ಆಕಾಶಕ್ಕೆ ನೆಗೆದನು. ೭೦. ಶ್ರೀರಾಮನ ಪಾದಕಮಲಗಳ ಪರಾಗಕ್ಕೆಳಸುವ ತುಂಬಿಯಾದ ಹನುಮಂತನು "ಅವನೊಡನೆ ಮಾತೇಕೆ, ಬಾ" ಎಂದು ಅಂಗದನನ್ನು ಕೈಹಿಡಿದುಕೊಂಡು ಆನಂದದಿಂದ ಕರೆದುಕೊಂಡುಬಂದನು. ಶತ್ರುವಿನ ಆಯುಧವನ್ನು ಶ್ರೀರಾಮನಿಗೆ ಸಲ್ಲಿಸಿ ವಾಲಿಯ ಮಗ ಅಂಗದನು ನಮಸ್ಕರಿಸಿದನು. ೭೧. "ಕಂದ ಬಂದೆಯಾ, ಬಲಶಾಲಿಗಳೆಂಬ ಬಳ್ಳಿಗಳಿಗೆ ಆನಂದದಾಯಕನೆ ಬಂದೆಯಾ, ವೀರರಸವನ್ನುಕ್ಕಿಸುವವನೇ ನಮ್ಮ ಪುಣ್ಯದಿಂದ ಬಂದೆಯಾ ?" ಎಂದು ಕರುಣೆಯಿಂದ

ಹೊಗೆದುದಧಿಕಕ್ರೋಧಶಿಖಿ ಬಳಿ । ಕಗಿವ ರೌದ್ರಾವೇಶದಲಿ ಭುಗಃ
ಭುಗಿಸಿ ಬಲಿಮುಖಚಕ್ರಿ ಕೈವೀಸಿದನು ಕಾಳಗಕೆ
ನಗಮಹೀರುಹ ಹಸ್ತರುಬ್ಬಿಜು । ದಗಲದಲಿ ಖೋಯೆಂದು ತೊರವೆಯ
ನಗರದಧಿಪತಿ ಹಾರವಿಸೆ ಹತ್ತಿದರು ಲಗ್ಗೆಯಲಿ ೭೨

ಅಂಗದನನ್ನು ಮಾತನಾಡಿಸಿದನು. ಕೊಂದ ರಾಕ್ಷಸವೀರರ ರಕ್ತದ ಬಿಂದುಗಳು ಸಿಡಿದ ಅಂಗದನ ಮೈಯನ್ನು ರಾಮನು ಸಂತೋಷದ ಕಣ್ಣೀರು ಸುರಿಸುತ್ತ ಸವರಿದನು.

೭೨. ಕೋಪದ ಬೆಂಕಿ ಹತ್ತಿಕೊಂಡಿತು ; ಮಹಾಭಯಂಕರ ಕೋಪಾಗ್ನಿಯು ಧಗಧಗಿಸಲು ವಾನರಸೇನಾಪತಿಯು ಯುದ್ಧಕ್ಕೆ ಕೈಬೀಸಿದನು. ಬೆಟ್ಟ ಮರಗಳನ್ನು ಕೈಯಲ್ಲಿ ಹಿಡಿದ ವಾನರವೀರರು ಉಬ್ಬಿ ಖೋಯೆಂದು ಕೂಗುತ್ತ ತೊರವೆಯ ನಗರದ ಅಧಿಪತಿ ನರಹರಿಯ ಅವತಾರಿಯಾದ ಶ್ರೀರಾಮನು ಹಾರೈಸಲು ಲಗ್ಗೆ ಹತ್ತಿದರು.

# ಹನ್ನೊಂದನೆಯ ಸಂಧಿ

ಸೂಚನೆ॥ ಅಗ್ಗಳಿಯ ಕಪಿಸೇನೆ ಸಮರದ । ಲಗ್ಗೆಯಲಿ ಲಂಕಾಪುರದ ಬಲು
ದುರ್ಗವನು ಕೆಡೆನೂಕಿ ಕೆಣಕಿದರಸುರವಲ್ಲಭನ

ಹತ್ತಿದುದು ಬಳಿಕಂಬುನಿಧಿ ತಲೆ । ಯೊತ್ತಿ ಲಯದಲಜಾಂಡಭಾಂಡದ
ನೆತ್ತಿಗಡರ್ವಂದದಲಿ ರಿಪುದುರ್ಗವನು ಕಪಿಸೇನೆ
ಅತ್ತಲಾದುದು ಬೊಬ್ಬೆ ಕೋಟೆಯ । ಕೊತ್ತಳದ ಕೋಹಿನಲಿ ಕುಂಭಿನಿ
ಕಿತ್ತು ಹಾರಲು ಹೊಡೆವ ಹರೆ ಹದಿನೇಟುಕೋಟಿಯಲಿ ೧

ಎಲೆಲೆ ಕವಿದರೊ ಕಪಿಕದಂಬಕ । ಕಲಹ ಮುಂಚಲಿ ನಮ್ಮದೆನುತ
ಟ್ಟಳೆಯಲಿಟ್ಟಳಿಸಿದರು ಘನಶಾಲಾಸುವೀದಿಯಲಿ
ನಿಲುಕಿದರು ಗೋಪುರದ ವಂಕದ । ಹುಲಿಮುಖದ ಮುಖಶಾಲೆಗಳ ಕೊ
ತ್ತಳಗಳೆಡೆಯಲಿ ಹೊಳಕಿ ಹೊಯ್ದರು ಹರಿವರೂಥಿನಿಯ ೨

ಆಡಿದವು ಮಕರಬ್ಬಿ ಡೆಂಕಣಿ । ಹೂಡಿದುಕ್ಕಿನ ಗುಂಡುಗಳನೀ
ಡಾಡಿದವು ನೆಱಕಡೆದ ಕಲ್ಗಳನುರು ಶತಗ್ನಿಗಳ
ತೋಡುಗವಣೆಯ ತೂಱುಗಲ್ಲಿನ । ಝಾಡಿ ಝಮ್ಮಿಡಿಸಿದವು ಗಗನವ
ನಾದಲೇನದನಮಮ ದುರ್ಗದ ಸಮರಸಂಭ್ರಮವ ೩

ಸೂಚನೆ॥ ಶ್ರೇಷ್ಠ ಕಪಿಸೈನ್ಯವು ಯುದ್ಧದಲ್ಲಿ ಮುತ್ತಿಗೆ ಹಾಕಿ ಲಂಕಾನಗರದ ಬಲವಾದ ಕೋಟೆಯನ್ನು ಬೀಳಿಸಿ ರಾವಣನನ್ನು ಕೆಣಕಿತು. ೧. ಪ್ರಳಯಕಾಲದಲ್ಲಿ ಸಮುದ್ರವು ಬ್ರಹ್ಮಾಂಡದ ಗುಡಾಣದ ತುದಿಗೇರುವಂತೆ ಕಪಿಸೈನ್ಯವು ಶತ್ರುಕೋಟೆಯನ್ನು ಹತ್ತಿತು. ಹದಿನೆಂಟುಕೋಟಿ ಸಂಖ್ಯೆಯಲ್ಲಿ ತಮಟೆಗಳು ಭೂಮಿಯು ಕಿತ್ತು ಹಾರಿಹೋಗುವಂತೆ ಬಾರಿಸುತ್ತಿರಲು ಅತ್ತ ಕೋಟೆ ಕೊತ್ತಳದ ಮೂಲೆ ಮೂಲೆಗಳಲ್ಲಿ ಗಲಾಟೆಯಾಯಿತು. ೨. 'ಎಲೆಲೆ ಕಪಿಗಳು ಮುತ್ತಿದರೋ, ನಮ್ಮ ಕಡೆ ಹೋರಾಟ ಮುಂದಾಗಲಿ' ಎನ್ನುತ್ತ ರಾಕ್ಷಸರು ಕೋಟೆಯ ಅಟ್ಟಣೆಯ ಮೇಲೂ ಕೋಟೆಯ ಮೇಲಿನ ಮನೆಗಳ ಬೀದಿಗಳಲ್ಲೂ ಗುಂಪುಕೂಡಿದರು. ಕೋಟೆಯ ಮೇಲಿನ ಗೋಪುರ, ಮೂಲೆ, ಹುಲಿಮುಖದ ಹೆಬ್ಬಾಗಿಲು, ಮೊಗಶಾಲೆ, ಕೊತ್ತಳಗಳಲ್ಲಿ ರಾಕ್ಷಸರು ಕಾಣಿಸಿಕೊಂಡು ಕಪಿಸೈನ್ಯವನ್ನು ಹೊಡೆದರು. ೩. ಮಕರಡಿಬ್ಬಿಗಳು ಚಲಿಸಿದವು. ಕೋಟೆಯ ಕಾಳಗದ ಡೆಂಕಣಿಯಂತ್ರಗಳು ಹೂಡಿದ ಉಕ್ಕಿನ ಗುಂಡುಗಳನ್ನು ಎಸೆದವು, ಕಡೆದು ಮೊನಚಾದ ಕಲ್ಲುಗಳನ್ನೂ ಫಿರಂಗಿಗಳನ್ನೂ ಹಾರಿಸಿದವು. ತೋಡುಗವಣೆಯ ಮೂಲಕ ಕಲ್ಲುಗಳ ರಾಶಿಯು ಹಾರಿ ಆಕಾಶವನ್ನು ನಡುಗಿಸಿತು.

ಹೂಳಿದರು ಬಳಿಕಗಳನಿವರು ಸಿ । ಲಾಳಿಯಲಿ ಕುಶ ಕೇಳು ಶರಧಿಯ
ಹೂಳಿದರಿಗೇನರಿದು ಲವ ಕೇಳೊಂದು ನಿಮಿಷದಲಿ
ಧೂಳಿಗೋಟೆಯ ಕೊಂಡರಾ ತರು । ಶೈಲದೊಟ್ಟಿಲುಗಳಲಿ ಹತ್ತಿತು
ಮೇಲುದುರ್ಗದ ಲಗ್ಗೆಗಸುರಕದಂಬ ಕಳವಳಿಸೆ ೪

ವೀರ ಕೇಳೈ ಕಪೀಂದಂಬಕ । ವಾಜಿಲೊಮ್ಮೊಳ ಹೆಚ್ಚುತಿರ್ದುದು
ಭೂರಿಭುವನದ ಭಾರಿಯುಂಕದ ದುರ್ಗವಂಬರಕೆ
ಭೈರವಾಯತಭಟರ ಕೈಗಳ । ತೋರಗಿರಿಯುಪ್ಪರಕೆ ದಿಗಧಿಪ
ರೂರು ಗೂಳೆಯತೆಗೆದವೇನೆಂಬೆನು ಮಹಾದ್ಭುತವ ೫

ಕೋಡುಗಲ್ಗಳ ಲಗ್ಗೆಗುಮ್ಮನ । ತೋಡುಗಿರಿಗಳ ಮೇಳೆಯುದ ಮೈ
ಗೂಡಿಕೆಯ ಹಾಸರೆಯ ನಿಡುಬದ್ಧರದ ಬಾಲಗಳ
ಝಾಡಣೆಯ ನಿಡುಡೆಂಕಣೆಯ ಕ । ಟ್ಟಾಡಿಕೆಯ ಕಪಿಸೇನೆ ಸರಿಸದ
ಲೀಡಿಜೀದು ಹತ್ತಿದುದು ಕೊತ್ತಳದಾಳುವೇರಿಯಲಿ ೬

ಇಟ್ಟರಾಡುವ ಡೆಂಕಣೆಯ ತಲೆ । ಮುಟ್ಟುಗೈಗಳ ಕಳಚಿ ಜರುಹಿದ
ರಟ್ಟಳೆಯನೊಡಬಡಿದರುಪ್ಪರಿಗೆಗಳ ಸಾಲುಗಳ
ಹೆಟ್ಟಿ ಬಡಿದರು ಹೊನ್ನರನ್ನದ । ಘಟ್ಟದನೆಗಳಲಿವರು ಚಕ್ರದ
ಲಿಟ್ಟು ಸಬಳದಲಿಜೀದು ತಜುಬಿದರವರು ಕಪಿಬಲವ ೭

ಅಬ್ಬಬ್ಬ ! ಕೋಟೆಯ ಯುದ್ಧದ ಸಂಭ್ರಮವನ್ನು ಏನೆಂದು ವರ್ಣಿಸಲಿ ೪. ಕಪಿಗಳು ಕಲ್ಲುಗಳಿಂದ ಅಗಳನ್ನು ಮುಚ್ಚಿದರು. ಕೇಳು ಕುಶ, ಸಮುದ್ರವನ್ನೇ ಕಲ್ಲುಗಳಿಂದ ಮುಚ್ಚಿದವರಿಗೆ ಏನಸಾಧ್ಯ. ಲವ ಕೇಳು, ಒಂದು ನಿಮಿಷದಲ್ಲಿ ಮಣ್ಣಿನ ಕೋಟೆಯನ್ನು ಹಿಡಿದುಕೊಂಡರು. ಮರ ಮತ್ತು ಬೆಟ್ಟಗಳನ್ನು ರಾಶಿ ಹಾಕಿ ಅದರ ಮೇಲಿನಿಂದ ಹತ್ತಿ ಮೇಲಿನಿಂದ ಹತ್ತಿ ಮೇಲಿನ ಕೋಟೆಗೆ ಮುತ್ತಿಗೆ ಹಾಕಿದರು. ಆಗ ರಾಕ್ಷಸರು ಕಳವಳಕ್ಕೊಳಗಾದರು. ೫. ವೀರಲವ ಕೇಳು, ಕಪಿಸೈನ್ಯವು ನೆಗೆಯಲು ವಿಶಾಲ ಜಗತ್ತಿನ ಭಾರಿ ಯುದ್ಧದ ಕೋಟೆಯು ಆಕಾಶಕ್ಕೆ ಒಂದೊಂದು ಮೊಳ ಹೆಚ್ಚುತ್ತಿತ್ತು. ಭೈರವನಂಥ ಪರಾಕ್ರಮಿ ಕಪಿಸೈನಿಕರ ಕೈಗಳು ಎಸೆದ ಭಾರಿ ಬೆಟ್ಟಗಳ ಭಯಕ್ಕೆ ದಿಕ್ಕುಗಳೊಡೆಯರ ನಗರಗಳು ವಲಸೆಹೋದವು, ಈ ಮಹಾ ಅದ್ಭುತವನ್ನು ಏನೆಂದು ಹೇಳಲಿ ೬. ರಾಕ್ಷಸರ ಸೈನ್ಯದಲ್ಲಿ ಕೋಡುಗಲ್ಲುಗಳು, ಲಗ್ಗೆಗುಮ್ಮ ಮತ್ತು ತೋಡುಬೆಟ್ಟಗಳನ್ನು ಹೊತ್ತು ಚಪ್ಪಡಿಕಲ್ಲುಗಳನ್ನು ಎಳೆದುಕೊಂಡು ಉದ್ದ ಆನೆಗಳು ಬಾಲಗಳನ್ನು ಅಲ್ಲಾಡಿಸುತ್ತಿರಲು, ಡೆಂಕಣಗಳು ಚಲಿಸುತ್ತಿರಲು ಮುಂದುಗಡೆಯಿಂದ ಅವುಗಳನ್ನು ತಿವಿಯುತ್ತ ಕಪಿಸೈನಿಕರು ಕೊತ್ತಳದ ಎತ್ತರವಾದ ಗೋಡೆಯನ್ನು ಹತ್ತಿದರು. ೭. ಕಪಿವೀರರು ಹಿಂದೆ ಮುಂದೆ ಆಡುವ ಡೆಂಕಣಿಯಂತ್ರಗಳನ್ನು ಎಸೆದರು, ತಲೆಮುಟ್ಟುಗೈಗಳನ್ನು ಕಳಚಿ ಹಾಕಿದರು, ಅಟ್ಟಣೆಯನ್ನು ಬೀಳಿಸಿದರು, ಉಪ್ಪರಿಗೆಯ ಸಾಲುಗಳನ್ನು ಮುರಿದುಹಾಕಿದರು,

ನೆಗೆನೆಗೆದು ಬೀಳ್ವಸಮವಾನರ । ವಿಗಡವೀರರ ತಲೆಗಳಭ್ರಕೆ
ಚಿಗಿಯಲೆಚ್ಚರು ಕೊಚ್ಚಿದರು ಕೋಟೆಯಸದರ್ದವರ
ಚಿಗಿದು ಚಿಮ್ಮುವ ಕಪಿಭಟರನಿ । ಟ್ಟಿಗಳಲಿಟ್ಟರು ಚಾರಿವರಿವ
ಣ್ಣಿಗಳ ಬಲೆಗಳ ಬೀಸಿ ಸದೆದರು ದಾಣೆ ದಡಿಗಳಲಿ ೮

ಹೊಡಕರಿಸಿ ಮಗುಳೊತ್ತಬರಿಸುವ । ಕಡುಹುಕಾಱರ ಮೇಲೆ ಸಾಸುವೆ
ಗೊಡನ ಕಾದುರಿಯೆಣ್ಣೆ ಮಳಲರಗುಗಳ ಮೇಣಗಳ
ಕೆಡಹಿದರು ಕೈಗೊಳ್ಳಿಯಲಿ ಕಾ । ರಿಡಲು ಸುಟ್ಟರು ಮೋಱೆಗಳನಿಳೆ
ರ್ಝುಡಿದುದೈ ಜರಿಗೆಡೆದ ಜೀವದ ಕಪಿವೆಣಂಗಳಲಿ ೯

ಪರಿಘದಲಿ ಮುಸಲದಲಿ ಗದೆಯಲಿ । ಸುರಗಿಯಲಿ ಸಬಳದಲಿ ಶಕ್ತಿಯ
ಲುರು ಕೃಪಾಣದಲೀಟಿಯಲಿ ಬಿಟ್ಟೇಱಿನಲಿ ಹೊಗುವ
ಹರಿಕದಂಬವ ಹೊಡೆವುತಿಱಿವುತ । ಜರಿಯುಗೆಡಹಿದರಗಳು ಹೆಣನು
ಬ್ಬರದಲರುಣಾಂಬುವಿನಲುಪ್ಪರಿಸಲು ನಭಸ್ಥಳಕೆ ೧೦

ಏಱುವುದು ನಿಮ್ಮವರ ಬಲವದ । ಜಾಱಿಗೆಡಹುವರವರು ಕೈಯೊಡ
ನೇಱುವರು ಕಳಲಿಸುವರಿವರವರೊಡನೆ ಹುರಿಗಟ್ಟಿ
ಏಱುವರು ಬಳಿಕಿವರವರ ಕೊಲೆ । ಗೇಱಿತಭ್ರವನುಭಯಬಲದಸು
ಜಾಱಿಕೆಯ ಬಿರುಗಾಳಿ ಬಿಡದರೆಜಾವ ಪರಿಯಂತ ೧೧

ಚಿನ್ನದ ರತ್ನದ ಕೋಟೆತೆನೆಗಳನ್ನು ಮುರಿದುಕೊಂಡು ಚುಚ್ಚಿ ರಾಕ್ಷಸರನ್ನು ಬಡಿದರು. ರಾಕ್ಷಸರು ಚಕ್ರಾಯುಧದಿಂದ ಹೊಡೆದು, ಈಟಿಯಿಂದ ಇರಿದು ಕಪಿಸೈನಿಕರನ್ನು ಅಡ್ಡ ಹಾಕಿದರು. ೮. ನೆಗೆನೆಗೆದು ಬೀಳುವ ಅಸಮಾನ ವಾನರವೀರರ ತಲೆಗಳು ಆಕಾಶಕ್ಕೆ ಚಿಮ್ಮುವಂತೆ ರಾಕ್ಷಸರು ಬಾಣಗಳನ್ನು ಬಿಟ್ಟರು; ಕೋಟೆಯನ್ನೇರಿದವರನ್ನು ಕೊಚ್ಚಿ ಹಾಕಿದರು; ನೆಗೆದು ಹಾರುವ ಕಪಿಯೋಧರನ್ನು ಈಟಿಗಳಿಂದ ಚುಚ್ಚಿದರು; ಯುಕ್ತಿಯಿಂದ ಮುಂದೆ ನುಗ್ಗಿದವರನ್ನು ಬಲೆಗಳನ್ನು ಬೀಸಿ ದಪ್ಪದೊಣ್ಣೆಗಳಿಂದ ಬಡಿದರು. ೯. ಪುನಃ ಕಾಣಿಸಿಕೊಂಡು ಆಕ್ರಮಿಸುವ ವಾನರವೀರರ ಮೇಲೆ ಸಾಸುವೆಯ ಕೊಡ, ಕಾಯಿಸಿದ ಸುಡುವ ಎಣ್ಣೆ ಮರಳು ಅರಗು ಮೇಣಗಳನ್ನು ಸುರಿದರು. ಸುಟ್ಟನಾತ ಬಡಿಯಲು ಕಪಿಸೈನಿಕರ ಮುಖಗಳನ್ನು ಕೈಗೊಳ್ಳಿಯಿಂದ ಸುಟ್ಟರು. ಪ್ರಾಣ ಹೋದ ಕಪಿಗಳ ಹೆಣಗಳಿಂದ ನೆಲ ತುಂಬಿಹೋಯಿತು. ೧೦. ಪರಿಘಾಯುಧ, ಒನಕೆ, ಗದೆ. ಕಠಾರಿ, ಕತ್ತಿ, ಶಕ್ತ್ಯಾಯುಧ, ಖಡ್ಗ, ಈಟಿ, ಬಿಟ್ಟೇಱು–ಈ ಆಯುಧಗಳಿಂದ ಕೋಟೆಯೇರಿ ಬರುವ ಕಪಿಗಳ ಸಮೂಹವನ್ನು ಹೊಡೆಯುತ್ತ, ಇರಿಯುತ್ತ ಕೆಳಕ್ಕೆ ಬೀಳಿಸಿದರು. ಕೋಟೆಯ ಅಗಳು ಹೆಣದ ರಾಶಿಯಿಂದ ತುಂಬಿ ರಕ್ತವು ಆಕಾಶಕ್ಕೆ ಚಿಮ್ಮಿತು. ೧೧. ನಿಮ್ಮವರ ಸೈನ್ಯವು ಕೋಟೆಯ ಮೇಲಕ್ಕೆ ಹತ್ತುವುದು, ರಾಕ್ಷಸರ ಸೈನ್ಯವು ಅವರನ್ನು ಜಾರಿಸಿ ಬೀಳಿಸುವುದು. ಅದೇ ಕೈಯಲ್ಲಿ ಕಪಿಯೋಧರು ಏರುವರು, ತಕ್ಷಣ ರಾಕ್ಷಸರು ಇವರನ್ನು ಅಲ್ಲಾಡಿಸಿ ಬೀಳಿಸುವರು. ಪುನಃ ಹುರುಪಿನಿಂದ ಕಪಿವೀರರು

ನೆನೆದುದಸುರರ ವಾನರರ ವಾ ! ಹಿನಿಯ ರಣದರುಣಾಂಬುಪೂರದ
ಹೊನಲಿನಲಿ ಗಿರಿ ಮೂಱುಯೋಜನ ನೂಱುರುದ್ದದಲಿ
ಅನುವರಪ್ರಾರಂಭಕದ ರಣ । ವನಿತೆಗುಣಬಡಿಸಿರ್ದ ರುಧಿರೋ
ದನವ ಬಡಿಸಿದ ಬುತ್ತಿಯಂತಿರೆ ಮೆಱೆದುದಾ ದುರ್ಗ ೧೨

ಬಿಸಿಲಡೆಗಹಿನಲಿವರ ಬಲ ಮು । ಟ್ಟಿಸಿತು ಪಡುವಣ ಲಗ್ಗೆಯಲಿ ಬಳಿ
ಕಸುರಬಲ ಬವರದಲಿ ಬಳಲಿತು ಭಾರಿಯಂಕದಲಿ
ವಿಷಮದುರ್ಗವ ಕೊಂಡರಿವರು । ಬ್ಬಸವು ಬಳಿಕಾಯ್ತವರಿಗಮರ
ದ್ವಿಷರಿಗುಂಟೇ ಜಯವು ಜಾನಕಿಯಣುಗ ಕೇಳೆಂದ ೧೩

ಜರುಹಿದರು ಬಳಿಕದರಿ ಚಾಮೀ । ಕರದ ಚಟುಳಪ್ರಭೆಯ ಕೋಟೆಯ
ನುರುಳಿಸಿದರಟ್ಟಳೆಯ ಮುಖಶಾಲೆಗಳ ಸಾಲುಗಳ
ಉರು ಶತಘ್ನಿಯ ರಾಯ ಚಿಮ್ಮುವ । ಭರದ ಭೈರವ ಬದ್ದರದ ನಡೆ
ಸರದ ಡಬ್ಬುಕ ಡೆಂಕಣಿಗಳನು ತೂಱಿದರು ನಭಕೆ ೧೪

ಬಿಱುದನಿಯ ಬೊಬ್ಬೆಗಳ ಲಗ್ಗೆಯ । ಹಱೆಯನೊಡೆಬಡಿದೇಱುವಾನೆಯ
ಗುರುಬು ಗುಮ್ಮಿ ಘಡಾವಣೆಯ ತೇರುಗಳ ತಿಂಥಿಣಿಯ
ಹಱಿದು ತೇಜಿಯ ಭಟ್ಟನಂಬರ । ಕುಱುಬಿ ರಕ್ಕಸಭಟರ ಬೀದಿಯ
ತೆಱಹ ತಪ್ಪಿಸಿ ಚಾರಿವಱಿದೊಳಹೊಕ್ಕುದಗಲದಲಿ ೧೫

ರಾಕ್ಷಸರ ಕೊಲೆಗೆ ಮೇಲಕ್ಕೆ ಹತ್ತುವರು. ಎರಡೂ ಕಡೆಯ ಸೈನ್ಯದ ಪ್ರಾಣ ತೆಗೆಯುವ ಬಿರುಗಾಳಿ ಅರ್ಧಜಾವದವರೆಗೂ ಆಕಾಶದಲ್ಲಿ ಬೀಸಿತು. ೧೨. ರಾಕ್ಷಸರ ಮತ್ತು ವಾನರರ ಸೈನ್ಯದ ರಕ್ತದ ಪ್ರವಾಹದಿಂದ ಮೂರು ಯೋಜನ ಅಗಲ ನೂರು ಯೋಜನ ಉದ್ದದ ಬೆಟ್ಟವು ನೆನೆಯಿತು. ಯುದ್ಧದ ಪ್ರಾರಂಭದಲ್ಲಿ ಯುದ್ಧಸ್ತ್ರೀಗೆ ಊಟ ಬಡಿಸಿದ ರಕ್ತದ ಅನ್ನದ ಬುತ್ತಿಯ ಹಾಗೆ ಆ ದುರ್ಗವು ಮೆರೆಯಿತು. ೧೩. ಬಿಸಿಲು ಇಳಿಮುಖ ವಾದಾಗ ಕಪಿಸೈನ್ಯವು ಪಶ್ಚಿಮದಿಕ್ಕಿನ ದಾಳಿಯಲ್ಲಿ ದುರ್ಗವನ್ನು ಏರಿತು. ಅನಂತರ ರಾಕ್ಷಸಸೈನ್ಯವು ಯುದ್ಧದಲ್ಲಿ ಬಳಲಿತು. ಭಾರಿ ಹೋರಾಟದಲ್ಲಿ ಅಸಾಧ್ಯ ದುರ್ಗವನ್ನು ಇವರು ಹಿಡಿದುಕೊಂಡರು. ರಾಕ್ಷಸರಿಗೆ ಬಹಳ ಆಯಾಸವಾಯಿತು. ಜಾನಕೀಸುತನೇ ಕೇಳು, ದೇವತೆಗಳ ಹಗೆಗಳಾದ ರಾಕ್ಷಸರಿಗೆ ಗೆಲುವುಂಟೇ ಎಂದು ವಾಲ್ಮೀಕಿಮಹರ್ಷಿ ಗಳು ಹೇಳಿದರು. ೧೪. ಅನಂತರ ಕಪಿಸೈನಿಕರು ಕೋಟೆಯನ್ನು ಹತ್ತಿ ಚಿನ್ನದ ಸುಂದರ ಕಾಂತಿಯ ಉಗ್ರಾಣವನ್ನು ಬೀಳಿಸಿದರು; ಅಟ್ಟಣೆ ಮತ್ತು ಮೊಗಸಾಲೆಯ ಸಾಲು ಗಳನ್ನು ಉರುಳಿಸಿದರು, ರಭಸದಿಂದ ಗುಂಡುಗಳನ್ನು ಹಾರಿಸುವ ಫಿರಂಗಿಗಳನ್ನೂ, ಭಯಂಕರ ಆನೆಗಳನ್ನೂ, ನಡೆಸರ, ಡಬ್ಬುಕ, ಡೆಂಕಣಿಗಳನ್ನೂ ಕಪಿವೀರರು ಆಕಾಶಕ್ಕೆ ತೂರಿದರು. ೧೫. ಭೋರ್ಗರೆಯುತ್ತ ಗಲಾಟೆಮಾಡುತ್ತಿದ್ದ ಮುತ್ತಿಗೆಯ ತಮಟೆ ಯನ್ನು ಒಡೆದುಹಾಕಿ ಕಪಿಸೈನಿಕರು ಕೋಟೆಯನ್ನೇರಿದರು. ಆನೆಯ ಮುತ್ತಿಗೆ ಯನ್ನು ಒತ್ತರಿಸಿ, ಘಡಘುಡಿಸುವ ತೇರುಗಳ ಸಾಲನ್ನು ಮುರಿದು, ಕುದುರೆಗಳ ಸಮೂಹ

ಅರಮನೆಯ ರಣಮಂಡಲದ ಮದ । ಕರಿ ರಥಾಶ್ವಾರೋಹಕರ ಪದ
ಚರರ ಗಿರಿಕೂಟಂಗಳಲಿ ದಾಟಿಸಿದರಸುರುಗಳ
ನೆರವಿಗರ ಹೊಯ್‌ಹೊಯ್‌ಯೆನುತ ಚ । ಪ್ಪರಿಸಿ ಬಿಡದೊಳಬಿದ್ದು ಹಿಡಿಹಿಡಿ
ಪರಸತಿದ್ರೋಹಕನನೆನುತೊಳಹೊಕ್ಕರರಮನೆಯ ೧೬

ಉಸುರಲೇನದನತುಳಬಲ ಕೈ । ಕಸೆಯ ಮಗ ಕೆರಳಿದರೆ ಕಲ್ಪದ
ಪಶುಪತಿಯ ಪಾಡೇನು ಕೊಂಡನು ಹಲಗೆ ಖಂಡೆಯವ
ಮಸಗಿದಂದಿನ ವೀರಭದ್ರನ । ವಿಷಮರಣರಸಕೆಂಟುಮಡಿಯೆನೆ
ಕುಸುರಿದಱಿದೊಟ್ಟಿದನು ಕನಲಿದು ಕವಿವ ಕಪಿಬಲವ ೧೭

ಎರಡು ಮೈಯಲಿ ರುಂಡಮುಂಡದ । ಹರಿಕದಂಬವನೊಟ್ಟಿದನು ಮ
ತ್ತುರವಣಿಸುವತಿಬಲರ ಮೆಟ್ಟಿದನುಗಿದು ಸುರಗಿಯಲಿ
ಸರಿದುಹೋದ ಜಯಾಂಗನೆಯ ಖಳ । ತಿರುಗಿಸಿದನಾಕ್ಷಣದೊಳಸುರರು
ನೆರೆದುದಾತನ ಬಳಿಯ ಬಲುಹಾಯ್ತುಸಮ ಸಮರಂಗ ೧೮

ವನ್ನು ಆಕಾಶಕ್ಕೆ ಹಾರಿಸಿ, ರಾಕ್ಷಸಯೋಧರನ್ನು ಬೀದಿಯಿಂದ ಓಡಿಸಿ ಕೋಟೆಯಷ್ಟಗಲದಲ್ಲೂ ಯುಕ್ತಿಯಿಂದ ಕಪಿಸೈನಿಕರು ಒಳಹೊಕ್ಕರು. ೧೬. ವಾನರಯೋಧರು ಅರಮನೆಯ ಬಳಿಯ ರಣರಂಗಕ್ಕೆ ನುಗ್ಗಿ ಮದಿಸಿದ ಆನೆಗಳು, ರಥಾರೋಹಿಗಳು, ಕುದುರೆ ಸವಾರರು ಮತ್ತು ಕಾಲಾಳುಗಳನ್ನು ಬೆಟ್ಟಗಳಿಂದ ಹೊಡೆದು ಅವರ ಪ್ರಾಣಗಳನ್ನು ತೆಗೆದರು. ಬೆಂಬಲಕ್ಕೆ ಬಂದವರನ್ನು "ಹೊಡೆ, ಹೊಡೆ!" ಎನ್ನುತ್ತ ಕೂಗಿ, ಬಿಡದೆ ಅವರ ವ್ಯೂಹದೊಳಕ್ಕೆ ನುಗ್ಗಿ, "ಹಿಡಿ ಹಿಡಿ, ಪರಸತಿದ್ರೋಹಿಯನ್ನು!" ಎನ್ನುತ್ತ ಅರಮನೆಯನ್ನು ಪ್ರವೇಶಿಸಿದರು. ೧೭. ಅದನ್ನು ಏನೆಂದು ವರ್ಣಿಸಲಿ, ಮಹಾಬಲಶಾಲಿ ಕೈಕಸೆಯ ಮಗನು ಕೆರಳಿದರೆ ಪ್ರಳಯಕಾಲದ ಶಿವನೂ ಸಮನಲ್ಲ. ರಾವಣನು ಗುರಾಣಿ ಮತ್ತು ಖಡ್ಗಗಳನ್ನು ತೆಗೆದುಕೊಂಡು ಪೂರ್ವದ ಕೆರಳಿದ ವೀರಭದ್ರನ ಭಯಂಕರ ವೀರರಸಕ್ಕೆ ಎಂಟರಷ್ಟು ಎನ್ನುವಂತೆ ಕ್ರೋಧದಿಂದ ಮುತ್ತಿಬರುವ ಕಪಿಸೈನ್ಯವನ್ನು ಕೊಚ್ಚಿ ರಾಶಿಹಾಕಿದನು. ೧೮. ಎಡಬಲಗಳೆರಡು ಕಡೆಯಲ್ಲೂ ಕತ್ತರಿಸಿ ರಾವಣನು ಕಪಿಗಳ ರುಂಡಮುಂಡಗಳನ್ನು ರಾಶಿಹಾಕಿದನು. ಇದರ ಮೇಲೆ ರಭಸದಿಂದ ಬರುವ ಬಲಶಾಲಿಗಳನ್ನು ಸುರಗಿಯನ್ನು ಸೆಳೆದು ಇರಿದನು. ಹೀಗೆ ತನ್ನ ಕಡೆಯಿಂದ ಸರಿದುಹೋಗುತ್ತಿದ್ದ ಜಯಲಕ್ಷ್ಮಿಯನ್ನು ರಾವಣನು ಹಿಂದಿರುಗಿಸಿದನು. ಆಕ್ಷಣದಲ್ಲಿ ರಾಕ್ಷಸರು ರಾವಣನ ಬಳಿ ಬಂದು ಸೇರಿದರು. ಯುದ್ಧರಂಗವು ಬಹಳ ಬಿರುಸಾಯಿತು.

ಆನುವರು ನಿಮ್ಮವರು ನಿಮ್ಮವ । ರಾನಿಕೆಯು ನಿಲಿಸುವರು ನಿಲುವುದು
ಸೇನೆ ನಿಮ್ಮವರಸುರರೌಕುವರಂತರಿಸಿ ನಿಮ್ಮ
ಸೇನೆ ಪಡಿತಳಿಸುವುದು ಸಮರದ । ಹಾನಿವೃದ್ಧಿಯ ಹೊಳಕೆವಾತಿನ
ಕಾನನದ ಕತ್ತಲೆಯ ಚರಿತರು ಮೆಚ್ಚಿದರಾಹವವ ೧೯

ರಾಶಿವೆಣನುಬ್ಬರದ ತೊರೆಗಳ । ಸೂಸುವರುಣಾಂಬುಪಿನ ಗಿರಿಮರ
ನಾಸುರದ ಕೈದುಗಳ ವೈದಾಗುಗಳ ಭಟನಿಕರ
ಓಸರದ ಪೈಸರದ ಕದನದ । ವಾಸಿಗಳ ವೈರಗಳ ಸಮರವಿ
ಲಾಸಿಗಳು ಸರಕಟಿಸಿ ಕಾದಿದರಳುಕೆ ಭುವನಚಯ ೨೦

ವೀರ ರಾವಣ ಮುಖ್ಯ ರಾಜಕು । ಮಾರರೊಗ್ಗಾಯ್ತಿರುಳ ಮೊದಲಲಿ
ತೀರಿತುಬ್ಬಟೆ ನಿಮ್ಮವರಿಗಲೆ ಕೇಳದೈ ಕುಶನೆ
ಚಾರಿವರಿದೆಡಬಲದಲೊದಗುವ । ಕೇರಿಕೇರಿಯ ಕಪಿಭಟರ ಸಂ
ಸಾರ ಸಾಕೆಂಬನ್ನಬರ ಸದೆದಿಳುಹಿತಸುರಬಲ ೨೧

ಇಳುಹಿದರು ದುರ್ಗವನು ಕೋಳಾ । ಹಳದ ಕೂಗಿನ ಕೊಲ್ಲ ಕೊಲೆಯಲಿ
ನಿಲಿಸಲೀಯದೆ ನಿಮ್ಮ ರಘುಭೂಪತಿಯ ಪಾಳಯದ
ಬಲಿದ ಗೇರಯದೊತ್ತುಪರಿಯಂ । ತೊಳದೊಡೆಯನಡೆದಿಳಿವ ವಿಶಿಖದ
ಹಲುಗಿರಿಕುಗಳ ಹಳಚಿದಗ್ಗಳಿಕೆಗಳ ಹರಿಬಲವ ೨೨

೧೯. ನಿಮ್ಮ ವಾನರಸೈನಿಕರು ರಾಕ್ಷಸಸೈನಿಕರನ್ನು ಎದುರಿಸಿ ನುಗ್ಗುವರು. ನಿಮ್ಮವರ ಪ್ರತಿಭಟನೆಯನ್ನು ರಾಕ್ಷಸಸೈನಿಕರು ನಿಲ್ಲಿಸುವರು. ಆಗ ನಿಮ್ಮ ವಾನರಸೈನ್ಯವು ನಿಂತುಕೊಳ್ಳುವುದು. ರಾಕ್ಷಸರ ಸೈನ್ಯವು ವಾನರಸೈನ್ಯದ ಒಳಹೊಕ್ಕು ಅವರ ಮೇಲೆ ಒತ್ತಡ ಹೇರುವುದು. ಆಗ ನಿಮ್ಮ ಸೈನ್ಯವು ಆಕ್ರಮಣ ನಡೆಸುವುದು. ಹೀಗೆ ಸೋಲು ಗೆಲುವುಗಳನ್ನನುಭವಿಸುತ್ತ, ರೀವಿಯ ಮಾತುಗಳನ್ನಾಡುತ್ತ, ವಾನರರು ಮತ್ತು ರಜನೀಚರರು ಯುದ್ಧವನ್ನು ತೋರ್ಪಡಿಸಿದರು. ೨೦. ಹೆಣಗಳು ರಾಶಿಯಾಗಿ ಹರಡಿ ರಕ್ತಪ್ರವಾಹ ಕೋಡಿ ಹರಿಯುವ ರಣರಂಗದಲ್ಲಿ ಎರಡೂ ಕಡೆಯ ಯೋಧರು ಬೆಟ್ಟಗಳು, ಮರಗಳು ಮತ್ತು ಭಯಂಕರ ಆಯುಧಗಳಿಂದ ಹೊಡೆದಾಡಿದರು. ಆರು ಗಾಗುವ, ಹಿಂದಕ್ಕೆ ಸರಿಯುವ ಆಣೆ ಭಾಷೆಗಳನ್ನು ಹಾಕುವ ಯುದ್ಧಕುಶಲರು ಹಗೆತನ ದಿಂದ ರಭಸವಾಗಿ ಮುನ್ನುಗ್ಗಿ ಕಾದಾಡಲು ಸಮಸ್ತಲೋಕಗಳೂ ಅಂಜಿದವು. ೨೧. ವೀರ ಇಂದ್ರಜಿತು ಮೊದಲಾದ ರಾವಣನ ಮುಖ್ಯ ರಾಜಕುಮಾರರು ರಾತ್ರಿಯ ಮೊದಲಲ್ಲಿ ಒಟ್ಟುಗೂಡಿದರು. ನಿಮ್ಮ ವಾನರರ ಶೌರ್ಯವು ತೀರಿತು. ಯುಕ್ತಿಯಿಂದ ಕೇರಿಕೇರಿಗಳಲ್ಲಿ ಮುನ್ನುಗ್ಗಿ ಎಡಬಲ ಭಾಗಗಳಿಂದ ಮುತ್ತುವ ಕಪಿವೀರರ ಸಂಸಾರ ಸಾಕು ಎನ್ನುವವರೆಗೆ ರಾಕ್ಷಸಸೈನ್ಯವು ಅವರನ್ನು ಹೊಡೆದುರುಳಿಸಿತು. ೨೨. ರಾಕ್ಷಸರು ಗಲಾಟೆ ಮಾಡುತ್ತ ಕೂಗು ಹಾಕುತ್ತ, ಕಪಿಸೈನ್ಯವನ್ನು ಕೋಲಿನಿಂದ ಕೊಲ್ಲುತ್ತ, ನಿಲ್ಲಲು ಅವಕಾಶ ಕೊಡದೆ ಕೋಟೆಯಿಂದ ಕೆಳಕ್ಕೆ ಇಳಿಸಿ ನಿಮ್ಮ ರಘುಪತಿಯ ಪಾಳಯದ

ಕಂಡು ಸೈರಿಸುವನೆ ಬಳಿಕ್ಕರಿ । ಗಂಡ ಲಕ್ಷ್ಮಣನಾಕ್ಷಣದೊಳು
ದ್ದಂಡ ರಾಕ್ಷಸರಟ್ಟೆ ಕುಣಿಯಲು ಕೋಲಮೊನೆಗಳಲಿ
ರುಂಡಗಳ ನೆಗಹಿದನು ಹರಿಪದ । ಮಂಡಲದ ವಲಯದಲಿ ಖಳಪುರ
ದಂಡು ಪರಿಯಂತಟ್ಟಿಹೊಗಿಸಿದನೂರನತಿಬಲರ ೨೩

ತೆಗೆದುದಳಿದುಳಿದಸುರಬಲವೀ । ವಿಗಡಬಲನುಪಟಳಕೆ ಪಾಳೆಯ
ದೆಗೆದುದಪರಾಂಬುಧಿಗೆ ಚಂಡದ್ಯುತಿಯ ದೀಧಿತಿಯ
ನಗರಕಾದುದು ಮೇಲೆ ನೀಲಾ । ದಿಗಳ ಮುತ್ತಿಗೆ ಬಲಿದರವರಿರು
ಳಗಲದಲಿ ಜಱಿದಾಳುವೇರಿಯ ಕೋಟೆಕೊತ್ತಳದ ೨೪

ಮಡಿದುದಾಜಿಯಲೆರಡು ನಿರ್ಬುದ । ಪಡೆ ಪರಾಕ್ರಮಿ ಕಪಿಗಳಸುವನು
ಸಡಿಲಿಸಿದರಿನ್ನೂಱಕ್ಷೋಹಿಣಿಯುನಸುರರಲಿ
ತುಡುಕಿತಂಜಿಕೆ ಬಳಿಕ ರಕ್ಕಸ । ರೊಡೆಯನನು ಬಲುಗೋಪಮುಖದಲಿ
ಝಡಿದುದಗ್ಗದ ವೀರ ತೊರವೆಯರಾಯ ನರಹರಿಯ ೨೫

ಬೇಲಿಯ ಹತ್ತಿರದವರೆಗೆ ಓಡಿಸಿದರು. ಒಳತೊಡೆಗೆ ಚುಚ್ಚಿದ ಬಾಣದೊಡನೆ ಹಲ್ಲು ಕಿರಿಯುತ್ತ ಸತ್ವಗುಂದಿದ ಕಪಿಸೈನ್ಯ ಹಿಂದೆ ಸರಿಯಿತು. ೨೩. ಕಪಿಸೈನ್ಯವು ಹಿಂದೆಗೆದುಬಂದುದನ್ನು ನೋಡಿ ಶತ್ರುವೀರ ಲಕ್ಷ್ಮಣನು ಸಹಿಸುವನೆ. ಆಕ್ಷಣ ರಾಕ್ಷಸರ ರುಂಡಗಳನ್ನು ಬಾಣಗಳ ಮೊನೆಯ ಮೇಲೆ ಕುಣಿಸಿದನು, ಆಕಾಶಮಂಡಲಕ್ಕೆ ರುಂಡಗಳನ್ನು ಹಾರಿಸಿದನು, ಶತ್ರುನಗರದವರೆಗೂ ರಾಕ್ಷಸರನ್ನು ಅಟ್ಟಿಸಿಕೊಂಡು ಹೋಗಿ ಊರಿನೊಳಕ್ಕೆ ಓಡಿಸಿದನು. ೨೪. ಅಳಿದುಳಿದ ರಾಕ್ಷಸಸೈನ್ಯವು ಈ ಪ್ರಚಂಡ ಬಲಶಾಲಿ ಲಕ್ಷ್ಮಣನ ಹಿಂಸೆಯನ್ನು ತಾಳಲಾರದೆ ಹಿಂದೆಗೆಯಿತು. ಸೂರ್ಯಪ್ರಕಾಶವು ಪಶ್ಚಿಮ ಸಮುದ್ರಕ್ಕೆ ಪ್ರಯಾಣಿಸಿತು. ಅನಂತರ ಲಂಕಾನಗರಕ್ಕೆ ನೀಲನೇ ಮೊದಲಾದವರು ಮುತ್ತಿಗೆಹಾಕಿದರು. ರಾಕ್ಷಸರು ರಾತ್ರಿಯೆಲ್ಲ ಕುಸಿದ ಆಳ್ವೇರಿ ಮತ್ತು ಕೋಟೆ ಕೊತ್ತಲಗಳನ್ನು ಸರಿಪಡಿಸಿ ಬಿಗಿಮಾಡಿದರು. ೨೫. ಯುದ್ಧದಲ್ಲಿ ಎರಡು ನಿರ್ಬುದ (ಇಪ್ಪತ್ತು ಕೋಟಿ) ಸೈನ್ಯ ಸತ್ತಿತು, ಕಪಿವೀರರು ಇನ್ನೂರು ಅಕ್ಷೋಹಿಣಿ ರಾಕ್ಷಸರ ಪ್ರಾಣಗಳನ್ನು ತೆಗೆದರು. ರಾಕ್ಷಸರರಸ ರಾವಣನಿಗೆ ಹೆದರಿಕೆ ಹತ್ತಿತು. ವೀರ ತೊರವೆಯ ನರಹರಿಯ ಅವತಾರಿಯಾದ ಶ್ರೀರಾಮನ ಮುಖದಲ್ಲಿ ಭಾರಿ ಕೋಪ ಉರಿಯಿತು.

# ಹನ್ನೆರಡನೆಯ ಸಂಧಿ

ಸೂಚನೆ॥ ಪರಮಪಾತಿವ್ರತೆಯ ಪಾವನ । ತರ ಚರಿತ್ರೆಯ ಮುಂದೆ ಮಾಯಾ
ಶಿರವ ಹಾಯಿಕಿ ಬೆದಱಿಸಿದನಳಿಮನದಲಸುರೇಂದ್ರ

ಕುಶನೆ ಕೇಳಾ ದಿನದ ದುರ್ಗದ । ವಿಷಮರಣ ರಂಜಿಸಿತಲೈ ಕೈ
ಕಸೆಯನಗ್ಗದ ಮಾಲ್ಯವಂತ ನಿಶಾಚರೇಶ್ವರನ
ಕುಸಿದ ಹರುಷದ ಕೊಱಗಿದಾನನ । ದೊಸರ್ವ ನಯನೋದಕದ ಸುಯ್ಲಿನ
ಹಸರಿಕೆಯಲೈತಂದರಿರುಳು ದಶಾಸ್ಯನಿದ್ದೆಡೆಗೆ ೧

ಬಂದ ಮಾತಾಮಹನ ಮಾತೆಯ । ಮಂದಹರುಷವನಱಿದು ಧಿಮ್ಮನೆ
ನಿಂದು ಕೈಮುಗಿದೇನುಬಂದಿರಿಯೆಂದು ಬೆಸಗೊಳಲು
ಕಂದ ಕೇಳೈ ಮಗನೆ ದಿನಗಳು । ಚಂದವಾಗಿರವೇನು ಚಿತ್ತಕೆ
ಬಂದಿರದು ನಿನ್ನಭಿಮತವು ನಮಗೆಂದರಸುರಂಗೆ ೨

ಮಗ ವಿಭೀಷಣ ನಿನಗೆ ಹೇಳಿದ । ಬಗೆ ಬರುತ್ತಿದೆ ದುರ್ಗವಿದ ಕೈ
ಮಗುಚಿಕೊಂಡವರುಂಟೆ ಸುರ ಮಾನವ ಭುಜಂಗರಲಿ
ಹಗಲು ಕತ್ತಲೆಯಹುದು ಕತ್ತಲೆ । ಹಗಲಹುದು ತಾನಿದುವೆ ಸಲೆ ಸೋ
ಜಿಗವಲಾ ನೀ ನೋಡಿಕೋಯೆಂದರು ನಯೋಕ್ತಿಯಲಿ ೩

ಸೂಚನೆ ॥ ಪರಮಪತಿವ್ರತೆಯಾದ ಪವಿತ್ರಶೀಲದ ಸೀತೆಯ ಎದುರಿಗೆ ರಾಮನ ಮಾಯಾತಲೆಯನ್ನು ಹಾಕಿ ರಾವಣನು ನೀಚತನದಿಂದ ಬೆದರಿಕೆ ಹಾಕಿದನು. ೧. ಕುಶನೆ ಕೇಳು, ಆ ದಿನದ ಕೋಟೆಯ ಉಗ್ರ ಕಾಳಗವು ರಾವಣನ ತಾಯಿ ಕೈಕಸೆಯನ್ನೂ ಮಾಲ್ಯವಂತ ಅಸುರನನ್ನೂ ಚಿಂತೆಗೊಳಗುಮಾಡಿತು. ಹರ್ಷ ತಗ್ಗಿ, ಕೊರಗಿದ ಮುಖದಿಂದ ಕಣ್ಣೀರು ಸುರಿಸುತ್ತ ನಿಟ್ಟುಸಿರು ಬಿಡುತ್ತ ಅವರು ರಾತ್ರಿ ದಶಕಂಠನ ಬಳಿಗೆ ಬಂದರು. ೨. ತನ್ನ ಬಳಿಗೆ ಬಂದ ಅಜ್ಜನ (ತಾಯತಂದೆಯ) ಮತ್ತು ತಾಯಿಯ ಕುಗ್ಗಿದ ಹರ್ಷವನ್ನು ಕಂಡು ರಾವಣನು ತಕ್ಷಣ ಎದ್ದುನಿಂತು ಕೈಮುಗಿದುಕೊಂಡು "ಏನು ಬಂದಿರಿ ?" ಎಂದು ಕೇಳಿದನು. "ಕಂದ, ಮಗು ಕೇಳಪ್ಪ. ದಿನಗಳು ಚೆನ್ನಾಗಿಲ್ಲ ನಿನ್ನ ಅಭಿಪ್ರಾಯವು ನಮ್ಮ ಮನಸ್ಸಿಗೆ ಒಪ್ಪಿಗೆಯಾಗಿಲ್ಲ" ಎಂದು ಅವರು ರಾವಣನಿಗೆ ಹೇಳಿದರು. ೩. "ಮಗ ವಿಭೀಷಣನು ಹೇಳಿದ ಸ್ಥಿತಿ ಬರುತ್ತಿದೆ. ದೇವತೆಗಳಲ್ಲಾಗಲಿ ಮಾನವರಲ್ಲಾಗಲಿ ಸರ್ಪರಲ್ಲಾಗಲಿ ಈ ದುರ್ಗವನ್ನು ಕೈತಪ್ಪಿಸಿಕೊಳ್ಳುವವರುಂಟೆ ? ಹಗಲು ಕತ್ತಲೆಯಾಗುವುದು, ಕತ್ತಲೆ ಹಗಲಾಗುವುದು. ಇದು ಆಶ್ಚರ್ಯವಲ್ಲವೇ, ನೀನೇ ನೋಡಿಕೋ" ಎಂದು ಮಾಲ್ಯವಂತ ಮತ್ತು ಕೈಕಸೆ ನಯವಾದ ನುಡಿಗಳಿಂದ

ಸ್ಮರವಿಕಾರಗ್ರಹದ ಸೋಂಕಿಗೆ । ಮರುಳುಗೊಳಬೇಡಯ್ಯ ಕಾಮನು
ಕರುಣಿಯೇ ಕೊಲೆಗಾಱರಿಗೆ ಗುರುವೈರವರ್ಗದಲಿ
ಪರಸತಿಗೆ ಮನವಿಕ್ಕಿ ಕಾಲನ । ಕರಕರೆಗೆ ಸಂದವರು ಹಲಬರು
ಪರಹು ಸೌಖ್ಯದೊಳಲ್ಪಬಳಲಿಕೆ ಬಹಳವಗ್ರದಲಿ ೪

ಹರಿಯ ಕರಿ ಜಯಿಸುವುದು ಗರುಡನ । ನುರಗ ಗೆಲುವುದು ಹೆಬ್ಬುಲಿಯನುಱೆ
ಹರಿಣ ಮುಱಿವುದು ಕಪ್ಪೆ ಕಾಳೋರಗನ ನುಂಗುವುದು
ನರರು ರಾಕ್ಷಸಭಟರ ರಣದಲಿ । ಪರಣಗೊಂಬುದು ಬೆಱಗಲಾಯಿಲೆ
ತರುಣ ಕೇಳೈ ಲೋಕ ಮೂಱರೊಳೆಂದಳಸುರಂಗೆ ೫

ತನುಜ ಕೇಳೈ ಸೀತೆ ನರಮಾ । ನಿನಿಯೆ ನಿನಗೇನಱಿಯಬಾರದೆ
ವಿನುತಪಾತಿವ್ರತ್ಯದನುಪಮ ಸುವ್ರತತ್ವದಲಿ
ಮನುಜನೇ ರಘುನಾಥನಾತನ । ಘನಚರಿತ್ರವನಱಿಯಬಾರದೆ
ಮನದ ವೈರವ ಬಿಟ್ಟು ಸುಖಿಯಾಗೆಂದಳಸುರಂಗೆ ೬

ವಿಷಯಲಂಪಟತನದಿ ಮೂರ್ಖರ । ನೊಸಲ ಭೂಷಣವಾಗಿ ಕೀರ್ತಿಯ
ಹೆಸರನಳಿದನು ಪುತ್ರಮಿತ್ರಜ್ಞಾತಿಬಾಂಧವರ
ಅಸುವಿಗಂತಕನಾದನೀ ಕೈ । ಕಸೆಯ ಮುನಿಪತಿ ವಿಶ್ರವಸುವಿನ
ಬಸುಱಿನಲಿ ಬರತಕ್ಕ ಮಗನಲ್ಲೆಂಬುದೀ ಲೋಕ ೭

ಹೇಳಿದರು. ೪. "ಮನ್ಮಥವಿಕಾರವೆಂಬ ಗ್ರಹದ ಸ್ಪರ್ಶಕ್ಕೆ ಭ್ರಾಂತನಾಗಬೇಡಪ್ಪ. ಕೊಲೆಗಾರರಿಗೆ ಮನ್ಮಥನು ಕರುಣೆಯೆ ? ಕಾಮ, ಕ್ರೋಧ, ಲೋಭ, ಮೋಹ, ಮದ, ಮತ್ಸರಗಳೆಂಬ ಅರಿಷಡ್ವರ್ಗಗಳಲ್ಲಿ ಒಂದಾದ ಪರಸ್ತ್ರೀಮೋಹಕ್ಕೆ ಒಳಗಾಗಿ ಯಮನ ಕಾಟಕ್ಕೆ ಸಿಕ್ಕಿದವರು ಹಲವರು ಮೊದಲು ದೊರೆಯುವ ಸುಖ ಅಲ್ಪ, ಕೊನೆಯಲ್ಲಿ ಕಷ್ಟವೇ ಹೆಚ್ಚು. ೫. ಈ ಮೂರು ಲೋಕಗಳಲ್ಲಿ ಸಿಂಹವನ್ನು ಆನೆ ಗೆಲ್ಲುವುದು, ಗರುಡನನ್ನು ಸರ್ಪ ಜಯಿಸುವುದು, ಹೆಬ್ಬುಲಿಯನ್ನು ಜಿಂಕೆಯು ಕೊಲ್ಲುವುದು, ಕಪ್ಪೆ ಕಾಳಸರ್ಪವನ್ನು ನುಂಗುವುದು, ಮಾನವರು ಯುದ್ಧದಲ್ಲಿ ರಾಕ್ಷಸವೀರರ ಪ್ರಾಣ ತೆಗೆಯುವುದು ಆಶ್ಚರ್ಯವಲ್ಲವೇ, ಮಗು ರಾವಣ ಕೇಳು" ಎಂದು ಕೈಕಸೆ ಹೇಳಿದಳು. ೬. "ಮಗನೇ, ಕೇಳು. ಸೀತೆ ಮಾನವಸ್ತ್ರೀಯೆ ? ಪಾತಿವ್ರತ್ಯದ ಅಮೋಘವ್ರತದಲ್ಲಿ ಅವಳಿರುವುದು ನಿನಗೆ ತಿಳಿಯಬಾರದೆ ? ರಘುನಾಥನು ಮಾನವನೇ ? ಆತನ ಘನ ಮಹಿಮೆಯನ್ನು ನೀನು ಅರಿಯಬಾರದೆ ? ಈಗಲೂ ನಿನ್ನ ಮನಸ್ಸಿನ ದ್ವೇಷವನ್ನು ಬಿಟ್ಟು ಸುಖಿಯಾಗು" ಎಂದು ಹೇಳಿದಳು ರಾವಣನಿಗೆ. ೭. "ಇಂದ್ರಿಯಸುಖಾಭಿಲಾಷೆಗಳಲ್ಲಿ ಕಾಮುಕನಾಗಿ, ಮೂರ್ಖರ ಹಣೆಯ ಮಾಣಿಕ್ಯವಾಗಿ ಕೀರ್ತಿಯನ್ನು ಕೆಡಿಸಿಕೊಂಡು ಮಕ್ಕಳು, ಸ್ನೇಹಿತರು, ದಾಯಾದಿಗಳು, ನಂಟರುಗಳ ಪ್ರಾಣಗಳಿಗೆ ಯಮನಾದವನು ಕೈಕಸೆ ಮತ್ತು ವಿಶ್ರವಸುಮುನಿಯ ಹೊಟ್ಟೆಯಲ್ಲಿ ಹುಟ್ಟತಕ್ಕ ಮಗನಲ್ಲ

ಅದಱಿಂ ನೀ ಜನಕಜೆಯ ಕೊಂಡೊ । ಯ್ದೊದೆದ ಚರಣವ ಹಿಡಿದು ಕರುಣವ
ವದನದಲಿ ತೋಱಿಸಿ ಶರೀರವನುಳುಹಿಕೊಂಬುದಿದು
ಚದುರತನ ದೇವರಲಿ ಕರುಣಾ । ಸ್ಪದನು ರಾಮನು ಕಾವ ನಿನ್ನನು
ಕದನ ಬೇಡೆಂದಪ್ಪಿದಳು ರಾವಣನ ಮಸ್ತಕವ ೮

ಅಳಿದರೀತನ ಚಕ್ರಹತಿಯಲಿ । ಕಳದೊಳೆಮ್ಮಗ್ರಜರು ಮಱೆಯೊ
ಕ್ಕುಳಿದೆನೆನಗಾಯ್ತೀ ಮಹಾಪುರದಾಧಿಪತ್ಯತನ
ಕಲಹದಲಿ ಕೈಯಿಕ್ಕಿ ಕೈಟಭ । ಕಲಿ ತಮಾಸುರ ಮುಖ್ಯ ರಾಕ್ಷಸ
ರಳಿದರೆಂದನು ಮಾಲ್ಯವಂತನು ರಾಕ್ಷಸೇಂದ್ರಂಗೆ ೯

ಆದಿಯಲಿ ಕೇಳ್ದಱಿಯಲಾ ಪ್ರ । ಹ್ಲಾದ ಬದುಕಿದ ಕಥೆಯ ವೈರವ
ಸಾಧಿಸಿಯೆ ಸತ್ತನು ಹಿರಣ್ಯಕನೆಂಬ ಸಂಗತಿಯ
ಕೈದುಡುಕು ಲೇಸಲ್ಲ ಖಳಕುಲ । ಸೂದನನ ಕೂಡಕಟ ಜೀವವ
ಕಾದುಕೋ ಕಾಮುಕರ ಚಾಳಿಯ ಚಲ್ಲಿ ಕಳೆಯೆಂದ ೧೦

ಮನುಜನಲ್ಲಾ ಕಾರ್ತವಿರ್‍ಯಾ । ರ್ಜುನನು ಕಪಿಯಲ್ಲಾ ಸುರೇಶ್ವರ
ತನುಜನವರಲಿ ಬಂದ ಭಂಗವ ಮಱೆದು ಕಳೆದೆಯಲ
ಅನುವರದೊಳಾ ಕಾರ್ತವೀರ್‍ಯಾ । ರ್ಜುನನನಾ ಕಪಿಸಾರ್ವಭೌಮನ
ತನುವನಳಿದವರಾರು ನೀನಿದ ನೋಡಿಕೋಯೆಂದ ೧೧

ಎಂದು ಹೇಳುವುದು ಈ ಲೋಕ. ೮. ಆದುದರಿಂದ ಈ ಜಾನಕಿಯನ್ನು ಕರೆದು ಕೊಂಡುಹೋಗಿ ಒದೆದ ರಾಮನ ಪಾದಗಳನ್ನು ಹಿಡಿ. ಮುಖದಲ್ಲಿ ಕರುಣೆಯನ್ನು ತೋರಿಸಿ ನಿನ್ನ ದೇಹವನ್ನು ಉಳಿಸಿಕೋ. ಇದು ಬುದ್ಧಿವಂತಿಕೆ. ದೇವರುಗಳಲ್ಲೆಲ್ಲ ರಾಮನು ದಯಾಮಯನು ; ಅವನು ನಿನ್ನನ್ನು ರಕ್ಷಿಸುವನು, ಯುದ್ಧ ಬೇಡ” ಎಂದು ರಾವಣನ ಹಣೆಯನ್ನು ಅಪ್ಪಿಕೊಂಡಳು ಕೈಕಸೆ. ೯. “ಈತನ ಚಕ್ರಾಯುಧದ ಏಟಿನಿಂದ ಯುದ್ಧದಲ್ಲಿ ನಮ್ಮ ಅಣ್ಣಂದಿರು ಮಡಿದರು. ಅವನ ಮರೆಹೊಕ್ಕು ಬದುಕಿದ ನನಗೆ ಈ ಮಹಾನಗರದ ಒಡೆತನ ದೊರಕಿತು. ಶ್ರೀಹರಿಯೊಡನೆ ಯುದ್ಧವನ್ನು ಮಾಡಿ ಕೈಟಭಾಸುರ ತಮಾಸುರ ಮೊದಲಾದ ಮುಖ್ಯ ರಾಕ್ಷಸರು ನಾಶವಾದರು” ಎಂದು ಮಾಲ್ಯವಂತನು ರಾಕ್ಷಸರಾಜನಿಗೆ ಹೇಳಿದನು. ೧೦. “ಹಿಂದೆ ಪ್ರಹ್ಲಾದನು ಬದುಕಿದ ಕಥೆಯನ್ನೂ ಮತ್ತು ಹಿರಣ್ಯಕಶಿಪು ಶ್ರೀಹರಿಯ ಮೇಲೆ ದ್ವೇಷ ಸಾಧಿಸಿ ಸತ್ತ ಸಂಗತಿಯನ್ನೂ ನೀನು ಕೇಳಿ ತಿಳಿಯೆಯ. ರಾಕ್ಷಸವಂಶವಿನಾಶಕನೊಡನೆ ಹಿಂದೆ ಮುಂದೆ ನೋಡದೆ ಕೈಮಾಡುವುದು ಒಳ್ಳೆಯದಲ್ಲ. ನಿನ್ನ ಪ್ರಾಣವನ್ನು ರಕ್ಷಿಸಿಕೋ. ವಿಷಯ ಲಂಪಟರ ಕೆಟ್ಟ ನಡತೆಯನ್ನು ಬಿಟ್ಟುಬಿಡು” ಎಂದ ಮಾಲ್ಯವಂತ. ೧೧. “ಕಾರ್ತವೀರ್‍ಯಾರ್ಜುನನು ಮನುಷ್ಯನಲ್ಲವೇ ? ಇಂದ್ರಸುತ ವಾಲಿಯು ಕಪಿಯಲ್ಲವೇ ? ಅವರಿಂದ ನಿನಗಾದ ಸೋಲನ್ನು ನೀನು ಮರೆತುಬಿಟ್ಟೆಯಾ ? ಯುದ್ಧದಲ್ಲಿ ಕಾರ್ತವೀರ್‍ಯಾರ್ಜುನನನ್ನೂ ಕಪಿಸಾರ್ವಭೌಮ ವಾಲಿಯನ್ನೂ ಕೊಂದವರು ಯಾರು ? ನೀನು ಇದನ್ನು

ವರವು ನಿನಗಜನಿಂದ ಮಿಕ್ಕಿನ । ಸುರ ನರೋರಗ ಯಕ್ಷ ರಾಕ್ಷಸ
ಗರುಡ ಗಂಧರ್ವಾದಿ ನಾನಾ ದೇವಯೋನಿಯಲಿ
ಮರಣವಿಲ್ಲೆಂದಣುಗ ಕೇಳ್ ವಾ । ನರನರೇಶ್ವರರರಿಗಳಾಗಿಯೆ
ಧುರಕೆ ನಿಂದರು ನೀನಿದನು ಲೇಸಾಗಿ ತಿಳಿಯೆಂದ ೧೨

ಕೇಳು ಮಾತಾಮಹ ಪಿಪೀಲಿಕ । ದಾಲಿಗಿರದೇ ಗೋಪ್ಪದದ ಕೀ
ಲಾಲವಿಲಯಾಂಬುವಿನವೊಲು ನಿಮ್ಮಕ್ಷಿಗಾ ರಘುಜ
ಸ್ಥೂಲನೆನಗಣುಮಾತ್ರನಿದ ನೀವ್ । ಹೇಳದಿರಿ ಕಥೆಗಳನು ನಾವಿದ
ಕೇಳಬಲ್ಲೆವು ಸಾಕು ಬಿಜಯಂಗೆಯ್ಯಿ ನೀವೆಂದ ೧೩

ಎಣಿಕೆ ನಿಮಗಿದು ವಿಷ್ಣುವೀತನು । ಕೆಣಕಬೇಡೀತನನು ನೀನೆಂ
ದಣಕನೊಡ್ಡುವಿರೈಸಲೇ ನಾವಂಜಿವಾಹವಕೆ
ರಣಮುಖದೊಳನುಚರಿಸದರಿಮಾ । ರ್ಗಣದ ಜಯಮುಖಕೀರ್ತಿಯನು ಪಡೆ
ವೆಣಿಕೆ ನಮ್ಮದು ನಿಮ್ಮ ಬಗೆಯನು ಬಗೆವನಲ್ಲೆಂದ ೧೪

ಮರುಳುತನ ಬೇಡೆಲೆ ಮಗನೆ ದು । ರ್ಧರವು ದೈವದ ಕೂಡೆ ಸುಲಭವೆ
ಹಿರಿಯರಾಡಿದ ಮಾತನಕಟಾ ಮನ್ನಿಸುವುದೆನುತ
ಸ್ಮರನ ಗರುಡಿಯ ಶ್ರಮವು ಜೀವದ । ಸರಸ ಕೇಳೆಲೆ ಕಂದ ನೀನನು
ಸರಿಸು ನಮ್ಮಯ ಮಾತನೆಂದನು ಮುಗಿದು ಕರಯುಗವ ೧೫

ನೋಡಿಕೋ" ಎಂದ ಮಾಲ್ಯವಂತ. ೧೨. "ಅಮರರು, ಮಾನವರು, ಸರ್ಪರು, ಯಕ್ಷರು, ರಾಕ್ಷಸರು, ಗರುಡ ಗಂಧರ್ವರುಗಳೇ ಮೊದಲಾದ ನಾನಾ ದೇವತೆಗಳು. ಇವರುಗಳಿಂದ ನಿನಗೆ ಮರಣವಿಲ್ಲ ಎಂದು ಬ್ರಹ್ಮನು ನಿನಗೆ ವರವನ್ನು ಕೊಟ್ಟಿದ್ದಾನೆ. ಮಗು ಕೇಳು, ಈಗ ವಾನರರಾಜರು ಶತ್ರುಗಳಾಗಿ ಯುದ್ಧಕ್ಕೆ ಬಂದು ನಿಂತಿದ್ದಾರೆ ನೀನು ಇದನ್ನು ಚೆನ್ನಾಗಿ ತಿಳಿ" ಎಂದ ಮಾಲ್ಯವಂತ, ೧೩. "ಅಜ್ಜ ಆಲಿಸು, ಇರುವೆಯ ಕಣ್ಣಿಗೆ ಹಸುವಿನ ಹೆಜ್ಜೆಯಷ್ಟಗಲದ ನೀರು ಪ್ರಳಯಕಾಲದ ನೀರಿನಂತೆ ಕಾಣುವುದಿಲ್ಲವೇ. ನಿಮ್ಮ ಕಣ್ಣುಗಳಿಗೆ ಆ ರಘುಪತಿಯು ಭಾರಿಯಾಗಿ ಕಾಣಿಸುತ್ತಾನೆ, ನನಗಾದರೋ ಅಣುವಿನಷ್ಟು ಮಾತ್ರ ಕಾಣಿಸುತ್ತಾನೆ, ನೀವು ನನಗೆ ಕಥೆಗಳನ್ನು ಹೇಳಬೇಡಿ. ಇವೆಲ್ಲವನ್ನು ನಾವು ಕೇಳಿದ್ದೇವೆ. ಸಾಕು, ನೀವು ದಯಮಾಡಿಸಿ" ಎಂದು ರಾವಣ ಹೇಳಿದ. ೧೪, "ನಿಮ್ಮ ಭಾವನೆ ಇದು. ಈತನು ವಿಷ್ಣು, ಈತನನ್ನು ಕೆಣಕಬೇಡ ಎಂದು ಅಪಹಾಸ್ಯ ಮಾಡುತ್ತೀರಲ್ಲವೇ ? ನಾವು ಯುದ್ಧಕ್ಕೆ ಹೆದರುವುದಿಲ್ಲ. ಯುದ್ಧಕ್ಕೆ ಹಿಂಜರಿಯದೆ ಶತ್ರುವಿನ ಬಾಣಗಳನ್ನು ಜಯಿಸಿ ಕೀರ್ತಿಯನ್ನು ಪಡೆಯುವ ಆಲೋಚನೆ ನಮ್ಮದು. ನಿಮ್ಮ ಅಭಿಪ್ರಾಯವನ್ನು ಲಕ್ಷಿಸುವವನಲ್ಲ" ಎಂದ ರಾವಣ. ೧೫. "ಮಗನೇ, ಹುಚ್ಚುತನವನ್ನು ಬಿಡು, ದೇವರೊಡನೆ ವೈರವು ಕಠಿಣವಾದುದು ; ಸುಲಭವಲ್ಲ ! ದೊಡ್ಡವರು ಹೇಳಿದ ಮಾತನ್ನು ಗೌರವಿಸು. ಮನ್ಮಥನ ಗರುಡಿಯಲ್ಲಿ ಸಾಧನೆ ಮಾಡುವುದು ಜೀವದೊಡನೆ ಸರಸವಾಡಿದಂತೆ. ಮಗು, ನಮ್ಮ ಮಾತನ್ನು ನೀನು ನಡೆಸಿ

ಧರಣಿ ತಲೆಕೆಳಗಾಗಲುಗುಳಲಿ । ತರಣಿಬಿಂಬವನಭ್ರವಜ ಶಂ
ಕರರು ಕೂಗಿಡಲಬುಧಿ ಮುಸುಕಲಿ ಮುಱಿಯಲಮರಾದ್ರಿ
ತಿರುಗಿ ಸೀತೆಯ ಬಿಟ್ಟೆನಾದರೆ । ಕರೆಯಿ ಪೇತುಗನೆಂದು ನಮ್ಮನು
ಕರಕರಿಸಬೇಡೇಳಿಯೆಂದಡದಿರುಹಿದನು ಮುಖವ ೧೬

ಬಳಿಕವರು ಬಿಸುಸುಯ್ಯುತಂಬಕ । ಜಲದ ಝಾಡಿಯಲೈದಿದರು ನಿಜ
ನಿಳಯವನು ದಶಕಂಠನಿತ್ತಲು ತನ್ನ ಮನದೊಳಗೆ
ಹಲವನೆಣಿಸಿದ ಬಳಿಕ ಸೀತೆಯ । ನೊಳಗುಮಾಡುವುಪಾಯಕುಶಲವ
ತಿಳಿದು ವಿದ್ಯುಜ್ಜಿಹ್ವನನು ಕರೆದೆಂದನೀ ಹದನ ೧೭

ಮಾಯೆಯಲಿ ರಚಿಸಹಿತರಾಘವ । ರಾಯನಂದದ ಶಿರವನದನಬು
ಜಾಯತಾಕ್ಷಿಯ ಮುಂದೆ ತೋಱಿಸಿ ಹಾಯ್ಕಿ ಮೈವಳಿಯ
ಮಾಯೆಯಲಿ ಮಾತಾಡಿ ಬಹಳೋ । ಪಾಯದಿಂದೊಡಬಡಿಸಿ ತಾ ಹೋ
ಗಾಯತಿಕೆಯ ಛಲೋಕ್ತಿ ಸರಿದರೆ ಸಾಕು ತನಗೆಂದ ೧೮

ರಚಿಸಿದನು ಬಳಿಕವನು ಮಾಯಾ । ರಚನೆಯಲಿ ನೃಪಶಿರವ ಸಾಧ್ವಿಯ
ಶುಚಿಯ ಸೀತೆಯ ಬಳಿಗೆ ತಂದವನರ್ಧರಾತ್ರಿಯಲಿ
ವಿಚಕಿತಾಸ್ಫಾಲನೆಯ ವಾದ್ಯ । ಪ್ರಚಯದುಬ್ಬಿನ ಬೊಬ್ಬೆಗಳ ಖಳ
ನಿಚಯ ಸಹಿತೈತಂದು ಮುಂದಿಳುಹಿದನು ಮಸ್ತಕವ ೧೯

ಕೊಡು” ಎಂದು ಕೈಮುಗಿದು ಮಾಲ್ಯವಂತ ಕೇಳಿಕೊಂಡ. ೧೬. “ಭೂಮಿಯು ತಲೆ ಕೆಳಕಾದರೂ ಸರಿ, ಅಕಾಶವು ಸೂರ್ಯಬಿಂಬವನ್ನು ಉಗುಳಿದರೂ ಸರಿ. ಬ್ರಹ್ಮ ಮಹೇಶ್ವರರು ಅರಚಿಕೊಂಡರೂ ಸರಿ, ಸಮುದ್ರ ಉಕ್ಕಿಬಂದು ಆವರಿಸಿದರೂ ಸರಿ, ಮೇರು ಪರ್ವತ ಮುರಿದುಬಿದ್ದುಹೋದರೂ ಸರಿ, ನಾನು ಸೀತೆಯನ್ನು ಹಿಂದಿರುಗಿಸಿದ ಪಕ್ಷಕ್ಕೆ ನನ್ನನ್ನು ಹುಚ್ಚನೆಂದು ಕರೆಯಿರಿ, ಸುಮ್ಮನೆ ಕಾಡಬೇಡಿ, ಏಳಿ” ಎಂದು ರಾವಣನು ಅಡ್ಡಮೋರೆ ಮಾಡಿದನು. ೧೭. ಅನಂತರ ಕೈಕಸೆ ಮತ್ತು ಮಾಲ್ಯವಂತರು ಕಣ್ಣೀರು ಹರಿಸುತ್ತ ತಮ್ಮ ಮನೆಗೆ ಹೋದರು. ಇತ್ತ ದಶಮುಖನು ತನ್ನ ಮನಸ್ಸಿನಲ್ಲಿ ಬಹಳವಾಗಿ ಆಲೋಚಿಸಿದ ಬಳಿಕ ಸೀತೆಯನ್ನು ಕೈವಶಮಾಡಿಕೊಳ್ಳುವ ಉಪಾಯವನ್ನು ಕಂಡುಕೊಂಡು ವಿದ್ಯುಜ್ಜಿಹ್ವನನ್ನು ಕರೆದು ಆದರ ಕ್ರಮವನ್ನು ತಿಳಿಸಿದನು. ೧೮. “ಶತ್ರು ರಾಮನ ತಲೆಯಂತೆಯೇ ಇರುವ ತಲೆಯನ್ನು ಮಾಯೆಯಿಂದ ಸೃಷ್ಟಿಸು. ಅದನ್ನು ಸೀತೆಗೆ ತೋರಿಸಿ ಅವಳ ಮುಂದೆ ಹಾಕಿ ಮಾಯೆಯಿಂದ ಮನವೊಲಿಸುವ ಮಾತನಾಡಿ ಅನೇಕ ಯುಕ್ತಿಗಳಿಂದ ಒಪ್ಪಿಸಿ ಕರೆದುಕೊಂಡು ಬಾ ಹೋಗು. ಹೇಗಾದರೂ ನನ್ನ ಹಟದ ಮಾತು ನಡೆದರೆ ಸಾಕು” ಎಂದು ರಾವಣನು ವಿದ್ಯುಜ್ಜಿಹ್ವನಿಗೆ ಹೇಳಿದನು. ೧೯. ಅನಂತರ ವಿದ್ಯುಜ್ಜಿಹ್ವನು ಮಾಯೆಯಿಂದ ರಾಮನ ತಲೆಯನ್ನು ರಚಿಸಿ ಅರ್ಧರಾತ್ರಿಯ ಸಮಯದಲ್ಲಿ ಪತಿವ್ರತೆಯೂ ಪರಿಶುದ್ಧಳೂ ಆದ ಸೀತೆಯ ಬಳಿಗೆ ತಂದನು. ಭಯವನ್ನುಂಟುಮಾಡುವಂತೆ ವಾದ್ಯಗಳನ್ನು ಬಾರಿಸುತ್ತ ಉತ್ಸಾಹದಿಂದ ಕೂಗುಹಾಕುವ

ತಳಿರೊದೆದ ಮಾಮರನ ಗಿಳಿ ಕೋ । ಗಿಲೆ ವಸಂತನ ಹಂಸೆ ತಾವರೆ
ಗೊಳನ ಚಾತಕಿ ಕಾರಮುಗಿಲ ಚಕೋರಿಚಂದ್ರಮನ
ಹಲುಬುವಂತೆ ನಿಜೇಶನನು ಹಂ । ಬಲಿಸುತಿಹ ಜಾನಕಿಯ ಮುಂದವ
ನಿಳುಹಿದನು ಮಸ್ತಕವನುರು ಮಾಯವಿಲಾಸಕದ ೨೦

ನೊಸಲ ಕೀಲಿಸಿದಂಬಿನಗ್ರದ । ಲೊಸರ್ವ ರುಧಿರದ ನಗೆವೊಗದ ದಾ
ಳಿಸುವ ಕದಪಿನ ಕಂಗಳರೆಮುಚ್ಚುಗಳ ಕಿಱುಜಡೆಯ
ಹಸರಿಕೆಯ ಹರಿಗೊರಳಿನಲಿ ಜಾ । ಳಿಸುವ ನೆತ್ತರ ಮಸ್ತಕವ ತೋ
ಱಿಸಿದನಿದಕೋ ದೇವಿ ನೋಡೆಂದಸುರನಾಸುರದ ೨೧

ಇಂದಿನಾಹವದೊಳಗೆ ನೋದುದು । ಮಂದಿ ನಮ್ಮದು ದೇವಿ ಕೇಳ್ ರಘು
ನಂದನನ ಮುಂದಾರು ನಿಂದಿರಲಹುದು ಬವರದಲಿ
ಕೊಂದನಗಣಿತ ರಾಕ್ಷಸರ ಬಳಿ । ಕೊಂದು ಮಾಯಾರೂಪಿನಲಿ ಸಲೆ
ಸಂಧಿಸಿದೆನಾಜಿಯಲಿ ತಂದೆನು ತಲೆಯ ತಾನೆಂದ ೨೨

ರಣಕೆ ನಿಲಲರಿಯದೆ ವನೌಕಸ । ರಣೆದುಹಾಯ್ದುದು ಕಾಣೆನಾ ಲ
ಕ್ಷ್ಮಣನದೇನಾದನೊ ವಿಭೀಷಣನಾವ ದಿಕ್ಕಿನಲಿ
ಜುಣುಗಿದನೊ ಸುಗ್ರೀವನನಿಲಜ । ಮಣಿದನವನಾಹವದೊಳಾಳ್ದನ
ರುಣವ ತಿದ್ದಿದನುಳಿದ ವೀರರ ಕಾಣೆ ನಾನೆಂದ ೨೩

ರಾಕ್ಷಸಸಮೂಹದೊಡನೆ ಬಂದು ಸೀತೆಯ ಮುಂದೆ ಮಾಯಾತಲೆಯನ್ನು ಇಟ್ಟನು. ೨೦. ಚಿಗುರೊಡೆದ ಮಾವಿನಮರಕ್ಕಾಗಿ ಗಿಳಿ, ವಸಂತ ಋತುವಿಗಾಗಿ ಕೋಗಿಲೆ, ತಾವರೆಯ ಕೊಳಕ್ಕಾಗಿ ಹಂಸ, ಕಾರ್ಮೋಡಕ್ಕಾಗಿ ಚಾತಕಪಕ್ಷಿ, ಬೆಳುದಿಂಗಳಿಗಾಗಿ ಚಕೋರಪಕ್ಷಿ ದುಃಖಿಸುವಂತೆ ತನ್ನ ಪತಿಗಾಗಿ ಚಿಂತಿಸುತ್ತಿರುವ ಜಾನಕಿಯ ಮುಂದೆ ವಿದ್ಯುಜ್ಜಿಹ್ವನು ರಾಮನ ಮಾಯಾಶಿರಸ್ಸನ್ನು ತಂದಿಟ್ಟನು. ೨೧. ಹಣೆಗೆ ಚುಚ್ಚಿದ ಬಾಣದ ತುದಿಯಲ್ಲಿ ರಕ್ತ ಸೋರುತ್ತ, ನಗುಮುಖದಿಂದ ಕೂಡಿದ ಹೊಳೆಯುವ ಕೆನ್ನೆಯ, ಅರ್ಧ ಮುಚ್ಚಿದ ಕಣ್ಣುಗಳ ಕಿರುಜಟೆಯ, ಕತ್ತು ಕತ್ತರಿಸಿದೆಡೆಯಲ್ಲಿ ಸುರಿಯುವ ರಕ್ತದ ತಲೆಯನ್ನು ತೋರಿಸಿ "ಇಗೋ ನೋಡು, ದೇವಿ" ಎಂದನು ಆ ಭಯಂಕರ ರಾಕ್ಷಸ. ೨೨. "ಇಂದಿನ ಕಾಳಗದಲ್ಲಿ ನಮ್ಮ ಕಡೆಯ ಜನ ನಷ್ಟವನ್ನನುಭವಿಸಿತು. ದೇವಿ ಕೇಳು, ಯುದ್ಧದಲ್ಲಿ ರಾಘವನ ಎದುರಿನಲ್ಲಿ ಯಾರು ನಿಲ್ಲಬಲ್ಲರು ; ಲೆಕ್ಕವಿಲ್ಲದಷ್ಟು ಜನ ರಾಕ್ಷಸರನ್ನು ಕೊಂದನು. ಅನಂತರ ಮಾಯಾರೂಪಿನಿಂದ ರಾಮನನ್ನು ಯುದ್ಧದಲ್ಲಿ ಎದುರಿಸಿ ನಾನು ಅವನ ತಲೆಯನ್ನು ತಂದೆ" ಎಂದ ವಿದ್ಯುಜ್ಜಿಹ್ವ. ೨೩. "ವಾನರರು ಯುದ್ಧದಲ್ಲಿ ನಿಲ್ಲಲಾರದೆ ತಿವಿದೋಡಿಹೋದರು. ಆ ಲಕ್ಷ್ಮಣನು ಏನಾದನೋ, ವಿಭೀಷಣನು ಯಾವ ದಿಕ್ಕಿನಿಂದ ತಪ್ಪಿಸಿಕೊಂಡು ಹೋದನೋ ಕಾಣೆ. ಸುಗ್ರೀವ ಹನುಮಂತರು ಯುದ್ಧದಲ್ಲಿ ಸೋತು ಒಡೆಯನ ಋಣವನ್ನು ತೀರಿಸಿದರು. ಇನ್ನು

ವೀರಖಂಡೆಯಿದಕೊ ಧನುತೂ । ಣೀರವಿದಕೋ ಕವಚವಿದಕೋ
ವೀರ ರಾಮನ ಕೈದುವಿಹವೇ ನೋಡಿ ನೀವಿದನು
ಆರು ಸರಿ ಲಂಕಾಧಿನಾಥಂ । ಗಾರು ಸೋಲರು ಸುರ ನರೋರಗ
ನಾರಿಯರು ನೀವಿನಿತರಲಿ ಭಜಿಸುವುದು ಲೇಸೆಂದ ೨೪

ಬಾಲೆಯರು ಭೂಸತಿಯು ಜಯಮುಖ । ದೇಳಿಗೆಯುಲಾಳ್ದವನ ಧರಣೀ
ಪಾಲಸವನಾಹವವ ನೀವ್ ಲೇಸಾಗಿ ಚಿತ್ತೈಸಿ
ಹೇಳುವಡೆ ನೀವಜ್ಞರೇ ದು । ಶ್ಶೀಲರೇ ನೀವ್ ಮಾತಿನೊಪ್ಪದ
ಮೇಲೆ ಮಾತನು ಹೇಳಿಕಳುಹುವುದುಚಿತ ನಿಮಗೆಂದ ೨೫

ಕೇಳಿದೈ ನೃಪಸೂನು ಮಿಂಚಿನ । ನಾಲಗೆಯ ರಕ್ಕಸನ ನುಡಿ ಕಿವಿ
ಗೇಳಿಸಲು ಕುಡಿಯಳ್ಗಿಯನು ಕೋಲುಗಿದ ತೆಱನಂತೆ
ಸಾಲಿಡುವ ಕಂಬನಿಯ ಮರುಕದ । ಮಾಲೆಗಿಚ್ಚಿನ ಚುಚ್ಚಿನಂಗದ
ಬಾಲೆ ಬಾಯ್ಬಿಡುತೀಕ್ಷಿಸಿದಳಾಸುರದ ಮಸ್ತಕವ ೨೬

ಮಾಯದಭಿರಂಜನೆಯ ಶಿರವೆಂ । ದಾಯತಾಂಬಕಿಯೇನ ಬಲ್ಲಳು
ಹಾಯೆನುತ ಹಮ್ಮೈಸಿ ಮೂರ್ಛಿತೆಯಾಗೆ ಖಳ ಬಳಿಕ
ಸಾಯಬಗೆದಳಲಾ ಪತಿವ್ರತೆ । ತಾಯಿ ತಾನಿಹುದುಚಿತವಲ್ಲೆನು
ತಾಯಸದ ಮರುಕದಲಿ ತಿರುಗಿದನಸುರನಿದ್ದೆಡೆಗೆ ೨೭

ಉಳಿದ ವೀರರನ್ನು ನಾನು ನೋಡಲಿಲ್ಲ" ಎಂದ ವಿದ್ಯುಜ್ಜಿಹ್ವ. ೨೪. "ರಾಮನ ವೀರಗತ್ತಿ, ಇದನ್ನು ತೆಗೆದುಕೊಳ್ಳಿ. ಬಿಲ್ಲು ಬತ್ತಳಿಕೆ ತೆಗೆದುಕೊಳ್ಳಿ. ಕವಚವನ್ನು ತೆಗೆದುಕೊಳ್ಳಿ. ಇವು ವೀರ ರಾಮನ ಆಯುಧಗಳೇ ಎಂಬುದನ್ನು ನೀವು ನೋಡಿ. ಲಂಕಾಧೀಶ್ವರನಿಗೆ ಸಮಾನರಾರು ? ದೇವತಾಸ್ತ್ರೀಯರು, ಮಾನವ ಸ್ತ್ರೀಯರು, ಉರಗಸ್ತ್ರೀಯರು–ಇವರುಗಳಲ್ಲಿ ಯಾರು ತಾನೆ ರಾವಣನಿಗೆ ಸೋಲುವುದಿಲ್ಲ. ನೀವು ಇಷ್ಟರಲ್ಲಿ ರಾವಣನನ್ನು ಸೇವಿಸುವುದು ಒಳ್ಳೆಯದು" ಎಂದ. ೨೫. "ಯುದ್ಧದಲ್ಲಿ ಜಯಶೀಲನಾದ ಲಂಕೆಯೊಡೆಯನ ಯುದ್ಧವನ್ನು ಭೂಮಿಯ ಮಗಳಾದ ನೀವು ಚೆನ್ನಾಗಿ ಗಮನಿಸಿ. ನಾವು ವಿವರಿಸಬೇಕೆ ? ನೀವೇನು ತಿಳಿಯದವರೇ ? ಅಥವಾ ನೀವು ಕೆಟ್ಟ ನಡತೆಯವರೇ ? ನಮ್ಮೊಡನೆ ನೀವು ಒಪ್ಪಿಗೆಯ ಉತ್ತರವನ್ನು ಕಳುಹಿಸಿಕೊಡುವುದು ಯೋಗ್ಯ" ಎಂದ ವಿದ್ಯುಜ್ಜಿಹ್ವ. ೨೬. ಕೇಳಿದೆಯಾ ರಾಜಕುಮಾರ ಮಿಂಚಿನ ನಾಲಗೆಯ ರಾಕ್ಷಸನ ಮಾತು ಕಿವಿಯ ಮೇಲೆ ಬೀಳಲು ಪಕ್ಕಿಗೆ ಕೋಲು ಚುಚ್ಚಿದ ಹಾಗೆ ನೊಂದು ಕಣ್ಣೀರು ಸುರಿಸುತ್ತ ದುಃಖದ ಬೆಂಕಿ ಸುಡುವ ದೇಹದಿಂದ ಕೂಡಿದ ಸೀತೆ ಅತಿಯಾಗಿ ದುಃಖಿಸುತ್ತ ಭಯಂಕರವಾದ ಮಾಯಾತಲೆಯನ್ನು ನೋಡಿದಳು. ೨೭. ಮಾಯದಿಂದ ಹೊಳೆಯುವ ತಲೆಯೆಂದು ವಿಶಾಲಲೋಚನೆ ಸೀತೆ ಏನು ಬಲ್ಲಳು. ಅಯ್ಯೋ ಎನ್ನುತ್ತ ಕಾತರಳಾಗಿ ಮೂರ್ಛೆಹೋದಳು. "ಪತಿವ್ರತೆಯಾದ ಈ ತಾಯಿಯು ಸಾಯಲು ಬಯಸಿದಳಲ್ಲವೇ, ನಾನು ಇಲ್ಲಿರುವುದು ಉಚಿತವಲ್ಲ!"

ದೇವರಾಜ್ಞಾಪಿಸಿದವೊಲು ಮಾ । ಯಾವಿಲಾಸದ ಶಿರವನೊಯ್ದಾ
ದೇವಿಯರ ಮುಂದಿಳುಹೆ ಕಾಣುತ ಕಾಯುವನು ಕೆಡಹಿ
ಜೀವವನು ಬಿಡಬಗೆದಳುತ್ತರ । ವಾವುದಿದಕಿನ್ನವರ ಮಾತಿಗೆ
ಠಾವ ಕಾಣದೆ ಬಂದೆನಿದು ಹದನೆಂದು ಕೈಮುಗಿದ ೨೮

ಆ ಲತಾಂಗಿಗೆ ಬಳಿಕ ಮೂರ್ಛಾ । ವ್ಯಾಳವಿಷ ಗರುಡಧ್ವಜನ ನಾ
ಮಾಳಿಗಳ ಮಂತ್ರದಲಿ ಬಿಡೆ ಕಂದೆಜಿದು ಶೋಕದಲಿ
ನೀಲಘನಸನ್ನಿಭನ ವಿಮಲ ವಿ । ಶಾಲನೇತ್ರನ ವಿಪುಳವಕ್ಷನ
ಸಾಲಸಾರಭುಜಾನ್ವಿತನ ನೆನೆದಳಲಿದಳು ಸೀತೆ ೨೯

ನೊಸಲ ನೊಸಲಿಂದೊರೆಸಿದಳು ಚುಂ । ಬಿಸಿದಳುಭಯಕದಂಪುಗಳ ನಿ
ಟ್ಟಿಸಿದಳೊಲೆದಳು ಮುದ್ದುಗೈದಳು ಲಲ್ಲೆವಾತಿನಲಿ
ಒಸೆದು ಚೈಮುಂಡಾಡುತಾಲಿಂ । ಗಿಸಿದಳನುರಾಗಪ್ರಪಂಚದ
ಕೊಸರಿಕೆಯ ಕಳವಳದ ಮೈಮಱವೆಯಲಿ ಮಸ್ತಕವ ೩೦

ಆಗದಿರನೆನ್ನರಸನೆನ್ನನು । ರಾಗ ಸಮರಸಭರಿತ ಮನ್ಮಥ
ನಾಗದಿರನೆನ್ನಯ ಮನೋವಲ್ಲಭ ಮನೋರಮಣ
ಆಗದಿರನೆಲೆ ಸರಮೆ ತನಗಿನಿ । ತಾಗಲಿರ್ದುದೆ ತ್ರಿಜಟೆ ಕೇಳೌ
ತಾಗಿತೇ ತನಗಕಟ ದುಷ್ಕೃತವೆಂದಳಬುಜಾಕ್ಷಿ ೩೧

ಎನ್ನುತ್ತ ವಿದ್ಯುಜ್ಜಿಹ್ವನು ಕನಿಕರದಿಂದ ರಾವಣನ ಬಳಿಗೆ ಹಿಂದಿರುಗಿದನು. ೨೮. "ಸ್ವಾಮಿ ಯವರು ಅಪ್ಪಣೆಮಾಡಿದಂತೆ ಮಾಯಾತಲೆಯನ್ನು ತೆಗೆದುಕೊಂಡುಹೋಗಿ ದೇವಿಯರ ಮುಂದಿರಿಸಿದನು. ಅದನ್ನು ಕಂಡು ನೆಲಕ್ಕುರುಳಿ ಜೀವವನ್ನು ಬಿಡಲು ಬಯಸಿದರು. ಇದಕ್ಕೆ ಏನು ಉತ್ತರ ಕೊಡೋಣ. ಇನ್ನು ಅವರೊಡನೆ ಮಾತನಾಡಲು ಅವಕಾಶ ಕಾಣದೆ ಬಂದೆ. ಇದು ವಿಷಯ" ಎಂದು ವಿದ್ಯುಜ್ಜಿಹ್ವ ಕೈಮುಗಿದುಕೊಂಡು ಹೇಳಿದ. ೨೯. ಮೂರ್ಛಾಸರ್ಪದ ವಿಷವು ಗರುಡಧ್ವಜ ಶ್ರೀರಾಮನ ನಾಮೋಚ್ಚಾರಣೆಯಿಂದ ಇಳಿಯಲು ಸೀತೆ ದುಃಖದಿಂದ ಕಣ್ತೆರೆದಳು, ವಿಶಾಲನೇತ್ರಗಳ, ಅಗಲವಾದ ಎದೆಯ, ಸಾಲವೃಕ್ಷದಂಥ ತೋಳುಗಳ ನೀಲಮೇಘಶ್ಯಾಮನನ್ನು ನೆನೆದು ಶೋಕಿಸಿದಳು. ೩೦. ಸೀತೆ ಮಾಯಾತಲೆಯ ಹಣೆಗೆ ತನ್ನ ಹಣೆಯನ್ನು ತಿಕ್ಕಿದಳು, ಎರಡು ಕೆನ್ನೆಗಳಿಗೂ ಮುತ್ತಿಟ್ಟಳು, ದೃಷ್ಟಿಸಿ ನೋಡಿದಳು, ಮೈದೂಗಿದಳು, ಪ್ರೀತಿಯ ಮಾತುಗಳಿಂದ ಮುದ್ದಿಸಿದಳು, ಮುದ್ದಾಡುತ್ತ ಅತಿಶಯಪ್ರೇಮದ ಆಸೆಯಿಂದ ಕಳವಳಗೊಂಡು ಮೈಮರೆತು ತಲೆಯನ್ನು ಅಪ್ಪಿಕೊಂಡಳು. ೩೧. "ಇವನು ನನ್ನ ಪತಿಯಾಗದಿರನು, ನನ್ನ ಪ್ರೇಮರಸ ತುಂಬಿದ ಮನ್ಮಥನಾಗದಿರನು, ನನ್ನ ಪ್ರೀತಿಪಾತ್ರ ಪತಿಯಾಗದಿರನು. ಸರಮೆ, ನನಗೆ ಹೀಗಾಗಬೇಕಾಗಿತ್ತೆ ? ತ್ರಿಜಟೆ, ಕೇಳು. ನನಗೆ ಪಾಪವು ತಗುಲಿತೇ ?"

ನೋತೆನೇ ಪೂರ್ವದಲಿ ವೈಧ । ವ್ಯಾತಿಸಯು ದುಷ್ಕೃತವನಕಟಾ
ಖ್ಯಾತಿಯುಳಿದುದೆ ತನ್ನ ಘನ ಸೌಭಾಗ್ಯಲಕ್ಷಣದ
ಏತಕೆನ್ನನು ಸೃಜಿಸಿದನೊ ವಿಧಿ । ಘಾತಕಿಯು ನಿಜಪತಿವಿಯೋಗದ
ಪಾತಕಿಯುನಕಟಕಟೆನುತ ಬಾಯ್ಬಿಟ್ಟಳಾ ಸೀತೆ ೩೭

ಜರಿದುದೇ ಮನುಪೀಳಿಗೆಯು ಸುರ । ಗಿರಿ ದಿಲೀಪಾನ್ವಯುದ ಸುರತರು
ಮುಱಿದುದೇ ರಘುವಂಶವಾರಿಧಿ ಬಱಿತುದೇಯಕಟ
ಸರಿದುದೇ ಕಾಕುತ್ಸ್ಥಕುಲದು । ಬ್ಬರದ ಸಿರಿ ರಘುವಂಶದಗ್ಗದ
ತರಣಿಮಂಡಲವಸ್ತಮಿಸಿದುದೆಯೆಂದಳಾ ಸೀತೆ ೩೨

ಪಱಿವುತಿದೆಯರಿಸಿನದ ಸಿರಿ ಸೀ । ವರಿಸುತಿದೆ ಸೀಮಂತದೊಳುಹಂ
ತರಿಸುತಿದೆ ಕಾಡಿಗೆಯು ಗಾಡಿಗತನದ ಸೌಭಾಗ್ಯ
ಮುಱಿವುತಿದೆ ಮೂಗುತಿಯು ಬೆಳಗೋ । ಸರಿಸುತಿದೆ ಮುತ್ತೈದೆತನವೆಲೆ
ಸರಮೆ ಕಳುಹೌ ಬೇಗ ಪತಿಯೆಡೆಗೆಂದಳಾ ಸೀತೆ ೩೪

ಜೀವವನು ಹಿಡಿದಿರ್ದೆನಾ ರಾ । ಜೀವನೇತ್ರನ ನೆರೆದ ಭರದಲಿ
ಜೀವವಿದು ತಾನಿದ್ದು ಫಲವೇನೀ ಜಗತ್ತಿನಲಿ
ಜೀವವಿದನೆಲೆ ಸರಮೆ ಕೇಳ್ ಮ । ಜ್ಜೀವಿತೇಶನ ಬಳಿಗೆ ಬಿಡುವೆನು
ಸಾವುಪಾಯುವ ಹೇಳು ತನಗೆನುತಳಲಿದಳು ಸೀತೆ ೩೫

ಎಂದಳು ಸೀತೆ. ೩೭. "ನಾನು ಗಂಡನನ್ನು ಕಳೆದುಕೊಳ್ಳುವಂಥ ಪಾಪಕಾರ್ಯ ವನ್ನು ಹಿಂದಿನಜನ್ಮದಲ್ಲಿ ಆಚರಿಸಿದ್ದನೇ ? ಅಯ್ಯೋ, ನನ್ನ ಮುತ್ತೈದೆತನದ ಲಕ್ಷಣ ನಾಶವಾಯಿತೆ ? ಅಯ್ಯೋ, ಕೊಲೆಪಾತಕಿಯಾದ, ಪತಿಯ ಮರಣಕ್ಕೆ ಕಾರಣ ಳಾದ ಈ ಪಾಪಿಯನ್ನು ಬ್ರಹ್ಮನು ಏತಕ್ಕೆ ಸೃಷ್ಟಿಸಿದನೋ ?" ಎಂದು ಸೀತೆ ಅತ್ತಳು. ೩೩. "ಮನುವಂಶದ ಮೇರುಪರ್ವತವು ಕುಸಿದುಬಿದ್ದಿತೇ ? ದಿಲೀಪವಂಶದ ಕಲ್ಪ ವೃಕ್ಷವು ಮುರಿದುಬಿತ್ತೇ ? ಅಯ್ಯೋ, ರಘುವಂಶಸಾಗರವು ಬತ್ತಿಹೋಯಿತೇ ? ಕಾಕುತ್ಸ್ಥವಂಶದ ಸಂಪತ್ತು ನಾಶವಾಯಿತೇ ? ರಘುವಂಶಸೂರ್ಯಬಿಂಬವು ಮುಳು ಗಿತೇ ?" ಎಂದು ಸೀತೆ ಹಲುಬಿದಳು. ೩೪. "ನನ್ನ ಅರಿಶಿಣದ ಭಾಗ್ಯ ತುಂಡಾಗು ತ್ತಿದೆ, ನನ್ನ ಬೈತಲೆಯ ಸೊಗಸು ಜುಗುಪ್ಸೆಗೊಳ್ಳುತ್ತಿದೆ, ಕಣ್ಣಿನ ಕಾಡಿಗೆಯ ಚೆಲುವು ಮಾಯವಾಗುತ್ತಿದೆ, ಮೂಗುತಿಯ ಪ್ರಕಾಶ ಮುರಿದುಹೋಗುತ್ತಿದೆ, ನನ್ನ ಮುತ್ತೈದೆ ತನವು ಹಿಂಜರಿಯುತ್ತಿದೆ. ಸರಮೆ, ಬೇಗ ನನ್ನನ್ನು ನನ್ನ ಪತಿಯ ಬಳಿಗೆ ಕಳುಹಿಸು". ಎಂದಳು ಸೀತೆ. ೩೫. "ಕಮಲಲೋಚನ ರಾಮನನ್ನು ಕೂಡುವ ಆಸೆಯಿಂದ ಇದು ವರೆಗೆ ಜೀವವನ್ನು ಹಿಡಿದುಕೊಂಡಿದ್ದೆ. ಇನ್ನು ಈ ಜಗತ್ತಿನಲ್ಲಿ ಜೀವವಿದ್ದು ಫಲ ವೇನು ? ನನ್ನ ಜೀವದೊಡೆಯನ ಬಳಿಗೆ ನನ್ನ ಜೀವವನ್ನು ಕಳಿಸುತ್ತೇನೆ. ಸರಮೆ,

ಶಿರವಿದಹುದಲ್ಲೆಂಬುದನು ನಿ । ರ್ಧರಿಸಲಱಿಯದೆ ನಟ್ಟ ಬೆಱಗಿನ
ಕರದ ಕದಪಿನ ಕಂಬನಿಯ ಕಾಹುರದ ಕಂಪನದ
ಕೊರಳ ಬಿಕ್ಕುಳಿನಕ್ಕಿಗಳಲಾ । ಸರಮೆ ತ್ರಿಜಟೆಯರಿದ್ದು ಬಳಿಕಱಿ
ದರು ವಿವರ್ಣವ ಕಂಡು ಮಾಯಾಕೃತಿಯ ಮಸ್ತಕವ ೩೬

ಬಿಸುಡು ಬಿಸುಡೆಲೆ ದೇವಿ ಶಿರವದು । ವಸುಮತೀಶನದಲ್ಲ ಮುಟ್ಟದಿ
ರಸುರಕೃತ್ಯದ ಕೃತಕವಿದು ಬಿಸುಡೆನುತ ಹರಿತಂದು
ಶಶಿಮುಖಿಯ ಸಿರಿಕರದ ಶಿರವನು । ಬಿಸುಡಿಸಿದರಳಿದಳಕಪಂಗ್ತಿಯ
ಪಸರಿಕೆಯ ನೇವರಿಸಿ ನಿಲಿಸಿದರಳಲನವನಿಜೆಯ ೩೭

ಮಱೆಯ ಮಾಯಾಶಿರವಿದೀಗಿದು । ಮಱುಗಬೇಡೆಲೆ ತಾಯೆ ನಿನ್ನಯ
ಹೆಱೆಯ ಹಲ್ಲಿಯ ಬೈತಲೆಯ ಸೌಭಾಗ್ಯಕಳಿವುಂಟೆ
ಅಱಿಯಬಹುದೆಮ್ಮವರ ಕಪಟದ । ಕಱುಬುತನವಂಜದಿರೆನುತ ತೂ
ಪಿಱಿದು ಹರಸಿದರೈದೆಯಾಗೆಂದವನಿನಂದನೆಯ ೩೮

ನಿಮಗಿದೇಕೆಲೆ ದೇವಿ ಚಿತ್ತ । ಭ್ರಮೆ ರಘುಕ್ಷಿತಿನಾಥ ಮನುಜನೆ
ಕಮಲನಾಭ ಕಣಾ ನಿಧಾನಿಸೆ ನೀನು ನರಸತಿಯ
ಉಮೆಯವೊಲು ಸೌಭಾಗ್ಯತರ ಸು । ಕ್ರಮಿಸಿಹುದನೇನಱಿಯದೇ ಜಗ
ವಮಲತೆಯನಪ್ಪುವುದೆ ಕಲ್ಮಷವೆಂದಳಾ ತ್ರಿಜಟೆ ೩೯

ನನಗೆ ಸಾಯುವ ಉಪಾಯವನ್ನು ಹೇಳು" ಎಂದು ಶೋಕಿಸಿದಳು ಸೀತೆ. ೩೬. ಇದು ನಿಜವಾದ ರಾಮನ ತಲೆಯೋ ಅಲ್ಲವೋ ಎಂಬುದನ್ನು ನಿಶ್ಚಯಿಸಲು ತಿಳಿಯದೆ ಸರಮೆ ತ್ರಿಜಟೆಯರು ಭಯಗೊಂಡು ಕೆನ್ನೆಗೆ ಕೈಸೇರಿಸಿ ಕಣ್ಣೀರಿನ ಧಾರೆಯನ್ನು ಹರಿಸುತ್ತ ನಡುಗುತ್ತ ಬಿಕ್ಕಳಿಸಿ ಅಳುತ್ತ ಇದ್ದರು. ಅನಂತರ ಆ ತಲೆಯು ಬಣ್ಣಗೆಟ್ಟುದನ್ನು ಕಂಡು ಇದು ಮಾಯಾತಲೆಯೆಂಬುದನ್ನು ಅವರು ಅರಿತರು. ೩೭. "ಬಿಸಾಡು, ಬಿಸಾಡು ದೇವಿ, ಆ ತಲೆಯನ್ನು. ಅದು ರಾಮನದಲ್ಲ, ಅದನ್ನು ಮುಟ್ಟಬೇಡ. ರಾಕ್ಷಸರು ಸೃಷ್ಟಿಸಿದ ಮಾಯೆಯಿದು, ಎಸೆದುಬಿಡು" ಎನ್ನುತ್ತ ಓಡಿಬಂದು ಸರಮೆ ತ್ರಿಜಟೆಯರು ಸೀತೆಯ ಸುಂದರ ಕೈಗಳಲ್ಲಿದ್ದ ತಲೆಯನ್ನು ಬಿಸಾಡಿಸಿದರು. ಅನಂತರ ತುಂಬಿಯಂತೆ ಹೊಳೆಯುವ ಮುಂಗುರುಳುಗಳನ್ನು ಸವರಿ ಅವಳ ದುಃಖವನ್ನು ನಿಲ್ಲಿಸಿದರು. ೩೮. "ಇದು ಮೋಸದ ಮಾಯಾತಲೆ ದುಃಖಿಸಬೇಡ ತಾಯಿ, ನಿನ್ನ ಕಿವಿಯ ಆಭರಣದ ಮತ್ತು ಬೈತಲೆಯ ಸೌಭಾಗ್ಯಕ್ಕೆ ಕುಂದುಂಟೆ. ನಮ್ಮ ರಾಕ್ಷಸರ ಮೋಸದ ಅಸೂಯೆಯನ್ನು ಅರ್ಥಮಾಡಿಕೊಳ್ಳಬಹುದು, ಹೆದರಬೇಡ" ಎಂದು ನುಡಿದು ಊದಿ ಮಂತ್ರಹಾಕಿ ದೃಷ್ಟಿ ತೆಗೆದು 'ಮುತ್ತೈದೆಯಾಗು' ಎಂದು ಹರಸಿದರು. ೩೯. "ದೇವಿ, ನಿಮಗೇಕೆ ಈ ಮನೋಭ್ರಾಂತಿ. ರಘುಪತಿಯು ಮಾನವನೆ ? ಅವನು ಕಮಲನಾಭನಲ್ಲವೇ, ಯೋಚಿಸಿದರೆ ನೀನು ಮಾನವನ ಹೆಂಡತಿಯೆ ? ಪಾರ್ವತಿಯಂತೆ ನೀನು ಸೌಭಾಗ್ಯವತಿ ಎಂಬುದನ್ನು ಜಗತ್ತು ತಿಳಿಯದೆ, ಪಾಪವು ಪವಿತ್ರತೆಯನ್ನು ಅಪ್ಪು

ತೀರಿತಾ ಸಮಯದಲಿ ರಜನಿ ವಿ । ಹಾರಿಸಿದುದೆಳೆವೆಳಗು ಕಪಿಭಟ
ರಾರುಭಟೆ ತಲೆಕೆಳಗೆ ಮಾಡಿತು ಜಗದ ಜೋಡಿಗಳ
ನಾರಿ ಚಿತ್ತೈಸಿನ್ನು ತೊರವೆಯ । ನಾರಸಿಂಹನು ಹದುಳಿಗನು ಮನ
ದಾರಟೆಯು ಬಿಡಿಯೆಂದು ಸಂತೈಸಿದರು ಜಾನಕಿಯ ೪೦

ವುದೇ ?" ಎಂದಳು ತ್ರಿಜಟೆ. ೪೦. ಆ ಸಮಯಕ್ಕೆ ಕತ್ತಲೆ ಕಳೆಯಿತು. ಮುಂಜಾವದ ಬೆಳಕು ಹರಡಿತು. ಕಪಿವೀರರ ಗರ್ಜನೆಯು ಜಗತ್ತುಗಳನ್ನು ತಲೆಕೆಳಗುಮಾಡಿತು. "ಸೀತೆ ನೋಡಿ. ಶ್ರೀರಾಮನು ಕ್ಷೇಮವಾಗಿದ್ದಾನೆ. ಮನಸ್ಸಿನ ಕೋಟಲೆಯನ್ನು ಬಿಡಿ" ಎಂದು ಸರಮೆ ತ್ರಿಜಟೆಯರು ಸೀತೆಯನ್ನು ಸಮಾಧಾನಪಡಿಸಿದರು.

# ಹದಿಮೂರನೆಯ ಸಂಧಿ

ಸೂಚನೆ॥ ವೀರ ವಾನರಬಲದ ಬಲು ಜ । ಜ್ಝಾರ ರಕ್ಕಸದಳದ ಧರಧುರ
ದಾರುಭಟೆಯುಂಜಿಸಿತು ದೇವಾಸುರ ನರೋರಗರ

ಕೇಳಿದೈ ಮನುವಂಶಲಕ್ಷ್ಮೀ । ಲೋಲಸುತ ನಿಮ್ಮಯ ನಿಮಿಕ್ಷಿತಿ
ಪಾಲಜೆಯ ಬೆದಱಿಸಿದ ಶಿರವಾ ಸರಮೆಯಿಂ ಬಳಿಕ
ಜಾಳಿಸಿತು ಜಾಳಿಸಿತು ತಮ ತಂ । ಗಾಳಿ ತೀಡಿತು ತಡೆತಡೆದು ತಾ
ರಾಳಿ ತೊಱೆದವು ತನುರುಚಿಯ ತಾವರೆಯ ನಗೆಗಳಲಿ ೧

ಜಲಧಿಶಯನನ ನಾಭಿಯಂಬುಜ । ದಲರಶೋಣಪರಾಗರುಚಿತ
ಜ್ವಲವನೊಡೆಬಗಿದಂಬರವ ಬಿಂಬಿಸಿದುದೆಂಬಂತೆ
ಥಳಥಳಿಸಿತಿನಬಿಂಬವಾಖಿಂ । ಡಲ ದಿಗಂತದಲಬ್ಬರಣೆ ಪಡಿ
ತಳಿಸಿದುದು ಪರಬಲವನೀ ಕಪಿಬಲ ಮಹಾರ್ಣವವ ೨

ತಲೆಕೆಳಗು ಮಾಡಿತ್ತು ಸೇನಾ । ಜಲನಿಧಿಯ ಬೊಬ್ಬಾಟ ಖಳರ
ಟ್ಟಳೆಗಳಲಿ ಮುಱಿಮುಱಿದು ಕೊತ್ತಳದಾಳುವೇರಿಯಲಿ
ನಿಲಿಸಿದರು ಕೈದುಗಳ ಕರಿಸಂ । ಕುಲವ ಕುದುರೆಯ ತೇರ ಸುಭಟಾ
ವಳಿಗಳೊಗ್ಗಿಯ್ಯೂರ ಹೊಱವಳಯದಲಿ ನಿಮುಷದಲಿ ೩

ಸೂಚನೆ॥ ವಾನರಸೈನ್ಯದ ಮಹಾವೀರರ ಮತ್ತು ರಾಕ್ಷಸಸೈನ್ಯದ ಭಟರ ಅತಿಶಯವಾದ ಆರ್ಭಟವು ದೇವತೆಗಳು ರಾಕ್ಷಸರು ಮಾನವರು ಮತ್ತು ಉರಗರನ್ನು ಹೆದರಿಸಿತು. ೧. ಕೇಳಿದೆಯಾ ಮನುವಂಶಲಕ್ಷ್ಮೀಪತಿಯ ಮಗನೇ, ನಿಮ್ಮ ನಿಮಿ ಭೂಪಾಲನ ಮಗಳಾದ ಸೀತೆಯನ್ನು ಹೆದರಿಸಿದ ಮಾಯಾತಲೆಯು ಸರಮೆಯಿಂದ ಅದೃಶ್ಯವಾಯಿತು. ಕತ್ತಲೆಯು ಕಳೆಯಿತು. ತಂಗಾಳಿ ಬೀಸಿತು. ತಾವರೆಗಳು ಅರಳಿ ನಗುತ್ತಿರುವಂತೆ ನಕ್ಷತ್ರಗಳು ತಮ್ಮ ದೇಹಕಾಂತಿಯನ್ನು ಸ್ವಲ್ಪಸ್ವಲ್ಪವಾಗಿ ಕಳೆದು ಕೊಳ್ಳುತ್ತ ಹೋದವು. ೨. ಕ್ಷೀರಸಾಗರದಲ್ಲಿ ಪವಡಿಸಿದ ವಿಷ್ಣುವಿನ ನಾಭಿಕಮಲದ ಹೂವಿನ ಕೆಂಪು ಪರಾಗದಿಂದ ರಂಜಿತವಾದ ಪ್ರಕಾಶವನ್ನು ಗೋರಿಕೊಂಡು ಬಂದು ಆಕಾಶದಲ್ಲಿ ಮೂಡಿತೋ ಎಂಬಂತೆ ಪೂರ್ವದಿಗಂತದಲ್ಲಿ ಸೂರ್ಯಬಿಂಬವು ಹೊಳೆಯಿತು. ಶತ್ರುಸೈನ್ಯದಲ್ಲೂ ಕಪಿಸೈನ್ಯಸಾಗರದಲ್ಲೂ ಭಾರಿ ಅಬ್ಬರವೆದ್ದಿತು. ೩. ಲಂಕೆಯ ದುರ್ಗದ ಅಟ್ಟಣೆಗಳ ಮೇಲೆ ಸೈನ್ಯಸಾಗರದ ಬೊಬ್ಬೆಯು ರಾಕ್ಷಸರನ್ನು ತಲೆಕೆಳಗು ಮಾಡಿತು. ಕೋಟೆಯ ಮೇಲಿನ ಕೊತ್ತಳದ ಗೋಡೆಯ ಬಳಿ ಆಯುಧಗಳನ್ನು ತಂಡತಂಡವಾಗಿ ಇಟ್ಟರು. ಆನೆ, ಕುದುರೆ ಮತ್ತು ರಥಗಳ ವೀರರು ನಗರದ ಹೊರವಲಯದಲ್ಲಿ ಬಂದು

ಇತ್ತನೋಲಗವನು ಬಳಿಕ್ಕ ಖ । ಳೋತ್ತಮನು ಕಳಕಳದ ಕಡುಹಿನ
ಚಿತ್ತಚಲನೆಯು ಚಲಿಸಿದಂತಸ್ತಾಪವಿಹ್ವಲದ
ಹೊತ್ತಿ ಹೊಗೆವ ಸರೋಷಕದ ಕೆಂ । ಪೊತ್ತಿದಕ್ಷಿಯ ಸಂತಸದ ರಸ
ಬತ್ತಿದಾನನದಸುರನಿದ್ದನು ವಿಷಮಚಿಂತೆಯಲಿ ೪

ಬಂದುದೋಲಗಕಾ ಪ್ರಹಸ್ತ ಪು । ರಂದರಾರಿ ಪ್ರಮುಖ ಸಚಿವರು
ನಂದನರು ನಾಯಕರು ರಾವುತರಥಿಕರತಿಬಲರು
ಒಂದುಳಿಯೆ ಶತಕೋಟಿ ಮಣಿಗಣ । ವೃಂದದಮಲಕಿರೀಟವರ್ಧನ
ರಂದಿನೋಲಗವೆಸೆದುದುಗ್ರ ಸಮಗ್ರಸಾರವಲಿ ೫

ಹೊಗರೊಗುವ ದಾಡೆಗಳ ದಳ್ಳಿಸು । ವಗಡುವೋಜೆಯ ಕೆಂಪಡರ್ದ ವಿಸಾ
ಸೆಗಳ ಕೆಂಗಣ್ಣುಗಳ ಮುಪ್ಪುರಿಗೊಂಡ ಹುಬ್ಬುಗಳ
ನೆಗೆದ ರೋಮಾವಳಿಯ ಬಿಗುಹಿನ । ತಗಹಿನಗ್ಗದ ಖಂಡೆಯದ ಕೈ
ನೆಗಹುಗಳ ರಕ್ಕಸರನೀಕ್ಷಿಸಿ ನುಡಿದನಸುರೇಂದ್ರ ೬

ಹಿಡಿದು ದುರ್ಗದ ಕೂಡೆ ಕದನವ । ನಡೆಸಿದರು ಭಾರ್ಗವನ ಖಾತಿಗೆ
ಕಡಲು ಮೈತೆಗೆವಂತೆ ತೆಗೆದುದು ನಮ್ಮ ಪರಿವಾರ
ಸಡಿಲಿತೆಮ್ಮಗ್ಗಳಿಕೆ ಕೋಟೆಯ । ನೊಡೆಬಡಿದರವರಿಂದಿನಾಜಿಯ
ತೊಡಕಿಗೇನನು ಕಂಡಿರೆಂದನು ಮಂದಹಾಸದಲಿ ೭

ಸೇರಿದರು. ೪. ರಾಕ್ಷಸೋತ್ತಮ ರಾವಣನು ಅನಂತರ ರಾಜಸಭೆಯನ್ನು ನಡೆಸಿದನು. ಒಳಗಿನ ಬೇಗೆಯಿಂದ ವ್ಯಾಕುಲಗೊಂಡು ಸಂಕಟಪಡುತ್ತಿದ್ದ ರಾವಣನ ಮನಸ್ಸು ಚಂಚಲವಾಗಿತ್ತು. ಅವನಲ್ಲಿ ಕೋಪವು ಹತ್ತಿ ಹೊಗೆಯಾಡುತ್ತಿತ್ತು; ಕಣ್ಣುಗಳು ಕೆಂಪಡರಿದ್ದವು. ಹರ್ಷ ಕಳೆದುಕೊಂಡ ಮುಖವು ಬತ್ತಿಹೋಗಿತ್ತು. ಅವನು ಅಸಾಧ್ಯ ಚಿಂತೆಯಲ್ಲಿ ಮುಳುಗಿದ್ದನು. ೫. ಪ್ರಹಸ್ತ, ಇಂದ್ರಜಿತು, ಮುಖ್ಯ ಸಚಿವರುಗಳು, ರಾವಣನ ಕುಮಾರರು, ನಾಯಕರು, ಮಹಾಬಲಶಾಲಿಗಳಾದ ರಾವುತರು ಮತ್ತು ರಥಿಕರು, ವಜ್ರವೈಡೂರ್ಯಾದಿ ಆಭರಣಗಳಿಂದಲಂಕೃತರಾದ ತೊಂಬತ್ತೊಂಬತ್ತು ಕೋಟಿ ರಾಜರುಗಳು ರಾವಣನ ಸಭೆಗೆ ಬಂದರು. ಸಮಸ್ತ ವೀರರ ಸಾರವೇ ಅಲ್ಲಿ ಸೇರಿತ್ತು. ೬. ಹೊಳೆಯುವ ಕೋರೆಹಲ್ಲುಗಳ, ತುಂಟತನದ ಉರಿಮೋರೆಯ, ಕೆಮ್ಮೀಸೆಗಳ, ಕೆಂಗಣ್ಣುಗಳ, ಹುರಿಗೊಂಡ ಹುಬ್ಬುಗಳ, ಕೂದಲುಗಳು ಎದ್ದುನಿಂತ ರಾಕ್ಷಸರು ಸಾಲಾಗಿ ಗತ್ತಿನಿಂದ ಖಡ್ಗಗಳನ್ನು ಹಿಡಿದು ಕೈಯೆತ್ತಿ ನಿಂತಿರುವುದನ್ನು ನೋಡಿ ರಾವಣನು ಅವರನ್ನು ಕುರಿತು ಮುಂದಿನಂತೆ ನುಡಿದನು. ೭. "ಶತ್ರುಸೈನಿಕರು ದುರ್ಗವನ್ನು ಮುತ್ತಿ ಯುದ್ಧ ಮಾಡಿದರು. ಪರಶುರಾಮನ ಕೋಪಕ್ಕೆ ಸಮುದ್ರವು ಹಿಂದಕ್ಕೆ ಸರಿಯುದಂತೆ ನಮ್ಮ ಸೈನ್ಯವು ಹಿಮ್ಮೆಟ್ಟಿತು. ನಮ್ಮ ಶ್ರೇಷ್ಠತೆ ಕುಗ್ಗಿತು. ಕೋಟೆಯನ್ನು ಅವರು ಒಡೆದುಹಾಕಿದರು. ಇಂದಿನ ಯುದ್ಧದ ಸಮಸ್ಯೆಗೆ ಏನು ದಾರಿಯನ್ನು ಕಂಡಿರಿ" ಎಂದು ರಾವಣನು ಮುಗುಳುನಗುತ್ತ

ಏತಕೀಯನುಮಾನ ರಿಪುಗಳೊ । ಳಾತು ಕಾದುವೆನಿಂದು ಕದನಕೆ
ಭೂತನಾಥನೆ ನಿಲಲಿ ಗೆಲುವೆನು ಚಿಂತೆ ಬೇಡಿದಕೆ
ತಾತ ಚಿತ್ತೈಸಿಂದು ರಣದಲಿ । ಸೋತು ನಗರವ ಹೊಕ್ಕೆನಾದರೆ
ಮಾತೆ ಮಂಡೋದರಿಗೆ ನಿಮಗಾ ತನುಜನಲ್ಲೆಂದ ೮

ಹಿಡಿಯಲೇಕಜನಿತ್ತ ರಣದು । ಗ್ಗಡದ ಶರಕೋದಂಡವನು ಕೈ
ವಿಡಿಯಲೇಕೀ ಬಾಹುವಿಕ್ರಮವಿಜಯಭಾಮಿನಿಯ
ಕಡುಹದೇಕಿಂದ್ರಾರಿಯೆಂಬವ । ಗಡದ ಬಿರುದಿನ ಸುರರ ಹಾಹೆಯ
ತೊಡರದೇಕೆಲೆ ಜೀಯ ಬೆಸಸಿನ್ನೇಕೆ ತಡವೆಂದ ೯

ಮುಗಿಲ ಮನುಜನ ಹದ್ದು ಹಂಸೆಯ । ತಗರ ಕೋಣನನೆತ್ತನೆರಳೆಯ
ನೆಗಳನೇರಿದ ನಿರ್ಜರಬ್ರುವರಿಂದು ತನಗಿದಿರೆ
ನೆಗಳಿದೀ ನರಮೃಗದ ಮೃದುಸಂ । ಯುಗವ ಕೇಳದಿರರಸ ಕೊಡು ಕಾ
ಳಗಕೆ ನೇಮವನೆಂದು ಶಕ್ರಾರಾತಿ ನಿಂದಿರ್ದ ೧೦

ಉಬ್ಬಿದನು ಖಳ ಕರ್ಣ ಸುಖಮಯ । ದುಬ್ಬರದ ನುಡಿಗಳಿಗೆ ತನುಜನ
ತಬ್ಬಿದನು ತುಳುಕಾಡುವಾನಂದಾಶ್ರುಪೂರದಲಿ
ಜಬ್ಬೆಯಾಗಿಹ ಹರಿಬವಿದು ನಿ । ನ್ನೊಬ್ಬನಲಿ ಹುರಿಯೇರುವದು ಮು
ತ್ತೊಬ್ಬರೆಸಗುವರುಂಟೆ ನಿನ್ನವೊಲಾಪ್ತರೆನಗೆಂದ ೧೧

ಪ್ರಶ್ನಿಸಿದನು. ೮. "ಈ ಅನುಮಾನವೇತಕ್ಕೆ ? ಶತ್ರುಗಳನ್ನು ಎದುರಿಸಿ ಯುದ್ಧ ಮಾಡುತ್ತೇನೆ, ಇಂದಿನ ಯುದ್ಧಕ್ಕೆ ಭೂತನಾಥನೇ ನಿಲ್ಲಲಿ ಜಯವನ್ನು ಸಂಪಾದಿಸುತ್ತೇನೆ, ಇದಕ್ಕೆ ಚಿಂತೆ ಬೇಡ. ತಂದೆ ಕೇಳು, ಇಂದು ಯುದ್ಧದಲ್ಲಿ ಸೋತು ಲಂಕಾನಗರವನ್ನು ಪ್ರವೇಶಿಸಿದ್ದೇ ಆದರೆ ನಾನು ನಿಮಗೂ ಮಂಡೋದರಿಗೂ ಮಗನಲ್ಲ" ಎಂದು ಇಂದ್ರಜಿತು ಹೇಳಿದನು. ೯. "ಬ್ರಹ್ಮನು ಕೊಟ್ಟ ಶ್ರೇಷ್ಠ ಬಾಣಬಿಲ್ಲುಗಳನ್ನು ನಾನೇಕೆ ಹಿಡಿಯಬೇಕು ? ತೋಳ್ಬಲದ ವಿಜಯಲಕ್ಷ್ಮಿಯನ್ನು ನಾನೇಕೆ ಕೈಹಿಡಿಯಬೇಕು ? ನನಗೆ ಇಂದ್ರಾರಿ ಎಂಬ ಪ್ರಚಂಡ ಬಿರುದೇಕೆ ? ದೇವತೆಗಳ ಬಿರುದಿನ ಬಳೆಯ ಅಲಂಕಾರವೇಕೆ ನನಗೆ ? ಸ್ವಾಮಿ, ಅಪ್ಪಣೆಕೊಡಿ ; ಇನ್ನೇಕೆ ತಡ" ಎಂದು ಇಂದ್ರಜಿತು ಕೇಳಿದನು. ೧೦. "ಮೇಘವಾಹನ ಇಂದ್ರ, ನರವಾಹನ ಕುಬೇರ, ಗರುಡವಾಹನ ವಿಷ್ಣು, ಹಂಸವಾಹನ ಬ್ರಹ್ಮ, ಟಗರುವಾಹನ ಅಗ್ನಿ, ಕೋಣವಾಹನ ಯಮ, ವೃಷಭವಾಹನ ಶಿವ, ಜಿಂಕೆಯವಾಹನ ವಾಯು ಮೊದಲಾದ ಮುಖ್ಯ ದೇವತೆಗಳು ನನಗೆ ಎದುರೇ ? ಈಗ ಎದುರಿಸಿರುವ ಈ ನರಮೃಗದ ಮೆತ್ತನೆಯ ಯುದ್ಧವನ್ನು ಹೇಳಬೇಡ ಪ್ರಭು. ಯುದ್ಧಕ್ಕೆ ಅಪ್ಪಣೆ ಕೊಡು" ಎಂದು ಇಂದ್ರಜಿತು ಎದ್ದುನಿಂತನು. ೧೧. ಕಿವಿಗಳಿಗೆ ಹಿತಕರವಾದ ಹುರುಪಿನ ಮಾತುಗಳನ್ನು ಕೇಳಿ ರಾವಣನು ಹರ್ಷಿತನಾದನು. ಸಂತೋಷದ ಕಣ್ಣೀರು ಹರಿಸುತ್ತ ಮಗನನ್ನು ತಬ್ಬಿಕೊಂಡನು. "ದುರ್ಬಲವಾದ ಈ ಕಾರ್ಯಕ್ಕೆ ನಿನ್ನೊಬ್ಬನಿಂದ ಹುರುಪೇರಿದೆ.

ತರಿಸಿ ಬಳಿಕಾಭರಣ ದಿವ್ಯಾಂ । ಬರವಿಲೇಪನದಿಂದ ವಿುಗೆ ವಿ
ಸ್ತರಿಸಿ ಕೊಟ್ಟನು ಕಾಳಗಕೆ ಕರ್ಪುರದ ವೀಳೆಯುವ
ಪರಸಿ ಕಳುಹಿದನಖಿಳಸೇನೆಯ । ಧುರಕೆ ಹೇಳಿದು ಸುರನಿಕರಸಂ
ಹರಣ ಶಕ್ರಾರಾತಿಯುನು ಬಳಿಕಾ ದಶಗ್ರೀವ ೧೨

ಆಯಿದುತ್ತಮ ತೇರುಗಳ ವಾ । ನಾಯುಜಂಗಳನುನ್ಮದದ ಷ
ಷ್ಠಾಯಿನೀದಂತಿಗಳ ದುರ್ಜಯ ರಣಧುರಂಧರರ
ಆಯುತದ ಚತುರಂಗವನು ವ । ಜ್ರಾಯುಧಾಂತಕ ನೆರಹಿದನು ರಘು
ರಾಯು ರಣಕೇಳ್ಸೂಳಜಿಕ್ಷೋಹಿಣಿಯು ಸೈನಿಕವ ೧೩

ಕಾಳಕೂಟದ ಕಡಲ ಕಟ್ಟೆ ವಿ । ತಾಳಿಸಿತೊ ಶಿವಯೆನಲು ಸತಿ ಹೊಗೆ
ವಾಲಿಗಳ ಹೊಡಕರಿಸುವತಿಶಯು ವಿಕೃತ ವಿಗ್ರಹದ
ಕಾಳಿಕೆಯು ಕುಡಿವೆಳಗುಗಳ ದಂ । ಷ್ಟ್ರಾಳಿಗಳ ರಾಕ್ಷಸವರೂಥಿನಿ
ಕಾಳಗಕೆ ಹೊಜಿವಂಟುದಳುಕೆ ಸಮಸ್ತ ಭುವನಚಯ ೧೪

ನಳಿನಜಾಂಡದ ನೆತ್ತಿ ಬಿರಿಯುಲು । ವೊಳಗಿದವು ರಣವಾದ್ಯತತಿ ದಿಗು
ವಳಯು ಗುಮ್ಮಿಡೆ ಗಜರಿದವು ಶತಕೋಟಿಸಂಖೆಯುಲಿ
ದಳದ ಮುಂಭಾಗದಲಿ ಕಹಳಾ । ವಳಿಗಳಬ್ಬರಣೆಯುಲಿ ರಾಕ್ಷಸ
ತಿಲಕ ಶಕ್ರಾರಾತಿ ಹೊಜಿವಂಟನು ಪುರಾಂತರವ ೧೫

ನಿನ್ನಂತೆ ಆಪ್ತರಾದ ಮತ್ತೊಬ್ಬರು ನನಗಾಗುವರೇ ?" ಎಂದು ರಾವಣನು ಹೇಳಿದನು. ೧೨. ಅನಂತರ ರಾವಣನು ದಿವ್ಯವಾದ ಒಡವೆ ವಸ್ತ್ರ ಸುಗಂಧಗಳನ್ನು ತರಿಸಿ ಇಂದ್ರ ಜಿತುವಿಗೆ ಕೊಟ್ಟು ಯುದ್ಧಕ್ಕೆ ಕರ್ಪೂರದ ವೀಳೆಯವನ್ನು ಕೊಟ್ಟನು. ಸಮಸ್ತ ಸೈನ್ಯ ವನ್ನು ಕಾಳಗಕ್ಕೆ ಅಜ್ಞಾಪಿಸಿ ದೇವತೆಗಳನ್ನು ಸಂಹರಿಸಿದವನಾದ ಇಂದ್ರಜಿತುವನ್ನು ಹರಸಿ ಯುದ್ಧಕ್ಕೆ ಕಳುಹಿಸಿಕೊಟ್ಟನು. ೧೩. ಉತ್ತಮವಾದ ರಥಗಳನ್ನೂ, ಕುದುರೆ ಗಳನ್ನೂ, ಮದಿಸಿದ ಷಷ್ಠಾಯಿನೀ ಆನೆಗಳನ್ನೂ, ಜಯಿಸಲಸಾಧ್ಯರಾದ ಯುದ್ಧವೀರ ರನ್ನೂ ಒಳಗೊಂಡ ಏಳುನೂರು ಅಕ್ಷೋಹಿಣೀ ಚತುರಂಗಸೈನ್ಯವನ್ನು ರಾಮನ ಮೇಲಿನ ಯುದ್ಧಕ್ಕೆ ಇಂದ್ರಜಿತು ಕೂಡಿಸಿದನು. ೧೪. 'ಕಾಲಕೂಟವಿಷಸಮುದ್ರದ ಕಟ್ಟೆ ಮೀರಿ ಮೀರಿತೋ ಶಿವಶಿವ !' ಎನ್ನುವಂತೆ ಹೊಗೆಯುಗುಳುವ ಕಣ್ಣುಗಳ, ಹೊಳೆ ಯುವ ಕಪ್ಪುಬಣ್ಣದ, ಘೋರರೂಪಿನ, ಮೊನಚಾಗಿ ಬೆಳಗುವ ಕೋರೆಹಲ್ಲುಗಳ ರಾಕ್ಷಸಸೈನ್ಯವು ಯುದ್ಧಕ್ಕೆ ಹೊರಡಲು. ಸಮಸ್ತಲೋಕಗಳೂ ಹೆದರಿದವು. ೧೫. ಬ್ರಹ್ಮಾಂಡದ ನೆತ್ತಿ ಬಿರಿಯುವಂತೆ ನೂರುಕೋಟಿ ಸಂಖ್ಯೆಯ ರಣವಾದ್ಯಗಳು ದಿಗ್ವಲಯಗಳನ್ನು ವ್ಯಾಪಿಸುವ ಹಾಗೆ ಭೋರ್ಗರೆದವು. ಕಹಳೆಗಳು ಶಬ್ದಮಾಡುತ್ತಿರಲು

ಅಣೆದವೆದೆಗಳನಂಜಿಕೆಗಳೋ । ರಣದ ದಿಗುಪಾಲಕರ ಶಶಿ ದಿನ
ಮಣಿಯ ಕಾಲ್ದಡದಡಿಸಿದವು ಧ್ರುವಲೋಕಪರಿಯಂತ
ಮುಣುಗಿಸಿದುದು ಭಯಾಂಬುನಿಧಿ ರಾ । ವಣಿಯ ಗಮನಕೆ ಕೋಟಿಯುಗ ನೆಱೆ
ಜುಣುಗಿದವು ನಾ ಕಾಣೆನವರಲಿ ಸರಿಯನಿವಗೆಂದ ೧೬

ಸುರಪನಾಜ್ಞೆಯಲೊಡೆದವಖಿಳಾ । ಮರಪುರಂಗಳು ಕೂಡೆ ಬೈಚಿ
ಟ್ಟರು ಸುಧಾಕಲಶವನು ಸುರಧೇನುವನು ಸುರಮಣಿಯ
ಸರಕ ಸಂವರಿಸಿದರು ತೆರಳಿಚಿ । ದರು ಸರೋಜಜಪುರಿಗೆ ಸುರಸುಂ
ದರಿಯರನು ಸುರನಾಯಕರು ರಾವಣಿಯ ಗಮನದಲಿ ೧೭

ತೆಗೆದು ನಿಂದರು ನಿಮ್ಮವರು ಮು । ತ್ತಿಗೆಯನಿಪ್ಪತ್ತೈದು ಯೋಜನ
ದಗಲದವನಿಯ ವಿಂಗಡಿಸಿ ರಣರಂಗಮಂಡಲಕೆ
ನಗಮಹೀರುಹದೆತ್ತುಗೈಯಲಿ । ಗಗನವಿಟ್ಟೆಡೆಯಾಗೆ ಬಲಿದರು
ಬಗೆಗೊಳಿಸಿ ಬವರಕ್ಕೆ ಗರುಡಾಕಾರದಲಿ ಬಲವ ೧೮

ನಳ ಸುಷೇಣ ಗವಾಕ್ಷ ಗಜ ಶತ । ಬಲಿಗಳೆಡವಂಕದಲಿ ನಿಂದುದು
ಬಲದ ದೆಸೆಯಲಿ ಸುಮುಖ ದುರ್ಮುಖ ಗವಯ ದಧಿಮುಖರು
ಬಲಿದರೊಡ್ಡನು ಮುಂದೆ ರವಿಸುತ । ಕಲಿಹನುಮ ನೀಲಾಂಗದರು ಬೆಂ
ಬಳಿಯ ಮೈಂದ ದ್ವಿವಿದ ರುಮರೊಡ್ಡಿದರು ನಿಜಬಲವ ೧೯

ಸೈನ್ಯದ ಮುಂದುಗಡೆಯಲ್ಲಿ ಇಂದ್ರಜಿತು ನಗರದ ಎಲ್ಲೆಯಿಂದ ಹೊರಟನು. ೧೬. ಅಂಜಿಕೆಯು ದಿಕ್ಪಾಲಕರುಗಳ ಎದೆಗಳನ್ನು ತಿವಿದವು. ಚಂದ್ರ ಸೂರ್ಯರ ಕಾಲುಗಳು ಥರಥರಗುಟ್ಟಿದವು. ಧ್ರುವಲೋಕದವರೆಗೂ ಭಯಸಾಗರವು ಎಲ್ಲವನ್ನೂ ಮುಳುಗಿಸಿ ಬಿಟ್ಟಿತು. ಇಂದ್ರಜಿತುವಿನ ನಡಿಗೆಗೆ ಕೋಟಿ ಯುಗಗಳು ಜಾರಿಕೊಂಡವು. ಮೇಲಿನವರುಗಳಲ್ಲಿ ಇಂದ್ರಜಿತುವಿಗೆ ಸಮಾನರನ್ನು ನಾನು ಕಾಣೆ ಎಂದು ವಾಲ್ಮೀಕಿಗಳು ವರ್ಣಿಸಿದರು. ೧೭. ಇಂದ್ರಜಿತು ಬರುತ್ತಿರುವುದನ್ನು ನೋಡಿದ ಇಂದ್ರನ ಅಪ್ಪಣೆಯ ಮೇರೆಗೆ ಸಮಸ್ತ ದೇವತೆಗಳ ಪಟ್ಟಣಗಳು ಚದುರಿಹೋದವು; ದೇವತೆಗಳು ಅಮೃತಕಲಶ, ಕಾಮಧೇನು ಮತ್ತು ಚಿಂತಾಮಣಿಗಳನ್ನು ಮುಚ್ಚಿಟ್ಟರು; ತಮ್ಮ ಸರಕುಗಳನ್ನು ಜೋಡಿಸಿಕೊಂಡು ದೇವತೆಗಳ ಮುಖಂಡರು ದೇವತಾಸ್ತ್ರೀಯರನ್ನು ಬ್ರಹ್ಮಲೋಕಕ್ಕೆ ಕಳುಹಿಸಿದರು. ೧೮. ಇಪ್ಪತ್ತೈದು ಯೋಜನ ವಿಸ್ತಾರವಾದ ಪ್ರದೇಶದಲ್ಲಿ ಯುದ್ಧರಂಗವನ್ನೇರ್ಪಡಿಸಿ ಮುತ್ತಿಗೆಹಾಕಲು ನಿಮ್ಮವರು ಸಿದ್ಧವಾಗಿ ನಿಂತರು. ಬೆಟ್ಟ ಮರಗಳನ್ನು ಕೈಗಳಲ್ಲಿ ಎತ್ತಿಹಿಡಿದು ಆಕಾಶದಲ್ಲಿ ಇಕ್ಕಟ್ಟಾಗುವಂತೆ ಒಟ್ಟುಗೂಡಿದರು. ಸೈನ್ಯವನ್ನು ಗರುಡಾಕಾರದಲ್ಲಿ ವ್ಯೂಹ ರಚಿಸಿದರು. ೧೯. ನಳ, ಸುಷೇಣ, ಗವಾಕ್ಷ, ಗಜ, ಶತಬಲಿಗಳು ಎಡಪಕ್ಕದಲ್ಲಿ ನಿಂತರು. ಬಲಪಕ್ಕದಲ್ಲಿ ಸುಮುಖ, ದುರ್ಮುಖ, ಗವಯ, ದಧಿಮುಖರು ವ್ಯೂಹವನ್ನು ರಚಿಸಿದರು. ಮುಂದುಗಡೆಯಲ್ಲಿ ಸುಗ್ರೀವ, ಕಲಿಹನುಮ, ನೀಲ, ಅಂಗದರು ನಿಂತರು. ಮೈಂದ, ದ್ವಿವಿದ, ರುಮ ಇವರುಗಳು ಬೆಂಗಾವಲಾಗಿ

ನಡುವೆ ರಘುಪತಿ ಲಕ್ಷ್ಮಣರು ಶರ । ಖಡುಗ ಕಾರ್ಮುಕ ಕವಚಗಳ ಕೈ
ಹೊಡೆಯೆ ರಣಸನ್ನಾಹ ಸಮಯಿಗಳಾದರಾಕ್ಷಣಕೆ
ಎಡಬಲದ ಜಾಂಬವಂತ ಶಿಖಿಸುತ । ದೃಢಬಲಾನ್ವಿತ ವರವಿಭೀಷಣ
ರಡಸಿ ನಿಂದರು ಸಂದಣಿಸಿತರಿಸೇನೆ ನಿಮಿಷದಲಿ ೨೦

ತಲೆವರಿಗೆಯಲಿ ಖಡ್ಗಿಗರು ಮೂ । ಕೊಳಿಸಿ ನಿಂದರು ಮುಂದೆ ಬಿಲ್ಲಾ
ಳಳವಿಗೊಟ್ಟಿದು ಬಲಿದ ಮುಂಡಿಯ ಬೆರಳ ಸರಳಿನಲಿ
ನಿಲುಕಿ ನೋಹುವ ಚಳಗತಿಯ ಚಾ । ಪಳದ ಕುಂತದ ಭಟರು ನಡೆದಿ
ಟ್ಟಳಿಸಿ ನಿಂದರು ಸರಿಸದಲಿ ರಘುರಾಜಸೈನಿಕದ ೨೧

ಮುಲೆತುನಿಂದಿದವಾನೆ ನಭಕ । ವ್ವಳಿಸಿದವು ತೇಜಿಗಳು ನೆಲನಿ
ಕ್ಕಲಿಸೆ ಬಿರುವರಿಗಳಲಿ ತೇರ್ಸೈಸಿದವು ತೇರುಗಳು
ದಳವೊ ಪ್ರಳಯದ ಜವನ ಕೊರಳಿನ । ಕಳಕಳವೊ ಶಿವಶಿವ ಶಿವೆವೆಗಳು
ಹಳಚಿದರೆ ಹವಣಾವುದುಪಮೆಗೆ ವೈರಿವಾಹಿನಿಯ ೨೨

ಮಣಿಮಯದ ಜೋಡುಗಳ ಮದವಾ । ರಣ ರಥಾಶ್ವಾರೋಹಕರ ಭಾ
ರಣೆಯ ಬಿಗುಹಿನ ಹಳವಿಗೆಯ ಹೊಳೆಹೊಳೆವ ಹೊಸಹೊಗರ
ಕಣೆ ಕಠಾರಿ ಕೃಪಾಣ ಬಿಲು ಡೆಂ । ಕಣೆ ಮುಸುಂಡಿಪ್ರಸರ ಗದೆಯು
ಬ್ಬಣದ ನಿಬ್ಬರ ಕಿರಣ ಕಣ್ಮುಚ್ಚಿಸಿದವನಿಮಿಷರ ೨೩

ತಮ್ಮ ಸೈನ್ಯವನ್ನು ನಿಲ್ಲಿಸಿದರು. ೨೦. ಸೈನ್ಯದ ಮಧ್ಯದಲ್ಲಿ ಕತ್ತಿ, ಬಾಣ, ಧನುಸ್ಸುಗಳನ್ನು ಹಿಡಿದು ಕವಚ ಧರಿಸಿ ರಾಮಲಕ್ಷ್ಮಣರು ನಿಂತು ಕದನಕ್ಕೆ ಕೈಬೀಸಲು ಯುದ್ಧ ಸನ್ನದ್ಧರಾದರು. ಎಡಬಲಗಳ ರಕ್ಷಣೆಗೆ ಜಾಂಬವಂತ ಮತ್ತು ಬಲಶಾಲಿ ವಿಭೀಷಣರು ಒತ್ತಿ ನಿಂತರು. ಮರುನಿಮಿಷದಲ್ಲಿ ಶತ್ರುಸೈನ್ಯವು ಗುಂಪುಕೂಡಿತು. ೨೧. ರಾಕ್ಷಸ ಸೈನ್ಯದ ಮುಂದುಗಡೆಯಲ್ಲಿ ತಲೆಯನ್ನು ರಕ್ಷಿಸುವ ಗುರಾಣಿಗಳನ್ನೂ ಕತ್ತಿಗಳನ್ನೂ ಹಿಡಿದ ಸೈನಿಕರು ನಿಂತುಕೊಂಡರು. ಮುಂಡಿಯೂರಿ ನಿಂತ ಬಿಲ್ಲಾಳುಗಳು ಬಾಣಗಳನ್ನು ಬೆರಳುಗಳಿಂದ ಗುರಿಹಿಡಿದು ಮುಂದೆ ನಿಂತುಕೊಂಡರು. ತುದಿಗಾಲಿನ ಮೇಲೆ ನಿಂತು ನೀಡಿ ಹೊಡೆಯುವ ಶೀಘ್ರಗತಿಯ ಈಟಿಯ ಸೈನಿಕರು ರಾಮನ ಸೈನ್ಯವನ್ನು ಎದುರಿಸಿ ಗುಂಪಾಗಿ ನಿಂತರು. ೨೨. ಆನೆಗಳು ಮದಿಸಿ ನಿಂತವು, ಕುದುರೆಗಳು ಆಕಾಶಕ್ಕೆ ನೆಗೆಯುತ್ತಿದ್ದವು, ಭೂಮಿಯು ನಡುಗುವಂತೆ ರಭಸದಿಂದ ಓಡುವ ರಥಗಳು ತವಕದಿಂದ ಒಟ್ಟುಗೂಡಿದವು. ಸೈನ್ಯವೋ, ಪ್ರಳಯಕಾಲದ ಯಮನ ಕೊರಳ ಶಬ್ದವೋ ಶಿವ ಶಿವ ! ಕಣ್ಣೆವೆಗಳಿಗೆ ಬಡಿಯುತ್ತವೆ ಎಂದರೆ ಶತ್ರುಸೈನ್ಯವನ್ನು ಹೋಲಿಸುವ ರೀತಿ ಯಾವುದು ? ೨೩. ರತ್ನದ ಕವಚಗಳ, ಮದಿಸಿದ ಆನೆ, ರಥ ಮತ್ತು ಕುದುರೆಗಳ ಮೇಲೆ ಕುಳಿತ ವೀರರ ಹಿರಿಮೆಯ ಬಾವುಟಗಳ, ಹೊಳೆಹೊಳೆಯುವ ಹೊಸಕಾಂತಿಯ ಬಾಣ, ಕಠಾರಿ, ಕತ್ತಿ, ಬಿಲ್ಲು, ಡೆಂಕಣೆ, ಮುಸುಂಡಿ, ಗದೆ, ಅಗಳಿ ಮೊದಲಾದ ಆಯುಧಗಳ ಪ್ರಕಾಶಮಾನವಾದ ಕಿರಣಗಳು ಅನಿಮಿಷರ (ರೆಪ್ಪೆ ಹೊಡೆಯದ ದೇವತೆಗಳ)

ಆರರೆ ಗಗನ ಸರೋವರದೊಳವ । ತರಿಸಿದವೊ ತಾವರೆಗಳಿಗೆ ಪಾಂ
ಡುರದ ಶೋಣಚ್ಛವಿಯ ಹೇಮನಿಭಾತಪತ್ರದಲಿ
ಕಿರಣವಡಗಿತು ರವಿಯ ತತ್ಸರ । ಸಿರುಹಕಂದದ ಬೀಳಲೆನೆ ಕ
ರ್ಬುರರ ಬಲದೊಳಗಾಡಿದವು ಚಾಮರ ಚಡಾಳದಲಿ ೨೪

ಲವನೆ ಕೇಳ್ಕ್ಕೋಹರದೊಳಿರ್ದುದು । ಜವನ ನುಂಗುವ ಮೃತ್ಯುವನು ತು
ತ್ತುವ ಲಯಾಗ್ನಿಯ ನಂದಿಸುವ ಭೈರವನ ಭಂಗಿಸುವ
ಶಿವನ ಸೀವರಿಸುವ ಸರೋರುಹ । ಭವನ ಭಂಗಿಸುವಬುಜಜಾಂಡವ
ತಿವಿದೊಡೆವ ವಿಕರಾಳ ರಾಕ್ಷಸ ವೀರಭಟನಿಕರ ೨೫

ಗಜಘಟೆಯ ಬೃಂಹಿತ ತುರಂಗ । ವ್ರಜದ ಹೇಷಿತ ರಥದ ಚೀತ್ಕೃತಿ
ವಿಜಯಭಟರುಬ್ಬೆಟಿತ ರಣವಾವರಿಯ ಡಿಂಡಿಮದ
ಗಜರುಗಹಳೆಯ ಕೊಂಬುಗಳ ವಾ । ವ್ರಜದ ಪಣವಾನಕ ನಿನಾದದ
ಗಜರು ಗುಮ್ಮಿತು ಗಗನದಗ್ರದ ಧ್ರುವನ ಮಂಡಲವ ೨೬

ಸೃಜಿಸಲುದ್ಯೋಗಿಸಿದನಂಬೋ । ಜದನು ಮನದೊಳಗಂಜಿ ನೂತನ
ಭುಜಗರಾಜನ ಕೂರುಮನ ಕಕುಭದ್ವಿಪಾವಳಿಯ
ವಿಜಿತ ವಿಬುಧೋತ್ತಮನ ಸೇನಾ । ವ್ರಜದ ಹೊರಿಗೆಗೆ ಪೂರ್ವದವರಸು
ಗಜಬಜಿಸಿದುದ ಕಂಡು ಕುಶ ಕೇಳಮಮ ಕೌತುಕವ ೨೭

ಕಣ್ಣುಗಳನ್ನು ಮುಚ್ಚಿಸಿತು. ೨೪. ಅಬ್ಬಬ್ಬ, ಗಗನಸರೋವರದಲ್ಲಿ ತಾವರೆಗಳು ಹುಟ್ಟಿದುವೋ ಎನ್ನುವಂತೆ ಬಿಳಿ ಹಳದಿ ಮತ್ತು ಕೆಂಪು ಕಾಂತಿಮಿಶ್ರಿತ ಚಿನ್ನದ ಛತ್ರಿಗಳಲ್ಲಿ ಸೂರ್ಯನ ಕಿರಣಗಳು ಅಡಗಿಹೋದವು. ಆ ಸರೋವರದ ಸುಂದರವಾದ ಬೀಳಲುಗಳೆಂಬಂತೆ ರಾಕ್ಷಸರ ಸೈನ್ಯದಲ್ಲಿ ಚಾಮರಗಳು ಬೀಸಿದವು. ೨೫. ಲವನೇ ಕೇಳು, ಯಮನನ್ನು ನುಂಗುವ, ಮೃತ್ಯುವನ್ನು ಕಬಳಿಸುವ, ಪ್ರಳಯದ ಬೆಂಕಿಯನ್ನು ಆರಿಸುವ, ಭೈರವನನ್ನು ಸೋಲಿಸುವ, ಶಿವನನ್ನು ಗದರಿಸುವ, ಬ್ರಹ್ಮನನ್ನು ಕಡೆಗಣಿಸುವ, ಬ್ರಹ್ಮಾಂಡವನ್ನು ತಿವಿದು ಒಡೆದುಹಾಕುವ ಭಯಂಕರ ರಾಕ್ಷಸವೀರರು ಸೈನ್ಯದಲ್ಲಿದ್ದರು. ೨೬. ಆನೆಗಳ ಘೀಂಕಾರ, ಕುದುರೆಗಳ ಕೆನೆತ, ರಥದ ಚೀತ್ಕಾರ, ಗೆಲುವಿನ ವೀರರ ಆನಂದದ ಗರ್ಜನೆ, ಕಹಳೆ, ಕೊಂಬು, ಮುರಜ, ಪಣವ, ನಗಾರಿ ಮೊದಲಾದ ವಾದ್ಯಗಳ ಆರ್ಭಟ–ಇವೇ ಮೊದಲಾದ ಗದ್ದಲಗಳು ಆಕಾಶದ ನೆತ್ತಿಯಲ್ಲಿರುವ ಧ್ರುವಲೋಕಕ್ಕೆ ನುಗ್ಗಿದವು. ೨೭. ಇಂದ್ರಜಿತುವಿನ ಭಾರಕ್ಕೆ ಭೂಮಿಯನ್ನು ಹೊತ್ತಿರುವವರ ಪ್ರಾಣಗಳು ಗಲಿಬಿಲಿಗೊಂಡುದನ್ನು ಕಂಡು ಹೆದರಿದ ಬ್ರಹ್ಮನು ಹೊಸ ಆದಿಶೇಷ ಹೊಸ ಆಮೆ, ಹೊಸ ದಿಗ್ಗಜಗಳನ್ನು ಸೃಷ್ಟಿಸಲು ಆರಂಭಿಸಿದನು. ಅಬ್ಬಬ್ಬ ! ಈ

ಆತು ನಿಂದುದು ನಿಮ್ಮ ಸೇನಾ । ವ್ರಾತವಿದಿರಲಿ ವೈರಿಬಲವದ
ನಾತು ಮಲೆತಿರ್ದುದು ಬಲೀಮುಖಬಲವು ಖಾತಿಯಲಿ
ಆತು ಹಳಚುವ ಲಯಸಮುದ್ರದ । ರೀತಿಯಲಿ ಬಳಿಕಸುರವಂಶವಿ
ಘಾತ ಕೇಳಿದನಿವನದಾರೆಂದಾ ವಿಭೀಷಣನ ೨೮

ಅವಧರಿಸು ರಾಜೇಂದ್ರ ರಿಪುಭಟ । ರವಿವಿಧುಂತುದ ರಾಕ್ಷಸೇಂದ್ರನ
ಕುವರನಿವನಮರೇಂದ್ರಜಿತುವೆಂದೆಂಬುದಭಿಧಾನ
ಇವನ ಭೀತಿಗೆ ಸಕಲ ಸುಮನೋ । ನಿವಹ ಸೇವಕರಾಯ್ತು ತೆತ್ತವು
ಭುವನವಿವನಂಜಿಕೆಗೆ ಕಪ್ಪವನರಸ ಕೇಳೆಂದ ೨೯

ಅವೆ ಸುರೇಂದ್ರ ಕುಬೇರ ಶಿಖಿ ಯಮ । ಪವನ ನಿರುತೀಶಾನ್ಯ ವರುಣರ
ವಿವಿಧ ಶಸ್ತ್ರಾಸ್ತ್ರಂಗಳಾ ರಾಕ್ಷಸನ ರಥದೊಳಗೆ
ಅವೆ ಶರಾಳಿ ಶರಾಸನವು ಶಾಂ । ಭವದ ಮಹಿಮೆಯಲವನ ಕೈಯಲಿ
ಬವರದಲಿ ಬದುಕುವುದು ನಮಗದು ಚಿತ್ರತರವೆಂದ ೩೦

ನಗೆಮೊಗದಲಿನಸೂನು ಸಾಕೈ । ಹೊಗಳಿಕೆಯ ಪರಿಯೆನುತ ದೇವನ
ಮೊಗವನೀಕ್ಷಿಸಿ ಕಾಳಗಕೆ ಕೈವೀಸಿದನು ಭಟರ
ಯುಗದ ಸೀಮೆಯ ಶಿಖಿಯ ಬಾಯ್ಗಳ । ಲೊಗುವ ಕಿಡಿಗಳ ಗಡಣವರಿಸಂ
ಯುಗದ ಸೀಮೆಯೊಳಿದ್ದುದೆನೆ ಹಳಚಿದುದು ಕಪಿಸೇನೆ ೩೧

ಕುತೂಹಲಕರ ವಿಷಯವನ್ನು ಕೇಳು ಕುಶ—ಎಂದರು ವಾಲ್ಮೀಕಿಗಳು. ೨೮. ನಿಮ್ಮ ಸೈನ್ಯಸಮೂಹದ ಎದುರಿನಲ್ಲಿ ರಾಕ್ಷಸಸೈನ್ಯವು ಒಡ್ಡಿ ನಿಂತಿತು. ಪ್ರತಿಭಟಿಸಿ ಅಪ್ಪಳಿಸುವ ಪ್ರಳಯಸಾಗರದಂತೆ ಅದನ್ನು ವಾನರಸೈನ್ಯವು ಕೋಪದಿಂದ ಎದುರಿಸಿತು. ಅನಂತರ ರಾಕ್ಷಸವಂಶವಿರೋಧಿ ರಾಮನು 'ಇವನು ಯಾರು ?' ಎಂಬುದಾಗಿ ವಿಭೀಷಣನನ್ನು ಕೇಳಿದನು. ೨೯. "ಕೇಳು ರಾಜೇಂದ್ರ, ಶತ್ರುಶೂರರೆಂಬ ಸೂರ್ಯನನ್ನು ನುಂಗುವ ರಾಹುವಾದ ರಾಕ್ಷಸೇಶ್ವರ ರಾವಣನ ಮಗ ಇವನು. ಇಂದ್ರಜಿತು ಎಂಬುದಾಗಿ ಇವನ ಹೆಸರು. ಇವನಿಗೆ ಹೆದರಿಕೊಂಡು ಸಮಸ್ತ ದೇವತೆಗಳು ಇವನ ಸೇವಕರಾದರು. ಸಕಲ ಲೋಕಗಳು ಇವನಿಗೆ ಅಂಜಿ ಕಪ್ಪವನ್ನು ತೆತ್ತುವು" ಎಂದ ವಿಭೀಷಣ. ೩೦. "ರಾಕ್ಷಸನ ರಥದಲ್ಲಿ ಕಾಣುವ ಅವುಗಳು ಇಂದ್ರ, ಕುಬೇರ, ಅಗ್ನಿ, ಯಮ, ವಾಯು, ನಿರ್ಋತಿ, ಈಶಾನ, ವರುಣರ ವಿವಿಧ ಶಸ್ತ್ರಾಸ್ತ್ರಗಳು. ಅಲ್ಲದೆ ಶಿವನ ಮಹಿಮೆಯ ಬಿಲ್ಲುಬಾಣಗಳಿವೆ. ಯುದ್ಧದಲ್ಲಿ ಅವನ ಕೈಯಲ್ಲಿ ಬದುಕುವುದು ನಮಗೆ ಆಶ್ಚರ್ಯಕರವೇ" ಎಂದ ವಿಭೀಷಣ. ೩೧. ಸುಗ್ರೀವನು ನಗುಮುಖದಿಂದ 'ಹೊಗಳಿಕೆಯ ರೀತಿ ಸಾಕು' ಎನ್ನುತ್ತ ರಾಮನ ಮುಖವನ್ನು ನೋಡಿ ವೀರರಿಗೆ ಕೈಬೀಸಿ ಯುದ್ಧಕ್ಕೆ ಸೂಚನೆಕೊಟ್ಟನು. ಪ್ರಳಯದ ಬೆಂಕಿಯ ಬಾಯಿಯಿಂದ ಸಿಡಿಯುವ ಕಿಡಿಗಳ ಸಮೂಹವು ಯುದ್ಧರಂಗದಲ್ಲಿ ಎದ್ದಿತೋ ಎನ್ನುವಂತೆ

ನಸಿದ ಯುಗದವಸಾನದಲಿ ಲಳಿ । ಮುಸಗಿ ಲಯಶಿಖಿ ಶಿಖಿಯೊಳಗೆ ಲಂ
ಬಿಸುವವೊಲು ಹಳಚಿದವು ಬಲವೆರಡಳುಕೆ ಭುವನಚಯ
ನಿಶಿತ ಶಸ್ತ್ರಶಿಲೋಚ್ಚಯದ ಸರ । ಭಸದ ಹೊಯ್ಲಿನ ಖಣಿಖಟಿಲ ನಿ
ಪ್ಪಸರದದ್ಭುತರವದಲೊಡೆವೆರಸಿತು ವಿಘಾತಿಯಲಿ ೩೨

ದಾಳಿ ಹರಿದುದು ಹರಹಿನಲಿ ತಾ । ರಾಳಿ ತರಣಿ ಸುಧಾಂಶುಬಿಂಬವ
ತೂಳಿತವಕದಲುಭಯಬಲ ಪದಹತರಜೋನೃಪನ
ಮೇಲುಜಗದರಸುಗಳ ನಿಜ ನಗ । ರಾಳಿಗಳ ಕೊಳುತೊತ್ತಬರದು
ತ್ತಾಳದಿಂದುತ್ತಾನಪಾದಜಪುರದ ದಳದುಳಕೆ ೩೩

ಕರಿಗಳೊಳು ಕರಡಿಗಳು ಹಯುವೋ । ಹರದೊಳಗೆ ಮುಸುವಿಂಡು ರಥದು
ಬ್ಬರದ ಸಂದಣಿಯೊಳಗೆ ಕಡುಹಿನ ಸಿಂಗಳೀಕಚಯ
ಚರಣ ಚಟುಳ ನಿಶಾಟರೊಳು ತರು । ಚರರು ಹೊಕ್ಕಿದು ಬಿಕ್ಕಲಿಳೆ ಹೊಡೆ
ಕರಿಸಲಂಬುಧಿ ಹಳಚಿತಮಮ ಮಹೋಗ್ರಸಮರದಲಿ ೩೪

ಖಣಿಖಟಿಲು ದಡದೊಕ್ಕುಗಳ ಬಲು । ಕಣೆಯ ಶಸ್ತ್ರದ ಕೋಡುಗಲ್ಗಳ
ಹಣಿದಗಳ ಹೆಮ್ಮರನ ಕಣೆಗಳ ಕಲಹದುಬ್ಬರದ
ರಣರಭಸ ಹುಟ್ಟಿಸಿತಜಾಂಡದ । ಹಣೆಗೆ ಬೇನೆಯನಳಿದ ಸುಭಟರ
ಜುಣುಗುಗಳ ಜವರಾಜ ಕರಣಕೆ ಬಾರದಾಯ್ತೆಂದ ೩೫

ಕಪಿಸೈನ್ಯವು ರಭಸದಿಂದ ಮೇಲೆಬಿದ್ದಿತು. ೩೨. ಕ್ಷೀಣಿಸಿದ ಯುಗದ ಕೊನೆಯಲ್ಲಿ ರಭಸದಿಂದ ಪ್ರಳಯಾಗ್ನಿಯು ಬೆಂಕಿಯೊಡನೆ ಬೆರೆತು ಹರಡುವಂತೆ ಎರಡು ಸೈನ್ಯಗಳೂ ತಾಗಿದವು. ಇದನ್ನು ನೋಡಿ ಲೋಕಗಳು ಅಂಜಿದವು. ಎರಡು ಕಡೆಯ ವೀರರು ಪರಸ್ಪರ ಹರಿತವಾದ ಶಸ್ತ್ರಗಳನ್ನು ಪ್ರಯೋಗಿಸಿ ಕಲ್ಲುಗುಂಡುಗಳನ್ನು ಬಿರುಸಾಗಿ ಎಸೆಯುತ್ತಿರಲು ಖಣಿಖಟಿಲ್ ಎಂಬ ಕಠಿಣವಾದ ಅದ್ಭುತ ಶಬ್ದದೊಡನೆ ಸೈನಿಕರ ಕೊಲೆಯ ಕಾರ್ಯವು ನಡೆಯಿತು. ೩೩. ಎರಡೂ ಕಡೆಯ ಸೈನ್ಯದ ಕಾಲುಗಳ ತುಳಿತದಿಂದ ಎದ್ದ ಧೂಳೆಂಬ ರಾಜನ ಧಾಳಿಯು ನಕ್ಷತ್ರಗಳು ಹಾಗೂ ಸೂರ್ಯಚಂದ್ರಬಿಂಬಗಳ ಮೇಲೆ ನಡೆದು ಆತುರದಿಂದ ಮುಂದಕ್ಕೂ ವಿಸ್ತರಿಸಿತು. ಮೇಲಿನ ಲೋಕದ ರಾಜರ ಪಟ್ಟಣಗಳನ್ನು ಹಿಡಿದುಕೊಂಡು ವೇಗವಾಗಿ ಎತ್ತರಕ್ಕೆ ಏರಿ ಧ್ರುವಲೋಕದ ಸೂರೆಗೆ ಮುನ್ನಡೆಯಿತು. ೩೪. ಆನೆಗಳೊಡನೆ ಕರಡಿಗಳು, ಕುದುರೆಗಳೊಡನೆ ಮುಸುಗಳು, ರಥಗಳ ಗುಂಪಿನಮೇಲೆ ಬಲಶಾಲಿ ಸಿಂಗಳೀಕಗಳು, ಶೀಘ್ರಗತಿಯ ರಾಕ್ಷಸರೊಡನೆ ವಾನರರು ಕಾದಾಡಿದರು. ಆ ಮಹಾಭಯಂಕರ ಯುದ್ಧದಿಂದ ಭೂಮಿ ಮೇಲುಸಿರುಬಿಟ್ಟಿತು, ಸಾಗರವು ಕ್ಷೋಭೆಗೊಂಡಿತು. ೩೫. ಖಣಿಖಟಿಲು, ದಡದಡ, ದೊಕ್ಕು ದೊಕ್ಕು ಎಂದು ಶಬ್ದಮಾಡುತ್ತ ಬಾಣಗಳು, ಶಸ್ತ್ರಗಳು ಮತ್ತು ಕೋಡುಗಲ್ಲುಗಳಿಂದ ಹೊಡೆದಾಡಿದರು. ಭಾರಿಮರ ಮತ್ತು ಬಿರುಸಿನ ಬಾಣಗಳ ಹೋರಾಟದ ರಭಸವು ಬ್ರಹ್ಮಾಂಡಕ್ಕೆ ತಲೆನೋವನ್ನುಂಟುಮಾಡಿತು. ಸತ್ತು ವಿಕಾರ

ಬೆಸುವುದಳಿವುದು ಚಾಚುವುದು ಜಾ । ಳಿಸುವುದೊತ್ತಂಬರಿಸುವುದು ಕೈ
ಹುಸದ ಮೈಹುಸದಬ್ಬರದ ಸಮರಂಗದುಬ್ಬರದ
ರಸವನೇವೊಗಳುವೆನು ಸಾಸಿರ । ರಸನೆಯಾತಂಗರಿದು ಶ್ರೋಣಿತ
ವಸನ ವಿಗ್ರಹಿಯಾದಳೆನೆ ರಂಜಿಸಿತು ರಣಭೂಮಿ ೩೬

ಕರಿಯ ಕರಿಯಿಂದಿಟ್ಟು ತುರಗವ । ತುರಗದಿಂದಪ್ಪಳಿಸಿ ರಥದಿಂ
ದುರು ವರೂಥವನುಜುಬಿ ರಕ್ಕಸರಿಂದ ರಕ್ಕಸರ
ತಿರುಹಿಡುವ ಕಪಿಭಟರ ಕದನಕೆ । ತೆರಳದತಿಬಲ ರಕ್ಕಸರು ವಾ
ನರರ ವಾನರರಿಂದ ಸದೆದರು ಸೂಳುಪಾಳಿನಲಿ ೩೭

ಗಿರಿಯ ಶಿಖರದ ಹೊಯ್ಲಿನಲಿ ಹೆ । ಮ್ಮರನ ಬೀಸಿಕೆಗಳಲಿ ನಖಮುಖ
ದುರುವಿಘಾತಿಯಲಿಡುವ ಕೈಗುಂಡುಗಳ ಚಂಡಿಯಲಿ
ಕರುಳ ಕಾಳಿಜ ಮಜ್ಜೆ ಮಾಂಸದ । ಹೊರಳಿಯಲಿ ಹೊದೆಸಿದುದು ನೆಲದು
ಪ್ಪರದ ರುಧಿರದಲಡಗಿದುದು ನಭವಿವರ ಸಮರದಲಿ ೩೮

ಎತ್ತಿ ಬಾಲವನೆರಡು ಪಚ್ಚಳ । ದೊತ್ತಿನಲಿ ಮೋಹಿಸಿದ ಸುರಗಿಯು
ನೆತ್ತಿಯಲಿ ತೋಜಿದರು ತೋಟಿಗೆ ಹಾರುವಣ್ಣಗಳ
ಕತ್ತರಿಸಿದರು ಕಣೆಗಳಲಿ ಕೈ । ಗುತ್ತಿದವರನು ಕಡಿಕಡಿದು ಹೆಣ
ಗುತ್ತರಿಯನೊಟ್ಟಿದರು ಕೈಕೊಂಡರಿಗಳಾಜಿಯಲಿ ೩೯

ಗೊಂಡ ವೀರರ ಲೆಕ್ಕವು ಯಮರಾಜನಿಗೆ ಸಿಕ್ಕಲಿಲ್ಲ. ೩೬. ಯೋಧರು ಶತ್ರುಗಳನ್ನು ತಾಗುವರು, ನಾಶವಾಗುವರು, ಮುನ್ನಡೆಯುವರು, ಸೋಸಿಹೋಗುವರು, ವೇಗವಾಗಿ ಆಕ್ರಮಿಸುವರು. ಶತ್ರುಗಳನ್ನು ಕೈವಶ ಮೈವಶ ಮಾಡಿಕೊಳ್ಳಲು ಅಬ್ಬರಿಸಿ ಹೋರಾಡುವ ಮಹತ್ತರ ಕಾಳಗದ ವೀರರಸವೇ ಮೊದಲಾದ ರಸಗಳನ್ನು ಏನೆಂದು ವರ್ಣಿಸಲಿ ; ಸಾವಿರ ನಾಲಗೆಯುಳ್ಳವನಿಗೂ ಹೊಗಳಲು ಅಸಾಧ್ಯ. ರಕ್ತದ ಬಣ್ಣದ ಬಟ್ಟೆಯನ್ನು ಮೈಗೆ ಹೊದೆದುಕೊಂಡಂತೆ ಯುದ್ಧಭೂಮಿ ಕಾಣಿಸಿತು. ೩೭. ಆನೆಯನ್ನು ಆನೆಯಿಂದ ಅಪ್ಪಳಿಸಿ, ಕುದುರೆಯನ್ನು ಕುದುರೆಯಿಂದ ಕುಟ್ಟಿ, ರಥದಿಂದ ರಥವನ್ನು ಎಗರಿಸಿ, ರಾಕ್ಷಸರನ್ನು ಹಿಡಿದು ತಿರುಗಿಸಿ ರಾಕ್ಷಸರ ಮೇಲೆಸೆದು ಕಾದಾಡುವ ಕಪಿವೀರರ ಯುದ್ಧಕ್ಕೆ ಪ್ರತಿಯಾಗಿ ಹಿಂದೆಗೆಯದ ಬಲಶಾಲಿ ರಾಕ್ಷಸರು ಸರದಿಸರದಿಯಾಗಿ ವಾನರರನ್ನು ವಾನರರಿಂದ ಬಡಿದರು. ೩೮. ಕಪಿವೀರರು ಬೆಟ್ಟದ ಕೋಡುಗಲ್ಲುಗಳಿಂದ ಹೊಡೆದು, ಭಾರಿಮರಗಳನ್ನು ಬೀಸಿ, ಉಗುರುಗಳಿಂದ ಗಾಯಮಾಡಿ, ಕೈಗುಂಡುಗಳನ್ನು ಪ್ರಚಂಡವಾಗಿ ಬೀರಿ ಶತ್ರುಗಳನ್ನು ಕೆಡವಿ, ಅವರ ಕರುಳು, ಪಿತ್ತಾಶಯ, ಮಜ್ಜೆ ಮಾಂಸಗಳನ್ನು ರಾಶಿಹಾಕಿದರು. ನೆಲದಿಂದ ಎತ್ತರಕ್ಕೆ ಹಾರಿದ ರಕ್ತದಿಂದ ಆಕಾಶಪ್ರದೇಶವು ಮುಚ್ಚಿಹೋಯಿತು. ೩೯. ರಾಕ್ಷಸಯೋಧರು ಯುದ್ಧದಲ್ಲಿ ವಾನರರ ಬಾಲವನ್ನು ಎತ್ತಿ ಎರಡು ಅಂಡುಗಳಿಗೆ ಚುಚ್ಚಿದ ಕಠಾರಿಯು ದೇಹವನ್ನು ನಾಟಿ ನೆತ್ತಿಯಲ್ಲಿ ಕಾಣಿಸಿಕೊಂಡಿತು. ಮೇಲೆಬಿದ್ದು ಹೋರಾಡಲು ನೆಗೆಯುವ ಕಪಿಗಳನ್ನು

ಇವರವಟಿ ಸಂಗರದ ಸೇನಾ । ರ್ಣವದ ಸಂಕುಲ ಯುದ್ಧದಭಿನವ
ದವಿರಳದ ರಣರಂಜಕವನೇನೆಂಬೆನದ್ಭುತವ
ಜವನ ಹರವರಿಯೋ ಮಹಾಭೈ । ರವನ ಕಾಲ್ದುಳಿಯೋ ಕಪರ್ದಿಯ
ಕವತೆಯೋ ಕಾಣೆನು ಸುರಾಸುರ ಕದನಕೇಳಿಯಲಿ ೪೦

ಉರುಳುತಿರ್ದುವು ರಣದೊಳಗೆ ಹೆಣ । ನೆರಡು ಸೇನೆಯಲರುಣಜಲವು
ಬ್ಬರಿಸುತಿರ್ದುದು ನೆಗಹಿ ನಾಲುಕು ಬಲದ ತೆಪ್ಪಗಳ
ಸರಿವುತಿರ್ದುವು ಸುಭಟರಸು ಸುರ । ಪುರಿಗೆ ಬೊಮ್ಮನ ರಾಜಧಾನಿಗೆ
ನೆರೆವುತಿರ್ದುವು ನಲಿದು ರಣಭೂಮಿಯಲಿ ಭೂತಗಣ ೪೧

ಕರುಳಿನಲಿ ಖಂಡದಲಿ ತುಱುಗಿದ । ತೊರಳೆಯಲಿ ತಱಿದೆಲುಗಳಲಿ ಕಡಿ
ಗೊರಳಿನಲಿ ಕತ್ತರಿಸಿದೆದೆ ನಡು ಕಾಲು ಕೈಗಳಲಿ
ಹರಿ ನಿಶಾಟರ ಭಟರ ಹೆಣ ಸರಿ । ಬೆರಕೆಯಲಿ ರಣರಂಗದಲಿ ಹ
ನ್ನೆರಡು ತಾಳುಚ್ಚೇದ ಪರಿಯಂತಿಡಿದುದಂಬರವ ೪೨

ಜವನ ಕಣಜವೊ ಮೇಣು ಲಯಮೃ । ತ್ಯುವಿನ ಬಾಣಸವನೆಯೊ ಓಡಿಕೆಯೊ
ವಿವಿಧ ಭೂತಾವಳಿಯ ಬೆಳೆಗೈಯೋ ಖಗಾವಳಿಯ
ರವುಕುಳದ ರಣಮಂಡಲವೊ ರೌ । ರವದ ರುಂಪರಿಯೋ ಸರೌದ್ರಾ
ಹವದ ಸಿರಿ ಸಿರಿರಾಮಕಥೆಯೊಳಗಲ್ಲದಿಲ್ಲೆಂದ ೪೩

ಬಾಣಗಳಿಂದ ಕತ್ತರಿಸಿದರು. ಕೈಯಿಂದ ಹೊಡೆದವರನ್ನು ಕಡಿಕಡಿದು ಹೆಣದ ಮೆದೆಯನ್ನು ಹಾಕಿದರು. ೪೦. ವಾನರರ ಮತ್ತು ರಾಕ್ಷಸರ ಸೇನಾಸಾಗರಗಳ ನಡುವೆ ನಡೆದ ಗಾಢವಾದ ಸಮೂಹಯುದ್ಧದ ಹೊಸರೀತಿಯ ಅದ್ಭುತವನ್ನು ಏನೆಂದು ವರ್ಣಿಸಲಿ. ದೇವತೆಗಳ ರಾಕ್ಷಸರ ಕದನದಾಟದಲ್ಲಿ ಯಮನ ಸಂಚಾರವಾಯಿತೋ, ಮಹಾಭೈರವನ ಕಾಲ್ತುಳಿತವಾಯಿತೋ, ಶಿವನ ಸೂರೆಯಾಯಿತೋ ಕಾಣೆ ಎನ್ನುವಂತಿತ್ತು. ೪೧. ಎರಡೂ ಕಡೆಯ ಸೈನ್ಯದಲ್ಲಿ ಹೆಣಗಳು ರಣರಂಗದಲ್ಲಿ ಉರುಳುತ್ತಿದ್ದವು. ರಕ್ತದ ಮಡು ಉಕ್ಕಿ ಚತುರಂಗಸೈನ್ಯವನ್ನು ತೆಪ್ಪಗಳಂತೆ ಮೇಲಕ್ಕೆತ್ತಿ ತೇಲಿಸುತ್ತಿತ್ತು. ವೀರರ ಪ್ರಾಣಗಳು ಸ್ವರ್ಗದ ಮತ್ತು ಬ್ರಹ್ಮನ ರಾಜಧಾನಿಗಳಿಗೆ ಪ್ರಯಾಣಿಸುತ್ತಿದ್ದವು. ಭೂತಗಳು ಆನಂದದಿಂದ ರಣರಂಗದಲ್ಲಿ ಬಂದು ಸೇರುತ್ತಿದ್ದವು. ೪೨. ಕಪಿಗಳ ಮತ್ತು ರಾಕ್ಷಸರ ಕರುಳುಗಳು, ಮಾಂಸಖಂಡಗಳು, ರಾಶಿಹಾಕಿದ ಗುಲ್ಮಗಳು, ಕತ್ತರಿಸಿದ ಮೂಳೆಗಳು, ಕಡಿದ ಕತ್ತುಗಳು, ಕೊಚ್ಚಿದ ಎದೆ, ಸೊಂಟ, ಕಾಲು, ಕೈಗಳು ಸಮಸಮವಾಗಿ ಬೆರೆತು ರಣರಂಗದಲ್ಲಿ ಹನ್ನೆರಡು ತಾಳೆಮರಗಳನ್ನು ಕತ್ತರಿಸಿ ಸೇರಿಸಿದಷ್ಟು ಎತ್ತರಕ್ಕೇರಿ ಆಕಾಶವನ್ನು ಮುಟ್ಟಿತು. ೪೩. ಯಮನ ಕಣಜವೋ, ಪ್ರಳಯಮೃತ್ಯುವಿನ ಅಡಿಗೆಮನೆಯೋ, ವಿವಿಧ ಭೂತಗಳ ಕೈಪಿಡಿಯೋ, ಪಕ್ಷಿಸಮೂಹದ ಧಾನ್ಯದ ಹೊಲವೋ, ಭೀಕರ ಯುದ್ಧರಂಗವೋ ಅಥವಾ ಅಬ್ಬರದ ಭೂಮಿಯೋ! ಈ ಪ್ರಚಂಡ ಯುದ್ಧದ ಮಹತ್ವವು

ಮುಱಿದ ಚೂಣಿಯು ಮೇಲೆ ಬಲುಭಟ । ರಿಱಿತಕಂಗೈಸಿದರು ಹೊಯ್ದರು
ಹಱಿಗಳಾಟಿಯುಲದಗಿತಾರವವಿವಱ ಬೊಬ್ಬೆಯುಲಿ
ಉಱುಗಲಿಳೆ ದಳವಂಕುರಿಸಿ ಮು । ಕ್ಕುಱುಕಿತಂಕಕೆ ಗಗನತಳ ಬಿಡ
ದೊಱಲಿತಿವರವರದ್ರಿಗಳ ಕೈದುಗಳ ಕದನದಲಿ ೪೪

ಕಲಹ ಗಂಟಿಕ್ಕಿದವು ಬಳಿಕ । ಗ್ಗಳೆಯಱಿಗೆ ಕುಶ ಕೇಳು ರಾವಣಿ
ಯೊಳಗೆ ರಾಘುವಭೃತ್ಯನಾ ವೀರ ಪ್ರಹಸ್ತನಲಿ
ಮಲೆತನಗ್ಗದ ನೀಲ ಕುಂಭನ । ಹಳಚಿದನು ನಳನಾ ನಿಕುಂಭನ
ಕಲಹದಲಿ ಕೈಮಿಕ್ಕನತಿಬಲ ಗಂಧಮಾದನನು ೪೫

ತಱುಬಿದನು ದೂಮ್ರಾಕ್ಷನನು ಬೊ । ಬ್ಬಿಱಿದು ಜಾಂಬವದೇವನಡಹೊ
ಕ್ಕುಱುಬಿದನು ದೇವಾಂತಕನ ಶತಬಲಿ ವಿಘಾತಿಯುಲಿ
ತೆಱಹುಗುಡದೆ ನರಾಂತಕನ ಬಲ । ಮುಱಿಯೆ ದುರ್ಮುಖ ಕಾದಿದನು ಕ
ಟ್ಟುಱಿತದಿಂದಿಳುಕಿಸಿದನತಿಕಾಯನನು ಸೌಮಿತ್ರಿ ೪೬

ಕಾದಿದನು ಕಲಿ ವಾಲಿಪುತ್ರ ಮ । ಹೋದರನೊಳೇಕಾಂಗದಲಿ ಬಿಡ
ದಾದಿಗೊಂಡಟ್ಟಿದನು ಯುದ್ಧೋನ್ಮತ್ತನನು ವೃಷಭ
ಹಾದಿದಗೆಸಿದನಾ ಸುಪಾರ್ಶ್ವನ । ನಾ ದಿವೌಕಸ ವೈದ್ಯಸುತನುಳಿ
ದಾದ ಭಟರಲಿ ಭಟರು ಬಾರಿಸಿದರು ಮಹಾಹವವ ೪೭

ಶ್ರೀರಾಮಕಥೆಯಲ್ಲಿ ಅಲ್ಲದೆ ಬೇರೆ ಕಡೆಯಲ್ಲಿ ಇಲ್ಲ ಎಂದರು ವಾಲ್ಮೀಕಿಮಹರ್ಷಿಗಳು. ೪೪. ಚದುರಿದ ಮುಂದಳದ ಮೇಲೆ ನುಗ್ಗಿ ರಾಕ್ಷಸವೀರರು ಇರಿಯಲು ಬಯಸಿದರು; ಅವರು ತಮಟೆಗಳನ್ನು ಬಾರಿಸಿದರು. ಆ ಶಬ್ದವು ವಾನರರ ಬೊಬ್ಬೆಯಲ್ಲಿ ಮುಚ್ಚಿ ಹೋಯಿತು. ವಾನರಸೈನ್ಯದ ದಳವು ಉತ್ಸಾಹದಿಂದ ಕಾಳೆಗಕ್ಕೆ ಮುತ್ತಲು ಭೂಮಿಯು ವಾಲಿತು. ಎರಡೂ ಕಡೆಯವರ ಬೆಟ್ಟಗಳ ಮತ್ತು ಆಯುಧಗಳ ಕದನವನ್ನು ಕಂಡು ಆಕಾಶವು ಬಿಡದೆ ಅರಚಿತು. ೪೫. ಅನಂತರ ಶ್ರೇಷ್ಠವೀರರುಗಳ ನಡುವೆ ಯುದ್ಧಗಳಾದವು. ಕುಶನೇ ಕೇಳು, ಇಂದ್ರಜಿತುವಿನೊಡನೆ ರಾಮಭೃತ್ಯ ಆಂಜನೇಯನು ಕಾಳಗಕ್ಕೆ ತೊಡಗಿದನು. ವೀರಪ್ರಹಸ್ತನ ಮೇಲೆ ನೀಲ ಬಿದ್ದನು. ಕುಂಭನನ್ನು ನಳನು ಎದುರಿಸಿದನು. ನಿಕುಂಭನನ್ನು ವೀರ ಗಂಧಮಾದನನು ಯುದ್ಧದಲ್ಲಿ ಮೀರಿಸಿದನು. ೪೬. ಜಾಂಬವನು ಬೊಬ್ಬಿರಿದು ಧೂಮ್ರಾಕ್ಷನನ್ನು ಅಡ್ಡಗಟ್ಟಿದನು. ಶತಬಲಿಯು ನಡುವೆ ನುಗ್ಗಿ ಪೆಟ್ಟು ಕೊಟ್ಟು ದೇವಾಂತಕನನ್ನು ಅಟ್ಟಿಬಿಟ್ಟನು. ನರಾಂತಕನ ಸೈನ್ಯ ನಾಶವಾಗುವಂತೆ ಸ್ವಲ್ಪವೂ ಅವಕಾಶಕೊಡದೆ ದುರ್ಮುಖನು ಯುದ್ಧಮಾಡಿದನು. ಲಕ್ಷ್ಮಣನು ಭಾರಿ ಹೊಡೆತದಿಂದ ಅತಿಕಾಯನನ್ನು ಹೆದರಿಸಿದನು. ೪೭. ವಾಲಿಪುತ್ರ ಅಂಗದನು ಒಬ್ಬನೇ ಮಹೋದರನೊಡನೆ ಕಾದಿದನು. ಯುದ್ಧೋನ್ಮತ್ತನನ್ನು ವೃಷಭನು ಹಿಂಸೆಕೊಟ್ಟು ಅಟ್ಟಿದನು. ದೇವತೆಗಳ ವೈದ್ಯನ ಮಗ ಸುಷೇಣನು ಸಂಪಾರ್ಶ್ವನನ್ನು ದಾರಿಗೆಡಿಸಿದನು. ಉಳಿದ

ತೆಗವರೌಕುವರೋಸರಿಸುವರು । ಹೊಗುವರಂತರಿಸುವರು ನೂಕುವ
ರಗಲಿಸುವರಡ್ಡೈಸುವರು ತಱುಬುವರು ತೇರೈಸಿ
ನಗ ಮಹೀರುಹದುಬ್ಬರದ ಕೈ । ದುಗಳ ಖಣಿಖಟಿಲಬ್ಬರದ ಬಲು
ಜಗಳ ನಡೆದುದು ನಡುಗಲಿಂದ್ರಾದ್ಯಖಿಳ ದೇವಗಣ ೪೮

ಮಿಕ್ಕ ದಿವ್ಯ ಯುಗಂಗಳಲಿ ಕೈ । ಯಿಕ್ಕಿ ಕಾದಿದ ವೀರರೀ ರಣ
ದಕ್ಕಜಕೆ ಸರಿಯೆಂದು ನುಡಿದರೆ ಬಾಯಿ ಹುಳಿವುದಲೆ
ಉಕ್ಕುತಿರ್ದುದು ವೀರರಸ ರಣ । ಸೊಕ್ಕುತಿರ್ದುದು ಸೋಲ ಗೆಲವಿನ
ಸಕ್ಕಜಕೆ ಸಂದಿಲ್ಲದಿರ್ದುದು ಕಂದ ಕೇಳೆಂದ ೪೯

ನಡೆವುತಿರ್ದುದು ಸಮರವೀಚಿಯು । ಕಡೆಯಲೈವರು ರಕ್ಕಸರ ಖಳ
ರೊಡೆಯ ಕಳವಿನ ಕಾಳಗಕೆ ಕಳುಹಿದನು ಪೈಜಿಗರ
ಪೊಡವಿಪನ ಬಳಿಗವರು ಬಂದರು । ಕಡೆಗೆ ಕಪಿರೂಪಿನಲಿ ಕಂಡನು
ಕಡುಗಲಿಗಳರಸನು ವಿಭೀಷಣನಾ ನಿಶಾಚರರ ೫೦

ತೋಱಿದನು ಮಱೆಯಿಱೆತದೋಲೆಯು । ಕಾಱಿರಿವರೆಂದಾ ಖರಾರಿಗೆ
ತೂಱಿದನು ತೋಮರದ ತುದಿಯಿಂದನಿಬರುಸುರುಗಳ
ಬೇಱ ಬೇಱವರವಱ ತಲೆ ನಭ । ಕೇಱಿದವು ಮುಝು ಭಾಪೆನುತ ಹೊರೆ
ಯೇಱ ಹೊಗಳಿದನಾ ವಿಭೀಷಣನಾ ಖರಾಂತಕನ ೫೧

ರಾಕ್ಷಸವೀರರೊಡನೆ ವಾನರವೀರರು ಭಾರಿ ಕದನವನ್ನು ಹೂಡಿದರು. ೪೮. ಎರಡೂ ಕಡೆಯ ಸೈನಿಕರು ಒಮ್ಮೆ ಹಿಂದೆಗೆಯುವರು, ಒಮ್ಮೆ ಮುಂದಕ್ಕೆ ಒತ್ತುವರು, ಪಕ್ಕಕ್ಕೆ ಸರಿಯುವರು, ಒಳಹೊಗುವರು, ಮರೆಯಾಗುವರು, ನೂಕುವರು, ಅಗಲಿಸುವರು, ಅಡ್ಡಿಪಡಿಸುವರು, ಹಿಮ್ಮೆಟ್ಟಿ ಅಡ್ಡಗಟ್ಟುವರು. ಬೆಟ್ಟ ಮತ್ತು ಮರಗಳ ಹಾಗೂ ಆಯುಧಗಳ ಖಣಿಖಟಿಲೆಂಬ ಶಬ್ದದೊಡನೆ ಎರಡು ಸೈನ್ಯಗಳ ನಡುವೆ ಯುದ್ಧ ನಡೆಯಿತು. ಆಗ ಇಂದ್ರಾದಿ ಸಕಲ ದೇವತೆಗಳೂ ನಡುಗಿದರು. ೪೯. ಹಿಂದಿನ ದಿವ್ಯ ಯುಗಗಳಲ್ಲಿ ಕೈಯಿಕ್ಕಿ ಹೋರಾಡಿದ ವೀರರು ಈ ಆಶ್ಚರ್ಯಕರ ಯುದ್ಧಕ್ಕೆ ತಮ್ಮ ಯುದ್ಧವು ಸರಿಯೆಂದು ಹೇಳಿದರೆ ಅವರ ಬಾಯಲ್ಲಿ ಹುಳು ಬೀಳುವುದಲ್ಲವೆ. ವೀರರಸ ಉಕ್ಕುತ್ತಿತ್ತು, ಯುದ್ಧದಲ್ಲಿ ಮದವೇರುತ್ತಿತ್ತು, ಸೋಲು ಗೆಲುವುಗಳ ನಂಟು ಗಾಢವಾಗಿತ್ತು, ಕೇಳು ಕಂದ ಕುಶ ಎಂದು ವಾಲ್ಮೀಕಿಗಳು ಕದನವನ್ನು ವರ್ಣಿಸಿದರು. ೫೦. ಅತ್ತ ಕಾಳಗವು ನಡೆಯುತ್ತಿತ್ತು. ಈ ಕಡೆ ರಾವಣನು ಕಳ್ಳತನದ ಕಾಳಗಕ್ಕೆ ಐದು ಜನ ಜಿದ್ದುಗಾರರಾದ ರಾಕ್ಷಸರನ್ನು ಕಳುಹಿಸಿದನು. ಅವರು ಕಪಿರೂಪ ಧರಿಸಿ ರಾಮನ ಬಳಿಗೆ ಬಂದರು. ವೀರರೊಡೆಯ ವಿಭೀಷಣನು ಆ ಮೋಸದ ರಾಕ್ಷಸರನ್ನು ಕಂಡನು. ೫೧. ಮೋಸದಿಂದ ಕೊಲ್ಲಲು ಬಂದ ರಾವಣನ ದೂತರಿವರೆಂದು ಖರನನ್ನು ಕೊಂದ ರಾಮನಿಗೆ ವಿಭೀಷಣನು ತೋರಿಸಿದನು. ರಾಮನು ತೋಮರದ ತುದಿಯಿಂದ ಅಷ್ಟೂ ಜನರ ಪ್ರಾಣವನ್ನು ತೆಗೆದನು. ಅವರ ತಲೆಗಳು

ತರಣಿ ಶತ್ರುವದೊಬ್ಬ ವೈಶ್ವಾ । ನರವಿರೋಧಿಯದೊಬ್ಬನೊಬ್ಬನು
ಸರಸಿರುಹಸಂಜಾತ ವೈರಿಮಖಾರಿಯವನೊಬ್ಬ
ಧುರಬಲಾಯುತರಶ್ಮಿಜಿತುಯೆಂ । ಬುರುಪರಾಕ್ರಮಿಯೊಬ್ಬನಿನಿಬರು
ಸರಿದರಂತಕಪುರಿಗೆ ದೈವದ್ರೋಹಿಗಳು ಬಳಿಕ ೫೨

ಬೇರೆ ಬೇರೆಯಾಗಿ ಆಕಾಶಕ್ಕೆ ಹಾರಿದವು. 'ಮಝು, ಭಾಪು !' ಎನ್ನುತ್ತ ಉತ್ಸಾಹದಿಂದ ರಾಮನನ್ನು ವಿಭೀಷಣನು ಹೊಗಳಿದನು. ೫೨. ಸೂರ್ಯನ ಶತ್ರು ಒಬ್ಬ, ಒಬ್ಬನು ಅಗ್ನಿಯ ಶತ್ರು, ಒಬ್ಬನು ಬ್ರಹ್ಮವಿರೋಧಿ, ಇನ್ನೊಬ್ಬನು ಶಿವನ ವಿರೋಧಿ, ಯುದ್ಧವೀರ ರಶ್ಮಿಜಿತು ಎಂಬ ಮಹಾಪರಾಕ್ರಮಶಾಲಿಯೊಬ್ಬ. ಇಷ್ಟು ಜನ ದೈವ ದ್ರೋಹಿಗಳು ಯಮನ ಪಟ್ಟಣಕ್ಕೆ ಪ್ರಯಾಣಮಾಡಿದರು.

# ಹದಿನಾಲ್ಕನೆಯ ಸಂಧಿ

ಸೂಚನೆ॥ ರಾಮಪದಯುಗ ಕಲ್ಪಕುಜವಿ । ಶ್ರಾಮ ವೀರ ವಿಭೀಷಣನು ಸಂ
ಗ್ರಾಮದಲಿ ಸೀಳಿದನು ಕಲಿ ಮಿತ್ರಘ್ನರಾಕ್ಷಸನ

ಕುಶನೆ ಕೇಳ್ಳೈ ಪೈಕವೆರಡರ । ವಿಷಮವೀರರ ವಿಗ್ರಹದ ಸರ
ಭಸದ ಸೌರಂಭಾತಿಶಯ ನಡೆದುದು ಸುರಾಸುರರ
ಅಸಮ ರಣಕಿಮ್ಮಿಗಿಲೆನಲು ಸಂ । ದಿಸಿದನಾ ಸಮಯದಲಿ ರಣಕ
ರ್ಕಶ ರಘುಕ್ಷಿತಿಪತಿಯನಾ ಮಿತ್ರಘ್ನನಾಜಿಯಲಿ ೧

ಧುರದೊಳಾ ರಕ್ಕಸಗೆ ಮನುಜಾ । ಮರ ಮಹೋರಗರಿಂದ ಸಾಯದ
ವರವು ಸತ್ವದಲವ ದಶಾಸ್ಯನ ಬಾಹುವಿಕ್ರಮಕೆ
ಎರಡುಮಡಿ ಲವ ಕೇಳಿದೈ ಸಂ । ಗರಕೆ ನಿಂದನು ನಿಮ್ಮ ತಂದೆಯ
ಸರಿಸದಲಿ ರವಿಗವ್ವಳಿಪ ರಾಹುವಿನ ತೆಱನಂತೆ ೨

ಅಱಿದನವ ಮಿತ್ರಘ್ನನೆಂದಾ । ಶರಣಜನವತ್ಸಲನು ರಾಮನ
ಮಱೆಯಹೊಕ್ಕಸುರೇಂದ್ರನಿವನತಿಬಲನಲಾಯೆನುತ
ಅರಸ ಚಿತ್ತೈಸೆನ್ನವನು ಪತಿ । ಕರಿಸಿದುದಕೆನ್ನಲ್ಲಿ ಸೇವಾ
ಪರಿಣತೆಯ ಕೈಕೊಳ್ಳಬೇಕೆಂದೆಱಗಿದನು ಪದಕೆ ೩

ಸೂಚನೆ॥ ರಾಮನ ಪಾದಗಳೆಂಬ ಕಲ್ಪವೃಕ್ಷವನ್ನಾಶ್ರಯಿಸಿದ ಕಲಿ ವಿಭೀಷಣನು ವೀರನಾದ ಮಿತ್ರಘ್ನನೆಂಬ ರಾಕ್ಷಸನನ್ನು ಯುದ್ಧದಲ್ಲಿ ಸೀಳಿಹಾಕಿದನು. ೧. ಕುಶನೆ ಕೇಳಯ್ಯ, ದೇವತೆಗಳ ರಾಕ್ಷಸರ ನಡುವಿನ ಅಸಾಧಾರಣ ಯುದ್ಧಕ್ಕೆ ಎರಡರಷ್ಟು ಎನ್ನುವಂತೆ ಎರಡೂ ಕಡೆಗಳ ಅಸಮಾನ ಪರಾಕ್ರಮಶಾಲಿಗಳ ಯುದ್ಧವು ಅತ್ಯಂತ ಸಡಗರ ರಭಸಗಳಿಂದ ನಡೆಯಿತು. ಆ ಸಮಯದಲ್ಲಿ ಯುದ್ಧದಲ್ಲಿ ಯಮನಾದ ರಾಮನ ಮೇಲೆ ಮಿತ್ರಘ್ನನು ಯುದ್ಧಕ್ಕೆ ಬಂದನು. ೨. ಆ ಮಿತ್ರಘ್ನ ರಾಕ್ಷಸನಿಗೆ ಮಾನವರು, ದೇವತೆಗಳು ಮತ್ತು ಉರಗರುಗಳಿಂದ ಯುದ್ಧದಲ್ಲಿ ಸಾಯದ ವರವುಂಟು. ರಾವಣನ ತೋಳ್ಬಲಕ್ಕೆ ಎರಡರಷ್ಟು ಸಾಮರ್ಥ್ಯ ಅವನಲ್ಲಿ. ಲವ ಕೇಳು, ಸೂರ್ಯನನ್ನು ರಾಹುವು ಆಕ್ರಮಿಸುವಂತೆ ನಿಮ್ಮ ತಂದೆಗೆ ಸರಿಸಮಾನವಾಗಿ ಯುದ್ಧಕ್ಕೆ ನಿಂತನು. ೩. ಮರೆಹೊಕ್ಕವರಿಗೆ ಪ್ರಿಯನಾದ ರಾಮನು ಅವನು ಮಿತ್ರಘ್ನನೆಂಬುದನ್ನು ಅರಿತನು. ರಾಮನ ಮರೆಹೊಕ್ಕ ವಿಭೀಷಣನು ಇವನು ಮಹಾಬಲಶಾಲಿಯಲ್ಲವೇ ಎಂದು ಯೋಚಿಸಿ "ಅರಸನೇ ಆಲಿಸು. ನನ್ನನ್ನು ಅಂಗೀಕರಿಸಿದುದಕ್ಕೆ ಈಗ ನನ್ನಿಂದ ಉತ್ತಮ ಸೇವೆಯನ್ನು ಸ್ವೀಕರಿಸ

ಇವನ ಕೂಡಣ ಕಲಹವನು ನೀ । ನವಧರಿಸು ಬಿಲುದುಡುಕಬೇಡಿವ
ನವಗಡೆಯು ರಣವೆನ್ನೊಳಾಗಲಿ ನೋಡು ಕೌತುಕವ
ಇವಗೆ ಸುರ ಮಾನವ ಭುಜಂಗಮ । ನಿವಹದಲಿ ಸಾವಿಲ್ಲವಿವನಲಿ
ಬವರಕೆನ್ನನು ಬೆಸಸೆನುತ ಬೀಳ್ಕೊಂಡನಸುರೇಂದ್ರ ೪

ನಿಲ್ಲೆಲವೊ ಮಿತ್ರಘ್ನ ಶತ್ರುಗ । ಳಿಲ್ಲಿ ನಿನಗಾರಸುರರಲಿ ಕಡು
ಖುಲ್ಲನೈ ಪ್ರತಿಭಟರು ನಾವೇನಲ್ಲವೇ ನಿನಗೆ
ನಿಲ್ಲೆನುತ ತಱುಬಿದನು ರಿಪುರಣ । ಮಲ್ಲ ಮಣಿಮಯ ಗದೆಯ ಗಾಡಿಯ
ಘಲ್ಲಣೆಯ ಗತಿಯಿಂದ ಗಗನೇಚರರು ನಲಿದಾಡೆ ೫

ಸುಡುಸುಡೆಲವೋ ದ್ರೋಹಿ ಹಗೆಯನು । ಹಿಡಿದು ನಿಜವಂಶದ್ರುಮಾಳಿಗೆ
ಕೊಡಲಿಯಾದಯಲಾ ನಿರೀಕ್ಷಿಸಬಹುದೆ ಪಾತಕನ
ಪೊಡವಿ ಹೊರದೀಗಸ್ತ್ರಶಸ್ತ್ರವ । ಹಿಡಿಯೆ ಸಾಪತಿಕರಿಸಿ ಕೊಂಡಿ
ರ್ದೊಡೆಯನನು ಕರೆ ಕೊಲೆಗರುಹ ನೀನಲ್ಲ ಸಾರೆಂದ ೬

ಬಗುಳದಿರು ಕೇಳೆಲವೊ ಬಲ್ಲಡೆ । ನಿಗಮತತ್ವರಹಸ್ಯವನು ಪಾ
ನಿಗಳು ಪಂಡಿತರಾದಡುಸುರಲುಬಹುದೆ ಭಾಷಿತವ
ಜಗದ ದೈವದ ಕೂಡೆ ಸಮರದ । ಸೊಗಸು ಗಡ ಸಿಂಹದಲಿ ಸೀಳ್ನಾಯ್
ಜಗಳಕಂಗೈಸುವುದೆ ಕೇಳೆಲೊ ಖೂಳ ನೀನೆಂದ ೭

ಬೇಕು" ಎಂದು ರಾಮನ ಕಾಲುಗಳಿಗೆ ನಮಸ್ಕರಿಸಿದನು. ೪. "ಇವನ ಮೇಲಿನ ಯುದ್ಧದ ವಿಷಯವನ್ನು ಆಲಿಸು. ಇವನ ಮೇಲೆ ನೀನು ಬಿಲ್ಲೆತ್ತಬೇಡ, ಇವನ ಮೇಲಿನ ಭಯಂಕರ ಕದನವನ್ನು ನಾನು ಮಾಡುವೆನು. ಅದರ ಸ್ವಾರಸ್ಯವನ್ನು ನೋಡು. ದೇವತೆಗಳು, ಮಾನವರು ಮತ್ತು ಸರ್ಪರುಗಳಿಂದ ಇವನಿಗೆ ಮರಣ ವಿಲ್ಲ. ಇವನ ಮೇಲಿನ ಯುದ್ಧಕ್ಕೆ ನನಗೆ ಅಪ್ಪಣೆ ಕೊಡು" ಎಂದು ಹೇಳಿ ವಿಭೀಷಣನು ರಾಮನನ್ನು ಬೀಳ್ಕೊಂಡು ಹೊರಟನು. ೫. "ಲೋ ಮಿತ್ರಘ್ನ ನಿಲ್ಲು. ಇಲ್ಲಿ ನಿನಗೆ ಯಾರು ಶತ್ರುಗಳು ? ರಾಕ್ಷಸರಲ್ಲಿ ನೀನು ನೀಚ. ಕದನದಲ್ಲಿ ನಿನ್ನನ್ನು ಎದುರಿಸುವ ವೀರರಲ್ಲವೇ ನಾವು, ನಿಲ್ಲು" ಎಂದು ನುಡಿದು ಯುದ್ಧ ವೀರ ವಿಭೀಷಣನು ಗದೆಯನ್ನು ಬೆಡಗಿನಿಂದ ತಿರುಗಿಸುತ್ತ ಮಿತ್ರಘ್ನನನ್ನು ಅಡ್ಡಗಟ್ಟಿ ದನು. ೬. "ಲೋ ವಿಶ್ವಾಸಘಾತಕ, ಸುಡು ಸುಡು, ಶತ್ರುವಿನ ಪಕ್ಷ ಸೇರಿ ನಿನ್ನ ಕುಲವೆಂಬ ವೃಕ್ಷಕ್ಕೆ ಕೊಡಲಿಯಾದೆಯಲ್ಲ. ನಿನ್ನಂಥ ಪಾಪಿಷ್ಠನನ್ನು ನೋಡಬಹುದೇ. ನೀನು ಅಸ್ತ್ರಶಸ್ತ್ರಗಳನ್ನು ಹಿಡಿದರೆ ಭೂಮಿಯು ನಿನ್ನನ್ನು ಹೊತ್ತುಕೊಂಡಿರದು, ನಿನಗೆ ಆಶ್ರಯ ನೀಡಿರುವ ನಿನ್ನ ಒಡೆಯನನ್ನು ಕರೆ. ತೊಲಗು, ನೀನು ಕೊಲೆಗೆ ಅರ್ಹನಲ್ಲ" ಎಂದು ಮಿತ್ರಘ್ನ ನುಡಿದನು. ೭. "ವೇದದ ರಹಸ್ಯವನ್ನು ತಿಳಿದಿದ್ದ ಪಕ್ಷದಲ್ಲಿ ಹೀಗೆ ಬಗುಳುತ್ತಾರೆಯೆ ? ಕುಡುಕರು ಪಂಡಿತರಾದರೆ ಬುದ್ಧಿವಾದ ಹೇಳಬಹುದೆ ? ಜಗತ್ತಿನ ದೇವರೊಡನೆ ಯುದ್ಧವೆ ? ಸಿಂಹದೊಡನೆ ಸೀಳುನಾಯಿ ಜಗಳಮಾಡಲು ಬಯಸು

ಅಣಕವೇ ನಮ್ಮೊಡನೆ ನೀನೇ । ಕೆಣಕಿದವನೇ ಶಿವಶಿವಾ ರಾ
ವಣತನೂಭವನೆಂಬ ಬಿಡೆಯಕೆ ಸೈರಿಸಿದೆನೈಸೆ
ರಣಕೆ ಮೊದಲಿಗ ನೀನೆಮಗೆ ಮಾ । ರಣವಿಚಿತ್ರವ ನೋಡೆನುತ ತೋ
ರಣ ಗದಾ ದೋಸ್ತಂಭನಿಳಿದನು ಮುಳಿದು ಮಣಿರಥವ ೮

ತನುರುಚಿಸ್ವರ್ಭಾನುವನು ರಣ । ನಿನದ ನಿರ್ಘಾತವನು ಕೋಪದ
ಘನತೆ ಜನಿತ ಲಯಾಗ್ನಿಯನು ವಿಲಯಾದಿಭೈರವನ
ಕನಲಿಕೆಯ ಕೋಳಾಹಳವ ತಾ । ನನುಕರಿಸಿ ನಡೆತಂದನಂಬರ
ದನಿಮಿಷಾವಳಿ ಬೆದಱೆ ಬೆರಸಿದನಾ ವಿಭೀಷಣನ ೯

ಅಂಗವಮರಾಚಲವ ಕೋಪವ । ನಂಗವೈರಿಯನಸಮಸಂಗರ
ರಂಗದಬ್ಬರದುಬ್ಬುಗರ್ವಿತ ವೀರ ನರಹರಿಯ
ಅಂಗವಣೆ ಪವಮಾನಜನನು । ತ್ತುಂಗಬಲ ರಘುಪತಿಯ ವಿಕ್ರಮ
ದಂಗವನು ಮಿಗಲಾ ವಿಭೀಷಣ ಹೊಕ್ಕನುರವಣಿಸಿ ೧೦

ಬಳಿಕ ಹೇಳುವುದೇನು ಕಲ್ಪಾ । ನಳನ ಕರುವಿಟ್ಟಂತೆ ನಿಂದಿದ
ರಳವಿಯಲಿ ಹೊಗರೊಗುವ ಮೋಱೆಯ ಹೊಗೆವ ಮೀಸೆಗಳ
ಬಲಿದ ಹುಬ್ಬಿನ ಬಿಟ್ಟ ಕಂಗಳ । ಝಳದ ಝಾಡಿಯ ನಾಸಿಕದಲು
ಚ್ಚಳಿಸುವಸಿತಾಭಾಸ ಧೂಮ್ರಶ್ವಾಸ ಲಹರಿಯಲಿ ೧೧

ವುದೇ ? ಕೇಳಲವೋ ದುಷ್ಟ” ಎಂದ ವಿಭೀಷಣ. ೮. “ನಮ್ಮೊಡನೆ ಅಣಕವೇ ? ನನ್ನನ್ನು ಕೆಣಕಿದವನು ನೀನೇ ಏನು. ಶಿವ ಶಿವಾ, ರಾವಣನ ಮಗನೆಂಬ ದಾಕ್ಷಿಣ್ಯದಿಂದ ಸೈರಿಸಿದೆನಪ್ಪ. ನಮ್ಮೊಡನೆ ಕದನಕ್ಕೆ ಮೊದಲನೆಯವನು ನೀನು. ನಿನ್ನ ಸಂಹಾರದ ಆಶ್ಚರ್ಯವನ್ನು ನೋಡು” ಎನ್ನುತ್ತ ತೋರಣಕಂಬದಂಥ ಗದೆಯ ತೋಳುಗಳ ಮಿತ್ರಘ್ನನು ಕೆರಳಿ ರತ್ನದ ರಥದಿಂದ ಇಳಿದುಬಂದನು. ೯. ದೇಹಕಾಂತಿಯ ರಾಹು, ಸಿಂಹನಾದದ ಸಿಡಿಲು, ಕೋಪದಿಂದುದಿಸಿದ ಪ್ರಳಯಾಗ್ನಿ, ಪ್ರಳಯಭೈರವನ ಕೋಪದ ತೀವ್ರತೆಗಳನ್ನು ಅಭಿನಯಿಸುತ್ತ ಆಕಾಶದಿಂದಿಳಿದುಬಂದು ಮಿತ್ರಘ್ನನು ವಿಭೀಷಣನ ಮೇಲೆ ಬಿದ್ದನು. ಆಗ ದೇವತೆಗಳು ಬೆದರಿದರು. ೧೦. ದೇಹದಲ್ಲಿ ಮೇರುಪರ್ವತವನ್ನೂ, ಕೋಪದಲ್ಲಿ ಕಾಮಾರಿಶಿವನನ್ನೂ, ಸಾಹಸದಲ್ಲಿ ಯುದ್ಧದ ಅಬ್ಬರದಿಂದ ಮದಿಸಿದ ವೀರನರಸಿಂಹನನ್ನೂ, ಉನ್ನತಬಲದಲ್ಲಿ ಮಾರುತಿಯನ್ನೂ, ಪರಾಕ್ರಮದಲ್ಲಿ ರಘುಪತಿಯನ್ನೂ ಮೀರಿಸಿ ವಿಭೀಷಣನು ರಭಸದಿಂದ ಮಿತ್ರಘ್ನನನ್ನು ಎದುರಿಸಿದನು. ೧೧. ಇನ್ನು ಎಷ್ಟೆಂದು ವರ್ಣಿಸುವುದು ! ಪ್ರಳಯಾಗ್ನಿಯನ್ನು ಎರಕಹೊಯ್ದ ಹಾಗೆ ಕಾಂತಿಬೀರುವ ಮುಖಗಳ, ಹೊಗೆಯಾಡುವ ಮೀಸೆಗಳ, ಗಂಟಿಕ್ಕಿದ ಹುಬ್ಬುಗಳ, ಉರಿಯುವ ತೆರೆದ ಕಣ್ಣುಗಳ, ಕಪ್ಪಗೆ ಕಾಣಿಸುವ ಹೊಗೆಯ ಉಸಿರುಬಿಡುವ ವೀರರು

ಕಲಹದಭಿನವ ಪಾಡು ಪಂಥದ । ಕಲಿತ ವಚನದ ಕಾಯದುಬ್ಬಿನ
ಹೊಳಕೆಯಲಿ ಹೊಕ್ಕುಪ್ಪರಿಸಿದರು ಬಲಿದ ಮುಂಡಿಯಲಿ
ನಿಲುಕಿ ಗದೆಗಳ ತೂಗಿದರು ಮೈ । ವಳಿಯಲಿಳೆ ತೂಗಾಡೆ ಬಾಹಾ
ಲುಳಿತಬಲರೊಳಹೊಕ್ಕು ಹೊಯ್ದರು ಕಾಯ್ದು ಗಾಯಗಳ ೧೨

ಗದೆಗದೆಯ ಹೊಯ್ಲುಗಳ ಹೋರಟೆ । ಯುದುರಿಸಿತು ಕಿಡಿಗಳನು ಖಣಿಖಟಿ
ಲದುಭುತದ ರವವಣೆದುದೆದೆಯನು ಸಿಡಿಲ ಬಲುವೊಯ್ಲು
ಮದಮುಖರ ಪದಘಾತಿಗಹಿಪನ । ಹೃದಯ ಕೂರುಮನೊಡಲು ದಿಕ್ಕರಿ
ಯುದರ ಹಾತಕವಾರುತಿರ್ದವು ಹೇಳಲೇನೆಂದ ೧೩

ನಿಲಿಸಿತವರುಬ್ಬರದ ನಿಬ್ಬರ । ಗಲಹವಾ ದಿನದುಭಯ ಸಮರದ
ಕಲಿಗಳಾಜಿಯನಾ ಜಗಕ್ಷೋಭಪ್ರತಾಪಕದ
ಖಳನನಿಕ್ಕೆಲಿಸಿದರು ಗಗನದ । ಗಲಭೆಕಾಜರು ಗಾವಳಿಯನುಜಿ[3]
ನಿಲಿಸಿ ನೋಟಕರಾಯ್ತು ಕಲಿಗಳ ಕದನಕೇಳಿಯಲಿ ೧೪

ಸುಳಿವು ವಂಚನೆ ಸೆಂಚ ಪೈಸರ । ಉಳಿ ವಿಘಾತ ನಿಘಾತ ಪರಿಮಂ
ಡಲನಿವಾರಣ ವಿಹಿತ ಚರಣದ ಚಟುಳ ಚೂರಣದ
ಚಳ ಚಮತ್ಕೃತಿ ಚಪ್ಪರಣೆ ಚಾ । ಪಳ ವಿಲಂಘನ ಲಗಡಿ ಲಾಘವ
ಲುಳಿಯ ಲಾಗಿನ ಚಟುಳಭಟರೊದಗಿದರು ಸರಿಸದಲಿ ೧೫

ಯುದ್ಧಕ್ಕೆ ನಿಂತರು. ೧೨. ಹೊಸರೀತಿಯ ಕದನದ, ಆಣೆ ಪ್ರತಿಜ್ಞೆಗಳ ಮಾತಿನ ಮತ್ತು ಸೊಕ್ಕಿದ ದೇಹದ ವೀರರು ಒಬ್ಬರ ಮೇಲೊಬ್ಬರು ನೆಗೆದರು; ಮಂಡಿಯೂರಿ ಮೈಚಾಚಿ ಗದೆಗಳನ್ನು ಬೀಸಿದರು. ಅವರ ದೇಹದ ಚಲನೆಗೆ ಭೂಮಿಯು ತೂಗಾಡಲು ತೋಳ್ಬಲದ ವೀರರು ಒಬ್ಬರು ಇನ್ನೊಬ್ಬರ ಏಟುಗಳನ್ನು ತಪ್ಪಿಸಿಕೊಂಡು ಒಳಹೊಕ್ಕು ಒಬ್ಬರು ಇನ್ನೊಬ್ಬರನ್ನು ಹೊಡೆದರು. ೧೩. ಗದೆಗದೆಗಳ ಹೊಡೆತದಿಂದ ಕಿಡಿಗಳು ಉದುರಿದವು. ಖಣಿಕಟಿಲ್ ಎಂಬ ಅದ್ಭುತಶಬ್ದದೊಡನೆ ಸಿಡಿಲಿನ ಏಟು ಎದೆಗೆ ಬಡಿಯಿತು. ಮದಿಸಿದ ವೀರರ ಕಾಲ್ತುಳಿತಕ್ಕೆ ಆದಿಶೇಷನ ಹೃದಯ, ಕೂರ್ಮನ ದೇಹ, ದಿಗ್ಗಜದ ಹೊಟ್ಟೆಗಳು ಬಡಿದುಕೊಂಡವು ; ಇದನ್ನು ಏನೆಂದು ವರ್ಣಿಸಲಿ ಎಂದು ವಾಲ್ಮೀಕಿ ನುಡಿದರು. ೧೪. ವಿಭೀಷಣ ಮತ್ತು ಮಿತ್ರಘ್ನರ ಅತಿಶಯವಾದ ರಭಸದ ಕದನವು ಆ ದಿನದ ಎರಡೂ ಕಡೆಯ ವೀರರ ಯುದ್ಧವನ್ನು ನಿಲ್ಲಿಸಿತು. ಜಗತ್ತನ್ನು ಅಲ್ಲೋಲ ಕಲ್ಲೋಲ ಮಾಡುವ ಪ್ರತಾಪಶಾಲಿ ರಾಕ್ಷಸನ ಎರಡು ಪಕ್ಕಗಳಲ್ಲಿಯೂ ವೀರರು ಸಾಲಾಗಿ ನಿಂತರು. ಆಕಾಶದಲ್ಲಿ ಸೇರಿ ಗಲಾಟೆಮಾಡುತ್ತಿದ್ದ ದೇವತೆಗಳು ಗದ್ದಲವನ್ನು ನಿಲ್ಲಿಸಿ ವೀರರಿಬ್ಬರ ಕದನಕ್ಕೆ ಪ್ರೇಕ್ಷಕರಾದರು. ೧೫. ಮುಂದಕ್ಕೆ ಚಲಿಸುವ, ವಂಚಿಸುವ, ಕೌಶಲ್ಯದಿಂದ ಹಿಮ್ಮೆಟ್ಟುವ, ಚಾಕಚಕ್ಯತೆಯಿಂದ ಅಡ್ಡಿಪಡಿಸುವ, ಪೆಟ್ಟು ಕೊಡುವ, ಚಕ್ರಾಕಾರವಾಗಿ ಸುತ್ತುತ್ತ ತಪ್ಪಿಸಿಕೊಳ್ಳುವ, ಕ್ರಮವಾಗಿ ಹೆಜ್ಜೆಯಿಟ್ಟು ಚುರುಕಿನಿಂದ ಪೆಟ್ಟು ತೋರಿಸುವ, ದೃಢಚಮತ್ಕಾರವನ್ನು ತೋರಿಸುವ, ಉತ್ಸಾಹದಿಂದ

ಝಾಡಿ ಝುಂಕಣೆ ಝಡವು ಖಾಡಾ । ಖಾಡಿ ದೃಢಗತಿ ದೃಷ್ಟಿಪಾತಾ
ಲೀಢ ಗೋಮೂತ್ರಿಕ ಪರಿಭ್ರಮಣ ಪ್ರವಿಕ್ಷೇಪ
ಪಾಡು ಪೈಸರ ಪಸರ ಪಂಥದ । ಗಾಢ ಘಲ್ಲಣೆಗಳಲಿ ಗದೆ ಕಣೆ
ದಾಡಿದವು ಕಿಡಿ ಸೂಸಲಿಬ್ಬರ ನಿರ್ಭರಾಂಗದಲಿ ೧೬

ಕಪಿವಿಲಂಘನೆ ಕೀಟ ನಿಯುದ್ಧ । ದ್ವಿಪರಣಪ್ರಕರಣ ವೃಷಾವಹ
ಶಫರಿಸಂಚರ ಸರ್ಪಗತಿ ಸವ್ಯಾಪಸವ್ಯಗಳ
ಚಪಲತರ ಪಯಪಾಡುಗಳ ಕಡು । ಕುಪಿತ ಕರ್ಕಶ ಮಾನಸದ ರಣ
ನಿಪುಣ ನಿಕಷಾಸೂನುಗಳು ಕಾದಿದರು ಕಡುಹಿನಲಿ ೧೭

ಆಯೆನುತ ಸುರತತಿ ವಿಭೀಷಣ । ನಾಯುಧದ ಲಾವಣಿಗೆಗೊಗುವರು
ವಾಯುಪಥದಲಿ ಪರಿಮಳದ ಸುರಕುಜದ ಕುಸುಮಗಳ
ಖೋಯೆನುತ ಮಿತ್ರಘ್ನ ಖಳನ ಗ । ಧಾಯುಧದ ಗಾಡಿಕೆಗೆ ದೈತ್ಯನಿ
ಕಾಯ ನಿರುಪಮ ನಿವಸನವನು ನಿವಾಳಿಸಿತು ರಣಕೆ ೧೮

ಹೊಯ್ದನಾತನನೀತನೀತನ । ಹೊಯ್ದನಾ ಖಳ ಬಳ್ಳಿಮಿಂಚಿನ
ಸೋದರದ ಸುಳಿವುಗಳೊ ಮಣಿಮಯ ಗದೆಯ ಘಲ್ಲಣೆಯೊ
ಮೇದಿನಿಯ ಹೊಱಕಾಱಿರಸು ಲಘು । ವಾದವಿವರಿಬ್ಬರ ಮಹಾಹವ
ಪಾದಘಟ್ಟಣೆಗೊಲೆವುತಿರ್ದುದು ಮೇರುಮಸ್ತಕವ ೧೯

ಕೂಗುವ, ನೆಗೆದು ಪಟ್ಟಿನಿಂದ ಅಪ್ಪಳಿಸುವ ಆ ಇಬ್ಬರು ವೀರರು ಹಲವು ಪಟ್ಟಿನ ಕದನಚಾತುರ್ಯವನ್ನು ಸರಿಸಮಾನವಾಗಿ ಮೆರೆದರು. ೧೬. ಹಂಗಿಸಿ ಮಾತನಾಡುವಿಕೆ, ಮೇಲೆರಗುವಿಕೆ, ಪೈಪೋಟಿ, ದೃಢಚಲನೆ, ದೃಷ್ಟಿಸಿ ನೋಡುವಿಕೆ, ಬಲಗಾಲನ್ನು ಮುಂದಕ್ಕಿಟ್ಟು ಎಡಮಂಡಿಯೂರಿ ನಿಲ್ಲುವಿಕೆ, ಹಸು ಗಂಜಲ ಸುರಿದಂತೆ ನಡೆಯುವುದು, ಸುತ್ತುವುದು, ಪಕ್ಕಕ್ಕೆ ಸರಿಯುವುದು, ಹಿಂಜರಿಯುವುದು–ಈ ರೀತಿಯಲ್ಲಿ ಇಬ್ಬರು ವೀರರೂ ಜೋರಾಗಿ ಗರ್ಜಿಸುತ್ತ ಒಬ್ಬರನ್ನೊಬ್ಬರು ಗದೆಯಿಂದ ಅಪ್ಪಳಿಸಲು ಇಬ್ಬರ ದೇಹಗಳಿಂದಲೂ ಕಿಡಿಗಳೆದ್ದವು. ೧೭. ಕಪಿಯ ನೆಗೆತ, ಕೀಟಗಳ ಕಲಹ, ಆನೆಗಳ ಯುದ್ಧ, ಗೂಳಿಗಳ ಕದನ, ಮೀನುಗಳ ಚಲನೆ, ಸರ್ಪಗತಿ, ಎಡಬಲಗಳಲ್ಲಿ ಚತುರತೆಯಿಂದ ಹೆಜ್ಜೆಯಿಡುವ ರೀತಿ–ಹೀಗೆ ಕೆರಳಿದ ಕಠಿಣ ಮನಸ್ಸಿನ ಯುದ್ಧಕುಶಲಿಗಳಾದ ರಾಕ್ಷಸರು ನಾನಾರೀತಿಯಲ್ಲಿ ಹೊಡೆದಾಡಿದರು. ೧೮. ವಿಭೀಷಣನು ಆಯುಧದಿಂದ ಶತ್ರುವನ್ನು ಮುತ್ತಲು ದೇವತೆಗಳು 'ಆ'ಯೆಂದು ಆಶ್ಚರ್ಯದಿಂದ ಆಕಾಶದಲ್ಲಿ ಕಲ್ಪವೃಕ್ಷದ ಸುವಾಸನೆಯ ಹೂವುಗಳನ್ನು ಎರಚಿದರು. ಮಿತ್ರಘ್ನನು ಗದಾಯುಧದಿಂದ ಬಿರುಸಾಗಿ ಹೊಡೆಯಲು ರಾಕ್ಷಸರು ಖೋ ಎಂದು ಕೂಗುತ್ತ ಯುದ್ಧದ ದೃಷ್ಟಿಪರಿಹಾರಕ್ಕೆಂದು ತಮ್ಮ ಮೈಮೇಲಿನ ಬಟ್ಟೆಯನ್ನು ಬೀಸಿದರು. ೧೯. ಬಳ್ಳಿಮಿಂಚಿನ ತುಂಬಿದ ಚಲನೆಯೋ ವಜ್ರದ ಗದೆಗಳ ಘರ್ಷಣೆಯೋ ಎಂಬಂತೆ ವಿಭೀಷಣನು ಮಿತ್ರಘ್ನನನ್ನು ಗದೆಯಿಂದ ಹೊಡೆ

ಮೇಲೆ ಮೇಲುಬ್ಬೇಳ್ವ ರೋಷ । ಜ್ವಾಲೆಗಳ ಕಿಡಿಗಱೆವ ಬಿಡುಗ
ಣ್ಣಾಲಿಗಳ ಬಲಿದುಪ್ಪರಿಸಿದಿಪ್ಪುರಿಯ ಹುಬ್ಬುಗಳ
ಸುಯ್ಲುಗಳ ಕಾರ್ಬೊಗೆಯ ಮಸಕದ । ಮಾಲೆಗಿಡಿಗಳ ದಾಡೆಗಳ ರಣ
ಧೂಳಿಯುಪ್ಪರದಸಮಭಟರೊದಗಿದರು ಸಮರದಲಿ ೨೦

ತೆಗೆವ ಕಟ್ಟುವ ತಡೆವ ತವಕಿಸಿ । ಹೊಗುವ ಹೊಂಚುವ ಹೊಳೆವನೆಡದಲಿ
ಮಿಗುವನೌಕುವ ಬಲದಲೊಯ್ಯಾರಗಳ ಬಿನ್ನಣದ
ಬಗೆಯ ಬಲುಬವರಿಗರು ಮೇಲಣ । ಜಗದ ಜನ ಹಾರೈಸಿ ತಲೆದೂ
ಗುಗಳಲಿರಲಿದ್ದಸೆಯ ಬಲ ಮಱೆದುದು ಮಹಾಹವವ ೨೧

ಹಱಿದ ಮೈದೊಗಲುಗಳ ಸೀಸಕ । ಮುಱಿದೊಗುವ ನೆತ್ತರಿನ ನೆತ್ತಿಯ
ಮಱವೆಗಳ ಪಡಿಬರಿಸುವೆಚ್ಚರಿಕೆಗಳ ವಿಶ್ರಮದ
ಉಱುಬಿನುಸುರಳ್ಕಿಗಳ ಮಿಗೆ ತೂ । ಒಱೆವ ರಕುತದ ರಣದ ನಾಟಕ
ದಱಕೆಕಾಱರು ತಾವುರಿಯಲೊದಗಿದರು ಸರಿಸದಲಿ ೨೨

ದರೆ ಮಿತ್ರಘ್ನನು ವಿಭೀಷಣನನ್ನು ಹೊಡೆದನು. ಈ ಇಬ್ಬರು ಮಹಾವೀರರ ಪಾದಗಳ ಏಟಿಗೆ ಭೂಮಿಯನ್ನು ಹೊತ್ತುಕೊಂಡಿರುವವರ ಪ್ರಾಣಗಳು ಹಗುರಾದವು ; ಮೇರು ಪರ್ವತದ ಶಿಖರ ಒಲೆದಾಡಿತು. ೨೦. ಮೇಲೆ ಮೇಲೆ ಉಕ್ಕುವ ಕೋಪದ ಉರಿಗಳ, ಕಿಡಿಗಳನ್ನು ಕಾರುವ ಬಿಡುಗಣ್ಣುಗಳ, ಗಂಟಿಕ್ಕಿ ಮೇಲಕ್ಕೇರಿದ ಎರಡು ಹುರಿಯಂತಿದ್ದ ಹುಬ್ಬುಗಳ, ಕಪ್ಪುಹೊಗೆಯನ್ನು ಚೆಲ್ಲುತ್ತಿದ್ದ ಉಸುರುಗಳ, ಅತಿಶಯವಾಗಿ ಕಿಡಿಗಳ ಸಾಲುಗಳನ್ನೆರಚುವ ಕೋರೆದಾಡೆಗಳ ಮಹಾವೀರರು ಯುದ್ಧ ಮಾಡುತ್ತಿರಲು ಯುದ್ಧದ ಧೂಳು ವ್ಯಾಪಕವಾಗಿ ಏಳುತ್ತಿತ್ತು. ೨೧. ಹಿಂದೆಗೆಯುವ, ಬಂಧಿಸುವ ತಡೆಗಟ್ಟುವ, ಆತುರದಿಂದ ಮೇಲೆಬೀಳುವ, ಹೊಂಚುಹಾಕುವ, ಎಡದಲ್ಲಿ ಕಾಣಿಸಿ ಕೊಳ್ಳುವ, ಬಲಗಡೆಯಲ್ಲಿ ಮೀರಿ ನೂಕುವ-ಹಲವು ಬಗೆಯ ಪಟ್ಟುಗಳನ್ನು ಹಾಕುತ್ತ ಯುದ್ಧ ಮಾಡುತ್ತಿದ್ದ ವೀರರು ಮೆರೆದರು. ದೇವಲೋಕದ ಜನರೂ ಮತ್ತು ಎರಡೂ ಕಡೆಗಳಲ್ಲಿದ್ದ ಸೈನ್ಯಗಳೂ ಈ ಮಹಾಯುದ್ಧವನ್ನು ನೋಡುತ್ತ ಮೆಚ್ಚಿಕೆಯಿಂದ ತಲೆ ದೂಗುತ್ತಿದ್ದರು. ೨೨. ಮೈಚರ್ಮ ಕಿತ್ತು ಶಿರಸ್ತ್ರಾಣ ಮುರಿದು ನೆತ್ತಿಯಿಂದ ರಕ್ತ ಸುರಿಯುವ, ಎಚ್ಚರದಪ್ಪುವ, ಪುನಃ ಎಚ್ಚರಗೊಳ್ಳುವ, ನಡುವೆ ವಿಶ್ರಾಂತಿ ಪಡೆಯುವ, ಜೋರಾಗಿ ಉಸುರು ಹುಯ್ಯುವ, ಅತಿಯಾಗಿ ರಕ್ತವನ್ನು ಉಗಿಯುವ ಯುದ್ಧವೆಂಬ ನಾಟಕದಲ್ಲಿ ತೃಪ್ತಿಗೊಳ್ಳದ ವೀರರಿಬ್ಬರು ಸರಿಸಮನಾಗಿ ಯುದ್ಧ ಮಾಡಿದರು.

ವೀರ ಕೇಳ್ಳೈ ಕುಶನೆ ಬಳಿಕ ಪ । ಚಾರಿಸುತ ಹೊಯ್ದನು ವಿಭೀಷಣ
ವೀರನನು ಮಿತ್ರಘ್ನ ಶತಧಾರಾಪ್ರಹಾರದಲಿ
ಓರೆಯಿಂಚಣೆದೀತ ರಘುಕುಲ । ವೀರ ಶರಣೆನುತೆಚಿಗಿದನು ಕೋ
ಟೀರವನು ಶತಕೋಟಿ ಶಿಖರಿಯನೆಚಿಗುವಂದದಲಿ ೨೩

ಘಾಯುವದನವ ಬಗೆಯದಬುಜದ । ಳಾಯತಾಕ್ಷನ ಕಿಂಕರನ ಮೇ
ಲ್ವಾಯಿದೆಚಿಗಿದನುರವನದನಣೆದೀತನಾ ಖಳನ
ಕಾಯ ಕಂಪಿಸೆ ಕಂಧರವನು ವಿ । ಡಾಯಿಯಿಂದಪ್ಪಳಿಸಲವ ರೌ
ದ್ರಾಯುಮಾನಿತನಾಗಿ ಹೊಯ್ದನು ಕಲಿ ವಿಭೀಷಣನ ೨೪

ಎಲವೊ ನೀನೀಗಸುರರಾಯನ । ತೊಲಗಿ ಬದುಕಲು ಬಂದೆಲಾ ಕ
ಟ್ಟೆಳೆದು ನಿನ್ನಯ ಭಾಗ್ಯ ತಂದುದು ದೈವಗೆರೆ ಬರೆದ
ನೆಲಕೆ ನಿನ್ನನು ನಿನ್ನ ಕಾವ । ಗ್ಗಳೆಯರಿಲ್ಲಕಟೆನುತ ಮುಂದಕೆ
ನಿಲುಕಿ ಹೊಯ್ದನು ಗಗನ ಘುಮ್ಮೆಡೆ ಕಲಿ ವಿಭೀಷಣನ ೨೫

ಕಾವ ಕರುಣಿಯ ಕಾಣೆಲಾ ಕಣು । ಜೀವಗೆಟ್ಟವೆ ನಿನಗೆ ದಿಟ ನಿ
ರ್ದೈವರೇ ನಿಮ್ಮಂತೆ ನಾವೆನುತರಿಗದಾಯುಧವ
ಆ ವಿಬುಧ ವಿದ್ವಿಷನ ಹೊಯ್ಗಳ । ನೋವ ಲೆಕ್ಕಿಸದೆಚಿಗಿದನು ಘನ
ರಾವದಲಿ ರಘುನಾಥ ವಿಜಯಿಯೆನುತ್ತಲಸುರೇಂದ್ರ ೨೬

೨೩. ವೀರ ಕುಶನೇ, ಕೇಳು. ಅನಂತರ ವೀರವಿಭೀಷಣನನ್ನು ಮೂದಲಿಸುತ್ತ ಮಿತ್ರಘ್ನನು ವಜ್ರಾಯುಧದ ಏಟಿನಿಂದ ಹೊಡೆದನು. ವಿಭೀಷಣನು ಓರೆಯಿಂದ ತಿವಿದು ಏಟನ್ನು ತಪ್ಪಿಸಿಕೊಂಡು, "ರಘುಕುಲವೀರ ಶರಣು !" ಎನ್ನುತ್ತ ವಜ್ರಾಯುಧವು ಪರ್ವತದ ಮೇಲೆರಗುವಂತೆ ಮಿತ್ರಘ್ನನ ಕಿರೀಟದ ಮೇಲೆ ಬಿದ್ದನು. ೨೪. ಆ ಪೆಟ್ಟನ್ನು ಮಿತ್ರಘ್ನನು ಲಕ್ಷಿಸದೆ ಶ್ರೀರಾಮನ ಸೇವಕನ ಮೇಲೆರಗಿ ಎದೆಗೆ ಅಪ್ಪಳಿಸಿದನು. ಆಗ ರಾಕ್ಷಸನ ದೇಹವು ನಡುಗುವಂತೆ ವಿಭೀಷಣನು ಅವನ ಕತ್ತಿನ ಮೇಲೆ ಹೊಡೆಯಲು ಮಿತ್ರಘ್ನನು ಪ್ರಚಂಡ ಕೋಪದಿಂದ ಕಲಿ ವಿಭೀಷಣನನ್ನು ಹೊಡೆದನು. ೨೫. "ಲೋ ನೀನು ರಾಕ್ಷಸರಾಜನನ್ನು ತ್ಯಜಿಸಿ ಬದುಕಲು ಬಂದೆಯಲ್ಲಾ ? ನಿನ್ನ ಭಾಗ್ಯವು ನಿನ್ನನ್ನು ಕಟ್ಟಿ ವಿಧಿಬರೆಹ ಬರೆದ ನೆಲಕ್ಕೆ ಎಳೆದುತಂದಿದೆ. ಅಯ್ಯೋ, ಇನ್ನು ನಿನ್ನನ್ನು ರಕ್ಷಿಸುವ ವೀರರಿಲ್ಲ" ಎನ್ನುತ್ತ ಮಿತ್ರಘ್ನನು ಗಗನವು ಪ್ರತಿಧ್ವನಿಸುವಂತೆ ವಿಭೀಷಣನನ್ನು ಹೊಡೆದನು. ೨೬. "ನಿನ್ನನ್ನು ರಕ್ಷಿಸುವ ಕರುಣಾಶಾಲಿಯನ್ನು ನೋಡು, ನಿನ್ನ ಕಣ್ಣುಗಳು ಕುರುಡಾದುವೆ ? ನಿಮ್ಮ ಹಾಗೆ ನಾವು ದೇವರ ದಯೆಯಿಲ್ಲದವರೇ ?" ಎನ್ನುತ್ತ ಆ ಮಿತ್ರಘ್ನರಾಕ್ಷಸನ ಗದಾಯುಧದ ಪೆಟ್ಟಿನ ನೋವನ್ನು ಲಕ್ಷಿಸದೆ 'ರಘುನಾಥ, ಗೆಲ್ಲು!'

ಘಾಯದಲಿ ಕಟ್ಟರಿಯನಳುಕಿಸ । ದಾಯುಧವದಾಯುಧವೆ ರಣದಲಿ
ನೋಯಿಸದ ಭುಜ ಭುಜವೆ ಮುಗುಳಂಗವಿಸದವ ಭಟನೆ
ಆಯತವ ನೋಡೆನ್ನೊಳೆನುತಸ । ಹಾಯಬಲನೆಱಗಿದನು ಜಲಧಿ ವಿ
ಹಾಯಸಕೆ ತುಳುಕಾಡೆ ಮಸ್ತಕವನು ವಿಭೀಷಣನ ೨೭

ಉಡಿದುಬಿದ್ದುದೊ ಮೇರುಮಸ್ತಕ । ಪೊಡವಿಗೆನೆ ಕಳಕಳಿಕೆಯಲಿ ದಡ
ದಡಿಸಿ ಬಿದ್ದನು ಬೋಯೆನುತ ಖಳರಾರ್ದು ಕುಣಿದಾಡೆ
ಮುಡುಹ ಹೊಯ್ದುಬ್ಬರಿಸಿ ಬೊಬ್ಬೆಯ । ಸಡಗರಿಸಿ ಮಿತ್ರಘ್ನ ಮುಂದಕೆ
ನಡೆದು ನುಡಿದನು ರಾಮಕಟಕದರಾಯ ಸುಭಟರಿಗೆ ೨೮

ಬನ್ನಿರೈ ನೀವ್ ಘಟ್ಟಬೆಟ್ಟದ । ಚೆನ್ನಿಗರು ಕಲುಮರನನೆಮ್ಮಯ
ಬೆನ್ನಿನಲಿ ಬಿಸುಡೇಳಿ ಬಿಲ್ಲಾಳವರು ಬಾಣಗಳ
ಬಿನ್ನಣವ ತೋಱೇಳಿ ಸಾವಿಗೆ । ಸನ್ನಿಹಿತರಾಗೇಳಿಯೆನುತು
ತ್ಪನ್ನಬಲ ಖಳನಱಸಿದನು ಸಂಗರಕೆ ಸಮಬಲರ ೨೯

ಅಕಟ ಮೋಸದಲೆನ್ನ ನಂಬಿದ । ಭಕುತನನು ರಣಕಿಕ್ಕಿ ಕಡುಹೇ
ಸಿಕೆಯ ಪೊತ್ತೆನೆ ಲೋಕದಲಿ ನಗುವಂತೆ ನಿಖಿಳಜನ
ಪ್ರಕಟಿಸಿತೆ ದುಷ್ಕೀರ್ತಿಯೆನುತ । ವ್ಯಕುತ ಚಿಂತಾಭಾರದಿಂದಂ
ಬಕತಟಾಕದ ತುಂಬನುಗಿದೆಬ್ಬಿಸಿದನಂಬುಗಳ ೩೦

ಎಂದು ಗಟ್ಟಿಯಾಗಿ ಕೂಗುಹಾಕಿ ವಿಭೀಷಣನು ಅವನ ಮೇಲೆ ಬಿದ್ದನು. ೨೭. "ಹೊಡೆದರೆ ಶತ್ರುವನ್ನು ನೋಯಿಸದ ಆಯುಧ ಆಯುಧವೆ ? ಕಾಳಗದಲ್ಲಿ ಶತ್ರುವನ್ನು ನೋಯಿಸದ ತೋಳು ತಾನು ತೋಳೇ ? ಪುನಃ ಶತ್ರುವಿನ ಮೇಲೆ ಬೀಳದವನು ವೀರನೆ ? ನನ್ನ ಪರಾಕ್ರಮವನ್ನು ನೋಡು" ಎನ್ನುತ್ತ ಅಸಹಾಯಶೂರ ಮಿತ್ರಘ್ನನು ಸಮುದ್ರದನೀರು ಆಕಾಶಕ್ಕೆ ತುಳುಕುವಂತೆ ವಿಭೀಷಣನ ತಲೆಯ ಮೇಲೆರಗಿದನು. ೨೮. ಮೇರುವಿನ ಶಿಖರವು ಭೂಮಿಗೆ ಮುರಿದುಬಿದ್ದಿತೋ ಎನ್ನುವಂತೆ ವಿಭೀಷಣನು ದಡದಡಿಸಿ ಗಂಟಲಿನಿಂದ ಶಬ್ದಮಾಡುತ್ತ ಬಿದ್ದನು. ಇದನ್ನು ನೋಡಿ ರಾಕ್ಷಸರು ಆರ್ಭಟಿಸಿ 'ಬೋ' ಎನ್ನುತ್ತ ಕುಣಿದಾಡಿದರು. ಮಿತ್ರಘ್ನನು ಅಬ್ಬರಿಸಿ ವಿಭೀಷಣನ ಹೆಗಲಿಗೆ ಅಪ್ಪಳಿಸಿ ಕೂಗು ಹಾಕುತ್ತ ಮುಂದಕ್ಕೆ ಬಂದು ರಾಮನ ಸೈನ್ಯದ ವೀರನಾಯಕರನ್ನು ಕುರಿತು ನುಡಿದನು. ೨೯. "ಘಟ್ಟ ಬೆಟ್ಟಗಳ ಚೆನ್ನಿಗರು ನೀವು ಬನ್ನಿರಯ್ಯಾ. ಕಲ್ಲುಮರಗಳನ್ನು ನಮ್ಮ ಬೆನ್ನಿಗೆ ಎಸೆಯಿರಿ ; ಬಿಲ್ಲಾಳುಗಳು ಬಾಣಬಿಡುವ ಕೌಶಲ್ಯವನ್ನು ತೋರಿಸಿ. ಏಳಿ, ಸಾವಿಗೆ ಸಿದ್ಧರಾಗಿ" ಎನ್ನುತ್ತ ಬಲಶಾಲಿ ರಾಕ್ಷಸನು ಸಮಾನ ಬಲಶಾಲಿಗಳನ್ನು ಯುದ್ಧಕ್ಕೆ ಹುಡುಕಿದನು. ೩೦. "ಅಯ್ಯೋ, ನನ್ನನ್ನು ನಂಬಿದ ಭಕ್ತನನ್ನು ಮೋಸದಿಂದ ಯುದ್ಧಕ್ಕೆ ಬಲಿಕೊಟ್ಟು ಲೋಕದಲ್ಲಿನ ಜನರೆಲ್ಲ ನಗುವಂತೆ ಹೇಸಿಗೆಯನ್ನು ಹೊತ್ತುಕೊಂಡೆನಲ್ಲ. ಅಪಕೀರ್ತಿಯುಂಟಾಯಿತಲ್ಲ" ಎನ್ನುತ್ತ ತೀವ್ರ

ತುಡುಕಿದನು ಸೌಮಿತ್ರಿ ಬಾಣವ । ನೊಡನೆ ನೀಲಾಂಗದರು ಮುಷ್ಟಿಯು
ಜಡಿದು ನಿಂದರು ಸಂದಣಿಸಿದರು ಬೇಹ ಭಟನಿಕರ
ಕಡುಗಲಿಯೆ ಕುಶ ಕೇಳ್ ವಿಭೀಷಣ । ಹಿಡಿದುದೇನಳಿಗೊಂಬೆ ಕರುಣದ
ಕಡಲು ನೆಗಹಿತು ಭಕ್ತನನು ನಿಜಭಕ್ತವತ್ಸಲನೆ ೩೧

ಚೇತರಿಸಿದವು ಕರಣ ವಿಶ್ವವಿ । ಚೇತನನ ನೆನಹಿನಲಿ ಲಯಶಿಖಿ
ಚೇತನವನೊದೆದೆದ್ದನವನಿಯುಲಱಿಸುತರಿಭಟನ
ಪೂತು ಮಝರೇ ಧೀರುರೇ ರಣ । ಕೌತುಕದ ಪರಿ ಲೇಸೆನುತ ಸುರ
ಜಾತವಬ್ಬರಿಸಿದುದು ಮೇಲೆ ಸಮುದ್ರಘೋಷದಲಿ ೩೨

ಏನೆಲವೊ ಮಿತ್ರಘ್ನ ಜಯಿಸು । ವ್ಮಾನವಾಯ್ತೆಂದುಬ್ಬಿ ಕರೆದೆಯ
ಲಾ ನರೇಂದ್ರನನಕಟ ನೆಲವಿಗೆ ನಿಲುಕಲಱಿಯದವ
ಭಾನುಬಿಂಬವನುಗಿವ ಗಡ ಮೊದ । ಲೇನ ಬಗುಳಿದೆ ಹೊಯ್ಲಲಸುವನು
ಹಾನಿ ಮಾಡದ ಭಟನು ಭಟನಲ್ಲೆಂದೆಲಾಯೆಂದ ೩೩

ಆದಡಿದಕೋ ನಿನ್ನ ನುಡಿ ನಮ । ಗಾದರಿಸ ಲೇಸಾಗಿ ನಿನ್ನವ
ರೈದೆ ನೋಡಲಿ ಹೊಸಪಚಾರಣೆ ಬೇಱೆ ನಮಗಿಲ್ಲ
ಕೈದುಕೋ ಕಲಿಯಾಗು ಕೈನೆರ । ವಾದ ಕಲಿಗಳ ಕರೆದುಕೋ ಮೇ
ಲಾದ ಸಮರಪ್ರೌಢಿಯೇನದ ಬೇಗ ಮೆಱೆಯೆಂದ ೩೪

ದುಃಖದಿಂದ ಕಣ್ಣೀರನ್ನು ಮಿಡಿದು ರಾಮನು ಬಾಣಗಳನ್ನು ಸೆಳೆದನು. ೩೧. ಲಕ್ಷ್ಮಣನು ಬಾಣವನ್ನು ಆತುರದಿಂದ ತೆಗೆದುಕೊಂಡನು. ತಕ್ಷಣ ನೀಲ ಅಂಗದರು ಮುಷ್ಟಿಹಿಡಿದು ನಿಂತರು. ಮುಖ್ಯ ವೀರರು ಗುಂಪಾದರು. ಕಡುಗಲಿ ಕುಶನೆ ಕೇಳು, ವಿಭೀಷಣನು ಆಶ್ರಯಿಸಿದುದು ಮುರದ ಮುರಿಯುವ ಕೊಂಬೆಯೇ ? ಭಕ್ತಪ್ರಿಯ ರಾಮನ ಕರುಣೆಯ ಸಮುದ್ರವು ತನ್ನ ಭಕ್ತನನ್ನು ಉದ್ಧಾರಮಾಡಿತು. ೩೨. ವಿಶ್ವ ಚೈತನ್ಯಾತ್ಮಕನ ಸ್ಮರಣೆಯಿಂದ ವಿಭೀಷಣನ ಇಂದ್ರಿಯಗಳು ಚೇತರಿಸಿಕೊಂಡವು. ಪ್ರಳಯಾಗ್ನಿಶಕ್ತಿಯ ಸ್ಫೂರ್ತಿಯಿಂದ ಶತ್ರುವೀರನನ್ನು ರಣರಂಗದಲ್ಲಿ ಹುಡುಕುತ್ತ ಎದ್ದನು. "ಭಲಾ, ಭೇಷ್ ! ಯುದ್ಧದ ಕುತೂಹಲಕರ ರೀತಿಯು ಚೆನ್ನಾಗಿದೆ !" ಎನ್ನುತ್ತ ಆಕಾಶದಲ್ಲಿದ್ದ ದೇವತೆಗಳು ಸಮುದ್ರದ ಅಬ್ಬರದಂತೆ ದೊಡ್ಡದಾಗಿ ಧ್ವನಿ ಮಾಡಿದರು. ೩೩. "ಏನೋ ಮಿತ್ರಘ್ನ, ಜಯಿಸಿದೆನೆಂಬ ಆನಂದದಿಂದ ಉಬ್ಬಿ ರಾಮ ನನ್ನು ಯುದ್ಧಕ್ಕೆ ಕರೆದೆಯಾ ? ನೆಲವನ್ನು ಎಟುಕಿಸಿಕೊಳ್ಳಲು ಗೊತ್ತಿಲ್ಲದವನು ಸೂರ್ಯಬಿಂಬವನ್ನು ಕೀಳುವೆಯಲ್ಲವೇ ? ಮೊದಲು ನೀನು ಏನು ಬೊಗಳಿದೆ. ಹೊಡೆ ದೊಡನೆ ಶತ್ರುವನ್ನು ಸಾಯಿಸದ ವೀರನು ವೀರನಲ್ಲ ಎಂದೆಯಲ್ಲವೆ ?" ಎಂದ ವಿಭೀಷಣ. ೩೪. "ಹಾಗಿದ್ದರೆ ಇದನ್ನು ತೆಗೆದುಕೋ. ನಿನ್ನ ಮಾತನ್ನು ನಾವು ಆದರಿಸಬೇಕಾದುದು ಚೆನ್ನ. ನಿನ್ನ ಕಡೆಯವರು ಬಂದು ನೋಡಲಿ. ಹೊಸ ಅಗೌರವ ನಮಗೆ ಬೇರೆ ಇಲ್ಲ. ಆಯುಧವನ್ನು ತೆಗೆದುಕೋ, ವೀರನಾಗು. ನಿನ್ನ ಸಹಾಯಕ್ಕೆ ಬೇಕಾದ ವೀರರನ್ನು ಕರೆದುಕೋ. ನಿನ್ನ ಅತಿಶಯವಾದ ಯುದ್ಧಕೌಶಲವೇನುಂಟು

ಇದಕೊ ನಿನ್ನಸುಗೊಂಬ ವೈಷ್ಣವ । ಗದೆ ಗದಾಭ್ಯಾಸದಲಿ ಬಲ್ಲಡೆ
ಕೆದಱಿಕೋ ಕೈಗುಂದದಱಿಯಲಿ ನಿನ್ನ ವಿಕ್ರಮವ
ಇದು ಕಡಾ ದೂಷಣವಿರೋಧಿಯ । ಪದದ ಮೆಚ್ಚಿನ ಘಾಯವಿದ ನೀ
ನೊದೆದಡಸ್ತ್ರತ್ಯಾಗವೆನುತೆಱಗಿದನು ರಕ್ಕಸನ ೩೫

ಅಚ್ಚರಿಯನೇನೆಂಬೆನೈ ಬಿಡೆ । ಬಿಚ್ಚಿತೊಡ್ಡಿದ ಗದೆಯನೊಳಬಿ
ದ್ದುಚ್ಚಿತಸುವನು ನೆತ್ತಿಯಲಿ ಮಿತ್ರಘ್ನರಾಕ್ಷಸನ
ಮುಚ್ಚಿ ಬೈಚಿಟ್ಟಂತೆ ಹೆಣನನು । ಹಚ್ಚಿ ತಿಂದವು ಭೂತ ನಭದಿಂ
ದಚ್ಚಮಲ್ಲಿಗೆಯರಳು ಸುರಿದವು ಶರಣನಂಗದಲಿ ೩೬

ಮಾ ವಿಭೀಷಣ ಭೀಷಣಗದಾ । ಕೋವಿದನಲಾ ಲೇಸು ವರರಾ
ಜೀವನಯನನ ಗರುಡಿಯಲ್ಲಾಶ್ರಮವು ನಿನಗೆನುತ
ಪಾವಮಾನಿ ಸುಷೇಣ ಜಾಂಬವ । ದೇವ ಸುಗ್ರೀವಾದಿ ಭಟರು ನಿ
ರಾವಸಾನದ ಹೊಗಳಿಕೆಯಲಪ್ಪಿದರು ಹರುಷದಲಿ ೩೭

ಹರುಷಪುಳಕದ ಹರಹಿನಲಿ ನಿಜ । ಶರಣನನು ಮೈದಡವಿ ತೊರವೆಯ
ಪುರವರಾಧೀಶ್ವರನು ಶಿಬಿರಕೆ ತೆರಳಿದನು ಬಳಿಕ
ಧುರದ ಸೋಲದ ದುಗುಡದಲಿ ಕ । ರ್ಬುರಪತಾಕಿನಿ ಪುರವ ಹೊಕ್ಕುದು
ತರಣಿಮಂಡಲವಂಡುಗೊಂಡುದು ಪಶ್ಚಿಮಾಚಲವ ೩೮

ಅದನ್ನು ಪ್ರದರ್ಶಿಸು" ಎಂದ ವಿಭೀಷಣ. ೩೫. "ಇದೋ ನಿನ್ನ ಪ್ರಾಣ ಹೀರುವ ವೈಷ್ಣವಗದೆ. ನೀನು ಗದೆಯ ಶಸ್ತ್ರವಿದ್ಯೆಯಲ್ಲಿ ನಿಪುಣನಾದಡೆ ಕೆಚ್ಚಿನಿಂದ ಹಿಂದೆಗೆಯದೆ ಎದುರಿಸು. ನಿನ್ನ ಪರಾಕ್ರಮವನ್ನು ಎಲ್ಲರೂ ತಿಳಿಯಲಿ. ದೂಷಣನ ಶತ್ರು ಶ್ರೀರಾಮನ ಪಾದದ ಏಟು ಇದು, ಇದನ್ನು ನೀನು ಒದೆದು ಕಳೆದರೆ ನಾನು ಅಸ್ತ್ರವನ್ನು ತ್ಯಾಗಮಾಡಿಬಿಡುತ್ತೇನೆ" ಎಂದು ವಿಭೀಷಣನು ಮಿತ್ರಘ್ನನ ಮೇಲೆರಗಿದ. ೩೬. ಆಶ್ಚರ್ಯವನ್ನು ಏನೆಂದು ಹೇಳಲಿ, ಮಿತ್ರಘ್ನರಾಕ್ಷಸನು ಪ್ರತಿಯಾಗಿ ಒಡ್ಡಿದ ಗದೆಯನ್ನು ಅವನ ಕೈಯಿಂದ ಬೀಳಿಸಿ ವಿಭೀಷಣನ ಗದೆಯು ಅವನ ಮೇಲೆ ಬಿದ್ದು ನೆತ್ತಿಯಿಂದ ಪ್ರಾಣವನ್ನು ಹೊರಕ್ಕೆ ಹೊರಡಿಸಿತು. ಮುಚ್ಚಿ ಬಚ್ಚಿಟ್ಟ ರೀತಿಯಲ್ಲಿ ಭೂತಗಳು ಹೆಣವನ್ನು ಹಂಚಿಕೊಂಡು ತಿಂದವು. ವಿಭೀಷಣನ ಮೈಮೇಲೆ ಅಚ ಮಲ್ಲಿಗೆಯ ಹೂವು ಆಕಾಶದಿಂದ ಸುರಿದವು. ೩೭. "ಭಲಾ ವಿಭೀಷಣ, ಪ್ರಚಂಡ ಗದಾಪ್ರಯೋಗದಲ್ಲಿ ನೀನು ನಿಪುಣನಲ್ಲವೇ, ಕಮಲಾಕ್ಷನ ಗರುಡಿಯಲ್ಲಿ ಸಾಧನೆಮಾಡಿದವನಲ್ಲವೇ" ಎಂಬುದಾಗಿ ಹನುಮಂತ, ಸುಷೇಣ, ಜಾಂಬವ, ಸುಗ್ರೀವನೇ ಮೊದಲಾದ್ದ ವೀರರು ಒಂದೇಸಮನೆ ಹೊಗಳುತ್ತ ವಿಭೀಷಣನನ್ನು ಸಂತೋಷದಿಂದ ಅಪ್ಪಿಕೊಂಡರು. ೩೮. ತೊರವೆಯಧಿಪತಿಯು ಅವತಾರಪುರುಷ ರಾಮನು ಆನಂದದಿಂದ ರೋಮಾಂಚಗೊಂಡು ಭಕ್ತನ ಮೈದಡವಿ ತನ್ನ ಶಿಬಿರಕ್ಕೆ ಹೋದನು. ಅನಂತರ ಯುದ್ಧದಲ್ಲಿ ಸೋತ ದುಃಖದಿಂದ ರಾಕ್ಷಸಸೈನ್ಯವು ಲಂಕಾನಗರವನ್ನು ಪ್ರವೇಶಿಸಿತು. ಸೂರ್ಯಬಿಂಬವು ಪಶ್ಚಿಮಪರ್ವತವನ್ನು ಸೇರಿತು.

## ಹದಿನೈದನೆಯ ಸಂಧಿ

ಸೂಚನೆ॥ ವೀರವಿಜಯ ಭುಜಪ್ರತಾಪನು । ದಾರಬಲ ಬಲವೈರಿಜಿತು ಘನ
ಘೋರ ಸರ್ಪಾಸ್ತ್ರದಲಿ ಗೆಲಿದನು ಸಕಲ ಕಪಿಬಲವ

ಕೇಳಿದೈಯೆಲೆ ರಾಜಸುತ ಸಂ । ಸ್ಥೂಲ ಸಮರದ ಜಯದ ಜೋಕೆಯು
ಮೇಲುಗಾಳಗ ನಿಮ್ಮವರಿಗಾಯ್ತಂದಿನಾಜಿಯಲಿ
ಏಳು ನಿರ್ಬುದ ಕೀಶಬಲವಮ । ರಾಳಿಯಲಿ ಸೇರಿತ್ತು ಕಾಲನ
ಪಾಳಿಯುವ ಸಾರಿತ್ತು ನಿರ್ಬುದವೈದು ರಿಪುಗಳಲಿ ೧

ತೆಗೆದವೆರಡಂಕಗಳು ತೊಲಗಿದ । ಹಗಲನೀಕ್ಷಿಸುತಿರುಳು ಬಲುಮು
ತ್ತಿಗೆಯನಿಕ್ಕಿದರಾ ಮಹಾದುರ್ಗಕ್ಕೆ ರಜನಿಯಲಿ
ಜಗತಿ ಜರಿದುದು ರಣದ ಹೆಣವೆ । ಟ್ಟಗಳ ಭಾರಣೆಗಖಿಳ ಭೂತಾ
ಳಿಗಳು ಬೊಬ್ಬಿಟಾಡಾಡಿದವು ರಣವಳಯ ವಳಯದಲಿ ೨

ಕೊಟ್ಟು ಬಂದೆನು ಭಾಷೆಯನು ಹಿ । ಮೆಟ್ಟಿದುದು ಗೆಲವೆಮಗೆ ರಣ ಗರಿ
ಗಟ್ಟಿತರಿಗಳಿಗಾವ ಮೋಟೆಯಲಸುರವಲ್ಲಭನ
ಪಟ್ಟಣವ ತಾ ಹೊಗುವೆನೆಂದೆನು । ತಟ್ಟಸಿದ ಚಿಂತೆಯಲಿ ಸುರಪನ
ಕಟ್ಟಿತಂದವ ಕಲಿಯು ಕದನಕೆ ಮಾಡಿದನು ಮನವ ೩

ಸೂಚನೆ॥ ವಿಜಯವೀರ ತೋಳ್ಬಲದ ಪ್ರತಾಪಶಾಲಿ ಇಂದ್ರಜಿತು ಭಯಂಕರ ಸರ್ಪಾಸ್ತ್ರದಿಂದ ಸಮಸ್ತ ಕಪಿಸೈನ್ಯವನ್ನು ಗೆದ್ದನು. ೧. ಕೇಳಿದೆಯಾ, ರಾಜಕುಮಾರ, ಮಹಾಯುದ್ಧದಲ್ಲಿ ಜಯಗಳಿಸಿದ ಬಗೆಯನ್ನು ಅಂದಿನ ಯುದ್ಧದಲ್ಲಿ ನಿಮ್ಮವರ ಕೈ ಮೇಲಾಯಿತು. ಏಳು ನಿರ್ಬುದ ಕಪಿಸೈನ್ಯವು ಸ್ವರ್ಗವನ್ನು ಸೇರಿತು. ಐದು ನಿರ್ಬುದ ಶತ್ರುಸೈನ್ಯವು ಯಮಲೋಕವನ್ನು ಸೇರಿತು. ೨. ಹಗಲು ಮುಗಿದುದನ್ನು ಕಂಡ ಎರಡೂ ಸೈನ್ಯಗಳೂ ಹಿಂದೆಗೆದವು. ರಾತ್ರಿ ಲಂಕಾನಗರದ ದುರ್ಗದ ಮೇಲೆ ಭಾರಿ ಮುತ್ತಿಗೆಯನ್ನು ಹಾಕಿದರು. ಯುದ್ಧದಲ್ಲಿ ಉರುಳಿದ ಹೆಣಗಳ ರಾಶಿಗಳ ಭಾರಕ್ಕೆ ಭೂಮಿ ಕುಸಿಯಿತು. ಯುದ್ಧರಂಗದ ಬೇರೆಬೇರೆ ಪ್ರದೇಶಗಳಲ್ಲಿ ಭೂತಗಳು ಬೊಬ್ಬಿರಿಯುತ್ತ ಸುತ್ತಾಡಿದವು. ೩. 'ರಾವಣೇಶ್ವರನಿಗೆ ಮಾತುಕೊಟ್ಟು ಬಂದೆ. ನಮ್ಮ ಗೆಲವು ಹಿಮ್ಮೆಟ್ಟಿತು. ಶತ್ರುಗಳು ಯುದ್ಧದಲ್ಲಿ ಗರಿಗಟ್ಟಿಕೊಂಡರು. ನಾನು ಯಾವ ಮುಖ ಹೊತ್ತುಕೊಂಡು ರಾಕ್ಷಸರಾಜನ ನಗರವನ್ನು ಪ್ರವೇಶಿಸಲಿ' ಎಂದು ಕುದಿಯುವ ಚಿಂತೆಯಿಂದ ಇಂದ್ರನನ್ನು ಕಟ್ಟಿತಂದವನು ಸಾಹಸದ ಯುದ್ಧವನ್ನು

ದಿವವಳಿಯಲೊಡ್ಡಿದನು ಮಾಯಾ । ಜವನಿಕೆಯ ಜೋಡಣೆಯ ಕಲ್ಪದ
ಭುವನ ಗರ್ಭೀಕರದ ಘನಗಾಢಿಕೆಯ ಕಾಳಿಕೆಯ
ರವಿ ಸಹಸ್ರಮಯೂಖದಿಱಿತಕೆ । ತವಿಸದಂಧತಮಿಶ್ರಿಯನು ರಾ
ಘವಪತಾಕಿನಿ ಪಾಡುಗೆಡೆ ನಿಜಪೌರುಷಾಂಗದಲಿ ೪

ಹೊಳಕಿದುದು ಬಳಿಕಿಂದ್ರಜಿತುವಿನ । ಚಳಚಮತ್ಕೃತಿ ರಥವು ಗಗನ
ಸ್ಥಳದೊಳಚಿರರುಚಿಪ್ರಕಾಶದಲೇನ ಹೇಳುವೆನು
ಖಳನ ಬೊಬ್ಬೆಯ ಸಿಡಿಲು ಸುಳಿದುದು । ಬಲಿಮುಖರ ಬಲದೊಳಗೆ ಬಿಲುರವ
ವಳುಕಿಸಿತು ಬಲವಂತ ಸುಗ್ರೀವಾದಿ ನಾಯಕರ ೫

ಎಲೆಲೆ ಕವಿದರೊ ಖಳರು ಕವಿಯಲಿ । ಕೊಲೆಗೆ ಹಾಯ್ದರೊ ಪಾಳಯದೊಳೆನು
ತಳವಿಯಲಿ ಕಪಿನಾಯಕರು ತುಡುಕಿದರು ಗಿರಿ ತರುವ
ವಳಯ ವಳಯದ ವೆಂಟೆಯದಲೊ । ಬ್ಬುಳಿಗರಬ್ಬರಿಸಿದರು ಕೇಳಾ
ಹಳಿಕೆಯಲಿ ಹರಿದಾಡಿದರು ಬೆದಕುತ ನಿಶಾಚರರ ೬

ಅಱಿದನಾ ಹರಿಶರಣನಭ್ರದ । ನಿಱಿಸಿನಬ್ಬರವಿಂದ್ರಜಿತುವಿನ
ಮಱೆಯ ಮಾಯಾಹವವಿದೆಂಬುದ ತನ್ನ ಮನದೊಳಗೆ
ಬಱಿಸಿನವನೀ ರಾತ್ರಿಯಲಿ ಬಲ । ಮುಱಿಯದಾನುವುದರಿದೆನುತ ಮವ
ಮುಱುಕದಲಿ ಮಾರ್ತಾಂಡತನಯನ ಬಳಿಗೆ ನಡೆತಂದ ೭

ನಿಶ್ಚಯಿಸಿದನು. ೪. ಹಗಲು ಕಳೆದ ಬಳಿಕ ಇಂದ್ರಜಿತು ಪ್ರಳಯಕಾಲದಲ್ಲಿ ಜಗತ್ತನ್ನು ಮುಚ್ಚಿಬಿಡುವ ಮಾಯಾತೆರೆಗೆ ಸಮಾನವಾದ ಗಾಢಕತ್ತಲೆಯನ್ನು ಹರಡಿದನು. ಸೂರ್ಯನು ತನ್ನ ಸಾವಿರ ಕಿರಣಗಳಿಂದಲೂ ಭೇದಿಸಲಾಗದ ಕಪ್ಪುಗತ್ತಲೆಯಲ್ಲಿ ರಾಮನ ಸೈನ್ಯವು ಪರಾಕ್ರಮ ತೋರಿಸಲಾಗದೆ ಪಾಡುಪಟ್ಟಿತು. ೫. ಇಂದ್ರಜಿತುವಿನ ಚಮತ್ಕಾರಚಲನೆಯ ರಥವು ಪ್ರಕಾಶಮಾನವಾಗಿ ಆಕಾಶದಲ್ಲಿ ಗೋಚರಿಸಿತು. ಇಂದ್ರಜಿತುವಿನ ಆರ್ಭಟದ ಸಿಡಿಲು ವಾನರಸೈನ್ಯಕ್ಕೆ ಕೇಳಿಸಿತು. ವೀರರಾದ ಸುಗ್ರೀವನೇ ಮೊದಲಾದ ಕಪಿನಾಯಕರನ್ನು ಬಿಲ್ಲಿನ ಶಬ್ದವು ಹೆದರಿಸಿತು. ೬. "ಲೋ ಲೋ, ರಾಕ್ಷಸರು ಮುತ್ತಿದರೊ ; ಮುತ್ತಿಗೆಹಾಕಿ ಕೊಲೆಮಾಡಲು ಪಾಳಯದೊಳಕ್ಕೆ ಬಂದರೋ !" ಎನ್ನುತ್ತ ಅಧಿಕಸಂಖ್ಯೆಯಲ್ಲಿ ಕಪಿನಾಯಕರು ಬೆಟ್ಟ ಮತ್ತು ಮರಗಳನ್ನು ಕೈಗೆ ತೆಗೆದುಕೊಂಡರು. ಯುದ್ಧರಂಗದ ಒಂದೊಂದು ಪ್ರದೇಶವನ್ನೂ ಸುತ್ತುವರಿದು ಗುಂಪಾದ ಕಪಿವೀರರು ಅಬ್ಬರಿಸಿ ಗಲಾಟೆಮಾಡುತ್ತ ರಾಕ್ಷಸರನ್ನು ಹುಡುಕುತ್ತ ಓಡಾಡಿದರು. ೭. ಆಕಾಶದ ಅಬ್ಬರದ ಅಲೆಗಳನ್ನು ಕೇಳಿ ಇಂದ್ರಜಿತು ಅದೃಶ್ಯವಾಗಿ ನಡೆಸುವ ಮಾಯಾಯುದ್ಧವಿದೆಂಬುದನ್ನು ಹರಿಭಕ್ತ ವಿಭೀಷಣನು ಅರಿತುಕೊಂಡನು. ಈ ರಾತ್ರಿಯುದ್ಧದಲ್ಲಿ ಇಂದ್ರಜಿತು ಮಹಾಪ್ರಚಂಡ, ಇವನ ಬಲವನ್ನು ಮುರಿಯದೆ ಎದುರಿಸುವುದು ಕಷ್ಟ ಎಂದು ಮನಸ್ಸಿನಲ್ಲಿ ಚಿಂತೆ ತಾಳಿ ಸೂರ್ಯಪುತ್ರ ಸುಗ್ರೀವನ

ಇರಿಸು ನೀಲಾಂಗದರನವನೀ । ಶ್ವರನ ಸುಯ್ದಾನಕೆ ಸುಷೇಣರ
ನಿರಿಸು ಮೇಲಾರೈಕೆಗಜಸುತನಿರಲಿ ಬೆಂಬಲಕೆ
ಧುರಕೆ ಸೇರಿಸು ಮಿಕ್ಕ ನಳ ಕೇ । ಸರಿ ಗವಾಕ್ಷ ದ್ವಿವಿದ ದುರ್ಮುಖ
ಶರಭ ಶತಬಲಿ ಹನುಮ ಮೊದಲಾದವರ ನೀನೆಂದ ೮

ಮೊಳಗುವವನೀಗಿಂದ್ರಜಿತು ಕ । ತ್ತಲೆಯ ಕಡುಹಿಂಗವನು ಘನ
ವೆಗ್ಗಳನು ಕಗ್ಗೊಲೆಯಲಿ ಸಮರ್ಥನು ಕಲಿಯ ಕಾಳಗಕೆ
ತಿಳುಹು ನೀನೀ ಹದನ ರಘುಕುಲ । ತಿಲಕರಿಗೆ ಬೇಗೆನುತ ತನ್ನಯ
ಬಳಿಯ ನಾಲ್ವರು ಮಂತ್ರಿಗಳು ಸಹಿತಡರಿದನು ನಭವ ೯

ಅದರಿದಸುರೇಶ್ವರನ ಬಾಣದ । ಕಡಲೊಳಗೆ ಮುಳುಗಿಸಿದನಾ ಬಲು
ಗಡಿಯ ನಾಲ್ವರು ಮಂತ್ರಿಗಳ ಮಂತ್ರಿಸಿದನಂಬಿನಲಿ
ತೊಡಕಿ ಗೆಲುವವರಾರು ರಣದಲಿ । ಮೃಡ ಸರೋಜಜ ಮುಖ್ಯರೇನು
ಗ್ಗಡದ ವೀರನೊ ಕಲಿಯ ಕಾಳಗದಲಿ ಸುರೇಂದ್ರಜಿತು ೧೦

ಬೀಳುತಿರ್ದವು ಬಾಣವನಿತಱೊ । ಳೇಳು ಕಡಲನು ಮೊಗೆದೊಗುವ ಲಯ
ಕಾಲದಗ್ಗದ ಪುಷ್ಕಳಾವರ್ತದ ಸಗಾಢದಲಿ
ಕೋಲು ಹೆಣನೊಂದಾಗಿ ರಣದಲಿ । ಬೀಳುತಿರ್ದುದು ಪಡೆ ಕೃತಾಂತನ
ಧಾಳಿಯೆನೆ ದಳವುಳಿಸಿದನು ರಣದಲಿ ಸುರೇಂದ್ರಜಿತು ೧೧

ಬಳಿಗೆ ಬಂದನು. ೮. 'ರಾಮನ ರಕ್ಷಣೆಗೆ ನೀಲ ಮತ್ತು ಅಂಗದರನ್ನು ಇರಿಸು. ಮೇಲ್ವಿಚಾರಣೆಗೆ ಸುಷೇಣನನ್ನು ನಿಲ್ಲಿಸು. ಜಾಂಬವನು ಅವರ ಬೆಂಬಲವಾಗಿರಲಿ. ನಳ, ಕೇಸರಿ, ಗವಾಕ್ಷ, ದ್ವಿವಿದ, ದುರ್ಮುಖ, ಶರಭ, ಶತಬಲಿ, ಹನುಮಂತ ಮೊದಲಾದವರನ್ನು ಯುದ್ಧಕ್ಕೆ ಒಂದುಗೂಡಿಸು" ಎಂದ ವಿಭೀಷಣ. ೯. "ಈಗ ಆರ್ಭಟಿಸುತ್ತಿರುವವನು ಇಂದ್ರಜಿತು. ಕತ್ತಲೆಯ ಕಾಳಗದಲ್ಲಿ ಬಹಳ ಸಮರ್ಥನವನು. ಈ ಮಹಾಯುದ್ಧದಲ್ಲಿ ಕಗ್ಗೊಲೆ ಮಾಡುವಲ್ಲಿ ಮಹಾಶೂರ, ಈ ವಿಷಯವನ್ನು ನೀನು ರಘುಕುಲತಿಲಕರಿಗೆ ಬೇಗ ತಿಳಿಸು" ಎಂದು ಹೇಳಿ ತನ್ನ ಬಳಿಯ ನಾಲ್ಕುಜನ ಮಂತ್ರಿಗಳೊಡನೆ ಆಕಾಶಕ್ಕೇರಿದನು. ೧೦. ಆಕಾಶಕ್ಕೇರಿದ ವಿಭೀಷಣನನ್ನೂ ಅವನ ನಾಲ್ಕು ಜನ ವೀರಮಂತ್ರಿಗಳನ್ನೂ ಬಾಣಗಳ ಸಮುದ್ರದಲ್ಲಿ ಮುಳುಗಿಸಿಬಿಟ್ಟನು. ಇಂದ್ರಜಿತು ಮಂತ್ರಿಸಿ ಬಿಟ್ಟ ಬಾಣಗಳೊಡನೆ ಸಿಕ್ಕಿಕೊಂಡ ಈಶ್ವರ, ಬ್ರಹ್ಮ ಮೊದಲಾದ ಮುಖ್ಯರಲ್ಲಿ ಯಾರು ಗೆಲ್ಲಬಲ್ಲರು ! ಮಾಯಾಯುದ್ಧದಲ್ಲಿ ಏನು ಮಹಾವೀರನೋ ಇಂದ್ರಜಿತು. ೧೧. ಏಳು ಸಮುದ್ರಗಳನ್ನು ಕುಡಿದು ಚೆಲ್ಲುವ ಪ್ರಳಯಕಾಲದ ಪುಷ್ಕಳಾವರ್ತ ಮೇಘದಂತೆ ಬಾಣಗಳು ಒತ್ತಾಗಿ ಬೀಳುತ್ತಿದ್ದವು. ಬಾಣ ಮತ್ತು ಹೆಣಗಳು ಜತೆಜತೆಯಾಗಿ ಯುದ್ಧದಲ್ಲಿ ಬೀಳುತ್ತಿದ್ದವು. ಯಮನ ದಾಳಿಯೋ ಎನ್ನುವಂತೆ

ನಿಲುಕಿತೊಂದೆಸೆಯಲಿ ಮಹಾರಥ । ರುಲುಹು ಮತ್ತೊಂದೆಸೆಯಲಶ್ವಾ
ವಳಿಯ ಹಲ್ಲಣೆ ಹೊಳಕಿದುದು ಹೊಯ್ದೆಳ್ವ ಕೈಹೊಡೆಯ
ಬಿಲುರಭಸ ಮತ್ತೊಂದು ದೆಸೆಯಲಿ । ಮೊಳಗಿದುದು ನಭವೆನಿತನಿತರಲಿ
ಗಲಭೆಯಾದುದು ಗಾಢಬಲ ಬಲವೈರಿಜಿತು ಖಳನ ೧೨

ಮಾಯೆಯಾಹವದವನವನ ಸಮ । ರಾಯತದ ಪರಿ ಬೇರೆ ಯಮ ವ
ಜ್ರಾಯುಧಾದ್ಯರ ಗೆಲಿದನವನೀ ಪರಿಯ ಸಮರದಲಿ
ರಾಯ ರಾಘವಸೂನು ಕೇಳವ । ನಾಯತದ ಸರಳೋಟಗಳ ರೌ
ದ್ರಾಯಮಾನಿತ ರಣವ ಹೊಗಳುವಡರಿದು ತನಗೆಂದ ೧೩

ಲವನೆ ಕೇಳೈ ಬಾರಿಸಿತು ಬಲು । ಬವರವವರಲಿ ಘಾಯವಡೆದುದು
ಗವಯ ಗಜ ನಳ ನೀಲ ಮೈಂದ ದ್ವಿವಿದ ಮೊದಲಾದ
ಪ್ಲವಗಪತಿಗಳು ಬಂದು ಬಿದ್ದುದು । ಪವನತನುಜನ ಮೇಲೆ ರಣರಾ
ಘವಮಹೀಪತಿಗರುಹಿದನು ಸುಗ್ರೀವನೀ ಹದನ ೧೪

ಆಡಿದವು ಬಳಿಕಭ್ರದಲಿ ಬಲು । ಗೋಡುಗಲ್ಗಳು ಬೀಸಿಕೆಯಲೋ
ಲಾಡಿದವು ಕೈದುದಿಯ ಹೆಮ್ಮರನಿವರ ಕದನದಲಿ
ಕೂಡೆ ಗವಸಣಿಸಿತ್ತು ಗಗನವ । ನೀಡಿರಿದು ಕಪಿಸೇನೆ ಸರಳಿನ
ಗೂಡಿನಲಿ ತುಗಿಸಿದನು ಹೊಳಕಿ ಸುರೇಂದ್ರಜಿತು ಭಟರ ೧೫

ಇಂದ್ರಜಿತು ಕೊಳ್ಳೆಹೊಡೆದನು. ೧೨. ಒಂದು ಕಡೆಯಲ್ಲಿ ಮಹಾರಥಿಗಳ ಕೂಗು ಎದ್ದಿತು. ಮತ್ತೊಂದು ಕಡೆಯಲ್ಲಿ ಕುದುರೆಗಳ ಕೆನೆತ ಗೋಚರಿಸಿತು, ಇನ್ನೊಂದು ಕಡೆಯಲ್ಲಿ ಮುಂಗೈಗೆ ಕಟ್ಟಿದ ರಕ್ಷೆಗೆ ಬಿಲ್ಲಿನ ಹಗ್ಗವು ಬಡಿದು ಏಳುವ ಬಿಲ್ಲಿನ ಶಬ್ದವೆದ್ದಿತು. ಹೀಗೆ ಮಹಾಶಕ್ತಿಶಾಲಿಯಾದ ಇಂದ್ರಜಿತು ರಾಕ್ಷಸನಿದ್ದ ಆಕಾಶದ ತುಂಬ ಗಲಭೆ ವ್ಯಾಪಿಸಿತು. ೧೩. ಇಂದ್ರಜಿತು ಮಾಯಾಯುದ್ಧವನ್ನೆಸಗುವವನು. ಅವನ ಕದನ ಸಾಮರ್ಥ್ಯದ ರೀತಿಯೇ ಬೇರೆ. ಯಮ, ಇಂದ್ರ ಮೊದಲಾದವರನ್ನು ಇಂಥ ಮಾಯಾ ಯುದ್ಧದಿಂದ ಗೆದ್ದನು. ರಘುರಾಮಕುಮಾರ ಕೇಳು, ಅವನ ಬಿರುಸಾದ ಬಾಣಗಳ ಭಯಂಕರ ಯುದ್ಧವನ್ನು ನನಗೆ ವರ್ಣಿಸಲಸಾಧ್ಯ—ಎಂದು ವಾಲ್ಮೀಕಿಮಹರ್ಷಿಗಳು ಹೇಳಿದರು. ೧೪. ಲವನೆ ಕೇಳು, ಕಪಿನಾಯಕರ ಮತ್ತು ಇಂದ್ರಜಿತುವಿನ ನಡುವೆ ಬಿರುಸಿನ ಕಾಳಗವು ನಡೆಯಿತು. ಗವಯ, ಗಜ, ನಳ, ನೀಲ, ಮೈಂದ, ದ್ವಿವಿದ ಮೊದಲಾದ ವಾನರನಾಯಕರು ಗಾಯಗೊಂಡರು. ಯುದ್ಧವು ಈಗ ಹನುಮಂತನ ಮೇಲೆ ಬಿದ್ದಿತು. ಸುಗ್ರೀವನು ಈ ಯುದ್ಧದ ಪರಿಸ್ಥಿತಿಯನ್ನು ರಾಮನಿಗೆ ತಿಳಿಸಿದನು. ೧೫. ಭಾರಿ ಕೋಡುಗಲ್ಲುಗಳನ್ನು ಆಕಾಶದಲ್ಲಿ ವಾನರಸೈನಿಕರು ಎಸೆದರು, ಕೈಯಲ್ಲಿ ಹಿಡಿದ ಮರಗಳನ್ನು ಬೀಸಿದರು, ಕಪಿಸೈನ್ಯವು ಕಿಕ್ಕಿರಿದು ಆಕಾಶವನ್ನು ಮುಚ್ಚಿತು. ಆಗ ಇಂದ್ರ

ಅಱಸಿದನು ಹನುಮಂತನಾ ಸರ । ೞಱಿತವನು ಸೈರಿಸುತ ಗಗನದ
ತೊಱಿತನಕ ಮೈದೋಱದವ ಮಾಯಾವಿಲಾಸದಲಿ
ಮಱಸಿ ಮುಗುಳ್ಗೆತಂದು ರಾಮನ । ನೞಿಸಿ ಸುರಿದನು ಸರಳ ಸೋನೆಯ
ನುಱುಬಿದನು ಬಿಲುದುಡುಕಿ ಲಕ್ಷ್ಮಣನಾ ನಿಶಾಚರನ ೧೬

ಏನು ಮಿಗಿಲೋ ಸ್ವಾಮಿಯೆಡೆಗವ । ಧಾನ ಕಪಿಭಟರೊಳಗೆ ಮಾರುತನ
ಸೂನುವಿಗೆ ಸುಮ್ಮಾನದೆಸುಗೆಯ ಸುರಪಜಿತು ಖಳನ
ಆ ನಿಭೃತ ಕೋದಂಡ ಚಂಡ । ಧ್ವಾನವಿಡಿದಿಳಿತಂದು ಹೊಯ್ದನು
ವೈನತೇಯನ ಘನತರದ ಗಾಡಿಕೆಯಲಾ ಭಟನ ೧೭

ಹೊಯ್ದ ಹನುಮನ ಘಾಯಕಾ ಬಲ । ಭೇದಿಜಿತುವಿನ ರಥವು ಸಿಡಿದುದು
ಮೈದೆಗೆದನವನನಿತಱಲಿ ಮಾಯಾವಿಲಾಸದಲಿ
ಐದು ಹೊದೆಯಲಿ ಪಾಶಧರ ಶರ । ವೈದಱಲಿ ಹನುಮಂತದೇವನ
ಹಾದಿಯನು ಬಿಗಿದಡರಿದನು ಮುಗುಳಭ್ರಮಂಡಲವ ೧೮

ಹೊಕ್ಕ ಮೈಯಲಿ ಕೈಗೆ ಕಾಲಿಗೆ । ಸಿಕ್ಕಿ ಸೆಳೆದವು ಪಾಶ ಪಾಶದ
ಸಿಕ್ಕಿನಲಿ ಸಿಡಿಮಿಡಿಯಲೌಡೊತ್ತುಗಳಲನಿಲಸುತ
ರಕ್ಕಸಾಂತಕನೆಡೆಗೆ ಚಿಂತಿಸು । ತಕ್ಕರಿನ ಹಂಬಲಿನಲಿರೆ ಕೈ
ಯಿಕ್ಕಿದನು ಕಾಳಗಕೆ ಕಲಿ ರಾವಣಿ ಕಕುತ್ಸ್ಥಜನ ೧೯

ಜಿತು ವಾನರವೀರರನ್ನು ಬಾಣದ ಪಂಜರದಲ್ಲಿ ಸೇರಿಸಿಬಿಟ್ಟನು, ೧೬. ಇಂದ್ರಜಿತು ವಿನ ಬಾಣದ ಹೊಡೆತವನ್ನು ಸಹಿಸಿಕೊಂಡು ಆಕಾಶಗಂಗೆಯವರೆಗೂ ಹೋಗಿ ಹನು ಮಂತನು ಇಂದ್ರಜಿತುವನ್ನು ಹುಡುಕಿದನು. ಇಂದ್ರಜಿತು ಕಣ್ಣಿಗೆ ಕಾಣಿಸಿಕೊಳ್ಳದೆ ಮಾಯೆಯಿಂದ ಬಂದು ರಾಮನನ್ನು ಹುಡುಕಿ ಬಾಣಗಳ ಮಳೆಯನ್ನು ಸುರಿಸಿದನು. ಲಕ್ಷ್ಮಣನು ಬಿಲ್ಲನ್ನು ತೆಗೆದುಕೊಂಡು ಆ ರಾಕ್ಷಸನನ್ನು ತಳ್ಳಿಬಿಟ್ಟನು. ೧೭. ಕಪಿವೀರರಲ್ಲಿ ವಾಯುಸುತನಿಗೆ ತನ್ನ ಪ್ರಭುವಿನ ಬಗ್ಗೆ ಭಕ್ತಿಯ ಆಧಿಕ್ಯವೆಷ್ಟೆಂದು ಹೇಳೋಣ. ಉಬ್ಬಿ ಬಾಣಪ್ರಯೋಗ ಮಾಡುತ್ತಿದ್ದ ಇಂದ್ರಜಿತು ಅಸುರನ ಮರೆಯಾದ ಬಿಲ್ಲಿನ ಪ್ರಚಂಡ ಧ್ವನಿಯ ಮಾರ್ಗವನ್ನು ಹಿಡಿದು ಇಳಿದುಬಂದು ಗರುಡನ ರಭಸದಿಂದ ಇಂದ್ರಜಿತು ವನ್ನು ಹೊಡೆದನು. ೧೮. ಹನುಮಂತನು ಕೊಟ್ಟ ಏಟಿಗೆ ಆ ಇಂದ್ರಜಿತುವಿನ ರಥವು ಸಿಡಿದುಹೋಯಿತು. ಅಷ್ಟರಲ್ಲಿ ಮಾಯಾವಿಲಾಸದಿಂದ ಇಂದ್ರಜಿತು ಹಿಮ್ಮೆಟ್ಟಿದನು. ಐದು ಗುಚ್ಛವಾಗಿ ಐದು ಯಮಪಾಶಬಾಣಗಳನ್ನು ಪ್ರಯೋಗಿಸಿ ಹನುಮಂತದೇವನ ದಾರಿಯನ್ನು ಕಟ್ಟಿ ಪುನಃ ಆಕಾಶಕ್ಕೇರಿದನು. ೧೯. ಎಲ್ಲೆಲ್ಲಿ ಹೋದರೆ ಅಲ್ಲೆಲ್ಲ ಕೈಗೆ 'ಕಾಲಿಗೆ ಪಾಶಗಳು ಸಿಕ್ಕಿಕೊಂಡು ಎಳೆಯಲಾರಂಭಿಸಿದವು. ಹನುಮಂತನು ಪಾಶದಲ್ಲಿ ಸಿಕ್ಕಿಕೊಂಡು ಕೋಪದಿಂದ ತುಟಿ ಕಚ್ಚುತ್ತ ಅಸುರಾರಿಯಾದ ಶ್ರೀರಾಮನ ಬಗ್ಗೆ ಚಿಂತಿ

ಕಣೆಯ ಕರೆದನು ಬಳಿಕ ರಾಮನ । ಹಣೆಯ ಸರಿಸದಲರಿಭಟನ ಮಾ
ರ್ಗಣದ ಪಥವಿಡಿದೇಱಿಸಿದನಾ ರಾಮನಂಬುಗಳ
ಕಣೆಯ ಕಣೆಯದ ಕಣೆಗಳೊದೆದುದು । ಗಣವ ಸರಗೋಳಿಸಿದವು ಬಳಿಯಂ
ಬಣದವರಿಭಟನಶ್ವ ಸಾರಥಿ ರಥ ಪತಾಕೆಗಳ ೨೦

ಬಳಿಕ ಬಲುಹಾಯ್ತಿಬ್ಬರಿಗೆ ಕಡು । ಗಲಹ ಕತ್ತಲೆವೆಳಗುಗಳ ಶರ
ವಳುಕಿಸಿದವಂಬರವನಳ್ಳಿಱಿದವು ದಿಶಾವಳಿಯ
ಹಲವು ಮಾತೇನಿವರ ರಣದ । ಗ್ಗಳದ ಸೌರಂಭಾತಿಶಯದಸ
ದಳಕೆ ಪಡಿಯನು ಕಾಣೆ ಪೂರ್ವದ ವೀರರೊಳಗೆಂದ ೨೧

ಕಱಿದನವನಂಬುಗಳನಂಬರ । ವೊಱಿಲಲವನೆಸುವಸ್ತ್ರಜಾಲವ
ತಱಿದು ಹತ್ತಿದವೀ ಖರಾರಿಯ ಕಠಿಣ ಶರಜಾಲ
ಅಱುಚುತಿರ್ದುದಜಾಂಡವಿಬ್ಬರ । ಗುಱುಬಿನಸ್ತ್ರಧ್ವನಿಗೆ ಬಲು ಬೊ
ಬ್ಬಿಱಿತಕಿಬ್ಬರ ಬೊಬ್ಬೆಗೇನೆಂಬೆನು ಮಹಾದ್ಭುತವ ೨೨

ಏಱುವಿಳಿವಿಬ್ಬರ ಕಣಾಳಿಯ । ತೋಱಿಕೆಯ ಕಿಡಿ ತಮದ ರಾಶಿಯ
ತೂಱಿದವು ತೇರೈಸಿದವು ನಾನಾ ದಿಗಂತದಲಿ
ತೋಱಿದವು ಬಳಿಕೀ ಖರಾರಿಯ । ತೂಱುಗಣೆ ರಿಪುಭಟನ ಚಾಪದ
ಚೀಱಿಕೆಯ ಸರಿಸದಲಿ ರಥಚೀತ್ಕೃತಿಯ ವಳಯದಲಿ ೨೩

ಸುತ್ತ ಹಂಬಲಿಸುತ್ತಿರಲು ಇಂದ್ರಜಿತು ರಾಮನೊಡನೆ ಕದನವನ್ನಾರಂಭಿಸಿದನು. ೨೦. ಇಂದ್ರಜಿತು ರಾಮನ ಹಣೆಗೆ ಬಾಣಗಳನ್ನು ಬಿಟ್ಟನು. ಶತ್ರುವಿನ ಬಾಣದ ದಾರಿಯನ್ನು ಹಿಡಿದು ರಾಮನು ಬಾಣಗಳನ್ನು ಹೊಡೆದನು. ಬಾಣಗಳು ಒಂದರ ಹಿಂದೆ ಒಂದು ಬೆನ್ನಟ್ಟಿಕೊಂಡು ಹೋಗಿ ನಕ್ಷತ್ರಗಳನ್ನು ಸರದಂತೆ ಪೋಣಿಸಿದವು. ಹಿಂಬಾಲಿಸಿದ ರಾಮನ ಬಾಣಗಳು ಇಂದ್ರಜಿತುವಿನ ಕುದುರೆ, ಸಾರಥಿ, ರಥ, ಬಾವುಟಗಳಿಗೆ ಹೊಡೆದವು. ೨೧. ಇಂದ್ರಜಿತು ಮತ್ತು ರಾಮ ಇವರಿಬ್ಬರ ನಡುವಿನ ಕಾಳಗವು ಬಿರುಸಾಯಿತು, ಕತ್ತಲೆ ಮತ್ತು ಬೆಳಕುಗಳ ಅಸ್ತ್ರಗಳು ಆಕಾಶವನ್ನು ನಡುಗಿಸಿದವು, ದಿಕ್ಕುಗಳನ್ನು ಶಬ್ದವು ತುಂಬಿತು. ಹೆಚ್ಚು ಮಾತೇನು, ಇವರ ಅಸಾಧರಣ ಕದನದ ಸಂಭ್ರಮಕ್ಕೆ ಹೋಲಿಕೆಯನ್ನು ಹಿಂದಿನ ವೀರರಲ್ಲಿ ಕಾಣಲಿಲ್ಲ. ೨೨. ಇಂದ್ರಜಿತು ಬಾಣಗಳ ಮಳೆ ಗರೆಯಲು ಆಕಾಶವು ಅರಚಿತು. ರಾಮನ ಕ್ರೂರಬಾಣಗಳು ಅವನ ಅಸ್ತ್ರಸಮೂಹವನ್ನು ಕತ್ತರಿಸಿ ಅವುಗಳ ಬೆನ್ನುಹತ್ತಿದವು. ಇಬ್ಬರ ಅತಿಶಯವಾದ ಅಸ್ತ್ರಧ್ವನಿಗೂ ಮತ್ತು ಬೊಬ್ಬೆಗೂ ಬ್ರಹ್ಮಾಂಡವು ಅರಚಿತು. ಅವರಿಬ್ಬರ ಅಬ್ಬರದ ಅದ್ಭುತವನ್ನು ಏನೆಂದು ಹೇಳಲಿ. ೨೩. ಏರುವ ಇಳಿಯುವ ಇಬ್ಬರ ಬಾಣಗಳಿಂದ ಹೊರಟ ಕಿಡಿಗಳು ಕತ್ತಲೆಯ ಮೊತ್ತವನ್ನು ಚದುರಿಸಿದವು ; ಕತ್ತಲೆಯನ್ನು ದಿಗಂತಗಳಿಂದ ಹಿಮ್ಮೆಟ್ಟಿಸಿದವು. ಶತ್ರುವೀರನ ಬಾಣದ ಶಬ್ದದ ಸಮೀಪದಲ್ಲಿ ರಥಚೀತ್ಕಾರದ ಬಳಿಯಲ್ಲಿ ರಾಮನ

ಒಡಲೊಳದ್ದವು ತೇಜಿಗಳ ತೇ । ರಡಿಮಗುಚಲೆತ್ತಿದವು ಬಳಿಯಂ
ಬೊಡೆದು ಹಾಯ್ದವು ನೆತ್ತಿಯಲಿ ನಿರ್ಜರಕುಲಾಂತಕನ
ಉಡಿದುಬಿದ್ದವು ಸಿಂಧ ಸೀಗುರಿ । ಸಡಕು ಸತ್ತಿಗೆ ಸುತ್ತುವಳಯದ
ಲೆಡಹಿತೀತನ ಸಮರಸಂಭ್ರಮಮಂತರಿಕ್ಷದಲಿ ೨೪

ತೂಗಿದನು ಮಸ್ತಕವನಾ ಶತ । ಯಾಗಜಿತು ಮಾಮಾ ತ್ರಿಯಂಬಕ
ಗಾಗದೀ ಕೋದಂಡಚಂಡಪ್ರೌಢಿ ಪರಿಕಿಸಲು
ನಾಗ ನರ ನಿರ್ಜರ ನಿಶಾಟರೊ । ಳೀ ಗರುವ ಗಾಡಾಯ್ಲ ಗುಣ ಶರ
ಯೋಗವನು ನಾ ಕಾಣೆನೆಂದಡಿಗಡಿಗೆ ಬೆಱಗಾದ ೨೫

ಇನಿತು ಬಲುಹಿಲ್ಲದಿರೆ ಸಮರಾ । ವನಿಯಲಸ್ತಮಿಸುವರೆ ಸುಮನೋ
ಜನವ ಬಗೆಯದ ವೀರಖರ ದೂಷಣ ಭಟಾಳಿಗಳು
ಮನುಜನಲ್ಲೀ ರಾಮನೆಂಬೀ । ನೆನಹು ನಿಜದಲಿ ತೋಱುತಿದೆಯೆನು
ತನಿಮಿಷಾಂತಕನೊಡ್ಡಿದನು ಮಾಯಾಮಹಾಶರವ ೨೬

ತೋಱಿದವು ನಭದಲಿ ಶಿಖಾಳಿಗ । ಳೇಱಿದವು ಜೀಮೂತಸಂತತಿ
ಚೀಱಿದವು ಚಂಚಲತೆಯಲಿ ಸಿಡಿಲಿಳೆಗೆ ಕೆಂಡಗಳ
ಕಾಱಿತಂಬರ ಹೊಗೆಯ ಹೊದಱಿನು । ಹೇಱಿತಂಬರ ಭುವನ ಬೆದಱಲು
ಚೀಱಿತಂಬರ ಬೀಱಿತಂಬರವಖಿಳ ಭಯರಸವ ೨೭

ತೂರುಬಾಣಗಳು ಕಾಣಿಸಿಕೊಂಡವು. ೨೪. ರಾಮನ ಬಾಣಗಳು ಇಂದ್ರಜಿತುವಿನ ಕುದುರೆಗಳ ದೇಹದಲ್ಲಿ ನಾಟಿದವು, ಅಡಿಮೇಲಾಗುವಂತೆ ರಥವನ್ನು ಮೇಲಕ್ಕೆತ್ತಿದವು, ರಾಮನ ಬಳಿಯಂಬು ಅಸುರ ಇಂದ್ರಜಿತುವಿನ ನೆತ್ತಿಯಲ್ಲಿ ಹಾಯ್ದುಹೋದವು. ಬಾವುಟ, ಚಾಮರ, ಕುಚ್ಚು, ಛತ್ರಿ ಸುತ್ತ ಮುರಿದುಬಿದ್ದವು. ಅಂತರಿಕ್ಷದಲ್ಲಿ ಇಂದ್ರಜಿತುವಿನ ಯುದ್ಧಕೌಶಲ ಎಡವಿತು. ೨೫. 'ಅಬ್ಬಾ ! ಈ ಬಿಲ್ಲಿನ ಪ್ರಚಂಡ ಕೌಶಲವು ಮುಕ್ಕಣ್ಣನ ಕೈಯಲ್ಲೂ ಯುದ್ಧವು ಸಾಧ್ಯವಿಲ್ಲ ! ಎಂದು ಇಂದ್ರಜಿತು ತಲೆದೂಗಿದನು. "ಸರ್ಪರು, ಮಾನವರು, ಅಮರರು ಮತ್ತು ರಾಕ್ಷಸರಲ್ಲಿ ಈ ಶ್ರೇಷ್ಠ ವೇಗಗತಿಯ ಬಾಣಪ್ರಯೋಗವನ್ನು ನಾನು ಕಾಣೆ" ಎಂದು ಮೇಲಿಂದ ಮೇಲೆ ಬೆರಗಾದ. ೨೬. "ಇಂಥ ಸಾಮರ್ಥ್ಯವಿಲ್ಲದಿದ್ದ ಪಕ್ಷಕ್ಕೆ ದೇವತೆಗಳನ್ನು ಲಕ್ಷಿಸದ ವೀರ ಖರ ದೂಷಣರು ಯುದ್ಧದಲ್ಲಿ ಮರಣ ಹೊಂದುವರೆ? ಈ ರಾಮನು ಮಾನವನಲ್ಲ ಎಂಬುದು ಸತ್ಯವೆಂಬುದಾಗಿ ತೋರುತ್ತಿದೆ" ಎನ್ನುತ್ತ ಇಂದ್ರಜಿತು ಮಾಯಾಮಹಾಸ್ತ್ರವನ್ನು ಬಿಲ್ಲಿಗೇರಿಸಿದನು. ೨೭. ಆಕಾಶದಲ್ಲಿ ಬೆಂಕಿಗಳು ಕಾಣಿಸಿಕೊಂಡವು ; ಮೋಡಗಳು ಮೇಲಕ್ಕೇರಿದವು ; ಫಳ ಫಳ ಎಂದು ಸಿಡಿಲುಗಳು ಅಬ್ಬರಿಸಿದವು ; ಗಗನವು ಭೂಮಿಗೆ ಕೆಂಡವನ್ನು ಕಾರಿತು ; ಅಂತರಿಕ್ಷವೆಲ್ಲ ಹೊಗೆಯ ರಾಶಿಯಿಂದ ತುಂಬಿತು ; ಭೂಮಿಯು ಬೆದರಲು ಅಂತರಿಕ್ಷವು ಕಿರುಚಿ

ಸುರಿವುದೊಮ್ಮೊಮ್ಮರುಣಜಲ ಹೆ । ಬ್ಬುರಿ ಛಡಾಳಿಸಿ ಹೊಯ್ದುದದ್ರಿಗ
ಳುರುಳಿದವು ಸಿಡಿಲೆಱಗಿದವು ತುಱುಗುವುದು ತಿಮಿರಚಯ
ಶರಧಿ ಜರಿವುದು ಕಾರಮಳೆ ಭೋ । ರ್ಗರೆದು ಸುರಿವುದು ಕಾಳರಕ್ಕಸ
ನೆರವಿ ನೆರವಿಕೆಗಳಲಿ ನಿಲುವುದು ಮಾಯೆಯಲಿ ಖಳನ ೨೮

ಬಿದ್ದುದಗಣಿತ ಸೇನೆ ಜಾಂಬವ । ನಿದ್ದನಂಬಿನ ಗೂಡಿನಲಿ ಹ
ಲ್ಲುದ್ದಿಕೆಯ ಹನುಮಂತನಘಮರುಷಣ ಪ್ರತಾಪದಲಿ
ಇದ್ದನಹಿತನ ಕಾಣದಿನಸುತ । ನಿದ್ದನಹಿತ ವಿಷಾದವಾರ್ಧಿಯೊ
ಳಿದ್ದ ಸುಭಟರ ಶೌರ್ಯವೇನಾಯ್ತುಱಿಯೆ ನಾನೆಂದ ೨೯

ಬವರ ಬಲಿದುದು ಬಳಿಕ ರಣಭೈ । ರವ ರಘುಕ್ಷಿತಿಪತಿಗೆ ರಿಪುವಿನ
ವಿವಿಧ ಮಾಯಾಪ್ರೌಢಿಯನು ಮಾಯಾವಿನಿರ್ಮಿತನು
ತವಿಸಿ ತೋಮರಶತಕದಲಿ ಶಾಂ । ಭವವನೆಚ್ಚನು ರಾವಣಿಯು ಜವ
ನವರು ಸುಳಿದರು ನಯನವೀಥಿಯಲಾ ನಿಶಾಚರನ ೩೦

ತೂಱುಗಣೆಗಿನಿತಾಯ್ತು ತಾ ಮೈ । ದೋಱಿ ಕಾದಿದಡಸು ಶರೀರದಿ
ಜಾಱದಿಹುದೇಯೆನುತ ಬಾಣವ್ಯಥೆಯ ಬಾಧನೆಗೆ
ಆಱದಾಯ್ದನು ಹೊದೆಯಲಸ್ತ್ರವ । ನೇಱಿಸಿದನಾ ಬಿಲುದಿರುವಿನಲಿ
ಮೂಱುಕಣ್ಣ ಮಹೇಶದತ್ತ ಮಹೋರಗಾಹ್ವಯದ ೩೧

ಕೊಂಡಿತು ; ಆಕಾಶವನ್ನು ಭಯರಸ ತುಂಬಿಕೊಂಡಿತು. ೨೮. ರಾಕ್ಷಸನ ಮಾಯೆಯಿಂದ ಒಮ್ಮೊಮ್ಮೆ ರಕ್ತವು ಸುರಿಯುವುದೂ, ಭಾರಿ ಉರಿಯು ಮಿತಿಮೀರಿ ಹಬ್ಬುವುದು, ಬೆಟ್ಟಗಳು ಉರುಳುವವು, ಸಿಡಿಲುಗಳು ಬಡಿಯುವವು, ಕತ್ತಲೆ ದಟ್ಟೈಸುವುದು, ಸಮುದ್ರ ಹಿಂದಕ್ಕೆ ಸರಿಯುವುದು, ಕಾರ್ಗಾಲದ ಮಳೆ ಭೋರೆಂದು ಸುರಿಯುವುದು, ಕಾಳರಾಕ್ಷಸರ ಗುಂಪು ಒಟ್ಟಾಗಿ ಒಂದುಕಡೆ ನಿಲ್ಲುವುದು. ೨೯. ಅಸಂಖ್ಯಾತ ಕಪಿಸೈನ್ಯವು ನೆಲಕ್ಕೆ ಉರುಳಿತು. ಜಾಂಬವಂತನು ಬಾಣಗಳ ಪಂಜರದಲ್ಲಿ ಸಿಕ್ಕಿಕೊಂಡನು. ಹಲ್ಲು ಕಡಿಯುತ್ತ ಹನುಮಂತನು ಅಘಮರ್ಷಣಮಂತ್ರದ ಪ್ರಭಾವಕ್ಕೊಳಗಾದನು. ಸುಗ್ರೀವನು ಶತ್ರುವನ್ನು ಕಾಣದೆ ಚಿಂತಾಸಾಗರದಲ್ಲಿ ಮುಳುಗಿದನು. ಇನ್ನುಳಿದ ವೀರರ ಶೌರ್ಯವೇನಾಯಿತೆಂದು ನಾನರಿಯೆ ಎಂದ ವಾಲ್ಮೀಕಿ. ೩೦. ರಣಭೈರವ ರಾಮನ ಯುದ್ಧ ಬಿರುಸಾಯಿತು. ಮಾಯೆಯನ್ನು ನಿರ್ಮಿಸುವ ರಾಮನು ಶತ್ರುವಿನ ವಿವಿಧ ರೀತಿಯ ಮಾಯಾವಿದ್ಯೆಯನ್ನು ನಿವಾರಿಸಿದನು. ನೂರು ತೋಮರಗಳಿಂದ ಶಿವನ ಅಸ್ತ್ರವನ್ನು ಇಂದ್ರಜಿತುವಿನ ಮೇಲೆ ಪ್ರಯೋಗಿಸಿದನು. ಇಂದ್ರಜಿತುವಿನ ಕಣ್ಣೆದುರಿಗೆ ಯಮನ ಕಡೆಯವರು ಗೋಚರಿಸಿದರು. ೩೧. "ರಾಮನ ಎಸೆಬಾಣಕ್ಕೇ ಇಷ್ಟಾಯಿತು. ಇನ್ನು ಪ್ರತ್ಯಕ್ಷವಾಗಿ ನಿಂತು ಯುದ್ಧಮಾಡಿದರೆ ನನ್ನ ಪ್ರಾಣವು ಹೋಗದೇ ಇರುವುದೇ ?" ಎನ್ನುತ್ತ ಬಾಣದ ಏಟಿನ ನೋವನ್ನು ಸಹಿಸಲಾರದೆ ಇಂದ್ರಜಿತು ಮುಕ್ಕಣ್ಣ ಮಹೇಶ್ವರನು

ಕುಲಗಳೆಂಟಱ ರಾಜಸರ್ಪ । ವಳಿಗಳೊದಗಿದವಂಬಿನಲಿ ಬಳಿ
ಸಲಿಸಿದವು ಪಾತಾಳಲೋಕದ ರೌದ್ರ ಫಣಿನಿಕರ
ಘುಳುಘುಳಿಪ ನಿಟ್ಟುಸಿರಿನಲಿ ದಿಗು । ವಳಯ ಮೊಱೆದವು ಶ್ವಾಸಲಹರಿಯ
ಲಳಿಯ ಗರಳದ ಹೊಗೆಯ ಹೊಯ್ಲಲಿ ಹೊರಳಿದುದು ಸೇನೆ ೩೨

ಚೂರಿಸುವ ನಿಡುನಾಲಗೆಯ ಫೂ । ತ್ಕಾರರವದಕ್ಷಿಗಳಲುಬ್ಬುವ
ತೋರಗಿಡಿಗಳ ದಾಡೆಗಳ ವಿಷದುರಿಯ ಝಾಡಿಗಳ
ಘೋರತರ ಹೆಡೆವಣಿಯ ನಿಶಿತ ಕ । ಠೋರ ರಸುಮೆಯ ರೌದ್ರಸರ್ಪಾ
ಕಾರ ಶರವಂಜಿಸಿತು ಗಾರುಡಭುವನರಂಜಕನ ೩೩

ಸರಳ ಹಿಳುಕಿನ ಬೆರಳ ಬಿಗುಹಿನ । ತಿರುವಿನಾಕರ್ಣಾಂತ ಶಾರ್ಙ್ಗೋ
ತ್ಕರದ ಮದದುಬ್ಬರದ ಘನಮಹಿಮಾತಿರೇಕದಲಿ
ಹರನ ವರವುಂಟೆಂಬ ಹಮ್ಮಿನ । ಭರದ ಬಲಮೆಯಲಮರಕುಲಸಂ
ಹರಣ ಶಕ್ರಾರಾತಿಯಸುರಾರಾತಿಗೀಂತೆಂದ ೩೪

ಸ್ಮರಿಸು ಗಾರುಡಮಂತ್ರಬೀಜಾ । ಕ್ಷರವ ಬಹಡೆ ಸುಪರ್ಣಮಣಿಪಂ
ಜರವ ಹೊಗು ಭೂ ನಾಗಮಣಿಮುದ್ರಿಕೆಯ ಬೆರಳಿನಲಿ
ಧರಿಸು ಘೋರ ಭುಜಂಗಮಾಸ್ತ್ರದ । ಲಱಿಕೆಯುಳ್ಳಡೆಯೆಂದು ಸರ್ಪಾ
ಸ್ತರಣಶಯನನ ಸರಿಸಕೆಚ್ಚನು ಘನಮಹಾಶರವ ೩೫

ಕೊಟ್ಟ ಮಹಾಸರ್ಪಾಸ್ತ್ರವನ್ನು ಬತ್ತಳಿಕೆಯಿಂದ ತೆಗೆದು ಬಿಲ್ಲಿನ ಹಗ್ಗಕ್ಕೆ ಏರಿಸಿದನು. ೩೨. ಎಂಟುಕುಲದ ರಾಜಸರ್ಪಗಳು ಬಾಣದಿಂದ ಹುಟ್ಟಿದವು. ಪಾತಾಳಲೋಕದ ಭಯಂಕರ ಸರ್ಪಗಳು ಒಂದರ ಹಿಂದೆ ಒಂದು ಬಂದವು. ಘುಳುಘುಳಿಸುವ ಸರ್ಪಗಳ ದೀರ್ಘವಾದ ಉಸಿರುಗಳಿಂದ ದಿಕ್ಕುಗಳು ಭೋರ್ಗರೆದವು. ಸರ್ಪಗಳ ಉಸಿರಾಟದಿಂದ ಹೊರಟ ತೀವ್ರವಿಷದ ಹೊಗೆಯ ಏಟಿಗೆ ಸಿಕ್ಕಿ ಕಪಿಸೈನ್ಯವು ಹೊರಳಾಡಿತು. ೩೩. ಉರಿಯನ್ನು ಕಾರುವ ಉದ್ದ ನಾಲಗೆಯಿಂದ ಫೂತ್ಕಾರ ಶಬ್ದಮಾಡುತ್ತ, ಕಣ್ಣುಗಳಿಂದ ದಪ್ಪಕಿಡಿಗಳನ್ನು ಸುರಿಸುತ್ತ, ವಿಷದುರಿಗಳನ್ನೆಬ್ಬಿಸುವ ದಾಡೆಗಳಿಂದ, ಉಗ್ರವಾದ ಹೆಡೆಯ ರತ್ನದ ಕಠೋರವಾದ ತೀಕ್ಷ್ಣ ಕಿರಣಗಳ ಸರ್ಪದಾಕಾರದ ಅಸ್ತ್ರವು ಗರುಡಮಂತ್ರದಿಂದ ಜಗತ್ತನ್ನು ರಂಜಿಸುವ ರಾಮನನ್ನು ಹೆದರಿಸಿತು. ೩೪. ಬಾಣದ ಗರಿಯನ್ನು ಬೆರಳಿನಿಂದ ಬಿಗಿಯಾಗಿ ಹಿಡಿದು ಕಿವಿಯವರೆಗೆ ಹಗ್ಗವನ್ನು ಪರಾಕ್ರಮದಿಂದ ಎಳೆದು ಅತಿಗರ್ವದಿಂದಲೂ ಮಿತಿಮೀರಿದ ಮಹಿಮೆಯಿಂದಲೂ ಕೂಡಿ ಶಿವನ ವರವುಂಟೆಂಬ ಅಹಂಕಾರದ ಬಲದಿಂದ ಬೀಗಿದ ಅಸುರ ಇಂದ್ರಜಿತು ಅಸುರಶತ್ರು ರಾಮನನ್ನು ಕುರಿತು ಮುಂದಿನಂತೆ ನುಡಿದನು. ೩೫. "ಬರುತ್ತಿದ್ದರೆ ಗಾರುಡ ಮಂತ್ರಬೀಜಾಕ್ಷರವನ್ನು ಸ್ಮರಿಸು ; ಗರುಡಮಣಿಯ ಪಂಜರದೊಳಗೆ ಸೇರಿಕೋ, ಉಗ್ರವಾದ ಸರ್ಪಾಸ್ತ್ರದ ತಿಳುವಳಿಕೆ ನಿನಗಿದ್ದ ಪಕ್ಷದಲ್ಲಿ ಭೂನಾಗಮಣಿ ಮುದ್ರೆ ಯುಂಗುರವನ್ನು ಬೆರಳಿನಲ್ಲಿ ಧರಿಸಿಕೋ" ಎಂದು ಹೇಳುತ್ತ ಆದಿಶೇಷನ ಮೇಲೆ ಮಲಗುವ ಶ್ರೀಹರಿಯ ಅವತಾರಿಯಾದ ಶ್ರೀರಾಮನ ಮೇಲಕ್ಕೆ ಇಂದ್ರಜಿತು ಮಹಾ

ಅಱಿಯದಾ ಖಳನೆಚ್ಚಡಂಬೆ । ನಱಿಯದೇ ಮುದ್ರಿಸಿತು ಮಾಯೆಯ
ಮಱಿಯ ಮನುಜಾಕೃತಿಯ ಮರಣೋದಯವಿವರ್ಜಿತನ
ಅಱುಹಿ ನರನಾಟಕದ ಶೇಷನ । ನೊಱಗಿಸಿತು ನೋಯಿಸದೆ ಬೆದಱಿತು
ಬಱಿಯ ಭೀತಿಯಲಿನಸುತಾದಿ ಸಮಸ್ತ ಭಟನಿಕರ ೩೬

ಚಾರಿವರಿದಟ್ಟಿದವು ಹಾವುಗ । ಳಾ ರಣಾಂಗಣ ಮಧ್ಯದಾಹವ
ವೀರವರ್ಗವನಿಳೆಯೊಳೊಱಗಿಸಿತೂದಿಕೆಯ ವಿಷದ
ಮಾರುತನ ಧಾಳಿಯಲಿ ಬಳಿಕಿಂ । ದ್ರಾರಿ ಬೊಬ್ಬಿಱಿದಬ್ಬರಿಸಿ ತ
ನ್ನೂರಿಗಭಿಮುಖನಾದನೊದಱುವ ವಾದ್ಯಘೋಷದಲಿ ೩೭

ಅಸ್ತ್ರವನ್ನು ಹೊಡೆದನು. ೩೬. ಇಂದ್ರಜಿತು ಅಜ್ಞಾನದಿಂದ ಮಹಾಸ್ತ್ರವನ್ನು ಪ್ರಯೋಗಿಸಿದರೆ ಅಸ್ತ್ರಕ್ಕೆ ಜ್ಞಾನವಿಲ್ಲವೇ. ಮಾಯೆಯನ್ನು ಮರೆಸಿಕೊಂಡಿರುವ ಮಾನವರೂಪಿನ ಹುಟ್ಟುಸಾವುಗಳಿಲ್ಲದ ರಾಮನನ್ನು ಅಸ್ತ್ರವು ಆವರಿಸಿತು ; ನರನಾಟಕದ ಲಕ್ಷ್ಮಣನನ್ನು ನೋಯಿಸದೆ ನೆಲಕ್ಕೆ ಮಲಗಿಸಿತು. ಸುಗ್ರೀವನೇ ಮೊದಲಾದ ಸಮಸ್ತ ಕಪಿವೀರರು ಭಯದಿಂದ ವ್ಯರ್ಥವಾಗಿ ಅಂಜಿದರು. ೩೭. ಹಾವುಗಳು ಜಾಣ್ಮೆಯಿಂದ ಸುತ್ತಾಡಿ ಯುದ್ಧರಂಗದ ಮಧ್ಯದ ಕದನಪರಾಕ್ರಮಿಗಳನ್ನು ಒಂದುಕಡೆಗೆ ಅಟ್ಟಿದವು. ವಿಷದ ಗಾಳಿಯನ್ನೂದಿ ಅವರನ್ನೆಲ್ಲ ನೆಲದಲ್ಲಿ ಉರುಳಿಸಿದವು. ಅನಂತರ ಇಂದ್ರಜಿತು ಬೊಬ್ಬೆಹಾಕಿ ಕೂಗುತ್ತ ಭೋರ್ಗರೆಯುವ ವಾದ್ಯಗಳೊಡನೆ ಲಂಕೆಗೆ ಹಿಂದಿರುಗಿದನು.

# ಹದಿನಾರನೆಯ ಸಂಧಿ

ಸೂಚನೆ॥ ಭುಜಗಪಾಶದ ರಾಮ ರಾಮಾ । ನುಜರ ನರಲೀಲಾಚರಿತ್ರದ
ಭಜನೆಯಿಂದೆಬ್ಬಿಸಿದನಮರರು ಹೊಗಳೆ ವಿಹಗೇಂದ್ರ

ತಿರುಗಿದನು ಬಳಿಕಿಂದ್ರಜಿತು ಜಯ । ಸಿರಿಯ ಸುಮ್ಮಾನದಲಿ ಲಂಕಾ
ಪುರಿಗೆ ಸಮರೋತ್ಸವದ ವಾರ್ತೆಯ ಚರರು ಪರಿತಂದು
ಸುರವಿರೋಧಿ ದಶಾನನಂಗೆ । ಚ್ಚರಿಸಲವದಿರಿಗಂಗಚಿಹ್ನವ
ಹೊರಿಸಿ ನಡೆತಂದಿತ್ತನೋಲಗವನು ದಶಗ್ರೀವ ೧

ಗುಡಿಯ ಕಟ್ಟಿಸು ಜೀಯ ಜಯದು । ಗ್ಗಡದ ಭೇರಿಯ ಹೊಯ್ಸು ಬಿರುದಿನ
ತೊಡರನಿಕ್ಕಂಜದೆ ವಿರೋಧಿಗೆ ವಿಷಮಲೋಚನನ
ತಡವಿದೇಕಿನ್ನೆಂಬ ತನುಜನ । ನುಡಿಗೆ ನಲಿದಿದಿರೆದ್ದು ನಗೆವೊಗ
ದಡಪಿನಿಂದಪ್ಪಿದನು ಬಯಲ ಮನೋನುರಾಗದಲಿ ೨

ಸುಳಿದವಾರತಿ ಕೆಂಪುಗೂಳಿನ । ಬಳುವೆಗಳ ಸೊಗಸಿನಲಿ ವಂದಿಗ
ಳುಲುಹು ತಿವಿದುದು ನಭವನೊಸಗೆಯ ಪಟಹಯದನಿ ಜಗವ
ತಳವೆಳಗ ಮಾಡಿದುದು ಗುಡಿಗಳು । ತಳಿತವಗಲಕೆ ನಗರದೊಳಗರೆ
ಘಳಿಗೆಯುತ್ಸವವಚ್ಚರಿಯ ಬೀರಿತು ದಶಾಸ್ಯಂಗೆ ೩

ಸೂಚನೆ॥ ಸರ್ಪಾಸ್ತ್ರದ ಪಾಶಕ್ಕೆ ಕಟ್ಟುಬಿದ್ದ ರಾಮಲಕ್ಷ್ಮಣರ ಮಾನವಲೀಲೆಯ ಮಹಿಮೆಯನ್ನು ಸ್ತುತಿಸಿ ಗರುಡನು ಅವರನ್ನು ಎಬ್ಬಿಸಿದನು. ಆಗ ದೇವತೆಗಳು ಕೊಂಡಾಡಿದರು. ೧. ವಿಜಯೋತ್ಸಾಹದಿಂದ ಇಂದ್ರಜಿತು ಲಂಕಾನಗರಕ್ಕೆ ಹಿಂದಿರುಗಿದನು. ಯುದ್ಧದ ಸಂತೋಷದ ಸಮಾಚಾರವನ್ನು ಚಾರರು ಬಂದು ರಾವಣನಿಗೆ ತಿಳಿಸಲು ಅವರಿಗೆ ಉಡುಗೊರೆಗಳನ್ನು ಹೊರಿಸಿ ಕಳುಹಿಸಿ ರಾವಣನು ಬಂದು ರಾಜಸಭೆಯನ್ನು ನಡೆಸಿದನು. ೨. "ಮಹಾರಾಜ, ಬಾವುಟಗಳನ್ನು ಕಟ್ಟಿಸು. ಜಯಭೇರಿಯನ್ನು ಹೊಡೆಸು. ಶತ್ರುವಿಗೆ ಹೆದರದೆ ಮುಕ್ಕಣ್ಣನ ಬಿರುದಿನ ಸಂಕೋಲೆಯನ್ನು ತೊಡಿಸು. ಇನ್ನು ತಡವೇಕೆ ?" ಎಂಬ ಮಗನ ಮಾತನ್ನು ಕೇಳಿ ಆನಂದದಿಂದ ಎದ್ದುಬಂದು ನಗುಮುಖ ಧರಿಸಿ ನಿರರ್ಥಕ ಪ್ರೀತಿಯಿಂದ ರಾವಣನು ಮಗನನ್ನು ಅಪ್ಪಿಕೊಂಡನು. ೩. ಕೆಂಪುಅನ್ನದ ದೃಷ್ಟಿ ನಿವಾಳಿಸಿ ಆರತಿಯೆತ್ತಿದರು. ಹೊಗಳುಭಟರ ಧ್ವನಿಯು ಆಕಾಶವನ್ನು ವ್ಯಾಪಿಸಿತು. ಮಂಗಳವಾದ್ಯಗಳ ಶಬ್ದವು ಜಗತ್ತಿಗೆ ಬೆರಗನ್ನುಂಟುಮಾಡಿತು. ಬಾವುಟಗಳು ನಗರದಲ್ಲೆಲ್ಲ ಕಾಣಿಸಿದವು, ಅರ್ಧಗಳಿಗೆಯ ಹಬ್ಬದ ಆವರಣವು ರಾವಣನಿಗೆ ಆಶ್ಚರ್ಯವನ್ನುಂಟು

ತಡವರಿಸಿದನು ಪುಳಕದುಬ್ಬಿನ । ಗುಡಿಯು ರೋಮದ ಹರುಷನಯನದ
ಬಿಡುವನಿಯು ಕಾಮುಕನು ಕೊಂಡಾಡಿದನು ನಂದನನ
ತೊಡವ ತನ್ನವ ತೆಗೆದು ಮಕ್ಕಳ । ತೊಡವೆ ಬಾಯೆನ್ನಾನೆ ಬಾಯೆಂ
ದೊಡನೊಡನೆ ಹರುಷಿಸುತಲಂಕರಿಸಿದನು ರಾವಣಿಯ ೪

ರಣವನೊಡ್ಡಿದ ಪರಿಯ ರಿಪುಕಪಿ । ಗಣದ ಕದನದ ಸಿರಿಯ ಫಣಿಮಾ
ರ್ಗಣದ ಮಹಿಮೆಯ ರಭಾಡಣೆಯ ರಣಜಯದ ಜೋಡಣೆಯ
ಕ್ಷಣರುಚಿಯ ಸಂಚಾರದುಬ್ಬಿನ । ಭಣಿತೆಯಲಿ ಬಿನ್ನೈಸಿ ಗರ್ವದ
ತಣಿವಿನಲಿ ನಿಜನಿಳಯಕಿಂದ್ರಾರಾತಿ ಬೀಳ್ಕೊಂಡ ೫

ಕರೆಸಿದನು ಬಳಿಕಸುರಪತಿ ಕಡು । ಹರುಷದಲಿ ಜಾನಕಿಯ ಕಾವಲ
ಸರಮೆಯನು ಸಂಗರದ ಜಯವಿಸ್ತರವನಾ ಸತಿಗೆ
ಒರೆದು ಕೊಂಡೊಯ್ದವನಿಜೆಗೆ ತ । ನ್ನರಸನನು ತೋರಿಸಿ ಮನೋನಿ
ರ್ಭರದ ಸಂಶಯವನು ನಿವಾರಿಸಿಕೊಂಡು ಬಾಯೆಂದ ೬

ಬೀಳುಕೊಂಡಾ ಸರಮೆ ಸಮರವ । ಕೇಳಿ ಕಂಗಳ ಬಿಡುವನಿಯುಲಾ
ಶ್ರೀಲತಾಂಗಿಯ ಬಳಿಗೆ ಬಂದುಸುರಿದಳು ರಾವಣನ
ಹೇಳಿಕೆಯ ಮಾತುಗಳನಾ ಸತಿ । ಕೇಳುತಾಕ್ರಂದನದಲಳ್ಳೆಯ
ಕೋಲುಗೊಂಡಂತೊಱಗಿದಳು ಬಸವಳಿದು ಭೂಮಿಯಲಿ ೭

ಮಾಡಿತು. ೪. ರೋಮಾಂಚಗೊಂಡು ಸಂತೋಷದ ಕಣ್ಣೀರನ್ನು ಸುರಿಸುತ್ತ ಕಾಮುಕನಾದ ದಶಕಂಠನು ಮಗನ ಮೈಸವರಿ ಅವನನ್ನು ಹೊಗಳಿದನು. ತನ್ನ ಮೈಮೇಲಿನ ಆಭರಣವನ್ನು ತೆಗೆದು, 'ಮಕ್ಕಳ ಆಭರಣವೇ ಬಾ, ಎನ್ನಾನೆ ಬಾ' ಎಂದು ಕರೆದು ಅಡಿಗಡಿಗೆ ಹರ್ಷಿಸುತ್ತ ಇಂದ್ರಜಿತುವಿಗೆ ತೊಡಿಸಿದನು. ೫. ಯುದ್ಧವನ್ನು ಆರಂಭಿಸಿದ ಕ್ರಮವನ್ನೂ, ಶತ್ರುವಾನರಸಮೂಹದ ಯುದ್ಧದ ವೈಭವವನ್ನೂ, ಸರ್ಪಾಸ್ತ್ರದ ಮಹಿಮೆಯನ್ನೂ, ರಭಸದ ಯುದ್ಧವಿಜಯದ ರೀತಿಯನ್ನೂ ಕ್ಷಣಕಾಲದ ಕ್ಷಣಸಂತೋಷದ ಪ್ರಕಾಶದಿಂದ ವಿವರಿಸಿ ಗರ್ವದ ತೃಪ್ತಿಯಿಂದ ರಾವಣನನ್ನು ಬೀಳ್ಕೊಂಡು ಇಂದ್ರಜಿತು ತನ್ನಮನೆಗೆ ಹೊರಟ. ೬. ಅನಂತರ ರಾಕ್ಷಸೇಶ್ವರನು ಅತ್ಯಾನಂದದಿಂದ ಜಾನಕಿಯ ಕಾವಲುಗಾರಳಾದ ಸರಮೆಯನ್ನು ಕರೆಸಿದನು. ಯುದ್ಧದಲ್ಲಿ ಗೆಲುವನ್ನು ಪಡೆದ ಸುದ್ದಿಯನ್ನು ಸರಮೆಗೆ ತಿಳಿಸಿ ಸೀತೆಯನ್ನು ಕರೆದುಕೊಂಡು ಹೋಗಿ ಅವಳ ಪತಿಯನ್ನು ತೋರಿಸಿ ಅವಳ ಮನಸ್ಸಿನ ಸಂದೇಹವನ್ನು ಹೋಗಲಾಡಿಸಿಕೊಂಡು ಬಾ ಎಂದು ಹೇಳಿದನು. ೭. ರಾವಣನಿಂದ ಹೊರಟ ಸರಮೆಯು ಯುದ್ಧದ ವಿವರವನ್ನು ಕೇಳಿ ಕಣ್ಣೀರಿಡುತ್ತ ಸೀತೆಯ ಬಳಿಗೆ ಬಂದು ರಾವಣನ ಹೇಳಿಕೆಯ ಮಾತುಗಳನ್ನು ತಿಳಿಸಿದಳು. ಆ ಮಾತುಗಳನ್ನು ಕೇಳಿ ಅಳುತ್ತ ಪಕ್ಕಿಗೆ ಬಾಣಚುಚ್ಚಿಕೊಂಡಂತೆ ಸೀತೆ ಮೈಮರೆತು ನೆಲಕ್ಕೊರಗಿ

ತಾಯೆ ಸೈರಿಸು ನಮ್ಮವರು ಬಹು । ಮಾಯಕಾರರು ಹುಸಿಯೊ ನಿಜವೋ
ನೋಯಬೇಡನ್ನಬರ ನಡೆನೋಡುವೆವು ನಾವೆನುತ
ವಾಯುಪಥದಲಿ ಪುಷ್ಪಕದಲಬ್ಜ । ಜಾಯತಾಕ್ಷಿಯ ತಂದಳಾ ರಘು
ರಾಯನಿರ್ದ ರಣಾಂಗಣಕೆ ರವಿವಂಶ ಕೇಳೆಂದ ೮

ವಿಷದ ಲಹರಿಯ ಲಳಿಯ ನದುಳಿನ । ಹಸರಿಕೆಯ ಚೂರಿಸುವ ಜಿಹ್ವಾ
ಪ್ರಸರದುರು ಫೂತ್ಕಾರದಹಿಪಂಜರದ ಮಧ್ಯದಲಿ
ಎಸೆದನೈ ಲವ ಕೇಳು ಪೂರ್ವದ । ವಿಷಧರೇಂದ್ರಫಣಾಳಿಯಲಿ ಬಾ
ರಿಸಿದ ನಿದ್ರಾಮುದ್ರಿತನವೊಲು ರಾಯ ರಘುನಾಥ ೯

ಕಂಡಳೈ ಕಮಲಾಕ್ಷಿ ಖಳವೇ । ತಂಡ ಪಂಚಾನನನಾಹವ
ಚಂಡ ಚಟುಳ ಪರಾಕ್ರಮನ ಮಾಯಾತ್ರಿವಿಕ್ರಮನ
ಕಂಡು ಕಂಬನಿದುಂಬುಗಲಲಿ ಹಾ । ಚಂಡಬಲ ಹಾ ರಾಮ ಹಾ ಮಾ
ರ್ತಾಂಡಕುಲಸಂಭೂತ ಹಾಯೆಂದೊಱಲಿದಳು ಸೀತೆ ೧೦

ಮರುಳಿಗೆತ್ತಣ ಮಂಡನವು ತರು । ಚರರಿಗೇಕೆ ವಿಲಾಸದರ್ಪಣ
ದರುಶನವು ಜಾತ್ಯಂಧಗೆತ್ತಲು ಪತಿಯುಪೇಕ್ಷಿತೆಗೆ
ಪರಮ ಸುವ್ರತವೇಕೆ ಪಾಪಿಗೆ । ಪುರುಷಭಾಗ್ಯತೆ ಸುಲಭವೇ ಹಾ
ನರಶಿರೋಮಣಿ ಹಾಯೆನುತ ಹಮ್ಮೈಸಿದಳು ಸೀತೆ ೧೧

ದಳು. ೮. "ತಾಯೆ ಸಹಿಸಿಕೋ. ನಮ್ಮವರು ಬಹು ಮಾಯಗಾರರು, ಅವರು ಹೇಳಿದ ಸುದ್ದಿ ಸುಳ್ಳೋ ನಿಜವೋ ! ಸುಮ್ಮನೆ ನೊಂದುಕೊಳ್ಳಬೇಡ. ಇಷ್ಟರಲ್ಲಿ ಅಲ್ಲಿಗೆ ಹೋಗಿ ನೋಡಿಕೊಂಡು ಬರೋಣ" ಎಂದು ನುಡಿದು ಪುಷ್ಪಕವಿಮಾನದಲ್ಲಿ ಆಕಾಶಮಾರ್ಗದಿಂದ ರಘುಪತಿ ಇದ್ದ ಯುದ್ಧರಂಗಕ್ಕೆ ಸೀತೆಯನ್ನು ಕರೆದುಕೊಂಡು ಬಂದಳು. ೯. ವಿಷದ ಅಲೆಗಳ ರಭಸದ, ಆಶ್ಚರ್ಯಕರವಾಗಿ ಉರಿಯನ್ನು ಕಾರುವ ಹಲವು ನಾಲಗೆಗಳ, ಜೋರಾಗಿ ಭುಸ್ಸೆನ್ನುವ ಸರ್ಪಾಸ್ತ್ರದ ಪಂಜರದ ಮಧ್ಯದಲ್ಲಿ ರಾಮನು ಹಿಂದೆ ಆದಿಶೇಷನ ಹೆಡೆಗಳಲ್ಲಿ ಮಲಗಿ ನಿದ್ರಿಸಿದ ಶ್ರೀಹರಿಯಂತೆ ಪ್ರಕಾಶಿಸಿದನು, ಲವ ಕೇಳು ಎಂದು ವಾಲ್ಮೀಕಿಋಷಿಗಳು ನುಡಿದರು. ೧೦. ರಾಕ್ಷಸರೆಂಬ ಆನೆಗಳ ಸಿಂಹನೂ, ಯುದ್ಧಪ್ರಚಂಡ ಪರಾಕ್ರಮಿಯೂ, ಮಾಯಾತ್ರಿವಿಕ್ರಮನೂ ಆದ ರಾಮನನ್ನು ಸೀತೆ ಕಂಡಳು ಕಂಡು ಕಣ್ಣೀರು ತುಂಬಿಕೊಂಡು, "ಅಯ್ಯೋ ! ಉಗ್ರ ಬಲಶಾಲಿ, ಹಾ ರಾಮ, ಹಾ ಸೂರ್ಯವಂಶದಲ್ಲಿ ಜನಿಸಿದವನೇ !" ಎಂದು ಸೀತೆ ಅತ್ತಳು. ೧೧. "ದೆವ್ವಗಳಿಗೆಲ್ಲಿಯ ಅಲಂಕಾರ, ಕಪಿಗಳಿಗೇಕೆ ಬೆಡಗು, ಹುಟ್ಟುಕುರುಡನಿಗೇಕೆ ಕನ್ನಡಿ. ಪತಿಯ ಅಲಕ್ಷ್ಯಕ್ಕೊಳಗಾದವಳಿಗೇಕೆ ಶ್ರೇಷ್ಠವ್ರತ ? ಪಾಪಿಗೆ ಪತಿಯ ಸೌಭಾಗ್ಯ ಸುಲಭವೇ ? ಹಾ ಪುರುಷೋತ್ತಮ !" ಎಂದು ಹಲುಬುತ್ತ ಸೀತೆ ಮೂರ್ಛೆ

ರೋಗಿಗೊಲಿದಕ್ಕುವುದೆ ಸುಧೆ ನಿ । ರ್ಭಾಗಧೇಯನ ಮುಂದೆ ಸಿರಿ ತಾ
ನಾಗಿ ಸುಳಿವುದೆ ಜಾತಿಮೂರ್ಖನ ಜಾಡ್ಯಹೃದಯದಲಿ
ಯೋಗ ನೆಲೆಗೊಂಬುದೆ ಸರಮೆ ಕೇ । ಳೌ ಗುರುದ್ರೋಹಂಗೆ ಕೈವ
ಲ್ಯಾಗಮವು ಘಟಿಸುವುದೆ ಹಾಯೆಂದೊಱಲಿದಳು ಸೀತೆ ೧೨

ಧರೆಯಲುದಿಸಿದ ಲಕ್ಷ್ಮಿಯೆಂದೇ । ಕರವನೆನ್ನುವನೆನ್ನ ಗಂಡನ
ನರಚರಿತ್ರದ ವಿಷ್ಣುವೆಂಬನು ಜನಕನನವರತ
ಹಿರಿಯರಾಡುವರಧಿಕ ಲಕ್ಷಣ । ಭರಿತೆಯೆಂದೆನ್ನುವನು ಮಾತಿವು
ಸುರಪಚಾಪದ ಚಾಳಿಯಾದುದೆಯೆಂದಳಿಂದುಮುಖಿ ೧೩

ಬದುಕಲಾರೆನು ಸರಮೆ ಸಹಗಮ । ನದಲಿ ಸೂರ್ಯಾನ್ವಯನ ಕೈಗೂ
ಡದಲಿ ಕಾಬೆನು ನಮ್ಮ ಪೂರ್ವದ ನೃಪಪುರಂಧ್ರಿಯರ
ತುದಿಯ ಮಾತಿದು ಕಳುಹು ತನ್ನನು । ಹೃದಯದಲಿ ಬೇಱೊಂದನೆಣಿಸದೆ
ವದನದಲಿ ಕೃಪೆಯಿರಲಿ ಕಳುಹೆಂದೆಱಗಿದಳು ಪದಕೆ ೧೪

ಕೊಂದವರು ಪರರಲ್ಲ ಗಂಡನ । ಕೊಂದವಳು ತಾನೀಗ ಸಾವೆ
ನ್ನಿಂದ ಸಿದ್ಧಿಸಿತಬುಜಸಖಕುಲಸಾರ್ವಭೌಮಂಗೆ
ಚಂದವೇ ತಾನಿನ್ನು ಜೀವಿಪು । ದಂದವೇ ಧರಣಿಯಲಿ ಬದುಕುವು
ದೆಂದು ಕೈಗಳ ಮುಗಿದು ನುಡಿದಳು ಸರಮೆಗಬುಜಾಕ್ಷಿ ೧೫

ಹೋದಳು. ೧೨. "ರೋಗಿಗೆ ಅಮೃತವು ತಾನಾಗಿ ಹಿಡಿಸುವುದೆ, ದುರದೃಷ್ಟಶಾಲಿಯ ಮುಂದೆ ಸಂಪತ್ತು ತಾನಾಗಿ ಸುಳಿಯುವುದೆ, ಹುಟ್ಟಿನಿಂದಲೇ ಮೂರ್ಖನಾದವನ ಉದಾಸೀನ ಹೃದಯದಲ್ಲಿ ಯೋಗವು ನೆಲಸುವುದೇ ? ಸರಮೆ, ಕೇಳು. ಗುರುದ್ರೋಹಿಗೆ ಮೋಕ್ಷವು ದೊರಕುವುದೆ ? ಅಯ್ಯೋ !" ಎಂದು ಸೀತೆ ಅತ್ತಳು. ೧೩. ಭೂಮಿಯಲ್ಲಿ ಹುಟ್ಟಿದ ಲಕ್ಷ್ಮಿಯೆಂದೇ ಯಾವಾಗಲೂ ನನ್ನ ತಂದೆ ಹೇಳುವನು ಮತ್ತು ನನ್ನ ಪತಿಯನ್ನು ಮಾನವಚರಿತ್ರೆಯ ವಿಷ್ಣುವೆಂದು ನುಡಿಯುವನು. ನಾನು ಅತ್ಯಂತ ಸುಲಕ್ಷಣವುಳ್ಳವಳೆಂದು ಹಿರಿಯರು ಹೇಳುವರು. ಈ ಮಾತುಗಳು ಕಾಮನಬಿಲ್ಲಿನಂದವಾದುವೆ ?" ಎಂದಳು ಚಂದ್ರಮುಖಿ ಸೀತೆ. ೧೪. "ನಾನಿನ್ನು ಬದುಕಲಾರೆ ಸರಮೆ. ಸಹಗಮನದಿಂದ ಸೂರ್ಯವಂಶದ ನನ್ನ ಪತಿಯನ್ನು ಸೇರುವೆನು. ನಮ್ಮ ಹಿಂದಿನ ರಾಜರ ಪತ್ನಿಯರ ಕೊನೆಯ ಮಾತಿದು. ಮನಸ್ಸಿನಲ್ಲಿ ಬೇರೆ ಭಾವಿಸದೆ ನನ್ನನ್ನು ಕಳುಹಿಸಿಕೊಡು. ನನ್ನ ಮೇಲೆ ನಿನ್ನ ದಯೆಯಿರಲಿ" ಎಂದು ಸೀತೆಯು ಸರಮೆಯ ಪಾದಗಳಿಗೆ ಎರಗಿದಳು. ೧೫. "ನನ್ನ ಗಂಡನನ್ನು ಕೊಂದವರು ಬೇರೆಯವರಲ್ಲ, ನಾನೇ ನನ್ನ ಪತಿಯನ್ನು ಕೊಂದವಳು. ಸೂರ್ಯವಂಶ ಚಕ್ರವರ್ತಿಗೆ ಸಾವು ನನ್ನಿಂದಾಯಿತು. ನಾನಿನ್ನು ಜೀವಿಸಿರುವುದು ಚಂದವೇ ? ಭೂಮಿಯಲ್ಲಿ ಬದುಕುವುದು ಸರಿಯೇ ?" ಎಂದು ಕೈಗಳನ್ನು ಮುಗಿದುಕೊಂಡು ಸರಮೆಗೆ

ಯುವತಿಯರೊಳತ್ಯಂತ ವಿರಾಜಿಸಿದ । ಯುವತಿಯಲ್ಲಾ ನೀನು ಸಿರಿ ರಾ
ಘವನ ಮರಣವ ನಿರ್ಧರಿಸುವ ನಿತಂಬಿನಿಯೆ
ಎವಗೆ ನಿನ್ನಯ ಮಾತು ಕರ್ಣಕೆ । ಸವಿಗಳಾಗಿರವೆನುತ ಸಾಕಿ
ನ್ನವಿನಯಪ್ರತಿಬಿಂಬವಚನಗಳೆಂದಳಾ ಸರಮೆ ೧೬

ಸೈರಿಸೊಂದೇ ಕ್ಷಣ ವಿಭೀಷಣ । ವೀರಗಮನದೊಳರಸ ರಾಘವ
ನಾರುಭಟೆಯನು ಲಕ್ಷ್ಮಣಾಂಕನ ಹೂಂಕೃತಿಧ್ವನಿಯ
ತೋರಿಸುವೆನೆನುತಾ ಸರಮೆ ನೃಪ । ನಾರಿಯನು ನಳಿನಾಕ್ಷಿಯನು ನಯ
ಸಾರದಲಿ ನಂಬಿಸುತ ತಂದಳು ಸೀಮೆಗಾ ರಣದ ೧೭

ಲವನೆ ಕೇಳೈ ಬಳಿಕ ರಘುಪುಂ । ಗವನನರಸಿದರಿರುಳು ಕಲಿಜಾಂ
ಬವ ಸುಷೇಣ ಗವಾಕ್ಷ ಪವನಜ ರವಿಸುತಾದಿಗಳು
ಕವಿವ ಕಂಗಳ ಜಲದ ಜಾಡ್ಯದ । ಜವನಿಕೆಯ ಜೋಡಣೆಯ ಚಿತ್ತದ
ಬವಣೆಗೆಯ ಭಟರರಸಿ ಕಂಡರು ಕಪಟಮಾನುಷನ ೧೮

ಗರಳದುಬ್ಬರದಬ್ಬರದ ಫೂ । ತ್ಕರದ ಚೂರಿಪ ಜಿಹ್ವೆಗಳ ನಿ
ರ್ಭರದ ಫಣಿಕುಲಮಧ್ಯದಲಿ ಫಣಿತಲ್ಪನಂದದಲಿ
ಅರಸನಿರೆ ಸಂಶಯದ ಮನದಲಿ । ಸುರರ ವೈದ್ಯರ ನಂದನನ ಸರ
ಸಿರುಹಬಾಂಧವಸೂನು ಕರೆದಿಂತೆಂದನಾತಂಗೆ ೧೯

ನುಡಿದಳು ಸೀತೆ. ೧೬. "ಜಗತ್ತಿನ ಯುವತಿಯರಲ್ಲೆಲ್ಲ ಅತ್ಯಂತ ಶ್ರೇಷ್ಠ ಯುವತಿಯಲ್ಲವೇ ನೀನು ? ಶ್ರೀರಾಮನ ಮರಣವನ್ನು ನಿರ್ಧರಿಸುವ ನಾರಿಯೆ ನೀನು ? ನಿನ್ನ ಮಾತು ನಮ್ಮ ಕಿವಿಗಳಿಗೆ ರುಚಿಸುವುದಿಲ್ಲ. ಅವಿನಯವನ್ನು ಪ್ರತಿಬಿಂಬಿಸುವ ನಿನ್ನ ಮಾತು ಸಾಕು" ಎಂದಳು ಸರಮೆ. ೧೭. "ಒಂದೇ ಒಂದು ಕ್ಷಣ ಸೈರಿಸು. ವೀರ ವಿಭೀಷಣನ ಆಗಮನವನ್ನೂ, ರಾಜಾರಾಮನ ಸಿಂಹನಾದವನ್ನೂ, ಲಕ್ಷ್ಮಣನ ಹೂಂಕಾರಧ್ವನಿಯನ್ನೂ ತೋರಿಸುವೆನು" ಎನ್ನುತ್ತ ಸರಮೆಯು ಕಮಲನಯನೆ ರಾಮಸತಿಯನ್ನು ಮೃದುಮಾತುಗಳಿಂದ ನಂಬಿಸಿ ಯುದ್ಧರಂಗದ ಪ್ರದೇಶಕ್ಕೆ ಕರೆತಂದಳು. ೧೮. ಲವನೆ, ಕೇಳು. ಅನಂತರ ಜಾಂಬವ, ಸುಷೇಣ, ಗವಾಕ್ಷ, ಹನುಮಂತ, ಸುಗ್ರೀವಾದಿಗಳು ಕತ್ತಲೆಯಲ್ಲಿ ರಾಘವನನ್ನು ಹುಡುಕಿದರು. ಕಣ್ಣುಗಳಲ್ಲಿ ನೀರು ತುಂಬಿಕೊಂಡು, ನೋವಿನ ಮುಸುಕಿನಲ್ಲಿ ಚಿತ್ತಭ್ರಮೆಯಿಂದ ಕೂಡಿದ ಕಪಿವೀರರು ಲೀಲಾಮಾನವನನ್ನು ಹುಡುಕಿ ಕಂಡರು. ೧೯. ತೀವ್ರ ವಿಷದಿಂದ ತುಂಬಿದ, ಜೋರಾಗಿ ಫೂತ್ಕಾರಮಾಡುತ್ತ ಉರಿಯುಗುಳುವ ನಾಲಗೆಗಳ ಉಗ್ರಸರ್ಪಗಳ ಮಧ್ಯದಲ್ಲಿ ಆದಿಶೇಷನ ಮೇಲೆ ಮಲಗಿದವನ ಹಾಗೆ ಶ್ರೀರಾಮನಿರಲು ಶಂಕಾಸ್ಪದ ಮನಸ್ಸಿನಿಂದ ದೇವತೆಗಳ ವೈದ್ಯರ ಮಗ

ಬಾ ಸುಷೇಣ ಕಪೀಂದ್ರನೀನ | ಭ್ಯಾಸಿಯಲ್ಲಾ ವೈದ್ಯಶಾಸ್ತ್ರದೊ
ಳಾ ಸುರೇಂದ್ರನ ಮನೆಯ ಧನ್ವಂತರಿಯ ಪುತ್ರನಲ
ದಾಶರಥಿಯನು ನೋಡು ನಮಗೇ | ನಾಸೆಯುಂಟೇ ಹೇಳೆನಲು ಸಂ
ಭಾಷಣೆಗೆ ತಾ ಠಾವ ಕಾಣೆನು ಹೇಳಲೇನೆಂದ ೨೦

ಐಸೆ ಮತ್ತೇನೆಂದು ಬೆಱಗಿನ | ಬಾಸಣದ ಕದಪುಗಳ ಕೈಗಳ
ಭೂಷಣದಲಿರಲಾ ವಿಭೀಷಣದೇವ ನಡೆತಂದು
ಪೈಸರಿಸಿದೀ ರಣಕೆ ಮನದ ವಿ | ಲಾಸವಾವುದು ವೀರವಿಜಯ ಸು
ವಾಸಿನಿಯ ಸೌಭಾಗ್ಯದುನ್ನತಿಗೇನು ಮತಿಯೆಂದ ೨೧

ಎಲೆ ವಿಭೀಷಣ ಕೇಳು ರಾಮನ | ಛಲವೆಯೆನ್ನಯ ಛಲವು ರಾಮನ
ಕಲಹವೆನ್ನಯ ಕಲಹ ರಾಮನ ವಚನ ಮದ್ವಚನ
ಕೊಳುಗುಳದೊಳು ತವಾಗ್ರಜನ ದಿಗು | ಬಲಿಯನಿತ್ತು ತದೀಯ ರಾಜ್ಯಕೆ
ನಿಲಿಸುವೆನು ನಿನ್ನುವನು ನೋಡೆಂದುಬ್ಬಿದನು ರವಿಜ ೨೨

ಅರಸ ರಾಘವನಾವ ಲೋಕದೊ | ಳಿರಲಿ ತಹೆನಡ್ಡೈಸಿ ನಿಂದು
ಬ್ಬರದ ಮಹಿಮೆಯ ದೇವತೆಗಳಾರಾದಡವರುಗಳ
ಶಿರವ ಚೆಂಡಾಡುವೆನು ಸೀತೆಯ | ನೆರಹುವೆನು ರಾಘವನೊಳಾರೆಂ
ದಱಿಯಲಾ ಸುಗ್ರೀವದೇವನನೆನುತ ಗರ್ಜಿಸಿದ ೨೩

ನನ್ನು ಕರೆದು ಸುಗ್ರೀವನು ಅವನನ್ನು ಕುರಿತು ಮುಂದಿನಂತೆ ಹೇಳಿದನು. ೨೦. “ಅಯ್ಯಾ ವಾನರನಾಯಕ ಸುಷೇಣ, ಬಾ. ನೀನು ವೈದ್ಯಶಾಸ್ತ್ರವನ್ನು ಕಲಿತವನಲ್ಲವೇ ? ಆ ದೇವೇಂದ್ರನ ವೈದ್ಯ ಧನ್ವಂತರಿಯ ಮಗನಲ್ಲವೇ ನೀನು. ದಾಶರಥಿಯನ್ನು ನೋಡು. ಅವನ ಆಸೆ ಏನಾದರೂ ಉಳಿದಿದೆಯೇ ಹೇಳು” ಎಂದು ಕೇಳಲು “ಏನನ್ನು ಮಾತನಾಡಲೂ ಅವಕಾಶವಿಲ್ಲ” ಎಂದು ಸುಷೇಣನು ಉತ್ತರಿಸಿದನು. ೨೧. “ಹಾಗೇ, ಮತ್ತೇನು !” ಎಂದು ಬೆರಗಿನಿಂದ ಕೂಡಿ ಸುಗ್ರೀವನು ಕೆನ್ನೆಗೆ ಕೈಹಚ್ಚಿ ನಿಂತಿರಲು ವಿಭೀಷಣದೇವನು ಬಂದು ಯುದ್ಧದಲ್ಲಿ ಸೋತು ಹಿಂಜರಿದ ಬಗ್ಗೆ ಮನಸ್ಸಿನ ವಿಚಾರವೇನು ? ವೀರವಿಜಯಲಕ್ಷ್ಮಿಯ ಸೌಭಾಗ್ಯವನ್ನು ಪಡೆಯುವಲ್ಲಿ ನಿಮ್ಮ ಅಭಿಪ್ರಾಯವೇನು ?” ಎಂದು ಕೇಳಿದ. ೨೨. “ಅಯ್ಯಾ ವಿಭೀಷಣ, ಕೇಳು. ರಾಮನ ಛಲವೇ ನನ್ನ ಛಲ ; ಅವನ ಯುದ್ಧ ನನ್ನ ಯುದ್ಧ. ರಾಮನ ಮಾತು ನನ್ನ ಮಾತು. ಕಾಳಗದಲ್ಲಿ ನಿಮ್ಮಣ್ಣನನ್ನು ದಿಗ್ಬಲಿಗೊಟ್ಟು ನಿನ್ನನ್ನು ಲಂಕಾರಾಜ್ಯದಲ್ಲಿ ನಿಲ್ಲಿಸುವೆನು. ನೋಡು” ಎಂದು ಗರ್ವದಿಂದ ಸುಗ್ರೀವನು ನುಡಿದನು. ೨೩. “ರಾಘವನು ಯಾವ ಲೋಕದಲ್ಲಿದ್ದರೂ ಸರಿಯೆ ಅಡ್ಡಹಾಕಿ ನಿಂತು ಕರೆತರುವೆನು. ಅತಿಶಯ ಮಹಿಮೆಯ ದೇವತೆಗಳು ಯಾರಾದರೂ ಸರಿಯೆ ಅವರ ತಲೆಯನ್ನು ಚೆಂಡಾಡುವೆನು. ಸೀತೆಯನ್ನು ರಾಮನ ಜೊತೆಗೆ ಸೇರಿಸುವೆನು. ಸುಗ್ರೀವದೇವನನ್ನು ಯಾರೆಂದು ತಿಳಿಯೆಯಾ ?”

ಆಯೆನುತ ಹನುಮಂತ ಬೊಬ್ಬೆಯ । ಬಾಯ ಬಿಱಿದನಿದೋಱಿದನು ತಾ
ರೇಯನುಬ್ಬಿಱಿದಬ್ಬರಿಸಿದನು ಹೊಯ್ದು ಭುಜಯುಗವ
ವಾಯುಸಖಸುತ ಮುಖ್ಯ ಸೇನಾ । ನಾಯಕರು ಹುರಿಕಟಿಸಿ ರಕ್ಕಸ
ರಾಯದುರ್ಗದ ಲಗ್ಗೆಗೊಡರಿಸಿದರು ಸರೋಷದಲಿ ೨೪

ಇನಿತು ಕೋಳಾಹಳವ ಕಂಡಜ । ತನುಜನಿದು ತಾ ಪಂಥವಲ್ಲೆಂ
ದಿನಜನುದ್ರೇಕವನು ನಯಮುಖದಿಂದ ಸಂತೈಸಿ
ಅನಿಮಿಷರ ವೈದ್ಯನ ಕುಮಾರನ । ಮನದ ಬಗೆಯಂತರವನಾತನ
ನೆನಹನಱಿಯಲುಪಾಯವಿದಕೇನೆಂದು ಬೆಸಗೊಂಡ ೨೫

ಆ ದಿವಿಜವೈದ್ಯನ ಕುಮಾರಕ । ನಾ ದಯಾಂಬುಧಿಗೆಂದ ನಾಲುಕು
ಭೇದದೌಷಧಿಯುಂಟು ಕೇಳುತ್ತರದಭಾಗದಲಿ
ಆ ದಿವಿಜಗಿರಿಯಿಂದ ಮುಂದಣ । ಹಾದಿಯಲಿ ಹರಿದಶ್ವನಾಮದ
ಮೇದಿನೀಧರದಮಲ ಚಂದ್ರದ್ರೋಣನಾಮಕದ ೨೬

ಆ ಗಿರಿಯ ಮಹದೌಷಧಿಗಳನು । ಬೇಗ ತಂದರೆ ರಾವಣನ ನೀ
ವಾಗಿ ಕೊಂದವರರಿನಿಶಾಚರಪಡೆಯ ತಿಂದವರು
ಈಗಲೀ ಲಂಕೆಯ ವಿಭೀಷಣ । ಗಾಗುಮಾಡಿಸಿದವರು ಮೇಲೇ
ನಾಗಿನಭ್ಯುದಯಪ್ರಪಂಚಕೆ ಕರ್ತರಹಿರೆಂದ ೨೭

ಎಂದು ಸುಗ್ರೀವ ಗರ್ಜಿಸಿದ. ೨೪. 'ಆ' ಎಂದು ದೊಡ್ಡ ಧ್ವನಿಯಿಂದ ಹನುಮಂತನು ಕೂಗಿದನು. ತಾರೆಯ ಮಗನು ಭುಜಗಳನ್ನಪ್ಪಳಿಸಿ ಗರ್ವದಿಂದ ಗರ್ಜಿಸಿದನು. ಅಗ್ನಿಯ ಮಗ ನೀಲನೇ ಮೊದಲಾದ ಮುಖ್ಯಸೇನಾನಾಯಕರು ಧೈರ್ಯಗೊಂಡು ರಾಕ್ಷಸರಾಜನ ದುರ್ಗದಮೇಲೆ ಕೋಪದಿಂದ ಧಾಳಿಮಾಡಲು ಸಿದ್ಧರಾದರು. ೨೫. ಕಪಿನಾಯಕರ ಈ ಕೋಲಾಹಲವನ್ನು ನೋಡಿ ಜಾಂಬವಂತನು, "ಇದು ಮಾರ್ಗವಲ್ಲ", ಎಂದು ಸುಗ್ರೀವನ ಉದ್ರೇಕವನ್ನು, ನಯವಾದ ಮಾತುಗಳಿಂದ ಶಾಂತಗೊಳಿಸಿದನು. ಬಳಿಕ ಧನ್ವಂತರಿಯ ಮಗ ಸುಷೇಣನ ಮನಸ್ಸಿನಲ್ಲೇನಿದೆ ಎಂಬುದನ್ನೂ ಅವನ ಆಲೋಚನೆಯನ್ನೂ ತಿಳಿದುಕೊಳ್ಳಬಯಸಿ, "ಈಗ ಇದಕ್ಕೇನು ಉಪಾಯ ?" ಎಂದು ಕೇಳಿದನು. ೨೬. ಆ ಧನ್ವಂತರಿಯ ಮಗನು ದಯಾಸಾಗರ ಜಾಂಬವಂತನನ್ನು ಕುರಿತು. "ಉತ್ತರದ ಭಾಗದಲ್ಲಿ ಮೇರುಪರ್ವತದಿಂದ ಮುಂದಿನ ಮಾರ್ಗದಲ್ಲಿ ಹರಿದಶ್ವವೆಂಬ ಪರ್ವತದ ಚಂದ್ರದ್ರೋಣಿ ಬೆಟ್ಟದಲ್ಲಿ ನಾಲ್ಕು ವಿಧದ ಔಷಧಿಯಿದೆ. ೨೭. ಆ ಬೆಟ್ಟದ ಶ್ರೇಷ್ಠ ಔಷಧಿಗಳನ್ನು ಬೇಗ ತಂದಪಕ್ಷದಲ್ಲಿ ರಾವಣನನ್ನು ನೀವಾಗಿ ಕೊಂದವರೂ, ಶತ್ರುರಾಕ್ಷಸಸೈನ್ಯವನ್ನು ಮುಗಿಸಿದವರೂ, ಲಂಕೆಯ ಒಡೆತನವನ್ನು ವಿಭೀಷಣನಿಗೆ ಕೊಡಿಸಿಕೊಟ್ಟವರೂ ಆಗುತ್ತೀರಿ. ಅಲ್ಲದೆ ಉತ್ತರೋತ್ತರ ಏಳಿಗೆಗೆ ಮೂಲಕಾರಣ

ಆಗಲಿದು ತಪ್ಪಲ್ಲ ನಮ್ಮನು । ರಾಗಕಿದು ಪಥವಹುದೆನುತ ಶತ
ಯಾಗವಜ್ರಜಯೋತ್ತರನ ಲಂಕಾಭಯಂಕರನ
ಸಾಗರೋಲ್ಲಂಘನನ ನೆನೆವು । ದ್ಯೋಗದಭಿಸಂಧಿಯಲಿ ದಿವದಿಂ
ದಾ ಗಗನಮಾರ್ಗದಲಿ ಮೈದೋಱಿದನು ವಿಹಗೇಂದ್ರ ೨೮

ಬಲದ ಗರಿ ಋಕ್ಸಾಮ ಮುಖಮಂ । ಡಲ ಯಜುರ್ವಾಮಾಂಗ ನಿರುಪಮ
ವಿಲಸದುಪನಿಷದಮಳಗಾತ್ರ ಪವಿತ್ರನಂಬರವ
ಬೆಳಗು ತಿಳಿದನು ಪೂರ್ಣಶಶಿಮಂ । ಡಲದ ಸೊಂಪಿನಲಮಮ ಹಾಲಾ
ಹಲ ಮಹೋಗ್ರವ್ಯಾಳಪಾಶವಿನಾಶ ರೋಷದಲಿ ೨೯

ಆ ಸುಪರ್ಣನ ಗರಿಯ ಗಾಳಿಗೆ । ಸೂಸಿದವು ಸಪ್ತಾಂಬುನಿಧಿ ಕೈ
ಲಾಸ ಮಂದರ ಮೇರು ವಿಂಧ್ಯಾದ್ರಿಗಳು ಮುಗ್ಗಿದವು
ವಾಸುಗಿಯು ತಕ್ಷಕನನಂತನ । ಮೈಸಿರಿಗಳುಡುಗಿದವು ಬಣಗು ಬಿ
ಲೇಶಯಂಗಳ ಕಾಣೆನಿದಿರಿನಲುರಗಮರ್ದನನ ೩೦

ಗಱಿಯ ಗಾಳಿಯ ಗವಲಿಗಸುಗಳ । ತೊಱೆದು ಸತ್ತವು ಕೆಲವು ನೆಲನನು
ಕೊಱೆದು ಹೊಕ್ಕವು ಕೆಲವು ಕೆಲವಡಸಿರ್ದವಬುಧಿಯಲಿ
ಮುಱಿಗಡೆದು ಕೆಲವೋಡಿದವು ಕೆಲ । ವಱಸಿದವು ಹುತ್ತಗಳ ದೃಷ್ಟಿಯ
ಹಱುಬಿನಲಿ ಸಿಕ್ಕಿದವು ಸೀಕರಿಯಾದವಗಲದಲಿ ೩೧

ರಾಗುತ್ತೀರಿ" ಎಂದ ಸುಷೇಣ. ೨೮. "ಆಗಲಿ, ಇದು ತಪ್ಪಲ್ಲ, ನಮ್ಮ ಪ್ರೀತಿಯನ್ನು ತೋರಿಸಲು ಇದು ಮಾರ್ಗ" ಎಂಬುದಾಗಿ ಯೋಚಿಸಿ ಇಂದ್ರನ ವಜ್ರಾಯುಧವನ್ನು ಗೆದ್ದು ಸಮುದ್ರವನ್ನು ದಾಟಿದ ಲಂಕಾಭಯಂಕರನನ್ನು ಸ್ಮರಿಸುವ ಉದ್ದೇಶದಿಂದ ಗರುಡನು ದೇವಲೋಕದಿಂದ ಹೊರಟು ಆಕಾಶಮಾರ್ಗದಲ್ಲಿ ಕಾಣಿಸಿಕೊಂಡನು. ೨೯. ಬಲಗಡೆಯ ರೆಕ್ಕೆ ಋಗ್ವೇದ, ಸಾಮವೇದ ಮುಖಮಂಡಲ, ಯಜುರ್ವೇದ ಎಡದರೆಕ್ಕೆ, ಶ್ರೇಷ್ಠ ಉಪನಿಷತ್ತುಗಳೇ ಶರೀರವಾದ ಗರುಡನು ಆಕಾಶವನ್ನು ಬೆಳಗುತ್ತ ಪೂರ್ಣಚಂದ್ರನ ಸೊಬಗಿನೊಡನೆ ಹಾಲಾಹಲವಿಷದ ಮಹಾಭಯಂಕರ ಸರ್ಪಾಸ್ತ್ರವನ್ನು ನಾಶಮಾಡುವ ಕ್ರೋಧದಿಂದ ಭೂಮಿಗೆ ಇಳಿದುಬಂದನು. ೩೦. ಆ ಸುಪರ್ಣನಾದ ಗರುಡನ ರೆಕ್ಕೆಯ ಗಾಳಿಗೆ ಸಪ್ತಸಮುದ್ರಗಳು ಹೊರಚೆಲ್ಲಿದವು ; ಕೈಲಾಸ, ಮಂದರ, ಮೇರು, ವಿಂಧ್ಯಪರ್ವತಗಳು ಕುಸಿದವು ; ವಾಸುಕಿ, ತಕ್ಷಕ ಮತ್ತು ಅನಂತ ಇವರುಗಳ ದೇಹದ ಕಾಂತಿ ಕುಗ್ಗಿತು. ಇನ್ನು ಸರ್ಪವಿನಾಶಕನ ಎದುರಿನಲ್ಲಿ ಕ್ಷುದ್ರ ಸರ್ಪಗಳು ಕಣ್ಣಿಗೆ ಬೀಳಲೇ ಇಲ್ಲ. ೩೧. ಗರುಡನ ರೆಕ್ಕೆಯ ಗಾಳಿಯ ವಾಸನೆಗೇ ಕೆಲವು ಹಾವುಗಳು ಪ್ರಾಣಗಳನ್ನು ಬಿಟ್ಟು ಸತ್ತವು ; ಕೆಲವು ನೆಲವನ್ನು ಕೊರೆದುಕೊಂಡು ಹೋಗಿ ಒಳಗೆ ಸೇರಿಕೊಂಡವು ; ಕೆಲವು ಸಮುದ್ರದ ಒಳಗೆ ಅಡಗಿಕೊಂಡವು ; ಕೆಲವು ಒಗ್ಗೊಡೆದು ಓಡಿಹೋದವು ; ಕೆಲವು ಹುತ್ತಗಳನ್ನು ಹುಡುಕಿಕೊಂಡು ಹೋದವು ; ಗರುಡನ

ತಾಯಿಗೋಸುಗ ಹಿಂದೆ ನಿರ್ಜರ । ರಾಯನನು ಗೆಲಿದಮೃತಕಲಶವ
ವಾಯುಪಥದಲಿ ತರಲು ತುಳುಕಿದ ಬಿಂದುಪಕ್ಷದಲಿ
ಸ್ಥಾಯಿಯಾಗಿರ್ದಾ ಸುಧಾಕಣ । ಕಾಯಿದವು ಕಪಿಬಲವ ರಘುಕುಲ
ರಾಯ ನಸುನಗುತೊಯ್ಯನರಳಿಚಿದನು ವಿಲೋಚನವ ೩೨

ನರಚರಿತ್ರದ ಸಕಲ ಸಚರಾ । ಚರದ ಚೈತನ್ಯಾತ್ಮ ಜಯ ವಿ
ಸ್ತರಣ ವಿಶ್ವವ್ಯಾಪ್ತ ಜಯ ಮಹದಾದಿ ಭೂತಾತ್ಮ
ನಿರುಪಮಿತ ಜಯಜಯ ಜಗತ್ರಯ । ಕರಣ ಕಾರಣಕರ್ತೃ ಜಯ ನಿ
ರ್ಮರಣ ಜಯಯೆನುತಿರ್ದುದಮರರು ನೊಸಲ ಕೈಗಳಲಿ ೩೩

ಆಯೆನುತ ಬೊಬ್ಬಿರಿದು ಕಪಿಸಮು । ದಾಯ ಸೌರಂಭಾತಿಶಯದ ವಿ
ಡಾಯಿಯಲಿ ನಲಿದಾಡುತುಬ್ಬಿದಬ್ಧಿ ಘೋಷದಲಿ
ರಾಯಕಪಿ ಸುಗ್ರೀವ ಜಾಂಬವ । ವಾಯುಸುತ ಪೌಲಸ್ತ್ಯ ಸಹ ಕಪಿ
ನಾಯಕರು ವೈಯಿಕ್ಕಿದರು ಮನುಕುಲಶಿರೋಮಣಿಗೆ ೩೪

ಕರೆದರಾರು ಸುಪರ್ಣನನು ಶಂ । ಕರ ಸರೋಜಭವಾದ್ಯರುಗಳುಪ
ಚರಣೆ ತಾನೇನುಂಟೆ ಕೇಳ್ಳೆ ಕುಶನೆ ಕೌಶಲವ
ಹರಿ ಕಣಾ ಸಾಕ್ಷಾತ ಸರ್ವೇ । ಶ್ವರ ಕಣಾ ಸುಜ್ಞಾನಮಯ ಭಾ
ಸುರತರ ಶ್ರೀಮೂರ್ತಿಯೆಂದಜಿ ರಾಘವೇಶ್ವರನ ೩೫

ದೃಷ್ಟಿಯ ಪ್ರವಾಹಕ್ಕೆ ಸಿಕ್ಕಿದವು ಅಷ್ಟಗಲದಲ್ಲೂ ಸುಟ್ಟುಹೋದವು. ೩೨. ಹಿಂದೆ ತನ್ನ ತಾಯಿಗೋಸ್ಕರ ದೇವರಾಜ ಇಂದ್ರನನ್ನು ಗೆದ್ದು ಅಮೃತಕಲಶವನ್ನು ಆಕಾಶ ಮಾರ್ಗದಲ್ಲಿ ತರುವಾಗ ಅದರಿಂದ ತುಳುಕಿದ ಅಮೃತದ ಬಿಂದುವು ರೆಕ್ಕೆಯಲ್ಲಿ ಇದುವರೆಗೆ ಸ್ಥಿರವಾಗಿ ಇದ್ದಿತು. ಆ ಅಮೃತಕಣಗಳು ಈಗ ಕಪಿಸೈನ್ಯವನ್ನು ಬದುಕಿಸಿದವು. ಶ್ರೀರಾಮನು ನಸುನಗುತ್ತ ಮೆಲ್ಲಗೆ ಕಣ್ಣುಗಳನ್ನು ಬಿಟ್ಟನು. ೩೩. "ಮಾನವ ಲೀಲಾವಿನೋದಿಯೇ, ಸಮಸ್ತ ಸ್ಥಾವರ ಜಂಗಮ (ಚಲಿಸದ ಮತ್ತು ಚಲಿಸುವ) ರೂಪವಾದ ಜಗತ್ತಿನ ಜೀವಿಗಳಿಗೆ ಆತ್ಮಸ್ವರೂಪಿಯೇ ನಿನಗೆ ಜಯವಾಗಲಿ. ವಿಶಾಲವಿಶ್ವವನ್ನು ಆವರಿಸಿರುವವನೇ ನಿನಗೆ ಜಯವಾಗಲಿ. ಸರ್ವಜೀವಿಗಳಿಗೂ ಮೂಲಾಧಾರನಾಗಿರುವವನೇ ಜಯ ಜಯ. ಹೋಲಿಕೆಗೆ ಒದಗದವನೂ ಮೂರು ಲೋಕಗಳಿಗೆ ಆಧಾರಸ್ವರೂಪನೂ ಕಾರಣನೂ ಸೃಷ್ಟಿಕರ್ತನೂ ಆದವನೇ ನಿನಗೆ ಜಯವಾಗಲಿ. ಸಾವಿಲ್ಲದವನೇ ಜಯ ಜಯ" ಎಂದು ದೇವತೆಗಳು ಹಣೆಯ ಮೇಲೆ ಕೈಯಿಟ್ಟುಕೊಂಡು ಸ್ತುತಿಸಿದರು. ೩೪. 'ಆ'ಯೆಂದು ಬೊಬ್ಬಿರಿಯುತ್ತ ಸಮಸ್ತ ಕಪಿಗಳು ಅತಿಶಯ ಸಡಗರದಿಂದ ಮನುವಂಶಶ್ರೇಷ್ಠನಿಗೆ ನಮಸ್ಕರಿಸಿದರು. ಉಕ್ಕುವ ಸಮುದ್ರದ ಘೋಷದಂತೆ ಸಂತೋಷದಿಂದ ಕೂಗುತ್ತ ವಾನರರರಸ ಸುಗ್ರೀವ, ಜಾಂಬವ, ಮಾರುತಿ ಮೊದಲಾದ ಕಪಿನಾಯಕರು ವಿಭೀಷಣನೊಡನೆ ರಾಮನಿಗೆ ನಮಸ್ಕರಿಸಿದರು. ೩೫. 'ಗರುಡನನ್ನು ಯಾರಾದರೂ ಕರೆದರೆ ? ಮಹೇಶ್ವರ, ಬ್ರಹ್ಮ ಯಾರಾದರೂ ಆದರಿಸಿ ಬರಲು ಹೇಳಿದರೇ ? ಕುಶನೇ, ಈ ಸೊಗಸನ್ನು ನೋಡು.

ದೃಗುನಿರೀಕ್ಷೆಯುಲಾ ಸುಪರ್ಣನ । ಮೊಗವನೀಕ್ಷಿಸಿ ಮುಗುಳುನಗೆಯುಲಿ
ನಗುತ ನಿನ್ನಿಂದಾದುದೆಮಗೆ ಪುನರ್ಭವಾಭ್ಯುದಯ
ಜಗದೊಳೆನಿತು ಮಹಾತ್ಮನೋ ಯೆನು । ತಗಣಿತದ ಹರುಷದಲಿ ವಿನತೆಯ
ಮಗನನುಪಚರಿಸಿದನು ಮಧುರವಚೋವಿಲಾಸದಲಿ ೩೬

ಪರನಪರ ಭವನಭವ ಘನ ಗೋ । ಚರನಗೋಚರ ಸಗುಣ ನಿರ್ಗುಣ
ಚರನಚರ ಸಂಸ್ಥೂಲ ಸೂಕ್ಷ್ಮದ್ವಯನಸಂಖ್ಯಾತ
ಕ್ಷರ ಮಹಾಕ್ಷರ ಮಿತನಮಿತ ನಿ । ರ್ಜರಲಲಾಮನೆ ನಿನ್ನ ಮಹದಂ
ತರವನಱಿವವನಾವನೆಂದು ಖಗೇಂದ್ರ ಕೈಮುಗಿದ ೩೭

ಅಱಿಯದವರೊಡನೈಸೆ ಮಾಯಾ । ಮಱಿಯ ಜವನಿಕೆ ಜೀಯ ನಾಚಿಸ
ದುಱುವ ಭೃತ್ಯನ ಬೀಳುಕೊಡು ಸಾಕೆನುತ ಕೈಮುಗಿಯೆ
ಅಱಿಯದವರಂದದಲಿ ಕೃಪೆ ಕ । ಣ್ದೆಱೆಯ ಮೊಗಸನ್ನೆಯಲಿ ನಿಗಮದ
ಗಱಿಯ ಗರುಡನ ಬೀಳುಕೊಟ್ಟನು ಪರಮಹರುಷದಲಿ ೩೮

ಈತನು ಶ್ರೀಹರಿ, ಸಾಕ್ಷಾತ್ ಸರ್ವೇಶ್ವರ ರಾಘವೇಶ್ವರನನ್ನು ಜ್ಞಾನನಿಧಿಯಾಗಿ ಪ್ರಕಾಶಿಸುವ ಶ್ರೀಮೂರ್ತಿ ಎಂಬುದಾಗಿ ತಿಳಿ! ಎಂಬುದಾಗಿ ವಾಲ್ಮೀಕಿ ಮಹರ್ಷಿಗಳು ಕೊಂಡಾಡಿದರು. ೩೬. ಕೃಪಾದೃಷ್ಟಿಯನ್ನು ಬೀರಿ ಗರುಡನ ಮುಖವನ್ನು ನೋಡಿ ಮುಗುಳುನಗುತ್ತ, "ನಿನ್ನಿಂದ ನಮಗೆ ಪುನಃ ಜನ್ಮಪಡೆದ ಏಳಿಗೆಯುಂಟಾಯಿತು, ಲೋಕದಲ್ಲಿ ನೀನೆಂಥ ಮಹಾತ್ಮನೋ!" ಎಂದು ಸಂತೋಷಾತಿಶಯದಿಂದ ಶ್ರೀರಾಮನು ಸಿಹಿಮಾತುಗಳನ್ನಾಡಿ ವಿನತೆಯ ಮಗನನ್ನು ಉಪಚರಿಸಿದನು. ೩೭. "ಅತ್ಯುಚ್ಚನಲ್ಲಿ ಉಚ್ಚ, ಹುಟ್ಟುವವನಾದರೂ ಹುಟ್ಟಿಲ್ಲದವನು, ಕಾಣಿಸಿಕೊಳ್ಳುವವನಾದರೂ ಅದೃಶ್ಯ, ಗುಣಯುತನಾದರೂ ನಿರ್ಗುಣ, ಚಲನೆಯುಳ್ಳವನಾದರೂ ಅಚಲ, ಸ್ಥೂಲನಾದರೂ ಸೂಕ್ಷ್ಮ, ಎರಡಿಲ್ಲದ ಏಕನಾದರೂ ಲೆಕ್ಕಕ್ಕೆ ಸಿಕ್ಕದವನು, ನಶ್ವರನಾದರೂ ಮಹಾಶಾಶ್ವತ, ಮಿತಿಗೆ ಒಳಪಟ್ಟವನಾದರೂ ಅಳತೆಗೆ ಸಿಕ್ಕದವನು—ಹೀಗೆ ಪರಸ್ಪರ ದ್ವಂದ್ವ (ಜೋಡಿ) ಗುಣಗಳನ್ನು ಹೊಂದಿದ ದೇವಶ್ರೇಷ್ಠನೇ ನಿನ್ನ ಮಹಾಸಾಮರ್ಥ್ಯವನ್ನು ಯಾರು ತಿಳಿಯಬಲ್ಲರು ?" ಎಂದು ಕೊಂಡಾಡುತ್ತ ಗರುಡನು ಕೈಮುಗಿದ. ೩೮. "ಮಾಯೆಯ ಮುಸುಕಿನ ತೆರೆ ತಿಳಿಯದವರೊಡನೆಯೇ ಹೊರತು ಬೇರೆ ಅಲ್ಲ. ಸ್ವಾಮಿ ನಾಚಿಸದೆ ನಿನ್ನ ನೆಚ್ಚಿನ ಸೇವಕನನ್ನು ಕಳುಹಿಸಿಕೊಡು, ಸಾಕು" ಎಂದು ಗರಡನು ಕೈಮುಗಿದು ವಿನಂತಿ ಮಾಡಿಕೊಂಡನು. ಶ್ರೀರಾಮನು ಏನೂ ತಿಳಿಯದವನಂತೆ ದಯೆತೋರಿ ಮುಖದಿಂದ

ನಗುತ ರಾಮನ ನರಚರಿತ್ರದ । ಮುಗುದತನಕೆ ನಮೋಯೆನುತ ಪದ
ಯುಗಳಕಾನತನಾಗಿ ಹಾಯ್ದನು ನಭಕೆ ವಿಹಗೇಂದ್ರ
ಯುಗದ ಸೀಮೆಯ ಶರಧಿಯುಬ್ಬಿನ । ಬಿಗುಹಿನವೊಲುಬ್ಬೆದ್ದು ಮಸಗಿತು
ವಿಗಡ ವಾನರವಾರ್ಧಿಕೋಳಾಹಳದ ರಭಸದಲಿ ೩೯

ಅದಕೊ ನಿನ್ನಯ ರಮಣನಮಳಾ । ಭ್ಯುದಯದುತ್ಸವ ನಿನದವಾಚೆಯು
ಲದಕೊ ಭರತಾನುಜನ ಭಾರಿಯ ಬಿಲ್ಲ ಬೊಬ್ಬಾಟ
ಕುದುಕುಳಿನ ಕಪಿಸೈನಿಕದ ಬಲು । ಗದನದಭಿನವ ವೀರರಸ ವಿ
ಕ್ಕೊದವುತದೆ ನೋಡೆಂದು ಸೀತೆಗೆ ತೋಱಿದಳು ಸರಮೆ ೪೦

ಅರಸಿ ಕೇಳೌ ಹೇಳಿನೇ ನಿ । ನ್ನರರ ಹದುಳಿಗನೆಂದು ಪುಷ್ಪಕ
ಧರಿಸದಿದು ವೈಧವ್ಯಲಕ್ಷಣದಂಗನಾಜನವ
ನಿರುತವಿದು ಮೇಲಬುಧಿ ಹಿಮಕರ । ಮರುತ ತಾರಾಗ್ರಹದ ಹರುಷತೆ
ಹರೆದುದಿಲ್ಲದಱಿಂದ ಕಾಣಿಸಿತರಸನಭ್ಯುದಯ ೪೧

ಎಂದು ತೋಱಿಸಿ ತಿರುಗಿಸಿದಳಾ । ನಂದ ಮಿಗೆ ಪುಷ್ಪಕವನಿದು ಖೋ
ಯೆಂದು ಹತ್ತಿತು ಹುರಿಕಟಿಸಿ ಹರಿಸುತನ ನೇಮದಲಿ
ಸಂದಣಿಸಿ ಗಿರಿಮರನ ಗರ್ಜರ । ದಿಂದ ಗಗನವಿಲಂಬಿತದ ಬಾ
ಲೇಂದುಧರ ಗಿರಿಧರನ ದುರ್ಗವನೀ ಕಪಿವ್ರಾತ ೪೨

ಸಂಜ್ಞೆ ಮಾಡಿ ಅತ್ಯಂತ ಹರ್ಷದಿಂದ ಗರುಡನನ್ನು ಬೀಳ್ಕೊಟ್ಟನು. ೩೯. ನಗುತ್ತ 'ಮಾನವನಡವಳಿಕೆಯ ರಾಮನ ಸರಳತನಕ್ಕೆ ನಮಸ್ಕಾರ!' ಎನ್ನುತ್ತ ಶ್ರೀರಾಮನ ಪಾದಗಳಿಗೆ ವಂದಿಸಿ ಗರುಡನು ಗಗನಕ್ಕೆ ಹಾರಿದನು. ಯುಗದ ಅಂತ್ಯದಲ್ಲಿ ಸಮುದ್ರವು ಭೋರ್ಗರೆದು ಉಕ್ಕುವಂತೆ ಕಪಿಸೈನ್ಯಸಾಗರವು ಆನಂದದಿಂದ ಉಬ್ಬಿ ಕೋಲಾಹಲ ಮಾಡಿತು. ೪೦. "ಅಗೋ, ನಿನ್ನ ಪತಿಯ ಏಳಿಗೆಯ ಉತ್ಸಾಹದ ಧ್ವನಿ. ಆ ಕಡೆಯಲ್ಲಿ ಲಕ್ಷ್ಮಣನ ಬಿಲ್ಲಿನ ಭಾರಿ ಟಂಕಾರಶಬ್ದ. ಆವೇಶ ತುಂಬಿದ ಕಪಿಸೈನ್ಯದ ಭಾರಿ ಕಾಳಗದ ಹೊಸ ವೀರರಸವು ಉಕ್ಕಿಹರಿಯುತ್ತಿದೆ, ನೋಡು" ಎಂದು ಸರಮೆ ಸೀತೆಗೆ ತೋರಿಸಿದಳು. ೪೧. "ರಾಣಿ, ಕೇಳು. ನಿನ್ನ ಪತಿ ಕ್ಷೇಮವೆಂದು ನಾನು ಹೇಳಲಿಲ್ಲವೇ. ವಿಧವೆಯ ಲಕ್ಷಣ ಹೊಂದಿದ ಸ್ತ್ರೀಯರನ್ನು ಈ ಪುಷ್ಪಕವಿಮಾನ ಕೂರಿಸಿಕೊಳ್ಳುವುದಿಲ್ಲ. ಇದು ಸತ್ಯ. ಇದರ ಮೇಲೆ ಸಾಗರ, ಚಂದ್ರ, ವಾಯು, ನಕ್ಷತ್ರ, ಗ್ರಹಗಳ ಹರ್ಷವು ನಷ್ಟವಾಗಿಲ್ಲ. ಅದರಿಂದಲೇ ರಾಮನ ಏಳಿಗೆಯು ತಿಳಿಯುತ್ತದೆ." ೪೨. ಎಂಬುದಾಗಿ ಸೀತೆಗೆ ತೋರಿಸಿ ಅತ್ಯಾನಂದದಿಂದ ಪುಷ್ಪಕವನ್ನು ಲಂಕಾನಗರದ ಕಡೆಗೆ ತಿರುಗಿಸಿದಳು. ಸುಗ್ರೀವನ ಅಪ್ಪಣೆಯ ಮೇರೆ ಖೋ ಎಂದು ಕೂಗುತ್ತ ಗುಂಪಾಗಿ ಬೆಟ್ಟ ಮರಗಳನ್ನು ಗರ್ಜರಶಬ್ದ ಮಾಡುತ್ತ ಕಪಿಸೈನ್ಯವು ಆಕಾಶದೆತ್ತರವಿದ್ದ ಚಂದ್ರಶೇಖರನ ಬೆಟ್ಟವನ್ನು ಧರಿಸಿದ ದುರ್ಗವನ್ನು ಹುರುಪಿನಿಂದ ಏರಿತು.

# ಹದಿನೇಳನೆಯ ಸಂಧಿ

ಸೂಚನೆ॥ ಅಮರರಿಪು ಧೂಮ್ರಾಕ್ಷ ರಣನಿ । ರ್ಗಮಬಲಾನ್ವಿತ ವಜ್ರದಂಷ್ಟ್ರರ
ಸಮರದಲಿ ಗೆಲಿದರು ಸಮೀರಜ ವಾಲಿನಂದನರು

ಕೇಳಿರೈ ಕುಶಲವರು ಕಪಿಗಳ । ಕಾಳಗದ ಕಡುಹಂಜಿಸಿತು ದು
ರ್ವ್ಯಾಳಿಯಲಿ ದುರ್ಜನಶಿರೋಮಂಡನನ ಪಟ್ಟಣವ
ಕೇಳಿ ರಾವಣನಂಜಿ ಚಿಂತೆಯ । ತಾಳಿ ರವಿಯಸ್ತಮಯದಲಿ ನಡೆತಂ
ದೋಲಗವನಿತ್ತನು ಸಮಸ್ತ ನಿಶಾಟಗಣ ಸಹಿತ ೧

ಕನಸ ಕಂಡನು ಸಮರತಾಮಸ । ಜನಿತ ಜಾಡ್ಯದಲಿಂದ್ರಜಿತು ರಾ
ಮನನಃ ನಾಗಾಸ್ತ್ರದಲಿ ಕೆಡಹಿದೆನೆಂದು ಸಭೆಯೊಳಗೆ
ತೊನೆದುಃಕೊಂಡನು ತನ್ನ ಬಿರುದಿನ । ಬಿನುಗುನುಡಿಗಳ ಬಹಳ ಗರುವದ
ಘನತೆಯಲಿ ತಾವಾರು ರಣವಾರೆಂದನಸುರೇಂದ್ರ ೨

ಬರಲಿ ಕಮಲಜದತ್ತರಥ ಶಂ । ಕರವರಾರ್ಚಿತ ಚಾಪಶರ ಹಿಮ
ಕಿರಣಹಾಸಾದ್ಯಖಿಳ ಶಸ್ತ್ರಗಳೆಂದು ದಶಕಂಠ
ಧುರಕೆ ನಿಲುವುದ್ಯೋಗಮುಖದಲಿ । ನೆರಹುತಿರ್ದನು ಬಲವನಿತ್ತಲು
ಗಿರಿತರುವ್ರಜಹಸ್ತರುಬ್ಬಟೆ ಮಿಗಿಲಿತಾಜಿಯಲಿ ೩

ಸೂಚನೆ॥ ಅಸುರ ಧೂಮ್ರಾಕ್ಷ ಮತ್ತು ಯುದ್ಧದಲ್ಲಿ ಮುನ್ನಡೆಯುವ ವೀರ ವಜ್ರದಂಷ್ಟ್ರ–ಇವರನ್ನು ಹನುಮಂತ ಮತ್ತು ಅಂಗದರು ಯುದ್ಧದಲ್ಲಿ ಗೆದ್ದರು. ೧. ಕುಶಲವರೇ, ಕೇಳಿರಯ್ಯ. ಕಪಿಗಳ ಕಾಳಗದ ತೀವ್ರತೆಯು ಅತಿ ಶೀಘ್ರವಾಗಿ ದುಷ್ಟರ ಮುಖಂಡ ರಾವಣನ ಪಟ್ಟಣವನ್ನು ಹೆದರಿಸಿತು. ಇದನ್ನು ಕೇಳಿ ರಾವಣನು ಅಂಜಿಕೆಯಿಂದ ಚಿಂತೆಗೊಂಡು ಸೂರ್ಯನು ಮುಳುಗಿದ ಮೇಲೆ ಸಮಸ್ತ ರಾಕ್ಷಸರ ಸಭೆಯನ್ನು ನಡೆಸಿದನು ಎಂಬುದಾಗಿ ವಾಲ್ಮೀಕಿಮಹರ್ಷಿಗಳು ಕಥೆಯನ್ನು ಮುಂದುವರಿಸಿದರು. ೨. ಯುದ್ಧದ ಅಜ್ಞಾನದಿಂದುದಿಸಿದ ಮಂದಬುದ್ಧಿಯಿಂದ ಇಂದ್ರಜಿತು ರಾಮನನ್ನು ಸರ್ಪಾಸ್ತ್ರದಿಂದ ಬೀಳಿಸಿಬಿಟ್ಟೆ ಎಂಬ ಕನಸನ್ನು ಕಂಡನು. ಬಹಳ ಗರ್ವಪಟ್ಟುಕೊಂಡು ಸಭೆಯಲ್ಲಿ ತನ್ನ ಅಲ್ಪವಾದ ಬಿರುದುಗಳನ್ನು ಹೊಗಳಿಕೊಂಡನು. "ನಾವು ಯಾರು, ಯುದ್ಧವಾವುದು ?" ಎಂದ ರಾವಣ. ೩. "ಬ್ರಹ್ಮನು ಕೊಟ್ಟ ರಥವು ಬರಲಿ, ಶಿವಪೂಜಿತ ಬಿಲ್ಲು ಬಾಣಗಳು ಮತ್ತು ಚಂದ್ರಹಾಸ ಖಡ್ಗವೇ ಮೊದಲಾದ ಆಯುಧಗಳು ಬರಲಿ" ಎಂದು ದಶಕಂಠನು ಅಪ್ಪಣೆಮಾಡಿ ಯುದ್ಧಕ್ಕೆ ಹೊರಡುವ ಪ್ರಯತ್ನದಲ್ಲಿ ಸೈನ್ಯವನ್ನು ಕೂಡಿಸುತ್ತಿದ್ದನು. ಇತ್ತ ಬೆಟ್ಟ ಮತ್ತು

ಬೀಳುತಿರ್ದವು ಗಿರಿಗಳಟ್ಟಳೆ । ಯಾಳುವೇರಿಯ ಮೇಲೆ ತೆನೆಗಳ
ಸಾಲ ಸರಿಸದ ಸಬಳ ನೆಗಹುತ್ತಿರ್ದವರಿಬಲವ
ಹೂಳಿದಬುಧಿಯ ಭಟರ ಸಮರಾ । ಭೀಳ ಖಳರುಬ್ಬಟೆಯ ಧಾಳಾ
ಧೂಳಿ ಮಸಗಿತು ಶಸ್ತ್ರಶೈಲಾವಳಿಯ ಸಮರದಲಿ ೪

ಏಱುವುದು ಕಪಿಸೇನೆ ಸೇನೆಯ । ಜಾಱುಗೆಡಹುವುದಸುರಬಲ ರಣ
ದೇಟುಗಳ ರೌಕುಳದ ರಕ್ತದ ರಾಶಿ ಜಲನಿಧಿಯ
ಮೀಱಿದುದು ಜಾಱಿದುದು ಬಲುಗೊಲೆ । ಗಾಱರರಿಭಟರುಬ್ಬಟೆಯ ಕೈ
ಸೂಱೆಯಾದುದು ನಗರದಲಿ ರಾಕ್ಷಸವಧೂಜನದ ೫

ಕೆಡಹಿದರು ಕೋಟೆಗಳ ತೆನೆಗಳ । ನೊಡೆಬಡಿದರಟ್ಟಳೆಗಳನು ಕಿ
ತ್ತಿಡುಕಿದರು ಕೆಡಿಸಿದರು ಕೈಸೂತ್ರದ ಶತಘ್ನಿಗಳ
ಪಡಿಮುಖದ ರಕ್ಕಸರ ರಕುತದ । ಮಡುವಿನೊಳಗದ್ದಿದರು ಗಾವಳಿ
ಗುಡಿಯಿಱಿದು ಗುಮ್ಮಿದುದು ಹುಯ್ಯಲು ರಾಕ್ಷಸೇಶ್ವರನ ೬

ಕೋಟೆ ಹೋದುದು ಜೀಯ ಜವನವ । ರಾಟವಾದುದು ನಮ್ಮ ಬಲದಲಿ
ಬೇಟವಿನ್ನಾರೊಡನೆ ಬರುತಿದೆ ಮೃತ್ಯು ಬಲುಕರಿಸಿ
ನಾಟಲುತ್ತರ ಬೇಗೆನಲು ಕಿಡಿ । ನಾಟಿದವು ಕಂಗಳಲಿ ಕಾಲಕ
ರೋಟಿಮಾಲಾಧರನವೊಲು ಮುಳಿದೆದ್ದನಸುರೇಂದ್ರ ೭

ಮರಗಳನ್ನು ಹಿಡಿದ ವಾನರರು ಕಾಳಗಕ್ಕೆ ಮುಂಚಿದರು. ೪. ಕಪಿಗಳು ಎಸೆದ ಬೆಟ್ಟಗಳು ಕೋಟೆಯ ಅಟ್ಟಳೆ ಮತ್ತು ಅಳ್ವೇರಿಗಳ ಮೇಲೆ ಬೀಳುತ್ತಿದ್ದವು. ಕೋಟೆಯ ತೆನೆಯ ಸಾಲುಗಳ ಮೇಲೆ ಈಟಿಗಳು ಶತ್ರುಗಳನ್ನು ಮೇಲಕ್ಕೆ ಎತ್ತುತ್ತಿದ್ದವು. ಭಯಂಕರಕದನದ ರಾಕ್ಷಸರು ವಾನರಯೋಧರ ಹೆಣಗಳಿಂದ ಸಮುದ್ರವನ್ನೆ ಮುಚ್ಚಿ ಉಗ್ರ ಧಾಳಿಯೆಸಗಿದರು. ಹೀಗೆ ವಾನರ ಹಾಗೂ ರಾಕ್ಷಸವೀರರ ನಡುವೆ ಬೆಟ್ಟಗಳ ಮತ್ತು ಶಸ್ತ್ರಗಳ ಯುದ್ಧ ರಭಸದಿಂದ ನಡೆಯಿತು. ೫. ಕಪಿಸೈನ್ಯವು ಕೋಟೆಯನ್ನು ಏರುವುದು ; ರಾಕ್ಷಸಸೈನ್ಯವು ಅವರನ್ನು ಹಿಂದಕ್ಕೆ ಬೀಳಿಸುವುದು. ಯುದ್ಧದ ಗಾಯಗಳಿಂದ ಸುರಿದ ಅಧಿಕ ರಕ್ತದ ಪ್ರವಾಹವು ಸಮುದ್ರವನ್ನು ಮೀರಿಸಿತು. ಭಾರಿ ಕೊಲೆಗಾರರು ರಕ್ತದ ಮಡುವಿನಲ್ಲಿ ಜಾರಿದರು. ಲಂಕಾನಗರದಲ್ಲಿ ವೀರಯೋಧರಿಂದ ರಾಕ್ಷಸಸ್ತ್ರೀಯರು ಸುಲಿಗೆಗೊಳಗಾದರು. ೬. ವಾನರಯೋಧರು ಕೋಟೆಗಳನ್ನು ಕೆಡವಿದರು. ಕೋಟೆಯ ತೆನೆಗಳನ್ನು ಬಡಿದು ಒಡೆದುಹಾಕಿದರು, ಅಟ್ಟಳೆಗಳನ್ನು ಕಿತ್ತು ಬೀಸಿ ಎಸೆದರು, ಕೈಸೂತ್ರದ ಫಿರಂಗಿಗಳನ್ನು ಕೆಡಿಸಿದರು, ಎದುರಿಗೆ ಬಂದ ರಾಕ್ಷಸರನ್ನು ಹಿಡಿದು ರಕ್ತದ ಮಡುವಿನಲ್ಲಿ ಅದ್ದಿದರು. ರಾಕ್ಷಸೇಶ್ವರನನ್ನು ಕುರಿತು ಮೊರೆಯಿಡುವ ರಾಕ್ಷಸಯೋಧರ ಗದ್ದಲವು ಮಿತಿಮೀರಿ ಹಬ್ಬಿತು. ೭. "ಕೋಟೆ ಹೋಯಿತು ಪ್ರಭು. ನಮ್ಮ ಸೈನ್ಯದಲ್ಲಿ ಯಮನ ದೂತರ ಆಟ ಹೆಚ್ಚಾಯಿತು. ಇನ್ನು ಯಾರೊಡನೆ ಪ್ರೀತಿ ? ಮೃತ್ಯು ದೊಡ್ಡದಾಗಿ ಬರುತ್ತಿದೆ. ಉತ್ತರವು ಬೇಗ ಬರಲಿ" ಎಂದು ರಾಕ್ಷಸದೂತರು ರಾವಣನಿಗೆ ಹೇಳಲು ರಾವಣನ

ಎದ್ದ ರಕ್ಕಸರಾಯನಿದಿರಿನ । ಲೆದ್ದು ಕಲಿ ಧೂಮ್ರಾಕ್ಷರಾಕ್ಷಸ
ನುದ್ದುರುಟುಬಲ ವಜ್ರದಂಷ್ಟ್ರರು ನುಡಿದರಿಂತೆಂದು
ಮದ್ದದೇಕೆಲೆ ಜೀಯ ಹಾವಿಗೆ । ಹದ್ದಿರಲು ನಿನ್ನರಿಭಟರ ನಿಡು
ನಿದ್ರೆಗೈಸದಡಸುರರಲ್ಲೆಂದೊಲೆದರುಬ್ಬಣವ ೮

ಹಾವ ಹರಿಕಟಕದಲಿ ಹರಹಿದ । ಹಾವಡಿಗರೇ ನಾವು ನಮ್ಮಭಿ
ಭಾವನೆಯ ಬಹಳಿತ ವಿಚಿತ್ರವ ನೋಡು ನೀನೆನುತ
ರಾವಣನನುಬ್ಬಿಸಿದರಾಹವ । ಜೀವಮಾರಿಗಳಾ ನಿಶಾಟ ಮ
ಹಾವಿಭುವ ಬೀಳ್ಕೊಂಡರಮರಾಳಿಗಳು ಕಳವಳಿಸೆ ೯

ಕಲಕುವೆವು ಕಪಿವಾರುಧಿಯ ಕೈ । ದೊಳಸಿಗೊದಗಿದ ರವಿಸುತಾದಿಗ
ಳಿಲುವ ಸುಗ್ಗೊತ್ತುವೆವು ತಗ್ಗೊತ್ತುವೆವು ನಿನ್ನವರ
ಮಲೆತರಾದಡೆ ರಾಮಲಕ್ಷ್ಮಣ । ರಳವ ಮುರಿವೆವು ಜೀಯ ಮಾತಿದು
ಫಲಿಸದಿರ್ದಡೆ ಪತಿಕರಿಸಬೇಡೆಂದರಸುರಂಗೆ ೧೦

ಖಳ ಬಳಿಕಲವರಿಬ್ಬರಿಗೆ ಬ । ಟ್ಟಲಲಿ ವೀಳೆಯವಿತ್ತು ಬೀಳ್ಕೊಡೆ
ಕಲಹಕನುವಾಗಿರ್ದ ಚಾತುರ್ಬಲದ ಗಡಣದಲಿ
ಇಳಿದರಂದಾ ದುರ್ಗವನು ದಿಗು । ವಳಯ ಬೆಸಲಾದಂತೆ ಬೊಮ್ಮನ
ನಿಳಯ ನೀರಲಿ ನೆರೆದ ರವದವೊಲಾಯ್ತು ನಿರ್ಘೋಷ ೧೧

ಕಣ್ಣುಗಳಲ್ಲಿ ಕಿಡಿಗಳೆದ್ದವು. ತಲೆಬುರುಡೆಯ ಮಾಲೆಯನ್ನು ಧರಿಸಿದ ರುದ್ರನಂತೆ ಕೋಪದಿಂದ ರಾವಣನು ಎದ್ದನು. ೮. ರಾಕ್ಷಸೇಶ್ವರನು ಮೇಲೆದ್ದುದನ್ನು ನೋಡಿ ಕಲಿಧೂಮ್ರಾಕ್ಷ ಮತ್ತು ಒರಟುಬಲದ ವಜ್ರದಂಷ್ಟ್ರರು ರಾವಣನ ಎದುರಿಗೆ ಬಂದು, "ಸ್ವಾಮಿ, ಹಾವನ್ನು ಮುಗಿಸಲು ಹದ್ದು ಇರುವಾಗ ಬೇರೆ ಮದ್ದೇಕೆ. ನಿನ್ನ ಶತ್ರುಗಳಿಗೆ ದೀರ್ಘನಿದ್ರೆ ಬರಿಸದಿದ್ದರೆ ನಾವು ರಾಕ್ಷಸರಲ್ಲ" ಎಂದು ಹೇಳಿ ಉಬ್ಬಣವನ್ನು ತೂಗಿದರು ೯. "ಹಾವನ್ನು ಕೋತಿಗಳ ಸೈನ್ಯದ ಮೇಲೆ ಹರಡಿದ ಹಾವಾಡಿಗರೇ ನಾವು? ನಾವು ಶತ್ರುಗಳನ್ನು ಸೋಲಿಸುವ ಭಾರಿ ಆಶ್ಚರ್ಯವನ್ನು ನೀನು ನೋಡು" ಎಂದು ಯುದ್ಧದಲ್ಲಿ ಜೀವವನ್ನು ಮಾರಿಕೊಳ್ಳುವ ಆ ರಾಕ್ಷಸರು ರಾವಣನನ್ನು ಉಬ್ಬಿಸಿದರು. ಅನಂತರ ದೇವತೆಗಳು ಕಳವಳಗೊಳ್ಳುತ್ತಿರಲು ಅವರು ರಾಕ್ಷಸರಾಜನನ್ನು ಬೀಳ್ಕೊಂಡರು. ೧೦. "ಕಪಿಸೈನ್ಯಸಾಗರವನ್ನು ಕಲಕುವೆವು. ಕೈಕಾಳಗಕ್ಕೆ ಬರುವ ಸುಗ್ರೀವನೇ ಮೊದಲಾದವರ ಮೂಳೆಗಳನ್ನು ಪುಡಿಪುಡಿಮಾಡುವೆವು. ನಿನ್ನ ಶತ್ರುಗಳನ್ನು ಅಮುಕಿ ಹಾಕುವೆವು. ಗರ್ವಿಸಿದರೆ ರಾಮಲಕ್ಷ್ಮಣರ ಪರಾಕ್ರಮವನ್ನು ಮುರಿಯುವೆವು. ಸ್ವಾಮಿ, ನಮ್ಮ ಈ ಮಾತು ನಿಜವಾಗದಿದ್ದರೆ ನಮ್ಮನ್ನು ಅಂಗೀಕರಿಸಬೇಡ" ಎಂದು ರಾವಣನಿಗೆ ಹೇಳಿದರು. ೧೧. ಅನಂತರ ರಾವಣನು ಆ ಧೂಮ್ರಾಕ್ಷ ವಜ್ರದಂಷ್ಟ್ರರಿಗೆ ಬಟ್ಟಲಿನಲ್ಲಿ ವೀಳೆಯವನ್ನು ಕೊಟ್ಟು ಕಳುಹಿಸಿದನು. ಯುದ್ಧಕ್ಕೆ ಸಿದ್ಧವಾಗಿದ್ದ ಚತುರಂಗ ಸೈನ್ಯದೊಡನೆ ದಿಗ್ವಲಯಗಳು ಹೆತ್ತುವೋ ಎನ್ನುವಂತೆ ಅವರು ಕೋಟೆಯಿಂದ ಕೆಳಕ್ಕೆ ಇಳಿದುಬಂದರು. ಬ್ರಹ್ಮಲೋಕ ನೀರಲ್ಲಿ ಮುಳುಗಿದಾಗ ಆಗುವಂತೆ ಆ ರಾಕ್ಷಸಸೈನ್ಯ

ಗಜವೊ ಕಲ್ಪಸ್ಥಾಯಿಯುಹ ದಿ । ಗ್ಗಜವೊ ಹಯವೊ ಹರಿಹಯನ ವಾ
ರಿಜಕರದ್ವಯದುರು ತುರಂಗಮವೋ ಭಟಾವಳಿಯೊ
ತ್ರಿಜಗದಳಿಪನ ಯಮನ ಸುಭಟ । ವ್ರಜವೊ ಹೊಗಳುವೆನೇನ ರುಂಹರಿ
ರುಜೆಗೆ ಸರಿದಳು ಧರಿಸಲಾರದೆ ವೈರಿವಾಹಿನಿಯ ೧೨

ಒದಱಿದವು ರಣವಾದ್ಯಚಯವ । ಳ್ಕಿದೆಗೊಳಲ್ಬ್ರಹ್ಮಾಂಡವೀಶನ
ಹೃದಯ ಹಾತಕವಾಱಿ ಹಮ್ಮೈದವೋಗೆ ಕಮಲಭವ
ಕದಡೆ ಸಪ್ತಸಮುದ್ರ ಶಿರವನು । ಬಿದಿರೆ ಬರ್ಹಿರ್ಮುಖ ಮಹೀಧರ
ವದುರೆ ಜಗವುತ್ತಾನಪಾದಜಲೋಕ ಪರಿಯಂತ ೧೩

ತೆಗೆದುನಿಂದುದು ಸೇನೆ ದುರ್ಗದ । ತಗಹ ತೌಕಲಮಾಡಿ ತಡೆದರು
ನಗಮಹೀರುಹ ಹಸ್ತರುಬ್ಬಿಱಿದರಿಯ ಸೈನಿಕವ
ಜಗಳ ಗಂಟಿಕ್ಕಿದುದು ತಲೆಯೊ । ತ್ತುಗಳ ಶರನಿಧಿಯಂತೆ ತುಂಬಿತು
ಗಗನ ನಿಮಿಷದಲಸ್ತ್ರಶಸ್ತ್ರಾಚಲ ಮಹೀಜದಲಿ ೧೪

ಲವನೆ ಕೇಳೈ ಮಾಘಶುದ್ಧದ । ನವಮಿಯಲಿ ನಾಗಾಸ್ತ್ರದಲಿ ನಿ
ಮ್ಮವರು ಬಿಗಿವಡೆದಿರ್ದರಾ ದಿನದಿರುಳಿನಂತ್ಯದಲಿ
ದಿವದ ಮುಖದಲಿ ದಶಮಿಯಲಿ ಬಲು । ಬವರ ತೊಡಗಿತು ಜಾವವೆರಡಱ
ಹವಣಿನಲಿ ಹರಿದಶ್ವತನುಜನೊಳಾಯ್ತು ಬಲುಸಮರ ೧೫

ಗದ್ದಲಮಾಡಿತು. ೧೨. ಆನೆಯೋ, ಯುಗಾಂತ್ಯದವರೆಗೆ ಸ್ಥಿರವಾಗಿರುವ ದಿಗ್ಗಜವೋ ! ಕುದುರೆಯೋ, ಇಂದ್ರನು ಕೈಗಳಿಂದ ಲಗಾಮು ಹಿಡಿದ ದೇವಲೋಕದ ಕುದುರೆ ಉಚ್ಚೈಶ್ರವಸ್ಸೋ ! ಸೈನಿಕರೋ, ಮೂರುಲೋಕಗಳನ್ನು ನಾಶಪಡಿಸುವ ಯಮನ ದೂತರೋ ! ಏನೆಂದು ವರ್ಣಿಸಲಿ ! ವೈರಿಸೈನ್ಯವನ್ನು ಹೊರಲಾರದೆ ಭೂಮಿಯು ಬೇನೆಗೊಳಗಾದಳು. ೧೩. ರಣವಾದ್ಯಗಳು ಭೋರ್ಗರೆಯಲು ಬ್ರಹ್ಮಾಂಡದ ಎದೆ ನಡುಗಿತು: ಈಶ್ವರನ ಹೃದಯವು ಬಡಿದುಕೊಂಡಿತು; ಬ್ರಹ್ಮನು ಮೂರ್ಛೆಹೋದನು ; ಏಳು ಸಮುದ್ರಗಳೂ ಕದಡಿದವು ; ದೇವತೆಗಳು ತಲೆಗಳನ್ನು ಅಲ್ಲಾಡಿಸಿದರು; ಪರ್ವತಗಳೂ ಜಗತ್ತೂ ಧ್ರುವಲೋಕದವರೆಗೆ ಅದುರಿದವು. ೧೪. ರಾಕ್ಷಸಸೈನ್ಯವು ಹಿಂದೆಗೆದು ನಿಂತಿತು. ವಾನರಸೈನಿಕರು ದುರ್ಗದ ಅಡ್ಡಿಯನ್ನು ನಾಶಪಡಿಸಿ ಶತ್ರುಸೈನಿಕರನ್ನು ಕೈಯಲ್ಲಿನ ಬೆಟ್ಟ ಮರಗಳಿಂದ ಹೊಡೆದು ಬೊಬ್ಬೆ ಹಾಕುತ್ತ ತಡೆದು ನಿಲ್ಲಿಸಿದರು. ಒತ್ತಾಗಿ ಗುಂಪಾದ ತಲೆಗಳಸಾಗರವೋ ಎನ್ನುವಂತೆ ಎರಡೂ ಸೈನ್ಯಗಳ ನಡುವೆ ಯುದ್ಧ ಮೂಡಿತು, ಅಸ್ತ್ರಶಸ್ತ್ರಗಳ ಮತ್ತು ಬೆಟ್ಟ ಮರಗಳಿಂದ ಒಂದು ನಿಮಿಷದಲ್ಲಿ ಆಕಾಶ ತುಂಬಿಹೋಯಿತು. ೧೫. ಲವನೆ ಕೇಳು, ಮಾಘಶುದ್ಧ ನವಮಿಯದಿವಸ ರಾತ್ರಿಯ ಅಂತ್ಯದ ಸಮಯದಲ್ಲಿ ವಾನರರು ಸರ್ಪಾಸ್ತ್ರದ ಬಂಧನಕ್ಕೊಳಗಾದರು. ಬೆಳಗಾಗುತ್ತಿದ್ದಂತೆ ದಶಮಿಯ ದಿವಸ ಭಾರಿ ಯುದ್ಧ ಪ್ರಾರಂಭವಾಯಿತು. ಎರಡು ಜಾವದಷ್ಟು ಕಾಲ ಸೂರ್ಯನ ಮಗ ಸುಗ್ರೀವ

ಹೆಣದ ಬೆಟ್ಟದ ಮೇಲೆ ಬೆಟ್ಟಗ । ಳಣೆದವಂಬರದುದಿಯ ಬಹಳಾ
ರುಣಜಲಾಂಬುಧಿ ಬೆರಸಿದುದು ಲವಣಾಂಬುರಾಶಿಯನು
ಎಣಿಕೆಯಿಲ್ಲದೆ ತುಂಬಿದವು ಪ । ಟ್ಟಣ ಪುರಂದರ ಪದ್ಮಜಾದ್ಯರ
ಗಣಿಕೆಯರನಡಹಾಯ್ದುರಮರರ ರಾಜಧಾನಿಯಲಿ ೧೬

ಪರಿಘಹತಿಯಲಿ ಪರಶುಘಾತದ । ಉರು ಗದಾದಂಡಪ್ರಹಾರದ
ಉರುಳುತಿರ್ದುದು ಕಪಿಬಲೌಘ ನಗೌಘ ನಿಯತದಲಿ
ತರುವಿತಾನವಿಘಾತಿಯಲಿ ಹೊಡೆ । ಮರಳುತಿರ್ದುದು ರಕ್ಕಸರು ನೆಲ
ನರಳುತಿರ್ದುದು ಹೊಱಲು ನೆಱೆಯದೆ ಹೆಣನ ಹಸರಗಳ ೧೭

ಆತುನಿಂದನು ಕಪಿಬಲಕೆ ಬಳಿ । ಕಾ ತಮಿಸ್ರಾಚರ ವನೇಚರ
ದೂತ ಧೂಳೀಪಟಲಪಟು ಧೂಮ್ರಾಕ್ಷ ಗರ್ಜಿಸುತ
ಆತನಾತಂಗಿದಿರಿನಲಿ ರಘು । ದೂತ ಸಮರೋದ್ಯೂತ ಲಂಕಾ
ವೀತಿಹೋತ್ರ ರಣತ್ರಿಣೇತ್ರ ಸುಪುತ್ರಮಾರುತನ ೧೮

ತುಡುಕಿದುದು ಮಾರುತಿಯನಾ ಬಲು । ಗಡಿಯ ಖಳನ ಕಠೋರನಯನದ
ಕಿಡಿಯ ಹೊದಱಿನ ಹೊಗೆಯ ಹೊರಳಿ ಹರಾದಿಗಳು ಬೆದಱೆ
ತಡೆದುದಾ ಬಹಳಾಗ್ನಿಕಣದು । ಗ್ಗಡದ ಧೂಮಾಕಲಿತ ಶಿಖಿಯನು
ಕಡುಹಿನನಿಲಕುಮಾರಕನ ನಿಟ್ಟುಸಿರನಾಟೋಪ ೧೯

ನೊಡನೆ ಭಾರಿ ಕಾಳಗ ನಡೆಯಿತು. ೧೬. ಹೆಣದ ಬೆಟ್ಟದ ಮೇಲೆ ಬೆಟ್ಟಗಳು ರಾಶಿಯಾಗಿ ಆಕಾಶದ ತುದಿಯವರೆಗೆ ಏರಿದವು. ರಕ್ತದ ಭಾರಿ ಸಮುದ್ರವು ಲವಣಸಮುದ್ರವನ್ನು ಸೇರಿತು. ವೀರರು ಲೆಕ್ಕವಿಲ್ಲದಷ್ಟು ಸತ್ತು ಇಂದ್ರಲೋಕ ಮತ್ತು ಬ್ರಹ್ಮಲೋಕಗಳನ್ನು ಸೇರಿದರು. ದೇವತೆಗಳ ರಾಜಧಾನಿ ಅಮರಾವತಿಯಲ್ಲಿ ವೇಶ್ಯೆಯರನ್ನು ಸ್ವರ್ಗಕ್ಕೆ ಬಂದ ವೀರರು ಅಡ್ಡಗಟ್ಟಿದರು. ೧೭. ರಾಕ್ಷಸರ ಅಗುಳಿಗಳ ಹೊಡೆತ, ಕೊಡಲಿಯ ಏಟು ಮತ್ತು ಗದೆಯ ಬಡಿತಗಳಿಂದ ಕಪಿಸಮೂಹವು ಉರುಳಿಬೀಳುತ್ತಿತ್ತು, ಬೆಟ್ಟಗಳಿಂದ ಮತ್ತು ಮರಗಳಿಂದ ಕಪಿಸೈನಿಕರು ಅಪ್ಪಳಿಸಲು ರಾಕ್ಷಸರು ಮಗ್ಗುಲಾಗಿ ಬೀಳುತ್ತಿದ್ದರು. ಹೆಣಗಳ ರಾಶಿಯನ್ನು ಹೊರಲಾರದೆ ನೆಲವು ನರಳುತ್ತಿತ್ತು. ೧೮. ರಾಕ್ಷಸ ಬೇಡರ ದೂತ ಮತ್ತು ಶತ್ರುಗಳನ್ನು ಧೂಳುಮಾಡುವ ನಿಷ್ಣಾತ ಧೂಮ್ರಾಕ್ಷನು ಗರ್ಜಿಸುತ್ತ ಕಪಿಸೈನ್ಯವನ್ನೆದುರಿಸಿ ನಿಂತನು. ಆತನಿಗೆದುರಾಗಿ ಯುದ್ಧಕ್ರೀಡಾಪಟು, ಲಂಕೆಯ ಬೆಂಕಿ, ಕದನದ ಮುಕ್ಕಣ್ಣ ರಾಮದೂತ ವಾಯುವಿನ ಮಗ ಹನುಮಂತನು ನಿಂತನು. ೧೯. ಅತಿಶಯ ಪರಾಕ್ರಮಿ ರಾಕ್ಷಸನ ಕ್ರೂರಕಣ್ಣುಗಳ ಕಿಡಿಗಳ ರಾಶಿಯಿಂದ ಕೂಡಿದ ಹೊಗೆಯ ಸಮೂಹವು ಹನುಮಂತನನ್ನು ತಾಗಿತು. ಇದನ್ನು ಕಂಡು ಶಿವನೇ ಮೊದಲಾದವರು ಬೆದರಿದರು. ಭಾರಿ ಕಿಡಿ ಮತ್ತು ಹೊಗೆ ತುಂಬಿದ ಆ ಬೆಂಕಿಯನ್ನು

ಅಗಿಯಲರಿಬಲವಸ್ತ್ರಶರಧಿಯ । ಹುಗಿಸಿದನು ಧೂಮ್ರಾಕ್ಷನಕ್ಷನ
ಹಗೆಯನಾ ಹನುಮಂತನುಬ್ಬಿಱಿದೇಳ್ವ ವಾಡಬನ
ಬಗೆಯ ವಿಕ್ರಂಭಟನ ತೇರಿಗೆ । ಚಿಗಿದು ಚಿಮ್ಮಿಸಿದನು ವರೂಥವ
ನಗಲಿತಮರವಿಮಾನತತಿತೀವ್ರತೆಗೆ ಮಣಿರಥದ ೨೦

ತೇರು ನಭದೊಳಗಿರ್ದುದಾ ಖಳ । ವೀರನಿರ್ದನು ಹಲಗೆ ಖಡ್ಗದ
ಭೈರವಾಕಾರದಲದಾವಶ್ರಮಚಮತ್ಕೃತಿಯೊ
ವೀರಸುಗ್ರೀವಾದಿ ಸುಭಟರ । ಚಾರಿವರಿದಟ್ಟಿದನು ಕೊಂದನು
ಕಾರಮುಗಿಲುಬ್ಬರದ ಬೊಬ್ಬಿಱಿತದಲಿ ಕಪಿಬಲವ ೨೧

ಮುಂಡ ಹೊರಳಿದುದಾ ಪ್ರಜಂಘನ । ರುಂಡ ಬಿದ್ದುದು ದಧಿಮುಖನ ದೋ
ರ್ದಂಡ ನೆಲಕುರುಳಿತು ವಿಜಂಘನ ವೀರ ದುರ್ಮುಖನ
ದೊಂಡೆಗರುಳಗಲಿದವು ಪನಸನ । ತುಂಡುಗಳು ತೂಱಿದವು ಮರುಳ್ಗಳ
ತಂಡದಲಿ ತಱಿದೊಟ್ಟಿದನು ವಿಕ್ರಾಂದ ಯೂಥಪರ ೨೨

ತೋಳಿನರೆಘಾಯದಲಿ ನೊಂದನು । ನೀಲ ನಳ ಗಜ ಗವಯ ರುಮರು
ಬ್ಬಾಳುತನ ಕನಸಾಯ್ತು ಕೇಸರಿ ಗಂಧಮಾದನರ
ಹೇಳದಿರು ಹೆಸರೆನಿಸಿದಣ್ಣಗ । ಳೋಳಿ ಮುಱಿದುದು ಹೊಕ್ಕನವ ಬಳಿ
ಕಾಳುಗಳ ದೇವನು ಧರಾಧೀಶ್ವರನ ಮೋಹರವ ೨೩

ಮಾರುತಿಯ ಬಿರುಸಾದ ನಿಟ್ಟುಸಿರು ಅಡ್ಡಗಟ್ಟಿತು. ೨೦. ಕಪಿಸೈನ್ಯವು ಹೆದರಿಹೋಗುವಂತೆ ಧೂಮ್ರಾಕ್ಷನು ಅಕ್ಷನ ಹಗೆಯಾದ ಹನುಮಂತನನ್ನು ಬಾಣಗಳ ಸಮುದ್ರದಿಂದ ಮುಚ್ಚಿಬಿಟ್ಟನು. ಆಗ ಹನುಮಂತನು ಬೊಬ್ಬಿರಿದು ಕಡಲಬೆಂಕಿಯಂತೆ ಚಲಿಸುತ್ತಿದ್ದ ಧೂಮ್ರಾಕ್ಷನ ರಥಕ್ಕೆ ಹಾರಿ ಅದನ್ನು ಆಕಾಶಕ್ಕೆ ಎಗರಿಸಿದನು. ಆ ರಥದ ರಭಸಕ್ಕೆ ಆಕಾಶದಲ್ಲಿ ಗುಂಪುಕೂಡಿದ್ದ ದೇವತೆಗಳ ವಿಮಾನಗಳು ಚಲ್ಲಾಪಿಲ್ಲಿಯಾದವು; ೨೧. ಧೂಮ್ರಾಕ್ಷನ ರಥವು ಆಕಾಶದಲ್ಲಿದ್ದಿತು ; ಅವನು ಗುರಾಣಿ ಕತ್ತಿಗಳನ್ನು ಹಿಡಿದು ಭೈರವಸ್ವರೂಪದಿಂದ ಬಂದನು. ಅವನ ಶಕ್ತಿ ಚಮತ್ಕಾರಗಳನ್ನು ಏನೆಂದು ಹೇಳೋಣ, ವೀರಸುಗ್ರೀವನೇ ಮೊದಲಾದ ಶತ್ರುವೀರರನ್ನು ಚಾತುರ್ಯದಿಂದ ಸುತ್ತಾಡುತ್ತ ಹೊಡೆದಟ್ಟಿದನು ; ಕಾರ್ಗಾಲದ ಮೋಡದಂತೆ ಜೋರಾಗಿ ಬೊಬ್ಬೆಹಾಕುತ್ತ ಕಪಿಸೈನ್ಯವನ್ನು ಕೊಂದನು. ೨೨. ಪ್ರಜಂಘನ ಅಟ್ಟೆಯು ಬಿದ್ದಿತು. ದಧಿಮುಖನ ರುಂಡ ಉರುಳಿತು. ವಿಜಂಘನ ತೋಳುಗಳು ನೆಲಕ್ಕೆ ಕತ್ತರಿಸಿ ಬಿದ್ದವು. ವೀರ ದುರ್ಮುಖನ ಕರುಳುಗಳ ಮುದ್ದೆ ಹೊರಬಂದಿತು. ಪನಸನ ದೇಹದ ಚೂರುಗಳು ಪಿಶಾಚಿಗಳ ಮಧ್ಯೆ ಉದುರಿದವು. ಉಳಿದ ದಳನಾಯಕರನ್ನು ಧೂಮ್ರಾಕ್ಷನು ಕತ್ತರಿಸಿ ರಾಶಿಹಾಕಿದನು. ೨೩. ನೀಲನು ತೋಳಿನ ಅರೆಗಾಯದಿಂದ ನೊಂದನು, ನಳ, ಗಜ, ಗವಯ, ರುಮ ಇವರ ದರ್ಪವು ಕನಸಿನ ಮಾತಾಯಿತು. ಇನ್ನು ಕೇಸರಿ ಗಂಧಮಾದನರ ಹೆಸರು ಹೇಳಬೇಡ. ಪ್ರಸಿದ್ಧ ವೀರರ ಸಮೂಹವು ಒಡೆಯಿತು. ಬಳಿಕ ಧೂಮ್ರಾಕ್ಷನು ವೀರರದೇವ ರಾಮನ

ಬಿದ್ದ ರಥದೊತ್ತಿನಲಿ ಹಗೆವನ । ಹೊದ್ದಿಗೆಯು ಹನುಮಂತ ಕಾಣದೆ
ಗುದ್ದಿಕೊಂಡನು ತನ್ನ ತಾನೌಡುಗಳನೊಡೆಯುಗಿದು
ಇದ್ದನವನೀಕ್ಷಿಸಲು ರಘುನೃಪ । ನಿದ್ದ ದಳದಲಿ ಕಂಡು ಹಲುಗಳ
ಸುದ್ದಿ ಹಾರುತಲೆಜಿಗಿದನು ಧೂಮ್ರಾಕ್ಷ ರಾಕ್ಷಸನ ೨೪

ಆರು ನಿಲಬಹುದನಿಲಜನ ಘನ । ಘೋರ ಮುಷ್ಟಿನಿಘಾತದಲಿ ಶತ
ಧಾರ ಶತಶತ ಚೂರ್ಣವಹುದುಳಿದವರ ಪಾಡೇನು
ವೀರ ಧೂಮ್ರಾಕ್ಷನ ಕಪಾಲ ವಿ । ದಾರಿಸಿತು ಸಮಸೀಳಿನಲಿ ಸುರ
ನಾರಿಯರು ನಗುತವನ ಕೊಂಡೊಯ್ದರು ಸರಾಗದಲಿ ೨೫

ಚಾಗುರೇ ರಣಚಮತುಕಾರ ಸ । ರಾಗರಂಜಿತ ವೀರ ಸಮರೋ
ದ್ಯೋಗ ಸಾಹಸಮಲ್ಲ ಮಾಮಝು ಪೂತು ಪಾಯ್ಕೆನುತ
ಆ ಗಗನದಮರಪ್ರಕರ ಘನ । ಸಾಗರಧ್ವನಿಯಿಂದ ಕಂಪಿನ
ಪೂಗಳಲಿ ಹೊದೆಸಿದರು ಹರಿಸಿರಿಚರಣಸೇವಕನ ೨೬

ತೆಗೆದುಕೊಂಡವು ಹೆಣನನಲ್ಲಿಯು । ವಿಗಡಭೂತವ್ರಾತ ಖಳಸುರ
ನಗರಿಗೇಱಿದನನಿಲಜನ ಕೊಂಡಾಡುತಭ್ರದಲಿ
ಮಗನೆ ಕೇಳೈ ಕುಶನೆ ಬಲ ಕೈ । ಮಗುಚಿ ನಿಂದುದು ಮತ್ತೆ ಮಾರುತನ
ಮಗನ ಸರಿಸದಲಸುರಬಲ ಕಲಿ ವಜ್ರದಂಷ್ಟ್ರಕನ ೨೭

ಸೈನ್ಯವನ್ನು ಹೊಕ್ಕನು. ೨೪. ರಥವು ಬಿದ್ದ ಬಳಿಯಲ್ಲಿ ಶತ್ರುವನ್ನು ಕಾಣದೆ ಹನುಮಂತನು ತನ್ನ ದೇಹಕ್ಕೆ ತಾನೇ ಗುದ್ದಿಕೊಂಡನು. ಔಡುಕಚ್ಚಿ ಸುತ್ತ ನೋಡಲು ರಘುರಾಮನಿದ್ದ ಸೈನ್ಯದಲ್ಲಿ ಧೂಮ್ರಾಕ್ಷನನ್ನು ಕಂಡು ಹಲ್ಲು ಮಸೆಯುತ್ತ ಹಾರಿಬಂದು ಅವನ ಮೇಲೆ ಬಿದ್ದನು. ೨೫. ಹನುಮಂತನ ಭಯಂಕರ ಮುಷ್ಟಿಯೇಟಿನೆದುರಿಗೆ ಯಾರುತಾನೆ ನಿಲ್ಲಬಲ್ಲರು, ವಜ್ರಾಯುಧವು ನೂರು ನೂರು ಚೂರಾಗಿ ಪುಡಿಯಾಗುವುದು, ಇನ್ನು ಉಳಿದವರ ಪಾಡೇನು ? ವೀರಧೂಮ್ರಾಕ್ಷನ ತಲೆಬುರುಡೆ ಮಧ್ಯಕ್ಕೆ ಸೀಳಿ ಸಮನಾಗಿ ಎರಡು ಹೋಳಾಯಿತು. ಸ್ವರ್ಗಲೋಕದ ಸ್ತ್ರೀಯರು ನಗುತ್ತ ಹರ್ಷದಿಂದ ಅವನನ್ನು ತೆಗೆದುಕೊಂಡುಹೋದರು. ೨೬. "ಯುದ್ಧಕುಶಲಿಯೇ, ಭಲಾ ! ನಿರಾತಂಕವಾಗಿ ಕಾಳಗ ಮಾಡುವ ವೀರ ಭೇಷ್ ! ಯುದ್ಧಕಾರ್ಯದಲ್ಲಿ ಸಾಹಸವೆಸಗುವ ಜಟ್ಟಿ, ಮಾಮಝು, ಪೂತು, ಪಾಯ್ಕು !!" ಎನ್ನುತ್ತ ಆಕಾಶದಲ್ಲಿ ಸೇರಿದ್ದ ದೇವತೆಗಳು ಸಮುದ್ರಘೋಷದ ಧ್ವನಿಯಿಂದ ಕೂಗುತ್ತ ಸುವಾಸನೆಯ ಹೂವುಗಳನ್ನು ಶ್ರೀಹರಿಯ ಪಾದಸೇವಕನ ಮೇಲೆ ಸುರಿಸಿದರು. ೨೭. ಅಲ್ಲಿಯ ಭಯಂಕರ ಭೂತಗಳು ರಾಕ್ಷಸನ ಹೆಣವನ್ನು ತೆಗೆದುಕೊಂಡವು. ಧೂಮ್ರಾಕ್ಷನು ಗಗನದಲ್ಲಿ ಮಾರುತಿಯನ್ನು ಕೊಂಡಾಡುತ್ತ ಸ್ವರ್ಗದ ರಾಜಧಾನಿಗೆ ಹೋದನು, ಮಗ ಕುಶ, ಕೇಳು, ವೀರ ವಜ್ರದಂಷ್ಟ್ರಕನ ರಾಕ್ಷಸಸೈನ್ಯವು ಮರಳಿಬಂದು ಹನುಮಂತನನ್ನು ಎದುರಿಸಿ ನಿಂತಿತು.

ತಿರುಗಿದನು ಹನುಮಂತನಾ ಕ । ರ್ಬುರನ ಕದನಕೆ ಕಂಡು ಮುಗಿದನು
ಕರವನಂಗದ ಬೆಸಸಬೇಕೀ ಬಹ ನಿಶಾಚರನ
ಧುರಕೆ ತನ್ನುವನೆನಲು ಪೋಗೆಂ । ದರಿದಿಶಾಪಟನಂಗದನ ಕೈ
ನೆರವಿಗೊತ್ತಾಳಾಗಿ ಹೊಗಿಸಿದನಸುರಸೈನಿಕವ ೨೮

ಆಜಿ ಬಿಱುಸೋ ಹೊಕ್ಕನೋ ಯುವ । ರಾಜನೊಬ್ಬನೆ ರಣವ ಜಯಮುಖ
ದೋಜೆಯುಱಿಯಲು ಬಾರದೆಲೆ ಸೌಮಿತ್ರಿ ಹೋಗೆನಲು
ಆ ಜಿತಕ್ರೋಧಂಗೆ ಕೈಮುಗಿ । ದಾ ಜಯಾಹವಶೀಲ ಬಳಿಕ ಬಿ
ಡೌಜಸುತಸುತನೆಡೆಗೆ ನಡೆದನು ಧನುವನೊದಱಿಸುತ ೨೯

ಅದು ಬಳಿಕ ಕಲ್ಪಾವಸಾನದ । ಲುದಿಸಿದಂಬುಧಿಯಂತೆ ಚತುರಂ
ಗದ ಚಡಾಳತೆಯಿಂದ ಚೂರಿಸುವಸ್ತ್ರಶಸ್ತ್ರದಲಿ
ಹೊದೆಸಿಕೊಂಡುದು ಕಪಿಬಲವನುರಿ । ಸದನದೊಳಗೆದ್ದಂತೆ ರಿಪುಗಳ
ನೊದೆದು ಭುಗುಭುಗಿಸಿತ್ತು ಸೇನಾಶಿಖಿ ಭಟಾಂಗದಲಿ ೩೦

ಬೆರಸಿದವು ಬಲವೆರಡು ಬಲು ಕ । ರ್ಬುರರ ವಾದ್ಯದ ವೀರ ಕಪಿಸಂ
ಗರದ ಸಂಕುಲರವವಿಳೆಯನೊದೆದತಳಕುಚ್ಚಳಿಸೆ
ಗಿರಿ ಮಹೀರುಹ ಖಡ್ಗ ಖರ್ಪರ । ದುರು ರಣಾದ್ಭುತ ರಭಸ ಗಗನದ
ಶಿರವನೊದೆದುಪ್ಪರಿಸಿ ಹಳಚಿತು ಸೇನೆ ಸೇನೆಯಲಿ ೩೧

೨೮. ವಜ್ರದಂಷ್ಟ್ರಕನೊಡನೆ ಕದನಕ್ಕೆ ಹನುಮಂತನು ತಿರುಗಿದನು. ಅದನ್ನು ಕಂಡು ಅಂಗದನು ಕೈಮುಗಿದುಕೊಂಡು, "ಈಗ ಬರುತ್ತಿರುವ ರಾಕ್ಷಸನೊಡನೆ ಯುದ್ಧಮಾಡಲು ನನಗೆ ಅಪ್ಪಣೆ ಮಾಡಬೇಕು" ಎಂದು ಕೇಳಿಕೊಂಡನು. ಶತ್ರುಗಳನ್ನು ಚೆಲ್ಲಾಪಿಲ್ಲಿ ಮಾಡುವ ವೀರ ಹನುಮಂತನು 'ಹೋಗು' ಎಂದು ಅಂಗದನಿಗೆ ಅನುಮತಿ ಕೊಟ್ಟು ಅವನ ಬೆಂಗಾವಲಿಗೆ ವಿಭೀಷಣನ ಸೈನ್ಯವನ್ನು ಕಳುಹಿಸಿದನು. ೨೯. "ಯುದ್ಧ ಕಠಿಣವೋ, ಯುವರಾಜನೊಬ್ಬನೇ ಯುದ್ಧಕ್ಕೆ ಹೋದನೋ. ಗೆಲುವು ಕಾಣುವ ಬಗೆಯನ್ನು ತಿಳಿಯುವುದು ಕಷ್ಟ. ಲಕ್ಷ್ಮಣ, ನೀನು ಹೋಗು" ಎಂದು ರಾಮನು ಹೇಳಲು ಕೋಪವನ್ನು ಗೆದ್ದ ರಾಮನಿಗೆ ಕೈಮುಗಿದು ಯುದ್ಧದಲ್ಲಿ ಜಯಗಳಿಸುವ ಗುಣಶಾಲಿ ಲಕ್ಷ್ಮಣನು ಬಿಲ್ಲನ್ನು ತೂಗಾಡಿಸುತ್ತ ವಾಲಿಯ ಮಗ ಅಂಗದನ ಬಳಿಗೆ ಬಂದನು. ೩೦. ಪ್ರಳಯ ಕಾಲದ ಸಮುದ್ರದಂತೆ ಉಗ್ರವಾದ ಚತುರಂಗಸೈನ್ಯವು ಉರಿಯನ್ನು ಕಾರುವ ಅಸ್ತ್ರ ಶಸ್ತ್ರಗಳಿಂದ ಕಪಿಸೈನ್ಯವನ್ನು ಮುಚ್ಚಿತು. ಮನೆಗೆ ಬೆಂಕಿಬಿದ್ದು ಉರಿ ಏಳುವಂತೆ ಸೈನ್ಯದ ವೀರರ ಕೋಪದ ಬೆಂಕಿಯು ಶತ್ರುಗಳನ್ನು ಒದೆದು ಭುಗಿಭುಗಿಲ್ ಎಂದು ಮೇಲೆದ್ದಿತು. ೩೧. ಎರಡು ಸೈನ್ಯಗಳೂ ಒಂದರೊಡನೊಂದು ತಾಗಿದವು ರಾಕ್ಷಸರ ವಾದ್ಯಧ್ವನಿ ಮತ್ತು ಕಪಿಸೈನ್ಯದ ಬೊಬ್ಬೆ ಎರಡೂ ಒಟ್ಟಿಗೆ ಸೇರಿ ನೆಲವನ್ನು ಒದೆದು ಪಾತಾಳಕ್ಕೆ ಚಿಮ್ಮಿತು, ಬೆಟ್ಟ, ಮರ ಹಾಗೂ ಕತ್ತಿ ಖರ್ಪರಗಳ ಹೊಡೆದಾಟದ ರಭಸವು ಆಕಾಶತುದಿಯನ್ನು ಒದೆಯಿತು. ಒಂದು ಸೈನ್ಯವು ಇನ್ನೊಂದು ಸೈನ್ಯದ ಮೇಲೆ ರಭಸ

ಹಿಡಿದಿಡುವ ಕರಿಘಟೆಯು ಮೇಘದ । ರ್ಝಡಿವ ಖಡ್ಗದ ಮಿಂಚುಗಳ ಸಿಡಿ
ಸಿಡಿದು ಸೂಸುವ ಮಕುಟಮಣಿಗಣದಾಲಿಕಲ್ಲುಗಳ
ಗಡಣಿಸಿದ ಘಾಯಗಳಲಭ್ರವ । ತುಡುಕಿ ತೂಳುವ ರಕುತವಾರಿಯ
ಮಡಲಿಟ್ಟಿದ ಮಳೆಗಾಲ ರಂಜಿಸಿತಸಮ ಸಮರದಲಿ ೩೨

ಅಲರಿದುರು ಪಾಲಾಶ ಶಾಖಾ । ವಳಿಯ ವಿಪಿನವೊ ವಿಪುಳತರ ಶಾ
ಲ್ಮಲಿಯ ಪೂದುಱುಂಗಲಿನ ಹೊದಱಿನ ಬಹಳ ಕಾನನವೊ
ತಳಿತ ಕುಸುಮಿತ ಕಿಂಶುಕಾವನ । ವಳಯವೋ ನಿರ್ದಳಿತ ರಕ್ತೋ
ತ್ಪಲದ ಕೊಳಗಳೊ ಕೊಳುಗುಳವೊ ತಾ ಹೊಗಳಲರಿದೆಂದ ೩೩

ಜಾಳಿಸಿತು ಜಜ್ಝಾರಬಲರು । ಬ್ಬಾಳುತನವೆರಡಂಕದಲಿ ಕೈ
ಮೇಳವಿಸಿದುದು ವಜ್ರದಂಷ್ಟ್ರಾಂಗದರಿಗತಿಮಥನ
ಕೀಳುಮದ ಮೇಲ್ಮದದ ದಿಗಿಭಂ । ಡಾಲ ತಲೆಗೊಟ್ಟಂತೆ ಹಳಚಿದ
ರೋಳಿ ಜರಿಯಲು ಜಗದ ಜಡಬಿಡಲಮರರಾಲಿಗಳ ೩೪

ಹೇಳಲಚ್ಚರಿ ವಾಲಿಜನ ಕೈ । ಜಾಳಿಗೆಯ ಬೆಟ್ಟಗಳ ಬೊಗರಿಯ
ಬೀಳುಗಳ ದಂಭೋಳಿದಂಷ್ಟ್ರನ ವುನ್ನತಾಯುಧದ
ಕಾಳರಕ್ಕಸನುಗ್ರ ಪರಿಘದ । ತೂಳಿಕೆಯ ತೋಟಿಗಳ ಧಾಳಾ
ಧೂಳಿ ತುಂಬಿತು ಕಡೆಗೆ ಕಮಲಭವಾಂಡಮಂಡಲವ ೩೫

ದಿಂದ ಬಿದ್ದಿತು. ೩೨. ಮುನ್ನುಗ್ಗಿಸುವ ಆನೆಗಳ ಸೈನ್ಯವೇ ಮೋಡಗಳು, ಝಳಪಿಸುವ ಕತ್ತಿಗಳೇ ಮಿಂಚುಗಳು, ನಾಯಕರ ಕಿರೀಟಗಳಿಂದ ಸಿಡಿದುಬೀಳುವ ಮುತ್ತುಮಾಣಿಕ್ಯಗಳು ಆಲಿಕಲ್ಲುಗಳು, ಅಸಂಖ್ಯಾತ ಗಾಯಗಳಿಂದ ಆಕಾಶಕ್ಕೆ ಎರಚಿಬೀಳುವ ರಕ್ತದ ನೀರೇ ಮಳೆ–ಹೀಗೆ ಆ ಭಯಂಕರ ಯುದ್ಧವು ಮಳೆಗಾಲದಂತೆ ತೋರಿತು. ೩೩. ಚಿಗುರಿ ಹೂವಿನ ಮುಳುಮುತ್ತುಗಮರದ (ಪಲಾಶ) ಕೊಂಬೆಗಳ ವನವೋ, ಹೂಗೊಂಚಲಿನಿಂದ ಕಿಕ್ಕಿರಿದ ಭಾರಿ ಬೂರುಗದ ಮರದ ಕಾಡೋ, ಚಿಗುರಿ ಹೂಬಿಟ ಮುತ್ತುಗದ ಮರದ ಅರಣ್ಯವೋ, ಅರಳಿದ ಕೆಂದಾವರೆಹೂಗಳ ಕೊಳಗಳೋ ಅಥವಾ ರಣರಂಗವೋ ಹೊಗಳಲು ಸಾಧ್ಯವಿಲ್ಲ ಎಂದು ವಾಲ್ಮೀಕಿಗಳು ಯುದ್ಧರಂಗವನ್ನು ವರ್ಣಿಸಿದರು. ೩೪. ಎರಡೂ ಸೈನ್ಯಗಳಲ್ಲಿ ಮಹಾಬಲಶಾಲಿಗಳ ಪರಾಕ್ರಮವು ವಿಜೃಂಭಿಸಿತು. ವಜ್ರದಂಷ್ಟ್ರ ಮತ್ತು ಅಂಗದರ ನಡುವೆ ಭಾರಿ ಹೋರಾಟ ಹತ್ತಿಕೊಂಡಿತು. ಕೀಳುಮದದ ಮತ್ತು ಮೇಲುಮದದ ದಿಗ್ಗಜಗಳು ಒಂದಕ್ಕೊಂದು ತಲೆಗೆ ತಲೆ ಕೊಟ್ಟ ಹಾಗೆ ವಜ್ರದಂಷ್ಟ್ರ ಮತ್ತು ಅಂಗದರು ಒಬ್ಬರ ಮೇಲೊಬ್ಬರು ಬೀಳಲು ಭೂಮಿಯ ಸಾಲು ಕುಸಿಯಿತು ಮತ್ತು ದೇವತೆಗಳ ದೃಷ್ಟಿಮಾಂದ್ಯ ಕಳಚಿತು. ೩೫. ವರ್ಣಿಸಲು ಆಶ್ಚರ್ಯ! ಅಂಗದನು ಬೀಸಿ ಎಸೆದ ಬೆಟ್ಟಗಳು ಬುಗುರಿಯಂತೆ ಬೀಳುವ ಹಾಗೂ ಕಾಳರಾಕ್ಷಸನಾದ ವಜ್ರದಂಷ್ಟ್ರನ ಶ್ರೇಷ್ಠ ಆಯುಧಗಳ ಮತ್ತು ಪರಿಘಾಯುಧದ ಆಕ್ರ

ಇಡುವ ಹೊಡೆವ ಮಹಾದ್ರಿ ಪರಿಘದ । ಲಡಸಿ ಹುಟ್ಟಿದ ಧೂಮದಲಿ ಮಂ
ಜಡಸಿದಂಬರದಂದವಾದುದು ಭುವನವಿಸ್ತಾರ
ಕಿಡಿಯ ಹಬ್ಬುಗೆ ಹೊದೆಸಿದವು ನಭ । ದುಡುಗಣೌಘವನಮಮ ಕದನದ
ಕಡುಹು ಮಿಕ್ಕುದು ವೀರ ಜಂಭನ ಪಾಕಶಾಸನನ ೩೬

ನೆರೆಯದಂಬರ ವೀರತನದ । ಬ್ಬರಿನ ರಣಕಾ ರಣರಸದ ಕ
ಟ್ಟೊಱತೆ ಸೂಸಿತು ಶೈಲಪರಿಘಾಯುಧಗಳನು ಬಿಸುಟು
ತೆಱಹುಗೊಂಡು ತಳಾಯದಲಿ ಬೊ । ಬ್ಬಿಱಿದು ಬಾಹಪ್ಪಳಿಸಿ ನಿಂದಿದ
ರಱಿಚೆ ನೆಲಕುಕ್ಕರಿಸೆ ಕರಿ ಕಮಠಾಹಿನಾಯಕರು ೩೭

ವಾಮಕರದಂಡೆಗಳ ದಂಡೆಯ । ವೈಮುರುವಿನುಪ್ಪರದ ಮುಷ್ಟಿಯ
ಭೀಮಬಾಹಾಭ್ರುಕುಟಿಬದ್ಧಾರುಣ ವಿಲೋಚನದ
ಧೂಮಧೂತ ಶಿಖಾಸ್ಫುಲಿಂಗ । ಸ್ತೋಮದುಶ್ವಾಸಪ್ರಪೂರದ
ತಾಮಸದ ತವಕಿಗರು ತಿವಿದಾಡಿದರು ತೀವ್ರದಲಿ ೩೮

ಅಣೆದಣೆದು ತಿವಿತಿವಿದ ಮುಷ್ಟಿಯ । ಜುಣುಗುಗಿಡಿ ಗುಡಿಯಿಱಿದು ಗಗನಾಂ
ಗಣವ ತುಂಬಿದವಾ ಲಯಾನಲನುಗುಳುಗಿಡಿಯಂತೆ
ಫಣಿ ವಿಭೂಷಾಂಧಾಸುರರ ಬಲು । ಕಣಯ ಬವರವನಸುರಕುಲ ಭೀ
ಷಣ ಹಿರಣ್ಯಕರದಟು ಮಿಕ್ಕುದು ಹೇಳಲೇನೆಂದ ೩೯

ಮಣದ ಗದ್ದಲವು ಬ್ರಹ್ಮಾಂಡವನ್ನೆಲ್ಲ ವ್ಯಾಪಿಸಿತು. ೩೬. ಅಂಗದನು ಎಸೆಯುವ ಭಾರಿ ಬೆಟ್ಟ ಮತ್ತು ವಜ್ರದಂಷ್ಟ್ರನು ಹೊಡೆಯುವ ಪರಿಘಾಯುಧ ಇವುಗಳ ಘರ್ಷಣೆಯಿಂದ ಉದಿಸಿದ ಹೊಗೆಯು ಮಂಜು ಕವಿದ ಆಕಾಶದಂತೆ ಲೋಕಗಳನ್ನು ಆವರಿಸಿತು. ಅತಿಶಯವಾದ ಕಿಡಿಗಳು ಎದ್ದು ನಕ್ಷತ್ರಗಳನ್ನು ಮುಚ್ಚಿಬಿಟ್ಟವು. ವೀರ ಜಂಭಾಸುರ ಮತ್ತು ಇಂದ್ರ ಇವರ ನಡುವಿನ ಯುದ್ಧದ ರಭಸವನ್ನು ಅಂಗದ ವಜ್ರದಂಷ್ಟ್ರರ ಕದನ ಮೀರಿಸಿತು. ೩೭. ಇವರ ಪರಾಕ್ರಮದ ಯುದ್ಧದ ಅಬ್ಬರಕ್ಕೆ ಆಕಾಶ ಸಾಲದಾಯಿತು. ಇಬ್ಬರು ವೀರರ ಯುದ್ಧರಸದ ಪ್ರವಾಹವು ರಭಸವಾಗಿ ಹರಿಯಿತು. ಬೆಟ್ಟ ಮತ್ತು ಪರಿಘಾಯುಧ ಇವುಗಳನ್ನು ಎಸೆದು ಸಮತಟ್ಟಾದ ಪ್ರದೇಶದಲ್ಲಿ ಜಾಗಮಾಡಿಕೊಂಡು ಭುಜಗಳನ್ನು ಅಪ್ಪಳಿಸಿ ನಿಂತುಕೊಂಡರು. ನಿಂತ ಜೋರಿಗೆ ನೆಲ ಅರಚಿಕೊಂಡಿತು, ಭೂಮಿಯನ್ನು ಹೊತ್ತ ಆನೆ, ಆಮೆ, ಆದಿಶೇಷರು ಕುಕ್ಕರಿಸಿದರು. ೩೮. ಎಡಗೈಯ ಪಟ್ಟಿನೊಡನೆ ದಂಡೆಯೊತ್ತಿ, ಮೈತಿರುಗಿಸಿ, ಮುಷ್ಟಿಯೆತ್ತಿ, ಬಲವಾದ ತೋಳುಗಳನ್ನು ಅಪ್ಪಳಿಸಿ, ಹುಬ್ಬುಗಂಟಿಕ್ಕಿ, ಕೆಂಗಣ್ಣುಗಳಿಂದ ಉಸಿರೆಳೆದುಕೊಂಡು ಹೊಗೆಯೊಡನೆ ಬೆಂಕಿಯ ಕಿಡಿಗಳನ್ನು ಸೂಸುತ್ತ, ತಮೋಗುಣದ ಯುದ್ಧೋತ್ಸಾಹಿಗಳು ಬಿರುಸಾಗಿ ತಿವಿದಾಡಿದರು. ೩೯. ಹೊಡೆಹೊಡೆದು ತಿವಿತಿವಿದ ಮುಷ್ಟಿಗಳಿಂದ ಎದ್ದ ಕಿಡಿಗಳು ರಭಸದಿಂದ ಘೋರ ಪ್ರಳಯಾಗ್ನಿಯು ಉಗುಳುವ ಕಿಡಿಗಳಂತೆ ಆಕಾಶವನ್ನು ತುಂಬಿತು, ಅಂಗದ ವಜ್ರದಂಷ್ಟ್ರರ ನಡುವಿನ ಕದನವು ಸರ್ಪಭೂಷಣ ಶಿವ ಮತ್ತು ಅಂಧಕಾಸುರರ ನಡುವಿನ ಪ್ರಚಂಡ ಯುದ್ಧವನ್ನೂ ಭಯಂಕರ ರಾಕ್ಷಸ ಹಿರಣ್ಯಕಶಿಪುವಿನ ಪರಾಕ್ರಮವನ್ನೂ

ಶಿರವು ಕರ್ಣ ಕಪೋಲ ಭುಜ ಕಂ । ಧರ ಮಹೋರಸ್ಥಳದ ತಾಣದ
ಸರಿಸದಲಿ ಸಡಗರಿಸಿದವು ಸಿಡಿಲಂತೆ ಮುಷ್ಟಿಗಳು
ಬುರುಬುರನೆ ಬೋರೆಗಳು ನೆಗೆದೊಡೆ । ದರುಣಜಲದೇಱುಗಳಲಿಬ್ಬರು
ತರಣಿ ಶಶಿಯುವೊಲೊಪ್ಪಿದರು ಕಡೆವಗಲ ಪೌರ್ಣಮಿಯು ೪೦

ಎಲವೊ ನೀವ್ ರಕ್ಕಸರು ದಿವಿಜರಿ । ಗಲಗಣಸುಗಳು ನಾವು ಕಪಿಗಳು
ಗಲಭೆಗಂಜುವೆವೆಮಗೆ ಭಯುವಹುದಸುರದರ್ಶನಕೆ
ಕಲಹ ನಿಮ್ಮದು ಬಿಱುಸು ಕಡುಕೋ । ಮಲವು ನಮ್ಮಯ ಸಮರವೆರಡಱ
ಹಳಹಳಿಕೆಯನು ನೋಡೆನುತ ತಿವಿದನು ನಿಶಾಚರನ ೪೧

ಹಾರಿಬಿದ್ದನು ನೆಲಕೆ ರಕುತವ । ಕಾರಿದನು ಗರಿಗರಿನೆ ಬೆಱ್ತ ಶ
ರೀರದಲುಗುವ ಕೈಯು ಕಂಪಿಸುವಂಘ್ರಿಯುಗಳಗಳ
ಗೂರಿಡುವ ಜಲದರುಣವಾರಿಯು । ಜಾರಿದಾಸ್ಯದ ರಣಭಯಾಪ
ಸ್ಮಾರಕದ ಖಳನಿರ್ದನೂರ್ಧ್ವಶ್ವಾಸಲಹರಿಯಲಿ ೪೨

ಭುಜಯುಗವ ಸೂಳೈಸಿ ಸತ್ಕೃತು । ಭುಜರಿಗಬ್ಬರಗೊಟ್ಟು ರಕ್ಷ
ಧ್ವಜನಿಗಾಯೆಂದುಬ್ಬಿ ಮಲೊದೊಲೆದರಿ ನಿಶಾಚರನ
ಅಜಕಪಾಲಿಯ ಬಳಿಯ ಭೂತ । ವ್ರಜಕೆ ಕೈವರ್ತಿಸಿ ಖರಾಸುರ
ವಿಜಯುಗಭಿವಂದಿಸುತ ಕೆದಱ್ದನುಳಿದ ಖಳಬಲವ ೪೩

ಮಾರಿಸಿತು. ೪೦. ತಲೆ, ಕಿವಿ, ಕೆನ್ನೆ, ಹೆಗಲು, ಕತ್ತು, ಹರವಾದ ಎದೆಗಳಿಗೆ ಸಮ ಸಮವಾಗಿ ಇಬ್ಬರು ವೀರರ ಮುಷ್ಟಿಏಟುಗಳು ಸಿಡಿಲಿನಂತೆ ಬಿದ್ದವು. ಹೊಡೆತಬಿದ್ದ ಸ್ಥಳಗಳಲ್ಲಿ ಬುರಬುರನೆ ಬೋರೆಗಳೆದ್ದು ಅವು ಒಡೆದು ಗಾಯದಿಂದ ರಕ್ತ ಒಸರಲು ಪೌರ್ಣಮಿಯ ಸಂಜೆಯ ಸೂರ್ಯಚಂದ್ರರಂತೆ ಅಂಗದ ವಜ್ರದಂಷ್ಟ್ರಕರು ಪ್ರಕಾಶಿಸಿದರು. ೪೧. "ಲೋ ನೀವು ರಾಕ್ಷಸರು, ದೇವತೆಗಳ ಪ್ರತಿಸ್ಪರ್ಧಿಗಳು. ನಾವು ಕಪಿಗಳು ; ಗದ್ದಲಕ್ಕೆ ನಾವು ಹೆದರುತ್ತೇವೆ ; ರಾಕ್ಷಸರನ್ನು ಕಂಡರೆ ನಮಗೆ ಭಯ. ನಿಮ್ಮ ಕಾಳಗ ಬಿರುಸು, ನಮ್ಮ ಕದನ ಬಹಳ ಕೋಮಲ. ಈ ಇಬ್ಬರ ನಡುವಿನ ಹೊಯ್ದಾಟವನ್ನು ನೋಡು" ಎನ್ನುತ್ತ ಅಂಗದನು ವಜ್ರದಂಷ್ಟ್ರನನ್ನು ತಿವಿದನು. ೪೨. ವಜ್ರದಂಷ್ಟ್ರನು ಹಾರಿ ನೆಲಕ್ಕೆ ಬಿದ್ದು ನೆತ್ತರು ಕಾರಿಕೊಂಡನು, ಏಟಿನಿಂದ ಶರೀರದಲ್ಲಿ ನೋವು ಹುಟ್ಟಿತು. ಕೈಕಾಲುಗಳು ಅದುರಲಾರಂಭಿಸಿದವು. ಚೆಲ್ಲಿಹೋಗುತ್ತಿರುವ ರಕ್ತದಿಂದ ಕಾಂತಿಗುಂದಿದ ಮುಖದ ವಜ್ರದಂಷ್ಟ್ರನು ಯುದ್ಧಭಯದಿಂದ ಮೂರ್ಛೆ ಹೋಗಿ ಮೇಲುಸಿರು ಬಿಡುತ್ತಿದ್ದನು. ೪೩. ಅಂಗದನು ಭುಜವನ್ನು ತಟ್ಟಿ ದೇವತೆಗಳಿಗೆ ಸಂತೋಷವಾಗುವಂತೆ ಗರ್ಜಿಸಿ ಆ ಎಂದು ಸಂತೋಷದಿಂದ ಕೂಗಿ ರಾಕ್ಷಸ ಸೈನ್ಯವನ್ನು ಎದುರಿಸಿದನು. ಶತ್ರುರಾಕ್ಷಸನನ್ನು ಬ್ರಹ್ಮ ಮಹೇಶ್ವರರ ಬಳಿಯ ಭೂತಗಳಿಗೆ ಒಪ್ಪಿಸಿಕೊಟ್ಟು ಖರಾಸುರವಿಜಯ ರಾಮನನ್ನು ವಂದಿಸುತ್ತ ಉಳಿದ

ಬಳಿಕ ತಳಘಾತದಲಿ ಮೊಳಕೈ । ಗಳಲಿ ಮಡದಲಿ ಮುಷ್ಟಿಯಲಿ ಕಾ
ಲ್ದುಳಿಯಲಡಹೊಯ್ಲಿನಲಿ ತಡೆಗಾಲಿನಲಿ ಮುಡುಹಿನಲಿ
ಕೊಳುಗುಳದ ಭೂತಾಳಿ ಕೈಚ । ಪ್ಪಳೆಯಲೊದಗಲು ನಗರದಗಳಿನ
ವಳಯ ಪರಿಯಂತಟ್ಟಿ ಕೊಂದನು ಖಳಚತುರ್ಬಲವ ೪೪

ಇಳಿದು ಸುರಪತಿ ತನ್ನ ಮೊಮ್ಮನ । ಕಲಹಕತಿ ಪರಿಣಮಿಸಿ ಸುರಕುಜ
ದಲರದಂಡೆಯ ಹಾಯ್ಕಿ ಹಾರಾಂಗಣದ ಭೂಷಣವ
ವಿಲಸದೇಕಾವಳಿಯ ಮಣಿಕುಂ । ಡಲವನಿತ್ತು ಸರಾಗರಸದೊ
ಬ್ಬುಳಿಯ ಪುಳಕದಲಪ್ಪಿ ಸರಿದನು ಸುರರ ಸಭೆಗಾಗಿ ೪೫

ತಿರುಗಿದನು ಬಳಿಕಂಗದನು ದಿನ । ಕರಕುಲೇಂದ್ರನ ಬಳಿಗೆ ಭಟರಿ
ಬ್ಬರು ಸುಮಿತ್ರಾಸೂನು ಸಹಿತೈದಿದರು ನರಹರಿಯ
ತರಣಿ ಸಂಧ್ಯಾಸಮಯ ಕರ್ಮಾಂ । ತರವ ನಿರ್ವರ್ತಿಸಲು ಪಶ್ಚಿಮ
ಶರಧಿಗಿಳಿದನು ಶಿಬಿರಕಭಿಮುಖನಾದನಾ ರಾಮ ೪೬

ರಾಕ್ಷಸಸೈನ್ಯವನ್ನು ಚದುರಿಸಿದನು. ೪೪. ಅನಂತರ ಅಂಗದನು ಪಾದಗಳಿಂದ ಒದೆದು, ಮೊಳಕೈಗಳಿಂದ ತಿವಿದು, ಹಿಮ್ಮಡಿ ಮುಷ್ಟಿಗಳಿಂದ ಹೊಡೆದು, ಕಾಲಿನಿಂದ ತುಳಿದು, ಅಡ್ಡಹೊಡೆದು ತಡೆಗಾಲುಕೊಟ್ಟು ಬೀಳಿಸಿ, ಭುಜದಿಂದ ಅಪ್ಪಳಿಸಿ ರಾಕ್ಷಸ ಚತುರಂಗಸೈನ್ಯವನ್ನು ಲಂಕಾನಗರದ ಆಗಳಿನವರೆಗೆ ಅಟ್ಟಿಕೊಂಡುಹೋಗಿ ಕೊಂದನು, ರಣಪಿಶಾಚಿಗಳು ಕೈಚಪ್ಪಾಳೆ ಹೊಡೆಯುತ್ತ ಇದನ್ನು ನೋಡುತ್ತಿದರು. ೪೫. ಇಂದ್ರನು ಆಕಾಶದಿಂದ ಇಳಿದುಬಂದು ತನ್ನ ಮೊಮ್ಮಗನ ಯುದ್ಧವನ್ನು ಮೆಚ್ಚಿ ಕಲ್ಪವೃಕ್ಷದ ಹೂವಿನಮಾಲೆಯನ್ನು ಅಂಗದನ ಕೊರಳಿಗೆ ಹಾಕಿದನು. ಹಾರ, ಮೈದೊಡವುಗಳು, ಏಕಾವಳಿಸರ, ವಜ್ರದ ಕಿವಿಯಾಭರಣಗಳನ್ನು ಕೊಟ್ಟು ಆನಂದ ರಸವುಕ್ಕಿ ರೋಮಾಂಚಗೊಂಡು ಅಂಗದನನ್ನು ಅಪ್ಪಿಕೊಂಡನು. ಅನಂತರ ದೇವತೆಗಳ ಗುಂಪನ್ನು ಸೇರಿಕೊಂಡನು. ೪೬. ಅನಂತರ ಅಂಗದನು ಯುದ್ಧರಂಗದಿಂದ ರವಿವಂಶ ದೊಡೆಯ ರಾಮನ ಬಳಿಗೆ ಹಿಂದಿರುಗಿದನು. ಹನುಮಂತ ಅಂಗದರಿಬ್ಬರೂ ಲಕ್ಷ್ಮಣ ನೊಡನೆ ನರಸಿಂಹನ ಅವತಾರಿಯಾದ ರಾಮನ ಸಮೀಪವನ್ನು ಸೇರಿದರು. ಸಾಯಂಕಾಲದ ದಿನಚರಿಯ ಕರ್ಮವನ್ನು ನೆರವೇರಿಸಲು ಸೂರ್ಯನು ಪಶ್ಚಿಮ ಸಮುದ್ರಕ್ಕೆ ಇಳಿದನು. ರಾಮನು ತನ್ನ ಶಿಬಿರದ ಕಡೆಗೆ ತಿರುಗಿದನು.

# ಹದಿನೆಂಟನೆಯ ಸಂಧಿ

ಸೂಚನೆ॥ ರಣಭಯಂಕರ ಭಟನನಸುರಾ । ಗ್ರಣಿಯಕಂಪನನಸಮ ಸಮರಾಂ
ಗಣದೊಳಗೆ ಮುಱಿದನಿಲಸುತ ಮೆಱೆದನು ಪರಾಕ್ರಮವ

ಕೇಳಿರೈ ಕುಶಲವರು ಕಪಿಗಳ । ಕಾಳಗದ ಜಯವಾರ್ತೆ ಸಭೆಯಲಿ
ಕೇಳಿಸಿತು ಕಡುಭಯದಲಾ ಕೈಕಸೆಯನಂದನನ
ಮೌಳಿಯೊಲಹಿನಲಖಿಳ ಮಣಿಗಣ । ಮೌಳಿಗಳ ಬೀಳ್ಕೊಟ್ಟು ಚಿಂತಾ
ಬಾಲಕಿಯ ಬಳಿವಿಡಿದು ಹೊಕ್ಕನು ತನ್ನ ಮಂದಿರವ ೧

ಆಳುತನವತಿಬಲುಹು ರಕ್ಕಸ । ಗಾಳಗವು ಕಡುಬಿಱುಸು ಸಮರಶ
ರಾಳಿ ತಾಗದೆ ಮಾಣದೆಂದಿನನಧಿಕ ಭೀತಿಯಲಿ
ಥಾಳಿಸುವ ಮಣಿಕವಚ ವಜ್ರದ । ತಾಳಿಗಳನಳವಡಿಸಿ ಕಿರಣದ
ಪಾಳೆಯದ ಸುಯ್ದಾನದಲಿ ಬಂದಡರ್ದನಂಬರವ ೨

ಉದಯಮುಖದಲಿ ಲಗ್ಗೆವಱೆ ಮೊಳ । ಗಿದವು ದುರ್ಗದ ಮೇಲೆ ಗಜ ಹ
ಣ್ಣಿದವು ಹಯ ಹಲ್ಲಣಿಸಿದವು ರಥ ಹೂಡಿದವು ರಣಕೆ
ಪದಚರಾವಳಿ ಪಾಡುಪಂಥದ । ಮದದಹಂಕಾರದಲಿ ಶರ ಧನು
ಗದೆ ಕೃಪಾಣದ ಪಾಶದಿಂದನುವಾದರೊಗ್ಗಿನಲಿ ೩

ಸೂಚನೆ॥ ಕದನಭಯಂಕರ ರಾಕ್ಷಸವೀರ ಅಕಂಪನನನ್ನು ವಿಷಮಯುದ್ಧದಲ್ಲಿ ಕೊಂದು ಹನುಮಂತನು ಪರಾಕ್ರಮವನ್ನು ಪ್ರದರ್ಶಿದನು. ೧. ಕೇಳಿ, ಕುಶಲವರೇ, ಯುದ್ಧದಲ್ಲಿ ಕಪಿಗಳು ಜಯವನ್ನು ಪಡೆದ ಸುದ್ದಿಯು ತಲಪಿ ಕೈಕಸೆಯ ಮಗ ರಾವಣನ ಸಭೆಯಲ್ಲಿ ಭಯವಾವರಿಸಿತು. ಸಮಸ್ತ ನಾಯಕರನ್ನು ತಲೆಯಲ್ಲಾಡಿಸಿ ಸೂಚನೆ ಕೊಟ್ಟು ಕಳುಹಿಸಿ ರಾವಣನು ಚಿಂತಾತುರನಾಗಿ ತನ್ನ ಅರಮನೆಯನ್ನು ಪ್ರವೇಶಿಸಿದನು. ೨. 'ರಾಕ್ಷಸರ ಪೌರುಷವು ಬಲವಾದುದು ; ರಾಕ್ಷಸರ ಕಾಳಗವು ಬಹಳ ಬಿರುಸಿನದು ; ಕದನದ ಬಾಣಗಳು ತಲುಪದೆ ಇರವು' ಎಂದು ಬಹಳ ಭೀತಿಯಿಂದ ಚಂದ್ರನು ಹೊಳೆಯುವ ರತ್ನದ ಕವಚ ಮತ್ತು ವಜ್ರದ ರಕ್ಷಾಪದಕ (ತಾಳಿ) ವನ್ನು ಧರಿಸಿ ಕಿರಣಗಳ ಶಿಬಿರದ ರಕ್ಷಣೆಯಲ್ಲಿ ಆಕಾಶವನ್ನೇರಿದನು. ೩. ಸೂರ್ಯನು ಹುಟ್ಟುತ್ತಿದ್ದಂತೆ ದುರ್ಗದ ಮೇಲೆ ಧಾಳಿಯ ತಮಟೆಗಳು ಬಾರಿಸಿದವು. ಆನೆಗಳನ್ನು ಯುದ್ಧಕ್ಕೆ ಸಜ್ಜುಮಾಡಿದರು, ಕುದುರೆಗಳಿಗೆ ಜೀನು ಹಾಕಿದರು. ರಥಗಳನ್ನು ಹೂಡಿದರು, ಪದಾತಿಸೈನಿಕರು ಆಣೆ ಬಾಷೆಗಳನ್ನಿಕ್ಕುತ್ತ ಮದಿಸಿ ಅಹಂಕಾರದಿಂದ ಗದೆ, ಖಡ್ಗ, ಪಾಶಗಳನ್ನು ಹಿಡಿದು ಗುಂಪಾಗಿ ನಿಂತು

ಆಯುಧದ ಸಂವರಣೆಯಲಿ ವಾ । ನಾಯುಜದ ವಾಹಕರು ಮದಷ
ಷ್ಟ್ಯಾಯಿನೀ ದಂತಾವಳಾರೋಹಕರು ಹೊಗಳಿಕೆಯ
ರಾಯರಥಿಕರು ಚಟುಳ ಚರಣ ಚ । ಡಾಯುಮಾನಿತರಿಳಿದುದಾ ಖಳ
ರಾಯದುರ್ಗವ ಮೊಳಗುವಗಣಿತ ವಾದ್ಯಘೋಷದಲಿ ೪

ಓಲಗದೊಳಿದ್ದಸುರರಾಯನ । ಬೀಳುಕೊಂಡನಕಂಪನಿನ್ನೂ
ರೇಳಅಕ್ಷೋಹಿಣಿಯ ಸಂಖ್ಯೆಯಲಸಮ ಸಂಗರಕೆ
ಆಳ ಮೇಳಾಪದಲಿ ಕೈದುಗ । ಳೋಳಿವೆಳಗಿನಲಮರಸೇನಾ
ಜಾಲ ಸಹಿತಮರೇಂದ್ರ ಬಂದನು ನೋಡಲಾಹವವ ೫

ಹೇಳಲೇನದನಸುರ ಕೈದುಗ । ಳೋಳಿವೆಳಗಿನಲಿಭ ತುರಂಗ ಭ
ಟಾಳಿಗಳ ಮಣಿಗಣದ ಜೋಡಿನ ರಶ್ಮಿವೆಳಗಿನಲಿ
ಢಾಳಿಸಿತು ಥಳಥಳನೆ ಧ್ರುವನಿಂ । ಮೇಲುಭಾಗದಜಾಂಡ ಖರ್ಪರ
ಹೇಳದಿರ ರವಿ ಶಿಖಿ ಸುಧಾಕರರುಬ್ಬಟೆಯನೆಂದ ೬

ದಳಸಹಿತ ದಾಳಿಯಲಿ ದುರ್ಗವ । ನಿಳಿದನವನಂಬೋಧಿ ಮಗುಚಲು
ಮಳಲ ಮಣಿಯನಲಹೀಂದ್ರ ಮುಗ್ಗಿ ನಗೇಂದ್ರಕುಲ ಬಳುಕೆ
ಕಳವಳಿಸೆ ಕಮಠೇಂದ್ರ ನಂದಿಸೆ । ಬಲದ ಭಾರಕಿಭೇಂದ್ರಚಯ ಭಯ
ಬಳಿಸಲಿಸೆ ಬರ್ಹಿರ್ಮುಖೇಂದ್ರಾದ್ಯಖಿಳ ಸುರಬಲವ ೭

ಯುದ್ಧಕ್ಕೆ ಸಿದ್ಧವಾದರು. ೪. ಆಯುಧಗಳನ್ನು ಸಿದ್ಧಪಡಿಸಿಕೊಂಡು ಕುದುರೆ ಸವಾರರು, ಷಷ್ಟ್ಯಾಯಿನೀ ಮದದಾನೆಗಳ ಮಾವುತರು, ಕೀರ್ತಿಶಾಲಿ ರಥಾರೋಹಕರು, ಶೀಘ್ರಗತಿಯ ಕಾಲಾಳುಗಳು ಭೋರ್ಗರೆಯುವ ಅಸಂಖ್ಯಾತ ವಾದ್ಯಗಳ ಅಬ್ಬರದೊಡನೆ ರಾವಣನ ದುರ್ಗವನ್ನು ಇಳಿದು ಬಂದರು. ೫. ಆಸ್ಥಾನದಲ್ಲಿ ರಾಕ್ಷಸರಾಜನಿಂದ ಬೀಳ್ಕೊಂಡು ಅಕಂಪನು ಇನ್ನೂರು ಅಕ್ಷೋಹಿಣೀಸೈನ್ಯದೊಡನೆ ಆಯುಧಗಳ ಪ್ರಕಾಶದಲ್ಲಿ ಭಾರಿ ಕಾಳಗಕ್ಕಾಗಿ ಬಂದನು. ದೇವತೆಗಳ ಸೈನ್ಯದೊಡನೆ ದೇವೇಂದ್ರನು ಯುದ್ಧವನ್ನು ನೋಡಲೆಂದು ಬಂದನು. ೬. ಏನೆಂದು ವರ್ಣಿಸಲಿ, ರಾಕ್ಷಸರ ಅಸಂಖ್ಯಾತ ಆಯುಧಗಳ ಪ್ರಕಾಶ ಮತ್ತು ಆನೆ ಕುದುರೆ ಯೋಧರುಗಳ ಮೈಮೇಲಿನ ರತ್ನಗಳ ಹೊಳಪಿನ ರಾಶಿ ಒಟ್ಟುಗೂಡಿ ಧ್ರುವಲೋಕಕ್ಕಿಂತ ಮೇಲಿನ ಬ್ರಹ್ಮಾಂಡದ ಭಾಗವನ್ನು ಥಳಥಳನೆ ಬೆಳಗಿತು. ಇನ್ನು ಸೂರ್ಯ, ಅಗ್ನಿ, ಚಂದ್ರರುಗಳ ಹೆಚ್ಚಳವನ್ನು ಕುರಿತು ಹೇಳಬೇಡ, ಎಂದು ವರ್ಣಿಸಿದರು ವಾಲ್ಮೀಕಿಗಳು ೭. ಅಕಂಪನು ಸೈನ್ಯಸಮೇತ ಶತ್ರುಗಳ ಮೇಲೆ ದಾಳಿಮಾಡಲು ದುರ್ಗವನ್ನು ಇಳಿದುಬಂದನು. ಆ ರಭಸಕ್ಕೆ ಸಾಗರವು ಮಳಲನ್ನೆರಚಿತು. ಆದಿಶೇಷನು ಹೆಡೆಯಮಣಿಯನ್ನು ಬಾಗಿಸಿದನು. ಕುಲಪರ್ವತಗಳು ಬಳುಕಿದವು. ಕೂರ್ಮನು ಕಳವಳಗೊಂಡನು. ಸೈನ್ಯದ ಭಾರಕ್ಕೆ ದಿಗ್ಗಜಗಳು ಕುಸಿದವು, ದೇವೇಂದ್ರನೇ ಮೊದಲಾದ

ಅರಿಬಲದ ಗಮನವನು ಕಪಿಕುಲ । ದರಸ ಕಾಣುತ ಕಂಡು ಕಾಣದ
ಪರಿಯವೊಲು ಪರಮಾಣುವಿನ ಭಾವನೆಯ ಭಂಗಿಯಲಿ
ಇರಲು ಸಂಧಿಸಿದಧಿಕ ನಿರ್ಮಳ । ಪರಮವಿದ್ಯೆಯ ಮುಂದೆ ವಿದ್ಯೆಯ
ನೆರವಿ ನಿಲುಕುವವೋಲು ಮೊಳಗುವ ವಾದ್ಯರಭಸದಲಿ ೮

ಕೆಣಕುವನ್ನಬರಿವರು ಬಲುಸೈ । ರಣೆಯಲಿರ್ದರು ಶೂನ್ಯವಾದದ
ಕುಣಿಕೆಗೌಕುವ ತತ್ವಮಯಸಿದ್ಧಾಂತದೊಡ್ಡವದ
ಭಣಿತೆಯಲಿ ಬಳಿಕೊಕ್ಕಲಿಕ್ಕಿತು । ಕುಣಿದು ಕುಬುಬಿಬಿಸಿದಾಡಿ ಭೈರವ
ಗಣ ದಿನೇಂದ್ರ ಕುಲೇಂದ್ರಬಲವೆಲೆ ಕಂದ ಕೇಳೆಂದ ೯

ತೋಳ ತುಳುಕಿನ ಡೊಕ್ಕರದ ಕೈ । ಕಾಲು ಮೈದಳುಕುಗಳ ಮುಷ್ಟಿಯ
ಬಾಳಹತಿಗಳ ಬೆಟ್ಟದಿಡುಹುಗಳಸಿ ಮಹೀರುಹದ
ಬೋಳಿಗಳ ಕೈಗುಂಡುಗಳ ಬಲು । ಗಾಳಗದ ಭಾರಣೆಯ ಬಲುಹು ಭ
ಡಾಳಿಸುತಲಿರ್ದುದು ಚತುರ್ದಶಭುವನವೀಥಿಗಳ ೧೦

ಒತ್ತುಬರದಾಹವದ ಸೈನಿಕ । ದತ್ತಣಿತ್ತಣ ಬೊಬ್ಬೆಯುಬ್ಬರ
ವೆತ್ತುತಿರ್ದುದು ಕಮಲಜಾಂಡ ಖಟಾಹ ಖರ್ಪರವ
ಬಿತ್ತರಿಸಲರಿದಾದಿ ವೀರರ । ಹತ್ತುಗೆಯ ಹವಣುಗಳ ಸಂಗರ
ವೆತ್ತನೋಡಲು ಕೊಲೆಗೆ ಮೇಲದು ಬಲುಹದೀಗೆಂದ ೧೧

ದೇವತೆಗಳ ಗುಂಪು ಭಯಗೊಂಡಿತು. ೮. ಅತ್ಯಂತ ಪರಿಶುದ್ಧವಾದ ಮೋಕ್ಷ ವಿದ್ಯೆಯ ಎದುರಿನಲ್ಲಿ ಸಾಮಾನ್ಯ ವಿದ್ಯೆಗಳ ಸಮೂಹವು ನಿಲ್ಲುವಂತೆ ಶತ್ರುಸೈನ್ಯದ ಬರುವಿಕೆಯನ್ನು ವಾನರರಾಜ ಸುಗ್ರೀವನು ಚಿಕ್ಕ ಅಣುವಿನಂತೆ ಭಾವಿಸಿ ಕಂಡೂ ಕಾಣದಂತಿದ್ದನು. ವಾದ್ಯಗಳು ರಭಸದಿಂದ ಮೊಳಗಿದವು. ೯. ಶೂನ್ಯವಾದದ ಕುಣಿಕೆಗೆ ಸಿಕ್ಕಿಕೊಳ್ಳುವ ತತ್ವದಿಂದೊಡಗೂಡಿದ ನಿರ್ಣಯಗಳ ರೀತಿಯಲ್ಲಿ ರಾಕ್ಷಸರು ಕೆಣಕುವವರೆಗೂ ಇವರು ಬಹಳ ತಾಳ್ಮೆಯಿಂದ ಇದ್ದರು. ಅನಂತರ ಶಿವನಗಣದಂತೆ ಇದ್ದ ಸೂರ್ಯವಂಶದ ರಾಮನ ಸೈನ್ಯವು ಕುಣಿದು ಕುಬುಬೆಂದು ಕೂಗಿ ಶತ್ರುಗಳನ್ನು ಬಡಿದುಹಾಕಿತು. ೧೦. ತೋಳನ್ನು ಬೀಸುವ, ಗುದ್ದುವ, ಕೈಕಾಲು ಮೈಗಳನ್ನು ತೊಡಕಿಸುವ, ಮುಷ್ಟಿಯಿಂದ ಅಪ್ಪಳಿಸುವ, ಕತ್ತಿಯಿಂದ ಹೊಡೆಯುವ, ಪ್ರತಿಯಾಗಿ ಬೆಟ್ಟಗಳನ್ನು ಬೀಸಿ ಎಸೆಯುವ, ಖಡ್ಗ ಮತ್ತು ಮರಗಳನ್ನು ಹೊಡೆಯುವ, ಬೋಳೆಯೆಂಬ ಕೈಗುಂಡುಗಳನ್ನು ಎದುರುಬದರಾಗಿ ಪ್ರಯೋಗಿಸುವ ಭಾರಿ ಯುದ್ಧದ ಬಿರುಸು ಹದಿನಾಲ್ಕು ಲೋಕಗಳ ಬೀದಿಗಳಿಗೂ ನುಗ್ಗಿತು. ೧೧. ರಭಸದ ಯುದ್ಧದಲ್ಲಿ ಆ ಕಡೆಯ ಈ ಕಡೆಯ ಸೈನ್ಯದ ಬೊಬ್ಬೆಯ ಗಲಾಟೆಯಿಂ ಬ್ರಹ್ಮಾಂಡಗೋಲದ ಹೋಳನ್ನು ಮೇಲಕ್ಕೆತ್ತುತ್ತಿತ್ತು. ಅದನ್ನು ವರ್ಣಿಸಲಸಾಧ್ಯ. ಆ ವೀರರ ನಡುವಿನ ಹೊಂದಿಕೆಯಾದ ಯುದ್ಧವನ್ನು ಎತ್ತಣಿಂದ ನೋಡಿದರೂ ಕೊಲೆಗೆ ಮೇಲಾಗಿ ಪ್ರಬಲ

ಅಳಿದುಭಯ ಸೈನಿಕವನಡಕಿದು । ಬಳಲಿ ಭೂತವ್ರಾತ ಬೆವರನು
ತೊಳೆದುಕೊಂಡವು ಹರಿವ ರಕುತದ ಹೊಳೆಯೊಳಗಲದಲಿ
ಹೊಳಲಿಗಸುಗಳನೊಯ್ವ ಜವನವ । ರಳವಳಿದು ಬಾಯಾರಿ ಬಿಡುಪ
ಕ್ಕಲೆಗಳಲಿ ತುಂಬಿದರು ರಕುತವನಾಜಿರಂಗದಲಿ ೧೨

ಮುಱಿದುದುಭಯದ ಚೂಣಿ ಹೂಣಿಸಿ । ತಱುಬಿದನು ತವಕದಲಕಂಪನ
ನುಱುಬು ಕಣೆಗಳಲಿಭತುರಂಗಮ ರಥಪದಾತಿಯಲಿ
ಮುಱಿದುದಿನಸುತ ನೋಡು ಮುಂದಕೆ । ತೆಱಹುಗೊಟ್ಟುದು ಬಟ್ಟೆ ಬಿದ್ದುದು
ಹರಿಬ ಹನುಮನ ಮೇಲೆ ಬಲುಗಾಳಗವಕಂಪನನ ೧೩

ತಿರುಗಿ ಮುಱಿದೌಕುವ ಗವಾಕ್ಷನ । ನುರುಳಲೆಚ್ಚನು ಗಂಧಮಾದನ
ನುರದೊಳೊಱತೆಯ ತೋಡಿದನು ತುಳುಕಿದನು ಶ್ರೋಣಿತವ
ಶರಭ ಶತಬಲಿ ಗಜ ಗವಯ ಕೇ । ಸರಿ ಮಯಿಂದ ರುಮಾದಿಗಳ ಸಂ
ಗರದ ಭಂಗವ ಮಾಡಿ ಕೆಣಕಿದನನಿಲನಂದನನ ೧೪

ಮುಳಿದರಾರ್ಕೈ ನಿಲುವವರು ಮೈ । ಥಿಲಿಯಗಂಡನ ಗರುವ ಕಿಂಕರ
ನೊಳಗೆ ಕದನದಲಸುರ ಸುರ ಮಾನವ ಭುಜಂಗರಲಿ
ಮಲೆತು ಮೋಹಿದ ಗಜ ತುರಂಗಾ । ವಳಿ ವರೂಥ ಪದಾತಿ ಹರಿಪದ
ವಳಯದಲಿ ವರ್ಧಿಸಿತು ಹರಿಕಿಂಕರನ ಕದನದಲಿ ೧೫

ವಾಗಿರುವಂತೆ ಗೋಚರಿಸುತ್ತಿತ್ತು. ೧೨. ಯುದ್ಧದಲ್ಲಿ ಮಡಿದ ಎರಡು ಕಡೆಯ ಸೈನಿಕರನ್ನೂ ಒಂದು ಕಡೆ ರಾಶಿ ಹಾಕಿ ಭೂತಗಳು ಆಯಾಸಗೊಂಡು ಯುದ್ಧರಂಗದಲ್ಲಿ ಹರಿಯುತ್ತಿದ್ದ ರಕ್ತದ ಹೊಳೆಯಲ್ಲಿ ಮಿಂದು ಮೈಬೆವರನ್ನು ತೊಳೆದುಕೊಂಡವು, ಯಮನ ದೂತರು ಯಮಪಟ್ಟಣಕ್ಕೆ ಸತ್ತವರ ಪ್ರಾಣಗಳನ್ನು ಹೊತ್ತು ಹೊತ್ತು ಬಳಲಿ ಬಾಯಾರಿ ಕುಡಿಯಲು ಪಕ್ಕಲೆ (ನೀರು ತುಂಬುವ ಚರ್ಮದ ಚೀಲ) ಗಳಲ್ಲಿ ರಕ್ತವನ್ನು ತುಂಬಿಕೊಂಡರು. ೧೩. ಎರಡು ಕಡೆಯ ಮುಂಗುಡಿಯ ಸೈನ್ಯವು ಚದುರಿತು. ಆಣೆಯಿಡುತ್ತ ಅಕಂಪನನು ವೇಗವಾಗಿ ಬಾಣಗಳನ್ನು ಬಿಡುತ್ತ ಆನೆ ಕುದುರೆ ರಥ ಕಾಲಾಳುಗಳೊಡನೆ ವಾನರಸೈನ್ಯವನ್ನು ಅಡ್ಡಹಾಕಿ, “ಸುಗ್ರೀವ ನೋಡು, ಸೈನ್ಯವು ಸೋತುಹೋಯಿತು, ಮುನ್ನುಗ್ಗಲು ಸೈನ್ಯವು ದಾರಿ ಬಿಟ್ಟುಕೊಟ್ಟಿತು. ಅಕಂಪನನೊಡನೆ ದೊಡ್ಡ ಹೋರಾಟದ ಭಾರವು ಹನುಮಂತನ ಮೇಲೆ ಬಿದ್ದಿತು” ಎಂದನು. ೧೪. ಪುನಃ ತಿರುಗಿ ಮೇಲೆಬೀಳುವ ಗವಾಕ್ಷನು ಉರುಳುವಂತೆ ಅವನ ಮೇಲೆ ಬಾಣಬಿಟ್ಟನು ; ಗಂಧಮಾದನನ ಎದೆಯನ್ನು ತೋಡಿ ರಕ್ತದ ಒರತೆಯನ್ನು ಹರಿಸಿದನು. ಶರಭ, ಶತಬಲಿ, ಗಜ, ಗವಯ, ಕೇಸರಿ, ಮೈಂದ ರುಮನೇ ಮೊದಲಾದವರ ಯುದ್ಧವನ್ನು ಮುರಿದು ಅಕಂಪನನು ಮಾರುತಿಯನ್ನು ಕೆಣಕಿದನು. ೧೫. ಮೈಥಿಲಿಯ ಗಂಡ ಶ್ರೀರಾಮನ ಕಿಂಕರ ಹನುಮಂತನು ಕೆರಳಿದರೆ ರಾಕ್ಷಸರು, ದೇವತೆಗಳು, ಮಾನವರು ಮತ್ತು ಸರ್ಪರುಗಳಲ್ಲಿ ಯಾರುತಾನೆ ಎದುರಿಸಿ ನಿಲ್ಲಬಲ್ಲರು. ಶ್ರೀಹರಿಯ ಕಿಂಕರನ ಕಾಳಗದಲ್ಲಿ ಸೊಕ್ಕಿನಿಂದ ಕವಿಯುವ ಆನೆ ಕುದುರೆ ರಥ ಕಾಲಾಳು

ಮುಱಿದ ಬಲ ಲಂಕಾಭಯಂಕರ । ನುಱುಬೆಗಾನುತ ಸಂಧಿಸಿತು ಕೈ
ಮಱೆದನೇ ಖಳವೀರನೆಸುತಿರ್ದನು ನಭೋಗಣದ
ತೊಱೆಯ ಜಲ ಕೆಂಪಾಗೆ ಕಪಿಗಳ । ಹಱಿದಲೆಯ ರಕುತದಲಿ ಹನುಮನ
ನಱಸಿ ಹೂಳಿದನಸುರನಸಮ ಶರೌಘಶರಧಿಯಲಿ ೧೭

ಅಹಹ ಹನುಮನ ಹವಣದೇನಾ । ಗಿಹುದೊ ಸೈರಣೆಗುಚಿತವಲ್ಲೆನು
ತಹಿಮಕರಸುತ ನೀಲ ನಳ ಜಾಂಬವ ಸುಷೇಣಕರು
ಬಹಳ ಬಲಸಹಿತಬ್ಬರಣೆ ಮಿಗೆ । ಮಹಿಜಕುಲ ಕುಲಪರ್ವತಂಗಳ
ಬಹಳತೆಯ ಭಾರದಲಿ ಮುಕ್ಕುಱುಕಿದರಕಂಪನನ ೧೭

ಸಾಲ ಬಕುಳ ಕರಂಜಿ ಕಮ್ಮರ । ಬೇಲ ಬೇವಿಬ್ಬಡಲಿ ತೇಗರು
ತಾಳ ತಂಡಸ ತಡಸ ತುಗ್ಗಿಲು ತದಿಕು ತಪಸಿಗಳ
ಜಾಲ ಗೇರಸೆ ನೆಲ್ಲಿ ಬಿಲ್ವ ತ । ಮಾಲತರು ಮೊದಲಾದ ವನಭೂ
ಜಾಳಿಯಲಿ ಹೂಳಿದರಕಂಪನನಸಮ ರಣರಥವ ೧೮

ಮುಱಿಮುಱಿದು ಗಿರಿದುದಿಗಳಲಿ ಹಾ । ಸಱೆಗಳಲಿ ಹೆಗ್ಗುಂಡಿನಲಿ ಬಲು
ಬಱೆಗಳಲ್ಲಿ ಬಿಡುಗಲ್ಗಳಲಿ ಬೊಬ್ಬಱಿದು ರಿಪುಭಟನ
ತಱುಬಿದರು ತರುಗಿರಿಯ ಮುಱಿದುಱೆ । ಕೊಱೆದು ಸೂಸಿದು ಹರಿಬಲವ ಹೆ
ದ್ದೊಱೆಯವೊಲು ಹರೆಗಡಿದು ಹಾಯ್ಸಿದನಸುರ ನಿಜರಥವ ೧೯

ಗಳು ಆಕಾಶವನ್ನು ತುಂಬಿಬಿಟ್ಟವು. ೧೬. ಚದುರಿಹೋಗಿದ್ದ ವಾನರಸೈನ್ಯವು ಲಂಕಾಭಯಂಕರ ಹನುಮಂತನ ಪರಾಕ್ರಮವನ್ನು ಬೆಂಬಲಿಸಿ ರಾಕ್ಷಸಸೈನ್ಯವನ್ನು ಎದುರಿಸಿತು. ರಾಕ್ಷಸವೀರ ಅಕಂಪನನು ಕೈಮರೆತು ನಿಲ್ಲಲಿಲ್ಲ. ಕಪಿಗಳ ತಲೆಯೊಡೆದು ಚಿಮ್ಮಿದ ರಕ್ತದಿಂದ ಆಕಾಶಗಂಗೆಯ ನೀರು ಕೆಂಪಾಗುವಂತೆ ಬಾಣಗಳನ್ನು ಬಿಟ್ಟನು. ಬಳಿಕ ಅಕಂಪನನು ಹನುಮಂತನನ್ನು ಹುಡುಕಿ ಅವನನ್ನು ಬಾಣಗಳ ಸಮುದ್ರದಲ್ಲಿ ಮುಳುಗಿಸಿದನು. ೧೭. 'ಅಹಹ, ಹನುಮಂತನ ಸ್ಥಿತಿ ಏನಾಗಿದೆಯೋ ? ತಾಳ್ಮೆಯಿಂದಿರುವುದುಚಿತ್ತವಲ್ಲ' ಎನ್ನುತ್ತ ಸೂರ್ಯನಮಗ ಸುಗ್ರೀವ, ನೀಲ, ನಳ, ಜಾಂಬವ, ಸುಷೇಣಕರು ಬಹಳ ಸೈನ್ಯದೊಡನೆ ಬೊಬ್ಬೆಹಾಕುತ್ತ ಭಾರವಾದ ಮರಗಳನ್ನೂ ಬೆಟ್ಟಗಳನ್ನೂ ಹೊತ್ತುಕೊಂಡು ಬಂದು ಅಕಂಪನನನ್ನು ಮುತ್ತಿದರು. ೧೮. ಸಾಲವೃಕ್ಷ, ಬಕುಳ, ಕರಂಜಿ, ಕಮ್ಮರ, ಬೇಲ, ಬೇವು, ಬೀಟೆ, ತೇಗ, ಅಂಟುವಾಳ, ತಂಡಸು, ತಡಸಲು, ಆನೆಬೇಲ, ತಪಸಿ, ಗೇರಸೆ, ನೆಲ್ಲಿ, ಬಿಲ್ವ, ಹೊಂಗೆ ಮೊದಲಾದ ಕಾಡುಮರಗಳಿಂದ ವಾನರವೀರರು ಅಕಂಪನನ ಅಸಾಧಾರಣವಾದ ರಥವನ್ನು ಮುಚ್ಚಿಬಿಟ್ಟರು. ೧೯. ವಾನರವೀರರು. ಕೋಡುಗಲ್ಲುಗಳು, ಚಪ್ಪಡಿಗಳು, ಭಾರಿಗುಂಡುಗಳು, ದೊಡ್ಡ ಬಂಡೆಗಳು ಮತ್ತು ಬಿಡುಗಲ್ಲುಗಳನ್ನು ತಿರುತಿರುಗಿ ಎಸೆದು ಬೊಬ್ಬಿರಿದು ಶತ್ರುವೀರನನ್ನು ಅಡ್ಡಗಟ್ಟಿದರು. ಅಕಂಪನನು ಬೆಟ್ಟಮರಗಳನ್ನು ಮುರಿದು. ಕೊರೆದು ಚೆಲ್ಲಿ ವಾನರಸೈನ್ಯವನ್ನು ನಡುವೆ ಕತ್ತರಿಸಿ ದೊಡ್ಡನದಿಯಂತೆ ದಾರಿ ಮಾಡಿಕೊಂಡು ತನ್ನ

ಆತು ನಿಂದ ಸುಷೇಣ ಜಾಂಬವ । ವೀತಿಹೋತ್ರಜ ಬಲಮಹಾಬ್ಧಿಗೆ
ಸೇತುವನು ಕಟ್ಟಿದನು ಬಾಣಶಿಲಾ ಪ್ರಕೀರ್ಣದಲಿ
ವ್ರಾತದೇನುಳಿದಂಗದಾದಿ ಮ । ಹಾತಿಬಲರನು ಲಯದ ಹುತವಹ
ರೇತನವೊಲೊಡೆದುಳಿದು ಹಾಯ್ಸಿದನಸುರ ಮಣಿರಥವ ೨೦

ಮುಱಿಯಲೆಚ್ಚನು ಮುಂಚಿ ಮುಂದಣ । ತಱುಬಿದೊಡ್ಡನು ಬಲದಲೌಕಿದ
ನಿಱಿಸಿನಾಹವ ಮೋಹರವ ಮೆದೆಗೆಡಹಿದನು ನೆಲಕೆ
ಜಱಿದು ಕವಿದಿಡುವದಟ ಕಪಿಗಳ । ನುಱುಬಿ ಗುಮ್ಮಿದನಿನಕುಲೇಂದ್ರನ
ನಱಸಿ ಹೊಕ್ಕನಕಂಪನನುಪಮ ರಾಜಮೋಹರವ ೨೧

ಇವನದಾರೈ ರಾಕ್ಷಸಾಂಬರ । ದಿವಸಕರ ಕಟಕದಲಿ ಬಲ್ಲಿದ
ನಿವನು ಕೋಳಾಹಳಿಸಿದನು ಕಪಿಬಲದೊಳಗಲದಲಿ
ಬವರ ನೋಡಲು ಲೇಸು ಮಹದು । ತ್ಸವವ ಬೀಱಿದನಿವಗೆ ಪೆಸಳೇ
ನಿವನ ಹೇಳೆಂದರಸ ಬೆಸಗೊಂಡನು ವಿಭೀಷಣನ ೨೨

ಜೀಯ ಸಮರದ ಸಪ್ತ ಸೇನಾ । ನಾಯಕರಿಗಿವ ಮೊದಲಿಗನು ವ
ಜ್ರಾಯುಧನ ಗೆಲುವಂದು ಜಯವಾಯ್ತಿವನ ದೆಸೆಯಿಂದ
ಸಾಯಕದ ಕಟ್ಟಿಸುಗೆಯಲಿ ಕಾ । ತ್ಯಾಯಿನೀಶಂಗೆಣೆ ರಣಾಂಗಣ
ದಾಯ ಬಲುಹೀ ಖಳನಕಂಪನನೆಂಬ ಪೆಸರೆಂದ ೨೩

ರಥವನ್ನು ಓಡಿಸಿದನು. ೨೦ ಎದುರಿಸಿ ನಿಂತ ಸುಷೇಣ, ಜಾಂಬವ, ನೀಲ ಇವರುಗಳ ಸೈನ್ಯಸಾಗರಕ್ಕೆ ಬಾಣಗಳೆಂಬ ಕಲ್ಲುಗಳಿಂದ ಅಕಂಪನನು ಸೇತುವೆಯನ್ನು ಕಟ್ಟಿದನು. ಉಳಿದ ಅಂಗದನೇ ಮೊದಲಾದ ಮಹಾವೀರರ ಮೇಲೆ ಪ್ರಳಯರುದ್ರನಂತೆ ರಾಕ್ಷಸನು ತನ್ನ ರಥವನ್ನು ಓಡಿಸಿದನು. ೨೧. ಎದುರುಗಡೆಯಿಂದ ಬಂದು ಅಡ್ಡಗಟ್ಟಿದ ಸೈನ್ಯವನ್ನು ಅಕಂಪನನು ಬಾಣವನ್ನು ಬಿಟ್ಟು ಚದುರಿಸಿದನು, ಬಿರುಸಿನಿಂದ ವ್ಯೂಹದೊಡನೆ ಮುತ್ತಿದ ಸೈನ್ಯವನ್ನು ಕತ್ತರಿಸಿ ನೆಲದಮೇಲೆ ರಾಶಿಹಾಕಿದನು. ಜರೆಯುತ್ತ ಮುತ್ತಿ ಹೊಡೆಯುವ ಬಲಶಾಲಿ ಕಪಿಗಳನ್ನು ಹೊಡೆದು ಎಗರಿಸಿದನು. ಅನಂತರ ಅಕಂಪನನು ರಾಮನನ್ನು ಹುಡುಕುತ್ತ ರಾಜಸೈನ್ಯವನ್ನು ಪ್ರವೇಶಿಸಿದನು. ೨೨. "ರಾಕ್ಷಸರೆಂಬ ಗಗನಕ್ಕೆ ಸೂರ್ಯನಂತಿರುವ ಇವನು ಯಾರು ? ಇವನು ಸಮರ್ಥನಾಗಿದ್ದಾನೆ. ಕಪಿಸೈನ್ಯದಲ್ಲೆಲ್ಲ ಕೋಲಾಹಲವುಂಟುಮಾಡಿದ್ದಾನೆ. ಇವನ ಯುದ್ಧವು ನೋಡಲು ಚೆನ್ನ. ನಮಗೆ ಸಂತೋಷವನ್ನುಂಟುಮಾಡಿದ್ದಾನೆ. ಇವನ ಹೆಸರೇನು, ಹೇಳು" ಎಂದು ರಾಮನು ವಿಭೀಷಣನನ್ನು ಪ್ರಶ್ನಿಸಿದನು. ೨೩. "ಸ್ವಾಮಿ, ಯುದ್ಧದ ಏಳುಜನ ಸೇನಾನಾಯಕರಲ್ಲಿ ಇವನು ಮೊದಲನೆಯವನು. ದೇವೇಂದ್ರನೊಡನೆ ನಡೆದ ಯುದ್ಧದಲ್ಲಿ ಇವನಿಂದ ಗೆಲುವಾಯಿತು. ಬಾಣಪ್ರಯೋಗದಲ್ಲಿ ಶಿವನಿಗೆ ಸಮಾನ. ಯುದ್ಧದಲ್ಲಿ ಇವನದು ಹೆಚ್ಚಿನ ಪರಾಕ್ರಮ. ಇವನಿಗೆ ಅಕಂಪನ ಎಂದು ಹೆಸರು" ಎಂದು ವಿಭೀಷಣ ಹೇಳಿದ.

ಅಹುದು ಸಂಶಯವಿಲ್ಲ ಸಾಹಸಿ । ಯಹನು ಸಂಗರಸಮಯವನು ನಿ
ರ್ವಹಿಸಬಲ್ಲವ ಬಿಲ್ಲಿನಲಿ ಬಲುಬಂಟನಹನೆನುತ
ಸಹಭವನ ಮೊಗನೋಡಲಮರರ । ಕಹಳೆಗಳ ಕಳಕಳದಲಲ್ಲಿಗೆ
ವಹಿಲದಲಿ ವಿಸ್ಮಿತ ಬಲಾನ್ವಿತ ಹನುಮ ಹರಿತಂದ ೨೪

ಏನೆಲವೊ ರಘುರಾಯರಲಿ ಸು । ಮ್ಮಾನವೇ ನಿನಗಕಟ ಶರಸಂ
ಧಾನವೇ ಕೋದಂಡದೀಕ್ಷಾಚಾರ್ಯನಿದಿರಿನಲಿ
ಆ ನರೇಂದ್ರನ ಸೇವೆಗಾಱರು । ಮಾನಿಸರು ನಾವ್ ಸಾಕು ನಿನಗೆ
ಮ್ಮಾನಿಕೆಯ ನೋಡೆನುತ ಬೊಬ್ಬಿಱಿದೆಱಗಿದನು ಖಳನ ೨೫

ಮದಿಸಿ ಮಲೆತಾಹವದ ಗಜ ಹರಿ । ಪದವಿಘಾತಿಗೆ ಕೆಡೆವವೊಲು ಕೆಡೆ
ದೊದೆದು ಕೊಂದನಕಂಪನನನುಕಂಪದಲಿ ಕಳನೊಳಗೆ
ಇದಱ ಘೋರಕಕಂಪನೆಂಬ । ಗ್ಗದ ಮಹಾಹ್ವಯವೇಕೆ ನಾಯ್ಗಳ
ಬದುಕ ಸುಡುಸುಡೆನುತ್ತಲೊದೆದನು ವಾಮಪಾದದಲಿ ೨೬

ಕಳಚಿ ಸಿಡಿದವು ನೆಲಕೆ ಚವುಕದ । ಹಲುಗಳಡಿಮೇಲಾದವಾಲಿಗ
ಳಳಿದುದಾನನದಿಂದ ಮೂಗಿನಲರುಣಜಲಧಾರೆ
ಸುಳಿದರಾ ಸಮಯದಲಿ ಜವನವ । ರಳಿದ ಹೆಣನನು ಹೊತ್ತುಕೊಂಡರು
ಖಳನ ಹಸುಗೆಯ ಕಾಪಿಗರು ಹರಸುತ ಸಮೀರಜನ ೨೭

೨೪. "ಹೌದು, ನೀನು ಹೇಳಿದುದರಲ್ಲಿ ಸಂಶಯವಿಲ್ಲ. ಅವನು ಸಾಹಸಿಯೇನೋ ನಿಜ. ಯುದ್ಧದ ಜವಾಬ್ದಾರಿಯನ್ನು ನಿರ್ವಹಿಸಬಲ್ಲವ ಇವನು. ಬಿಲ್ವಿದ್ಯೆಯಲ್ಲಿ ಒಳ್ಳೆಯ ಶೂರನಾಗಿದ್ದಾನೆ" ಎನ್ನುತ್ತ ತಮ್ಮನ ಮುಖವನ್ನು ನೋಡಿದನು. ಅಷ್ಟುಹೊತ್ತಿಗೆ ದೇವತೆಗಳ ಕಹಳೆಗಳ ಶಬ್ದದೊಡನೆ ಆಶ್ಚರ್ಯಕರ ಬಲಶಾಲಿ ಹನುಮಂತನು ವೇಗವಾಗಿ ಅಲ್ಲಿಗೆ ಬಂದನು. ೨೫. "ಏನೋ, ರಘುವಂಶದ ರಾಜರೊಡನೆ ನಿನಗೆ ತಮಾಷೆಯೇ ? ಬಿಲ್ವಿದ್ಯಾಗುರುವಿನ ಎದುರಿಗೆ ನೀನು ಬಾಣಪ್ರಯೋಗ ಮಾಡುವೆಯಾ ? ಆ ಮಾನವಶ್ರೇಷ್ಠ ರಾಮನ ಕಿಂಕರರು ಮಾನವರು. ನಾವೇ ಸಾಕು ನಿನಗೆ. ನಮ್ಮ ಪ್ರತಿಭಟನೆಯನ್ನು ನೋಡು" ಎನ್ನುತ್ತ ಹನುಮಂತ ಅಕಂಪನನ ಮೇಲೆ ಬಿದ್ದನು. ೨೬. ಮದದಿಂದ ಸೊಕ್ಕಿದ ಯುದ್ಧದಾನೆಯು ಸಿಂಹದ ಕಾಲಿನ ಹೊಡೆತಕ್ಕೆ ಕೆಳಗೆ ಬೀಳುವಂತೆ ನೆಲಕ್ಕುರುಳುವ ಹಾಗೆ ಒದೆದು ಅಕಂಪನನನ್ನು ಸಹಾನುಭೂತಿಯಿಂದ ಹನುಮಂತನು ಕೊಂದು ಹಾಕಿದನು. "ಈ ಮಹಾಪರಾಕ್ರಮಕ್ಕೆ ಅಕಂಪನನೆಂಬ ದೊಡ್ಡ ಹೆಸರೇಕೆ ? ನಾಯಿಗಳ ಬದುಕನ್ನು ಸುಡುಸುಡು" ಎನ್ನುತ್ತ ಹನುಮಂತನು ಎಡಗಾಲಿನಿಂದ ಅಕಂಪನನನ್ನು ಒದೆದನು. ೨೭. ರಾಕ್ಷಸನ ಚೌಕವಾದ ಹಲ್ಲುಗಳು ಮುರಿದು ಸಿಡಿದವು ; ಕಣ್ಣುಗುಡ್ಡೆಗಳು ಅಡಿಮೇಲಾದವು ; ಬಾಯಿ ಮೂಗುಗಳಿಂದ ರಕ್ತವು ಸುರಿಯಿತು. ಆ ಹೊತ್ತಿಗೆ ಯಮನಾಳುಗಳು ಬಂದರು. ರಾಕ್ಷಸನ ಹೆಣವನ್ನು ಹಂಚಿಕೊಳ್ಳಲು ಕಾದಿದ್ದ ಭೂತಗಳು

ಅಟ್ಟಿದನು ಬಳಿಕುಳಿದ ರಕ್ಕಸ । ಘಟ್ಟಿಯರ ನಡೆಗೆಡಹುತಸುರನ
ಪಟ್ಟಣದ ಪಡಿಯಂಗಳು ಪರಿಯಂತೀತನುಬ್ಬಟೆಗೆ
ದಿಟ್ಟಿಗಳು ಕೋರೈಸಿ ತನ್ನುವ । ನಟ್ಟದಿರನೆಂದಂಜಿ ರವಿ ಕಂ
ಗೆಟ್ಟು ಹೊಕ್ಕನು ಜಲವನುಱೆ ಬಗಿದಪರಜಲಧಿಯಲಿ ೨೮

ಮುರಿದನಲ್ಲಿಂ ಮೇಲೆ ಮಾರುತಿ । ಹರುಷರಸದುಬ್ಬಿನಲಿ ತೊರವೆಯ
ಪುರವರಾಧಿಪನಿನತನೂಜಾದಿಗಳ ಗಡಣದಲಿ
ತಿರುಗಿದನು ಪಾಳೆಯಕೆ ಲಂಕಾ । ಪುರಕೆ ಮುತ್ತಿಗೆಯಾದುದಾದಿನ
ದಿರುಳುಮುಖದಲಿ ಮುಟ್ಟಳದ ಕಟ್ಟಳೆಯ ಕಾಹಿನಲಿ ೨೯

ಹನುಮಂತನನ್ನು ಹರಸುತ್ತ ಹೆಣವನ್ನು ಹೊತ್ತುಕೊಂಡವು. ೨೮. ಇನ್ನು ಉಳಿದ ರಾಕ್ಷಸವೀರರನ್ನು ನಡೆಗೆಡಿಸಿ ಲಂಕಾನಗರದ ಪ್ರತಿಅಗಳಿನವರೆಗೆ ಅಟ್ಟಿದನು. ಮಹಾ ಪರಾಕ್ರಮದ ದೃಷ್ಟಿಯ ಉಗ್ರಪ್ರಕಾಶದಿಂದ ಈತನು ತನ್ನನ್ನು ಓಡಿಸದೆ ಬಿಡುವುದಿಲ್ಲ ಎಂದು ಭಯಪಟ್ಟು ಕಂಗೆಟ್ಟ ಸೂರ್ಯನು ನೀರನ್ನು ಬಗೆದುಕೊಂಡು ಹೋಗಿ ಪಶ್ಚಿಮ ಸಮುದ್ರದಲ್ಲಿ ಮುಳುಗಿದನು. ೨೯. ಅನಂತರ ಮಾರುತಿಯು ಸಂತೋಷಾಧಿಕ್ಯದಿಂದ ಹಿಂದಿರುಗಿದನು. ತೊರವೆಯಧಿಪತಿಯು ಅವತಾರಪುರುಷ ರಾಮನು ಸುಗ್ರೀವನೇ ಮೊದಲಾದವರೊಡನೆ ಪಾಳಯಕ್ಕೆ ಹಿಂದಿರುಗಿದನು. ಆ ದಿನ ರಾತ್ರಿಯ ಆರಂಭದಲ್ಲಿ ಮುಟ್ಟಳೆಯ (?) ಕಟ್ಟುನಿಟ್ಟಾದ ಕಾವಲಿನಲ್ಲಿ ಲಂಕಾಪಟ್ಟಣದ ಮೇಲೆ ಮುತ್ತಿಗೆ ಹಾಕಿದರು.

# ಹತ್ತೊಂಬತ್ತನೆಯ ಸಂಧಿ

ಸೂಚನೆ॥ ಅಪ್ರತಿಮ ರಣರಂಗವಿಜಯಭು । ಜಪ್ರತಾಪನನಸುರಸೇನಾ
ನಿ ಪ್ರಹಸ್ತನ ಕೆಡಹಿದನು ಸಮರದಲಿ ಕಲಿ ನೀಲ

ಇರುಳಿನೋಲಗದೊಳಗಕಂಪನ । ಮರಣವಾರ್ತೆಯನಸುರಚಕ್ರೇ
ಶ್ವರನ ಸಭೆಯಲಿ ಹರಹಿದರು ಹರಿಕಾಱರೈತಂದು
ಹರೆದುದೋಲಗವಾಕ್ಷಣದಲು । ಬ್ಬರದ ಚಿಂತೆಯಲಾ ಪ್ರಹಸ್ತನ
ಕರೆಸಿಕೊಳುತೇಕಾಂತಭವನಕೆ ಬಂದನಸುರೇಂದ್ರ ೧

ರಕ್ಕಸರು ನಾವೆಂಬ ಭುಜಬಲ । ದುಕ್ಕು ಮುಱಿದುದು ಕದನದಲಿ ಜಯ
ವಕ್ಕಿತಿಂದೀ ನೆಲೆಗೆ ರಿಪುನೃಪ ಕಪಿವರೂಥಿನಿಗೆ
ಒಕ್ಕರಸುಗಳ ನಮ್ಮವರು ಗಹಿ । ಲಿಕ್ಕಿ ನಗುವಂತಾಯ್ತು ದಿವಿಜರಿ
ದಕ್ಕುಪಾಯವನೇನನೆಣಿಸಿದೆಯೆಂದನಸುರೇಂದ್ರ ೨

ಎಣಿಕೆಯಾವುದು ಜೀಯ ಜವನನು । ಗಣಿಸದತಿಬಲರಳಿದರೀ ಕಪಿ
ಗಣದ ರಣದಲಿ ರಾಮಲಕ್ಷ್ಮಣರಾಜಿಯಿನ್ನೆಂತೊ
ರಣಗಲಿಯೆ ಚಿತ್ತೈಸು ನರನೆಂ । ಬೆಣಿಕೆ ತೋಱದು ರಾಮನಲಿ ನೆಱೆ
ಕೆಣಕಿದವು ಮುಟ್ಟಿರ್ದ ಕಲ್ಪದ ಕಿಚ್ಚು ನಾವೆಂದ ೩

ಸೂಚನೆ॥ ಯುದ್ಧವಿಜಯದಲ್ಲಿ ಅಸಮಾನ ಪರಾಕ್ರಮಶಾಲಿಯಾದ ರಾಕ್ಷಸ ಸೇನಾಧಿಪತಿ ಪ್ರಹಸ್ತನನ್ನು ಯುದ್ಧದಲ್ಲಿ ವೀರ ನೀಲನು ಕೊಂದನು. ೧. ರಾತ್ರಿಯ ರಾಜಸಭೆಯಲ್ಲಿ ಬೇಹಿನವರು ಬಂದು ಅಕಂಪನನ ಸಾವಿನ ಸುದ್ದಿಯನ್ನು ತಿಳಿಸಿದರು. ಸಭೆಯು ಮುಕ್ತಾಯವಾಯಿತು. ಆಕ್ಷಣ ಅತಿಶಯ ಚಿಂತೆಯಿಂದ ರಾವಣನು ಪ್ರಹಸ್ತನನ್ನು ಕರೆಸಿಕೊಂಡು ಏಕಾಂತಗೃಹಕ್ಕೆ ಬಂದನು. ೨. "ನಾವು ರಾಕ್ಷಸರೆಂಬ ತೋಳ್ಬಲದ ಗರ್ವ ಮುರಿಯಿತು. ಶತ್ರುರಾಜನ ಕಪಿಸೈನ್ಯಕ್ಕೆ ಕಾಳಗದಲ್ಲಿ ಇಲ್ಲಿಯವರೆಗೆ ಜಯ ದೊರೆಯಿತು. ನಮ್ಮವರು ಪ್ರಾಣಗಳನ್ನು ಕಳೆದುಕೊಂಡರು. ದೇವತೆಗಳು ನಮ್ಮನ್ನು ನೋಡಿ ಗಹಗಹಿಸಿ ನಗುವಂತಾಯಿತು. ಇದಕ್ಕೆ ಏನು ಉಪಾಯವನ್ನು ಯೋಚಿಸಿದ್ದೀಯೆ ?" ಎಂದು ರಾವಣ ಕೇಳಿದ. ೩. "ಇದರಲ್ಲಿ ಯೋಚನೆಯೇನು ಪ್ರಭು. ಯಮನನ್ನು ಲೆಕ್ಕಿಸದ ನಮ್ಮ ಕಡೆಯ ಮಹಾಬಲಶಾಲಿಗಳು ಕಪಿಗಳ ಕದನದಲ್ಲಿ ನಾಶವಾದರು. ಇನ್ನು ರಾಮ ಲಕ್ಷ್ಮಣರ ಯುದ್ಧವು ಹೇಗಿರುವುದೋ ? ಯುದ್ಧವೀರನೇ, ಆಲಿಸು, ರಾಮನನ್ನು ನೋಡಿದರೆ ಅವನು ಮಾನವನೆಂಬ ಭಾವನೆ ಕಾಣುತ್ತಿಲ್ಲ, ಮುಟ್ಟಿ

ಕಟ್ಟಿದರು ಸಾಗರವ ಕಲುಮರ । ಮುಟ್ಟಿನಲಿ ಸುರ ನರ ಭುಜಂಗರ
ದಿಟ್ಟಿಗೊಳ್ಳದ ದುರ್ಗವನು ಕೆಡಹಿದರು ಕದನದಲಿ
ಇಟ್ಟಣಿಸಿ ಸಮರಂಗದಲಿ ಸರಿ । ಪೆಟ್ಟಿನಲಿ ಕಾದಿದರು ಕಡೆಯಲಿ
ಕಟ್ಟೆಯನು ಕಳಚಿದರು ಖಳಸೇನಾ ಮಹಾಂಬುಧಿಯ ೪

ಇವರು ಕಪಿಗಳೆ ಜೀಯ ಸೀತಾ । ಯುವತಿಯರಸನು ನರನೆ ನೀನೀ
ಹವಣಿನಲಿ ಹವಣಿಸುವ ಬುದ್ಧಿಗೆ ಕಾಣೆನುರುಪಥವ
ಅವಗಡಿಸಿದೆ ದುರುಕ್ತಿಯಲಿ ಪೇ । ಳ್ದವರ ಹಿಂದೆ ತಮಾನುಜನ ನುಡಿ
ಗವಕಳಿಯೆಸಗಿದೆ ವಿವೇಕಿಸದಂದು ನೀನೆಂದ ೫

ಮುಱಿದುದರಿಗಳ ಸಂಧಿ ಕಡೆಯಲಿ । ಕುಱಿತನವು ನಾವಿನ್ನು ಕಾಪೆ
ಚ್ಚಱಿಕೆ ಪದ್ಧತಿ ನಡೆದುದಿಂದಿನ ದಿನಕೆ ಭಲಪದದ
ಉಱುವ ವಿಜಯಭುಜಪ್ರತಾಪವ । ನಱಿಕಿಸದೆ ಸೆಣಸುವುದೆ ನಯದೆ
ಚ್ಚಱಿಕೆ ತಾ ವೀಳೆಯವನೆನಗೆಂದಸುರ ಕೈಮುಗಿದ ೬

ಐಸೆ ಮತ್ತೇನಸುವಿನಲಿ ಬಯ । ಲಾಸೆಯನು ಮಾಡುವುದು ಭಟರಿಗೆ
ಹೇಸಿಕೆಯು ಹೊಱೆ ಹೋಗಲಾ ಮಾತೇಕೆ ನಾಳಿನಲಿ
ವಾಸಿ ನಿನಗಿರಲಸ್ತ್ರಶಸ್ತ್ರ ವಿ । ಲಾಸಿಗಳ ಕೂಡಿಕ್ಕೊ ಮೋ
ಳೈಸಿಕೋ ವಾರಣ ವರೂಥ ಪದಾತಿ ಹಯಬಲವ ೭

ಕೊಂಡಿದ್ದ ಪ್ರಳಯದ ಬೆಂಕಿಯನ್ನು ನಾವು ಕೆಣಕಿದಂತಾಗಿದೆ" ಎಂದ ಪ್ರಹಸ್ತ. ೪. "ಕಲ್ಲು ಮರ ಮೊದಲಾದುವುಗಳಿಂದ ಸಮುದ್ರಕ್ಕೆ ಸೇತುವೆಯನ್ನು ಕಟ್ಟಿದರು. ದೇವತೆಗಳು ಮಾನವರು ಸರ್ಪರುಗಳು ದೃಷ್ಟಿಸಲಸಾಧ್ಯವಾದ ದುರ್ಗವನ್ನು ಯುದ್ಧದಲ್ಲಿ ಕೆಡವಿದರು, ಯುದ್ಧರಂಗದಲ್ಲಿ ಗುಂಪುಕೂಡಿ ಬಂದು ನಮಗೆ ಸರಿಸಮಾನವಾಗಿ ಯುದ್ಧ ಮಾಡಿದರು. ಕೊನೆಗೆ ರಾಕ್ಷಸಸೇನಾಸಾಗರದ ಕಟ್ಟೆಯನ್ನು ಒಡೆದುಹಾಕಿದರು. ೫. ಸ್ವಾಮಿ, ಇವರು ಕಪಿಗಳೆ ? ಸೀತೆಯ ಪತಿಯು ಮನುಷ್ಯನೆ ? ಹೀಗೆ ಆಲೋಚಿಸುವ ನಿನ್ನ ಬುದ್ಧಿಗೆ ದಾರಿಯನ್ನು ಕಾಣೆ. ನಿನಗೆ ಒಳ್ಳೆಯ ಮಾತುಗಳನ್ನು ಹೇಳಿದವರಿಗೆ ಕೆಟ್ಟಮಾತನ್ನಾಡಿ ಧಿಕ್ಕರಿಸಿದೆ. ಹಿಂದೆ ನೀನು ವಿವೇಕವನ್ನು ಮರೆತು ನಿನ್ನ ತಮ್ಮನಾಡಿದ ಮಾತುಗಳಿಗೆ ಅವನ ತೇಜೋಭಂಗಮಾಡಿದೆ" ಎಂದ ಪ್ರಹಸ್ತ. ೬. "ಶತ್ರುಗಳೊಡನೆ ಸಂಧಿಯು ಮುರಿದುಬಿದ್ದಿತು. ಕೊನೆಗೆ ನಾವು ಕುರಿಗಳಾದೆವು. ಈಗ ನಮ್ಮ ಹಟವನ್ನು ಜಾಗ್ರತೆಯಿಂದ ಕಾಪಾಡಿಕೊಳ್ಳಬೇಕಾಗಿ ಬಂದಿದೆ. ನಮ್ಮ ಪ್ರಚಂಡ ತೋಳ್ಬಲವನ್ನು ಬದಿಗೊತ್ತದೆ ಹೋರಾಡುವುದೆ ಈಗಿನ ಎಚ್ಚರಿಕೆಯ ನೀತಿ. ನನಗೆ ವೀಳೆಯವನ್ನು ಕೊಡು" ಎಂದು ಪ್ರಹಸ್ತ ಕೈಮುಗಿದ. ೭. "ಆಗಲಿ ಮತ್ತೇನು. ವೀರರು ವ್ಯರ್ಥವಾಗಿ ಜೀವ ಉಳಿಸಿಕೊಳ್ಳಬಯಸುವುದು ಅಸಹ್ಯ ಹೊರೆ ಅವರಿಗೆ, ಹೋಗಲಿ, ಆ ಮಾತೇಕೆ? ಹುರುಡು ನಿನ್ನಲ್ಲಿದ್ದರೆ ನಾಳಿನ ಯುದ್ಧಕ್ಕೆ ಅಸ್ತ್ರಶಸ್ತ್ರಪರಿಣತರನ್ನು ಕೂಡಿಸು.

ಧುರಕೆ ನಿಲುವಡೆ ನೀನು ತದನಂ । ತರದಲಿಂದ್ರಾರಾತಿ ಸಮನಂ
ತರದಲತಿಬಲ ಕುಂಭಕರ್ಣನು ನಮ್ಮ ಕಟಕದಲಿ
ನಿರುತವಿದು ನಿಶ್ಚೈಸಿದೀ ನಾ । ಲ್ವರಿಗೆ ನೆನಹುಳ್ಳತಿಬಲನು ನೀ
ಪರಿಬವಿದುತಾ ನಿನ್ನದೆಂದನುಕೊಳಿಸಿದನು ರಣವ ೮

ಎಲೆ ನಿಶಾಚರರಾಯ ಚಿತ್ತೈ । ಸೊಲಿಸುವೆನು ಭುಜವಿಜಯಲಕ್ಷ್ಮಿಯ
ನಿಲಿಸುವೆನು ರಿಪುವಿಜಯಕೀರ್ತಿಸ್ತಂಭಡಂಬರವ
ಕಲಹವಿದು ಭವದೀಯ ಭಾಗ್ಯದ । ಬೆಳಸು ದೈವಾಧೀನ ತನ್ನ
ಗ್ಗಳಿಕೆಗಿದು ತಪ್ಪಲ್ಲ ರಣವೆನಿಸುವೆನು ತಾನೆಂದ ೯

ಎಂದು ಬೀಳ್ಕೊಂಡಾ ಪ್ರಹಸ್ತನ । ನಂದವಿಂಗೆ ತಕ್ಕೈಸಿ ತನ್ನಯ
ಪೊಂದೊಡವ ತೊಡವಿತ್ತು ಪೊಂಬಟ್ಟಲಲಿ ವೀಳೆಯವ
ಸಂದ ಸಕಲ ಶಿರಃಪ್ರಧಾನಂ । ಗಂದಿನಿರುಳಿನಲಿತ್ತು ಸುರಕುಲ
ಬಂದಿಕಾಜನು ಕಳುಹಿದನು ಬಳಿಕಾ ಚಮೂಪತಿಯ ೧೦

ಬರಿಸಿದನು ಬಳಿಕಾ ಪ್ರಹಸ್ತನು । ಹರ ಸರೋಜಭವಾಮರೇಂದ್ರರ
ಸರಕು ಮಾಡದ ಸಾಹಸಾನ್ವಿತ ಸುಭಟಸಂಕುಲವ
ತರಿಸಿ ನಿಖಿಳಾಭರಣ ದಿವ್ಯಾಂ । ಬರದಿ ಮನ್ನಿಸಿ ಕುಡಿತೆಯಲಿ ಕ
ರ್ಪೂರವ ಮೊಗೆಮೊಗೆದಿತ್ತು ಬೋಳೈಸಿದನು ನಿಜಬಲವ ೧೧

ಆನೆ, ರಥ, ಕುದುರೆ, ಪದಾತಿಗಳ ಸೈನ್ಯವನ್ನು ಒಟ್ಟುಗೂಡಿಸು" ಎಂದ ರಾವಣ. ೮. "ಯುದ್ಧಕ್ಕೆ ನಿಲ್ಲುವಲ್ಲಿ ನಮ್ಮ ಸೈನ್ಯದಲ್ಲಿ ಮೊದಲನೆಯವನು ನೀನು, ಅನಂತರ ಇಂದ್ರಜಿತು, ಅವನ ಬಳಿಕ ಮಹಾಬಲಶಾಲಿ ಕುಂಭಕರ್ಣ. ಇದು ಸತ್ಯ. ಹೀಗೆ ನಾವು ಕ್ರಮ ನಿರ್ಣಯ ಮಾಡಿರುವ ನಾಲ್ಕು ಜನರಲ್ಲಿ ನೀನು ಹೆಸರಾಂತ ಬಲಶಾಲಿ. ಯುದ್ಧದ ಕಾರ್ಯವು ಈಗ ನಿನ್ನದು" ಎಂದು ರಾವಣನು ಪ್ರಹಸ್ತನಿಗೆ ಯುದ್ಧವನ್ನೊಪ್ಪಿಸಿದನು. ೯. "ಅಯ್ಯಾ ರಾಕ್ಷಸರಾಜ, ಕೇಳು. ಬಾಹುಗಳಿಂದ ವಿಜಯಲಕ್ಷ್ಮಿಯನ್ನು ಒಲಿಸಿಕೊಳ್ಳುವೆನು. ಶತ್ರುವಿಜಯದ ಕೀರ್ತಿಯ ಅಟ್ಟಹಾಸವನ್ನು ನಿಲ್ಲಿಸುವೆನು. ಈ ಕದನವು ನಿನ್ನ ಅದೃಷ್ಟ ಮತ್ತು ವಿಧಿಯ ಅಧೀನ. ಆದರೆ ನನ್ನ ಪರಾಕ್ರಮಕ್ಕೆ ಕುಂದಿಲ್ಲದಂತೆ ಕಾದಾಡುತ್ತೇನೆ" ಎಂದ ಪ್ರಹಸ್ತ. ೧೦ ಈ ರೀತಿ ಹೇಳಿ ಯುದ್ಧಕ್ಕೆ ಹೊರಟ ಪ್ರಹಸ್ತನನ್ನು ಅತ್ಯಾನಂದದಿಂದ ರಾವಣನು ಆಲಿಂಗಿಸಿಕೊಂಡನು. ದೇವತೆಗಳನ್ನು ಸೆರೆಹಿಡಿದ ರಾಕ್ಷಸ ರಾಜ ರಾವಣನು ತನ್ನ ಮಂತ್ರಿಪ್ರಧಾನಿಗೆ ಆ ರಾತ್ರಿ ತನ್ನ ಚಿನ್ನದೊಡವೆಗಳ ಮೆಚ್ಚುಕೊಟ್ಟನು. ಅನಂತರ ಚಿನ್ನದ ಬಟ್ಟಲಿನಲ್ಲಿ ವೀಳೆಯವನ್ನು ಕೊಟ್ಟು ಸೇನಾಧಿಪತಿ ಪ್ರಹಸ್ತನನ್ನು ಕಳುಹಿಸಿಕೊಟ್ಟನು. ೧೧. ಅನಂತರ ಶಿವ ಬ್ರಹ್ಮ ದೇವೇಂದ್ರರನ್ನು ಲಕ್ಷಿಸದ ಸಾಹಸಿಗಳಾದ ಯೋಧರನ್ನು ಪ್ರಹಸ್ತನು ಬರಮಾಡಿಕೊಂಡನು. ಸಮಸ್ತ ಆಭರಣಗಳನ್ನೂ ದಿವ್ಯ ವಸ್ತ್ರಗಳನ್ನೂ ತರಿಸಿಕೊಟ್ಟು ಗೌರವಿಸಿ ಬೊಗಸೆಯಲ್ಲಿ ಕರ್ಪೂರದ ಗಂಧವನ್ನು ತೆಗೆತೆಗೆದು

ಕರಿಘಟೆಯು ಹದಿನೈದು ಕೋಟಿಯು । ವರರಥವನಿಪ್ಪತ್ತು ಕೋಟಿಯ
ತುರಗವನು ತೊಂಬತ್ತು ಕೋಟಿಯನಸುರ ಪದಚರರ
ಬರಹಕೆರಡರ್ಬುದವನಾದಿನ । ದಿರುಳು ಮೇಳೈಸಿದನು ಕೂಗುವ
ಕರೆವ ಹೂಡುವ ಹಲ್ಲಣಿಪ ಹೊದಱಿದ್ದ ರಭಸದಲಿ ೧೨

ಮಗನ ಕಾಳಗ ನಾಳಿನದು ವೈ । ದೆಗೆವನೋ ಮಲೆತಾನುವನೊ ಸಂ
ಯುಗದೊಳೆಂದಳವಳವನಸುರರಲಱಿಯಬೇಕೆಂದು
ಹುಗಿಸಿದನೊ ಶಿಖಿಪುರದೊಳಗೆ ಗು । ಪ್ತಗರನೆನಲೆಡೆಯಾಡಿದವು ದೀ
ವಿಗೆಗಳುರು ಸನ್ನಾಹ ಸೇನಾಮುಖದ ಮುಂಬಿನಲಿ ೧೩

ಕೇಳಿದೈ ಕುಶ ವೈರಿಸೇನಾ । ಜಾಲದುಬ್ಬರ ಸಮರದುರು ನಿ
ಸ್ಸಾಳದಬ್ಬರವೆಬ್ಬಿಸಿತು ಹರಿಹಯ ದಿಶಾಂಗನೆಯ
ತೋಳಮೇಲೊಱಗಿರ್ದ ನಳಿನೀ । ಲೋಲ ಕಣ್ದೆಱೆದೆದ್ದು ರಕ್ಕಸ
ಗಾಳಗವಲಾಯೆನುತ ಪರಿತಂದಡರ್ದನಂಬರವ ೧೪

ಉದಯಮುಖದಲಿ ವೈರಿಬಲವಿಳಿ । ದುದು ಮಹಾಗಿರಿದುರ್ಗವನು ಲಯ
ದೊದವಿನಗ್ಗದ ಹರನ ಹಣೆಗಣ್ಣಿಂದಿಳಾತಳಕೆ
ಉದುರುವಗ್ನಿಕಣಾಳಿಗಳ ಬಲು । ಹೊದಱಿ ಪಾಳಿಯದಂತೆ ಮೊಳಗುವ
ಕದನವಱೆ ಹದಿನೆಂಟು ಕೋಟಿಯ ಘೋರ ಘೋಷದಲಿ ೧೫

ಕೊಟ್ಟು ತನ್ನ ಸೈನ್ಯವನ್ನು ಆದರಿಸಿದನು. ೧೨. ಹದಿನೈದು ಕೋಟಿ ಆನೆಯ ಸೈನ್ಯ, ರಥಗಳು ಇಪ್ಪತ್ತುಕೋಟಿ, ಕುದುರೆಗಳು ತೊಂಬತ್ತುಕೋಟಿ, ರಾಕ್ಷಸ ಕಾಲುಬಲ ಎರಡು ಅರ್ಬುದಗಳನ್ನು ಪ್ರಹಸ್ತನು ಅಂದಿನಿರುಳು ಕೂಡಿಸಿದನು. ಕೂಗುವ, ಕರೆಯುವ, ಕುದುರೆಗಳನ್ನು ಹೂಡುವ, ಜೀನು ಮೊದಲಾದುವನ್ನು ಹಾಕಿ ಸಜ್ಜುಗೊಳಿಸುವ ಭರಾಟೆ ಎಲ್ಲೆಲ್ಲೂ. ೧೩. ನಾಳೆಯ ದಿವಸದ ಕಾಳಗವು ಮಗನದು. ಅವನು (ನೀಲ) ಯುದ್ಧದಲ್ಲಿ ಹಿಂದೆಗೆಯುತ್ತಾನೋ ಛಲದಿಂದ ಶತ್ರುಗಳನ್ನು ಎದುರಿಸುತ್ತಾನೋ, ಶತ್ರುಗಳ ಸಾಮರ್ಥ್ಯವನ್ನು ತಿಳಿದುಕೊಳ್ಳಬೇಕೆಂದು ಅಗ್ನಿಪುರದೊಳಕ್ಕೆ ಗುಪ್ತಚಾರರನ್ನು ಅಗ್ನಿಯು ಕಳುಹಿಸಿದನೋ ಎನ್ನುವಂತೆ ಸೈನ್ಯದ ಮುಂದುಗಡೆಯಲ್ಲಿ ದೀಪಗಳ ಸಾಲುಗಳು ಚಲಿಸುತ್ತಿದ್ದವು. ೧೪. ಕೇಳಿದೆಯಾ, ಕುಶ. ಶತ್ರುಸೇನೆಗಳ ಪ್ರಚಂಡ ಕದನದ ವಾದ್ಯಗಳ ಅಬ್ಬರವನ್ನು ಕೇಳಿ ಇಂದ್ರದಿಕ್ಕೆಂಬ (ಪೂರ್ವ) ಸ್ತ್ರೀಯ ತೋಳನ್ನು ದಿಂಬಾಗಿ ಮಾಡಿಕೊಂಡು ಮಲಗಿದ್ದ ಕಮಲಪ್ರಿಯ ಸೂರ್ಯನು ಕಣ್ತೆರೆದು ಎದ್ದು ಇಂದು ಭಯಂಕರ ಯುದ್ಧವಲ್ಲವೇ ಎಂದುಕೊಂಡು ಬಂದು ಆಕಾಶಕ್ಕೇರಿದನು. ೧೫. ಹದಿನೆಂಟು ಕೋಟಿ ರಣವಾದ್ಯಗಳ ಪ್ರಚಂಡ ಘೋರ್ಗರೆತದೊಡನೆ ಶಿವನ ಹಣೆಗಣ್ಣಿನಿಂದ ಭೂಮಿಗೆ ಉದುರುವ ಬೆಂಕಿಯ ಕಿಡಿಗಳ ಮೊತ್ತದಂತೆ ಸೂರ್ಯೋದಯದಲ್ಲಿ ಶತ್ರುಸೈನ್ಯವು ಲಂಕಾ

ಕಿಡಿಯನುಗುಳುವ ದಾಡೆಗಳ ಕೆಂ । ಪಡರ್ದ ಕಣ್ಣಾಲಿಗಳ ಕರ್ಕಶ
ವಡೆದ ವದನದ ರೂಢಿವ ಕೆಮ್ಮೀಸೆಗಳ ಕೆದಱಿಕೆಯ
ಬಿಡುದಲೆಯ ನವಶೋಣಿತಾಂಬರ । ದುಡಿಗೆಗಳ ಘನ ರೌದ್ರಮಯದು
ಗ್ಗಡದ ರಕ್ಕಸಸೇನೆ ನಿಂದುದು ಖಳನ ತೋಹಿನಲಿ ೧೬

ಬಱಸಿಡಿಲು ಸಿಡಿಲಂಬು ಡಬ್ಬುಕ । ಗಱಿದಳೆದ ಹಾಯ್ಮಟ್ಟಿ ಹಾಯ್ವ
ಬ್ಬರದ ಹುಲಿ ಹರಿಯಕ್ಷಕುಲ ಮಲೆತಿಱಿವ ಕಾಡ್ಕೋಣ
ಎಱಗುವಗ್ಗದ ಶರಭಕುಲ ಮಱೆ । ಮುಱಿದು ಮೋದುವ ಭೂತಗಣದು
ಬ್ಬಱಿತದೊಡ್ಡನು ಮುಂದೆ ನಿಲಿಸಿದನಾ ಚಮೂರಮಣ ೧೭

ನಿಲಿಸಿದನು ಸೂನಿಗೆಯ ಬಂಡಿಯ । ಹಲವನೊಡ್ಡಿದನದ್ರಿಸಾರದ
ತೞಿಯ ತಳುಕಿಕ್ಕಿದನು ರಣರಾಟಾಳ ಸೂತ್ರಗಳ
ಬೞಿವಿಡಿದು ಬೞಕಾಳು ತುರಗಾ । ವೞಿ ವರೂಥ ಮದೇಭದೊಡ್ಡನು
ನಿಲಿಸಿ ನಿಂದಿದನಸುರಸೇನಾನಾಥನಾಹವಕೆ ೧೮

ಅಬ್ಬರಿಸಿದವು ರಣದ ಚೂಣಿಯ । ಲುಬ್ಬುವಱೆ ಶತಕೋಟಿಸಂಖ್ಯೆಯ
ಲಬ್ಬರಿನ ರಣರಭಸಿಗರ ಮುಖಸನ್ನಿವೇಶದಲಿ
ಕರ್ಬುರಾಶ್ವ ಪದಾತಿ ರಥ ಗಜ । ದುಬ್ಬರದ ಭಾರಣೆಯ ಬಿಗುಹಿಗೆ
ನಿರ್ಭರದಲೊಲೆದಾಡುತಿರ್ದುದಜಾಂಡವನವರತ ೧೯

ನಗರದ ಕೋಟೆಯಮೇಲಿನಿಂದ ಇಳಿದುಬಂದಿತು. ೧೬. ಕಿಡಿಗಳನ್ನುಗುಳುವ ಕೋರೆ ಹಲ್ಲುಗಳ, ಕೆಂಡದಂತೆ ಉರಿಯುವ ಕಣ್ಣುಗಳ, ಕ್ರೂರಮುಖದ, ಹೆದರಿಕೆ ಹುಟ್ಟಿಸುವ ಕೆಂಪು ಮೀಸೆಗಳ, ಕೆದರಿದ ಕೂದಲುಗಳ ಬರಿದಲೆಯ, ಕೆಂಪು ವಸ್ತ್ರ ಧರಿಸಿದ, ಭಯಂಕರವಾದ ರಾಕ್ಷಸರ ಸೈನ್ಯವು ಪ್ರಹಸ್ತನ ಸಮೀಪ ಸಾಲಾಗಿ ನಿಂತುಕೊಂಡಿತು. ೧೭. ಬರ ಸಿಡಿಲು, ಸಿಡಿಲಬಾಣ, ಡಬ್ಬುಕ, ಗರಿಸೇರಿಸಿದ ನುಗ್ಗುವ ಈಟಿ, ಅಬ್ಬರಿಸುತ್ತ ಬರುವ ಹುಲಿ ಸಿಂಹಗಳು, ಕೊಬ್ಬಿದ ಕಾಡುಕೋಣ, ಮೇಲೆಬೀಳುವ ಶರಭಗಳು ಮತ್ತು ತಿರುತಿರುಗಿ ಹೊಡೆಯುವ ಭೂತಗಳಿಂದ ಕೂಡಿ ಮೇಲೆಬಿದ್ದು ಇರಿಯುವ ಸೈನ್ಯವನ್ನು ಸೇನಾಪತಿ ಪ್ರಹಸ್ತನು ಮುಂದುಗಡೆಯಲ್ಲಿ ನಿಲ್ಲಿಸಿದನು. ೧೮. ಕತ್ತಿಗಳು ತುಂಬಿದ ಹಲವು ಬಂಡಿಗಳನ್ನು ನಿಲ್ಲಿಸಿದನು. ಕಬ್ಬಿಣದಿಂದ ತಯಾರಿಸಿದ ಯುದ್ಧದ ರಾಟೆ ಮತ್ತು ಹಗ್ಗಗಳನ್ನು ಜೋಡಿಸಿಟ್ಟನು. ಅವುಗಳ ಹಿಂದುಗಡೆಯಲ್ಲಿ ಕಾಲಾಳುಗಳು, ಕುದುರೆಯ ಸೈನ್ಯ, ರಥಗಳು ಮತ್ತು ಆನೆಯ ಸೈನ್ಯವನ್ನು ನಿಲ್ಲಿಸಿ ರಾಕ್ಷಸಸೇನಾಪತಿಯು ಯುದ್ಧಕ್ಕೆ ಸಿದ್ಧನಾಗಿ ನಿಂತನು. ೧೯. ಯುದ್ಧದ ಮುಂದಿನ ಸಾಲಿನಲ್ಲಿ ಅಬ್ಬರಿಸುತ್ತ ಯುದ್ಧಕ್ಕೆ ಕಾತುರರಾಗಿರುವ ನೂರುಕೋಟಿ ಸಂಖ್ಯೆಯ ವೀರರ ಎದುರಿನಲ್ಲಿ ಉಬ್ಬುತಮಟೆಗಳು ಬಾರಿಸಿದವು. ರಾಕ್ಷಸಯೋಧರ ಹಾಗೂ ಕುದುರೆ, ಆನೆ, ರಥಗಳ ಅತಿಶಯ ಭಾರಕ್ಕೆ

ಅಮಮ ಕಲ್ಪಕರೋಟಿಮಾಲೆಯ । ಸಮರಮುಖಕುಬ್ಬೇಳ್ವ ಕಾಲ
ಕ್ರಮದ ಯಮಕೋಟಿಗಳ ಕೋಳಾಹಳಿಕೆಯಂದದಲಿ
ದ್ಯುಮಣಿತನುಜನ ಮುಂದೆ ನಿಂದಿದು । ದಮರರಿಪುಬಳವವನಿತನುಜಾ
ರಮಣನಿವನಾರೆಂದು ಬೆಸಗೊಂಡನು ವಿಭೀಷಣನ ೨೦

ಈತನಾರೈ ಬಂದವನು ಸಹ । ಜಾತನೋ ಸಂಭವನೊ ದಿವಿಜಾ
ರಾತಿ ದಶಕಂಠಂಗೆ ಹೇಳೆಂದರಸ ಬೆಸಗೊಳಲು
ಈತನೀಗಲೆ ಜೀಯ ನಮ್ಮಾ । ಯಾತುಧಾನ ಶಿರಃಪ್ರಧಾನ ಸು
ನೀತಿ ನಿಗಮ ನಿಧಾನ ಸತ್ವನಿಧಾನನಿವನೆಂದ ೨೧

ಇವನ ದೆಸೆಯಿಂದಾಯ್ತು ನಾನಾ । ಭುವನದೊಡೆತನ ಜೀಯ ಕೇಳಿ
ವ್ಮಾವಗೆ ಸೇರಿತು ಸಕಲ ಸಂಪದವಮರವಲ್ಲಭನ
ಇವಗೆ ಸೇರದ ಮಾರ್ಗವಿವನಾ । ದಿವಸದಲಿ ದೇವಿಯರ ತಂದಂ
ದಿವನು ಸಾಜಿದ ಬಿಟ್ಟುಬಾ ಹೋಗೆಂದು ಬುದ್ಧಿಯನು ೨೨

ಕ್ಷಿಪ್ರಹಸ್ತನು ಸಮರದಲಿ ಲೋ । ಕಪ್ರಹಸ್ತನು ಶೌರ್ಯದಲಿ ನೀ
ತಿಪ್ರವಿಸ್ತರನಿವನು ನಿರ್ಮಳ ಧರ್ಮಮಾರ್ಗದಲಿ
ಈ ಪ್ರಹಸ್ತನಮಾತನತಿಗಳೆ । ದಪ್ರಯೋಜಕನಾದನಾತ ಶ
ರಪ್ರಹಾರದಲಣ್ಣದೇವನು ದೇವ ಕೇಳೆಂದ ೨೩

ಬ್ರಹ್ಮಾಂಡವು ಜೋರಾಗಿ ಒಲೆದಾಡುತ್ತಿತ್ತು. ೨೦. ಅಬ್ಬಬ್ಬ ಪ್ರಳಯದ ತಲೆಬುರುಡೆ ಮಾಲೆಯ ಯುದ್ಧಕ್ಕೆ ಗರ್ವಿಸುವ ಪ್ರಪಂಚ ವಿನಾಶಕಾಲದ ಕೋಟಿ ಯಮರುಗಳ ಗದ್ದಲದಂತೆ ಸುಗ್ರೀವನ ಎದುರಿಗೆ ರಾಕ್ಷಸಸೈನ್ಯವು ನಿಂತಿತು. ಆಗ ರಾಮನು "ಇವನು ಯಾರು" ಎಂದು ವಿಭೀಷಣನನ್ನು ಕೇಳಿದನು. ೨೧. "ಈತನು ಯಾರು ? ಬಂದವನು ರಾವಣಾಸುರನ ತಮ್ಮನೋ ಅಥವಾ ಮಗನೋ ?" ಎಂದು ರಾಮನು ಕೇಳಿದನು. "ಈತನು ನಮ್ಮ ರಾಕ್ಷಸರ ಪ್ರಧಾನಮಂತ್ರಿ, ಇವನು ನೀತಿ ಶಾಸ್ತ್ರವಿಶಾರದನೂ ಸತ್ವಶಾಲಿಯೂ ಆಗಿದ್ದಾನೆ. ೨೨. ಇವನಿಂದಾಗಿ ನಮ್ಮ ಅಣ್ಣನಿಗೆ ನಾನಾ ಲೋಕಗಳ ಪ್ರಭುತ್ವ ಪ್ರಾಪ್ತಿಯಾಯಿತು. ದೇವೇಂದ್ರನ ಸಕಲ ಸಂಪತ್ತು ಸೇರಿತು. ಇವನು ಕೆಟ್ಟದಾರಿಗೆ ಬಿದ್ದು ಅಂದು ಸೀತಾದೇವಿಯರನ್ನು ಕದ್ದು ತಂದಾಗ, ದೇವಿಯರನ್ನು ಬಿಟ್ಟು ಬಾ ಹೋಗು" ಎಂದು ಬುದ್ಧಿಯನ್ನು ಹೇಳಿದ. ೨೩. "ಯುದ್ಧದಲ್ಲಿ ಈತನದು ಚುರುಕುಗೈ ; ಪರಾಕ್ರಮದಲ್ಲಿ ಲೋಕಪ್ರಸಿದ್ಧ ; ನಿರ್ಮಲ ಧರ್ಮಮಾರ್ಗದಲ್ಲಿ ನೀತಿಜ್ಞ. ಈ ಪ್ರಹಸ್ತನ ಮಾತನ್ನು ಮೀರಿ ಬಾಣ ಪ್ರಯೋಗವಲ್ಲಿ ನಮ್ಮ ಅಣ್ಣನು ನಿಷ್ಪ್ರಯೋಜಕನಾದನು" ಎಂದ ವಿಭೀಷಣ,

ಚಿತ್ತವಿಸು ಕಾಳಗವನೀ ಸಚಿ । ವೋತ್ತಮನ ಸಂಗರವನಿವನೊಡ
ನುತ್ತರಿಸಬಲ್ಲವರ ಬವರಕೆ ಬೆಸಸು ಬೇಗೆನಲು
ಒತ್ತಿ ಹೊಳಕುವ ಹಾಸ್ಯಗರ್ವದ । ಹತ್ತುಗೆಯ ಹವಣಿಸದ ಹಮ್ಮಿನ
ಚಿತ್ತದಿನಸುತ ಚುಬುಕಿಱಿವುತಂಗೈಸಿದನು ರಣಕೆ ೨೪

ಕೆದಱಿಕೊಂಡುದು ಸೇನೆ ಸಂಗರ । ಕೊದಗಿಸಿದ ಶೈಲದ್ರುಮಂಗಳ
ಹೊದಱಿನಲಿ ಹೊಂಚುವ ನಿಶಾಟರ ರಣಮುಖಂಗಳಲಿ
ತದಿಲು ಧಡಧುಡ ಧೊಕ್ಕುಧಿಕ್ಕೆಂ । ದೊದಱಿ ಕಲುಗೈದುಗಳ ಕಪಿಬಲ
ಕೆದಱಿ ಹೊಕ್ಕುದು ಹೊಕ್ಕ ವ್ಯೂಹದಲಿ ಸದೆವುತರಿಬಲವ ೨೫

ನಿಲುಕಿ ನೂಕುವ ಶರಭ ಸಿಂಹಾ । ವಳಿಯನುಱುಬಿದರಟ್ಟಿ ಮೋದುವ
ಹುಲಿಯನಪ್ಪಳಿಸಿದರು ಹೊಯ್ವ ಲುಲಾಯದುಸುರುಗಳ
ಕಳಚಿದರು ಕವಿದಿಱಿವ ಕಲ್ಪಿತ । ಕಲಿತ ಭೈರವ ಭೂತ ನಿಕರವ
ನಿಲಿಸಿದರು ರಣದಿಳೆಯ ಸೀಮಾ ಸನ್ನಿವೇಶದಲಿ ೨೬

ಹಱಿದು ಬಿಸುಟರು ಹಮ್ಮಿ ನಿಲಿಸಿದ । ಧುರದ ರಣರಾಟಾಳಸೂತ್ರವ
ತಿರುಹಿಸೂನಿಗೆ ತೆತ್ತಿಸಿದ ಜತ್ತರಟ ಬಂಡಿಗಳ
ಹರಹಿದರು ದೆಸೆದೆಸೆಗೆ ನೆಗೆದು । ಪ್ಪರಿಸಿ ಮರದುದಿಗಳನು ಹಿಡಿದ
ಬ್ಬರಿಸಿ ಬುಡದಲಿ ಬೀಳಗೆಡಹುತ ಹೊಕ್ಕರರಿಬಲವ ೨೭

೨೪. "ಈ ಮಂತ್ರಿಶ್ರೇಷ್ಠನ ಕದನವನ್ನು ವೀಕ್ಷಿಸು. ಇವನೊಡನೆ ರಣದಲ್ಲಿ ಮಾರ ಬಲ್ಲವರನ್ನು ಯುದ್ಧಕ್ಕೆ ಬೇಗ ನೇಮಿಸು" ಎಂದು ವಿಭೀಷಣನು ಹೇಳಿದನು. ಇದನ್ನು ಕೇಳಿ ಸುಗ್ರೀವನಲ್ಲಿ ಒಂದು ಕಡೆ ಹಾಸ್ಯ ಇನ್ನೊಂದು ಕಡೆ ಗರ್ವ ಒತ್ತಿ ಬರುತ್ತಿದ್ದರೂ ಅಹಂಕಾರವನ್ನು ತೋರಿಸಿಕೊಳ್ಳದೆ ಹುರುಪಿನಿಂದ ಯುದ್ಧಕ್ಕೆ ಹೋಗಲು ಉದ್ದೇಶಿಸಿದನು. ೨೫. ಕದನವನ್ನು ನಿರೀಕ್ಷಿಸುತ್ತಿದ್ದ ರಾಕ್ಷಸರ ರಣರಂಗದ ಮುಂದುಗಡೆಯಲ್ಲಿ ಯುದ್ಧಕ್ಕಾಗಿ ಒದಗಿಸಿದ್ದ ಬೆಟ್ಟ ಮರಗಳೊಡನೆ ವಾನರಸೈನ್ಯವು ಹುರುಪಿನಿಂದ ಕದನಕ್ಕೆ ಹೊರಟಿತು. ಧಡ ಧುಢ, ಧೊಕ್ಕು ಧಿಕ್ಕು ಎಂದು ಕೂಗುತ್ತ ಬಂಡೆಯ ಆಯುಧಗಳನ್ನು ಹಿಡಿದ ಕಪಿಸೈನ್ಯವು ಆವೇಶದಿಂದ ರಾಕ್ಷಸಸೈನ್ಯವನ್ನು ಪ್ರವೇಶಿಸಿದೊಡನೆಯೇ ಶತ್ರುಸೈನ್ಯವನ್ನು ಸದೆಬಡಿಯುತ್ತ ಹೋಯಿತು. ೨೬. ವಾನರಯೋಧರು ತಮ್ಮನ್ನು ಹಿಡಿದು ತಳ್ಳುವ ಶರಭ ಸಿಂಹಗಳನ್ನು ದಬ್ಬಿದರು ; ಅಟ್ಟಿಸಿಕೊಂಡು ಬಂದು ಹೊಡೆಯುವ ಹುಲಿಯನ್ನು ಅಪ್ಪಳಿಸಿದರು ; ಬಡಿಯುವ ಕೋಣಗಳ ಪ್ರಾಣವನ್ನು ತೆಗೆದರು ; ಮುತ್ತಿ ಇರಿಯುವ ಮಾಯಾಭೂತಗಳನ್ನು ಯುದ್ಧರಂಗದ ಎಲ್ಲೆಯಲ್ಲಿ ನಿಲ್ಲಿಸಿಬಿಟ್ಟರು. ೨೭. ವಾನರವೀರರು ಹೂಡಿ ನಿಲ್ಲಿಸಿದ ಯುದ್ಧದ ರಾಟೆ ಹಗ್ಗಗಳನ್ನು ಕಿತ್ತೆಸೆದು, ತಿರುಗುವಂತೆ ಕತ್ತಿಯನ್ನು ಜೋಡಿಸಿದ್ದ ಜತ್ತರಟಯಂತ್ರದ ಬಂಡಿಗಳನ್ನು ದಿಕ್ಕುದಿಕ್ಕಿಗೆ ಚೆಲ್ಲಾಪಿಲ್ಲಿ ಮಾಡಿದರು. ನೆಗೆದು ಹಾರಿ ಮರದ ತುದಿಗಳನ್ನು ಹಿಡಿದು ಬೀಸಿ ಅಬ್ಬರಿಸುತ್ತ ಮರದ ಬುಡದಿಂದ ಶತ್ರು

ಬೆರಸಿ ಧಾಳಾಧೂಳಿಯಲಿ ಸೀ । ವರಿಸಿ ಭಟಭಟರೊಡನೆ ಬಲುಸಂ
ಗರದಲೊದಗಿತು ಕಪಿಚತುರ್ಬಲ ರಿಪುಚತುರ್ಬಲವ
ಸರಿಸದಲಿ ಸಂವರ್ತಶಿಖಿಯು । ಬ್ಬರದ ಹಳಹಳಿಕೆಯವೊಲಳಿವಿನ
ಉರುಳುತಿರ್ದುದು ಬಲವೆರಡು ಬವರದಲಿ ಬಲುಭಟರ ೨೮

ಊಱಿ ದಾಡೆಯ ನೆಲಕೆ ಕೀಲಿಸಿ। ಚೀಱುತಿರ್ದುವು ಕರಿಘಟಾವಳಿ
ಕಾಱುತಿರ್ದುವು ರಕುತಗಳನುಬ್ಬರದ ಹಯನಿಕರ
ಚೀಱಿಕೆಯ ತೇರುಗಳ ತೆಕ್ಕೆಗ । ಳೇಱುತಿರ್ದುವು ನಭವನಸುಗಳು
ಜಾಱುತಿರ್ದುವು ರಕ್ಕಸರ ಮರ್ಕಟರ ಕದನದಲಿ ೨೯

ಇಱಿದ ಘಾಯದಲುಗಿದ ಕರುಳಿನ.। ಲಱಚುತಿರ್ದುವು ಕರಡಿಗಳು ಹೊಂ
ಗಱಿಯ ಕಟ್ಟಿದ ಕೋಲಿಗಟ್ಟಳವಾರಿ ಹಲುಗಿರಿದು
ಒಱಲುತಿರ್ದುವು ಕೋಡಗಗಳು । ಬ್ಬಱಿತದೇಱಿನ ನೋವುಗಳಲಸು
ದೊಱೆವುತಿರ್ದುವು ಮುಸುಗಳಸುರರ ಕೊಲೆಯ ಕವತೆಯಲಿ ೩೦

ಅಣುಗ ಕೇಳ್ ರಕ್ಕಸರ ರಣದಲಿ । ಕೆಣಕಿ ಹರಣದಲುಳಿದ ಸುಭಟಾ
ಗ್ರಣಿಗಳಾರೀ ಭುವನ ಮೂಱಱ ವೀರಭಟರೊಳಗೆ
ಹಣಿದು ಹಾಯ್ಕಿದರೊಡನೆ ಕಬ್ಬಿನ । ಹಣಿದದನ್ವೊಲಾ ಪಣ್ಣುಹಂಪಲಿ
ನಣಲ ಸಂಬಳದಣ್ಣಗಳನಖಿಳಾಸ್ತ್ರಶಸ್ತ್ರದಲಿ ೩೧

ಸೈನ್ಯವನ್ನು ಬೀಳುವಂತೆ ಹೊಡೆದರು. ೨೮. ಕಪಿಸೈನ್ಯದ ಭಟರು ಮತ್ತು ಶತ್ರುಗಳ ಚತುರಂಗಸೈನ್ಯದ ಭಟರು ಸೇರಿ ರಭಸದಿಂದ ನುಗ್ಗಿ ಅಬ್ಬರಿಸುತ್ತ ಒಬ್ಬರೊಡನೊಬ್ಬರು ಭಾರಿ ಕಾಳಗ ಮಾಡಿದರು. ಸಮೀಪದಲ್ಲಿ ಪ್ರಳಯಾಗ್ನಿಯು ತಾಗಿದಂತೆ ಯುದ್ಧದಲ್ಲಿ ಎರಡು ಕಡೆಯ ಬಲಶಾಲಿ ವೀರರು ಸತ್ತುಬೀಳುತ್ತಿದ್ದರು. ೨೯. ಆನೆಗಳು ದಂತಗಳನ್ನು ನೆಲಕ್ಕೆ ಬಿಗಿಯಾಗಿ ಊರಿ ಘೀಳಿಡುತ್ತಿದ್ದವು. ಕುದುರೆಗಳು ರಕ್ತಗಳನ್ನು ಕಾರುತ್ತಿದ್ದವು. ಕಿರ್ರೆಂದು ಶಬ್ದಮಾಡುತ್ತ ನುಗ್ಗುತ್ತಿದ್ದ ತೇರುಗಳಿಂದ ಚಕ್ಕೆಗಳು ಆಕಾಶಕ್ಕೆ ಹಾರುತ್ತಿದ್ದವು. ರಾಕ್ಷಸರ ಮತ್ತು ವಾನರರ ಹೋರಾಟದಲ್ಲಿ ಯೋಧರ ಪ್ರಾಣಗಳು ಹೋಗುತ್ತಿದ್ದವು. ೩೦. ಇರಿತದ ಗಾಯಗಳಿಂದ ಕರುಳು ಹೊರಬಂದು ಕರಡಿಗಳು ಅರಚಿಕೊಳ್ಳುತ್ತಿದ್ದವು. ಚಿನ್ನದ ಗರಿ ಕಟ್ಟಿದ ಬಾಣಗಳು ತಗುಲಿ ಕೋಡಗಗಳು ಮೇಲಕ್ಕೆ ಹಾರಿ ಹಲ್ಲು ಕಿರಿದು ಕಿರಿಚಿಕೊಳುತ್ತಿದ್ದವು. ರಾಕ್ಷಸರ ಕೊಲೆಯ ಹಿಂಸೆಗೊಳಗಾಗಿ ಬಿರುಸಿನ ಇರಿತದ ಗಾಯದ ನೋವಿನಿಂದ ಮುಸುವಗಳು ಪ್ರಾಣ ಬಿಡುತ್ತಿದ್ದವು. ೩೧. ಕುಮಾರ ಲವನೇ ಕೇಳು, ಕಾಳಗದಲ್ಲಿ ರಾಕ್ಷಸರನ್ನು ಕೆಣಕಿ ಈ ಮೂರುಲೋಕಗಳ ವೀರರುಗಳಲ್ಲಿ ಜೀವದಿಂದ ಉಳಿದ ಶ್ರೇಷ್ಠ ಯೋಧರು ಯಾರು ? ದವಡೆಯಲ್ಲಿ ಹಣ್ಣುಹಂಪಲುಗಳ ಬುತ್ತಿಯನ್ನಿಟ್ಟುಕೊಳ್ಳುವ ವಾನರರನ್ನು ರಾಕ್ಷಸರು

ಬಳಿಕ ಬಲವೆರಡಾತುದಸುರಾ । ವಳಿ ಸುರಾವಳಿ ಪೂರ್ವಯುಗದಲಿ
ಮಲೆತು ಮುಂದಿಸಿದಂತೆ ತೋಟಿಯ ತೋಳ ತೀಟಿಯಲಿ
ಹಳಚಿದುದು ಹರಿದಶ್ವಬಿಂಬದ । ಹೊಳಹು ಹುದುಗಲು ಕೈದುಗಳ ಸಂ
ಕುಳ ಶಿಲೋಚ್ಚಯ ಶಿಖರ ತರುತೋಮರ ಕದಂಬದಲಿ ೩೨

ಖಳಬಲದ ಕಪಿಬಲದ ಕದನದ । ಚಲಿತ ಚರಣೋದ್ಧೂತ ಧರಣೀ
ದಳಿತ ಧೂಳೀವಿಸರ ಮುಸುಕಿತಜಾಂಡಮಂಡಲವ
ಬಳಿಸಲಿಸಿ ಬಳಿವಿಡಿದು ರಕುತದ । ಹೊಳೆಗಳೆದ್ದವು ಕೂಡೆ ಹೆಣನೊ
ಬ್ಬುಳಿಗಳೊಟ್ಟಿಲ ಬೆಟ್ಟಗಳನೊಡೆಬಗಿವುತಗಲದಲಿ ೩೩

ಮಡಿದುದರ್ಬುದ ಕೀಶಬಲ ನಭ । ಕಡರಿತರ್ಬುದ ವೈರಿಬಲ ಬಲು
ಗಡಿಯ ರಣ ವರ್ತಿಸಿತು ರೌಕುಳವಾಗೆ ರಣಭೂಮಿ
ನಡೆದುದಲ್ಲಿಂ ಮೇಲೆ ಕಪಿಬಲ । ದೊಡೆಯರಿಗೆ ಖಳಯೂಥನಾಥರ
ಗಡಣದತಿರಥ ವರಮಹಾರಥರಿಗೆ ಮಹಾಸಮರ ೩೪

ಅಚ್ಚಬಲ ಬಳಿಕೊದಗಿ ಭೂತಳ । ಬಿಚ್ಚಿ ಬಿಲುಜೇವಡೆಗಳಲಿ ಕವಿ
ದೆಚ್ಚರೈ ಕೈಕೋಂಡು ಕವಿದ ವನೇಚರಪ್ರಜವ
ಅಚ್ಚರಿಯನೇನೆಂಬೆನೂರ್ವರೆ । ಮುಚ್ಚಿದುದು ಮಡಿದಡವಿಗರ ರಣ
ರಚ್ಚೆಗರ ರೌಕುಳದ ರಣರೌದ್ರಾಭಿಸಾರದಲಿ ೩೫

ಸಮಸ್ತ ಶಸ್ತ್ರಾಸ್ತ್ರಗಳಿಂದ ಕಬ್ಬನ್ನು ಕತ್ತರಿಸುವಂತೆ ಕತ್ತರಿಸಿಹಾಕಿದರು. ೩೨. ಹಿಂದಿನ ಯುಗದಲ್ಲಿ ಅಸುರರೂ ಸುರರೂ ಸೊಕ್ಕಿನಿಂದ ತಾಗಿದಂತೆ ಕಾಳಗದ ತೋಳ ನವೆಯಿಂದ ಎರಡು ಸೈನ್ಯವೂ ಒಂದನ್ನು ಒಂದು ಎದುರಿಸಿತು. ರಾಕ್ಷಸರ ಆಯುಧಗಳು ಸೂರ್ಯ ಬಿಂಬದ ಪ್ರಕಾಶದಿಂದ ವಾನರರ ಕೋಡುಗಲ್ಲುಗಳ ಮತ್ತು ಮರದ ತೋಮರಾಯುಧ ಗಳ ಮೇಲೆ ಅಪ್ಪಳಿಸಿದವು. ೩೩. ರಾಕ್ಷಸಸೈನ್ಯ ಮತ್ತು ವಾನರಸೈನ್ಯಗಳು ಕಾಳಗ ಮಾಡುತ್ತ ಓಡಾಡಿದಾಗ ಕಾಲ್ತುಳಿತದಿಂದ ಭೂಮಿಯಿಂದೆದ್ದ ಧೂಳಿನ ಮೋಡವು ಬ್ರಹ್ಮಾಂಡವನ್ನು ಮುಸುಕಿತು. ಹೆಣಗಳ ರಾಶಿಯು ಬೆಟ್ಟಗಳನ್ನು ಕೊರೆದುಕೊಂಡು ಯುದ್ಧರಂಗದ ಅಷ್ಟಗಲದಲ್ಲೂ ಹರಿದು ರಕ್ತದ ಹೊಳೆಗಳು ಮೇಲಕ್ಕೆ ಚಿಮ್ಮಿದವು. ೩೪. ಒಂದು ಅರ್ಬುದ ವಾನರಸೈನ್ಯವು ಮರಣ ಹೊಂದಿತು. ಒಂದು ಅರ್ಬುದ ರಾಕ್ಷಸಸೈನ್ಯವು ಸ್ವರ್ಗ ಸೇರಿತು. ಪ್ರಚಂಡ ಯುದ್ಧದಿಂದ ಯುದ್ಧಭೂಮಿಯು ಭೀಕರವಾಗಿ ಪರಿಣಮಿಸಿತು. ಅಲ್ಲಿಂದ ಮುಂದೆ ಕಪಿಸೈನ್ಯದ ನಾಯಕರಿಗೂ ರಾಕ್ಷಸ ನಾಯಕರಲ್ಲಿ ಅತಿರಥ ಮಹಾರಥರಿಗೂ ಭಾರಿಕಾಳಗವು ನಡೆಯಿತು. ೩೫. ದಿಟ್ಟ ರಾಕ್ಷಸಸೈನ್ಯವು ಭೂಮಿ ಬಿರಿಯುವಂತೆ ನುಗ್ಗಿ ಮುತ್ತಿದ ವಾನರವೀರರನ್ನು ಧನುಷ್ಟಂಕಾರ ಮಾಡುತ್ತ ಬಾಣಗಳಿಂದ ಹೊಡೆಯಿತು. ಆಶ್ಚರ್ಯವನ್ನು ಏನೆಂದು ಹೇಳಲಿ, ಭಯಂಕರ ಯುದ್ಧದಲ್ಲಿ ಸತ್ತ ಛಲಗಾರರಾದ ಕಾಡಿನ ಕಪಿಗಳ ದೇಹಗಳಿಂದ

ಅಟ್ಟಿ ಕಪಿದಿಣ್ಣವಸುರಸೇನೆಯು । ಕಟ್ಟಳವಿಯುಲಿ ಬೋಯೆನುತ ಬೊ
ಬ್ಬಿಟ್ಟು ಪಡಿಬಲವವುಕಿದುದು ರವಿಸುತನ ಸನ್ನೆಯಲಿ
ಬೆಟ್ಟದಲಿ ಬೇರುಗಿದ ಬಲುಮರ । ಮಟ್ಟಿನಲಿ ಬಿಡೆ ಬೀಳುಗೆಡಹಿದ
ರಿಟ್ಟಣಿಯು ಹೆಣಭಾರದಲಿ ಭುಜಗೇಂದ್ರನಳವಳಿಯೆ ೩೬

ಹಳಚುವವು ಬಲವೆರಡು ಹರಣವ । ಕಳಚುವವು ಬಲವೆರಡೆ ರಣಸಂ
ಕುಲದ ಸೌರಂಭಾತಿಶಯ ತಲೆದೂಗಿಸಿತು ಸುರರ
ಅಳಿದವರನೆರಡೊಡ್ಡಿನಲಿ ಕ । ಟ್ಟಳೆಯ ಕಾಬವನಾವನೈ ಕೊಳು
ಗುಳವೊ ಕಾಲನ ಕಡಿತವೋ ಕಲ್ಪಿಸುವಡರಿದೆಂದ ೩೭

ಕರಡಿ ಮುಸು ಸಿಂಗಳಿಕ ಕೋಡಗ । ಕರಿ ರಥಾಶ್ವ ಪದಾತಿಚಯದು
ಬ್ಬರದ ನೆಣನಾಮಿಷ ಕದಂಬದಲಸ್ತ್ರಶೈಲದಲಿ
ಹೊರೆದುದಿಳೆ ತಾಳುದ್ದದಲಿ ಹ । ನ್ನೆರಡು ಯೋಜನದಗಲ ಪರಿಯಂ
ತರುಣಜಲನಿಧಿಯುಬ್ಬಿತಂತಜಿ ಮೇಲುಭಾಗದಲಿ ೩೮

ಕುಡಿದವರುಣಾಂಬುವನು ಮರದುದಿ । ಗಡರಿ ರಕ್ಕಸವಕ್ಕಿಗಳು ನಡು
ಗಡಲ ಹಿಡಿವೆಣಕಿಕ್ಕಿದವು ಹರುಗೋಲ ಭೂತಗಣ
ನುಡಿವಡಚ್ಚರಿ ನಾಗನಗರದೊ । ಳೊಡೆಯರನುಚರರೆರಡು ಪೈಕದ
ಪಡೆಯ ಹಸುಗೆಗೆ ಹೋರಿ ಹೊಯ್ದಾಡಿದರು ತಮ್ಮೊಳಗೆ ೩೯

ನೆಲವು ಮುಚ್ಚಿಹೋಯಿತು. ೩೬. ಸುಗ್ರೀವನ ಸಂಜ್ಞೆಯಿಂದ ಬೋ ಎಂದು ಬೊಬ್ಬಿರಿಯುತ್ತ ಕಪಿಸೈನ್ಯವು ಅಟ್ಟಿಸಿಕೊಂಡು ಬಂದು ಮುತ್ತಿ ಇರಿಯುವ ರಾಕ್ಷಸ ಸೈನ್ಯದ ಮೇಲೆ ಬಿದ್ದಿತು. ಬೆಟ್ಟಗಳಿಂದ ಬೇರು ಸಹಿತ ಕಿತ್ತು ಭಾರಿ ಮರಗಳಿಂದ ಕಪಿಗಳು ರಾಕ್ಷಸರನ್ನು ಹೊಡೆದು ಬೀಳಿಸಿದರು. ಅತಿಶಯವಾದ ಹೆಣಗಳ ಭಾರದಿಂದ ಆದಿಶೇಷನು ಬಳಲಿದನು. ೩೭. ಎರಡು ಸೈನ್ಯಗಳೂ ಒಂದರ ಮೇಲೊಂದು ರಭಸ ದಿಂದ ಬೀಳುವುವು. ಎರಡು ಸೈನ್ಯಗಳ ಭಟರೂ ಪ್ರಾಣ ಬಿಡುವರು. ರಾಕ್ಷಸ ವಾನರರ ನಡುವಿನ ಯುದ್ಧದ ಸಡಗರವು ದೇವತೆಗಳನ್ನು ತಲೆದೂಗಿಸಿತು. ಎರಡೂ ಸೈನ್ಯದಲ್ಲಿ ಸತ್ತವರನ್ನು ಸರದಿಯ ಪ್ರಕಾರ ಕಾಯುವವರಾರು ? ಯುದ್ಧವೋ ಯಮನ ಕತ್ತರಿಸುವಿಕೆಯೋ ಯೋಚನೆಮಾಡಲೂ ಅಸಾಧ್ಯ ಎಂದು ವಾಲ್ಮೀಕಿಗಳು ಯುದ್ಧವನ್ನು ವರ್ಣಿಸಿದರು. ೩೮. ಕರಡಿ, ಮುಸುವ, ಸಿಂಗಳೀಕ, ಕೋಡಗ, ಆನೆ, ರಥದ ಕುದುರೆ, ಕಾಲಾಳುಗಳ ಅಧಿಕವಾದ ಕೊಬ್ಬು ಮತ್ತು ಮಾಂಸಗಳು ಹಾಗೂ ಅಸ್ತ್ರಗಳು ಬೆಟ್ಟದಂತೆ ತಾಳೆಮರದಷ್ಟು ಎತ್ತರವಾಗಿ ಹನ್ನೆರಡು ಯೋಜನ ಅಗಲದಲ್ಲಿ ನೆಲವನ್ನು ತುಂಬಿದವು. ಕೊಬ್ಬು ಮಾಂಸಗಳ ಮತ್ತು ಅಸ್ತ್ರಗಳ ಬೆಟ್ಟದ ಮೇಲು ಭಾಗದಲ್ಲಿ ರಕ್ತದ ಮಡುವು ಉಕ್ಕಿತು. ೩೯. ರಾಕ್ಷಸಾಕಾರದ ಹಕ್ಕಿಗಳು ಮರಗಳ ತುದಿಯನ್ನೇರಿ ರಕ್ತವನ್ನು ಕುಡಿದವು. ಭೂತಗಳು ರಕ್ತದ ಕಡಲಿನ ನಡುವಿನ ಹೆಣ ಗಳನ್ನು ಪಡೆಯಲು ಹರುಗೋಲಿನ ಮೇಲೆ ಹೋದವು. ಹೇಳಲು ಆಶ್ಚರ್ಯ. ಆಗ

ತರುಣ ಕೇಳೈದನೆಯ ದಿನ ದು । ರ್ಧರ ಮಹಾಹವ ವರ್ತಿಸಿತು ಕ
ರ್ಬುರ ಕಪೀಂದ್ರಚಮೂಪರಿಗೆ ಚಲಿಸಲು ಚತುರ್ವದನ
ವಿರಚಿತಾಖಿಲಭುವನ ಬೇಸರ । ಬೆರಸಿದುದು ಭವಕಮಲಭವರಿಗೆ
ಶಿರಕೆ ವೇದನೆ ಹುಟ್ಟ ಹೊದಕುಳಿಗುಟ್ಟಿತಮರಗಣ ೪೦

ಬವರ ಬಲಿದುದು ಬಳಿಕ ಕಲಿ ಜಾಂ । ಬವನೊಳಗ್ಗದ ವೀರಕುಂಭಗೆ
ಪವನಸುತ ಕುಂಭೋದರಂಗಾ ವಾಲಿಸುತನೊಡನೆ
ನಿವಡಿಸಿತ್ತು ನರಾಂತಕಂಗು । ತ್ಸವದ ರಣವಾ ದ್ವಿವಿದನಲಿ ಸಂ
ಭವಿಸಿತಸುರ ಸುಮಂತಕಂಗೆ ಸಮಗ್ರ ಸಂಗ್ರಾಮ ೪೧

ಸಂಧಿಸಿತು ಸಂಗ್ರಾಮವಗ್ಗದ । ಮೈಂದನೆಂಬ ಕಪೀಂದ್ರನಲಿ ಮದ
ವೊಂದಿ ದುರ್ಮುಖ ಬಲ ಮಹಾಕಲಿ ರಾಕ್ಷಸೇಂದ್ರಂಗೆ
ಹಂದೆಗರೆ ರಕ್ಕಸರ ಸಂಗರ । ದಂದ ಲೇಸೆನಲಮರಸೇನಾ
ವೃಂದ ಬೆಱಗಿಡೆ ಹೊಕ್ಕು ಹೋರಿದರಳುಕೆ ಭುವನಚಯ ೪೨

ಸುಪ್ರತಾಪನಲಾ ಮಹಾ ಸಮ । ರಪ್ರಸಿದ್ಧನಲಾ ಧರಿತ್ರಿಯೊ
ಳಾ ಪ್ರಹಸ್ತನು ಕೇಳಿದೈ ಕುಶ ಬಳಿಕ ಕೌತುಕವ
ಕ್ಷಿಪ್ರದಿಂದೆಱಗಿದನು ರವಿತನು । ಜ ಪ್ರಭಂಜನಸೂನು ಮುಖ್ಯ ಮ
ಹಾಪ್ರಚಂಡರ ಬಳಿಗಳಲಿ ಬಿಲುರವದ ರವಳಿಯಲಿ ೪೩

ಸ್ವರ್ಗದ ನಗರದಲ್ಲಿ ಒಡೆಯರು ಮತ್ತು ಸೇವಕರು ಎರಡೂ ಕಡೆಯ ಸೈನ್ಯದ ಹಂಚಿಕೆಗಾಗಿ ತಮ್ಮತಮ್ಮಲ್ಲೇ ಹೊಡೆದಾಡಿದರು. ೪೦. ತರುಣ ಲವನೇ ಕೇಳು, ಐದನೆಯ ದಿನ ರಾಕ್ಷಸನಾಯಕರಿಗೂ ವಾನರನಾಯಕರಿಗೂ ಘೋರ ಯುದ್ಧವಾಯಿತು. ಬ್ರಹ್ಮನಿಂದ ಸೃಷ್ಟಿಯಾದ ಸಮಸ್ತ ಲೋಕಗಳು ಅಲ್ಲಾಡಿದವು. ಶಿವ ವಿಷ್ಣುಗಳಿಗೆ ಬೇಸರವಾಯಿತು. ದೇವತೆಗಳು ತಲೆನೋವಿನಿಂದ ಸಂತಾಪಗೊಂಡರು. ೪೧. ಅನಂತರ ವೀರ ಜಾಂಬವನೊಡನೆ ಕಲಿ ಕುಂಭನಿಗೆ ಯುದ್ಧ ಸಂಭವಿಸಿತು. ಹನುಮಂತ ಮತ್ತು ಕುಂಭೋದರ, ವಾಲಿಸುತ ಅಂಗದ ಮತ್ತು ನರಾಂತಕ ಇವರ ನಡುವೆ ಯುದ್ಧವಾಯಿತು. ದ್ವಿವಿದನಿಗೂ ಸಮಂತಕಾಸುರನಿಗೂ ಭಾರಿ ಹೋರಾಟ ಹತ್ತಿತು. ೪೨. ಶ್ರೇಷ್ಠ ವಾನರನಾಯಕ ಮೈಂದನೊಡನೆ ಪ್ರಬಲಪರಾಕ್ರಮಿ ದುರ್ಮುಖನೆಂಬ ರಾಕ್ಷಸ ನಾಯಕನಿಗೆ ಯುದ್ಧವೊದಗಿತು. ಅಸುರರು ಹೇಡಿಗಳೆ ? ರಾಕ್ಷಸರ ಕದನಕೌಶಲವು ಉತ್ತಮವಾದುದು ಎಂದು ದೇವತೆಗಳ ಸೈನ್ಯವು ಆಶ್ಚರ್ಯಪಡುತ್ತಿರಲು ಇಬ್ಬರು ವೀರರೂ ಒಬ್ಬರ ಮೇಲೊಬ್ಬರು ನುಗ್ಗಿ ಹೋರಾಡಿದರು. ಇದನ್ನು ಕಂಡು ಸಮಸ್ತ ಲೋಕಗಳೂ ಹೆದರಿದವು. ೪೩. ಪ್ರಹಸ್ತನು ಮಹಾಪರಾಕ್ರಮಶಾಲಿ ಮತ್ತು ಮಹಾ ಯುದ್ಧವೀರನೆಂಬುದಾಗಿ ಜಗತ್ಪ್ರಸಿದ್ಧನಾಗಿದ್ದಾನೆ. ಕುಶ, ಮುಂದಿನ ಕೌತೂಹಲಕರ ಘಟನೆಯನ್ನು ಆಲಿಸು. ಪ್ರಹಸ್ತನು ಬಿಲ್ಲಿನ ಹಗ್ಗವೆಳೆದು ಶಬ್ದಮಾಡುತ್ತ ಚುರುಕಿ

ತೋಱನಿವರಿಡುವದ್ರಿಕುಜದು । ಬ್ಬೇಱುವೊಯ್ಲಿಗೆ ಮಾಯೆಯಲಿ ಮೈ
ದೋಱುವನು ಜಯಮುಖದೊಳಬ್ಬರದುಬ್ಬುಗವಳದಲಿ
ತೋಱಿ ತೋಱದೆ ಕೊಂದನೀ ಪರಿ । ಮೂಱು ನಿರ್ಬುದ ಬಲವ ಬಿದ್ದುದು
ದೂಱು ದೂಷಣ ಭೀಷಣನ ಬಳಿಯಲಿ ನಿಶಾಚರನ ೪೪

ಆವ ಚಿತ್ರವೊ ರಥ ತುರಂಗಮ । ರಾವವಿಲ್ಲಾ ರಣದೊಳಗೆ ಬಿಲು
ಜೇವಡೆಯ ಬಿಱುಬಿಲ್ಲ ಸೂತನ ಬೊಬ್ಬೆ ತಾನಿಲ್ಲ
ಆ ವಿಬುಧ ವಿದ್ವಿಷನ ಸಮರಶ । ರಾವಳಿಯ ದನಿಯಿಲ್ಲ ಮಾರಣದ
ಗಾವಳಿಯ ಗತಿವಂತರಿದ್ದುದು ನಿಮ್ಮ ಸೇನೆಯಲಿ ೪೫

ಹನುಮನೊಡ್ಡನು ಮುಱಿದು ಹರಿನಂ । ದನನ ನಿಜನಂದನನ ಸೇನಾ
ವನಧಿಯನು ಮೊಗೆದೀಂಟಿ ನಳ ನೀಲಾದಿ ನಾಯಕರ
ಮೊನೆಯ ಮೋಹರವನು ನಿವಾರಿಸಿ । ಪನಸ ಗವಯ ಗವಾಕ್ಷ ಶತಬಲಿ
ವಿನುತ ವೀರಸುಷೇಣರನು ಹರೆಗಡಿದು ಬೊಬ್ಬಿಱಿದ ೪೬

ಘಾಯವಡೆದರು ಮಿಕ್ಕ ಸೇನಾ । ನಾಯಕರು ಬಳಿಕಾ ಪ್ರಹಸ್ತನ
ಸಾಯಕದ ಬಲುಗಲಹ ಸೀವರಿಕೆಯನು ರಘುಕುಲದ
ರಾಯರಲಿ ಹುಟ್ಟಿಸಿತು ನಿಂದಿದ । ನಾಯುಧದ ಹೊಳಹಿನಲಿ ಘನ ರೌ
ದ್ರಾಯಮಾನಿತನಾ ವಿಭೀಷಣನಸುರನಿದಿರಿನಲಿ ೪೭

ನಿಂದ ಸುಗ್ರೀವ, ಮಾರುತಿ ಮೊದಲಾದ ವೀರರ ಮೇಲೆರಗಿದನು. ೪೪. ವಾನರರು ಬೀರುವ ಬೆಟ್ಟ ಮರಗಳ ಬಿರುಸೇಟಿಗೆ ಪ್ರಹಸ್ತನು ಅದೃಶ್ಯನಾಗಿ ಏಟನ್ನು ತಪ್ಪಿಸಿಕೊಂಡು ಅಬ್ಬರಿಸಿ ಗರ್ವದಿಂದ ಮಾಯೆದೋರಿ ಜಯ ಸಾಧಿಸುವನು. ಕಪಿವೀರರ ಕಣ್ಣಿಗೆ ಕಾಣಿಸಿಯೂ ಕಾಣಿಸಿಕೊಳ್ಳದೆ ಮೂರು ನ್ಯರ್ಬುದ (ಮೂವತ್ತು ಕೋಟಿ) ವಾನರಸೈನ್ಯವನ್ನು ಕೆಡವಿದನು. ಆಗ ದೂಷಣನನ್ನು ಕೊಂದ ರಾಮನಿಗೆ ಈ ರಾಕ್ಷಸನ ವಿಚಾರವಾಗಿ ದೂರು ಹೋಯಿತು. ೪೫. "ಏನಾಶ್ಚರ್ಯವೋ, ಯುದ್ಧದಲ್ಲಿ ರಥ ಕುದುರೆಗಳ ಶಬ್ದವಿಲ್ಲ, ಬಿಲ್ಲಿನ ಧನುಷ್ಟಂಕಾರದ ಬಿರುಸಿಲ್ಲ, ಸೂತನ (ರಥವನ್ನು ನಡೆಸುವವನ) ಬೊಬ್ಬೆಯು ಇಲ್ಲ, ಆ ಅಸುರನ ಬಾಣಗಳ ಗಲಾಟೆಯಿಲ್ಲ. ಆದರೆ ನಿಮ್ಮ ಸೈನ್ಯದಲ್ಲಿ ಪ್ರಾಣಕಳೆದುಕೊಳ್ಳುವವರ ರಂಪ ಮಾತ್ರ ಇದ್ದಿತು" ಎಂದು ರಾಮನಿಗೆ ದೂರಿತ್ತರು. ೪೬. ಹನುಮಂತನ ವ್ಯೂಹವನ್ನು ಮುರಿದು ಹಾಕಿ, ಅಂಗದನ ಸೈನ್ಯಸಾಗರವನ್ನು ತೋಡಿ ಕುಡಿದು, ನಳ ನೀಲನೇ ಮೊದಲಾದ ವಾನರನಾಯಕರ ಮುಂದಿನ ಸಾಲಿನ ಸೈನ್ಯವನ್ನು ಕೊಂದು, ಪನಸ ಗವಯ ಗವಾಕ್ಷ ಶತಬಲಿ ವೀರಸುಷೇಣರನ್ನು ಹೊಡೆದು ಚದುರಿಸಿ ಬೊಬ್ಬೆಹಾಕಿದ ಪ್ರಹಸ್ತ. ೪೭. ಉಳಿದ ವಾನರಸೇನಾನಾಯಕರು ಗಾಯಗೊಂಡರು. ಅನಂತರ ಪ್ರಹಸ್ತನ ಬಾಣದ ಭಾರಿಕಾಳಗವು ರಘುಕುಲದ ರಾಜರಿಗೆ ಬೇಸರವನ್ನುಂಟುಮಾಡಿತು. ಆಗ ವಿಭೀಷಣನು ಆಯುಧವನ್ನು ಹಿಡಿದುಕೊಂಡು ಪ್ರಹಸ್ತನ ಎದುರಿನಲ್ಲಿ ಉಗ್ರನಾಗಿ

ಮರುಳನೈ ನೀನಕಟ ಮೊಲನು । ಬ್ಬರ ಮೃಗೇಂದ್ರನ ಕೊಡೆ ನೀತಿ
ಜ್ಞರಿಗೆ ಗುರು ನೀನೆಸಗಲಹುದೆ ವಿವೇಕಶೂನ್ಯತೆಯ
ನರನೆ ರಘುಪತಿ ಕೆಲಕೆ ಸಾರ್ಕ । ರ್ಬುರರಜಾಳಿಯ ಮಿಕ್ಕ ದಿವಿಜರ
ನೆರವಿಯಲಿ ಮೆಱೆ ಮೆಱೆಯದಾಹವವಿಲ್ಲಿ ನಿನಗೆಂದ ೪೮

ಗದೆ ಬಿಱಿಸು ನಮ್ಮದು ವಿವೇಕವ । ನೊದೆದು ರಣವನು ರಾಮಚಂದ್ರನ
ಲೊದಗಿದರೆ ಸೈರಿಸುವರಲ್ಲಾವ್ ಸಾರು ನೀನೆನುತ
ಇದಿರಲೈದುವ ರಕ್ಕಸನ ರಥ । ದಿದಿರಿನಲಿ ನಿಂದಾ ವಿಭೀಷಣ
ನುದುರಿಸಿದನುರಿಗಿಡಿಯ ಗಾಡಿಯ ಗದೆಯ ಝಾಡಿಯಲಿ ೪೯

ಬಲ್ಲೆವಾವ್ ನೀನೆಂದ ಹಮ್ಮಿನ । ಘುಲ್ಲಣೆಯ ಹೆಂಪಿನ ವಿವೇಕವ
ನೊಲ್ಲೆನೆನಬಹುದೇ ನಿಜಸ್ವಾಮಿಯ ನಿರೂಪಕವ
ಖುಲ್ಲನೈ ನೀ ಕೆಲಕೆ ಸಾರ್ನಿ । ನ್ನಲ್ಲಿ ಬಳಸೆನು ಬಾಣವನು ರಣ
ಮಲ್ಲ ರಾಮನಲೊದಗುವುದ ನೀ ನೋಡು ಸಾಕೆಂದ ೫೦

ಎಂಬ ನುಡಿಯಿಂದೊಳಗೆ ಲಯದು । ಗ್ರಾಂಬಕನ ಲಳಿಯಂತೆ ರೋಷಾ
ಡಂಬರದ ಡಾವರದಲಗ್ನಿಕುಮಾರ ಖಾತಿಯಲಿ
ಅಂಬುಜಾಕ್ಷನ ಸರಿಸದಲಿ ರಣ । ಡೊಂಬಿಗನ ಕಂಡಮಮ ವಿಲಯಾ
ಡಂಬದಾಟೋಪದಲಿ ಕಿಡಿಗೆದಱಿದನು ಕಲಿ ನೀಲ ೫೧

ನಿಂತನು. ೪೮. "ನೀನು ಹುಚ್ಚನಲ್ಲದೆ ಮತ್ತೇನು. ಮೊಲದ ಅರ್ಭಟ ಸಿಂಹದೆದುರಿಗೆ ನಡೆಯುವುದೆ ? ನೀನು ನೀತಿಶಾಸ್ತ್ರ ತಿಳಿದವರಿಗೆ ಗುರುವಾಗಿದ್ದೀಯೆ. ವಿವೇಕವನ್ನು ಕಳೆದುಕೊಳ್ಳಬಹುದೆ ನೀನು ? ರಘುಪತಿಯು ಮಾನವನೆ ? ಹೋಗತ್ತ. ಬ್ರಹ್ಮನೇ ಮೊದಲಾದ ದೇವತೆಗಳ ಗುಂಪಿನೊಡನೆ ರಾಕ್ಷಸರ ಕದನವನ್ನು ಮೆರೆ ಹೋಗು. ಇಲ್ಲಿ ನಿನ್ನ ಯುದ್ಧ ನಡೆಯುವುದಿಲ್ಲ" ಎಂದು ವಿಭೀಷಣ ಪ್ರಹಸ್ತನನ್ನು ಹಂಗಿಸಿದ. ೪೯. "ನಮ್ಮ ಗದೆ ಒರಟು. ವಿವೇಕವನ್ನು ಬಿಟ್ಟು ರಾಮಚಂದ್ರನಮೇಲೆ ಯುದ್ಧಕ್ಕೆ ಬಂದರೆ ನಾವು ಸಹಿಸುವವರಲ್ಲ, ಹೋಗಾಚೆ" ಎಂದು ನುಡಿದು ವಿಭೀಷಣನು ಪ್ರಹಸ್ತನ ರಥದ ಎದುರಿಗೆ ನಿಂತು ಗದೆಯನ್ನು ಬೀಸಿ ಬೆಂಕಿಯ ಕಿಡಿಗಳನ್ನುದುರಿಸಿದನು. ೫೦. "ನೀನು ಹೇಳಿಕೊಟ್ಟ ವಿವೇಕದ ಹಿಂದಿನ ನಿನ್ನ ಗರ್ವ ನಮಗೆ ಗೊತ್ತು. ಒಡೆಯನ ಆಜ್ಞೆಯನ್ನು ಒಲ್ಲೆ ಎಂದು ನಿರಾಕರಿಸಬಹುದೇ ? ನೀನು ನೀಚ, ತೊಲಗು. ನಿನ್ನ ಮೇಲೆ ನಾನು ಬಾಣ ಬಿಡುವುದಿಲ್ಲ. ಯುದ್ಧವೀರ ರಾಮನ ಮೇಲೆ ನಾನು ಮಾಡುವ ಕಾಳಗವನ್ನು ನೀನು ನೋಡು, ಸಾಕು" ಎಂದ ಪ್ರಹಸ್ತ. ೫೧. ಎಂದು ನುಡಿಯು ವುದರೊಳಗೆ ಪ್ರಳಯದ ಮುಕ್ಕಣ್ಣನಂತೆ ಕೋಪೋದ್ರಿಕ್ತನಾದ ಅಗ್ನಿಕುಮಾರ ನೀಲನು ವೇಗದಿಂದ ಬಂದು ಶ್ರೀರಾಮನ ಸಮೀಪದಲ್ಲಿ ಯುದ್ಧದೊಂಬರಾಟದವನನ್ನು ಕಂಡು

ಅಕಟ ರಘುರಾಜೇಂದ್ರನಲಿ ಹಾ । ಯಿಕಿದ ಸಮರವನಿವನು ತಾನೀ
ಸಕಲ ಬಲದೊಡೆತನವ ಹೊತ್ತುದು ವ್ಯರ್ಥವಾಯ್ತೆನುತ
ಭೃಕುಟಿಬದ್ಧ ಸರೋಷದಂತ । ಪ್ರಕರಪೀಡಿತ ಕಂಪಿತಾಧರ
ನಿಕಟ ನಿರ್ಭರ ಶೌರ್ಯನೈದಿದನಸುರದಳಪತಿಯ ೫೨

ಈತ ಬರಲೀತನ ಕಠೋರದ । ರೀತಿಯನು ಕಂಡಸುರರಾಯನ
ಜಾತಶತ್ರುವಿಗೆಜಿಗಿ ಹಿಂಬರಿಕೆಯಲಿ ಹಜ್ಜೆಗಳ
ಆತು ನಿಲುತ್ಯೆದಿದನು ಬಳಿಕೀ । ವೀತಿಹೋತ್ರನ ಸುತನ ಘನ ರೋ
ಪಾತಿಶಯದುಬ್ಬರವ ಹೊಗಳುವೆನೇನ ತಾನೆಂದ ೫೩

ಏನೆಲವೊ ಖಳ ಖಳರ ದಳಪತಿ । ನೀನೆ ತಾನಿದನಱಿದುದಿಲ್ಲ ದ
ಶಾನನನ ಸಹಭವನು ಸೂಚಿಸಲಾದುದಱಿವೆನಗೆ
ಈ ನರೇಂದ್ರನ ಕೂಡೆ ಕಲಹವ । ನೀನು ಕೈಕೊಳಲಹುದೆ ಕಪಿಸೇ
ನಾನಿ ತಾನಿರೆ ತರಳತನ ನಿನಗುಚಿತವೇಯೆಂದ ೫೪

ಅಹುದು ನೀ ವಾನರವರೂಥಿನಿ । ಗಹತಬಲ ಸೇನಾನಿ ರಣವಿ
ನ್ನಹುದು ಹೇಳಿದು ಲೇಸಮಾಡಿದೆ ಮೋಸ ಹೊಗದಂತೆ
ಇಹಪರಂಗಳೊಳೆರಡಱಲಿ ಸ । ನ್ನಿಹಿತವಾವುದು ನಿನಗೆ ಹೇಳದ
ನಹುದುಮಾಡುವೆನೆನುತ ಹೂಳಿದನಂಬಿನಲಿ ಕಪಿಯ ೫೫

ಪ್ರಳಯದಾಟೋಪದಿಂದ ಕಿಡಿಕಾರಿದನು. ೫೨. 'ಅಯ್ಯೋ, ರಘುರಾಜೇಂದ್ರನೊಡನೆ ಇವನು ಯುದ್ಧಕ್ಕೆ ಬಂದನು. ನಾನು ಈ ಸಮಸ್ತ ವಾನರಸೈನ್ಯದ ಒಡೆತನದ ಜವಾಬ್ದಾರಿಯನ್ನು ಹೊತ್ತುಕೊಂಡುದು ವ್ಯರ್ಥವಾಯಿತು' ಎನ್ನುತ್ತ ಹುಬ್ಬುಗಂಟಿಕ್ಕಿಕೊಂಡು ಕೋಪದಿಂದ ಹಲ್ಲುಕಡಿಯುತ್ತ ತುಟಿ ನಡುಗುತ್ತಿರಲು ತುಂಬುಪರಾಕ್ರಮಿ ನೀಲನು ರಾಕ್ಷಸದಳಪತಿಯ ಸಮೀಪಕ್ಕೆ ಬಂದನು. ೫೩. 'ನೀಲನು ಬರಲು ಇವನ ಕಠೋರತೆಯನ್ನು ನೋಡಿ ವಿಭೀಷಣನು ಅಜಾತಶತ್ರುವಾದ ರಾಮನಿಗೆ ನಮಸ್ಕರಿಸಿ ಹಿಂದಕ್ಕೆ ಹೆಜ್ಜೆಯಿಡುತ್ತ ಬಂದು ನಿಂತನು. ಅನಂತರ ಅಗ್ನಿಯಮಗನಾದ ನೀಲನ ಉಗ್ರಕೋಪದ ರಭಸವನ್ನು ನಾನು ಏನೆಂದು ಹೊಗಳಲಿ ಎಂದು ವಾಲ್ಮೀಕಿಗಳು ವರ್ಣಿಸಿದರು. ೫೪. "ಏನೋ ದುಷ್ಟ, ರಾಕ್ಷಸರ ದಳಪತಿ ನೀನೇಯೋ ? ನನಗೆ ಇದು ಗೊತ್ತಾಗಲಿಲ್ಲ. ರಾವಣನ ತಮ್ಮನು ಸೂಚಿಸಿದುದರಿಂದ ನನಗೆ ತಿಳಿಯಿತು. ವಾನರಸೇನಾಪತಿ ನಾನಿರಬೇಕಾದರೆ ಈ ರಾಜೇಂದ್ರ ರಾಮನೊಡನೆ ನೀನು ಕಾಳಗವನ್ನು ಕೈಗೊಳ್ಳಬಹುದೇ ? ಈ ಹುಡುಗುತನ ನಿನಗೆ ಯೋಗ್ಯವೇ ?" ಎಂದು ಕೇಳಿದ ನೀಲ. ೫೫. "ಹೌದು, ನೀನು ವಾನರಸೇನೆಗೆ ಕುಗ್ಗದ ಬಲವುಳ್ಳ ಸೇನಾನಿಯುಹುದು. ಇನ್ನು ಯುದ್ಧವನ್ನು ಕೊಡುತ್ತೇನೆ. ಮೋಸಹೋಗದಂತೆ ವಿಷಯವನ್ನು ತಿಳಿಸಿ ಒಳ್ಳೆಯದುಮಾಡಿದೆ. ಈ ಲೋಕ ಪರಲೋಕಗಳಲ್ಲಿ ಯಾವುದು ನಿನಗೆ ಸಮೀಪವಾಗಿದೆ ಎಂಬುದನ್ನು ಹೇಳು, ಅದನ್ನು ನಿಜಮಾಡಿಕೊಡುತ್ತೇನೆ" ಎಂದು ಹೇಳುತ್ತ

ಅದ್ದನೋ ದಳಪತಿ ಪತತ್ರಿಯ । ದದ್ದಳದ ವಾರುಧಿಯೊಳೆನುತೊಳ
ಬಿದ್ದು ಹೊಕ್ಕುದು ಹನುಮ ಹರಿಹಯಸುತಸುತಾದಿಗಳು
ಉದ್ದುರುಟು ಖಳನವರ ಸಮರವ । ತಿದ್ದುವನಿತಱೊಳಂಬನಗಲಿಸು
ತೆದ್ದನಬುಧಿಯ ಸುರಿದು ಸೊಕ್ಕುವ ಶಿಖಿಯವೊಲು ನೀಲ ೫೬

ಕುಲಿಶಕೋಟಿಯ ಕೂಟವೀತನ । ಬಲಿದ ಮುಷ್ಟಿಯಲೆದ್ದುದೋ ಜಗ
ದಳಿವಿನಸಮಾಂಬಕನ ನೊಸಲಿನ ವಿಷಮಲೋಚನದ
ಕುಳುಗಿಡಿಗಳಗ್ನಿಜನ ಮುಷ್ಟಿಯ । ಬಳಿಯಲವತರಿಸಿದವೊ ಪೇಳೆನ
ಲೊಲೆದು ತಿವಿದನು ತೀವ್ರಹತಿಯಲಿ ರಿಪುಚಮೂಪತಿಯ ೫೭

ಒಟ್ಟಿ ಮುಱಿದುದು ಸೀಸಕದ ರಥ । ನಟ್ಟುದಿಳೆಯಲಿ ರಕುತಜಲ ಹೊನ
ಲಿಟ್ಟು ಹರಿದುದು ಹಣೆವಿಡಿದು ಪಾದಾಂತ ಪರಿಯಂತ
ಇಟ್ಟನವ ಬಳಿಕೀತನನು ಹೇ । ರಿಟ್ಟಿಯಲಿ ಹಲಕಿನಲಿ ಹಾಯ್ದುದು
ಬೆಟ್ಟಗೈಗಳ ಭಟರು ಹಾಯೆಂದೊದಱಿತಿದಿರಿನಲಿ ೫೮

ಉಗುಳಿತಲಗರುಣಾಂಬುಧಾರೆಯ । ನಗಲದಲಿ ಬಳಿಸಲಿಸಿ ರಕ್ಕಸ
ನುಗಿದು ತಿವಿದನು ಕಪಿಯ ಕಿಗ್ಗಟ್ಟಿನ ಕಠಾರಿಯಲಿ
ಜಗದೊಳೇನತಿಬಲನೊ ವಹ್ನಿಯ । ಮಗನು ಮದದಲಿ ನೋವ ನೋಡದೆ
ಜಗವುಘೇಯೆನಲೆಱಗಿದನು ರಕ್ಕಸನ ದಳಪತಿಯ ೫೯

ಪ್ರಹಸ್ತನು ನೀಲನನ್ನು ಬಾಣಗಳಿಂದ ಮುಚ್ಚಿಬಿಟ್ಟನು. ೫೬. 'ಸೇನಾಪತಿಯು ಬಾಣಗಳ ಅಬ್ಬರದ ಸಮುದ್ರದಲ್ಲಿ ಮುಳುಗಿಹೋದನೋ'! ಎನ್ನುತ್ತ ಹನುಮಂತ. ವಾಲಿಯ ಮಗ ಅಂಗದ ಮೊದಲಾದವರು ವ್ಯೂಹದ ಒಳಹೊಕ್ಕರು. ಧೂರ್ತ ರಾಕ್ಷಸನು ಅವರೊಡನೆ ಯುದ್ಧಕ್ಕೆ ತೊಡಗುವಷ್ಟರಲ್ಲಿ ಸಮುದ್ರದನೀರನ್ನೆಲ್ಲ ಚೆಲ್ಲಿ ಉಕ್ಕುವ ಅಗ್ನಿಯಂತೆ ನೀಲನು ಬಾಣಗಳನ್ನು ಬಿಡಿಸಿಕೊಂಡು ಮೇಲೆದ್ದುಬಂದನು. ೫೭. ಕೋಟಿ ಸಿಡಿಲಿನ ಸಮೂಹವು ಇವನ ಬಿಗಿದ ಮುಷ್ಟಿಯಿಂದ ಎದ್ದಿತೋ, ಪ್ರಳಯರುದ್ರನ ಹಣೆಗಣ್ಣಿನ ಸಲಾಕಿಯಕಿಡಿಗಳು ಅಗ್ನಿಕುಮಾರನ ಮುಷ್ಟಿಯಿಂದ ಹುಟ್ಟಿದವೋ ಎಂಬಂತೆ ನೀಲನು ಶತ್ರುಸೇನಾಪತಿಯನ್ನು ಮೈದೂಗಿ ಮುಷ್ಟಿಯಿಂದ ಜೋರಾಗಿ ಹೊಡೆದನು. ೫೮. ನೀಲನ ಮುಷ್ಟಿಯ ಹೊಡೆತದಿಂದ ಪ್ರಹಸ್ತನ ಶಿರಸ್ತ್ರಾಣದ ಅಂಚು ಮುರಿಯಿತು, ರಥವು ನೆಲದಲ್ಲಿ ಹೂತುಕೊಂಡಿತು, ಹಣೆಯಿಂದ ಕಾಲಿನವರೆಗೆ ರಕ್ತದ ಪ್ರವಾಹ ಹರಿಯಿತು. ಆಗ ಪ್ರಹಸ್ತನು ನೀಲನನ್ನು ದೊಡ್ಡ ಈಟಿಯಿಂದ ಹೊಡೆದನು. ಅದು ನೀಲನ ಗಲ್ಲದ ಕೆಳಗಡೆಯಿಂದ ಹಾದುಹೋಯಿತು. ಬೆಟ್ಟಗಳನ್ನು ಕೈಗಳಲ್ಲಿ ಹಿಡಿದುಕೊಂಡಿದ್ದ ವಾನರವೀರರು ಹಾ ಎಂದು ಕೂಗಿಕೊಂಡರು. ೫೯. ಈಟಿಯು ಬಾಯಿ ಅಷ್ಟಗಲದಲ್ಲೂ ಧಾರೆಯಾಗಿ ರಕ್ತವನ್ನು ಉಗುಳಿತು. ಅದರ ಹಿಂದೆಯೇ ರಾಕ್ಷಸನು ಸೊಂಟಕ್ಕೆ ಕಟ್ಟಿದ್ದ ಕಠಾರಿಯನ್ನು ಸೆಳೆದು ನೀಲನನ್ನು ತಿವಿದನು. ಅಗ್ನಿಕುಮಾರನು ಜಗತ್ತಿನಲ್ಲಿ ಅದೆಷ್ಟು ಬಲಶಾಲಿಯೋ ! ಯುದ್ಧದ ಮದದಿಂದ ನೋವನ್ನು ಲಕ್ಷಿಸದೆ

ಕಳಚಿ ಖಳನಾ ಕಪಿಯ ಘಾಯವ । ನೊಲೆದು ಪರಿಘದಲೆಱಗಲದ ಕಪಿ
ಸೆಳೆದು ಬಿಸುಟಬ್ಬರಿಸಿ ತಿವಿದನು ಹಗೆಯ ಹೇರುರವ
ಮುಲೆತು ಮುಂಡಿಯಲಸುರನಾಯೆಂ । ದಿಳುಹಿದನು ಮುಸಲವನು ಮಸ್ತಕ
ದಲಿ ಮರುತ್ಸಖಸುತನ ಸುಮ್ಮಾನಿಸೆ ಖಳವ್ರಾತ ೬೦

ನೋವ ನೋಡದೆ ಜಗದ ವೀರರ । ದೇವನೊಳಹೊಕ್ಕಿನ ಜನಾಹವ
ರಾವು ಮುರುಘು ಭಾಪೆನಲು ತಿವಿದನು ಬೀಳಲರಿಭಟನ
ಹಾವು ಹದ್ದಿನ ಪದಹತಿಗೆ ನೆಱೆ । ನೋವವೊಲು ನೆಲಕೊಱಗಿ ರಕ್ಕಸ
ನಾ ವಿಘಾತಿಯೊಳೆದ್ದು ಡೊಕ್ಕರವಾಯ್ದನಗ್ನಿಜನ ೬೧

ಡೊಕ್ಕರಿಸಿದರಿಭಟನ ಬೀಸಿ ನ । ಭಕ್ಕೆ ಬಿಸುಟುಬ್ಬೆಱೆದು ಬೊಬ್ಬೆಯ
ನಿಕ್ಕಿ ಬಾಹಪ್ಪಳಿಸಿ ನಿಲೆ ನಿಮಿಷದಲಿ ಖಳ ಮುಳಿದು
ಇಕ್ಕಲಿಸಿ ಮುಗಿಲಿಂದ ಗಿರಿಶಿಖ । ರಕ್ಕೆ ಸುಳಿವ ಮಹೋಗ್ರ ಸಿಡಿಲವೊ
ಲೆಕ್ಕತುಳದಲಿ ಬಂದು ಹಳಚಿದನಗ್ನಿನಂದನನ ೬೨

ಬಿದ್ದನಗ್ನಿಜನಿಳೆಗೆ ಬಱಸಿಡಿ । ಲೊದ್ದ ಗಿರಿಯಂದದಲಿ ಮಥನದ
ಲಿದ್ದ ಶರಧಿಯೊಳೇಳ್ವ ಮಂದರದಂತೆ ಕಲಿ ನೀಲ
ಎದ್ದು ತಿವಿದನು ಖಳನ ಕಾಲನ । ಬದ್ದಿನರು ಕಂಗಳಿಗೆ ಸುಳಿಯಲು
ಹೊದ್ದಿ ಹೇರುರದೊಳಗೆ ಮುಂಡಿಸಿ ಖಳನೊಳಿಂತೆಂದ ೬೩

ಜಗತ್ತು ಉಘೇ ಎಂದು ಹೊಗಳುತ್ತಿರಲು ರಾವಣನ ಸೇನಾಪತಿಯು ಮೇಲೆರಗಿದನು. ೬೦. ರಾಕ್ಷಸನು ನೀಲನ ಏಟನ್ನು ತಪ್ಪಿಸಿಕೊಂಡು ಮೈತಿರುಗಿಸಿ ಪರಿಘಾಯುಧದಿಂದ ನೀಲನಮೇಲೆ ಬೀಳಲು ಅದನ್ನು ನೀಲನು ಕಿತ್ತುಕೊಂಡು ಎಸೆದು ಪ್ರಹಸ್ತನ ಹರವಾದ ಎದೆಗೆ ಹೊಡೆದನು. ರಾಕ್ಷಸನು ಪ್ರತಿಭಟಿಸಿ ಆ ಎಂದು ಕೂಗುತ್ತ ಮಂಡಿಯ ಮೇಲೆ ಎದ್ದುನಿಂತು ಮುಸಲಾಯುಧದಿಂದ ನೀಲನ ತಲೆಗೆ ಹೊಡೆದನು. ಆಗ ರಾಕ್ಷಸರು ಹರ್ಷಿತರಾದರು. ೬೧. ಮುಸಲಾಯುಧದ ನೋವನ್ನು ಗಮನಿಸದೆ ಜಗದೇಕವೀರ ನೀಲನು ಒಳನುಗ್ಗಿ ಪ್ರಹಸ್ತನು ಬೀಳುವಂತೆ ತಿವಿದನು. ಸುಗ್ರೀವನ ಕಡೆಯ ವೀರರು ಮಘ ಭಾಪು ಎಂದು ಕೂಗಿ ಪ್ರೋತ್ಸಾಹಿಸಿದರು. ಗರುಡನ ಕಾಲಿನ ಏಟಿಗೆ ಹಾವು ಪೆಟ್ಟು ತಿನ್ನುವಂತೆ ನೆಲಕ್ಕೆ ಬಿದ್ದ ಪ್ರಹಸ್ತನು ಆ ಹೊಡೆತದಲ್ಲೂ ಮೇಲೆದ್ದು ನೀಲನಿಗೆ ಗುದ್ದುಕೊಟ್ಟನು. ೬೨. ತನ್ನನ್ನು ಗುದ್ದಿದ ಶತ್ರುವನ್ನು ನೀಲನು ಬೀಸಿ ಆಕಾಶಕ್ಕೆ ಸೆದು ಆರ್ಭಟಿಸುತ್ತ ತೋಳು ತಟ್ಟಿನಿಂತನು. ಮರುನಿಮಿಷದಲ್ಲಿ ಪ್ರಹಸ್ತನು ಕೆರಳಿ ಸೀಳಿಕೊಂಡು ಮೋಡದಿಂದ ಬೆಟ್ಟದ ಶಿಖರದ ಮೇಲೆ ಬೀಳುವ ಭಯಂಕರ ಸಿಡಿಲಿನಂತೆ ದಿಟ್ಟತನದಿಂದ ಬಂದು ಅಗ್ನಿಕುಮಾರನನ್ನು ಅಪ್ಪಳಿಸಿದನು. ೬೩. ಬರಸಿಡಿಲು ಹೊಡೆದ ಬೆಟ್ಟದಂತೆ ಅಗ್ನಿಕುಮಾರನು ನೆಲಕ್ಕುರುಳಿದನು. ಸಮುದ್ರವನ್ನು ದೇವಾಸುರರು ಕಡೆಯುವಾಗ ಸಮುದ್ರದಿಂದ ಮೇಲೆದ್ದ ಮಂದರಪರ್ವತದಂತೆ ಕಲಿ ನೀಲನು ಮೇಲೆದ್ದು ಪ್ರಹಸ್ತನನ್ನು ತಿವಿದನು. ಯಮನ ಅತಿಥಿಗಳು ಕಣ್ಣುಗಳಿಗೆ ಕಾಣಸುವಂತೆ

ಬಿಱುಸಿನಸುರನ ದಳದ ಭಾರದ । ಹೊಱಿಗೆವಾಳನು ನೀನು ನಮ್ಮನು
ಹೊಱಲು ಸೈರಿಸದವನೆ ಸಾಹಸವುಳ್ಳ ಭಟನಹುದು
ಮಱೆಯಮಾತೇಕೆಲವೊ ಬಂದಿದೆ । ತೆಱಪಿನಲಿ ಬಲುಮೃತ್ಯು ಬವರದೊ
ಳಱುಹು ನಿನಗುಂಟಾದಡೆಚ್ಚಱು ಬೇಗ ನೀನೆಂದ ೬೪

ಎನುತ ವದನದ ಮೇಲೆ ಮುಷ್ಟಿಯ । ಹನುಮ ಹೊಗಳಲು ಹಾಯ್ಕಿದನು ಕ
ಗ್ಗನಿಯ ಕತ್ತಲೆ ಕವಿಯೆ ಕಂಗಳಿಗಸುರದಳಪತಿಯ
ವನಚರರ ದಳಪತಿಯು ಘಾಯವಿ । ದೆನುತ ಮತ್ತೊಮ್ಮೆಱಗಿದನು ಲೇ
ಸೆನೆ ವಿಭೀಷಣದೇವ ದೇವಾದಿಗಳು ಕೊಂಡಾಡೆ ೬೫

ಎಲವೊ ರಕ್ಕಸ ಮಾರಿಯಗಲಿಗೆ । ಸಿಲುಕಿ ಶಿಶು ಜೀವಿಸುವುದೇ ಗಂ
ಟಲಿನ ಗಾಣದ ಮೀನು ಮಿಗುವುದೆ ಮರಣಮಯಾಭಯವ
ಅಳಿವು ನಿನಗಿಂದೆಮ್ಮ ಕೈಯಲಿ । ನೆಲೆ ಕಣಾ ನಿನಗೆನುತ ಬಾಹಾ
ಲುಳಿತಬಲನುಬ್ಬಿಱಿದು ತಿವಿದನು ಮತ್ತೆ ರಕ್ಕಸನ ೬೬

ತಪ್ಪದೈ ನೀನೆಂದ ನುಡಿಯೆನು । ತುಪ್ಪರಿಸಿದುದು ಜೀವ ನಭದೊಳ
ಗಪ್ಪಿದುದು ಹೆಸರೆನಿಸಿದಗ್ಗದ ಸುರನಿತಂಬಿನಿಯ
ಉಪ್ಪರದ ಹರುಷದಲಿ ನಿಜಸುತ । ನಿಪ್ಪೆಡೆಗೆ ಕಳುಹಿದನು ಕನಕದ
ಕಪ್ಪಡದ ಶಿಖಿ ಸುರಿದರಮರರು ಕುಸುಮವರುಷಗಳ ೬೭

ನೀಲನು ರಾಕ್ಷಸನ ಎದೆಯ ಮೇಲೆ ಕುಳಿತು ಅವನನ್ನು ಕುರಿತು ಮುಂದಿನಂತೆ ಹೇಳಿದನು. ೬೪. "ವೀರರಾವಣನ ಸೈನ್ಯದ ಭಾರವನ್ನು ಹೊತ್ತಿರುವ ಶೂರನಲ್ಲವೇ ನೀನು. ನಮ್ಮನ್ನು ಹೋರಲು ಸಮರ್ಥನಲ್ಲವೇ. ಸಾಹಸಿ ಭಟ ನೀನು, ನಿಜ. ಮಾತಿನಲ್ಲಿ ಮುಚ್ಚುಮರೆಯೇಕೆ ? ಹಿರಿಯ ಮೃತ್ಯುವು ಈಗ ನಿನ್ನ ಎದುರಿಗೆ ಬಂದಿದೆ. ನಿನಗೆ ಎಚ್ಚರವಿದ್ದರೆ ಬೇಗ ಮಾತನಾಡು" ಎಂದ ನೀಲ. ೬೫. ಹೀಗೆ ನುಡಿದ ನೀಲನು ಪ್ರಹಸ್ತನ ಮುಖವನ್ನು ಮುಷ್ಟಿಯಿಂದ ಅಪ್ಪಳಿಸಿದನು. ಆಗ ಹನುಮಂತನು ನೀಲನನ್ನು ಹೊಗಳಿದನು. ರಾಕ್ಷಸಸೇನಾಪತಿಯ ಕಣ್ಣುಗಳಿಗೆ ಕತ್ತಲೆ ಹಿಡಿಯಿತು. ವಾನರರ ಸೇನಾಪತಿಯ ಏಟು ಇದು ಎನ್ನುತ್ತ ಪುನಃ ಅವನ ಮೇಲೆ ಎರಗಿದನು, ವಿಭೀಷಣ ಮತ್ತು ದೇವತೆಗಳು ನೀಲನನ್ನು ಕೊಂಡಾಡಿದರು. ೬೬. "ಲೋ ರಾಕ್ಷಸ, ಮಾರಿಯ ಗಂಟಲಿಗೆ ಸಿಕ್ಕಿದ ಮಗು ಬದುಕುವುದೇ ? ಗಂಟಲಿನಲ್ಲಿ ಗಾಳಸಿಕ್ಕಿಕೊಂಡ ಮೀನಿಗೆ ಸಾವಿನ ಅಂಜಿಕೆ ಇಲ್ಲದೆಹೋಗುವುದೇ ? ಇಂದು ನಮ್ಮ ಕೈಯಲ್ಲಿ ನಿನಗೆ ಸಾವು ಖಂಡಿತ" ಎನ್ನುತ್ತ ಭುಜಪರಾಕ್ರಮಿ ನೀಲನು ಉತ್ಸಾಹದಿಂದ ಪುನಃ ಪ್ರಹಸ್ತನನ್ನು ತಿವಿದನು. ೬೭. 'ನೀನು ನುಡಿದ ಮಾತು ಸುಳ್ಳಾಗದು' ಎಂದು ಪ್ರಹಸ್ತನ ಪ್ರಾಣವು ಆಕಾಶಕ್ಕೆ ನೆಗೆದು ದೇವಲೋಕದ ಶ್ರೇಷ್ಠಸ್ತ್ರೀಯರನ್ನು ಅಪ್ಪಿಕೊಂಡಿತು. ಅತಿಶಯ ಹರ್ಷದಿಂದ ಅಗ್ನಿಯು ತನ್ನ ಮಗನಿದ್ದ ಸ್ಥಳಕ್ಕೆ ಚಿನ್ನದ ವಸ್ತ್ರಗಳನ್ನು ಕಳುಹಿಸಿದನು. ದೇವತೆಗಳು

ತೆಗೆದವಸುರನ ಹೆಣನನಲ್ಲಿಯು । ವಿಗಡ ಭೂತಗಳಕಟ ಹಗೆಗಾ
ಳಗವು ನಿನಗೇಕೆನುತ ಹರಸುತ ಹವ್ಯವಾಹಜನ
ಮಗನೆ ಕೇಳೈ ಬ್ರಹ್ಮದೇವರ । ಮಗನ ವಾಲಿಯಮಗನ ಮೈಂದನ
ವಿಗಡವೀರ ದ್ವಿವಿದರಹಿತರು ಸಾರಿದರು ದಿವವ ೬೮

ತುಂಗಬಲ ಕಲಿನೀಲನುರು ಸಮ । ರಾಂಗಣದೊಳಹಿತ ಪ್ರಹಸ್ತನ
ನುಂಗಿನೊಣೆದಭಿಗತ ಮಹೋತ್ಸವ ವಾರ್ತೆಯನು ಬಳಿಕ
ಕಂಗಳಧಿಪತಿ ತನ್ನ ಸಖ ವಡ । ಬಂಗೆ ಸೂಚಿಸಲೆಂದು ಕಡಲ ತ
ರಂಗವನು ಬಗಿದಿಳಿದನುತ್ಸಾಹದಲಿ ಪಶ್ಚಿಮದ ೬೯

ಹೂಮಳೆಗರೆದರು. ೬೮. ಶತ್ರುಗಳೊಡನೆ ಕದನವು ನಿನಗೇಕೆ ಎಂದು ಹೇಳಿ ಅಗ್ನಿಕುಮಾರ ನೀಲನನ್ನು ಹರಸುತ್ತ ಅಲ್ಲಿಯ ಭಯಂಕರ ಭೂತಗಳು ಪ್ರಹಸ್ತನ ಹೆಣವನ್ನು ತೆಗೆದುಕೊಂಡುಹೋದವು. ಕುಶನೇ ಕೇಳು, ಬ್ರಹ್ಮನ ಮಗ ಜಾಂಬವಂತನ, ವಾಲಿಯ ಮಗ ಅಂಗದನ, ಮೈಂದನ, ದ್ವಿವಿದನ ಶತ್ರುಗಳು ಸ್ವರ್ಗವಾಸಿಗಳಾದರು. ೬೯. ಉನ್ನತ ಬಲಶಾಲಿ ವೀರನೀಲನು ರಣರಂಗದಲ್ಲಿ ಶತ್ರು ಪ್ರಹಸ್ತನನ್ನು ನುಂಗಿನೊಣೆದು ಬಂದ ಸಂತೋಷದ ಸುದ್ದಿಯನ್ನು ತನ್ನ ಮಿತ್ರ ಬಡಬಾಗ್ನಿಗೆ ತಿಳಿಸಬೇಕೆಂದು ಸೂರ್ಯನು ಪಶ್ಚಿಮಸಮುದ್ರದ ಅಲೆಗಳನ್ನು ಬಗೆದುಕೊಂಡು ಒಳಕ್ಕೆ ಇಳಿದನು.

# ಇಪ್ಪತ್ತನೆಯ ಸಂಧಿ

ಸೂಚನೆ॥ ವೀರ ಧೀರೋದ್ಧತನು ರಣಲಯ । ಭೈರವನು ಬಾಹುಪ್ರತಾಪನು
ದಾರ ಲಂಕೇಶ್ವರನು ರಾಮನ ಸಮರಕನುವಾದ

ಮಗನೆ ಕೇಳೈ ಕುಶನೆ ಕಾಲನ । ನಗರಕಭಿಮುಖನಾದ ಮಂತ್ರಿಯ
ಜಗುಳಿಕೆಯ ಕೇಳ್ದಸುರಪತಿ ಕಳವಳದ ಕರಣದಲಿ
ಉಗುಳಿದನು ತಂಬುಲವ ನಾನೇ । ಹೊಗುವೆನಹಿತನ ರಣಕೆನುತ ಹೊಗೆ
ನೆಗೆವ ಕೋಪಜ್ವಾಲೆಯಲಿ ದಳ್ಳಿಸಿದನಡಿಗಡಿಗೆ ೧

ನಾಳಿನಲಿ ನರಪತಿಯ ತನುಕೀ । ಲಾಲವನು ಕುಡಿಸುವೆನು ರಣಭೂ
ತಾಳಿಗನುಚರನಾಗಿ ಬಂದ ವನೌಕಸಾಧಿಪನ
ಕಾಲನಣಲೊಳಗಡಸುವೆನು ನೆರೆ । ದಾಳುತನಕೊದಗಿದ ವನೇಚರ
ಜಾಲವನು ಜರುಗಿಸುವೆನೆಂದಲುಗಿದನು ಖಂಡೆಯವ ೨

ಕಳುಹಿದನು ಕೈಸನ್ನೆಯಲಿ ಮಂ । ಡಳಿಕ ಮನ್ನೆಯ ರಕ್ಕಸರನತಿ
ಬಲರನನುಪಮ ರಣದಘಾಟ ಕಿರೀಟವರ್ಧನರ
ಹಳಹಳಿಕೆ ಹಳುಗಾದ ಮುಖಮಂ । ಡಲದ ಜಯಮುಖದಾದಿಯಲಿ ದಶ
ಗಳನು ದಂತಾಧರದ ಬಿಗುಹಿನಲಿಳಿದನಾಸನವ ೩

ಸೂಚನೆ॥ ವೀರನೂ, ಧೀರೋದ್ಧತನೂ, ಕದನದಲ್ಲಿ ಪ್ರಳಯಕಾಲದ ಭೈರವನೂ, ತೋಳ್ಬಲವುಳ್ಳವನೂ, ಉದಾರನೂ ಆದ ಲಂಕೇಶ್ವರನು ರಾಮನೊಡನೆ ಯುದ್ಧಕ್ಕೆ ಸಿದ್ಧನಾದನು. ೧. ಮಗು ಕುಶ, ಕೇಳು. ಮಂತ್ರಿಯು ಯಮನ ಪಟ್ಟಣಕ್ಕೆ ತೆರಳಿದ ವಿಷಯವನ್ನು ಕೇಳಿ ರಾಕ್ಷಸೇಂದ್ರನು ಕಳವಳಗೊಂಡು ತಂಬುಲವನ್ನು ಉಗುಳಿದನು. ಶತ್ರುವಿನೊಡನೆ ಕಾಳಗಕ್ಕೆ ನಾನೇ ಹೋಗುವೆನು ಎಂದು ಹೊಗೆಯೆದ್ದ ಕೋಪದ ಬೆಂಕಿಯಿಂದ ಜ್ವಲಿಸಿದನು. ೨. 'ನಾಳೆಯ ದಿವಸ ಮಾನವೇಂದ್ರನ ದೇಹದ ರಕ್ತವನ್ನು ರಣಪಿಶಾಚಿಗಳಿಗೆ ಕುಡಿಸುವೆನು. ಅವನಿಗೆ ಹಿಂಬಾಲಕನಾಗಿ ಬರುವ ವಾನರರೊಡೆಯನನ್ನು ಯಮನ ಗಂಟಲಿಗೆ ತುರುಕುವೆನು. ಯೋಧರಾಗಿ ಬರುವ ಕಪಿಗಳ ಸಮೂಹವನ್ನು ತಳ್ಳಿಬಿಡುವೆನು' ಎಂದು ರಾವಣನು ಖಡ್ಗವನ್ನು ಝಳಪಿಸಿದನು. ೩. ಮಾಂಡಲಿಕರು, ಮುಖಂಡರು, ರಾಕ್ಷಸವೀರರು, ಮಹಾಬಲಶಾಲಿಗಳು ಮತ್ತು ಯುದ್ಧವೀರರಾದ ಸಾಮಂತರಾಜರುಗಳನ್ನು ರಾವಣನು ಕೈಸನ್ನೆಯಿಂದ ಕಳುಹಿಸಿದನು, ಚಿಂತೆ ಕವಿದ ಮುಖದ ರಾವಣನು ಗೆಲ್ಲುವ ಉಪಾಯವನ್ನು ಯೋಚಿಸುತ್ತ, ಹಲ್ಲು ತುಟಿಗಳನ್ನು

ಪಿತನ ಮನದಭ್ಯಂತರವನರಿ । ದತುಳಬಲ ಬಲ ವೈರಿಜಿತು ಪರಿ
ಮಿತ ನಿಕೇತನಕೊಯ್ಯನೊಡನೈದಿದನು ಬಳಿಸಲಿಸಿ
ಮತವು ಬೇರಿನ್ನೇನು ಸಮರ । ಸ್ಥಿತಿಗೆ ಮಿಕ್ಕಿನ ಭಟರು ರಣದಾ
ಯತದಲೊದಗಲಿ ತನ್ನ ಬಳಿಯಲಿ ನಿಲುವೆ ತಾನೆಂದ ೪

ಹೊಕ್ಕು ಹೊಡಕರಿಸುವೆನು ನಾಳಿನ । ಲೆಕ್ಕತುಳದಲಿ ರಣವನೌತಣ
ವಿಕ್ಕುವೆನು ವಿಲಯಾದಿ ದೇವರಿಗರಿಭಟಾವಳಿಯ
ಸುಕ್ಕಿಕೊಂಡಿರ್ದ ಪ್ರತಾಪದ । ರಕ್ಕಸಾಗ್ನಿಯನಾಹವದೊಳು
ಬ್ಬಿಕ್ಕಿಸುವೆನೆಂದಗಲಿಸಿನಂತಸ್ತ ವಿಹ್ವಲವ ೫

ಧುರಧುರಂಧರಿಕೆಯನು ತಾನೇ । ಧರಿಸಿ ಕಳುಹಿದನಿಂದ್ರಜಿತುವನು
ನೆರಹಿಕೊಂಡಿರು ನಾಳಿನಾಹವಕುರು ಚತುರ್ಬಲವ
ಮರಳಿ ಮತ್ತಿನ್ನಾವ ಮತವನು । ಸ್ಮರಿಸಬೇಡೇಳೆಂದು ಮಂಡೋ
ದರಿಯಮಗನನು ಕಳುಹಿದನು ನಿಶಿಯಲಿ ದಶಗ್ರೀವ ೬

ಮೇಳವಿಸಿದನು ಬಲವ ಮಣಿಗಣ । ದೋಳಿವೆಳಗಿನ ಟೆಂಚೆ ಹಣ್ಣಿದ
ನೀಲಗಿರಿಸನ್ನಿಭ ಮದೇಭವ ಜೋದರೋಜೆಯಲಿ
ಏಳುಕೋಟಿಯ ಹೊನ್ನರನ್ನದ । ಕೀಲಣದ ಹಲ್ಲಣದ ಹಯ ಹದಿ
ನೇಳು ಕೋಟಿಯ ರಾವುತರು ಸಹಿತಸಮ ಸಂಗರಕೆ ೭

ಕಚ್ಚಿ ಸಿಂಹಾಸನದಿಂದ ಇಳಿದನು. ೪. ತಂದೆಯ ಮನಸ್ಸಿನ ಅಂತರ್ಯವನ್ನರಿತು ಅನುಪಮ ಬಲಶಾಲಿ ಇಂದ್ರಜಿತು ರಾವಣನನ್ನು ಹಿಂಬಾಲಿಸಿ ಅವನೊಡನೆ ಏಕಾಂತದ ಮನೆಗೆ ಬಂದನು. "ಯುದ್ಧದ ವಿಷಯದಲ್ಲಿ ಬೇರೆ ಅಭಿಪ್ರಾಯವಿನ್ನೇನು ? ವೀರರು ನನ್ನ ಬಳಿಯಲ್ಲಿ ಯುದ್ಧಕ್ಕೆ ಸಿದ್ಧವಾಗಲಿ, ನಾನು ಯುದ್ಧಕ್ಕೆ ನಿಲ್ಲುವೆನು" ಎಂದು ಹೇಳಿದನು ಇಂದ್ರಜಿತು. ೫. "ನಾಳಿನ ಕಾಳಗದಲ್ಲಿ ಪರಾಕ್ರಮದಿಂದ ಶತ್ರುಗಳ ಮೇಲೆ ಬಿದ್ದು ಯುದ್ಧವನ್ನು ತೋರಿಸುವೆನು ; ಪ್ರಳಯದೇವತೆಗೆ ಶತ್ರುವೀರರನ್ನು ಔತಣವಿಕ್ಕುವೆನು, ರಣದಲ್ಲಿ ಕುಗ್ಗಿಹೋಗಿದ್ದ ರಾಕ್ಷಸರ ಪ್ರತಾಪದ ಬೆಂಕಿಯು ಜ್ವಲಿಸುವಂತೆ ಮಾಡುವೆನು" ಎಂದು ನುಡಿದು ಇಂದ್ರಜಿತು ರಾವಣನ ಮನಸ್ಸಿನ ವ್ಯಾಕುಲವನ್ನು ಹೋಗಲಾಡಿಸಿದನು. ೬. ದಶಕಂಠನು ಯುದ್ಧದ ನಾಯಕತ್ವವನ್ನು ತಾನೇ ವಹಿಸಿಕೊಂಡು ಇಂದ್ರಜಿತುವನ್ನು ಕಳುಹಿಸಿಕೊಟ್ಟನು. "ನಾಳಿನ ಕದನಕ್ಕೆ ಚತುರಂಗಸೈನ್ಯವನ್ನು ಕೂಡಿಸಿಕೊಂಡಿರು. ಮತ್ತೆ ಬೇರೆ ಯಾವ ಯೋಚನೆಯನ್ನೂ ಮಾಡಬೇಡ, ಏಳು." ಎಂದು ನುಡಿದು ರಾವಣನು ಮಂಡೋದರಿಯ ಮಗ ಇಂದ್ರಜಿತುವನ್ನು ಆ ಇರುಳಿನಲ್ಲಿ ಮನೆಗೆ ಕಳುಹಿಸಿದನು. ೭. ರತ್ನಗಳ ಕಾಂತಿಯಿಂದೊಪ್ಪುವ ಪಕ್ಕರೆಕ್ಕೆಗಳನ್ನು ಕಟ್ಟಿ ಸಿದ್ಧಪಡಿಸಿದ ನೀಲ ಪರ್ವತದಂತೆ ಕಾಣುತ್ತಿದ್ದ ಏಳು ಕೋಟಿ ಮದ್ದಾನೆಗಳನ್ನು ಮಾವುತರ ಸಮೇತ ಯುದ್ಧಕ್ಕೆ ಕೂಡಿಸಿದನು. ಚಿನ್ನದ ಕುಸುರಿ ಕೆಲಸಮಾಡಿ, ರತ್ನಗಳನ್ನು ಮೆಟ್ಟಿದ ಜೀನುಗಳನ್ನು ಹಾಕಿದ ಹದಿನೇಳು ಕೋಟಿ ಕುದುರೆಗಳನ್ನು ರಾವುತರ ಸಹಿತ ಸೇರಿಸಿದನು.

ಕೋರವಿಪ ಮಣಿಚಕ್ರಗಳ ಚೀ । ತ್ಕಾರಗಳ ಪಡಿತಳದ ಪಚ್ಚೆಯ
ಪಾರಿಯಾದ ಪಲ್ಲವ ಪತಾಕಾವಳಿಯ ಪಳಹರದ
ಸೂರಿಯನ ತುರಗಗಳನೇಳಿಪ । ವಾರುವಗಳುಪ್ಪರದ ಹೊಸ ಹೊಂ
ದೇರು ಹೊಳಕಿದವೇಳು ಕೋಟಿ ಮಹಾರಥರು ಸಹಿತ ೮

ಖಡುಗ ಪೀಟಕ ಕುಂತ ಬಿಲು ಕ । ಕ್ಕಡೆ ಕಠಾರಿ ಮುಸುಂಡಿ ಮುದ್ಗರ
ಕಡೆಯ ಸರಪಳಿ ಹಾರ ಹೀರಾವಳಿಯ ಕುಂಡಲದ
ತೊಡಹದನುಲೇಪನದ ಹೂವಿನ । ಮುಡಿಯ ರಕ್ಕಸಪಾಯುದಳ ಬಜಿ
ಸಿಡಿಲ ಜಂಗುಳಿಯಂತೆ ಕೈಗೈದಿತ್ತು ಶತಕೋಟಿ ೯

ಆ ದಿವಸದಿರುಳೀ ಪರಿಯ ಸಂ । ಪಾದಿಸಿದನಾಹವಕೆ ರಕ್ಕಸ
ಕೈದುಗಳನುಬ್ಬರದ ತಳತಂತ್ರವನು ಬಳಿಕಿತ್ತ
ಭೂ ದಿವವನೊಳಕೊಂಡ ತಿಮಿರ ಮ । ಹೋದಧಿಯ ಬಗಿವೆದ್ದನಬುಧಿಯ
ಭೇದಿಸುವ ವಡಬಾಗ್ನಿಯವೊಲಿನನುದಯಶಿಖರಿಯಲಿ ೧೦

ಬವರದಾದಿಯಲಸುರಪತಿಯು । ಪ್ಪವಡಿಸಿದನಿದ್ದೆಸೆಯ ಮಂಗಳ
ರವದ ಪಾಠಕ ಸೂತಮಾಗಧರುಗಳ ಸೂಕ್ತಿಯಲಿ
ರವಿಗೆ ಸೂಸಿ ಜಲಾಂಜಲಿಯನಜ । ಭವ ನಿಶಾಚರಗುರುಗಳಿಗೆ ಮಣಿ
ದವಗಡೆಯ ಖಳರಾಯನನುವಾದನು ಮಹಾಹವಕೆ ೧೧

೮. ಕಣ್ಣು ಕೋರೈಸುವ ರತ್ನದ ಚಕ್ರಗಳು ಚೀತ್ಕಾರ ಮಾಡುತ್ತಿರಲು, ಪಚ್ಚೆ, ಪಾರಿವಾಳ ಮತ್ತು ಚಿಗುರಿನ ಬಣ್ಣದ ಬಟ್ಟೆಗಳ ಪತಾಕೆ ಮತ್ತು ಬಾವುಟಗಳು ಹಾರಾಡುತ್ತಿರಲು, ಸೂರ್ಯರಥದ ಕುದುರೆಗಳನ್ನು ಮೀರಿಸಿದ ಕುದುರೆಗಳನ್ನು ಹೂಡಿದ ಉನ್ನತವಾದ ಹೊಸಚಿನ್ನದ ಏಳು ಕೋಟಿ ರಥಗಳು ಮಹಾರಥರೊಡನೆ ಗೋಚರಿಸಿದವು. ೯. ಕತ್ತಿ, ಗುರಾಣಿ, ಈಟಿ, ಬಿಲ್ಲು, ಕಕ್ಕಡೆ, ಕಠಾರಿ, ಮುಸುಂಡಿ, ಮುದ್ಗರ, ಬಳೆ, ಸರಪಳಿ ಮೊದಲಾದ ಆಯುಧಗಳನ್ನು ಹಿಡಿದುಕೊಂಡು, ಹಾರ ಮತ್ತು ವಜ್ರದ ಹಾರಗಳಿಂದಲಂಕರಿಸಿಕೊಂಡು, ಸುಗಂಧಗಳನ್ನು ಪೂಸಿ, ಹೂ ಮುಡಿದು ಒಂದುನೂರು ಕೋಟಿ ರಾಕ್ಷಸ ಕಾಲುಬಲವು ಬರಸಿಡಿಲ ಸಮೂಹದಂತೆ ಬಂದು ಸೇರಿತು. ೧೦. ಈ ರೀತಿಯಲ್ಲಿ ಆ ದಿನ ರಾತ್ರಿ ಇಂದ್ರಜಿತು ಯುದ್ಧಕ್ಕೆ ರಾಕ್ಷಸಾಯುಧಗಳನ್ನೂ ಅತಿಶಯ ಪದಾತಿಸೈನ್ಯವನ್ನೂ ಸಂಪಾದಿಸಿದನು. ಬಳಿಕ ಇತ್ತ ಭೂಮಿ ಆಕಾಶಗಳನ್ನು ತುಂಬಿದ್ದ ಕತ್ತಲೆಯ ಸಾಗರವನ್ನು ಬಗೆದುಕೊಂಡು ಸಮುದ್ರವನ್ನು ಸೀಳಿಕೊಂಡು ಬರುವ ಬಡಬಾಗ್ನಿಯಂತೆ ಸೂರ್ಯನು ಉದಯಪರ್ವತದಿಂದ ಮೇಲೆದ್ದು ಕಾಣಿಸಿಕೊಂಡನು. ೧೧. ಯುದ್ಧವನ್ನು ಪ್ರಾರಂಭಿಸುವ ಆ ದಿವಸ ಬೆಳಗ್ಗೆ ರಾಕ್ಷಸೇಶ್ವರನು ಎರಡು ಕಡೆಗಳಲ್ಲೂ ವಂದಿಮಾಗಧರು ಮತ್ತು ಹೊಗಳುಭಟರುಗಳು ಮಂಗಳಸ್ತುತಿ ಮಾಡುತ್ತಿರಲು ಹಾಸಿಗೆಯಿಂದ ಎದ್ದನು. ಸೂರ್ಯನಿಗೆ ಬೊಗಸೆಯಿಂದ ನೀರಿನ ಅರ್ಘ್ಯವನ್ನು ಕೊಟ್ಟು ಬ್ರಹ್ಮ, ಮಹೇಶ್ವರ, ಅಸುರಗುರು-ಇವರುಗಳಿಗೆ ನಮಸ್ಕರಿಸಿದನು. ಬಳಿಕ

ಹರನ ಮಕುಟಗಳೈದನಾ ಸರ | ಸಿರುಹಭವನ ಕಿರೀಟ ನಾಲ್ಕನು
ವರ ನಿಕುಂಭಿನಿದತ್ತ ಜೀವಸ್ಫುರಿತ ಮಣಿಮಯದ
ಸುರುಚಿರದ ಕೋಟೀರವೊಂದನು.| ಧರಿಸಿದನು ದಶಮೌಳಿಯಲಿ ಶಶಿ
ತರಣಿಕಿರಣದ ಕುಂಡಲವನಿಕ್ಕಿದನು ಕಿವಿಗಳಲಿ ೧೨

ಸುರಪ ಶಿಖಿ ಯಮ ನಿರುತಿ ಜಲಧೀ | ಶ್ವರ ಸಮೀರಣ ರಾಜರಾಜರ
ಧುರದೊಳಗೆ ಗೆದ್ದವರ ಹೆಸರಿನ ಹಲವು ಹಾಹೆಗಳ
ಬಿರಿದುಗಳ ಕಡೆಯವನು ಕಾಲಲಿ | ಧರಿಸಿದನು ರವಿ ರಂಗುರಂಜಿತ
ಸುರುಚಿರದ ಪದಕವನಲಂಕರಿಸಿದನು ಕೊರಳಿನಲಿ ೧೩

ಸುರ ನರೋರಗಜಗದ ವೀರರ | ಕೊರಳಿಗೌಕಿದ ಖಂಡೆಯವ ಸಿರಿ
ಕರಗಳಲಿ ಸಂಘಟಿಸಿದನು ನಿಗಳಗಳನನುವರದ
ಸಿರಿಗೆ ಸಿಂಗಾರಿಸುವವೊಲು ಬಂ | ಧುರದ ಶೋಣ ಸುರಾಗರಚಿತಾಂ
ಬರವ ರಕ್ಕಸದೇಸಿಯಲಿ ಬಿಗಿದುಟ್ಟನಸುರೇಂದ್ರ ೧೪

ಮೃಗಮದದ ತಿಲಕವನು ನೊಸಲಲಿ | ನಿಗುರಿಸಿದನೀರೈದಳಿಲಿ ಘಮ
ಘಮಿಪ ನೂತನ ಯಕ್ಷಕರ್ದಮವನು ನಿಜಾಂಗದಲಿ
ಉಗಿಸಿ ಸುರನಂದನದ ಹೊಂಗೇ | ದಗೆಯ ತುಱುಬಿನಲಿಱುಕಿ ಹೂದಂ
ಡೆಗಳ ಹಾರಾವಳಿ ಸಹಿತ ಹಸರಿಸಿದನಸುರೇಂದ್ರ ೧೫

ವೀರ ರಾವಣನು ಮಹಾಕದನಕ್ಕೆ ಸಿದ್ಧವಾದನು. ೧೨. ಶಿವನ ಐದು ಕಿರೀಟಗಳು, ಬ್ರಹ್ಮನ ನಾಲ್ಕು ಕಿರೀಟಗಳು, ನಿಕುಂಭಿನಿ ಕೊಟ್ಟ ಜೀವಕಾಂತಿಯ ರತ್ನಖಚಿತ ಕಿರೀಟವೊಂದು ಹೀಗೆ ಹತ್ತು ಕಿರೀಟಗಳನ್ನು ರಾವಣನು ತನ್ನ ಹತ್ತು ತಲೆಗಳಿಗೆ ಧರಿಸಿಕೊಂಡು ಚಂದ್ರ ಸೂರ್ಯ ಪ್ರಕಾಶದ ಕುಂಡಲಗಳನ್ನು ಕಿವಿಗೆ ಅಲಂಕರಿಸಿಕೊಂಡನು. ೧೩. ಇಂದ್ರ, ಅಗ್ನಿ, ಯಮ, ನಿರ್ಋತಿ, ವರುಣ, ವಾಯು, ಕುಬೇರರೊಡನೆ ನಡೆದ ಯುದ್ಧಗಳಲ್ಲಿ ಗೆದ್ದವರ ಹೆಸರಿನ ಬೊಂಬೆಗಳ ಬಿರುದಿನ ಬಳೆಗಳನ್ನು ಕಾಲಿಗೆ ತೊಟ್ಟುಕೊಂಡನು. ಸೂರ್ಯಪ್ರಕಾಶದಿಂದ ಹೊಳೆಯುವ ಪದಕವನ್ನು ಕತ್ತಿನಲ್ಲಿ ಧರಿಸಿಕೊಂಡನು. ೧೪. ದೇವ ಮಾನವ ಉರಗಲೋಕಗಳ ವೀರರ ಕೊರಳುಗಳಿಗೆ ಒಡ್ಡಿದ ಕತ್ತಿಯನ್ನೂ ಯುದ್ಧಸರಪಣಿಗಳನ್ನೂ ಕೈಗಳಲ್ಲಿ ಹಿಡಿದುಕೊಂಡನು. ಯುದ್ಧಲಕ್ಷ್ಮಿಯನ್ನು ಅಲಂಕರಿಸುವಂತೆ ಮನೋಹರವಾದ ಕೆಂಬಣ್ಣದ ವಸ್ತ್ರವನ್ನು ರಾಕ್ಷಸಶೈಲಿಯಲ್ಲಿ ಬಿಗಿದು ಉಟ್ಟುಕೊಂಡನು. ೧೫. ರಾವಣೇಶ್ವರನು ಹತ್ತು ಹಣೆಗಳಿಗೂ ಕಸ್ತೂರಿತಿಲಕವನ್ನು ಹಾಕಿಕೊಂಡನು ; ಘಮಘಮಿಸುವ ನೂತನ ಕಸ್ತೂರಿ ಕರ್ಪೂರಗಳ ಸುಗಂಧದ್ರವ್ಯವನ್ನು ದೇಹಕ್ಕೆ ಪೂಸಿಕೊಂಡನು ; ದೇವಲೋಕದ ನಂದನವನದ ಹೊಂಗೇದಗೆಹೂವಿನ ಎಸಳನ್ನು ತಲೆಗೂದಲಿನ ಗಂಟಿಗೆ ಸಿಕ್ಕಿಸಿಕೊಂಡು ಹೂವಿನದಂಡೆ ಮತ್ತು ಹಾರಗಳಿಂದ

ಹರನು ಹರಸಿದು ಕೊಟ್ಟ ರಣಭೀ । ಕರದ ಹೊಗರಿನ ಚಂದ್ರಹಾಸವ
ಕರಗಳೀರೈದರಲಿ ಝಾಡಿಸಿ ಝಳಿದು ಉಳಿವಡೆದು
ಧುರದ ಮೈಯುಬ್ಬಿನಲಿ ಮದಮ । ತ್ಸರದ ಮನದಾಯತಿಕೆಯಲಿ ದಶ
ಶಿರನು ನಿಂದಿರೆ ನಿಂದು ಜಯ ಜಯೆಂದುದಮರಗಣ ೧೬

ವಿಲಯಕಾಲದ ರುದ್ರನಿಮ್ಮೈ । ದಳೆದನೋ ಸಂವರ್ತಭೈರವ
ಸಳವು ದಶಗುಣವಾಯ್ತೊ ದಶದಿಗ್ದೇವತಾ ಸಕತಿ
ಬಲಿದು ಬಿಡದೊಂದಾಯ್ತೊಯೆನೆ ಪ । ಜ್ವಳಿತ ಶೌರ್ಯದ ಸುಪ್ರತಾಪದ
ಝಳದ ಝಾಡಿಯಲಾ ನಿಶಾಚರರಾಯ ರಂಜಿಸಿದ ೧೭

ಎತ್ತಿದರು ರತುನಾರತಿಗಳನು । ಹೊತ್ತ ಹೊಸಜವ್ವನದ ನಸುನಗೆ
ವೆತ್ತ ಮೊಗಬಿಂಬಗಳ ಲುಂಬಿಸಿ ಹೊಳೆವ ನಯನಗಳ
ಉತ್ತಮದ ಯುವತಿಯರು ಹಣೆಯಲಿ । ಹತ್ತಿಸಿದರಕ್ಷತೆಯ ಭಾಗ್ಯದ
ಬಿತ್ತ ಬಳಿಬಳಿದಡಕುವವೊಲಡಕಿದರು ಬಳುವೆಗಳ ೧೮

ಹರಸಿ ಮುತ್ತಿನ ವೀರಸೇಸೆಯ । ತರುಣಿಯರು ಸೂಸಿದರು ವಿದ್ಯಾ
ಧರರು ಹಾಡಿದರುಕವಾಲೆಯ ನಾರದಾದಿಗಳು
ಸುರಪ ಸೋಂಕುವ ಸೂಳೆಯರು ಸಿಂ । ಗರಿಸಿ ನರ್ತಿಸಿದರು ನಭೋಗ್ರದ
ಲರರೆ ವೈಭವವೆಂತುಟೋ ತ್ರೈಲೋಕ್ಯದಲ್ಲಣನ ೧೯

ಅಲಂಕರಿಸಿಕೊಂಡನು. ೧೬. ಶಿವನು ಹರಸಿಕೊಟ್ಟ ಹೊಳೆಯುವ ಕದನಭಯಂಕರ ಚಂದ್ರಹಾಸವೆಂಬ ಖಡ್ಗವನ್ನು ಹತ್ತು ಕೈಗಳಿಂದಲೂ ಬೀಸಿ ಝಳಪಿಸಿದನು. ದ್ವೇಷಾಸೂಯೆ ಬಲಿತ ಮನಸ್ಸಿನ ರಾವಣನು ಯುದ್ಧದ ಹುರುಪಿನಿಂದ ಉತ್ಸಾಹಗೊಂಡು ನಿಂತಿರಲು ದೇವತೆಗಳು ಜಯ ಜಯ ಎಂದು ಕೂಗಿದರು. ೧೭. ಲಯಕಾಲದ ಪಂಚಬ್ರಹ್ಮರೂಪಿ ರುದ್ರನು ಎರಡು ಶರೀರವನ್ನು ತಳೆದನೋ, ಪ್ರಳಯಕಾಲದ ಭೈರವನ ಪರಾಕ್ರಮವು ಹತ್ತರಷ್ಟಾಯಿತೋ, ಹತ್ತು ದಿಕ್ಕುಗಳ ದೇವತೆಯರ ಶಕ್ತಿಗಳೆಲ್ಲ ಒಂದುಗೂಡಿದವೋ ಎನ್ನುವಂತೆ ಮಹಾಪರಾಕ್ರಮಶಾಲಿ ರಾಕ್ಷಸೇಶ್ವರನು ತನ್ನ ಪ್ರತಾಪಾಗ್ನಿಯ ಪ್ರಕಾಶದಿಂದ ರಂಜಿಸಿದನು. ೧೮. ನಸುನಗೆ ಬೀರುವ ಮುಖಗಳ, ಹೊಳೆಯುವ ನಿಡುಗಣ್ಣುಗಳ, ಹೊಸ ಯೌವನದ ಉತ್ತಮ ಸ್ತ್ರೀಯರು ರಾವಣನಿಗೆ ರತ್ನದ ಆರತಿಗಳನ್ನೆತ್ತಿದರು ; ಹಣೆಗೆ ಅಕ್ಷತೆಕಾಳುಗಳನ್ನು ಹತ್ತಿಸಿದರು ; ಭಾಗ್ಯದ ಬೀಜಗಳನ್ನು ಬಳಿದು ರಾಶಿಹಾಕುವರೋ ಎನ್ನುವಂತೆ ದೃಷ್ಟಿ ನಿವಾಳಿಸಿ ಹಾಕಿದರು. ೧೯. ತರುಣಿಯರು ಹರಸಿ ರಾವಣನ ತಲೆಯ ಮೇಲೆ ಮುತ್ತಿನ ವೀರಸೇಸೆಯನ್ನು ತಳಿದರು. ವಿದ್ಯಾಧರರು, ನಾರದನೇ ಮೊದಲಾದವರು ರಾವಣನ ಬಿರುದುಗಳ ಮಾಲೆಯನ್ನು ಹಾಡಿದರು. ದೇವೇಂದ್ರನ ಸೂಳೆಯರು ಶೃಂಗಾರಮಾಡಿಕೊಂಡು ಆಕಾಶದಲ್ಲಿ ನರ್ತನ ಮಾಡಿದರು. ಅಬ್ಬಬ್ಬ ಮೂರು ಲೋಕಗಳನ್ನೂ ನಡುಗಿಸುವವನ

ಹೊಡೆಯುಹೇಳೋ ಭೇರಿಗಳ ಪಡೆ । ನಡೆಯುಹೇಳೋ ರಣಕೆನುತಲವ
ಗಡೆಯು ರಕ್ಕಸರಾಯ ಹೊಱವಂಟನು ನಿಜಾಲಯುವ
ಎಡಬಲದ ವಂದಿಗಳ ನೆಲನು । ಗ್ಗಡಬ ಪಾಠಕರುಗಳ ರನ್ನದ
ದಡಿಯು ಕಂಚುಕಿಗಳ ಘಡಾವಣೆ ಘಾಡಿಸಿತು ನಭವ ೨೦

ಧಿರುರೆ ಪಾಯುವಧಾರು ಜೀಯೆನೆ । ಸರಕಃಗಟ್ಟಿತು ಭುವನ ಭುಜಗೇ
ಶ್ವರನ ಕೆಲಸಂಬಾಳಿಯೆನೆ ಹಾಳಾಯ್ತು ನರಲೋಕ
ಅರರೆ ಮಾಮುಝು ಮಾಯೆ ಮೇಲು । ಪ್ಪರವು ಹಳುಹಳುಯೆನಲು ಬೊಮ್ಮನ
ಪುರಕೆ ಗೂಳಯುದೆಗೆದುದಗ್ಗದ ಭೂರಿ ಭುವನಚಯ ೨೧

ಮಲೆವ ಸುಭಟರ ಗಂಡ ಸುರಕರಿ । ಕಳಭಕುಲಭೇರುಂಡ ಕಂಪಿತ
ಕುಲಿಶಸದೃಶ ಮಹೋಗ್ರ ಕೌಂಕ್ಷೇಯುಕ ಭುಜಾದಂಡ
ವಿಲಸದಭಿನವರುದ್ರ ರೌದ್ರಾ । ಕಲಿತ ಶೌರ್ಯಸಮುದ್ರಮುದ್ರಿತ
ಫಲ ಸುಭೋಗ ಸುಭದ್ರ ಜೀಯೆಂದೊದಱಿತಮರಗಣ ೨೨

ಸುರಪಜಯು ಶಿಖಿವಿಜಯು ಯುಮಕಂ । ಧರಕೃಪಾಣ ನಿಶಾಟಕರುಣಾ
ಕರ ಸಮುದ್ರಾಧೀಶ ಘನಹರ ಮರುತಗಳಪಾಶ
ಪುರಹರಪ್ರಿಯು ಹೃದಯುಶೂಲೋ । ತ್ತರ ಗುಣಾನ್ವಿತ ಹರ ಸರೋಜಜ
ಪರಮ ರಕ್ಷಕಯೆಂದು ಹೊಗಳಿತು ರಾಕ್ಷಸವ್ರಾತ ೨೩

ವೈಭವವನ್ನು ಏನೆಂದು ಹೇಳೋಣ. ೨೦. "ಭೇರಿಗಳನ್ನು ಹೊಡೆಯುವಂತೆ ಹೇಳೋ, ಸೈನ್ಯವು ಯುದ್ಧಕ್ಕೆ ನಡೆಯಲಿ ಹೇಳೋ" ಎಂದು ವೀರ ರಾಕ್ಷಸರಾಜನು ಅಪ್ಪಣೆಮಾಡಿ ಅರಮನೆಯಿಂದ ಹೊರಟನು. ಅವನ ಎಡಬಲಗಳಲ್ಲಿ ಹೊಗಳುಭಟರು ವಂದಿ ಮಾಗಧರು ಬಿರುದುಗಳನ್ನು ಘೋಷಿಸುತ್ತ ನಡೆಯುತ್ತಿದ್ದರು. ರತ್ನದ ದಂಡಗಳನ್ನು ಹಿಡಿದ ಕಂಚುಕಿಗಳು ಮುಂದೆ ನಡೆದರು. ಇವರ ಗದ್ದಲವು ಆಕಾಶವನ್ನು ಮುತ್ತಿತು. ೨೧. 'ಧಿರುರೆ, ಪಾಯುವಧಾರು, ಜೀಯ!' ಎಂದು ಕಂಚುಕಿಗಳು ಹೇಳಲು ಪಾತಾಳ ಲೋಕವು ಜರುಗಿತು, 'ಪಕ್ಕಕ್ಕೆ ಹೋಗಿ, ಜಾಗ್ರತೆ!' ಎಂದು ಹೇಳಲು ಭೂಲೋಕವು ಹಾಳಾಯಿತು. "ಅರರೆ, ಮಾಮುಝು, ಮಾಯೆ, ಮೇಲುಪ್ಪರ, ಹಳುಹಳು!' ಎನ್ನಲು ಶ್ರೇಷ್ಠಲೋಕಗಳೆಲ್ಲ ಬ್ರಹ್ಮನ ಪುರಕ್ಕೆ ವಲಸೆಹೋದವು. ೨೨. 'ಗರ್ವಿಸುವ ವೀರರ ವೀರ! ದೇವತೆಗಳೆಂಬ ಆನೆಯುಮರಿಗಳಿಗೆ ಭೇರುಂಡ! ಝಳಪಿಸುವ ವಜ್ರಾಯುಧ ಸಮ ಭಯಂಕರ ಖಡ್ಗ ಧರಿಸಿದ ಭುಜದಂಡ! ಅಭಿನವರುದ್ರ! ಭಯಂಕರ ಶೌರ್ಯ ಸಮುದ್ರ! ಸುಖ ಭೋಗಗಳನ್ನು ಪಡೆದ ಪುಣ್ಯಶಾಲಿ! ಮಂಗಳಕರ! ಪ್ರಭು!' ಎಂದು ದೇವತೆಗಳ ಸಮೂಹವು ಗಟ್ಟಿಯಾಗಿ ಉಚ್ಚರಿಸಿತು. ೨೩. 'ಇಂದ್ರವಿಜಯಿಯೇ, ಅಗ್ನಿಯನ್ನು ಗೆದ್ದವನೇ, ಯಮನ ಕತ್ತಿಗೆ ಖಡ್ಗವನ್ನು ಚಾಚಿದವನೇ, ಸಮುದ್ರಗಳೊಡೆಯ, ಬಲಶಾಲಿಗಳಾದ ಮರುತ್ತುಗಳನ್ನು ಪಾಶದಿಂದ ಬಂಧಿಸಿದವನೇ, ಮಹೇಶ್ವರ ಪ್ರಿಯನಾದ ಕುಬೇರನ ಹೃದಯಕ್ಕೆ ಶೂಲಪ್ರಾಯನೇ, ಶ್ರೇಷ್ಠ ಗುಣಶಾಲಿ, ಬ್ರಹ್ಮ

ಕೂಡಿತಾಕ್ಷಣ ರಾವಣನ ಕೈ । ಗೂಡಿಕೆಯ ಜೀವಾಳಜೋಕೆಯ
ಜೋಡು ಸೀಸಕ ಶರ ಶರಾಸನ ಶಸ್ತ್ರಪಾಣಿಗಳು
ಜೋಡಿಕೆಯ ಚತುರಂಗಬಲವ । ಲ್ಲಾಡಲಿಳೆ ವಿಲಯಾಗ್ನಿ ಜಿಹ್ವೆಯ
ರ್ಝಾಡಿಕೆಯ ಕುಡಿಯಂತೆ ಕಿಡಿಗೆದರಿದವು ಕೈದುಗಳು ೨೪

ಅರಸುತನದೌದಾರ್ಯ ಶಕ್ತಿಯ । ಪರಮ ವೈಭವವೆಂತುಟೋ ದಶ
ಶಿರನು ಸೂಸಿದನಖಿಳ ಸುಭಟಾವಳಿಗೆ ಮನದಣಿಯೆ
ವರ ರತುನಭಂಡಾರ ಬಹಳಿತ । ಸುರುಚಿರಾಭರಣಾದಿಗಳ ಕ
ರ್ಪೂರ ಸುಗಂಧಾದ್ಯಖಿಳ ವಸ್ತ್ರೋತ್ಕರವನೊಲವಿನಲಿ ೨೫

ಬೋಳವಿಸಿದನು ಸಕಲ ಸಮರ ಭ । ಟಾಳಿಗಳ ಸನ್ಮಾನದಲಿ ಸಂ
ಸ್ಥೂಲ ಸತ್ಕೃತಿಗಳಲಿ ರಣಸುಮ್ಮಾನದುಬ್ಬಿನಲಿ
ಕೇಳಿದೈಯೆಲೆ ರಾಜಸೂನು ಸು । ರಾಳಿ ಬೆದರಲು ಸಕಲ ಸೇನಾ
ಜಾಲ ಹೊರವಡುತಿರ್ದುದಾ ಲಂಕಾ ಮಹಾಪುರವ ೨೬

ತುರಗಶತಮಿತದಮಳ ಘಂಟಾ । ಖುರಕೆ ರತುನವ ಸುರಿದು ಬಲವಂ
ದರಿದಿಶಾಪಟನೇರಿದನು ಹೊಂದೇರ ಹೊಗಳಿಕೆಯ
ಸುರರ ಸೂತರ ಮಾಗಧರ ತುಂ । ಬುರರ ಜಯಜಯ ರಭಸದಲಿ ಶಂ
ಕರ ವಿರಿಂಚಿಗಳೀವ ವಿಮಲಸ್ವಸ್ತಿವಚನದಲಿ ೨೭

ಮಹೇಶ್ವರರ ರಕ್ಷಕ!' ಎಂದು ರಾಕ್ಷಸರ ಸಮೂಹವು ರಾವಣನನ್ನು ಹೊಗಳಿತು. ೨೪. ರಾವಣನ ಸಿದ್ಧಿ ಹೊಂದಿದ ಜೀವರಕ್ಷಕ ಚತುರಂಗಸೈನ್ಯವು ಕವಚ, ಶಿರಸ್ತ್ರಾಣ, ಬಿಲ್ಲು, ಬಾಣಗಳು, ಶಸ್ತ್ರಗಳನ್ನು ಹಿಡಿದು ಆಕ್ಷಣ ಬಂದು ಸೇರಿತು. ಆಗ ಭೂಮಿಯು ಅಲ್ಲಾಡಿತು. ಪ್ರಳಯದ ಬೆಂಕಿಯ ಜ್ವಾಲೆಯ ಕುಡಿಯಂತೆ ಶಸ್ತ್ರಾಸ್ತ್ರಗಳು ಕಿಡಿಗಳನ್ನು ಕಾರಿದವು. ೨೫. ದಶಕಂಠನ ರಾಜ್ಯಭಾರದಲ್ಲಿ ಅವನ ಔದಾರ್ಯದ ವೈಭವವನ್ನು ಎಷ್ಟೆಂದು ಹೇಳಲಿ. ಸಮಸ್ತ ರಾಕ್ಷಸವೀರರ ಮನದಣಿಯುವಂತೆ ಶ್ರೇಷ್ಠ ರತ್ನಗಳನ್ನೂ, ಭಂಡಾರ ದಲ್ಲಿದ್ದ ಕಾಂತಿಯುಕ್ತ ಆಭರಣಗಳನ್ನೂ, ಸುಗಂಧದ್ರವ್ಯಗಳನ್ನೂ, ಸಮಸ್ತ ವಸ್ತ್ರ ಗಳನ್ನೂ ಪ್ರೀತಿಯಿಂದ ಕೊಟ್ಟನು. ೨೬. ರಾವಣನು ಸಮಸ್ತ ಯುದ್ಧವೀರರನ್ನೂ ಯುದ್ಧೋತ್ಸಾಹದ ಆನಂದದಿಂದ ಸತ್ಕರಿಸಿ ಸನ್ಮಾನಮಾಡಿ ತೃಪ್ತಿಪಡಿಸಿದನು. ಕೇಳಿ ದೆಯಾ ರಾಜಕುಮಾರ, ರಾಕ್ಷಸರ ಸೈನ್ಯಸಮೂಹವು ದೇವತೆಗಳು ಬೆದರುವಂತೆ ಲಂಕಾ ಪಟ್ಟಣದಿಂದ ಹೊರಟಿತು. ೨೭. ಘಂಟೆಗಳನ್ನು ಕಟ್ಟಿದ ಒಂದುನೂರು ಕುದುರೆಗಳ ಗೊರಸುಗಳಿಗೆ ರತ್ನವನ್ನು ಸುರಿದು ಪ್ರದಕ್ಷಿಣೆ ಮಾಡಿ ದೇವಲೋಕದ ಸ್ತುತಿಪಾಠಕರು, ಹೊಗಳುಭಟರು, ತುಂಬುರರು ಜಯ ಜಯ ಎನ್ನುತ್ತಿರಲು, ಶಿವ ಮತ್ತು ಬ್ರಹ್ಮರು ಸ್ವಸ್ತಿವಾಚನ ಮಾಡುತ್ತಿರಲು ಶತ್ರುಗಳನ್ನು ಹೊಡೆದೋಡಿಸುವ ರಾವಣನು ಚಿನ್ನದ

ತೇರ ರಾವಣನೇಱೆ ತಱಿದರು । ಹೋರಿ ಕುಱಿಕೋಣಗಳ ಬೊಬ್ಬೆಯ
ವೀರಣದ ಬೊಗ್ಗುಗಳ ಲಗ್ಗೆಯಲುಭಯ ಪಾರ್ಶ್ವದಲಿ
ಆರಲುದುರಿದವಿಳೆಗೆ ಗಗನದ । ತಾರೆಗಳು ಬಿರಿದೊಡೆದುದುದ್ದಕೆ
ಮೇರು ಕಲಕಿತು ಜಲಧಿ ರಾವಣನಸಮಸಂಗರಕೆ ೨೮

ವಸುಮತೀಪತಿಸೂನು ಕೇಳ್ ಲಯ । ದಸಮನಯನನ ತೋಱಿಕೆಗೆ ಜಗ
ದಸುರ ತೆಗೆಬಗೆಯಾಯ್ತು ನೆರೆದ ಸಮಸ್ತ ದೇವಗಣ
ನಸಿವುತಿರ್ದುದು ತಾರಕಾಗ್ರಹ । ವಿಸರ ಸನಕ ಸನಂದನಾದಿಗ
ಳಸುವಿಡಿದು ರಕ್ಷೋಘ್ನಸೂಕ್ತದೋರ್ದರಭ್ರದಲಿ ೨೯

ಮೂಱುಲೋಕದ ಗಂಡಗರ್ವಿತ । ಸೂಱೆಕಾಱರ ದೇವನುಱೆ ಮೈ
ದೋಱಿದನು ಕಪಿಬಲಕೆ ಕತ್ತಲಿಸುವ ತಮೋನಿಧಿಗೆ
ತೋಱುವಿನನಂದದಲಿ ತಮನು । ಬ್ಬೇಱೆ ತಾರಕನಾಱೆ ಜಂಬನು
ಚೀಱೆ ಹಿಂದಣ ವೀರ ರಕ್ಕಸರಾಯರುಬ್ಬಱಿಯೆ ೩೦

ಹರಿಬ ನಿನ್ನದು ಲೇಸೆನುತ ಮಧು । ಹರಸಿದನು ಕೈಟಭನು ಹೊಗಳಿದ
ನರರೆ ವೀರರದೇವ ಭಾಪೆಂದೊಲಿದರಾನನವ
ಬೆರಳತುದಿಯಲಿ ಲೇಸೆನುತಲಾ । ವರ ಹಿರಣ್ಯಾಕ್ಷನು ಹಿರಣ್ಯಕ
ರರೆಮುಸುಕಿನಮರೌಘವಿರ್ದುದು ದಿಕ್ಕುಧಿಗಿಲೆನುತ ೩೧

ರಥವನ್ನು ಏರಿದನು. ೨೮. ರಾವಣನು ರಥವನ್ನೇರುತ್ತಿದ್ದಂತೆ ಎರಡು ಪಕ್ಕಗಳಲ್ಲೂ ಮಂಗಳದ ಜೋಡುತಮಟೆಗಳನ್ನೂ ಬೊಗ್ಗುಗಳನ್ನೂ ಭೋರ್ಗರೆಯುವಂತೆ ಬಾರಿಸುತ್ತ ಹೋರಿ ಕುರಿ ಕೋಣಗಳನ್ನು ಬಲಿಕೊಟ್ಟರು. ರಾವಣನು ವಿಷಯಸಂಗ್ರಾಮಕ್ಕೆ ಹೊರಡಲು ಆಕಾಶದ ನಕ್ಷತ್ರಗಳು ನೆಲದ ಮೇಲಕ್ಕೆ ಉದುರಿದವು. ಮೇರು ಪರ್ವತವು ಉದ್ದಕ್ಕೂ ಒಡೆದು ಬಿರುಕುಬಿಟ್ಟಿತು, ಸಮುದ್ರ ಕದಡಿತು. ೨೯. ರಾಜ ಕುಮಾರ ಕುಶ ಕೇಳು, ಪ್ರಳಯಕಾಲದ ಮುಕ್ಕಣ್ಣನಂತೆ ತೋರುತ್ತಿದ್ದ ರಾವಣ ನನ್ನು ಕಂಡು ಆಕಾಶದಲ್ಲಿ ನೆರೆದ ಸಮಸ್ತ ದೇವತೆಗಳಿಗೆ ಉಸಿರು ಕಟ್ಟಿದಂತಾಯಿತು ; ಗ್ರಹ ನಕ್ಷತ್ರಗಳು ಸೊರಗಿಹೋದವು ; ಆಕಾಶದಲ್ಲಿ ಸನಕ ಸನಂದನಾದಿಗಳು ಪ್ರಾಣ ಹಿಡಿದುಕೊಂಡು ರಾಕ್ಷಸರ ವಿನಾಶಕ್ಕಾಗಿ ರಕ್ಷೋಘ್ನಸೂಕ್ತವನ್ನು ಪಠಿಸುತ್ತಿದ್ದರು. ೩೦. ಪರಾಕ್ರಮದಿಂದ ಗರ್ವಿಷ್ಠರಾದ ಮೂರುಲೋಕದ ವೀರರುಗಳ ಸೂರೆಗಾರ ರೊಡೆಯ ರಾವಣನು ಕಪ್ಪಂಗವಿದ ಕತ್ತಲೆಗೆ ಸೂರ್ಯನು ಕಾಣಿಸಿಕೊಂಡಂತೆ ಕಪಿಸೈನ್ಯಕ್ಕೆ ಗೋಚರಿಸಿದನು. ಆಗ ತಮನು ಉಬ್ಬಿದನು, ತಾರಕನು ಆರ್ಭಟಿಸಿದನು, ಜಂಭನು ಚೀರಿದನು, ಗತಿಸಿದ ಹಿಂದಿನ ವೀರರಾದ ರಾಕ್ಷಸರಾಜರು ಹಿಗ್ಗಿದರು. ೩೧. 'ನಿನ್ನ ಕಾರ್ಯವು ಲೇಸು !' ಎನ್ನುತ್ತ ಮಧುರಾಕ್ಷಸನು ರಾವಣನನ್ನು ಹರಸಿದನು, ಕೈಟ ಭಾಸುರನು 'ಅರರೆ ವೀರರ ದೇವ ಭಾಪು !' ಎಂದು ಹೊಗಳಿದನು. 'ಒಳ್ಳೆಯದು' ಎಂಬುದಾಗಿ ಹಿರ್ಣ್ಯಾಕ್ಷ ಹಿರಣ್ಯಕಶಿಪುಗಳು ಬೆರಳತುದಿಯಲ್ಲಿ ತಲೆದೂಗಿದರು. ಆಗ

ರಥಿಕರತಿರಥರರ್ಧರಥಿಕರು । ಪ್ರಥುಳರಥರು ಮಹಾರಥರು ಸು
ಪ್ರಥಿತ ಸಾವೇೂದ್ಭವ ಹಯಾರೋಪಕರು ಪದಚರರು
ಪೃಥುವಿ ನೆಗ್ಗಲು ಮುಗ್ಗಲಹಿಪತಿ । ಶಿಥಿಲವಾಗಲಜಾಂಡ ಮನ್ಮಥ
ಮಥನ ಬೆದರಿಲು ಕಾಳಗಕೆ ಕೈಗೈದುದರಿಸೇನೆ ೩೨

ಈದುದೋ ನಭವಮುಮು ಧರೆ ಬೆಸ । ಲಾದುದೋ ದಿಗುಚಕ್ರ ನೆಱೆ ರೂ
ಪಾದುದೋ ಲಂಕೇಶ್ವರನ ಚತುರಂಗಸೈನಿಕದ
ಕೈದುಗಳ ಕುಡಿವೆಳಗು ತರಣಿಯು । ಹೊಯ್ದು ಹೊಳಕಿದುದಖಿಳ ವಾದ್ಯನಿ
ನಾದ ನಳಿನಭವಾಂಡಭಾಂಡವನೊಡೆದುದಗಲದಲಿ ೩೩

ಹೂಳಿತಂಬರ ರತ್ನಮಯ ಕಲ । ಶಾಳಿ ಸತ್ತಿಗೆಗಳಲಿ ಮಿಗೆ ಪದ
ಧೂಳಿಯಲಿ ಜಲನಿಧಿ ರಜೋನಿಧಿಯಾಯ್ತು ನಿಮಿಷದಲಿ
ತೂಳುವಿಭ ಹಯ ರಥ ಪದಾತಿಯು । ಮೇಳದುಬ್ಬರದಬ್ಬರದಲಿ ದಿ
ಶಾಳಿ ಬಧಿರತೆಯಾಯ್ತು ಹೊಗಳುವೆನೇನನದ್ಭುತವ ೩೪

ನಿಂದುದೆಡದಲಿ ಬಲದಲಸುರನ । ಹಿಂದು ಮುಂದಣ ಭಾಗದಲಿ ಬಳ
ಸಂದ ಭಾಸ್ಕರಮಂಡಲದ ಪರಿವೇಷದಂದದಲಿ
ನಂದನರು ಸೇನಾನಿಗಳು ಮಣಿ । ವೃಂದ ಖಚಿತ ಕಿರೀಟಧರರೇ
ನೆಂದು ಹೊಗಳುವೆನಾರು ಸರಿ ಸಿರಿಯಲಿ ದಶಾನನಗೆ ೩೫

ದೇವತೆಗಳ ಸಮೂಹವು ಅರೆಮುಸುಕು ಹಾಕಿಕೊಂಡು 'ದಿಕ್ಕು ಧಿಗಿಲು !' ಎನ್ನುತ್ತ ಅಂಜಿಕೆಯಿಂದಿದ್ದಿತು. ೩೨. ರಾಕ್ಷಸರ ಸೈನ್ಯದಲ್ಲಿ ರಥಿಕರು, ಅತಿರಥರು, ಅರ್ಧರಥಿಕರು ಹಿರಿಯ ರಥಿಕರು, ಮಹಾರಥರು, ಸುಪ್ರಸಿದ್ಧ ಆನೆ ಕುದುರೆಗಳ ಆರೋಹಕರು, ಕಾಲಾಳುಗಳು ಯುದ್ಧಕ್ಕೆ ಸಿದ್ಧರಾದರು. ಅವರ ಕಾಲ್ತುಳಿತಕ್ಕೆ ಭೂಮಿ ಕುಗ್ಗಿತು, ಆದಿಶೇಷ ಕುಸಿದನು, ಬ್ರಹ್ಮಾಂಡ ಸಡಿಲಿತು, ಶಿವನು ಬೆದರಿದನು. ೩೩. ಆಕಾಶ ಮರಿಹಾಕಿತೋ, ಭೂಮಿಯು ಹೆತ್ತಿತೋ, ದಿಙ್ಮಂಡಲವು ರೂಪಗೊಂಡು ಬಂದಿತೋ ಎಂಬಂತೆ ಲಂಕೇಶ್ವರನ ಚತುರಂಗಸೈನ್ಯವು ಗೋಚರಿಸಿತು. ಸೈನ್ಯದ ಆಯುಧಗಳ ಪ್ರಕಾಶವು ಸೂರ್ಯನನ್ನು ಮೀರಿ ಬೆಳಗಿತು ; ಸಮಸ್ತ ವಾದ್ಯಗಳ ಶಬ್ದವು ಬ್ರಹ್ಮಾಂಡದ ಗುಡಾಣವನ್ನು ಒಡೆಯಿತು. ೩೪. ರತ್ನದ ಕಲಶ ಕೊಡೆಗಳಿಂದ ಆಕಾಶ ಮುಚ್ಚಿಹೋಯಿತು. ಹೆಜ್ಜೆಯ ತುಳಿತದಿಂದೆದ್ದ ಧೂಳಿನಿಂದ ನೀರಿನ ನಿಧಿಯಾದ ಸಮುದ್ರವು ಒಂದೇ ನಿಮಿಷದಲ್ಲಿ ಧೂಳಿನ ನಿಧಿಯಾಯಿತು. ಮುನ್ನುಗ್ಗುವ ಆನೆ, ಕುದುರೆ, ರಥ ಮತ್ತು ಕಾಲಾಳುಗಳ ಗುಂಪಿನ ಅತಿಶಯವಾದ ಅಬ್ಬರದಿಂದ ದಿಕ್ಕುಗಳು ಕಿವುಡಾದವು. ಈ ಅದ್ಭುತವನ್ನು ಏನೆಂದು ವರ್ಣಿಸಲಿ ಎಂದು ವಾಲ್ಮೀಕಿಮಹರ್ಷಿಗಳು ನುಡಿದರು. ೩೫. 'ಸೂರ್ಯ ಮಂಡಲದ ಸುತ್ತ ಇರುವ ಪ್ರಭಾವಲಯದಂತೆ ರಾವಣನ ಹಿಂದೆ ಮುಂದೆ ಮತ್ತು ಎಡ ಬಲ ಭಾಗಗಳಲ್ಲಿ ರಾವಣನ ಕುಮಾರರು, ಸೇನಾಪತಿಗಳು, ರತ್ನ ಖಚಿತ ಕಿರೀಟಗಳನ್ನು ಧರಿಸಿದ ರಾಜರು ನಿಂತರು. ಸಂಪತ್ತಿನಲ್ಲಿ ರಾವಣನಿಗೆ ಯಾರು ಸರಿ, ಅದನ್ನು ಏನೆಂದು

ವೀರ ಕುಂಭ ನಿಕುಂಭ ರಣಜ । ಜ್ಝಾರ ದೇವಾಂತಕ ನರಾಂತಕ
ಘೋರಬಲ ಮಕರಾಕ್ಷ ವಿದ್ಯುಜ್ಜಿಹ್ವನತಿಕಾಯ
ಸಾರಣಾಸುರ ಶುಕ ಮಹೋದರ । ವೀರ ಯುದ್ಧೋನ್ಮತ್ತ ಸಮರೋ
ದ್ಧಾರರಿದ್ದುದು ತವಕದಲಿ ತಮ್ಮಮ್ಮ ಬಲಸಹಿತ ೩೬

ಹುಲಿಯನೇಱಿದ ರಾವುತರು ಹರಿ । ಕುಲವ ಹೂಡಿದ ರಥಿಕರಗ್ಗದ
ಬಲು ಶರಭ ಸೈರಿಭವನಡರಿದ ಜೋಧರಪರಿಮಿತ
ಹಲವು ಮೃಗಗಳ ಮೋಱೆಗಳ ಮಂ । ದಳಿಯ ಪದಚರ ನಿಕರದಿಭಸಂ
ಕುಲದ ಸೌರಂಭದ ಮಹಾಭಟರಿರ್ದುದಗಲದಲಿ ೩೭

ತೆಗೆದು ನಿಂದುದು ರಾವಣನ ಮೈ । ಸೆಗಳಿಕೆಗೆ ನಿಮ್ಮವರ ಬಲ ಕೈ
ಮಿಗುವ ಮಿಱುವ ವೀರರಂತರಿಸಿದರು ದೂರದಲಿ
ಜಗದ ನಯನಸುತಾದಿಗಳ ತನು । ದಿಗಿಲು ದಿಕ್ಕೆನುತಿರ್ದುದಸುರನ
ಸೊಗಡಿಗಹಿತನ ಹೊಗರ ಪರಿಕಿಸುತಿರ್ದನಾ ರಘುಜ ೩೮

ಇಳಿದು ಬಳಿಕಸುರೇಂದ್ರನಾ ಕೊಳು । ಗುಳದ ಮಧ್ಯದಲನ್ವಯಾಗತ
ದೊಲುಮೆಗಾತಿ ನಿಕುಂಭಿಳೆಯನಾಹ್ವಾನವನು ಮಾಡಿ
ವಿಲಸಿತಾಸುರಪೂಜೆಯಲಿ ಕೈ । ಗೊಳಿಸಿದನು ವಿವಿಧೋಪಚಾರಾ
ವಳಿಗಳನು ಬೊಬ್ಬಿಱಿವ ಬಹುವಿಧ ವಾದ್ಯರಭಸದಲಿ ೩೯

ಹೊಗಳಲಿ ಎಂದರು ವಾಲ್ಮೀಕಿಗಳು. ೩೬. ವೀರ ಕುಂಭ, ನಿಕುಂಭ, ರಣಧೀರ ದೇವಾಂತಕ, ನರಾಂತಕ, ಉಗ್ರಬಲಶಾಲಿ ಮಕರಾಕ್ಷ, ವಿದ್ಯುಜ್ಜಿಹ್ವ, ಅತಿಕಾಯ, ಸಾರಣಾಸುರ, ಶುಕ, ಮಹೋದರ ಮೊದಲಾದ ಯುದ್ಧದಲ್ಲಿ ಕೊಬ್ಬಿದ ಸಮರಶೂರರು ತಂತಮ್ಮ ಸೈನ್ಯದಳಗಳೊಡನೆ ಉತ್ಸಾಹದಿಂದಿದ್ದರು, ೩೭. ಹುಲಿಯನ್ನೇರಿದ ರಾವುತರು,' ಸಿಂಹಗಳನ್ನು ಹೂಡಿದ ರಥಿಕರು, ಭಾರಿ ಶರಭ ಮತ್ತು ಕೋಣಗಳನ್ನು ಏರಿದ ಅಸಂಖ್ಯಾತ ಯೋಧರು, ಹಲವು ಮೃಗಗಳಂತೆ ಮೋರೆಗಳನ್ನು ಹೊಂದಿದ ಕಾಲಾಳುಗಳು ಮತ್ತು ಆನೆಗಳ ಸಮೂಹದ ಸಡಗರದೊಂದಿಗೆ ಮಹಾವೀರರು ಆ ಯುದ್ಧಭೂಮಿಯಲ್ಲಿದ್ದರು. ೩೮. 'ರಾವಣನ ಮೈಯ ಕಾವಿಗೆ ನಿಮ್ಮವರ ಸೈನ್ಯವು ಹಿಂಜರಿದುಹೋಗಿ ನಿಂತಿತು ; ಮುನ್ನುಗ್ಗಿ ಕಾದಾಡುವ ವೀರರು ದೂರದಲ್ಲಿ ಮರೆಯಾಗಿ ನಿಂತರು, ರಾವಣನ ಮೈವಾಸನೆಗೆ ಸೂರ್ಯಪುತ್ರ ಸುಗ್ರೀವನ ಶರೀರವು 'ದಿಗಿಲು ದಿಕ್ಕೆ'ನುತ್ತಿತ್ತು. ಶತ್ರುರಾಜನ ಗರ್ವಪ್ರಕಾಶವನ್ನು ರಾಮನು ಪರೀಕ್ಷಿಸುತ್ತಿದ್ದನು ಎಂಬುದಾಗಿ ವಾಲ್ಮೀಕಿಗಳು ನುಡಿದರು. ೩೯. ಅನಂತರ ರಾವಣನು ಯುದ್ಧಭೂಮಿಯ ಮಧ್ಯದಲ್ಲಿಳಿದು ವಂಶಪರಂಪರೆಯ ದೇವತೆ ನಿಕುಂಭಿಳೆಯನ್ನು ಆಹ್ವಾನಿಸಿ ಬಹುವಿಧದ ವಾದ್ಯಗಳು ಭೋರ್ಗರೆಯುತ್ತಿರಲು ವಿವಿಧೋಪಚಾರಸಹಿತ

ಇರಿಸಿ ಕೈದುವ ಬೀಜಮಂತ್ರಾ । ಕ್ಷರವ ಸಾಂಗೋಪಾಂಗ ಮುದ್ರೆಯ
ನಿರತಿಶಯ ನಿಗಮಾಗಮದ ಪೂಜಾವಿಧಾನದಲಿ
ನರರುಧಿರ ಮಾಂಸೋಪಹಾರದ । ಪರಿವಿಡಿಯ ಪರಿಭಾವಶುದ್ಧಿಯ
ಪರಮಭಕ್ತಿಯುಲೊಲಿಸಿದನು ಶಸ್ತ್ರಾಧಿದೇವತೆಯ ೪೦

ಏನ ಮಾಡಿದಡೇನು ಸದ್ಧ । ರ್ಮಾನುಭಾವರಿಗೈಸಲೇ ದೈ
ವಾನುಕೂಲತೆ ಧರ್ಮಹೀನರಿಗಸುರಕರ್ಮರಿಗೆ
ಆನನವನದುರುವುದು ನಿಗಮವಿ । ಧಾನವಿದು ಕೇಳೈ ನರೇಶ್ವರ
ಸೂನು ಸುಮ್ಮಾನಿಸಿದನಾಹವಕಸುರಪತಿ ಬಳಿಕ ೪೧

ಮಣಿದು ಮನೆದೇವತೆಗೆ ನಾನಾ । ಮಣಿಖಚಿತ ಮೌಳಿಗಳನುರು ಮಾ
ರ್ಗಣದ ರೌದ್ರಾಕಾರದಾಯುಧನಿಕರವನು ಧರಿಸಿ
ರಣದ ಭೂಮಿಗೆ ನಮಿಸಿ ರಿಪು ಕಪಿ । ಗಣವನೀಕ್ಷಿಸುತೇರಿದನು ಸುರ
ಗಣಭಯಂಕರನಬುಜಸಂಭವದತ್ತ ಮಣಿರಥವ ೪೨

ಹತ್ತು ಸಾವಿರ ಧನುವನೆರಡೈ । ವತ್ತು ಸಾವಿರ ದಿವ್ಯಬಾಣದ
ಬತ್ತಳಿಕೆಗಳ ತುಂಬಿಸಿದನೆಡಬಲದ ತೇರಿನಲಿ
ಕೃತ್ತಿವಾಸನು ಕಮಲಜನು ತನ । ಗಿತ್ತ ದಿವ್ಯಾಯುಧಗಳನು ತ
ನ್ನೊತ್ತಿನಲಿ ಸಂವರಿಸಿಕೊಂಡನುವಾದನಾಹವಕೆ ೪೩

ಅಸುರಪೂಜೆಯನ್ನು ಮಾಡಿದನು. ೪೦. ಆಯುಧಗಳನ್ನಿರಿಸಿ ಬೀಜಮಂತ್ರಾಕ್ಷರಗಳನ್ನುಚ್ಚರಿಸುತ್ತ ಅಂಗ ಉಪಾಂಗಗಳೊಡನೆ ವಿವಿಧ ಮುದ್ರೆಗಳು ಸಹಿತ ಶಾಸ್ತ್ರೋಕ್ತವಾಗಿ ಪೂಜೆ ಮಾಡಿದನು. ಮನುಷ್ಯ ರಕ್ತ ಮಾಂಸಗಳ ಬಲಿಯನ್ನು ಕೊಟ್ಟು ಮನಶ್ಶುದ್ಧಿಯಿಂದ ಅತಿಶಯ ಭಕ್ತಿಪೂರ್ವಕವಾಗಿ ಶಸ್ತ್ರಾಧಿದೇವತೆಯನ್ನು ರಾವಣನು ಒಲಿಸಿಕೊಂಡನು. ೪೧. ಏನು ಮಾಡಿದರೆ ತಾನೆ ಏನು, ಸದ್ಧರ್ಮಾಚರಣೆಯುಳ್ಳವರಿಗೆ ಮಾತ್ರ ವಿಧಿಯು ಅನುಕೂಲವಾಗುವುದು ; ಅಧರ್ಮಿಗಳನ್ನೂ ಉಗ್ರಕರ್ಮಿಗಳನ್ನೂ ಕಂಡರೆ ಮುಖ ತಿರುಗಿಸುವುದು. ಇದು ಶಾಸ್ತ್ರಸಿದ್ಧ. ರಾಜಕುಮಾರ ಕುಶ ಕೇಳು, ಬಳಿಕ ರಾಕ್ಷಸೇಶ್ವರನು ಕದನಕ್ಕೆ ಉತ್ಸಾಹಿಸಿದನು. ೪೨. ರತ್ನಕಿರೀಟಗಳನ್ನು ಧರಿಸಿದ ತಲೆಗಳಿಂದ ಮನೆದೇವತೆಗೆ ಶಿರಸಾ ನಮಸ್ಕರಿಸಿ ರಾವಣನು ಬಾಣಗಳನ್ನೂ ಭಯಂಕರ ಆಯುಧಗಳನ್ನೂ ಹಿಡಿದುಕೊಂಡನು. ಅನಂತರ ಯುದ್ಧಭೂಮಿಗೆ ನಮಸ್ಕಾರಮಾಡಿ ಶತ್ರು ವಾನರರ ಸೈನ್ಯವನ್ನು ನೋಡುತ್ತ ದೇವತೆಗಳಿಗೆ ಭಯಂಕರನಾದ ರಾವಣನು ಬ್ರಹ್ಮನು ಕೊಟ್ಟ ರತ್ನದ ರಥವನ್ನೇರಿದನು. ೪೩. ಹತ್ತುಸಾವಿರ ಬಿಲ್ಲುಗಳನ್ನೂ ಒಂದು ಲಕ್ಷ ದಿವ್ಯ ಬಾಣಗಳ ಬತ್ತಳಿಕೆಗಳನ್ನೂ ತನ್ನ ಎರಡೂ ಪಕ್ಕಗಳ ರಥಗಳಲ್ಲಿ ತುಂಬಿಸಿದನು. ಈಶ್ವರನೂ ಬ್ರಹ್ಮನೂ ತನಗೆ ಕೊಟ್ಟ ದಿವ್ಯವಾದ ಆಯುಧಗಳನ್ನು ತನ್ನ ಬದಿಯಲ್ಲಿ ಸಿದ್ಧ

ಮೊರೆದವಗಣಿತ ಭೇರಿ ಜಲನಿಧಿ । ಜರಿಯೆ ಜವನೆದೆ ಬಿರಿಯೆ ಮೊಳಗಿದ
ವರರೆ ನಿಸ್ಸಾಳಗಳು ಕಮಲಭವಾಂಡ ಕಳವಳಿಸೆ
ಮುರಜ ತಂಬಟ ಪಣಹ ರಣವಹೌ । ವರಿಗಳಬ್ಬರಿಸಿದವು ತಾರಕಿ
ಸುರಿಯೆ ಸೂಳೈಸಿದವು ಚಂಬಕ ಕೊಂಬು ಕಹಳೆಗಳು ೪೪

ಡಕ್ಕೆ ಡಮರುಗ ಮೊಳಗಿದವು ಕುಂ । ಭಿಕ್ಕೆ ನಭ ಕುಣಿದಾಡಲಿಳೆ ಬೊ
ಬ್ಬಿಕ್ಕಿದವು ಬೊಂಬುಳಿಗಳಾಶಾಬಂಧ ಬೆಸುಗೆ ಬಿಡೆ
ರಕ್ಕಸರ ರಣವಟೆಗಳೊದರಿದ । ವೆಕ್ಕತುಳದಲಜಾಂಡಮಂಡಲ
ಬಿಕ್ಕುತಿರ್ದುದು ಬಿರಿವುತಿರ್ದುದು ಹೇಳಲೇನೆಂದ ೪೫

ಆನೆಯಲಿ ತುರಗದಲಿ ರಥಸಂ । ತಾನದಲಿ ಪದಚರರನೆಣಿಸಲಿ
ಕೇನಹೇಳುವೆನಾದುದಷ್ಟಾದಶ ಮಹಾಕ್ಷೋಣಿ
ಆ ನಿಭೃತ ರಣವಟೆಯ ರಕ್ಕಸ । ಸೇನೆಗಳ ಸಂಖ್ಯೆಗಳನುಸುರುವ
ಡಾನನದ ಸಾಸಿರದ ಶೇಷಂಗರಿದಲೇಯೆಂದ ೪೬

ರಾಯ ರಿಪುಸಂಹಾರ ನಿರ್ಜರ । ರಾಯ ಮಸ್ತಕಶೂಲ ಮಾನವ
ರಾಯಕೋಳಾಹಳ ಭುಜಂಗಮರಾಯರಿಪು ಗರುಡ
ರಾಯ ರಾಯರರಾಯ ರಘುಕುಲ । ರಾಯ ರಣಭೈರವ ನಿಶಾಚರ
ರಾಯ ಜಯಜಯಯೆಂದು ಹೊಗಳಿತು ವಂದಿಸಂದೋಹ ೪೭

ಪಡಿಸಿಟ್ಟುಕೊಂಡು ರಾವಣನು ಯುದ್ಧಕ್ಕೆ ಸಿದ್ಧನಾದನು. ೪೪. ಲೆಕ್ಕವಿಲ್ಲದಷ್ಟು ಭೇರಿಗಳು ಭೋರ್ಗರೆಯುತ್ತಿರಲು ಸಮುದ್ರಗಳು ಹಿಂದೆಗೆದವು, ಯಮನ ಎದೆ ಬಿರಿಯಿತು. ಬ್ರಹ್ಮಾಂಡವು ಕಳವಳಗೊಳ್ಳುವಂತೆ ನಗಾರಿಗಳು ಅಬ್ಬರಿಸಿದವು ; ಮುರಜ, ತಮಟೆ, ಪಣಹ, ರಣಕಹಳೆ ಮೊದಲಾದವು ಗರ್ಜಿಸಿದವು. ಚಂಬಕ, ಕೊಂಬು, ಕಹಳೆಗಳು ಬಾರಿಸಲು ನಕ್ಷತ್ರಗಳು ಉದುರಿದವು. ೪೫. 'ಡಕ್ಕೆ ಡಮರುಗಗಳು ಧ್ವನಿಮಾಡಲು ಆಕಾಶ ಬಾಗಿತು ಮತ್ತು ಭೂಮಿಯು ಕುಣಿದಾಡಿತು. ದಿಕ್ಕುಗಳ ಬೆಸುಗೆ ಬಿಡುವಂತೆ ಡೋಲುಗಳು ಬೊಬ್ಬೆಹಾಕಿದವು. ರಾಕ್ಷಸರ ಕದನತಮಟೆಗಳು ರಭಸದಿಂದ ಹೊಡೆದವು. ಬ್ರಹ್ಮಾಂಡ ಏದುಸಿರುಬಿಡುತ್ತ ಬಿರಿಯುತ್ತಿದ್ದಿತು. ಇದನ್ನು ಏನೆಂದು ಹೇಳಲಿ ಎಂದು ವಾಲ್ಮೀಕಿಮಹರ್ಷಿಗಳು ವಿವರಿಸಿದರು. ೪೬, ಆನೆ ಕುದುರೆ ರಥಗಳ ದಳಗಳನ್ನೂ ಪದಾತಿಸೈನಿಕರನ್ನೂ ಎಣಿಸಲು ಹದಿನೆಂಟು ಅಕ್ಷೋಹಿಣಿ ಸೈನ್ಯವಾಯಿತು ; ಇದನ್ನು ಏನೆಂದು ವರ್ಣಿಸಲಿ. ಆ ಕಿಕ್ಕಿರಿದ ಕದನತಮಟೆಗಳ ರಾಕ್ಷಸಸೈನ್ಯಗಳ ಲೆಕ್ಕ ಮಾಡಲು ಸಾವಿರ ಬಾಯಿಗಳ ಆದಿಶೇಷನಿಗೂ ಅಸಾಧ್ಯವಲ್ಲವೇ ಎಂದ ವಾಲ್ಮೀಕಿ. ೪೭. "ರಾಜ ! ಶತ್ರುಸಂಹಾರ ! ದೇವೇಂದ್ರನ ತಲೆಯ ಶೂಲ ! ಮಾನವರಾಜರಿಗೆ ಕೋಲಾಹಲಕಾರಿ ! ಪಾತಾಳಲೋಕದರಸನಿಗೆ ಶತ್ರುವಾದ ಗರುಡ ! ರಾಜಾಧಿರಾಜ ! ರಘುವಂಶದರಸನಿಗೆ ಯುದ್ಧದಲ್ಲಿ ಭೈರವ ! ರಾಕ್ಷಸರಾಜ ! ಜಯಜಯ !" ಎಂದು

ಆರು ಸರಿ ನಿನಗೆಂದು ನಭದಲಿ । ನಾರದನು ಕೊಂಡಾಡಿದನು ವೃಂ
ದಾರಕರು ಹೊಗಳಿದರು ಪೂಮಳೆಗಱೆವುತಭ್ರದಲಿ
ವೀರಶೇಷಾಕ್ಷತೆಯನಮರರ । ನಾರಿಯರು ಸೂಸಿದರು ಜಯವಿ
ಸ್ತಾರ ಜಯಜಯಯೆನುತ ಸಲೆ ಕೊಂಡಾಡಿತಮರಗಣ ೪೮

ಬಳಿಕ ಮೈಯುಬ್ಬುಗಳ ರೋಮಾ । ವಳಿಯ ಬಿಗುಹಿನ ಭೈರವಾಂಗದ
ವಿಲಸಿತಾನನದ ಪ್ರತಾಪದ ಶಿಖಿಯ ನಿಗುರಿಕೆಯ
ಝಳದ ಝಾಡಿಯ ಜೋಡಿಯಲಿ ಕಪಿ । ಬಲಕೆ ಮೈದೋಱಿದನು ಬೊಬ್ಬೆಯ
ಬಲುದನಿಯ ಬಱಸಿಡಿಲಲಬುಜಭವಾಂಡಘಟ ಬಿರಿಯೆ ೪೯

ಲಗ್ಗೆ ಮಸಗಿತು ಕೂಡೆ ರಕ್ಕಸ । ಮೊಗ್ಗರದ ಮುಂಬಿನಲಿ ಬವರದ
ಬೊಗ್ಗಿನಬ್ಬರವಱೆಗಳೊಡೆದವಜಾಂಡಮಂಡಲವ
ಹಿಗ್ಗಲಳ್ಳೆಗಳಂಬುರಾಶಿಯ । ಬಗ್ಗಲಿಳೆ ದಿಗುತಟದ ಬಂಧದ
ಹಗ್ಗ ಹಱಿಯಲು ಹಳಚಲನುಗೈದುದು ನಿಶಾಟಬಲ ೫೦

ಕುಣಿದವಸುರನ ರಥದ ಹಯ ದಿನ । ಮಣಿಯ ದಿವ್ಯ ವರೂಥವಾಜಿಯ
ಹಣೆಗೆ ಹೊಂಚುವ ಖುರದ ಚಳಬಳಕೆಯ ಛಡಾಳದಲಿ
ಅಣುಗ ಕೇಳ್ ಮುಂಗಾರ ಗಗನಾಂ । ಗಣದ ನಾಟ್ಯಕೆ ನಿಂದ ಮಿಂಚಿನ
ಭಣಿತೆಯವೊಲಸುರೇಂದ್ರರಥ ಹೊಳಕಿದುದು ಕಣನೊಳಗೆ ೫೧

ಹೊಗಳುಭಟರು ರಾವಣನನ್ನು ಸ್ತುತಿಸಿದರು. ೪೮. 'ನಿನಗೆ ಯಾರು ಸರಿ !' ಎಂದು ಆಕಾಶದಲ್ಲಿ ನಾರದನು ಕೊಂಡಾಡಿದನು. ದೇವತೆಗಳು ಆಕಾಶದಿಂದ ಹೂಮಳೆ ಸುರಿಸಿ ರಾವಣನನ್ನು ಹೊಗಳಿದರು. ವೀರಮುತ್ತಾಕ್ಷತೆಯನ್ನು ದೇವತಾಸ್ತ್ರೀಯರು ತಳಿದರು. "ಜಯವಿಸ್ತಾರ ! ಜಯಜಯ !" ಎಂದು ಅಮರರು ಸ್ತುತಿಸಿದರು. ೪೯. ಅನಂತರ ರೋಮಾಂಚದಿಂದ ಮೈಯುಬ್ಬಿ, ಬಲಿಷ್ಠವಾದ ಭಯಂಕರ ಅವಯವಗಳ, ಹೊಳೆಯುವ ಮುಖಗಳ ರಾವಣನು ಪರಾಕ್ರಮಾಗ್ನಿಯ ಶಾಖವನ್ನು ಬೀರುತ್ತ ಬೊಬ್ಬಿರಿದನು. ಬಳಿಕ ಬರಸಿಡಿಲಿನಂತೆ ಧನುಷ್ಟಂಕಾರಮಾಡಿ ವಾನರಸೈನ್ಯದೆದುರಿಗೆ ಕಾಣಿಸಿಕೊಳ್ಳಲು ಬ್ರಹ್ಮಾಂಡವೆಂಬ ಮಡಕೆಯು ಬಿರಿಯಿತು. ೫೦. ರಾಕ್ಷಸಸೈನ್ಯದ ಮುಂಭಾಗದಲ್ಲಿ ಗದ್ದಲವೆದ್ದಿತು. ಕಾಳಗದ ವಾದ್ಯಗಳ ಅಬ್ಬರವು ಬ್ರಹ್ಮಾಂಡಮಂಡಲವನ್ನು ಒಡೆಯಿತು. ಸಮುದ್ರದ ಪಕ್ಕೆಯು ಹಿಗ್ಗಲು, ಭೂಮಿಯು ಬಾಗಲು, ದಿಕ್ಕುಗಳ ಸೇರುವೆಯ ಹಗ್ಗವು ಹರಿಯುವಂತಾಗಲು ರಾಕ್ಷಸಸೈನ್ಯವು ಶತ್ರುಗಳ ಮೇಲೆ ಬೀಳುವುದಕ್ಕೆ ಸಿದ್ಧವಾಯಿತು. ೫೧. ಸೂರ್ಯನ ದಿವ್ಯರಥದ ಕುದುರೆಗಳ ಸಮಕ್ಕೆ ಹೋಗಲಾಶಿಸುವಂತೆ ಗೊರಸುಗಳ ಅತಿಶಯ ಗತಿಯಿಂದ ರಾಕ್ಷಸನ ರಥದ ಕುದುರೆಗಳು ಕುಣಿದವು. ಕುಮಾರ ಕೇಳು, ಮುಂಗಾರಿನ ಆಕಾಶದಲ್ಲಿ ನಾಟ್ಯವಾಡಲು ನಿಂತ ಮಿಂಚಿನಂತೆ ರಾಕ್ಷಸ

ಹೊಗುವ ಕಪಿಸೇನಾಸಮುದ್ರಕೆ । ಬಿಗಿದ ಕಟ್ಟೆಯಿದೆನಲು ಬಲಿದುದು
ಬಗೆವಡೀಶಂಗೋಸರಿಸದೆಂಬಂತೆ ರಿಪುಸೇನೆ
ಮೊಗಸದಾದವು ನೋಡಲಮರರ । ದೃಗುಗಳಸುರರ ಸುಪ್ರತಾಪದ
ಸೆಗಳಿಕೆಯ ಶಿಖಿಯುಬ್ಬರದ ಸಂತಾಪ ಲಹರಿಯಲಿ ೫೨

ಏನಿದದ್ಭುತವಿಂದಿನಾಹವ । ದಾನಿಕೆಯ ರಿಪುಬಲದ ಸಂಭ್ರಮ
ವೇನಿಸುತ್ತಿದೆ ಕಂಗಳಲಿ ಕುಹುರದ ಕೌತುಕವ
ನೀನು ಬಲ್ಲೈ ಬಂದ ಭಟನಭಿ । ಧಾನವನು ಯುವರಾಜನೋ ಸೇ
ನಾನಿಯೋ ಶತ್ರುವೊ ವಿಭೀಷಣ ಹೇಳು ತನಗೆಂದ ೫೩

ಹೇಳಲಮ್ಮೆನು ಜೀಯ ಹೇಳಿದ । ಡಾಲಿಸುವಿರೋ ಮೇಣು ಕಿವುಡಿನ
ಕೇಳಿಕೆಯನನುಕರಿಸುವಿರೊ ತನಗರಿಯಬಾರದೆನೆ
ಹೇಳು ಸಾಕಂಜದೆ ವಿರೋಧಿಗ । ಳಾಳುತನದುಬ್ಬಟೆಯ ರಣದಲಿ
ಕೇಳುವುದು ಭೂಷಣವಲೇ ನಮಗೆಂದನಾ ರಾಮ ೫೪

ಹೇಳಬೇಕೇ ಜೀಯ ಕಿವಿಗಳು । ಕೇಳಲಾದಡೆ ಕಮಲವದನೆಯ
ಖೂಳತನದಲಿ ತಂದ ಯವ್ವನದೆಸಕ ಮಸುಳಿಸದ
ಬಾಲತನ ವೃದ್ಧತ್ವ ಹೊದ್ದದ । ಸೋಲ ಲಯಸಂಕ್ರಮಿಸದಭಿನವ
ಶೂಲಿ ಸಮರಕಪಾಲಿ ಖಳ ದಶವಕ್ತ್ರಯಿವನೆಂದ ೫೫

ರಾಜನ ರಥವು ಯುದ್ಧರಂಗದಲ್ಲಿ ಗೋಚರಿಸಿತು. ೫೨. ಮುನ್ನುಗ್ಗುವ ಕಪಿಸೈನ್ಯ ಸಾಗರಕ್ಕೆ ಕಟ್ಟೆಯೋ ಎನ್ನುವಂತೆ ಮನಸ್ಸುಮಾಡಿದರೆ ಶಿವನೆದುರಿಗೂ ಹಿಮ್ಮೆಟ್ಟುವುದಿಲ್ಲ ಎಂಬ ರಾಕ್ಷಸಸೈನ್ಯವು ಬಲವಾಗಿ ನಿಂತಿತು. ರಾಕ್ಷಸರ ಪರಾಕ್ರಮದ ಬೆಂಕಿಯ ಸುಡುವ ಉರಿಯನ್ನು ದೇವತೆಗಳ ಕಣ್ಣುಗಳು ನೋಡಲಾರದೆ ಸಂಕಟಗೊಂಡವು. ೫೩. "ಏನಿದು ಅದ್ಭುತ ! ಇಂದಿನ ದಿವಸ ನಮ್ಮನ್ನು ಎದುರಿಸಿದ ಶತ್ರುಸೈನ್ಯದ ಸಂಭ್ರಮವು ನಮ್ಮ ಕಣ್ಣುಗಳಿಗೆ ಅತಿಶಯ ಕುತೂಹಲವನ್ನುಂಟುಮಾಡುತ್ತಿದೆ. ನಿನಗೆ ಗೊತ್ತೆ ಬಂದ ವೀರನ ಹೆಸರು! ಅವನು ಯುವರಾಜನೋ, ಸೇನಾಪತಿಯೋ, ನಮ್ಮ ಶತ್ರುವೋ? ವಿಭೀಷಣ ಇದನ್ನು ನನಗೆ ಹೇಳು" ಎಂದು ರಾಮ ಕೇಳಿದ. ೫೪. "ಪ್ರಭು, ನಾನು ಇದನ್ನು ಹೇಳಲಾರೆ. ಹೇಳಿದರೆ ಆಲಿಸುತ್ತೀರೋ, ಇಲ್ಲ ಕೇಳಿದರೂ ಕೇಳದಂತೆ ನಟಿಸುತ್ತೀರೋ, ನನಗೆ ತಿಳಿಯದು" ಎಂದು ವಿಭೀಷಣನು ಹೇಳಲು, "ಸಾಕು, ಹೆದರದೆ ಹೇಳು. ಕದನದಲ್ಲಿ ತೊಡಗಿರುವಾಗ ಶತ್ರುಗಳ ಪರಾಕ್ರಮ ಸಾಮರ್ಥ್ಯಗಳನ್ನು ಕೇಳುವುದು ನಮಗೆ ಭೂಷಣವಲ್ಲವೇ ?" ಎಂದು ನುಡಿದನು ರಾಮ. ೫೫. "ಹೇಳಬೇಕೇ, ಸ್ವಾಮಿ, ಹಾಗಿದ್ದರೆ ತಮ್ಮ ಕಿವಿಗಳು ನಾನು ಹೇಳುವುದನ್ನಾಲಿಸಲಿ. ಕಮಲಮುಖಿ ಸೀತೆಯನ್ನು ಮೂರ್ಖತನದಿಂದ ಕದ್ದುತಂದ, ಯೌವನದ ಕಾಂತಿ ಕಂದದ, ಬಾಲ್ಯ ಮತ್ತು ಮುಪ್ಪು ಹತ್ತಿರ ಸೇರದ, ಸೋಲಿನ ನಾಶ ಹತ್ತಿರ ಸೇರದ, ಅಭಿನವಶೂಲಿಯೂ

ದೇವ ನೋಡೀ ಸಂಭ್ರಮವು ತಾ । ನಾವ ರಾಯರಲುಂಟು ಸೇನಾ
ರಾವವಿದು ಲಯಸಾಗರದಲುಂಟೇ ನಿಧಾನಿಸಲು
ದೇವ ದನುಜ ನರೋರಗರ ಸುಭ । ಟಾವಳಿಯೊಳಿವನಂತೆ ಧೈರ್ಯದ
ದೀವಸಿಗಳುಂಟೇ ವಿಚಾರಿಸಲೆಂದನಸುರೇಂದ್ರ ೫೬

ಅರಸ ಚಿತ್ತೈಸದೆ ಲಯಾಬ್ಧಿಯ । ತೆರೆಯ ತೆಕ್ಕೆಯ ತೆರಳಿಕೆಯವೊಲು
ತುರಗದಳ ರಥವದೆ ಸಮುದ್ರದ ಸುಳಿಗಳಂದದಲಿ
ಸುರಪತಿಗೆ ಮಾಱಾಂತ ಕುಲಭೂ । ಧರದ ದಳವೆನೆ ತೋಱುತದೆ ಸಿಂ
ಧುರಘಟಾವಳಿ ಸಿಂಧುವೋ ರಿಪುಸೈನ್ಯವೋಯೆಂದ ೫೭

ಅದೆ ಪದಾತಿ ಕೃತಾಂತನೊಡ್ಡಿನ । ಹೊದಱಿ ಹೊಳಹಿನಲಸ್ತ್ರಶಸ್ತ್ರದ
ಲುದುರ್ವ ಕಿಡಿ ಸುಡುತದೆ ಸುರೇಂದ್ರಾದಿಗಳ ಪಟ್ಟಣವ
ಕೆದಱಿಕೊಂಬೀ ಸಮರಸೇನೆಯ । ತುದಿಯ ಮುಂದಲೆಗಹಳೆಗಳ ರವ
ಸದವುತದೆ ಸುರಬಲದ ಬೆಱಗೇನಲ್ಲವೇಯೆಂದ ೫೮

ಹೇಳುವಡೆ ಕಥೆಯಲ್ಲ ಗರ್ಜಿಸಿ । ಸೀಳುತದೆ ಸಿಡಿಲೊಡಲ ರಣ ನಿ
ಸ್ಸಾಳತತಿ ನೀರಜಭವಾಂಡಾವರಣಮಂಡಲವ
ಹೇಳುತವೆ ಭೇರಿಗಳು ಭೀಮಕ । ರಾಳರವ ವಾದ್ಯದ ಗಡಾವಣೆ
ಹೂಳುತಿದೆ ದಿಗುಭಾಮಿನೀಜನ ಕರ್ಣಕೋಟರವ ೫೯

ಯುದ್ಧಕಪಾಲಿಯೂ ಆದ ದಶಕಂಠಾಸುರನಿವನು" ಎಂದ ವಿಭೀಷಣ. ೫೬. "ದೇವ ನೋಡಿ. ಈ ಸಂಭ್ರಮವು ಯಾವ ರಾಜರಲ್ಲಿ ತಾನೇ ಉಂಟು. ಈ ಸೈನ್ಯದ ಆರ್ಭಟವು ಪ್ರಳಯಸಮುದ್ರದಲ್ಲುಂಟೇ ? ವಿಚಾರಮಾಡಿ ನೋಡಿದಲ್ಲಿ ದೇವತೆಗಳ, ಅಸುರ, ಮಾನವರ ಮತ್ತು ಉರಗರ ವೀರರುಗಳಲ್ಲಿ ಇವನಂತೆ ಧೀರ ಸಾಹಸಿಗಳು ಇದ್ದಾರೆಯೆ ?" ಎಂದ ವಿಭೀಷಣ. ೫೭. "ಅರಸ, ಆಲಿಸು. ಪ್ರಳಯಸಾಗರದ ಅಲೆಗಳ ಸಮೂಹದ ಚಲನೆಯಂತೆ ಕುದುರೆಗಳ ದಳಗಳಿವೆ ; ಸಮುದ್ರದ ಸುಳಿಗಳಂತೆ ರಥಗಳ ಸಮೂಹವಿದೆ. ದೇವೇಂದ್ರನನ್ನು ಪ್ರತಿಭಟಿಸಿದ ಕುಲಪರ್ವತಗಳ ಗುಂಪಿನಂತೆ ಆನೆಗಳ ಸೈನ್ಯವು ಕಾಣಿಸುತ್ತದೆ. ಇದು ಸಾಗರವೋ, ಶತ್ರುಸೈನ್ಯವೋ !" ಎಂದ ವಿಭೀಷಣ. ೫೮. "ಯಮನ ಸೈನ್ಯದಂತೆ ಕಾಣುವ ಕಾಲುದಳವು ಅದೇ. ಹೊಳೆಹೊಳೆಯುವ ಅಸ್ತ್ರಶಸ್ತ್ರಗಳಿಂದ ಹಾರುವ ಕಿಡಿಗಳು ದೇವೇಂದ್ರನೇ ಮೊದಲಾದವರ ಪಟ್ಟಣವನ್ನು ಸುಡುತ್ತಿವೆ. ವಿಸ್ತಾರವಾಗಿ ನಿಂತಿರುವ ಈ ಯುದ್ಧಸೈನ್ಯದ ಮುಂದುಗಡೆಯ ಕಹಳೆಗಳ ಶಬ್ದವು ದೇವತೆಗಳ ಸೈನ್ಯವನ್ನು ಅಪ್ಪಳಿಸುತ್ತಿದೆ. ಇದು ಆಶ್ಚರ್ಯವಲ್ಲವೇ ?" ಎಂದ ವಿಭೀಷಣ. ೫೯, "ನಾನು ಹೇಳುವುದು ಕಥೆಯಲ್ಲ. ಕಾಳಗದ ನಿಸ್ಸಾಳವಾದ್ಯಗಳು ಗರ್ಜಿಸುತ್ತ ಸಿಡಿಲನ್ನು ಸೀಳುತ್ತಿವೆ. ಬ್ರಹ್ಮಾಂಡಮಂಡಲದ ಆವರಣಕ್ಕೆ ಭೇರಿಗಳು ಅಪ್ಪಣೆಮಾಡುತ್ತಿವೆ. ಉಗ್ರವಾಗಿ ಶಬ್ದಮಾಡುವ ಭಾರಿ ವಾದ್ಯಗಳ ಗದ್ದಲವು ದಿಕ್ಕೆಂಬ ನಾರಿಯರ ಕಿವಿಗಳನ್ನು

ಹರಿಯ ಚಕ್ರವಿಘಾತಿಯಲಿ ಕೊರ । ಳರೆಹರಿದ ರಣವೀರರದೆ ನರ
ಹರಿಯ ನಿಶಿತನಖಾಗ್ರಹತಿಯಲಿ ಸೀಳಿದೊಡಲುಗಳ
ಕರುಳ ಹೊಲಿಗೆಯ ವೀರರದೆ ಸೂ । ಕರನ ದಾಡೆಗಳಿರಿತವಂಗದ
ಬರಿಯ ಬಾದಣದಲೆಯ ಭಟರದೆ ದೇವ ನೋಡೆಂದ ೬೦

ಒದೆದು ಸಿಡಿಲುಚ್ಚಳಿಸಿದಂಗಗ । ಳೆದೆಯ ಡೋರಿನ ದಾವರದ ಖಳ
ರದೆ ಸುರೇಶ ವಿದಾರಿಸಿದ ಹಳಿಗಲೆಯ ಹತ್ತುಗೆಯ
ಕದನಕರ್ಕಶರದೆ ಕೃತಾಂತನ । ಗದೆಯ ಘಾಯದಲರೆಜರಿದ ಸಿರ
ದಧಟ ರಕ್ಕಸರಾಯರದೆ ರಾಜೇಂದ್ರ ನೋಡೆಂದ ೬೧

ಹರನ ಶೂಲದ ಹತಿಯ ಹುತವಹ । ನುರು ಶಿಲೀಮುಖ ವಿಹರಣದ ಕಿ
ನ್ನರಪತಿಯ ಕೌಂಕ್ಷೇಯಕದ ಕಟ್ಟೇರಿನಾರಿಕೆಯ
ಭರಿತ ಬಲರದೆ ಜೀಯ ಯುಗಶತ । ತಿರುಗಿ ಬರೆ ಸಾವಿಲ್ಲದಸುರೇ
ಶ್ವರ ಕದಂಬಕವದೆ ಕಟಾಕ್ಷಿಸು ದೇವ ನೀನೆಂದ ೬೨

ಅವನಿ ಹುಟ್ಟಿದ ಕಾಲದಲಿ ಸಂ । ಭವಿಸಿದಗ್ಗದ ವೀರಭಟರದೆ
ಜವನು ಜನಿಸಿದ ಮುನ್ನ ಜನಿಸಿದ ಪೂರ್ವದೇವರದೆ
ಶಿವ ಸರೋಜಾಸನರ ಸರಿಯಲಿ । ಸವೆಯದಾಯುವಿನಸುರರದೆ ನ
ಮ್ಮಾವನ ಬಳಿಯಲಿ ಬಯಲವಾತಲ್ಲರಸ ನೋಡೆಂದ ೬೩

ಗಡಚಿಕ್ಕುತ್ತಿವೆ. ೬೦. ವಿಷ್ಣುವಿನ ಚಕ್ರಾಯುಧದ ಏಟಿನಿಂದ ಅರ್ಧಕತ್ತರಿಸಿದ ಕೊರಳಿನ ಯುದ್ಧವೀರರಿದ್ದಾರೆ. ನರಸಿಂಹನ ಹರಿತವಾದ ಉಗುರಿನ ಮೊನೆಯಿಂದ ಹೊಟ್ಟೆಸೀಳಲು ಕರುಳನ್ನು ಹೊಲಿಗೆ ಹಾಕಿ ಸೇರಿಸಿದ ವೀರರಿದ್ದಾರೆ. 'ವರಾಹನ ಕೋರೆ ಹಲ್ಲುಗಳು ಚುಚ್ಚಿದ ಶರೀರದ ಪಕ್ಕೆಗಳ ಮತ್ತು ರಂಧ್ರದ ತಲೆಯ ವೀರರಿದ್ದಾರೆ, ಪ್ರಭು ನೋಡಿ. ೬೧. ಸಿಡಿಲು ಹೊಡೆದು ಹಾರಿಹೋದ ಅವಯವಗಳ ಮತ್ತು ಎದೆಯಲ್ಲಿ ಡೊಗರುಗಳಿರುವ ಭಯಂಕರ ರಾಕ್ಷಸರಿಲ್ಲಿದ್ದಾರೆ. ಇಂದ್ರನು ಸೀಳಿದುದ ರಿಂದಾದ ಗಾಯದ ಹಳಿಕಲೆಗಳಿರುವ ಕದನಕರ್ಕಶರಿದ್ದಾರೆ. ಯಮನ ಗದೆಯ ಏಟಿಗೆ ಅರ್ಧ ಕುಸಿದ ತಲೆಯ ರಾಕ್ಷಸರಾಜರಿದ್ದಾರೆ, ನೋಡು ರಾಜೇಂದ್ರ" ಎಂದ ವಿಭೀಷಣ. ೬೨. "ಶಿವನ ಶೂಲದಿಂದ ಏಟುತಿಂದ, ಅಗ್ನಿಯ ಬಾಣ ಚುಚ್ಚಿದ, ಕುಬೇರನ ಖಡ್ಗದಿಂದ ಆದ ದೊಡ್ಡ ಗಾಯಗಳ ಶಕ್ತಿಸಾಮರ್ಥ್ಯವುಳ್ಳವರು ಇದ್ದಾರೆ. ಸ್ವಾಮಿ, ನೂರು ಯುಗಗಳು ತಿರುಗಿ ಬಂದರೂ ಸಾವು ಬರದ ರಾಕ್ಷಸರಾಜರ ಸಮೂಹವಿದೆ, ನೋಡಿ ನೀವು" ಎಂದ ವಿಭೀಷಣ. ೬೩. "ನಮ್ಮ ರಾವಣನ ಬಳಿಯಲ್ಲಿ ಭೂಮಿ ಹುಟ್ಟಿದಾಗ ಜನಿಸಿದ ಶ್ರೇಷ್ಠ ಯೋಧರಿದ್ದಾರೆ, ಯಮನು ಹುಟ್ಟುವುದಕ್ಕೆ ಮೊದಲು ಜನಿಸಿದ ಪುರಾತನ ದೇವತೆಗಳಿದ್ದಾರೆ, ಶಿವ ಬ್ರಹ್ಮ ಇವರುಗಳಂತೆ ಆಯಸ್ಸು ಕ್ಷೀಣಿಸದ ರಾಕ್ಷಸರಿ

ಗರಳಮಯ ಸಾಗರವ ನಂಜಿನ । ಗಿರಿಯ ಕಡೆಗೋಲಿನಲಘೋರದ
ಶಿರದ ವಿಲಯ ತಮೋಗುಣಾದಿ ಸಮಸ್ತ ಭೂತಗಣ
ಭರಿತ ವಿಷದಹಿವರನ ತೆಗಹಿನ । ತೆರಳಿಕೆಯಲುದಿಸಿದ ತಮೋನಿ
ರ್ಭರ ಶರೀರದ ಸುಭಟರದೆ ನರನಾಥ ನೋಡೆಂದ ೬೪

ದಳವಿದರ ಹಿಂದೆಸೆಯ ನೀಲಾ । ಚಲದ ನಿಭದಿಭದಗ್ರದಲಿ ಹೊಳೆ
ಹೊಳೆವ ಮಕುಟದ ಹಾರ ಹೀರಾವಳಿಯ ಕುಂಡಲದ
ಖಳ ಮಹೋದರನೆಂಬವನ ನೋ । ಡಿಳೆಯ ಲಯದಲಿ ಮಲೆವ ಕಾಲನ
ಕಲಿತನದ ಕಡುಹವನಲದೆ ಲೇಸಾಗಿ ನೋಡೆಂದ ೬೫

ಅದೆ ಕೃತಾಂತನ ಕೋಟಿ ಸಾಹಸ । ದಧಟರವರೊತ್ತಿನಲಿ ಮೂಱ
ರ್ಬುದ ಮಹಾಬಲವಾ ಮಹೋದರನೆಡದ ಭಾಗದಲಿ
ತ್ರಿದಶರಾಯನ ಹಯದ ಹವಣಿನ । ಕುದುರೆಯನವನೀಗ ನರಲೋ
ಕದ ನೃಪಾಲರ ಗಂಡ ವೀರ ನರಾಂತಕನು ದೇವ ೬೬

ಗೆಲಿದನವನಂತಕನನಾಜಿಯ । ಲೆಳೆಯಹರೆಯದಲಾ ನರಾರಿಯ
ಬಳಿಯ ಭಟರದೆ ನೋಡು ಭೈರವಕೋಟಿ ಬಲಯುತರ
ತಲೆ ಹಱಿದರಟ್ಟೆಯಲಿ ಕಾದುವ । ಕಲಿಗಳರ್ಬುದ ವೀರರವೆ ತ
ದ್ಬಲದ ಬಳಿಯಲಿ ಭಾರಿಭಟರದೆ ದೇವ ನೋಡೆಂದ ೬೭

ದ್ದಾರೆ. ಇದು ಅರ್ಥವಿಲ್ಲದ ಮಾತಲ್ಲ, ರಾಮ ನೋಡು" ಎಂದ ವಿಭೀಷಣ. ೬೪. "ಗರಳತುಂಬಿದ ಸಾಗರವನ್ನು ನಂಜಿನ ಬೆಟ್ಟವನ್ನು ಕಡೆಗೋಲನ್ನಾಗಿ ಮಾಡಿಕೊಂಡು ಅತಿಭಯಂಕರ ತಲೆಯ ಪ್ರಳಯದ ತಮೋಗುಣಗಳೇ ಮೊದಲಾದ ಸಮಸ್ತ ಭೂತಗಣಗಳು ವಿಷತುಂಬಿದ ಆದಿಶೇಷನನ್ನು ಹಗ್ಗವಾಗಿ ಮಾಡಿಕೊಂಡು ಕಡೆದಾಗ ಆ ಎಳೆದಾಟದಲ್ಲಿ ಹುಟ್ಟಿದ ಕತ್ತಲೆ ತುಂಬಿದ ಶರೀರದ ವೀರರಿದ್ದಾರೆ, ಮಾನವೇಂದ್ರ ನೋಡು" ಎಂದ ವಿಭೀಷಣ. ೬೫. "ಇದರ ಹಿಂದಿನ ದಳದಲ್ಲಿ ನೀಲಪರ್ವತ ಸಮಾನವಾದ ಆನೆಯ ಮೇಲೆ ಹೊಳೆಹೊಳೆಯುವ ಕಿರೀಟ, ಹಾರ, ವಜ್ರದಸರ, ಕುಂಡಲಗಳನ್ನು ಧರಿಸಿ ಕುಳಿತಿರುವ ಮಹೋದರನೆಂಬ ಅಸುರನನ್ನು ನೋಡು. ಜಗತ್ಪ್ರಳಯದಲ್ಲಿ ಗರ್ವಿಸುವ ಯಮನ ಪರಾಕ್ರಮದ ಕಲಿತನವು ಅವನಲ್ಲಿದೆ, 'ಚೆನ್ನಾಗಿ ನೋಡು" ಎಂದ ವಿಭೀಷಣ. ೬೬. "ಯಮನ ಕೋಟಿ ಸಾಹಸದ ವೀರರವರು. ಅವರ ಪಕ್ಕದಲ್ಲಿ, ಮಹೋದರನ ಎಡ ಭಾಗದಲ್ಲಿ ಮೂರು ಅರ್ಬುದ ಮಹಾಸೈನ್ಯವಿದೆ. ದೇವೇಂದ್ರನ ಕುದುರೆಗೆ ಸಮಾನವಾದ ಕುದುರೆಯ ಮೇಲೆ ಕುಳಿತವನು ಭೂಲೋಕದ ರಾಜರಗಂಡ ವೀರನರಾಂತಕ. ೬೭. ನರಾಂತಕನು ಎಳೆಹರೆಯದಲ್ಲೇ ಯುದ್ಧದಲ್ಲಿ ಯಮನನ್ನು ಗೆದ್ದನು. ಅವನ ಬಳಿಯಲ್ಲಿ ಕೋಟಿಭೈರವರ ಶಕ್ತಿಯ ವೀರರಿದ್ದಾರೆ, ನೋಡು. ತಲೆ ಕತ್ತರಿಸಿದರೂ ತಲೆಯಿಲ್ಲದ ದೇಹದಿಂದ ಹೋರಾಡುವ ಶೌರ್ಯದ ಅರ್ಬುದ ವೀರರಿದ್ದಾರೆ. ಆ ಪಡೆಯ

ಮಾತು ಹುಸಿಯಲ್ಲರಸ ಕೇಳ್ ಪುರು । ಹೂತಪುರವನು ದಳದುಳವ ಹೊ
ಕ್ಕೀತ ಸೂರೆಯಕೊಂಡನೂರ್ವಶಿ ರಂಭೆ ಮೊದಲಾದ
ಖ್ಯಾತರನು ಸುರಪತಿಯ ಮೋರೆಯು । ಲೀತನೆರಗಿದ ದೊಗರುಗಳೆಸೆದುದೆ
ಭೂತಳಾಧಿಪ ನೋಡು ದೇವಾಂತಕ ನಿಶಾಚರನ ೬೮

ಇವನ ರಥ ಚರಿಸುವುದು ನಾನಾ । ಭುವನವನು ಭುವನೈಕಬಲನೆಂ
ದಿವನ ಕೊಂಡಾಡುವರು ಕಮಲಭವಾಮರೇಶ್ವರರು
ಅವನದಂತಿರಲಾಚೆಯಲಿ ನೋ । ಡವನ ಧನಪನಪುರವನಾತನ
ನವನಿಧಿಗಳನು ಸೂರೆಗೊಂಡತಿಕಾಯನೆಂಬವನು ೬೯

ಪಡಿಯಿಡಲು ಪೂರ್ವದ ತ್ರಿವಿಕ್ರಮ । ನೆಡೆಗೆ ವೆಗ್ಗಳನಾ ಯುಗಾಂತದ
ಮೃಡಗೆ ಮಿಗಿಲು ಕೃತಾಂತಕೋಟಿಗಳಿವಗೆ ಪಾಡಲ್ಲ
ಪೊಡವಿಪತಿ ಕೇಳೊಂದು ಗುಣವಿವ । ನೊಡನಿಹುದು ದುಶ್ಚರಿತವಿವನಲಿ
ಮಿಡುಕಲಮ್ಮವು ಮಿಸುಕಲಾರದ ಧರ್ಮಕೃತವೆಂದ ೭೦

ಕುಂಭನವನಾಚೆಯಲಿ ನೋಡು ನಿ । ಕುಂಭನನು ಕುಂಭಶ್ರುತನ ತನು
ಸಂಭವರ ಸಂಭವಿಸಲರಿಯದಸಾಧ್ಯ ಗೆಲವೆಮಗೆ
ಜಂಭರಿಪು ಶಿಖಿ ಯಮ ನಿಶಾಟಮ । ಹಾಂಭಸಾಧಿಪ ವಾಯು ಧನಪರ
ನಂಬೆಯೆನಿಸಿದರಾಜಿಯಲಿ ದಿಗ್ವಿಜಯದೊಳಗೆಂದ ೭೧

ಬಳಿಯಲ್ಲಿ ಭಾರಿ ಭಟರಿದ್ದಾರೆ, ನೋಡಿ ಪ್ರಭು" ಎಂದ ವಿಭೀಷಣ. ೬೮. "ನನ್ನ ಮಾತು ಸುಳ್ಳಲ್ಲ ಆರಸ, ಕೇಳು. ಇಂದ್ರನ ನಗರವನ್ನು ಬಲಾತ್ಕಾರಮಾಡಲು ಹೋಗಿ ಊರ್ವಶಿ, ರಂಭೆ ಮೊದಲಾದ ಪ್ರಸಿದ್ಧರನ್ನು ಕೊಳ್ಳೆಹೊಡೆದನು. ಈತನು ಮೇಲೆ ಬಿದ್ದು ಗಾಯಮಾಡಿದ ಡೊಗರಿನ ಕಲೆ ಇಂದ್ರನ ಮೋರೆಯಮೇಲೆ ಈಗಲೂ ಕಾಣಿಸುತ್ತದೆ. ಈತ ದೇವಾಂತಕ. ಈ ಅಸುರನನ್ನು ನೋಡಿ, ದೇವ. ೬೯. ಇವನ ರಥವು ನಾನಾ ಲೋಕಗಳಲ್ಲಿ ಹರಿಯುತ್ತದೆ. ಬ್ರಹ್ಮ ದೇವೇಂದ್ರರು ಲೋಕೈಕವೀರನೆಂದು ಇವನನ್ನು ಹೊಗಳುವರು. ಅವನು ಹಾಗಿರಲಿ. ಕುಬೇರನ ಪುರವನ್ನು ಕೊಳ್ಳೆಹೊಡೆದು ನವನಿಧಿಗಳನ್ನು ಸೂರೆಮಾಡಿದ ಅತಿಕಾಯನನ್ನು ಅಲ್ಲಿ ನೋಡು. ೭೦. ಹೋಲಿಸಿ ನೋಡಿದರೆ ಹಿಂದೆ ಅವತಾರವೆತ್ತಿದ ತ್ರಿವಿಕ್ರಮನಿಗೂ ಮಿಗಿಲು ಇವನು ; ಯುಗದ ಕೊನೆಯ ಪ್ರಳಯಶಿವನಿಗೂ ಹೆಚ್ಚು ; ಕೋಟಿ ಯಮರುಗಳು ಇವನಿಗೆ ಸಮರಲ್ಲ. ರಾಜಾರಾಮನೇ ಕೇಳು, ಒಂದು ಗುಣ ಇವನಲ್ಲಿದೆ. ಕೆಟ್ಟ ನಡತೆಯು ಇವನ ಹತ್ತಿರವೂ ಸುಳಿಯಲಾರದು ; ಧರ್ಮಕಾರ್ಯಗಳು ಇವನನ್ನು ಬಿಟ್ಟು ಅಲ್ಲಾಡಲಾರವು" ಎಂದ ವಿಭೀಷಣ. ೭೧. ಅವನು ಕುಂಭ, ಆಚೆ ಕಡೆಯಲ್ಲಿರುವವನು ನಿಕುಂಭ, ಅವನನ್ನು ನೋಡು. ಈ ಕುಂಭಕರ್ಣನ ಮಕ್ಕಳೊಡನೆ ಗೆಲವನ್ನು ಪಡೆಯುವುದಸಾಧ್ಯ ನಮಗೆ. ಇಂದ್ರ, ಅಗ್ನಿ, ಯಮ, ವರುಣ, ವಾಯು, ಕುಬೇರರುಗಳನ್ನು ದಿಗ್ವಿಜಯದ

ಚಿತ್ತವಿಸು ರಾಜೇಂದ್ರ ಯುದ್ಧೋ । ನ್ಮತ್ತನೆಂಬ ನಿಶಾಚರನು ಬೆಂ
ಬತ್ತಿ ಸದೆದನು ಕೈದುಗೊಡದಿರೆ ಕಮಲಸಂಭವನ
ಇತ್ತನವನುಪಟಳಕೆ ತೆತ್ತು ಮ । ಹೋತ್ತಮದ ದಿವ್ಯಾಯುಧವ ನೆಱೆ
ಹೊತ್ತುತದೆ ಕೋಪಾಗ್ನಿ ಕದನಕೆ ಕಪಿವರೂಥಿನಿಯ ೭೨

ಆರು ನಿಲಬಹುದಿವನೊಡನೆ ತ್ರಿಪು । ರಾರಿಗಸದಳದವನು ಬೇಱೆ ಕು
ಮಾರರದೆ ರಣಗಲಿ ವಿರೂಪಾಕ್ಷಾದಿ ಭಟನಿಕರ
ಕಾರಿರುಳ ತಿರುಳಂತೆ ಗರಳದ । ವಾರಿಧಿಯ ತೆರೆಯಂತೆ ಕಲ್ಪದ
ಕ್ರೂರ ಭೈರವನಂತೆ ರಾಹುವಿನಂತೆ ನೋಡೆಂದ ೭೩

ಆ ಕುಮಾರರ ಮಧ್ಯದಲಿ ಲೋ । ಕೈಕಬಲ ಬಲವೈರಿಜಿತುವಹ
ನೇಕಮೇವಾದ್ವಯ ಪರಾಕ್ರಮನೆಂಬ ಹಮ್ಮಿನಲಿ
ಆ ಕದನಕರ್ಕಶನ ಕಾಂಡದ । ಶೋಕ ನಿಮ್ಮಡಿ ಕಂಡಿತಗ್ಗದ
ಕೋಕನದಸಂಭವನ ಶರವವಗಲ್ಲದಿಲ್ಲೆಂದ ೭೪

ಮಿಕ್ಕ ದಿವ್ಯಾಸ್ತ್ರಂಗಳಿವನಲಿ । ಸಿಕ್ಕಿಕೊಂಡಿಹುದೇನರಿದು ಹು
ಬ್ಬಿಕ್ಕಿದರೆ ಶಂಕರ ಸರೋಜಭವಾಮರೇಶ್ವರರು
ಸಿಕ್ಕಿ ಜೀಯ ಹಸಾದವೆಂದೇ । ಸುಕ್ಕಿಕೊಂಡಿಹರಿವಗೆ ಹೊಗಳುವ
ಡಕ್ಕರಿಗ ತಾನಲ್ಲ ನಿಜವಹ ಮಾತಿದೀಗೆಂದ ೭೫

ಯುದ್ಧದಲ್ಲಿ 'ಅಮ್ಮಾ' ಎಂದು ಕೂಗಿಕೊಳ್ಳುವಂತೆ ಇವರು ಮಾಡಿದರು. ೭೨. ಇತ್ತ ನೋಡು ರಾಜೇಂದ್ರ, ಈ ಯುದ್ಧೋನ್ಮತ್ತನೆಂಬ ರಾಕ್ಷಸನು ಬ್ರಹ್ಮನು ಆಯುಧವನ್ನು ಕೊಡದೆಹೋಗಲು ಅವನನ್ನು ಬೆನ್ನಟ್ಟಿ ಬಡಿದನು. ಅವನ ಕಾಟ ತಡೆಯಲಾರದೆ ಶ್ರೇಷ್ಠವಾದ ದಿವ್ಯಾಯುಧವನ್ನು ಬ್ರಹ್ಮನು ಅವನಿಗೆ ಕೊಟ್ಟನು. ವಾನರಸೈನ್ಯದೊಡನೆ ಯುದ್ಧಮಾಡಲು ಅವನ ಕೋಪದ ಬೆಂಕಿಯು ಹತ್ತಿ ಉರಿಯುತ್ತಿದೆ. ೭೩. ಇವನನ್ನು ಯುದ್ಧದಲ್ಲಿ ಯಾರು ಎದುರಿಸಬಲ್ಲರು ? ಮುಕ್ಕಣ್ಣನಿಗೂ ಅಸಾಧ್ಯವಾದನಿವನು. ಅಲ್ಲದೆ ಕಾರಿರುಳಿನ ತಿರುಳಿನಂತೆ, ವಿಷಸಮುದ್ರದ ಅಲೆಯಂತೆ, ಪ್ರಳಯದ ಕ್ರೂರಭೈರವನಂತೆ, ರಾಹುವಿನಂತೆ ಕದನಕಲಿ ವಿರೂಪಾಕ್ಷನೇ ಮೊದಲಾದ ರಾವಣನ ಬೇರೆ ಮಕ್ಕಳಿದ್ದಾರೆ ನೋಡು" ಎಂದ ವಿಭೀಷಣ. ೭೪. "ಆ ರಾವಣನ ಕುಮಾರರ ನಡುವೆ ಲೋಕೈಕಬಲ ಇಂದ್ರಜಿತು ತಾನೊಬ್ಬನೇ ಅಸಮಾನ ಪರಾಕ್ರಮಶಾಲಿಯೆಂಬ ಗರ್ವದಿಂದಿದ್ದಾನೆ. ರಣದಲ್ಲಿ ಯಮನಂತಿರುವ ಅವನ ಬಾಣದ ನೋವು ಎಂಥದೆಂಬುದನ್ನು ನಿಮ್ಮ ಪಾದ ಕಂಡಿತು. ಶ್ರೇಷ್ಠವಾದ ಬ್ರಹ್ಮಾಸ್ತ್ರವು ಅವನಲ್ಲಲ್ಲದೆ ಮತ್ತಿನ್ನಾರಲ್ಲೂ ಇಲ್ಲ" ಎಂದ ವಿಭೀಷಣ. ೭೫. "ಉಳಿದ ದಿವ್ಯಾಸ್ತ್ರಗಳು ಇವನ ಕೈಯಲ್ಲಿ ಸಿಕ್ಕಿಕೊಂಡಿರುವುದೇನಸಾಧ್ಯ. ಹುಬ್ಬು ಹಾರಿಸಿದರೆ ಸಾಕು ಶಿವ, ಬ್ರಹ್ಮ, ದೇವೇಂದ್ರರು 'ಜೀಯ, ಹಸಾದ' ಎಂದು ನುಡಿಯುತ್ತ ಮುದುಡಿಕೊಂಡು ನಿಲ್ಲುತ್ತಾರೆ. ಹೊಗಳಲು ನಾನೇನು ವಿದ್ವಾಂಸನಲ್ಲ, ಸತ್ಯವಾದ ಮಾತಿದು" ಎಂದು ಹೇಳಿದ

ಆ ನಿಶಾಟನ ಬಿಟ್ಟು ಕಳೆ ರಘು । ಭೂನಿತಂಬಿನಿಯರಸ ಕೇಳೇ
ಕೋನಶತಕೋಟಿ ಪ್ರಸಿದ್ಧ ಕಿರೀಟವರ್ಧನರ
ಮಾನವಾಮರ ಭುಜಗ ಭಟರಸು । ಸೂನೆಗಾಜಿರ ಸಮರಜಯ ಸು
ಮ್ಮಾನಸಾರರ ನೋಡು ಹೊಗಳುವೆನೇನ ತಾನೆಂದ ೭೩

ಕೇಳಿದೆವು ಕಂಡೆವು ನಿದಾನವು । ಹೇಳಿದುದು ನೀನಹುದಿದಲ್ಲೆಂ
ಬೇಳಿಲಗಳಿನಿತಿಲ್ಲೊಡಂಬಟ್ಟೆವು ಮನಸ್ಸಿನಲಿ
ಕೇಳಿದೈಯೆಲೆ ಕಲಿ ವಿಭೀಷಣ । ಕಾಳಗದೊಳಾವ್ ಹೆದರಿ ಹಿಂಗದೆ
ಸೋಲದಿಹುದರಿದಾದಡೆಯು ತೋಱಿರಿಯ ನಮಗೆಂದ ೭೭

ಆದಡೀಕ್ಷಿಸು ಜೀಯ ಪ್ರಲಯಮ । ಹೋದಧಿಯವೊಲು ತೋಱುವೀ ಕ್ರ
ವ್ಯಾದಸೇನಾಮಧ್ಯದಲಿ ವಡಬಾಗ್ನಿಯಂದದಲಿ
ಕೈದುಗಳ ಬೆಳಗಿನಲಿ ಘನ ನಿ । ರ್ಹ್ರಾದದಬ್ಬರಣೆಯಲಿ ಬಲು ಚಲ
ವಾದಿಗಳ ಬಿರುದಂಕನಹನೆಲೆ ದೇವ ನೋಡೆಂದ ೭೮

ಕೋಪವವದೆ ಕಾಲಾಗ್ನಿರುದ್ರನ । ಕೋಪದವೊಲಗ್ಗಳದ ಶೌರ್ಯಾ
ಟೋಪವವದೆ ಸಂವರ್ತಭೈರವಗೆಂಟುಮಡಿಯಂತೆ
ಭೂಪ ಚಿತ್ತೈಸಾತನೀಗ ಮ । ಹಾಪತಿವ್ರತೆಯನು ವಿಹಾರಕ
ಳಾಪದಲಿ ಕೊಂಡೊಯ್ದ ರಕ್ಕಸರಾಯನವನೆಂದ ೭೯

ವಿಭೀಷಣ. ೭೬. “ಆ ರಾಕ್ಷಸನು ಹಾಗಿರಲಿ. ರಘುರಾಮನೇ ಕೇಳು, ಮಾನವ, ಅಮರ, ಪಾತಾಳಲೋಕಗಳ ವೀರರಿಗೆ ಕಟುಕರಾದ ಯುದ್ಧವಿಜಯೋತ್ಸಾಹಿಗಳಾದ ತೊಂಬತ್ತೊಂಬತ್ತು ಕೋಟಿ ಪ್ರಸಿದ್ಧ ಕಿರೀಟಧಾರಿ ರಾಜರುಗಳನ್ನು ನೋಡು. ಇವರುಗಳನ್ನು ಏನೆಂದು ಹೊಗಳಲಿ ನಾನು” ಎಂದ ವಿಭೀಷಣ. ೭೭. “ನೀನು ಹೇಳಿದುದನ್ನು ಕೇಳಿದೆವು, ಕಂಡೆವು. ನೀನು ಹೇಳಿದ ಮೂಲ ವಿಷಯವು ಸರಿ. ಇದು ಸರಿಯಲ್ಲ ಎಂಬ ತಿರಸ್ಕಾರವು ನಮ್ಮಲ್ಲಿ ಎಳ್ಳಷ್ಟೂ ಇಲ್ಲ. ನೀನು ಹೇಳಿದುದನ್ನು ಮನಸ್ಸಿನಲ್ಲಿ ಒಪ್ಪಿಕೊಂಡೆವು, ಕೇಳಯ್ಯ ಕಲಿ ವಿಭೀಷಣ. ಯುದ್ಧದಲ್ಲಿ ನಾವು ಹೆದರಿ ಹಿಂಜರಿಯದೆ ಸೋಲದೆ ಇರುವುದು ಅಸಾಧ್ಯವೆಂದು ಕಂಡುಬಂದರೂ ಚಿಂತೆಯಿಲ್ಲ, ಶತ್ರುವನ್ನು ನಮಗೆ ತೋರಿಸು” ಎಂದ ರಾಮ. ೭೮. “ಹಾಗಿದ್ದರೆ ನೋಡಿ ಪ್ರಭು. ಪ್ರಳಯ ಮಹಾಸಾಗರದಂತೆ ಕಾಣಿಸುವ ಈ ರಾಕ್ಷಸಸೈನ್ಯದ ಮಧ್ಯದಲ್ಲಿ ಬಡಬಾಗ್ನಿಯೋ ಎಂಬಂತೆ ಆಯುಧಗಳ ಪ್ರಕಾಶದಲ್ಲಿ ಮುಳುಗಿ ಭಾರಿ ಶಬ್ದದೊಡನೆ ಅಬ್ಬರಿಸುತ್ತ ಬಲು ಹಟವಾದಿಗಳ ಬಿರುದು ಧರಿಸಿದ ವೀರನಿದ್ದಾನೆ” ಎಂದ ವಿಭೀಷಣ ೭೯. “ಅವನ ಕೋಪವೋ ಕಾಲಾಗ್ನಿರುದ್ರನಂತೆ ! ಪರಾಕ್ರಮದ ದರ್ಪದಲ್ಲಿ ಪ್ರಳಯಭೈರವನಿಗೆ ಎಂಟರಷ್ಟು ! ಅರಸ ರಾಮನೇ, ಅತ್ತ ನೋಡು. ಅವನೇ ಮಹಾಪತಿವ್ರತೆ ಸೀತೆಯನ್ನು ವಿಹಾರದ ನೆಪದಿಂದ ಬಂದು ಕೊಂಡುಹೋದ ರಾಕ್ಷಸರಾಜ” ಎಂದು ನುಡಿದ

ಹೊಗಳುತದೆ ಸುರರಾಜನೊಡ್ಡೋ । ಲಗದೊಳಗೆ ಸುರವಂದಿಜನ ಕೈ
ನೆಗಹಿ ಕೈವಾರಿಸುತಲದೆ ಬೀಱಿಭ್ರದಲಿ ಸುರರ
ಹಗೆಗಳಹ ಹೈರಣ್ಯಪುರದರ । ಸುಗಳ ಮಾಗಧೆಯರು ಸುರಾಸುರ
ಜಗದ ವೀರನ ಬಿರುದ ಕಿವಿಗೊಟ್ಟಾಲಿಸದನೆಂದ ೮೦

ಕಾಲದಳಿವಿಗೆ ಮೊಗಸಿ ನಿಂದ ಕ । ಪಾಲಿಗಿಂ ಮಿಗಿಲೆನಬಹುದು ಲಯ
ಕಾಲಭೈರವನಿಗೆ ಶತಾಧಿಕ ಸುಬಲನೆನಬಹುದು
ಕೇಳು ರಘುಪತಿ ಮಿಕ್ಕ ವೀರಭ । ಟಾಳಿಗಳ ಹೇಳದಿರು ದಿವಿಜರ
ಕಾಲುಗಳ ಕಂಪನವನಿತ್ತಲು ನೋಡು ನೀನೆಂದ ೮೧

ಆರಿಗಜನ ಪುರೋಹಿತತ್ವದ । ಸೇರು ಪಡಿಯುಂಟರಸ ಜಗದೊಳ
ಗಾರಿಗೀಶನ ಹರಕೆ ದಿನದಿನಕುಂಟು ರಾಯರಲಿ
ಆರಿಗುಂಟೋಲಗವು ತುಂಬುರ । ನಾರದರು ನಿರ್ಜರರು ಸೇವಕ
ರಾರಿಗಾವನ ಕಾಲದಲಿ ನೀವ್ ಬಲ್ಲಿರೇಯೆಂದ ೮೨

ಮಾರಿ ಮುಳಿದುದ ಕಾಣೆ ಕಾಲನ । ನಾರು ಬಲ್ಲರು ವಿಧಿಯ ಲಿಪಿಯು ವಿ
ಕಾರವಿವನಲಿ ಹೊದ್ದದೊಡಬಡದಶುಭದಾರೈಕೆ
ವಾರಿಜಾಸನ ವಿಷ್ಣು ರುದ್ರರ । ವೀರರೆಂದಿವನೆಣಿಸ ಮಿಕ್ಕಿನ
ಭೂರಿಭುವನದ ಬಣಗುಭಟರನು ಬಗೆವನಲ್ಲೆಂದ ೮೩

ವಿಭೀಷಣ. ೮೦. "ದೇವಲೋಕದ ಹೊಗಳುಭಟರು ದೇವೇಂದ್ರನ ಸಭೆಯಲ್ಲಿ ರಾವಣನನ್ನು ಸ್ತುತಿಸುತ್ತಿದ್ದಾರೆ. ದೇವತೆಗಳ ಹಗೆಗಳಾದ ಹೈರಣ್ಯಪುರದ ರಾಜರುಗಳ ಸ್ತುತಿಪಾಠಕಿಯರು ದೇವಲೋಕ ರಾಕ್ಷಸಲೋಕಗಳ ವೀರ ರಾವಣನ ಬಿರುದನ್ನು ಕೈಯೆತ್ತಿ ಆಕಾಶದಲ್ಲಿ ಹೊಗಳುತ್ತಿದ್ದಾರೆ. ಅದನ್ನು ಕಿವಿಗೊಟ್ಟು ಕೇಳು" ಎಂದ ವಿಭೀಷಣ. ೮೧. "ರಾವಣನನ್ನು ಕಾಲದ ನಾಶಕ್ಕಾಗಿ ಪ್ರಯತ್ನಿಸಿ ನಿಂತ ಶಿವನಿಗಿಂತಲೂ ಮಿಗಿಲು ಎನ್ನಬಹುದು ; ಪ್ರಳಯದ ಕಾಲಭೈರವನಿಗೆ ನೂರಕ್ಕಿಂತ ಹೆಚ್ಚು ಬಲಶಾಲಿ ಎನ್ನಬಹುದು. ಕೇಳು ರಘುಪತಿ, ಉಳಿದ ವೀರಯೋಧರ ವಿಷಯವನ್ನು ಹೇಳಬೇಕಾದುದಿಲ್ಲ. ದೇವತೆಗಳ ಕಾಲು ನಡುಗುತ್ತಿರುವುದನ್ನು ಇಲ್ಲಿ ನೋಡು ನೀನು" ಎಂದ ವಿಭೀಷಣ. ೮೨. "ಯಾರಿಗೆ ಬ್ರಹ್ಮನ ಪುರೋಹಿತತ್ವದ ಸಂಬಂಧವುಂಟು ರಾಜಾರಾಮ ? ಜಗತ್ತಿನ ರಾಜರುಗಳಲ್ಲಿ ಯಾರಿಗೆ ಶಿವನ ಆಶೀರ್ವಾದವು ಪ್ರತಿದಿನ ದೊರೆಯುವುದು ? ಯಾರಿಗುಂಟು ಇಂಥ ಆಸ್ಥಾನದ ವೈಭವ. ತುಂಬುರ ನಾರದರು, ದೇವತೆಗಳು ಯಾರಿಗೆ ಸೇವಕರಾಗಿದ್ದಾರೆ ? ನಿಮಗೆ ಗೊತ್ತೇ ?" ಎಂದು ವಿಭೀಷಣನು ಪ್ರಶ್ನಿಸಿದನು. ೮೩. "ಇವನ ಮೇಲೆ ಮಾರಿ ಕೋಪಿಸಿಕೊಂಡಿದ್ದನ್ನು ಕಾಣೆ. ಯಮರನ್ನು ಯಾರು ಬಲ್ಲರು ? ಹಣೆಯಬರಹದ ತೊಂದರೆಯೇ ಇವನ ಹತ್ತಿರ ಸೇರುವುದಿಲ್ಲ, ಅಶುಭದ ಆರೈಕೆಗೆ ಇವನ ಜತೆ ರುಚಿಸುವುದಿಲ್ಲ. ಬ್ರಹ್ಮ ವಿಷ್ಣು ಮಹೇಶ್ವರನನ್ನು ವೀರರೆಂದು ಇವನು ಭಾವಿಸುವುದಿಲ್ಲ. ಉಳಿದ ವಿಸ್ತಾರ ಜಗತ್ತಿನ ಅಲ್ಪವೀರರನ್ನು

ಮರಳಿ ಮಾತೇನರಸ ದಶಕಂ । ಧರನ ವಿಜಯಶ್ರೀಗೆ ನಿಜಮಂ
ದಿರವಲಾ ಬ್ರಹ್ಮಾಂಡ ಕರಬೋನಗಳಲಾ ಭುವನ
ಧರಣಿ ಮಂಚ ವಿತಾನವಂಬರ । ತರಣಿ ದೀಪ್ತಿ ಸುಧಾಂಶು ದರ್ಪಣ
ಸುರಸತಿಯರೋಳಿಯರು ಸುರರನುಚರರಲೇಯೆಂದ ೮೪

ಅಂಜುವೆನು ಬಿನ್ನಹಕೆ ಜೀಯ ಸ । ಮಂಜಸನು ಸಮರದಲಿ ಸಾವಿಂ
ಗಂಜುವವನಲ್ಲರಿಯಬಾರದು ದೇವ ಬಿಲುಗೊಲೆಗೆ
ಸಿಂಜನಿಯ ಸಮತಳಿಸು ಸಂಗರ । ಕಂಜದಂಬುಗಳಿರಲಿ ನಿಜಕರ
ಕಂಜದಲಿ ಕಡುಹಿರಲಿ ಕಾಯದೊಳೆಂದನಸುರೇಂದ್ರ ೮೫

ಅರಸ ಚಿತ್ತೈಸಿವನ ಮೈಯಲಿ । ಕೊರತೆಯೊಂದಿದೆಯದಱಿನಪಜಯ
ದೊರಕುವುದೊ ನಾನಱಿಯೆನುಳಿದಂತೀ ದಶಾಸ್ಯಂಗೆ
ಸರಿಯದಾರೀ ಲೋಕದಲಿ ಶಂ । ಕರ ಸರೋಜಭವಾಮರೇಂದ್ರರ
ಸರಕುಮಾಡುವನಲ್ಲ ಮಱೆಮಾತೇಕೆ ತನಗೆಂದ ೮೬

ನಗೆಯ ನಸುಗೋಪದಲಿ ಲಕ್ಷ್ಮಣ । ಮೊಗವನೊಯ್ಯನೆ ತಿರುಹಿದನು ಮನ
ವೊಗದು ನಮಗೀ ಮಾತೆನುತ ಮಿಹಿರಜನು ಚುಬುಕಿಱಿದ
ಅಗಿದು ದಂತದಲೌಡನನಿಲನ । ಮಗನು ಹೂಂಕರಿಸಿದನು ಹಗೆಯನು
ಹೊಗಳಿ ಕೆಡಿಸಿದೆಯೆಂದು ಕಿಡಿಗೆದಱಿತು ಭಟಸ್ತೋಮ ೮೭

ಇವನು ಲಕ್ಷಿಸುವವನೇ ಅಲ್ಲ" ಎಂದ ವಿಭೀಷಣ. ೮೪. "ಪುನಃ ಏನು ಹೇಳಲಿ ಅರಸ. ದಶಕಂಠನ ವಿಜಯಲಕ್ಷ್ಮಿಗೆ ಬ್ರಹ್ಮಾಂಡವೇ ಮನೆ, ಲೋಕಗಳು ಅವಳ ಜಲಪಾತ್ರೆಗಳು, ಭೂಮಿಯೇ ಮಂಚ, ಮೇಲ್ಕಟ್ಟು ವಸ್ತ್ರ, ಸೂರ್ಯನೇ ದೀಪ, ಚಂದ್ರನು ಕನ್ನಡಿ, ದೇವಲೋಕದ ಸ್ತ್ರೀಯರು ಸಖಿಯರು, ದೇವತೆಗಳು ಸೇವಕರು" ಎಂದು ನುಡಿದ. ೮೫. "ನಿನಗೆ ವಿನಂತಿಸಿಕೊಳ್ಳಲು ಅಂಜುತ್ತೇನೆ, ಸ್ವಾಮಿ. ರಾವಣನು ಯುದ್ಧದಲ್ಲಿ ಪ್ರಾಮಾಣಿಕನು, ಸಾವಿಗೆ ಹೆದರುವವನಲ್ಲ. ಅವನನ್ನು ತಿಳಿಯಲು ಕಷ್ಟ. ಬಿಲ್ಲಿನ ತುದಿಗೆ ಹೆದೆಯೇರಿಸಿ ಯುದ್ಧಕ್ಕೆ ಸರಿಪಡಿಸು. ಯುದ್ಧದಲ್ಲಿ ಹೆದರದ ಬಾಣಗಳಿರಲಿ ನಿನ್ನ ಕೈಗಳಲ್ಲಿ, ದೇಹದಲ್ಲಿ ಹುರುಪಿರಲಿ" ಎಂದ ಅಸುರರೊಡೆಯ ವಿಭೀಷಣ. ೮೬. "ರಾಜನೇ ಆಲಿಸು. ಇವನಲ್ಲಿ ಒಂದೇ ಒಂದು ಕೊರತೆಯಿದೆ. ಅದರಿಂದ ಅವನಿಗೆ ಸೋಲು ಸಂಭವಿಸುವುದೇ ಎಂಬುದನ್ನು ನಾನರಿಯೆ. ಅದನ್ನು ಬಿಟ್ಟರೆ ಈ ದಶಮುಖನಿಗೆ ಈ ಲೋಕದಲ್ಲಿ ಯಾರು ಸರಿ ? ಶಂಕರ ಬ್ರಹ್ಮ ದೇವೇಂದ್ರರನ್ನು ಲಕ್ಷಿಸುವವನಲ್ಲ. ಈ ಮಾತನ್ನು ಹೇಳಲು ಮುಚ್ಚುಮರೆಯೇಕೆ ?" ಎಂದ ವಿಭೀಷಣ. ೮೭. ನಗುವಿನಿಂದೊಡಗೂಡಿದ ನಸುಗೋಪದಿಂದ ಲಕ್ಷ್ಮಣನು ತಕ್ಷಣ ಮುಖವನ್ನು ತಿರುಗಿಸಿಕೊಂಡನು. ಈ ಮಾತು ನಮ್ಮ ಮನಸ್ಸಿಗೆ ಒಗ್ಗುವುದಿಲ್ಲ ಎಂದು ಸುಗ್ರೀವನು ಆವೇಶಗೊಂಡನು. ಹಲ್ಲಿನಲ್ಲಿ ತುಟಿ ಕಚ್ಚಿ ವಾಯುಪುತ್ರ ಆಂಜನೇಯನು ಹೂಂಕರಿಸಿದನು. 'ಶತ್ರುವನ್ನು ಹೊಗಳಿ ಕೆಡಿಸಿದೆ' ಎಂದು ವೀರಸಮೂಹವು ಕಿಡಿ

ಹೋಹೊ ಕಳಕಳವೇಕೆ ತ್ರಿಜಗದ । ಸಾಹಸಿಯಲಾ ದಶವದನನು
ತ್ಸಾಹವೀಗಲದೇಕೆ ತೋಱಿಸಿ ತುದಿಯಲಾಹವಕೆ
ಬೇಹ ಬುದ್ಧಿಯನೀ ವಿಭೀಷಣ । ನೂಹಿಸಿದುದೇನಹಿತವೇ ನಿ
ಮ್ಮಾಹವದ ಭುಜಶೌರ್ಯವಿಂದಿನಲಱಿಯಬಹುದೆಂದ ೮೮

ಕೇಳುತೀ ಮಾತಿನಲಿ ಸಿಡಿಲಿನ । ಜಾಳಯವು ಪಡಿಮುಖದ ಗಿರಿಗಳ
ಮೇಲೆ ಮುರಿದೇಳುವವೊಲೆದ್ದುದು ಗಗನಲಂಬಿತದ
ಶೈಲ ತಾಳ ತಮಾಲ ತರುಗಳ । ತಾಳಿಕೆಯ ತೋಳುಗಳ ನೆಗಹಿನ
ಲಾಳಿಕಾಱರ ದೇವ ತೊರವೆಯರಾಯನಾಜ್ಞೆಯಲಿ ೮೯

ಕಾರಿತು. ೮೮. "ಹೋ ಹೋ ! ಗಲಾಟೆಯೇಕೆ ? ದಶಾನನನು ಮೂರುಲೋಕಗಳಿಗೂ ವೀರನಲ್ಲವೇ. ಈಗಲೇ ಏಕೆ ಉತ್ಸಾಹ, ಮುಂದೆ ಯುದ್ಧದಲ್ಲಿ ನಿಮ್ಮ ಉತ್ಸಾಹವನ್ನು ತೋರಿಸಿ. ಕದನಕ್ಕೆ ಅಗತ್ಯವಾದ ವಿವೇಕವನ್ನು ವಿಭೀಷಣನು ಊಹಿಸಿ ತಿಳಿಸಿದುದು ತಪ್ಪೇ ? ಇಂದಿನ ಯುದ್ಧದಲ್ಲಿ ನಿಮ್ಮ ತೋಳ್ಬಲವನ್ನು ತಿಳಿಯಬಹುದು" ಎಂದು ಹೇಳಿದ ರಾಮ. ೮೯. ಈ ಮಾತನ್ನು ಕೇಳುತ್ತ ಸಿಡಿಲಿನ ಸಮೂಹವು ಎದುರಿನ ಬೆಟ್ಟಗಳ ಮೇಲೆ ಬಂದು ಬೀಳುವಂತೆ ವಾನರವೀರರು ಆಕಾಶಕ್ಕೆ ಎಗರಿ ನಿಂತರು. ಛಲಗಾರರೊಡೆಯ ತೊರವೆಯ ನರಹರಿಯ ಅವತಾರಿ ಶ್ರೀರಾಮನ ಅಪ್ಪಣೆಯಿಂದ ಬೆಟ್ಟಗಳನ್ನೂ, ತಾಳೆಮರ, ಹೊಂಗೆಮರ ಮೊದಲಾದ ಮರಗಳನ್ನೂ ಹಿಡಿದು ಕೈಯೆತ್ತಿ ನಿಂತರು.

# ಇಪ್ಪತ್ತೊಂದನೆಯ ಸಂಧಿ

ಸೂಚನೆ॥ ರಾವಣನನಗ್ಗದ ಜಗತ್ರಯು । ರಾವಣನ ದಿವಿಜೇಂದ್ರಬಲವಿ
ದ್ರಾವಣನ ಸಮರದಲಿ ನೊಂದನು ರಾಯ ಸುಗ್ರೀವ

ಲವನೆ ಕೇಳಸುರೇಂದ್ರ ಸೇನಾ । ರ್ಣವದ ಮುಂಗುಡಿದಾಣದಲಿ ರಾ
ಘವನ ಕಾಣುತ ಜಱಿದು ಮೂದಲಿಸಿದವು ಕಹಳೆಗಳು
ಬವರ ಬೇಡರಿರಾಯ ರಣಭೈ । ರವನೊಳಾಹವ ಬೇಡ ರಿಪುರಣ
ಯುವತಿಯಭಿನವರತಿವಿಲಾಸನೊಳೆಂದು ಬಿಱುಬಿನಲಿ ೧

ತೋಟಿ ಬೇಡ ಭವಾದ್ರಿ ಮೂಲೋ । ತ್ಪಾಟಯುಗ್ಗದ ಬಹಳ ಬಾಹಾ
ಸ್ಫೋಟನಾಕಂಪಿತ ಸರೋಜಭವಾಂಡಮಂಡಲನ
ನೋಟ ನಯನಕಸಾಧ್ಯ ಬಯಕೆಯು । ಕೂಟ ದುರ್ಘಟವವನಿಜೆಯ ತೆಗೆ
ದೋಟವೇ ಸುಖ ಸಮರ ಬೇಡೆಂದೊದಱಿದವು ಕಹಳೆ ೨

ಲೋಕಪಾಲರ ಗೆಲಿದವನ ಮೂ । ಲೋಕಗಳನಾಳ್ದವನನಾ ಜಗ
ದೇಕವೀರನ ವಿಶ್ರುತನ ರಣರಂಗಭೈರವನ
ಏಕಮೇವಾದ್ವಯನ ಛಲಪದ । ದಾಕವಾಳನ ತೋಟಿ ಬೇಡೆಂ
ದೌಕಿದವು ಕಹಳೆಗಳು ಕದನೋದ್ದಂಡ ರಾವಣನ ೩

ಸೂಚನೆ॥ ಮೂರು ಲೋಕಗಳಿಗೆ ಕೇಳಿಸುವಂತೆ ಕೂಗಿಕೊಂಡ, ದೇವೇಂದ್ರನ ಬಲವನ್ನು ಕರಗಿಸಿದ ರಾವಣನ ಯುದ್ಧದಲ್ಲಿ ವಾನರರಾಜ ಸುಗ್ರೀವನು ನೊಂದನು. ೧. ಲವನೆ ಕೇಳು, ರಾಕ್ಷಸೇಶ್ವರನ ಸೇನಾಸಾಗರದ ಮುಂದುಗಡೆ ಎದುರಿನಲ್ಲಿ ರಾಘವನನ್ನು ಕಂಡು, 'ಶತ್ರುರಾಜನೇ ರಣಭೈರವನೊಡನೆ ಯುದ್ಧ ಬೇಡ, ಹಗೆಗಳ ಕದನಲಕ್ಷ್ಮಿಯೊಡನೆ ನೂತನ ರತಿಕ್ರೀಡೆಯಾಡುವವನೊಡನೆ ಯುದ್ಧ ಬೇಡ' ಎಂಬುದಾಗಿ ರಾಕ್ಷಸಸೇನೆಯ ಕಹಳೆಗಳು ಗಟ್ಟಿಯಾಗಿ ಮೂದಲಿಸಿದವು. ೨. 'ಕೈಲಾಸವನ್ನು ಬುಡಸಹಿತ ಕಿತ್ತು, ತೋಳುಗಳನ್ನಪ್ಪಳಿಸಿ ಬ್ರಹ್ಮಾಂಡವನ್ನು ನಡುಗಿಸಿದವನೊಡನೆ ಯುದ್ಧ ಬೇಡ. ನಿನ್ನ ನೋಟಕ್ಕೆ ರಾವಣನು ಅಸಾಧ್ಯ ; ನಿನ್ನ ಆಸೆ ಕೈಗೂಡುವುದೂ ಅಸಾಧ್ಯ. ಸೀತೆಯನ್ನು ಬಿಟ್ಟು ಓಡಿಹೋಗುವುದೇ ನಿನಗೆ ಸುಖ. ರಾವಣನೊಡನೆ ಯುದ್ಧ ಬೇಡ' ಎಂದು ಕಹಳೆಗಳು ಕೂಗಿದವು. ೩. 'ಲೋಕಪಾಲಕರನ್ನು ಗೆದ್ದವನೊಡನೆ, ಮೂರುಲೋಕಗಳನ್ನು ಆಳಿದವನೊಡನೆ, ಜಗದೇಕವೀರನೊಡನೆ, ಸುಪ್ರಸಿದ್ಧನೊಡನೆ, ರಣರಂಗಭೈರವನೊಡನೆ, ತಾನೇತಾನಾದ ಅಸಮಾನನೊಡನೆ, ದರ್ಪಿಷ್ಠ ವೀರನೊಡನೆ ಯುದ್ಧ ಬೇಡ' ಎಂದು ಕದನಪ್ರಚಂಡ

ಕೆಣಕೆ ರಕ್ಕಸಗಹಳೆ ಕೇಳ್ದದ । ನೆಣಿಕೆಗೊಂಬರೆ ಕಪಿಗಳುರಿಪೊ
ಟ್ಟಣವನೊಡೆದಂದದಲಿ ಹೊಕ್ಕುದು ಹೊರಳಿಗೊಳಲಬುಧಿ
ರಣದ ಮುಂಗುಡಿಗಹಳೆಗಳ ಸಂ । ದಣಿಯ ಸೂಳಗಿವಖಿಳ ಲಗ್ಗೆಯ
ರಣವಜೀಯನೊಡೆಬಡಿದು ಬೆರಸಿದರರಿವರೂಥಿನಿಯ ೪

ಎವೆ ಹಳಚುವನಿತಱೊಳೆ ಹಳಚಿತು । ಹವಣಿಸಿದ ಕಪಿಸೇನೆ ಕಳಚಿತು
ಬವರದಲಿ ಭಟರಸುವನೇನೆಂಬೆನು ಕ್ಷಣಾರ್ಧದಲಿ
ಜವನ ನಗರಿಯ ದಾರಿಗರ ಮೈ । ಬೆವರುಗಳೊಳಡಗಿದುದು ಸೇನಾ
ನಿವಹವೆರಡಱ ಚಟುಳ ಚರಣೋದ್ಧೂತ ರಣಧೂಳಿ ೫

ಹಳಚಿದವು ಬಲವೆರಡು ಕಿಡಿಕಿಡಿ । ಹಳಚುವಂತಿರೆ ಹೊಕ್ಕ ಮೈಯಲಿ
ಕಳಚಿದವು ಕಪಿಖಳಕದಂಬದ ಕಾಯದುಸುರುಗಳ
ಬಳಚಿದವು ಭವಭವದ ದುಷ್ಕೃತಿ । ಗಳು ಬಳಿಕ್ಕಾ ಕೈಯೊಡನೆ ದಳ
ದುಳಿಸಿದುದು ದಿವಿಜೇಂದ್ರನಗರದ ಸೂಱೆಗುಭಯಬಲ ೬

ಹೆಣನಮಯ ರಣಭೂಮಿ ಗಿರಿಮಾ । ರ್ಗಣದಮಯವಂಬರ ಶಿಖಾಸಂ
ದಣಿಯಮಯ ಸುಭಟಾವಳಿಯ ಸತ್ಕ್ರೋಧಶಿಖಿಮುಖದ
ಕುಣಿವ ಭೂತವ್ರಾತಮಯ ದಿಗು । ಗಣ ದಿವಾಂಗಣವಮುಮ ಪರಿರಂ
ಭಣದಮಯವಳಿದಮರಪದವಿಯ ವೀರರಮರಿಯರ ೭

ರಾವಣನ ಕಹಳೆಗಳು ಗಟ್ಟಿಯಾಗಿ ಕೂಗಿದವು. ೪. ರಾಕ್ಷಸಕಹಳೆಗಳು ಕೆಣಕಿದರೆ ಕಪಿಗಳು ಅದನ್ನು ಲಕ್ಷಿಸುವರೆ ? ಉರಿಪೊಟ್ಟಣವನ್ನು ಒಡೆದಂತೆ ಕಪಿಸೈನ್ಯವು ರಾಕ್ಷಸರ ಮೇಲೆ ನುಗ್ಗಿದ ರಭಸಕ್ಕೆ ಸಮುದ್ರವು ಕಲಕಿತು. ಸೈನ್ಯದ ಮುಂದಿನ ಸಾಲಿನಲ್ಲಿದ್ದ ಕಹಳೆಗಳ ಸಮೂಹವನ್ನೂ ಬೊಬ್ಬೆಹಾಕುತ್ತಿದ್ದ ರಣಭೇರಿಗಳನ್ನೂ ಒಡೆದುಹಾಕಿ ವಾನರಯೋಧರು ಶತ್ರುಸೈನ್ಯದ ಮೇಲೆ ಬಿದ್ದರು. ೫. ಕದನಕ್ಕೆ ತೊಡಗಿದ ಕಪಿಸೇನೆಯು ರೆಪ್ಪೆಹೊಡೆಯುವಷ್ಟರಲ್ಲಿ ಶತ್ರುಗಳನ್ನು ರಭಸದಿಂದ ಅಪ್ಪಳಿಸಿತು ; ಕ್ಷಣಾರ್ಧದ ಕದನದಲ್ಲಿ ಶತ್ರುಯೋಧರ ಪ್ರಾಣಗಳನ್ನು ಕಳಚಿಹಾಕಿತು. ಎರಡೂ ಸೈನ್ಯದ ಚುರುಕುಹೆಜ್ಜೆಗಳ ತುಳಿತದಿಂದ ಎದ್ದ ರಣರಂಗದ ಧೂಳು ಯಮನ ಪಟ್ಟಣಕ್ಕೆ ಪ್ರಯಾಣಮಾಡುತ್ತಿದ್ದ ದಾರಿಗರ ಮೈಬೆವರೊಡನೆ ಬೆರೆಯಿತು. ೬. ಕಿಡಿಗಳು ಕಿಡಿಗಳೊಡನೆ ತಾಗುವಂತೆ ಎರಡು ಸೈನ್ಯಗಳೂ ಒಂದರಮೇಲೊಂದು ಬಿದ್ದವು. ಮೇಲೆ ಬಿದ್ದ ಏಟಿಗೆ ಕಪಿವೀರರು ರಾಕ್ಷಸರ ದೇಹದಿಂದ ಪ್ರಾಣಗಳನ್ನು ಹೊರಗೋಡಿಸಿದರು ; ಅವರ ಜನ್ಮಜನ್ಮಾಂತರದ ದುಷ್ಕರ್ಮಗಳು ಕತ್ತರಿಸಿಹೋದವು. ಬಳಿಕ ಎರಡೂ ಸೈನ್ಯದ ಸತ್ತ ವೀರರು ದೇವೇಂದ್ರನಗರದ ಸೂರೆಗೆ ನುಗ್ಗಿದರು. ೭. ಯುದ್ಧಭೂಮಿಯು ಹೆಣಮಯವಾಯಿತು, ಆಕಾಶವು ಬಂಡೆ ಬಾಣಗಳ ಮಯವಾಯಿತು. ಯುದ್ಧವೀರರ ಕೆರಳಿದ ಕ್ರೋಧಾಗ್ನಿಯಿಂದ ಬೆಂಕಿಮಯವಾಯಿತು, ದಿಕ್ಕುಗಳೆಲ್ಲ ಕುಣಿಯುವ ಭೂತಮಯವಾಯಿತು, ಅಬ್ಬಬ್ಬ ಸತ್ತು ವೀರಸ್ವರ್ಗವೇರಿದ ವೀರರ ಮತ್ತು ಅಪ್ಸರೆಯರ

ಮೊರೆವ ವಾದ್ಯಧ್ವನಿಯ ಬಲುಹ । ಜ್ಝರಿಗೆ ಜಡವಾಯ್ತು ಬುಜಜಾಂಡದ
ಶಿರ ಶಿರೋವ್ಯಥೆ ಬಾರಿಸಿದುದುತ್ತಾನಪಾದಜನ
ಕರಿ ರಥಾಶ್ವ ಪದಾತಿ ಬಲದು । ಬ್ಬರದ ಬೊಬ್ಬೆಗೆ ಬಿರಿದು ದತಳದ
ತರತರದ ಭುವನಾಳಿ ಬಣ್ಣಿಪೆನೇನನದ್ಭುತವ ೮

ತರುಣ ಕೇಳವರೊತ್ತಬರದು । ಬ್ಬರದ ವಾದ್ಯಧ್ವನಿಯನಾ ಬಲ
ದುರು ನಿನಾದದಲಿವರ ತೊಡೆವಱೆಗಳ ಮಹಾರಭಸ
ಬೆರಳುಗಳ ಬೊಬ್ಬಾಟ ಬಿಡದ । ಬ್ಬರಿಸೆ ರಿಪುಬಲ ಹಮ್ಮಯಿಸಿದುದು
ಬೆರಗು ಬಾರಿಸೆ ಬೆದಱಿದನು ಮನದಲಿ ದಶಗ್ರೀವ ೯

ನೂಱು ಯೋಜನವಿವರವಱ ರಣ । ದೇಱಿನಂಗಣದಂಗಡದಲು
ಬ್ಬೇಱಿ ಹೊಕ್ಕುದು ಹೊಡಕರಿಸಲಿಳೆ ವೀರರುಭಯದಲಿ
ಕಾಱುಗಿಡಿಗಳ ಕೈದುಗಳ ಬಲು । ಚೀಱಿಕೆಯ ಕುಲಶೈಲಸವಿಸಿಯ
ಬೀಱುಗಳ ಬಲುರಭಸ ಬೆದಱಿಸಿತಖಿಳ ಭುವನಗಳ ೧೦

ಸಬಳದಲಿ ತಿವಿದೆತ್ತಿ ಭೂತಕೆ । ಕಬಳವನು ಕೊಡುತಟ್ಟಿ ಚಕ್ರದಿ
ಕುಬುಬಿಱಿದು ಕವಿದಿಡುತ ಕಱಿವುತ ಕೋಲ ಹೆಮ್ಮಳೆಯ
ಸಬುದ ಭೋರೆನೆ ನಭಕೆ ನೆತ್ತರಿ । ನಬುಧಿ ಲಂಬಿಸೆ ಪಲವು ಮುಖದಲಿ
ವಿಬುಧರಿಪುಗಳು ಕೊಂದರಗಣಿತ ಕಪಿವರೂಥಿನಿಯ ೧೧

ಅಪ್ಪುಗೆಯಿಂದ ಆಕಾಶಮಂಡಲವು ತುಂಬಿತು. ೮. ಮೊರೆಯುವ ರಣವಾದ್ಯಗಳ ಭಾರಿ ಭೋರ್ಗರೆತಕ್ಕೆ ಬ್ರಹ್ಮಾಂಡದ ತಲೆಯು ಜಡವಾಯಿತು, ಧ್ರುವನಿಗೆ ತಲೆನೋವಾಯಿತು. ಆನೆ, ಕುದುರೆ, ರಥ, ಕಾಲಾಳುಗಳ ಸೈನ್ಯದ ಅತಿಶಯ ಬೊಬ್ಬೆಗೆ ಪಾತಾಳದ ಬೇರೆ ಬೇರೆ ಲೋಕಗಳು ಬಿರುಕುಬಿಟ್ಟವು. ಈ ಅದ್ಭುತವನ್ನು ಏನೆಂದು ವರ್ಣಿಸಲಿ ಎಂದು ವರ್ಣಿಸಿದರು ವಾಲ್ಮೀಕಿಮಹರ್ಷಿಗಳು. ೯. ರಾಕ್ಷಸರ ಸೈನ್ಯದ ಬೊಬ್ಬೆಯೊಡನೆ ಅವರ ರಭಸದ ವಾದ್ಯಧ್ವನಿಯನ್ನು ತರುಣ ಕುಶ ಕೇಳು. ಇತ್ತ ವಾನರರು ತೊಡೆತಮಟೆಗಳನ್ನು ಮಹಾರಭಸದೊಡನೆ ಬೆರಳುಗಳಿಂದ ಹೊಡೆದು ಅಬ್ಬರಿಸಲು ಶತ್ರುಸೈನ್ಯವು ಮೂರ್ಛೆಹೋಯಿತು. ಈ ಮಹಾಶಬ್ದಕ್ಕೆ ಬೆರಗಾದ ದಶಕಂಠನು ಬೆದರಿದನು. ೧೦. ನೂರುಯೋಜನ ವಿಸ್ತಾರದ ಎರಡೂ ಕಡೆಯ ಯುದ್ಧರಂಗದ ಅಂಗಳ ಅಂಗಳದಲ್ಲೂ ಎರಡೂ ಕಡೆಯ ವೀರರು ಆವೇಶದಿಂದ ಹೊಕ್ಕು ಹೋರಾಡಿದರು, ಆಯುಧಗಳು ಕಿಡಿಗಳನ್ನು ಕಾರಲು, ವೀರರು ಗಟ್ಟಿಯಾಗಿ ಕೂಗಿಡುತ್ತಿರಲು, ವಾನರರು ಬೆಟ್ಟಗಳನ್ನು ಬೀಸಿ ಹೊಡೆಯುತ್ತಿರಲು ಕಾಳಗದ ರಭಸವು ಸಮಸ್ತ ಲೋಕಗಳನ್ನು ಹೆದರಿಸಿತು. ೧೧. ರಾಕ್ಷಸರು ಈಟಿಗಳಿಂದ ತಿವಿದು ಬೀಳಿಸಿ ವಾನರರನ್ನು ಭೂತಗಳಿಗೆ ತುತ್ತುಕೊಟ್ಟರು. ಕುಬುಬೆಂದು ಅರಚುತ್ತ ಅಟ್ಟಿಸಿಕೊಂಡು ಹೋಗಿ ಚಕ್ರಾಯುಧದಿಂದ ಹೊಡೆದರು. ಬಾಣಗಳ ಭಾರಿಮಳೆಯನ್ನೇ ಸುರಿಸಿದರು, ಯುದ್ಧವೀರರ ಭೋರ್ಗರೆತದಲ್ಲಿ ಆಕಾಶಕ್ಕೆ ರಕ್ತದ ಸಮುದ್ರ ಎರಚಿತು. ಹೀಗೆ ಹಲವು ರೀತಿಗಳಿಂದ ಅಸುರರು

ಶಿರದ ಚಿಪ್ಪುಗಳರಳೆ ಹೊಯ್ಯುತ । ಪರಿಘದಲಿ ಪಾಶಿಂಬಳೆಗಳಲಿ
ಕರುಳನುಚ್ಚುತ ಸುರಗಿಯಲಿ ತಿವಿವುತ ಕೃಪಾಣದಲಿ
ಎರಡೆರಡು ತುಂಡುಗಳ ತೋಱುತ । ಕೊರಳುಗಳ ಕತ್ತರಿಸುತಂಬಿನ
ಸರಿಗಳಲಿ ಸಂಹರಿಸುತಿರ್ದರು ಖಳರು ಕಪಿಬಲವ ೧೨

ನೂಕಿ ಕುದುರೆಯ ರಾವುತರು ಕವಿ । ದೌಕುವತಿಬಲ ವಾನರರ ತಲೆ
ನಾಕಕಡರಲು ಘನ ಶರೌಘದಿನೆಸುತ ಖಡುಗದಲಿ
ನೂಕಿ ತೆರಳಿಸಲೊತ್ತಿ ಲೌಡಿಯ । ಸೋಕಿನಲಿ ಸರಕಟಿಸಿ ಸಕಲ ವ
ನೌಕಸರ ಸೇನೆಯನು ಸವರಿದರಸಮ ಸಮರದಲಿ ೧೩

ತೂಳಿ ದಾಡೆಯಲಿರಿಸಿ ಮೆಟ್ಟಿಸಿ । ಕಾಲುಗೊಲೆಯಲಿ ಸುಂಡಿಲಲಿ ಸಮ
ಸೀಳ ತೋಱಿಸಿ ಹಾರಿ ಹೊಂಚುವ ವೀರ ವಾನರರ
ನಾಳಿಯಂಬಿನಲಡಗೆಡಹುತು । ತ್ತಾಳದಲಿ ಜೋದರುಗಳಂತಕ
ನಾಲಯವ ಹೊಗಿಸಿದರು ಕಪಿಕೋಟಾನುಕೋಟಿಗಳ ೧೪

ತೇರುಗಳ ಸೂಟಾಸುಟಿಗಳಲಿ । ಚಾರಿವರಿಸುತ ಹೊಕ್ಕ ವ್ಯಯಲಿ
ಕಾರಮಳೆ ಕವಿವಂತೆ ರಕ್ಕಸರಥಿಕರುರವಣಿಸಿ
ಕೂರಲಗುಗಳ ಸುರಿದು ಕೆಡಹಿದ । ರಾರಿಡುತ ಕಪಿಸೇನೆಯನು ಹೆ
ಮ್ಮಾರಿ ಹೊಕ್ಕಂದದಲಿ ಹೆಣಮಯವಾಯ್ತು ರಣಭೂಮಿ ೧೫

ಅಸಂಖ್ಯಾತ ವಾನರಸೈನ್ಯವನ್ನು ಕೊಂದರು. ೧೨. ತಲೆಬುರುಡೆಗಳು ಸೀಳುವಂತೆ ಪರಿಘಾಯುಧದಿಂದ ಹೊಡೆಯುತ್ತ, ಚಕ್ರಾಯುಧಗಳಿಂದ ತಿವಿದು ಕರುಳುಗಳನ್ನು ಹೊರಕ್ಕೆ ಹೊರಡಿಸುತ್ತ, ಕಠಾರಿಯಿಂದ ತಿವಿಯುತ್ತ, ಖಡ್ಗಗಳಿಂದ ಎರಡು ತುಂಡು ಮಾಡುತ್ತ, ಕತ್ತುಗಳನ್ನು ಕತ್ತರಿಸುತ್ತ, ಬಾಣದ ಮಳೆಗಳಿಂದ ಸಂಹರಿಸುತ್ತ ರಾಕ್ಷಸರು ವಾನರರನ್ನು ಕೊಲ್ಲುತ್ತಿದ್ದರು. ೧೩. ರಾವುತರು ಕುದುರೆಗಳನ್ನು ಮುನ್ನುಗ್ಗಿಸಿ ಒತ್ತಿ ಬರುವ ವಾನರರನ್ನು ಕತ್ತಿಗಳಿಂದ ಹೊಡೆಯುತ್ತ ಅವರ ತಲೆಗಳನ್ನು ಆಕಾಶಕ್ಕೆ ಹಾರಿಸಿದರು. ವಾನರರು ನುಗ್ಗಿ ರಾಕ್ಷಸರನ್ನು ಹಿಮ್ಮೆಟ್ಟಿಸಲು ಅವರು ರಭಸದಿಂದ ಮೇಲೆಬಿದ್ದು ದೊಣ್ಣೆಯಿಂದ ಹೊಡೆದು ಅಸಾಮಾನ್ಯ ಕಾಳಗದಲ್ಲಿ ಕಪಿಸೈನ್ಯವನ್ನು ಕತ್ತರಿಸಿಹಾಕಿದರು. ೧೪. ವಾನರರನ್ನು ಆಕ್ರಮಿಸಿ ಆನೆಗಳ ದಂತಗಳಿಗೆ ಸಿಕ್ಕಿಸುತ್ತ, ಕಾಲುಗಳಿಂದ ತುಳಿಸಿ ಸಾಯಿಸುತ್ತ, ಸೊಂಡಿಲುಗಳಿಂದ ಸೀಳಿಸುತ್ತ ಹಾರಿ ಹೊಂಚು ಹಾಕುತ್ತಿದ್ದ ವಾನರವೀರರನ್ನು ನಾಳಿಯಂಬುಗಳಿಂದ ಕೆಳಕ್ಕೆ ಕೆಡವಿ ಶೀಘ್ರಗತಿಯಿಂದ ಚಲಿಸುತ್ತ ರಾಕ್ಷಸವೀರರು ಕೋಟ್ಯಾನುಕೋಟಿ ಕಪಿಗಳನ್ನು ಯಮಲೋಕಕ್ಕೆ ಕಳಿಸಿದರು. ೧೫. ರಾಕ್ಷಸರಥಿಕರು ರಥಗಳನ್ನು ಚಾಕಚಕ್ಯತೆಯಿಂದ ವೇಗವಾಗಿ ನಡೆಸುತ್ತ, ಕಾರ್ಗಾಲದ ಮಳೆ ಮುತ್ತುವಂತೆ ರಭಸದಿಂದ ನುಗ್ಗಿ ಆರ್ಭಟಿಸುತ್ತ ಹರಿತವಾದ ಕತ್ತಿಗಳನ್ನು ಬೀಸಿ ಬೀಸಿ ಹೊಡೆದು ಕಪಿಸೈನ್ಯವನ್ನು ಕೆಡವಿಹಾಕಿದರು. ಹೆಮ್ಮಾರಿ ನುಗ್ಗಿ

ಹುರಿಕಟಿಸಿ ಯೂಥಾಧಿನಾಥರು । ನೆರೆದು ಸಿಡಿಲಪ್ಪಳಿಸುವಂದದ
ಲುರವಣಿಸಿ ಗಿರಿಕೂಟದಲಿ ಬಲುಗಂಡಶೈಲದಲಿ
ಮರಗಳಲಿ ಮುಂಬರಿವ ಖಳಪದ । ಚರರ ಖಳರಾವುತರ ಖಳಜೋ
ದರ ತದೀಯ ಮಹಾರಥರ ಸದೆಬಡಿದರಗಲದಲಿ ೧೬

ರೂಪರಿಯ ಬಾರದವೊಲಸುರಸ । ಮೂಹವಜಗಿಜಿಯಾಯ್ತು ವಾರಣ
ವಾಹವಖಿಳ ವರೂಥವೇನಾದವೊ ಸವಿಾಕದಲಿ
ಕಾಹುರದ ಕಾರಣದ ರಕ್ತದ । ವಾಹಿನಿಗಳುಪ್ಪರಿಸಿ ಹರಿದವು
ಕಾಹುದೆಗೆದಂತಕನ ಕೊಲೆಗೆಲಸದವೊಲಾಯ್ತೆಂದ ೧೭

ದ್ರೋಣಿ ದುರ್ಗಿಗಳೆಂಬ ಭೂತ । ಶ್ರೇಣಿ ಹಿಡಿದವು ಹೋಹ ಕಪಿಗಳ
ಕೋಣಪರ ಕೋಟಾನುಕೋಟಿಯನಖಿಲ ಖಗಜಾಲ
ಶ್ರೋಣಿತವನೀಂಟದವು ತಡಿಗಳ । ತಾಣಗಳ ಮರನೇಱಿ ಘನ ಗೀ
ರ್ವಾಣ ವಸನ ಜಪಾಕುಸುಮದಂತಾದುದಭ್ರದಲಿ ೧೮

ಹುಡಿದುದುಭಯದ ಚೂಣಿ ಕದನವ । ಹಿಡಿದರಗ್ಗದ ಯೂಥನಾಥರ
ಗಡಣ ಗರ್ವಿತ ವೀರರಕ್ಕಸರೆರಡು ಪೈಕದಲಿ
ನಡೆವುತಿರ್ದುದು ಸಮರ ಸುರರು । ಗ್ಘಡಿಸೆ ಸುರವೈರಿಗಳು ಹಱೆಗಳ
ಹೊಡೆಸೆ ಸರಿಪೆಟ್ಟಿನಲಿ ಸಂಗರರಂಗಭೂಮಿಯಲಿ ೧೯

ದಂತೆ ಯುದ್ಧಭೂಮಿಯು ಹೆಣಗಳಿಂದ ತುಂಬಿಹೋಯಿತು. ೧೬. ವಾನರಸೇನಾ ನಾಯಕರು ಹುರುಪುಗೊಂಡು ಬಂದು ಸಿಡಿಲು ಅಪ್ಪಳಿಸುವಂತೆ ಬೆಟ್ಟಗಳಿಂದ, ಪರ್ವತಗಳಿಂದ ಬಿದ್ದ ಭಾರಿ ಬಂಡೆಗಳಿಂದ ಮತ್ತು ಮರಗಳಿಂದ ಮುಂದುವರಿಯುವ ರಾಕ್ಷಸ ಕಾಲಾಳುಗಳು, ರಾಕ್ಷಸರಾವುತರು, ರಾಕ್ಷಸಯೋಧರು ಮತ್ತು ರಾಕ್ಷಸ ಮಹಾರಥರುಗಳನ್ನು ಸದೆಬಡಿದರು. ೧೭. ರೂಪ ತಿಳಿಯದಂತೆ ರಾಕ್ಷಸಸೈನ್ಯವು ನಜ್ಜುಗುಜ್ಜಾಯಿತು. ಆನೆಗಳೂ ಸಮಸ್ತ ರಥಗಳೂ ಯುದ್ಧದಲ್ಲಿ ಏನಾದುವೋ ! ರಭಸದಿಂದ ರಕ್ತಪ್ರವಾಹಗಳು ಉಕ್ಕಿಹರಿದವು. ಕಾವಲು ತೆಗೆದ ಯಮನ ಕೊಲೆಗೆಲಸದಂತೆ ತೋರಿತು ಯುದ್ಧರಂಗ. ೧೮. ದ್ರೋಣಿ ದುರ್ಗಿಗಳೆಂಬ ಪಿಶಾಚಿಗಳು ಹೋಗುವ ಕೋಟ್ಯಾನುಕೋಟಿ ಕಪಿಗಳನ್ನೂ ರಾಕ್ಷಸರನ್ನೂ ಹಿಡಿದುಕೊಂಡವು. ಅಸಂಖ್ಯಾತ ಪಕ್ಷಿಗಳು ರಕ್ತವನ್ನು ಕುಡಿದು ಅಕ್ಕಪಕ್ಕದ ಮರಗಳನ್ನು ಹತ್ತಿ ಕುಳಿತವು. ದೇವತೆಗಳ ವಸ್ತ್ರದ ಕೆಂಪುದಾಸವಾಳದ ಹೂವುಗಳಂತೆ ಆಕಾಶವು ಗೋಚರಿಸಿತು. ೧೯. ಎರಡೂ ಕಡೆಯ ಸೈನ್ಯಗಳ ಮುಂದಿನದಳಗಳು ಯುದ್ಧದಲ್ಲಿ ಮರಣಹೊಂದಿದವು. ಶ್ರೇಷ್ಠ ವಾನರನಾಯಕರ ಮತ್ತು ಗರ್ವಿತ ವೀರ ರಾಕ್ಷಸರ ಎರಡು ಕಡೆಗಳವರೂ ಕದನವನ್ನು ಹಿಡಿದರು. ದೇವತೆಗಳು ಬಿರುದುಗಳನ್ನು ಹೊಗಳುತ್ತಿರಲು, ರಾಕ್ಷಸರು ತಮಟೆಗಳನ್ನು ಹೊಡೆಯುತ್ತಿರಲು ರಣರಂಗದಲ್ಲಿ ವಾನರರಿಗೂ ರಾಕ್ಷಸರಿಗೂ ಸರಿಸಮಾನವಾಗಿ ಯುದ್ಧ

ರಾಯನಿರ್ದನು ನಿಮ್ಮ ಬಲದಸ । ಹಾಯಶೂರರ ಮುಂದೆ ಮುಂದರಿ
ರಾಯ ದಳವುಳಕಾಜಿ ಲಕ್ಷ್ಮಣನಿರ್ದನಂತರದ
ಆಯತದ ರಣಭೂಮಿಯಲಿ ಕಪಿ । ರಾಯನಿರ್ದನು ಮುಂದೆ ವಾನರ
ನಾಯಕರ ಸೇನಾನಿಯಿರ್ದನು ಸಕಲ ಬಲಸಹಿತ ೨೦

ಮುಂದೆ ಗವಯ ಗವಾಕ್ಷ ದುರ್ಮುಖ । ಮೈಂದ ಪನಸ ದ್ವಿವಿದನವರಿಂ
ಮುಂದೆ ವಿನತ ಸುಷೇಣ ಜಾಂಬವ ಗಂಧಮಾದನರು
ಸಂದಣಿಯ ಸಂಗರದ ಸೇನಾ । ವೃಂದ ಸಹಿತಿದಿರಾಯ್ತು ಮೋಹರ
ದಂದವಿದು ತಱುಬಿದನು ಹನುಮನ ಪಡುವಲಿಂದ್ರಜಿತು ೨೧

ಹಿಡಿದರಂಗದನೊಡನೆ ಸಮರವ । ತುಡುಕಿ ದೇವಾಂತಕ ನರಾಂತಕ
ರೊಡನೆ ನೂಕಿತು ಮಿಕ್ಕ ಕುಂಭ ನಿಕುಂಭ ಮೊದಲಾದ
ಕಡುಗಲಿಗಳಿವರಂಕದಲಿ ಮುರಿ । ವಡೆದರೈ ಬಳಿಕವರು ಭರಿತದ
ಕಡಲು ಕಡೆವಂದದಲಿ ತೆಗೆದಂಡಿಸಿತು ರಾವಣಿಯ ೨೨

ತಱುಬಿ ಹಳಚುವ ತೆರೆಯ ತೆಕ್ಕೆಯ । ಭರವಸವನೊಡೆಬಗಿದು ಮುಂದಣಿ
ಗುರವಣಿಪ ಬಲು ಭೈತ್ರದವೊಲಂತಖಿಳ ಕಪಿಬಲದ
ಹೊರಳಿಯನು ಹರಿಗಡಿವುತೆಸುಗೆಯ । ಸರಳ ಸಾರದಲಮರಿದೆ ಜ
ಜ್ಝರಿತವಾಗಲು ರಘುಡಿತೆಯಲಿ ಹೊಕ್ಕನು ದಶಗ್ರೀವ ೨೩

ನಡೆಯುತ್ತಿದ್ದಿತು. ೨೦. ನಿಮ್ಮ ವಾನರಸೈನ್ಯದ ಅಸಹಾಯ ಶೂರರ ಮುಂದೆ ಅರಸ ರಾಮನಿದ್ದನು. ಅವನ ಮುಂದೆ ಶತ್ರುರಾಜರ ಸೂರೆಗಾರ ಲಕ್ಷ್ಮಣನಿದ್ದನು. ನಡುವಿನ ವಿಸ್ತಾರ ರಣಭೂಮಿಯಲ್ಲಿ ವಾನರರರಸ ಸುಗ್ರೀವನಿದ್ದನು. ಅವನ ಮುಂದೆ ಸಮಸ್ತ ಸೈನ್ಯದೊಡನೆ ವಾನರನಾಯಕರ ಸೇನಾಪತಿ ಇದ್ದನು. ೨೧. ಮುಂದುಗಡೆಯಲ್ಲಿ ಗವಯ, ಗವಾಕ್ಷ, ದುರ್ಮುಖ, ಮೈಂದ, ಪನಸ, ದ್ವಿವಿದರು ಇದ್ದರು. ಅವರಿಗಿಂತ ಮುಂದೆ ವಿನತ, ಸುಷೇಣ, ಜಾಂಬವ, ಗಂಧಮಾದನರುಗಳು ಸೇನಾಸಮೂಹದೊಡನೆ ರಾಕ್ಷಸರನ್ನು ಎದುರಿಸಿದರು. ಯುದ್ಧದ ಕ್ರಮವಿದು. ಪಶ್ಚಿಮದ ಕಡೆಯಲ್ಲಿ ಇಂದ್ರಜಿತು ಹನುಮಂತನನ್ನು ಅಡ್ಡಗಟ್ಟಿದನು. ೨೨. ಅಂಗದನೊಡನೆ ದೇವಾಂತಕ ನರಾಂತಕರು ಯುದ್ಧವನ್ನು ಹಿಡಿದರು. ಒಡನೆ ಉಳಿದ ಕುಂಭ ನಿಕುಂಭ ಮೊದಲಾದ ಮಹಾವೀರರು ಮುತ್ತಿದರು. ಇವರು ಹೋರಾಟದಲ್ಲಿ ಹಿಮ್ಮೆಟ್ಟಿದರು. ಬಳಿಕ ತುಂಬಿದ ಸಮುದ್ರವನ್ನು ಕಡೆದಂತೆ ರಾಕ್ಷಸರು ಇಂದ್ರಜಿತುವಿನ ಬಳಿಗೆ ಬಂದು ಸೇರಿದರು. ೨೩. ತಡೆಗಟ್ಟಿ ಅಪ್ಪಳಿಸುವ ತೆರೆಗಳ ಸಮೂಹದ ರಭಸವನ್ನು ಸೀಳಿ ಮುಂದಕ್ಕೆ ಧಾವಿಸುವ ಭಾರಿ ಹಡಗಿನಂತೆ ಸಮಸ್ತ ಕಪಿಸೈನ್ಯಸಮೂಹವನ್ನು ಬಾಣಗಳ ಮಳೆಯಿಂದ ಚೆಲ್ಲಾಪಿಲ್ಲಿಯಾಗುವಂತೆ ಕತ್ತರಿಸುತ್ತ ದಶಕಂಠನು ವೇಗವಾಗಿ ಬಂದನು. ಇದನ್ನು

ವಿಶಿಖ ಸದೆದವು ಹತ್ತುತೋಳುಗ । ಳೆಸುಗೆಗಳಲೊಂದೊಂದು ಸರಳಿನ
ಸಸಿನದಲಿ ಶತಸಾವಿರದ ಲಕ್ಷೋಪಲಕ್ಷಗಳ
ಎಸವು ವಾನರಭಟರ ಕೊರಳಿನ । ಬೆಸುಗೆ ಬಿಟ್ಟವು ಬಿದುದಲೆಯ ಬಿಲು
ವಸರವಾದವು ಲಯಕೃತಾಂತನ ಸಂತೆಯಂದದಲಿ ೨೪

ನೆಗಹಿದದ್ರಿಯನಿದುವ ತೋಳುಗ । ಳಗಲುತಿರ್ದವು ನಭಕೆ ಲಂಘಿಸಿ
ಚಿಗಿವ ತೊಡೆ ಕಡಿದಿಡಿಕಿಲಾದವು ಕಪಿಕದಂಬಕದ
ಒಗುವ ರಕ್ತದಲಟ್ಟೆ ಗಗನವ । ಮೊಗೆವುತಿರ್ದವು ಕೊಲೆಗೆ ಹಿಂದಣ
ಯುಗದ ವೀರರೊಳಿವನವೊಲು ಸಾಹಸಿಗರಾರೆಂದ ೨೫

ಆತು ಮುಱಿದನು ಸುಮುಖ ದುರ್ಮುಖ । ಸೋತು ಹಿಂಗಿದನಳಿದನದಟ
ಜ್ಯೋತಿಮುಖ ದಧಿಮುಖನ ಬಲ್ಲವರಾರು ಸಮರದಲಿ
ಬೀತುದಸು ಕುಮುದಂಗೆ ಮೈಂದನ । ಮಾತು ಮುಱಿದುದು ನಳ ಸುಷೇಣರು
ಹೂತ ಮುತ್ತುಗದಂತೆ ಹಿಂಗಿದರೇಱಿ ನೋವಿನಲಿ ೨೬

ತಾಗಿ ನೊಂದನು ಗವಯ ಗಜನುಱೆ । ಕೂಗಿದನು ಕಲಿ ವಿನುತನಸು ತುದಿ
ಮೂಗಿನಲಿ ಸದಿಲಿದುದು ತೆರಳಿದ ನರಳುತಜಸೂನು
ಹೋಗಲೆಂದುಸುರುಗಳನಗಲಕೆ । ನೀಗಿದರು ಹೆಸರುಳ್ಳ ಸಾಹಸ
ಸಾಗರರು ಸಮ್ಮುಖದೊಳಾಂತವರಿಲ್ಲ ಸುಭಟರಲಿ ೨೭

ನೋಡಿದ ದೇವತೆಗಳ ಎದೆಯೊಡೆಯಿತು. ೨೪. ರಾವಣನು ಹತ್ತು ತೋಳುಗಳಿಂದ ಬಾಣಗಳನ್ನು ಪ್ರಯೋಗಿಸಿದನು. ಒಂದೊಂದು ಬಾಣದ ನೇರದಲ್ಲೂ ನೂರುಸಾವಿರ, ಲಕ್ಷೋಪಲಕ್ಷ ವಾನರವೀರರ ಕೊರಳುಗಳು ದೇಹದಿಂದ ಬೇರ್ಪಟ್ಟವು. ಪ್ರಳಯದ ಯಮನ ಸಂತೆಯೋ ಎನ್ನುವಂತೆ ಬರಿದಲೆಗಳ ಅಂಗಡಿಗಳೇರ್ಪಟ್ಟವು. ೨೫. ಬೆಟ್ಟಗಳನ್ನು ಎಸೆಯಲು ಎತ್ತಿದ ವಾನರರ ತೋಳುಗಳು ಕತ್ತರಿಸಿ ಆಕಾಶಕ್ಕೆ ಹಾರುತ್ತಿದ್ದವು. ಕಪಿಯೋಧರ ನೆಗೆಯುವ ತೊಡೆಗಳು ಕತ್ತರಿಸಿ ರಾಶಿಯಾದವು. ರಕ್ತ ಹೊರಚೆಲ್ಲುತ್ತಿದ್ದ ತಲೆಯಿಲ್ಲದ ದೇಹಗಳು ಆಕಾಶವನ್ನು ಮುಚ್ಚುತ್ತಿದ್ದವು. ಯುದ್ಧದಲ್ಲಿ ಕೊಂದು ಹಾಕುವುದರಲ್ಲಿ ಹಿಂದಿನ ಯುಗದ ವೀರರಲ್ಲಿ ಇವನಂತೆ ಸಾಹಸಿಗಳು ಯಾರು ? ಎಂಬುದಾಗಿ ವಾಲ್ಮೀಕಿಗಳು ನುಡಿದರು. ೨೬. ಸುಮುಖನು ಎದುರಿಸಿ ಭಂಗಗೊಂಡು ತೊಲಗಿದನು. ದುರ್ಮುಖ ಸೋತು ಹಿಮ್ಮೆಟ್ಟಿದನು. ವೀರ ಜ್ಯೋತಿಮುಖ ಸತ್ತನು. ಯುದ್ಧದಲ್ಲಿ ದಧಿಮುಖನನ್ನು ಕಂಡವರಾರು ? ಕುಮುದನು ಪ್ರಾಣ ನೀಗಿದನು. ಮೈಂದನ ಮಾತು ಮುರಿಯಿತು. ಮೈಯೆಲ್ಲ ಗಾಯಗೊಂಡು ಹೂಬಿಟ್ಟ ಮುತ್ತುಗದ ಹಾಗೆ ಕಾಣಿಸಿದ ನಳ ಸುಷೇಣರು ನೋವಿನಿಂದ ಹಿಂಜರಿದರು. ೨೭. ರಾವಣನನ್ನು ಎದುರಿಸಿ ಗವಯ ಪೆಟ್ಟು ತಿಂದನು, ಗಜನು ಜೋರಾಗಿ ಕಿರಿಚಿಕೊಂಡನು, ವೀರ ವಿನುತನ ಪ್ರಾಣವು ತುದಿಮೂಗಿನಿಂದ ಹೊರಟುಹೋಯಿತು, ಜಾಂಬವಂತನು ನರಳುತ್ತ ತೆರಳಿದನು. ಹೆಸರಾಂತ ಸಾಹಸಿಗಳು ಹೋಗಲಿ ಎಂದು ಪ್ರಾಣಗಳನ್ನು ಬಿಟ್ಟರು. ಪ್ರಸಿದ್ಧವೀರರಲ್ಲಿ ಯಾರೂ ರಾವಣನನ್ನು ಎದುರುಗಡೆಯಿಂದ ಎದುರಿಸಿದವರಿಲ್ಲ.

ಒದೆದು ಕೊಂದನು ಶರಭಕಪಿ ಸರ । ಳೊದೆದ ಛಾಯಕೆ ಗಂಧಮಾದನ
ನೆದೆಯಲೊಱತುದು ರಕ್ತಜಲ ಜಾಱಿದನು ಕಲಿ ವೃಷಭ
ಮದವದರಿಭೈರವನ ಕಾಲಾ । ಟದ ಧರಿತ್ರಿಯೊ ಕಾಲರುದ್ರನ
ಕದನವೋ ಕಡೆಯಾವುದಳಿವಿಂಗಿವರ ಸೇನೆಯಲಿ ೨೮

ಆಕೆವಾಳನದಾವನೈ ಲೋ । ಕೈಕವೀರನ ವಿಷಮ ವಿಶಿಖ ಸ
ಮಾಕದಿದಿರಿಸಲಮರ ನಿರ್ಜರ ನರ ಭುಜಂಗರಲಿ
ನಾಕ ತುಂಬಿತು ಮೃತ್ಯು ತೃಪ್ತಿಯ । ಲೋಕರಿಸಿದಳು ಕಾಲಗಂಡ ವ
ನೌಕಸರನೇನೆಂಬೆನಾಹವವನು ದಶಾನನನ ೨೯

ತೂಳಿದಡವಿಯ ದಳ್ಳುರಿಯ ದೆ । ಕ್ಕಾಳದಲಿ ಘಟ್ಟೈಸಿ ನಿಂದು
ಬ್ಬಾಳುದೊರೆಯಂದದಲಿ ಬಗೆಯದೆ ಮುಂದಣೊಡ್ಡಿನಲಿ
ಮೌಳಿಹತ್ತರ ರಕ್ಕಸನ ರಣ । ದೂಳಿಗವ ತಱುಬಿದನು ಗೋಲಾಂ
ಗೂಲಪತಿ ಗುಡಿಯಱಿದ ಕೋಪಾಟೋಪದುಬ್ಬಿನಲಿ ೩೦

ಆನುವೆನು ಮೊದಲೊಮ್ಮೆ ಮಹಿಜಾ । ಮಾನಿನೀಶನ ಮುಂದೆ ಖಳಕುಲ
ಹೀನನನು ಹುಗಗೊಡದೆ ತಱುಬುವೆನಿವನನೆಂದೆನುತ
ಏನಿದೆಲ್ಲಿಗೆ ಭರವಸದ ಸು । ಮ್ಮಾನ ಸಮರವೊ ಶರಣಾಗತ ಸಂ
ಧಾನವೋ ರಾಜೇಂದ್ರಚಂದ್ರನೊಳೆಂದನಾ ರವಿಜ ೩೧

೨೮. ಬಾಣ ತಗುಲಿದ ಪೆಟ್ಟಿಗೆ ಶರಭ ದೂರಹೋಗಿಬಿದ್ದನು. ಗಂಧಮಾದನನ ಎದೆಯಿಂದ ರಕ್ತ ಸುರಿಯಿತು. ಕಲಿವೃಷಭನು ನುಸುಳಿಕೊಂಡು ಹೋದನು. ಮದಿಸಿದ ಶತ್ರುಭೈರವನ ತುಳಿದಾಟದ ನೆಲವೋ, ಕಾಲರುದ್ರನ ಕದನವೋ ! ವಾನರರ ಸೈನ್ಯದಲ್ಲಿ ಸಾವಿಗೆ ಕೊನೆ ಯಾವುದು ? ೨೯. ಲೋಕೈಕವೀರ ರಾವಣನ ಪ್ರಚಂಡ ಬಾಣದ ಕಾಳಗದ ಎದುರಿಗೆ ದೇವ ಮಾನವ ಪಾತಾಳಲೋಕದವರುಗಳಲ್ಲಿ ನಿಲ್ಲಬಲ್ಲ ವೀರನದಾರು? ಸತ್ತ ವೀರರಿಂದ ಸ್ವರ್ಗಲೋಕ ತುಂಬಿತು, ಮೃತ್ಯು ತೃಪ್ತಿಯಿಂದ ತಿಂದು ತೇಗಿದಳು. ರಾವಣನ ಯುದ್ಧವನ್ನು ಏನೆಂದು ವರ್ಣಿಸಲಿ. ೩೦. ಅಡವಿಯನ್ನು ವ್ಯಾಪಿಸಿದ ಅತಿಶಯವಾದ ದಳ್ಳುರಿಯಲ್ಲಿ ಪಡೆಯೊಡನೆ ನಿಲ್ಲುವ ಉತ್ಸಾಹಿಶೂರ ದೊರೆಯಂತೆ ವಾನರರೊಡೆಯ ಸುಗ್ರೀವನು ಕೋಪದಿಂದ ಕೆರಳಿ ಹತ್ತುತಲೆಯ ರಾಕ್ಷಸನ ಮುಂದಿನ ಸೈನ್ಯವನ್ನು ಅಡ್ಡಗಟ್ಟಿದನು. ೩೧. 'ಸೀತೆಯರಸನ ಎದುರಿನಲ್ಲಿ ಒಂದು ಬಾರಿ ನೀಚ ರಾಕ್ಷಸನನ್ನು ಎದುರಿಸಿ ಅವನು ಮುಂದೆ ಬರದಂತೆ ಅಡ್ಡಗಟ್ಟುತ್ತೇನೆ' ಎಂದು ಯೋಚಿಸಿ, "ಏನು, ಈ ಸಡಗರ ಸಂತೋಷಗಳು ಎಲ್ಲಿಗೆ ? ರಾಜೇಂದ್ರಚಂದ್ರನೊಡನೆ ಯುದ್ಧವೋ ಅಥವಾ ಅವನ ಮರೆಹೊಗಲು ಸಂಧಾನವೋ ?" ಎಂದು ಸುಗ್ರೀವ

ಸಮರವಲ್ಲದೆ ಶರಣುವೊಗುವ । ಭ್ರಮೆಯಿದೇತಕೆ ಬಾಹುಬಲವಿ
ಕ್ರಮದ ಚೇಷ್ಟಾಲಾಪ ತಾನಿದು ನಮ್ಮೊಡನೆ ಸೊಗಸೆ
ಕಮಲಜನ್ಮ ಕಪರ್ದಿಗಳನಾ । ಕ್ರಮಿಸಿದವು ಭುಜವಿವು ನರಾಧಮ
ರೆಮಗೆ ಪಾಡೇ ಪಥವ ಬಿಡು ಬೇಡೆನುತ ತೆಗೆದೆಚ್ಚ ೩೨

ಎಚ್ಚ ಬಾಣಕೆ ಬಾಹುದಂಡದ । ಮುಚ್ಚಳನು ಮಱೆಮಾಡಿ ಸುರಕುಲ
ಬೆಚ್ಚೆ ಬೊಬ್ಬಿಱಿದೆಱಗಿದನು ಭೂಧರದ ಶಿಖರದಲಿ
ಅಚ್ಚು ಬಳೆ ಕೂಬರ ಯುಗಂಧರ । ನುಚ್ಚುನುಱಿಯಾದವು ದಶಾನನ
ನೆಚ್ಚಱಿಕೆಯಲಿ ಪಡಿರಥಕೆ ಹಾಯ್ದುಬ್ಬಿ ಬೊಬ್ಬಿಱಿದ ೩೩

ಒಡನೆ ಲಂಘಿಸಿ ಬಾಹುದಂಡದ । ಕಡುಹಿನಿಂದೆಱಗಿದನು ಮಕುಟದ
ಗಡಣದನುಪಮ ರತ್ನಚಯ ಚಲ್ಲಿದವು ದೆಸೆದೆಸೆಗೆ
ಕಡುಗಲಿಯೊ ಕೇಳ್ ಕಾಂಚನಾದ್ರಿಯು । ಸಿಡಿಲ ಸಂಗರದಂತೆ ದಿವಿಜರ
ಪಡೆಗೆ ಕಾಣಿಸಿತಮಮ ಕಡುಹೆಂತುಟೊ ಕಪೀಶ್ವರನ ೩೪

ಎಲವೊ ಬಲ್ಲಾ ತನ್ನ ಭುಜಬಲ । ದಳವ ಪೂರ್ವದ ಮಕುಟಭಂಗದ
ಲುಳುಹಿದುದನಕಟಾವು ತರು ಮೃಗವೇ ವಿಚಾರಿಸದೆ
ಗಳಹುವುದು ನಿನಗುಚಿತವೇ ಸುರ । ಕುಲವೆ ಸೋಲುವರಾರೆನುತ ಹಲು
ಗಳಚಿಹೊಯ್ದನು ಹಲುಮೊಱೆದು ಹರಿರಾಜನಾ ಖಳನ ೩೫

ರಾವಣನನ್ನು ಪ್ರಶ್ನಿಸಿದ. ೩೨. "ಯುದ್ಧವಲ್ಲದೆ ಮೊರೆಹೊಗುವ ಭ್ರಾಂತಿಯ ಮಾತೇಕೆ ? ತೋಳ್ಬಲದ ಪರಾಕ್ರಮವನ್ನು ಹೊಗಳಿಕೊಳ್ಳುವ ನಿನ್ನ ಹುಡುಗಾಟದ ಮಾತು ನಮ್ಮೊಡನೆ ಸೊಗಸುವುದೆ ? ಬ್ರಹ್ಮ ಶಿವರುಗಳನ್ನು ಆಕ್ರಮಿಸಿದ ಭುಜಗಳು ನಮ್ಮವು. ನರಾಧಮ, ನಮ್ಮ ಸಮನೇ ನೀನು. ದಾರಿಬಿಡು, ಬೇಡ" ಎನ್ನುತ್ತ ರಾವಣನು ಬಾಣಬಿಟ್ಟ. ೩೩. ರಾವಣನು ಬಿಟ್ಟ ಬಾಣಕ್ಕೆ ತೋಳಿನ ಕಾಪನ್ನು ಮರೆ ಮಾಡಿ ದೇವತೆಗಳು ಬೆದರುವಂತೆ ಆರ್ಭಟಿಸಿ ಸುಗ್ರೀವನು ಪರ್ವತದ ಶಿಖರದಿಂದ ಹೊಡೆದನು. ರಾವಣನ ರಥದ ನಡುಗೂಟ, ಬಳೆ, ಇರ್ಚಿಮರ, ಮೂಕಿಗಳು ನುಚ್ಚು ನುರಿಯಾದವು. ರಾವಣನು ಎಚ್ಚರಿಕೆಯಿಂದ ಇನ್ನೊಂದು ರಥಕ್ಕೆ ನೆಗೆದು ಬೊಬ್ಬಿರಿದ. ೩೪. ತಕ್ಷಣ ಸುಗ್ರೀವನು ನೆಗೆದು ತೋಳ್ಬಲದಿಂದ ರಾವಣನ ಮೇಲೆರಗಿದನು. ಸುಗ್ರೀವನ ಏಟಿಗೆ ರಾವಣನ ಕಿರೀಟಗಳ ರತ್ನಗಳು ದಿಕ್ಕುದಿಕ್ಕಿಗೆ ಚಲ್ಲಾಡಿದವು. ಕಡುಗಲಿ ಕುಶನೆ ಕೇಳು, ಮೇರುಪರ್ವತ ಮತ್ತು ಸಿಡಿಲುಗಳ ಯುದ್ಧದಂತೆ ಸುಗ್ರೀವ ರಾವಣರ ಕಾಳಗವು ದೇವತೆಗಳಿಗೆ ಕಾಣಿಸಿತು. ವಾನರರೊಡೆಯನ ಪರಾಕ್ರಮವು ಎಂಥದೋ ! ಎಂದು ವಾಲ್ಮೀಕಿಗಳು ವಿವರಿಸಿದರು. ೩೫. "ಲೋ, ನನ್ನ ತೋಳ್ಬಲಸಾಮರ್ಥ್ಯವನ್ನು ಬಲ್ಲೆಯಾ ? ಹಿಂದೆ ನಿನ್ನನ್ನು ಕಿರೀಟಭಂಗದಿಂದ ರಕ್ಷಿಸಿದುದನ್ನು ಮರೆತೆಯಾ ? ಅಯ್ಯೋ, ನಾವು ಮರದ ಮೇಲಾಡುವ ಮೃಗಗಳೇ ? ಯೋಚಿಸದೆ ಹರಟುವುದು ನಿನಗೆ ಯೋಗ್ಯವೇ ? ನಾವೇನು ದೇವತೆಗಳೇ ನಿನ್ನ ಕೈಯಲ್ಲಿ ಸೋಲಲು. ಇಲ್ಲಿ ಸೋಲಂ

ಹಾಱಿಬಿದ್ದನು ರಥದಿನಿಳೆಗು । ಬ್ಬೇಱಿದುದು ಕಪಿಸೇನೆ ಬೊಬ್ಬೆಯ
ಚೀಱುಗಳ ಚಳಗತಿಯ ಚಟುಳ ಚಡಾಳ ಚಾಳಿಯಲಿ
ಮೂಱು ಹಜ್ಜೆಯ ಹಿನ್ನೆಲೆಗೆ ಹೊಱ । ಹಾಱಿ ಹಿಮ್ಮೆಟ್ಟಿದನು ರಾಮಗೆ
ಮಾಱಿದವ ನೀನಕಟ ತಪ್ಪಾಯ್ತೆನುತ ಸುಗ್ರೀವ ೩೬

ಅನಿತಱೊಳೆ ಸಾರಥಿ ನಿಜಸ್ಯಂ । ದನವ ನಿಂದಿರಿಸಿದನು ಖಳ ಶರ
ಧನುವ ಸಂವರಿಸುತ್ತ ಶರಸತ್ಕ್ರೋಧಮಯನಾಗಿ
ವನಜಭವ ಮಂತ್ರದಲಿ ಬಾಣದ । ಮೊನೆಯ ಮಂತ್ರಿಸಿ ಬೊಬ್ಬಿಱಿದು ಸಿಂ
ಜಿನಿಯ ರವವನು ತೋಱಿ ಕುಬುಬಿಱಿದೆಚ್ಚನಿನಸುತನ ೩೭

ಕೊಂಡ ಕೋಲಿನ ಕೋಹಿಗಿನಸುತ । ದಂಡಣಿಸಿ ಬಸವಳಿಯೆ ಬಲಿಮುಖ
ತಂಡ ತಡಸಿಗೆ ಬೀಟೆ ಬೇವರುಟಾಳ ಹಿಂತಾಳ
ದಿಂಡ ತೇಗು ತಮಾಲದಲಿ ಕೈ । ಗುಂಡಿನಲಿ ಹೊಳಿದರು ದಿನಮಣಿ
ಮಂಡಲದ ಮುತ್ತಿಗೆಯ ಮುಗಿಲವೊಲರಿದಶಾನನನ ೩೮

ತಱಿದನಮರವಿರೋಧಿ ಬಳಿಯಲಿ । ತುಱುಗುವವು ತರುಶೈಲ ಶೈಲದ
ಹೊಱಿಯ ಹೊದಱಲಿ ಹೊಳಕಿ ಹೊಂಚುವ ಹೊಂತಕಾಱಿಗಳ
ಹರಬ ಹಸರಿಸಿ ಹರಿಕುಲೇಂದ್ರನ । ನಱಿಸಿ ತಾಗಿದು ಮುಂದಣೊಡ್ಡನು
ಮುಱಿಯೆಸುತ ಮುಂಚಿದನು ನೀಲನ ದಳದ ಸರಿಸದಲಿ ೩೯

ವವರಾರು?" ಎಂದು ಸುಗ್ರೀವನು ಹಲ್ಲುಗಚ್ಚಿ ರಾವಣನ ಹಲ್ಲುದುರುವಂತೆ ಹೊಡೆದನು. ೩೬. ರಾವಣನು ರಥದಿಂದ ನೆಲಕ್ಕೆ ಹಾರಿಬಿದ್ದನು. ಕಪಿಸೈನ್ಯವು ಬೊಬ್ಬೆಹಾಕುತ್ತ ಕಿರಿಚುತ್ತ ಚುರುಕಾಗಿ ಹೆಜ್ಜೆಹಾಕಿ ಕುಣಿಯುತ್ತ ಹಿಗ್ಗಿತು. ಸುಗ್ರೀವನು ಮೂರು ಹೆಜ್ಜೆಗಳಷ್ಟು ಹಿಂದಕ್ಕೆ ನೆಗೆದು ಹಿಮ್ಮೆಟ್ಟಿ ನಿಂತು "ರಾಮನೊಡನೆ ಯುದ್ಧಕ್ಕೆ ಗೊತ್ತಾದವನು ನೀನು, ನನ್ನದು ತಪ್ಪಾಯಿತು" ಎಂದನು. ೩೭. ಅಷ್ಟರಲ್ಲಿ ರಾವಣನ ಸಾರಥಿಯು ರಥವನ್ನು ತಂದು ನಿಲ್ಲಿಸಿದನು. ರಾವಣನು ರಥವನ್ನೇರಿ ಧನುಸ್ಸನ್ನು ತೆಗೆದುಕೊಂಡು ಕೋಪದಿಂದ ಕೆರಳಿ ಬ್ರಹ್ಮಮಂತ್ರದಿಂದ ಬಾಣದ ಮೊನೆಯನ್ನು ಮಂತ್ರಿಸಿ ಬೊಬ್ಬಿರಿದು ಬಿಲ್ಲಿನ ಹಗ್ಗವನ್ನು ಎಳೆದು ಟಂಕಾರಶಬ್ದಮಾಡಿ 'ಕುಬುಬು' ಎನ್ನುತ್ತ ಬಾಣವನ್ನು ಬಿಟ್ಟನು. ೩೮. ರಾವಣನು ಬಿಟ್ಟ ಬಾಣದ ಪೆಟ್ಟಿಗೆ ಸುಗ್ರೀವನು ನಡುಗುತ್ತ ಕುಸಿಯಲು ವಾನರಸಮೂಹವು ತಡಸಲು, ಬೀಟೆ, ಬೇವು, ಅಂಟುವಾಳ, ಹಿಂತಾಳ, ದಿಂಡ, ತೇಗು, ಹೊಂಗೆಮರಗಳಿಂದಲೂ ಕೈಗಳಲ್ಲಿ ಹಿಡಿದ ಕಲ್ಲುಗುಂಡುಗಳಿಂದಲೂ ಮೋಡವು ಸೂರ್ಯಮಂಡಲವನ್ನು ಮುಸುಕುವಂತೆ ರಾವಣನನ್ನು ಮುಚ್ಚಿಬಿಟ್ಟಿತು. ೩೯. ರಾವಣಾಸುರನು ಅವುಗಳನ್ನೆಲ್ಲ ಕತ್ತರಿಸಿಹಾಕಿದನು. ಪುನಃ ವಾನರರ ಮರಬಂಡೆಗಳು ರಾವಣನನ್ನು ಮುತ್ತಿದವು. ಬೆಟ್ಟಗಳ ರಾಶಿಯ ಹಿಂದಿನಿಂದ ಹೊಂಚುಹಾಕುವ ಚತುರವೀರರ ಕೆಲಸ ಮುಗಿಸಿ ರಾವಣನು ಸೂರ್ಯಕುಲದೊಡೆಯ ರಾಮನನ್ನು ಹುಡುಕುತ್ತ ಬಂದು ಮುತ್ತಿಗೆಹಾಕಿ ಮುಂದಿನ ಸೇನಾವ್ಯೂಹವು ಮುರಿಯುವಂತೆ ಬಾಣಬಿಟ್ಟು ನೀಲನ ಸೈನ್ಯದ

ಅರೆನೆಲೆಯು ಹವಣಿನಲಿ ಹಿಂಗಿದ । ಧರೆಯು ತುದಿಯುಲಿ ನಿಲುವ ವೈಶ್ವಾ
ನರನವೊಲು ವಾನರರ ಸೇನಾನಾಥ ಕೋಪದಲಿ
ಬರಲಿ ಬರಲಿವನಸುವನುಚ್ಚುವೆ । ಹಿರಿದು ಹಗೆಯುನು ಕೊಂದನೆಂದ
ಬ್ಬರಿಸಿ ಮುಳಿದಡೆ ಮುಳಿಯಲಾಳ್ದನೆನುತ್ತ ಗರ್ಜಿಸಿದ ೪೦

ಸಮೀಪಕ್ಕೆ ಬಂದನು. ೪೦. ಅರ್ಧಸ್ಥಳದಲ್ಲಿ ಹಿಮ್ಮೆಟ್ಟಿದ ಭೂಮಿಯತುದಿಯಲ್ಲಿ ನಿಲ್ಲುವ ಅಗ್ನಿಯಂತೆ ವಾನರಸೇನಾಧಿಪತಿ ನೀಲನು ಕೋಪಗೊಂಡು, "ಬರಲಿ ಬರಲಿ, ಇವನ ಪ್ರಾಣವನ್ನು ತೆಗೆಯುವೆ. ಭಾರಿ ಶತ್ರುವನ್ನು ಕೊಂದವನಿವನು !" ಎಂದು ಅಬ್ಬರಿಸಿ 'ಒಡೆಯನು ಕೋಪಿಸಿಕೊಂಡರೆ ಕೋಪಿಸಿಕೊಳ್ಳಲಿ' ಎಂದು ಗರ್ಜಿಸಿದ.

# ಇಪ್ಪತ್ತೆರಡನೆಯ ಸಂಧಿ

ಸೂಚನೆ ॥ ವೀರ ಧೀರೋದ್ಧತ ನಿಶಾಚರ । ವೀರನತಿಮಥನದಲಿ ವಹ್ನಿಕು
ಮಾರ ಹಳಚಿದು ಹಮ್ಮಯಿಸಿದನು ಕದನಕೇಳಿಯಲಿ

ಕುಶಕುಮಾರಕ ಕೇಳಿದೈ ಕೈ । ಕಸೆಯನಂದನನಂದವನು ಕಂ
ಡಸಮಬಲ ಕಲಿನೀಲ ಪ್ರಳಯದಕಾಲನಂದದಲಿ
ದಶನಪೀಡಿತ ಕಂಪಿತಾಧರ । ನಸಮ ವೀರಾವೇಶ ರೋಪದ
ಮಸಕದಲಿ ಮದವೇರಿ ಮಹಿಜಾಚೋರಗಿಂತೆಂದ ೧

ಎಲ್ಲಿಗೆಲವೋ ಗತಿಯ ಗಾಡಿಯ । ಫುಲ್ಲಣೆಯ ಗರುವಾಯಿ ಬವರದ
ಭುಲ್ಲವಣೆಯ ವಿಲಾಸ ವೈಭವವಾರ ಕೂಡೆನುತ
ನಿಲ್ಲು ನಿಂದವರಾರು ನೋಡಿದಿ । ರಲ್ಲಿ ನಮ್ಮನು ನಮ್ಮ ಬವರದ
ಬಲ್ಲವಿಕೆಯನು ನೋಡಿ ಬಳಿಕೇನಾದಡಾಗೆಂದ ೨

ವಿಶಿಖದಂಗುಲಿಯೊಲಹಿನರೆನಗೆ । ಮುಸುಡ ಮಡಲಿಸಿದಮರುಪದಲಾ
ಶ್ವಸನಬಾಂಧವನಂದನಂಗಿಂತೆಂದನವ ಬಳಿಕ
ವಿಷಮಬಲನಹೆ ಬಂದ ವಿಪಿನಾ । ಕಸರೊಳಂಜಿದೆವಾವು ನಮಗು
ಬ್ಬಸವ ಮಾಡದೆ ಮಾಣೆ ಮನದಲಿ ತೋರುತಿದೆಯೆಂದ ೩

ಸೂಚನೆ॥ ವೀರನೂ ಧೀರೋದ್ಧತನೂ ಆದ ರಾಕ್ಷಸವೀರ ರಾವಣನೊಡನೆ ಮಹಾ ಕಾಳಗದಲ್ಲಿ ಅಗ್ನಿಪುತ್ರ ನೀಲನು ಹೋರಾಡಿ ಕದನದಾಟದಲ್ಲಿ ಮೂರ್ಛೆಹೋದನು. ೧. ಕುಶಕುಮಾರ ಕೇಳಯ್ಯ, ಕೈಕಸೆಯ ಮಗನ ರೀತಿಯನ್ನು ಕಂಡು ಅಸಮಾನ ಬಲಶಾಲಿ ಕಲಿ ನೀಲನು ಪ್ರಳಯದ ಯಮನಂತೆ ಹಲ್ಲುಕಚ್ಚಿ ತುಟಿಗಳನ್ನದುರಿಸುತ್ತ ಭಯಂಕರ ಕೋಪದಿಂದ ಮದಿಸಿ ಸೀತೆಯ ಕಳ್ಳನನ್ನು ಕುರಿತು ಮುಂದಿನಂತೆ ನುಡಿದ. ೨. "ವಂಚಿಸಿ ಎಲ್ಲಿಗೆ ಠೀವಿಯಿಂದ ಹೋಗುವೆಯೊ ? ನಿನ್ನ ಮರುಳುತನದ ಯುದ್ಧವೈಭವವು ಯಾರೊಡನೆ ? ನಿಲ್ಲು, ನಿನ್ನ ಎದುರಿನಲ್ಲಿ ನಿಂತವರಾರೆಂಬುದನ್ನು ನೋಡು. ನಮ್ಮನ್ನೂ ನಮ್ಮ ಯುದ್ಧದ ಕೌಶಲವನ್ನೂ ನೋಡು. ಅನಂತರ ನೀನು ಏನಾದರೂ ಆಗು" ಎಂದ ನೀಲ. ೩. ಬಾಣ ಹಿಡಿದ ಬೆರಳನ್ನು ತೂಗುತ್ತ ಅರೆನಗೆಯ ಮುಖದೊಡನೆ ಕೋಪಗೊಂಡ ರಾವಣನು ಅಗ್ನಿಪುತ್ರ ನೀಲನನ್ನು ಕುರಿತು "ಅಸಮಾನ ಬಲಶಾಲಿಯಾಗಿದ್ದೀಯೆ, ಯುದ್ಧಕ್ಕೆ ಬಂದ ಕಪಿಗಳಿಗೆ ನಾವು ಹೆದರಿಕೊಂಡುಬಿಟ್ಟೆವು, ನೀನು ನಮಗೆ ಕಷ್ಟ ಕೊಡದೆ ಇರುವುದಿಲ್ಲ ಎಂಬುದಾಗಿ ಮನಸ್ಸಿನಲ್ಲಿ ತೋರುತ್ತಿದೆ"

ಖೂಳ ಮರ್ಕಟ ಕೇಳು ಮದಶುಂ । ಡಾಲ ಜೇರ್ಣಿಸಿದವರು ಹೋತಿಗೆ
ಕಾಲನೊಜ್ಜಿಸಿಕೊಂಡುದುಂಟೇ ಪೂರ್ವಕಾಲದಲಿ
ಕಾಲಕಲಿತಗ್ರೀವಸದೃಶ ವಿ । ಶಾಲಬಲ ಸುಗ್ರೀವನಾರಲಿ
ಕಾಲಗಂಡನು ನೋಡು ನೋಡಳಿದವರ ನೀನೆಂದ ೪

ಹೋರಿ ಬದುಕಿದರಿಲ್ಲ ನಮ್ಮಯ । ವೈರದಲಿ ವಿಬುಧಾಸುರೋರಗ
ವೀರರಲಿ ಮಿಕ್ಕಿನ ಮನುಷ್ಯ ಮೃಗಂಗಳೆನಗಿದರೆ
ದಾರಿದೆಗೆ ನಿನ್ನವರೊಡನೆ ಬಲು । ವೀರತನ ನಿನಗುಳ್ಳಡೆಲೆ ಸೆಳೆ
ಗೋರಿಗಲ್ಗಳಲೆಮ್ಮ ತಡೆ ಸೋಜಿಗವದೇನೆಂದ ೫

ಚೋರರಂಗದ ಮಾತು ತಳವಳಿ । ಗೇರಿಯಲಿ ಭೂಷಣವೆ ದೇಹವಿ
ಕಾರರಾತ್ಮಸ್ತುತ್ಯವೆಮ್ಮೊಳು ಧರ್ಮವೇ ನಿನಗೆ
ವಾರಿಜಾಕ್ಷನ ಭೃತ್ಯರಿಗೆ ಭಯ । ಸಾರುವುದೆ ಬಾಯ್ಬಡಿಕತನ ನಿ
ನ್ನೂರವರ ಕೂಡೈಸೆ ನಮ್ಮೊಳು ಸೊರಹಬೇಡೆಂದ ೬

ಕೆಲವು ಕಳವಕ್ಕದಡೆ ಕಡೆಯಲಿ । ನಿಲುವುದೆದೆಯಲಿ ಶೂಲ ಕಳ್ಳರ
ಕೆಲಸವಿದು ಕೇಳೆಲವೊ ನಿನಗಂತಕನ ನಗರಿಯಲಿ
ನಿಲವು ನಿನಗಿನ್ನೇಕೆ ಜಯದ । ಗ್ಗಳಿಕೆ ನಿಲ್ಲೆನುತುಬ್ಬುವಬುಧಿಯ
ಜಲವ ರಭಾಡಿಪ ವಡಬನವೊಲುಬ್ಬಿಬ್ಬಿದನಾ ನೀಲ ೭

ಎಂದು ತಮಾಷೆಮಾಡಿದ. ೪. "ದುಷ್ಟ ಕೋತಿಯೇ, ಕೇಳು. ಹಿಂದಿನ ಕಾಲದಲ್ಲಿ ಮದಿಸಿದಾನೆಯನ್ನು ಗೆದ್ದವರು ಇಂದು ಹೋತನ ಕೈಯಲ್ಲಿ ಕಾಲು ತುಳಿಸಿಕೊಂಡುದುಂಟೇ? ವಿಷಕಂಠಸಮಾನ ವಿಶಾಲಬಲ ಸುಗ್ರೀವನು ಯಾರಿಂದ ಮೃತ್ಯುವನ್ನೈದಿದನು ನೋಡು, ಯುದ್ಧದಲ್ಲಿ ಸತ್ತವರನ್ನು ನೋಡು" ಎಂದ ರಾವಣ. ೫. "ದೇವತೆಗಳು ಅಸುರರು ಮತ್ತು ಉರಗವೀರರಲ್ಲಿ ಯಾರೂ ನಮ್ಮೊಡನೆ ಹೋರಾಡಿ ಬದುಕಿದವರಿಲ್ಲ. ಉಳಿದ ಮನುಷ್ಯರು ಮತ್ತು ಮೃಗಗಳು ನಮ್ಮನ್ನು ಎದುರಿಸಬಹುದೆ ? ನಿನ್ನವರೊಡನೆ ದಾರಿ ಬಿಡು. ನಿನ್ನಲ್ಲಿ ಪರಾಕ್ರಮವಿದ್ದರೆ ಬೆಣಚುಕಲ್ಲುಗಳನ್ನು ಹೊಡೆದು ನಮ್ಮನ್ನು ಅಡ್ಡ ಹಾಕು, ಆಶ್ಚರ್ಯವೇನು" ಎಂದ ರಾವಣ. ೬. "ಕಳ್ಳರ ಜಂಬದ ಮಾತು ತಳವಾರರ ಕೇರಿಯಲ್ಲಿ ಒಪ್ಪುವುದೇ ? ದೇಹವಿಕಾರ ಹೊಂದಿದವರು ನಮ್ಮೊಡನೆ ಆತ್ಮಪ್ರಶಂಸೆ ಮಾಡಿಕೊಳ್ಳುವುದು ಧರ್ಮವೇ ? ಕಮಲನಯನನ ಸೇವಕರಿಗೆ ಭಯವೆಲ್ಲಿಯದು. ನಿನ್ನ ಊರಿನವರೊಡನೆ ಬಾಯಿಗೆ ಬಂದಂತೆ ಹರಟು. ನಮ್ಮೊಡನೆ ಜಂಬ ಕೊಚ್ಚಿಕೊಳ್ಳಬೇಡ" ಎಂದ ನೀಲ. ೭. "ಮೊದಲು ಕೆಲವು ಕಳ್ಳತನಗಳಲ್ಲಿ ಏಳಿಗೆ ಹೊಂದಿದರೂ ಕೊನೆಗೆ ಕಳ್ಳನ ಎದೆಗೆ ಶೂಲ ನೆಟ್ಟೇ ನೆಡುವುದು. ನಿನ್ನದು ಕಳ್ಳರ ಕೆಲಸ. ನಿನಗೆ ಯಮನ ಪಟ್ಟಣದಲ್ಲಿ ನಿವಾಸವಾಗುವುದು. ನಿನಗಿನ್ನೇಕೆ ಗೆಲ್ಲುವ ಹಿರಿಮೆ, ನಿಲ್ಲು" ಎಂದು ಉಕ್ಕುವ ಸಮುದ್ರದ ನೀರನ್ನು ಹೊರಚೆಲ್ಲುವ ಬಡಬಾಗ್ನಿಯಂತೆ ನೀಲ ಉಬ್ಬಿ

ಬಱಿಯ ವೀರದ ಮಾತಿಲೆಮ್ಮನು । ಜಱಿದು ನುಡಿವಡೆ ನೀನೆ ನೋಡಾ
ಬೆಱಗನೆನುತುಬ್ಬಱಿದು ಬೊಬ್ಬಱಿದೆಚ್ಚನಗ್ನಿಜನ
ಇಱಿತದಿಂಧನಕಗ್ನಿ ನೋವೆಂ । ದುಱಿಸುವುದೆ ಲವ ಕೇಳು ಮೇಲ್ವಾ
ಯ್ದೆಱಗಿದನು ಮಝು ಭಾಪೆನಲು ಸುರರಾ ದಶಾನನನ ೮

ಬಳಿಕ ಬಲಿದುದು ಬವರವಿಬ್ಬರಿ । ಗಳವಿಯುಲಿ ನಂದೀಶ್ವರಂಗ
ಗ್ಗಳದ ವಿದ್ಯುನ್ಮಾಲಿಗಂದಾ ತ್ರಿಪುರದಹನದಲಿ
ಬಲಿದ ಬವರಕೆ ನೂಱುಮಡಿಯೆನೆ । ಕಲುಮರನ ಕಣೆಗಳ ಕಠೋರದ
ಹಳಚಿಕೆಗಳುಗ್ಘಡಿಸುತಿರ್ದವು ವೀರರಾಹವದ ೯

ಸೆಳೆದಿಡುವ ಗಿರಿಗಳ ಮಹೀಜಾ । ವಳಿಯುಲಂಬರ ತುಂಬಿತೆಸುಗೆಯ
ಚಳ ಶಿಲೀಮುಖಜಾಲದಲಿ ಜಡಿದುದು ದಿಶಾನೀಕ
ಅಳವಿಯುಟ್ಟಸೆ ನೆಗೆದು ಗಿಡುಗನು । ಗಿಳಿಗೆ ಹಾಯ್ವಂದದಲಿ ನೆಗೆದ
ಪ್ಪಳಿಸಿ ಬಿಗಿದನು ನೀಲ ಬಾಲದಲಾ ದಶಾನನನ ೧೦

ಬೆಳೆದನಂಬರಕಾಗಿ ಸುಮನೋ । ಲಲನೆಯರ ಸುಮ್ಮಾನದಲಿ ಜೋ
ಗುಳಕೆ ಕರೆದನು ತೂಗಿದನು ತುದಿವಾಲದಲಿ ಖಳನ
ಅಳದಿರೆನ್ನಯ ಕಂದ ಜೋ ಮ । ಕ್ಕಳ ಮಹಾಮಾಣಿಕವೆ ಜೋ ಮೂ
ಗಳಿದವಳ ಕಡುಮುದ್ದೆ ಸಿತಗರ ಶಿಶುವೆ ಜೋಯೆಂದ ೧೧

ನಿಂದ ಗರ್ಜಿಸಿದನು. ೮. "ಬರಿಯ ಪರಾಕ್ರಮದ ಮಾತಿನಿಂದ ನಮ್ಮನ್ನು ಹೀಯಾಳಿಸಿ ಮಾತನಾಡಿದೆ. ಅದರ ಆಶ್ಚರ್ಯವನ್ನು ಈಗ ನೀನೇ ನೋಡು" ಎನ್ನುತ್ತ ಹುರುಪಿನಿಂದ ಬೊಬ್ಬಿರಿದು ರಾವಣನು ನೀಲನ ಮೇಲೆ ಬಾಣಗಳನ್ನು ಬಿಟ್ಟನು. ಬೆಂಕಿಗೆ ಸೌದೆಯನ್ನು ನೂಕಿದರೆ ಅದು ನೋವಾಯಿತು ಎಂದು ಸಹಿಸಿಕೊಳ್ಳುವುದೆ. ಲವ ಕೇಳು' ದೇವತೆಗಳು 'ಮಝು, ಭಾಪು' ಎಂದು ಹೊಗಳುತ್ತಿರಲು ನೀಲನು ಮುನ್ನುಗ್ಗಿ ರಾವಣನ ಮೇಲೆ ಬಿದ್ದನು ಎಂದು ವಾಲ್ಮೀಕಿಗಳು ನುಡಿದರು. ೯. ಹಿಂದೆ ತ್ರಿಪುರದಹನ ಕಾಲದಲ್ಲಿ ನಂದೀಶ್ವರನಿಗೂ ವಿದ್ಯುನ್ಮಾಲಿಗೂ ಆದ ಯುದ್ಧಕ್ಕೆ ನೂರುಮಡಿಯಷ್ಟು ಎನ್ನುವಂತೆ ನೀಲ ರಾವಣರ ನಡುವೆ ಬಲವಾದ ಕಾಳಗ ನಡೆಯಿತು. ಆ ವೀರರ ಯುದ್ಧದಲ್ಲಿ ಕಲ್ಲುಮರಗಳು ಮತ್ತು ಬಾಣಗಳು ಒಂದಕ್ಕೊಂದು ಜೋರಾಗಿ ತಗಲುವ ಆರ್ಭಟ ಕೇಳಿಸಿತು. ೧೦. ಜಗ್ಗಿ ಹೊಡೆಯುವ ಬೆಟ್ಟ ಮರಗಳಿಂದ ಆಕಾಶ ತುಂಬಿತು. ಬಿಡುವ ವೇಗವಾದ ಬಾಣಗಳ ಸಮೂಹವು ದಿಕ್ಕುಗಳನ್ನು ವ್ಯಾಪಿಸಿತು. ಸಾಮರ್ಥ್ಯದಿಂದ ಹಿಡಿದುಕೊಳ್ಳಲು ಗಿಡುಗವು ನೆಗೆದು ಗಿಳಿಯ ಮೇಲೆರಗಿದಂತೆ ನೀಲನು ನೆಗೆದು ಅಪ್ಪಳಿಸಿ ಬಾಲದಿಂದ ದಶಮುಖನನ್ನು ಹಿಡಿದುಕೊಂಡನು. ೧೧. ಆಕಾಶಕ್ಕೆ ಬೆಳೆದು ನೀಲನು ದೇವತಾಸ್ತ್ರೀಯರನ್ನು ಆನಂದದಿಂದ ಜೋಗುಳ ಹಾಡಲು ಕರೆದು ತನ್ನ ತುದಿಬಾಲದಲ್ಲಿ ರಾವಣನನ್ನು ತೊಟ್ಟಿಲಿನಲ್ಲಿಟ್ಟು ತೂಗುವಂತೆ ತೂಗಿದನು. "ಅಳಬೇಡ ನನ್ನ ಕಂದ, ಜೋಜೋ. ಮಕ್ಕಳ ಮಹಾಮಾಣಿಕ್ಯವೆ, ಜೋಜೋ. ಮೂಗುಹರಕಿಯ ಮುದ್ದಿನವನೆ, ದುಷ್ಟರ

ಹೋರಿ ಜೋಜೋ ಹರಿಹಯನ ಬಡಿ । ಹೋರಿ ಜೋಜೋ ಬಲಿಯ ವಿಮಲಾ
ಗಾರದಬಲಾಜನದ ಜೋಳಿಗೆಯರಸ ಜೋಯೆನುತ
ಚಾರು ಮೇನಕೆ ಮುಖ್ಯ ಸುಮನೋ । ನಾರಿಯರು ಸ್ವರವೆತ್ತಿ ತೂಗಿದ
ರಾ ರಣಾಂಗಣ ಮಧ್ಯದಲಿ ಲಂಕಾಪುರಾಧಿಪನ ೧೨

ಇಳುಹಿದನು ಬಳಿಕವನ ಮಣಿರಥ । ದೊಳಗೆ ಬಾಲದಲಾ ವರೂಥದ
ಹಳವಿಗೆಯ ಕಂಬದಲಿ ಬಿಗಿದಿಂತೆಂದನಸುರಂಗೆ
ಎಲವೊ ರಕ್ಕಸ ನಾವು ರಣಕತಿ । ಬಲರೊ ದುರ್ಬಲರೋ ಕುಠಾರದಿ
ನಿಳಿಕೆಗಂಡೆಯಲಾ ಮೃಗಾಧಮರೆಂದು ನೀ ನಮ್ಮ ೧೩

ಏನು ನಾವ್ ತರುಮೃಗವೆ ರಕ್ಕಸ । ನೀನೆ ಹೇಳಾ ನಾಚಬೇಡ ವಿ
ಮಾನದಮರರು ಕಾಣರಿನ್ನೂ ನಮ್ಮ ಕೆಲಸಗಳ
ಜಾನಕಿಯ ಕಪಟದಲಿ ಕಳವಿನ । ಕೈನೆಗಹಿನಲಿ ಕೊಂಡುಹೋದ ಸು
ಮಾನವೆಲ್ಲಿಯೆನುತ್ತ ಮತ್ತೆಜಗಿದನು ರಕ್ಕಸನ ೧೪

ಎಱಗಲಾ ಖಳರಾಯನುಗಿದು । ಬ್ಬಱಿದು ಹೊಯ್ದನು ಚಂದ್ರಹಾಸದ
ಲುಱುಗಿ ತಪ್ಪಿಸಿಕೊಂಡು ತಿವಿದನು ಮತ್ತೆ ರಕ್ಕಸನ
ಮುಱಿದವಣಲಿನ ಹಲ್ಲು ಹಲುಮೊರೆ । ದಿಱಿದನವ ಸುರಗಿಯಲಿ ಸುರಗಿಯ
ನುಱುಬಿ ತಿವಿದನು ಮತ್ತೆ ಮಧ್ಯದ ಶಿರವನಾ ಖಳನ ೧೫

ಮಗುವೆ, ಜೋ" ಎಂದ ನೀಲ. ೧೨. "ಹೋರಿ ಜೋಜೋ, ಇಂದ್ರನ ಬಡಿಹೋರಿ ಜೋಜೋ, ಬಲಿಯ ಮನೆಯಸ್ತ್ರೀಯರ ಜೋಳಿಗೆಯರಸ ಜೋ" ಎನ್ನುತ್ತ ಮೇನಕಿ ಮೊದಲಾದ ಪ್ರಮುಖ ದೇವತಾಸ್ತ್ರೀಯರು ದನಿಯೆತ್ತಿ ಹಾಡುತ್ತ ಲಂಕಾಪಟ್ಟಣದಧಿಪತಿಯನ್ನು ಆ ಯುದ್ಧರಂಗದ ನಡುವೆ ತೂಗಿದರು. ೧೩. ಅನಂತರ ನೀಲನು ರಾವಣನನ್ನು ಬಾಲದ ಮೂಲಕ ಅವನ ರತ್ನಮಯ ರಥದೊಳಕ್ಕೆ ಇಳಿಸಿ ರಥದ ಧ್ವಜಸ್ತಂಭಕ್ಕೆ ಕಟ್ಟಿ ಹಾಕಿ, "ಎಲವೋ ರಾಕ್ಷಸ, ನಾವು ಯುದ್ಧದಲ್ಲಿ ಅತಿಬಲಶಾಲಿಗಳೋ ಅಥವಾ ದುರ್ಬಲರೋ ? ನಮ್ಮನ್ನು ಮೃಗಾಧಮರು ಎಂದು ಕಠಿಣವಾಗಿ ತಾತ್ಸಾರದಿಂದ ಕಂಡೆಯಲ್ಲ" ಎಂದು ರಾವಣನಿಗೆ ಹೇಳಿದ. ೧೪. "ಏನು, ನಾವು ಮರದ ಮೇಲೆ ಸಂಚರಿಸುವ ಮೃಗವೆ, ರಾಕ್ಷಸ ನೀನೇ ಹೇಳು, ನಾಚಿಕೊಳ್ಳಬೇಡ. ಆಕಾಶದಲ್ಲಿ ವಿಮಾನಗಳಲ್ಲಿರುವ ದೇವತೆಗಳು ಇನ್ನೂ ನಮ್ಮ ಕಾರ್ಯವನ್ನು ಕಾಣರು. ಜಾನಕಿಯನ್ನು ಮೋಸದಿಂದ ಕದ್ದು ಕೈಗಳನ್ನೆತ್ತಿ ಹಿಡಿದುಕೊಂಡು ಹೋದ ಆ ಉತ್ಸಾಹವೆಲ್ಲಿ ?" ಎನ್ನುತ್ತ ಪುನಃ ನೀಲನು ರಾವಣನ ಮೇಲೆ ಬಿದ್ದನು. ೧೫. ನೀಲನು ಮೇಲೆ ಬೀಳಲು ರಾಕ್ಷಸರಾಜನು ಚಂದ್ರಹಾಸಖಡ್ಗವನ್ನು ಸೆಳೆದು ಉತ್ಸಾಹದಿಂದ ಹೊಡೆದನು. ಬಾಗಿ ಖಡ್ಗದ ಏಟನ್ನು ತಪ್ಪಿಸಿಕೊಂಡ ನೀಲನು ಪುನಃ ರಾವಣನನ್ನು ತಿವಿದನು. ನೀಲನ ಏಟಿಗೆ ರಾವಣನ ದವಡೆಯ ಹಲ್ಲುಗಳು ಮುರಿದವು. ಆಗ ರಾವಣನು ಹಲ್ಲುಕಚ್ಚಿ ಸುರಗಿಯಿಂದ ನೀಲನನ್ನು ಇರಿದನು. ನೀಲನು ಸುರಗಿಯನ್ನು ಹಾರಿಸಿ ರಾವಣನ ಮಧ್ಯದ ತಲೆಯನ್ನು ತಿವಿದನು,

ಒಟ್ಟಿ ಮುರಿದುದು ಸೀಸಕದ ತಲೆ । ಯುಟ್ಟಿಗೊಂಡುದು ಬಗೆವನೇ ಜಗ
ಜಟ್ಟಿ ರಕ್ಕಸರಾಯ ಚೀಲಾಯುದಲಿ ಶಿಖಿಸುತನ
ಹೊಟ್ಟೆಯನು ತಿವಿದಿಳೆ ಬಿರಿಯೆ ಬೊ । ಬ್ಬಿಟ್ಟನಾ ಕೈಯೊಡನೆ ಕಪಿ ಬಲು
ಬೆಟ್ಟವನು ಸಿಡಿಲೆಱಗುವವೊಲೆಱಗಿದನು ರಕ್ಕಸನ ೧೬

ಒಲೆವುತಿಟ್ಟಿಯಲಿಟ್ಟನವನದ । ನೊಲೆದು ತಪ್ಪಿಸಿಕೊಂಡು ಕೊಂಡನು
ಕಳಚಿ ಕದಪಿನ ಚಿಪ್ಪ ಕಪಿಗಳದೇವ ಕಲಿನೀಲ
ಕುಲಿಶಬಂಧ ಗದಾಯುಧದಲವ । ನಳುಕಲಪ್ಪಳಿಸಿದನು ಕಪಿಯುದ
ಕಳಚಿ ರಗಾರ್ಗಂತವನು ತಿವಿದನು ತೀವ್ರ ಮುಷ್ಟಿಯಲಿ ೧೭

ತಿವಿದ ಕೈಯೊಡನಸುರಪತಿ ಮಱು । ದಿವಿಗುಳಿಗೆ ಕೈಗೂಡದಂತಿರೆ
ತಿವಿದನಪಸವ್ಯದ ಸಗಾಢದ ಮುಷ್ಟಿಯಲಿ ಕಪಿಯು
ತಿವಿದ ಘಾಯಕೆ ಸಿಡಿದ ಶಿಖರಿಗೆ । ಸವಡಿಯೆನಿಸಿದನನಿಲಸಖಸಂ
ಭವನು ಸಿಡಿದಲ್ಲಿಂದ ಹರಿತಂದೆಱಗಿದನು ಖಳನ ೧೮

ಚಟುಳಬಲ ಮತ್ತೊಡನೆ ಗಗನಕೆ । ಪುಟನೆಗೆದು ಪೌಲಸ್ತ್ಯಜನ ಕೇ
ವಟಿಯನಪ್ಪಳಿಸಿದನು ಚಪ್ಪರಿಸಿದನು ಭುಜಯುಗವ
ಲಟಕಟಿಸಿ ಖಳರಾಯ ಕಪಿಚಾ । ವಟೆಯು ಚಪಳಕೆ ನಮ್ಮೊಡನೆ ವಿ
ಸ್ಫುಟವೆ ವೀರನ ಪರಿಯ ನೋಡೆನುತೊದೆದನಗ್ನಿಜನ ೧೯

೧೬. ರಾವಣನ ಶಿರಸ್ತ್ರಾಣದ ಅಂಚು ಮುರಿಯಿತು ; ತಲೆಯು ಮುಂದದೊಳಕ್ಕೆ ಕುಸಿಯಿತು. ಆದರೆ ಜಗಜಟ್ಟಿ ರಾಕ್ಷಸರಾಜನು ಇದನ್ನು ಲಕ್ಷಿಸುವನೇ ? ಕಿರುಗತ್ತಿಯಿಂದ ನೀಲನ ಹೊಟ್ಟೆಯನ್ನು ಚುಚ್ಚಿ ಭೂಮಿ ಬಿರುಕುಬಿಡುವಂತೆ ಆರ್ಭಟಿಸಿದನು. ಆದರೆ ಆ ಕೂಡಲೆ ನೀಲನು ಪರ್ವತಕ್ಕೆ ಸಿಡಿಲು ಎರಗುವಂತೆ ರಾವಣನ ಮೇಲೆರಗಿದನು. ೧೭. ದೇಹವನ್ನು ಒಲೆದು ರಾವಣನು ನೀಲನನ್ನು ಈಟಿಯಿಂದ ಹೊಡೆದನು, ಕಲಿ ನೀಲನು ಮೈಯನ್ನು ಬಾಗಿಸಿ ಏಟನ್ನು ತಪ್ಪಿಸಿಕೊಂಡು ಕೆನ್ನೆಯ ಚಿಪ್ಪು ಕತ್ತರಿಸುವಂತೆ ಈಟಿಯನ್ನು ಸೆಳೆದುಕೊಂಡುಬಿಟ್ಟನು. ವಜ್ರಾಯುಧದ ಕಟ್ಟನ್ನು ಬಿಗಿದ ಗದಾಯುಧದಿಂದ ರಾವಣನು ನೀಲನನ್ನು ಅಪ್ಪಳಿಸಿದನು. ನೀಲನು ಅದನ್ನು ತಪ್ಪಿಸಿಕೊಂಡು ಬಲವಾದ ಮುಷ್ಟಿಯಿಂದ ರಾವಣನ ಕಿವಿಯ ಬುಡವನ್ನು ಗುದ್ದಿದನು. ೧೮. ನೀಲನು ತಿವಿದ ತಕ್ಷಣ ರಾವಣನು ಪುನಃ ಅವನ ತಿವಿತಕ್ಕೆ ಅವಕಾಶ ದೊರೆಯದಂತೆ ಬಿಗಿದ ಬಲಗೈ ಮುಷ್ಟಿಯಿಂದ ಹೊಡೆದನು. ರಾವಣನು ಹೊಡೆದ ಏಟಿಗೆ ನೀಲನು ಸಿಡಿದ ಬೆಟ್ಟಕ್ಕೆ ಸಮನೆನಿಸಿ ದೂರ ಎಸೆಯಲ್ಪಟ್ಟನು. ನೀಲನು ಅಲ್ಲಿಂದ ಹಾರಿ ಪುನಃ ಬಂದು ರಾವಣನ ಮೇಲೆರಗಿದನು. ೧೯. ಶೀಘ್ರ ಬಲಶಾಲಿ ನೀಲನು ಪುನಃ ಗಗನಕ್ಕೆ ನೆಗೆದು ರಾವಣನ ಕೇವಟಿ (?) ಯನ್ನು ಅಪ್ಪಳಿಸಿ ಭುಜಗಳನ್ನು ತಟ್ಟಿದನು. ಉದ್ರೇಕಗೊಂಡ ರಾವಣನು 'ಉದ್ಧಟ ಕಪಿಯ ಚಾಪಲ್ಯಪ್ರದರ್ಶನ ನಮ್ಮೆದುರಿಗೆ ? ವೀರನ

ಒದೆದ ಪದಹತಿಗೀತನಸು ಕದ । ಬದಿಸಿ ನೊಂದುದು ನೊಂದವೇಳೆಯು
ಲೊದಗಿದನು ರಥಕಾಗಿ ಸಾರಥಿ ಚಾಚಿದನು ರಥವ
ಅದಱ ಪದನನು ಕಂಡು ತುದಿವಾ । ಲದಲಿ ಬಳಸಿದು ಬೀದಿವರಿಗಳ
ಕುದುರೆಗಳ ಕಾಲ್ಗಳಿಗೆ ಬಾಲವ ಹಾಯ್ಕಿದನು ನೀಲ ೨೦

ಮುಗ್ಗಿ ಕೆಡೆಯಲು ಕುದುರೆ ಸೂತನ । ಬಗ್ಗಿಸಿದನಸುರೇಂದ್ರನವನಾ
ಹಗ್ಗಗಳ ಹಮ್ಮುಗೆಯ ಸಡಿಲಿಸಿ ಹಯವನಬ್ಬರಿಸೆ
ಹಿಗ್ಗದೆಗೆದುದು ಬಾಲ ಹಿಂದಕೆ । ತಗ್ಗಿ ನೋಡಿದನಸುರ ಕಂಡಿಳಿ
ದಗ್ಗಳದ ಖಡುಗದಲಿ ಹೊಯ್ದನು ಹವ್ಯವಾಹದನ ೨೧

ಉಗಿದು ಬಾಲವನಸುರರಾಯನ । ಹೆಗಲಿಗುಪ್ಪರಿಸಿದನು ಮಕುಟವ
ನುಗಿದು ಬಿಸುಟನು ಬೀದಿವರಿದನು ಬಹುಶಿರಂಗಳಲಿ
ನೆಗೆದು ಕೂಬರತುದಿಗೆ ಕುದುರೆಯ । ನೊಗನ ಸಡಿಲಿಸಿ ಸಾರಥಿಯನಂ
ಘ್ರಿಗಳಲೊದೆದಂಬುಗಳ ಕಂಬುಗೆಯಿಂದ ಬಱಿಕೈದು ೨೨

ಹಿಡಿದ ಶಸ್ತ್ರವನುಗಿದು ಕೆಲಬಲ । ಕಿಡಿಕಿ ಕೀಲಚ್ಚುಗಳ ಕಳೆಕಳೆ
ದಡಿಮಗುಚಿದನು ತೇರ ತವಕಿಸುವಸುರವಲ್ಲಭನ
ಮುಡುಹು ಮುಸುಡೆಡೆ ಕೊರಳು ಕಂಕುಳು । ಹೆಡಕುಗಳ ಬಾರಿಸಿ ಭಯಾನಕ
ವಡಸೆ ಗರುವಾಯ್ಗೆಡಿಸಿ ಗೊಂಗಲಗೊಳಿಸಿದನು ನೀಲ ೨೩

ರೀತಿಯನ್ನು ನೋಡು' ಎನ್ನುತ್ತ ನೀಲನನ್ನು ಒದೆದನು. ೨೦. ರಾವಣನು ಕಾಲಿನಿಂದ ಒದೆದ ಏಟಿಗೆ ನೀಲನ ಪ್ರಾಣವು ಕಳವಳದಿಂದ ನೊಂದಿತು. ಅವನು ನೊಂದ ಸಮಯವನ್ನು ನೋಡಿ ರಾವಣನು ರಥವನ್ನು ಹತ್ತಲು ಸಾರಥಿಯು ರಥವನ್ನು ಮುಂದಕ್ಕೆ ನುಗ್ಗಿಸಿದನು. ಅದನ್ನು ಕಂಡ ನೀಲನು ತುದಿಬಾಲದಿಂದ ಓಡುತ್ತಿದ್ದ ಕುದುರೆಗಳ ಕಾಲುಗಳಿಗೆ ಬಾಲವನ್ನು ಸುತ್ತಿದನು. ೨೧. ಕುದುರೆಗಳು ಮುಗ್ಗುರಿಸಿ ಬೀಳಲು ರಾಕ್ಷಸೇಶ್ವರನು ಸಾರಥಿಯನ್ನು ಗದರಿಸಿದನು. ಸಾರಥಿಯು ಹಗ್ಗಗಳ ಎಳೆತವನ್ನು ಸಡಿಲಿಸಿ ಕುದುರೆಯನ್ನು ಅಬ್ಬರಿಸಿದನು. ಆದರೆ ಬಾಲವು ತಡೆಹಾಕಿತು. ರಾವಣನು ಹಿಂದಕ್ಕೆ ಬಗ್ಗಿ ನೋಡಿದನು, ಬಾಲವನ್ನು ನೋಡಿ ಕೆಳಕ್ಕೆ ಇಳಿದುಬಂದು ನೀಲನನ್ನು ಖಡ್ಗದಿಂದ ಹೊಡೆದನು. ೨೨. ಕುದುರೆಯ ಕಾಲುಗಳಿಂದ ಬಾಲವನ್ನು ಸೆಳೆದುಕೊಂಡು ನೀಲನು ರಾವಣನ ಹೆಗಲಿಗೆ ನೆಗೆದನು. ಅವನ ಕಿರೀಟಗಳನ್ನು ಕಿತ್ತೆಸೆದು ರಾವಣನ ಹತ್ತುತಲೆಗಳ ಮೇಲೂ ಓಡಾಡಿದನು. ಅಲ್ಲಿಂದ ಮೂಕಿಯ ತುದಿಗೆ ನೆಗೆದು ಕುದುರೆಗಳ ನೊಗವನ್ನು ಬಿಚ್ಚಿ ಸಾರಥಿಯನ್ನು ಕಾಲುಗಳಿಂದ ಒದೆದು ರಥದ ಸುತ್ತ ಹಾಕಿದ ಕಟಕಟೆಯ ಒಳಗಿನ ಬಾಣಗಳನ್ನು ಹೊರಕ್ಕೆ ಎಸೆದು ರಥವನ್ನು ಬರಿದು ಮಾಡಿದ. ೨೩. ರಾವಣನು ಹಿಡಿದುಕೊಂಡಿದ್ದ ಶಸ್ತ್ರಗಳನ್ನು ಕಿತ್ತು ಅಕ್ಕಪಕ್ಕಗಳಿಗೆ ಜೋರಾಗಿ ಎಸೆದು ರಥದ ಕೀಲಚ್ಚುಗಳನ್ನು ಕಿತ್ತು ರಥವನ್ನು ಉರುಳಿಸಿದನು. ರಥಕ್ಕಾಗಿ ಕಾತರಗೊಂಡ ರಾವಣನ ಭುಜ, ಮುಖ, ಕತ್ತು, ಕಂಕುಳು, ಹೆಕ್ಕತ್ತುಗಳ ಮೇಲೆ ಬಾರಿಸಿ ಭಯ

ಎಲವೊ ನೀನೇ ರಾಘವೇಂದ್ರನ । ಕಲಹಕೊದಗುವ ಭಟನು ವಿಟತನ
ದಲವರಿಕೆಯುಲಿ ವಿಷಯಲಂಪಟತನದ ತವಕದಲಿ
ಇಳೆಯ ಖೂಳರ ಖೂಳ ಹೋಗೆಂ । ದುಲಿದು ಭುಜವನು ನೆಗಪಿ ನವಿತಾಂ
ಗುಲಿಗಳನು ಹಾಯ್ಕಿದನು ನಡುನೆತ್ತಿಯುಲಿ ದಶಶಿರನ ೨೪

ಗೊಳ್ಳೆನುತ ಸುರವಾರನಾರಿಯು । ರಳ್ಳೆಗಳ ಹಿಡಿದುಬ್ಬುನಗೆಯುಲಿ
ಗುಳ್ಳಿಟಿದು ಗುಹಿಲಿಕ್ಕಿದರು ಪರಿಲೇಸುಲೇಸೆನುತ
ಬಳ್ಳಿತಲೆಗಳ ಮೇಲೆ ಕಪಿ ಕೈ । ಸೊಳ್ಳೆಗಳ ಸಡಗರಿಸಿ ಹೆಂಗುಸು
ಗಳ್ಳ ಹೋಗೆನುತೊದೆದನಂಘ್ರಿಯುಲಾ ದಶಾನನನ ೨೫

ನಾಣುಗೇಡಿಗರಸುರರುಟಿ ಕ । ಟ್ಟಾಣಿ ನೀನವರೊಳಗೆ ಲೋಕ
ಪ್ರಾಣಜನ ಪುರುಷಪ್ರತಾಪದ ಪಾಡುಪಂಥಗಳ
ಪಾಣಿಯುಲಿ ಪಂಟಿಸಿದ ಹಲುಗಳ । ಕಾಣುತಟಿತಟಿತಾಹವದ ನಿ
ತ್ರಾಣದಲಿ ಕಾದುವನು ಭಂಡನೊ ಭಟನೊ ನೀನೆಂದ ೨೬

ಸುಡುಸುಡೆಲವೋ ಖೂಳ ಹಾವಿನ । ಹೆಡೆವಣಿಯುಲಾ ಸೀತೆ ಕೂರಿತ
ಖಡುಗಧಾರೆಯು ಮಧುವಲಾ ಹರಿಗಳದ ಘಂಟೆಯುಲ
ಸಿಡಿಲ ಕಿವಿಕುಂಡಲವಲಾ ಲಯ । ಮೃಡನ ಪಣೆಗಣ್ಣುರಿಯುಲಾ ಖಳ
ರಡವಿಗಿಕ್ಕಿದ ಕಿಚ್ಚು ಕಾವಿಃಸಿ ಕೆಟ್ಟೆ ನೀನೆಂದ ೨೭

ಹತ್ತುವಂತೆ ಮಾಡಿ ಅವನ ಹಿರಿಮೆಯನ್ನು ಕುಗ್ಗಿಸಿ ಕಂಗೆಡಿಸಿದನು ನೀಲ; ೨೪. "ಕಾಮುಕತನವ ಮನದಾಸೆಯಿಂದ ಇಂದ್ರಿಯಭೋಗಾಸಕ್ತಿಗೆ ಕಾತರನಾದ ನೀನೇ ರಾಘವೇಂದ್ರನೊಡನೆ ಯುದ್ಧಮಾಡುವ ವೀರನು? ಜಗತ್ತಿನ ದುಷ್ಟರ ದುಷ್ಟ ಹೋಗು" ಎಂದು ಹೇಳಿ ರಾವಣನ ಭುಜವನ್ನೆತ್ತಿ ಬೆರಳುಗಳನ್ನು ಬಾಗಿಸಿ ರಾವಣನ ನಡುನೆತ್ತಿಯಲ್ಲಿಟ್ಟನು. ೨೫. "ರೀತಿ ಚೆನ್ನಾಗಿದೆ, ಚೆನ್ನಾಗಿದೆ!" ಎಂದು ದೇವ ಲೋಕದ ವೇಶ್ಯೆಯರು ಗೊಳ್ಳೆನ್ನುತ್ತ ಅಳ್ಳೆಗಳನ್ನು ಹಿಡಿದುಕೊಂಡು ಕೇಕೆಹಾಕಿ ಜೋರಾಗಿ ಬಿದ್ದು ಬಿದ್ದು ನಕ್ಕರು. ರಾವಣನ ಸಾಲುತಲೆಗಳ ಮೇಲೆ ಕೈಬೆರಳು ಗಳನ್ನಾಡಿಸಿ "ಹೆಂಗಸುಗಳ್ಳ ಹೋಗು" ಎನ್ನುತ್ತ ನೀಲನು ರಾವಣನನ್ನು ಕಾಲುಗಳಿಂದ ಒದ್ದನು. ೨೬. "ರಾಕ್ಷಸರು ನಾಚಿಗೆಗೆಟ್ಟವರು ; ಅವರಲ್ಲಿ ನೀನು ಕಟ್ಟಾಣಿ. ಜಗತ್ತಿಗೆ ಪ್ರಾಣಕೊಡುವ ಪುರುಷಪರಾಕ್ರಮದ ಛಲಗಾರರ ಕೈಯಲ್ಲಿ ಹಲ್ಲುಗಳನ್ನು ಉದುರಿಸಿ ಕೊಂಡುದನ್ನು ನೋಡಿ ತಿಳಿದೂ ತಿಳಿದೂ ದೌರ್ಬಲ್ಯದಿಂದ ಯುದ್ಧಮಾಡುವ ನೀನು ಭಂಡನೋ ವೀರನೋ?" ಎಂದ ನೀಲ. ೨೭. "ಸುಡು ಸುಡು, ಲೋ ನೀಚ, ಸೀತೆಯು ಹಾವಿನಹೆಡೆಯ ರತ್ನ, ಹರಿತವಾದ ಖಡ್ಗದ ಬಾಯಿಗೆ ಸವರಿದ ಜೇನು, ಸಿಂಹದ ಕೊರಳಿನ ಘಂಟೆ, ಸಿಡಿಲಿನ ಕಿವಿಯ ಆಭರಣ, ಪ್ರಳಯರುದ್ರನ ಹಣೆಗಣ್ಣಿನ ಉರಿ. ರಾಕ್ಷಸರು ಕಾಡಿಗೆ ಇಟ್ಟ ಬೆಂಕಿಯನ್ನು ಬಯಸಿ ಕೆಟ್ಟೆ ನೀನು" ಎಂದ ನೀಲ.

ಬಿಟ್ಟೆನೆಲವೋ ನಿನ್ನ ನಾಚಿಕೆ । ಗೆಟ್ಟವನೆ ಹೋಗಸುರವಂಶಘ
ರಟ್ಟನಲಿ ಹೋಗಾ ನೃಪಾಲನ ರಣಕೆ ಗುರಿ ನೀನು
ಉಟ್ಟುಕಟ್ಟಲಿಕಸ್ತ್ರಶಸ್ತ್ರವ । ಕೊಟ್ಟಲಂಕರಿಸೆಲವೊ ನಿನ್ನನು
ಮುಟ್ಟೆನಂಜದಿರೆನುತ ಬೋಳೈಸಿದನು ಸಾರಥಿಯ ೨೮

ಬಳಿಕಲವನೀ ಮಾತ ಕೇಳುತ । ಕಳಲಿದಸುರ ವರೂಥವನು ಪಡಿ
ತಳಿಸಿ ಸಿಂಗಾರಿಸಿದನಾಳ್ದನ ರಥವನೇಱಿಸಿದ
ಕಳಚಿ ಗವಸಣಿಗೆಯನು ಚಾಪವ । ಕೊಳಿಸಿ ಕಣೆಗಳನಿತ್ತು ತುರಗಾ
ವಳಿಯ ಚಪ್ಪರಿಸಿದನು ವಿದ್ಯುಜ್ಜಿಹ್ವನಾಹವಕೆ ೨೯

ಅಳಲುಗಿಡಿಯಿಂದುಗಿದನವ ಬ । ತ್ತಳಿಕೆಯಿಂದಾಗ್ನೇಯಬಾಣವ
ನಿಳುಹಿ ತಿರುವಿನೊಳಾರ್ದು ಹಿಂಗಿದು ಹೋಹ ಸಮಯದಲಿ
ಕಳವಿನಲಿ ಕಮಲಾಸನಾದ್ಯರು । ಖಳನನಲ್ಲೆಂದೊದಱುತಿರೆ ಕಳ
ವಳಿಗನದ ಕೈಕೊಳ್ಳದೆಚ್ಚನು ವಹ್ನಿನಂದನನ ೩೦

ಓಸರಿಸಿ ಕೆಲಸಾರ್ದು ಪದವಿ । ತ್ತಾ ಸಮಾರಸಖಾತ್ಮಜನ ವೆ
ಡ್ಡೈಸಿಕೊಂಡುದು ಬಾಣವಾ ಗೀರ್ವಾಣದಲ್ಲಣನ
ಪೈಸರಿಸಿ ಪಾಡಳಿದು ಬಳಲಿದು । ಭೂಶಯನಕೊಡಲಿತ್ತನರಿಭಟ
ನಾಸುರದಲಬ್ಬರಿಸಿ ಮುಂದಕೆ ನೂಕಿದನು ರಥವ ೩೧

೨೮. "ನಿನ್ನನ್ನು ಬಿಟ್ಟಿದ್ದೇನೆ, ಲೋ ನಾಚಿಕೆಗೆಟ್ಟವನೆ ಹೋಗು, ರಾಕ್ಷಸವಂಶದ ಬೀಸುವ ಕಲ್ಲಾದ ರಾಮನ ಕದನಕ್ಕೆ ನೀನು ಗುರಿ, ಹೋಗು" ಎಂದು ನುಡಿದು ನೀಲನು "ರಾವಣನಿಗೆ ಯುದ್ಧಮಾಡಲು ಅಸ್ತ್ರಶಸ್ತ್ರಗಳನ್ನು ಕೊಟ್ಟು ರಥವನ್ನು ಅಲಂಕರಿಸು. ನಿನ್ನನ್ನು ಮುಟ್ಟುವುದಿಲ್ಲ, ಅಂಜಬೇಡ" ಎಂದು ಸಾರಥಿಯನ್ನು ಸಮಾಧಾನಮಾಡಿದನು. ೨೯. ಅನಂತರ ಸಾರಥಿಯು ನೀಲನ ಈ ಮಾತನ್ನು ಕೇಳಿ ಕುಸಿದ ರಾವಣನ ರಥವನ್ನು ತೆಗೆದುಕೊಂಡು ಅದನ್ನು ಅಲಂಕರಿಸಿದನು. ಬಳಿಕ ರಾವಣನನ್ನು ರಥಕ್ಕೆ ಹತ್ತಿಸಿದನು. ಮುಸುಕನ್ನು ತೆಗೆದು ಬಿಲ್ಲನ್ನು ಕೈಗೆ ಕೊಟ್ಟು ಬಾಣಗಳನ್ನಿತ್ತು ಸಾರಥಿ ವಿದ್ಯುಜ್ಜಿಹ್ವನು ಯುದ್ಧಕ್ಕೆ ಕುದುರೆಗಳ ಬೆನ್ನು ತಟ್ಟಿದನು. ೩೦. ಚಿಂತೆಯಿಂದ ಉರಿಯುತ್ತ ರಾವಣನು ಬತ್ತಳಿಕೆಯಿಂದ ಆಗ್ನೇಯಾಸ್ತ್ರವನು. ತೆಗೆದನು. ಬಿಲ್ಲಿನ ಹಗ್ಗಕ್ಕೆ ಅಸ್ತ್ರವನ್ನು ಹೂಡಿ ಆರ್ಭಟಿಸಿದನು. ಅದು ಬಿಲ್ಲಿನಿಂದ ಹೋಗುವ ಸಮಯದಲ್ಲಿ ಬ್ರಹ್ಮನೇ ಮೊದಲಾದವರು ಬೇರೆಯವರಿಗೆ ತಿಳಿಯದಂತೆ ಬಂದು ಬೇಡ ಬೇಡ ಎಂದರೂ ಚಿಂತಾತುರ ರಾವಣನು ಅದನ್ನು ಕೇಳದೆ ನೀಲನ ಮೇಲೆ ಅಸ್ತ್ರವನ್ನು ಬಿಟ್ಟನು. ೩೧. ರಾವಣನ ಅಸ್ತ್ರವು ಹಿಂಜರಿಯುತ್ತ ಪಕ್ಕಕ್ಕೆ ಬಂದು ಆಶ್ರಯವಿತ್ತು ನೀಲನನ್ನು ಸುತ್ತುವರಿಯಿತು. ನೀಲನು ಹಿಂಜರಿದು ಸ್ಥಿತಿಗೆಟ್ಟು ಬಳಲಿ ನೆಲದ ಮೇಲೊರಗಿದನು. ಶತ್ರುವೀರ ರಾವಣನು ಭಯಂಕರವಾಗಿ ಆರ್ಭಟಿ

ಬಿದ್ದನೋ ದಳಪತಿಯೆನುತ ಹೊದ । ಱಿದ್ದ ಹೆಮ್ಮರ ಗಿರಿಕದಂಬದ
ಲದ್ದಿದರು ಯೂಥಾಧಿನಾಥರು ಬಹಳ ಬೊಬ್ಬೆಯಲಿ
ಹೊದ್ದಿತೀ ನುಡಿ ಕಡಲ ದಾಂಟಿದ । ಕದ್ದಿಕಾಱನ ಕೋಪಶಿಖಿ ಮುಱಿ
ದೆದ್ದು ದಾಲಿಸಿ ನೋಡಿದನು ನಾಲ್ದೆಸೆಯಲಾ ಹನುಮ ೩೨.

ಅಹುದು ರಾವಣನಿವನು ನಾವಿ । ನ್ನಿಹುದು ಮತವಲ್ಲೆನುತ ತಱುಬಿದ
ಬಹುಮುಖದ ರಕ್ಕಸನನೊಂದೇ ಮುಷ್ಟಿಘಾತದಲಿ
ಮಹಿಗೆ ಬೀಳಿಸಿ ಬಳಿಸಲಿಸಿ ಕವಿ । ದಹಿತರಸುಗಳ ಕೊಳುತ ತೊರವೆಯ
ಬಹಳಬಲ ನರಹರಿಯ ದೂತನು ತಱುಬಿದನು ಖಳನ ೩೩

ಸುತ್ತ ಮುಂದಕ್ಕೆ ರಥವನ್ನು ಬಿಟ್ಟನು. ೩೨. "ದಳಪತಿ ಬಿದ್ದುಹೋದನೋ !" ಎನ್ನುತ್ತ ವಾನರನಾಯಕರು ಬೊಬ್ಬೆಹಾಕುತ್ತ ಭಾರಿ ಮರ ಮತ್ತು ಬೆಟ್ಟಗಳ ರಾಶಿಯಿಂದ ರಾವಣನನ್ನು ಮುಚ್ಚಿದರು. ಈ ಮಾತು ಸಮುದ್ರ ದಾಟಿದ ಉತ್ಸಾಹ ಶಾಲಿಗೆ ಕೇಳಿಸಿತು. ಕ್ರೋಧದಿಂದ ಬೆಂಕಿಯಾಗುತ್ತ ಹನುಮಂತನು ನಾಲ್ಕೂ ದಿಕ್ಕು ಗಳನ್ನು ದೃಷ್ಟಿಸಿ ನೋಡಿದನು. ೩೩. 'ಹೌದು, ಇವನು ರಾವಣ. ನಾವು ಇನ್ನು ಸುಮ್ಮನಿರುವುದು ಸರಿಯಲ್ಲ' ಎನ್ನುತ್ತ ಅಡ್ಡಗಟ್ಟಿದ ರಾವಣನನ್ನು ಒಂದೇ ಮುಷ್ಟಿಯ ಏಟಿನಿಂದ ನೆಲಕ್ಕೆ ಬೀಳಿಸಿದನು. ಹಿಂಬಾಲಿಸಿ ಬಂದು ಮುತ್ತಿದ ರಾಕ್ಷಸರ ಪ್ರಾಣಗಳನ್ನು ತೆಗೆಯುತ್ತ ಅತುಳಬಲಶಾಲಿ ತೊರವೆಯ ನರಹರಿಯ ದೂತನು ರಾವಣನನ್ನು ತಡೆದನು.

# ಇಪ್ಪತ್ತುಮೂರನೆಯ ಸಂಧಿ

ಸೂಚನೆ॥ ತಿವಿದ ತಿವಿಗುಳನಾಂತು ಪುನರಪಿ । ತಿವಿದ ತಿವಿಗುಳನಾನಲಾರದೆ
ಪವನಜನ ಮಱವೆಯಲಿ ಹಾಯ್ದನು ರಣದೊಳಸುರೇಂದ್ರ

ಗಾಯ ಬಿಱುಸೋ ಬಿದ್ದನೋ ಕಪಿ । ರಾಯ ಕಪಿಸೇನಾಧಿನಾಯಕ
ನಾಯುವಿನ ಹವಣಱಿಯಬಾರದು ಬವರದೊಳಗೆಂಬ
ಬಾಯ ಬೊಬ್ಬೆಯ ಭಟರ ಬಿಱುಬಿನ । ಸಾಯಕದ ಹತಿ ವಾಯುಪುತ್ರನ
ನೋಯಿಸಿತು ನಿಗುರಿಸಿತು ನಿಶಿತಕ್ರೋಧಮಯ ಶಿಖಿಯ ೧

ಕೊಱತೆ ಬಂದರೆ ಬರಲಿ ರಘುಪತಿ । ತೊಱೆಯಲೆನ್ನನು ಸುಪ್ರತಿಜ್ಞೆಯ
ಮುಱಿದನೆಂದು ಭ್ರಮಿತನಿವನೆಂದುಲಿಯಲೀ ಲೋಕ
ಮುಱಿವೆನೀ ಖಳನೆಲುವ ರಕುತವ । ಸುಱಿಸುವೆನು ಶಾಕಿನಿಯರಿಂಗೆ ರಣ
ಮುಱುಕನಿವನಿನ್ನರಿಯಬಹುದೆಂದುಬ್ಬಿದನು ಹನುಮ ೨

ದೊದ್ದೆಗರ ಸದೆಬಡಿದು ಶಕ್ರನ । ಗೆದ್ದ ಸುಭಟನ ನೂಱುಯೋಜನ
ಕೊದ್ದು ಮರಳಿದು ಮಾರುತಾಧ್ವಕೆ ನೆಗೆದು ಲಳಿ ಮಸಗಿ
ಹದ್ದು ಹಾವಿಗೆ ಹೊಂಚುವವೊಲು । ಬ್ಬೆದ್ದು ಮಾರುತಿ ನಿಂದಿದನು ಮೇ
ಲಿದ್ದ ಸುರಗಣ ಹೊಗಳೆ ರಕ್ಕಸರಾಯನಿದಿರಿನಲಿ ೩

ಸೂಚನೆ॥ ಹನುಮಂತನ ತಿವಿತದ ಏಟುಗಳನ್ನು ತಡೆದುಕೊಂಡು ಪುನಃ ತಿವಿದ ತಿವಿತಗಳನ್ನು ತಡೆದುಕೊಳ್ಳಲಾರದೆ ಹನುಮಂತನು ಮೂರ್ಛೆಹೋಗಿದ್ದಾಗ ರಾವಣನು ಅವನನ್ನು ಬಿಟ್ಟು ಮುಂದಕ್ಕೆ ಓಡಿದನು. ೧. "ಏಟು ಬಿರುಸಾಯಿತೋ, ಕಾಳಗದಲ್ಲಿ ವಾನರರಾಜನು ಬಿದ್ದನೊ, ವಾನರಸೇನಾಪತಿಯ ಸ್ಥಿತಿಯನ್ನು ಹೇಳುವಂತಿಲ್ಲ" ಎಂದು ಬೊಬ್ಬೆಹಾಕುತ್ತಿದ್ದ ವಾನರವೀರರ ಕೂಗೆಂಬ ಬಿರುಸಾದ ಬಾಣವು ವಾಯುಪುತ್ರನನ್ನು ನೋಯಿಸಿತು. ಅವನಲ್ಲಿ ತೀವ್ರವಾದ ಕೋಪದ ಬೆಂಕಿಯನ್ನೆಬ್ಬಿಸಿತು. ೨. "ನನಗೆ ದೋಷ ಬಂದರೆ ಬರಲಿ. ನನ್ನ ಪ್ರತಿಜ್ಞೆಯನ್ನು ಇವನು ಮುರಿದನೆಂದು ರಘುಪತಿ ನನ್ನನ್ನು ತ್ಯಜಿಸಲಿ. ಇವನು ಭ್ರಾಂತಿಗೆ ಒಳಗಾದನೆಂದು ಜಗತ್ತು ಕೂಗಲಿ. ಈ ರಾಕ್ಷಸನ ಮೂಳೆಯನ್ನು ಮುರಿಯುವೆನು, ಇವನ ರಕ್ತವನ್ನು ಶಾಕಿನಿಗಳಿಗೆ ಕುಡಿಸುವೆನು. ರಣಗೇಡಿಯಾದ ಇವನನ್ನು ಇನ್ನು ನೋಡಿಕೊಳ್ಳುತ್ತೇನೆ" ಎಂದು ಹನುಮಂತ ಆವೇಶಗೊಂಡ. ೩. ಗುಂಪಿನ ರಾಕ್ಷಸರನ್ನು ಸದೆಬಡಿದು ಇಂದ್ರನನ್ನು ಗೆದ್ದ ವೀರರನ್ನು ನೂರು ಯೋಜನ ದೂರಕ್ಕೆ ಬೀಳುವಂತೆ ಒದ್ದು ಪುನಃ ಆಕಾಶಕ್ಕೆ ನೆಗೆದು ಗರುಡನು ಹಾವಿಗೆ ಹೊಂಚುಹಾಕುವಂತೆ ಉತ್ಸಾಹದಿಂದ ಹನುಮಂತನು ನಿಂತನು. ಆಕಾಶದಲ್ಲಿದ್ದ ದೇವತೆಗಳು ರಾವಣನ ಎದುರಿನಲ್ಲಿಯೇ ಹನುಮಂತನನ್ನು

ಏನೆಲವೊ ದಶಕಂಠ ರಣಸು । ಮ್ಮಾನರಂಜಕವಾರೊಡನೆ ಸಂ
ಧಾನವೋ ಸಂಗರವೊ ಸಮುಚಿತವಾವುದುದ್ಯಮದ
ಭಾನುಕುಲಜನ ಕಾಣಬೇಕೆಂ । ಬೀ ನೆನಹು ನಿನಗುಂಟೆ ಪೇಳನು
ಮಾನವಾವುದು ಸುಮ್ಮನಿರಬೇಡೆಂದನಾ ಹನುಮ ೪

ಬೆಱಗದೇಕೆಮ್ಮವನು ನೀ ತಾ । ನಱಿಯಬೇಹುದು ಪುರವ ಸುಲಿತಂ
ದಱುವೆಯಂಚಟಿಗೆಗಳಲಿ ಸುತ್ತಿ ಸಮೀರಬಾಂಧವನ
ತುಱುಕಿ ತಱುವಲಿ ರಕ್ಕಸರ ರಣ । ವಱೆಯ ಹೊಯ್ಸಿನಲೆಮ್ಮನೂರೊಳು
ಮೆಱೆಸಿದುದ ನೀ ಮಱೆವುದುಚಿತವೆಯೆಂದನಾ ಹನುಮ ೫

ಅಱಿವಡೆಲವೋ ನೀನು ನೆತ್ತಿಯ । ಹೆಱೆಯವನೊ ಮೇಣ್ ಬೊಮ್ಮನೋ ಸುರ
ರೆಱೆಯನೋ ಶಿಖಿ ಯಮ ನಿಶಾಚರ ವರುಣ ವಾಯುಗಳ
ನೆಱವಣಿಗೆಯವನೋ ವಿಚಾರಿಸೆ । ತಱಿಚುಗೆಡೆವುದ ಬಲ್ಲೆ ನೀ ಹುಲು
ಪಱಿಯ ಕಪಿ ನೀ ಕೆಣಕಿ ಸಾಯದೆ ಕೆಲಕೆ ಸಾರೆಂದ ೬

ಆದಡಱಿಹಿಸಬೇಕು ಬಲುಭಟ । ನಾದೆಲಾ ನೀನೀಗ ಕಾಲದ
ಹಾದಿ ತಾ ವಿಪರೀತ ಮಱೆವರು ಮಧುಪರದಕೇನು
ಕಾದಿ ನೋಡುವ ಜಯಮುಖವು ನಿನ । ಗಾದಡೀಮಾತುಚಿತವೆಂದು ವಿ
ನೋದದಲಿ ಕೆಡಹಿದನು ತೇರಿಂದಸುರವಲ್ಲಭನ ೭

ಹೊಗಳಿದರು. ೪. "ಏನೋ ದಶಕಂಠ, ನಿನ್ನ ಯುದ್ಧದ ಚೆಲ್ಲಾಟವು ಯಾರ ಜತೆಯಲ್ಲಿ ? ಸಂಧಿಯೋ ಸಮರವೊ, ಯಾವ ಕಾರ್ಯ ಯೋಗ್ಯವಾದುದು ? ಸೂರ್ಯಕುಲದವನನ್ನು ಕಾಣಬೇಕೆಂಬ ಆಸೆಯೋ ನಿನಗೆ ? ಅನುಮಾನವೇಕೆ, ಹೇಳು. ಸುಮ್ಮನಿರಬೇಡ" ಎಂದು ಹನುಮಂತನು ರಾವಣನಿಗೆ ನುಡಿದನು. ೫. "ಆಶ್ಚರ್ಯ ವೇಕೆ ? ನಮ್ಮನ್ನು ನೀನು ಬಲ್ಲೆ. ಲಂಕಾನಗರವನ್ನು ದೋಚಿ ತಂದ ಅರಿವೆ ಅಂಚಡಿ ಗಳನ್ನು ಬಾಲಕ್ಕೆ ಸುತ್ತಿ ಬೆಂಕಿ ಹತ್ತಿಸಿ ತಬ್ಬಲಿ ರಾಕ್ಷಸರ ಕೈಲಿ ಯುದ್ಧದ ತಮಟೆಗಳನ್ನು ಹೊಡೆಸುತ್ತ ನಮ್ಮನ್ನು ಊರಿನಲ್ಲಿ ಮೆರೆಸಿದುದನ್ನು ನೀನು ಮರೆತುಬಿಡುವುದು ಸರಿಯೇ ?" ಎಂದ ಹನುಮಂತ. ೬. "ತಿಳಿದುನೋಡಿದರೆ ನೀನು ಚಂದ್ರಶೇಖರನೋ. ಅಥವಾ ಬ್ರಹ್ಮನೋ, ಇಲ್ಲವೇ ದೇವೇಂದ್ರನೋ ? ಅಗ್ನಿ,ಯಮ, ವರುಣ, ವಾಯುಗಳ ಸಮನೋ ? ನೋಡಿದರೆ ಕೆಟ್ಟದಾಗಿ ಹರಟುವುದು ಮಾತ್ರ ನಿನಗೆ ಗೊತ್ತು. ನೀನು ನೀಚ ದುರ್ಬಲ ಕಪಿ, ಸುಮ್ಮನೆ ಕೆಣಕಿ ಸಾಯಬೇಡ, ತೊಲಗು" ಎಂದ ರಾವಣ. ೭. "ಹಾಗಿದ್ದರೆ ನಿನಗೆ ತಿಳಿಸಿಕೊಡಬೇಕು. ಬಲುವೀರನಾಗಿದ್ದೀಯಲ್ಲ ? ಸಮಯದ ಹಾದಿ ದೀರ್ಘವಾಯಿತು. ಹಿಂದಿನದನ್ನು ಕುಡುಕರು ಮರೆಯುತ್ತಾರೆ, ಅದಕ್ಕೆನೀಗ ಯುದ್ಧ ಮಾಡಿ ನೋಡೋಣ. ನೀನು ಗೆದ್ದರೆ ಆಗ ನಿನ್ನ ಮಾತು ಯೋಗ್ಯವೆಂದಾಗು ತ್ತದೆ" ಎಂದು ಹನುಮಂತನು ತಮಾಷೆಯಾಗಿ ನುಡಿದು ರಥದಿಂದ ರಾವಣನನ್ನು ಕೆಳಗೆ

ಎಲವೊ ಸಾರಥಿ ನಿನ್ನೊಡೆಯನೀ । ಕಲಹವನು ಜಯಿಸಿದಡೆ ಕೊಡು ಕೋ
ಬಳಿಕ ಬವರಕೆ ತೇರನೆಂದವನಿತ್ತು ಕೈದುಗಳ
ಕಳಚಿ ಹಾಯ್ಕಿದನವನೆಡೆಗೆ ನಿ । ನ್ನಳವ ತೋಱೆಸೈ ನಮಗೆನುತ ದಶ
ಗಳನ ಕಿವಿಯಲಿ ಬೊಬ್ಬಿಱಿದನೆದೆ ಬಿರಿಯೆ ಕಲಿ ಹನುಮ ೮

ಸೆಳೆದು ಕೈದುವ ಬಿಸುಟನೆಂದಳ । ವಳಿಯದಿರು ನೀನಾವ ಮೈಯಲಿ
ಬಳಸಿ ಬಳಸುವೆಯಿಕ್ಕದಂಗದಲಂಜಬೇಡ ನುಡಿ
ಹೊಳಕೆಗಾಱಿರು ನಾವು ನಮ್ಮ । ಗ್ಗಳಿಕೆಯನು ಸುರರೀಕ್ಷಿಸಲಿ ನುಡಿ
ತಳುವ ಮಾಡದೆ ಹೇಳೆನುತ ಹನುಮಂತ ಗರ್ಜಿಸಿದ ೯

ಎಲೆಗೊನೆಯ ಚಿವುಟುವಡೆ ಕೊಡಲಿಯ । ತಳಿಸುವರೆ ಕೇಳೆಲವೊ ಕಪಿ ನಿ
ನ್ನೊಳಗೆ ಕಾದುವಡೇಕೆ ಕೈದುಗಳಸ್ತ್ರಹೀನನಲಿ
ತಳವಿಘಾತಿಯ ಕೈದುವೆನೆ ಕಳ । ಕಳಿಸಿ ನಕ್ಕನು ಹನುಮನಹುದೋ
ಖಳರೊಳಗ್ಗದ ವೀರನಹೆ ಮೆಚ್ಚಿದೆನು ನಿನಗೆಂದ ೧೦

ಧುರದ ಖಾಡಾಖಾಡಿ ನಮ್ಮಿ । ಬ್ಬರಿಗೆ ಬೇಡೊಂದೊಂದು ಗುದ್ದಿನ
ಗುರುಲಘುತ್ವದ ಘಾಯ ಮೂಱಱ ಗಣನೆ ಪರಿಯಂತ
ಪರಿವಿಡಿಗಳಾಗಿರಲಿ ಗೆಲವಿನ । ಪರಿಯ ಕಂಡಡೆ ಸೋತವರು ಕಿಂ
ಕರರು ಕೈಕೋ ಮೊದಲು ನೀನೆಂದನಿಲಸುತ ನುಡಿದ ೧೧

ಕೆಡವಿದನು. ೮. "ಎಲವೊ ಸಾರಥಿ, ನಿನ್ನ ಒಡೆಯನು ಈ ಯುದ್ಧವನ್ನು ಗೆದ್ದರೆ ಬಳಿಕ ಯುದ್ಧಕ್ಕೆ ರಥವನ್ನು ಕೊಡು ತೆಗೆದುಕೋ" ಎಂದು ಹೇಳಿ ರಥವನ್ನು ಕೊಟ್ಟು ಅವನ ಸಮೀಪಕ್ಕೆ ಆಯುಧಗಳನ್ನು ಎಸೆದನು. "ನಿನ್ನ ಪರಾಕ್ರಮವನ್ನು ನಮಗೆ ತೋರಿಸು" ಎಂದು ದಶಕಂಠನ ಕಿವಿಯಲ್ಲಿ ಎದೆ ಬಿರಿಯುವಂತೆ ವೀರಹನುಮಂತನು ಬೊಬ್ಬಿರಿದನು. ೯. "ಆಯುಧಗಳನ್ನು ಕಿತ್ತೆಸೆದೆನೆಂದು ಕುಸಿಯಬೇಡ. ನಾನು ಆಯುಧಗಳನ್ನು ಬಳಸಲು ಬಯಸಿದರೂ ಪೆಟ್ಟುಬೀಳದ ನಿನ್ನ ಅಂಗದ ಮೇಲೆ ಹೇಗೆ ಪ್ರಯೋಗಿಸುವೆ, ಹೆದರಬೇಡ ಹೇಳು. ಕಣ್ಣಿಗೆ ಕಾಣಿಸುವವರು ನಾವು. ನಮ್ಮ ಹಿರಿಮೆಯನ್ನು ದೇವತೆಗಳು ನೋಡಲಿ, ತಡಮಾಡದೆ ಹೇಳು" ಎನ್ನುತ್ತ ಹನುಮಂತ ಗರ್ಜಿಸಿದ. ೧೦. "ಎಳೆಗೊನೆಯನ್ನು ಚಿವುಟುವುದಕ್ಕೆ ಕೊಡಲಿಯಿಂದ ಕಡಿಯುತ್ತಾರೆಯೇ ? ಕೇಳೋ ಕಪಿ, ಅಸ್ತ್ರಹೀನನಾದ ನಿನ್ನೊಡನೆ ಯುದ್ಧ ಮಾಡಲು ಆಯುಧ ಬೇಕೇ ? ಕೈಯೇಟೇ ಆಯುಧ" ಎಂದು ರಾವಣನು ನುಡಿಯಲು ಕಳಕಳಿಸಿ ನಕ್ಕು ಹನುಮಂತನು "ಹೌದೋ, ಅಸುರರಲ್ಲಿ ಶ್ರೇಷ್ಠ ವೀರ ನೀನು. ನಿನಗೆ ಮೆಚ್ಚಿದೆ" ಎಂದನು. ೧೧. "ನಮ್ಮಿಬ್ಬರ ನಡುವೆ ಖಡಾಖಡಿ ಯುದ್ಧ ಬೇಡ. ಒಂದೊಂದು ಗುದ್ದಿನಂತೆ ಮೂರನ್ನು ಎಣಿಸುವವರೆಗೆ ಕ್ರಮವಾಗಿ ಹೊಡೆಯೋಣ. ಗೆದ್ದವರಿಗೆ ಸೋತವರು ಕಿಂಕರರು. ಮೊದಲನೆಯ

ತಿವಿ ಮೊದಲು ನೀನೆಲವೊ ಕಪಿ ಮಱು । ದಿವಿಗಳೆನ್ನದು ನೋಡು ನೀನೆನೆ
ತಿವಿದ ಘಾಯವ ಮಱೆದಲಾ ವನಭಂಗದಲಿ ನಿನ್ನ
ಕುವರರೇಳ್ನೂಱಱನು ಕೊಂದುದು । ತಿವಿಗಳಲ್ಲವೆಯೆನಲು ಜಠರದೊ
ಳವತರಿಸಿದುದು ಕೋಪಶಿಖಿ ಬಳಿಕಾ ದಶಾನನನ ೧೨

ಅಸುರನಾ ನುಡಿಗೇಳಿ ಮಿಗೆ ಗ । ರ್ಜಿಸುತ ಕಣ್ಗಿಡಿಗೆದಱೆ ಕೈಗಳ
ಹೊಸೆಯಲುದುರ್ದವು ಕಿಡಿಗಳುಬ್ಬುವ ಕಬ್ಬೊಗೆಯನಡೆದು
ವಸುಧೆಯದುರಲು ತೀಡಿ ಬಲಿದಾ । ಗಸಕೆ ಮುಷ್ಟಿಯ ನೆಗಹಿ ಸಿಡಿಲಿನ
ಬಸುಱು ಬಿಚ್ಚಲು ಬೊಬ್ಬಿಱೆದು ತಿವಿದನು ಸಮೀರಜನ ೧೩

ಭರದ ಭಾರದಲೊದೆದ ಸಿಡಿಲಿನ । ಚರಣಹತಿಗೆ ಕುಲಾದ್ರಿ ಕಂಪಿಸೆ
ಧರೆಗೆ ದಡದಡಿಪಂತೆ ತರತರಿಸುತ್ತ ಕಲಿಹನುಮ
ತರಹರಿಸಿಕೊಂಡಹುದೊ ತಿವಿಗುಳ । ಭರವು ಬೆಟ್ಟಿತು ನಮ್ಮ ಘಾಯದ
ಪರಿಯ ನೋಡೆನುತುದ್ದಿದನು ಕರತಳವನವನಿಯಲಿ ೧೪

ಒಲೆದುದಿಳೆಯಡಿಪಾಯ ಪದಹತಿ । ಗೊಲೆವ ತಾವರೆಯಂತೆ ತೂಗಿತು
ಜಲಜಸಂಭೂತಾಂಡ ಸೂಸಿತು ಕೂಡೆ ಜಲರಾಶಿ
ಬಲಿದ ಮುಷ್ಟಿಯನೆತ್ತಿ ನೆತ್ತಿಯ । ತೊಲಗಿಸಿದನಿವನಮರಗಣವೆಡ
ಬಲಕೆ ಚಲ್ಲಿತು ಚಲಿಸಿದವು ಜಗವಮರಸಂತತಿಯ ೧೫

ಏಟನ್ನು ನೀನು ಹೊಡೆ” ಎಂದು ಹನುಮಂತ ಹೇಳಿದ. ೧೨. “ಲೋ ಕಪಿ, ಮೊದಲು ನೀನು ಗುದ್ದು, ಮರುಗುದ್ದುಗಳು ನನ್ನದು” ಎಂದು ರಾವಣನು ಹೇಳಲು “ಅಶೋಕ ವನವನ್ನು ಮುರಿದಾಗ ನನ್ನ ತಿವಿತದ ಪೆಟ್ಟನ್ನು ಮರೆತೆಯಲ್ಲ ? ನಿನ್ನ ಏಳುನೂರು ಜನ ಮಕ್ಕಳನ್ನು ಕೊಂದುದು ನನ್ನ ತಿವಿತಗಳಲ್ಲವೆ?” ಎಂದನು ಹನುಮಂತ. ಆಗ ದಶಮುಖನ ಹೊಟ್ಟೆಯಲ್ಲಿ ಕೋಪದ ಕಿಚ್ಚು ಹತ್ತಿಕೊಂಡಿತು. ೧೩. ಆ ಮಾತು ಕೇಳಿ ರಾವಣನು ಕಣ್ಣುಗಳಲ್ಲಿ ಕಿಡಿ ಕಾರುತ್ತ ಗರ್ಜಿಸಿದನು. ಕೈಗಳನ್ನುಜ್ಜಲು ಕಪ್ಪುಹೊಗೆಯನ್ನೆಬ್ಬಿಸುತ್ತ ಕಿಡಿಗಳು ಹಾರಿದವು, ಭೂಮಿ ಅದುರುವಂತೆ ತೋಳನ್ನು ಬೀಸಿ ಆಕಾಶಕ್ಕೆ ಮುಷ್ಟಿಯನ್ನೆತ್ತಿ ಸಿಡಿಲಿನ ಹೊಟ್ಟೆ ಒಡೆಯುವಂತೆ ಬೊಬ್ಬಿರಿದು ಹನುಮಂತನನ್ನು ಗುದ್ದಿದನು. ೧೪. “ಭಾರಿ ಬಿರುಸಿನ ಸಿಡಿಲಿನ ಒದೆತಕ್ಕೆ ಕುಲಪರ್ವತವು ನಡುಗಿ ದಡದಡನೆ ಭೂಮಿಗೆ ಬೀಳುವಂತೆ ಹನುಮಂತನು ತತ್ತರಿಸಿ ಬಿದ್ದು ಸಾವರಿಸಿಕೊಂಡು, “ಹೌದೋ, ನಿನ್ನ ಗುದ್ದಿನ ಏಟು ಬಿರುಸಾಗಿದೆ. ಈಗ ನಮ್ಮ ಏಟಿನ ರೀತಿಯನ್ನು ನೋಡು” ಎಂದು ಹನುಮಂತನು ನೆಲಕ್ಕೆ ಹಸ್ತವನ್ನುಜ್ಜಿದನು. ೧೫. ಹನುಮಂತನ ಹೆಜ್ಜೆಯ ಏಟಿಗೆ ಭೂಮಿಯ ಅಡಿಪಾಯ ಒಲೆದಾಡಿತು; ಬ್ರಹ್ಮಾಂಡವು ತಾವರೆಯಂತೆ ತೂಗಾಡಿತು, ಸಮುದ್ರ ಉಕ್ಕಿತು, ಬಿಗಿದ ಮುಷ್ಟಿಯನ್ನೆತ್ತಿ ನೆತ್ತಿಯ ಮೇಲುಗಡೆಗೆ ಬೀಸಲು ಆಕಾಶದ ದೇವತೆಗಳನ್ನು ಎಡಬಲಕ್ಕೆ ಎಸೆಯಿತು, ದೇವಲೋಕವು ಸ್ಥಳಬಿಟ್ಟು ಕದಲಿತು,

ಆತುಕೋ ಘಾಯವನು ನೀ ನಿ । ರ್ಭೀತ ರಣರಂಗದೊಳು ವೀರರ
ಜಾತಿಯಲಿ ಜೀವಾಳವುಳ್ಳವನೆಂಬುದೀ ಲೋಕ
ಕೋತಿಗುಲದವರಾವು ಕದನದ । ರೀತಿ ನಮ್ಮವು ಸ್ವಲ್ಪ ನಿನ್ನೊಳ
ಗಾತು ನಿಲುವುದು ದೊಡ್ಡಿತೆನುತೆಱಗಿದನು ರಕ್ಕಸನ ೧೬

ಹಾಱಿಬಿದ್ದನು ನೆಲಕೆ ರಕುತವ । ಕಾಱಿಕಾಱಿದು ನೆಲನ ಕಣ್ಣೆವೆ
ಜಾಱಿದವು ಕರಣೇಂದ್ರಿಯದ ಕಳಕಳದ ರ್ಘೂರ್ಮ್ಮನಲಿ
ಗೂಱು ಮಸಗಿತು ಶಶಕಸರ್ಪನ । ತೋಱಿಕೆಯು ರುಜೆಯಂತೆ ಚಲಿಸಿದ
ವೇಱಿಳಿವ ಜೀವದಲಿ ಕೈಕಾಲಸುರವಲ್ಲಭನ ೧೭

ಭಾಪುರೇ ರಣಧೀರ ವೀರರ । ಸಾಪಗಾಪತಿ ವಿಲಯಶಂಕರ
ರೂಪನಪರಬ್ರಹ್ಮನಚ್ಯುತಪದಕಮಲಭೃಂಗ
ಗೋಪ ಮುಖ್ಯ ಸಮಸ್ತ ಸುರಮಕು । ಟೋಪಲಾಲಿತಚರಣ ಕರುಣಾ
ಲಾಪ ವಿಜಿತೇಂದ್ರಿಯ ನಮೋಯೆಂದಮರಮುನಿ ನುಡಿದ ೧೮

ಸುರರುಘೇಯೆಂದುಬ್ಬಿ ಹಿಗ್ಗಿದ । ರೆರಡು ಮೈಯಲಿ ಪಾಡಿದರು ತುಂ
ಬುರರು ನರ್ತಿಸಿ ನಲಿದರಾ ರಂಭಾದಿ ನಾರಿಯರು
ಧರಧುರದಿ ನಡುಗಿದನು ಮಾರುತಿ । ತರಹರಿಸಿ ಕೋಪವನು ಕದಪಿನ
ಕರದಲಸುರನ ನೋಡುತಿರ್ದನು ಬಗಿದ ಬೆಱಗಿನಲಿ ೧೯

೧೬. "ಈ ಏಟನ್ನು ತಡೆದುಕೋ, ರಣರಂಗದಲ್ಲಿ ಭೀತಿಯಿಲ್ಲದವನು ನೀನು, ವೀರರ ಜಾತಿಯಲ್ಲಿ ಜೀವಾಳವುಳ್ಳವನೆಂದು ಜಗತ್ತು ನಿನ್ನನ್ನು ಹೊಗಳುತ್ತದೆ. ನಾವು ಕೋತಿಯ ಕುಲದವರು, ನಮ್ಮ ಯುದ್ಧದ ರೀತಿ ಅಲ್ಪವಾದುದು. ನಿನ್ನನ್ನು ಎದುರಿಸಿ ನಿಲ್ಲು ವುದು ದೊಡ್ಡದು" ಎನ್ನುತ್ತ ಹನುಮಂತ ರಾವಣನ ಮೇಲೆರಗಿದ. ೧೭. ರಾವಣ ಮೇಲಕ್ಕೆ ಹಾರಿ ನೆಲಕ್ಕೆ ಬಿದ್ದನು. ಒಂದೇಸಮನೆ ರಕ್ತವನ್ನು ಕಾರಿದನು. ಇಂದ್ರಿಯಗಳ ಕಳವಳದಿಂದ ಮೈಮರೆತನು, ಕಣ್ಣುರೆಪ್ಪೆಗಳು ಮುಚ್ಚಿಕೊಂಡವು. ರೋಗವಡಸಿದ ಹೆಬ್ಬಾವಿನಂತೆ ಉಬ್ಬಸದಿಂದ ಏದಿದನು. ಏರಿಳಿಯುವ ಉಸುರಿ ನೊಡನೆ ರಾವಣನ ಕೈಕಾಲುಗಳು ಬಡಿದುಕೊಂಡವು. ೧೮. 'ಭಾಪು, ರಣಧೀರ! ವೀರರಸಸಾಗರ! ಪ್ರಳಯಶಂಕರರೂಪ! ಅಪರಬ್ರಹ್ಮ! ಅಚ್ಯುತನ ಪಾದ ಕಮಲಗಳ ತುಂಬಿ! ದೇವೇಂದ್ರನೇ ಮೊದಲಾದ ಸಮಸ್ತ ದೇವತೆಗಳ ಕಿರೀಟ ಗಳು ಮುದ್ದಿಸುವ ಪಾದಗಳುಳ್ಳವನೇ! ದಯಾವಾಕ್ಕುಳ್ಳವನೇ! ಇಂದ್ರಿಯ ಗಳನ್ನು ಜಯಿಸಿದವನೇ! ನಮಸ್ಕಾರ' ಎಂದು ನಾರದಮುನಿ ಆಂಜನೇಯನನ್ನು ಕೊಂಡಾಡಿದ. ೧೯. ದೇವತೆಗಳು ಸಂತೋಷದಿಂದ ಹಿಗ್ಗಿ 'ಉಘೇ!' ಎಂದರು. ತುಂಬು ರರು ಎರಡು ಪಕ್ಕದಲ್ಲೂ ಹಾಡಿದರು. ರಂಭಾದಿ ದೇವಲೋಕದ ಗಣಿಕೆಯರು ಸಂತೋಷ ದಿಂದ ನರ್ತಿಸಿದರು. ಹನುಮಂತನು ಅತಿಶಯವಾಗಿ ನಡುಗಿದನು, ಕೋಪವನ್ನು ಸಹಿಸಿ

ಅರೆಗಳಿಗೆಗಸುರೇಂದ್ರನಸು ಚೇ । ತರಿಸಿತೊಯ್ಯನೆ ರಾಘವೇಂದ್ರನ
ಶರಹತಿಯಬುಪಹತಿಯನಂಗದು ಮುನ್ನಿನಾದೇಶ
ತರುಣ ಕೇಳದರಿಂದ ಹಗೆವನ । ಹರಣ ಸಪ್ರಾಣಿಸಿತು ಮೆಲ್ಲನೆ
ಶಿರವ ನೆಗಹಿದನೀಕ್ಷಿಸಿದನೆವೆದೆರೆದು ಪವನಜನ ೨೦

ಅಂಜಿದೆವು ನಾವ್ ನಿನಗೆ ಮರಣದ । ಮಂಜು ಮುಸುಕಿದುದೆಂದು ಸಮರ ಸ
ಮಂಜಸದ ಸತ್ರಾಣಿಯಹೆ ಸಾಮಾನ್ಯನೇ ನೀನು
ಅಂಘದೇಳೆನುತುಬ್ಬುವಾತಿನ । ಲಂಜನಾಸುತನಾ ವಿವೇಕವಿ
ಭಂಜನನನೆಬ್ಬಿಸಿದನುಬ್ಬುವ ರೋಮಹರುಷದಲಿ ೨೧

ಎದ್ದನವನಂದಂಬುನಿಧಿಯೊಳ । ಗದ್ದ ಗಿರಿ ನೆಗೆವಂತೆ ಬಾಯೊಳ
ಗಿದ್ದ ರಣಧೂಳಿಯನು ಥೂಯೆಂದುಗುಳುತಡಬಲಕೆ
ಇದ್ದಸೆಯನಾರೈದು ಕೈಗಳ । ನುದ್ದಿ ಹಾಯಿಕಿ ಮಸ್ತಕಕೆ ಮುರಿ
ದೆದ್ದು ಮಂಡಿಯ ಕೊಂಡು ಕುಬುಬಿಬೆಂದಾಲ್ದನಸುರೇಂದ್ರ ೨೨

ಸರಿಸದವರಿಲ್ಲೆಂದುಪರಿಯಂ । ತರ ಪುರಾತನ ಸುಭಟರಲಿ ಸಂ
ಗರಕೆ ಸಾಹಸವಲ್ಲ ನೀನಹೆ ಗುಣಕೆ ಮತ್ಸರವೆ
ಕರಹತಿಯನಿದನೊಮ್ಮೆ ನೀ ತರ । ಹರಿಸಿದಡೆ ಭಟನಹೆಯೆನುತ್ತ
ಬ್ಬರಿಸಿ ಬಲುಗೈಹತ್ತ ಬಲಿದೆತ್ತಿದನು ದಶಕಂಠ ೨೩

ಕೊಂಡು ಕೆನ್ನೆಗೆ ಕೈಯಿಟ್ಟು ಆಶ್ಚರ್ಯದಿಂದ ರಾವಣನನ್ನು ನೋಡುತ್ತಿದ್ದನು. ೨೦. ಅರೆಗಳಿಗೆಯಲ್ಲಿ ರಾಕ್ಷಸೇಂದ್ರನು ಚೇತರಿಸಿಕೊಂಡನು. ರಾಘವೇಂದ್ರನ ಬಾಣದಿಂದ ರಾವಣನಿಗೆ ಅಪಾಯವೆಂಬುದು ಭವಿಷ್ಯ ನಿರ್ದೇಶ. ತರುಣ ಲವನೇ ಕೇಳು, ಆ ಕಾರಣ ದಿಂದ ಶತ್ರುವಿನ ಪ್ರಾಣ ಕೂಡಿಬಂದಿತು. ರಾವಣನು ಮೆಲ್ಲಗೆ ತಲೆಯನ್ನೆತ್ತಿ ರೆಪ್ಪೆತೆರೆದು ಮಾರುತಿಯನ್ನು ನೋಡಿದ. ೨೧. "ನಿನ್ನನ್ನು ಮರಣದ ಮಂಜು ಮುಸುಕಿತೆಂದು ನಾವು ಅಂಜಿದೆವು. ಯುದ್ಧದಲ್ಲಿ ನೀನು ಹೆಚ್ಚುಶಕ್ತಿವಂತನಿದ್ದೀಯೆ, ಸಾಮಾನ್ಯನೇ ನೀನು. ಹೆದರದೆ ಏಳು" ಎನ್ನುತ್ತ ವಿವೇಕಹೀನ ರಾವಣನನ್ನು ಉಬ್ಬಿಸುವ ಮಾತುಗಳಿಂದ ಎಬ್ಬಿಸಿ ಆಂಜನೇಯನು ರೋಮಾಂಚಗೊಂಡನು. ೨೨. ಸಮುದ್ರದಲ್ಲಿ ಮುಳುಗಿದ ಪರ್ವತವು ಮೇಲಕ್ಕೆ ನೆಗೆದುಬರುವಂತೆ ಬಾಯೊಳಗಿನ ಧೂಳನ್ನು ಎರಡು ಪಕ್ಕಗಳಲ್ಲೂ ಥೂ ಎಂದು ಉಗುಳುತ್ತ ರಾವಣನು ಮೇಲೆದ್ದನು. ಎರಡು ಕಡೆಯನ್ನೂ ಪರೀಕ್ಷಿಸಿ ನೋಡಿ ಕೈಗಳನ್ನುಜ್ಜಿ ಹಣೆಯನ್ನು ಮುಟ್ಟಿಕೊಂಡು ಮೈಮುರಿದೆದ್ದು ಮಂಡಿಯನ್ನೆತ್ತಿ ಕುಬುಬು ಎಂದು ಗಟ್ಟಿಯಾಗಿ ಕೂಗು ಹಾಕಿದನು. ೨೩. "ಇಲ್ಲಿಯವರೆಗೆ ಹಿಂದಿನ ವೀರ ರಲ್ಲಿ ನನಗೆ ಸರಿಸಮಾನರಿಲ್ಲ. ಆದರೆ ನೀನು ರಣವೀರನಹುದು ; ಗುಣಕ್ಕೆ ಮತ್ಸರವೆ ? ನನ್ನ ಕೈಪೆಟ್ಟನ್ನು ಇದೊಂದು ಸಲಕ್ಕೆ ಸಹಿಸಿಕೊಂಡಿದ್ದೇ ಆದರೆ ನೀನು ವೀರನೇ ಸರಿ" ಎಂದು ಅಬ್ಬರಿಸಿ ರಾವಣನು ತನ್ನ ಬಲಿಷ್ಠ ಹಸ್ತವನ್ನು ಬಲವಾಗಿ ಮೇಲಕ್ಕೆತ್ತಿದನು;

ಕೆಡಿಸಿ ಮಾತಾಡಿದೆಯಲಾ ನಿ । ನ್ನೊಡನೆ ಕಾದಿದನೆಂದು ಸರಿಯೆಂ
ದೆಡಹಿ ಮಾತಿಸಲಹುದೆ ಬದುಕಿದೆನೆಂಬ ಗರ್ವದಲಿ
ತುದುಕು ನೀನಿನ್ನೊಮ್ಮೆ ಮೇಲು । ಗ್ಗಡಿಸದೆನ್ನಯ ಹತಿಗೆ ನಿನ್ನಸು
ಸಡಿಲದಿರೆ ಸಂನ್ಯಾಸ ನಿನ್ನೊಳು ಸಮರವೆನಗೆಂದ ೨೪

ಘಾಯವಿದಱೊಳು ಬದುಕಿದರೆ ಸಮ । ರಾಯತದ ಸಂನ್ಯಾಸವೈಸಲೆ
ವಾಯುವಿನ ವೈಹಾಳಿಗೆಡೆಗುಡು ನಿನ್ನ ವಚನವನು
ಕಾಯ ಕಳಲದ ಮುನ್ನ ಮುಕ್ತಿಯ । ದಾಯಕರದಾರುಂಟು ನೆನೆಯೆನು
ತಾಯತಾಹವಮಲ್ಲ ತಿವಿದನು ವಜ್ರವಿಗ್ರಹನ ೨೫

ಕುಕ್ಕುರಿಸಿದುದು ಗೋಣು ಗೋಣಿನೊ । ಳೊಕ್ಕುದರುಣಜಲೌಘ ಜಡಿದುದು
ಮಿಕ್ಕು ಕಂಠದಲಱಿವು ಮಱವೆಯ ಜೀವಚಂಚಲದ
ಸೊಕ್ಕು ಬಲಿದುದು ಶ್ರಮದ ಸೋಂಕಿನ । ಸಕ್ಕಜವು ಬಲುಹಾಯ್ತು ಮಿಗೆ ಮುಂ
ದಿಕ್ಕಿಕೊಂಡುದು ಮೂರ್ಛೆ ಮಱವೆಗೆ ಸಂದನಾ ಹನುಮ ೨೬

ಕೇಳಿದೈ ಕುಶ ಕುಲಿಶಕಾಯನ । ಮೇಲೆ ಬಿದ್ದ ದಶಾನನನ ಕರ
ಜಾಲ ಕಂಪಿಸುತಿರ್ದವಳುಕಿನ ಬಳುಕುವೆರಳಿನಲಿ
ಸೀಳುವುದು ಕರಘಾತದಲಿ ಕುಲ । ಶೈಲ ಸಿಡಿದೊಡೆವುದು ಮಹಾದೇ
ವಾಳುತನವಿವಗೆಂತುಟೋಯೆನುತಸುರ ಬೆಱಗಾದ ೨೭

೨೪. "ಕೆಡಿಸಿ ಮಾತಾಡಿದೆಯಲ್ಲ ? ನಿನ್ನೊಡನೆ ನಾನು ಯುದ್ಧಮಾಡಿದೆ. ನಿನಗೆ ನಾನು ಸರಿಸಮಭಟ ಎಂದು ಬದುಕಿದೆನೆಂಬ ಹೆಮ್ಮೆಯಿಂದ ತಪ್ಪಿ ಮಾತಾಡಬಹುದೆ ? ಇನ್ನೊಂದು ಸಲ ಕಿರುಚಿಕೊಳ್ಳದೆ ನನ್ನ ಏಟನ್ನು ತಡೆದುಕೋ. ನನ್ನ ಹೊಡೆತಕ್ಕೆ ನಿನ್ನ ಪ್ರಾಣ ಹೋಗದಿದ್ದರೆ ನಿನ್ನೊಡನೆ ಯುದ್ಧಕ್ಕೆ ಸನ್ಯಾಸ ತೆಗೆದುಕೊಳ್ಳುವೆನು" ಎಂದ ಹನುಮಂತ. ೨೫. "ಈ ನನ್ನ ಏಟಿನಿಂದ ನೀನು ಬದುಕಿಬಂದರೆ ಇನ್ನು ಮೇಲೆ ನಾನು ಯುದ್ಧಕ್ಕೆ ಸನ್ಯಾಸ ತೆಗೆದುಕೊಳ್ಳುವೆನು. ನಿನ್ನ ಮಾತನ್ನು ಗಾಳಿಗೆ ತೂರಿಬಿಡು. ನಿನ್ನ ದೇಹ ಬೀಳುವುದಕ್ಕೆ ಮೊದಲು ನಿನಗೆ ಮೋಕ್ಷವನ್ನು ಕರುಣಿಸುವವರು ಯಾರಿದ್ದಾರೋ ಅವರನ್ನು ಸ್ಮರಿಸಿಕೋ" ಎಂದು ಪ್ರಚಂಡ ಯುದ್ಧವೀರ ರಾವಣನು ವಜ್ರದೇಹಿ ಮಾರುತಿಯನ್ನು ತಿವಿದನು. ೨೬. ಹನುಮಂತನ ಕುತ್ತಿಗೆ ಕುಕ್ಕುರಿಸಿತು. ಕೊರಳಿನಲ್ಲಿ ರಕ್ತಪ್ರವಾಹ ಹೊರಚಿಮ್ಮಿತು. ಅರಿವು ಮರವೆಯಿಂದ ಉಸಿರಾಟ ಕಂಠದಲ್ಲಿ ಅಸ್ಥಿರ ವಾಯಿತು. ಎಚ್ಚರ ತಪ್ಪಿತು. ಆಯಾಸವು ಹೆಚ್ಚಾಯಿತು. ಮೂರ್ಛೆ ಆವರಿಸಿ ಹನುಮಂತನು ಜ್ಞಾನತಪ್ಪಿದನು. ೨೭. ಕೇಳಿದೆಯಾ ಕುಶ, ವಜ್ರದೇಹಿ ಹನುಮಂತನ ದೇಹಕ್ಕೆ ತಗುಲಿದ ದಶಕಂಠನ ಕೈಗಳು ಬಳುಕುವ ಬೆರಳುಗಳಿಂದ ಅದುರುತ್ತಿದ್ದುವು. 'ಏಟಿನಿಂದ ಕೈ ಸೀಳುವುದು, ಕುಲಪರ್ವತ ಸಿಡಿದು ಒಡೆಯುವುದು. ಮಹಾದೇವ !

ಬಿದ್ದ ಭಟನಿವ ಸಂವರಿಸಿಕೊಂ । ಡೆದ್ದನಾದಡೆ ಸೂತ ಕೇಳೈ
ತಿದ್ದಿತೆಮ್ಮಯ ದೆಸೆ ವರೂಥವ ಹೂಡು ಬೇಗದಲಿ
ಗುದ್ದು ಬಿಜಿಸಿವನುಳಿವುದರಿದೆಮ । ಗಿದ್ದ ಹದನಿದು ಬೇಗ ಮಾಡೆನು
ತದ್ದಲಿಸೆ ಚಾಚಿದನು ರಥವನು ಸೂತನಸುರಂಗೆ ೨೮

ಸರಿವುದೇ ಪಾಡೆನುತ ಸೂಸಿದ । ಶರ ಶರಾಸನಶಸ್ತ್ರವನು ಸಂ
ವರಿಸಿಕೊಳುತಡರಿದನು ತನ್ನಯ ತೇರ ತವಕದಲಿ
ತೊರವೆಯಧಿಪತಿರಾಯ ನರಕೇ । ಸರಿಯ ಭೃತ್ಯನನಸುರಪತಿ ತಿರು
ತಿರುಗಿ ನೋಡುತ ಸೂಟಿಯಲಿ ಹರಿಸಿದನು ನಿಜರಥವ ೨೯

ಇವನ ಪೌರುಷವೆಷ್ಟೋ !' ಎಂದು ರಾವಣ ಬೆರಗಾದ. ೨೮. "ಕೆಳಗೆ ಬಿದ್ದ ಈ ವೀರನು ಚೇತರಿಸಿಕೊಂಡು ಎದ್ದ ಪಕ್ಷಕ್ಕೆ ನಮ್ಮ ಗತಿ ಮುಗಿಯಿತು. ಆದುದರಿಂದ ಸಾರಥಿ, ಬೇಗ ರಥವನ್ನು ಹೂಡು. ನಾವು ಕೊಟ್ಟ ಗುದ್ದು ಬಿರುಸು, ಇವನು ಬದುಕುವುದಸಾಧ್ಯ. ನಮಗಿದ್ದ ದಾರಿ ಇದು. ಬೇಗ ಮಾಡು" ಎಂದು ರಾವಣನು ಸಾರಥಿಯನ್ನು ಗದರಿಸಲು ಅವನು ರಥವನ್ನು ರಾವಣನ ಬಳಿ ತಂದು ನಿಲ್ಲಿಸಿದನು. ೨೯. 'ಇಲ್ಲಿಂದ ಹೊರಟು ಹೋಗುವುದೇ ಸರಿ' ಎನ್ನುತ್ತ ಚದುರಿಹೋಗಿದ್ದ ಬಿಲ್ಲು ಬಾಣ ಶಸ್ತ್ರಗಳನ್ನು ಒಟ್ಟುಗೂಡಿಸಿಕೊಂಡು ಆತುರದಿಂದ ರಾವಣನು ರಥವನ್ನೇರಿದನು. ತೊರವೆಯಧಿಪತಿ ನರಸಿಂಹನ ಅವತಾರಿಯಾದ ಶ್ರೀರಾಮನ ಭೃತ್ಯನನ್ನು ರಾಕ್ಷಸೇಂದ್ರನು ತಿರುತಿರುಗಿ ನೋಡುತ್ತ ಚುರುಕಾಗಿ ರಥವನ್ನು ಓಡಿಸಿದನು.

24

# ಇಪ್ಪತ್ತುನಾಲ್ಕನೆಯ ಸಂಧಿ

ಸೂಚನೆ॥ ವೀರರಕ್ಕಸರಾಯ ರಿಪುಜ । ಜ್ಝಾರನಾಹವಧೀರ ರಘುಕುಲ
ವೀರ ಲಕ್ಷ್ಮಣನೊಡನೆ ಹಳಚಿದು ಗೆಲಿದನಸುರೇಂದ್ರ

ಕೇಳಿದೈ ಕುಶ ನಿಮ್ಮ ರಘುಭೂ । ಪಾಲಕನ ಮನದಚ್ಚುಮೆಚ್ಚಿನ
ಪಾಲನೆಯ ನಿಜಭೃತ್ಯನನು ವಂಚಿಸಿ ದಶಗ್ರೀವ
ಕೋಲ ಕೋಳಾಹಳಿಕೆಯಲಿ ಕವಿ । ವಾಳ ಕೆಡಹುತ ಕದನಮುಖದು
ಬ್ಬಾಳಿಸಲಿ ರಘುಸಾರ್ವಭೌಮನನರಸುತೈತಂದ ೧

ಹರಿಣನುಪ್ಪರಗಮನಕಡಗಿ । ದ್ದುರವಣಿಪ ಹುಲಿಯಂತೆ ಮದಸಿಂ
ಧುರದ ಸರಗೇಳ್ದವ್ವಳಿಸಿ ಹೊಯ್ದೇಳ್ವ ಹರಿಯಂತೆ
ದುರಿತದುಬ್ಬರದುಮ್ಮಹದ ಮೈ । ಸಿರಿಗೆ ಮೇಲುಡಿಬೀಳ್ವ ವಿಷ್ಣು
ಸ್ಮರಣೆಯಂತಿದಿರಾದನಸುರೇಂದ್ರಂಗೆ ಸೌಮಿತ್ರಿ ೨

ಎತ್ತಲೆಲವೋ ಹರಿವು ಹಗೆಗಳು । ಮತ್ತೆ ನಮ್ಮಾ ಬಲದ ಬಾಹುಬ
ಲೋತ್ತಮರಲಾರುಂಟು ಹೇಳವರೆಮ್ಮ ಭೃತ್ಯರಲೆ
ತತ್ತ ಕಡುಹಗೆಕಾರರಿಲ್ಲೀ । ಹೊತ್ತಿಗೆಮ್ಮೊಳು ರಣವ ಜೈಸಿದು
ಮತ್ತೆ ಮುಂದಕೆ ಗವಿಃಸೆನುತ ಸೌಮಿತ್ರಿ ಮಾರಾಂತ ೩

ಸೂಚನೆ॥ ಶತ್ರುಶೂರ ರಣಧೀರ ವೀರ ರಾಕ್ಷಸರಾಜ ರಾವಣನು ರಘುಕುಲವೀರ ಲಕ್ಷ್ಮಣನೊಡನೆ ಕಾದಿ ಗೆದ್ದನು. ೧. ಕೇಳಿದೆಯಾ ಕುಶ, ನಿಮ್ಮ ರಘುರಾಮನ ಅಚ್ಚುಮೆಚ್ಚಿನ ಸೇವಕನನ್ನು ವಂಚಿಸಿ ದಶಕಂಠನು ಬಾಣಗಳ ಕೋಲಾಹಲದಿಂದ ತನ್ನನ್ನು ಮುತ್ತಿದ ಭಟರನ್ನು ಬೀಳಿಸುತ್ತ ಯುದ್ಧದ ಮದದಿಂದ ರಘುವಂಶ ಚಕ್ರವರ್ತಿಯನ್ನು ಹುಡುಕುತ್ತ ಬಂದ. ೨. ನೆಗೆದೋಡುವುದನ್ನು ನೋಡಿ ಅಡಗಿ ಕುಳಿತ ಹುಲಿ ಜಿಂಕೆಯ ಮೇಲೆ ಬೀಳುವಂತೆ, ಮದದಾನೆಯ ಧ್ವನಿಯನ್ನು ಕೇಳಿ ಮೇಲೆ ಬಿದ್ದು ಹೊಡೆಯುವ ಸಿಂಹದಂತೆ, ತೀವ್ರಪಾಪದ ಸಂಪತ್ತನ್ನು ಮುರಿದು ಕೆಡಹುವ ವಿಷ್ಣುನಾಮಸ್ಮರಣೆಯಂತೆ ಲಕ್ಷ್ಮಣನು ರಾವಣನಿಗೆ ಎದುರಾಗಿ ಬಂದನು. ೩. "ಎಲ್ಲಿಗೆ ಓಡುತ್ತಿರುವೆಯೋ ? ನಮ್ಮ ಈ ಸೈನ್ಯದ ಮಹಾವೀರರಲ್ಲಿ ಯಾರು ನಿನಗೆ ಶತ್ರುಗಳು ? ಹೇಳು. ಅವರು ನಮ್ಮ ಭೃತ್ಯರು. ಈ ಹೊತ್ತಿನಲ್ಲಿ ನಮಗೆ ಒದಗಿ ಬಂದ ಶತ್ರುಗಳಿಲ್ಲ. ನನ್ನೊಡನೆ ಯುದ್ಧಮಾಡಿ ಗೆದ್ದು ಮುಂದಕ್ಕೆ ಹೋಗು."

ಹೋಗದಿರು ನಿಲ್ಲೆಲವೊ ನಾವ್ ಶತ । ಯಾಗನೂರವರಲ್ಲ ನಿಲು ನ
ಮ್ಮಾಗಮದ ಬಗೆ ಬೇಱೆ ಬಂಟತನಕ್ಕೆ ಬೆರೆಯದಿರು
ಕೈಗಣೆಯ ಕಳುಹಿತ್ತ ಕದನದ । ಮೇಗೆ ನೀ ತಾನೆಲ್ಲಿಗಾದರೆ
ಹೋಗೆನುತ ನಿಜಧನುವ ದನಿದೋಱಿಸುತ ಬೊಬ್ಬಿಱಿದ ೪

ಬಿರಿದುದಿಳೆ ಬಿಲುದನಿಗೆ ರಿಪುತನು । ಜರಿಯದಿಹುದೇ ಸೂತನಸು ಜ
ಜ್ಜರಿತವಾದುದು ರಥದಿತೆಯಲಿ ಜವಗೆಟ್ಟವಶ್ವಚಯ
ಭರದ ಭೀತಿಯಲಸುರಪತಿ ಮೈ । ಗರೆದು ಮೋನಧ್ಯಾನದಲಿ ನಿಜ
ಶಿರವನೊಲೆದೊಲೆದಹುದೊ ವೀರರದೇವ ನೀನೆಂದ ೫

ಸುರರ ರಣಕಿಂದೀ ಮಹಾ ವಾ । ನರರ ರಣ ಮಿಗಿಲಾದುದೀ ವಾ
ನರರ ರಣಕಿಂದೀ ನರೇಂದ್ರನ ಕದನ ಕಡುಹಾಯ್ತು
ಅರರೆ ಚಕ್ರಾಕೃತಿಯನಂಗೀ । ಕರಿಸಿಕೊಂಡಿದೆ ರಿಪುನೃಪಾಲರ
ಧುರವಿಭೀಷಣ ನುಡಿದ ನುಡಿ ಸಡಗರಿಸುತಿದೆಯೆಂದ ೬

ಬಿಲ್ಲ ತುದಿಯಿಂದಿಱಿದು ಬಂಡಿಯ । ಚಲ್ಲಿಸಿದ ಯುಗದಂತಕನ ಕಡು
ತಲ್ಲಣದ ತೇಜಿಗಳ ಬೋಳೈಸಿದನು ಹಸ್ತದಲಿ
ಬಲ್ಲಿದನು ನೀನಹುದಲೇ ನರ । ರಲ್ಲಿ ನಮ್ಮಯ ಹಗೆಗೆ ನೀ ತಾ
ನೊಲ್ಲದಳಿಯನೊ ಮಗನೊ ಹುಸಿಯದೆ ಹೇಳು ನೀನೆಂದ ೭

ಎನ್ನುತ್ತ ಲಕ್ಷ್ಮಣನು ರಾವಣನನ್ನು ಅಡ್ಡಗಟ್ಟಿದನು. ೪. "ನಿಲ್ಲೋ, ಹೋಗಬೇಡ. ನಾವು ದೇವೇಂದ್ರನ ಊರಿನವರಲ್ಲ, ನಿಲ್ಲು. ನಮ್ಮ ವಿದ್ಯೆಯ ರೀತಿಯೇ ಬೇರೆ. ಕಿಂಕರವರ್ಗಕ್ಕೆ ಸೇರಬೇಡ. ನಿನ್ನ ಕೈಬಾಣಗಳನ್ನು ಇತ್ತ ಕಳುಹಿಸು. ಕದನ ಮುಗಿದ ಬಳಿಕ ನೀನು ಎಲ್ಲಿಗೆಬೇಕಾದರೂ ಹೋಗು" ಎನ್ನುತ್ತ ಲಕ್ಷ್ಮಣನು ಧನುಷ್ಟಂಕಾರ ಮಾಡಿ ಅರ್ಭಟಿಸಿದ. ೫. ಲಕ್ಷ್ಮಣನ ಧನುಷ್ಟಂಕಾರದ ಶಬ್ದಕ್ಕೆ ಭೂಮಿ ಬಿರಿಯಿತು, ಇನ್ನು ಶತ್ರುಗಳ ಶರೀರವು ಕುಸಿಯದೇ ? ಸಾರಥಿಯ ಪ್ರಾಣವು ಸಡಿಲಾಯಿತು, ಆ ಕ್ಷಣ ರಾವಣನ ರಥಕ್ಕೆ ಹೂಡಿದ್ದ ಕುದುರೆಗಳ ವೇಗ ಕುಂಠಿತ ವಾಯಿತು. ಭಾರಿ ಭಯದಿಂದ ರಾಕ್ಷಸೇಂದ್ರನು ಮೈಮರೆಸಿಕೊಂಡು ಮೌನ ಯೋಚನೆಯಲ್ಲಿ ಮುಳುಗಿ ತಲೆಯನ್ನು ತೂಗಿ "ಹೌದೋ, ವೀರರದೇವ ನೀನು ನಿಜ" ಎಂದ. ೬. ದೇವತೆಗಳೊಡನೆ ನಡೆದ ಯುದ್ಧಕ್ಕಿಂತ ವಾನರರ ಮೇಲಿನ ಯುದ್ಧ ಹೆಚ್ಚಾಯಿತು. ಈ ವಾನರರ ಜತೆಯ ಕದನಕ್ಕಿಂತ ಈ ಮಾನವೇಶ್ವರನ ಕದನ ತೀವ್ರವಾಯಿತು. ಶತ್ರುರಾಜರ ಯುದ್ಧವು ಚಕ್ರಾಕಾರವಾಗಿ ಗೋಚರಿಸುತ್ತಿದೆ. ವಿಭೀಷಣನ ಮಾತು ಈಗ ನಿಜವಾಗುವಂತೆ ಕಾಣಿಸುತ್ತಿದೆ. ೭. ಬಿಲ್ಲ ತುದಿಯಿಂದ ತಿವಿದು ರಥವನ್ನು ಚೋದಿಸಿದನು. ಪ್ರಳಯದ ಯಮನನ್ನು ನಡುಗಿಸುವ ಕುದುರೆಗಳನ್ನು ಅಂಗೈಯಿಂದ ತಟ್ಟಿದನು. "ಮಾನವರಲ್ಲಿ ನೀನು ಬಲ್ಲಿದನೆಂಬುದು ನಿಜ. ನಮ್ಮ ಶತ್ರುವಿಗೆ ನೀನು ಪ್ರೀತಿ ಕಳೆದುಕೊಂಡ ಅಳಿಯನೋ ಮಗನೋ, ಸುಳ್ಳಾಡದೆ ಹೇಳು"

ಅಳಿಯ ಮಗನೆಂಬೀ ವಿಚಾರದ । ಬಳಕೆ ನಿನಗೇಕೆಲವೊ ಮಲೆತರ
ನಳಿವೆವಾವ್ ಮಱೆಯೊಕ್ಕವರ ಮಗನೆಂದು ಮನ್ನಿಪೆವು
ಅಳಿವವನೊ ನೀ ನಿನ್ನ ತಮ್ಮನ । ಬಳಿಯ ಜೀವಿಸುವವನೊ ಪೇಳೈ
ಬಳಕೆಯಿಲ್ಲದೆ ಸಾವ ಬದುಕುವ ಬಗೆಯ ನೀನೆಂದ ೮

ಅರಿವಧುವನೆಳೆತಂದು ರಿಪುವಿನ । ಶರಪತಿಗೆ ಗುಱಿಯಾಗಿ ಮತ್ತದ
ಪರಿಹರಿಸಿ ಜೀವಿಸುವ ಭಟನೇ ಬಣಗೆ ಹೋಗೆನುತ
ಸರಳ ಸಾರದಲರಿನೃಪಾಲಾ । ವರಜನನು ಮುಸುಕಿದನು ಮೋಡದ
ತರಣಿಯಂತಿರೆ ತೋಱಿದನು ಸುರಬಲಕೆ ಸೌಮಿತ್ರಿ ೯

ಧುರದೊಳಾ ಲಕ್ಷ್ಮಣನು ಲಕ್ಷಿಸಿ । ಸರಳ ತೊಟ್ಟಡೆ ನಿಲುವನಾವನು
ಸುರನರೋರಗಲೋಕದೊಳಗೇನೆಂಬೆನದ್ಭುತವ
ಅರಿಶರೌಘವ ಕಾಣೆ ಕಾಣೆನು । ಸುರರ ಸರಣಿಯ ಚಾಪದೀಕ್ಷಾ
ಗುರುಗಳಲ್ಲಾ ರಾಮಲಕ್ಷ್ಮಣರೆಂದು ಮುನಿ ನುಡಿದ ೧೦

ಸರಳಮಯ ದಿಗುವಳಯ ಭೀಂಕೃತಿ । ಶಬದಮಯಮಂಬರ ಧರಾತಳ
ಹೊರಳಿಮಯ ಹೊಸ ತಳಪಗಳ ತಾಗುಗಳ ತನಿಗಿಡಿಯ
ಅರರೆ ನರಕೇಸರಿ ಹಿರಣ್ಯಕ । ರುರುತರದ ಸಂಗರಕೆ ಶತಸಾ
ವಿರದ ಮಡಿಯೆನೆ ಮೆಱೆದುದಾಜಿ ನರೇಂದ್ರ ರಾವಣರ ೧೧

ಎಂದು ರಾವಣನು ಕೇಳಿದನು. ೮. "ಅಳಿಯನೋ ಮಗನೋ ಎಂಬ ಸಂಬಂಧದ ವಿಚಾರಣೆ ನಿನಗೇಕೆ ? ಪ್ರತಿಭಟಿಸಿದವರನ್ನು ನಾವು ಕೊಲ್ಲುವೆವು, ಶರಣುಬಂದವರನ್ನು ಮಗನಂತೆ ಮನ್ನಿಸುವೆವು. ನೀನು ಮರಣವನ್ನಿಚ್ಛಿಸುವವನೋ, ಇಲ್ಲವೇ ನಿನ್ನ ತಮ್ಮನ ಆಶ್ರಯದಲ್ಲಿ ಬಾಳುವವನೋ ? ಸಾಯುವ ಬದುಕುವ ಕ್ರಮವಾವುದು, ಹೇಳು' ಎಂದು ಲಕ್ಷ್ಮಣ ಕೇಳಿದ. ೯. "ಶತ್ರುವಿನ ಹೆಂಡತಿಯನ್ನು ಎಳೆತಂದು ಅವನ ಬಾಣಕ್ಕೆ ಗುರಿಯಾಗಿ, ಬಳಿಕ ಅದನ್ನು ಹೋಗಲಾಡಿಸಿ ಬದುಕುವ ವೀರನೇ ನಾನು, ನೀಚ ಹೋಗು" ಎನ್ನುತ್ತ ರಾವಣನು ಬಾಣಗಳ ಮಳೆಯಿಂದ ಶತ್ರುರಾಜನ ತಮ್ಮನನ್ನು ಮುಚ್ಚಿಬಿಟ್ಟನು. ಆಕಾಶದಿಂದ ನೋಡುತ್ತಿದ್ದ ದೇವತೆಗಳಿಗೆ ಲಕ್ಷ್ಮಣನು ಮೋಡ ಮುಚ್ಚಿದ ಸೂರ್ಯನಂತೆ ಕಾಣಿಸಿದನು. ೧೦. "ಲಕ್ಷ್ಮಣನು ಯುದ್ಧದಲ್ಲಿ ಗುರಿಯಿಟ್ಟು ಬಾಣವನ್ನು ಪ್ರಯೋಗಿಸಿದರೆ ದೇವಲೋಕ ಮರ್ತ್ಯಲೋಕ ಪಾತಾಳಲೋಕಗಳಲ್ಲಿ ನಿಲ್ಲಬಲ್ಲವನು ಯಾರು ? ಅದ್ಭುತವನ್ನು ಏನೆಂದು ಹೇಳಲಿ. ಶತ್ರುವಿನ ಬಾಣಗಳೆಲ್ಲಿ ಹೋದುವೋ ಕಾಣೆ ; ಆಕಾಶದಲ್ಲಿದ್ದ ದೇವತೆಗಳೆಲ್ಲಿಹೋದರೋ ಕಾಣೆ. ರಾಮ ಲಕ್ಷ್ಮಣರು ಬಿಲ್ವಿದ್ಯೆಯಲ್ಲಿ ಆಚಾರ್ಯರಲ್ಲವೇ ? ಎಂದು ವಾಲ್ಮೀಕಿಮಹರ್ಷಿಗಳು ವರ್ಣಿಸಿದರು. ೧೧. ದಿಗ್ವಲಯವೆಲ್ಲ ಬಾಣಗಳಿಂದ ತುಂಬಿತು. ಆಕಾಶವೆಲ್ಲ ಭೀಂಕಾರ ದಿಂದ ಮೊರೆಯುವ ಬಾಣಮಯವಾಯಿತು. ಹೊಸಕಾಂತಿಗಳ ಘರ್ಷಣೆಯಿಂದ ಹೊರ ಹೊಮ್ಮಿದ ಕಿಡಿಗಳಿಂದ ಭೂಮಿಯೆಲ್ಲ ಪ್ರಕಾಶಮಯವಾಯಿತು. ಅಬ್ಬಬ್ಬ ನರಸಿಂಹ

ಎಸುವ ಭಟರಿಬ್ಬರ ಶರಾಳಿಯು । ಬೆಸುಗೆಯಲಿ ಬಲು ತಿಮಿರಲತೆ ಲಂ
ಬಿಸಿದುದವನೀತಳವ ಜವನಾಲಯದ ತಮದಂತೆ
ಮಸೆಗಳಿಬ್ಬರ ಮೈಗಳಲಿ ಸಂ । ಧಿಸಿದುದನು ನಾ ಕಾಣೆ ಕಲಿಕೆಯ
ವಿಶಿಖವಿದ್ಯದ ಗರುಡಿಯೊಬ್ಬನೊಳಲ್ಲದಿಲ್ಲೆಂದ ೧೨

ಸುರರು ಮೆಚ್ಚಿದರೀತನೆಸುಗೆಯ । ಕರಚಮತ್ಕೃತಿಗೊಡನೆ ರಜನೀ
ಚರರು ಹಾರೈಸಿದರು ಸರಳೋಟಕೆ ದಶಾನನನ
ಶರನಿಧಿಯಃ ತೆರೆಮಾಲೆಗಳ ಮೋ । ಹರದವೊಲು ಬಳಿಕಿಬ್ಬರೆಸುಗೆಯ
ಸರಳ ಸಂಗರ ನಡೆದುದೊಂದರೆಜಾವ ಪರಿಯಂತ ೧೩

ಕೋಪ ಕೊನರಿದುದಿಬ್ಬರಿಗೆ ಶಿಖಿ । ರೂಪರಾದರು ಬಳಿಕ ವಿಲಯವಿ
ರೂಪನಯನನ ಭಾಳಲೋಚನದಗ್ನಿಕಣದಂತೆ
ತಾಪಿಸಿದವು ಜಗತ್ರಯವನುರಿ । ತಾಪದಲಿ ತಳ್ಳಂಕಿಸಿತು ಮೇ
ಲಾ ಪುರಂದರ ಧನದ ಯಮ ವರುಣಾದಿ ನಿರ್ಜರರ ೧೪

ಏಕೆ ನಾವಂದಿವನುಪದ್ರಕೆ । ನಾಕಜರ ನೆರಹಿದು ಪಯೋನಿಧಿ
ಗೇಕೆ ನಡೆತಂದಸುರಧೂಳೀಪಟಗೆ ದೂರಿದೆವು
ಸೋಕುತಿದೆ ಶರದಗ್ನಿತಾಪ ಸ । ಮೀಕವಿದಱಲಿ ಮನವು ಮರಣವ
ಕೈಕೊಳಿಸುತಿದೆ ಕೆಟ್ಟೆವೆಂದಜಸುರಪರೊಱಲಿದರು ೧೫

ಹಿರಣ್ಯಕಶಿಪುಗಳ ಉಗ್ರ ಸಮರಕ್ಕೆ ನೂರು ಸಾವಿರದಷ್ಟು ತೀವ್ರತರವೆನ್ನುವಂತೆ ಲಕ್ಷ್ಮಣ ರಾವಣರ ಯುದ್ಧವು ಮೆರೆಯಿತು. ೧೨. ಇಬ್ಬರು ವೀರರ ಬಾಣಗಳು ಒಂದೊರಡನೊಂದು ಸೇರಿಕೊಂಡು ಯಮನ ಲೋಕದ ಕತ್ತಲೆಯಂತೆ ಕತ್ತಲೆ ಭೂಮಿಯನ್ನು ತುಂಬಿತು. ಇಬ್ಬರಲ್ಲಿ ಯಾರೊಬ್ಬರ ದೇಹದ ಮೇಲೂ ಗಾಯಗಳಾದುದನ್ನು ಕಾಣೆ. ಬಾಣವಿದ್ಯೆಯ ಕಲಿಕೆಯು ಒಬ್ಬೊಬ್ಬನಲ್ಲೂ ಅತಿಶಯವಾಗಿಲ್ಲದೆ ಇರಲಿಲ್ಲ. ೧೩. ಲಕ್ಷ್ಮಣನ ಬಾಣಪ್ರಯೋಗದ ಹಸ್ತಕೌಶಲವನ್ನು ಕಂಡು ದೇವತೆಗಳು ಮೆಚ್ಚಿದರು. ಅಸುರರು ರಾವಣನ ಬಾಣದ ವೇಗವನ್ನು ಕೊಂಡಾಡಿದರು. ಸಮುದ್ರದ ಅಲೆಗಳ ಸಾಲು ಒಂದನ್ನೊಂದು ಅಪ್ಪಳಿಸುವಂತೆ ಇಬ್ಬರ ಬಾಣಗಳ ಯುದ್ಧವು ಒಂದು ಅರ್ಧ ಜಾವದವರೆಗೂ ನಡೆಯಿತು. ೧೪. ಲಕ್ಷ್ಮಣ ರಾವಣರಿಬ್ಬರಿಗೂ ಕೋಪವುದ್ಭವಿಸಿತು. ಪ್ರಳಯಶಿವನ ಹಣೆಗಣ್ಣಿನ ಬೆಂಕಿಯ ಕಿಡಿಯಂತೆ ಅಗ್ನಿರೂಪರಾದರು. ಮೂರು ಲೋಕಗಳನ್ನೂ ಉರಿಯು ಸುಡಲಾರಂಭಿಸಿತು. ದೇವೇಂದ್ರ, ಕುಬೇರ, ಯಮ, ವರುಣನೇ ಮೊದಲಾದ ದೇವತೆಗಳನ್ನು ಬೆಂಕಿಯು ಹೆದರಿಸಿತು. ೧೫. ಹಿಂದೆ ರಾವಣನ ಕಾಟವನ್ನು ತಡೆಯಲಾರದೆ ದೇವತೆಗಳನ್ನೆಲ್ಲ ಗುಂಪುಕೂಡಿಸಿಕೊಂಡು ಬಂದು ಅಸುರಾರಿ ವಿಷ್ಣುವಿನ ಬಳಿಗೆ ಏತಕ್ಕೆ ದೂರು ತೆಗೆದುಕೊಂಡು ಹೋದೆವೋ. ಬಾಣದ ಬೆಂಕಿಯ ತಾಪವು ತಗಲುತ್ತಿದೆ. ಈ ಯುದ್ಧವು ಮರಣವನ್ನು ತರುತ್ತಿದೆ, ಕೆಟ್ಟೆವು'

ಸುರರ ಕಟ್ಟೊಱಲಿಕೆಯನದ ಕೇ । ಳ್ದರಿಭಯಂಕರ ಲಕ್ಷ್ಮಣನು ಲಘು
ತರದ ಶರಸಂಧಾನದಲಿ ಲಂಕಾಪುರಾಧಿಪನ
ಕರದ ಕಾರ್ಮುಕ ಹತ್ತ ಶತಸಾ । ವಿರದ ಕಡಿಯಲಿ ಕಡಿದು ವಕ್ಷದ
ಹೊರೆಯ ಹೊಮ್ಮಿನ ವರ್ಮವನು ಹಱಿಯೆಚ್ಚು ಬೊಬ್ಬಱಿದ ೧೬

ಕುಶಿಕಸುತನಾ ಲಕ್ಷ್ಮಣಗೆ ಕರು । ಣಿಸಿದ ಪೂರ್ವದಮೋಘ ಭಾಸುರ
ವಿಶಿಖವದು ಕೀಲಿಸಿತು ಕೀಲಾಲವನುರಸ್ಥಳವ
ವಿಷವ ಕೊಂಡವನಂತೆ ತನು ಕಂ । ಪಿಸಿತು ಕಳವಳಿಕೆಯಲಿ ಕಂಗಳ
ರಸುಮೆಯಡಗಿದುದಂಗ ಬಾರಿಸೆ ನೆಮ್ಮಿದನು ಮಲಗ ೧೭

ಬೆದಱಿ ಸಾರಥಿ ಸಮರಮುಖದಾ । ಳುದನನೆಸುಗೆಯ ಕಾಣದಕಟಾ
ಕದನ ಕುಂಟಿಸಿತೇನು ಗತಿ ತನ್ನಸುವಿಗೆಂದನುತ
ಬೆದಱುಮೋಱೆಯ ಬೆಬ್ಬಳದಿ ಕದ । ಬದಿಸುತಿರೆ ತಪ್ಪಾಯಿತೆಂದಾ
ಕದನಗಲಿ ಸೌಮಿತ್ರಿ ಸಂಧಿಸಿದನು ಸುರಾಂತಕನ ೧೮

ಹೂಡಿದಾ ಬಳಿಯಂಬ ಮೆಲ್ಲನೆ । ಮೂಡಿಗೆಯೊಳಿಳುಹಿದನು ಮನದಲಿ
ಕೋಡಿದನು ಕಾಕುತ್ಸ್ಥನಂಕಿತ ಶಾಸನಸ್ಥಿತಿಗೆ
ನೋಡಿದನು ಬಳಿಕೇಱಿಳಿಯಲುಸು । ರಾಡಿಕೆಯ ಬಡತನದ ಬಳಿಯ ಸ
ಗಾಢವನು ಕಂಡೀತ ಕೃಪೆಯಲಿ ಸೂತಗಿಂತೆಂದ ೧೯

ಎಂದು ಬ್ರಹ್ಮ ಇಂದ್ರರು ಕೂಗಿಕೊಂಡರು. ೧೬. ದೇವತೆಗಳ ಅಂಜಿಕೆಯ ಕೂಗನ್ನು ಕೇಳಿ ಶತ್ರುಭಯಂಕರ ಲಕ್ಷ್ಮಣನು ಲಘುವಾದ ಬಾಣಪ್ರಯೋಗದಿಂದ ಲಂಕೇಶ್ವರನ ಕೈಗಳಲ್ಲಿದ್ದ ಹತ್ತು ಬಿಲ್ಲುಗಳನ್ನೂ ಸಾವಿರ ತುಂಡುಗಳಾಗಿ ಕತ್ತರಿಸಿ ರಾವಣನ ಎದೆಯನ್ನು ಮುಚ್ಚಿದ್ದ ಕವಚವನ್ನು ಹರಿಯುವಂತೆ ಬಾಣವಿಟ್ಟು ಬೊಬ್ಬಿರಿದ. ೧೭. ವಿಶ್ವಾಮಿತ್ರನು ಲಕ್ಷ್ಮಣನಿಗೆ ಅನುಗ್ರಹಿಸಿಕೊಟ್ಟ ಆ ಅಮೋಘ ಬಾಣವು ರಾವಣನ ಎದೆಯೊಳಗಿನ ರಕ್ತದವರೆಗೆ ನಾಟಿಕೊಂಡಿತು. ವಿಷ ಕುಡಿದವನಂತೆ ರಾವಣನ ದೇಹವು ನಡುಗಿತು. ಕಳವಳದಿಂದ ಕಣ್ಣುಗಳ ಕಾಂತಿಯುಡಗಿತು. ದೇಹವು ಭಾರವಾಗಲು ರಾವಣನು ದಿಂಬಿಗೆ ಒರಗಿದನು. ೧೮. ಬೆದರಿದ ಸಾರಥಿಯು ಯುದ್ಧದಲ್ಲಿ ಒಡೆಯನು ಬಾಣಬಿಡುತ್ತಿರುವುದನ್ನು ಕಾಣದೆ, 'ಅಯ್ಯೋ ಯುದ್ಧವು ಕುಂಟಿತು, ನನ್ನ ಪ್ರಾಣಕ್ಕೆ ಇನ್ನೇನು ಗತಿ ! ಎಂದು ಹೆದರಿದ ಮುಖದಿಂದ ಗಾಬರಿಯಾಗಿ ಕದಬದಿಸುತ್ತಿರಲು ವೀರ ಲಕ್ಷ್ಮಣನು ತಪ್ಪಾಯಿತೇ ಎಂದು ರಾವಣನ ಬಳಿಗೆ ಬಂದನು. ೧೯. ಬಿಲ್ಲಿಗೆ ಹೂಡಿದ ಬಳಿಯಂಬನ್ನು ತೆಗೆದು ನಿಧಾನವಾಗಿ ಬತ್ತಳಿಕೆಯೊಳಿಟ್ಟನು. ಶ್ರೀರಾಮನು ನಿಯಮಿಸಿದ ಆಜ್ಞೆಯನ್ನು ನೆನೆದು ಲಕ್ಷ್ಮಣನು ಅಳುಕಿದನು. ರಾವಣನ ಉಸುರು ಕೃಶವಾಗಿ ಏರಿಳಿಯುತ್ತಿರುವುದನ್ನು ಕಂಡು ಕರುಣೆಯಿಂದ ಸಾರಥಿಯನ್ನು ಕುರಿತು

ಬಾರೆಲವೊ ಸಾರಥಿ ಸಮೀಪವೊ । ದೂರವೋ ನಿನ್ನವಗೆ ಸಾವ ವಿ
ಕಾರ ದೇಹದೊಳಿಲ್ಲವಲೆ ನೋಡುಸುರನಾರೈದು
ನೀರನೆಱಿಯೌಷಧಿಗಳುಳ್ಳಡೆ । ಸೇರಿಸೇಱಿನ ಮೇಲಮಾರ್ಗದ
ದಾರಿಯುವರಾವಲ್ಲ ಬೇಗುಪಚರಿಸು ನೀನೆಂದ ೨೦

ಎದ್ದು ಬಳಿಕವನಸುರನಕ್ಷಿಗೆ । ತಿದ್ದಿದನು ಹೊಂಗಲಶವಾರಿಯ
ನುದ್ದಿದನು ಘಾಯದಲಿ ಶುಕ್ರಾಚಾರ್ಯನೌಷಧಿಯ
ದೊಡ್ಡವಾಯನೊ ಖಳನೊ ಹೊಯ್ದಡೆ । ಬಿದ್ದನೆಂದೆಂಬವರ ಕಥೆ ನಿನ
ಗಿದ್ದುದೇಳೆಂದೆಬ್ಬಿಸಿದನುಬ್ಬಿಱಿದು ದಶಮುಖನ ೨೧

ಏಳುತವ ಪರಮೇಶದತ್ತ ಕ । ರಾಳಶಕ್ತಿಯ ನೆಗಹುತಿಟ್ಟನು
ಕೇಳಿದೈ ಕುಶ ಕೊಂಡುಬಿದ್ದುದು ರಾಘವಾನುಜನ
ಮೇಲುಜಗವನು ಮುಸುಕಿದುದು ಧೂ । ಮಾಳಿ ವಕ್ಷವನುಗಿದು ಮೊನೆ ಪಾ
ತಾಳದಲಿ ಲಂಬಿಸಿತು ಚುಂಬಿಸಿತುರಿ ರಸಾತಳವ ೨೨

ಬಿದ್ದನೋ ಹಗೆಯೆನುತ ಬೆನ್ನಾ । ಗಿದ್ದ ಬಲ ಬೊಯೆಂದುದಮರರು
ತಿದ್ದಿತಿನ್ನೇನೆಂದು ನೊಂದರು ಮನದ ಮಱುಕದಲಿ
ಉದ್ದುರುಟು ಖಳನಿಳಿದು ರಥವನು । ಹೊದ್ದಿದನು ಲಕ್ಷ್ಮಣನ ಸೀತೆಯ
ಕದ್ದುಕೊಂಡೊಯ್ದಂತೆ ಕೊಂಡೊಯ್ಯಲಿಕೆ ಮನದಂದ ೨೩

ಹೇಳಿದನು. ೨೦. "ಬಾರೋ ಸಾರಥಿ, ನಿನ್ನವನಿಗೆ ಮರಣವು ಹತ್ತಿರವಾಗಿದೆಯೋ ದೂರವೋ ನೋಡು. ಸಾಯುವ ಕೆಟ್ಟ ಲಕ್ಷಣಗಳಿವೆಯೇ ಎಂದು ಉಸುರನ್ನು ಪರೀಕ್ಷೆ ಮಾಡಿ ನೋಡು. ನೀರನ್ನು ಚಿಮುಕಿಸು, ಔಷಧಿಗಳಿದ್ದರೆ ಗಾಯದ ಮೇಲೆ ಸವರು. ದಾರಿಬಿಟ್ಟು ಹೋಗುವವರು ನಾವಲ್ಲ. ಬೇಗ ರಾವಣನಿಗೆ ಉಪಚಾರಮಾಡು" ಎಂದು ಲಕ್ಷ್ಮಣ ಹೇಳಿದ. ೨೧. ಅನಂತರ ಸಾರಥಿಯು ಎದ್ದು ಚಿನ್ನದ ಪಾತ್ರೆಯಲ್ಲಿದ್ದ ನೀರನ್ನು ರಾವಣನ ಕಣ್ಣುಗಳಿಗೆ ತಿಕ್ಕಿದನು. ಶುಕ್ರಾಚಾರ್ಯನು ಕೊಟ್ಟಿದ್ದ ಔಷಧಿಯನ್ನು ರಾವಣನ ಗಾಯದ ಮೇಲೆ ಸವರಿದನು. 'ಲೆಕ್ಕಕ್ಕೆ ಬಾರದ ಜಗ ಜಂಗುಳಿಯು ಸಾಮಾನ್ಯನೋ ದುಷ್ಟನೋ ಹೊಡೆದಷ್ಟಕ್ಕೆ ಕೆಳಕ್ಕೆ ಬಿದ್ದ ಎಂದು ಹೇಳುವವರ ಕಥೆ ನಿನ್ನಲ್ಲಾಯಿತು, ಏಳು' ಎಂದು ಸಾರಥಿಯು ಉತ್ಸಾಹದಿಂದ ರಾವಣನನ್ನು ಎಬ್ಬಿಸಿದನು. ೨೨. ರಾವಣನು ಏಳುತ್ತ ಪರಮೇಶ್ವರನು ಕೊಟ್ಟಿದ್ದ ಪ್ರಚಂಡ ಶಕ್ತ್ಯಾಯುಧವನ್ನು ಎತ್ತಿ ಹೊಡೆದನು. ಕೇಳಯ್ಯ ಕುಶ. ಆ ಶಕ್ತ್ಯಾಯುಧವು ರಾಮನ ತಮ್ಮನ ಮೇಲೆ ಬಿದ್ದು ಅವನಿಗೆ ಗಟ್ಟಿತು. ಆಗ ಮೇಲಿನ ಲೋಕವನ್ನು ಹೊಗೆ ಮುಸುಕಿತು. ಆಯುಧವು ಲಕ್ಷ್ಮಣನ ಎದೆಗೆ ಚುಚ್ಚಿ ಅದರ ಮೊನೆಯು ಪಾತಾಳಕ್ಕೆ ನಾಟಿತು. ಪಾತಾಳಲೋಕದಲ್ಲಿ ಉರಿ ಹಬ್ಬಿತು. ೨೩. ರಾವಣನ ಹಿಂದುಗಡೆಗಿದ್ದ ಸೈನ್ಯವು 'ಶತ್ರು ಬಿದ್ದನು !' ಎಂದು ಬೊೋ ಎಂದು ಕೂಗಿತು. 'ಇನ್ನೇನು ಮುಗಿಯಿತು !' ಎಂದು ದೇವತೆಗಳು ಮನಸ್ಸಿನಲ್ಲಿ ದುಃಖಿಸುತ್ತ ನೊಂದುಕೊಂಡರು. ಒರಟನಾದ ರಾವಣಾಸುರನು ರಥದಿಂದ ಇಳಿದು ಲಕ್ಷ್ಮಣನ

ಒಯ್ದುವೆನಿವನಗ್ರಜನ ಕೊಂ | ಡೊಯ್ದು ತೋಱುವೆನೆನ್ನನೊಲ್ಲದ
ಮೇದಿನೀನಂದನೆಗೆ ಕುಂದುವುದನಿತಱಲಿ ಮನವ
ನೆಯ್ದುಕೊಂಡಿಹ ಪತಿಯ ದೆಸೆಯನು | ಪಾದವೆನ್ನ ಮನೋರಥದ ರಸ
ವಾದ ಸಿದ್ಧಿಪುದೆಂದು ಬಿಡದೌಕಿದನು ಲಕ್ಷ್ಮಣನ ೨೪

ಔಕಲವುಕಿದವಳ್ಳೆ ದಳ್ಳಿಸಿ | ನೂಕಿತುರಿ ನಿಟ್ಟುಸಿರಿನಲಿ ಬಿಡ
ದೋಕರಿಸಿದುದು ವದನ ಹಾಲಾಹಲ ಮಹಾವಿಷವ
ಕೈಕರಣ ತಳ್ಳಂಕದಲಿ ಬಲು | ಲೋಕ ಗರ್ಭಾಧಾರಕನ ಜಗ
ದೇಕವೀರನ ನೆಗಹಿ ನೆಗಹದೆ ನಿಂದನಸುರೇಂದ್ರ ೨೫

ಹಿರಿದು ಬೆಱಗಿಟ್ಟಸುರಪತಿ ನಿಜ | ಶಿರವ ತೂಗುತಲಾಗಲದಕೇ
ನರಿದಿವನ ಮಸ್ತಕವನೊಯ್ವೆನೆನುತ್ತ ಖಂಡೆಯವ
ಕೊರಳಿಗಾನಿಸುವನಿತಱೊಳು ಬೆ | ಜ್ವರದ ರೋಗಿಯ ಮುಂದೆಸೆಯ ನಿಂ
ದಿರುವ ಮೃತ್ಯುವಿನಂತೆ ನಿಂದಿದನೊದಱಿ ಕಲಿ ಹನುಮ ೨೬

ಏನಲವೊ ದಶಕಂಠ ಕೃತಸಮ | ರಾನುಭಾಷಿತವೆಲ್ಲಿ ರಣದಪ
ಯಾನ ಶಸ್ತ್ರಾಭ್ಯಾಸವಾರಿಂದಱಿಕೆ ನಿನಗಾಯ್ತು
ಈ ನಿಶಿತ ನಿಸ್ತ್ರಿಂಶಕವು ತಾ | ನೇನದಾರಿಗೆ ಹೋಗಲದಕಿಂ
ದೇನು ನಮ್ಮಯ ಕೊಡುವ ಸಾಲವ ಕೊಟ್ಟು ಹೋಗೆಂದ ೨೭

ಬಳಿಗೆ ಬಂದು ಸೀತೆಯನ್ನು ಕದ್ದು ತಂದಂತೆ ಲಕ್ಷ್ಮಣನನ್ನು ಎತ್ತಿಕೊಂಡು ಹೋಗಲು ನಿಶ್ಚಯಿಸಿದನು. ೨೪. 'ಇವನನ್ನೂ ಇವನ ಅಣ್ಣನನ್ನೂ ಕೊಂಡುಹೋಗಿ ನನ್ನನ್ನು ಒಲ್ಲದ ಸೀತೆಗೆ ತೋರಿಸುವೆನು. ಇದಿಷ್ಟರಿಂದ ಮನಸ್ಸಿನಲ್ಲಿ ಪತಿಯನ್ನನುಸರಿಸುವೆನೆಂದು ಆಸೆಯನ್ನು ಕಟ್ಟಿಕೊಂಡಿರುವ ಸೀತೆಯು ಕುಗ್ಗುತ್ತಾಳೆ. ನನ್ನ ಬಯಕೆಯೆಂಬ ಸವಿಯಾಸೆಯು ಸಿದ್ಧಿಸುವುದು' ಎಂದು ಲಕ್ಷ್ಮಣನನ್ನು ಎತ್ತಲು ಹೋದನು. ೨೫. ರಾವಣನು ಲಕ್ಷ್ಮಣನನ್ನು ಎತ್ತುವುದಕ್ಕೆ ಪ್ರಯತ್ನಿಸಲು ಅಳ್ಳೆಗಳು ಹೊಡೆದು ಕೊಂಡವು. ನಿಟ್ಟುಸಿರಿನಿಂದ ಉರಿ ಧಗ್ಗೆಂದು ಹೊರಟಿತು, ಬಾಯಿ ಹಾಲಾಹಲ ಮಹಾವಿಷವನ್ನು ಕಾರಿತು. ಕೈ ಮತ್ತು ಇಂದ್ರಿಯಗಳ ಚಿಂತೆಯಲ್ಲಿ ಮುಳುಗಿದ ರಾಕ್ಷಸೇಶ್ವರನು ಸಕಲ ಲೋಕಗಳನ್ನು ಗರ್ಭದಲ್ಲಿ ಧರಿಸಿದ ಜಗದೇಕ ವೀರನನ್ನು ಎತ್ತಿಯೂ ಎತ್ತಲಾರದೆ ನಿಂತನು. ೨೬. ಅತ್ಯಂತ ಆಶ್ಚರ್ಯದಿಂದ ರಾಕ್ಷಸೇಶ್ವರನು ತಲೆದೂಗುತ್ತ 'ಆಗಲಿ ಅದಕ್ಕೇನು, ಇವನ ತಲೆಯನ್ನು ಕತ್ತರಿಸಿ ತೆಗೆದುಕೊಂಡು ಹೋಗುವೆನು' ಎನ್ನುತ್ತ ಖಡ್ಗವನ್ನು ಲಕ್ಷ್ಮಣನ ಕೊರಳಿಗೆ ಹಾಕುವಷ್ಟರಲ್ಲಿ ಭ್ರಮಿಷ್ಟ ರೋಗಿಯ ಮುಂದುಗಡೆಯಲ್ಲಿ ನಿಂತ ಮೃತ್ಯುವಿನಂತೆ ವೀರಹನುಮಂತನು ಬಂದು ನಿಂತು ಗರ್ಜಿಸಿದನು. ೨೭. "ಏನೋ ದಶಕಂಠ, ನಿನ್ನ ಕದನದ ಮಾತುಗಾರಿಕೆಯೆಲ್ಲಿ? ಯುದ್ಧದಲ್ಲಿ ಪಲಾಯನ ಮಾಡುವ ಶಸ್ತ್ರಾಭ್ಯಾಸವನ್ನು ಯಾರಲ್ಲಿ ಕಲಿತೆ? ಯಾರ ಮೇಲೆ ಪ್ರಯೋಗಿಸಲು ಈ

ನೆತ್ತಿಗೇಱಿತು ಜೀವವನಿಲಜ । ನುತ್ತರಕೆ ಕೈಗುಂದಿ ಖಂಡೆಯ
ಕಿತ್ತು ಬಿದ್ದುದು ಬೆದಱಿದನು ಕೈಕಾಲು ಕಂಪದಲಿ
ಮಿತ್ತು ಮಗುಳ್ದೈತಂದುದಡಗಲು । ಹೆತ್ತ ತಾಯೊಡಲಲ್ಪವಿದಕಿ
ನ್ನುತ್ತರವದೇನೆಂದು ತಳವೆಳಗಾದನಸುರೇಂದ್ರ ೨೮

ಕೊಡದೆ ಘಾಯವನೆಮ್ಮ ಕಳನಲಿ । ಕೆಡಹಿ ವಂಚಿಸಿ ಬಹುದಿದುಚಿತವೆ
ಪೊಡವಿ ನಗದೇ ನಿನ್ನನೆಲವೋ ನಿನ್ನ ಚಿತ್ತವನು
ಪಡೆಯದಿರೆ ತಾ ಹನುಮನೇಯೆಂ । ದೊಡೆಯುಲಧರವನಗಿದು ಮುಷ್ಟಿಯ
ಜಡಿದು ಜಗದುದ್ದಂಡಬಲನಿಂತೆಂದನಸುರಂಗೆ ೨೯

ಕರೆದುಕೋ ಬೊಮ್ಮನನು ಭೃಗುಜನ । ಬರಿಸು ಮೃತಸಂಜೀವನಿಯನರೆ
ದಿರಿಸು ಸಾಯದುಪಾಯವೆನಿತುಂಟನಿತನನುಕೊಳಿಸು
ನಿರುತವಿದು ಕೇಳೆಲವೊ ನಾವನು । ಸರಿಸುವವರಲ್ಲಿದಕೊ ರಘುಭೂ
ವರನ ಮೆಚ್ಚಿನ ಘಾಯವೆನುತೆಱಗಿದನು ರಕ್ಕಸನ ೩೦

ದೆಸೆದೆಸೆಗೆ ಚಲ್ಲಿದವು ಕರುಳಿನ । ಕುಸುರಿ ಕೊಡಹಿದ ಚೀಲದವೊಲೆಲು
ಸಸಿದುಬಿದ್ದವು ಬೆಱಸಿ ಚಿಮ್ಮಿತು ರುಧಿರ ನಿರ್ಝರರ
ಮುಸುಡೆಡೆಗೆ ಮದವೇಱಿದಿಭಪತಿ । ಕುಸುಕಿದೆಳಗುಂಬಳದವೊಲು ರ
ಕ್ಕಸನ ನಿಜದಾಕಾರ ವಿಕಾರವಾಯ್ತು ನಿಮಿಷದಲಿ ೩೧

ಹರಿತವಾದ ಕತ್ತಿ ? ಹೋಗಲಿ ಅದಕ್ಕೇನು, ನಮಗೆ ಕೊಡಬೇಕಾದ ಸಾಲವನ್ನು ಕೊಟ್ಟು ಹೋಗು" ಎಂದ ಹನುಮಂತ. ೨೮. ಹನುಮಂತನ ಮಾತನ್ನು ಕೇಳಿ ರಾವಣನ ಉಸಿರು ನೆತ್ತಿಗೇರಿತು. ಕೈಸಡಿಲಿ ಹಿಡಿದಿದ್ದ ಕತ್ತಿಯು ಕೆಳಕ್ಕೆ ಬಿದ್ದಿತು. ಹೆದರಿಕೆಯಿಂದ ಕೈಕಾಲು ನಡುಕಹುಟ್ಟಿತು. 'ಮೃತ್ಯು ಪುನಃ ಬಂದುಬಿಟ್ಟಿತು. ಅಡಗಿಕೊಳ್ಳೋಣವೆಂದರೆ ಹೆತ್ತ ತಾಯ ಹೊಟ್ಟೆ ಸಾಲದು. ಇದಕ್ಕೆ ಏನು ಮಾಡೋಣ' ಎಂದ ರಾಕ್ಷಸೇಶ್ವರನು ಕಳವಳಗೊಂಡನು. ೨೯. "ಪೆಟ್ಟು ಕೊಡದೆ ಯುದ್ಧದಲ್ಲಿ ನಮ್ಮನ್ನು ವಂಚಿಸಿ ಬರುವುದು ಉಚಿತವೇ ? ನಿನ್ನನ್ನು ನೋಡಿ ಭೂಮಿ ನಗುವುದಿಲ್ಲವೇ ? ನಿನ್ನ ಮನಸ್ಸನ್ನು ಪಡೆಯದಿದ್ದರೆ ನಾನು ಹನುಮಂತನೇ ?" ಎಂದು ಬಿಗಿಯಾಗಿ ತುಟಿ ಕಚ್ಚಿ ಪ್ರಚಂಡಬಲ ಹನುಮಂತನು ಬಿಗಿದ ಮುಷ್ಟಿಯನ್ನು ತೋರಿಸುತ್ತ ರಾವಣನಿಗೆ ಹೇಳಿದ. ೩೦. "ಬ್ರಹ್ಮನನ್ನು ಕರೆದುಕೊಂಡು ಬಾ. ಶುಕ್ರಾಚಾರ್ಯನನ್ನು ಬರ ಮಾಡು. ಸತ್ತವರನ್ನು ಬದುಕಿಸುವ ಸಂಜೀವನಿಔಷಧಿಯನ್ನು ಅರೆಸು. ಸಾಯದೆ ಇರುವ ಉಪಾಯಗಳೆಷ್ಟಿವೆಯೊ ಅಷ್ಟನ್ನೂ ಸಿದ್ಧಪಡಿಸಿಕೋ. ಇದು ಸತ್ಯ, ಕೇಳೋ, ನಾವು ಅನುಸರಿಸಿಕೊಂಡಿರುವವರಲ್ಲ. ಇಗೋ, ಇದು ರಾಘವನ ಮೆಚ್ಚಿನ ಏಟು" ಎನ್ನುತ್ತ ಹನುಮಂತನು ರಾವಣನ ಮೇಲೆರಗಿದನು. ೩೧. ಕರುಳಿನ ಚೂರುಗಳು ದಿಕ್ಕುದಿಕ್ಕಿಗೆ ಚಲ್ಲಿದವು. ಚೀಲವನ್ನು ಕೊಡಹಿದಂತೆ ಮೂಳೆಗಳು ಚೆಲ್ಲಾಪಿಲ್ಲಿಯಾಗಿ ಬಿದ್ದವು, ಒಡನೆ ರಕ್ತವು ದೇವತೆಗಳ ಮುಖಕ್ಕೆ ಚಿಮ್ಮಿತು, ಮದಿಸಿದ ದಿಗ್ಗಜವು ಕುಕ್ಕಿಹಾಕಿದ ಎಳೆಗುಂಬಳ

ಅಡಗಿತೀತನ ಕೋಪವಸು ಹಿಡಿ । ದೊಡಲಿನಸುರನ ಕಾಣುತೆಡೆಯಲಿ
ಮಿಡುಕಿನಂಶಾಂಶಪ್ರಮಿತದಸುವಱಿಕೆಗುಡದಂತೆ
ಮೃಡ ಸರೋಜಜರಿತ್ತ ವರದು । ಗ್ಗಡದ ಬಲುಹಿಂದಿದ್ದುದವನು
ಗ್ಗಡದ ವಿಕಳಾಲಾಪ ಲೇಪಿಸಿತನಿಲನಂದನನ ೩೨

ಅಕಟ ಸ್ವಾಮಿದ್ರೋಹಿಕೆಯ ಪಾ । ತಕಕೆ ಪಕ್ಕಾದೆನೆ ಮಹಾನರ
ಕಕ್ಕೆ ನಾಯಕನಾದೆನೇ ಶಿವಶಿವ ಮಹಾದೇವ
ಪ್ರಕಟಿಸಿದೆನೇ ಮೂರ್ಖತೆಯನ । ವ್ಯಕುತ ರಾಮ ಸುಭಾಷಿತದ ಸು
ಪ್ರಕಟ ಸೂರ್ಯಾತಪಕೆ ತಮ ತಾನಾದೆನೇಯೆಂದ ೩೩

ರಾಯ ರಘುರಾಜೇಂದ್ರ ಮನದಲಿ । ನೋಯದಿರನಿನ್ನಕಟಕಟ ರಾ
ಮಾಯಣದ ಹೆಸರಂತರಿಸಿತೆಂದಧಿಕ ಚಿಂತೆಯಲಿ
ನ್ಯಾಯವಲ್ಲೆಂದಮರ ಮನುಜನಿ । ಕಾಯ ಬಯ್ಯದೆ ಮಾಣದೆನ್ನನು
ಪಾಯವಿದಕಿನ್ನೇನೆನುತ ಮಱುಗಿದನು ಮನದೊಳಗೆ ೩೪

ಐಸೆ ಮತ್ತೇನೆಮ್ಮ ದುಷ್ಕೃತ । ದೋಷವಿದೆಲಾ ಮೀಱಲಾರಳ
ವೇಸು ಮಱುಗಿದಡೇನು ನೋಡುವೆನೊಮ್ಮೆಗೀ ಖಳನ
ನಾಸಿಕಾಂತರ್ಗತ ಕಳಾಪ್ರಾ । ಣಾಶುಗನ ತತ್ಪ್ರಾಣಗತ ಪರ
ಮಾಶುಗನು ಹಿಂಗಿದಡೆ ಹೊಗುವೆನು ಹವ್ಯವಾಹನನ ೩೫

ದಂತೆ ರಾವಣನ ದೇಹದಾಕಾರವು ಒಂದು ನಿಮಿಷದಲ್ಲಿ ವಿಕಾರವಾಯಿತು. ೩೨. ಹಿಡಿದ ದೇಹದ ರಾವಣನನ್ನು ಕಾಣುತ್ತ ಹನುಮಂತನ ಕೋಪವು ಅಡಗಿತು. ಗೋಚರಕ್ಕೆ ಬಾರದಂತೆ ಕ್ಷೀಣವಾಗಿ ಭಾಗಶಃ ತುಡಿಯುತ್ತಿದ್ದ ರಾವಣನ ಪ್ರಾಣವು ಶಿವ ಬ್ರಹ್ಮರು ಇತ್ತ ಅತಿಶಯ ವರದ ಬಲದಿಂದ ಉಳಿದುಕೊಂಡಿತ್ತು. ರಾವಣನ ಕಳವಳದ ನರಳುವಿಕೆಯು ಹನುಮಂತನಿಗೆ ಕೇಳಿಸಿತು. ೩೩. 'ಅಯ್ಯೋ, ಸ್ವಾಮಿದ್ರೋಹದ ಪಾಪಕ್ಕೆ ಪಕ್ಕಾದೆನೆ ? ಮಹಾನರಕಕ್ಕೆ ಒಳಗಾದೆನೇ ? ಶಿವಶಿವ ಮಹಾದೇವ ! ಮೂರ್ಖತೆಯನ್ನು ಪ್ರದರ್ಶಿಸಿದೆನಲ್ಲ ! ರಾಮನ ಪ್ರತಿಜ್ಞೆಯ ಬಿಸಿಲಿಗೆ ಕತ್ತಲೆಯಾದೆನೇ ನಾನು ?' ಎಂದು ಹನುಮಂತ ಹಲುಬಿದ. ೩೪. 'ರಘುರಾಮಚಂದ್ರನು ಮನಸ್ಸಿನಲ್ಲಿ ನೊಂದುಕೊಳ್ಳದೆ ಇರನು. ಅಯ್ಯೋ, ರಾಮಾಯಣದ ಹೆಸರು ವ್ಯತ್ಯಾಸವಾಯಿತೇ !' ಎಂದು ಹನುಮಂತನು ಚಿಂತೆಯಲ್ಲಿ ಮುಳುಗಿದನು. 'ಇದು ನ್ಯಾಯವಲ್ಲ' ಎಂದು ದೇವತೆಗಳು. ಮಾನವರು ನನ್ನನ್ನು ಬಯ್ಯದೆಬಿಡರು. ಇದಕ್ಕೇನುಪಾಯ ?' ಎನ್ನುತ್ತ ಮನಸ್ಸಿನಲ್ಲಿ ದುಃಖಿಸಿದನು. ೩೫. 'ಐಸೆ, ಮತ್ತೇನು ನಮ್ಮ ಪಾಪಕರ್ಮದ ದೋಷವಲ್ಲವೇ ಇದು ಮೀರಲು ಯಾರ ಕೈಯಲ್ಲಿ ಸಾಧ್ಯ? ಸುಮ್ಮನೆ ಮರುಗಿದರೆ ಏನುಬಂತು. ಈ ರಾಕ್ಷಸನ ಮೂಗಿನಲ್ಲಿ ಪ್ರಾಣವಾಯು ಆಡುತ್ತಿದೆಯೇ ಎಂದು ನೋಡುವೆನು. ಉಸಿರು ನಿಂತಿ

ಎಂದು ಮನದಲಿ ನಿರ್ಧರಿಸಿ ಶ । ತ್ರುಂದವನು ಸುರವೈರಿಯೆಡೆಗೈ
ತಂದು ನೋಡಿದನಸುರನೆದೆಯಲಿ ಮಿಡುಕನಾರೈದು
ಸಂಧಿಸಿದನವನವಯವಂಗಳ । ನಂದದಿಂಗೆ ಪುರುಷಾಕೃತಿಯನ
ಲ್ಲಿಂದ ಮೇಲೊದೆದನು ಕಣಾ ಮನದಲಿ ಮಹೀತಳವ ೩೬

ಧರಣಿಜಾಸುತ ಕೇಳು ಹನುಮನ । ಚರಣಹತಿಗಳೆ ಬಿರಿಯಲಂದಿಸಿತು
ಸುರತರಂಗಿಣಿಗೆಣೆಯೆನಿಪ ನದಿ ತನ್ಮಹಾನದಿಯು
ಪರಮ ಪಾವನಜಲವ ದೊಗೆದವ । ನುರದಲವನಕ್ಷಿಗಳಲಾ ದಶ
ಶಿರನ ವದನದಲುಂಗಿಸಿ ಕೈಮುಗಿದೆಂದನಯ್ಯಂಗೆ ೩೭

ತರಳತನದಲಿ ತಾನು ನಡೆದೀ । ದುರುಳತೆಯ ದೂಟಿಕ್ಕಿ ನಿಮ್ಮಯ
ಹಿರಿಯತನವನು ಮೆಱೆವುದೀ ರಾಕ್ಷಸಕುಲಾಧಮನ
ಅಱಿಯದಸುವಿಗೆ ಮೃತ್ಯುವಾದೆನು । ಮಱೆಯ ಮಾತೇಕೆನ್ನನಾಳ್ದನ
ಚರಣಸೇವೆಗೆ ಸಲಿಸುವಂತುದ್ಧರಿಸಬೇಕೆಂದ ೩೮

ಮಗನ ಮಾತಿಗೆ ಮಱವೆಯಸುರನ । ನೆಗಹಿದನು ಮಾರುತನು ಮೆಲ್ಲನೆ
ಮುಗಿದೆವೆಯ ಕಣ್ಣರಳಿದವು ಸತ್ರಾಣ ಸುಗತಿಯಲಿ
ಜಗದ ಜೀವಕುಮಾರನಯ್ಯನ । ಹೊಗಳಿ ತಲೆದೂಗಿದನು ನಾಟಿದ
ನಗೆಯ ನಯನದ ಹರುಷವಾರಿಯೊಳಸುರಗಿಂತೆಂದ ೩೯

ದ್ದರೆ ಅಗ್ನಿಪ್ರವೇಶಮಾಡುವೆನು' ೩೬. ಎಂಬುದಾಗಿ ಮನಸ್ಸಿನಲ್ಲಿ ನಿರ್ಧರಿಸಿ ಶತ್ರುಜಯ ಹನುಮಂತನು ರಾಕ್ಷಸನ ಬಳಿಗೆ ಬಂದು ಉಸಿರನ್ನು ಪರೀಕ್ಷಿಸಿ ಎದೆಯಲ್ಲಿ ಸ್ಪಂದನವನ್ನು ಕಂಡನು. ರಾವಣನ ಅವಯವಗಳನ್ನು ಚೆನ್ನಾಗಿ ಜೋಡಿಸಿ ಪುರುಷಾಕೃತಿಯನ್ನು ಮಾಡಿದನು. ಅನಂತರ ಹಿಮ್ಮಡಿಯಿಂದ ನೆಲವನ್ನು ಒದ್ದನು. ೩೭. ಸೀತಾಪುತ್ರನೇ ಕೇಳು. ಹನುಮಂತನ ಹೆಜ್ಜೆಯ ಏಟಿಗೆ ಭೂಮಿ ಬಿರಿದು ಅಲ್ಲಿ ದೇವಗಂಗೆಗೆ ಸಮಾನವಾದ ನದಿಯು ಹುಟ್ಟಿತು. ಆ ಮಹಾನದಿಯು ಪರಮಪವಿತ್ರ ನೀರನ್ನು ತೆಗೆದುಕೊಂಡು ರಾವಣನ ಎದೆ, ಕಣ್ಣುಗಳು, ಮುಖಗಳಲ್ಲಿ ಚಿಮುಕಿಸಿ ಕೈಮುಗಿದುಕೊಂಡು ತಂದೆ ವಾಯುದೇವನನ್ನು ಕುರಿತು ಹೇಳಿದನು. ೩೮. "ಹುಡುಗುತನದಿಂದ ನಾನು ನಡೆಸಿದ ದುಷ್ಟತನವನ್ನು ಪರಿಹರಿಸಿ ನಿಮ್ಮ ಹಿರಿತನವನ್ನು ಮೆರೆಯುವುದು. ತಿಳಿಯದೆ ಈ ರಾಕ್ಷಸಕುಲಾಧಮನ ಪ್ರಾಣಕ್ಕೆ ಮೃತ್ಯುವಾದೆ. ಮುಚ್ಚುಮರೆಯೇಕೆ, ನನ್ನ ಒಡೆಯನ ಪಾದಸೇವೆಗೆ ಸಲ್ಲುವಂತೆ ನನ್ನನ್ನು ಉದ್ಧರಿಸಿ" ಎಂದು ಹನುಮಂತನು ಪ್ರಾರ್ಥಿಸಿದನು. ೩೯. ಮಗನ ಮಾತನ್ನು ಕೇಳಿ ವಾಯುದೇವನು ಮೈಮರೆತಿದ್ದ ರಾವಣನಲ್ಲಿ ಚೈತನ್ಯ ತುಂಬಿದನು. ನಿಧಾನವಾಗಿ ಪ್ರಾಣತುಂಬಿ ರಾವಣನ ಮುಚ್ಚಿದ ಕಣ್ಣುರೆಪ್ಪೆಗಳು ಬಿಚ್ಚಿಕೊಂಡವು. ಜಗತ್ಪ್ರಾಣನ ಮಗ ಹನುಮಂತನು ತಂದೆಯನ್ನು ಹೊಗಳಿ ತಲೆದೂಗಿದನು. ನಗುತ್ತ ಕಣ್ಣುಗಳಲ್ಲಿ ಸಂತೋಷದ ನೀರು ತುಂಬಿಕೊಂಡು

ಏಜಿ಼ಲವೊ ಖಳ ರಥವನವಯವ । ದೇಜಿ಼ನಲಿ ತೊಡೆಯೌಷಧಿಯನು
ಬ್ಬೇಜು ಕದನಕೆ ಕರಣದಲಿ ನೀನಂಜಬೇಡಿನ್ನು
ಬೇಜಿ಼ ಮಾತಿಲ್ಲೆಮಗೆ ನಾವ್ ಕೈ । ವಿಾಱುವವರಲ್ಲಿನ್ನು ಮನದಳ
ಲಾಜಿ಼ತೆಮಗಾಹವಕೆ ರಾಮನೊಳೊದಗು ಹೋಗೆಂದ ೪೦

ಹೋಗು ಕಾದೆನು ನಿನ್ನೊಡನೆ ಖಳ । ನಾಗಕುಲ ಹರಿಯಕ್ಷನಾಣೆ ವಿ
ರಾಗಿಗಳು ನಾವ್ ರಣಕೆ ತಪ್ಪೆವು ನುಡಿದ ಭಾಷಿತಕೆ
ಜೋಗುವೋಗದಿರೇಳು ಕೊಲ್ಲೆನು । ಹೋಗು ಕಾದುವಡಸುರರಿಪುವನು
ತಾಗು ತೋಟಿಯ ಫಲವ ತುದಿಯಲಿ ಕಾಬೆ ನೀನೆಂದ ೪೧

ಎಂದು ಮಾರುತಿ ನುಡಿದ ಮಾತುಗ । ಳಂದದಲಿ ಮಾಡಿದನು ಮೇಲೆ ಪು
ರಂದರಾದ್ಯರು ಬೈದರೀ ಪವಮಾನನಂದನನ
ಕೊಂದು ಹಗೆಯನು ಮರಳಿ ಜೀವವ । ತಂದು ಕೆಡಿಸಿದನಕಟ ಖಳನಿವ
ನೆಂದಿಗಳಿವನೆನುತ್ತ ತಳವೆಳಗಾಯ್ತು ಸುರಕಟಕ ೪೨

ಕಳುಹಿದನು ರಕ್ಕಸನ ಬಳಿಕೂ । ರ್ಮಿಳೆಯ ಗಂಡನ ಬಳಿಗೆ ಬಂದನು
ಬಳಲಿದಂಗದ ಭಟನನೀಕ್ಷಿಸಿ ನಯನವಾರಿಗಳು
ತುಳುಕುಗಳ ತುದಿಮೂಗಿನಕ್ಕೆಯು । ಬಳಿಯ ಭಾರಿಯ ದುಗುಡದಿಂದೊಲೆ
ದೊಲೆದು ನಟ್ಟಾಲಿಗಳ ಬೆಱಗಿನೊಳಿರ್ದನಾ ಹನುಮ ೪೩

ಹನುಮಂತನು ರಾವಣನನ್ನು ಕುರಿತು ಹೇಳಿದನು. ೪೦ "ಲೋ ರಾಕ್ಷಸ, ರಥವನ್ನು ಹತ್ತೋ. ಅವಯವಗಳ ಗಾಯಂಗಳಿಗೆ ಔಷಧಿಯನ್ನು ಸವರು. ಯುದ್ಧಕ್ಕೆ ಹುರುಪು ತಂದುಕೋ. ನೀನಿನ್ನು ಹೆದರಬೇಡ. ನಮ್ಮ ಮಾತಿನಲ್ಲಿ ವ್ಯತ್ಯಾಸವಿಲ್ಲ. ಇನ್ನು ನಾವು ನಿನ್ನ ಮೇಲೆ ಮಿಾರಿ ಕೈಮಾಡುವುದಿಲ್ಲ. ನಮ್ಮ ಮನಸ್ಸಿನ ರಚ್ಚು ಇಳಿಯಿತು. ರಾಮನೊಡನೆ ಯುದ್ಧಕ್ಕೆ ಹೋಗು" ಎಂದು ಹೇಳಿದ ಹನುಮಂತ. ೪೧. "ಹೋಗು, ನಿನ್ನೊಡನೆ ಯುದ್ಧ ಮಾಡುವುದಿಲ್ಲ ; ರಾಕ್ಷಸರೆಂಬ ಆನೆಗಳಿಗೆ ಸಿಂಹನಾದ ಅಸುರಾರಿಯ ಆಣೆ. ಯುದ್ಧದ ಬಗ್ಗೆ ನಾವು ನಿರಾಸಕ್ತರು. ನಾವು ಆಡಿದ ಮಾತಿಗೆ ತಪ್ಪುವುದಿಲ್ಲ. ಜೋಮುಹಿಡಿದು ಕೂರಬೇಡ, ಏಳು. ನಿನ್ನನ್ನು ಕೊಲ್ಲುವುದಿಲ್ಲ ಹೋಗು. ನೀನು ಯುದ್ಧ ಮಾಡುವುದಾದರೆ ಅಸುರಾರಿ ರಾಮನೊಡನೆ ಹೋರಾಡು. ಯುದ್ಧದ ಫಲ ವನ್ನು ಕೊನೆಯಲ್ಲಿ ಕಾಣುವೆ" ಎಂದ ಹನುಮಂತ. ೪೨. ಹನುಮಂತನು ತಾನು ನುಡಿ ದಂತೆ ಮಾಡಿದನು. ಆಕಾಶದಿಂದ ದೇವೇಂದ್ರನೇ ಮೊದಲಾದವರು ವಾಯುಸುತನನ್ನು ಬೈದರು. ಶತ್ರುವನ್ನು ಕೊಂದು ಪುನಃ ಜೀವ ಬರಿಸಿ ಕೆಡಿಸಿದನು. ಅಯ್ಯೋ, ಈ ರಾಕ್ಷಸನು ಎಂದಿಗೆ ಸಾಯುವನು ಎನ್ನುತ್ತ ದೇವತೆಗಳು ಚಿಂತಾಕುಲರಾದರು. ೪೩. ರಾವಣನನ್ನು ಕಳುಹಿಸಿ ಹನುಮಂತನು ಲಕ್ಷ್ಮಣನ ಬಳಿಗೆ ಬಂದನು. ಬಳಲಿದ ದೇಹದ ವೀರಲಕ್ಷ್ಮಣನನ್ನು ಕಂಡು ಕಣ್ಣೀರು ಸುರಿಸುತ್ತ ತುದಿಮೂಗಿನಲ್ಲಿ ಅಳುತ್ತ ನಿಂತನು. ಭಾರಿದುಃಖದಿಂದ ಒಲೆದಾಡುತ್ತ ದಿಗ್ಭ್ರಮೆಗೊಂಡು ನಟ್ಟದೃಷ್ಟಿಯಿಂದ ಲಕ್ಷ್ಮಣನನ್ನು

ಸಾರಿತೇಯುಕಟಕಟ ರಾಜಕು । ಮಾರಕರಿಗಾಪತ್ತು ರಾಜ್ಯ
ಶ್ರೀರಮಣಿ ಹಗೆಯಾದಳೇ ಶಿವಶಿವ ಮಹಾದೇವ
ಘೋರಗಹನ ಪರಿಭ್ರಮಣ ವಿ । ಸ್ತಾರವಾದನಿತಲ್ಲದಹಿತನ
ಕೂರಲಗಿಗೊಡಲೊಡ್ಡಿದಿರೆ ಹಾಯೆನುತ ಶೋಕಿಸಿದ ೪೪

ಮಱುಗಿ ಮಾಡುವುದೇನು ಮುಂದಣ । ತೆಱನ ಕಾಬುದೆ ಪೌರುಷಾಂಗದ
ಹೊಱಗೆಯೆನುತನುಮಾನಿಸಿದನಜ ಹರ ಕೃತಾಂತಕರ
ಉಱುವ ಜೀವವನುಗಿದು ತಂದೀ । ತೊಱೆದ ಜೀವದ ಲಕ್ಷ್ಮಣನ ಕ
ಣ್ದೆಱೆಸುವೆನು ಕಥೆಯೇಕೆನುತ ಬೊಬ್ಬಿಱಿದನಾ ಹನುಮ ೪೫

ಕಮಲಭವನಂಜಿದನು ಗಿರಿಜಾ । ರಮಣ ನಡುಗಿದನಂತಕನ ತನು
ಬೆಮರಿದುದು ಕಲಿ ಪವನಸುತ ಕೈಕೊಂಡ ಕೆಲಸದಲಿ
ಸಮತೆಯನು ಕೈಕೋ ದುರಾಗ್ರಹ । ದಮರುಷವ ಬಿಡು ಹನುಮ ಲಯ ಸಂ
ಕ್ರಮಿಸಬಲ್ಲುದೆ ಲಕ್ಷ್ಮಣಂಗೆಂದುದು ನಭೋನಿನದ ೪೬

ಶ್ವಸನಸುತನಾ ನುಡಿಯನನುವ । ರ್ತಿಸುತಲಾ ಲಕ್ಷ್ಮಣನ ನಾಡಿಗ
ಳಸುವಿನಾರೈಕೆಯಲಿ ಕಂಡನು ಜೀವಮಾರುತನ
ಶಿಶುವನಾ ತಾಯ್ ಸೋಗಿಲಿಗೆ ಸೇ । ರಿಸುವವೊಲು ತಕ್ಕೈಸಿ ತಂದನು
ವಸುಮತೀಶನ ಬಳಿಗೆ ಬಳಿಕಾ ವೀರ ಹನುಮಂತ ೪೭

ನೋಡಿದನು. ೪೪. "ಅಯ್ಯೋ, ರಾಜಕುಮಾರರಿಗೆ ಆಪತ್ತುಂಟಾಯಿತೇ! ಶಿವಶಿವ ಮಹಾದೇವ, ರಾಜ್ಯಲಕ್ಷ್ಮಿಯು ಶತ್ರುವಾದಳೇ ! ಭಯಂಕರ ಅರಣ್ಯದಲ್ಲಿ ಅಲೆದಾಡಿದುದು ಸಾಕಾಗದೆ, ಶತ್ರುವಿನ ಹರಿತವಾದ ಆಯುಧಕ್ಕೆ ದೇಹವನ್ನು ಒಡ್ಡಿದಿರಲ್ಲ !" ಎಂದು ಹನುಮಂತ ದುಃಖಿಸಿದ. ೪೫. "ಸುಮ್ಮನೆ ಮರುಗುವುದರಿಂದೇನು ಪ್ರಯೋಜನ. ಮುಂದಿನ ಮಾರ್ಗವನ್ನು ಕಂಡುಕೊಳ್ಳುವುದೇ ವೀರನ ಜವಾಬ್ದಾರಿ !' ಎಂದು ಹನುಮಂತನು ಯೋಚಿಸಿದನು. "ಬ್ರಹ್ಮ ಈಶ್ವರ ಯಮ-ಇವರ ಜೀವವನ್ನು ಸೆಳೆದುತಂದು ಜೀವವನ್ನು ಬಿಟ್ಟ ಲಕ್ಷ್ಮಣನಿಗೆ ಜೀವತುಂಬಿ ಕಣ್ಣು ತೆರೆಸುತ್ತೇನೆ, ಇದಕ್ಕೆ ಕಥೆಯೇಕೆ" ಎಂದು ಗರ್ಜಿಸಿದನು ಹನುಮಂತ. ೪೬. ವೀರ ಹನುಮಂತನು ಕೈಕೊಂಡ ಕಾರ್ಯವನ್ನು ಕಂಡು ಬ್ರಹ್ಮನು ಹೆದರಿದನು, ಈಶ್ವರನು ನಡುಗಿದನು ಮತ್ತು ಯಮನ ಶರೀರ ಬೆವರಿತು. 'ಸಮಾಧಾನ ತಂದುಕೋ. ಕೆಟ್ಟಹಟದ ಕ್ರೋಧವನ್ನು ಬಿಡು, ಹನುಮಂತ. ಲಕ್ಷ್ಮಣನಿಗೆ ಸಾವುಂಟಾಗಬಲ್ಲುದೇ !' ಎಂದು ಆಕಾಶವಾಣಿ ನುಡಿಯಿತು. ೪೭. ವಾಯುಪುತ್ರನು ಆ ಮಾತನ್ನನುಸರಿಸಿ ಲಕ್ಷ್ಮಣನ ನಾಡಿ ಹಿಡಿದು ಪರೀಕ್ಷಿಸಿ ಪ್ರಾಣವಾಯು ಆಡುತ್ತಿರುವುದನ್ನು ಕಂಡನು. ತಾಯಿ ಮಗುವನ್ನು ಮಡಿಲಿಗೆ ಹಾಕಿಕೊಳ್ಳುವಂತೆ ವೀರಹನುಮಂತನು ಲಕ್ಷ್ಮಣನನ್ನು ಅಪ್ಪಿಕೊಂಡು ರಾಮನ ಬಳಿಗೆ

ತೋಱಿಸಿದನಾಚೆಯಲಿ ತೇರಿನ । ಚೀಱಿಕೆಯ ಚೀತ್ಕೃತಿಯಲಸುರನ
ತೋಱಿಸಿದನೀಚೆಯಲಿ ತಾ ತಂದೂರ್ಮಿಳಾಪತಿಯ
ಏಱಿಸನುಪಮ ಧನುವ ಶರಮುಖ ।ಕೇಱಿಸಹಿತನ ಬಳಿಕ ಘಾಯವ
ನಾಱಿಸನುಜನ ಮನುಜರಂಗದ ಬಳಕೆ ಬೇಡೆಂದ ೪೮

ಏನು ಹದನೈ ಹನುಮ ನಮಗೆ ಋ । ಣಾನುಬಂಧನವುಂಟೆ ತಮ್ಮನ
ಹಾನಿ ನಂಬುಗೆಗಾಗದಲೆ ಪರಿಯಾಯದಂಬಿಕೆಯ
ಏನು ಮನದನುಮಾನ ಮನವು ದ । ಶಾನನನ ರಣಕೊದಗದಿದೆ ದು
ಮ್ಮಾನವನು ಬಿಡಿಸಯ್ಯ ಹೇಳೆನ್ನಾಣೆ ಹೇಳೆಂದ ೪೯

ದೇವರಲಿ ಮಱಿಮಾತೆ ಬಿನ್ನಹ । ಕಾವ ಸಂಶಯಬೇಡ ಲಕ್ಷ್ಮಣ
ದೇವನಪಗತನಾದಡೆನ್ನಲಿ ಸಮತೆ ಸಮನಿಪುದೆ
ದೇವ ರಿಪುವಿನ ಕೊಲೆಗೆ ಕೊಂಕಿನ । ಭಾವವನೆ ಕೈವಿಡಿಯದವನೀ
ದೇವ ದೇವೋದ್ಧಾರನಾಗೆಂದನು ನಿಜೇಶಂಗೆ ೫೦

ಎತ್ತಿದನು ಬಳಿಕಮಮ ವಜ್ರಾ । ವರ್ತ ಕಾರ್ಮುಕದಂಡವನು ಹಗೆ
ಯತ್ತ ಮೊಗದಿರುಹಿದನು ಹೂಡಿದ ಸರಳಸೌಜ್ಞೆಯಲಿ
ಕೃತ್ತಿವಾಸ ವಿರಿಂಚಿ ದಿವಿಜಕು । ಲೋತ್ತಮರು ಹಾರೈಸೆ ರಾಜಕು
ಲೋತ್ತಮನ ಧರಧುರದ ದರುಶನಕತುಳ ಹರುಷದಲಿ ೫೧

ಕರೆದುಕೊಂಡು ಬಂದನು. ೪೮. ರಥದ ಚಕ್ರಗಳ ಚೀತ್ಕಾರಶಬ್ದದೊಡನೆ ಹೋಗುತ್ತಿರುವ ರಾವಣನನ್ನು ರಾಮನಿಗೆ ತೋರಿಸಿದನು ; ಇತ್ತ ತಾನು ಕರೆತಂದ ಲಕ್ಷ್ಮಣನನ್ನು ತೋರಿಸಿದನು. "ನಿನ್ನ ಅಮೋಘವಾದ ಬಿಲ್ಲನ್ನು ಏರಿಸು, ಶತ್ರುವನ್ನು ಬಾಣದಿಂದ ಹೊಡೆ. ಅನಂತರ ನಿನ್ನ ತಮ್ಮನ ಗಾಯವನ್ನು ವಾಸಿಮಾಡು. ಮಾನವರಂತೆ ನಡೆದುಕೊಳ್ಳಬೇಡ" ಎಂದ ಹನುಮಂತ. ೪೯. "ಏನು ಸ್ಥಿತಿ ಹನುಮಂತ ? ನಮಗೆ ಋಣಾನುಬಂಧವುಂಟೆ ? ತಮ್ಮನ ಹಾನಿಯಿಂದ ಚಿಕ್ಕಮ್ಮನ ನಂಬಿಕೆ ನಮ್ಮ ಮೇಲೆ ಉಳಿಯುವುದೆ ? ನಿನ್ನ ಆಲೋಚನೆಯೇನು ? ರಾವಣನೊಡನೆ ಕದನಕ್ಕೆ ನನ್ನ ಮನಸ್ಸು ಬರುತ್ತಿಲ್ಲ. ನನ್ನ ದುಃಖವನ್ನು ಹೋಗಲಾಡಿಸು, ನನ್ನಾಣೆ ಹೇಳು" ಎಂದ ರಾಮ. ೫೦. "ಸ್ವಾಮಿಯವರಲ್ಲಿ ನಿವೇದಿಸಿಕೊಳ್ಳಲು ಮುಚ್ಚುಮಾತೇನು ? ಲಕ್ಷ್ಮಣದೇವನು ತೀರಿಕೊಂಡರೆ ನನ್ನಲ್ಲಿ ಸಮಾಧಾನ ಉಳಿಯುವುದೆ ? ಶತ್ರುವಿನ ಹತ್ಯೆಗೆ ಹಿಂಜರಿಯುವ ಭಾವನೆಯನ್ನು ಕೈಗೊಳ್ಳದೆ ದೇವತೆಗಳನ್ನು ಕಾಪಾಡುವವರಾಗಿ" ಎಂದು ತನ್ನ ಒಡೆಯನಿಗೆ ಹನುಮಂತನು ಹೇಳಿದನು. ೫೧. ಅನಂತರ ರಾಮನು ವಜ್ರಾವರ್ತ ಧನುಸ್ಸನ್ನು ಎತ್ತಿದನು. ಬಿಲ್ಲಿಗೆ ಬಾಣವನ್ನು ಹೂಡಿ ಶತ್ರುವಿನ ಕಡೆಗೆ ತಿರುಗಿದನು. ಈಶ್ವರ, ಬ್ರಹ್ಮ, ದೇವತೆಗಳು ಹರ್ಷದಿಂದ ರಾಮನ ಅತಿಶಯವಾದ ಯುದ್ಧವನ್ನು ನೋಡಲು ಬಯ

ಬಂದುದೈ ಬಳಿಕಹಿತರಥವೇ । ನೆಂದು ಹೇಳುವೆನಸುರರಾಯಂ
ಗೊಂದಿದತಿಶಯ ತಪದ ಮಹಿಮೆಯದೇನು ವಿಸ್ಮಯವೊ
ನೊಂದ ನೋವೇನಾಯ್ತೊ ಶಿಶುತನ । ದಿಂದುವಿನ ಕಳೆಯಂತೆ ಹೆಚ್ಚಿತು
ಕಂದ ಕೇಳಸುರೇಂದ್ರನುಬ್ಬಟೆ ರಾಮನಿದಿರಿನಲಿ ೫೨

ಸಿದರು. ೫೨. ಬಳಿಕ ರಾವಣನ ರಥವು ಬಂದಿತು. ಏನು ಹೇಳಲಿ, ರಾಕ್ಷಸರೊಡೆಯನ ತಪಸ್ಸಿನ ಮಹಿಮೆಯು ಏನು ಆಶ್ಚರ್ಯಕರ! ಅವನು ಏಟುತಿಂದ ನೋವು ಏನಾಯಿತೋ ಕೇಳು ಮಗು ಲವ, ಬಾಲಚಂದ್ರನ ಕಳೆಯಂತೆ ರಾವಣನ ಪರಾಕ್ರಮವು ರಾಮನ ಎದುರಿನಲ್ಲಿ ಹೆಚ್ಚಿತು ಎಂದು ವಾಲ್ಮೀಕಿಗಳು ನುಡಿದರು.

# ಇಪ್ಪತ್ತೈದನೆಯ ಸಂಧಿ

ಸೂಚನೆ॥ ಖೇಚರರು ಕೊಂಡಾಡೆ ಸಕಲ ಚ । ರಾಚರಾತ್ಮಕನಸುರರಾಯನ
ನಾಚಿಕೆಯ ಕೊಂಡುಳುಹಿ ಕಳುಹಿದನಸಮ ಸಮರದಲಿ

ಕುಶನೆ ಕೇಳಚ್ಚರಿಯ ಕಱೆದವು । ರಸವನೆರಡಕ್ಷಿಗಳು ಲಕ್ಷ್ಮಣ
ದಶಮುಖರ ಮೇಲಿಂದುಸೂರ್ಯರ ಶಾಂತ ರೌದ್ರಕದ
ಕುಶನನುಜ ಕೇಳ್ ಕರುಣವೆಡದಲಿ । ವಿಷಮರೋಷಜ್ವಾಲೆ ಬಲದಲಿ
ಬೆಸುಗೆ ಬಿಡದವಧಾನದಲಿ ನಿಂದನು ಮಹಾಹವಕೆ ೧

ಜೀಯ ಬಿನ್ನಹ ವೈರಿಭಟನ ವಿ । ಡಾಯಿಯನು ಚಿತ್ತೈಸಿದಿರೆ ವಾ
ನಾಯುಜಂಗಳ ಭರವ ಕಂಡಿರೆ ಸೂತನುಬ್ಬಟೆಯ
ಬಾಯ ಬಿರಿಸನು ಕೇಳಿದಿರೆ ಸರಿ । ರಾಯನೇ ನಿಮಗವನು ಪದಚರ
ರಾಯತದ ರಣ ರಂಜಕವೆ ನಿಮಗೆಂದನಾ ಹನುಮ ೨

ರಥದ ಮೇಲವ ದೇವರಿಗೆ ಪದ । ರಥದ ರಣವಸಮಾನ ಮುಂದಣ
ಕಥೆಗೆ ನಾಚಿಕೆ ನಮಗೆ ನಾವಿದ್ದೇನು ಫಲ ನಿಮಗೆ
ರಥವಹೆನು ದೇವರಿಗೆ ದೇವರು । ರಥಿಕರಾದಡೆ ಜಗದೊಳಗೆ ಸು
ಪ್ರಥಿತ ತಾನಹೆನೆಂದು ತಲೆವಾಗಿದನು ಕಲಿಹನುಮ ೩

ಸೂಚನೆ॥ ಸಕಲ ಚರಾಚರಾತ್ಮಕ ರಾಮನು ಗಂಧರ್ವರು ಹೊಗಳಲು ರಾಕ್ಷಸೇಶ್ವರನನ್ನು ಅಸಮಯುದ್ಧದಲ್ಲಿ ನಾಚಿಕೆಗೊಳಿಸಿ ಉಳಿಸಿ ಕಳುಹಿಸಿದನು. ೧. "ಆಶ್ಚರ್ಯವನ್ನು ಕೇಳು ಕುಶ. ರಾಮನ ಎರಡು ಕಣ್ಣುಗಳು ಲಕ್ಷ್ಮಣ ದಶಮುಖರ ಮೇಲೆ ಚಂದ್ರ ಸೂರ್ಯರ ಶಾಂತದ ಮತ್ತು ರೌದ್ರದ ರಸಗಳನ್ನು ಸುರಿಸಿದವು. ಲವನೆ ಕೇಳು, ಎಡಗಣ್ಣಿನಲ್ಲಿ ಕರುಣ ಮತ್ತು ಬಲಗಣ್ಣಿನಲ್ಲಿ ಭಯಂಕರ ಕೋಪಜ್ವಾಲೆಗಳನ್ನು ಹೊಂದಿ ರಾಮನು ಏಕಾಗ್ರತೆಯಿಂದ ಮಹಾಯುದ್ಧಕ್ಕೆ ಸಿದ್ಧನಾಗಿ ನಿಂತನು. ೨. "ಸ್ವಾಮಿ, ವಿಜ್ಞಾಪನೆಗಳು. ಶತ್ರುವೀರನ ಶಕ್ತಿಯನ್ನು ನೋಡಿದಿರಾ, ಕುದುರೆಗಳ ರಭಸವನ್ನು ಕಂಡಿರಾ, ಸಾರಥಿಯ ಪರಾಕ್ರಮದ ಬಾಯಿ ಜೋರನ್ನು ಕೇಳಿದಿರಾ ? ಅವನು ನಿಮಗೆ ಸಮನಾದ ರಾಜನೇ ? ಅವನೊಡನೆ ಕಾಲಾಳಿನಂತೆ ಯುದ್ಧಮಾಡುವುದು ನಿಮಗೆ ಸೊಗಸೆ ?" ಎಂದನು ಹನುಮಂತ. ೩. "ಅವನು ರಥದ ಮೇಲೆ, ಅವನೊಡನೆ ಕಾಲಿನ ರಥದಮೇಲೆ ನಿಂತು ಸ್ವಾಮಿಯವರು ಮಾಡುವ ಯುದ್ಧ ಅಸಮಾನ. ಮುಂದಿನ ನಡೆವಳಿಕೆ ನಮಗೆ ನಾಚಿಕೆಯುಂಟುಮಾಡುತ್ತದೆ. ನಿಮಗೆ ನಾವು ಇದ್ದೂ ಫಲವೇನು? ಪ್ರಭುಗಳಿಗೆ ನಾನು ರಥವಾಗುತ್ತೇನೆ. ತಾವು ರಥಿಕರಾದ ಪಕ್ಷದಲ್ಲಿ ಜಗತ್ತಿನಲ್ಲಿ ನಾನು ಸುಪ್ರಸಿದ್ಧ

ಆದಡಾಗಲಿಯೆನುತ ನೃಪನದ । ನಾದರಿಸೆ ಜಾತ್ಯಶ್ವವಕ್ಷಿಗ
ಳಾದವಂಘ್ರಿಗಳಸವು ರಣರಥ ಚಲಿತ ಚಕ್ರಗಳು
ಆದುದಗ್ಗದ ಮನವು ಸಾರಥಿ । ಯಾದುದುನ್ನತವಾಲ ಕೇತನ
ವಾದುದಸುರಾಂತಕ ಮಹಾರಥನಾದನಾಹವಕೆ ೪

ವಿಷಮಗತಿ ವೈಚಿತ್ರಗತಿ ನಿ । ಪ್ಪಸರ ನಿರ್ಗಮ ಸೂಟಿ ಚಳಗತಿ
ಯಸಮ ಸಮಸಂಚಾರದಲಿ ಸೊಬಗೆನಿಸಿ ರಿಪುರಥವ
ಸಸಿನದಲಿ ತೋಱಿದನು ಕಪಿ ರಥ । ಕುಶಲವನು ಕಂಡಾ ವೃಷಾಕಪಿ
ವೃಷಭವಾನನವನು ನಿರೀಕ್ಷಿಸಿ ತೂಗಿದನು ಶಿರವ ೫

ಭೃತ್ಯರೊಳಗೀ ಪವನಸುತನಿಂ । ದತ್ಯಧಿಕರಾರುಂಟದೇಂ ಕೃತ
ಕೃತ್ಯನೋ ಸೇವೆಯಲಿ ಸೆಱೆವಿಡಿದನು ಸನಾತನನ
ನಿತ್ಯಶುದ್ಧನ ನಿರ್ವಿಕಲ್ಪನ । ಮೃತ್ಯುರಹಿತನನೆಂದು ನಾರದ
ನೃತ್ಯದಲಿ ನಲಿದಾಡಿ ಹೊಗಳಿದನಂಜನಾಸುತನ ೬

ಹರಿಣನುಪ್ಪರಗವನಕಿದಿರೆ । ದ್ದುರವಣಿಪ ಹುಲಿಯಂತೆ ಮದಸಿಂ
ಧುರದ ಸಮ್ಮುಖಕುಬ್ಬರಿಸಿ ಹೊಯ್ದೇಳ್ವ ಹರಿಯಂತೆ
ದುರಿತದುಮ್ಮಹದುಬ್ಬರದ ಮೈ । ಸಿರಿಗೆ ಮೇಲೊದೆಬೀಳ್ವ ವಿಷ್ಣು
ಸ್ಮರಣೆಯಂತಿದಿರಾದನಾ ಖಳನಿದಿರಿನಲಿ ರಾಮ ೭

ನಾಗುತ್ತೇನೆ !" ಎಂದು ತಲೆಬಾಗಿ ನುಡಿದ ಹನುಮಂತ. ೪. 'ಹಾಗಿದ್ದರೆ ಆಗಲಿ' ಎಂದು ರಾಮನು ಅದಕ್ಕೆ ಒಪ್ಪಿದನು. ಹನುಮಂತನ ಕಣ್ಣುಗಳು ಜಾತಿಕುದುರೆಗಳಾದವು, ಅವನ ಪಾದಗಳು ಯುದ್ಧರಥದ ಚಲಿಸುವ ಚಕ್ರಗಳಾದವು, ಅವನ ಮನಸ್ಸು ಸಾರಥಿ ಯಾಯಿತು ; ಅವನ ಉದ್ದವಾದ ಬಾಲವು ಬಾವುಟವಾಯಿತು. ಅಸುರಾರಿ ರಾಮನು ಹನುಮಂತ ಹೆಗಲೇರಿ ಕುಳಿತು ಯುದ್ಧಕ್ಕೆ ಮಹಾರಥಿಯಾದನು. ೫. ಅಸಮ ನಡೆ, ವಿಚಿತ್ರ ನಡೆ, ಕಠಿಣ ಗಮನ, ಚುರುಕು ನಡಿಗೆ, ದೃಢನಡೆ, ಅಸಮಸಮ ಸಂಚಾರ–ಈ ಗತಿಗಳಲ್ಲಿ ಸೊಗಸಾಗಿ ಸಂಚರಿಸಿ ಶತ್ರುರಥವನ್ನು ನೇರವಾಗಿ ತೋರಿಸಿದನು. ಹನುಮಂತನ ಸಂಚಾರದಲ್ಲಿ ರಥದ ಕೌಶಲ್ಯವನ್ನು ಕಂಡು ಶಿವನು ತನ್ನ ವಾಹನ ವೃಷಭನ ಮುಖವನ್ನು ನೋಡುತ್ತ ತಲೆದೂಗಿದನು. ೬. 'ಸೇವಕರಲ್ಲಿ ಮಾರುತಿಗಿಂತ ಹೆಚ್ಚು ಶ್ರೇಷ್ಠರು ಯಾರುಂಟು. ಸೇವೆಯಲ್ಲಿ ಅದೆಷ್ಟು ಕೃತಕೃತ್ಯನೋ ಹನುಮಂತ. ಪುರಾಣಪುರುಷನೂ, ನಿತ್ಯಶುದ್ಧನೂ, ಪರಿವರ್ತನೆಯಿಲ್ಲದವನೂ, ಮೃತ್ಯುರಹಿತನೂ ಆದ ಹರಿಯನ್ನು ಸೆರೆ ಹಿಡಿದನು' ಎಂದು ನಾರದನು ಕುಣಿಯುತ್ತಾ ಆನಂದದಿಂದ ಆಂಜನೇಯನನ್ನು ಹೊಗಳಿದನು. ೭. ಜಿಂಕೆಯು ನೆಗೆತಕ್ಕೆ ರಭಸದಿಂದ ಇದಿರೇಳುವ ಹುಲಿಯಹಾಗೆ, ಮದಿಸಿ ಆನೆಯ ಎದುರಿಗೆ ಗರ್ಜಿಸಿ ಹೊಡೆದು ನೆಗೆಯುವ ಸಿಂಹದಹಾಗೆ, ಅಧಿಕ ಪಾಪದ ಮೊತ್ತದ ಮೇಲೆ ಬಿದ್ದು ಅದನ್ನು ಚೂರು ಚೂರು ಮಾಡುವ ವಿಷ್ಣುಸ್ಮರಣೆಯ ಹಾಗೆ

ಅವನಿಜಾಸುತ ಕೇಳು ಬಳಿಕಾ । ಭುವನವೀರರ ಖತಿಯು ಹುತವಹ
ಗವದು ಗರ್ಭೀಕರಿಸಿತಬುಜಭವಾಂಡಮಂಡಲವ
ಅವಯವದ ನಿಗುರುಗಳ ಕಡೆಗ । ಣ್ಣವಿರಳದ ನೋಟಗಳ ಸೇದಿದ
ಕವಲುಗೋಲಿನಲೊತ್ತಜರಿಸಿದರಳವಿಯಲಿ ನೆಲನ ೮

ಮಲೆತು ಸಿಂಹಕೆ ಸಿಂಹ ಕುಲಿಶಕೆ । ಕುಲಿಶ ಕದನಕೆ ನಿಲುವವೊಲು ರಣ
ಗಲಿಮನದ ಮನಮುನಿಸುಗಳ ಛಲಪದದ ಬೆಂಬಳಿಯ
ಕಲಹಲಂಪಟರಾಯೆನುತ ಕ । ಟ್ಟಳವಿಯಲಿ ಕೈಕೊಂಡು ಕಣೆಗಳ
ತುಳುಕಿದರು ತುಂಬಲು ಜಗತ್ರಯ ಕಿಡಿಯ ಗಡಣದಲಿ ೯

ಝುಮ್ಮೆನುತ ಶಿಖಿಮುಖದ ಕಣೆಗಳು । ಚಿಮ್ಮಿದವು ಚಾಪಗಳನೊದೆದುಱೆ
ಘುಮ್ಮು ಘುಳಿಲೆಂಬಬ್ಬರಣೆ ಗಬ್ಬರಿಸೆ ದಿಗುತಟವ
ನಿಮ್ಮ ತಂದೆಯ ಬಾಣವಹಿತನ । ನೆಮ್ಮಿದವು ಹಗೆಯಂಬು ರಾಮನ
ಹಮ್ಮಿದವು ನೆಲೆಗೆಡಿಸಿದವು ನಿಮಿಷದಲಿ ನಿರ್ಜರರ ೧೦

ಇಬ್ಬರೆಸುಗೆಯ ವಿಶಿಖವಭ್ರವ । ಹಬ್ಬಿದವು ಹೊಂಬಿಸಿಲು ಕಾಳದ
ವೊಬ್ಬು ಕವಿದುದು ಸಂಜೆಗೆಂಪಾದುದು ದಿಶಾವಳಯ
ತಬ್ಬಿದಲಗಿನ ಬೆಳಗಿನಲಿ ಕಣೆ । ಯುಬ್ಬರದ ಕತ್ತಲೆಯಲಾಗಱೆ
ಯುಬ್ಬುಗಳ ಕೆಂಪಿನಲಿ ಬಿಡದರೆಜಾವ ಪರಿಯಂತ ೧೧

ರಾಮನು ರಾವಣನನ್ನು ಎದುರಿಸಿ ನಿಂತನು. ೮. ಸೀತಾಸುತನೇ ಕೇಳು, ಬಳಿಕ ಆ ಜಗದೇಕವೀರರ ಕೋಪಾಗ್ನಿಯು ಹತ್ತಿಕೊಂಡು ಬ್ರಹ್ಮಾಂಡಮಂಡಲವನ್ನು ಆವರಿಸಿತು. ಅವರು ಶರೀರವನ್ನು ನೆಟ್ಟಗೆ ಮಾಡಿಕೊಂಡು ನಿಂತು ಕವಲುಬಾಣವನ್ನು ಬಿಲ್ಲಿಗೆ ಸೇರಿಸಿ ಎಳೆದುಹಿಡಿದು ಅದರಲ್ಲಿ ನೆಟ್ಟನೋಟವಿಟ್ಟು ಪರಾಕ್ರಮದಿಂದ ನೆಲವನ್ನು ಒತ್ತಿ ನಿಂತರು. ೯. ಗರ್ವಿಸಿ ಸಿಂಹ ಸಿಂಹವನ್ನು, ಸಿಡಿಲು ಸಿಡಿಲನ್ನು ಎದುರಿಸಿ ಕದನಕ್ಕೆ ನಿಲ್ಲುವಂತೆ ಯುದ್ಧದಲ್ಲಿ ನೆಟ್ಟ ಮನಸ್ಸಿನ, ಕೋಪಭರಿತರಾದ, ಛಲವಾದಿಗಳಾದ ಯುದ್ಧಾಸಕ್ತರು ಆ ಎಂದು ಬೊಬ್ಬಿರಿದು ಕಿವಿಯವರೆಗೆ ಎಳೆದು ಬಾಣಗಳನ್ನು ಚೆಲ್ಲಲು ಮೂರುಲೋಕಗಳೂ ಕಿಡಿಗಳ ರಾಶಿಯಿಂದ ತುಂಬಿಹೋದವು. ೧೦. ಝುಮ್ಮೆನ್ನುತ್ತ ಬೆಂಕಿಯನ್ನುಗುಳುವ ಬಾಣಗಳು ಬಿಲ್ಲುಗಳನ್ನು ಒಡೆದು ಚಿಮ್ಮಿದವು. ದಿಙ್ಮಂಡಲವನ್ನು ಘುಮ್ಮು ಘುಳಿಲ್ ಎಂಬ ಗದ್ದಲವು ಆವರಿಸಿತು. ನಿಮ್ಮ ತಂದೆಯ ಬಾಣಗಳು ಶತ್ರುವನ್ನು ಆತುಕೊಂಡವು ; ಶತ್ರುವಿನ ಬಾಣಗಳು ರಾಮನನ್ನು ಹೆಣೆದುಕೊಂಡವು. ಇಬ್ಬರು ವೀರರ ಬಾಣಗಳು ಒಂದು ನಿಮಿಷದಲ್ಲಿ ದೇವತೆಗಳನ್ನು ಅವರ ಸ್ಥಳಗಳಿಂದ ಚದುರಿಸಿದವು. ೧೧. ಇಬ್ಬರೂ ಬಿಟ್ಟ ಬಾಣಗಳು ಆಕಾಶವನ್ನು ಆವರಿಸಿದವು. ಬಾಣಗಳ ಮೊನೆಯ ಬೆಳಕು, ಅಸಂಖ್ಯ ಬಾಣಗಳ ಕತ್ತಲೆ ಮತ್ತು ಬಾಣಗಳ ಬುಡದ ಗರಿಗಳ ಕೆಂಪು ಮೂರುಸೇರಿ ನಿರಂತರವಾಗಿ ಅರ್ಧಜಾವದವರೆಗೆ ಹೊಂಬಿಸಿಲು ಮತ್ತು ಕತ್ತಲೆಯು

ಮುಳುಗಿಸುವವಂಬುಗಳು ಸುರಕುಲ । ಜಲಧಿ ವಡಬಾನಲನನೆಸುಗೆಯು
ಲಲಘುಬಲ ರಾಘವನ ವರರಾಜೀವಲೋಚನನ
ತಳಿತು ಮುತ್ತುವವಸುರನೆಸುಗೆಯು । ಚಲ ಸಿಳೀಮುಖನಿಕರ ರಣನಿ
ಶ್ಚಲಿತ ಸಾಹಸಶಸ್ತ್ರಸಾರ ವಿಚಿತ್ರತರವೆಂದ ೧೨

ಹನುಮನುಬ್ಬರ ವೈರಿಸೂತನ । ನಿನದ ರಾಮನ ಬೊಬ್ಬೆ ದಶಕಂ
ಠನ ಮಹಾಕಂಠೀರವಧ್ವನಿ ರಾಘವೇಶ್ವರನ
ಧನುವಿನಬ್ಬರ ರಾವಣನ ಬಿಲು । ದನಿ ಭಟದ್ವಯ ಬಾಣ ಭೀಂಕೃತಿ
ವನಜಭವ ಕಲ್ಪಾಂತಶರಧಿಯು ರವಕೆ ಗುರುವಾಯ್ತು ೧೩

ಎಸುಗೆಗಳ ಸವ್ಯಾಪಸವ್ಯದ । ವಿಶಿಖ ಗಮನದ ಗರಿಯ ಹಿಳುಕಿನ
ಬೆಸುಗೆಗಳ ಬೆರಳುಗಳ ಸೇದುವ ಬಿಡುವ ಬಿನ್ನಣದ
ಕುಸಿದು ನಿಗುರುವ ಮೈಯ ಮಿಗೆ ದಿ । ಟ್ಟಿಸುವ ದೃಷ್ಟಿಯ ಹೂಂಕೃತಿಯ ರಣ
ರಸಿಕರೆಚ್ಚಾಡಿದರು ನೆರೆ ಮೆಚ್ಚಲು ಸುರವ್ರಾತ ೧೪

ಖಳಖಳನೆ ಕಣೆಕಣೆ ವಿಘಾತಿಸೆ । ಹಳಚುತಿರ್ದವಖಂಡಿತಾಸ್ತ್ರದ
ಹಿಳುಕು ಗರಿಗಣೆಯಲಗು ಹೊದೆಸಿದವವನಿಮಂಡಲವ
ಬಳಿಸರಳ ಬಿರುಗಾಳಿಗಂಬುಧಿ । ತುಳುಕುತಿರ್ದುದು ಮೇಲೆ ಮೇಲು
ಚ್ಚಳಿಪ ಬಾಣಕೆ ಬೆದರಿ ಬಾಯ್ಬಿಡುತಿರ್ದುದಮರಗಣ ೧೫

ಮಬ್ಬು ಎರಡೂ ಸೇರಿದಂತೆ ದಿಕ್ಕುಗಳು ಸಂಜೆಗೆಂಪಾದವು. ೧೨. 'ಮಹಾಬಲಶಾಲಿ ರಾಘವನ ಬಾಣಗಳು ದೇವತೆಗಳೆಂಬ ಸಾಗರಕ್ಕೆ ಬಡಬಾನಲನಾದ ರಾವಣನನ್ನು ಮುಳುಗಿಸಿಬಿಡುತ್ತಿದ್ದವು, ರಾವಣನು ಬಿಟ್ಟ ದೃಢವಾದ ಬಾಣಗಳ ಸಮೂಹವು ಕಮಲಲೋಚನ ರಾಮನನ್ನು ಮುತ್ತುವವು. ಇಬ್ಬರು ವೀರರ ಯುದ್ಧದಲ್ಲಿ ಸಾಹಸದ ಶಸ್ತ್ರಶೌರ್ಯವು ಅಶ್ಚರ್ಯಕರ ಎಂದು ವಾಲ್ಮೀಕಿಗಳು ವರ್ಣಿಸಿದರು, ೧೩. ಹನುಮಂತನ ಅಬ್ಬರ, ಶತ್ರುಸಾರಥಿಯ ಕೂಗು, ರಾಮನ ಬೊಬ್ಬೆ, ದಶಕಂಠನ ಮಹಾಸಿಂಹನಾದ, ರಾಘವೇಂದ್ರನ ಧನುಸ್ಸಿನ ಟಂಕಾರ ಶಬ್ದ, ರಾವಣನ ಬಿಲ್ಲಿನ ಧ್ವನಿ, ರಾಮ ರಾವಣರ ಬಾಣಗಳ ಭೀಂಕಾರ ಈ ಎಲ್ಲ ಶಬ್ದವೂ ಸೇರಿ ಬ್ರಹ್ಮನ ಯುಗಾಂತ್ಯ ಪ್ರಳಯಸಾಗರದ ಅಬ್ಬರವನ್ನು ಮೀರಿಸಿತು. ೧೪. ಎಡಬಲಗಳಿಂದ ಬಾಣಬಿಡುವ, ಗರಿಯಿರುವ ಬಾಣದ ಹಿಂಭಾಗವನ್ನು ಬೆರಳುಗಳಿಂದ ಬಿಗಿಯಾಗಿ ಹಿಡಿದುಕೊಳ್ಳುವ, ಕೌಶಲದಿಂದ ಬಾಣವನ್ನು ಎಳೆದುಬಿಡುವ, ಮೈಕುಗ್ಗಿಸಿ ಮತ್ತೆ ನೆಟ್ಟಗೆ ನಿಲ್ಲುವ, ನೆಟ್ಟ ದೃಷ್ಟಿಯಿಂದ ನೋಡುವ, ಹೂಂಕಾರ ಮಾಡುವ ಯುದ್ಧಪ್ರಿಯರು, ದೇವತೆಗಳು ಮೆಚ್ಚಿಕೊಳ್ಳುತ್ತಿರಲು ಬಾಣಗಳ ಯುದ್ಧ ಮಾಡಿದರು. ೧೫. ಖಳಖಳ ಎಂದು ಬಾಣ ಬಾಣಗಳು ಒಂದಕ್ಕೊಂದು ಹೊಡೆದು ಅಪ್ಪಳಿಸುತ್ತಿದ್ದವು. ತುಂಡಾಗದ ಬಾಣಗಳ ಪುಂಖ, ಗರಿ, ಅಲಗುಗಳು ಭೂಮಂಡಲವನ್ನು ಮುಚ್ಚಿಬಿಟ್ಟವು. ಒಂದರ ಹಿಂದೆ ಒಂದರಂತೆ ಬಂದ ಬಾಣಗಳ ಬಿರುಗಾಳಿಗೆ ಸಮುದ್ರಗಳು ತುಳುಕುತ್ತಿದ್ದವು. ಮೇಲುಮೇಲಕ್ಕೆ ಚಿಮ್ಮುವ ಬಾಣಗಳನ್ನು

ವೈರಿಸೂತನ ಕಾಯದಲಿ ಹೊಂ । ದೇರಿನಲಿ ಹಯದೊಡಲಿನಲಿ ರಿಪು
ವೀರನಂಗೋಪಾಂಗದಲಿ ಹಳವಿಗೆಯ ಕಂಬದಲಿ
ವೀರ ಹನುಮನ ದೇಹದಲಿ ರಣ । ಧೀರ ರಘುರಾಜೇಂದ್ರನಮಲ ಶ
ರೀರದಲಿ ಶರಮಯವದಲ್ಲದೆ ಕಾಣೆ ನಾನೆಂದ ೧೬

ಶರವಿಘಾತಿಗೆ ರಕ್ಕಸರು ಮೊಗ । ದಿರುಹಿ ನಿಂದರು ಹಿನ್ನೆಲೆಗೆ ರಿಪು
ಶರವಿಘಾತಿಗೆ ಸರಿದು ನಿಂದುದು ಸೇನೆ ವಾನರರ
ಸರಳ ದನಿ ಬಿಲುಮಂಡಲಾಕೃತಿ । ಬೆರಳ ಚೊಬ್ಬೆಗಳಿಬ್ಬರಲಿ ಬಿಡ
ದೆರಡು ಜಾವದ ಮೇಲೆ ನಡೆದುದು ಹೇಳಲೇನೆಂದ ೧೭

ಹೊಗಳಲೆಣೆಗಾಣೆನು ಪುರಾತನ । ಯುಗದ ವೀರರೊಳಿವರ ಸರಿಸಕೆ
ಮಗನೆ ಕೇಳೈ ಲವನೆ ಲವಣಿಯ ಲಾಗು ಬೇಜಂವರ
ಗಗನ ಗಗನಕೆ ಜಲಧಿ ಜಲಧಿಗೆ । ಮಗುಳ್ದವೇ ಪ್ರತಿ ರಾಮ ರಾವಣ
ರಿಗೆ ರಘುಕ್ಷಿತಿನಾಥ ರಾವಣರಲ್ಲದಿಲ್ಲೆಂದ ೧೮

ವೀರರಿಬ್ಬರ ರಣಕೆ ಬೇಸರು । ಬಾರಿಸಿದುದಮರರಿಗೆ ಶರದಲಿ
ಬಾರಿಸಿತು ಭುವನಾಳಿ ಬಳಲಿಕೆದೋಱದಿಬ್ಬರಿಗೆ
ಸೂರಿಯನ ಗತಿ ಪಶ್ಚಿಮಾಬ್ಧಿಯ । ಮೇರೆಗಾಂತುದು ಹದನನಿದ ಕಂ
ಡಾ ರಘುಕ್ಷಿತಿನಾಥ ಮಾರುತಸುತನೊಳಿಂತೆಂದ ೧೯

ಕಂಡು ದೇವತೆಗಳು ಹೆದರಿ ಬಾಯಿ ಬಾಯಿ ಬಿಡುತ್ತಿದ್ದರು. ೧೬. "ಶತ್ರುಸಾರಥಿಯ ದೇಹದಲ್ಲಿ, ಶತ್ರುವಿನ ಚಿನ್ನದ ರಥದಲ್ಲಿ, ಕುದುರೆಗಳ ದೇಹದಲ್ಲಿ, ಶತ್ರುವೀರನ ಅಂಗಾಂಗಗಳಲ್ಲಿ, ಧ್ವಜಸ್ತಂಭದಲ್ಲಿ, ವೀರಹನುಮಂತನ ಶರೀರದಲ್ಲಿ, ರಣಧೀರ ರಘುರಾಜೇಂದ್ರನ ಮೈಮೇಲೆ-ಎಲ್ಲಿ ನೋಡಿದರೂ ಬಾಣಗಳಲ್ಲದೆ ಬೇರೇನೂ ಕಾಣಿಸಲಿಲ್ಲ ಎಂದು ವಾಲ್ಮೀಕಿಗಳು ನುಡಿದರು ೧೭. ರಾಮನ ಬಾಣದೇಟನ್ನು ಕಂಡು ರಾಕ್ಷಸರು ಹಿಂದುಗಡೆಗೆ ಮುಖತಿರುಗಿಸಿ ನಿಂತುಕೊಂಡರು. ರಾವಣನ ಬಾಣಗಳ ಹೊಡೆತವನ್ನು ಕಂಡು ವಾನರ ಸೈನ್ಯವು ಹಿಂದಕ್ಕೆ ಸರಿದು ನಿಂತಿತು. ಬಾಣಗಳ ಶಬ್ದ ಮತ್ತು ಬಿಲ್ಲನ್ನು ಬಗ್ಗಿಸಿ ಎಳೆಯುವ ಬೆರಳುಗಳ ಶಬ್ದಗಳೊಂದಿಗೆ ಇಬ್ಬರು ವೀರರ ನಡುವೆ ಯುದ್ಧವು ಒಂದೇ ಸಮನೆ ಎರಡು ಜಾವಕ್ಕಿಂತ ಹೆಚ್ಚಾಗಿ ನಡೆಯಿತು. ೧೮. ಹಿಂದಿನ ಯುಗದ ವೀರರಲ್ಲಿ ಇವರಿಗೆ ಸರಿಸಮಾನರಾದ ವೀರರನ್ನು ಕಾಣೆ. ಮಗು ಲವ, ಕೇಳು. ಇವರ ಚಲನೆಯ ಅಂಗವಿನ್ಯಾಸದ ಕೌಶಲವೇ ಬೇರೆ. ಆಕಾಶಕ್ಕೆ ಆಕಾಶ, ಸಮುದ್ರಕ್ಕೆ ಸಮುದ್ರ ಒಂದಕ್ಕೊಂದು ಸರಿ. ಅದೇ ರೀತಿ ರಾಮ ರಾವಣರಿಗೆ ರಾಮ ರಾವಣರು ಸರಿಯೇ ವಿನಹ ಬೇರೆ ಯಾರೂ ಇಲ್ಲ ಎಂದು ವಾಲ್ಮೀಕಿಗಳು ನುಡಿದರು. ೧೯. ಇಬ್ಬರು ವೀರರ ದೀರ್ಘಕದನದಿಂದ ದೇವತೆಗಳಿಗೆ ಬೇಸರ ಹುಟ್ಟಿತು, ಲೋಕಗಳು ಬಾಣಗಳಿಂದ ನಡುಗಿದವು. ಆದರೂ ರಾಮ ರಾವಣರಿಗೆ ಆಯಾಸ ತೋರಲಿಲ್ಲ. ಸೂರ್ಯನು ಪಶ್ಚಿಮಸಮುದ್ರದ ಎಲ್ಲೆಯನ್ನು ಸೇರಿದನು. ಇದನ್ನು ನೋಡಿ ರಾಮನು ಹನು

ಹಲಬರಲಿ ಕೈಗಟ್ಟಿ ಕಾದಿದು । ಬಳಲಿದವನನು ಕೊಲುವುದೇನ
ಗ್ಗಳಿಕೆ ರಾಮನದೆಂದು ನಗುವುದು ಜಗದ ಜನನಿಕರ
ಎಲೆ ಹನುಮ ಕೇಳಿಂದಿಗಿವನನು । ಕಳುಹುವೆನು ಕೈಗಾಯ್ದು ಕೋಪಿಸಿ
ಕಳೆಯಲೇ ನೀ ನಮ್ಮ ನಿನ್ನಭಿಮತವದೇನೆಂದ ೨೦

ಕಲಿಗಳಂಗವಿದೀಗ ತಪ್ಪದು । ಕೊಲುವುದನುಚಿತವಿಂದಿಗೆನೆ ಕಪಿ
ಕುಲಲಲಾಮನ ಬಿನ್ನಹಕೆ ಕಡುಮೆಚ್ಚಿ ಕರುಣದಲಿ
ಕಳುಹಿದನು ಕೃತಶರವನದು ಕೈ । ಲುಳಿಯ ಬಾಣದ ನಡುವೆ ಮಿಗೆ ಖಂ
ಡಳಿಸಿದನು ಕೈಹತ್ತರೆಸುಗೆಯ ಹತ್ತು ಬಿಲ್ಲುಗಳ ೨೧

ಮುಳಿದು ಕೈಯೊಡನಸುರಪತಿ ಕೈ । ಲುಳಿಯಲೆತ್ತಿದ ಪರಿಘ ಪಾಟಿಂ
ಬಳೆ ಪರಶು ವರ ಮುಸಲ ಮುದ್ಗರ ಶೂಲ ಶಕ್ತಿಗಳ
ತೊಲಗಗಡಿದುಬ್ಬಿರಿದು ಕಾಲಾ । ನಲನವೊಲು ಧಗಧಗಿಸಿ ಬಾಹ
ಪ್ಪಳಿಸಿ ಬಳಿಕೀ ಮಾತನೆಂದನು ತನ್ನ ಸಾರಥಿಗೆ ೨೨

ಹುಲಿಯ ಗಂಟಲ ಬಳಿಯ ಹುಲ್ಲೆಯ । ನಲುಗಿ ತೆಗೆಯಲು ಬಂದ ಹರಿಣನ
ಬಲುಹ ನೋಡೈ ಸೂತಯೆನುತುಚ್ಚಿದನು ಖಂಡೆಯವ
ಎಲೆ ಹನುಮ ಮೃಗರಾಜವನಿತೆಯ । ಮೊಲನು ಕದ್ದೊಯ್ದುಳಿವುದೇ ಜಗ
ದೊಳಗೆನುತ ಬೊಬ್ಬಿರಿವುತಸುರನನೆಚ್ಚನಾ ರಾಮ ೨೩

ಮಂತನನ್ನು ಕುರಿತು ಹೀಗೆಂದು ಹೇಳಿದನು. ೨೦. "ಹಲವರೊಡನೆ ಒಂದೇಸಮನೆ ಹೋರಾಡಿ ಬಳಲಿದ ಇವನನ್ನು ಕೊಲ್ಲುವುದರಲ್ಲಿ ರಾಮನದೇನು ಹಿರಿಮೆ ಎಂದು ಜನರು ನಗುವರು. ಅಯ್ಯಾ ಹನುಮಂತ, ಕೇಳು. ಇಂದಿಗೆ ಇವನನ್ನು ಉಳಿಸಿ ಕಳುಹಿಸಲೇ ಅಥವಾ ಕೆರಳಿ ಕೊಲ್ಲಲೇ? ಇದರಲ್ಲಿ ನಿನ್ನ ಅಭಿಪ್ರಾಯವೇನು?" ಎಂದು ಕೇಳಿದ ರಾಮ. ೨೧. "ಇದು ವೀರರ ನಡವಳಿಕೆ ಎಂಬುದರಲ್ಲಿ ಸಂದೇಹವಿಲ್ಲ. ಇವತ್ತಿಗೆ ಶತ್ರುವನ್ನು ಕೊಲ್ಲುವುದು ಅನುಚಿತ" ಎಂದು ಹನುಮಂತ ಹೇಳಿದ. ಕಪಿಕುಲತಿಲಕನ ಮಾತಿಗೆ ಮೆಚ್ಚಿ ರಾಮನು ಕರುಣೆಯಿಂದ ಕೃತಶರವನ್ನು ಬಿಟ್ಟನು. ರಾವಣನು ಹತ್ತು ಕೈಗಳಲ್ಲಿ ಹಿಡಿದುಕೊಂಡು ಕೌಶಲದಿಂದ ಬಿಡುತ್ತಿದ್ದ ಬಾಣಗಳ ನಡುವೆ ಅದು ಹೋಗಿ ಅವನ ಹತ್ತು ಬಿಲ್ಲುಗಳನ್ನೂ ಕತ್ತರಿಸಿತು. ೨೨. ರಾಕ್ಷಸೇಶ್ವರನು ಕೆರಳಿ ತಕ್ಷಣ ಚುರುಕಿನಿಂದ ಹೊಡೆಯಲು ಎತ್ತಿದ ಲಾಳವಿಂಡಿಗೆ, ಚಕ್ರಾಯುಧ, ಕೊಡಲಿ, ಗದೆ, ಮುದ್ಗರ, ಶೂಲ, ಶಕ್ತ್ಯಾಯುಧಗಳನ್ನು ರಾಮನ ಬಾಣವು ಕತ್ತರಿಸಿ ಬೀಳಿಸಿತು. ಗರ್ಜಿಸಿ ಪ್ರಳಯಾಗ್ನಿಯಂತೆ ಧಗಧಗಿಸುತ್ತ ತೋಳನ್ನು ಅಪ್ಪಳಿಸಿ ರಾವಣನು ತನ್ನ ಸಾರಥಿಗೆ ಈ ಮುಂದಿನಂತೆ ಹೇಳಿದನು. ೨೩. "ಹುಲಿಯ ಗಂಟಲಿನಲ್ಲಿರುವ ಹುಲ್ಲೆಯನ್ನು ಅಲ್ಲಾಡಿಸಿ ತೆಗೆಯಲು ಬಂದ ಜಿಂಕೆಯ ಶೌರ್ಯವನ್ನು ನೋಡಯ್ಯ ಸಾರಥಿ !" ಎಂದು ರಾವಣನು ಕತ್ತಿಯನ್ನು ಸೆಳೆದನು. ಆಗ ರಾಮನು "ಅಯ್ಯಾ ಹನುಮಂತ, ಸಿಂಹಿಣಿಯನ್ನು ಮೊಲ ಕದ್ದುಕೊಂಡು ಹೋಗಿ ಜಗತ್ತಿನಲ್ಲಿ

ಎಚ್ಚ ಶರವಸುರೇಂದ್ರನಸಿಯನು । ಕಚ್ಚಿ ಹಾರಿತು ತಿರುಪಿ ಮಕುಟವ
ಬಿಚ್ಚಿ ಬಿಸುಡುತ ಬಂದು ಬೆಸನೇನೆಂದುದವನಿಪನ
ಮೆಚ್ಚಿ ನಿನ್ನಯ ಮನಕೆ ಬಂದುದ । ನಿಚ್ಚಟದಲೀ ಹಗೆಯ ಬಿಗುಹಿಗೆ
ಬೆಚ್ಚಿ ಬೆದಱದೆ ಮಾಡು ಹೋಗೆಂದರಸ ನೇಮಿಸಿದ ೨೪

ಅಱಿಯದೇ ಶರವಾಳ್ದನಭ್ಯಂ । ತರ ಮನೋಧರ್ಮವನು ತಿರುಗಿತು
ತಱಿದುಹಾಯ್ಕಿತು ಹಾರ ಮಣಿ ಕೇಯೂರ ಕುಂಡಲವ
ತರುಣ ಕೇಳ್ಕೌತುಕವ ಕ । ತ್ತರಿಯವೊಲು ಕರ್ಬುರನ ಕಟಿತಟ
ದರುಣಪಟವನು ಕತ್ತರಿಸಿತಮರಿಯರು ಗಹಗಹಿಸೆ ೨೫

ಒಡನೆ ತೇರಿನ ತೇಜಿಗಳ ತಲೆ । ಸಿಡಿಯಲುಚ್ಚಳಿಸಿದುದು ಮಕುಟವ
ಕಡಿದುಹಾಯ್ಕಿತು ಸಾರಥಿಯನಾ ರಥದ ಗಾಲಿಗಳ
ಉಡಿದು ಬಿಸುಟುದು ಕೇತುದಂಡವ । ನಡಿಮಗುಚಿತರಿಭಟನನೈತಂ
ದಡಗಿತಲ್ಲಿಂ ಮೇಲೆ ಮೂಡಿಗೆಯಲಿ ಮಹೀಪತಿಯ ೨೬

ಹೊರೆದ ಸಂಸಾರಾಂಬುಧಿಯನು । ತ್ತರಿಸಿ ತಾಪತ್ರಯದ ಬೇಗೆಯ
ಹರವರಿಯನುಱಿದಾಂಟಿ ಮದಮತ್ಸರವನುಱೆ ಜಱಿದು
ಸ್ಮರನ ಗಾಡಿಯ ಗೆಲಿದಹಿಂಸಾ । ಪರಮಧರ್ಮವೆಯೆಂಬ ಜಿನರೂಪಿ
ವರನವೋಲು ದಿಗಂಬರದಲೆಸೆದಿರ್ದನಸುರೇಂದ್ರ ೨೭

ಬದುಕುವುದೇ ?" ಎಂದು ಬೊಬ್ಬೆ ಹಾಕುತ್ತ ರಾವಣನ ಮೇಲೆ ಬಾಣವನ್ನು ಬಿಟ್ಟನು. ೨೪. ರಾಮನು ಬಿಟ್ಟ ಬಾಣವು ರಾವಣನ ಕತ್ತಿಯನ್ನು ಕಚ್ಚಿ ಹಾರಿತು, ರಾವಣನ ಕಿರೀಟವನ್ನು ತಿರುಗಿಸಿ ಅದನ್ನು ಬಿಚ್ಚಿ ಬಿಸಾಡಿತು. ಬಳಿಕ ಬಂದು ಅಪ್ಪಣೆಯೇನು ಎಂದು ರಾಮನನ್ನು ಕೇಳಿತು. ರಾಮನು ಮೆಚ್ಚಿಕೊಂಡು, "ಶತ್ರುವಿನ ಗರ್ವಕ್ಕೆ ಅಂಜದೆ ಅಳುಕದೆ ನಿನ್ನ ಮನಸ್ಸಿಗೆ ಬಂದುದನ್ನು ಮಾಡು ಹೋಗು" ಎಂದು ಬಾಣಕ್ಕೆ ಅಪ್ಪಣೆ ಮಾಡಿದನು. ೨೫. ಒಡೆಯನ ಅಂತರಂಗದ ಅಭಿಪ್ರಾಯವನ್ನು ಬಾಣವು ತಿಳಿಯದೆ ! ಅದು ರಾಮನ ಬಳಿಯಿಂದ ಬಂದು ರಾವಣನ ಹಾರ, ರತ್ನಗಳು, ತೋಳು ಬಂದಿ, ಮತ್ತು ಕಿವಿಯ ಆಭರಣಗಳನ್ನು ಹರಿದು ಕಿತ್ತುಹಾಕಿತು. ತರುಣ ಲವ ಕೇಳು, ಮುಂದಿನ ಕುತೂಹಲವನ್ನು, ರಾವಣನ ಸೊಂಟದ ಬಳಿಯ ಕೆಂಪುವಸ್ತ್ರವನ್ನು ಕತ್ತರಿ ಯಂತೆ ಕತ್ತರಿಸಿತು. ಇದನ್ನು ನೋಡಿ ದೇವತಾಸ್ತ್ರೀಯರು ಗಹಗಹಿಸಿ ನಕ್ಕರು. ೨೬. ಕೂಡಲೆ ಬಾಣವು ರಥದ ಕುದುರೆಗಳ ತಲೆ ಸಿಡಿಯುವಂತೆ ಮಾಡಿ ಮೇಲಕ್ಕೆ ನೆಗೆಯಿತು. ಬಳಿಕ ರಾವಣನ ಕಿರೀಟವನ್ನು ಹಾರಿಸಿತು, ಸಾರಥಿಯನ್ನೂ ರಥದ ಚಕ್ರಗಳನ್ನೂ ಕತ್ತರಿಸಿಹಾಕಿತು ; ಧ್ವಜಸ್ತಂಭವನ್ನು ಮುರಿದು ಎಸೆಯಿತು, ಶತ್ರು ವೀರನನ್ನು ತಲೆಕೆಳಕಾಗಿ ಬೀಳಿಸಿತು, ಅಲ್ಲಿಂದ ಬಂದು ರಾಮನ ಬತ್ತಳಿಕೆಯನ್ನು ಸೇರಿಕೊಂಡಿತು. ೨೭. ಸಂಸಾರಸಾಗರವನ್ನು ದಾಟಿ, ಆದಿದೈವಿಕ, ಆದಿಭೌತಿಕ ಮತ್ತು ಆಧ್ಯಾತ್ಮಿಕ ಎಂಬ ಮೂರು ಬಗೆಯ ಕಷ್ಟಗಳನ್ನು ನೀಗಿ, ಮದ ಮತ್ಸರ (ಗರ್ವ ಮತ್ತು ಹೊಟ್ಟೆ ಕಿಚ್ಚು) ಗಳನ್ನು ಧಿಕ್ಕರಿಸಿ, ಮನ್ಮಥನ ಮಾಯೆಯನ್ನು ಗೆದ್ದು, 'ಅಹಿಂಸಾ

ಶಚಿ ಸರಸ್ವತಿ ಮುಖ್ಯ ನಾನಾ । ಪ್ರಚುರ ಸುರನಾರಿಯರು ನಾಚಿದು
ರಚಿಸಿದರು ಮೇಲುದನು ಮುಸುಡಿಗೆ ಮಂದಹಾಸದಲಿ
ಖಚರ ಕಿನ್ನರ ಯಕ್ಷ ನಿರ್ಜರ । ನಿಚಯ ಬಿರುನಗೆಗಳಲಿ ರಾಘವ
ಸುಚಿತನೆಸುಗೆಗೆ ಹಾರವಿಸಿದರು ಹೊಯ್ದು ಕರತಳವ ೨೮

ಕಾಯಿದೆವು ಹೋಗಿಂದಿಗೆಲವೋ ನಿ । ರಾಯುಧನ ಲಜ್ಜಿತನನಜ್ಞನ
ನಾಯುವಿಂದಿನ ದಿನಕೆ ನಿನ್ನದು ಮೇಲೆ ನಮ್ಮದಲೆ
ಹಾಯಿ ಬೇಗದಿ ಹೋಗು ಹೋಗೆಲೆ । ನಾಯೆ ನಿಂದಿರಬೇಡ ನಡೆನಡೆ
ನೋಯದೋಜೆಯಲಿಂದು ಹೋಗೆಲೆ ಹೊಲೆಯ ಹೋಗೆಂದ ೨೯

ನಾಚಿ ತಿರುಗಿದನಸುರನಾ ಮಾ । ರೀಚವೈರಿಯ ನುಡಿಗೆ ಗುರುವ
ಲ್ಲಾ ಚತುರ್ದಶಜಗದ ಜನಭಂಡರಿಗೆ ದಶಕಂಠ
ಕೋಟಿ ಮಾಡಿತು ಮೇಲೆ ಸಾಸಿರ । ಲೋಚನನ ಕಟಕದಲಿ ಸಂಧ್ಯಾ
ಸೂಚನೆಯಲೆರಡಂಕ ತೆಗೆದವು ತಮದ ಮುಂಬಿನಲಿ ೩೦

ಕಪಿವರೂಥವನಿಳಿದು ರಾಘವ । ನೃಪತಿ ಚಿಂತಾಭಾರದಲಿ ರಣ
ದಪಗತರನಾರೈವುತತಿವೇಗದಲಿ ಬರಬರಲು
ತಪನತನುಜನ ಕಂಡು ಮನದಲಿ । ತಪಿಸಿ ತಂದನು ಕಂಗಳಿಗೆ ತನ
ಗಪಯಶವು ಸಂಭವಿಸಿತೇಯೆಂದಶ್ರುವಾರಿಗಳ ೩೧

ಪರಮಧರ್ಮ' ಎಂದು ನಂಬಿದ ಜೈನಯತಿಯಂತೆ ರಾವಣನು ಬತ್ತಲೆಯಾಗಿ ನಿಂತನು. ೨೮. ಶಚಿ ಸರಸ್ವತಿಯೇ ಮೊದಲಾದ ಶ್ರೇಷ್ಠ ದೇವತಾಸ್ತ್ರೀಯರು ನಾಚಿಕೊಂಡು ಮುಗುಳುನಗುತ್ತ ಸೆರಗಿನಿಂದ ಮುಖ ಮುಚ್ಚಿಕೊಂಡರು. ಗಂಧರ್ವರು, ಕಿನ್ನರರು, ಯಕ್ಷರು, ದೇವತೆಗಳು ಜೋರಾಗಿ ನಗುತ್ತ ಕೈಚಪ್ಪಾಳೆ ತಟ್ಟುತ್ತ ರಾಮನ ಯೋಗ್ಯ ಬಾಣಪ್ರಯೋಗವನ್ನು ಮೆಚ್ಚಿಕೊಂಡರು. ೨೯. “ನಿರಾಯುಧನನ್ನು, ನಾಚಿದವನನ್ನು, ಅಜ್ಞನನ್ನು ರಕ್ಷಿಸಿದೆವು. ಇವತ್ತಿಗೆ ಇಲ್ಲಿಂದ ಹೋಗೋ. ಈ ದಿವಸದ ಆಯುಸ್ಸು ನಿನ್ನದು, ಆಮೇಲೆ ನಮ್ಮದು. ಓಡು, ಬೇಗ ಹೋಗು, ಹೋಗೋ ನಾಯಿ, ಇಲ್ಲಿ ನಿಂತಿರಬೇಡ ತೊಲಗಿಹೋಗು. ನೋಯದೆ ನಿನ್ನಷ್ಟಕ್ಕೆ ಈ ದಿವಸ ಹೋಗೋ ಹೊಲೆಯ, ಹೋಗು” ಎಂದನು ರಾಮ. ೩೦. ಮಾರೀಚ ವೈರಿ ರಾಮನ ಮಾತಿಗೆ ನಾಚಿಕೊಂಡು ರಾವಣನು ಹಿಂದಿರುಗಿದನು. ಹದಿನಾಲ್ಕು ಲೋಕಗಳ ಭಂಡಜನರಿಗೆ ದಶಕಂಠನು ಗುರುವಲ್ಲವೇ ? ದೇವೇಂದ್ರನ ರಾಜಧಾನಿಗೆ ದೇವತೆಗಳು ರವಾನೆಯಾದರು. ಸಾಯಂಕಾಲವಾಯಿತೆಂಬ ಸೂಚನೆಯನ್ನು ಕಂಡು ಎರಡು ಸೈನ್ಯಗಳೂ ಕತ್ತಲೆಯಾಗುವುದಕ್ಕೆ ಮುಂಚೆ ಪಾಳೆಯಗಳಿಗೆ ಹಿಂದಿರುಗಿದವು. ೩೧. ವಾನರರಥವಾಗಿದ್ದ ಹನುಮಂತನ ಹೆಗಲ ಮೇಲಿಂದ ಇಳಿದು ರಾಮನು ಚಿಂತೆಯನ್ನು ಹೊತ್ತು ಯುದ್ಧದಲ್ಲಿ ಸತ್ತವರನ್ನು ನೋಡುತ್ತ ವೇಗ ವೇಗವಾಗಿ ಬರುತ್ತಿರಲು ರಣರಂಗದಲ್ಲಿ ಬಿದ್ದ ಸುಗ್ರೀವನನ್ನು ಕಂಡು ಮನಸ್ಸಿನಲ್ಲಿ ಬೇಯುತ್ತ ‘ನನಗೆ ಅಪಕೀರ್ತಿಯುಂಟಾಯಿತೇ ?’ ಎಂದು

ಕೊಂಡ ಜೀವಿತವಿಲ್ಲ ನಮ್ಮಿಂ । ದುಂಡ ಹಂಗಿನಿತಿಲ್ಲ ಬನದಲಿ
ಕಂಡ ಬಿಡಯಕೆ ತನುವ ತೆತ್ತೈ ತಂದೆ ಸುಗ್ರೀವ
ಹೆಂಡತಿಯ ಹರಿಬದಲಿ ಲೋಗರ । ಹಿಂಡಿ ಹಿಳಿದನು ರಾಮನೆಂಬೀ
ಭಂಡತನಕೊಳಗಾದೆನೇ ಹಾಯೆಂದು ಶೋಕಿಸಿದ ೩೨

ಮಱೆಯ ಮಾಯಾಮನುಜನೆಂಬುದ । ನಱಿಯದೇ ಜಗವಣುಗ ಕೇಳ್ ಕಂ
ದೆಱೆದನೈ ಕಮಲಾಂಬಕನ ಕರುಣೋದಯಾಂಬುದದ
ಬಿಱುವಳೆಯ ಬರವಿನಲಿ ಬಿಸಿಲಿಗೆ । ಬಱೆತ ಹಳ್ಳದ ಮೇಲೆ ತಂಪಿನ
ತೊಱೆ ತುಳುಕಿ ಹರಿವಂತೆ ಹರಿರಾಜೇಂದ್ರ ನಿಮಿಷದಲಿ ೩೩

ನಮಿಸಿದನು ಬಳಿಕೆದ್ದು ವಿಶ್ವ । ಕ್ರಮನ ವಿಮಲ ಪದಾರವಿಂದಕೆ
ಸುಮುಖತೆಯ ಸುಮ್ಮಾನ ಸುಮನೋಲತಿಕೆ ಕುಡಿಗೊಂಡು
ಅಮರಿದುದು ಕಪಿಬಲವನಾ ಕಪಿ । ರಮಣ ಸಹಿತಸುರಾರಿ ಬಂದನು
ಮಮತೆಯತಿಶಯದರಕೆಯಲಿ ಲಕ್ಷ್ಮಣನ ಹೊರೆಗಾಗಿ ೩೪

ಕರೆದು ರಾಘವರಾಯ ಧನ್ವಂ । ತರಿಯ ತನುಜಂಗೆಂದನನುಜನ
ಪರಿಯದೇನು ಪರೀಕ್ಷಿಸೈ ಪವನನನು ಪರಿಗತದ
ಹರಿಪತಿಯನಾರೈ ಪರೀಕ್ಷಿಸಿ । ದುರುಪರಾಪರವಸ್ತುವಿನ ನರ
ಚರಿತದಂಗವ ಬಿಟ್ಟು ನೀನೇ ನೋಡು ಸಾಕೆಂದ ೩೫

ಕಣ್ಣುಗಳಲ್ಲಿ ನೀರು ತುಂಬಿಕೊಂಡು ನಿಂತನು. ೩೨. "ಇನ್ನೊಬ್ಬರ ಅಡಿಯಾಳಾಗಿ ಬದುಕು ಮಾಡಲಿಲ್ಲ, ನಮ್ಮಿಂದ ಸುಖ ಪಡೆದುಕೊಂಡ ಹಂಗು ಸ್ವಲ್ಪವೂ ಇಲ್ಲ. ಕಾಡಿನಲ್ಲಿ ನಮ್ಮನ್ನು ಕಂಡ ದಾಕ್ಷಿಣ್ಯಕ್ಕೊಳಗಾಗಿ ದೇಹವನ್ನು ತೆತ್ತೆಯಾಪ್ಪ ಸುಗ್ರೀವ ! ಹೆಂಡತಿಯ ಕಾರ್ಯಕ್ಕಾಗಿ ಕಂಡವರ ಪ್ರಾಣವನ್ನು ರಾಮನು ಹಿಸುಕಿ ಹಿಂಡಿದನು ಎಂಬ ನಾಚಿಕೆಗೇಡಿಗೆ ಒಳಗಾದೆನಲ್ಲ, ಅಯ್ಯೋ !" ಎಂದು ರಾಮನು ದುಃಖಿಸಿದನು. ೩೩. ಮರೆಯ ಮಾಯಾಮನುಷ್ಯನೆಂಬುದನ್ನು ಜಗತ್ತು ತಿಳಿಯದೇ, ಮಗು ಕುಶ ಕೇಳು. ಕಮಲಾಕ್ಷನ ಕರುಣೆಯ ಮೋಡದ ಬಿರುಮಳೆ ಬಿದ್ದಾಗ ಬಿಸಿಲಿಗೆ ಬತ್ತಿದ ಹಳ್ಳದಲ್ಲಿ ತಂಪಾದ ಪ್ರವಾಹ ತುಂಬಿ ಹರಿಯುವಂತೆ ಸುಗ್ರೀವನು ನಿಮಿಷಾರ್ಧದಲ್ಲಿ ಕಣ್ಣುಗಳನ್ನು ತೆರೆದನು. ೩೪. ಸುಗ್ರೀವನು ಎದ್ದು ವಿಶ್ವಪಾದನ ಪವಿತ್ರ ಪಾದಕಮಲಗಳಿಗೆ ನಮಸ್ಕರಿಸಿದನು. ಸಂತೋಷಾಧಿಕ್ಯದ ಉಲ್ಲಾಸವು ಕಪಿಸೈನ್ಯದ ಮನಸ್ಸನ್ನು ತುಂಬಿತು. ವಾನರರೊಡೆಯ ಸುಗ್ರೀವನೊಡನೆ ಅತಿಶಯ ಪ್ರೀತಿಗಾಗಿ ಹಾತೊರೆಯುತ್ತ ರಾಮನು ಲಕ್ಷ್ಮಣನ ಬಳಿಗೆ ಬಂದನು. ೩೫. ರಾಘವರಾಯನು ಧನ್ವಂತರಿಯ ಮಗ ಸುಷೇಣನನ್ನು ಕರೆದು, "ತಮ್ಮನ ಸ್ಥಿತಿಯೇನು, ಉಸಿರಿದೆಯೋ ಎಂಬುದನ್ನು ಪರೀಕ್ಷಿಸು. ವಾನರಸೇನಾಪತಿಯನ್ನು ಪರೀಕ್ಷೆಮಾಡು" ಎಂದನು. ಅದಕ್ಕೆ ಸುಷೇಣನು, "ಪರಾಪರವಸ್ತು ಸ್ವರೂಪಿಯಾದ ನೀನೇ ಮಾನವಮಾಯೆಯನ್ನು ಬಿಟ್ಟು ಪರೀಕ್ಷಿಸಿ

ಎನುತ ನಾಡಿಯು ಜೀವ ಪವಮಾ । ನನ ಪರೀಕ್ಷಿಸಿ ಲಕ್ಷ್ಮಣನ ಮುಖ
ವನರುಹದಲೊಗಿಸಿದನು ಮಾರುತಮಂತ್ರಮಯ ಜಲವ
ತನುವ ಮುರಿವುತ ಮಗಧತನುಜಾ । ತನುಜನೆದ್ದನು ಮೇಲೆ ನೀಲನ
ತನುವಿನಲಿ ತುಂಬಿದನು ಮುಖ್ಯಪ್ರಾಣಮಾರುತನ ೩೬

ಬಳಿಕ ಬವರದಲಳಿದ ಸುಭಟಾ । ವಳಿಯನೆಬ್ಬಿಸಿ ಹಬ್ಬಿಸಿದನು
ಜ್ವಲ ಮನೋರಥಲತೆಯ ಮನುಕುಲರಾಜಶೇಖರನ
ಜಲಧಿ ಕಲ್ಪದಲಬ್ಬರಿಸಿ ಭೂ । ತಳವ ಲಂಬಿಸುವಂತೆ ಸೇನಾ
ಜಲಧಿ ಲಳಿಯೇಱಿದುದು ತೊರವೆಯರಾಯನಿದಿರಿನಲಿ ೩೭

ನೋಡು, ಸಾಕು" ಎಂದ. ೩೬. ಎಂದು ಹೇಳಿ ಸುಷೇಣನು ನಾಡಿಯನ್ನು ಹಿಡಿದು ಜೀವದುಸಿರನ್ನು ಪರೀಕ್ಷಿಸಿ ಲಕ್ಷ್ಮಣನ ಮುಖಕಮಲದ ಮೇಲೆ ವಾಯುಮಂತ್ರದ ನೀರನ್ನು ಪ್ರೋಕ್ಷಿಸಿದನು. ಆಗ ಲಕ್ಷ್ಮಣನು ಮೈಮುರಿಯುತ್ತ ಎದ್ದನು. ಬಳಿಕ ನೀಲನ ದೇಹದಲ್ಲಿ ಮುಖ್ಯ ಪ್ರಾಣವಾಯುವನ್ನು ತುಂಬಿದನು. ೩೭. ಅನಂತರ ಯುದ್ಧದಲ್ಲಿ ಸಾವನ್ನಪ್ಪಿದ ವೀರರನ್ನು ಎಬ್ಬಿಸಿ ಸುಷೇಣನು ಮನುವಂಶರಾಜಶೇಖರ ರಾಮನ ಮನಸ್ಸಿನ ಬಯಕೆಯ ಬಳ್ಳಿ ಹಬ್ಬುವಂತೆ ಮಾಡಿದನು. ಕಲ್ಪಾಂತ್ಯದಲ್ಲಿ ಸಾಗರವು ಅಬ್ಬರಿಸಿ ಭೂಮಿಯನ್ನು ಆಕ್ರಮಿಸುವಂತೆ ವಾನರಸೈನ್ಯಸಾಗರವು ತೊರವೆಯಧಿಪತಿಯ ಎದುರಿನಲ್ಲಿ ಉತ್ಸಾಹಗೊಂಡಿತು.

# ಇಪ್ಪತ್ತಾರನೆಯ ಸಂಧಿ

ಸೂಚನೆ॥ ರಣವ ಜಯಿಸುವೆನೆಂಬ ಛಲಪದ । ದೆಣಿಕೆಯಿಂದೆಬ್ಬಿಸಿದನಾ ಸುರ
ಗಣಭಯಂಕರ ಕುಂಭಕರ್ಣನನಾ ದಶಗ್ರೀವ

ಭೂತಳಾಧಿಪಸೂನು ಕೇಳ್ ರಿಪು । ಜಾತಜಯಜನಿತಾಭ್ಯುದಯ ರಾ
ಗಾತಿಶಯ ಸಂಪೂರಣದ ಸೌರಂಭಸಾಗರದ
ಪೋತ ವಣಿಜರು ತಿರುಗಿದರು ಲಾ । ಭಾತಿಶಯದಲಿ ವಿಶ್ವಕರ್ಮ ವಿ
ನೂತನದ ಸುರುಚಿರದ ಶಿಬಿರದ ರಾಜಮಂದಿರಕೆ ೧

ಇಕ್ಕಿದರು ಮುತ್ತಿಗೆಯನಿವರಾ । ರಕ್ಕಸನ ಪಟ್ಟಣಕೆ ಪಡಿತಳ
ವಿಕ್ಕಿ ಪರಿಗತವಾದ ಲಜ್ಜೆಯ ಸುಯ್ಲ ಸೂಳಿನಲಿ
ಬೆಕ್ಕಸಂಬಡುತಸುರಪತಿ ತ । ನ್ನಿಕ್ಕೆಲದ ಕರತಳದ ಮುಸುಕಿನ
ದುಕ್ಕಡಿಯ ದುಮ್ಮಾನದಲಿ ಹೊಕ್ಕನು ಪುರಾಂತರವ ೨

ಅಹುದು ರಾವಣನೆಂದು ಬಾಗಿಲ । ಬಹಳ ಭಟರಿಗೆ ಕುಱುಹುದೋಱುತ
ಮಹಿಯ ನೋಟದ ನಡೆಯ ನರದುಬ್ಬುಗಳ ಕೊರಳುಗಳ
ಪ್ರಹಸವಳಿದಾನನದ ಲಜ್ಜಾ । ವಿಹರಣದ ವಿಹ್ವಲದ ಭೂತ
ಗ್ರಹವಿಕಾರನು ಬಂದನಳುಕುತ ರಾಜಬೀದಿಯಲಿ ೩

ಸೂಚನೆ॥ ಯುದ್ಧವನ್ನು ಜಯಿಸುವೆನೆಂಬ ಸ್ಥಿರಸಂಕಲ್ಪದಿಂದ ದಶಕಂಠನು ದೇವತೆಗಳಿಗೆ ಭಯಂಕರನಾದ ಕುಂಭಕರ್ಣನನ್ನು ಎಬ್ಬಿಸಿದನು. ೧. ರಾಜಕುಮಾರ ಕೇಳು, ಶತ್ರುಗಳನ್ನು ಜಯಿಸಿದುದರಿಂದುದಿಸಿದ ಸಂತೋಷ ತುಂಬಿದ ಸಂಭ್ರಮಸಾಗರದ ಮೇಲೆ ತೇಲಿಬಂದ ನಾವೆಯ ವರ್ತಕರಾದ ರಾಮಲಕ್ಷ್ಮಣರು ಅಧಿಕಲಾಭದೊಡನೆ ವಿಶ್ವಕರ್ಮರಚಿತ ಸುಂದರ ಶಿಬಿರದರಮನೆಗೆ ಹಿಂದಿರುಗಿದರು ಎಂದು ವಾಲ್ಮೀಕಿ ಮಹರ್ಷಿಗಳು ಕಥೆಯನ್ನು ಮುಂದುವರಿಸಿದರು. ೨. ವಾನರಸೈನ್ಯವು ರಾವಣಾಸುರನ ಪಟ್ಟಣಕ್ಕೆ ಉತ್ಸಾಹದಿಂದ ಮುತ್ತಿಗೆ ಹಾಕಿತು. ಲಜ್ಜೆಗೆಟ್ಟು ನಿಟ್ಟುಸಿರು ಬಿಡುತ್ತ ಆಶ್ಚರ್ಯಪಡುತ್ತ ರಾಕ್ಷಸೇಶ್ವರನು ತನ್ನ ಎರಡೂ ಕೈಗಳಿಂದ ಮುಖ ಮುಚ್ಚಿಕೊಂಡು ಎರಡು ಪಟ್ಟಿನ ದುಃಖದಿಂದ ಲಂಕೆಯನ್ನು ಪ್ರವೇಶಿಸಿದನು. ೩. 'ಹೌದು, ನಾನು ರಾವಣ!' ಎಂದು ಲಂಕಾಪುರದ ಬಾಗಿಲನ್ನು ಕಾಯುವ ಭಟರಿಗೆ ಗುರುತು ತೋರಿಸಿ ನೆಲದ ಮೇಲೆ ದೃಷ್ಟಿ ನಟ್ಟು ನಡೆದುಬಂದನು. ರಾವಣನ ಕತ್ತಿನ ನರಗಳು ಬಿಗಿದುಕೊಂಡಿದ್ದವು, ಮುಖದ ಹರ್ಷವಳಿದಿತ್ತು. ನಾಚಿಕೆಗೇಡಿನ ಮತ್ತು ವ್ಯಾಕುಲದ

ಮಾಡಿದಗ್ಗದ ಪುಣ್ಯಪಾಪಗ । ಳೂಡಿದಲ್ಲದೆ ಮಾಣವೆಂದುಜಿ
ರ್ಘಾಡಿಗಳ ಚಕ್ಕುಲಿನ ನಗೆಗಳ ಮುಸುಕುದಲೆಗಳಲಿ
ಬೀಡ ಸುಲಿಸಿದ ಫಲವಿದೀಗೆಂ । ದಾಡಿತಲ್ಲಿಯದಲ್ಲಿ ಜನ ಕೇ
ಡಾಡಿಗಳು ಮುಸುಕಿಕ್ಕಿ ಕೊಂಡೊಯ್ದರು ನಿಜಾಲಯಕೆ ೪

ನಿಂದವಲ್ಲಿಯದಲ್ಲಿ ಸತಿಯರ । ಹೊಂದಳಿಗೆಯಾರತಿಗಳಿದಿರಿನ
ವಂದಿಜನದುಗ್ಗಡಣೆ ಕಂಚುಕಿಜನದ ಕಳಕಳಿಕೆ
ಸಂಧಿಸಿದ ಮುವ್ವಾಗಿಯಂಬರ । ದಂದವಾದುದು ಧುರದ ಸೋಲದ
ಕುಂದುಗಳ ಕಳವಳಿಗ ಹೊಕ್ಕನು ತನ್ನ ಮಂದಿರವ ೫

ಮಿಕ್ಕವರ ಹುಗಗೊಡದೆ ಕಂಬಿಗ । ಳಿಕ್ಕಿಲದಲಾದಿದವು ಕದಗಳ
ನಿಕ್ಕಿ ಬಾಗಿಲು ಬಾಗಿಲಲಿ ಬಳಿಕಾ ದಶಗ್ರೀವ
ಉಕ್ಕುವಳಲಿನ ಮುಜೀವಡೆದ ಮನ । ದಕ್ಕಜದ ಮದ ಮುಜೀದ ಮೋನದ
ಹೊಕ್ಕಳದಲೊಜಗಿದನು ಸೂಸುವ ಸುಯ್ಲಿನಲಿ ಮಲಗ ೬

ಹಲುಗಳಚಿದಹಿಯಂತೆ ಭರಿಕ್ಕೈ । ಗಳದ ಮದಕರಿಯಂತೆ ಕಳನೊಳ
ಗಲಗುದಿದ ಕಲಿಯಂತೆ ಧನಪತಿ ಸುಲಿಗೆವಡೆದಂತೆ
ಬಳಲುತಳಲುತ ಬಸವಳಿವುತೊಲೆ । ದೊಲೆದು ಸುಯ್ಯುತ್ತೇಳುತೊಜಗುತ
ಹಲವ ಹಂಬಲಿಸುತ್ತ ಹೆಂಪಳಿದಿರ್ದನಸುರೇಂದ್ರ ೭

ಭೂತಗ್ರಹ ಹಿಡಿದ ರಾಕ್ಷಸನು ಅಳುಕುತ್ತ ರಾಜಬೀದಿಯಲ್ಲಿ ಬಂದನು. ೪. 'ಮಾಡಿದ ಪುಣ್ಯಪಾಪಗಳ ಫಲವು ಅನುಭವಿಸದೆ ಹೋಗದು' ಎಂದು ವಿನೋದಮಾಡಿ ನಗುತ್ತ ತಲೆಯ ಮೇಲೆ ಮುಸುಕು ಹಾಕಿಕೊಂಡು, 'ಮನೆಗಳನ್ನು ಸೂರೆಮಾಡಿಸಿದ ಫಲ ಈಗ ಕಾಣುತ್ತಿದೆ' ಎಂದು ಅಲ್ಲಲ್ಲಿ ಕೇಡಿಗರು ಮರೆಯಿಂದ ಮಾತನಾಡಿಕೊಂಡು ತಮ್ಮ ಮನೆಗೆ ಹೋದರು. ೫. ಸ್ತ್ರೀಯರ ಚಿನ್ನದ ತಟ್ಟೆಯ ಆರತಿಗಳು ಹಾಗಿಂದಹಾಗೇ ನಿಂತು ಹೋದವು ; ಮುಂದುಗಡೆಯಲ್ಲಿ ಹೊಗಳುಭಟರ ಜಯಘೋಷ ಮತ್ತು ಕಂಚುಕಿಗಳ ಕಳಕಳ ಶಬ್ದಗಳು ನಿಂತುವು. ಚಳಿಗಾಲದ ಮೊದಲಿನ ಆಕಾಶದಂತಾಯಿತು ಸನ್ನಿವೇಶ. ಯುದ್ಧದ ಸೋಲಿನಿಂದ ವ್ಯಥಿತನಾದ ರಾವಣನು ತನ್ನ ಅರಮನೆಯನ್ನು ಪ್ರವೇಶಿಸಿದನು. ೬. ಉಳಿದ ಯಾರನ್ನೂ ಒಳಕ್ಕೆ ಬಿಡದಂತೆ ಕದಗಳನ್ನು ಹಾಕಿ ಕಾವಲುಗಾರರು ಬಾಗಿಲು ಬಾಗಿಲುಗಳಲ್ಲಿ ಎರಡು ಪಕ್ಕಗಳಲ್ಲಿಯೂ ದಂಡಗಳನ್ನು ಹಿಡಿದು ನಿಂತರು. ಅನಂತರ ದಶಕಂಠನು ಉಕ್ಕುವ ದುಃಖದಿಂದ ಅಸೂಯೆಯ ಮನಸ್ಸು ಮುರಿದು ಗರ್ವಭಂಗದಿಂದ ಮೌನದಮುಸುಕಿನಲ್ಲಿ ನಿಟ್ಟುಸಿರುಬಿಡುತ್ತ ಹಾಸಿಗೆಯಲ್ಲಿ ಮಲಗಿದನು. ೭. ಹಲ್ಲು ಕಿತ್ತ ಸರ್ಪದಂತೆ, ಸೊಂಡಿಲು ಕತ್ತರಿಸಿದ ಮದ್ದಾನೆಯಂತೆ, ಯುದ್ಧದಲ್ಲಿ ಕತ್ತಿಯು ಮುರಿದುಹೋದ ವೀರನಂತೆ, ಸೂರೆಹೋದ ಐಶ್ವರ್ಯವಂತನಂತೆ ರಾವಣ ಬಳಲುತ್ತ, ಸಂಕಟಪಡುತ್ತ, ದಣಿಯುತ್ತ, ಮೈಯೊಲೆದು ನಿಟ್ಟುಸಿರುಬಿಡುತ್ತ, ಏಳುತ್ತ ಮಲಗುತ್ತ,

ಮಾಡಿಕೊಂಡೆನು ದುರ್ಗುಣವ ಹಗೆ । ಹಾಡು ಬಿದ್ದುದು ಬಲ್ಲಿದನೆನಲು
ಗಾಡಿಭಾಗ್ಯವ ಕೆಡಿಸಿಕೊಂಡೆನು ವಿಷಯಲಂಪಟದಿ
ಬೇಡವೆನೆ ಮಾವನನು ಮರಣಕೆ । ಜೋಡಿಸಿದೆ ಹಿತವಾಗಿ ಹೇಳಿದ
ರೋಡಿಸಿದೆ ತಮ್ಮನನು ಕಾಮುಕತನದಲಕಟೆಂದ ೮

ಜನನಿ ಜನನಿಯು ಜನಕರನುಚಿತ । ವೆನಲು ಜರೆದೆನು ಜನಕಜಾಪತಿ
ಜನಪನೆಂದೇ ನೋಡಿ ಮಾಡಿದೆನಪ್ರಬುದ್ಧಿಕೆಯ
ದಿನದಿನಕೆ ಕಡುಗೇಡು ಕೈಯೊಡ । ನೊನದುಕೊಡುತಿದೆ ಕಾಮುಕತ್ವದ
ನೆನಹು ನೆಗ್ಗದೆ ಮಾಣದೆಂದಸುರೇಂದ್ರನಳವಳಿದ ೯

ಎಣಿಸಿದನು ಹಲವಂಗದಲಿ ಖಳ । ನಣೆದಣೆದು ರಣಮುಖದ ಮಾರ್ಗದ
ಗುಣಿತದಲಿ ರಿಪುಜಯವ ಕಾಣದೆ ಕಾನನಾಂತರವ
ಕಣುಗುರುಡ ಹೊಕ್ಕಂತೆ ಚಿಂತೆಯು । ಬೆಣೆಯು ಬಿಗುಹಿನಲಿರ್ದು ಕಂಡನು
ಗುಣನಿಧಿಯೆ ಕೇಳೊಂದುಪಾಯವನಾ ದಶಗ್ರೀವ ೧೦

ಎಬ್ಬಿಸುವೆನನುಜನನು ಮನುಜನ । ಜಬ್ಬುದುಳಿಸುವೆನುಳಿದ ಭೂತಕೆ
ಹಬ್ಬವಿಕ್ಕುವೆನುಕ್ಕಿ ಸೊಕ್ಕಿದ ಮರ್ಕಟವ್ರಜವ
ಉಬ್ಬರದ ಸಂಗರದ ಸೋಲದ । ಮಬ್ಬುಗಿದು ಬೆಳಗೆಂದು ಚಿತ್ತವ
ನೊಬ್ಬುಳಿಯಲೈತಂದು ಬಳಿಕಿಂತೆಂದನಸುರೇಂದ್ರ ೧೧

ಹಲವು ರೀತಿಯಲ್ಲಿ ಹಂಬಲಿಸುತ್ತ ಕಳೆಗುಂದಿದನು. ೮. 'ನಾನು ದುರ್ಗುಣವನ್ನು ತಂದುಕೊಂಡೆ, ಬಲ್ಲಿದ ಶತ್ರುವಿನೊಡನೆ ಹಗೆತನವುಂಟಾಯಿತು. ಇಂದ್ರಿಯಾಭಿಲಾಷೆಯಿಂದ ನನ್ನ ಸಂಪತ್‌ಸೌಂದರ್ಯವನ್ನು ಕೆಡಿಸಿಕೊಂಡೆ. ಮಾವ ಮಾರೀಚನು ಬೇಡವೆಂದರೂ ಬಿಡದೆ ಅವನನ್ನು ಸಾವಿಗೆ ತಳ್ಳಿದೆ. ಅಯ್ಯೊ, ಹಿತವಚನವನ್ನು ನುಡಿದ ತಮ್ಮನನ್ನು ಕಾಮುಕತನದಿಂದ ತಿರಸ್ಕರಿಸಿದೆ' ಎಂದು ರಾವಣ ವ್ಯಥೆಪಟ್ಟ. ೯. 'ತಾಯಿ ಮತ್ತು ತಾಯಿಯತಂದೆ—ಇವರು ಇದು ಯೋಗ್ಯವಲ್ಲ ಎಂದು ಹೇಳಿದಾಗ ಅವರನ್ನು ಜರೆದುಬಿಟ್ಟೆ. ಜಾನಕೀಪತಿಯನ್ನು ಮಾನವರರಸನೆಂದೇ ಭಾವಿಸಿ ತಿಳಿಗೇಡಿಯಾಗಿ ವರ್ತಿಸಿದೆ. ದಿವಸದಿವಸಕ್ಕೆ ಆಪತ್ತು ಅಲ್ಲಲ್ಲೇ ವೃದ್ಧಿಯಾಗುತ್ತಿದೆ. ನನ್ನ ಕಾಮುಕತನದ ಯೋಚನೆಯು ಪುಡಿಪುಡಿಯಾಗದೆ ಇರುವುದಿಲ್ಲ' ಎಂದು ರಾವಣ ಕುಸಿದ. ೧೦. ರಾವಣನು ಲೆಕ್ಕಾಚಾರಮಾಡಿ ಹಲವು ರೀತಿಯಲ್ಲಿ ಆಲೋಚಿಸಿದನು. ಯುದ್ಧಗೆಲ್ಲುವ ಮಾರ್ಗವನ್ನು ಗುಣಿಸಿ ಶತ್ರುವಿಜಯದ ರೀತಿಯನ್ನು ಕಾಣದೆ ಕುರುಡನು ಕಾಡನ್ನು ಪ್ರವೇಶಿಸಿದಂತೆ ಚಿಂತೆಯು ಗೂಟಕ್ಕೆ ಬಿಗಿಯಾಗಿ ಕಟ್ಟಿದಂತಿದ್ದ. ಗುಣನಿಧಿ ಲವನೇ ಕೇಳು, ಆಗ ದಶಕಂಠನು ಒಂದು ಉಪಾಯವನ್ನು ಕಂಡನು. ೧೧. 'ತಮ್ಮನನ್ನು ಎಬ್ಬಿಸುತ್ತೇನೆ, ಮನುಷ್ಯರಾಮನನ್ನು ತುಳಿದು ಹಿಪ್ಪೆ ಮಾಡಿಸುತ್ತೇನೆ. ಮದಿಸಿ ಗರ್ವದಿಂದ ಬರುವ ವಾನರಸಮೂಹವನ್ನು ಭೂತಗಳಿಗೆ ಕೊಟ್ಟು ಹಬ್ಬ ಮಾಡಿಸುತ್ತೇನೆ. ಉಗ್ರಕದನದಲ್ಲಿನ ಅಪಜಯದ ಕತ್ತಲೆಗೆ ಇದು ಬೆಳಕು' ಎಂದು

ದೈವವೆಂದರಿದರಿದು ಮೂರ್ಖರ । ಹೈವಳಿಯನನುಸರಿಸಿ ಸಮರದ
ಸೈವಳಿಯಲೇ ಸಾವುದೇ ಕರ್ತವ್ಯ ಸಹಭವನ
ಕೈವಶಕೆ ಗೆಲವಾಗದಿರೆ ಬಳಿ । ಕೈವಡಿಯ ಹಗೆತನದಿ ಹೊಗುವೆನು
ಬೈವವರು ಬೈಯಲಿ ಸವಿಸಾಕವನೆಂದನಸುರೇಂದ್ರ ೧೨

ಎಂದು ತನ್ನೊಳು ತಾನೆ ತೊಡಹಕೆ । ತಂದುಕೊಂಡನು ಮನವನಲ್ಲಿಗೆ
ಬಂದನಯ್ಯನ ನೋವನುಪಚರಿಸಲು ಸುರೇಂದ್ರಜಿತು
ಮುಂದಣಹಿತಾಹವದ ಕಾರ್ಯಕೆ । ನಿಂದಿರುವ ಬುದ್ಧಿಯಲಿ ಬಳಿಕಿಂ
ತೆಂದನನುವರಿದಾ ದಶಾಸ್ಯಂಗಾ ಸುರೇಂದ್ರಜಿತು ೧೩

ಹಗೆಯ ನಾಚಿಕೆ ಹೋದುದದರಿಂ । ಮಿಗಿಲೆ ನಿನಗೆಲೆ ಜೀಯ ಜಾಡ್ಯದ
ಜಗುಳುದಲೆಗಿದೆಲಾ ಜಯಾಭಿಮುಖ ಪ್ರತಾಪಶಿಖಿ
ತಗರು ತಿರುಗಿದರೇನು ಮರುಸ । ನ್ನಿಗಳ ಸಮರವ ಜಯಿಸದೇ ತ್ರೈ
ಜಗಕೆ ಬೆಜಗೆನಿಸುವೆನು ಬೆಸನನು ಕೊಟ್ಟು ಕಳುಹೆಂದ ೧೪

ನೆರೆದ ಶಾಖಾಮೃಗ ಸಮೂಹವ । ನರವೆನಂಕಣಿಯಾಗಿ ಬಿಂಕದ
ನರಪತಿಯನು ಪರೇತಪತಿಯ ಪುರಾಂತರಾಳದಲಿ
ದೊರೆಯೆನಿಸುವೆನು ಕಾಮ್ಯಸಿದ್ಧಿ । ಸ್ಫುರಣವೀ ತ್ರೈಲೋಕ್ಯದಲಿ ಕ
ರ್ಬುರಕುಲೇಂದ್ರಂಗಲ್ಲದಿಲ್ಲೆನಿಸುವೆನು ತಾನೆಂದ ೧೫

ಮನಸ್ಸನ್ನು ಹದಕ್ಕೆ ತಂದುಕೊಂಡು ರಾವಣನು ಆಲೋಚಿಸಿದನು. ೧೨. 'ರಾಮನು ಪರಮಾತ್ಮನೆಂಬುದನ್ನು ತಿಳಿದೂ ತಿಳಿದು ಮೂರ್ಖರ ಮಾರ್ಗವನ್ನನುಸರಿಸಿ ಯುದ್ಧದ ನೇರಮಾರ್ಗದಲ್ಲಿ ಹೋಗಿ ಸಾಯುವುದೇ ನನ್ನ ಕರ್ತವ್ಯ. ತಮ್ಮನ ಕಾಳಗದಿಂದ ಗೆಲುವಾಗದೆ ಇದ್ದರೆ ಆಗ ಐದರಷ್ಟು ದ್ವೇಷದಿಂದ ಯುದ್ಧಕ್ಕೆ ಹೋಗುವೆನು. ಬೈಯುವವರು ಬೈಯಲಿ' ಎಂದುಕೊಂಡನು ರಾವಣ. ೧೩. ಹೀಗೆ ಯೋಚಿಸಿ ರಾವಣನು ಮನಸ್ಸನ್ನು ಸ್ಥಿಮಿತಕ್ಕೆ ತಂದುಕೊಂಡನು. ಅಷ್ಟುಹೊತ್ತಿಗೆ ತಂದೆಯ ನೋವನ್ನು ಉಪಚರಿಸಲು ಇಂದ್ರಜಿತು ಅಲ್ಲಿಗೆ ಬಂದನು. ಮುಂದೆ ಶತ್ರುವಿನೊಡನೆ ಹೋರಾಡುವ ಕಾರ್ಯದ ಬಗ್ಗೆ ಬುದ್ಧಿಯನ್ನುಪಯೋಗಿಸಿ ಸಮಯ ನೋಡಿ ಇಂದ್ರಜಿತು ದಶಮುಖನನ್ನು ಕುರಿತು ನುಡಿದನು. ೧೪. "ಶತ್ರುವಿನ ನಾಚಿಕೆ ಹೋಯಿತು. ಅದಕ್ಕಿಂತ ಹೆಚ್ಚೇ ನಿನ್ನದು ? ಚಿಂತೆಯನ್ನು ಕಳಚಿಹಾಕಲು ನಿನ್ನಲ್ಲಿ ವಿಜಯಸಂಪಾದನೆಯ ಪರಾಕ್ರಮಾಗ್ನಿ ಇದೆಯಲ್ಲವೇ. ಹೋರಾಟದಲ್ಲಿ ಟಗರು ಹಿಂದಕ್ಕೆ ತಿರುಗಿದರೇನು, ಮರುಸಂಜ್ಞೆಯಿಂದ ಜಗಳದಲ್ಲಿ ಗೆಲ್ಲುವುದಿಲ್ಲವೇ ? ನನಗೆ ಅಪ್ಪಣೆಕೊಟ್ಟು ಕಳುಹಿಸು, ಮೂರು ಲೋಕಗಳಿಗೂ ವಿಸ್ಮಯವನ್ನುಂಟುಮಾಡುವೆನು" ಎಂದ ಇಂದ್ರಜಿತು. ೧೫. "ಯುದ್ಧಕ್ಕೆ ಸೇರಿದ ವಾನರಸಮೂಹವನ್ನು ಸಂಪೂರ್ಣ ಅರೆದುಹಾಕುತ್ತೇನೆ. ಅಹಂಕಾರದಿಂದ ಮೆರೆಯುವ ಮಾನವರರಸನನ್ನು ಯಮನ ಪಟ್ಟಣದಲ್ಲಿ ರಾಜನನ್ನಾಗಿ ಮಾಡುತ್ತೇನೆ. ಮೂರುಲೋಕಗಳಲ್ಲಿ ಮನೋರಥ ಸಿದ್ಧಿಯು ರಾಕ್ಷಸಕುಲೇಂದ್ರನಿಗಲ್ಲದೆ ಅನ್ಯರಿಗಿಲ್ಲ

ಮಗನ ಮಾತಿಗೆ ಮಂದಹಾಸವ । ನುಗಿಸಿದನು ಹೃದಯದಲಿ ಶಾಂತದ
ಲಗುಳಿಯನು ಮುಱಿದಧಿಕ ಚಿಂತಾಭಾರದುಬ್ಬರದ
ಮಗನೆ ಕೇಳೀ ಕಣೆಯದಲಿ ಸಂ । ಯುಗದ ಭಾರಕೆ ಕುಂಭಕರ್ಣನ
ಹೊಗಿಸಿ ನೋಡುವ ಮನದಲಿದ್ದಭಿಮತವಿದೀಗೆಂದ ೧೬

ನೋಡುವೆನು ತಮ್ಮನಲಿ ತಮ್ಮನ । ಪಾಡು ತಪ್ಪಿದ ಬಳಿಕ ಪಂಥದ
ಪಾಡು ಪಾಡಿನಮೇಲೆ ಪೌರುಷದುರುಪರಿಗ್ರಹದ
ಮೋಡಿ ಮುಱಿಯದೆ ಮನದ ಖಾಡಾ । ಖಾಡಿಯಲಿ ಹೊಯ್ದಾಡಿ ಕೀರ್ತಿಯ
ಜೋಡಿಸುವುದೇ ಜಾಣತನದಭಿಯೋಗ ತನಗೆಂದ ೧೭

ಎಂದು ಕಳುಹಿದನಾ ಕುಮಾರನ । ಮಂದಿರಕೆ ಮನದ್ಧಾದಿಯಲಿ ಮಿಗೆ
ಕೊಂದುಕೂಗಿದುದಿರುಳಿನಗ್ರ ಸಮಗ್ರ ಮೂರುಖನ
ಕಂದಿದವು ತಾರೆಗಳು ತಾಮಸಿ । ಯಂದಗೆಟ್ಟುದು ತಾಮರಸ ನಗೆ
ಯಿಂದ ನಲವೇಱಿದವು ನೆರೆದವು ಚಕ್ಕವಕ್ಕಿಗಳು ೧೮

ಕುಂಭಕರ್ಣನನೆಬ್ಬಿಸುವ ಸೌ । ರಂಭವನು ಸಲೆ ನೋಡಲೆಂದಾ
ಡಂಭಭೇದಿ ದಿಶಾಂಗನಾ ಸುರತೋಪಚಾರಕದ
ರಂಭಣದ ರಮಣೀಯತರ ದೋ । ಸ್ತಂಭಗಳನಗಲಿಸುತ ತಿಮಿರವಿ
ಜೃಂಭಣನು ಮಣಿಖಚಿತ ರಥದಿಂದದರ್ದನಂಬರವ ೧೯

ಎನ್ನಿಸುವೆ" ಎಂದ ಇಂದ್ರಜಿತು. ೧೬. ರಾವಣನು ಮಗನ ಮಾತಿಗೆ ಮಂದಹಾಸವನ್ನು ಬೀರಿದನು. ಮನಸ್ಸಿನ ತೀವ್ರಚಿಂತೆಯು ತಡೆಯನ್ನು ಮುರಿದು ಶಾಂತಭಾವದಿಂದ, "ಮಗನೆ ಕೇಳು, ಈ ಬಾರಿ ಯುದ್ಧದ ಭಾರವನ್ನು ಕುಂಭಕರ್ಣನ ಮೇಲೆ ಹೊರಿಸಿ ನೋಡುವ ಅಭಿಪ್ರಾಯವು ನನ್ನ ಮನಸ್ಸಿಗೆ ತೋರಿದೆ" ಎಂದ ರಾವಣ. ೧೭. "ತಮ್ಮನ ಯುದ್ಧವೇನಾಗುವುದೋ ನೋಡುವೆನು. ತಮ್ಮನ ಪಾಡು ತಪ್ಪಿದ ಬಳಿಕ ನನ್ನ ಜಿದ್ದಿಗೆ ಅವಕಾಶ. ನನ್ನ ಸರದಿಯಲ್ಲಿ ಪರಾಕ್ರಮದ ಸೊಗಸಿಗೆ ಭಂಗಬರದಂತೆ ಪೈಪೋಟಿಯಿಂದ ಹೊಡೆದಾಡಿ ಕೀರ್ತಿಯನ್ನು ಗಳಿಸುವುದೇ ನನ್ನ ಬುದ್ಧಿವಂತಿಕೆಯ ಪ್ರಯತ್ನ" ಎಂದು ರಾವಣ ಇಂದ್ರಜಿತುವಿಗೆ ತಿಳಿಸಿದ. ೧೮. ಹೀಗೆ ಹೇಳಿ ರಾವಣನು ಮಗನನ್ನು ಮನೆಗೆ ಕಳುಹಿಸಿದನು. ಸಂಪೂರ್ಣ ಮೂರ್ಖನಾದ ಚಿಂತಾಮಗ್ನ ರಾವಣನನ್ನು ರಾತ್ರಿಯು ಕೊನೆಯು ಚುಚ್ಚಿ ಕೂಗಿ ಏಳಿಸಿತು. ನಕ್ಷತ್ರಗಳು ಕಾಂತಿಹೀನವಾದವು, ಇರುಳಿನ ಸೊಗಸು ನಾಶವಾಯಿತು, ತಾವರೆಹೂಗಳು ನಗುತ್ತ ಪ್ರಸನ್ನವಾದವು, ಚಕ್ರವಾಕದಂಪತಿಗಳು ಪುನಃ ಒಂದುಗೂಡಿದವು. ೧೯. ರತಿಕ್ರೀಡಾಸಕ್ತಿಯಿಂದ ಪೂರ್ವದಿಕ್ಕೆಂಬ ಸ್ತ್ರೀಯನ್ನು ಆಲಿಂಗಿಸಿಕೊಂಡಿದ್ದ ರಮಣೀಯವಾದ ತೋಳುಗಳನ್ನು ಸಡಿಲಿಸಿದ ಸೂರ್ಯನು ಕುಂಭಕರ್ಣನನ್ನು ಎಬ್ಬಿಸುವ ಸಂಭ್ರಮವನ್ನು ನೋಡುವ ಅಪೇಕ್ಷೆಯಿಂದ

ತೊಲಗಿದಾಹವದಪಜಯದ ಮು । ಮ್ಮುಳಿಯ ಮನದಾಳುಳದ ಬೇಗೆಯ
ಬೆಳಸಿನಸುರಾಧೀಶ ನಿಂದಿರೆ ಸುಪ್ರತಾಪಕದ
ಕಳಕಳದ ಕೈವಾರಿಗಳ ಕ । ಟ್ಟುಲುಹ ಕೇಳದೆ ನಿತ್ಯನಿಯಮಾ
ವಳಿಯ ನಿರ್ವರ್ತಿಸಿ ಮಹೇಶನನೊಲಿದು ಪೂಜಿಸಿದ ೨೦

ಒಲಿವನೇ ಶಿವನಶುಭಕರ್ಮಾ । ಕಲಿತ ಕಲುಷಾತ್ಮರಿಗೆ ಪೂಜೆಯ
ತಳೆದುಕೊಳ್ಳದೆ ಕೊಡಹಿದನು ಮೌಳಿಯನು ಮದನಾರಿ
ಎಲೆ ಕುಮಾರಕ ಕೇಳು ಲೋಕಾ । ವಳಿಯಲುಳ್ಳ ಸಮಸ್ತ ಮೂರ್ಖರ
ತಿಲಕನಲ್ಲಾ ರಾವಣನು ರಣಮುಖಕೆ ಮನದಂದ ೨೧

ಸಭೆಗೆ ಬಾರದೆ ನಾಚಿ ಬಳಿಕೊಳ । ಸಭೆಯೊಳೋಲಗವಿತ್ತು ಮಂತ್ರಿ
ಪ್ರಭುಗಳನು ಕರೆಸಿದನು ಕೇಳಿದನವರ ಮನದನುವ
ಉಭಯಮತದೇಕಾರ್ಥದಲಿ ಬಳಿ । ಕಭಯಪೂರ್ಣನ ಕುಂಭಕರ್ಣನ
ತ್ರಿಭುವನಕ್ಷೋಭಿತನ ರಣಕೆಬ್ಬಿಸಲು ನೇಮಿಸಿದ ೨೨

ತುಳಿಸುವುದು ಗಜಘಟೆಗಳಿಂದಿ । ಕ್ಕುಳಗಳಿಂದೊಡೆಮುರಿದು ಜಡಿದ
ಪ್ಪಳಿಸುವುದು ಕಬ್ಬುನದ ಕೊಡತಿಗಳಿಂದ ಮೂಗಿನಲಿ
ಹಲವು ಕುಜೀ ಕೋಣಗಳ ಹೊಗಿಸುವು । ದುಲಿವ ಹೆಬ್ಬಜೀಗಳನು ಕಿವಿಗಳ
ಬಳಿಯ ಬೊಬ್ಬಿಡಿಸುವುದು ಹೊಸೆವುದು ತಲೆಯಲಲಗುಗಳ ೨೩

ರತ್ನಖಚಿತ ರಥವನ್ನು ಹತ್ತಿಬಂದು ಆಕಾಶಕ್ಕೇರಿದನು. ೨೦. ಯುದ್ಧದಲ್ಲಿ ಸೋಲನ್ನನುಭವಿಸಿ ಬಂದಕಾರಣ ಕಿವಿಚಿಹೋದ ಮನಸ್ಸಿನ ಕೊರಗಿನಿಂದ ಬೆಂದ ರಾಕ್ಷಸೇಶ್ವರನು ಪರಾಕ್ರಮವನ್ನು ಹೊಗಳುತ್ತಿದ್ದ ಹೊಗಳುಭಟರ ಶಬ್ದವನ್ನು ಕಿವಿಯಮೇಲೆ ಹಾಕಿಕೊಳ್ಳದೆ ದಿನಚರಿಯ ಕಾರ್ಯಗಳನ್ನು ನೆರವೇರಿಸಿ ಶಿವನನ್ನು ಭಕ್ತಿಯಿಂದ ಪೂಜಿಸಿದನು. ೨೧. ಅಶುಭ ಕರ್ಮಾಸಕ್ತರಾದ ಪಾಪಾತ್ಮರಿಗೆ ಶಿವನು ಒಲಿಯುವನೇ ? ರಾವಣನ ಪೂಜೆಯನ್ನು ಧರಿಸದೆ ಶಿವನು ತಲೆಯನ್ನು ಕೊಡಹಿದನು. ಅಯ್ಯಾ ಕುಮಾರ ಕೇಳು, ಸಮಸ್ತಲೋಕಗಳ ಮೂರ್ಖರೆಲ್ಲರ ನಾಯಕನಲ್ಲವೇ ರಾವಣ ! ಅವನು ಯುದ್ಧವನ್ನೇ ನಿಶ್ಚಯಿಸಿಕೊಂಡನು ಎಂದು ವಾಲ್ಮೀಕಿಮಹರ್ಷಿಗಳು ನುಡಿದರು. ೨೨. ಲಜ್ಜೆಯಿಂದ ಸಭಾಸ್ಥಾನಕ್ಕೆ ಬರದೆ ಒಳಸಭೆಯಲ್ಲಿ ದರ್ಬಾರು ನಡೆಸಿ ಮಂತ್ರಿಮುಖ್ಯರನ್ನು ಕರೆಸಿ ಅವರ ಅಭಿಪ್ರಾಯವನ್ನು ಕೇಳಿದ ರಾವಣ. ಒಮ್ಮತಾಭಿಪ್ರಾಯದಿಂದ ಮೂರುಲೋಕಗಳನ್ನೂ ಅಲ್ಲೋಲಕಲ್ಲೋಲಮಾಡುವ ನಿರ್ಭೀತ ಕುಂಭಕರ್ಣನನ್ನು ನಿದ್ರೆಯಿಂದ ಎಬ್ಬಿಸಲು ರಾವಣನು ಅಪ್ಪಣೆಮಾಡಿದನು. ೨೩. “ಕುಂಭಕರ್ಣನನ್ನು ಆನೆಗಳಿಂದ ತುಳಿಸಿ, ಇಕ್ಕುಳಗಳಿಂದ ನೆಗ್ಗಿಸಿ, ಕಬ್ಬಿಣದ ಕೊಡತಿಗಳಿಂದ ಬಡಿದಪ್ಪಳಿಸಿ, ಮೂಗಿನೊಳಕ್ಕೆ ಹಲವು ಕುರಿ ಕೋಣಗಳನ್ನು ತುರುಕಿ, ಕಿವಿಯ ಹತ್ತಿರ ಭಾರಿ ತಮಟೆಗಳನ್ನು ಹೊಡೆಸಿ ಗಲಾಟೆಮಾಡಿಸಿ, ತಲೆಯಮೇಲೆ ಕತ್ತಿಗಳನ್ನು ಉಜ್ಜಿ”

ಅಂಜದೇನುಳ್ಳನಿತುಪಾಯವ । ನಂಜನಾಚಲಸಮನ ಸಮರ ಸ
ಮಂಜಸನ ಸುಪ್ತಿಯ ಸಮಾಪ್ತಿಯ ಮಾಡಿ ನಮ್ಮೆಡೆಗೆ
ಅಂಜದಿಲ್ಲಿಗೆ ಕೊಂಡುಬಹುದು ೧ । ಪುಂಜಯಾನನೆಂದಸುರ ಬೆಸಸೆ ಕ
ರಾಂಜುಳಿಯಲಿ ಮಹಾಪ್ರಧಾನಿಗಳೈದಿದರು ಖಳನ ೨೪

ಮೇಳವಿಸಿದ ಮದದುಬ್ಬಿನಗ್ಗದ । ಭೀಳ ರಕ್ಕಸಭಟರ ಪೊಗಿಸಿದ
ರೇಳು ಲಕ್ಷದ ಲೆಕ್ಕದದ್ಭುತ ಘೋರ ವಿಗ್ರಹದ
ಕೇಳಿದೈ ರಘುವಂಶಲಕ್ಷ್ಮೀ । ಲೋಲಸುತ ಲಳಿಯೇಱಿದುಬ್ಬಿನ
ತೋಳುಬಲರೌಕಿದರು ತಂದ್ರಿಯ ತಾಮಸೀಚರನ ೨೫

ಮುರಜ ಡಿಂಡಿಮ ಪಟಹ ಕೌಸಳ । ಕರಡೆ ಚಂಬಕ ಕೊಂಬು ರಣಮೌ
ವರಿ ಮೃದಂಗಮ ಭೇರಿ ಕಹಳಾರವದ ರಭಸದಲಿ
ಬಿರಿಯಲಬುಜಭವಾಂಡವಂಬುಧಿ । ಜರಿಯೆ ದಿಗುಬಂಧಗಳ ಬೈಸಿಕೆ
ಸರಿಯಲುಕ್ಕಿನ ದಾಣೆದಡಿಯಲಿ ಹೊಯ್ದರಾ ಖಳನ ೨೬

ತೋಱದಿರಲವಗೆಚ್ಚಱಕೆ ಕ । ರ್ಮಾಱರುಕ್ಕಿನ ಚಮ್ಮಟಿಗೆಗಳ
ಲೇಱ ಹೊಯ್ದರು ಹೋಲ್ವ ಗಿರಿಗಳ ಸಿಡಿಲ ಕೊಡತಿಯಲಿ
ಚೀಱಕೆಯಲಪ್ಪಳಿಸಿದರು ದಳ । ವೇಱದುದು ದಕ್ಕಡೆಯ ರಕ್ಕಸ
ನೂಱಕೆಯ ಬಲುನಿದ್ರೆ ತೊಡೆಯನು ತಟ್ಟಿದಂದದಲಿ ೨೭

ಎಂದ ರಾವಣ. ೨೪. "ಹೆದರದೆ ಇರುವ ಎಲ್ಲ ಉಪಾಯಗಳಿಂದ ಅಂಜನಾಚಲಕ್ಕೆ ಸಮನಾದ ಯುದ್ಧವೀರನ ನಿದ್ದೆಯನ್ನು ಕೊನೆಗೊಳಿಸಿ ಶತ್ರುವಿಜಯಿಯನ್ನು ನಮ್ಮ ಬಳಿಗೆ ಕರೆದುಕೊಂಡು ಬನ್ನಿ" ಎಂದು ರಾವಣನು ಅಪ್ಪಣೆಮಾಡಲು ಕೈಮುಗಿದು ಕೊಂಡು ಮಹಾಮಂತ್ರಿಗಳು ಕುಂಭಕರ್ಣನ ಬಳಿಗೆ ಬಂದರು. ೨೫. ಭಾರಿ ಭಯಂಕರ ದೇಹಗಳ ಸೊಕ್ಕಿದ ಏಳುಲಕ್ಷ ಉಗ್ರರಾಕ್ಷಸಯೋಧರನ್ನು ತಂದು ಸೇರಿಸಿದರು. ಕೇಳಿ ದೆಯಾ ರಘುವಂಶಲಕ್ಷ್ಮೀಪುತ್ರನೇ, ಪ್ರಚಂಡ ತೋಳ್ಬಲದಿಂದ ಆವೇಶಗೊಂಡ ವೀರರು ನಿದ್ದೆಯಲ್ಲಿದ್ದ ಕುಂಭಕರ್ಣನ ಮೇಲೆ ಒತ್ತಡ ಹೇರಿದರು. ೨೬. ಮುರಜ, ಡಿಂಡಿಮ, ನಗಾರಿ, ಕಂಚಿನಕಹಳೆ. ಕರಡೆ, ಚಂಬಕ, ಕೊಂಬು, ರಣಮೌರಿ, ಮೃದಂಗ, ಭೇರಿ, ಕಹಳೆ-ಮೊದಲಾದ ವಾದ್ಯಗಳು ರಭಸದಿಂದ ಘೋರ್ಗರೆಯಲು ಬ್ರಹ್ಮಾಂಡವು ಬಿರುಕು ಬಿಟ್ಟಿತು, ಸಮುದ್ರ ಹಿಂದಕ್ಕೆ ಸರಿಯಿತು, ದಿಕ್ಕುಗಳ ಬೆಸುಗೆ ಬಿಟ್ಟಿತು. ಆಗ ಭಟರು ಉಕ್ಕಿನ ಬಡಿಗೆಗಳಿಂದ ಕುಂಭಕರ್ಣನನ್ನು ಹೊಡೆದರು. ೨೭. ಇದಾವುದರಿಂದಲೂ ಕುಂಭಕರ್ಣ ನಿಗೆ ಎಚ್ಚರಿಕೆಯಾಗಲಿಲ್ಲ. ಆಗ ಭಟರು ಕಮ್ಮಾರರ ಉಕ್ಕಿನ ಸುತ್ತಿಗೆಗಳಿಂದ ಕುಂಭ ಕರ್ಣನ ಮೇಲೇರಿ ಹೊಡೆದರು ; ಬೆಟ್ಟಗಳ ಮೇಲೆ ಬೀಳುವ ಸಿಡಿಲಿನಂತಿದ್ದ ಕೊಡತಿ ಗಳಿಂದ ಕಿರುಚುತ್ತ ಅಪ್ಪಳಿಸಿದರು. ಇದೆಲ್ಲ ಭಾರಿರಾಕ್ಷಸನಿಗೆ ತೊಡೆಯನ್ನು ತಟ್ಟಿದಂತಾಗಿ

ಒಡೆಮುರಿದರಿಕ್ಕುಳಗಳಲಿ ಕೈ । ಗೊಡತಿಗಳಲಪ್ಪಳಿಸಿದರು ಪರ
ದೊಡೆಯ ಹೊಯ್ದರು ಸರಳುಗಳನುಗುರುಗಳ ಸಂದಿಯಲಿ
ಬಿಡದೆ ಬೆಟ್ಟಿದರಲಗುಗಳನು । ಗ್ಗಡದ ಮುರಿಯಾಣಗಳ ಮಿಣೆಯಲಿ
ಜಡಿದರಿಟಿದರು ಬಳಿಯ ಸಬಳದಲಳ್ಳೆಗುಕ್ಕಿಸಲಿ ೨೮

ಕೋಡುಗಲ್ಲುಗಳಿಂದ ವದನದ । ದಾಡೆಗಳನುದ್ದಿದರು ಹೊಗೆದುದು
ಕೂಡೆ ಕಾರ್ಬೊಗೆಗಿಚ್ಚು ನರಕೇಸರಿಯ ಮುಸಕದಲಿ
ರಝಾಡಿಸುವ ಶಿಖಿಯಿಂದ ಕಂಗೆ । ಟ್ಟೋಡಿತಲ್ಲಿಯ ಖಳರು ನಿದ್ರೆಯ
ಮೋಡಿ ಮುಱಿಯದೆ ಮೊಱೆವುತಿರ್ದನು ಕಡಲ ಮೊಱಿಪದಲಿ ೨೯

ಹುರಿಕಟಿಸಿ ರಕ್ಕಸರು ಹೊಕ್ಕರು । ನೆರೆದ ಮಂತ್ರಿಗಳಬ್ಬರಣೆಗಳ
ಲರಿದಿಶಾಪಟಮಲ್ಲನಿದಿರಿನಲುಲಿವ ಬೊಬ್ಬೆಯಲಿ
ನೊರಜುಗಳು ನೆಣಗೊಬ್ಬಿನಲಿ ಕುಲ । ಗಿರಿಯ ಗುಡುಗಾಡಿಸುವವೊಲು ಮು
ದ್ಗರ ಮುಸಲ ಪರಿಘಂಗಳಲಿ ನಡೆದಡರಿದರು ಖಳನ ೩೦

ಸೂಳಗಿವ ನಿಟ್ಟುಸುರ ನಿಡು ವೈ । ಹಾಳಿಯಲಿ ತಱಗೆಲೆಯವೊಲು ಹೊ
ಕ್ಕಾಳು ಹಾಱಿತು ಲಕ್ಷಸಂಖ್ಯೆಯಲಭ್ರಮಂಡಲಕೆ
ಬೀಳುತಸುಗಳ ನೀಗಿದರು ಕೈ । ಕಾಲು ನಿಗುರಿನಲಳಿದ ರಕ್ಕಸ
ಜಾಲಕೆಣಿಕೆಯು ಕಾಣೆನೆಂತುಟೊ ನಿದ್ರೆ ರಕ್ಕಸನ ೩೧

ಅವನ ಗಾಢನಿದ್ರೆಯು ಇನ್ನೂ ವೃದ್ಧಿಯಾಯಿತು. ೨೮. ಇಕ್ಕುಳಗಳನ್ನು ಹಾಕಿ ಅಮುಕಿದರು, ಕೈಗೊಡತಿಗಳಿಂದ ಅಪ್ಪಳಿಸಿದರು, ದಪ್ಪತೊಡೆಗಳಿಗೆ ಬಾಣಗಳನ್ನು ಚುಚ್ಚಿದರು, ಕತ್ತಿಗಳನ್ನು ಉಗುರುಗಳ ಸಂದಿಯಲ್ಲಿ ಸಿಕ್ಕಿಸಿ ಒಳಕ್ಕೆ ಇಳಿಯುವಂತೆ ಹೊಡೆದರು ಹೊಸೆದ ದಪ್ಪ ಚರ್ಮದ ಹಗ್ಗದಿಂದ ಬಾರಿಸಿದರು, ಈಟಿಯಿಂದ ಪಕ್ಕೆಯನ್ನು ತಿವಿದರು. ೨೯. ಕೋಡುಗಲ್ಲುಗಳಿಂದ ಬಾಯಿಯ ಕೋರೆದಾಡೆಗಳನ್ನು ಉಜ್ಜಿದರೋ ಇಲ್ಲವೋ ನರಸಿಂಹನ ರಭಸದಂತೆ ಕಪ್ಪು ಹೊಗೆಯೊಡನೆ ಉರಿಯೆದ್ದಿತು. ಹಬ್ಬುತ್ತಿರುವ ಬೆಂಕಿಯನ್ನು ಕಂಡು ಕಂಗೆಟ್ಟು ಅಲ್ಲಿಯ ರಾಕ್ಷಸರು ಓಡಿದರು. ಇಷ್ಟಾದರೂ ನಿದ್ದೆಯ ಜಂಪು ಹರಿಯದೆ ಕುಂಭಕರ್ಣ ಸಮುದ್ರದ ಭೋರ್ಗರೆತದಂತೆ ಗೊರೆಯುತ್ತಿದ್ದನು. ೩೦. ಅಲ್ಲಿಗೆ ಬಂದಿದ್ದ ಮಂತ್ರಿಗಳ ಅಬ್ಬರದೊಡನೆ ರಾಕ್ಷಸಭಟರು ಹುರುಪಿನಿಂದ ಬೊಬ್ಬೆಹಾಕುತ್ತ ಶತ್ರುವೀರನ ಎದುರಿಗೆ ಬಂದರು. ಸಣ್ಣ ಸೊಳ್ಳೆಗಳು ಸೊಕ್ಕಿನಿಂದ ಕುಲಪರ್ವತದ ಮೇಲೆ ಗುಡುಗಾಡಿದಂತೆ ಮುದ್ಗರ, ಮುಸಲ ಮತ್ತು ಪರಿಘಾಯುಧಗಳನ್ನು ಹಿಡಿದು ರಾಕ್ಷಸರು ಕುಂಭಕರ್ಣನ ಮೈಮೇಲಕ್ಕೆ ಹತ್ತಿದರು. ೩೧. ಕುಂಭಕರ್ಣನ ಭೋರಿಡುವ ನಿಟ್ಟುಸಿರಿನ ರಭಸಕ್ಕೆ ಸಿಕ್ಕಿದ ರಾಕ್ಷಸರು ಲಕ್ಷಸಂಖ್ಯೆಯಲ್ಲಿ ತರಗೆಲೆಯಂತೆ ಆಕಾಶಕ್ಕೆಸೆಯಲ್ಪಟ್ಟರು ; ಆಕಾಶದಿಂದ ಕೈಕಾಲುಗಳನ್ನು ಚಾಚಿಕೊಂಡು ಬಿದ್ದು ಪ್ರಾಣಬಿಟ್ಟರು. ಮರಣಹೊಂದಿದ ರಾಕ್ಷಸರಿಗೆ ಲೆಕ್ಕವಿಲ್ಲ. ಕುಂಭಕರ್ಣನ ನಿದ್ದೆ

ಜಡಿದರಿಕ್ಕುಳಗಳಲಿ ಕಿವಿಗಳ । ಕೊಡಕೆಗಳ ಕದಡುಗಳ ಬಲುಹೆ
ಗ್ಗೊಡಗಳನು ಹಾಯ್ಕಿದರು ಕಣ್ಣಲಿ ಸುಣ್ಣ ಸಾಸುವೆಯ
ಹೆಡಗೆ ಹೆಡಗೆಯಲರೆದ ಮೆಣಸಿನ । ಪುಡಿಯ ಹೊಯ್ದರು ಮೂಗಿನಲಿ ಕಾ
ದಡಲಿಗಳ ಚಲ್ಲಿದರು ಚಲ್ಲಣದಡಿಯಲಾ ಖಳನ ೩೨

ಏಱೆತುಸುರಿನಲರೆದ ಮೆಣಸಿನ । ಕಾರ ನೆತ್ತಿಗೆ ಸೀನು ಸಿಡಿಲಾ
ಕಾರದಲಿ ಹೊಱಿವಂಟು ಹೊಡೆದುದು ಪುರದ ನೆರವಿಗಳ
ಮಾರಿರಕ್ಕಸನೆದ್ದಡಿನ್ನೀ । ಯೂರ ತಿನ್ನದೆ ಮಾಣನೆಂದಾ
ಪೌರಜನ ಸರಕುಗಳ ಸಂವರಿಸಿದರು ಭೀತಿಯಲಿ ೩೩

ಬಿಗಿದ ನಿದ್ರೆಯ ವದನದಾಗುಳಿ । ಕೆಗಳ ಸುಂಟುರುಗಾಳಿ ನಗರದೊ
ಳಗಲದಲಿ ಬೀಸಿದುದು ಪವನೋತ್ಪಾತದಂದದಲಿ
ಹೊಗಿಸಿದರು ಕುಱಿಕೋಣಗಳ ಹಿಂ । ಡುಗಳ ಮೂಗಿನ ನಾಳದಲಿ ಶಿಖಿ
ತೆಗೆದುಕೊಂಡುದು ಕುಂಭಕರ್ಣನ ಬಸುಱ ಬಗರಗೆಯ ೩೪

ಅನಿತಱಿಂ ಮೇಲುಕ್ಕಿ ಸೊಕ್ಕಿದ । ಘನ ಮತಂಗಜಘಟೆಗಳಲಿ ಗಾ
ಢಣೆಯ ಬೊಬ್ಬೆಗಳುಬ್ಬಿನಲಿ ತುಳಿಸಿದರು ರಕ್ಕಸನ
ತನುಜ ಕೇಳ್ ತಲೆಗೂದಲಲಿ ಕಾ । ನನದ ಕಾಡಾನೆಗಳವೊಲು ಪಥ
ದನುವ ಕಾಣದೆ ಹೊಲಬುಗೆಟ್ಟವು ಹೇಳಲೇನೆಂದ ೩೫

ಎಂಥದೋ ! ೩೨. ಕುಂಭಕರ್ಣನ ಕಿವಿಗಳನ್ನು ಇಕ್ಕುಳಗಳಿಂದ ಹಿಡಿದು ಅಮುಕಿದರು ; ಕಲಕಿದ ಸುಣ್ಣ ಸಾಸುವೆಗಳ ನೀರನ್ನು ದೊಡ್ಡ ದೊಡ್ಡ ಕೊಡಗಳಲ್ಲಿ ತಂದು ಕಣ್ಣಿನಲ್ಲಿ ಹಾಕಿದರು. ಅರೆದ ಮೆಣಸಿನಪುಡಿಯನ್ನು ಹೆಡಗೆ ಹೆಡಗೆಗಳಲ್ಲಿ ತಂದು ಮೂಗಿನಲ್ಲಿ ಸುರಿದರು ; ಕಾದ ಕೆಸರನ್ನು ಕುಂಭಕರ್ಣನ ಚಡ್ಡಿಯೊಳಕ್ಕೆ ಚೆಲ್ಲಿದರು. ೩೩. ಮೂಗಿನಲ್ಲಿ ಸುರಿದ ಮೆಣಸಿನ ಕಾರವು ಉಸುರಿನೊಡನೆ ನೆತ್ತಿಗೇರಿತು. ಸೀನು ಸಿಡಿಲಿನಂತೆ ಹೊರಬಂದು ಲಂಕಾನಗರದ ಜನಗಳಿಗೆ ಹೊಡೆಯಿತು. 'ಈ ಮಾರಿ ರಾಕ್ಷಸನು ಎದ್ದರೆ ಇನ್ನು ಈ ಊರನ್ನು ತಿನ್ನದೆ ಬಿಡುವುದಿಲ್ಲ' ಎಂದು ಪಟ್ಟಣಿಗರು ಭಯದಿಂದ ತಮ್ಮ ತಮ್ಮ ಸರಕುಗಳನ್ನು ಒಟ್ಟುಗೂಡಿಸಿಕೊಂಡರು. ೩೪. ಗಾಢನಿದ್ದೆಯಲ್ಲಿದ್ದ ಕುಂಭಕರ್ಣನು ಆಕಳಿಸಿದಾಗ ಅವನ ಬಾಯಿಂದ ಹೊರಟ ಸುಂಟರುಗಾಳಿಯು ಬಿರುಗಾಳಿಯು ಅಪಘಾತದಂತೆ ಲಂಕಾನಗರದಲ್ಲೆಲ್ಲ ಬೀಸಿತು. ಕುರಿಕೋಣಗಳ ಹಿಂಡುಗಳನ್ನು ಕುಂಭಕರ್ಣನ ಮೂಗಿನ ನಾಳದೊಳಕ್ಕೆ ತುರುಕಿದರು. ಆಗ ಕುಂಭಕರ್ಣನ ಹೊಟ್ಟೆಯ ಕುಳಿಯಲ್ಲಿ ಬೆಂಕಿ ಹೊತ್ತಿಕೊಂಡಿತು. ೩೫. ಇದಾದ ಮೇಲೆ ಭಾರಿ ಬೊಬ್ಬೆ ಹಾಕುತ್ತ ಮದಿಸಿದ ಆನೆಗಳ ಸಮೂಹದಿಂದ ಕುಂಭಕರ್ಣನನ್ನು ತುಳಿಸಿದರು. ಮಗುಲವ ಕೇಳು, ಕುಂಭಕರ್ಣನ ತಲೆಗೂದಲ ಗುಂಪಿನಲ್ಲಿ ಸಿಕ್ಕಿಕೊಂಡ ಆನೆಗಳು ಅರಣ್ಯದಲ್ಲಿ

ಎಡಹಿ ರೋಮಾವಳಿಯ ಕುಳಿಯಲಿ । ಕೆಡೆದವಿಭಕುಲ ಕೆಲವು ಸೀನಿಲಿ
ಸಿಡಿದ ಸಿಂಬುಳಿನೊಳಗೆ ಸಿಕ್ಕಿದ ದಂತಿ ಶ್ಲೇಷ್ಮಗಳ
ಅಡಿಯಲಡಗಿದ ನೊಣಗಳವೊಲದಿ । ಮಿಡುಕದಿರ್ದುವು ಕೆಲವಸತ್ಯದ
ನುಡಿಯಿದೆನ್ನದಿರೆಲೆ ಕಕುತ್ಸ್ಥಜಸೂನು ಕೇಳೆಂದ ೩೬

ಬೆಟ್ಟಿದರು ಸಬಳಗಳ ಕಿವಿಗಳ । ಲಿಟ್ಟಣಿಸಿ ಹದ್ದುಗಳ ಗಱಿಗಳ
ಕಟ್ಟಿ ಸೆಳೆಗಡ್ಡಿಯಲಿ ಕಿವಿಗಳ ಕೊಗ್ಗಿ ದೆಗೆದಂತೆ
ನೆಟ್ಟನಾಯ್ತಸುರಂಗೆ ಸುಖ ಹೆ । ಬ್ಬೆಟ್ಟುಗಳಲಿಡೆ ಖಳನ ಮೈ ಕರ
ಘಟ್ಟಣೆಯ ಮರ್ದನದವೊಲು ಸುಖಿಸಿದನು ನಿದ್ರೆಯಲಿ ೩೭

ಹೊಗಿಸಿದರು ಕಾಡೆಮ್ಮೆ ಕಾಡ್ಕೋ । ಣಗಳ ಹುಲಿ ಕರಡಿಗಳನಮ್ಮಾ
ವುಗಳ ತೋಳನ ಹಿಂಡುಗಳ ಹೆಮ್ಮರೆಯ ದೊದ್ದೆಗಳ
ವಿಗಡ ರಕ್ಕಸಭಟನ ಮೂಗಿನ । ಹುಗಿಲಿನಲಿ ಹೊಱವಂಟುದಿಲ್ಲವು
ಬಗೆಯದೆಂತುಟೊ ಖಳನ ನಿದ್ರೆಯ ಸುಖದ ಸಂಭ್ರಮವು ೩೮

ಭರದ ನಿದ್ರೆಯಲಾಗುಳಿಸಿ ಮುಯರ್ । ಮುರಿದು ಕೈಕಾಲುಗಳ ನಿಗುರಿಸೆ
ಹರಣಗಳು ಹಾಱಿದವು ಬಾಯ್ದೆಱೆದಸುರ ಘಾಳಿಯಲಿ
ನರಕಕುಂಡದೊಳಿಳಿವ ಪಾಪಾ । ತ್ಮರವೊಲಿಳಿದುದು ಕೂಡೆ ರಕ್ಕಸ
ನೆರವಿ ಸತ್ತುದು ನಿದ್ರೆಗಲಹದೊಳಾ ನಿಶಾಚರನ ೩೯

ಕಾಡಾನೆಗಳು ದಾರಿತಪ್ಪುವಂತೆ ಮುಂದಿನ ಹಾದಿ ಕಾಣದೆ ದಾರಿತಪ್ಪಿದವು. ೩೬. ಕುಂಭಕರ್ಣನ ಕೂದಲುಗಳ ಕುಳಿಯಲ್ಲಿ ಎಡವಿಬಿದ್ದವು ಕೆಲವಾನೆಗಳು. ಸೀನಿನಿಂದ ಹಾರಿದ ಸಿಂಬಳದಲ್ಲಿ ಸಿಕ್ಕಿಕೊಂಡ ಕೆಲವು ಆನೆಗಳು ಲೋಳೆಯಲ್ಲಿ ಸಿಕ್ಕಿಹಾಕಿಕೊಂಡ ನೊಣಗಳಂತೆ ಕಾಲುಸಿಕ್ಕಿಕೊಂಡು ಹೆಜ್ಜೆಗಳನ್ನು ಅಲ್ಲಾಡಿಸಲಾರದೆ ನಿಂತುಬಿಟ್ಟುವು. ಕಕುತ್ಸ್ಥವಂಶದ ರಾಮನ ಸುತನೇ ಕೇಳು, ಇದನ್ನು ಸುಳ್ಳುಮಾತೆನ್ನಬೇಡ ಎಂದು ವಾಲ್ಮೀಕಿಮಹರ್ಷಿಗಳು ನುಡಿದರು. ೩೭. ಕುಂಭಕರ್ಣನ ಕಿವಿಗಳಲ್ಲಿ ಈಟಿಗಳನ್ನು ಗಟ್ಟಿಯಾಗಿ ಚುಚ್ಚಿದರು. ಹದ್ದಿನ ಗರಿಗಳನ್ನು ಕಟ್ಟಿದ ಸೆಳೆಗಡ್ಡಿಯಿಂದ ಕಿವಿಗಳ ಗುಗ್ಗೆ ತೆಗೆದ ಹಾಗೆ ಕುಂಭಕರ್ಣನಿಗೆ ಸುಖವಾಯಿತು. ದೊಡ್ಡ ಬಂಡೆಗಳಿಂದ ಹೊಡೆಯಲು ಮೈಯನ್ನು ಕೈಯಿಂದ ಗುದ್ದಿ ನೀವಿದ ಹಾಗಾಗಿ ಕುಂಭಕರ್ಣನು ನಿದ್ದೆಯಲ್ಲೇ ಸುಖವನ್ನನುಭವಿಸಿದನು. ೩೮. ಕಾಡೆಮ್ಮೆ, ಕಾಡುಕೋಣ, ಹುಲಿ, ಕರಡಿ, ಕಾಡುಹಸು, ತೋಳನಹಿಂಡು ಮತ್ತು ದೊಡ್ಡಜಿಂಕೆಯ ಗುಂಪುಗಳನ್ನು ಪ್ರಚಂಡ ರಾಕ್ಷಸನ ಮೂಗಿನ ಹೊಳ್ಳೆಯೊಳಕ್ಕೆ ತಳ್ಳಿದರು ; ಅವು ಹೊರಕ್ಕೆ ಬರಲಿಲ್ಲ. ರಾಕ್ಷಸನ ನಿದ್ದೆಯ ಸುಖದ ರೀತಿ ಎಂಥದೋ ! ೩೯. ಗಾಢನಿದ್ದೆಯಲ್ಲಿ ಕುಂಭಕರ್ಣನು ಆಕಳಿಸಿ ಮೈಮುರಿದು ಕೈಕಾಲುಗಳನ್ನು ನೀಡಿದಾಗ ಅನೇಕ ರಾಕ್ಷಸರ ಜೀವಗಳು ಹಾರಿಹೋದವು. ನರಕಕುಂಡದಲ್ಲಿ ಬೀಳುವ ಪಾಪಿಗಳಂತೆ ಕುಂಭಕರ್ಣನ ತೆರೆದ ಬಾಯಿಯ ಗಾಳಿಗೆ ಸಿಕ್ಕಿ ರಾಕ್ಷಸರು ಸತ್ತರು. ಕುಂಭ

ಕಡೆಯಲೊಂದೇ ಲಗ್ಗೆಯಲಿ ಹಜೆ । ಹೊಡೆದವಗಣಿತ ಬೊಬ್ಬೆಯಬ್ಬರ
ಜಡಿಯಲುಕ್ಕಿನ ದೋಣಿದಡಿ ಕೊಡತಿಗಳ ಹೊಯ್ಲುಗಳ
ನಿಡುರಭಸ ನೀರಧಿಯ ಪನ್ನಗ । ನೊಡಲ ನಿದ್ರೆಯ ಹರಿಯನೆಬ್ಬಿಸಿ
ತಡಿಸಿತಗ್ಗದ ಬೆದಚು ಬರ್ಹಿರ್ಮುಖಪುರಂಗಳಿಗೆ ೪೦

ಏಳದವ ನಿದ್ರಾಂಗನೆಯ ಸ । ಮ್ಮೇಳನದ ಸುಖಸುರತದಿಂದಿರ
ಲೂಳಿಗದ ಮಂತ್ರಿಗಳು ಬಂದರು ಬಳಿಗೆ ದಶಮುಖನ
ಕೇಳು ಜೀಯ ತವಾನುಜನ ನಿ । ದ್ರಾಲತಾಂಗಿಯ ಕದನದಲಿ ಕ
ಟ್ಟಾಳು ಮಡಿದುದು ಮರಳಿ ಮಾತಿಲ್ಲೆಂದರಸುರಂಗೆ ೪೧

ಕರೆಯಿರೋ ಬೊಮ್ಮನನು ತಮ್ಮಗೆ । ವರವ ಕೊಟ್ಟವ ತಾನು ತಾನೇ
ಪರಿಹರಿಸಲನುಜಾತಜಾಡ್ಯ ಸಮಗ್ರ ಸುಪ್ತಿಕವ
ಕರೆಯ ಬೇಗೆನೆ ಹರಿದು ರಾಕ್ಷಸ । ಚರರು ಚತುರ ಚತುರ್ಮುಖನ ತಂ
ದರಿಭಯಂಕರ ಬಾಹುಬಲನಿದಿರಿನಲಿ ನಿಲಿಸಿದರು ೪೨

ಗದಗದನೆ ನಡುಗುತ ಯುಗದ್ವಯ । ವದನ ಕೈಮುಗಿದೆನ್ನ ಬರಿಸಿದ
ಹದನದೇನೆನೆ ಹರವಸವೆ ನೀ ನಮ್ಮ ಬೆಸಗೊಂಬ
ಹದನು ಬೇಜೀನೆಬ್ಬಿಸನುಜನ । ತುದಿಯ ಮಾತಿದು ಹೋಗು ಬೇಗೆನ
ಲೆದೆಯ ಕೈಯಲಿ ನೇವರಿಸುತ್ತೈತಂದನವನೆಡೆಗೆ ೪೩

ಕರ್ಣನ ನಿದ್ದೆಗಾಳಗದಲ್ಲಿ ರಾಕ್ಷಸರ ಸಮೂಹವೇ ಮರಣಹೊಂದಿತು. ೪೦. ಕೊನೆಯಲ್ಲಿ ಉಕ್ಕಿನ ದೊಡ್ಡ ದೊಣ್ಣೆ ಮತ್ತು ಕೊಡತಿಗಳಿಂದ ಭಾರಿ ಬೊಬ್ಬೆಯೊಡನೆ ಎಲ್ಲ ತಮಟೆಗಳನ್ನೂ ಒಟ್ಟಿಗೇ ಹೊಡೆಯಲು ಅವುಗಳ ಭೋರ್ಗರೆತವು ಕ್ಷೀರಸಾಗರದಲ್ಲಿ ಆದಿಶೇಷನ ಮೇಲೆ ಮಲಗಿ ನಿದ್ರಿಸುತ್ತಿದ್ದ ವಿಷ್ಣುವನ್ನು ಎಬ್ಬಿಸಿತು, ದೇವತೆಗಳ ನಗರಗಳಲ್ಲಿ ಗಾಬರಿ ಹುಟ್ಟಿಸಿತು. ೪೧. ಕುಂಭಕರ್ಣನು ಏಳದೆ ನಿದ್ರಾಂಗನೆಯೊಡನೆ ಸುಖಕಾಮಕ್ರೀಡೆಯಲ್ಲಿದ್ದನು. ಆಗ ರಾವಣನ ಸೇವೆಯ ಮಂತ್ರಿಗಳು ಅವನ ಬಳಿಗೆ ಬಂದು, "ಸ್ವಾಮಿ ಆಲಿಸಿ, ನಿಮ್ಮ ತಮ್ಮನ ನಿದ್ರಾಕಾಳಗದಲ್ಲಿ ಅನೇಕ ವೀರರು ಸತ್ತರು. ಆದರೂ ಅವನಿಂದ ಉತ್ತರವಿಲ್ಲ" ಎಂದರು. ೪೨. "ಬ್ರಹ್ಮನನ್ನು ಕರೆಯಿರೋ. ತಮ್ಮನಿಗೆ ವರವನ್ನು ಕೊಟ್ಟ ಅವನೇ ತಮ್ಮನ ಪೂರ್ಣ ನಿದ್ರೆಯ ಜಾಡ್ಯವನ್ನು ಹೋಗಲಾಡಿಸಲಿ, ಬೇಗನೆ ಕರೆಯಿರಿ" ಎಂದು ರಾವಣನು ಅಪ್ಪಣೆ ಮಾಡಲು ರಾಕ್ಷಸದೂತರು ಓಡಿಹೋಗಿ ಜಾಣ ಬ್ರಹ್ಮನನ್ನು ಕರೆತಂದು ಶತ್ರುಭಯಂಕರನಾದ ಬಲಶಾಲಿ ದಶಕಂಠನ ಎದುರಿನಲ್ಲಿ ನಿಲ್ಲಿಸಿದರು. ೪೩. ಚತುರ್ಮುಖ ಬ್ರಹ್ಮನು ಗದಗದನೆ ನಡುಗುತ್ತ ಕೈಮುಗಿದು ನಿಂತು, "ನನ್ನನ್ನು ಕರೆಸಿದ ಉದ್ದೇಶವೇನು ?" ಎಂದು ಕೇಳಿದನು. ಆದಕ್ಕೆ ರಾವಣನು "ನೀನು ನಮ್ಮನ್ನು ಏನು ಎಂದು ಕೇಳುವಷ್ಟು ಎಚ್ಚರತಪ್ಪಿದ್ದೀಯೇನು ? ಬೇರೇನು, ತಮ್ಮನನ್ನು ಎಬ್ಬಿಸು, ಬೇರೆ ಮಾತಿಲ್ಲ, ಹೋಗು ಬೇಗ" ಎನ್ನಲು ಬ್ರಹ್ಮನು ಎದೆಯನ್ನು ಕೈಯಿಂದ ನೀವಿಕೊಳ್ಳುತ್ತ

ಬಿಸಜಭವನಾ ಕುಂಭಕರ್ಣನ । ಮುಸುಡ ಮುಂದಕೆ ಸುಳಿಯಲಮ್ಮದೆ
ಕುಸಿದ ಮೌಳಿಯು ಭಯದ ಭಾರಿಯಲಪರಭಾಗದಲಿ
ನಸುನಗೆಯಲೈತಂದು ಸುರವಿ । ದ್ವಿಷನ ಶಬ್ದಗ್ರಹಣದಲಿ ಮಂ
ತ್ರಿಸಿದ ವಾರಿಯನೆರೆಸಿದನನುಪಮ ಕರಕಮಂಡಲದ ೪೪

ಒದಱುತೆದ್ದನಿದಾರು ನಿದ್ರೆಯ । ನೊದೆದ ಪಾಪಿಗಳೆನುತ ಪುರಜನ
ಕಿದಱಿ ಹಾಯ್ದುದು ಕಂಡ ಕಡೆಯಲಿ ಕೋಟಿಸಂಖ್ಯೆಯಲಿ
ಆದುರಿ ಖಳ ಕಣ್ದೆಱೆಯೆ ಕಂಗಳ । ಲುದುರಿದವು ಕಿಡಿ ಕೂಡೆ ಲಯಕಾ
ಲದ ಮಹಾಭೈರವನವೊಲು ಮುಳಿದೆದ್ದು ನಿಂದಿರ್ದ ೪೫

ಏಳಲೊಲೆದುದು ಕಂಠ ಸಾಸಿರ । ಮೌಳಿಗಳ ವಾಸುಗಿಯ ಕರಿಗಳ
ಕಾಲು ಕುಪ್ಪಳಿಸಿದವು ಕಕುಭಾವಳಿಯ ಕೂರುಮನ
ಆಲಿ ತಳಮಗುಚಿದವು ಬಲುಕುಲ । ಶೈಲವವನಿನ್ನಾರು ಬಲ್ಲರು
ಹೇಳದಿರು ಹದಿನಾಲ್ಕು ಲೋಕದ ಭಯವನದನೆಂದ ೪೬

ತಿಂಬೆನೋ ಬ್ರಹ್ಮಾಂಡವನು ಸ । ಪ್ತಾಂಬುಧಿಯನೀಂಟುವೆನೊ ತಾನೀ
ಗೆಂಬ ಹಸಿವಿಗೆ ತೃಷೆಗೆ ಕಡೆಗಟ್ಟಿರ್ದವಿದಿರಿನಲಿ
ಅಂಬರವನಳ್ಳಿಱಿವ ಮಾಂಸಕ । ದಂಬದರುಣಜಲೋದನಗಳ ಬ
ಣಂಬೆ ಬೆಟ್ಟಗಳಿರ್ದವಿಟ್ಟೆಡೆಯಾಗಿ ಭಕ್ಷ್ಯಗಳ ೪೭

ಕುಂಭಕರ್ಣನ ಬಳಿಗೆ ಬಂದನು. ೪೪. ಬ್ರಹ್ಮನು ಕುಂಭಕರ್ಣನ ಮುಖದ ಎದುರಿಗೆ ಬರುವ ಧೈರ್ಯವಿಲ್ಲದೆ ಭಾರಿಭಯದಿಂದ ತಲೆತಗ್ಗಿಸಿಕೊಂಡು ನಸುನಗುತ್ತ ಹಿಂದುಗಡೆಗೆ ಬಂದು ನಿಂತು ರಾಕ್ಷಸನ ಶಬ್ದವನ್ನು ಸೆಳೆಯುವಂತೆ ತನ್ನ ಕೈಯಲ್ಲಿದ್ದ ಕಮಂಡಲುವಿನ ನೀರನ್ನು ಮಂತ್ರಿಸಿ ಚಿಮುಕಿಸಿದನು. ೪೫. "ನಿದ್ದೆಯನ್ನು ಕೆಡಿಸಿದ ಪಾಪಿಗಳಾರು!" ಎಂದು ಕೂಗುತ್ತ ಕುಂಭಕರ್ಣನು ಎದ್ದನು. ಲಂಕಾಪುರದ ಜನಗಳು ಕೋಟಿಸಂಖ್ಯೆಯಲ್ಲಿ ಚದುರಿ ಕಂಡಕಂಡ ಕಡೆಗೆ ಓಡಿದರು. ಕುಂಭಕರ್ಣನು ಅಲ್ಲಾಡಿ ಕಣ್ಣುಗಳನ್ನು ಬಿಡಲು ಕಣ್ಣುಗಳಿಂದ ಕಿಡಿಗಳು ಹಾರಿದವು. ಪ್ರಳಯದ ಮಹಾಭೈರವನಂತೆ ಕೆರಳಿ ಎದ್ದುನಿಂತನು. ೪೬. ಕುಂಭಕರ್ಣನು ಎದ್ದು ನಿಲ್ಲಲು ಸಾವಿರ ಹೆಡೆಗಳ ಆದಿಶೇಷನ ಮತ್ತು ದಿಗ್ಗಜಗಳ ಕಾಲುಗಳು ಕುಸಿದವು ; ದಿಕ್ಕುಗಳನ್ನು ಹೊತ್ತು ನಿಂತ ಕೂರ್ಮನ ಕಣ್ಣುಗುಡ್ಡೆಗಳು ಹಾರಿದವು. ಭಾರಿ ಕುಲಪರ್ವತಗಳು ಅಡಿಮೇಲಾದವು. ಹದಿನಾಲ್ಕು ಲೋಕಗಳಿಗಾದ ಭಯವನ್ನು ಇನ್ನಾರು ಬಲ್ಲರು! ೪೭. 'ಬ್ರಹ್ಮಾಂಡವನ್ನು ತಿಂದು ಬಿಡಲೋ, ಸಪ್ತಸಾಗರವನ್ನು ಕುಡಿಯಲೋ ಈಗ!' ಎಂಬ ಕುಂಭಕರ್ಣನ ಹಸಿವು ಬಾಯಾರಿಕೆಗಳಿಗಾಗಿ ಎದುರುಗಡೆಯಲ್ಲಿ ಆಕಾಶವನ್ನು ಮುಟ್ಟುವಷ್ಟು ಎತ್ತರದ ಮಾಂಸಗಳೂ ಮತ್ತು ರಕ್ತದ ಅನ್ನಗಳೂ, ವಿವಿಧ ಭಕ್ಷ್ಯಗಳ ರಾಶಿ ರಾಶಿ ಗುಡ್ಡೆಗಳೂ

ತುಱುಗಿದದ್ರಿಗಳಿರ್ದವಿದಿರಲಿ । ತಱಿದ ಕುಱಿಕೋಣಗಳ ಗಿರಿಗಳು
ಹಱಿದ ಹಕ್ಕಿಯ ರಾಶಿಯಿದ್ದವು ಕೋಟಿಸಂಖ್ಯೆಯಲಿ
ಇಱಿದ ಕರುಳುಬ್ಬುಗಳ ಮರೆ ಮೈ । ಮಱಿದ ಜೀವದ ಮೃಗಕದಂಬದ
ತುಱುಗಳಿರ್ದವು ತಿನಿಸಿಗಿದಿರಿನಲಾ ನಿಶಾಚರನ ೪೮

ತಱಿದ ಮೀನಿನ ತಾಳಿಸಿದ ವ । ಗ್ಗರಣೆಗಳ ಪಡಿ ಎಡಬಲದ ಹೆ
ಗ್ಗಿರಿಗಳಿರ್ದವು ಸಾಸುವೆಯ ಶಿಖರಣೆಯ ಷಡುರಸದ
ಪರಿಪರಿಯ ಪರಿಮಳದ ಸಣ್ಣೆಳೆ । ಗರುಳ ಹರವಿಗಳಿರ್ದವಗಣಿತ
ಸರಸಿಗಳ ಸಾಲಿರ್ದವಾಜ್ಯಕ್ಷೀರಮಧುದಧಿಯ ೪೯

ತಾಳ ತೆಂಗೀಚಲು ಸುಧಾನ್ಯರ । ಸಾಳ ಗುಡ ಶರ್ಕರೆ ಸಮೇತ ಪ
ಲಾಲ ರಸಸಂಮಿಶ್ರದರುಣ ಸುರಾಭಿರಂಜಕದ
ಸಾಲ ಸರಸಿಗಳಿರ್ದವಖಿಳ ಫ । ಲಾಳಿಗಳ ಹೇರಾಶಿ ಕುದಿಸಿದ
ಕೂಳುಗಳ ಗುಗ್ಗರಿಯ ಹೆಗ್ಗಿರಿ ಮೆಱೆದವಿದಿರಿನಲಿ ೫೦

ವಚಿಸಲಚ್ಚರಿಯಮಮ ಲೋಕ । ಪ್ರಚುರನಲ್ಲಾ ಸಿರಿಯೊಳಜಭವ
ಶಚಿಯರಸ ಮುಖ್ಯರುಗಳೇ ಬೆಸಕೈವ ಸೇವಕರು
ಅಚಲಸಂಪದಗಱಿದ ನೆಱಿದುದು । ವಚನಮಾತ್ರಕೆ ಬಹುಪದಾರ್ಥದ
ರುಚಿಕರದ್ರವ್ಯಂಗಳಾರೋಗಣೆಗೆ ರಕ್ಕಸನ ೫೧

ಒತ್ತಾಗಿದ್ದವು. ೪೮. ಕುಂಭಕರ್ಣನ ಆಹಾರಕ್ಕಾಗಿ ಎದುರುಗಡೆಯಲ್ಲಿ ಕತ್ತರಿಸಿದ ಕುರಿ ಕೋಣಗಳ ಬೆಟ್ಟಗಳು ರಾಶಿಬಿದ್ದಿದ್ದವು ; ತುಂಡರಿಸಿದ ಕೋಟಿಸಂಖ್ಯೆಯ ಹಕ್ಕಿಗಳ ರಾಶಿಗಳಿದ್ದವು ; ಇರಿದು, ಕರುಳು ಹೊರಟುಕೊಂಡ ಜಿಂಕೆಗಳು, ಜ್ಞಾನತಪ್ಪಿಸಿದ ಸಜೀವ ಮೃಗಗಳೂ ದನಗಳೂ ಇದ್ದುವು. ೪೯. ಕತ್ತರಿಸಿ ಹುರಿದು ವಗ್ಗರಣೆಹಾಕಿದ ಮೀನಿನ ರಾಶಿಗಳು ಎಡಬಲದಲ್ಲಿ ಸಾಲಾಗಿದ್ದವು ಸಾಸುವೆಯ ಸೀಕರಣೆಯ, ಷಡ್ರಸದ ನಾನಾ ವಿಧದ ಪರಿಮಳದ ಸಣ್ಣ ಎಳೆ ಕರುಳುಗಳ ಹರವಿಗಳಿದ್ದವು. ತುಪ್ಪ, ಹಾಲು, ಮೊಸರು. ಜೇನುತುಪ್ಪಗಳ ಅಸಂಖ್ಯಾತ ಕಡಾಯಿಗಳನ್ನು ಸಾಲಾಗಿಡಲಾಗಿತ್ತು. ೫೦. ತಾಳೆ. ತೆಂಗು, ಈಚಲು. ಒಳ್ಳೆಯ ಧಾನ್ಯಗಳು, ರಸದಾಳಿಕಬ್ಬು, ಬೆಲ್ಲ, ಸಕ್ಕರೆ, ಗರಿಕೆ ಮೊದಲಾದವುಗಳ ರಸಗಳನ್ನು ಸೇರಿಸಿದ ಕೆಂಪು ಮದ್ಯದ ಕೊಳಗಳು ಸಾಲಾಗಿದ್ದವು. ಸಮಸ್ತ ಹಣ್ಣುಗಳ ದೊಡ್ಡ ರಾಶಿ, ಕುದಿಸಿದ ಅನ್ನಗಳ ಮತ್ತು ಉಸಲಿಗಳ ದೊಡ್ಡ ಬೆಟ್ಟಗಳು ಎದುರುಗಡೆಯಲ್ಲಿ ಶೋಭಿಸಿದವು. ೫೧. ವರ್ಣಿಸಲು ಆಶ್ಚರ್ಯ, ಅಬ್ಬಬ್ಬ ! ರಾವಣನ ಸಂಪತ್ತು ಲೋಕಪ್ರಸಿದ್ಧ. ಬ್ರಹ್ಮ ಶಿವ ದೇವೇಂದ್ರರೇ ಮೊದಲಾದ ಮುಖ್ಯ ದೇವರುಗಳು ರಾವಣನ ಸೇವೆಮಾಡುವ ಕಿಂಕರರು. ಅತುಳ ಸಂಪತ್ತನ್ನು ಹೊಂದಿದ ವನಿಗೆ ಏನಸಾಧ್ಯ, ಬಾಯಿಬಿಟ್ಟ ಮಾತ್ರಕ್ಕೆ ಅನೇಕ ಪದಾರ್ಥಗಳ ರುಚಿಕರವಾದ ಅಡಿಗೆ

ನೋಡಿದನು ಮನದಣಿಯೆ ಕಡುಬಿಱ । ತೋಡಿಬಱಿವಕ್ಷಿಗಳ ಮಿಗೆ ಕೊಂ
ಡಾಡುತಣ್ಣನನಂಗವಿಸಿದನು ತಿನಿಸಿಗಸುರೇಂದ್ರ
ಜೋಡಿಸಿದ ರುಧಿರೋದನದ ಗಿರಿ । ಕೂಡೆ ಪಂಚಪ್ರಾಣವಾಯುಗ
ಳೂಡಿಕೆಯಲೇ ಸವೆದವಿನ್ನುಣಸೆಂತೊ ರಕ್ಕಸನ ೫೨

ಕಾಣೆನಾ ಮಾಂಸದ ಮಹೇಂದ್ರ । ಶ್ರೇಣಿಗಳ ರುಧಿರದ ರಸಾಳ
ದ್ರೋಣಿಗಳನಾ ಭಕ್ಷಗಳ ಪಕ್ಷಿಗಳ ಮೃಗಗಣವ
ಪ್ರಾಣಹಿಂಸೆಯು ಕೋಳಿ ಕುಱಿಗಳ । ಕೋಣಗಳ ಕುದಿಗರುಳುಗಳ ತೆಗೆ
ದಾಣಗಳ ಮಧುರಾಮ್ರಫಲ ಭೋಜ್ಯಾದಿ ವಸ್ತುಗಳ ೫೩

ಆದುದರ್ಧಗ್ರಾಸ ಖಳ ಸಂ । ಪಾದಿಸಿದ ಪರಿಕರದಲೆದ್ದುದು
ಬೀದಿಗಿಚ್ಚುದರದಲಿ ಬಳಿಕಱಿಯಟ್ಟ ರಕ್ಕಸರ
ಹಾದಿಗರಿಗಂಗವಿಸೆ ರಣದಲಿ । ತೀದ ಜೀವದ ತರುಚರರರ ಕ್ರ
ವ್ಯಾದ ಸುಭಟರ ಹೆಣನ ಬಣಬೆಯನೊಟ್ಟಿದರು ಮುಂದೆ ೫೪

ತಿಂದನವನೆಲ್ಲವನು ಕಿಚ್ಚುಱಿ । ನಂದದಿರೆ ಬಳಿಕಣುಗ ಕೇಳ್ ಹಿಡಿ
ಹಂದಿಗಳನೂರೊಳಗಣಗಲದ ಹರದ ಹಾರುವರ
ಮಂದಿರದಲುಳ್ಳೆತ್ತು ಕತ್ತೆಯು । ಸಂದಣಿಯ ನೂಕಿದರು ನಾಯಿಗ
ಳೊಂದನುಳುಹದೆ ತಿಂದನವ ಲಯಮೃತ್ಯುರೂಪದಲಿ ೫೫

ಕುಂಭಕರ್ಣನ ಭೋಜನಕ್ಕೆ ಸಿದ್ಧವಾಯಿತು. ೫೨. ಮನಸ್ಸು ತೃಪ್ತಿಯಾಗುವಂತೆ ಕಣ್ಣುಗಳ ಬರ ಹಿಂಗುವಂತೆ ಕುಂಭಕರ್ಣನು ಓಡಿಹೋಗಿ ಭೋಜನಪದಾರ್ಥಗಳನ್ನು ನೋಡಿದನು ; ಅಣ್ಣನನ್ನು ಹೊಗಳುತ್ತ ಭಕ್ಷ್ಯಭೋಜ್ಯಗಳನ್ನು ತಿನ್ನಲು ಬಯಸಿದನು. ರಾಶಿ ಹಾಕಿದ ರಕ್ತದ ಅನ್ನದ ಬೆಟ್ಟಗಳನ್ನು ತಿನ್ನಿಸುವಲ್ಲಿಯೇ ರಾಕ್ಷಸರ ಪಂಚಪ್ರಾಣಗಳು ನಶಿಸಿದವು. ಇನ್ನು ಕುಂಭಕರ್ಣನ ಊಟ ಹೇಗೋ ! ೫೩. ಮಾಂಸದ ಬೆಟ್ಟದ ಸಾಲುಗಳು, ರಕ್ತದ ಕಬ್ಬಿನ ರಸದ ಬಾನಿಗಳು, ಕರಿದ ತಿಂಡಿಗಳು, ಪಕ್ಷಿಗಳು, ಮೃಗಗಳು ಏನಾದುವೋ ಕಾಣೆ. ಪ್ರಾಣಹಿಂಸೆ ಮಾಡಿದ ಕೋಳಿ ಕುರಿಗಳು, ಕೋಣಗಳು, ಕುಡಿಕರುಳುಗಳು ಇವುಗಳ ಬಿಂಗಡಿಸಿದ ಆಹಾರಪದಾರ್ಥಗಳು, ಸಿಹಿಮಾವಿನಹಣ್ಣುಗಳು, ತಿನಿಸುಗಳು ಏನಾದುವೋ ಕಾಣೆ. ೫೪. ರಾವಣನು ಶೇಖರಿಸಿದ ಊಟದ ಸಾಮಗ್ರಿಗಳಿಂದ ಕುಂಭಕರ್ಣನಿಗೆ ಅರೆಹೊಟ್ಟೆ ತುಂಬಿತು ; ಹೊಟ್ಟೆಯಲ್ಲಿ ಕೊಳ್ಳಿಯಿಟ್ಟ ಹಾಗಾಯಿತು. ರಾಕ್ಷಸಯೋಧರನ್ನು ಹೊಡೆದೋಡಿಸಿ ದಾರಿಯಲ್ಲಿ ಹೋಗುವವರನ್ನು ತಿನ್ನಲು ಬಯಸಿದನು. ಆಗ ಯುದ್ಧದಲ್ಲಿ ಸತ್ತ ವಾನರರ ಮತ್ತು ರಾಕ್ಷಸವೀರರ ಹೆಣಗಳನ್ನು ತಂದು ಕುಂಭಕರ್ಣನೆದುರಿಗೆ ಮೆದೆಯೊಟ್ಟಿದರು. ೫೫. ಕುಂಭಕರ್ಣನು ಅವುಗಳನ್ನೆಲ್ಲ ತಿಂದರೂ ಹೊಟ್ಟೆ ಹಸಿವಿನ ಬೆಂಕಿ ಆರಲಿಲ್ಲ. ಮಗು ಕುಶ ಕೇಳು, ಆಗ ಊರಿನ ಹಂದಿಗಳನ್ನೂ, ವರ್ತಕರ ಮತ್ತು ಬ್ರಾಹ್ಮಣರ ಮನೆಗಳಲ್ಲಿದ್ದ ಎತ್ತು ಕತ್ತೆಗಳ ಮಂದೆಯನ್ನೂ ತಂದು ಕುಂಭಕರ್ಣನ ಮುಂದೆ ಚಾಚಿದರು. ನಾಯಿಗಳನ್ನು ಕೂಡ ಬಿಡದೆ ಪ್ರಳಯದ

ಸೆಱೆವನೆಯ ಸಿಕ್ಕಿರ್ದ ಕಳ್ಳರ । ನಿಱಿದಿಱಿದು ನೂಕಿದರು ಲಾಯದ
ಲಱಸಿ ವೃದ್ಧಮದೇಭ ಹಯ ರುಜೆಯುಳ್ಳ ಗಜಘಟೆಯ
ಅಱಸಿ ಪುರದಲಿ ಸತ್ತ ಹೆಣಗಳ । ತುಱುಗಿದರು ತಿನಿಸಿಂಗೆ ಹಸಿವಿಗೆ
ನೆಱೆಯದಾದುದು ನೆನೆದನವ ಪುರಜನದ ಭಕ್ಷಣವ ೫೬

ಜಗದೊಳಾಹಾರದಲಿ ವಡಬನು । ಮಿಗಿಲು ಮಿಗಿಲಾ ವಡಬನಿಂದಲಿ
ಮಗನು ಕೊಡನಾತಂಗೆ ಮಿಗಿಲೀ ಕುಂಭಕರ್ಣಖಳ
ಮಗನೆ ಕೇಳನಿತಱಲಿ ಗೂಳಯ । ದೆಗೆದುದಾ ಪಟ್ಟಣದ ಜನವೋ
ಲಗದೊಳಗೆ ದೂಱಾಯ್ತು ರಾಕ್ಷಸಸಾರ್ವಭೌಮಂಗೆ ೫೭

ಕರೆಸಿದನು ಬಳಿಕಸುರ ದೈತ್ಯರ । ಗುರುವ ಬಂದನು ಬೆಸನದೇನೆನೆ
ಪರಿಹರಿಸು ಪವನಪ್ರಿಯನ ಪಟುತನವ ಸಹಭವನ
ಉರುತಂದ ಜಠರಾಂತರವ ಹೋ । ಗಿರದೆ ಬೇಗೆನೆ ಬಂದು ತೃಪ್ತಿಯ
ಭರಿತ ಮಂತ್ರದ ಸಿದ್ಧಗುಳಿಗೆಯನಿತ್ತನಸುರಂಗೆ ೫೮

ತೇಗಿದನು ದಟ್ರನೆ ಧರಾತಳ । ಕೂಗಿದಲು ಘುಮ್ಮೆಂದು ಬೊಮ್ಮನ
ಮೇಗಣಂಬರ ದನಿಗೊಡಲು ಖಳನಧಿಕ ತೃಪ್ತಿಯಲಿ
ಕೈಗಳನು ತೊಳೆದಮರನದಿಯಲಿ । ತೂಗಿದನು ಮಸ್ತಕವ ಗುರು ನಮ
ಗೀಗ ನೀನೇ ತಪ್ಪದೆಂದುಱೆ ಹೊಗಳಿ ಭಾರ್ಗವನ ೫೯

ಮೃತ್ಯುವಿನಂತೆ ಕುಂಭಕರ್ಣನು ಎಲ್ಲವನ್ನೂ ತಿಂದುಹಾಕಿದನು. ೫೬. ಸೆರೆಮನೆಯಲ್ಲಿ ಬಂಧಿಸಿದ್ದ ಕಳ್ಳರನ್ನು ಇರಿದು ಇರಿದು ಕುಂಭಕರ್ಣನ ಎದುರಿಗೆ ಎಸೆದರು, ಮುದಿ ಆನೆ ಕುದುರೆ ಮತ್ತು ರೋಗಿಷ್ಠ ಆನೆ ಕುದುರೆಗಳನ್ನು ಲಾಯದಲ್ಲಿ ಹುಡುಕಿ ತಂದುಹಾಕಿದರು. ನಗರದಲ್ಲಿ ಸತ್ತ ಹೆಣಗಳನ್ನು ಹುಡುಕಿ ತಂದು ಕುಂಭಕರ್ಣನು ತಿನಲೆಂದು ಅವನ ಮುಂದೆ ಗುಡ್ಡೆಹಾಕಿದರು. ಇಷ್ಟಾದರೂ ಅವನ ಹಸಿವಿಗೆ ಸಾಕಾಗಲಿಲ್ಲ. ಆಗ ಅವನು ಪುರಜನರನ್ನು ತಿನ್ನಲು ಯೋಚಿಸಿದನು. ೫೭. ಆಹಾರ ಭಕ್ಷಿಸುವುದರಲ್ಲಿ ಜಗತ್ತಿನೊಳಗೆ ಬಾಡಬಾಗ್ನಿ ಎಲ್ಲರನ್ನೂ ಮೀರಿಸಿದವನು ; ಬಾಡಬಾಗ್ನಿಗಿಂತ ಹೆಚ್ಚು ಅಗಸ್ತ್ಯ ; ಅಗಸ್ತ್ಯನಿಗಿಂತ ಮಿಗಿಲು ಕುಂಭಕರ್ಣಾಸುರ. ಮಗನೇ ಕೇಳು, ಅಷ್ಟರಲ್ಲಿ ಹೆದರಿ ಲಂಕಾಪಟ್ಟಣದ ಜನರು ನಗರದಿಂದ ವಲಸೆಹೊರಟರು. ಆಸ್ಥಾನದಲ್ಲಿದ್ದ ರಾವಣಚಕ್ರವರ್ತಿಗೆ ದೂರು ಹೋಯಿತು. ೫೮. ತರುವಾಯ ರಾವಣನು ಅಸುರಗುರು ಶುಕ್ರಾಚಾರ್ಯನನ್ನು ಕರೆಸಿದನು. ಶುಕ್ರಾಚಾರ್ಯನು ಏನು ಕಾರ್ಯವೆಂದು ಪ್ರಶ್ನಿಸಲು, "ತಮ್ಮನ ಉದರಾಗ್ನಿಯ ತೀವ್ರತೆಯನ್ನು ಪರಿಹರಿಸು, ಬೇಗ ಹೋಗು" ಎಂದು ಹೇಳಿದನು. ಶುಕ್ರಾಚಾರ್ಯನು ಕುಂಭಕರ್ಣನ ಬಳಿಗೆ ಬಂದು ಅವನಿಗೆ ತೃಪ್ತಿಯುಂಟುಮಾಡುವ ಮಂತ್ರಹಾಕಿದ ಸಿದ್ಧಗುಳಿಗೆಯನ್ನು ಕೊಟ್ಟನು. ೫೯. ಕುಂಭಕರ್ಣನು ಪೂರ್ಣ ತೃಪ್ತಿಗೊಂಡು ಡರ್ರನೆ ತೇಗು ಬಿಡಲು ಭೂಮಂಡಲವು ಕೂಗಿಕೊಂಡಿತು, ಬ್ರಹ್ಮನ ಮೇಲಿನ ಆಕಾಶವು ಘುಮ್ಮೆಂದು ಪ್ರತಿಧ್ವನಿಸಿತು. ಅವನು ಆಕಾಶಗಂಗೆಯಲ್ಲಿ ಕೈತೊಳೆದು, 'ನಮಗೆ ಈಗ ನೀನೆ ಗುರು, ಇದು

ಪೂಸಿದರು ಸೇವಕರು ಪರಿಮಳ । ವಾಸಿಸುವ ಸಿರಿಗಂಧವನು ಮೇ
ಳೈಸಿದುತ್ತಮ ಪೂಗಳಲಿ ಪೊದಿಸಿದರು ರಕ್ಕಸನ
ವಾಸವನ ಪುರವರದ ದಿವ್ಯ ಸು । ವಾಸಗಳನುಡಲಿತ್ತರಡಕೆಯ
ರಾಶಿಗಳ ನೂಕಿದರು ಹಲವನು ಖಳನ ವದನದಲಿ ೬೦

ಬಿಳಿಯೆಲೆಯ ಹೇಱುಗಳ ಬಲುಹೊ । ತ್ತುಳವನಾ ರಜನೀಚರನ ಬಾ
ಯೊಳಗೆ ಸುರಿದರು ಲಕ್ಕಲೆಕ್ಕದಲರೆದ ಸುಣ್ಣಗಳ
ಹಲವು ಮುದ್ದೆಯ ಹಾಯ್ಕಿದರು ಪರಿ । ಮಳದ ಪಚ್ಚೆಯ ಹೇಱ ಮೂಲೆಯ
ಕಳಚಿ ಸುರಿದರು ಸುಳಿಸಿದರು ನಾರಿಯರು ಆರತಿಯ ೬೧

ಸಾರಿದರು ಮಂತ್ರಿಗಳು ಬಳಿಕರಿ । ಭೈರವನ ರಣಕೆಬ್ಬಿಸಿದ ವಿ
ಸ್ತಾರವೆಲ್ಲವನಱುಹಿದರು ಸೀತಾಮಹಾಸತಿಯ
ಚೋರತನದಲಿ ತಂದ ಲಂಕಾ । ನಾರಿಯರಸನ ರಣಪಲಾಯನ
ದಾರುಭಟೆ ಪರಿಯಂತವಾ ಕಲಿಕುಂಭಕರ್ಣಂಗೆ ೬೨

ಅಕಟ ಕೆಡಿಸಿದನನ್ಯ ವನಿತಾ । ಸಕತಿಯಲಿ ಮನವಿಕ್ಕಿ ಮಹಿಮಾ
ಪ್ರಕರಣದ ಪೌಲಸ್ತ್ಯವಂಶದ ವಿಮಲವೈಭವದ
ಮಕರಕೇತನನಸ್ತ್ರ ನಿರ್ಬಾ । ಧಕವೆಯಕಟಕಟೈಹಿಕಾಮು
ಷ್ಮಿಕಕೆ ಸಲ್ಲದ ಮತಿಯ ಮನದಲಿ ನೆನೆದನೇಯೆಂದ ೬೩

ಸತ್ಯ ಎಂದು ಶುಕ್ರಾಚಾರ್ಯನನ್ನು ಹೊಗಳಿ ತಲೆದೂಗಿದನು. ೬೦. ಸೇವಕರು ಸುವಾಸನೆಯ ಶ್ರೀಗಂಧವನ್ನು ಕುಂಭಕರ್ಣನ ಮೈಗೆ ಬಳಿದರು, ಉತ್ತಮವಾದ ಹೂಗಳ ಹಾರವನ್ನು ಹಾಕಿದರು. ದೇವೇಂದ್ರ ರಾಜಧಾನಿಯ ದಿವ್ಯವಸ್ತ್ರಗಳನ್ನು ಕುಂಭಕರ್ಣನಿಗೆ ಉಡಲು ಕೊಟ್ಟರು. ಅಡಕೆಯ ಹಲವು ರಾಶಿಗಳನ್ನು ಅವನ ಬಾಯೊಳಕ್ಕೆ ತಳ್ಳಿದರು. ೬೧. ಬಿಳಿ ವೀಳೆಯದೆಲೆಗಳ ಭಾರಿ ಪಿಂಡಿಗಳನ್ನು ಕುಂಭಕರ್ಣನ ಬಾಯೊಳಕ್ಕೆ ಸುರಿದರು ; ಅರೆದ ಸುಣ್ಣದ ಲಕ್ಷಾಂತರ ಮುದ್ದೆಗಳನ್ನು ಬಾಯಿಗೆ ಹಾಕಿದರು. ಪರಿಮಳದ ಪಚ್ಚೆಯ ಹೇರುಗಳ ಕಟ್ಟನ್ನು ಬಿಚ್ಚಿ ಸುರಿದರು. ಸ್ತ್ರೀಯರು ಆರತಿಯೆತ್ತಿದರು. ೬೨. ಅನಂತರ ಮಂತ್ರಿಗಳು ಶತ್ರುಭಯಂಕರ ಕಲಿ ಕುಂಭಕರ್ಣನ ಬಳಿಗೆ ಬಂದು ಯುದ್ಧಕ್ಕಾಗಿ ಅವನನ್ನು ಎಬ್ಬಿಸಿದ ವಿಚಾರವನ್ನು ಹೇಳಿದರು. ಕಳ್ಳತನದಿಂದ ರಾವಣನು ಸೀತಾಸತಿಯನ್ನು ಕರೆತಂದ ವಿಷಯದಿಂದ ಹಿಡಿದು ಯುದ್ಧದಲ್ಲಿ ಅವನು ಹಿಂದೆಗೆದು ಓಡಿ ಬಂದುದರವರೆಗಿನ ವಿವರವನ್ನೆಲ್ಲವನ್ನೂ ತಿಳಿಸಿದರು. ೬೩. "ಅಯ್ಯೋ ಪರಸ್ತ್ರೀ ಮೋಹದಿಂದ ರಾವಣನು ಮಹಿಮಾಯುತವಾದ ಪೌಲಸ್ತ್ಯವಂಶದ ಪರಿಶುದ್ಧ ವೈಭವವನ್ನು ಹಾಳುಮಾಡಿದನು. ಮನ್ಮಥಬಾಣವು ತೊಂದರೆಗೀಡುಮಾಡದೆ ಇರುವುದೆ ? ಅಯ್ಯೋ, ಇಹಪರಗಳಿಗೆ ಸಲ್ಲದ ಯೋಚನೆಯನ್ನು ಮಾಡಿದನಲ್ಲವೇ !" ಎಂದ

ಐಸೆ ಮತ್ತೇನೆಂದು ಗತಸಂ । ತೋಷಿತನು ನಡೆತಂದನಿನ್ನು ವಿ
ನಾಶ ತಪ್ಪದು ತನಗೆನುತ ಸಭೆಗಾ ದಶಾನನನ
ಆಸುರದ ಸಂಭ್ರಮದಲಾ ಲಿಂ । ಗೀಸನಿದಿರ್ವಂದಪ್ಪಿ ನಿಜಭ
ದ್ರಾಸನಾರ್ಧದೊಳನುಜನನು ನಿಲಿಸಿದನು ಹರುಷದಲಿ ೬೪

ಬಳಿಕ ಶೂರ್ಪನಖಾ ಸುನಾಸಾ । ದಳಿತ ಕದನಸ್ಥಳವಿಡಿದು ಮಾ
ತುಳನ ಮರಣವ ಜನಕಜಾತಾಹರಣ ವಿಸ್ತರವ
ತಿಳುಹಿ ಮೇಲೆ ಸಮುದ್ರಬಂಧನ । ದಳವನಹಿತರಲಱುಹಿ ಸಮರದ
ಲಳಿದ ಮಾನಸ್ಥಿತಿಯನುಸುರಿದನನುಜಗಸುರೇಂದ್ರ ೬೫

ಕೇಳಿದೆವು ನಾವಾಗಲೊಸಗೆಯ । ಹೇಳಲೇನದ ಸಾಕು ಕೇಳುವ
ಖೂಳತನವಿನ್ನೆಮ್ಮದೈಸಲೆ ಹೋಗಲಾ ಮಾತು
ಕೇಳಿದೈಯೆಲೆಯಣ್ಣ ಪರವೆ । ಣ್ಣಾಳಿಗದಲಿಂದ್ರಾದಿ ದೇವರು
ಕೋಳುವೋದರು ಕಾಮನಾರ್ಗತಿಹಿತವನಕಟೆಂದ ೬೬

ವೀರ ಕೇಳಾಚಾರಮುಖದಲಿ । ಸಾರಿಹುದು ಸದ್ಧರ್ಮ ಧರ್ಮವ
ಸಾರಿಹುದು ಸತ್ಕೀರ್ತಿ ಕೀರ್ತ್ಯಂಗನೆಯ ವೈವಳಿಯ
ಬೇರುವರಿದಿಹುದಧಿಕ ಸಿರಿ ಸಿಂ । ಗಾರಿಸಿಹಳಾ ಸಿರಿವಿಡಿದು ಜಯ
ನಾರಿ ನಮಗಾ ಮಾರ್ಗ ದುರ್ಘಟವಾಯ್ತಲೇಯೆಂದ ೬೭

ಕುಂಭಕರ್ಣ. ೬೪. "ಐಸೆ, ಮತ್ತೇನು ; ನನಗೆ ಇನ್ನು ವಿನಾಶ ತಪ್ಪದು" ಎಂದು ಸಂತೋಷ ಕಳೆದುಕೊಂಡ ಕುಂಭಕರ್ಣನು ದಶಮುಖನ ಸಭೆಗೆ ಬಂದನು. ರಾವಣನು ಅತಿಶಯ ಸಂಭ್ರಮದಿಂದ ಕುಂಭಕರ್ಣನನ್ನು ಎದುರುಗೊಂಡು ಆಲಿಂಗಿಸಿಕೊಂಡನು. ಅನಂತರ ಹರ್ಷದಿಂದ ತಮ್ಮನನ್ನು ತನ್ನ ಸಿಂಹಾಸನದ ಅರ್ಧಭಾಗದಲ್ಲಿ ಕೂರಿಸಿದನು. ೬೫. ಅನಂತರ ಶೂರ್ಪಣಖಿಯ ಮೂಗನ್ನು ಕತ್ತರಿಸಿದುದರಿಂದುಂಟಾದ ಖರ ದೂಷಣರ ಯುದ್ಧದಿಂದ ಆರಂಭಿಸಿ ಸೋದರಮಾವ ಮಾರೀಚನ ಮರಣವನ್ನೂ ಜಾನಕಿಯನ್ನಪಹರಿಸಿದ ಪ್ರಕರಣವನ್ನೂ ರಾವಣನು ತಮ್ಮನಿಗೆ ವಿವರಿಸಿದನು. ತರುವಾಯ ಸಮುದ್ರಕ್ಕೆ ಸೇತುವೆಯನ್ನು ಕಟ್ಟಿದ ಶತ್ರುಗಳ ಸಾಮರ್ಥ್ಯವನ್ನೂ, ಯುದ್ಧದಲ್ಲಿ ತಾನು ಮಾನ ಕಳೆದುಕೊಂಡ ಸ್ಥಿತಿಯನ್ನೂ ತಿಳಿಸಿದನು. ೬೬. "ಈ ಮಂಗಳಕರ ವಾರ್ತೆಯನ್ನು ಆಗಲೇ ಕೇಳಿದೆವು ; ಅದನ್ನು ಪುನಃ ಹೇಳಲೇಕೆ ? ಕೇಳುವ ನೀಚತನ ನಮ್ಮದಾಗಿದೆಯಲ್ಲವೇ ! ಹೋಗಲಿ ಆ ಮಾತು. ಪರಸ್ತ್ರೀಯರನ್ನು ಪಡೆಯುವ ಪ್ರಯತ್ನದಲ್ಲಿ ಇಂದ್ರಾದಿ ದೇವತೆಗಳು ಸೂರೆಹೋದರೆಂಬುದನ್ನು ಕೇಳಿಲ್ಲವೇನಣ್ಣ ಕಾಮನು ಯಾರಿಗೆ ತಾನೆ ಅತಿಹಿತವಂತನಾಗಿದ್ದಾನೆ ?" ಎಂದ ಕುಂಭಕರ್ಣ. ೬೭. "ವೀರ ರಾವಣ ಕೇಳು, ಸದಾಚಾರವನ್ನು ಸದ್ಧರ್ಮವು ಕೂಡಿಕೊಂಡಿರುವುದು ; ಆ ಧರ್ಮವನ್ನು ಹಿಂಬಾಲಿಸುವುದು ಸತ್ಕೀರ್ತಿ, ಸತ್ಕೀರ್ತಿ ನಾರಿಯನ್ನು ಶಾಶ್ವತವಾಗಿ ಲಕ್ಷ್ಮಿ ಕೂಡಿಕೊಂಡಿರುವಳು, ಲಕ್ಷ್ಮಿಯೊಡಗೂಡಿರುವಳು ಜಯಲಕ್ಷ್ಮಿ. ನಮಗೆ

ಕೇಳದಾ ಮಾರೀಚನುಚಿತವ । ಬೀಳುಕೊಡುವುದು ನಮ್ಮದಗ್ಗದ
ಖೂಳತನವನುಜನ ನಯೋಕ್ತಿಯು ನೀತಿಗಳವಡದ
ಖೂಳರೊಳಗಣ ಖೂಳತನ ಮೇ । ಲೂಳಿಗದ ಕಪಿವರನ ಕದನದ
ಹಾಳಿಯಲಿ ಮತಿಗೆಡುವುದಗ್ಗದ ಖೂಳತನವೆಂದ ೭೮

ಆದರೆಯು ಕೇಳಣ್ಣ ರಣದಲಿ । ಹೋದವರು ಹೋಗಲಿ ವಿವೇಕವ
ನಾದರಿಸಬಲ್ಲಡೆ ಮಹಾಯುಷವನಧಿಕ ಸಂಪದವ
ಸಾಧಿಸುವದುಳ್ಳಡೆ ನೃಪಾಲ ತ । ಳೋದರಿಯನೊಲಿದೀವುದಿದು ನಯ
ದಾದಿಮತ ನಿನ್ನನುಮತವದೇನೆಂದನಗ್ರಜನ ೭೯

ಮರುಳಲಾ ಯೆಲೆ ತಮ್ಮ ಮದನನ । ಗರುಡಿಯಲಿ ಗುಱಿಯಾದವರು ನಾವ್
ಮರಣಕಂಜಿದರಖಿಳಜನ ನಗದಿಹುದೆ ನಾವ್ ಮೊದಲು
ಹರಣದಾಸೆಯ ನೋಡದಂಗೀ । ಕರಿಸಿದುದು ಮತವೈಸಲೇ ಸಂ
ಗರವೆ ಸಾಧನವೆಮಗೆ ನೀನಿದಕಳುಕಬೇಡೆಂದ ೮೦

ಕರಿಯನಿಟ್ಟವುದಲದ ಗಿಡುವಿನ । ಮಱೆಯ ಹೊಗುವರೆ ತಮ್ಮ ಕೈ ಮೈ
ವೆರಸಿ ಖಾಡಾಖಾಡಿಯಲಿ ಕಲಿಗಳಿಗೆ ಗುರುವೆನಿಸಿ
ಧುರದೊಳಳಿವುದೆ ಕೀರ್ತಿಯಿದ ನಿ । ರ್ಧರಿಸಿಕೊಂಡಿಹೆವಾವು ನಡೆ ನೀ
ನರವರಿಸದೆಂದಿತ್ತನನುಜಂಗಸುರ ವೀಳೆಯವ ೮೧

ಈ ಮಾರ್ಗವು ಅಸಾಧ್ಯವಾಯಿತಲ್ಲವೇ ?" ಎಂದ ಕುಂಭಕರ್ಣ. ೭೮. "ಮಾರೀಚನ ಯೋಗ್ಯ ವಚನವನ್ನು ತಿರಸ್ಕರಿಸಿದುದು ನಮ್ಮ ನೀಚತನ, ತಮ್ಮನ ನೀತಿವಚನಗಳನ್ನು ಒಪ್ಪದೇಹೋದುದು ನೀಚತನದಲ್ಲಿ ನೀಚತನ. ಇದರ ಮೇಲೆ ದೂತನಾಗಿ ಬಂದ ಕಪಿವೀರನ ಕದನದ ರೀತಿಯನ್ನು ಕಂಡು ಬುದ್ಧಿಕೆಡಿಸಿಕೊಳ್ಳುವುದು ಪರಮಾವಧಿ ನೀಚತನ" ಎಂದು ಹೇಳಿದ ಕುಂಭಕರ್ಣ. ೭೯. "ಆದರೂ ಕೇಳಣ್ಣ, ಯುದ್ಧದಲ್ಲಿ ಸತ್ತುಹೋದವರು ಹೋಗಲಿ. ಈಗಲೂ ವಿವೇಕಿಯಾಗುವುದಾದರೆ, ದೀರ್ಘಾಯುಸ್ಸು ಮತ್ತು ಅಧಿಕ ಸಂಪತ್ತನ್ನು ಸಾಧಿಸುವುದಿದ್ದರೆ ಮಾನವರರಸನ ಹೆಂಡತಿಯನ್ನು ನೀನಾಗಿ ಒಪ್ಪಿಸು. ಇದು ನೀತಿಯ ಮಾರ್ಗ. ಇದರಲ್ಲಿ ನಿನ್ನ ಅಭಿಪ್ರಾಯವೇನು ?" ಎಂದು ಅಣ್ಣನನ್ನು ಕೇಳಿದ. ೮೦. "ತಮ್ಮ, ನಿನಗೆಲ್ಲೋ ಭ್ರಾಂತಿ, ಮನ್ಮಥನ ಶಸ್ತ್ರಕ್ಕೆ ಗುರಿಯಾದವರು ನಾವು. ಈಗ ಸಾವಿಗೆ ಹೆದರಿದರೆ ಸಮಸ್ತ ಜನರೂ ನಗದಿರುವರೇ ? ಪ್ರಾಣದ ಮೇಲಿನ ಆಸೆಯನ್ನಿಟ್ಟುಕೊಳ್ಳದೆ ಕದನವನ್ನು ಅಂಗೀಕರಿಸಿಯಾಗಿದೆ. ಆದುದರಿಂದ ಯುದ್ಧವೇ ಈಗ ನಮ್ಮ ಗುರಿ. ನೀನು ಇದಕ್ಕೆ ಅಳುಕಬೇಡ" ಎಂದ ರಾವಣ. ೮೧. "ಆನೆಯನ್ನಿಟ್ಟುಕೊಂಡು ಔದಲವಗಿಡಕ್ಕೆ ಶರಣುಹೋಗುವರೆ ? ತಮ್ಮ, ವೀರರಿಗೆ ಗುರುವೆನ್ನಿಸಿಕೊಂಡು ಕೈ ಮೈಗಳಿಂದ ಖಡಾಖಡಿ ಯುದ್ಧಮಾಡಿ ಸಾಯುವುದೇ ಕೀರ್ತಿ. ಇದನ್ನು ನಾವು ಮೊದಲೇ ನಿರ್ಧರಿಸಿಕೊಂಡಿದ್ದೇವೆ. ಇನ್ನು ಬೇರೆ ವಿಚಾರಮಾಡದೆ ಯುದ್ಧಕ್ಕೆ ನಡೆ" ಎಂದು ಹೇಳಿ ರಾವಣನು ತಮ್ಮನಿಗೆ

ತಪ್ಪದೇದಗ್ರಜನ ವಚನವ । ನೊಪ್ಪುಗೊಂಡಿಂತೆಂದನೆನ್ನಯ
ದರ್ಪವನು ಕೇಳಾದಡೆಲೆ ಲಂಕೇಶ ರಾಘವನ
ಒಪ್ಪುವಗ್ಗದ ಸೈನ್ಯಸಾಗರ । ದರ್ಪವನು ನೆಱೆ ಕುಡಿದು ಹಿಡಿತಂ
ದೊಪ್ಪಿಸುವೆನಾ ಕೀಶರಾಜನ ನಿನಗೆ ತಾನೆಂದ ೭೨

ಹಳಚುವೆನು ರಘುರಾಮಚಂದ್ರಮ । ನೊಳು ಜಗತ್ರಯ ಮೆಚ್ಚೆ ಮೇಲಣ
ಕೆಲಸ ದೈವಾಧೀನ ನಿನ್ನಯ ಭಾಗ್ಯದಂತರದ
ಕಳುಹು ಕಾಳಗಕೆನುತ ನೀಲಾ । ಚಲನಿಭಾಂಗನು ನಿಂದಿದನು ನೆಱೆ
ಮೊಳಗಿದವು ಭೇರಿಗಳು ರಣಯಾತ್ರಾಪರಿಗ್ರಹದ ೭೩

ತರಿಸಿ ಬಳಿಕ ಸುರತ್ನಖಚಿತಾ । ಭರಣಗಳ ತೊಡಿಸಿದನು ತರಣಿಯ
ಕಿರಣಲಹರಿಯ ಲಳಿಯ ಲಗ್ಗೆಯ ಲಲಿತ ಕಾಂಚನದ
ಧರಿಸಿತೋ ಮಂದರವನಂಜನ । ಗಿರಿಯೆನಲು ಕಲಿಕುಂಭಕರ್ಣನ
ಶಿರದಲೊಪ್ಪಿತು ಮಕುಟ ನಿಕಟ ದಿಶಾಂತ ಝಗಝಗಿಸೆ ೭೪

ಹೊರದ ಕಪ್ಪಿನ ಮುಗಿಲ ಮುಖದಲಿ । ಸುರಪಧನುವೆದ್ದಂತೆ ಮೆಱೆದುದು
ಕೊರಳೊಳನುಪಮ ಪದಕ ಪಚ್ಚೆಯ ಪದ್ಮರಾಗಗಳ
ಸುರಗಿರಿಯ ಪೂರ್ವಾಪರದ ವಿ । ಸ್ತರದ ಜನನಾಸ್ತಮಯ ಸಮಯದ
ತರಣಿ ಶಶಿಮಂಡಲಗಳೊಲು ಕುಂಡಲಗಳೊಪ್ಪಿದವು ೭೫

ಯುದ್ಧಕ್ಕೆ ವೀಳೆಯವನ್ನು ಕೊಟ್ಟನು. ೭೨. ಅಣ್ಣನ ಮಾತು ತಪ್ಪದು ಎಂದು ಒಪ್ಪಿಕೊಂಡು, "ಲಂಕೇಶ, ಹಾಗಿದ್ದರೆ ನನ್ನ ಪರಾಕ್ರಮವನ್ನು ಹೇಳುತ್ತೇನೆ ಕೇಳು. ರಾಮನ ಸೈನ್ಯಸಾಗರದ ದರ್ಪವನ್ನು ಹೀರಿ ವಾನರರರಸನನ್ನು ನಿನಗೆ ಹಿಡಿದು ತಂದು ಒಪ್ಪಿಸುತ್ತೇನೆ" ಎಂದ ಕುಂಭಕರ್ಣ. ೭೩. "ಮೂರು ಲೋಕಗಳು ಮೆಚ್ಚುವಂತೆ ರಘುರಾಮಚಂದ್ರನೊಡನೆ ಹೋರಾಡುವೆನು. ಇದರ ಮೇಲೆ ನಿನ್ನ ಅದೃಷ್ಟವು ವಿಧಿಯ ಅಧೀನ. ನನ್ನನ್ನು ಕಾಳಗಕ್ಕೆ ಕಳುಹಿಸು" ಎಂದು ನುಡಿದು ನೀಲಪರ್ವತ ಸಮಾನ ದೇಹಿ ಕುಂಭಕರ್ಣನು ಎದ್ದುನಿಂತನು. ಆಗ ಯುದ್ಧಕ್ಕೆ ಹೊರಡುವ ಸೂಚನೆಯ ಭೇರಿಗಳು ಬಾರಿಸಿದವು. ೭೪. ಸೂರ್ಯಕಿರಣಗಳ ಪ್ರಕಾಶದಿಂದ ಹೊಳೆಯುವ ಚಿನ್ನದ ರತ್ನಖಚಿತ ಆಭರಣಗಳನ್ನು ತರಿಸಿ ರಾವಣನು ಅವುಗಳನ್ನು ಕುಂಭಕರ್ಣನಿಗೆ ತೊಡಿಸಿದನು. ಅಂಜನಾದ್ರಿಯು ತನ್ನ ತಲೆಯ ಮೇಲೆ ಮಂದರ ಪರ್ವತವನ್ನು ಧರಿಸಿತೋ ಎನ್ನುವಂತೆ ವೀರ ಕುಂಭಕರ್ಣನ ತಲೆಯ ಮೇಲೆ ಕಿರೀಟವು ಶೋಭಿಸಿತು. ಕಿರೀಟದ ಪ್ರಕಾಶದಿಂದ ಸಮೀಪದ ದಿಗಂತವು ಝಗಝಗಿಸಿತು. ೭೫. ಕಪ್ಪು ಮೋಡದ ಮುಖದಲ್ಲಿ ಕಾಮನಬಿಲ್ಲು ಬಿದ್ದಹಾಗೆ ಕುಂಭಕರ್ಣನ ಕೊರಳಿನಲ್ಲಿ ಪಚ್ಚೆ ಮುತ್ತು ಪದ್ಮರಾಗಮಣಿಗಳ ಪದಕವು ಮೆರೆಯಿತು. ಮೇರುಪರ್ವತದ ಪೂರ್ವದಿಕ್ಕಿನ ಉದಯಕಾಲದ ಮತ್ತು ಪಶ್ಚಿಮದಿಕ್ಕಿನ ಮುಳುಗುವ ಕಾಲದ ಸೂರ್ಯ ಚಂದ್ರಬಿಂಬಗಳಂತೆ ಕುಂಭಕರ್ಣನ ಎರಡೂ ಕಿವಿಗಳ ಕಡಕುಗಳು ಹೊಳೆದವು.

ಖಡೆಯ ಮೆಱೆದುದು ಮೌಕ್ತಿಕದ ನಿಡಿ । ಯೊಡಲ ವಾಸುಗಿ ಸುತ್ತಿದಬುಧಿಯ
ಕಡದ ಗಿರಿಯಂದದಲಿ ಚರಣದಲಾ ನಿಶಾಚರನ
ಉಡಿಯಲೊಪ್ಪಿತು ಶೋಣಪಟ ಕೆಂ । ಪಡರ್ದ ಸಂಧ್ಯಾಮೇಘದವೊಲು
ಗ್ಘಡಿಸುತಿರ್ದುದು ಬಿರುದನಮರರ ವಂದಿಸಂದೋಹ ೭೬

ಸರಿಯಿದಲು ಕಲಿಕುಂಭಕರ್ಣಂ । ಗೆರಡು ಯುಗದಲಿ ಕಾಣೆನಮರಾ
ಸುರನರೋರಗ ಭಟರೊಳಿನ್ನುಳಿದಿರ್ದ ಯುಗಗಳಲಿ
ಭರಿತ ಭಟರುಗಳೇತಜವರೆಲೆ । ತರುಣ ಕೇಳ್ ಕಲಿಕುಂಭಕರ್ಣಂ
ಗರರೆ ತತ್ಕಲಿ ಕುಂಭಕರ್ಣನೆ ನಿಜವಿದೀಗೆಂದ ೭೭

ಕಾಲ ನಡುಗಿದನಾ ನಿಶಾಚರ । ಕಾಳಗದ ಕರದಂಡವನು ಕೊಳೆ
ಶೂಲಿ ಮೈಮಱೆಸಿದನು ಶೂಲವ ಧರಿಸೆ ಖಂಡೆಯವ
ಮೇಳವಿಸೆ ಮುಸುಕಿಕ್ಕಿದನು ಸುರ । ಪಾಲ ಸುರಗಿಯ ಕಟ್ಟೆ ಬಿಟ್ಟನು
ಪಾಳೆಯವ ಪದ್ಮಜನು ಪಡಿಮೂತ್ರಿಸಿತು ಸುರಕಟಕ ೭೮

ಬೀಳುಕೊಂಡನು ಕರವನೊಂದನು । ಮೌಳಿಗಾನಿಸಿ ಮಾರುತಾಧ್ವದ
ಸಾಲಸಂದಣಿಯಮರರೋಟವ ಪೇಳಲೇನದನು
ಕಾಲಭೈರವಗೆಂಟುಮಡಿಯ ಕ । ರಾಳ ತೇಜೋಗರ್ವದಲಿ ರಾ
ಜಾಲಯವ ಹೊಱವಂಟು ಬಂದನು ರಾಜಬೀದಿಯಲಿ ೭೯

೭೬. ಮುತ್ತಿನಂತಿರುವ ಉದ್ದವಾದ ವಾಸುಕಿಯ ದೇಹವನ್ನು ಸುತ್ತಿ ಸಮುದ್ರವನ್ನು ಕಡೆದ ಮಂದರಪರ್ವತದಂತೆ ಕುಂಭಕರ್ಣನ ಕಾಲುಗಳಲ್ಲಿ ಕಾಲುಕಡಗ ಹೊಳೆಯುತ್ತಿತ್ತು. ಕೆಂಬಣ್ಣದಿಂದ ರಂಜಿಸುವ ಸಾಯಂಕಾಲದ ಮೋಡದಂತೆ ಕುಂಭಕರ್ಣನು ಸೊಂಟಕ್ಕೆ ಕಟ್ಟಿದ್ದ ಕೆಂಪುವಸ್ತ್ರವು ಪ್ರಕಾಶಿಸುತ್ತಿತ್ತು. ದೇವಲೋಕದ ಹೊಗಳು ಭಟರು ಕುಂಭಕರ್ಣನ ಬಿರುದುಗಳನ್ನು ಗಟ್ಟಿಯಾಗಿ ಕೂಗುತ್ತಿದ್ದರು. ೭೭. 'ಕೃತ ಯುಗ ತ್ರೇತಾಯುಗಗಳಲ್ಲಿ ದೇವತೆಗಳು, ಮಾನವರು ಮತ್ತು ಉರಗವೀರರುಗಳಲ್ಲಿ ಕಲಿಕುಂಭಕರ್ಣನಿಗೆ ಸಮಾನರಾದವರನ್ನು ಕಾಣೆ, ಇನ್ನು ಉಳಿದ ಎರಡು ಯುಗಗಳಲ್ಲಿನ ವೀರರು ಯಾತರವರು. ತರುಣಲವ ಕೇಳು, ಅಬ್ಬಬ್ಬ ಕಲಿಕುಂಭಕರ್ಣನಿಗೆ ಆ ವೀರ ಕುಂಭಕರ್ಣನೇ ಸರಿ ಎಂದು ವಾಲ್ಮೀಕಿಗಳು ನುಡಿದರು. ೭೮. ಕುಂಭಕರ್ಣನು ಕಾಳಗದ ಕೈಗೋಲನ್ನು ತೆಗೆದುಕೊಳ್ಳಲು ಯಮನು ನಡುಗಿದನು, ಶೂಲವನ್ನು ತೆಗೆದುಕೊಳ್ಳಲು ಶೂಲಿ (ಶಿವನು) ಮುಚ್ಚಿಟ್ಟುಕೊಂಡನು, ಖಡ್ಗವನ್ನು ತೊಡಲು ಇಂದ್ರನು ಮುಸುಕುಹಾಕಿಕೊಂಡನು. ಕಠಾರಿಯನ್ನು ಕಟ್ಟಿಕೊಳ್ಳಲು ಬ್ರಹ್ಮನು ಪಾಳಯವನ್ನು ಬಿಟ್ಟೋಡಿದನು. ದೇವತೆಗಳ ಸಮೂಹವು ಉಚ್ಚೆ ಹುಯಿದುಕೊಂಡಿತು. ೭೯. ಕಿರೀಟದ ಮೇಲೆ ಒಂದು ಕೈಯಿಟ್ಟುಕೊಂಡು ಕುಂಭಕರ್ಣನು ರಾವಣನನ್ನು ಬೀಳ್ಕೊಂಡು ಹೊರಟನು. ಆಗ ಗಗನದಲ್ಲಿ ಸಾಲಾಗಿ ಗುಂಪು ಸೇರಿದ್ದ ದೇವತೆಗಳ ಓಟವನ್ನು ಏನು ಹೇಳಲಿ. ಕಾಲಭೈರವನಿಗೆ ಎಂಟರಷ್ಟು ಭಯಂಕರ ತೇಜಸ್ಸಿನ ಗರ್ವದಿಂದ ಕುಂಭಕರ್ಣನು ಅರಮನೆಯಿಂದ ಹೊರಟು ರಾಜಬೀದಿಯಲ್ಲಿ ಬಂದನು.

27

# ಇಪ್ಪತ್ತೇಳನೆಯ ಸಂಧಿ

ಸೂಚನೆ॥ ಸಕಲ ಸೇನೆಯ ಜಡಿದು ಕಪಿನಾ । ಯಕರ ರಣದಲಿ ಹಿಡಿದು ಮೆಱೆದನು
ಶಕುತಿಯನು ಕಲಿಕುಂಭಕರ್ಣನುದಾರ ಶೌರ್ಯದಲಿ

ಕೇಳಿದೈ ಕುಶ ಕುಂಭಕರ್ಣನು । ವೀಳಯವ ಕೊಂಡುಗ್ರತರ ಕರ
ವಾಳಕೈಯಿಂದಗ್ರಜಂಗಭಿನಮಿಸಿ ಕಾಳಗಕೆ
ಬೀಳುಕೊಂಡನು ಭೀಮಬಲ ದಶ । ಮೌಳಿಯನು ಬಲುಬಿರಿದುಗಳ ಸಂ
ಭಾಳಿಸುತ ಸಂದಣಿಯ ಬಹುವಿಧ ವಾದ್ಯರಭಸದಲಿ ೧

ಉಸುರಬಾರದು ರಕ್ಕಸನ ಕ । ರ್ಕಶದ ಕದನದ ಕಡುಹ ನೆಲಕಾ
ಗಸಕೆ ತೂಗಿಟ್ಟಾದಿಭೈರವಗೆಂಟುಮಡಿಯೆನಲು
ಪಶುಪತಿ ಬ್ರಹ್ಮಾಮರಾಳಿ । ಪ್ರಸರ ಪೈಸರಿಸಲು ಫಣೀಶ್ವರ
ನುಸುರು ತೆಗೆಬಗೆಯಾಗೆ ಬಂದನು ರಾಜಬೀದಿಯಲಿ ೨

ಆಚರಿಸಿದರು ಕಾಣುತಾ ರಜ । ನೀಚರನ ಪುರವಧುಗಳಭ್ರದ
ಖೇಚರಿಯರಿನ ನಡುಗಿ ಘನರಕ್ಷೋಘ್ನಸೂಕ್ತಕವ
ವಾಚಿಸಿದನಂಬುಧಿಯ ಹರುಷದ । ವೀಚಿ ನಿಂದವು ನಿಮಿಷದಲಿ ಸಂ
ಕೋಚಿಸಿದವು ಮುಖಾರವಿಂದ ದಿಗಂಗನಾಜನದ ೩

ಸೂಚನೆ॥ ಸಮಸ್ತ ಸೈನ್ಯವನ್ನೂ ಬಡಿದು ಕಪಿನಾಯಕರನ್ನು ಯುದ್ಧದಲ್ಲಿ ಹಿಡಿದು ಕುಂಭಕರ್ಣನು ಮಹಾಪರಾಕ್ರಮದಿಂದ ತನ್ನ ಶಕ್ತಿಯನ್ನು ಪ್ರಕಾಶಪಡಿಸಿದನು. ೧. ಕೇಳಯ್ಯ ಕುಶ, ಕುಂಭಕರ್ಣನು ವೀಳಯವನ್ನು ತೆಗೆದುಕೊಂಡು ಉಗ್ರಖಡ್ಗವನ್ನು ಹಿಡಿದಕೈಯಿಂದ ಅಣ್ಣನಿಗೆ ನಮಸ್ಕರಿಸಿ ಭಯಂಕರ ಬಲಶಾಲಿ ದಶಮುಖನನ್ನು ಬೀಳ್ಕೊಂಡು ಹೊಗಳುಭಟರ ಬಿರುದಿನ ಹೊಗಳಿಕೆಯನ್ನು ಆಲಿಸುತ್ತ ವಿವಿಧ ವಾದ್ಯಗಳ ಘೋರ್ಗರೆತದ ನಡುವೆ ಯುದ್ಧಕ್ಕೆ ಹೊರಟನು. ೨. ಕುಂಭಕರ್ಣನ ಕಾಳಗದ ಉಗ್ರ ಪರಾಕ್ರಮವನ್ನು ವರ್ಣಿಸಲಸಾಧ್ಯ. ಆಕಾಶಕ್ಕೂ ನೆಲಕ್ಕೂ ಹೆಜ್ಜೆಯನ್ನು ಬೀಸಿ ಹಾಕುತ್ತ ಕಾಲಭೈರವನಿಗೆ ಎಂಟರಷ್ಟೆನ್ನುವಂತೆ ಕುಂಭಕರ್ಣನು ರಾಜಬೀದಿಯಲ್ಲಿ ಬರುತ್ತಿರಲು ಶಿವ ಬ್ರಹ್ಮಾದಿ ದೇವತೆಗಳ ಸಮೂಹವು ಹಿಮ್ಮೆಟ್ಟಿತು, ಆದಿಶೇಷನ ಉಸಿರು ಸಿಕ್ಕಿಕೊಂಡಿತು. ೩. ಕುಂಭಕರ್ಣಾಸುರನನ್ನು ಕಾಣುತ್ತ ಪಟ್ಟಣದ ಸ್ತ್ರೀಯರು ಮತ್ತು ಖೇಚರಿಯರು ಬೆಚ್ಚಿದರು ; ಸೂರ್ಯನು ನಡುಗಿ ರಕ್ಷೋಘ್ನಮಂತ್ರವನ್ನು ಪಠಿಸಿದನು ; ಸಮುದ್ರದ ಸಂತೋಷದ ಅಲೆಗಳು ಚಲಿಸದೆ ನಿಂತವು ; ದಿಕ್ಕುಗಳ ನಾರಿಯರ ಮುಖ

ದಾಟಿದನು ಪುರದೇಳುಸುತ್ತಿನ । ಕೋಟೆಗಳನೊಂದೊಂದು ಹಜ್ಜೆಯ
ಲೋಟಕಿಕ್ಕಿತು ಕಂಡು ನಿಮ್ಮ ನರೇಂದ್ರಪರಿವಾರ
ದೂಟಲಿಳೆ ತಾಯ್ತುಳಲನಭ್ರಕೆ । ಮೀಟಲಂಬುಧಿ ಧ್ರುವನ ಕರ್ಣದ
ಕೋಟರಂಗಳು ಕಿವುಡುಗೊಳೆ ಕುಬುಬಿಬಿವುತೈತಂದ ೪

ನೆರೆದುದಾಕ್ಷಣ ಬೊಮ್ಮರಕ್ಕಸ । ರೆರಡುಕೋಟಿ ಮಹಾತಿಶಯ ಭೀ
ಕರ ಕರಾಳಪ್ರಳಯ ಶಾಕಿನಿಡಾಕಿನೀನಿವಹ
ಧಿರುರೆ ಪಾಯವಧಾರು ರಕ್ಕಸ । ರರಸ ಹಳುಹಳು ಜೀಯ ಬಾಳೆಂ
ದೆರಡು ಮೈಲಿಗಳಲುಗ್ಘಡಿಸಲೈತಂದನಸುರೇಂದ್ರ ೫

ಝಳಪಿಸುವ ನಿಜಕರದ ಖಡುಗದ । ಬೆಳಗು ಬೆದರಿಸಿತಿನನ ದಾಡೆಯ
ಹೊಳಹು ಹೊದರಿದ್ದೆಬ್ಬಿಸಿತು ಕಲ್ಪಾಂತಭೈರವನ
ಕಲಿತ ಕಾಯದ ಕಾಳಿಕೆಯ ಕ । ತ್ತಲೆಯೊಳದ್ದುದು ಧರಣಿ ಧುರದ
ಗ್ಗಳದ ಗಮನಕೆ ಕರಿಗಳಡೆಗೆಡೆದವು ಧರಾಧರದ ೬

ಅಂಜಿದನು ಸುಗ್ರೀವ ಪವನ ಧ । ನಂಜಯರ ಸುತರಳವಳಿದರಾ
ಕಂಜಸಂಭವಭವ ಸುಷೇಣ ಗವಾಕ್ಷ ಮೊದಲಾದ
ಅಂಜದತಿಬಲರಾನನಾಬ್ಜಕೆ । ಮಂಜು ಮುಸುಕಿತು ಮಿಕ್ಕ ಸಮರ ಸ
ಮಂಜಸರ ಪೇಳದಿರು ಪೇಳುವೆನೇನನದ್ಭುತವ ೭

ಕಮಲಗಳು ಒಂದು ನಿಮಿಷದಲ್ಲಿ ಮುಚ್ಚಿಕೊಂಡವು. ೪. ಲಂಕಾನಗರದ ಏಳುಸುತ್ತಿನ ಕೋಟೆಗಳನ್ನು ಒಂದೊಂದೇ ಹೆಜ್ಜೆಯಿಂದ ದಾಟಿದನು. ಇದನ್ನು ಕಂಡು ನಿಮ್ಮ ರಾಜರ ಪರಿವಾರವು ಓಟಕಿತ್ತಿತು. ಭೂಮಿಯು ಅಡಿಮಳಲನ್ನು ಆಕಾಶಕ್ಕೆ ಚಿಮ್ಮಲು, ಸಮುದ್ರವು ಉಕ್ಕಲು, ಧ್ರುವನ ಕಿವಿಯು ಕಿವುಡಾಗಲು ಕುಂಭಕರ್ಣನು ಕುಬುಬೆಂದು ಕೂಗುತ್ತ ಬಂದನು. ೫. ಆ ಕ್ಷಣದಲ್ಲಿ ಎರಡು ಕೋಟಿ ಬ್ರಹ್ಮರಾಕ್ಷಸರು ಬಂದರು. ಮಹಾಭಯಂಕರ ಪ್ರಳಯೋಗ್ರ ಶಾಕಿನಿಡಾಕಿನಿಯರ ಗುಂಪು ಬಂದು ಸೇರಿತು. 'ಧಿರುರೆ ಪಾಯವಧಾರು ರಾಕ್ಷಸರೊಡೆಯ ! ಹಳು ಹಳು ಜೀಯ ! ಬಾಳು !' ಎಂದು ಎರಡು ಮೈಲಿಗಳವರೆಗೆ ಹೊಗಳುತ್ತಿರಲು ಕುಂಭಕರ್ಣನು ಬಂದನು. ೬. ಕುಂಭಕರ್ಣನು ಝಳಪಿಸಿದ ಅವನ ಕೈಯ ಖಡ್ಗದ ಪ್ರಕಾಶವು ಸೂರ್ಯನನ್ನು ಬೆದರಿಸಿತು. ಅವನ ಕೋರೆಹಲ್ಲಿನ ಹೊಳಪಿನ ರಾಶಿ ಪ್ರಳಯಭೈರವನನ್ನು ಹೆದರಿಸಿತು. ಅವನ ದೇಹದ ಕಪ್ಪುಬಣ್ಣದ ಕತ್ತಲೆಯು ಭೂಮಿಯನ್ನು ಮುಸುಕಿತು. ಕುಂಭಕರ್ಣನು ಯುದ್ಧಕ್ಕೆ ಬಂದ ರಭಸಕ್ಕೆ ಭೂಮಿಯನ್ನು ಹೊತ್ತ ಆನೆಗಳು ಅಡ್ಡಲಾಗಿಬಿದ್ದವು. ೭. ಸುಗ್ರೀವ ಹೆದರಿಕೊಂಡನು. ಹನುಮಂತ, ಅಗ್ನಿಕುಮಾರ ನೀಲರು ಶಕ್ತಿಗುಂದಿದರು. ಆ ಜಾಂಬವಂತ, ಸುಷೇಣ, ಗವಾಕ್ಷ ಮೊದಲಾದ ಹೆದರದ ಮಹಾಬಲಶಾಲಿಗಳ ಮುಖಕಮಲವನ್ನು ಮಂಜು ಮುಸುಕಿತು. ಉಳಿದ ಯುದ್ಧವೀರರ ವಿಷಯವನ್ನು ಹೇಳಬೇಡ.

ನೋಡಿದನು ರಕ್ಕಸನ ಮರಳಿದು । ನೋಡಿದನು ನಿಜಬಲವ ನಗುತ
ಲ್ಲಾಡಿದನು ಮಸ್ತಕವ ಧೀರೋದಾತ್ತ ರಘುನಾಥ
ಕೋಡಿಸಿದ ಕಡೆಗಣ್ಣನಲಿ ನೃಪ । ನೋಡಿದನು ನಿಜಶರಣನನು ರಣ
ಬೇಡ ರಕ್ಕಸರಾಯನಿವನಾರೆಂದು ಬೆಸಗೊಂಡ ೮

ತಮ್ಮನಹನೆಲೆ ಜೀಯ ಚಿತ್ತೈಸ । ನಮ್ಮ ಪೂರ್ವಜನಿವ ಪುಲಸ್ತ್ಯನ
ಮೊಮ್ಮನಿವ ಮಗ ವಿಶ್ರವಸುವಿಂಗಸುರೆ ಕೈಕಸೆಗೆ
ಬೊಮ್ಮರಕ್ಕಸನಿವನು ಜವಗಿವ । ಗಮ್ಮಪವನಲ್ಲರಸ ನೋಡಿವ
ನುಮ್ಮಹವನಿವನಿರವನಿವನಾಯತವ ನೀನೆಂದ ೯

ಕಾಲಗಿನಿತುಂಟೇ ಮಹೋಗ್ರ ಕ । ಪಾಲಿಗಿನಿತುಂಟೇ ತ್ರಿವಿಕ್ರಮ
ನೇಳಿಗೆಯು ವಿಕ್ರಮಕೆ ತಾನಿನಿತುಂಟೆ ಪಡಿಯುಡಲು
ಹೇಳದಿರು ಮಿಕ್ಕಿಂದ್ರಗಿಂದ್ರರ । ತೋಳಸತ್ವವನರಸ ಕೇಳಿವ
ನೂಳಿಗವ ಪೇಳದರೆ ಬೆಕ್ಕಸ ಬೆಱಗು ನಿಮಗೆಂದ ೧೦

ಅಟ್ಟಿತಿಂದನು ಜಗವನಿವ ತಾ । ಹುಟ್ಟಿದೇಳ್ದಿವಸದಲಿ ಜಗವನು
ಗೆಟ್ಟು ಬಾಯಾ ಮೊಱೆಯಿಂದ ದೂಱಿತು ಕಮಲಗರ್ಭಂಗೆ
ಕಟ್ಟಿದನು ನಿದ್ರೆಯಲಿ ಬಳಿಕೀ । ಘಟ್ಟಿಯನನರೆವರುಷ ಕೇಳವ
ಕಟ್ಟಳೆಯಲಗ್ರಜನ ನೇಮದಲರಸ ಕೇಳೆಂದ ೧೧

ಈ ಅದ್ಭುತವನ್ನು ಏನೆಂದು ಹೇಳೋಣ ಎಂದರು ವಾಲ್ಮೀಕಿಗಳು. ೮. ರಾಕ್ಷಸನನ್ನು ನೋಡಿದನು, ಇತ್ತ ತಿರುಗಿ ತನ್ನ ಸೈನ್ಯವನ್ನು ನೋಡಿದನು. ಧೀರೋದಾತ್ತ ರಘುನಾಥನು ನಗುತ್ತ ತಲೆದೂಗಿದನು. ತನ್ನ ಭಕ್ತ ವಿಭೀಷಣನನ್ನು ಕುಗ್ಗಿದ ಕಡೆಗಣ್ ನೋಟದಿಂದ ನೋಡಿ, "ಈ ಯುದ್ಧಭೀರು ರಾಕ್ಷಸನಾಯಕನಿವನಾರು ?" ಎಂದು ಪ್ರಶ್ನಿಸಿದ. ೯. "ಇವನು ರಾವಣನ ತಮ್ಮನು. ಜೀಯ ಆಲಿಸು, ನನ್ನ ಅಣ್ಣ ಇವನು ; ಪುಲಸ್ತ್ಯನ ಮೊಮ್ಮಗ, ವಿಶ್ರವಸು ಮತ್ತು ರಾಕ್ಷಸಿ ಕೈಕಸೆ ಇವರ ಮಗ ಬ್ರಹ್ಮರಾಕ್ಷಸ ಇವನು. ಯಮಗಿಮರನ್ನು ಲೆಕ್ಕಿಸುವವನಲ್ಲ. ಒಡೆಯ, ಇವನ ಉತ್ಸಾಹ, ಇವನ ನಿಲವು, ಇವನ ಪರಾಕ್ರಮಗಳನ್ನು ನೋಡು" ಎಂದ ವಿಭೀಷಣ. ೧೦. "ಇಷ್ಟೊಂದು ಪ್ರಚಂಡತೆ ಯಮನಿಗುಂಟೇ ? ಕಪಾಲಿ ಶಿವನಿಗೆ ಇಷ್ಟೊಂದು ಸಾಹಸವುಂಟೇ ? ಇವನ ಪರಾಕ್ರಮಕ್ಕೆ ಸಮಾನವಾದುದು ಯಾವುದು ತಾನೆ ಇದೆ. ಉಳಿದ ಇಂದ್ರಗಿಂದ್ರರ ತೋಳ್ಬಲದ ಮಾತನ್ನಾಡಬೇಡ. ಇವನು ಮಾಡಿರುವ ಕೆಲಸಗಳನ್ನು ಹೇಳಿದರೆ ನೀವು ಬೆಕ್ಕಸಬೆರಗಾಗುವಿರಿ" ಎಂದ ವಿಭೀಷಣ ರಾಮನಿಗೆ. ೧೧. "ತಾನು ಹುಟ್ಟಿದ ಏಳು ದಿವಸಕ್ಕೆ ಅಟ್ಟಿಸಿಕೊಂಡು ಹೋಗಿ ಜಗತ್ತನ್ನು ತಿಂದನು. ಭೂಮಿಯು ಅಂದಗೆಟ್ಟು ಬ್ರಹ್ಮನಲ್ಲಿ ಮೊರೆಯಿಟ್ಟು ದೂರುಕೊಟ್ಟಿತು. ಆಗ ಬ್ರಹ್ಮನು ಅಣ್ಣನ ಅಪ್ಪಣೆಯಿಂದ ನಿಯಮಿತವಾಗಿ ಆರುತಿಂಗಳ ಕಾಲ ಈ ಗಟ್ಟಿಗನನ್ನು ನಿದ್ದೆಯಲ್ಲಿ

ಎದ್ದ ದಿನದಲಿ ಮೂಜಗಲೋಕವ । ನುದ್ದಿ ನುಂಗುವ ಹಸಿವಿವಂಗಿವ
ನುದ್ದುರುಟುತನಕಾರು ಸರಿ ಪಿಲಯಾದಿ ದೇವರಲಿ
ಎದ್ದ ಜಠರಾನಲನ ತೀವ್ರವ । ನದ್ದಿಸುವಡೊಬ್ಬನೆ ಸಮರ್ಥನು
ಮದ್ದಿನಭಿಮಂತ್ರೈಕ ವಟಕದಲಸುರಗುರುವೆಂದ ೧೨

ಧುರಕಿವನು ಕೈಗಟ್ಟಿ ನಿಂದರೆ । ತರಹರಿಸುವವರಾರು ನರ ನಿ
ರ್ಜರ ಭುಜಂಗಮಭಟರೊಳಿದು ತಾ ಸುಪ್ರಸಿದ್ಧ ಕಣ
ಪರಿಕಿಸುವಡೊಂದಿದೆ ಪರಸ್ತ್ರೀ । ಹರಣದನುಬಂಧತೆಯನಂಗೀ
ಕರಿಸಿದುದರಿಂದೇನಹನೊ ನಾನರಿಯೆನಿದನೆಂದ ೧೩

ಬಲದ ಬಲುಹಿಲ್ಲದೆ ನಿಯುದ್ಧಕೆ । ನಿಲುಕುತಪನೆಲೆ ಜೀಯ ನಮ್ಮಯ
ಬಲ ಪಲಾಯನದಾಯತವ ಲೇಸಾಗಿ ಚಿತ್ತೈಸಿ
ನಿಲಿಸಿ ಕಂಗಳನಿತ್ತ ಗಗನ । ಸ್ಥಳದ ಗತಿಕರ ನೋಡಿ ಸಮರದ
ನೆಲೆಭೊಗದ ಮುನ್ನಿಱಿತಕಿನ್ನೇನಹುದೊ ನಮಗೆಂದ ೧೪

ಅವಧರಿಸು ರಾಜೇಂದ್ರ ನೋಡೆ । ವ್ಮಮವನ ಹೆಗಲಿನ ಶೂಲದೋಲಗ
ದವರನದು ತಾನಂತಿರಲಿ ಶೂಲಾಗ್ರದಲಗಿನಲಿ
ಜವನೆದೆಯ ಜಗಿನೆತ್ತರದೆ ವೈ । ಶ್ರವಣನಾಮಿಷಬಂಧವದೆ ಮಿ
ಕ್ಕವರ ನೆಣದೋಸರಿಯ ತುಪ್ಪದ ಲೇಪವದಯೆಂದ ೧೫

ಕಟ್ಟಿಹಾಕಿದನು" ಎಂದು ಹೇಳಿದ ವಿಭೀಷಣ. ೧೨. "ಕುಂಭಕರ್ಣನು ನಿದ್ದೆಯಿಂದ ಎದ್ದ ದಿವಸ ಮೂರುಲೋಕಗಳನ್ನೂ ಪುಡಿಪುಡಿಮಾಡಿ ನುಂಗುವ ಹಸಿವಿಗೂ ಇವನ ಒರಟುತನಕ್ಕೂ ಪ್ರಳಯದೇವತೆಯೇ ಮೊದಲಾದ ದೇವರುಗಳಲ್ಲಿ ಯಾರು ಸಮ. ಇವನ ಹೊಟ್ಟೆಹಸಿವಿನ ಅಗ್ನಿಯನ್ನು ಅಡಗಿಸಲು ಮಂತ್ರಿಸಿದ ಮದ್ದಿನ ಗುಳಿಗೆಯಿಂದ ರಾಕ್ಷಸರಗುರು ಶುಕ್ರಾಚಾರ್ಯನೊಬ್ಬ ಮಾತ್ರ ಸಮರ್ಥ" ಎಂದ ವಿಭೀಷಣ. ೧೩. "ಕಾಳಗಕ್ಕೆ ಇವನು ಸೆಣಸಿ ನಿಂತರೆ ಮಾನವ ಅಮರ ನಾಗಲೋಕಗಳ ವೀರರುಗಳಲ್ಲಿ ಯಾರು ಸೈರಿಸಬಲ್ಲರು ? ಇದು ಸುಪ್ರಸಿದ್ಧ. ವಿಚಾರಮಾಡಿ ನೋಡಿದರೆ ಒಂದು ಕೊರತೆ ಕಾಣಿಸುತ್ತಿದೆ. ಪರಸ್ತ್ರೀಯನ್ನು ಅಪಹರಿಸುವ ಕಾರ್ಯವನ್ನು ಕೈಗೊಂಡುದ ರಿಂದಾಗಿ ಆ ಸಂಬಂಧದಿಂದ ರಾವಣನು ಏನಾಗುವನೋ ತಿಳಿಯದು" ಎಂದ ವಿಭೀಷಣ. ೧೪. "ಕುಂಭಕರ್ಣನು ಸೈನ್ಯದ ಬೆಂಬಲವಿಲ್ಲದೆ ದ್ವಂದ್ವಯುದ್ಧಕ್ಕೆ ತೊಡಗುತ್ತಿದ್ದಾನೆ. ಪ್ರಭು, ನಮ್ಮ ಸೈನ್ಯ ಯುದ್ಧರಂಗದಿಂದ ವ್ಯಾಪಕವಾಗಿ ಓಡುತ್ತಿರುವುದನ್ನು ಚೆನ್ನಾಗಿ ಗಮನಿಸಿ. ಇತ್ತ ನಿಮ್ಮ ದೃಷ್ಟಿಯನ್ನು ಹಾಯಿಸಿ, ಆಕಾಶದಲ್ಲಿರುವ ದೇವತೆಗಳ ಸ್ಥಿತಿಯನ್ನು ನೋಡಿ. ಯುದ್ಧ ಆರಂಭವಾಗುವುದಕ್ಕೆ ಮೊದಲೇ ಇಷ್ಟು, ಇನ್ನು ಯುದ್ಧವನ್ನಾರಂಭಿಸಿದರೆ ನಮಗಿನ್ನೇನಾಗುವುದೋ !" ಎಂದ ವಿಭೀಷಣ. ೧೫. "ರಾಜೇಂದ್ರ, ಮನಸ್ಸಿಟ್ಟು ಕೇಳು. ನಮ್ಮವನ ಹೆಗಲಿನಮೇಲಿರುವ ಶೂಲದ ಊಳಿಗದವರನ್ನು ನೋಡು. ಅದು ಹಾಗಿರಲಿ, ಶೂಲದ ತುದಿಯ ಬಾಯಿಯಲ್ಲಿ ಯಮನ ಎದೆಯ ರಕ್ತ ಅಂಟಿಕೊಂಡಿದೆ, ಕುಬೇರನ ಮಾಂಸ ಚುಚ್ಚಿಕೊಂಡಿದೆ, ಮಿಕ್ಕ

ಕಾದಿ ಗೆಲಲರಿದೀ ನೆರೆದ ಮರ । ಗೈದುಗಳ ಮರ್ಕಟರಿಗನುವರ
ಗೈದುಕೊಳ್ಳದು ನಿಮ್ಮಡಿಯು ನೀವಾದರಱಿಯೆನದ
ಊದಿ ಬಿಸುಡುವನಿವನು ಮುಳಿದಡೆ । ಭೂ ದಿವಸ್ಥಾಯಿಗಳ ದೇವರ
ಪಾದದಾಣೆ ಮಾತು ತಪ್ಪಿದಡೆಂದನಸುರೇಂದ್ರ ೧೬

ಎಂಬ ನುಡಿಯಿಂದೊಳಗೆ ಕೀಶಕ । ದಂಬಪತಿ ಘುಡುಘುಡಿಸಿ ಲಯದು
ತ್ರ್ಯಂಬಕನ ಹೊಳಹಿನಲಿ ನಿಂದಿದನಿದಿರಿನಲಿ ಖಳನ
ಬೆಂಬಲಕೆ ಹನುಮಂತ ಶಿಖಿಸುತ । ಜಾಂಬವಪ್ರಮುಖ ಪ್ರಬಲ ಕಪಿ
ತಾಂಬಕರು ಸಂವರಿಸಿಕೊಂಡರು ಸಕಲ ಗಿರಿತರುವ ೧೭

ಎತ್ತಿದದ್ರಿಕುಜೌಘದಲಿ ನೆಲ । ಕತ್ತಲಿಸಲಬ್ಬರಕೆ ದಿಕ್ತಟ
ಕಿತ್ತು ಹಾಱಿತು ಕಾಲ್ದುಳಿಯ ಧೂಳಿ ಧ್ರುವಾಲಯವ
ನೆತ್ತಿಗೇಱಿತು ಹಳಚಿದುದು ಬಲು । ಮಿತ್ತುವನು ಕೆಣಕುವವೊಲುಗ್ರ ನಿ
ಮಿತ್ತ ಮೈದೋಱಿದವು ನಿಖಿಳ ದಿಗಂತರಾಳದಲಿ ೧೮

ಅಸದಳಿಸಿ ಮಾರ್ಮಲೆತು ಮುತ್ತಿದ । ವಿಷಮ ವೀರರನದ್ರಿಕುಜಸಹಿ
ತಸುರ ಗಾಳಿಯಲೂದಿ ಹಾಱಿಸಿದನು ದಿಗಂತರಕೆ
ಬೆಸುಗೆಗಳಚಿದ ಶಾಲ್ಮಲಿಯ ಭೂ । ರಸದವೊಲು ಬಯಲಾಯ್ತು ಬಲ ನಿ
ಪ್ಪಸರದಲಿ ಜೊಬ್ಬಿಡಲು ಬಿರಿದುದು ಗಿರಿ ಸುರೇಶ್ವರನ ೧೯

ವರ ನೆಣದಧಾರೆಯು ತುಪ್ಪ ಬಳಿದುಕೊಂಡಿದೆ" ಎಂದ ವಿಭೀಷಣ. ೧೬. "ಮರಗಳನ್ನು ಆಯುಧವನ್ನಾಗಿ ಬಳಸುವ ಇಲ್ಲಿ ನೆರೆದ ವಾನರರು ಯುದ್ಧದಲ್ಲಿ ಕಾದಿ ಗೆಲ್ಲಲರಿಯರು. ನಿಮ್ಮ ಆಯುಧವು ಅವನನ್ನು ಹಿಡಿಯಲಾರದು. ನೀವೇ ಆದರೆ ಅದೇನಾಗುವುದೆಂದು ತಿಳಿಯೆ. ಇವನು ಕೆರಳಿದರೆ ಭೂಮಿ ಆಕಾಶದವರನ್ನು ಊದಿ ಎಸೆದುಬಿಡುವನು. ಈ ಮಾತು ಸುಳ್ಳಾದರೆ ದೇವರ ಪಾದದಾಣೆ" ಎಂದ ವಿಭೀಷಣ. ೧೭. ವಿಭೀಷಣನು ಹೀಗೆ ಹೇಳುತ್ತಿರುವಷ್ಟರಲ್ಲಿ ವಾನರಪತಿ ಸುಗ್ರೀವನು ಲಯಕಾಲದ ಈಶ್ವರನಂತೆ ಘುಡುಘುಡಿಸುತ್ತ ರಾಕ್ಷಸನನ್ನು ಎದುರಿಸಿ ನಿಂತನು. ಹನುಮಂತ, ಅಗ್ನಿಕುಮಾರ ನೀಲ, ಜಾಂಬವ ಮೊದಲಾದ ಮುಖ್ಯನಾಯಕರು ಅವನ ಬೆಂಬಲಕ್ಕೆ ಬಂದು ಕೆರಳಿ ಸಮಸ್ತ ಬೆಟ್ಟಮರಗಳನ್ನು ಸಿದ್ಧಪಡಿಸಿಕೊಂಡರು. ೧೮. ವಾನರರು ಎತ್ತಿಹಿಡಿದ ಮರಗಳ ಸಮೂಹದಿಂದ ನೆಲದಮೇಲೆ ಕತ್ತಲು ಆವರಿಸಿತು, ವಾನರರ ಅಬ್ಬರಕ್ಕೆ ದಿಕ್ತಟ ಕಿತ್ತುಹಾರಿತು, ವಾನರಭಟರ ಹೆಜ್ಜೆಯ ತುಳಿತದಿಂದ ಎದ್ದ ಧೂಳು ಧ್ರುವಲೋಕದ ನೆತ್ತಿಗೆ ಹಬ್ಬಿತು. ಭಾರಿ ಮೃತ್ಯುವನ್ನು ಕೆಣಕಿದಂತೆ ವಾನರಸೈನ್ಯವು ರಾಕ್ಷಸರ ಮೇಲೆ ಬಿದ್ದಿತು. ಸಮಸ್ತ ದಿಕ್ಕುಗಳಲ್ಲಿ ಭಯಂಕರ ಶಕುನಗಳು ಕಾಣಿಸಿಕೊಂಡವು. ೧೯. ಜೋರಾಗಿ ಪ್ರತಿಭಟಿಸಿ ಮುತ್ತಿದ ಅಸಮಾನ ಶೂರರನ್ನು ಬೆಟ್ಟಮರಗಳ ಸಮೇತ ಕುಂಭಕರ್ಣನು ಉಸುರಿನ ಗಾಳಿ ಊದಿ ದಿಕ್ಕುದಿಕ್ಕಿಗೆ ಹಾರಿಸಿದನು. ಬೇರುಸಹಿತ ಬಿದ್ದ ಬೂರುಗದ ಮರದ ಭೂರಸದಂತೆ(?) ವಾನರಸೈನ್ಯವು ಬರಿದಾಯಿತು,

ಅರಲಬ್ಬುದ ಕಪಿಭಟಾವಳಿ । ತೀರುತಿರ್ದುದಜಾಂಡ ಖರ್ಪರ
ಪೂರಣಸುತಿರ್ದುದು ಧರಾತಳವತಳಪರಿಯಂತ
ದಾರಿಗೊಡುತಿರ್ದುದು ಮಹೋದಧಿ । ಮೇರೆಗಳ ಮೀರಿದುದು ರಕ್ಕಸ
ನಾರುಭಟೆಗೀ ಕದನ ಕಡುಹುಗಳೆಂತುಟೋಯೆಂದ ೨೦

ಹೊಕ್ಕ ಮೈಯಲಿ ಕೋಟಿಸಂಖ್ಯೆಯ । ನಿಕ್ಕಿದನು ನಾಲಗೆಯ ನಿಗುರಲಿ
ನೆಕ್ಕಿದನು ಶತಕೋಟಿ ಸಂಖ್ಯೆಯನೊರಸಿ ಕೈಗಳಲಿ
ಮುಕ್ಕಿದನು ನಿರ್ಬುದ ಮಹಾರ್ಬುದ । ಲೆಕ್ಕದತಿಬಲ ವಾನರರ ಬಿ
ದ್ದಿಕ್ಕಿದನ್ನೊಲಾಯ್ತುಮಮ ವಿಲಯದ ಮೃತ್ಯುದೇವತೆಗೆ ೨೧

ಗಜನ ಮೋಹರ ಮುರಿದುದಂಭೋ । ಜಜನಸುತನೊಡ್ಡೊಡೆದುದನಿಲಾ
ತ್ಮಜನ ಬಲ ನುಗ್ಗಾಯ್ತು ನೆಲಗತವಾಯ್ತು ವಾಲಿಜನ
ನಿಜಪತಾಕಿನಿ ಪವನಮಿತ್ರಾ । ತ್ಮಜನ ಪಡೆ ಪಡಲಿಟ್ಟುದುಳಿದವ
ರಜಿಗಿಜಿಯ ರಣನಾಟಕವ ಬಣ್ಣಿಸುವಡರಿದೆಂದ ೨೨

ಜವನ ಕೋಲೆಗೆಲಸವೊ ಮಹಾಭೈ । ರವನ ಕಾಲಾಟವೊ ಕಪರ್ದಿಯ
ಕವತೆಯೋ ಕಲಿಕುಂಭಕರ್ಣನ ಸಮರಸಂಭ್ರಮವೊ
ದಿವಿಜಪುರಿ ತುಂಬಿತು ಸರೋರುಹ । ಭವನ ಪುರಿ ಹೊಜಕೇರಿಗಟ್ಟಿತು
ಜವನನಗರದ ದಾರಿ ಕೆತ್ತುದು ಹೇಳಲೇನೆಂದ ೨೩

ಕುಂಭಕರ್ಣನು ಪ್ರಚಂಡವಾಗಿ ಬೊಬ್ಬೆಹಾಕಲು ಮೇರುಪರ್ವತವು ಬಿರಿಯಿತು. ೨೦. ಕುಂಭಕರ್ಣನು ಗರ್ಜಿಸಲು ಹತ್ತುಕೋಟಿ ಕಪಿವೀರರು ನಾಶವಾಗುತ್ತಿದ್ದರು, ಬ್ರಹ್ಮಾಂಡದ ಕೊಪ್ಪರಿಗೆ ಪಕ್ಕಕ್ಕೆ ಸರಿಯುತ್ತಿತ್ತು, ರಾಕ್ಷಸನ ಆರ್ಭಟಕ್ಕೆ ಭೂಮಂಡಲವು ಪಾತಾಳದವರೆಗೆ ಇಬ್ಭಾಗವಾಗಿ ದಾರಿಮಾಡಿಕೊಡುತ್ತಿತ್ತು, ಮಹಾಸಾಗರ ಮೇರೆ ಮೀರುತ್ತಿತ್ತು ಈ ಕದನದ ತೀವ್ರತೆ ಎಂಥದೋ! ಎಂದು ವಾಲ್ಮೀಕಿಗಳು ವರ್ಣಿಸಿದರು. ೨೧. ಹೋದ ಕಡೆಯಲ್ಲಿ ಕೋಟಿಸಂಖ್ಯೆಯ ಕಪಿಗಳನ್ನು ಬಡಿದನು. ನಿಡುನಾಲಗೆಯಿಂದ ನೂರುಕೋಟಿ ವಾನರರನ್ನು ನೆಕ್ಕಿಹಾಕಿದನು. ನಿರ್ಬುದ ಮಹಾರ್ಬುದ ಸಂಖ್ಯೆಯಲ್ಲಿ ಅತಿಬಲಶಾಲಿ ವಾನರರನ್ನು ಕೈಗಳಿಂದ ಉಜ್ಜಿಹಾಕಿ ಮುಕ್ಕಿತಿಂದನು. ಪ್ರಳಯದ ಮೃತ್ಯುದೇವತೆಗೆ ಔತಣವಿಕ್ಕಿದ ಹಾಗಾಯಿತು.! ೨೨. ಗಜನ ಸೈನ್ಯ ಮುರಿಯಿತು. ಬ್ರಹ್ಮಪುತ್ರ ಜಾಂಬವನ ವ್ಯೂಹವು ಒಡೆಯಿತು. ಹನುಮಂತನ ದಂಡು ಪುಡಿಪುಡಿಯಾಯಿತು. ಅಂಗದನ ಸೈನ್ಯ ನೆಲಹಿಡಿಯಿತು. ಅಗ್ನಿಕುಮಾರ ನೀಲನ ದಳವು ಚೆಲ್ಲಾಪಿಲ್ಲಿಯಾಯಿತು. ಉಳಿದವರು ಅಜಿಗಿಜಿಯಾದ ರಣನಾಟಕವನ್ನು ವರ್ಣಿಸುವುದು ಅಸಾಧ್ಯ ಎಂದು ವಾಲ್ಮೀಕಿಗಳು ನುಡಿದರು. ೨೩. ಯಮನ ಕೊಲೆಗೆಲಸವೋ, ಮಹಾಭೈರವನ ಕಾಲ್ತುಳಿತವೋ! ಈಶ್ವರನ ಸುಲಿಗೆಯೋ, ಕಲಿಕುಂಭಕರ್ಣನ ಕದನೋತ್ಸಾಹವೋ, ದೇವೇಂದ್ರನ ನಗರವು ವೀರಸ್ವರ್ಗ ಪಡೆದ ಭಟರಿಂದ ತುಂಬಿಹೋಯಿತು, ಬ್ರಹ್ಮಲೋಕದ ಪಟ್ಟಣದ ಹೊರಗೆ ಊರು ಕಟ್ಟಿತು, ಯಮನ ಪಟ್ಟಣದ ದಾರಿ ನಡುಗಿತು.

ಸಾಯಲಾ ಸುಗ್ರೀವ ತನ್ನಯ । ದಾಯಿಗನ ಕೊಂದಿತ್ತ ರಾಜ್ಯ
ಶ್ರೀಯ ಬಿಡಯಕೆ ಬಿಡಲಿ ಹರಣವ ರಾಮ ನಿಜಸತಿಯ
ಮಾಯೆಯತಿಶಯ ಪಾಶಬಂಧಕೆ । ಸಾಯಲೆಮಗೇನಿದ್ದುದೆನುತವೆ
ಹಾಯಿತಲ್ಲಿಯದಲ್ಲಿ ಮಿಕ್ಕಿನ ಮರ್ಕಟವ್ರಾತ ೨೪

ಹೆಸರೆನಿಸಿದಗ್ಗದ ಮಹಾಭಟ । ರುಸುರ ಕೈಯಲಿ ಹಿಡಿದು ಹೊಕ್ಕರು
ವಸುಮತೀವಲ್ಲಭನ ಮಱೆಯನು ಮಱೆಯ ಮಾತೇನು
ಶ್ವಸನಸುತ ಸುಗ್ರೀವ ವಿಪಿನಾ । ಶಸರ ಸೇನಾನಾಥ ವಾಲಿಜ
ರಸದಳಿಸಿದರು ನಿಜಪತಿಯ ಸೇವಾಭಿಮಾನದಲಿ ೨೫

ಬಳಿಸಲಿಸಿತಾಯತಿಕೆಯಲಿ ಗಜ । ನಳ ಸುಷೇಣ ಗವಾಕ್ಷ ರುಮ ಶತ
ಬಲಿ ರುಮಣ್ವ ಜ್ಯೋತಿಮುಖ ದಧಿಮುಖಭಟಾದಿಗಳು
ಕಲುಮರದ ಕೋಳಾಹಳದ ಕೈ । ಚಳಕಗಾಱರು ಕವಿದು ಹಳಚಿದ
ರಿಳೆ ಬಳುಕೆ ಕಲಿ ಕುಂಭಕರ್ಣ ನಿಶಾಚರೇಶ್ವರನ ೨೬

ಸಿಲುಕಿದವು ರಕ್ಕಸನ ರೋಮಾ । ವಳಿಗಳಲಿ ತರುಶೈಲ ದಾಡೆಯ
ಬಳಿಯ ಬಿದ್ದ ಮಹಾದ್ರಿ ಹುಡಿಗೆದಱಿದವು ದೆಸೆದೆಸೆಗೆ
ಉಳಿಯ ಪರಿಘದಲಣೆವ ಶೈಲಾ । ವಳಿಯಲುದಿಸಿದ ಕಿಚ್ಚು ಗಗನ
ಸ್ಥಳವ ಚುಂಬಿಸುತಿರ್ದುದದುಭುತವಾಯ್ತು ರಣರಭಸ ೨೭

ಅದನ್ನು ಏನೆಂದು ವರ್ಣಿಸಲಿ ಎಂದರು ವಾಲ್ಮೀಕಿಗಳು. ೨೪. 'ಸಾಯಲಿ ಆ ಸುಗ್ರೀವ, ಅವನ ದಾಯಾದಿಯನ್ನು ಸೆಣಸಾಟದಲ್ಲಿ ಕೊಂದು ರಾಜ್ಯಲಕ್ಷ್ಮಿಯನ್ನು ಒಪ್ಪಿಸಿಕೊಟ್ಟ ರಾಮನು ಪ್ರಾಣವನ್ನು ಬಿಡಲಿ; ತನ್ನ ಹೆಂಡತಿಯ ಮಾಯೆಯ ಪಾಶಕ್ಕೆ ಕಟ್ಟುಬಿದ್ದು ಸಾಯಲಿ, ನಮಗೇನು ?' ಎನ್ನುತ್ತ ಕಪಿಗಳ ಸಮೂಹವು ಇದ್ದಲ್ಲಿಂದ ಓಡಿತು. ೨೫. ಹೆಸರಾಂತ ಮಹಾವೀರರು ಪ್ರಾಣವನ್ನು ಕೈಯಲ್ಲಿ ಹಿಡಿದು ಅರಸ ರಾಮನ ಹಿಂದೆ ಅಡಗಿಕೊಂಡರು. ಇದರಲ್ಲಿ ಮುಚ್ಚಿಡುವ ಮಾತೇನು ? ಹನುಮಂತ, ಸುಗ್ರೀವ, ವಾನರಸೇನಾಪತಿ ನೀಲ, ಅಂಗದರು ತಮ್ಮ ಒಡೆಯನಲ್ಲಿಟ್ಟ ಸೇವಾಭಿಮಾನದಿಂದ ಹುರುಪಿನಿಂದ ಬಂದು ಸೇರಿದರು. ೨೬. ಗಜ, ನಳ, ಸುಷೇಣ, ಗವಾಕ್ಷ, ರುಮ, ಶತಬಲಿ, ರುಮಣ್ವ, ಜ್ಯೋತಿಮುಖ, ದಧಿಮುಖ ಮೊದಲಾದ ವೀರರು ಪರಾಕ್ರಮದಿಂದ ಬೆಂಬಲಿಸಿ ಬಂದರು. ಕಲ್ಲುಮರಗಳನ್ನು ಆಯುಧವಾಗಿ ಉಪಯೋಗಿಸುವ ಈ ಚತುರರು ಕುಂಭಕರ್ಣ ರಾಕ್ಷಸನನ್ನು ಸುತ್ತಿ ಮುತ್ತಲು ಭೂಮಿಯು ಬಳುಕಿತು. ೨೭. ವಾನರವೀರರು ಎಸೆದ ಮರಬಂಡೆಗಳು ಕುಂಭಕರ್ಣನ ಕೂದಲುಗಳಲ್ಲಿ ಸಿಕ್ಕಿಹಾಕಿಕೊಂಡವು. ಅವನ ಕೋರೆಹಲ್ಲಿನ ಬಳಿ ಬಿದ್ದ ಮಹಾಪರ್ವತಗಳು ಪುಡಿಪುಡಿಯಾಗಿ ದಿಕ್ಕುದಿಕ್ಕಿಗೆ ಎರಚಿದವು. ತನ್ನ ಕಡೆಗೆ ಬಂದ ಬೆಟ್ಟಗಳನ್ನು ಕುಂಭಕರ್ಣನು ಪರಿಘಾಯುಧದಿಂದ ಚುರುಕಾಗಿ ಹೊಡೆದಾಗ ಹುಟ್ಟಿದ ಬೆಂಕಿ ಆಕಾಶವನ್ನು ಮುಟ್ಟುತ್ತಿತ್ತು. ಹೀಗೆ ಯುದ್ಧದ ರಭಸವು ಅದ್ಭುತ

ಸಿಡಿಲು ಹೊಡೆದಡೆ ಸಿಗುಱುದೋಱದ । ಕಡುಹಿನಗ್ಗದ ಶೈಲ ನುಗ್ಗಿಯು
ದಡಿಗೆ ದಳ್ಳಿಸುವುದೆ ವಿವೇಕವಿಹೀನರೈಯೆನುತ
ಕೊಡಹಿದನು ಪರಿಘದಲಿ ಗದೆಯಲಿ । ಖಡುಗದಲಿ ಕವಿವಣಲ ಸಂಬಳ
ಕೊಡೆಯರಾದರ ಕಾಱಿಸಿದನರುಣಾಂಬುವಾಹಿನಿಯ ೨೮

ಮತ್ತೆ ಮುಱಿದುದು ಸೇನೆ ರವಿ ತಲೆ । ಯೆತ್ತೆ ಮುಱಿವ ತಮೌಘದಂತಿರ
ಲೊತ್ತಬರಿಸಿದನಸುರನಱಿಸುತ ರಾಘವೇಶ್ವರನ
ಉತ್ತಮನಲಾ ಬಂಧುಕೃತ್ಯದ । ಹತ್ತುಗೆಯಲಿನಸೂನು ತಱುಬಿದ
ನಿತ್ತ ತಿರುಗೆಲೆ ಖೂಳ ಖಳಯೆನುತುಗ್ರಕೋಪದಲಿ ೨೯

ಅಳುಕದಿರಿರೋ ಸ್ವರ್ಗವಿಬ್ಬೆರ । ಳಳತೆಗಿದೆ ಕೈಸೋಂಕಿಗಿವೆ ಸುರ
ಲಲನೆಯರ ಕಡುಕಠಿಣ ಪೀನಪಯೋಧರಾಳಿಗಳು
ಬಳಿಯಲಿವೆ ಸುರಕುಜ ಸುಧಾರಸ । ಕಲಶವೈಹಿಕದಿಂದ ಪರವತಿ
ಸುಲಭ ಸಾವಿಗೆ ಸೆಡೆದರಿಹಪರವಿಲ್ಲ ನಿಮಗೆಂದ ೩೦

ಎಂಬ ಜಾಂಬವ ವಚನಕೊಡನೊಡ । ನಿಂಬುಗೊಂಡುದು ಸೇನೆ ವಿಜಯನಿ
ತಂಬಿನಿಯ ನಿಳಯವನುಭಯ ಭಾರಣೆಯ ಬಿಡೆ ಬಿಸುಟು
ಅಂಬುನಿಧಿ ಲಳಿಮಸಗಿ ಲಯದೊಳ । ಗಂಬರವನಡರ್ವಂತೆ ಕಪಿ ನಿಕು
ರುಂಬ ಹಳಚಿತು ಮತ್ತೆ ತರುಗಿರಿಗಳಲಿ ರಕ್ಕಸನ ೩೧

ವಾಯಿತು. ೨೮. "ಸಿಡಿಲು ಹೊಡೆದರೆ ಚಕ್ಕೆಯೇಳದ ಗಟ್ಟಿಯಾದ ಬೆಟ್ಟವು ನುಗ್ಗೆಯು ಮರದ ದೊಣ್ಣೆಯ ಏಟಿಗೆ ಹತ್ತಿಕೊಳ್ಳುವುದೆ ? ನೀವು ವಿವೇಕಹೀನರು" ಎನ್ನುತ್ತ ಕುಂಭಕರ್ಣನು ಪರಿಘಾಯುಧ, ಗದೆ, ಖಡ್ಗಗಳಿಂದ ವಾನರರನ್ನು ಕೊಡವಿಬಿಟ್ಟನು ; ದವಡೆಯಲ್ಲಿ ಹುದುಗಿಸಿಕೊಳ್ಳುವ ಬುತ್ತಿಗೆ ಪಾಲುದಾರರಾದ ವಾನರರ ರಕ್ತಪ್ರವಾಹವನ್ನು ಹರಿಸಿದನು. ೨೯. ಸೂರ್ಯನು ಎದ್ದು ಬರಲು ಓಡಿಹೋಗುವ ಕತ್ತಲೆಯ ಮೊತ್ತದಂತೆ ವಾನರಸೈನ್ಯವು ಚದುರಿಹೋಯಿತು. ಬಳಿಕ ಕುಂಭಕರ್ಣನು ರಾಘವೇಶ್ವರನನ್ನು ಹುಡುಕಿಕೊಂಡು ವೇಗವಾಗಿ ಬಂದನು. ಸೂರ್ಯಸುತ ಸುಗ್ರೀವನು ಮಿತ್ರಕಾರ್ಯದ ಸಂಬಂಧದಲ್ಲಿ ಶ್ರೇಷ್ಠನಲ್ಲವೇ. 'ಇತ್ತಕಡೆ ತಿರುಗೋ, ದುಷ್ಟರಾಕ್ಷಸ !' ಎಂದು ಉಗ್ರಕೋಪದಿಂದ ಕುಂಭಕರ್ಣನನ್ನು ಅಡ್ಡಹಾಕಿದನು. ೩೦. "ಅಂಜಬೇಡಿರೋ. ಸ್ವರ್ಗವು ಎರಡೇ ಬೆರಳುಗಳ ಅಳತೆಯಲ್ಲಿ ಸಿಕ್ಕುತ್ತದೆ. ದೇವಲೋಕದ ತರುಣಿಯರ ಬಿಗಿಯಾದ ಉಬ್ಬಿದ ಸ್ತನಗಳು ಕೈಗೆ ಎಟುಕುವವು. ಪಕ್ಕದಲ್ಲೇ ಕಲ್ಪವೃಕ್ಷ, ಅಮೃತದ ಪಾತ್ರೆಗಳಿವೆ. ಇಹಲೋಕಕ್ಕಿಂತ ಪರಲೋಕ ಬಹುಸುಲಭವಾಗಿ ದೊರಕುತ್ತದೆ. ಸಾವಿಗೆ ಹಿಂಜರಿದರೆ ನಿಮಗೆ ಇಹವೂ ಇಲ್ಲ, ಪರವೂ ಇಲ್ಲ." ೩೧. ಎಂದು ನುಡಿದ ಜಾಂಬವನ ಮಾತನ್ನು ವಾನರಸೈನ್ಯವು ಇಹಪರಗಳೆರಡರ ಹೊರೆಯನ್ನು ಬಿಟ್ಟು ವಿಜಯಲಕ್ಷ್ಮಿಯ ನಿವಾಸವನ್ನು ತ್ಯಜಿಸಿ ಒಪ್ಪಿಕೊಂಡಿತು. ಪ್ರಳಯದಲ್ಲಿ ಸಮುದ್ರವು ಅತಿರಭಸದಿಂದ ಆಕಾಶಕ್ಕೆ ನೆಗೆಯುವಂತೆ ಕಪಿಸೈನ್ಯಸಮೂಹವು ಪುನಃ

ಬೇಱೆ ಮಾತೇನದ್ರಿ ಗುಂಗುರಿ । ನೂಱಿಕಿಗೆ ಮೈಯಳುಕುವುದೆ ಮಂ
ಜೇಱಿದರೆ ನಡುಗುವುದೆ ನಡುವಗಲೇಱಿದಿನಬಿಂಬ
ತೂಱಿದನು ತೂಳಿದನು ತುಳಿದನು । ಬೀಱಿದನು ಬಿಸುಟನು ಸುರಾವನಿ
ಗೇಱಿಸಿದನತಿಬಲ ವನೌಕಸರಾಜಸೈನಿಕವ ೩೨

ಅಳವಿಗಳುಕದೆ ಕವಿವ ಕಪಿಗಳ । ಕಳವಲಿಯ ಮಾಡಿದನು ಮೀಱಿದು
ಹಳಚಿ ಹೊಂಚುವ ಹೊಂತಕಾಱ ವನೌಕಸಾಧಿಪರ
ಬಳಿದು ಬಾಯೊಳಗಡಸಿದನು ಕಲು । ಮಳೆಯ ಕೋಲಾಹಲದ ಕಪಿಗಳ
ತಳಪಟವ ಮಾಡಿದನು ಮದದಲಿ ಕುಂಭಕರ್ಣಖಳ ೩೩

ಮೊಗೆಮೊಗೆದು ಮುಕ್ಕಿದ ಸಗಾಢದ । ವಿಗಡ ವಾನರಭಟರ ಕಿವಿಮೂ
ಗುಗಳ ರಂಧ್ರಂಗಳಲಿ ಗುದದ್ವಾರದಲಿ ವದನದಲಿ
ಚಿಗಿಚಿಗಿದು ಹೊಱವಡುತಲಿರ್ದುದು । ಮೊಗೆದೊಗುವ ರಾಟಾಳದುದಕದ
ಬಗೆಯವೊಲು ಬಣ್ಣಿಸುವಡೇನದ್ಭುತವೊ ರಣರಭಸ ೩೪

ಅಡಸಿ ಖಳ ನುಂಗಿದ ಭಟಾಳಿಗೆ । ಕಡೆಯದಾವುದು ರಕ್ಕಸನ ಹ
ಲ್ಲಡಿಯಲಜಿಗಿಜಿಯಾದ ಕಪಿಗಳಿಗಾವುದೋ ಸೀಮೆ
ಮಡವು ಮೊಳಕಾಲಂಘ್ರಿ ಮೊಳಕೈ । ಮುಡುಹು ಮುಷ್ಟಿಪ್ರಹರಣದಲಡ
ಗೆಡೆದ ವಾನರಗಣದ ಗಣನೆಯನಱಿವರಾರೆಂದ ೩೫

ಮರಬೆಟ್ಟಗಳಿಂದ ಕುಂಭಕರ್ಣನ ಮೇಲೆರಗಿತು. ೩೨. ಗುಂಗುರು ಕಚ್ಚಿದರೆ ಪರ್ವತವು ಹೆದರುವುದೆ ? ಬೇರೆ ಮಾತೇನು, ಮಂಜು ಮುಸುಕಿದರೆ ಮಟಮಟ ಮಧ್ಯಾಹ್ನದ ಸೂರ್ಯನು ಹೆದರುವನೆ ? ಬಲಶಾಲಿಗಳಾದ ವಾನರಸೈನಿಕರನ್ನು ಕುಂಭಕರ್ಣನು ತೂರಿದ, ಓಡಿಸಿದ, ತುಳಿದುಹಾಕಿದ, ಎಸೆದ, ಬಿಸಾಡಿದ, ಸ್ವರ್ಗಕ್ಕೇರಿಸಿದ. ೩೩. ಕದನಕ್ಕಂಜದೆ ಮುತ್ತುವ ಕಪಿಗಳನ್ನು ಕುಂಭಕರ್ಣನು ರಣಬಲಿಕೊಟ್ಟನು. ಮೀರಿ ಬಂದು ಮೇಲೆಬಿದ್ದು ಹೊಂಚುಹಾಕುವ ಬುದ್ಧಿವಂತ ವಾನರನಾಯಕರನ್ನು ಬಳಿದು ಬಾಯೊಳಗಿಕ್ಕಿಕೊಂಡನು, ಕಲ್ಲುಗಳ ಮಳೆಗರೆದು ಗದ್ದಲಮಾಡುವ ಕಪಿಗಳನ್ನು ಕುಂಭಕರ್ಣರಾಕ್ಷಸನು ನೆಲಸಮಮಾಡಿದನು. ೩೪. ಬಾಚಿ ಬಾಚಿ ಮುಕ್ಕಿದ ಮಹಾ ಬಲಶಾಲಿ ವಾನರಯೋಧರ ಕಿವಿಮೂಗುಗಳಿಂದ, ಮಲದ್ವಾರದಿಂದ, ಬಾಯಿಂದ ರಕ್ತವು ಬಾವಿಯಿಂದ ರಾಟೆಯ ಮೂಲಕ ನೀರನ್ನು ಸೇದುವಂತೆ ಚಿಮ್ಮುತ್ತಿತ್ತು. ಕುಂಭ ಕರ್ಣನ ರಭಸದ ಯುದ್ಧವನ್ನು ವರ್ಣಿಸಲು ಅದೇನದ್ಭುತವೋ ! ೩೫. ಬಾಯಿಗೆ ತುರುಕಿಕೊಂಡು ರಾಕ್ಷಸನು ನುಂಗಿದ ವಾನರಯೋಧರಿಗೆ ಕೊನೆಯೆಲ್ಲಿ ? ಕುಂಭಕರ್ಣನ ಹಲ್ಲಡಿಯಲ್ಲಿ ಸಿಕ್ಕಿಕೊಂಡು ಅಜಿಬಿಜಿಯಾದ ಕಪಿಗಳಿಗೆ ಮೇರೆ ಯಾವುದೋ ? ಹಿಮ್ಮಡಿ, ಮೊಳಕಾಲು, ಪಾದ, ಮೊಳಕೈ, ಭುಜ, ಮುಷ್ಟಿ ಮೊದಲಾದುವುಗಳ ಏಟಿಗೆ ಸಿಕ್ಕಿ ಉರುಳಿದ ವಾನರರ ಲೆಕ್ಕವನ್ನು ತಿಳಿಯುವವರಾರು ? ಎಂದು ವಾಲ್ಮೀಕಿಗಳು

ಚೆಲ್ಲಿದನು ಮೊಗೆಮೊಗೆದು ಚೌಪಟ । ಮಲ್ಲರನು ಮಹದಂಬುಧಿಗೆ ಏಗೆ
ಬಲ್ಲಿದರ ಬಿಸುಟನು ಬಲಾಂತಕನಗರದುಪವನಕೆ
ಘಲ್ಲಿಸಿದನುಬ್ಬಿಱಿದು ತಬ್ಬಿದ । ತೆಲ್ಲಟೆಯು ತವಕಿಗರ ತೋಟಿಯು
ತಲ್ಲಣಿಗನಜಿಯುಟ್ಟಿ ಸದೆದನು ಸಕಲ ವಾನರರ ೩೬

ಹೇಳಲೇನದ ಕುಱಿಯಹಿಂದಿನ । ತೋಳನೋ ಕರಿಘಟೆಯ ಕದನಕ
ರಾಳಸಿಂಹವೊ ಶಿಖರಿಗಳ ಹಿಂಡುಗಳ ಹೆಬ್ಬುಲಿಯೊ
ಮೇಳವಿಸಿದಹಿಕುಲದ ಕೊಲೆಗು । ಬ್ಬಾಳಿಸಿದ ಖಗಪತಿಯೊ ತಾನೆನೆ
ತೂಳಿದನು ರಕ್ಕಸನು ಮರ್ಕಟರಾಜಸೈನಿಕವ ೩೭

ಅಱಸಿದನು ಮಾರ್ಮಲೆವ ಕಪಿಗಳ । ನುಱುಬಿ ಮನುಕುಲಸಾರ್ವಭೌಮನ
ನಱಸಿದನು ಹೊಕ್ಕೊಕ್ಕಲಿಕ್ಕುವ ಭಟರನುಜ ಮುಱಿದು
ಎಱೆಯುಳನು ಹೋಗಾಡಿ ಬವರದ । ಬಱಯ ಲಂಬಾಸೆಯಲಿ ಕಪಿಗಳ
ತಱುಬಿ ತೋಟಿಗೆ ತವಕಿಸಿದ ನರನಾಥನಾರೆನುತ ೩೮

ಮುಟ್ಟವಿಸಿದನು ರಾಮನನು ಜಗ । ಜಟ್ಟಿ ರಕ್ಕಸ ರಾಜಕಾರಿಯ
ಕೆಟ್ಟುದಕಟೆಂದಳ್ಳವಾಱುವ ಸುರರ ಕಳಕಳವ
ತೊಟ್ಟನನಿಲಜ ಕೇಳಿ ಕೋಪದ । ದಿಟ್ಟಿಯಲಿ ಕಿಡಿಗೆದಱ ಹರಿತಂ
ದಿಟ್ಟಣಿಸಿ ಬೊಬ್ಬಿಱದು ತಿವಿದನು ತಿಣುಕಲಸುರೇಂದ್ರ ೩೯

ಲವಕುಶರಿಗೆ ವರ್ಣಿಸಿ ಹೇಳಿದರು. ೩೬. ಜಗಜಟ್ಟಿ ವಾನರರನ್ನು ಗೋರಿ ಕೊಂಡು ಸಾಗರಕ್ಕೆ ಚೆಲ್ಲಿದನು. ಬಲು ಬಲಶಾಲಿಗಳನ್ನು ದೇವೇಂದ್ರನ ನಗರದ ಉದ್ಯಾನವನಕ್ಕೆ ಎಸೆದನು. ಉಡುಗೊರೆಗಳನ್ನು ಮೈಮೇಲೆ ಧರಿಸಿದ ಉತ್ಸಾಹಿ ಗಳನ್ನು ಆನಂದದಿಂದ ತಿವಿದು ಕೊಂದನು. ಹೀಗೆ ಯುದ್ಧಭೀತಿ ಹುಟ್ಟಿಸುವ ಕುಂಭಕರ್ಣನು ಸಮಸ್ತ ವಾನರರನ್ನೂ ಸದೆಬಡಿದನು. ೩೭. ಅದನ್ನು ಏನು ಹೇಳಲಿ, ಕುರಿಯ ಹಿಂದಿನ ತೋಳನೊ, ಆನೆಗಳ ಸೈನ್ಯದೊಡನೆ ಹೋರಾಡುವ ಭಯಂಕರ ಸಿಂಹವೋ, ಜಿಂಕೆಯ ಹಿಂಡುಗಳ ಹೆಬ್ಬುಲಿಯೋ, ಒಟ್ಟಾಗಿ ಬಂದ ಸರ್ಪಗಳ ಸಮೂಹವನ್ನು ಕೊಲ್ಲಲು ದರ್ಪದಿಂದ ಮೇಲೆ ಬಿದ್ದ ಗರುಡನೋ ಎನ್ನುವಂತೆ ಕುಂಭಕರ್ಣನು ವಾನರರಾಜನ ಸೈನ್ಯವನ್ನು ಹಿಮ್ಮೆಟ್ಟಿಸಿದನು. ೩೮. ಪ್ರತಿಭಟಿಸಿದ ಕಪಿಗಳನ್ನು ಊದಿ ಹಾರಿಸಿ ರಾಮನನ್ನು ಹುಡುಕಿದನು. ಮೇಲೆಬಿದ್ದು ಬಡಿಯುವ ವಾನರಭಟರನ್ನು ಕತ್ತರಿಸಿ ಮನುಕುಲಚಕ್ರವರ್ತಿ ರಾಮನನ್ನು ಹುಡುಕಿ ದನು. ಹೆಂಡತಿಯನ್ನು ಕಳೆದುಕೊಂಡು ಯುದ್ಧವನ್ನು ವ್ಯರ್ಥವಾಗಿ ಬಯಸಿ ಕಪಿ ಗಳನ್ನು ಒಡ್ಡಿ ಯುದ್ಧಕ್ಕೆ ಕಾತುರನಾದ ಮಾನವರರಸನು ಯಾರು ? ಎಂದು ಕೇಳುತ್ತ ಕುಂಭಕರ್ಣನು ಬಂದನು. ೩೯. ಜಗಜಟ್ಟಿರಾಕ್ಷಸ ಕುಂಭಕರ್ಣನು ರಾಮನನ್ನು ಸಮೀಪಿಸಿದನು. "ಅಯ್ಯೊ ! ರಾಜಕಾರ್ಯ ಕೆಟ್ಟಿತು !" ಎಂದು ಪಕ್ಕೆಗಳನ್ನು ಹೊಡೆದು ಕೊಳ್ಳುವ ದೇವತೆಗಳ ಗಲಭೆಯನ್ನು ಕೇಳಿ ತಕ್ಷಣ ಹನುಮಂತನು ಕೋಪದ ಕಣ್ಣು

ಪ್ರಳಯಕಾಲದ ಕುಲಿಶಹತಿಯಲಿ । ತಲೆಗೊಡಹುವಮೇರುವದ್ರಿಯವೊಲೊಲೆ
ದೊಲೆದು ಕಣ್ಣಿಗೆ ಕವಿವ ಕತ್ತಲೆಯಿಂದ ಕಳವಳಿಸಿ
ಚಲಿಸಿ ಚಟುಳಕ್ರಮನು ವಿಕ್ರಮ । ತಿಲಕನನು ನಿಜಶೂಲದಗ್ರದ
ಲೊಲೆದು ತಿವಿದನು ಹೊಗಳೆ ಬಳಿಯ ಸಮಸ್ತ ಭೂತಗಣ ೪೦

ಅಣೆದು ಶೂಲವನನಿಲಸುತ ಸುರ । ಗಣವು ಮಝಭಾಪೆನಲು ಖಳ ದೆಂ
ಡಣೆಸಲೆಱಗಿದನುಱುಗೆ ಗೋಣುಱಿ ರಕುತವದನದಲಿ
ಗಣಿಸುವನೆ ಕಪಿಕರಹತಿಯನಾ । ಕ್ಷಣ ನಿಶಾಚರರಾಯನುಱಿ ದೆಂ
ಡಣೆಸಲಪ್ಪಳಿಸಿದನು ಪರಿಘದಲಂಜನಾಸುತನ ೪೧

ಎದ್ದು ಕಡುಗೋಪದಲಿ ಕೈಗಳ । ನುದ್ದಿ ಕುಂಭಶ್ರವಣನಳ್ಳೆಯ
ಗುದ್ದಿದನು ಘುಮ್ಮೆನಲು ನಭ ನಲಿಯಲು ಸುರವ್ರಾತ
ಅದ್ದಿ ತುಪ್ಪದಲುಂಡ ಕೂಳಿನ । ಮುದ್ದೆಗಳು ಹೊಱಹೊಯ್ದು ನೆಲದಲಿ
ಬಿದ್ದವೈ ಬಾಯಿಂದ ಬರ್ಹಿರ್ಮುಖಕುಲಾಂತಕನ ೪೨

ಮುರಿದು ನೋಡಿದನಹುದೊ ಕಪಿಗಳ । ನೆರವಿಗಗ್ಗಳನಹೆ ಸುರೇಂದ್ರನ
ಹಿರಿಯ ಮಗಗೆಣೆಯಹೆ ಪರಾಕ್ರಮಪೌರುಷಾಂಗದಲಿ
ತಿರುಗಿ ನೀನಿನ್ನೊಮ್ಮೆ ನಮ್ಮಯ । ಧುರಕೆ ನಿಂತರೆ ವೀರನಹೆಯೆಂ
ದರಿಭಯಂಕರ ಭಟನ ತಿವಿದನು ಬುಡದಲಾಯುಧದ ೪೩

ಗಳಿಂದ ಕಿಡಿಗೆದರುತ್ತ ಓಡಿಬಂದು ಬೊಬ್ಬಿರಿದು ಆಕ್ರಮಿಸಿ ತಿವಿಯಲು ಕುಂಭಕರ್ಣನು ಮುಕ್ಕುರುಕಿದನು. ೪೦. ಪ್ರಳಯಕಾಲದ ಸಿಡಿಲಿನ ಹೊಡೆತಕ್ಕೆ ತಲೆ ಕೊಡುಹುವ ಮೇರುಪರ್ವತದಂತೆ ಕುಂಭಕರ್ಣನು ಮೈಯನ್ನು ಒಲೆದನು. ಕಣ್ಣು ಕತ್ತಲೆ ಓಡಿಯಲು ಕಳವಳಗೊಂಡನು. ಬಳಿಕ ಮುಂದೆ ನಡೆದು ವೇಗಶಾಲಿ ಕುಂಭಕರ್ಣನು ಪರಾಕ್ರಮ ಶ್ರೇಷ್ಠ ಹನುಮಂತನನ್ನು ಶೂಲದ ತುದಿಯಿಂದ ತಿವಿಯಲು ಹತ್ತಿರದಲ್ಲಿದ್ದ ಸಕಲ ಭೂತಗಳೂ ಕೊಂಡಾಡಿದವು. ೪೧. ಮಾರುತಿಯು ಶೂಲವನ್ನು ಅಪ್ಪಳಿಸಿ ದೇವತೆಗಳು ಮಝ ಭಾಪು ಎನ್ನುತ್ತಿರುವಂತೆ ರಾಕ್ಷಸನು ತತ್ತರಿಸುವಂತೆ ಮೇಲೆರಗಿ ಹೊಡೆದನು. ಆಗ ಕುಂಭಕರ್ಣನ ಬಾಯಿ ರಕ್ತದಿಂದ ತುಂಬಿತು, ಕತ್ತು ವಾಲಿತು. ರಾಕ್ಷಸನಾಯಕನು ಕಪಿಯ ಕೈಯೇಟನ್ನು ಲಕ್ಷಿಸುವನೆ ? ಆಕ್ಷಣ ಆಂಜನೇಯನು ತತ್ತರಿಸುವಂತೆ ಪರಿಘಾಯುಧದಿಂದ ಬಡಿದನು. ೪೨. ಹನುಮಂತನು ಎದ್ದು ಭಾರಿ ಕೋಪದಿಂದ ಕೈಗಳನ್ನು ಉಜ್ಜಿ ಕುಂಭಕರ್ಣನ ಅಳ್ಳೆಯನ್ನು ಗುದ್ದಿದನು, ಆಕಾಶ ಘುಮ್ಮೆಂದು ಪ್ರತಿಧ್ವನಿಸಿತು ಮತ್ತು ದೇವತೆಗಳು ಹರ್ಷಿಸಿದರು. ತುಪ್ಪದಲ್ಲಿ ಅದ್ದಿ ಊಟಮಾಡಿದ ಅನ್ನದ ಮುದ್ದೆಗಳು ಕುಂಭಕರ್ಣರಾಕ್ಷಸನ ಬಾಯಿಂದ ಹೊರಕ್ಕೆ ಬಂದು ನೆಲದ ಮೇಲೆ ಬಿದ್ದವು. ೪೩. ಕುಂಭಕರ್ಣನು ಮೈತಿರುಗಿಸಿ ನೋಡಿ, "ನಿಜವೋ, ಕಪಿಗಳ ಗುಂಪಿನಲ್ಲಿ ಶ್ರೇಷ್ಠ ನೀನು. ಪರಾಕ್ರಮ ಪೌರುಷಗಳಲ್ಲಿ ದೇವೇಂದ್ರನ ಹಿರಿಯ ಮಗನಿಗೆ ಸಮಾನನಾಗಿದ್ದೀಯೆ. ಇನ್ನೊಂದು ಸಲ ನಮ್ಮೆದುರಿಗೆ ಯುದ್ಧಕ್ಕೆ ನಿಂತದ್ದೇ ಆದರೆ ನೀನು ವೀರನೇ ಸರಿ" ಎಂದು ಹೇಳುತ್ತ ಆಯುಧದ ಬುಡದಿಂದ ಶತ್ರುಭಯಂಕರ

ಹಾಱಿಬಿದ್ದನು ಹನುಮ ರಣಕೆ | ನೂಱು ಕೋಲಳತೆಯಲಿ ಕೈಯೊಡ
ನೇಱಿ ತಿವಿದನು ತೀವ್ರದಲಿ ತಾರೇಯನುಬ್ಬಿಱಿದು
ಮೀಱಿ ಘಾಯದಲುಬ್ಬಿಱಿದು ಕೈ | ಯಾಱಿ ಕೈಯೊಡನೆದ್ದು ಬವರವ
ಸೂಱೆಗೊಂಡವನೆಡೆಗೆ ಖಳ ತಿವಿದುಬ್ಬಿ ಬೊಬ್ಬಿಱಿದ ೪೪

ಫಡಫಡೆನುತಾರ್ಭಟಿಸಿ ಭುಜವನು | ಹೊಡೆದು ಹೊದಱೆದ್ದಮರುಷದಲು
ಗ್ಘಡದ ಮುಷ್ಟಿಯಲೆಱಗಿದನು ಕೈಯೊಡನೆ ಕಲಿನೀಲ
ಬುಡುಬುಡಿಸಿ ಬಿಸಿರಕುತ ಮೂಗಿಂ | ದೊಡೆದು ಹಾಯ್ದುದು ಘಾಯವದ ಕೈ
ವಿಡಿಯದವರಿಬ್ಬರ ಸಮೀಪಕೆ ಕಳುಹಿದನು ಕಪಿಯ ೪೫

ಕೆಣಕಿ ನೋಡುವೆನೆನುತ ಜಾಂಬವ | ರಣಲ ಹಲುಗಳ ಮಸೆದು ಹೂಂಕೃತಿ
ರಣಿತದಲಿ ರಣವೀರನುರವನು ತಿವಿದು ಕೆಲ ಸಿಡಿಯೆ
ತೃಣಕೆ ಲೆಕ್ಕಿಸದಸುರನವನನು | ಸೊಣಲು ಮುಱಿಯಲು ತಿವಿದನಾಯುಧ
ದಣಸಿನಲಿ ಸರಿಯಾದುದವರಾಹವದ ಸೌರಂಭ ೪೬

ಮೊಗವ ತಿರುಹುತ ಮೆಲ್ಲಮೆಲ್ಲನೆ | ಜಗುಳಿದರು ಜಾಂಬವರು ಮಿಕ್ಕಿನ
ವಿಗಡವೀರ ಸುಷೇಣ ಮೈಂದ ದ್ವಿವಿದ ದಧಿಮುಖರು
ತೆಗೆದುನಿಂದರು ತಾಗಿ ಸೂರ್ಯನ | ಮಗನ ಮೇಲಾಯ್ತಾಜಿ ಬಳಿಕಾ
ಳುಗಳ ದೇವರದೇವನೊದಗಿದನಸಮ ಸಮರದಲಿ ೪೭

ಹನುಮಂತನನ್ನು ತಿವಿದನು. ೪೪. ಹನುಮಂತನು ಯುದ್ಧರಂಗದಿಂದ ಐನೂರು ಕೋಲುದೂರ ಹೋಗಿಬಿದ್ದನು. ತಕ್ಷಣ ಅಂಗದನು ಏರಿಬಂದು ಸಿಂಹನಾದ ಮಾಡಿ ಕುಂಭಕರ್ಣನನ್ನು ತಿವಿದನು. ಕುಂಭಕರ್ಣನು ಏಟನ್ನು ಸಹಿಸಿಕೊಂಡು ಗರ್ಜಿಸುತ್ತ ಕೈಗೂಡಿಸಿ ಒಡನೆ ಎದ್ದುಬಂದು ತಿವಿದು ಈ ಮೊದಲು ಯುದ್ಧವನ್ನು ಸೂರೆಗೊಳ್ಳಲು ಬಂದಿದ್ದವನ ಬಳಿಗೆ ಕಳುಹಿಸಿ ಬೊಬ್ಬಿರಿದನು. ೪೫. ಫಡ ಫಡ ಎಂದು ಆರ್ಭಟಿಸಿ ಭುಜವನ್ನಪ್ಪಳಿಸುತ್ತ ಕಲಿನೀಲನು ಕೋಪಗೊಂಡು ಬಂದು ಬಲವಾಗಿ ಮುಷ್ಟಿಯಿಂದ ಕುಂಭಕರ್ಣನನ್ನು ಹೊಡೆದನು. ಕುಂಭಕರ್ಣನ ಮೂಗಿನಿಂದ ಬುಡಬುಡನೆ ಬಿಸಿರಕ್ತ ಸುರಿಯಿತು. ಆ ಪೆಟ್ಟನ್ನು ಲಕ್ಷಿಸದೆ ಕುಂಭಕರ್ಣನು ನೀಲನನ್ನೂ ಹನುಮಂತ ಅಂಗದರ ಬಳಿಗೆ ಚಿಮ್ಮಿದನು. ೪೬. ಇವನನ್ನು ಕೆಣಕಿ ನೋಡುತ್ತೇನೆ ಎನ್ನುತ್ತ ಜಾಂಬವರು ದವಡೆಹಲ್ಲುಗಳನ್ನು ಮಸೆದು ಹೂಂಕಾರಮಾಡಿ ಗರ್ಜಿಸುತ್ತ ಬಂದು ಕುಂಭಕರ್ಣನ ಎದೆಯನ್ನು ಗುದ್ದಿ ಪಕ್ಕಕ್ಕೆ ಹಾರಿದರು. ಜಾಂಬವರ ಏಟನ್ನು ಹುಲ್ಲಿಗಿಂತ ಕಡಮೆಯಾಗಿ ಕಂಡ ಕುಂಭಕರ್ಣನು ಜಾಂಬವನ ಸೊಣಲು (?) ಮುರಿಯುವಂತೆ ಆಯುಧದ ಬುಡಕ್ಕೆ ಹಾಕಿದ ಲೋಹದ ಕಟ್ಟಿನಿಂದ ತಿವಿದನು. ಅವರಿಬ್ಬರ ಯುದ್ಧದ ಸಂಭ್ರಮವು ಸಮವಾಯಿತು. ೪೭. ಮುಖವನ್ನು ತಿರುಗಿಸಿಕೊಂಡು ಜಾಂಬವರು ಮೆಲ್ಲನೆ ಅಲ್ಲಿಂದ ಜಾರಿಕೊಂಡರು. ಉಳಿದ ವಾನರರ ವೀರರಾದ ಸುಷೇಣ, ಮೈಂದ, ದ್ವಿವಿದ, ದಧಿಮುಖರು ಕುಂಭಕರ್ಣನನ್ನು ಎದುರಿಸಿ ಹಿಂದೆಗೆದರು. ಈಗ ಯುದ್ಧದ ಭಾರವು ಸೂರ್ಯನ ಮಗ ಸುಗ್ರೀವನ

ಬೆಳೆದನವನಂದದಲಿ ಗಿರಿ ಗಿರಿ । ಹಳಚುವಂತಿರೆ ಪರಿಘ ಗಿರಿ ಶರ
ಗಳಲಿ ಹೊಯ್ದಾಡಿದರು ಹೊಗಳೆ ಸುರಾಸುರವ್ರಾತ
ಬಲದೊಳಗ್ಗದ ಬಾಲಿ ಬಾಲಿಯ । ಬಳಿಯ ಬಂದ ಭಟಾಗ್ರಣಿಯಲಾ
ಕಲಹದತಿಶಯದಂಗ ಲೇಸೆಂದೊಲೆದನಾ ರಾಮ ೪೮

ಕೇಳೆಲವೊ ಕಪಿರಾಜನೆಂಬುದ । ಕೇಳಿತಿಲ್ಲವಲಾ ಮಹಾಹವ
ಕೇಳಿಯಲಿ ಕೈಗುಂದಿ ಸೋಲುವ ಭಟನೆ ತಾನೆನುತ
ತೋಳ ನೆಗಹಿನ ಮುಷ್ಟಿಯಲಿ ದಂ । ಭೋಳಿರವದಲಿ ಝಡಿದು ತಿವಿದನು
ಬೀಳೆನುತ ಬೊಬ್ಬಿಱಿದು ಬರ್ಹಿರ್ಮುಖಕುಲಾಂತಕನ ೪೯

ಹಾಱಿಬಿದ್ದನು ನೆಲಕೆ ಖಳ ತಲೆ । ಯೂಱಿ ತಳಕದ್ದಿದುದು ನೆಲನಿ
ನ್ನೂಱುವರೆ ಪುರುಷಪ್ರಮಾಣವನಾ ರಸಾತಳಕೆ
ಬೇಱೆ ಮಾತೇನಣುಗ ಕೇಳ್ ಖತಿ । ಯೇಱಿದಂದಿನ ಕಾಲರುದ್ರನ
ನೂಱುಮಡಿಯೆನೆ ವೀರರಕ್ಕಸರಾಯ ಹಲುಮೊಱೆದ ೫೦

ಏಳುತೆತ್ತಿದನುಗ್ರ ವಿಕೃತ ಕ । ರಾಳಶಕ್ತಿಯನುರಿ ಚಡಾಳಿಸಿ
ತೂಳಿತಂಬರತಳವ ಭುಗುಭುಗುಭುಗು ನಿನಾದದಲಿ
ಮಾಲೆಗಿಡಿಗಳ ಗಡಣದಲಿ ಧೂ । ಮಾಳಿ ನೆನೆದುದು ಸುರವಿಮಾನಗ
ಳೋಳಿ ಮುಱಿದುದು ಸುರಿದುದುದಕವನಭ್ರವಾಹಿನಿಯ ೫೧

ಮೇಲೆ ಬಿತ್ತು. ತರುವಾಯ ದೇವರದೇವ ರಾಮನ ವಿಷಮಯುದ್ಧಕ್ಕೆ ಸಿದ್ಧನಾದನು. ೪೮. ಸುಗ್ರೀವನು ಕುಂಭಕರ್ಣನಿಗೆ ಸಮಸಮವಾಗಿ ಬೆಳೆದನು. ಬೆಟ್ಟ ಬೆಟ್ಟಗಳು ಪರಸ್ಪರ ಒಂದರೊಡನೊಂದು ತಾಗುವಂತೆ ಪರಿಘಾಯುಧ ಬೆಟ್ಟ ಬಾಣಗಳಿಂದ ಸಂಗ್ರೀವ ಕುಂಭಕರ್ಣರು ಹೊಡೆದಾಡಿದರು. 'ಶಕ್ತಿಯಲ್ಲಿ ವಾಲಿ ಹೆಸರಾಂತವನು, ವಾಲಿಯ ವಂಶದ ಮಹಾವೀರನಲ್ಲವೇ ಇವನು, ಇವನ ಕಾಳಗದ ರೀತಿ ಶ್ರೇಷ್ಠ' ಎಂದು ರಾಮನು ತಲೆದೂಗಿದನು. ೪೯ "ಕೇಳೋ, ನಾನು ಕಪಿರಾಜನೆಂಬುದನ್ನು ಕೇಳಿಲ್ಲವೇನೋ? ಭಾರಿ ಕಾಳಗದಾಟದಲ್ಲಿ ಕೈಗುಂದಿ ಸೋಲುವ ವೀರನೇ ನಾನು?" ಎನ್ನುತ್ತ ಸುಗ್ರೀವನು ತೋಳನೆತ್ತಿ 'ಬೀಳು' ಎಂದು ಗರ್ಜಿಸಿ ಸಿಡಿಲಿನ ಶಬ್ದವೋ ಎನ್ನುವಂತೆ ಕುಂಭಕರ್ಣನನ್ನು ಜೋರಾಗಿ ಮುಷ್ಟಿಯಿಂದ ತಿವಿದನು. ೫೦. ಕುಂಭಕರ್ಣನು ತಲೆ ಊರಿ ನೆಲಕ್ಕೆ ಹಾರಿ ಬಿದ್ದನು. ಅವನು ಬಿದ್ದ ರಭಸಕ್ಕೆ ಇನ್ನೂರುವರೆ ಆಳುದ್ದ ಪಾತಾಳಕ್ಕೆ ನೆಲ ಕುಸಿಯಿತು. ಬೇರೇನು ಹೇಳೋಣ, ಮಗು ಲವ ಕೇಳು, ಕೆರಳಿದ ಪ್ರಳಯರುದ್ರನಿಗೆ ನೂರುಮಡಿ ಎನ್ನುವಂತೆ ವೀರರಾಕ್ಷಸ ಕುಂಭಕರ್ಣನು ಕೋಪದಿಂದ ಹಲ್ಲು ಕಚ್ಚಿದನು. ೫೧. ಕುಂಭಕರ್ಣನು ನೆಲದಿಂದ ಮೇಲೆದ್ದು ಉಗ್ರವಾದ ಪ್ರಚಂಡ ಶಕ್ತ್ಯಾಯುಧವನ್ನು ಎತ್ತಿದನು. ಆಯುಧದಿಂದ ಹೊರಟ ಉರಿಯು ಭುಗುಭುಗು ಭುಗಿಲೆಂದು ಶಬ್ದ ಮಾಡುತ್ತ ಆಕಾಶಕ್ಕೆ ನುಗ್ಗಿತು. ಸಾಲು ಸಾಲಾಗಿ ಕಿಡಿಗಳು ಹಾರಿದವು, ಅದರೊಡನೆ ಹೊಗೆಯೆದ್ದಿತು. ಆಕಾಶದಲ್ಲಿದ್ದ ದೇವತೆಗಳ ವಿಮಾನಗಳು ಚದುರಿದವು. ಆಕಾಶ

ಎಲವೊ ಕಪಿ ಕೇಳೀ ಮಹಾಯುಧ । ದಲಗಿಗಳಿಯದೆ ಜೀವದಲಿ ನೀ
ನುಳಿದುಹೋದರೆ ಮೂಗುಹೋದವನೈಸೆ ತಾನೆನುತ
ನಿಲುಕಿ ಲಾಗಿಸುತಿಟ್ಟನಿಟ್ಟಿಯ । ಬಲುಗಿಡಿಯು ಕಟ್ಟೇಱು ಕಿಬ್ಬದಿ
ಯೊಳಗೆ ಗಬ್ಬರಿಸಿದವೊಲಿನ ಹಾಯೆನುತ ಬಸವಳಿದ ೫೨

ಏನದೆಚ್ಚರಿಕೆಯೊ ಸಮೀರನ । ಸೂನುವಿನ ಸುಯ್ದಾನವೆಂತುಟೊ
ಹಾನಿ ಹೊಗದಂತಿನತನೂಜಗೆ ಬಹ ಮಹಾಯುಧವ
ಆನೆಕಟ್ಟಿನ ಕೋಲ ಕರದಿಂ । ದಾನುವಂತಿರೆ ಪುಟನೆಗೆದು ಹಿಡಿ
ದಾ ನಿಶಾಟನನಿಡಲು ಹೂಣಿಸಿದನು ಸರೋಷದಲಿ ೫೩

ಹರಿಶರಣ ಹರಿತಂದು ಹನುಮನ । ಕರವ ಹಿಡಿದಿಂತೆಂದನಿದಱಲಿ
ಮರಳಿ ಮಗುಳೀ ರಕ್ಕಸನನಿಟ್ಟವನ ತಲೆ ನೆಲಕೆ
ಜರಿದು ಬೀಳುವುದೆಂಬುದಿದು ತಾ । ವರವಿವಂಗೆಲೆ ಹನುಮ ಕೇಳೆನೆ
ತಿರುಹಿ ಮೊಳಕಾಲಿನಲಿ ಮುಱಿದಿಟ್ಟನು ಮಹೋದಧಿಗೆ ೫೪

ಹಾರವಿಸಿ ಹನುಮಂತದೇವಗೆ । ವಾರಿಜಪ್ರಿಯ ಕಳುಹಿದನು ಶ್ರುತಿ
ಪೂರಮಯ ಸಮನೋಹರದ ಮಣಿಖಚಿತಕುಂಡಲವ
ತೀರಿತೇ ಮಹದಾಯುಧವು ಕಪಿ । ವೀರನುಳಿದನೆಯೆನುತ ಹರಿತಂ
ದಾ ರಣಾಂಗಣಭೀಮ ಹಿಡಿದನು ಭಾನುನಂದನನ ೫೫

ಗಂಗೆಯಿಂದ ನೀರು ಸುರಿಯಿತು. ೫೨ "ಲೋ ಕಪಿ ಕೇಳು, ಈ ಮಹಾಯುಧಕ್ಕೆ ಸಿಕ್ಕಿ ಸಾಯದೆ ಜೀವದಿಂದ ನೀನು ಬದುಕಿಕೊಂಡರೆ ನಾನು ಸೋತವನೇ ಸರಿ" ಎನ್ನುತ್ತ ಕುಂಭಕರ್ಣನು ತೂಗಿ ಈಟಿಯನ್ನು ಬಿಟ್ಟನು. ಈಟಿಯ ಕಿಡಿಗಳು ಬಲವಾಗಿ ಹೊಡೆದು ಪಕ್ಕೆಯೊಳಕ್ಕೆ ಸೀಳಿಕೊಂಡು ಹೋದಂತಾಗಿ ಸೂರ್ಯನು 'ಹಾ' ಎಂದು ಕುಸಿದ. ೫೩. ಹನುಮಂತನದು ಏನು ಎಚ್ಚರಿಕೆಯೋ, ಅವನ ರಕ್ಷಣಾಕ್ರಮ ಎಂಥದೋ! ಸುಗ್ರೀವನಿಗೆ ಅಪಾಯವಾಗದಂತೆ ರಭಸದಿಂದ ಬರುತ್ತಿದ್ದ ಮಹಾಯುಧವನ್ನು ಆನೆಕಟ್ಟಿನ ಕೋಲನ್ನು ಕೈಯಿಂದ ಆತು ಹಿಡಿದುಕೊಳ್ಳುವಂತೆ ಪುಟನೆಗೆದು ಅದನ್ನು ಹಿಡಿದುಕೊಂಡು ಕ್ರೋಧ ದಿಂದ ಅದರಿಂದಲೇ ಕುಂಭಕರ್ಣನನ್ನು ಹೊಡೆಯಲು ನಿರ್ಧರಿಸಿದನು. ೫೪. ಆಗ ವಿಭೀಷಣನು ಧಾವಿಸಿ ಬಂದು ಹನುಮಂತನ ಕೈಹಿಡಿದುಕೊಂಡು "ಇದನ್ನೇ ಹಿಂತಿರುಗಿಸಿ ಕುಂಭಕರ್ಣನಿಗೆ ಹೊಡೆದರೆ ಹಾಗೆ ಹೊಡೆದವನ ತಲೆ ನೆಲಕ್ಕೆ ಕಳಚಿ ಬೀಳುವುದೆಂಬ ವರ ಇವನಿಗುಂಟು, ಹನುಮಂತ ಕೇಳು" ಎಂದು ಹೇಳಲು ಹನುಮಂತನು ಮಹಾಯುಧ ವನ್ನು ಮೊಳಕಾಲಿಗೆ ಕೊಟ್ಟುಮುರಿದು ಅದನ್ನು ತಿರುಗಿಸಿ ಸಮುದ್ರಕ್ಕೆಸೆದನು. ೫೫. ಹನುಮಂತದೇವನನ್ನು ಮೆಚ್ಚಿಕೊಂಡು ಬ್ರಹ್ಮನು ವೇದದ ನಾದ ತುಂಬಿದ ಸುಂದರ ವಾದ ರತ್ನಖಚಿತ ಕಿವಿಯ ಆಭರಣವನ್ನು ಕಳುಹಿಸಿಕೊಟ್ಟನು, "ಮಹಾಯುಧವು ನಾಶ ಹೊಂದಿತೇ, ಕಪಿವೀರನು ಬದುಕಿಕೊಂಡನೆ!" ಎನ್ನುತ್ತ ರಣರಂಗಭಯಂಕರ

27

ಇವನಲೇ ಕಪಿರಾಯನಿವನಿಂ । ದಿವರು ಬವರಕೆ ಬಂದರಾವಿಂ
ದಿವನ ಕೊಲ್ಲದೆ ಕೊಂಡುಹೋದರೆ ಹೋಗುದೀ ನೆರೆದ
ಪ್ಲವಗಬಲ ಬಳಿಕುಳಿವರಿಬ್ಬರು । ಸವರಿ ಹಾಯ್ಕಿದ ಬಡಿಗೆಯಂತೀ
ಹವಣು ತಪ್ಪದೆನುತ್ತ ಕಂಕುಳಲೌಕಿದನು ಕಪಿಯ ೫೬

ಅಹಹ ವಾನರವಂಶವಾರಿಜ । ಮಿಹಿರ ಸಿಕ್ಕಿದನೇ ತಮೋವಿ
ಗ್ರಹಿಗೆ ಹಾಯೆನುತರಸನೀಕ್ಷಿಸಿದನು ಸಮೀರಜನ
ಸಹಭವನನವರಿಬ್ಬರಾಹವ । ವಿಹಿತ ಶರಸಂಧಾನ ಮುಷ್ಟಿ
ಪ್ರಹರಣದಲೇ ಸಂಧಿಸಿದರಾ ರಾವಣಾನುಜನ ೫೭

ಬೇಱೆ ಬವರದ ಬಲುಮೆಗಳ ಕೈ । ದೋಱದಿರಿ ವಿಜಯಾಂಗನೆಗೆ ತಾ
ನೀಱನಿಂದಿನ ದಿನಕೆ ಸಿಕ್ಕಿದನೆಂದು ಬಗೆಯದಿರಿ
ತೋಱಿಸುವೆನರೆಘಳಿಗೆಯಲಿ ನಗೆ । ಗಾಱರಿಗೆ ಹಗರಣವ ಸನ್ನೆಯ
ಸಾಱಿಕೆಯಿದೀಗೆಂದು ಸಂತೈಸಿದನು ಸುಗ್ರೀವ ೫೮

ಗೆಲಿದೆನಿಂದಿನ ರಣವ ಹಿಡಿದೆನು । ಬಲಿಮುಖಾಧೀಶ್ವರನ ಮೇಲಣ
ಕೆಲಸ ನಾಳಿನದೆನುತ ಹೊಕ್ಕನು ಹೊಳಲ ವಹಿಲದಲಿ
ಮೊಳಗಿದವು ನಿಸ್ಸಾಳ ಗುಡಿಗಳು । ತೞತವಗಲಕೆ ಕಲಶಕನ್ನಡಿ
ಗಳ ವಿಡಾಯಿಯ ಮಾಮನೆಯನೆಯ್ದಿತೊಗ್ಗಿನಲಿ ೫೯

ಕುಂಭಕರ್ಣನು ಓಡಿಬಂದು ಸುಗ್ರೀವನನ್ನು ಹಿಡಿದುಕೊಂಡನು. ೫೬. ಇವನಲ್ಲವೇ ಕಪಿಗಳ ರಾಜ, ಇವನಿಂದ ಇವರೆಲ್ಲ ಯುದ್ಧಕ್ಕೆ ಬಂದಿದ್ದಾರೆ. ನಾವು ಇಂದು ಇವನನ್ನು ಕೊಲ್ಲದೆ ಹೊತ್ತುಕೊಂಡು ಹೊರಟುಹೋದರೆ ಇಲ್ಲಿ ಬಂದು ಸೇರಿರುವ ಕಪಿಗಳ ಸೈನ್ಯವು ಇಲ್ಲಿಂದ ಹೊರಟುಹೋಗುವುದು. ಅನಂತರ ಈ ರಾಮಲಕ್ಷ್ಮಣರಿಬ್ಬರು ಸಣ್ಣ ಸಣ್ಣ ಟೊಂಗೆಗಳನ್ನೆಲ್ಲ ಕತ್ತರಿಸಿದ ದೊಣ್ಣೆಯಂತೆ ಉಳಿದುಕೊಳ್ಳುತ್ತಾರೆ. ಈ ಉಪಾಯ ತಪ್ಪುವುದಿಲ್ಲ ಎಂದು ಯೋಚಿಸಿ ಕುಂಭಕರ್ಣ ಸುಗ್ರೀವನನ್ನು ಕಂಕುಳಲ್ಲಿ ಇರುಕಿಕೊಂಡನು. ೫೭. 'ಅಯ್ಯೋ, ವಾನರವಂಶವೆಂಬ ಕಮಲಗಳ ಸೂರ್ಯನು ಕಪ್ಪು ದೇಹದ ಕುಂಭಕರ್ಣನೆಂಬ ಕತ್ತಲೆಯ ಕೈಗೆ ಸಿಕ್ಕಿದನೇ !' ಎಂದು ರಾಮನು ಹನುಮಂತನನ್ನೂ ತಮ್ಮನನ್ನೂ ನೋಡಿದನು. ಆಗ ಅವರಿಬ್ಬರೂ ಕ್ರಮವಾಗಿ ಮುಷ್ಟಿಯೇಟಿನಿಂದಲೂ ಬಾಣಪ್ರಯೋಗದಿಂದಲೂ ರಾವಣನ ತಮ್ಮನನ್ನು ಎದುರಿಸಿದರು. ೫೮. "ಬೇರೆ ಯುದ್ಧದ ಶೌರ್ಯಗಳನ್ನು ಪ್ರದರ್ಶಿಸಬೇಡಿ. ವಿಜಯಲಕ್ಷ್ಮಿಗೆ ಈ ದಿನ ಈ ಪ್ರಿಯನು ಸಿಕ್ಕಿದನು ಎಂದು ಭಾವಿಸಬೇಡಿ. ನಗೆಗಾರರಿಗೆ ಒಂದು ಒಳ್ಳೆಯ ಪ್ರಸಂಗವನ್ನು ಅರ್ಧಗಳಿಗೆಯಲ್ಲಿ ಮಾಡಿ ತೋರಿಸಿಕೊಡುತ್ತೇನೆ. ಇದು ಗುಪ್ತ ಪ್ರಕಟಣೆ" ಎಂದು ಹನುಮಂತ ಲಕ್ಷ್ಮಣರನ್ನು ಸುಗ್ರೀವನು ಸಮಾಧಾನಪಡಿಸಿದನು. ೫೯. "ಇಂದಿನ ಕದನವನ್ನು ಗೆದ್ದ ವಾನರೇಂದ್ರನನ್ನು ಹಿಡಿದೆ. ಇನ್ನು ಉಳಿದ ಕೆಲಸ ನಾಳೆಗೆ" ಎನ್ನುತ್ತ ಕುಂಭಕರ್ಣನು ಲಂಕಾನಗರವನ್ನು ತ್ವರೆಯಿಂದ ಪ್ರವೇಶಿಸಿದನು, ಲಂಕಾನಗರದಲ್ಲಿ

ಇದಿರುಗೊಂಡರು ಬಹಳ ಸೌರಂ । ಭದಲಿ ಸುರಭಿಲತಾಂತಜಾಲವ
ಕೆದಱಿದರು ಗಂಧೋದಕದ ಪೂರ್ಣಾಭಿಷೇಕದಲಿ
ಮದದರುಣವಾರುಣಿಯ ರಸಪಾ । ನದ ಸುಖಾವಸ್ಥೆಯಲಿ ಮಱೆದನು
ಕದನಗಲಿ ಕಪಿಸಾರ್ವಭೌಮನ ಕುಂಭಕರ್ಣಖಳ ೬೦

ಸಡಿಲವಾದುದು ಕಂಕುಳಿನ ಕೈ । ಯೊಡೆ ಕಪೀಂದ್ರಂಗೊಯ್ಯನಸುರನ
ಹೆಡಕಿನಲಿ ಕೈಯೂರಿ ಕುಳ್ಳಿದನೊತ್ತಿ ನೆತ್ತಿಯಲಿ
ಕೊಡಗಿವಿಯನೆರಡೆರಡು ಕೈಯಲಿ । ಹಿಡಿದು ನಾಸವನಾಸ್ಯದಂತದ
ಲಡಸಿ ಹಾಱಿದನಭ್ರತಳಕಂಭೋದನಾದದಲಿ ೬೧

ಬೆದಱಿತಾ ಕಲಿಕುಂಭಕರ್ಣನ । ನಿದಿರುಗೊಂಬಬಲೆಯರು ಪುರ ಕದ
ಬದಿಸಿದುದು ಹನುಮಂತನೆಂದೇ ಬಗೆದು ಭೀತಿಯಲಿ
ನದುಳು ನಗೆಗಳಲಿವರು ಮೂವರು । ಪುದಿದ ಪರಿತೋಷದಲಿ ರಾಮನ
ಪದಪಯೋಜವ ಸಾರಿದರು ಕಪಿಕಟಕ ನಲಿದಾಡೆ ೬೨

ಭೇರಿಗಳು ಭೋರ್ಗರೆದವು. ನಗರದಲ್ಲೆಲ್ಲ ಬಾವುಟಗಳು ಹಾರಿದವು. ಕಲಶ ಕನ್ನಡಿಗಳನ್ನು ಹಿಡಿದ ಸ್ತ್ರೀಯರು ಗುಂಪಾಗಿ ಸಡಗರದಿಂದ ಬಂದರು. ೬೦. ತರುಣಿಯರು ಬಹಳ ಸಂಭ್ರಮದಿಂದ ಕುಂಭಕರ್ಣನನ್ನು ಎದುರುಗೊಂಡರು. ಸುವಾಸನೆಯ ಹೂಗಳನ್ನು ಚೆಲ್ಲಿ, ಪರಿಮಳದ ನೀರನ್ನು ಚಿಮುಕಿಸಿದರು. ಮತ್ತುಬರಿಸುವ ಕೆಂಪು ಮದ್ಯವನ್ನು ಕುಡಿದು ಸುಖದ ಅಮಲಿನ ಸ್ಥಿತಿಯಲ್ಲಿ ರಣವೀರ ಕುಂಭಕರ್ಣರಾಕ್ಷಸನು ಕಂಕುಳಿನಲ್ಲಿದ್ದ ಕಪಿಚಕ್ರವರ್ತಿ ಸುಗ್ರೀವನನ್ನು ಮರೆತುಬಿಟ್ಟನು. ೬೧. ಕುಂಭಕರ್ಣನ ಕಂಕುಳಿನ ಹಿಡಿತ ಸಡಿಲವಾಯಿತು. ಆಗ ಸುಗ್ರೀವನು ಕುಂಭಕರ್ಣನ ಹೆಕ್ಕತ್ತಿನ ಮೇಲೆ ಕೈಯೂರಿ ನೆಗೆದು ನೆತ್ತಿಯ ಮೇಲಕ್ಕೆ ಹೋಗಿ ಕುಳಿತನು. ಅವನ ಕೊಡದಂತಿದ್ದ ಕಿವಿಗಳನ್ನು ಎರಡೂ ಕೈಗಳಲ್ಲೂ ಹಿಡಿದು ಮೂಗನ್ನು ಬಾಯೊಳಗಿನ ಹಲ್ಲುಗಳ ಸಂದಿಗೆ ನೂಕಿ ಗುಡುಗಿನಂತೆ ಶಬ್ದ ಮಾಡುತ್ತ ಆಕಾಶಕ್ಕೆ ಹಾರಿದನು. ೬೨. ಕುಂಭಕರ್ಣನನ್ನು ಎದುರುಗೊಂಡ ಸ್ತ್ರೀಯರು ಹೆದರಿದರು. ಇವನು ಹನುಮಂತನೇ ಎಂದು ಭಾವಿಸಿ ಭೀತಿಯಿಂದ ಪಟ್ಟಣದ ಜನರು ಕಳವಳಗೊಂಡರು. ಸೋಜಿಗದಿಂದ ನಗುತ್ತ ಸುಗ್ರೀವ, ಹನುಮಂತ, ಲಕ್ಷ್ಮಣರು ಸಂತೋಷದಿಂದ ರಾಮನ ಪಾದಕಮಲಗಳ ಬಳಿಯನ್ನು ಸೇರಿದರು. ಆಗ ಕಪಿಸೈನ್ಯವು ಹಿಗ್ಗಿನಿಂದ ನಲಿದಾಡಿತು.

೨೮

# ಇಪ್ಪತ್ತೆಂಟನೆಯ ಸಂಧಿ

ಸೂಚನೆ ॥ ರಾಯರಿಪು ಜಜ್ಝರ ನಿರ್ಜರ । ರಾಯ ಗಜಹರ್ಯಕ್ಷ ರಾಕ್ಷಸ
ರಾಯ ಭುಜಬಲ ಕುಂಭಕರ್ಣನ ಗೆಲಿದನಾ ರಾಮು

ಕೇಳಿರೈ ಕಾಕುತ್ಸ್ಥಧರಣೀ । ಪಾಲಪುತ್ರರು ಪುಣ್ಯವೀಥಿಯ
ಗಾಳುಮೇಳಂತರಿಸಿದುದು ಬಳಿಕಾ ದಶಾನನನ
ಓಲಗಕೆ ಸರಸರಿಸಿ ಜಯದು । ಬ್ಬಾಳಿಗನು ನಡೆತಂದು ಗೋಲಾಂ
ಗೂಲರಾಯನ ತಂದೆನೆನುತೆತ್ತಿದನು ಭುಜಯುಗವ ೧

ಕಾಣದಾ ಕಪಿರಾಜವಂಶದ । ಜಾಣನನು ಬೆಱಗಿಟ್ಟು ಗಳಿತ
ಘ್ರಾಣದಲಿ ಮೋಹಿದನು ಮುಮ್ಮಳಿಯಲಿ ಕರಾಂಗುಲಿಯ
ಶೋಣಿತದ ಬಿಱುವನಿಯನಱಿದಾ । ಕ್ಷೀಣ ಪರಿತೋಷಿತನು ಸಡಿಲಿದ
ಸಾಣೆನಲಿ ತಿರುಗಿದನು ಘರ್ರನೆ ಘನವಿಷಾದದಲಿ ೨

ತಡೆದು ಗೆದ್ದವರಿಲ್ಲ ನಾಚಿಕೆ । ಗೆಡಿಸಿದವರಿಲ್ಲೀ ನೆಲೆಗೆ ಕೈ
ವಿಡಿದುದಿಲ್ಲಪಜಯನಿತಂಬಿನಿ ನಮ್ಮನಾಜಿಯಲಿ
ಸುಡು ಬದುಕ ಸಾಕಿನ್ನು ಹರಣವ । ಹಿಡಿವುದನುಚಿತವೆಂದು ಕದನದ
ಕಡುಹಿನಲಿ ಕಲಿಕುಂಭಕರ್ಣನು ಬಂದನಾಹವಕೆ ೩

ಸೂಚನೆ॥ ಶತ್ರುರಾಜರನ್ನು ಚೂರುಚೂರು ಮಾಡುವ, ದೇವೇಂದ್ರನೆಂಬ ಆನೆಗೆ ಸಿಂಹಸ್ವರೂಪನಾದ ಬಲಶಾಲಿ ರಾಕ್ಷಸನಾಯಕ ಕುಂಭಕರ್ಣನನ್ನು ರಾಮನು ಗೆದ್ದನು. ೧. ಕಾಕುತ್ಸ್ಥರಾಜಕುಮಾರರಾದ ಲವಕುಶರೇ ಕೇಳಿ, ಲಂಕಾನಗರದ ಬೀದಿಯಲ್ಲಿ ಸಂಭ್ರಮ ಹೆಚ್ಚಿತು. ರಾವಣನ ಆಸ್ಥಾನಕ್ಕೆ ವಿಜಯೋತ್ಸಾಹಿ ಕುಂಭಕರ್ಣನು ಸರಸರನೆ ನಡೆದುಬಂದು 'ವಾನರರಾಜನನ್ನು ತಂದೆ' ಎನ್ನುತ್ತ ತೋಳುಗಳನ್ನೆತ್ತಿದನು. ೨. ಕಪಿರಾಜವಂಶದ ಬುದ್ಧಿವಂತನನ್ನು ಕಾಣದೆ ಕುಂಭಕರ್ಣನು ಗುರುತರಿಯದಂತೆ ಕಿತ್ತು ಹೋಗಿದ್ದ ಮೂಗಿನ ಮೇಲೆ ಬೆರಳನ್ನು ತಟ್ಟಿದನು. ರಕ್ತವು ಹನಿಯುತ್ತಿದ್ದುದನ್ನು ಅರಿತು ಸಂತೋಷವನ್ನು ಕಳೆದುಕೊಂಡ ಕುಂಭಕರ್ಣನು ದುಃಖಿತನಾಗಿ ನಾಚಿಕೆಯಿಂದ ಸರ್ರನೆ ಹಿಂದಿರುಗಿದನು. ೩. 'ನನ್ನನ್ನು ಎದುರಿಸಿ ಗೆದ್ದವರಿಲ್ಲ. ನಾಚಿಕೆಗೆಡಿಸಿದವರೂ ಇಲ್ಲ. ಈವರೆಗೆ ಅಪಜಯಲಕ್ಷ್ಮಿಯು ಯುದ್ಧದಲ್ಲಿ ನಮ್ಮ ಕೈಹಿಡಿದುದಿಲ್ಲ. ಈ ಬಾಳನ್ನು ಸುಡು. ಸಾಕು, ಇನ್ನು ಪ್ರಾಣವಿಟ್ಟುಕೊಂಡಿರುವುದು ಉಚಿತವಲ್ಲ' ಎಂದು

ನಾಚಿದನು ಲಂಕಾಧಿನಾಥ ವಿ । ಲೋಚನಾಳಿಯು ಬೆಜಿಗಿಸಲಿ ಬಳಿ
ಕಾ ಚಟುಳಭಟಕೋಟಿಕಂಠಗತಾದಿ ವಿಸ್ಮಿತದ
ವೀಚಿಗಳ ವಿಹರಣದ ಭಯಸಂ । ಕೋಚದಿಂದಿರಲಿತ್ತು ಮೂಗಿನ
ಮೋಚಿಕೆಯ ಭಟ ಖತಿಯು ಭರದಲಿ ಬಂದನಾಹವಕೆ ೪

ಕರೆದುತಂದರು ಕುಂಭಕರ್ಣನ । ಧುರದ ಜಯುವನು ಕೇಳಿ ನಿದ್ರಾ
ಭರದ ಭಾರಿಯ ಶೂರ್ಪನಖಿಯನು ಧೂರ್ತವಟುನಿಕರ
ಸರಸರಿಸಿ ನಡೆತಂದು ಕಂಡಳು । ಸರಿಸದಲಿ ಸಹಭವನನಕಟಾ
ಪರಿಯ ಮಾಡಿತೆ ವಿಧಿಯೆನುತ ತಿರುಗಿದಳು ಖೇದದಲಿ ೫

ನಗೆಯ ನಡುಳಿನಲಲ್ಲಿಗಲ್ಲಿಗೆ । ನಗರದೊಳಗಣ ನೋಟಕರು ಮೂ
ಗುಗಳ ಮೋಚಿನ ರಕ್ಕಸನ ರಕ್ಕಸಿಯನೀಕ್ಷಿಸುತ
ಮುಗಿದುದಿಂತಿವರಿಬ್ಬರಿಗೆ ಸಂ । ಯುಗದೊಳಿನ್ನವರಣ್ಣಗೇನನು
ಬಗೆವರೋ ಬಲಿಮುಖರೆನುತ ಗುಹಿಲಿಕ್ಕಿತಖಿಳಜನ ೬

ಅಂಗವಿಸಿದನು ಬಳಿಕ ರಿಪುಗಳ । ನುಂಗುವತಿಮನದಾಯತದಲುರಿ
ಗಂಗಳಲಿ ನಡೆತಂದನಧರವನಗಿವುತಾಹವಕೆ
ಸಂಗಡಕೆ ಬಳಿಕಸುರಪತಿ ಚತು । ರಂಗವನು ಮೇಳೈಸಿ ಸಹಜಾ
ತಂಗೆ ಕಳುಹಿದನೆರಡುನೂರಕ್ಷೋಹಿಣೀ ಬಲವ ೭

ಯುದ್ಧದ ಆವೇಶದಿಂದ ಕುಂಭಕರ್ಣನು ರಣರಂಗಕ್ಕೆ ಬಂದನು. ೪. ಕಣ್ಣುಗಳಲ್ಲಿ ಬೆರಗಿನ ಭಾವ ತುಂಬಿದ ಲಂಕೇಶ್ವರನು ನಾಚಿಕೊಂಡನು. ಬಳಿಕ ಆ ಕೋಟ್ಯಾಂತರ ಯೋಧರು ಕೊರಳುಗಳಿಂದ ಆಶ್ಚರ್ಯದ ಅಲೆಗಳನ್ನು ಹೊಮ್ಮಿಸುತ್ತ ಭಯಸಂಕೋಚಗಳಿಂದಿರಲು ಇತ್ತ ಮೂಗು ಕತ್ತರಿಸಿದ ವೀರ ಕುಂಭಕರ್ಣನು ಕೋಪೋದ್ರೇಕದಿಂದ ಯುದ್ಧಕ್ಕೆ ಬಂದನು. ೫. ಕುಂಭಕರ್ಣನು ಯುದ್ಧದಲ್ಲಿ ಜಯಪಡೆದುದನ್ನು ಕೇಳಿ ಗಾಢನಿದ್ರೆಯಲ್ಲಿದ್ದ ಶೂರ್ಪನಖಿಯನ್ನು ದುಷ್ಟಬಾಲಕರು ಕರೆದುಕೊಂಡು ಬಂದರು. ಸರಸನೆ ಬಂದ ಶೂರ್ಪಣಖಿ ಸಹೋದರನನ್ನು ಎದುರಿನಲ್ಲಿ ಕಂಡು 'ವಿಧಿ ಈ ರೀತಿ ಮಾಡಿತೆ ?' ಎಂದು ದುಃಖದಿಂದ ಹಿಂದಿರುಗಿದಳು. ೬. ಬೆರಗಿನ ನಗೆ ಬೀರುತ್ತ ಲಂಕಾ ನಗರದ ನೋಟಕರು ಅಲ್ಲಲ್ಲಿ ನಿಂತು ಬೋಳುಮೂಗುಗಳ ರಾಕ್ಷಸನನ್ನೂ ರಾಕ್ಷಸಿಯನ್ನೂ ನೋಡಿದರು. "ಇವರಿಬ್ಬರ ಗತಿ ಹೀಗಾಯಿತು, ವಾನರರು ಯುದ್ಧದಲ್ಲಿ ಇವರಣ್ಣನಿಗೆ ಇನ್ನೇನು ಮಾಡುವರೋ !" ಎಂದಾಡಿಕೊಳ್ಳುತ್ತ ಸಮಸ್ತ ಜನರೂ ಗಹಗಹಿಸಿ ನಕ್ಕರು. ೭. ಕುಂಭಕರ್ಣನು ಶತ್ರುಗಳನ್ನು ನುಂಗಿಬಿಡುವ ಮನಸ್ಸಿನ ಆತುರದಿಂದ ಕಣ್ಣುಗಳಲ್ಲಿ ಬೆಂಕಿ ಕಾರುತ್ತ ತುಟಿಕಚ್ಚುತ್ತ ಯುದ್ಧಕ್ಕೆ ಬಂದನು. ಕುಂಭಕರ್ಣನ ಸಹಾಯಕ್ಕೆ ರಾವಣನು ಎರಡುನೂರು ಅಕ್ಷೋಹಿಣೀ ಚತುರಂಗಸೈನ್ಯವನ್ನು ಜೋಡಿಸಿ

ಕಳುಹಿದನು ಮಯ ವಿಶ್ವಕರ್ಮರ । ಕೆಲಸದಲಿ ಕೈಗೈದ ರಥವನು
ಬಳಿಕ ಬಲುಗೈದುಗಳ ಭಂಡಿಯ ಕೋಟಿಸಂಖ್ಯೆಯಲಿ
ಇಳಿದನವ ದುರ್ಗವನು ಭರ್ಗನ । ಬಳಿಯ ಭಾಳದ ಕಿಚ್ಚಿನವೊಲಾ
ಬಳಿಯ ಬಲುಗಿಡಿಯಂತೆ ಬಲವಿಳಿತಂದುದೊಗ್ಗಿನಲಿ ೮

ತೇರನೇಱಿದನುರುಕ್ಕಿನ । ನೂಱುಘಾಲಿಯ ಸುರಪದಂತಿಯ
ಭಾರಣೆಯ ಗಜಘಟೆಗಳಱುನೂಱರ ಗಢಾವಣೆಯ
ಅರಿ ಬೊಬ್ಬಿಡುವೆಡಬಲದ ರಣ । ಭೈರವನ ಭುಲ್ಲಣೆಯಲಿ ಮುಂ
ಗಾರ ಮುಗಿಲುಬ್ಬರದವೊಲು ನಡೆತಂದನಾಹವಕೆ ೯

ಬೆದಱಿ ಹಾಯ್ದುದು ಘೋರರಕ್ಕಸ । ನದುಭುತಾಕಾರದ ಮಹಾಭಯ
ಕಧಟಭಟರಸು ಧುಮ್ಮುಧುಳುಕೆನುತಿರ್ದುದೊಡಲೊಳಗೆ
ವದನ ವಿಕಸಿತವಾಯ್ತು ರೋಮದ । ಹೊದಱು ಹುರಿಯೇಱಿದವು ವಿಜಯಾ
ಭ್ಯುದಯ ತಲೆದೋಱಿದುದು ರಾಮಂಗರಿಯ ಬರವಿನಲಿ ೧೦

ಬೆಱಗಿದೇನೈ ಮೊದಲು ಬಂದ । ಬ್ಬರದ ರಕ್ಕಸನಂತೆ ನೋಟಕೆ
ತೆಱಪುಗೊಡುತಿದೆ ಚಿತ್ತವಿವನವನಲ್ಲವಲೆ ನೋಡು
ಹಱುಕು ಮೂಗಿಂದಿವನವೊಲು ಮೂ । ಕೊಱೆಯರುಂಟೇ ನಿಮ್ಮ ರಾವಣ
ನುಱುವ ಬಲದಲಿ ಭಾರಿಭಟನಿವನಾರು ಹೇಳೆಂದ ೧೧

ಕಳುಹಿಸಿಕೊಟ್ಟನು. ೮. ಮಯ ವಿಶ್ವಕರ್ಮರು ಶ್ರಮದಿಂದ ಅಲಂಕರಿಸಿದ ರಥವನ್ನೂ ಭಾರಿ ಆಯುಧಗಳಿಂದ ತುಂಬಿದ ಕೋಟ್ಯಾಂತರ ಬಂಡಿಗಳನ್ನೂ ರಾವಣನು ಕಳುಹಿಸಿಕೊಟ್ಟನು. ಕುಂಭಕರ್ಣನು ಶಿವನ ಹಣೆಗಣ್ಣಿನ ಬೆಂಕಿಯಂತೆ ಲಂಕಾದುರ್ಗವನ್ನು ಇಳಿದು ಬಂದನು. ಶಿವನ ಹಣೆಗಣ್ಣಿನ ಬೆಂಕಿಯನ್ನು ಹಿಂಬಾಲಿಸುವ ಭಾರಿಕಿಡಿಯಂತೆ ರಾಕ್ಷಸ ಸೈನ್ಯವು ಗುಂಪಾಗಿ ದುರ್ಗವನ್ನಿಳಿದು ಬಂದಿತು. ೯. ಉಕ್ಕಿನ ನೂರು ಗಾಲಿಗಳನ್ನು ಜೋಡಿಸಿದ ಐರಾವತದಂಥ ಆರುನೂರು ಭಾರಿ ಆನೆಗಳನ್ನು ಹೂಡಿದ ರಥವನ್ನು ಕುಂಭಕರ್ಣನು ಏರಿದನು. ಸಿಂಹನಾದ ಮಾಡಿ ಗರ್ಜಿಸುತ್ತ ಎಡಬಲದ ರಣಭೈರವನ ಅಬ್ಬರದೊಡನೆ ಮುಂಗಾರ ಮೋಡದ ಒಡ್ಡಿನಂತೆ ಕುಂಭಕರ್ಣನು ಯುದ್ಧಕ್ಕೆ ಬಂದನು. ೧೦. ಘೋರರಾಕ್ಷಸನ ಅದ್ಭುತಾಕಾರವನ್ನು ನೋಡಿ ಸೈನಿಕರು ಹೆದರಿ ಓಡಿದರು. ಅವನ ಮಹಾಭಯಕ್ಕೆ ವೀರರ ಉಸಿರು ದೇಹದೊಳಗೆ ಧುಮ್ಮುಧುಳುಕು ಎನ್ನುತ್ತಿತ್ತು. ಶತ್ರು ಬಂದುದನ್ನು ನೋಡಿ ರಾಮನ ಮುಖ ಅರಳಿತು, ರೋಮಾಂಚವುಂಟಾಯಿತು ಮತ್ತು ಅವನಲ್ಲಿ ಗೆಲುವಿನ ಉತ್ಸಾಹ ಮೂಡಿತು. ೧೧. "ಇದೇನಯ್ಯ ಆಶ್ಚರ್ಯವಾಗಿ ಕಾಣಿಸುತ್ತಿದೆ. ನೋಡಿದರೆ ಮೊದಲು ಬಂದಿದ್ದ ಭಾರಿ ರಾಕ್ಷಸನ ಹಾಗೆ ಮನಸ್ಸಿಗೆ ತೋರುತ್ತಿದೆ. ಹುಳುಕುಮೂಗಿನ ಇವನು ಅವನಲ್ಲವೇ ನೋಡು, ಇವನ ಹಾಗೆ ಮೂಗು ಕತ್ತರಿಸಿದವರು ನಿಮ್ಮ ರಾವಣನ ಶ್ರೇಷ್ಠ ಸೈನ್ಯದಲ್ಲುಂಟೇ ? ಭಾರಿವೀರನಿವನಾರು ಹೇಳು"

ಎನಲು ಕಿಱುನಗೆಯಿಂದ ರವಿನಂ । ದನನ ಕೆಲಸವಿದೆಂದು ಮಾರುತ
ತನುಜ ಕರಪಲ್ಲವದ ಸನ್ನೆಯಲಱುಹಿದನು ನೃಪಗೆ
ಅನುಜ ಲಕ್ಷ್ಮಣದೇವ ಬೆರಳಿನ । ಕೊನೆಯಲೀಪರಿ ತಪ್ಪದೆಂದೆನೆ
ಮನದೊಳಗೆ ನಾಚಿದನು ಮಱೆಯೊಕ್ಕಸುರಪತಿ ಬಳಿಕ ೧೨

ಶರಣನಾಳ್ದನ ನುಡಿಗೆ ಮಾಱು । ತ್ತರವ ನುಡಿಯದೆ ನಾಚಿ ಶಿರವನು
ಧರೆಗೆ ಬಾಗಲು ಭಾವಕರ ಸರ್ವಜ್ಞನದನಱಿದು
ಧುರಕೆ ನಿಂದನು ಲಕ್ಷ್ಮಣಾಂಕನ । ಕರೆದು ಕೈಸನ್ನೆಯಲಿ ಕರುಣಾ
ಕರನು ಬಳಿಕೀ ಮಾತ ನುಡಿದನು ಮಧುರವಚನದಲಿ ೧೩

ತಮ್ಮ ಬಾ ಬಲ ಬೆದಱುತದೆ ಬಲು । ಗುಮ್ಮನಿವನನು ಕಂಡು ರಣವಿದು
ನಮ್ಮ ಭಾಗಕೆ ಬರಲಿ ಬಳಲಿಸಬೇಡ ಕಪಿಭಟರ
ಚಿಮ್ಮು ಕೆಲಕಡೆಗರಿಭಟನ ರಣ । ವೆಮ್ಮದರಿವಾಹಿನಿಯು ಕದನದ
ನೆಮ್ಮುಗೆಯು ಕಡುಹೀಗ ನಿನ್ನದು ಹೋಗು ಬೇಗೆಂದ ೧೪

ಹನುಮ ಬಾ ನೀ ಹೋಗು ಲಕ್ಷ್ಮಣ । ನನುವರದ ಬೆಂಬಲಕೆ ರವಿನಂ
ದನ ವಿಭೀಷಣರಿರಲಿ ನಮ್ಮಾಯಂಗರಕ್ಷಣೆಗೆ
ಅನುಜನಾಜಿಯು ಲೇಸು ಹೊಲ್ಲಹ । ನೆನಹು ನಿನ್ನದೆನುತ್ತ ನಿಜಭೃ
ತ್ಯನನು ಬೀಳ್ಕೊಟ್ಟರಿಭಟನ ಸಂಗರಕೆ ನಿಂದಿರ್ದ ೧೫

ಎಂದು ರಾಮ ವಿಭೀಷಣನನ್ನು ಪ್ರಶ್ನಿಸಿದ. ೧೨. ಆಗ ಕಿರುನಗೆಯಿಂದ ಮಾರುತಿಯು ಇದು ಸುಗ್ರೀವನ ಕೆಲಸವೆಂದು ಕೈಸನ್ನೆಯಿಂದ ರಾಮನಿಗೆ ತಿಳಿಸಿದನು. ತಮ್ಮ ಲಕ್ಷ್ಮಣನು ಇದು ಸುಳ್ಳಲ್ಲ ಎಂದು ಬೆರಳಿನ ಕೊನೆಯಿಂದ ಸಂಜ್ಞೆಮಾಡಿ ತಿಳಿಸಿದನು. ಆಗ ವಿಭೀಷಣನು ಮನಸ್ಸಿನಲ್ಲೇ ನಾಚಿಕೊಂಡನು. ೧೩. ರಾಮನ ಶರಣನಾದ ವಿಭೀಷಣನು ಒಡೆಯನ ಮಾತಿಗೆ ಪ್ರತ್ಯುತ್ತರವನ್ನು ಕೊಡದೆ ನಾಚಿಕೆಯಿಂದ ತಲೆಯನ್ನು ಬಗ್ಗಿಸಿದನು. ಭಕ್ತರ ಸರ್ವವನ್ನೂ ತಿಳಿದವನಾದ ರಾಮನು ಅದನ್ನು ಅರಿತು ಯುದ್ಧಕ್ಕೆ ನಿಂತನು. ಲಕ್ಷ್ಮಣನನ್ನು ಕೈಸನ್ನೆಯಿಂದ ಕರೆದು ಮಧುರವಾಗಿ ಮುಂದಿನ ಮಾತುಗಳನ್ನಾಡಿದನು. ೧೪. "ತಮ್ಮ ಬಾ, ಈ ಭಾರಿ ಭೂತವನ್ನು ಕಂಡು ಸೈನ್ಯವು ಬೆದರುತ್ತಿದೆ. ಈ ಯುದ್ಧ ನಮ್ಮ ಭಾಗಕ್ಕೆ ಬರಲಿ. ಕಪಿವೀರರನ್ನು ಬಳಲಿಸಬೇಡ. ಪಕ್ಕಕ್ಕೆ ನಿಲ್ಲು. ಶತ್ರುವೀರನೊಡನೆ ಹೋರಾಟ ನಮ್ಮದು. ಶತ್ರುಸೈನ್ಯದ ಮೇಲಿನ ಯುದ್ಧದ ಅಧಿಕ ಹೊಣೆ ನಿನ್ನದು. ಹೋಗು ಬೇಗ" ಎಂದ ರಾಮ. ೧೫. "ಹನುಮಂತ ಬಾ, ನೀನು ಲಕ್ಷ್ಮಣನ ಕಾಳಗದ ಬೆಂಬಲಕ್ಕೆ ಹೋಗು. ಸುಗ್ರೀವ, ವಿಭೀಷಣರು ನಮ್ಮ ಅಂಗರಕ್ಷಕರಾಗಿರಲಿ. ತಮ್ಮನ ಕದನದ ಒಳ್ಳೆಯದು ಕೆಟ್ಟದರ ಯೋಚನೆ ನಿನ್ನದು" ಎಂದು ಹೇಳಿ ತನ್ನ ಆಪ್ತ ಸೇವಕ

ಆಳವಡಿಕೆಯಲಿ ಪೀತಪಟ ಸ । ವ್ಯಾಳಿತ ಬದ್ದುಗೆದಾರವನು ಬಲಿ
ದಲೆವ ಜಡೆಗಳನೊಬ್ಬುಳಿಸಿ ಬಿಗುಹಿಕ್ಕಿ ಬಾಣಧಿಯ
ಹಿಳುಕುಗಳನಾರೈದು ಧನುವನು । ನಿಲಿಸಿ ಮೊಳಕಾಲಿಂದ ಬಾಗಿಸಿ
ಬಿಲುದಿರುವ ಬಲುಗೊಲೆಗೆ ಸಂಧಿಸಿ ನಿಂದನಿದಿರಿನಲಿ ೧೬

ಬೆರಳ ತುದಿಯಲಿ ಭಾರಿ ಚಾಪದ । ತಿರುವಲುಳಿವಡೆದುಭಯ ಭಾಗವ
ಕರತಳದಿ ನೇವರಿಸಿ ನಿಜದಾಲೀಢಗತಿಗಳಲಿ
ಬರಸೆಳೆದು ತಿರುವನು ಸರೋಜಜ । ಪುರಕೆ ನಿಡುದನಿದೋಱೆ ಜೀವಡೆ
ವರಸನುಱೆ ಬೊಬ್ಬಿಱಿದು ಕರೆದನು ಸರಳಲರಿಭಟನ ೧೭

ಪೊಡವಿಪನ ಬಿಲುದನಿಗೆ ಪ್ರಲಯದ । ಸಿಡಿಲು ಹೊಡೆದಂತಾಯ್ತು ರಕ್ಕಸ
ನೊಡಲು ಮಾಮಾ ರಾಮ ರಣಗಲಿಭೀಮ ಭಾಪೆನುತ
ಸಿಡಿದ ಕಿವಿ ಮೂಗುಗಳ ಭಟನು । ಗ್ಗಡದ ರಥವನು ನೂಕಿ ಬಾಣವ
ತುಡುಕಿ ಬಾಣಾಸನಕೆ ಸಂಧಿಸಿ ರಾಮಗಿಂತೆಂದ ೧೮

ರಾಮನೇ ನೀನೀಗ ಬನದಲಿ । ಭಾಮಿನಿಯ ಹೋಗಾಡಿದಾತನು
ಭೀಮಬಲನಹೆ ಲೇಸು ಮನದಾಯತಿಕೆ ಛಲಪದವ
ಸೀಮೆಯೊಳ್ಳಿತು ಜಗದೊಳಧಿಕ ಸ । ನಾಮನಹೆ ಕಟ್ಟಾಭಿಮಾನಕೆ
ಪ್ರೈಮಱೆಸಿ ಬಾಳ್ದವರ ಬಳಿಯವನಲ್ಲ ನೀನೆಂದ ೧೯

ನನ್ನು ಕಳುಹಿಸಿಕೊಟ್ಟು ಶತ್ರುವೀರನೊಡನೆ ಯುದ್ಧಕ್ಕೆ ಸಿದ್ಧನಾದ ರಾಮ. ೧೬. ರಾಮನು ಹಳದಿವಸ್ತ್ರಕ್ಕೆ ಹೊಂದಿಸಿದ್ದ ಪಟ್ಟಿಯ ದಾರವನ್ನು ಅಳವಡಿಸಿ ಬಿಗಿದು ಹಾರಾಡುವ ಕೂದಲನ್ನು ಒಟ್ಟಿಗೆ ಸೇರಿಸಿಕಟ್ಟಿ ಬತ್ತಳಿಕೆಯನ್ನು ಬಿಗಿದುಕೊಂಡು ಬಾಣದ ಗರಿಗಳನ್ನು ಪರೀಕ್ಷಿಸಿದನು. ಬಳಿಕ ರಾಮನು ಬಿಲ್ಲನ್ನು ನಿಲ್ಲಿಸಿಕೊಂಡು ಮೊಳಕಾಲಿನಿಂದ ಅದನ್ನು ಬಗ್ಗಿಸಿ ಬಿಲ್ಲಿನ ಹಗ್ಗವನ್ನು ಇನ್ನೊಂದು ತುದಿಗೆ ಸೇರಿಸಿ ಕುಂಭಕರ್ಣನನ್ನು ಎದುರಿಸಿ ನಿಂತನು. ೧೭. ಭಾರಿಬಿಲ್ಲಿನ ಹಗ್ಗವನ್ನು ಬೆರಳ ತುದಿಯಿಂದ ಎಳೆದು ಎರಡು ಭಾಗವನ್ನೂ ಹಸ್ತದಿಂದ ನೀವಿ ಯುದ್ಧಮಾಡುವಾಗ ನಿಲ್ಲುವ ಆಲೀಢಗತಿಯಲ್ಲಿ ರಾಮನು ನಿಂತನು. ಬಿಲ್ಲಿನ ಹಗ್ಗವನ್ನೆಳೆದು ಧನುಷ್ಟಂಕಾರ ಮಾಡಲು ಆ ಶಬ್ದವು ಬ್ರಹ್ಮನ ನಗರದಲ್ಲಿ ಪ್ರತಿಧ್ವನಿಸಿತು. ರಾಮನು ಬೊಬ್ಬಿರಿದು ಶತ್ರುವೀರನ ಮೇಲೆ ಬಾಣ ಬಿಟ್ಟನು. ೧೮. ರಾಮನ ಧನುಷ್ಟಂಕಾರಶಬ್ದಕ್ಕೆ ಪ್ರಳಯದ ಸಿಡಿಲು ಹೊಡೆದಂತಾಯಿತು ; ಕುಂಭಕರ್ಣನ ಹೊಟ್ಟೆಯಲ್ಲಿ 'ಮಾಮಾ ರಾಮ, ರಣಗಲಿ ಭೀಮ ! ಭಾಪು !' ಎಂಬ ಶಬ್ದವಾಯಿತು. ಕಿವಿ ಮೂಗುಗಳನ್ನು ಕಳೆದುಕೊಂಡ ವೀರ ಕುಂಭಕರ್ಣನು ರಥವನ್ನು ಮುಂದಕ್ಕೆ ನುಗ್ಗಿಸಿ ಬಾಣವನ್ನು ಸೆಳೆದು ಬಿಲ್ಲಿಗೆ ಸೇರಿಸಿ ರಾಮನನ್ನು ಕುರಿತು ಮುಂದಿನಂತೆ ಹೇಳಿದನು. ೧೯. "ರಾಮನೇ ನೀನು ? ಅರಣ್ಯದಲ್ಲಿ ಹೆಂಡತಿಯನ್ನು ಕಳೆದುಕೊಂಡವನೇ? ಭಾರಿಬಲಶಾಲಿಯಾಗಿದ್ದೀಯೆ. ನಿನ್ನ ಮನೋಧಾರ್ಷ್ಟ್ಯ ಮೆಚ್ಚತಕ್ಕದ್ದು. ಆದರೆ ನಿನ್ನ ಹಟಕ್ಕೆ ಮಿತಿಯಿರುವುದೊಳ್ಳೆಯದು. ಲೋಕದಲ್ಲಿ ಪ್ರಸಿದ್ಧನಾಗಿದ್ದೀ. ಆತ್ಮ

ಬವರಮುಖದಲಿ ಸೋತು ಭೋಗದ । ಯುವತಿಯರ ನಮ್ಮಸುರವಂಶೋ
ದ್ಭವಗೆ ಕೊಟ್ಟು ಸುರಕ್ಷಣೆಯ ಸುರನರಭುಜಂಗಮರು
ನವಸಹಸ್ರವದಂತಿರಲಿ ಸಾ । ಅವರ ಮಾತೇಕೆಮ್ಮ ರಣದು
ತ್ಸವದ ರಚನಾಗಮವ ನೋಡೆಂದಸುರ ಗರ್ಜಿಸಿದ ೨೦

ನೀವು ರಕ್ಕಸರಾಯಗುಲದವ । ರಾವು ರಕ್ಕಸರಲ್ಲ ನಿಮಗಾ
ದೇವಕುಲವಂಜುವುದು ದೇವರಿಗಂಜುವೆವು ನಾವು
ಆವುದಭ್ಯಂತರವು ನಿಮಗಮ । ಗಾವುದಾಹವರಚನೆಯುದ ಸಂ
ಭಾವಿಸೈ ನೀನೆನುತ ಹೂಡಿದನಸಮ ಮಾರ್ಗಣವ ೨೧

ಹೂಡಲಸ್ತ್ರವನಸ್ತ್ರವಿದಿರಲಿ । ಮೂಡಿ ಮುಂಚದ ಮುನ್ನ ಬಾಣದ
ಜೋಡ ತೊಡಿಸಿದನಸುರನಸುರವಿಘಾಡ ರಾಘವನ
ಆಡಲೇನಾ ರಾಘವನ ಕೈ । ಗಾಡಿಕೆಯ ಕಣೆ ಕತ್ತಲೆಯು ಕ
ಟ್ಟಾಡಿಕೆಯ ಖಳನವಯವವ ಬಗಿದುಗಿದುದಗಲದಲಿ ೨೨

ದೇವರೊಳಗಗ್ಗಳನಲಾ ರಾ । ಜೀವನಯನನು ಯಾತುಧಾನಕು
ಲಾವಳಿಯೊಳತಿಬಲನಲಾ ಮಧ್ಯಮ ಪುಲಸ್ತ್ಯಸುತ
ಆವ ಗುರುಲಘುಚಿತ್ರದಸ್ತ್ರಕ । ಲಾವಿದರೊ ಕದನೈಕವಿಶ್ರುತ
ಕೋವಿದರೊ ಕೋದಂಡಮಹಿಮೆಯುಲಣುಗ ಕೇಳೆಂದ ೨೩

ಗೌರವವನ್ನು ಮುಚ್ಚಿಟ್ಟು ಬದುಕುವವರ ಗುಂಪಿಗೆ ನೀನು ಸೇರಿದವನಲ್ಲ" ಎಂದ ಕುಂಭಕರ್ಣ, ೨೦. "ಯುದ್ಧದಲ್ಲಿ ಸೋತು ಭೋಗದ ಸ್ತ್ರೀಯರನ್ನು ನಮ್ಮ ರಾಕ್ಷಸವಂಶದಲ್ಲುದಿಸಿದವನಿಗೆ ಕೊಟ್ಟು ರಕ್ಷಣೆ ಪಡೆದ ದೇವತೆಗಳು ಮನುಷ್ಯರು ಉರಗರು ಒಂಬತ್ತು ಸಾವಿರ ! ಅದು ಹಾಗಿರಲಿ ; ಅವರ ಮಾತೇಕೆ ? ನಮ್ಮ ಯುದ್ಧಕೌಶಲದ ರೀತಿಯನ್ನು ನೋಡು" ಎಂದು ಕುಂಭಕರ್ಣ ಗರ್ಜಿಸಿದ. ೨೧. "ನೀವು ರಾಕ್ಷಸರಾಜವಂಶದವರು, ನಾವು ರಾಕ್ಷಸರಲ್ಲ. ನಿಮಗೆ ದೇವತೆಗಳ ಗುಂಪು ಹೆದರುವುದು, ಆದರೆ ನಾವು ದೇವರಿಗೆ ಅಂಜುತ್ತೇವೆ, ನಿಮಗೂ ನಮಗೂ ಯಾವ ಸಂಬಂಧ ! ಯುದ್ಧಕಾರ್ಯವೇನಿದೆಯೋ ಅದನ್ನು ನೀನು ಗಮನಿಸು" ಎನ್ನುತ್ತ ರಾಮನು ಅಸಾಮಾನ್ಯ ಬಾಣವನ್ನು ಹೂಡಿದನು. ೨೨. ಬಾಣವನ್ನು ಹೂಡಲು ಅದು ಎದುರಿಗೆ ಬಂದು ಮುಂದೆ ಹೋಗುವುದಕ್ಕೆ ಮೊದಲೇ ಅಸುರಾರಿ ರಾಮನಿಗೆ ಕುಂಭಕರ್ಣನು ಬಾಣಗಳ ಕವಚವನ್ನು ತೊಡಿಸಿದನು. ಏನು ವರ್ಣಿಸಲಿ, ಆ ರಾಘವನ ಕೈಚಳಕದ ಬಾಣಗಳು ಕತ್ತಲೆಯಂತೆ ಕಡುಗಪ್ಪು ದೇಹದ ರಾಕ್ಷಸನ ದೇಹವನ್ನೆಲ್ಲ ಬಗೆದು ಚುಚ್ಚಿದವು. ೨೩. 'ದೇವರುಗಳಲ್ಲಿ ಕಮಲನಯನ ರಾಮನು ಶ್ರೇಷ್ಠನು, ರಾಕ್ಷಸಕುಲದಲ್ಲಿ ಪುಲಸ್ತ್ಯನ ನಡುಕಲಮಗ ಕುಂಭಕರ್ಣನು ಮಹಾಬಲಶಾಲಿ. ಗುರು ಲಘುಗತಿಗಳಲ್ಲಿ ಚಮತ್ಕಾರದ ಅಸ್ತ್ರಪ್ರಯೋಗದಲ್ಲಿ ಇಬ್ಬರೂ ಅದೆಂಥ ನಿಪುಣರೋ ! ಬಿಲ್ವಿದ್ಯೆಯಲ್ಲಿ ಅದೆಂಥ ಯುದ್ಧಕಲಾವಿಶಾರದರೋ ! ಕೇಳು

ಬಿಡುವ ಹೂಡುವ ಸರಳಿಸುವ ಶರ । ದೆಡದೆರಹಿಗಿಲ್ಲವಧಿ ಸುಭಟರ
ತಡೆವ ತವಕಿಸುವಂಬಿನಂಬುಧಿಗಾವುದೋ ಸೀಮೆ
ಕಡುಮನದ ಕೋಪಗಳ ಬಲಿದಿ । ಟ್ಟಡಿಯ ದೃಷ್ಟಿಯ ಮುಷ್ಟಿವಾಳದ
ಸಡಿಪಡದ ಸೌರಂಭರೆಚ್ಚಾಡಿದರು ಸರಿಸದಲಿ ೨೪

ಧನುಗಳೋ ಸುರಧನುಗಳೋ ನಿಡು । ದನಿಗಳೋ ನಿರ್ಘಾತ ನಿನದವೊ
ತನುಗಳೋ ತುಂಬಿದ ಮಹೋದಕದಭ್ರಕಾಂತಿಗಳೊ
ಘನಶರೌಘನಿಪಾತಗಳೊ ಘನ । ಜನಿತ ವರುಷಾಸಾರಗಳೊ ತಾ
ನೆನೆ ಭಟದ್ವಯದಾಹವಾಕೃತಿ ಮೋಹಿಸಿತು ಜಗವ ೨೫

ಹಾಯಿವಸ್ತ್ರದ ಬಿಜುಬಿಗಮರನಿ । ಕಾಯ ಕಂಪಿಸುತಿರ್ದುದಬ್ಬರ
ದಾಯತಿಕೆಗಬ್ಬರಿಸುತಿರ್ದುದಜಾಂಡ ಬಿಲುರವಕೆ
ಬಾಯಿಬಿಡುತಿರ್ದುದು ಧರಾತಳ । ವಾಯಿತೀ ಕದನದಲಿ ತ್ರಿಭುವನ
ದಾಯುವಿಗೆ ನಿರ್ವಾಹವೆನುತಿರ್ದನು ಸರೋಜಭವ ೨೬

ಅಂಬ ತಿರುವಿನಲೊದೆವ ಗತಿಗಾ । ಯೆಂಬನಮರರ ಗುರು ಮಹಾದೇ
ವೆಂಬನಸುರಾಚಾರ್ಯನಮರಾಸುರರ ಮುಂಬಿನಲಿ
ಅಂಬ ಗರ್ಭಿಣಿಯಾದಳೋ ಜಗ । ದಂಬಿಕಾಸತಿಯೆನಲು ಭುವನಕ
ದಂಬ ಬಾಣದಲಡಗಿದುದು ಭಟರಿಬ್ಬರೆಸುಗೆಯಲಿ ೨೭

ವತ್ಸ ಎಂದರು ವಾಲ್ಮೀಕಿಗಳು. ೨೪. ಬಿಡುವ, ಹೂಡುವ, ಚಿಮ್ಮಿಸುವ ಬಾಣಗಳ ನಡುವೆ ಅಂತರವಿಲ್ಲ ; ತಡೆಯುವ, ಉತ್ಸಾಹಿಸುವ ವೀರರ ಬಾಣಗಳ ಸಾಗರಕ್ಕೆ ಎಲ್ಲೆ ಯಾವುದೋ ! ಸ್ಥಿರಚಿತ್ತದಿಂದ ಕೆರಳಿ ದೃಢವಾಗಿ ಹೆಜ್ಜೆಯೂರಿ ನಿಂತು ನೆಟ್ಟದೃಷ್ಟಿಯಿಂದ ಮುಷ್ಟಿ ಹಿಡಿದು ಸಡಿಫಡ ಎಂದು ಸಡಗರದಿಂದ ವೀರರಿಬ್ಬರು ಮುಖಾಮುಖಿಯಾಗಿ ಬಾಣಗಳಿಂದ ಹೊಡೆದಾಡಿದರು. ೨೫. 'ಬಿಲ್ಲುಗಳೋ, ಕಾಮನಬಿಲ್ಲುಗಳೋ ! ಆರ್ಭಟಗಳೋ, ಸಿಡಿಲಿನ ಶಬ್ದವೋ ! ದೇಹಗಳೋ, ಜಲಕಣಗಳು ತುಂಬಿದ ಮೋಡದ ಕಾಂತಿಗಳೋ! ಅಧಿಕ ಬಾಣಗಳ ಬೀಳುವಿಕೆಗಳೋ, ಮೋಡದಿಂದ ಸುರಿಯುವ ಜಡಿಮಳೆಗಳೋ!' ಎನ್ನುವಂತೆ ಇಬ್ಬರು ವೀರರ ಯುದ್ಧವು ಜಗತ್ತಿನ ಮನಸ್ಸನ್ನು ಸೂರೆಗೊಂಡಿತು. ೨೬. ನುಗ್ಗುವ ಅಸ್ತ್ರದ ಬಿರುಸಿಗೆ ದೇವತೆಗಳು ನಡುಗುತ್ತಿದ್ದರು. ವೀರರ ಭಾರಿ ಗರ್ಜನೆಗೆ ಬ್ರಹ್ಮಾಂಡವು ಬಿರಿಯುತ್ತಿತ್ತು. ಅವರ ಧನುಷ್ಟಂಕಾರ ಶಬ್ದಕ್ಕೆ ಭೂಮಂಡಲವು ಬಾಯಿಬಿಡುತ್ತಿತ್ತು. ಈ ಕಾಳಗದಲ್ಲಿ ಮೂರುಲೋಕಗಳ ಆಯುಸ್ಸು ಪೂರೈಸುವುದು ಎಂದು ಬ್ರಹ್ಮನು ನುಡಿಯುತ್ತಿದ್ದನು. ೨೭. ಬಿಲ್ಲ ಹಗ್ಗದಿಂದ ಬಾಣವು ಒದೆದುಕೊಂಡು ಹೋಗುವ ವೇಗಕ್ಕೆ 'ಆ !' ಎನ್ನುವನು. ಅಮರರ ಎದುರುಗಡೆಯಲ್ಲಿ ದೇವತೆಗಳ ಗುರು ಬೃಹಸ್ಪತ್ಯಾಚಾರ್ಯ : ರಾಕ್ಷಸರ ಮುಂದುಗಡೆಯಲ್ಲಿ ಶುಕ್ರಾಚಾರ್ಯನು 'ಮಹಾದೇವ !' ಎಂದು ಉದ್ಗಾರ ತೆಗೆಯುವನು. ಜಗತ್ತಿನ ಅಂಬಿಕೆಯು ಬಾಣಗಳನ್ನು ಗರ್ಭದಲ್ಲಿ ಧರಿಸಿದಳೋ ಎಂಬಂತೆ ವೀರ

ಬಿಡು ಸರಳ ಮಂಡಳಿಯು ಖಂಡಲ । ಗಿಡಿಯುಲಂಬುಧಿ ಬತ್ತ ಬಗೆದುದು
ಸಿಡಿವ ಕಿಡಿಗಿಳೆ ಹೊತ್ತಿ ಹೊಗೆದುದು ಪೊರಳಿಗಿಡಿಗಳಲಿ
ಹೊಡಕರಿಸಿ ಹೊದಚಿದ್ದು ರ್ಝಳದಲಿ । ರ್ಝಡಿದುದಾಶಾಭಿತ್ತಿ ಬವರವ
ನಡುಗಿಸಿದುದಂದಿನ ನೃಸಿಂಹ ಹಿರಣ್ಯಕಾಸುರರ ೨೮

ಕಾದಿದರು ಕೈಗುಂದದಿಟ್ಟೆಡೆ । ಮೈದೆಗೆಯದಳವಿಯಲಿ ಹಳಮೆಯ
ಕೈದುಕಾಜಿರ ಕದನಕುಶಲಕೆ ಕೋಟಿಮಡಿಯೆನಲು
ಆದರಿಸಿದನು ಬಳಿಕಲಾ ಕ್ರ । ವ್ಯಾದ ಸುಭಟನ ಕೃಪೆಯಲಾ ದೂ
ರ್ವಾದಳಶ್ಯಾಮಳನು ಹೂಡಿದ ಕೋಲ ತೋಹಿನಲಿ ೨೯

ಅಸುರ ಕೇಳು ಕಠೋರಬಲರೊಳು । ಹೆಸರೆನಿಸಿದಗ್ಗಳದ ಭಟ ನೀ
ಜಸದಲತಿಬಲ ನೀ ಜಗತ್ರಯಕಧಿಕ ವೀರನಹೆ
ವಿಶಿಖವೆಮ್ಮದಮೋಘ ಮೇಲನು । ವಶನು ನಿನ್ನ ಸಹೋದರನು ನಮ
ಗಸುಹೃದಯ ನೀನಲ್ಲ ಕೊಲ್ಲೆನು ಹೋಗು ನೀನೆಂದ ೩೦

ಕಳುಹು ನಿನ್ನಗ್ರಜನ ವಿಗ್ರಹ । ದೊಳಗೆ ನಿನ್ನವನುಳಿಯೆ ನೀ ತಾ
ನುಳಿದವನು ರಿಪುವಳಿದರೊಡಹುಟ್ಟಿದ ವಿಭೀಷಣನ
ಬಳಿಯ ಬದುಕುವುದಿದುವೆ ನೀತಿಯ । ನೆಲೆ ನಿರರ್ಥಕ ಸತ್ತು ಕಾಬ
ಗ್ಗಳದ ಸ್ವರ್ಗವದೇಕೆ ಮನವನು ತಿಳಿದುಕೋಯೆಂದ ೩೧

ರಿಬ್ಬರ ಬಾಣಪ್ರಯೋಗದಿಂದ ಲೋಕಗಳು ಬಾಣಗಳಲ್ಲಿ ಅಡಗಿದವು. ೨೮. ಬಾಣಗಳ ಸಮೂಹದಿಂದೆದ್ದ ಕಿಡಿಯ ತುಂಡುಗಳಿಗೆ ಸಮುದ್ರವು ಬತ್ತಿಹೋಗುವಂತಾಯಿತು ; ಬಾಣಗಳಿಂದ ಹಾರಿದ ಕಿಡಿಗಳು ಉಂಡುಂಡೆಯಾಗಿ ಹೊತ್ತಿಕೊಂಡು ಹೊಗೆಯೆಬ್ಬಿಸಿದವು. ಕಿಡಿಗಳ ತಾಪವು ಹೊರಟು ದಿಗ್ವಲಯಗಳನ್ನು ತುಂಬಿತು. ಪೂರ್ವದಲ್ಲಿ ನಡೆದ ನರಸಿಂಹ ಹಿರಣ್ಯಕಾಸುರರ ಕಾಳಗವನ್ನು ನಡುಗಿಸಿತು, ಈ ವೀರರಿಬ್ಬರ ಕದನ. ೨೯. ಹಿಂದಿನ ಕಾಲದ ವೀರರ ಯುದ್ಧಕೌಶಲ್ಯಕ್ಕೆ ಕೋಟಿಯಷ್ಟು ಅತಿಶಯವೆನ್ನುವಂತೆ ಕೈಗುಂದದೆ ಎದುರಿನಿಂದ ಹಿಂದೆಗೆಯದೆ ಪರಾಕ್ರಮದಿಂದ ಕುಂಭಕರ್ಣ ರಾಮರು ಹೋರಾಡಿದರು. ಗರಿಕೆಯ ಎಸಳಿನಂತೆ ಶ್ಯಾಮಲವರ್ಣದವನಾದ ರಾಮನು ತಾನು ಹೂಡಿದ ಬಾಣಗಳ ಸಾಲಿನಿಂದ ಉಳಿಸಿ ಕುಂಭಕರ್ಣನನ್ನು ಕರುಣೆಯಿಂದ ಆದರಿಸಿದನು. ೩೦. "ರಾಕ್ಷಸ, ಕೇಳು. ಕಠಿಣ ಬಲಶಾಲಿಗಳಲ್ಲಿ ನೀನು ಪ್ರಸಿದ್ಧಯೋಧನಾಗಿದ್ದೀಯೆ, ಮಹಾಶಕ್ತಿಶಾಲಿ ಯೆಂಬ ಕೀರ್ತಿಯನ್ನು ಪಡೆದಿದ್ದೀಯೆ, ಮೂರುಲೋಕಗಳಿಗೂ ಅತಿಶಯ ವೀರನಾಗಿ ದ್ದೀಯೆ. ನಮ್ಮ ಈ ಬಾಣವು ಅಮೋಘವಾದುದು. ನಿನ್ನ ಸಹೋದರ ನನ್ನ ಬಾಣಕ್ಕೆ ವಶನಾಗುವವನು. ನೀನು ನನ್ನ ಶತ್ರುವಲ್ಲ. ನಿನ್ನನ್ನು ಕೊಲ್ಲುವುದಿಲ್ಲ ಹೋಗು" ಎಂದ ರಾಮ. ೩೧. "ನಿನ್ನ ಅಣ್ಣನನ್ನು ಯುದ್ಧಕ್ಕೆ ಕಳುಹಿಸು. ಯುದ್ಧದಲ್ಲಿ ನಿನ್ನಣ್ಣನು ಉಳಿದರೆ ನೀನೂ ಬದುಕಿಕೊಂಡವನು. ಶತ್ರು ಸತ್ತರೆ ನಿನ್ನ ಸಹೋದರ ವಿಭೀಷಣನ ಆಶ್ರಯಪಡೆದು ಬದುಕುವುದೇ ನೀತಿ. ವ್ಯರ್ಥವಾಗಿ ಸತ್ತು ಪಡೆಯುವ

ತಿಳಿದಡಾವ್ ತಾಮಸರು ತಂದ್ರಿಯು । ಬಳಿಯುವರು ಮೇಲಸುರಕರ್ಮದ
ಬಳಕೆ ನಮಗುಂಟಳಿಯು ಮೂರ್ಖರು ಶಿಷ್ಯಜನವೆಮಗೆ
ತಲೆ ಹಱಿದರಟ್ಟೆಯಲಿ ಕಾದುವ । ಕಲಿಗಳೆಂಬುದ ಕೇಳಿದಱಿಯಾ
ಕಲುಷಹೃದಯತನವಿರಲಿ ಕರುಣದ ಮಾತದೇಕೆಂದ ೩೨

ನೋಡು ನಮ್ಮಯ ಸರಳ ಸಮಯ ಸ । ಗಾಢತರ ಸಂಗ್ರಾಮವನು ಖಯ
ಖೋಡಿಯಿಲ್ಲದೆ ಬಲ್ಲಿದನು ಖಳನೆಂದು ಲೇಸಾಗಿ
ನೋಡೆನುತ ಸಬಳದ ಸಮಾನದ । ಜೋಡಣೆಯ ಜವಗತಿಯ ಸರಳಲಿ
ಜೋಡಿಸಿದನುಬ್ಬೆಱಿದು ರಘುಕುಲಸಾರ್ವಭೌಮಕನ ೩೩

ಮುನಿಪ ಕೌಶಿಕದತ್ತಮಂತ್ರದ । ಘನತನುತ್ರದ ಮಹಿಮೆಯಲಿ ಗೋ
ವಿನಿಯಪತಿ ತಾನಾಗಿ ಬದುಕಿದನಲ್ಲದುಳಿದಂತೆ
ತನುಜ ಕೇಳಾ ಕುಂಭಕರ್ಣನ । ಕನಲಿಕೆಯ ಕದನಗಳ ಕಣೆಗಳ
ಮೊನೆಯಲುಳಿವವರಾರು ಮರ್ತ್ಯಾಮರಕದಂಬದಲಿ ೩೪

ಲಾಘವದೊಳವನೆಚ್ಚ ನಿಶಿತ ಶ । ರೌಘವನು ತಱಿದೊಟ್ಟಿ ರಾಕ್ಷಸ
ಮೇಘಮಾರುತನಿದಿರಿನಲಿ ಮದವೇಱಿ ಬೊಬ್ಬಿಱಿದು
ಆ ಘನೋನ್ನತನುಗ್ರಧನುವನ । ಮೋಘಶರದಿಂದೆಸಲು ಸಕಲಸು
ರೌಘವಾಯೆಂದುಲಿಯೆ ಕಿಡಿ ನೆಗೆದವು ನಭೋಂತರಕೆ ೩೫

ಸ್ವರ್ಗದಿಂದ ಏನು ಫಲ ? ನಿನ್ನ ಮನಸ್ಸಿನಲ್ಲಿ ಯೋಚಿಸಿ ನೋಡು" ಎಂದ ರಾಮ. ೩೨. "ತಿಳಿದುನೋಡಲು ನಾವು ತಮೋಗುಣದಿಂದ ಕೂಡಿದವರು, ನಿದ್ದೆಯಲ್ಲಿ ಮುಳುಗಿದವರು. ಅಲ್ಲದೆ ನಾವು ರಾಕ್ಷಸಕರ್ಮಿಗಳು. ಜಗತ್ತಿನ ಮೂರ್ಖರು ನಮ್ಮ ಶಿಷ್ಯರು. ತಲೆ ಕತ್ತರಿಸಿ ಬಿದ್ದರೂ ಮುಂಡದಿಂದ ಕಾದುವ ಕಲಿಗಳು ನಾವು ಎಂಬುದನ್ನು ನೀನು ಕೇಳಿ ತಿಳಿಯೆಯಾ ? ಕಠಿಣಹೃದಯ ನಿನ್ನಲ್ಲಿರಲಿ. ನನ್ನೊಡನೆ ಕರುಣೆಯ ಮಾತೇಕೆ ?" ಎಂದ ಕುಂಭಕರ್ಣ. ೩೩. "ನಮ್ಮ ಬಾಣದ ಉಗ್ರಕದನವನ್ನು ಅಂಜಿಕೆಬಿಟ್ಟು ನೋಡು, ಈ ರಾಕ್ಷಸನು ಸಮರ್ಥನೆಂಬುದನ್ನೂ ನೋಡು" ಎನ್ನುತ್ತ ಕುಂಭಕರ್ಣನು ಈಟಿಗೆ ಸಮಾನ ವೇಗದ ಬಾಣವನ್ನು ಗರ್ಜಿಸಿ ರಘುಕುಲಚಕ್ರವರ್ತಿಯಮೇಲೆ ಬಿಟ್ಟನು. ೩೪. ವಿಶ್ವಾಮಿತ್ರಮಹರ್ಷಿಯು ಕೊಟ್ಟ ಮಂತ್ರ ಮತ್ತು ಶ್ರೇಷ್ಠ ಕವಚಗಳ ಮಹಿಮೆಯಿಂದ ಲಕ್ಷ್ಮೀಪತಿ ರಾಮನು ಬದುಕಿದನು. ಕುಮಾರ ಕೇಳು, ಹಾಗಿಲ್ಲದೆ ಕುಂಭಕರ್ಣನು ಕೆರಳಿ ಬಿಡುವ ಬಾಣಗಳ ಬಾಯಿಗೆ ಸಿಕ್ಕಿ ದೇವತೆಗಳಲ್ಲಾಗಲಿ ಮಾನವರಲ್ಲಾಗಲಿ ಬದುಕಿ ಉಳಿದವರಾರು ? ಎಂದು ವಾಲ್ಮೀಕಿಗಳು ನುಡಿದರು. ೩೫. ಕೌಶಲ್ಯದಿಂದ ಕುಂಭಕರ್ಣನು ಹೊಡೆದ ಹರಿತ ಬಾಣಗಳನ್ನು ಕತ್ತರಿಸಿ ರಾಶಿಹಾಕಿದನು. ರಾಕ್ಷಸರೆಂಬ ಮೋಡವನ್ನು ಚದುರಿಸುವ ವಾಯುರೂಪಿ ರಾಮನು ಮದಿಸಿ ಬೊಬ್ಬಿರಿದು ಆ ವೀರನ ಪ್ರಚಂಡ ಧನುಸ್ಸನ್ನು ಅಮೋಘಬಾಣದಿಂದ ಕತ್ತರಿಸಲು ಆಕಾಶಕ್ಕೆ ಕಿಡಿಗಳು ಹಾರಿ

ನೆಗಹಿದನು ಬಳಿಕವನು ಕಮಲದ । ಮಗನು ಪೂರ್ವದಲಿತ್ತ ಶಕ್ತಿಯು
ಧಗಧಗಿಲ್ಧಗಿಲೆಂದು ದಳ್ಳುರಿ ದಟ್ಟಿಸಿತು ನಭವ
ಜಗುಳುಗಿಡಿಗಳ ಗಡಣ ದೆಸೆದೆಸೆ । ಗುಗುಳಿದುದು ದಿಗುಭಿತ್ತಿಗಳ ಕಾ
ರ್ಬೊಗೆ ವಿಘಾತಿಸೆ ಕಾಡ ಕೂಡಿದುದಮರಸಂದೋಹ ೩೬

ಇದು ಕಣಾ ಹರಿಯಜಭವಾದ್ಯರ । ಹೃದಯಕಂಪನಶಕ್ತಿ ನೋಡಿಂ
ತಿದು ಜಗತ್ಸಂಹರಣಕಾರಣ ಘೋರತರಶಕ್ತಿ
ಇದನು ನೀನುತ್ತರಿಸಿದಡೆ ದಶ । ವದನ ತಂದಂಗನೆಯು ಮುಂದಣ
ಮದುವೆ ನಿನ್ನದು ನಿನಗೆ ಸರಿಯಹ ಸುಭಟರಿಲ್ಲೆಂದ ೩೭

ನಡುಗಿದನು ಮನದಲಿ ವಿಭೀಷಣ । ನಡುಗಿತೇ ಮಹಿಮಾತಿಶಯದು
ಗ್ಗಡದ ರಘುನೃಪಕೀರ್ತಿ ರಾಮಾಯಣದ ನಾಟಕದ
ತಡೆವರಾರೀ ಪ್ರಳಯಶಕ್ತಿಯ । ಕಡುಹನಕಟಾ ಮುಕುತಿಮಾನಿನಿ
ಹಿಡಿದಳೇ ಹರಿದಶ್ವವಂಶನನೆನುತ ಹರಿತಂದ ೩೮

ಏನು ಬಲ್ಲವಿಕೆಯೊ ವಿಭೀಷಣ । ನೇನ ಹೇಳಲು ಬಂದನದಟರೊಳ
ಗಾ ನರಾಂಗದ ನಿಗಮ ಚೂಡಾಮಣಿ ಸರೋಜಜನ
ಧ್ಯಾನದಭಿಮಂತ್ರಕದ ಶರಸಂ । ಧಾನದಲಿ ಬೊಬ್ಬಿಱಿವುತೆಚ್ಚನ
ನೂನಬಲ ಕಲಿ ಕುಂಭಕರ್ಣನ ಕರತಳಾಯುಧವ ೩೯

ದವು. ಸಮಸ್ತದೇವತೆಗಳು 'ಆ !' ಎಂದು ಕೂಗಿದರು. ೩೬. ಆಗ ಬ್ರಹ್ಮನು ಹಿಂದೆ ಕೊಟ್ಟಿದ್ದ ಶಕ್ತ್ಯಾಯುಧವನ್ನು ಕುಂಭಕರ್ಣನು ಎತ್ತಿಕೊಂಡನೋ ಇಲ್ಲವೋ ಧಗಧಗಿಲ್ ಧಗಿಲ್ ಎಂದು ದಳ್ಳುರಿ ಆಕಾಶವನ್ನು ಗದರಿಸಿತು, ಕಿಡಿಗಳ ರಾಶಿ ದಿಕ್ಕುದಿಕ್ಕುಗಳಿಗೆ ಚಿಮ್ಮಿತು, ಕಪ್ಪುಹೊಗೆಯು ದಿಙ್ಮಂಡಲಗಳನ್ನಿರಿಯಿತು, ದೇವತೆಗಳು ಕಾಡಿಗೆ ಓಡಿದರು. ೩೭. "ಬ್ರಹ್ಮ ವಿಷ್ಣು ಮಹೇಶ್ವರರ ಎದೆಯನ್ನು ನಡುಗಿಸುವ ಶಕ್ತಿ ಇದು ; ನೋಡು, ಇದು ಜಗತ್ತನ್ನು ನಾಶಪಡಿಸುವ ಭಯಂಕರ ಶಕ್ತಿ. ಇದನ್ನು ನೀನು ಗೆದ್ದರೆ ದಶಮುಖನು ಕರೆತಂದ ಸ್ತ್ರೀಯೊಡನೆ ನಿನಗೆ ನೂತನ ವಿವಾಹವನ್ನು ಮಾಡಿಸುವೆ. ಆಗ ನಿನಗೆ ಸರಿಸಮಾನ ವೀರರಿರುವುದಿಲ್ಲ" ಎಂದ ಕುಂಭಕರ್ಣ ೩೮. ವಿಭೀಷಣನು ಮನಸ್ಸಿನಲ್ಲಿಯೇ ನಡುಗಿದನು. 'ರಾಮಾಯಣ ನಾಟಕದ ರಘುವಂಶದರಸನ ಮಹಿಮಾತಿಶಯದ ಕೀರ್ತಿ ಕುಗ್ಗಿತೇ ? ಈ ಪ್ರಳಯಶಕ್ತಿಯ ಉಗ್ರತೆಯನ್ನು ತಡೆಯಬಲ್ಲವರಾರು ? ಅಯ್ಯೋ, ಮೋಕ್ಷಲಕ್ಷ್ಮಿಯು ರವಿವಂಶದ ರಾಮನನ್ನು ಹಿಡಿದಳೇ ?' ಎನ್ನುತ್ತ ವಿಭೀಷಣ ಧಾವಿಸಿ ಬಂದ. ೩೯. ರಾಮನ ಜ್ಞಾನವೆಂಥದೋ ! ವಿಭೀಷಣನು ಏನು ವಿಷಯವನ್ನು ತಿಳಿಸಲು ಬಂದನೋ. ಅಷ್ಟರೊಳಗಾಗಿ ನರಾವತಾರಿ ವೇದಪರಮಪುರುಷ ರಾಮನು ಬ್ರಹ್ಮನನ್ನು ಧ್ಯಾನಿಸಿ ಮಂತ್ರಿಸಿದ ಬಾಣದಿಂದ ಬೊಬ್ಬಿರಿದು ಕುಂಭಕರ್ಣನ

ನೆಗಹಿತರಿಶಕ್ತಿಯನು ಶರವಾ । ಗಗನಗಂಗೆಯ ಕುಡಿದುದಲ್ಲಿಯು
ಹೊಗೆಯ ಹೊರಳಿಯಲುದಕವನು ಹಸಿವಡಗದಿರೆ ಬಳಿಕ
ನಗಕುಲಾಂತಕ ಮುಖ್ಯ ದಿವಿಜಾ । ಳಿಗಳನಟ್ಟಿಯಟ್ಟಿದುದು ಸುಟ್ಟುದು
ನಗರಗಳ ನಿರ್ಜರರ ನಿಂದುದು ಪುರದೊಳಬುಜಜನ ೪೦

ಕೈದು ಕೈವಿಡಿಯೋಡಿದುದ ಕಂಡು ಮ । ಹಾ ದುರಾಗ್ರಹಿ ರಕ್ಕಸನು ಬಲು
ಗೈದುವಿದೆಲಾಯೆನುತ ಪರಿಘದಲಿಟ್ಟನಿನನುಲನ
ಐದಿತದು ಕಿಡಿಗೆದರುತಂಬರ । ವೈದೆ ದಳ್ಳುರಿ ಮಸಗೆ ಮಸೆಗೋ
ಲೈದರಿಲಿ ಶತಚೂರ್ಣವಾಗಲು ಕಡಿದನಾ ರಾಮ ೪೧

ಪರಿಘವಳಿದುದ ಕಂಡು ಬಾಹಾ । ಪರಿಘನಿಟ್ಟನು ಕೋಟಿಭಾರದ
ಗಿರಿಯ ಸಾರದ ಗದೆಯಲಾ ಗಂಭೀರ ವಿಕ್ರಮನ
ಭರದಿ ತಿರುಗುತ ಬಹ ಗದಾ ನಿ । ರ್ಭರದ ಸುಳಿಗಾಳಿಯಲಿ ಪುಷ್ಪಕ
ತಿರುಗುತಿರ್ದುದು ಕೂಡೆ ಕಮಲಭವಾದಿ ಸುರಗಣದ ೪೨

ಜಗವ ಬೆದರಿಸುತೈದಿ ಬರುತಿಹ । ವಿಗಡ ರಕ್ಕಸಗದೆಯ ಕಾಣುತ
ಜಗದ ಜಾಣರ ದೇವ ಝಡಿತೆಯಲಾಶುಗಾಸ್ತ್ರದಲಿ
ಜಗುಳಲೆಚ್ಚನು ಬಿದ್ದುದದು ರಿಪು । ನಗರ ಮಧ್ಯದಲಿದ್ದ ರಕ್ಕಸ
ರುಗುಳಿದರು ಜೀವಗಳ ಜಪಪುರವಾಯ್ತು ರಿಪುನಗರ ೪೩

ಕೈಯ ಆಯುಧಕ್ಕೆ ಹೊಡೆದನು. ೪೦. ರಾಮನ ಅಸ್ತ್ರವು ಕುಂಭಕರ್ಣನ ಕೈಯಲ್ಲಿದ್ದ ಶಕ್ತ್ಯಾಯುಧವನ್ನು ಆಕಾಶಕ್ಕೆ ಹಾರಿಸಿತು. ಅನಂತರ ಹೊಗೆಯ ಸಮೂಹದ ನಡುವೆ ಆಕಾಶಗಂಗೆಯ ನೀರನ್ನು ಕುಡಿಯಿತು. ಆಗಲೂ ಹಸಿವು ಅಡಗದೆ ಇರಲು ದೇವೇಂದ್ರನೇ ಮೊದಲಾದ ದೇವತೆಗಳನ್ನು ಅಟ್ಟಿಸಿಕೊಂಡು ಹೋಗಿ ದೇವತೆಗಳ ನಗರಗಳನ್ನು ಸುಟ್ಟಿತು. ಕೊನೆಗೆ ಬ್ರಹ್ಮಪುರಿಗೆ ಹೋಗಿ ಅಲ್ಲಿ ನಿಂತಿತು. ೪೧. ಶಕ್ತ್ಯಾಯುಧವು ಕೈಮೀರಿ ಹೊರಟುಹೋದುದನ್ನು ಕಂಡು ದುರಾತ್ಮ ಕುಂಭಕರ್ಣನು ಮಹಾಯುಧವಿದೆಯಲ್ಲವೇ ಎನ್ನುತ್ತ ಪರಿಘಾಯುಧವನ್ನು ರಾಮನ ಮೇಲಕ್ಕೆಸೆದನು. ಆಕಾಶಕ್ಕೆ ದಳ್ಳುರಿಯೇಳಲು ಕಿಡಿಕಾರುತ್ತ ಪರಿಘವು ರಾಮನ ಬಳಿಗೆ ಬಂದಿತು. ರಾಮನು ಹರಿತವಾದ ಐದು ಬಾಣಗಳಿಂದ ನೂರು ಚೂರಾಗುವಂತೆ ಅದನ್ನು ಕತ್ತರಿಸಿ ಹಾಕಿದನು. ೪೨. ಪರಿಘಾಯುಧವು ನಷ್ಟವಾದುದನ್ನು ಕಂಡು ಅಗಳಿಯಂಥ ತೋಳಿನ ಕುಂಭಕರ್ಣನು ಕೋಟಿ ಪರ್ವತಗಳ ತೂಕದ ಗದೆಯಿಂದ ಘನಪರಾಕ್ರಮಿ ರಾಮನನ್ನು ಹೊಡೆದನು. ರಭಸದಿಂದ ತಿರುಗುತ್ತ ಬರುತ್ತಿದ್ದ ಗದೆಯ ಬಿರುಗಾಳಿಗೆ ಸಿಕ್ಕಿ ಬ್ರಹ್ಮನೇ ಮೊದಲಾದ ದೇವತೆಗಳ ಪುಷ್ಪಕವಿಮಾನಗಳು ಗರಗರನೆ ತಿರುಗಿದವು. ೪೩. ಜಗತ್ತನ್ನು ಹೆದರಿಸುತ್ತ ಬರುತ್ತಿರುವ ಭಯಂಕರ ಗದೆಯನ್ನು ಕಾಣುತ್ತ ಜಗತ್ತಿನ ಜ್ಞಾನಿಗಳ ದೇವನಾದ ರಾಮನು ತಕ್ಷಣ ವಾಯುವಿನ ಅಸ್ತ್ರದಿಂದ ಅದನ್ನು ಹೊಡೆದು ಬೀಳಿಸಿದನು. ಆ ಗದೆಯು ಹೋಗಿ ಶತ್ರುವಿನ ಲಂಕಾನಗರ ಮಧ್ಯದಲ್ಲಿ ಬಿದ್ದಿತು. ಅಲ್ಲಿದ್ದ ರಾಕ್ಷಸರು ಗದೆಯ

ಇಟ್ಟನವ ಕಕ್ಕಡೆಯಲಸುರಘ । ರಟ್ಟನನು ಬಳಿಸಲಿಸಿ ರಘುಪತಿ
ತೊಟ್ಟ ಬಾಣದಲೆಚ್ಚು ತುಂಡಿಸಿ ತೂಱಲಸುರೇಂದ್ರ
ಇಟ್ಟಿ ತೋಮರ ಮುಸಲ ಮುದ್ಗರ । ಪಟ್ಟಿ ಪರಶು ಮುಸುಂಡಿಗಳ ಮೊಗೆ
ದಿಟ್ಟನಂಬರವೈದೆ ಕೈದುಕದಂಬಮಯವಾಗೆ ೪೪

ತಱಿದನಾ ಹೇರಿಟ್ಟಿ ತೋಮರ । ನಿಱಿಸಿನಗ್ಗದ ಮುಸಲ ಮುದ್ಗರ
ಮಿಱುಪ ಪಟ್ಟಿಯ ಪರಶು ನಿಶಿತ ಮುಸುಂಡಿ ಮೊದಲಾದ
ತುಱುಗಿ ಬಹ ಬಲುಗೈದುಗಳನೆಡೆ । ದೆಱಹುದೋಱದೆ ಚಾಪಶಂತ್ರದ
ನೆಱವಣಿಗೆಗಳ ದೇವ ದೇವಕದಂಬ ಬೆಱಗಾಗೆ ೪೫

ಆರಿ ಬೊಬ್ಬಿಱಿದಸುರನಳವಿಗೆ । ತೇರ ನೂಕಲು ನಾಕಕೆಚ್ಚನು
ವಾರುವಂಗಳ ತಲೆಯ ತಱಿದೊಟ್ಟಿದನು ಸಾರಥಿಯ
ವೀರ ರಕ್ಕಸ ಬಳಿಕಲಾ ಮದ । ನಾರಿ ಗದಗಂಪಿಸಲು ತಿಗದ ಕ
ಠಾರಿಯನು ತೆಗೆದೊತ್ತಬರಿಸಿದನಳುಕೆ ಭುವನಚಯ ೪೬

ಚರಣತಳದುಪ್ಪರಕೆ ಫಣಿಪನ । ಶಿರಕೆ ನೋವೇಱಿದುದು ದಂಡೆಯ
ಧುರದ ಮುಂಡಿಯ ಲಾಗುಲಂಘನೆಗೊಲೆದುದವನಿತಳ
ತಿರುಗೆ ತಿರುಗಿತು ಮೈಯ ಗಾಳಿಗೆ । ತರಣಿಮಂಡಲ ಬೀಸೆ ಸುರಗಿಯ
ಗರಳವಟ್ಟಿತು ಗಗನಪಥಿಕರ ಹೇಳಲೇನೆಂದ ೪೭

ಅಡಿಗೆ ಸಿಕ್ಕಿ ಪ್ರಾಣಬಿಟ್ಟರು. ಶತ್ರುನಗರವು ಯಮನ ಪಟ್ಟಣವಾಯಿತು. ೪೪. ರಾಕ್ಷಸರನ್ನು ಬೀಸುವ ಕಲ್ಲಾದ ರಾಮನನ್ನು ಕಠಾರಿಯಿಂದ ಕುಂಭಕರ್ಣನು ಹೊಡೆದನು. ಕೂಡಲೆ ರಾಮನು ಬಿಲ್ಲಿನಲ್ಲಿ ಹೂಡಿದ್ದ ಬಾಣದಿಂದ ಕಠಾರಿಯನ್ನು ಕತ್ತರಿಸಿ ಹಾರಿಸಿದನು. ಈಟಿ, ತೋಮರ, ಮುಸಲ, ಮುದ್ಗರ, ಪಟ್ಟಿಯ, ಕೊಡಲಿ, ಮುಸುಂಡಿಗಳನ್ನು ಕುಂಭಕರ್ಣನು ಬೀಸಿ ಬೀಸಿ ಎಸೆಯಲು ಆಕಾಶವೆಲ್ಲ ಆಯುಧಮಯವಾಯಿತು. ೪೫. ಬಿಲ್ವಿದ್ಯಾವಿಶಾರದ ರಾಮನು ಮೇಲೆ ಬರುವ ದೊಡ್ಡ ಈಟಿ, ತೋಮರ, ಮುಸಲ, ಮುದ್ಗರ, ಪಟ್ಟಿಯ, ಕೊಡಲಿ, ಹರಿತವಾದ ಮುಸುಂಡಿ ಮೊದಲಾದ ಒತ್ತೊತ್ತಾಗಿ ಬರುವ ಭಾರಿ ಆಯುಧಗಳನ್ನು ಎಡೆಬಿಡದೆ ಕತ್ತರಿಸಿಹಾಕಲು ದೇವತೆಗಳು ಬೆರಗಾದರು. ೪೬. ಗರ್ಜಿಸಿ ಕೂಗುಹಾಕಿ ಕುಂಭಕರ್ಣನು ರಾಮನ ಸಮೀಪಕ್ಕೆ ರಥವನ್ನು ನುಗ್ಗಿಸಲು ರಾಮನು ಕುಂಭಕರ್ಣನ ರಥದ ಕುದುರೆಗಳ ತಲೆಗಳನ್ನು ಸ್ವರ್ಗಲೋಕಕ್ಕೆ ಹಾರಿಸಿದನು ; ಸಾರಥಿಯನ್ನು ಕತ್ತರಿಸಿ ಹಾಕಿದನು. ಬಳಿಕ ಶಿವನು ಗದಗದನೆ ನಡುಗಲು ವೀರ ರಾಕ್ಷಸನು ಮೂರು ಅಲಗಿನ ಕಠಾರಿಯನ್ನು ತೆಗೆದುಕೊಂಡು ವೇಗವಾಗಿ ರಾಮನ ಮೇಲೆ ನುಗ್ಗಿದನು. ಅದನ್ನು ಕಂಡು ಮೂರು ಲೋಕಗಳೂ ಅಂಜಿದವು. ೪೭. ಕುಂಭಕರ್ಣನು ಎತ್ತಿ ಇಟ್ಟ ಹೆಜ್ಜೆಯ ರಭಸಕ್ಕೆ ಆದಿಶೇಷನಿಗೆ ತಲೆನೋವುಂಟಾಯಿತು ; ಮುಂಡಿಯನ್ನೂರಿ ನೆಗೆದ ಲಾಘವಕ್ಕೆ ಭೂಮಿಯು ತೂಗಾಡಿತು. ಕುಂಭಕರ್ಣನು ತಿರುಗಲು ಅವನ ಮೈಯ ಗಾಳಿಗೆ ಸೂರ್ಯಬಿಂಬವು ತಿರುಗಿತು ; ಅವನು ಕೈ ಬೀಸಲು

ಚಾರಿಯನುಚಾರಿಗಳ ಪಯಗತಿ । ಯೋರೆಪೋರೆಯ ಟವರಿಗಳ ಸಂ
ಚಾರಣೆಯುಲಬ್ಬರಿಸಿ ತಿವಿದು ರಾಘವೇಶ್ವರನ
ವೀರ ಮಝರೇ ಭಾಪುರೇ ರಣ । ಧೀರ ಮೂಜಗಜಟ್ಟಿಯೆನುತಸು
ರಾರಿ ಹೊಳೆವೆಳೆವೆಱೆಯ ಬಾಣದಿನೆಚ್ಚು ಬೊಬ್ಬಿಱಿದ ೪೮

ದಂಡೆಗೊಡ್ಡಿದ ಕರತಳವನು । ದ್ದಂಡ ಸುರಗಿಯ ಮೋಹಳವ ಕೈ
ಕೊಂಡ ಹಸ್ತವ ಕತ್ತರಿಸಿದುದು ಕಣೆ ಕೃತಾಂತಕನ
ದಂಡಿಸರದ ವಸಂತದೋಕುಳಿ । ಯಂದೆಯೆನೆ ಮೋಟೆರಡಱಲಿ ಹೊಱ
ವಂಡುವರುಣಜಲೌಘ ಹೊಱಱಿದುದು ದಿಕ್ತಟಾವಳಿಯ ೪೯

ಬಿಟ್ಟ ಕರವು ಕಠಾರಿಯಿಂದುಱಿ । ಯಟ್ಟಿ ತಿವಿದುದು ಶೀಘದಡವಿಯ
ಬಟ್ಟೆಗರನಾ ದಂಡೆಗೊಡ್ಡಿದ ಕೈಯ ಕಡುಹಿನಲಿ
ಹೊಟ್ಟೆಯಲಿ ಕರುಳೊಕ್ಕ ಕಪಿಗಳ । ಬೆಟ್ಟವಗಣಿತವಾದವಾ ನೊರೆ
ಗಟ್ಟ ಸುರಿವರುಣಾಂಬುನದಿ ಹಲವಾದವಗಲದಲಿ ೫೦

ತೊಡಕುಗರುಳಿನ ತೊಂಗಲಿನ ಹೊಱ । ವಡುವ ನೆತ್ತರ ಬಾದಣದ ಬಳೆ
ಬಿಡುವ ಕಂಗಳಿನರಳಿಕೆಯುಲರೆದೆಱಿದ ಬಾಯಿಗಳ
ಗಿಡಿಗಿರಿದ ಹಲುಗಿರುಕುಗಳ ಹೊಡ । ಗೆಡೆದು ಪೊರಳುವ ಹೆಣನ ರಾಶಿಯ
ಲಿಡಿದುದಿಳೆ ಕಲಿಕುಂಭಕರ್ಣನ ಕರದ ಕದನದಲಿ ೫೧

ಸುರಗಿಯ ವಿಷವು ಗಗನದಲ್ಲಿದ್ದವರನ್ನು ಬೆನ್ನಟ್ಟಿತು. ೪೮. ಯುಕ್ತಿಯಿಂದ ಹಿಂದೆ ಮುಂದೆ ಚಲಿಸುತ್ತ, ಅಂಕುಡೊಂಕಾಗಿ ಹೆಜ್ಜೆಯಿಡುತ್ತ, ತಿರುಗುತ್ತ ಹಲವು ರೀತಿಯ ಚಲನೆಯಿಂದ ಗರ್ಜಿಸಿ ಕುಂಭಕರ್ಣನು ರಾಮನನ್ನು ಮುಷ್ಟಿಯಿಂದ ಹೊಡೆದನು. “ವೀರ, ಮಝರೇ, ಭಾಪುರೇ ! ರಣಧೀರ ! ಮೂರುಲೋಕದ ಜಗಜಟ್ಟಿ !” ಎನ್ನುತ್ತ ರಾಮನು ಹೊಳೆಯುವ ಎಳೆಯಚಂದ್ರನಾಕಾರದ ಬಾಯಿಯ ಬಾಣಗಳಿಂದ ಗರ್ಜಿಸುತ್ತ ಹೊಡೆದ. ೪೯. ತನ್ನ ಹತ್ತಿರಕ್ಕೆ ನೀಡಿದ ಕುಂಭಕರ್ಣನ ಕೈಯನ್ನೂ ಉಗ್ರವಾದ ಸುರಗಿಯಿಂದ ಯುದ್ಧಮಾಡಲುದ್ಯುಕ್ತವಾದ ಹಸ್ತವನ್ನೂ ರಾಮನ ಬಾಣವು ಕತ್ತರಿಸಿಹಾಕಿತು. ಯಮನ ಮನೋಹರವಾದ ವಸಂತದ ಓಕುಳಿಯ ಅಂಡೆಯೋ ಎನ್ನುವಂತೆ ಕುಂಭಕರ್ಣನ ಎರಡೂ ಮೋಟುಗೈಗಳಿಂದ ಚಿಮ್ಮಿದ ರಕ್ತವು ಆಕಾಶವನ್ನು ತುಂಬಿತು. ೫೦. ಕತ್ತರಿಸಿದ ಕುಂಭಕರ್ಣನ ಕೈಯು ಕೈಯಲ್ಲಿ ಹಿಡಿದಿದ್ದ ಕಠಾರಿಯಿಂದ ಕಾಡಿನ ದಾರಿಗರಾದ ವಾನರರನ್ನು ಅಟ್ಟಿಸಿಕೊಂಡು ಹೋಗಿ ಹೊಡೆಯಿತು. ಸಮೀಪದಲ್ಲಿದ್ದ ಕಪಿಗಳಿಗೆ ಕೈತಗುಲಿದ ರಭಸಕ್ಕೆ ಹೊಟ್ಟೆಯಿಂದ ಕರುಳು ಹೊರಟುಕೊಂಡು ಸತ್ತುಬಿದ್ದ ಕಪಿಗಳ ಗುಡ್ಡದಂಥ ರಾಶಿಗಳಿಗೆ ಲೆಕ್ಕವಿಲ್ಲದೇ ಹೋಯಿತು. ನೊರೆಗಟ್ಟಿದ ರಕ್ತದನದಿಗಳು ಅಷ್ಟಗಲದಲ್ಲೂ ಹರಿದವು. ೫೧. ಕುಂಭಕರ್ಣನ ಕತ್ತರಿಸಿದ ಕೈಗಳ ಏಟಿನಿಂದ ತೊಡರಿಕೊಂಡ ಕರುಳಗೊಂಚಲುಗಳ, ಗಾಯದ ತೂತಿನಿಂದ ಹರಿಯುವ ರಕ್ತದ, ಬಳೆಬಿಟ್ಟುಕೊಂಡ ಕಣ್ಣುಗಳ, ಬಿರಿದ ಅರೆ

ಪೋಟಿಸಲಿ ಬಳಿಕಸುರ ಬಾಹಾ । ಸ್ಫೋಟನಂಗೈದೊಡನೆ ಹೊಯ್ದನು
ತಾಟಕೀಮರ್ದನನ ಸಿಡಿಲಪ್ಪಳಿಸಿದಂದದಲಿ
ದಾಟಿ ಕೆಲಕೊಲೆದಸುರರಿಪು ಕೆಲ । ವಾಟಿಸಿದನಂಬುಗಳಲಂಬರ
ದಾಟವಿಕ ರಕ್ಕಸನ ಘನದೋರ್ದಂಡಮಂಡಲವ ೫೨

ಬೀಳುತಪ್ಪಳಿಸಿದವು ಗೋಲಾಂ । ಗೂಲ ಸೇನೆಯನೆರಡು ಭುಜವಾ
ಕಾಲನಾ ಕಲ್ಪಾಂತದಲಿ ಕರದಂಡದಲಿ ಜಗವ
ಬೀಳಗೆಡಹುವವೋಲು ಕೊಲೆಯನು । ಹೇಳಲೇಸದನೆಂಟು ಕೋಟಿಯ
ಮೇಲೆ ಮೂವತ್ತೈದು ಲಕ್ಷವ ಕೊಂದವಗಲದಲಿ ೫೩

ಉರಿದ ಜಗದಲಜಾಂಡರಂಧ್ರದ । ಉರವಣಿಪ ಶಿಖಿಯಂತೆ ರಕುತಗ
ಳೆರಡು ಭುಜಗಳ ಬಾದಣದಲುಚ್ಚಳಿಸಿ ಕಪಿಬಲದ
ಹರಣಗೊಳುತಿರೆ ಕಂಡು ರಘುಪತಿ । ಬೆರಳಲಸುರನ ಹೊಗಳುತಿರೆ ಧರೆ
ಬಿರಿಯೆ ಬಾಯ್ದೆರೆದಬ್ಬರಿಸಿ ನುಂಗಲ್ಕೆ ಹರಿತಂದ ೫೪

ಬೆದರಿ ಬಿದ್ದನು ಖಳನ ಕರ್ಕಶ । ವದನದಬ್ಬರಕಿಂದ್ರ ವಹ್ನಿಯ
ಹೃದಯ ನಡುಗಿತು ಸಿಡಿಲು ಹೊಡೆದಂತಾಯ್ತು ಕಾಲಂಗೆ
ಎದೆ ಬಿರಿದುದಸುರಂಗೆ ನಡುಗಿದ । ನುದಧಿಪತಿ ಬೆಚ್ಚಿದನು ಶಿಖಿಸಖ
ನೊದವಿತಂಜಿಕೆ ಧನಪತಿಗೆ ಭಯವಾಯಿತಭವಂಗೆ ೫೫

ತೆರೆದ ಬಾಯಿಗಳ, ಗಿಟಕಿರಿದು ಹಲ್ಲುಕಚ್ಚಿದ, ಬಿದ್ದು ಹೊರಳುವ ಹೆಣಗಳ ರಾಶಿಯಿಂದ ನೆಲವು ಕಿಕ್ಕಿರಿದುಹೋಯಿತು. ೫೨. ಕುಂಭಕರ್ಣನು ಪೋಟುಗೈಯಿಂದಲೇ ತೋಳನ್ನು ತಟ್ಟಿ ಸಿಡಿಲು ಹೊಡೆದಂತೆ ತಾಟಕೀಮರ್ದನ ರಾಮನನ್ನು ಹೊಡೆದನು. ರಾಮನು ನೆಗೆದು ಪಕ್ಕಕ್ಕೆ ಸರಿದು ಆಕಾಶಕ್ಕೆತ್ತಿದ್ದ ಕುಂಭಕರ್ಣನ ಭಾರಿ ತೋಳುಗಳನ್ನು ಬಾಣಗಳಿಂದ ಕತ್ತರಿಸಿದನು. ೫೩. ಕತ್ತರಿಸಿದ ಕುಂಭಕರ್ಣನ ಎರಡು ತೋಳುಗಳು ಕಪಿಸೈನ್ಯದ ಮೇಲೆ ಅಪ್ಪಳಿಸಿ ಬಿದ್ದವು. ಕಾಲಪುರುಷನು ಕಲ್ಪದ ಕೊನೆಯ ಪ್ರಳಯದಲ್ಲಿ ಕೈಯದಂಡದಿಂದ ಹೊಡೆದು ಕೆಳಕ್ಕೆ ಬೀಳಿಸುವಂತೆ ತೋಳುಗಳು ನಡೆಸಿದ ಕೊಲೆಯನ್ನು ಏನೆಂದು ವರ್ಣಿಸಲಿ. ಎಂಟುಕೋಟಿ ಮೂವತ್ತೈದು ಲಕ್ಷ ಕಪಿಗಳನ್ನು ಕುಂಭಕರ್ಣನ ತೋಳುಗಳು ಕೊಂದವು. ೫೪. ಜಗತ್ತು ಹೊತ್ತಿಕೊಂಡು ಉರಿಯುವಾಗ ಬ್ರಹ್ಮಾಂಡದ ರಂಧ್ರದಲ್ಲಿ ಏಳುವ ಬೆಂಕಿಯಂತೆ ಕುಂಭಕರ್ಣನ ಎರಡು ತೋಳುಗಳ ರಂಧ್ರಗಳಿಂದ ರಕ್ತವು ಚಿಮ್ಮಿ ಕಪಿಸೈನ್ಯದ ಪ್ರಾಣಗಳನ್ನು ಅಪಹರಿಸುತ್ತಿರಲು ಅದನ್ನು ನೋಡಿ ರಘುಪತಿಯು ಬೆರಳಿನಿಂದ ರಾಕ್ಷಸನನ್ನು ಹೊಗಳುತ್ತಿದ್ದನು. ಆಗ ಭೂಮಿ ಬಿರಿಯುವಂತೆ ಕುಂಭಕರ್ಣನು ಬಾಯಿ ತೆರೆದುಕೊಂಡು ಅಬ್ಬರಿಸುತ್ತ ರಾಮನನ್ನು ನುಂಗಲು ನುಗ್ಗಿಬಂದನು. ೫೫. ರಾಕ್ಷಸನ ಕರ್ಕಶವಾದ ಬಾಯಿಯ ಅಬ್ಬರಕ್ಕೆ ಇಂದ್ರನು ಬೆದರಿ ಬಿದ್ದನು ; ಅಗ್ನಿಯ ಹೃದಯ ನಡುಗಿತು ; ಯಮನಿಗೆ ಸಿಡಿಲು ಹೊಡೆದಂತಾಯಿತು ; ನಿರ್ಋತಿಗೆ ಎದೆ ಬಿರಿಯಿತು ; ವರುಣನು ನಡುಗಿದನು, ವಾಯು ಬೆಚ್ಚಿದನು, ಕುಬೇರ

ಆರು ಬೆದಱಿದರೇನು ರಘುಕುಲ । ವೀರ ಬೆದಱುವ ಭಟಗೆ ಮೃತ್ಯುಶ
ರೀರನುದಿತ ಶಿರೋಧರವನುರು ವೈಷ್ಣವಾಸ್ತ್ರದಲಿ
ವಾರಿಜಪ್ರಿಯಬಿಂಬದತ್ತಲು । ಸಾರಲೆಚ್ಚನು ಕೊರಳ ರಕ್ತದ
ಧಾರೆ ತಾರಾಮಂಡಲವನಣೆದಿಳಿದುದಿಳೆಗಾಗಿ ೫೬

ವಿಸ್ತರಿಸಲೇನಮಮ ರಾಹು । ಗ್ರಸ್ತವಾದಂದದಲಿ ಚಂಡನ
ಭಸ್ತ್ರಿ ಮಂಡಲವಿಳೆಗೆ ಕಾಣಿಸದಾಯ್ತು ರಕ್ಕಸನ
ಮಸ್ತಕದ ಮಹಿಮೆಯಲಿ ರವಿ ನಿಜ । ಹಸ್ತದಬುಜವ ಬಿಸುಟು ಸೆಳೆದನು
ದುಸ್ತರದ ಮಂದೇಹವಿಜಯದ ವೀರಖಂಡೆಯವ ೫೭

ಒಡೆದುದಮರರ ನಗರ ನಗಸುತೆ । ಮೃಡನನಪ್ಪಿದಳಾಚರಿಸಿ ಹಿಂ
ದೊಡೆದು ಹಾಯ್ದರು ಕಂಡ ಮೈಯಲಿ ಕಮಲಜಾದಿಗಳು
ಪಡಿಭವಿಸಿ ರವಿ ಸೋತು ಶರಧಿಯ । ತಡಿಗೆ ಹಾಯ್ದನು ಕಾದುವಗ್ಗದ
ಕಡುಹುಕಾಱರ ಕಾಣದಿಳಿತರುತಿರ್ದುದಭ್ರದಲಿ ೫೮

ತೊಲಗು ತೊಲಗೆಲೆ ರಾಮ ಕೈದುವ । ತೊಲಗಬಿಸುಟರೆ ಬಿಡುವುದಲ್ಲದೆ
ತಲೆ ಬಿಡದು ಬವರಿಗರನೆಂದು ವಿಭೀಷಣನು ನುಡಿಯೆ
ತೊಲಗದಾಹವ ಭೀಮನಗ್ಗದ । ಕಲಿಲಲಾಮ ಧನುರ್ಧರಾಯತ
ವಿಲಸಿತೋತ್ಸವ ರಾಮ ನಿಲಿಸಿದನಸ್ತ್ರಸಾರದಲಿ ೫೯

ನಿಗೆ ಅಂಜಿಕೆಯಾಯಿತು, ಶಿವನಿಗೆ ಭಯವಾಯಿತು. ೫೬. ಯಾರು ಹೆದರಿಕೊಂಡರೆ ತಾನೆ ಏನು, ರಘುಕುಲವೀರ ಬೆದರುವ ಭಟನೆ ? ಮೃತ್ಯುಶರೀರಯಾದ ಕುಂಭಕರ್ಣನ ತಲೆಯನ್ನು ವೈಷ್ಣವಾಸ್ತ್ರದಿಂದ ಕತ್ತರಿಸಿ ಸೂರ್ಯಬಿಂಬದ ಬಳಿಗೆ ಹಾರಿಸಿದನು. ರಾಕ್ಷಸನ ಕೊರಳಿನಿಂದ ಹೊರಟ ರಕ್ತಪ್ರವಾಹವು ಆಕಾಶಕ್ಕೆ ತಗುಲಿ ಅಲ್ಲಿಂದ ನೆಲಕ್ಕೆ ಸುರಿಯಿತು. ೫೭. ಅಬ್ಬಬ್ಬ, ಏನೆಂದು ವರ್ಣಿಸಲಿ ! ರಾಕ್ಷಸನ ತಲೆಯು ಅಡ್ಡ ಬಂದು ಸೂರ್ಯಬಿಂಬವು ಗ್ರಹಣದಲ್ಲಿ ರಾಹು ಹಿಡಿದಂತೆ ಭೂಮಿಗೆ ಕಾಣಿಸದಾಯಿತು. ಸೂರ್ಯನು ಕೈಯಲ್ಲಿ ಹಿಡಿದಿದ್ದ ಕಮಲವನ್ನು ಎಸೆದು ಶತ್ರುವಾದ ಮಂದೇಹರಾಕ್ಷಸನನ್ನು ಗೆದ್ದ ಅಸಾಧ್ಯ ವೀರಗತ್ತಿಯನ್ನು ಸೆಳೆದುಕೊಂಡನು. ೫೮. ಕುಂಭಕರ್ಣನ ತಲೆಯಿಂದ ದೇವತೆಗಳ ಪಟ್ಟಣವು ಒಡೆದುಹೋಯಿತು. ಪಾರ್ವತಿಯು ಬೆಚ್ಚಿ ಶಿವನನ್ನು ಅಪ್ಪಿಕೊಂಟಳು ; ಬ್ರಹ್ಮ ಮೊದಲಾದ ದೇವತೆಗಳು ಚದುರಿ ಸಿಕ್ಕಕಡೆಗೆ ಇದ್ದುದಿದ್ದ ಹಾಗೆ ಓಡಿದರು. ಸೂರ್ಯನು ಪ್ರತಿಭಟಿಸಿ ಸೋತು ಸಮುದ್ರದ ತಡಕ್ಕೆ ಹೋದನು. ತನ್ನೊಡನೆ ಯುದ್ಧಮಾಡುವ ಶ್ರೇಷ್ಠವೀರರನ್ನು ಕಾಣದೆ ತಲೆಯು ಆಕಾಶದಿಂದ ಇಳಿದುಬರಲಾರಂಭಿಸಿತು. ೫೯. "ಅತ್ತ ಹೋಗು, ಸರಿ, ರಾಮ, ಕೈಯ ಆಯುಧವನ್ನು ಎಸೆದುಬಿಟ್ಟರೆ ನಿನ್ನನ್ನು ಬಿಡುವುದಲ್ಲದೆ ಯುದ್ಧಮಾಡುವವರನ್ನು ತಲೆಯು ಬಿಡುವುದಿಲ್ಲ ಎಂದು ವಿಭೀಷಣನು ಹೇಳಿದನು. ಆದರೆ ಯುದ್ಧಭಯಂಕರ, ಶ್ರೇಷ್ಠ ವೀರರ ತಿಲಕ, ಬಿಲ್ವಿದ್ಯಾಪ್ರಯೋಗೋತ್ಸಾಹಿ ರಾಮನು ಬಾಣದ ಸರಣಿಯಿಂದ ತಲೆಯನ್ನು ಕಟ್ಟಿ

ಇದ್ದುದಾ ತಲೆ ಶೂಲದಗ್ರದ । ಕದ್ದ ಕಳ್ಳನ ತಲೆಯವೊಲು ಬಳಿ
ಕೊದ್ದು ನಡೆದುದು ಮುಂಡ ಕವಿದೌಕುವ ಕಪಿವ್ರಜವ
ಅದ್ದಲಿಸಿದುದು ತಲೆ ರಘೂತ್ತಮ । ನಿದ್ದ ಠಾವನು ಹೇಳೆನುತ ಕಪಿ
ದೊದ್ದೆಗರನಟ್ಟಿಯಟ್ಟಿ ಕೊಲುತಿಟ್ಟಣಿಸಿತಿದಿರಿನಲಿ ೭೦

ಕಾಲುಗೊಲೆಯಲಿ ಕೊಂದುದರ್ಬುದ । ವೇಳನೇಳರ್ಬುದವ ತುಳಿದುದು
ಮಾಲೆಗರುಳುಪ್ಪರಿಸಿ ರುಧಿರದ ನದಿಗಳವತರಿಸೆ
ಮೇಲೆ ಮೇಲಾ ಖಳನ ಕಡಿಗಳ । ಕಾಳಗವು ಕಡುಹಾಯ್ತು ಹೂಡಿದ
ಕೋಲಿನಲಿ ಕಡಿದಿಳುಹಿದನು ಜಾನು ಜಂಘೆಗಳ ೭೧

ಶರಧಿಮಥನದಿ ಮಂದರಾಚಲ । ಧರೆಗೆ ಬೀಳ್ವಂದದಲಿ ಬಿದ್ದುದು
ಬಿರಿಯೆ ನೆಲ ಬಿಡುರಕುತಧಾರೆಯ ಸೂಸುತಲ್ಲಲ್ಲಿ
ಸುರವಿರೋಧಿಯ ಮುಂಡ ಕೊಂದುದು । ಹೊರಳಿ ಕಪಿಗಳ ಹೊರಳಿಯನು ಬಲ
ವರದ ಹೂರಣದಂತೆಯಜಗಿಜಿಯಾದುದಗಲದಲಿ ೭೨

ನೆಗೆನೆಗೆದು ತೊಡೆ ಜಾನು ಜಂಘೆಗ । ಳಗಲದಲಿ ಬೆನ್ನಟ್ಟಿ ಶಾಖಾ
ಮೃಗಗಣವ ಕೊಲುತಿರಲು ಬಳಿಕ ನರೇಂದ್ರ ಬೆರಗಾಗಿ
ಮೊಗವ ನೋಡಿದನಾ ಪುಲಸ್ತ್ಯನ । ಮಗನ ಪುತ್ರಾನುಜನ ತಮ್ಮನು
ಮುಗಿದ ಕೈಯಲಿ ಬಿನ್ನಹವ ಮಾಡಿದನು ರಘುಪತಿಗೆ ೭೩

ಹಾಕಿ ನಿಲ್ಲಿಸಿದನು. ೭೦. ಶೂಲದ ತುದಿಗೆ ಏರಿಸಿದ ಕಳ್ಳನ ತಲೆಯಂತೆ ಬಾಣಗಳ ತುದಿಯಲ್ಲಿ ಕುಂಭಕರ್ಣನ ತಲೆ ಕಾಣಿಸಿತು. ಅನಂತರ ಕುಂಭಕರ್ಣನ ಮುಂಡವು ಒದ್ದು ಮುಂದೆ ನಡೆದು ಸುತ್ತಿ ಮುತ್ತುವ ಕಪಿಗಳ ಸಮೂಹವನ್ನು ಗದರಿಸಿ, 'ರಘೂತ್ತಮ ನಿರುವ ಸ್ಥಳವನ್ನು ಹೇಳು' ಎಂದು ಕಪಿಗಳ ಗುಂಪನ್ನು ಬೆನ್ನಟ್ಟಿ ಕೊಲ್ಲುತ್ತ ವಿಜೃಂಭಿಸಿತು. ೭೧. ಕುಂಭಕರ್ಣನ ಮುಂಡವು ಕಾಲಿನಲ್ಲಿ ತುಳಿದು ಏಳು ಅರ್ಬುದ ಕಪಿಗಳನ್ನು ಕೊಂದಿತು. ಕರುಳುಗಳು ಹೊರಬಂದು ರಕ್ತದ ನದಿಗಳು ಹರಿಯುವಂತೆ ಏಳರ್ಬುದ ಕಪಿಗಳನ್ನು ತುಳಿದುಹಾಕಿತು. ಮೇಲೆ ಮೇಲೆ ಆ ರಾಕ್ಷಸನ ದೇಹದ ಕತ್ತರಿಸಿದ ಭಾಗಗಳ ಯುದ್ಧವು ತೀವ್ರವಾಯಿತು. ರಾಮನು ಬಾಣಗಳನ್ನು ಹೂಡಿ ರಾಕ್ಷಸನ ಮುಂಡದಿಂದ ತೊಡೆ ಮೊಣಕಾಲುಗಳನ್ನು ಕತ್ತರಿಸಿಹಾಕಿದನು. ೭೨. ಸಮುದ್ರವನ್ನು ಕಡೆದಾಗ ಮಂದರಪರ್ವತವು ಭೂಮಿಗೆ ಬೀಳುವಂತೆ ಅಲ್ಲಲ್ಲಿ ರಕ್ತಧಾರೆಯನ್ನು ಚೆಲ್ಲುತ್ತ ನೆಲ ಬಿರಿಯುವಂತೆ ಕುಂಭಕರ್ಣನ ದೇಹವು ನೆಲಕ್ಕೆ ಬಿದ್ದಿತು. ರಾಕ್ಷಸನ ಮುಂಡವು ನೆಲದ ಮೇಲೆ ಹೊರಳಾಡುತ್ತ ಕಪಿಗಳ ಸಮೂಹವನ್ನು ಕೊಂದಿತು, ಅರೆದುಹಾಕಿದ ಹೂರಣದ ಹಾಗೆ ರಣರಂಗದಲ್ಲೆಲ್ಲ ಕಪಿಗಳು ಅಜಿಗಿಜಿಯಾದವು. ೭೩. ರಾಕ್ಷಸನ ತೊಡೆ, ಮಂಡಿ, ಮೊಣಕಾಲುಗಳು ನೆಗೆನೆಗೆದು ಅಷ್ಟಗಲದಲ್ಲೂ ಬೆನ್ನಟ್ಟಿ ಕಪಿಗಳನ್ನು ಕೊಲ್ಲುತ್ತಿರಲು ರಾಮನು ಬೆರಗಾಗಿ (ಪುಲಸ್ತ್ಯಪುತ್ರ ವಿಶ್ರವಸನ ಮಗ ಕುಬೇರನ ತಮ್ಮನಾದ ರಾವಣನ ತಮ್ಮ) ವಿಭೀಷಣನ ಮುಖವನ್ನು ನೋಡಿದನು. ವಿಭೀಷಣನು

ದೇವ ನಮ್ಮ ಕುಂಭಕರ್ಣಂ । ಗಾ ವಿರಿಂಚಿ ಮಹಾ ಸುಷುಪ್ತಿಯ
ನೀವ ಕಾಲದಲಿತ್ತನೀ ಖಳ ಬೇಡಲನುಪಮದ
ಜೀವರತ್ನವನದಱ ದೆಸೆಯಿಂ । ಸಾವು ಸಮನಿಸದಿವಗೆ ಕೇಳಲಿ
ದೇವ ಕಳುಹು ಖಳೋತ್ತಮನ ಮಸ್ತಕದ ಮಣಿಗೆಂದ ೬೪

ಅದೆ ಶಿರೋಮಧ್ಯದಲಿ ವಿಂಗಡಿ । ಸಿದರೆ ವಿಂಗಡಿಸುವುದು ವೈರಿಯ
ಹೃದಯಗತದಸು ಸುಸರ ಸಂಗರ ಬಳಿಕ ನಿಮಗೆನಲು
ತುದಿವೆರಳ ತೋಮರದ ನಾರಿಯ । ಲೊದೆಸಲಭ್ರದ ಬಾಣಸಾರದ
ತುದಿಯ ರಕ್ಕಸದಲೆಯ ರತುನವನುಗಿದುದಾಕ್ಷಣಕೆ ೬೫

ಸರಳೊದೆದ ತೀವ್ರತೆಗೆ ಬಿದ್ದುದು । ಸುರುಚಿರದ ಮಣಿಮಕುಟ ಸಿಂಗಣ
ದರಸುಭೂಮಿಯಲಿಳೆ ರಸಾತಳಕಾಳೆ ರಕ್ಕಸನ
ಶಿರ ಕೆಡೆದುದಾ ಕೊಲುವ ಕಡಿಗಳ । ಹರಹು ನಿಂದುದು ಕೋಡುಬಂದುದು
ಬರುತ ಬಾಣ ತದೀಯ ರತ್ನವನರಸನಿದ್ದೆಡೆಗೆ ೬೬

ಅರಸ ಬಳಿಕಾ ರತುನವನು ನಿಜ । ಶರಣನುರು ಶೋಕಾಗ್ನಿಯನು ಪರಿ
ಹರಿಸಿ ಕೊಟ್ಟನು ಕುಸ್ತರಿಸಿ ಕರುಣಾಮೃತವ ಸುರಿದು
ಸುರಿದಮಾಕ್ಷಣ ಸುರರ ಜವ್ವನ । ತರುಣಿಯರ ಕೈಯಿಂದ ಸೇಸೆಗ
ಳರಸನಂಗದೊಳೊಗುವ ಪರಿಮಳದಲರ ಹೊನಲಿನಲಿ ೬೭

ಕೈಮುಗಿದುಕೊಂಡು ರಘುಪತಿಗೆ ವಿಜ್ಞಾಪನೆ ಮಾಡಿಕೊಂಡನು. ೬೪. "ಸ್ವಾಮಿ, ನಮ್ಮ ಕುಂಭಕರ್ಣನಿಗೆ ಬ್ರಹ್ಮನು ಮಹಾ ಗಾಢನಿದ್ರೆಯನ್ನು ಕರುಣಿಸಿದ ಕಾಲದಲ್ಲಿ ಇವನು ಪ್ರಾರ್ಥಿಸಿದ ಅನುಪಮ ಜೀವರತ್ನವನ್ನು ಅನುಗ್ರಹಿಸಿದನು. ಅದರ ಕಾರಣ ಇವನಿಗೆ ಸಾವು ಬರದು. ರಾಕ್ಷಸಶ್ರೇಷ್ಠನ ಹಣೆಯಮಣಿಗೆ ಬಾಣವನ್ನು ಕಳುಹಿಸು" ಎಂದ ವಿಭೀಷಣ. ೬೫. "ಅವನ ತಲೆಯ ಮಧ್ಯಭಾಗವನ್ನು ಭೇದಿಸಿದರೆ ಶತ್ರು ಕುಂಭಕರ್ಣನ ಎದೆಯೊಳಗಿನ ಪ್ರಾಣವು ಹೋಗುವುದು. ಅನಂತರ ಯುದ್ಧವು ನಿನಗೆ ಸುಲಭ" ಎಂದು ವಿಭೀಷಣನು ಹೇಳಿದನು. ಆಗ ರಾಮನು ತುದಿಬೆರಳಿನಿಂದ ತೋಮರವನ್ನು ಬಿಲ್ಲಿನ ಹಗ್ಗಕ್ಕೆ ಹೂಡಿ ಎಳೆದುಬಿಡಲು ಆಕ್ಷಣ ಅದು ಆಕಾಶದಲ್ಲಿ ಬಾಣದ ಅಟ್ಟಣೆಯ ತುದಿಯಲ್ಲಿದ್ದ ಕುಂಭಕರ್ಣಾಸುರನ ತಲೆಯ ರತ್ನವನ್ನು ಕಿತ್ತಿತು. ೬೬. ಬಾಣದ ಏಟಿನ ತೀವ್ರತೆಗೆ ಜಗತ್ತಿಗೆ ಕಿರೀಟಪ್ರಾಯವಾದ ಸಿಂಹಳದ ಸುಂದರ ರಾಜಭೂಮಿಯಲ್ಲಿ ಕುಂಭಕರ್ಣನ ತಲೆ ಬಿದ್ದಿತು; ಬಿದ್ದ ರಭಸಕ್ಕೆ ನೆಲವು ಪಾತಾಳಕ್ಕೆ ಇಳಿಯಿತು. ಆಗ ಕುಂಭಕರ್ಣನ ದೇಹದ ಕತ್ತರಿಸಿದ ಅವಯವಗಳ ಕೊಲೆಯ ಕಾರ್ಯವು ನಿಂತಿತು. ರಾಮನ ಬಾಣವು ಹಿಂದಿರುಗಿ ಬರುತ್ತ ಕುಂಭಕರ್ಣನ ಹಣೆಯ ರತ್ನವನ್ನು ರಾಮನ ಬಳಿಗೆ ತಂದಿತು. ೬೭. ಅನಂತರ ರಾಮನು ತನ್ನ ಭಕ್ತ ವಿಭೀಷಣನ ದುಃಖವನ್ನು ಹೋಗಲಾಡಿಸಿ ಸಂತೈಸಿ ಕರುಣಾಮೃತವನ್ನು ಸುರಿದು ರತ್ನವನ್ನು ಕೊಟ್ಟನು. ಆ ಕೂಡಲೇ ರಾಮನ ಮೇಲೆ ಸುವಾಸನೆಯ ಹೂವುಗಳ ಮಳೆಗರೆಯಿತು ಮತ್ತು ದೇವಲೋಕದ

ಹಿಂಗಿದುದು ಭಯವರ್ಧವಮರರಿ । ಗಿಂಗಿದುದು ಸಂತೋಷರಸದು
ತ್ತುಂಗಬಲ ಲಂಕಾಧಿನಾಥಂಗಿನಸುತಾದಿಗಳ
ಅಂಗಲತೆ ಕುಡಿಗೊಂಡುದಪರದಿ । ಗಂಗನೆಯ ಸಾರಿದನು ರವಿ ರಘು
ಪುಂಗವನು ನೆನೆದನು ನಿಜಾನುಜನಾಹವದ ಹದನ ೬೮

ಧುರವದತ್ಯಾಶ್ಚರ್ಯ ಹನುಮನ । ಕರವಿಘಾತಿಯಲೂರ್ಮಿಳೇಶನ
ಶರವಿಘಾತಿಯಲೆರಡುನೂರಕ್ಷೋಹಿಣೀ ಸೇನೆ
ಪುರವ ಕಟ್ಟಿತು ಬೇರೆ ಸಂಯಮ । ಪುರದ ಮುಂಭಾಗದಲಿ ಜಯದು
ಬ್ಬರದ ಭಟರೈತಂದರವನೀನಾಥನಿದ್ದೆಡೆಗೆ ೬೯

ತಿರುಗಿದನು ಬಳಿಕಮಲ ತೊರವೆಯ । ಪುರವರಾಧೀಶ್ವರನು ಜಯದು
ಬ್ಬರದ ಹರುಷದಲನುಜ ಸುಗ್ರೀವಾದಿಗಳು ಸಹಿತ
ಸುರುಚಿರದ ಶಿಬಿರಾಂತರಕೆ ಶಂ । ಕರ ಸರೋಜಭವಾಮರೇಂದ್ರರ
ನೆರವಿ ಹರೆದುದು ಹೊಗಳುತಿನಕುಲಸಾರ್ವಭೌಮಕನ ೭೦

ತರುಣಿಯರು ಅಕ್ಷತೆಯನ್ನು ತಳಿದರು, ೬೮. ದೇವತೆಗಳ ಭಯ ಅರ್ಧ ಕಡಮೆಯಾಯಿತು, ಉನ್ನತ ಬಲಶಾಲಿ ಲಂಕೇಶ್ವರನ ಸಂತೋಷರಸ ಬತ್ತಿತು ; ಸುಗ್ರೀವನೇ ಮೊದಲಾದವರು ಹರ್ಷದಿಂದ ರೋಮಾಂಚಗೊಂಡರು. ಸೂರ್ಯನು ಪಶ್ಚಿಮ ದಿಗ್ವನಿತೆಯ ಬಳಿಗೆ ಹೋದನು. ಬಳಿಕ ರಘುಪತಿ ರಾಮನು ತನ್ನ ತಮ್ಮನ ಯುದ್ಧವೇನಾಯಿತೆಂಬುದನ್ನು ನೋಡಿದನು. ೬೯. ಆ ಯುದ್ಧವು ಅತ್ಯಾಶ್ಚರ್ಯಕರವಾಗಿತ್ತು. ಹನುಮಂತನ ಕೈಯೇಟುಗಳಿಂದಲೂ ಊರ್ಮಿಳಾಪತಿ ಲಕ್ಷ್ಮಣನ ಬಾಣದ ಪೆಟ್ಟುಗಳಿಂದಲೂ ರಾಕ್ಷಸರ ಎರಡುನೂರು ಅಕ್ಷೋಹಿಣೀಸೈನ್ಯವು ಯಮನ ಪಟ್ಟಣದ ಮುಂದುಗಡೆಯಲ್ಲಿ ಬೇರೆ ಪಟ್ಟಣವನ್ನೇ ಕಟ್ಟಿಕೊಂಡಿತು. ಅತಿಶಯ ಗೆಲುವನ್ನು ಸಂಪಾದಿಸಿದ ವೀರರು ರಾಮನ ಬಳಿಗೆ ಬಂದರು. ೭೦. ತರುವಾಯ ತಮ್ಮ ಲಕ್ಷ್ಮಣ ಮತ್ತು ಸುಗ್ರೀವಾದಿಗಳೊಡನೆ ಅತಿಶಯ ವಿಜಯಸಂಪಾದನೆಯ ಹರ್ಷಾಧಿಕ್ಯದಿಂದ ತೊರವೆಯ ಪುರದೊಡೆಯನು ರಣರಂಗದಿಂದ ಪಾಳಯಕ್ಕೆ ಹಿಂದಿರುಗಿದನು. ಶಿವ, ಬ್ರಹ್ಮ, ದೇವೇಂದ್ರನೇ ಮೊದಲಾದ ದೇವತೆಗಳು ಸೂರ್ಯವಂಶ ಚಕ್ರವರ್ತಿಯನ್ನು ಹೊಗಳುತ್ತ ಚದುರಿದರು.

೨೮

# ಇಪ್ಪತ್ತೊಂಬತ್ತನೆಯ ಸಂಧಿ

ಸೂಚನೆ॥ ವೀರ ದೇವಾಂತಕ ನರಾಂತಕ । ಘೋರ ತ್ರಿಶಿರ ಮಹೋದರಾಸುರ
ವೀರ ಯುದ್ಧೋನ್ಮತ್ತರನುಕೊಳಿಸಿದರು ಸಂಗರವ

ತಿರುಗಿತೀಬಲವಿತ್ತಲತ್ತಲು । ಸರಿದರಳಿದುಳಿದಸುರರಿಕ್ಕಿತು
ಪುರಕೆ ಮುತ್ತಿಗೆ ಮುಸುಕಿಕೊಂಡುದು ನಿಶಿ ಮಹೀತಳವ
ಇರಿಸಿ ಬಂದಿರೆ ನಿರ್ಜರಸ್ಮರ । ಹರಣರುದ್ರನನಧಿಕ ಸತ್ವೋ
ತ್ಕರಸಮುದ್ರನನೆಂದು ಖಳ ತುಂಬಿದನು ಕಂಬನಿಯ ೧

ಬೀಳುದೋಳಿಯೊಂದು ಹಱಿದುದು । ತೋಳು ಮತ್ತೊಂದುಳಿದುದೆಮ್ಮ
ಬ್ಬಾಳುತನವಿಂದಕಟ ತನಗೇಕಾಕಿತನವಾಯ್ತು
ಕೇಳದೊಬ್ಬನ ನೂಕಿದೆನು ರಣ । ಕೇಳಿಗೊಬ್ಬನ ಚಾಚಿದೆನು ಸುರ
ರಾಳಿಗೊಂಬುಂತಾಯ್ತು ಬದುಕೆಂದಸುರನಳವಳಿದ ೨

ತಂದನನುಜನ ಶೋಕದಲಿ ಜಲ । ಬಿಂದುಗಳನಕ್ಷಿಯಲಿ ಮಱುಗಿದ
ನಂದಿನಿರುಳಲಿ ಕರುಳುಗಳ ತೊಳಲಿಕೆಯ ತಾಪದಲಿ
ಕುಂದಿತೇ ಕುಡಿದೀಪ ಗರ್ವದ । ಮುಂದವಾದುದೆ ಮದದಹಂಕೃತಿ
ಯೆಂದು ಹಮ್ಮೈಸಿದನು ಮೂರ್ಛೆಯಲಾ ದಶಗ್ರೀವ ೩

ಸೂಚನೆ॥ ವೀರ ದೇವಾಂತಕ, ನರಾಂತಕ, ಉಗ್ರ ತ್ರಿಶಿರ, ಮಹೋದರ ಮೊದಲಾದ ಕದನದ ಕೊಬ್ಬಿದ ವೀರರು ಯುದ್ಧಕ್ಕೆ ಸಿದ್ಧರಾದರು. ೧. ಇತ್ತ ವಾನರ ಸೈನ್ಯವು ಶಿಬಿರಕ್ಕೆ ಹಿಂದಿರುಗಿತು. ಅತ್ತ ಅಳಿದುಳಿದ ರಾಕ್ಷಸರು ಪಾಳಯಕ್ಕೆ ಹೋದರು. ಕತ್ತಲೆಯು ಲಂಕಾಪಟ್ಟಣಕ್ಕೆ ಮುತ್ತಿಗೆ ಹಾಕಿ ಭೂಮಂಡಲವನ್ನು ಆವರಿಸಿತು. "ದೇವತೆಗಳೆಂಬ ಮನ್ಮಥನನ್ನು ಸುಡುವ ರುದ್ರನಾದ ಅತಿಶಯ ಪರಾಕ್ರಮಶಾಲಿಯನ್ನು ಯುದ್ಧಕ್ಕೆ ಬಲಿಕೊಟ್ಟು ಬಂದಿರ ?" ಎಂದು ರಾವಣನು ಕಣ್ಣುಗಳಲ್ಲಿ ನೀರು ತುಂಬಿಕೊಂಡನು. ೨. 'ನನ್ನ ಒಂದು ತೋಳು ಬರಡಾಯಿತು, ಇನ್ನೊಂದು ತೋಳು ಬಿದ್ದು ಹೋಯಿತು. ನನ್ನ ದರ್ಪವೊಂದು ಮಾತ್ರ ಉಳಿಯಿತು. ಅಯ್ಯೋ, ನಾನು ಒಬ್ಬಂಟಿಗನಾದೆ. ಹೇಳಿದ ಮಾತನ್ನು ಕೇಳದೆ ಒಬ್ಬ ತಮ್ಮನನ್ನು (ವಿಭೀಷಣನನ್ನು) ಮನೆಯಿಂದ ಹೊರಹಾಕಿದೆ ; ಇನ್ನೊಬ್ಬ ತಮ್ಮನನ್ನು ಯುದ್ಧದಾಟಕ್ಕೆ ಚಾಚಿದೆ. ದೇವತೆಗಳು ಅಪಮಾನಿಸುವಂತಾಯಿತೆ ನನ್ನ ಬಾಳು ?' ಎಂದು ರಾವಣ ದುಃಖಿಸಿದ. ೩. ತಮ್ಮನ ಮರಣಕ್ಕೆ ದುಃಖಿಸುತ್ತ ರಾವಣನು ಕಣ್ಣೀರು ತಂದುಕೊಂಡನು. ಹೊಟ್ಟೆಯಲ್ಲಿ ಸಂಕಟಪಡುತ್ತ ಅಂದಿನ ರಾತ್ರಿಯೆಲ್ಲ ವ್ಯಥೆಪಟ್ಟನು. 'ಗರ್ವದ ಕುಡಿದೀಪವು ಕುಂದಿತೇ ? ಮದದ ಅಹಂಕಾರವು ಮಂದವಾಯಿತೇ ?' ಎಂದು ದಶಕಂಠನು ಹಲುಬುತ್ತ ಮೂರ್ಛೆ

ಹೊರಳಿದನು ಸಹಜಾತ ಶೋಕ । ಜ್ವರದ ಜಾಡ್ಯದ ಜಿನುಗಿನಲಿ ರಘು
ವರನ ನೆನಹಿನ ಘನಸಮುಗ್ರಸ್ಮರನ ವಿಕಳದಲಿ
ತರುಣ ಕೇಳಾ ರಾಕ್ಷಸೇಂದ್ರಂ । ಗಿರುಳು ಶತಯುಗವಾದುದಾ ದಿನ
ತರಣಿ ತೋರದ ಮುನ್ನ ನಡೆತಂದಿತ್ತನೋಲಗವ ೪

ಗೆಲುವನೋ ಗೆಲದಿಹನೊ ರಕ್ಕಸ । ಗಲಹವನು ನಿಜಪೌತ್ರನಿಂದಿನ
ಕೊಳುಗುಳದೊಳೆಂದಮರಚಕ್ರೇಶ್ವರನು ತವಕದಲಿ
ಬೆಳಗುಜಾವದಲೆದ್ದು ಪೂರ್ವಾ । ಚಲಕೆ ಬರೆ ಮುಂಗುಡಿಯಲೆತ್ತಿದ
ತಳಿತ ದೀಪಪ್ರಭೆಯೆನಲು ತಲೆದೋಱಿತಿನಬಿಂಬ ೫

ನೆರೆದುದೋಲಗದೊಳಗೆ ನಾನಾ । ಪರಿಯ ರಕ್ಕಸವೀರಭಟರು
ಪ್ಪರದ ಖಂಡೆಯದರುಣಮಣಿಕೋಟೀರಭಾರಗಳ
ಹರನ ಗಣಿಸದ ಮೃತ್ಯುಗಿತ್ಯುವ । ಸರಕುಮಾಡದ ಮಾಯೆಯತಿಶಯ
ದುರು ಭಯಂಕರವೀರ ರೌದ್ರಾದ್ಭುತವಿಲಾಸದಲಿ ೬

ಗೆಲವು ಲಘುತರವಾಯ್ತು ಹಗೆಯು । ಗ್ಗಳಿಕೆ ಗುರುತರವಾಯ್ತು ನಮಗತಿ
ಬಲರು ಮಡಿದರು ನಮ್ಮೊಳಗೆ ಧೂಮ್ರಾಕ್ಷ ಮೊದಲಾದ
ಉಳುಕಲಿನ ಭಟರುಳಿದವರು ಹಗೆ । ಹಳಸಿತೆಮ್ಮಲಿ ಪಡಿತಳಿಸಿ ಕೈ
ನಿಲುಕುವವರಿಲ್ಲೆನುತ ರಕ್ಕಸರಾಯ ಚಿಂತಿಸಿದ ೭

ಹೋದನು. ೪. ತಮ್ಮನ ಮರಣದ ಶೋಕದಿಂದ ಜ್ವರ ಬಂದಂತಾಗಿ ಬಡಬಡಿಸುತ್ತ -ರಾಮನ ಯೋಚನೆಯೆಂಬ ಮನ್ಮಥನ ಕಳವಳದಿಂದ ರಾವಣನು ರಾತ್ರಿಯೆಲ್ಲ ಹೊರಳಾಡುತ್ತ ಕಳೆದನು. ತರುಣ ಕುಶ ಕೇಳು, ಆ ರಾಕ್ಷಸೇಂದ್ರನಿಗೆ ರಾತ್ರಿಯು ನೂರು ಯುಗದಂತಾಯಿತು. ಸೂರ್ಯನು ಹುಟ್ಟುವುದಕ್ಕೆ ಮುಂಚೆಯೇ ಬಂದು ಸಭೆಯನ್ನು ನಡೆಸಿದನು. ೫. ತನ್ನ ಮೊಮ್ಮಗ ಅಂಗದನು ಇಂದಿನ ರಾಕ್ಷಸನ ಕಾಳಗದಲ್ಲಿ ಗೆಲ್ಲುವನೋ ಇಲ್ಲವೋ ಎಂಬುದನ್ನು ನೋಡುವ ಆತುರದಿಂದ ದೇವೇಂದ್ರನು ಬೆಳಗಿನಜಾವದಲ್ಲಿ ಎದ್ದು ಪೂರ್ವಪರ್ವತಕ್ಕೆ ಬರಲು ಮುಂದುಗಡೆಯಲ್ಲಿ ಹಿಡಿದ ದೀಪದ ಕಾಂತಿಯೋ ಎನ್ನುವಂತೆ ಸೂರ್ಯಬಿಂಬವು ಉದಯಿಸಿತು. ೬. ಕತ್ತಿಯನ್ನು ಎತ್ತಿ ಹಿಡಿದ, ರತ್ನಖಚಿತ ಕಿರೀಟಗಳನ್ನು ತಲೆಯಲ್ಲಿ ಧರಿಸಿದ, ಶಿವನನ್ನು ಲೆಕ್ಕಿಸದ, ಮೃತ್ಯುಗಿತ್ಯುವನ್ನು ಎಣಿಸದ, ಅತಿಶಯ ಮಾಯೆಯ ನಾನಾರೀತಿಯ ರಾಕ್ಷಸವೀರರು ಭಯಾನಕ, ವೀರ, ರೌದ್ರ, ಅದ್ಭುತ ರಸಗಳನ್ನು ಬೀರುತ್ತ ರಾವಣನ ಸಭೆಯಲ್ಲಿ ನೆರೆದರು. ೭. 'ಯುದ್ಧದಲ್ಲಿ ನಮ್ಮ ಜಯವು ಲಘುವಾಯಿತು, ಶತ್ರುವಿನ ಶ್ರೇಷ್ಠತೆಯು ಮಹತ್ತರವಾಯಿತು. ನಮ್ಮ ಕಡೆಯ ಮಹಾಬಲಶಾಲಿಗಳು ಸತ್ತರು. ಇನ್ನು ನಮ್ಮಲ್ಲಿ ಧೂಮ್ರಾಕ್ಷನೇ ಮೊದಲಾದ ಉಳಿಕೆವೀರರು ಬದುಕಿದ್ದಾರೆ. ದ್ವೇಷವು ನಮ್ಮಲ್ಲಿ ಹಳಸಿಹೋಯಿತು. ಶತ್ರುವನ್ನು ಆಕ್ರಮಿಸುವ ವೀರರು ಇಲ್ಲ!' ಎನ್ನುತ್ತ ರಾವಣನು ಚಿಂತೆಗೊಳಗಾದನು.

ಚಿಂತೆಯೇಕೆಲೆ ಜೀಯ ಹೋದವ । ರಂತಿರಲಿ ಹೊಸ ರಣರಸದಿ ನಿ
ಮ್ಮಂತರಂಗದ ಶೋಕವಹ್ನಿಯ ನಂದಿಸುವೆವೆನುತ
ಅಂತರಹಿತ ಪರಾಕ್ರಮದ ದೇ । ವಾಂತಕ ತ್ರಿಶಿರ ಪ್ರಸಿದ್ಧ ನ
ರಾಂತಕ ಮಹೋದರನು ಯುದ್ಧೋನ್ಮತ್ತರುಲುಕಿದರು ೮

ಕಳುಹಿ ನೋಡೆಲೆ ಜೀಯ ಬಱಿಯ । ಬ್ಬಳಿಕೆಯುವರಾವಲ್ಲ ಹಿಂದಣ
ಕೊಳುಗುಳಕ್ಕಿದು ಕೋಟಿಮಡಿ ಗುಣವೆನಿಸಿ ತೋಱುವೆವು
ಬಳಿಕ ದೇವರ ಸುಪ್ರತಾಪದ । ಬೆಳಸು ದೈವಾಧೀನವೆನುತರಿ
ಗಳ ರಣಾರಂಭಕ್ಕೆ ಬೇಡಿದರವರು ವೀಳೆಯವ ೯

ತರಿಸಿ ಹೊಂಬಟ್ಟಲಲಿ ಖಳ ಕ । ರ್ಪುರದ ವೀಳೆಯವಿತ್ತು ಘನಸಂ
ಗರಕೆ ಕಳುಹಿದನಸುರವಲ್ಲಭನಾ ನಿಶಾಚರರ
ಧುರಕೆ ಬಲುಸನ್ನಾಹ ಸೇನೆಯ । ನೆರಹಿದರು ನಿಮಿಷಾರ್ಧದಲಿ ನೆಲ
ಬಿರಿಯೆ ಮೊಳಗುವ ವಿವಿಧ ವಾದ್ಯದ ಘೋರಘೋಷದಲಿ ೧೦

ತುರಗ ಬಂದುದು ತಳುವದಾಕ್ಷಣ । ನಿರತಿಶಯ ನಿರ್ಮಾಂಸ ಚಳಬಳ
ಚರಣಕಾಂಡದ ನಿಶಿತ ಘಂಟಾಖುರದ ಚೊಪ್ಪರದ
ಉರುಲಲಾಟದ ನೀಳಮೊಗದು । ಪ್ಪರದ ತಿತ್ತಿರಿ ನಾಸಿಕದ ನಿ
ಷ್ಠುರ ನಿನಾದದಲಮರವೈರಿ ನರಾಂತಕಾಸುರಗೆ ೧೧

೮. "ಪ್ರಭು, ಏಕೆ ಚಿಂತಿಸುತ್ತೀರಿ. ಯುದ್ಧದಲ್ಲಿ ಮರಣಹೊಂದಿದವರು ಹಾಗಿರಲಿ. ಹೊಸ ರಣರಸದಿಂದ ನಿಮ್ಮ ಮನಸ್ಸಿನ ದುಃಖದ ಬೆಂಕಿಯನ್ನು ಆರಿಸುವೆವು" ಎನ್ನುತ್ತ ಕೊನೆಯಿಲ್ಲದ ಪರಾಕ್ರಮದ ಯುದ್ಧೋನ್ಮತ್ತರಾದ ದೇವಾಂತಕ, ತ್ರಿಶಿರ, ನರಾಂತಕ. ಮಹೋದರರು ದಿಟ್ಟತನದಿಂದ ನುಡಿದರು. ೯. "ಸ್ವಾಮಿ, ನಮ್ಮನ್ನು ಕಾಳಗಕ್ಕೆ ಕಳುಹಿಸಿ ನೋಡಿ. ನಾವು ಬರಿಯ ಗರ್ವದವರಲ್ಲ. ಹಿಂದಿನ ಯುದ್ಧಗಳಿಗಿಂತ ಇದು ಕೋಟಿಯಷ್ಟು ಯಶಸ್ವಿಯಾದುದೆಂಬುದನ್ನು ತೋರಿಸಿಕೊಡುವೆವು. ಇದರಮೇಲೆ ಸ್ವಾಮಿಯವರ ಪರಾಕ್ರಮದ ಏಳಿಗೆಯು ದೈವಾಧೀನ" ಎಂದು ನುಡಿದು ಯುದ್ಧವನ್ನಾರಂಭಿಸುವುದಕ್ಕೆ ತಾಂಬೂಲವನ್ನು ಪ್ರಾರ್ಥಿಸಿದರು. ೧೦. ರಾಕ್ಷಸೇಶ್ವರ ರಾವಣನು ವೀಳೆಯವನ್ನು ತರಿಸಿ ಚಿನ್ನದ ಬಟ್ಟಲಿನಲ್ಲಿಟ್ಟು ಕರ್ಪೂರದ ತಾಂಬೂಲವನ್ನು ಕೊಟ್ಟು ಆ ರಾಕ್ಷಸವೀರರನ್ನು ಯುದ್ಧಕ್ಕೆ ಕಳುಹಿಸಿದನು. ನೆಲ ಬಿರಿಯುವಂತೆ ಬಾರಿಸುವ ವಿವಿಧ ವಾದ್ಯಗಳ ಅಬ್ಬರದೊಡನೆ ನಿಮಿಷಾರ್ಧದಲ್ಲಿ ಯುದ್ಧದ ಭಾರಿ ಸಿದ್ಧತೆಯೊಡನೆ ಅವರು ಸೈನ್ಯವನ್ನು ಕೂಡಿಸಿದರು. ೧೧. ಆಕ್ಷಣ ತಡಮಾಡದೆ ಕರ್ಕಶವಾಗಿ ಕೆನೆಯುತ್ತ ನರಾಂತಕಾಸುರನ ಕುದುರೆಯು ಬಂದಿತು. ಮಾಂಸದಿಂದ ಕೊಬ್ಬಿ ಬೆಳೆಯುವ ಚುರುಕು ನಡೆಯ ಕಾಲುಗಳು ಆ ಕುದುರೆಗೆ. ಹರಿತವಾಗಿ ಘಂಟೆಯಂತಿರುವ ಗೊರಸಿನಿಂದ ಕೂಡಿದ ಮೊಳಕಾಲು, ಅಗಲವಾದ ಹಣೆ, ಉದ್ದವಾದ ಮುಖ, ಮೇಲಕ್ಕೆತ್ತಿದ ಅರಳಿದ

ತಡಿ ಸುಖಾಸನ ಸುಗತಿ ಪೊಂಬಾ । ವುಡೆ ಜನಾಖಿ ಲಗಾಮು ಮೊಗಗ
ನ್ನಡಿ ಲಲಾಟನಿಬಂಧಿಯವಿಲಣ ಕಬ್ಬಿ ಕಡಿಯಣದ
ಮುಡಿಚವರಿ ಕಾಲ್ಗೆಜ್ಜೆ ಕನಕದ । ಸಡಕು ಮಣಿಲಂಬಳದ ಹಯ ಮಿಗೆ
ಗುಡಿಯಿಡುದು ಮೊಗವೆತ್ತಿ ನರ್ತಿಸಿತಸುರನಿದಿರಿನಲಿ ೧೨

ಹಿಣಿಲಮುತ್ತಿನ ಜಾಳಿಯದ ಮಣಿ । ಗಣದ ವಜ್ರಾಂಗಿಗೆಯ ತೌಳಿಯ
ಮಣಿಕ್ಕಟಿಯ ಸರಪಳಿಯ ಸರ ವೊಟ್ಟೆಯದ ಸುತ್ತಣಿಯ
ಪಣೆಯ ಕಸ್ತುರಿತಿಲಕದಸಿಯು । ಬ್ಬಣದ ಸೆಲ್ಲೆಹ ಬಲ್ಲೆಯದ ಬಲು
ಗಣೆಯ ಬಿರುದಿನ ಭಟ ನರಾಂತಕನೇಱಿದನು ಹಯವ ೧೩

ಅರಿಗಡಗ ಕಡಿಯಣದ ಕಬ್ಬಿಯ । ಘುರುಘುರುಸ್ವನ ಘಣಘಣಧ್ವನಿ
ಗುರುವೆನಿಸಿದುದು ಗಾಢಘನಗರ್ಜನೆಯ ಗೌರವಕೆ
ಖುರದಲವನಿಯನಗೆಯಲಹಿಪನ ।ಶಿರಕೆ ವೇದನೆಯಾಯ್ತು ನಭಕು
ಪ್ಪರಿಸಲಳುಕಿದವಶ್ವವಾ ಹರಿದಶ್ವಮಂಡಲವ ೧೪

ಇಳಿದುದಾ ಹಯವಾ ತ್ರಿಕೂಟಾ । ಚಲದ ದುರ್ಗವನಾ ಹಯದ ಬೆಂ
ಬಳಿಯ ಬೆರಸಿದವಖಿಲದೇಶದ ನಿಖಿಳ ಕರವಳಿಯ
ಹಲವು ವರ್ಣದ ಹಲವು ಜಾತಿಯ । ಹಲವು ಸಮರಾಭ್ಯಾಸ ಶಿಕ್ಷಾ
ವಿಲಸಿತಾಶ್ವನಿಕಾಯ ನಿರುಪಮ ರಾವ್ತರೊಗ್ಗಿನಲಿ ೧೫

ಮೂಗಿನ ಹೊಳ್ಳೆ ಆದಕ್ಕೆ. ೧೨. ಕುದುರೆಯ ಬೆನ್ನಿಗೆ ಜೀನು ಕಟ್ಟಿ ಸುಖಾಸನವನ್ನು ಅಳವಡಿಸಿ ಅದರ ಮೇಲೆ ಹೊಂಬಣ್ಣದ ಮೇಲುಹೊದಿಕೆಯನ್ನು ಹಾಕಲಾಗಿತ್ತು. ಜನಾಖಿ, ಲಗಾಮುಗಳನ್ನು ಹಾಕಿ ಮುಖಕನ್ನಡಿಯಿಂದಲಂಕರಿಸಿ ಬಾಯಿಗೆ ಉಕ್ಕಿನ ಕಡಿವಾಣವನ್ನು ಕಟ್ಟಿತ್ತು. ತಲೆಗೆ ಚವರಿ ಕಟ್ಟಿ ಕಾಲಿಗೆ ಗೆಜ್ಜೆ ಸೇರಿಸಿ ಚಿನ್ನದಗೊಂಡೆ, ಕೊರಳ ರತ್ನದ ಹಾರಗಳಿಂದ ಕುದುರೆಯನ್ನು ಸಿಂಗರಿಸಲಾಗಿತ್ತು. ಕುದುರೆಯು ಅತ್ಯಾನಂದದಿಂದ ನರಾಂತಕನ ಎದುರಿನಲ್ಲಿ ನರ್ತಿಸಿತು. ೧೩. ಮುಡಿಗೆ ಮುತ್ತಿನಹಾರ ಸುತ್ತಿ, ಮಣಿಖಚಿತ ವಜ್ರಕವಚ ತೊಟ್ಟು, ತಲೆಗೆ ಶಿರಸ್ತ್ರಾಣ ಧರಿಸಿ, ಮಣಿಕಟ್ಟಿಗೆ ಸರಪಳಿಯಸರ ಕಟ್ಟಿಕೊಂಡು, ಪಾದರಕ್ಷೆಯನ್ನು ಕಾಲಿಗೆ ಸುತ್ತಿ ಕಟ್ಟಿಕೊಂಡು, ಹಣೆಯಲ್ಲಿ ಕಸ್ತೂರಿತಿಲಕವಿಟ್ಟು, ಕತ್ತಿ, ಉಬ್ಬಣ, ಶಲ್ಯ, ಈಟಿ, ಬಿಲ್ಲುಬಾಣಗಳನ್ನು ಹಿಡಿದು ನರಾಂತಕನು ಕುದುರೆಯನ್ನೇರಿದ. ೧೪. ಕುದುರೆಯ ಬಾಯಿಗೆ ಕಟ್ಟಿದ ಕಬ್ಬಿಣದ ಬಳೆಯ ಮತ್ತು ಬಾಯೊಳಗಿನ ಕಡಿವಾಣದ ಕಬ್ಬಿಣದ ಕಡಿಯನ್ನು ಕಚ್ಚುವಾಗ ಆಗುವ ಘುರುಘುರು ಘಣಘಣಧ್ವನಿ ಕಪ್ಪುಮೋಡದ ಗುಡುಗಿನ ಶಬ್ದವನ್ನೂ ಮೀರಿಸಿತು. ಗೊರಸಿನಿಂದ ನೆಲಕ್ಕೆ ಹೊಡೆಯಲು ಆದಿಶೇಷನಿಗೆ ತಲೆನೋವಾಯಿತು. ಆಕಾಶಕ್ಕೆ ನೆಗೆಯಲು ಸೂರ್ಯಮಂಡಲದ ಕುದುರೆಗಳು ಹೆದರಿದವು. ೧೫. ನರಾಂತಕಾಸುರನ ಕುದುರೆಯು ತ್ರಿಕೂಟಾಚಲದ ದುರ್ಗವನ್ನು ಇಳಿಯಿತು. ಸಮಸ್ತ ದೇಶಗಳ ಎಲ್ಲ ಕರಾವಳಿಗಳ ಹಲವು ಬಣ್ಣದ ಹಲವು ಜಾತಿಯ ಅನೇಕ ರೀತಿಯ ಯುದ್ಧಶಿಕ್ಷಣ

ಮಿಾನಚಿಪ್ಪಿನ ಲೋಹಬದ್ಧದ । ಜೀನಗೆಲಸದ ಮೃಗನಖದ ಪರಿ
ಧಾನಕದ ಪಾರಿಯದ ಪಚ್ಚೆಯ ಪಳಿ ಸುವರ್ಣಗಳ
ಸ್ಥಾನಕದ ಕಾರ್ಪಾಸ ಕವಚದ । ಕೈನೆಗಹಿನುಬ್ಬಣದ ಚೂರಿತ
ಮಾನ ಕರ್ಕಸದಸುರ ರಾವುತರು ಬಳಸಿದರು ಖಳನ ೧೬

ಬಾಳ ಝಳಪಿನ ಬೆಳಗು ದಿನಕರ । ನಾಲಿಗಳ ಕದುಕಿರಿಯೆ ರಾವುತ
ರೋಳಿಸಹಿತಿಳಿದನು ತ್ರಿಕೂಟಮಹಾ ಮಹೀಧರವ
ಮೇಲೆ ಬಂದುದು ಸುರಪತಿಯ ಶುಂ । ಡಾಲದುನ್ನತ ಶೌರ್ಯವರ್ಗವ
ನೇಳಿಸುವ ಮದದಂತಿ ವೀರಮಹೋದರಾಸುರಗೆ ೧೭

ಅರರೆ ದಿಗ್ಗಜನಿಕರವೀ ಮದ । ಕರಿಗೆ ಜನಿಸಿದವೋ ಗಜಾಸುರ
ಮರಳಿ ರೂಹಿಸಿದನೊ ಚತುರ್ಮುಖನಂಜನಾಚಲವ
ಕರುಗೊಳಿಸಿ ಕಡದಸುಗೊಳಿಸಿ ಕ । ರ್ಬುರಗೆ ಕೊಟ್ಟನೊಯೆಂಬವೊಲು ಹ
ನ್ನೆರಡುಯೋಜನದಿಭ ವಿರಾಜಿಸಿತಸುರನಿದಿರಿನಲಿ ೧೮

ಹೊರಜೆ ಹೊಮ್ಮಳಿ ನಿಗಳ ನಿಡಿಯ । ಗ್ಗರಣೆ ಜೊತ್ತಗೆ ಜಾನುವಂಕಣೆ
ತಿರಿಚೆ ತೊಡರುರಘಂಟೆಗಳ ಬದ್ಧರದ ಜಂಚೆಗಳ
ತರತರದ ಮಣಿಖಚಿತ ಚಿತ್ರೋ । ತ್ಕರದ ಹೇಮದ ಪಕ್ಕಘಂಟೆಯ
ಕರದ ಹೊಗರಂಬದ ವಿಲಾಸದಿನೆಸೆದುದಾ ದಂತಿ ೧೯

ಪಡೆದ ಕುದುರೆಗಳ ಸಮೂಹವು ರಾವುತರ ಗುಂಪಿನೊಡನೆ ಆ ಕುದುರೆಯನ್ನು ಹಿಂಬಾಲಿಸಿತು. ೧೬. ಮಿಾನಚಿಪ್ಪುಗಳನ್ನು ಸೇರಿಸಿ ಲೋಹದಿಂದ ಕಟ್ಟಿ ಚರ್ಮದ ಕೆಲಸಮಾಡಿದ, ಮೃಗದ ಉಗುರುಗಳನ್ನು ಸೇರಿಸಿ ಅಲಂಕರಿಸಿದ, ಹೊದಿಕೆಯನ್ನು ಹೊದೆದು ಪಾರಿವಾಳದ ಬಣ್ಣದ, ಪಚ್ಚೆಯ ಬಣ್ಣದ ಮತ್ತು ಚಿನ್ನದ ಬಣ್ಣದ ರೇಷ್ಮೆ ವಸ್ತ್ರಗಳನ್ನು ಧರಿಸಿ, ದೇಶೀಯ ಹತ್ತಿಯ ಕವಚವನ್ನು ತೊಟ್ಟು ಉಬ್ಬಣ ಚೂರಿ ಮತ್ತು ತಮಾನಗಳನ್ನು ಕೈಗಳಲ್ಲಿ ಎತ್ತಿ ಹಿಡಿದುಕೊಂಡು ಕ್ರೂರ ರಾಕ್ಷಸ ರಾವುತರು ನರಾಂತಕನನ್ನು ಸುತ್ತುವರಿದರು. ೧೭. ಕತ್ತಿಯನ್ನು ಬೀಸಿದಾಗಿನ ಪ್ರಕಾಶವು ಸೂರ್ಯನ ಕಣ್ಣುಗಳನ್ನು ಚುಚ್ಚಲು ರಾವುತರ ಸಮೂಹದೊಡನೆ ನರಾಂತಕನು ತ್ರಿಕೂಟಪರ್ವತವನ್ನು ಇಳಿದುಬಂದನು. ಅವನ ಹಿಂದೆ ದೇವೇಂದ್ರನ ಐರಾವತದ ಶೌರ್ಯವನ್ನು ಮಿಾರಿಸುವ ಮದದಾನೆಯು ವೀರಮಹೋದರಾಸುರನ ಬಳಿಗೆ ಬಂದಿತು. ೧೮. ಅಬ್ಬಬ್ಬ ದಿಗ್ಗಜಗಳು ಈ ಮದಿಸಿದಾನೆಗೆ ಹುಟ್ಟಿದವೋ, ಗಜಾಸುರನು ಪುನಃ ರೂಪಧರಿಸಿ ಬಂದನೋ, ಬ್ರಹ್ಮನು ಅಂಜನಪರ್ವತವನ್ನು ಎರಕಹೊಯ್ದು ಕಡೆದು ಪ್ರಾಣತುಂಬಿ ರಾಕ್ಷಸನಿಗೆ ಕೊಟ್ಟನೋ ಎಂಬಂತೆ ಮಹೋದರಾಸುರನ ಎದುರಿನಲ್ಲಿ ಹನ್ನೆರಡು ಯೋಜನ ವಿಸ್ತಾರದ ಆನೆಯು ರಂಜಿಸಿತು. ೧೯. ದಪ್ಪಹಗ್ಗ, ಗಿಲೀಟು ಮಾಡಿದ ಚರ್ಮದ ಹಗ್ಗ, ಕಾಲಿನ ಸರಪಳಿ, ಉದ್ದಹಗ್ಗ, ಹೆಗಲಿನ ಚರ್ಮದ ಹಗ್ಗ, ಮೊಣಕಾಲಿನ ರಿಕಾಪು, ತಿರಿಚೆ, ಆಭರಣ, ಎದೆಯ ಗಂಟೆಗಳು, ಪಕ್ಕರೆಕ್ಕೆಗಳು, ರತ್ನಗಳನ್ನು

ಕಾಲುಗಾಹಿನ ಕುದುರೆಗಳ ಕಡೆ । ಗೋಲ ಸಿಲುಕಿನ ರಕ್ಕಸರ ಪಡಿ
ತಾಳವಿಭಸಂಕುಲದ ಡೌಡೆಯು ಮೊರೆವ ಜೇಗಟೆಯು
ತೂಳಿಸುವ ಬೆಂಗೊಡತಿಗಳ ಸಿ । ಟ್ಟೇಳಿಸುವ ನಿಶಿತಾಂಕುಶದ ವಿಕ
ರಾಳ ಮದಕರಿ ಮೆಱೆವುತಿರ್ದುದು ರಣದ ಸೊಬಗಿನಲಿ ೨೦

ತರಣಿಬಿಂಬವನಣೆವ ಮದದು । ಬ್ಬರದ ಕದಲಿಕೆಗಳ ವಿಡಾಯಿಯ
ಕರದ ನೆಗಹಿನ ಖಂಡೆಯದ ತೆತ್ತಿಸಿದ ಸೊಂಡಿಲಿಯು
ಚರಣದಂಡದ ಕತ್ತಿಗಳ ಪರಿ । ಪರಿಯ ಕೊಲೆಗಳ ಕೈದುಗಳ ನಿ
ಬ್ಬರದ ನಿರುಪಮ ದಂತಿ ಬೀಱಿತು ಭಯವನಮರರಿಗೆ ೨೧

ಆಸುರದ ರಣಗಲಿ ಮಹೋದರ । ನಾ ಸುದರ್ಶನನೆಂಬ ದಂತಿಯ
ನಾಸುರದ ಜಯಜಯ ನಿನಾದದ ಕುಸುಮವರ್ಷದಲಿ
ಪ್ರಾಸ ಪಟ್ಟಸ ಪರಿಘ ಬಾಣಶ । ರಾಸನಾದಿ ಸಮಸ್ತ ಶಸ್ತ್ರವಿ
ಲಾಸ ವಿಭವದಲೇಱಿದನು ರಣವಾದ್ಯರಭಸದಲಿ ೨೨

ಇಳಿದನಾ ದುರ್ಗವನು ಬಳಿಯಲಿ । ಬಳಸಿದವು ಬಲುದಂತಿಘಟೆ ಕಳ
ವಳಿಸಿ ಕಾದಿದರಪ್ರತಿಪ್ರಮುಖಾವನೀಧರರು
ಹೊಳಕದುತ್ತರ ಪೊಗಳ್ವಡಿಭಸಂ । ಕುಲದ ಸಂಖ್ಯೆಯನಮಮ ಕನಕದ
ಗುಳದಗುರ್ವಿನ ದಂತಿಗಳು ದಳದುಳಿಸಿದವು ರಣಕೆ ೨೩

ಮೆಟ್ಟಿದ ವಿವಿಧ ಚಿತ್ರಗಳು, ಚಿನ್ನದ ಪಕ್ಕಘಂಟೆ, ಮುಖವಾಡ–ಇವುಗಳಿಂದ ಸಜ್ಜಾದ ಆನೆಯು ಶೋಭಿಸಿತು. ೨೦. ಆನೆಯ ಬೆಂಗಾವಲಿಗೆ ಕುದುರೆಗಳು ಬರುತ್ತಿದ್ದವು. ರಾಕ್ಷಸರು ಕಡೆಗೋಲನ್ನು ಹಿಡಿದುಕೊಂಡಿದ್ದರು. ಹುರುಪಿನಿಂದ ಆನೆಗಳ ಸಮೂಹ ಜತೆಗೆ ಬರುತ್ತಿತ್ತು. ಡೌಡೆ ಜಾಗಟೆಗಳು ಭೋರ್ಗರೆಯುತ್ತಿದ್ದವು. ಮಾವುತರು ಆನೆಯನ್ನು ಓಡಿಸಲು ಬೆನ್ನಮೇಲೆ ಕೊಡತಿಗಳಿಂದ ಹೊಡೆಯುತ್ತಿದ್ದರು ; ಹರಿತವಾದ ಅಂಕುಶದಿಂದ ತಿವಿದು ಆನೆಯನ್ನು ಕೆರಳಿಸುತ್ತಿದ್ದರು. ಹೀಗೆ ಭಯಂಕರ ಆನೆಯು ಯುದ್ಧದ ಸೊಗಸಿನಿಂದ ರಂಜಿಸುತ್ತಿತ್ತು. ೨೧. ಸೂರ್ಯಬಿಂಬವನ್ನು ತಗಲುವಂತೆ ಅಧಿಕಮದದಿಂದ ಚಲಿಸುವ, ಕತ್ತಿ ಬಾಕುಗಳನ್ನು ಕಟ್ಟಿದ ಬಲವಾದ ಸೊಂಡಿಲನ್ನು ಮೇಲಕ್ಕೆತ್ತುವ, ಕತ್ತಿಗಳನ್ನು ಕಟ್ಟಿದ ಕಾಲುಗಳನ್ನು ಮುಂದಿಡುವ, ಕೊಲೆಗೆಲಸಕ್ಕನುವಾಗುವಂತೆ ಜೋಡಿಸಿದ ವಿವಿಧಾಯುಧಗಳಿಂದ ಕೂಡಿದ ರಭಸದ ಭಾರಿ ಆನೆಯು ದೇವತೆಗಳಿಗೆ ಭಯವನ್ನುಂಟುಮಾಡಿತು. ೨೨. ಜೋರಾಗಿ ಜಯಜಯ ಶಬ್ದ ಮಾಡುತ್ತ ಹೂವಿನಮಳೆಯನ್ನು ಸುರಿಸುತ್ತಿರಲು ಭಯಂಕರ ಯುದ್ಧವೀರ ಮಹೋದರನು ಪ್ರಾಸ, ಪಟ್ಟಸ, ಪರಿಘ, ಬಾಣ, ಬಿಲ್ಲು ಮೊದಲಾದ ಸಮಸ್ತ ಶಸ್ತ್ರಗಳೊಡನೆ ರಣವಾದ್ಯಗಳು ಭೋರ್ಗರೆಯುತ್ತಿರುವಂತೆ ಆ ಸುದರ್ಶನವೆಂಬ ಆನೆಯನ್ನೇರಿದನು. ೨೩. ಮಹೋದರನು ದುರ್ಗವನ್ನು ಇಳಿದುಬಂದನು. ಜತೆಯಲ್ಲಿ ದೊಡ್ಡ ಆನೆಗಳ ಸೈನ್ಯವು ಮಹೋದರನನ್ನು ಬಳಸಿಬಂದಿತು. ಅಸಮಾನರಾದ ಪ್ರಮುಖ ನಾಯಕರು ಆನೆಯ ಮೇಲೆ ಕುಳಿತು ಕದನಮಾಡಿದರು. ಆನೆಗಳ ಸಮೂಹವನ್ನು ಎಣಿಸಲು

ಏನ ಹೇಳುವೆನಮಮ ವೀರವು । ಹಾ ನಿಶಾಟನ ಗಮನಕುಪಗಮ
ನಾನುರಾಗಿಗಳೈದಿದರು ಶತಕೋಟಿಸಂಖ್ಯೆಯಲಿ
ಹಾನಿ ಕಪಿಬಲಕಾಗದಿರದೆಂ । ಬೀ ನುಡಿಯು ಸಡಗರ ನಭೋವೈ
ಮಾನಿಕರ ಸಂದಣಿಯಲಾದುದು ಕಾಣುತೀ ಬಲವ ೨೪

ಅರುಣಮಯ ಮಣಿಖಚಿತ ಚಾಮಿ । ಕರದ ಚಕ್ರಯುಗಂಧರದ ಕೂ
ಬರದ ಕುಣಿವಶ್ವಗಳ ಕನಕಧ್ವಜಪತಾಕೆಗಳ
ಶರ ಶರಾಸನ ಮುಖ್ಯ ಶಸ್ತ್ರೌ । ತ್ಕರದ ಕವಚದ ಸೀಸಕದ ಸಂ
ಗರವರೂಥವನೇಱಿದನು ದೇವಾಂತಕನು ನಗುತ ೨೫

ಇಳಿದುದಾತನ ತೇರು ತ್ರಿಶಿರನ । ಚಳಬಳದ ಹೊಂದೇರು ರಥಿಕಾ
ವಳಿಗಳೊಗ್ಗಿನಲಾವಹಕೆ ಶತಕೋಟಿಸಂಖ್ಯೆಯಲಿ
ಖಳರೊಳತಿಬಲ ಕುಂಭಕರ್ಣನ । ಕೆಳೆಗೆ ಮಿಗಿಲೆಂಬಗ್ಗಳದ ಖಳ
ತಿಲಕ ಯುದ್ಧೋನ್ಮತ್ತನನುವಾದನು ಮಹಾಹವಕೆ ೨೬

ತಿಗುರಿದನು ಕಾಯವನು ಕುಂಕುಮ । ದಗರು ಕಸ್ತುರಿ ಸಾದಿನಲಿ ಮಘ
ಮಘಿಪ ಚಂದನಗಂಧದಲಿ ಲೇಪಿಸಿದನವಯವವ
ಬಿಗಿದ ಕಾಸೆಯ ತಲೆವಣಿಲ ಮೊನೆ । ದೆಗೆದ ಹೂವೊಗ್ಗಿಗಳ ಹೊದಱಿನ
ಹೊಗರ ಹೊಸದೇಸಿಯಲಿ ಯುದ್ಧೋನ್ಮತ್ತನನುವಾದ ೨೭

ಮಾತು ಸಾಲದು. ಅಬ್ಬಬ್ಬ ! ಚಿನ್ನದ ಹಾಸನ್ನು ಹೊದಿಸಿದ ಭಯಂಕರ ಆನೆಗಳು ಯುದ್ಧದಲ್ಲಿ ಸೂರೆಗೊಳ್ಳಲು ಮುಂದಾದವು. ೨೪. ಏನು ಹೇಳಲಿ, ಅಬ್ಬಬ್ಬ ! ವೀರ ರಾಕ್ಷಸನು ಯುದ್ಧಕ್ಕೆ ಹೊರಡಲು ಅವನ ಜತೆಯಲ್ಲಿ ಪ್ರೀತಿಯಿಂದ ಹೋಗ ಬಯಸಿದ ನೂರುಕೋಟಿಸಂಖ್ಯೆಯ ವೀರರು ಬಂದರು. ಈ ಸೈನ್ಯವನ್ನು ನೋಡಿ ಆಕಾಶದಲ್ಲಿ ವಿಮಾನದಲ್ಲಿದ್ದ ದೇವತೆಗಳು, 'ಕಪಿಸೈನ್ಯಕ್ಕೆ ಹಾನಿಯಾಗದೆ ಇರದು' ಎಂದು ಮಾತಾಡಿಕೊಂಡರು. ೨೫. ಕೆಂಪುರತ್ನಗಳನ್ನು ಮೆಟ್ಟಿದ ಚಿನ್ನದ ಚಕ್ರ, ಮೂಕಿ ಮತ್ತು ನೊಗಗಳಿಂದ, ಕುಣಿಯುವ ಕುದುರೆಗಳಿಂದ ಹಾಗೂ ಚಿನ್ನದ ಬಾವುಟ ಗಳಿಂದ ಕೂಡಿದ ರಥವನ್ನು ಮುಖ್ಯ ಶಸ್ತ್ರಗಳೊಡನೆ ಕವಚ ಮತ್ತು ಶಿರಸ್ತ್ರಾಣಗಳನ್ನು ಧರಿಸಿದ ದೇವಾಂತಕನು ಹತ್ತಿದನು. ೨೬. ದೇವಾಂತಕನ ರಥ ಮತ್ತು ವೇಗಶಾಲಿ ಯಾದ ತ್ರಿಶಿರನ ಚಿನ್ನದ ತೇರು ದುರ್ಗವನ್ನು ಇಳಿದುಬಂದವು. ಅವರ ಜತೆಗೆ ನೂರು ಕೋಟಿ ಸಂಖ್ಯೆಯ ರಥಿಕರು ಒಟ್ಟಾಗಿ ಯುದ್ಧಕ್ಕೆ ಬಂದರು. ರಾಕ್ಷಸರಲ್ಲಿ ಮಹಾ ಬಲಶಾಲಿ ಕುಂಭಕರ್ಣನಿಗಿಂತ ಮಿಗಿಲು ಎಂಬ ರಾಕ್ಷಸಶ್ರೇಷ್ಠ ಯುದ್ಧೋನ್ಮತ್ತನು ಭಾರಿ ಯುದ್ಧಕ್ಕೆ ಸಿದ್ಧನಾದನು. ೨೭. ಯುದ್ಧೋನ್ಮತ್ತನು ಕುಂಕುಮ ಅಗರು ಕಸ್ತೂರಿ ಸಾದುಗಳನ್ನು ಮೈಗೆ ಪೂಸಿಕೊಂಡನು ; ಘಮಘಮಿಸುವ ಶ್ರೀಗಂಧವನ್ನು ಅವಯವ ಗಳಿಗೆ ಬಳಿದುಕೊಂಡನು. ಕಾಸೆಯನ್ನು ಬಿಗಿದು ತಲೆಗೂದಲನ್ನು ಎತ್ತಿಕಟ್ಟಿ ಅದಕ್ಕೆ ಹೂವೊಗ್ಗುಗಳ ದಂಡೆಯನ್ನು ಮುಡಿದುಕೊಂಡನು. ಹೀಗೆ ಹೊಸ ಸೊಗಸಿನ

ಕಡೆಯ ಓರಾವಳಿಯ ಕಾಂತಿಯ । ನಿಡುಸರದ ಸರಪಳಿಯ ಕಿಱುವಂ
ಕುಡಿಯ ಘೋರ ವರಾಹದಾಡೆಯ ಕಟಿನಿಬಂಧಕದ
ತೊಡರ ತೋಳಿನ ಮಣಿಯ ಮುತ್ತಿನ । ಕಡುಕುಗಳ ರಣಚೋರಗತಿಯಾ
ಕಡುಹಿನತಿಬಲನಿಳಿದನಾ ದುರ್ಗವನು ಶೀಘ್ರದಲಿ ೨೮

ನಡೆದುದವನಪರಾಂಗದಲಿ ಕೆಂ । ಪಿಡಿದ ಮೀಸೆಯ ರೌದ್ರಮುಖದಿದಿ
ರಡರ್ದ ರೋಮದ ಬಟ್ಟ ಕಂಗಳ ಬಗಿದ ಪುರ್ಬುಗಳ
ಕುಡಿವರಿವ ದಾಡೆಗಳ ಹೊಸ ಹೊಗ । ರಿಡುವ ಮೈಯುಬ್ಬುಗಳ ರಕ್ಕಸ
ಗಡಣವೈದಿತು ಸಂಗರಕೆ ಶತಕೋಟಿಸಂಖ್ಯೆಯಲಿ ೨೯

ಕಣನ ಗೆಲಿದುದು ನಾಲ್ಕುಬಲ ಬಡ । ಗಣ ದಿಶಾಭಾಗದಲಿ ಭೋರೆಂ
ದಣೆದುದಂಬರದುದಿಯ ನಾನಾ ವಾದ್ಯನಿರ್ಘೋಷ
ಕುಣಿದವಶ್ವನಿಕಾಯ ಬೀದಿಯ । ಕೆಣಕಿದವು ಮದದಾನೆ ರಥವಿ
ಟ್ಟಣಿಸಿದವು ಕಾಲಾಳು ಕೈಗೈದುದು ಮಹಾಹವಕೆ ೩೦

ತುರಗದಳದಲಿ ನಿಂದನಗ್ಗದ । ನರಕುಲಾಂತಕನಿಭಘಟಾಳಿಯ
ನೆರವಿಯಲಿ ಮೈದೋಱಿದನು ಬಳಿಕಾ ಮಹೋದರನು
ಸುರವಿರೋಧಿ ತ್ರಿಶಿರನೊಪ್ಪಿದ । ನುರು ವರೂಥಾನೀಕದಲಿ ಪದ
ಚರರ ಪಡಿಮುಖದೊಳಗೆ ಯುದ್ಧೋನ್ಮತ್ತ ರಂಜಿಸಿದ ೩೧

ಯುದ್ಧೋನ್ಮತ್ತನು ಕಾಳಗಕ್ಕೆ ಸಿದ್ಧವಾದನು. ೨೮. ಕಡಗ ಮತ್ತು ಹೊಳೆಯುವ ಉದ್ದ ವಜ್ರದಸರಗಳನ್ನು ಧರಿಸಿ, ಸರಪಳಿ ಮತ್ತು ಕಿರಿದಾದ ಡೊಂಕು ಕಠಾರಿಯನ್ನು ತೆಗೆದುಕೊಂಡು ಹಂದಿಯ ದಾಡೆಯನ್ನು ಸೊಂಟಕ್ಕೆ ಕಟ್ಟಿಕೊಂಡನು. ರತ್ನದ ತೋಳಿನಾಭರಣವನ್ನೂ ಮುತ್ತಿನ ಕಡುಕುಗಳನ್ನೂ ಅಲಂಕರಿಸಿಕೊಂಡನು. ಹೀಗೆ ಯುದ್ಧದಲ್ಲಿ ಕಳ್ಳಚಲನೆಯ ಪರಾಕ್ರಮದ ಅತಿಬಲಶಾಲಿ ಯುದ್ಧೋನ್ಮತ್ತನು ವೇಗವಾಗಿ ದುರ್ಗವನ್ನು ಇಳಿದುಬಂದನು. ೨೯. ಕೆಂಪುಮೀಸೆಯ, ರೌದ್ರಮುಖದ, ಎದ್ದುನಿಂತ ಕೂದಲುಗಳ, ಬಿಡುಗಣ್ಣುಗಳ, ಹುಬ್ಬುಗಂಟಿಕ್ಕಿದ, ಹೊಳೆಯುವ ಕೋರೆಹಲ್ಲುಗಳ, ಹೊಸ ಕಾಂತಿಯ ಉಬ್ಬಿದ ದೇಹದ ನೂರುಕೋಟಿಸಂಖ್ಯೆಯ ರಾಕ್ಷಸ ಸಮೂಹವು ಯುದ್ಧೋನ್ಮತ್ತನ ಹಿಂಭಾಗದಲ್ಲಿ ಯುದ್ಧಕ್ಕೆ ಬಂದಿತು. ೩೦. ಯುದ್ಧರಂಗದ ಉತ್ತರ ದಿಕ್ಕಿನಲ್ಲಿ ಈ ನಾಲ್ಕು ಸೈನ್ಯಗಳೂ ನಿಂತವು. ನಾನಾ ವಾದ್ಯಗಳ ಅಬ್ಬರವು ಆಕಾಶದ ತುದಿಯನ್ನು ಮುಟ್ಟಿತು. ಕುದುರೆಗಳು ಕುಣಿದವು, ಮದಿಸಿದಾನೆಗಳು ಕಂಡವರನ್ನು ಕೆರಳಿಸಿದವು, ರಥಗಳು ವ್ಯೂಹ ರಚಿಸಿಕೊಂಡು ನಿಂತವು, ಕಾಲಾಳುಗಳ ಸೈನ್ಯವು ಯುದ್ಧಕ್ಕೆ ಸಿದ್ಧವಾಯಿತು. ೩೧. ಕುದುರೆಗಳ ದಳದೊಡನೆ ನರಕುಲಾಂತಕನು ನಿಂತನು. ಆನೆಗಳ ಸೈನ್ಯದೊಡನೆ ಮಹೋದರನು ಸಿದ್ಧನಾದನು. ತ್ರಿಶಿರಾಸುರನು ರಥಗಳ ಸಮೂಹದೊಡನೆ ಮೆರೆದನು. ಕಾಲಾಳುಗಳ ಎದುರಿನಲ್ಲಿ ಯುದ್ಧೋನ್ಮತ್ತನು

ಎಲೆ ಕುಮಾರಕ ಕೇಳು ಕದನದ । ಕಲಿಗಳೊಡ್ಡಿನ ಕೈದುಗಳ ಕುಡಿ
ವೆಳಗು ಕದುಕಿತು ಕಂಗಳನು ಕಪಿರಾಜಸೈನಿಕದ
ಕಳಕಳಿಸಿ ಕಡುಹೇಜಿತಾಜಿಗೆ । ಕಲಿಲಲಾಮರು ಮುಂದೆ ಕೈಗಳ
ಕಲುಮರನ ಕದನದಲಿ ಕೆಣಕಿದರರಿಪತಾಕಿನಿಯ ೩೨

ಆತುದಾ ಬಲವೀ ಬಲಕೆ ಹಗೆ । ವಾತಿನಂಕದ ಬವರದಲಿ ಬಲು
ಖ್ಯಾತಿಯಲಿ ಕೈದೊಳಗುಕಾಜಿರು ಹೊಕ್ಕರುರವಣಿಸಿ
ಏತಱವು ರಣ ಹಿಂದಣವು ಹೊಸ । ರೀತಿಯಿದು ಪೊಗಳಿಕೆಗೆ ತೊರವೆಯ
ನಾಥ ಶ್ರೀಮಾರುತಿಯೆ ತಾನೇ ಬಲ್ಲನಿದನೆಂದ ೩೩

ಶೋಭಿಸಿದನು. ೩೨. ಕುಮಾರ ಲವನೇ ಕೇಳು, ಯುದ್ಧವೀರ ರಾಕ್ಷಸರ ಆಯುಧಗಳ ಪ್ರಕಾಶವು ವಾನರಸೈನಿಕರ ಕಣ್ಣುಗಳನ್ನು ಕುಕ್ಕಿತು. ಯುದ್ಧಕ್ಕೆ ಉಕ್ಕೇರಿದ ವಾನರ ವೀರರು ಕಲ್ಲುಮರಗಳನ್ನು ಹಿಡಿದುಕೊಂಡು ರಾಕ್ಷಸಸೈನ್ಯವನ್ನು ಕೆಣಕಿದರು. ೩೩. ಬಿರುದುಗಳನ್ನು ಹೊಗಳುತ್ತ, ದ್ವೇಷದ ಮಾತುಗಳನ್ನಾಡುತ್ತ ಎರಡು ಸೈನ್ಯಗಳೂ ಒಂದನ್ನೊಂದು ಎದುರಿಸಿದವು. ಕೈ ಹೋರಾಟಗಾರರು ಕೆರಳಿ ರಭಸದಿಂದ ನುಗ್ಗಿದರು. ಹಿಂದೆ ನಡೆದುಹೋದ ಯುದ್ಧಗಳು ಎಷ್ಟರವು ? ಇದು ಹೊಸರೀತಿಯ ಯುದ್ಧ. ಇದನ್ನು ವರ್ಣಿಸಲು ತೊರವೆಯೊಡೆಯ ಶ್ರೀಮೂರ್ತಿಯೊಬ್ಬನಿಗೆ ಗೊತ್ತು ಎಂದು ವಾಲ್ಮೀಕಿಗಳು ವಿವರಿಸಿದರು.

# ಮೂವತ್ತನೆಯ ಸಂಧಿ

ಸೂಚನೆ॥ ವೀರ ರಿಪುಜಜ್ಝಾರನಾಹವ । ಧೀರ ವಾಲಿಕುಮಾರನಾಜಿಯೊ
ಳಾರುಭಟೆಯಲಿ ಗೆಲಿದನಗ್ಗದ ಕಲಿನರಾಂತಕನ

ಎರಡುಬಲದುಬ್ಬರದ ಬಲು ಸಂ । ಗರ ಸರೋಷದಲುಗುಳುಗಿಡಿಗಳ
ಹೊರಳಿಯಲಿ ನೆಲ ಹೊತ್ತಿಹೊಗೆದುಪ್ಪರಿಸಿತೆಂಬಂತೆ
ಚರಣ ನಿಹತೋದ್ಧೂತ ಧೂಳೀ । ಭರವು ನಡೆದುದು ಘನಸಮೀರನ
ಸರಣಿ ಸಿಂಧುವ ದಾಂಟಿ ಸರಸಿಜಭವನ ಪಟ್ಟಣಕೆ ೧

ಮಸಗಿ ಹೊಕ್ಕವು ಬಲವೆರಡು ಲಳಿ । ಮಸಗಿದಂಬುಧಿಯಂತೆ ಕಿಡಿಕಿಡಿ
ಮಸಗಿ ಮೋಹಿದ ಮುಖದೊಳೊಳಹೊಕ್ಕಿಕ್ಕಿದವು ಹೆಣನ
ಹಸರಗಳನುಣಲೆಡೆಗೆಡೆಗೆ ಕೆಂ । ಪೆಸೆವ ನೀರಜವಟಿಗೆಗಳನುಜಿ
ಹಸಿದ ಶಾಕಿನಿಗಣಕೆನಲು ರಂಜಿಸಿತು ರಣಭೂಮಿ ೨

ಕಾಲನಿಕ್ಕಿದ ಕಡಿತವೋ ದಂ । ಭೋಳಿಧರನಟ್ಟುಳಿಯೊ ಶೈಲದ
ಸೀಳುಗಳ ಬಿರುದನಿಯೊ ಕಲುಗುಂಡುಗಳ ಖಣಿಕಟಿಲೊ
ಹೇಳಲೇನದನಮಮ ರಣಭೂ । ತಾಳಿಗಳ ರಣನರ್ತನದ ಕರ
ತಾಳವೋಯೆನೆ ಕಾದಿತುಭಯದ ವೀರಭಟನಿಕರ ೩

ಸೂಚನೆ ॥ ಶತ್ರುಶೂರ, ಯುದ್ಧವೀರ ವಾಲಿಕುಮಾರ ಅಂಗದನು ಯುದ್ಧದಲ್ಲಿ ರಭಸದಿಂದ ವೀರನರಾಂತಕನನ್ನು ಗೆದ್ದನು. ೧. ಎರಡೂ ಸೈನ್ಯದ ಭಯಂಕರ ಕದನ ಕ್ರೋಧದಿಂದ ಸಿಡಿದ ಕಿಡಿಗಳ ರಾಶಿ ಕೆಳಕ್ಕೆ ಬಿದ್ದು ನೆಲ ಹತ್ತಿಕೊಂಡು ಹೊಗೆಯೆದ್ದಿತು ಎಂಬಂತೆ ಸೈನಿಕರ ಹೆಜ್ಜೆಗಳ ತುಳಿತದಿಂದ ಎದ್ದ ಧೂಳಿನರಾಶಿಯು ಆಕಾಶಗಂಗೆಯನ್ನು ದಾಟಿ ಬ್ರಹ್ಮನ ಪಟ್ಟಣಕ್ಕೆ ದಾಳಿಯಿಟ್ಟಿತು. ೨. ರಭಸದಿಂದ ಭೋರ್ಗರೆಯುವ ಸಮುದ್ರದಂತೆ ಎರಡು ಸೈನ್ಯಗಳೂ ಕೆರಳಿ ಒಂದರ ಮೇಲೊಂದು ಬಿದ್ದವು. ಕಿಡಿಕಾರುತ್ತ ಒಳಹೊಕ್ಕು ಹೊಡೆದು ಯೋಧರನ್ನು ಕೊಂದುಹಾಕಲು ಹೆಣಗಳ ರಾಶಿಯನ್ನು ಹಸಿದ ಶಾಕಿನಿಯರಿಗೆ ಊಟಕ್ಕೆ ಬಡಿಸಿ ಬಾಯಾರಿಕೆಗೆ ಕೆಂಪುನೀರಿನ ಅರವಟ್ಟಿಗೆಗಳನ್ನು ನಿರ್ಮಿಸಿ ದಂತೆ ಯುದ್ಧಭೂಮಿಯು ರಂಜಿಸಿತು. ೩. ಯಮನ ಕತ್ತರಿಸುವಿಕೆಯೋ, ವಜ್ರಾ ಯುಧ ಧರಿಸಿದ ದೇವೇಂದ್ರನ ಕಾಟವೋ, ಬೆಟ್ಟ ಬಿರಿದ ಬಿರುಸಾದ ಶಬ್ದವೋ, ಕಲ್ಲು ಗುಂಡುಗಳ ಖಣಿಕಟಿಲೆಂಬ ಧ್ವನಿಯೋ ! ಅಬ್ಬಬ್ಬ, ಅದನ್ನು ಏನೆಂದು ಹೇಳಲಿ ! ಯುದ್ಧಪಿಶಾಚಿಗಳ ಕದನಕುಣಿತದ ಚಪ್ಪಾಳೆಯೋ ಎನ್ನುವಂತೆ ಎರಡೂ ಕಡೆಯ

ಊರು ತುಂಬಿತು ಹರಿಹಯನ ಹೊಱ । ಕೇರಿಗಟ್ಟಿತು ಹರಿಸುತನ ನಡು
ದಾರಿಯಾದುದು ಮರುತಮಾರ್ಗದ ಮಿಹಿರಮಂಡಲಕೆ
ಸೇರಿದರು ಸುರಸತಿಯರಿಗೆ ಸುರ । ಭೂರುಹದ ಫಲಭೋಜನಕೆ ರಣ
ಧೀರರಾಹವಶೂರರುಭಯದ ವೀರಭಟನಿಕರ ೪

ಅವರಿವರ ಪಡಿಮುಖದ ಚೂಣಿಯ । ಬವರ ಮೊದಲಿನಿತಾಯ್ತು ಬಹಳಾ
ಹವದ ಭಾರಿಯ ಭಟರ ಬಲುಗಾಳಗದ ಗಸಣಿಯಲಿ
ಅವನಿ ನೊಂದುದು ಚೀಱಕೊಂಡುದು । ಪವನಪಥವಮರಾಳಿಗಳು ಜೀ
ವವನು ಕೈಗಳಲಡಗಿಸಿರ್ದುದು ಹೇಳಲೇನೆಂದ ೫

ಆನೆಯಲಿ ತೇರುಗಳ ತೇರಿಂ । ದಾನೆಗಳನಾನೆಯಲಿ ಹಯಸಂ
ತಾನಗಳ ಹಯದಿಂದ ಕಾಲಾಳುಗಳ ಸಂದಣಿಯ
ಆನೆಗಳ ತೇರುಗಳ ಹಯಸಂ । ತಾನಗಳ ಕಾಲಾಳ ಗಿರಿಗಳ.
ಲಾನೆವರಿವರಿದಿಟ್ಟು ಕೊಲುತಿರ್ದುದು ಕಪಿವ್ರಾತ ೬

ಕರಡಿಯಲಿ ಕಪಿಗಳನು ಕಪಿಯಲಿ । ಕರಡಿಗಳಥಾ ಕರಡಿ ಕೋಡಗ
ವೆರಡಱಲಿ ಮುಸು ಸಿಂಗಳೀಕವ ಸೂಳುಪಾಳಿನಲಿ
ತಿರುಹಿಡುತ ತಱದಿಱಿವುತೆತ್ತುವ । ಹರಿಬಲವ ಬಱಕೈವುತಿರ್ದುದು
ಹರಿಬದತಿಬಲ ಖಳಕದಂಬಕವಸಮ ಸಮರದಲಿ ೭

ವೀರಯೋಧರು ಹೋರಾಟ ನಡೆಸಿದರು. ೪. ಇಂದ್ರನ ನಗರವು ಸತ್ತು ವೀರಸ್ವರ್ಗ ಪಡೆದವರಿಂದ ತುಂಬಿಹೋಯಿತು ; ಬ್ರಹ್ಮನ ನಗರದ ಹೊರಗೆ ಪಾಳಯವೇರ್ಪಟ್ಟಿತು ; ಸೂರ್ಯಮಂಡಲಕ್ಕೆ ಆಕಾಶದ ನಡುವೆ ದಾರಿಯಾಯಿತು. ಯುದ್ಧದಲ್ಲಿ ಮರಣ ಹೊಂದಿದ ಎರಡೂ ಸೈನ್ಯದ ರಣಧೀರರು ಕಲ್ಪವೃಕ್ಷದ ಹಣ್ಣನ್ನು ಊಟಮಾಡಲು ದೇವಲೋಕದ ಸ್ತ್ರೀಯರಿಗೆ ಸೇರಿಹೋದರು. ೫. ಎದುರುಬದರಾಗಿ ನಿಂತ ಸೈನ್ಯದ ಮುಂದಿನ ಸಾಲಿನ ಸಾಮಾನ್ಯಭಟರ ಕದನವೇ ಮೊದಲು ಇಷ್ಟರಮಟ್ಟಿಗಾಯಿತು. ಭಾರಿ ಯುದ್ಧವೀರರ ಪ್ರಬಲ ಕದನದ ಘರ್ಷಣೆಯಿಂದ ಭೂಮಿಗೆ ನೋವಾಯಿತು, ಆಕಾಶವು ಕಿರುಚಿಕೊಂಡಿತು, ದೇವತೆಗಳು ಜೀವವನ್ನು ಮುಷ್ಟಿಯಲ್ಲಿ ಹಿಡಿದುಕೊಂಡು ನಿಂತರು. ಇದನ್ನು ಏನೆಂದು ವರ್ಣಿಸಲಿ ಎಂದರು ವಾಲ್ಮೀಕಿಗಳು. ೬. ಆನೆಯಿಂದ ತೇರುಗಳನ್ನೂ, ತೇರಿನಿಂದ ಆನೆಗಳನ್ನೂ, ಆನೆಯಿಂದ ಕುದುರೆಗಳನ್ನೂ, ಕುದುರೆಯಿಂದ ಕಾಲಾಳುಗಳ ಸಮೂಹವನ್ನೂ ಹೊಡೆದು ಕೊಂದು, ಆನೆ, ರಥ, ಕುದುರೆಗಳು ಮತ್ತು ಕಾಲಾಳುಗಳನ್ನು ಆನೆಯಂತೆ ಮುಂದೆ ನುಗ್ಗಿ ಬಂಡೆಗಳಿಂದ ಹೊಡೆದು ವಾನರರು ಕೊಲ್ಲುತ್ತಿದ್ದರು. ೭. ಕರಡಿಯಿಂದ ಕಪಿಗಳನ್ನೂ, ಕಪಿಗಳಿಂದ ಕರಡಿಗಳನ್ನೂ, ಕರಡಿ ಕೋಡಗಗಳಿಂದ ಮುಸುಸಿಂಗಳೀಕಗಳನ್ನೂ, ಸರದಿಯ ಪ್ರಕಾರ ತಿರುಗಿಸಿ ತಿರುಗಿಸಿ ಹೊಡೆದು ಇರಿದು ಕತ್ತರಿಸುತ್ತ ಯುದ್ಧತತ್ಪರರಾದ ರಾಕ್ಷಸರು ವಿಷಮಯುದ್ಧದಲ್ಲಿ

ಎರಡು ಬಲದುಬ್ಬರದ ಬಲು ಸಂ । ಗರವು ನಡೆದುದು ಸಮರದಿಳೆಯಲಿ
ಹೊರಳಿವೆಣನುಪ್ಪರಿಸಿದುದು ತಾಳೇಳರುದ್ದದಲಿ
ಗುರುವೆನಿಸಿತಿವರಾಹವವು ಲಘು । ತರವೆನಿಸಿತವರಾಜಿ ಸೋಲದ
ಹರವಱಿದು ಹೊಕ್ಕನು ನರಾಂತಕನಬ್ಬರಿಸಿ ಹಯವ ೮

ಹೊಳೆದುದಾಹವದಂಬರದ ಪರಿ । ವಳಯುದಮಲ ರುಚಿಪ್ರಭಾಮಂ
ಡಲದವೊಲು ಕರಮಂಡಲಾಗ್ರದ ಬೆಳಗು ಬಳಿಸಲಿಸೆ
ಚಳಚಮತ್ಕೃತಿ ಚಟುಳ ಖುರಪುಟ । ದಳಿತ ಧೂಳೀಬಿಂಬ ಚುಂಬಿತ
ವಿಲಸದಭಿನವದಶ್ವ ಗೆಲಿದುದು ನೆಲನ ನಿಮಿಷದಲಿ ೯

ತೊಡೆಯು ಬಿಗುಹಿನಲಗಿದು ನರ್ತಿಸಿ । ತಡಿಗಡಿಗೆ ಗಮಕಗಳ ಗತಿಗಳ
ಕಡುಹಿನಲಿ ನಸುಕುಸಿದ ಪಚ್ಚೆದುಪ್ಪರದ ಮುಖದ
ದೃಢಗತಿಯು ದೃಷ್ಟಿಗಳ ಕೋಪದಿ । ಸಿಡಿವ ಕಿವಿಗಳ ನಿಟ್ಟುಸುರ ನೊರೆ
ಗಡಿಯಣದ. ಹಯವಂಜಿಸಿತು ಹರಿಹಯತುರಂಗಮವ ೧೦

ಶೂರವಾಹಕ ಸುಭಟ ಸಮರ । ಕ್ರೂರವಾಹಕ ನಿಪುಣ ರಿಪುಸಂ
ಹಾರವಾಹಕ ಕುಶಲಚಮ್ಮಟ ಚಪಲರೇವಂತ
ಚಾರಣತ್ರಯ ಚಮತ್ಕಾರ ನಿ । ಹಾರ ನಿಸ್ತ್ರಿಂಶಕ ನಿಬದ್ಧ ವಿ
ಶಾರದಾಹವಮಲ್ಲ ಮುಝು ಭಾಪೆಂದುದಮರಗಣ ೧೧

ಮೇಲೆ ಬೀಳುವ ವಾನರಸೈನ್ಯವನ್ನು ಬರಿದುಮಾಡುತ್ತಿದ್ದರು. ೮. ಯುದ್ಧರಂಗದಲ್ಲಿ ಎರಡು ಕಡೆಯ ಸೈನ್ಯದ ನಡುವೆ ಭಾರಿ ಕಾಳಗವೇ ನಡೆಯಿತು. ಹೆಣಗಳು ರಾಶಿರಾಶಿಯಾಗಿ ಬಿದ್ದು ಏಳು ತಾಳೆಮರಗಳಷ್ಟು ಎತ್ತರವಾಯಿತು. ವಾನರರ ಯುದ್ಧ ಮೇಲಾಯಿತು, ರಾಕ್ಷಸರ ಯುದ್ಧವು ಕೀಳಾಯಿತು. ರಾಕ್ಷಸಸೈನ್ಯದ ಸೋಲಿನ ವ್ಯಾಪಕತೆಯನ್ನು ಅರಿತು ನರಾಂತಕನು ಕುದುರೆಯನ್ನು ಅದ್ದಲಿಸಿ ಓಡಿಸಿಕೊಂಡು ಬಂದನು. ೯. ಯುದ್ಧವೆಂಬ ಆಕಾಶದ ಪ್ರಭಾವಲಯದ ಪ್ರಕಾಶದಂತೆ ಕೈಯಲ್ಲಿ ಹಿಡಿದ ಚಂದ್ರಾಕಾರದ ಖಡ್ಗದ ಹೊಳಪು ಹೊಳೆಯಿತು. ಚಮತ್ಕಾರವಾಗಿ ಶೀಘ್ರ ಗತಿಯಿಂದ ಚಲಿಸುವಾಗ ಗೊರಸಿನಿಂದ ಎದ್ದ ಧೂಳಿನಬಿಂಬವನ್ನು ಸ್ಪರ್ಶಿಸುತ್ತ ನವೀನ ಕುದುರೆಯು ನಿಮಿಷಾರ್ಧದಲ್ಲಿ ದೂರವನ್ನು ಕ್ರಮಿಸಿತು. ೧೦. ನರಾಂತಕನ ಕುದುರೆಯು ತೊಡೆಯನ್ನು ಬಿಗಿಯಾಗಿಟ್ಟುಕೊಂಡು ತೂಗಾಡುತ್ತಾ ಅಡಿಗಡಿಗೆ ರೀವಿಯಿಂದ ಹೆಜ್ಜೆ ಹಾಕುತ್ತಾ ನರ್ತಿಸಿತು. ಪೃಷ್ಠವನ್ನು ಸ್ವಲ್ಪವೇ ಬಾಗಿಸಿ ಮುಖವನ್ನು ಮೇಲಕ್ಕೆತ್ತಿ ದಿಟ್ಟ ನಡೆಯನ್ನಿಟ್ಟು ಕೋಪದಿಂದ ದೃಷ್ಟಿಸಿ ನೋಡುತ್ತ ಕಿವಿಯನ್ನು ನೆಟ್ಟಗೆ ಮಾಡಿಕೊಂಡು ನಿಟ್ಟುಸಿರು ಹಾಕುತ್ತಾ ಕಡಿವಾಣದ ಬಾಯಲ್ಲಿ ನೊರೆ ತುಂಬಿಕೊಂಡ ಕುದುರೆಯು ಇಂದ್ರನ ಕುದುರೆಯನ್ನು ಹೆದರಿಸಿತು. ೧೧. 'ಶೂರ ಸವಾರ ! ಯುದ್ಧವೀರ ! ಶತ್ರುಸಂಹಾರ ರಾವುತ ! ಗುರಾಣಿಚತುರ ! ಸುಂದರರೂಪ ! ಮೂರು ಲೋಕಗಳ ಸಂಚಾರವುಳ್ಳವನೇ ! ಯುದ್ಧಕುಶಲ ! ಖಡ್ಗಕಾಳಗದ ವಿಶಾರದ !

ಪೂತುವೇಡೆನೆ ಡಂಗುವಾಹಳು । ದಾತುದೋಹಳು ಬಂಧಗತಿ ಪುರು
ಹೂತ ದೃಢಗತಿ ದ್ರುಹಿಣಶೀಘ್ರಗತಿ ಪ್ರಸಿದ್ಧಬಲ
ಭೂತನಾಥಲಯತ್ರಯ ಪ್ರ । ಖ್ಯಾತ ನಾರಾಯಣ ಸುಪರ್ವಾ
ರಾತಿ ರಾವುತು ರಾವುತೆಂದುದು ವಂದಿಸಂದೋಹ ೧೨

ಏಜಿದುದು ಹಯವಮು ಗರುಡನ । ಹಾಟಿಕೆಯ ಪವಣಿನಲಿ ತೆರೆಮುರಿ
ದೇಜುವಂಬುಧಿಯಂತೆ ತುರಗದ ಥಟ್ಟು ಬಳಿಸಲಿಸೆ
ಏಜಿದವು ಪಡಿಮುಖದೊಳುಬ್ಬಿದ । ಕಾಜುಗಿಡಿಗಳ ಖಂಡೆಯದ ಕೈ
ದೋಜಿಕೆಯಲಗಲದಲಿ ನೆಲ ಕಡಿಖಂಡಮಯವಾಗೆ ೧೩

ಬೆರಸಿ ಹೊಯ್ವರು ಹರಹಿನಲಿ ಹೊಡ । ಕರಿಸಿ ವಾಜಿಸಾಂತರಿಬಲದ ಮೋ
ಹರವು ಮುಕ್ಕಡಿಯಾಯ್ತು ಮುಂಬಿಗೆ ಬಿದ್ದ ಭಟನಿಕರ
ನೊರೆಯನುಬ್ಬಿಸುತೇಳ್ವ ರಣದು । ಬ್ಬರದ ರಕುತದ ಹೊನಲು ಹೊಳಕಿತು
ಹೊರಳಿದವು ಹೇರಾಳ ಹೆಣದುಂಡುಗಳು ಕಪಿಬಲದ ೧೪

ಆರ ನೋಡಿದಡರಿಕೃಪಾಣದ । ಧಾರೆಗಿಕ್ಕಡಿಯಾದವರು ಮುರಿ
ದಾರ ನೋಡಲು ಕೂಡೆ ಲೌಡಿಯಲುರುಳ್ವ ತಲೆಯವರು
ಆರ ನೋಡಿದಡಮವು ಗದೆಗಳ । ಧಾರೆ ತಾಗಿದ ತಳಿತ ಮಿದುಳಿನ
ಮಾರಣದ ಭಟರಲ್ಲದಿಲ್ಲಾ ಕಪಿಕದಂಬದಲಿ ೧೫

ಮರ್ಝು ಭಾಪು !' ಎಂದು ದೇವತೆಗಳು ಹೊಗಳಿದರು. ೧೨. 'ಪೂತುವೇಡ ! ಡಂಗುವಾಹಳು, ದಾತುದೋಹಳು, ಬಂಧಗತಿ ಮೊದಲಾದ ಚಲನೆಗಳನ್ನು ತಿಳಿದವನೇ ! ದೇವೇಂದ್ರನ ಸಮರ್ಥಗತಿಯುಳ್ಳವನೇ, ಬ್ರಹ್ಮನ ಶೀಘ್ರ ಸಂಚಾರವುಳ್ಳವನೇ, ಪ್ರಸಿದ್ಧ ಬಲಶಾಲಿ, ತ್ರಿಲೋಕಪ್ರಳಯಕರ್ತ ಭೂತನಾಥ, ಪ್ರಖ್ಯಾತ ನಾರಾಯಣ, ದೇವತೆಗಳ ಶತ್ರು, ರಾವುತು ! ರಾವುತು !' ಎಂದು ಹೊಗಳುಭಟರು ರಾಕ್ಷಸನನ್ನು ಕೊಂಡಾಡಿದರು. ೧೩. ನರಾಂತಕನ ಕುದುರೆಯು ಗರುಡ ಹಾರುವಂತೆ ಮೇಲೇರಿಬಂದಿತು. ತೆರೆಗಳನ್ನ ಪ್ಪಳಿಸುತ್ತ ಏರಿಬರುವ ಸಾಗರದಂತೆ ಕುದುರೆಗಳ ದಳವು ಅದನ್ನು ಹಿಂಬಾಲಿಸಿತು. ಶತ್ರುಸೈನ್ಯದ ಎದುರಿಗೆ ಕಿಡಿಗಳನ್ನು ಕಾರುವ ಕತ್ತಿಗಳನ್ನು ಬೀಸುತ್ತ ಅಷ್ಟಗಲಕ್ಕೂ ಅಶ್ವದಳವು ಬರುತ್ತಿರಲು ನೆಲ ಒಡೆದು ಬಿರುಕುಬಿಟ್ಟಿತು. ೧೪. ಪ್ರತಿಭಟಿಸುವ ಶತ್ರುಸೈನ್ಯವು ಕಾಣಿಸಿದೊಡನೆ ರಾಕ್ಷಸರು ಎಲ್ಲ ಕಡೆಯೂ ನುಗ್ಗಿ ಹೊಡೆದರು. ಮುಂದಿನ ಸಾಲಿನಲ್ಲಿದ್ದ ಕಪಿಭಟರು ಮೂರು ಚೂರಾದರು. ನೊರೆಯನ್ನುಕ್ಕಿಸುತ್ತ ಹರಿಯುವ ರಕ್ತದ ಪ್ರವಾಹದಲ್ಲಿ ಕಪಿಸೈನ್ಯದ ಅಸಂಖ್ಯಾತ ಹೆಣದ ತುಂಡುಗಳು ಹೊರಳಾಡಿದವು. ೧೫. ಯಾರನ್ನು ನೋಡಿದರೂ ಶತ್ರುಗಳ ಕತ್ತಿಯೇಟಿಗೆ ಸಿಕ್ಕಿ ಎರಡು ತುಂಡಾದವರು, ತಿರುಗಿ ಯಾರನ್ನು ನೋಡಿದರೂ ಕಬ್ಬಿಣದ ದೊಣ್ಣೆಯೇಟಿನಿಂದ ತಲೆ ಉರುಳುವವರು, ಅಬ್ಬಬ್ಬ ! ಯಾರನ್ನು ನೋಡಿದರೂ ಗದೆಗಳ ಹೊಡೆತದಿಂದ ಮಿದುಳು ಹೊರಟು ಕೊಂಡು ಸತ್ತ ಯೋಧರು. ಇವರ ವಿನಹ ಕಪಿಸೈನ್ಯದಲ್ಲಿ ಇನ್ನಾರೂ ಕಾಣಿಸುತ್ತಿರಲಿಲ್ಲ.

ಅಸುರರುರು ಬಲ್ಲೆಹದ ತಿವಿಗುಳ । ಬಸುರ ಬಾದಣದುರ್ಚುಗರುಳಿನ
ನಿಶಿಖ ವಿಹರಣದಳಿತಗಳ ದೋರ್ದಂಡಮಂಡಲದ
ಮುಸು ಕರಡಿ ಸಿಂಗಳಿಕ ಕೋಡಗ । ವಸರಗರ ಸಂದಣಿಯ ಸಂಭ್ರಮ
ವೆಸೆದುದೈ ಲವ ಕೇಳು ಕಾಲನ ಸಂತೆಯಂದದಲಿ ೧೬

ಏತಜುಬ್ಬಟೆ ಪೂರ್ವಯುಗದ ಮ । ಹಾತಿಬಲ ಖಳರೀ ನರಾರಿಯ
ರೀತಿಗೆಣೆಯೆಡೆ ಪಡಿಯ ಕಾಣೆನು ಕದನಕೇಳಿಯಲಿ
ಕೌತುಕವಲೇ ನಿಮ್ಮ ಸೇನಾ । ವ್ರಾತವನು ನಡುವಿಕ್ಕಿ ತಿರುವಿದ
ಲಾತ ಚಕ್ರದ ಚೂಣಿಯಲಿ ಹಯವಾ ನರಾಂತಕನ ೧೭

ಆರು ಲಕ್ಷಿಸಬಹುದು ಹೂಣಿಸಿ । ದಾರುಭಟೆಗಳ ಭಟರ ಕೈಗಳ
ಭೂರಿ ಭೂಧರ ಭೂಜತತಿ ಬೆಜಗಿಟ್ಟವಾಜಿಯಲಿ
ಸಾರೆ ಬೀಳುವುದರಿದು ಮಿಕ್ಕಿನ । ವೀರರಿಡುವದ್ರಿಗಳ ವಿಶ್ವವಿ
ಹಾರದಶ್ವವ್ರಾತಮಯವಾಗಿರ್ದುದಗಲದಲಿ ೧೮

ನೀರೊಳೆಳೆದಸಿಯಂತೆ ರಕ್ಕಸ । ವೀರನುಗ್ರ ಕರಾಗ್ರಬಂಧದ
ವೀರ ಖಂಡೆಯ ವಿಹರಿಸಿತು ವಾನರಸಮುದ್ರದಲಿ
ಧಾರೆಗಾಣಿಸದೊಲೆದ ಮೈಯಲಿ । ಧಾರುಣಿಗೆ ಕಡಿಬೀಳ್ವ ಕಪಿಭಟ
ರೋರಣದ ಸಾಲಿರ್ದುದಾ ರಣರಂಗಮಧ್ಯದಲಿ ೧೯

೧೬. ಲವ, ಕೇಳು. ರಾಕ್ಷಸರು ಈಟಿ ಮತ್ತು ತಿವಿಗುಳಗಳಿಂದ ತಿವಿಯಲು ಹೊಟ್ಟೆ ತೂತಾಗಿ ಕರುಳು ಹೊರಟುಕೊಂಡ ಮತ್ತು ಬಾಣದೇಟಿನಿಂದ ಕತ್ತರಿಸಿದ ಕತ್ತು ಮತ್ತು ತೋಳುಗಳ, ಮುಸುವ, ಕರಡಿ, ಸಿಂಗಳೀಕ, ಕೋಡಗಗಳ ಸಮೂಹವು ಯಮನ ಸಂತೆಯಂತೆ ಎಲ್ಲೆಲ್ಲೂ ಗೋಚರಿಸಿತು. ೧೭. ಹಿಂದಿನ ಯುಗದ ಮಹಾಬಲಶಾಲಿ ರಾಕ್ಷಸರು ಯಾವ ಹಿರಿಮೆಯವರು ? ಈ ನರಾಂತಕನಿಗೆ ಹೋಲಿಸಿದರೆ ಯುದ್ಧದಾಟದಲ್ಲಿ ಅವನಿಗೆ ಸಮಾನರು ಯಾರಿದ್ದಾರೆ ? ಆಶ್ಚರ್ಯವಲ್ಲವೇ, ನರಾಂತಕನ ಕುದುರೆಯು ನಿಮ್ಮ ಕಪಿಸೈನ್ಯವನ್ನು ಮಧ್ಯಕ್ಕೆ ಸೇರಿಸಿಕೊಂಡು ಚಕ್ರದ ಸಾಲಿಗೆ ತಿರುಗಿಸಿ ಎಸೆಯುತ್ತಿತ್ತು. ೧೮. ವೀರರ ಆಣೆಪ್ರತಿಜ್ಞೆಗಳ ಆರ್ಭಟವನ್ನು ಯಾರು ಗಮನಿಸಲು ಸಾಧ್ಯ ? ವಾನರವೀರರು ಕೈಗಳಲ್ಲಿ ಹಿಡಿದ ಭಾರಿ ಬೆಟ್ಟ ಮತ್ತು ಮರಗಳು ಕಾಳಗದಲ್ಲಿ ಆಶ್ಚರ್ಯವನ್ನುಂಟುಮಾಡಿದವು. ಅತಿಶಯದ ವೀರರು ಎಸೆಯುವ ಬೆಟ್ಟಗಳು ಹತ್ತಿರಕೂಡ ಬೀಳುವುದಸಾಧ್ಯವಾಗಿತ್ತು. ನರಾಂತಕನ ಕುದುರೆಯು ವ್ಯಾಪಕವಾಗಿ ಚಲಿಸುತ್ತ ಎಲ್ಲೆಲ್ಲಿ ನೋಡಿದರೂ ರಣರಂಗದಲ್ಲಿ ತಾನೇತಾನಾಗಿತ್ತು. ೧೯. ನೀರಿನಲ್ಲಿ ಎಳೆದ ಖಡ್ಗದ ಹಾಗೆ ರಾಕ್ಷಸವೀರನ ಕೈಯ ವೀರಗತ್ತಿಯು ವಾನರಸಮುದ್ರದಲ್ಲಿ ಸರಾಗವಾಗಿ ವಿಹರಿಸಿತು. ಕತ್ತಿಯ ಅಲಗು ಮಾತ್ರ ಕಾಣಿಸುತ್ತಿರಲಿಲ್ಲ, ರಾಕ್ಷಸನು ತಿರುಗಿದ ಕಡೆಯಲ್ಲಿ ಕತ್ತರಿಸಿದ ಕಪಿಭಟರು ರಣರಂಗದಲ್ಲಿ ಸಾಲಾಗಿ ಬೀಳುವುದನ್ನು ಕಾಣಬಹುದಾಗಿತ್ತು.

ಕಟಕಕೆಡೆಯಾಡುವ ಕೃತಾಂತನ । ಭಟರ ಪಥದುೞುಬುಗಳಲಿಟ್ಟಱ
ವಟಿಗೆಯೋ ರಣಭೂತದೆಂಜಲು ಕೈಗೆ ಕವಿದೆಱೆವ
ಘಟದ ವಾರಿಯೊ ವೀರ ಖಳನು । ತ್ಕಟದ ಖಡುಗದ ತುದಿಯಲುದಿಸಿದ
ತಟನಿಯೋ ತಾನೆನಲು ಕಱೆದುದು ಖಡ್ಗ ಶೋಣಿತವ ೨೦

ರಣದಿ ಬಿದ್ದನು ರಂಭ ರುಮನಸು । ಜುಣುಗಿದುದು ಜಾಂಬವನ ತನು ಡೆಂ
ಡಣಿಸಿತೇೞ್ನಲಗ್ನಿಸುತ ಗಜ ಗಂಧಮಾದನರು
ಮುಣುಗಿದರು ರಕುತದಲಿ ರವಿಜನ । ಕುಣಿಹ ನಿಂದುದು ಸುಮುಖ ದುರ್ಮುಖ
ರಣೆದು ಚಿಮ್ಮಿದರಟ್ಟಿಯಾಡಿದರನಿಬರನುಚರರ ೨೧

ಬಿದ್ದ ನಳ ಹೊರಳಿದನು ಘಾಯಕೆ । ಮದ್ದನಱಸಿದನಾ ಸುಷೇಣಕ
ನೊದ್ದುಕೊಂಡನು ಶರಭ ಶತಬಲಿಗೇಱು ಬಲ್ಪುಹಾಯ್ತು
ಇದ್ದ ಮಿಕ್ಕಿನ ವೀರವಾನರ । ರುದ್ದುರುಟುತನವಾರ ಠಾವಿನೊ
ಳಿದ್ದುದೋ ನಾನಱಿಯೆ ಹೊಗಳುವೆನೇನ ರಣರಸವ ೨೨

ಆರಿವನು ಶಿವಶಿವ ವಿಭೀಷಣ । ವೀರರೊಳಗಗ್ಗಳನು ರಣಜ
ಜ್ಝಾರನಿವನಹನಮಮ ಜನನಿಯ ಜಠರದಿಂದಿವನು
ವಾರುವನು ಸಹಿತುದಿಸಿದನೊ ಸಮ । ಸೇರುವೆಯುಲಿವಸಹಿತ ಪಡೆದುದೊ
ಧಾರುಣಿಗೆ ದಿವಿಜೇಂದ್ರಪಶುವೆಂದರಸ ಬೆಸಗೊಂಡ ೨೩

೨೦. ಸೈನ್ಯದ ನಡುವೆ ಓಡಿಯಾಡುವ ಯಮನಾಳುಗಳ ದಾರಿಗಳ ನೆಲೆಗಳಲ್ಲಿ ಇರಿಸಿದ ಅರವಟ್ಟಿಗೆಯೋ, ಯುದ್ಧ ಪಿಶಾಚಿಗಳ ಎಂಜಲುಕೈಗಳಿಗೆ ಎರೆಯುವ ಕೊಡದ ನೀರೋ, ವೀರ ನರಾಂತಕಾಸುರನ ಉಗ್ರಖಡ್ಗದ ತುದಿಯಿಂದ ಹುಟ್ಟಿದ ನದಿಯೋ ಎನ್ನುವಂತೆ ರಾಕ್ಷಸನ ಕತ್ತಿಯು ರಕ್ತವನ್ನು ಹರಿಸಿತು. ೨೧. ಯುದ್ಧದಲ್ಲಿ ರಂಭನು ಬಿದ್ದನು, ರುಮನ ಪ್ರಾಣ ಕಳಚಿಕೊಂಡಿತು, ಜಾಂಬವನ ದೇಹ ನಡುಗಿತು, ಗಾಯಗೊಂಡ ಅಗ್ನಿ ಕುಮಾರ ನೀಲ ಗಜ ಗಂಧಮಾದನರು ರಕ್ತದಲ್ಲಿ ಮುಳುಗಿದರು, ಸುಗ್ರೀವನ ಕುಣಿತ ನಿಂತುಹೋಯಿತು, ಸುಮುಖ ದುರ್ಮುಖರು ತಿವಿದು ದೂರ ಚಿಮ್ಮಿಬಿದ್ದರು, ರಾಕ್ಷಸರು ಉಳಿದ ವಾನರಸಹಾಯಕರನ್ನು ಅಟ್ಟಿ ಕೊಂದರು. ೨೨. ಯುದ್ಧದಲ್ಲಿ ಬಿದ್ದ ನಳ ನೆಲದ ಮೇಲೆ ಹೊರಳಾಡಿ ಔಷಧಿಯನ್ನು ಅರಸಿದನು, ಸುಷೇಣಕ ನೋವಿ ನಿಂದ ಒದ್ದಾಡಿದನು, ಶರಭ ಶತಬಲಿಗಳಿಗೆ ತುಂಬ ಗಾಯವಾಯಿತು. ಇನ್ನು ಉಳಿದ ವೀರವಾನರರ ಒರಟುತನ ಎಲ್ಲಿತ್ತೋ ನಾನರಿಯೆ, ರಣರಸವನ್ನು ಏನೆಂದು ಹೊಗಳಲಿ ಎಂದು ವರ್ಣಿಸಿದರು ವಾಲ್ಮೀಕಿಗಳು. ೨೩. "ಶಿವ ಶಿವ ! ಯಾರಿವನು, ವಿಭೀಷಣ ? ವೀರರಲ್ಲಿ ಶ್ರೇಷ್ಠನೂ ರಣಧೀರನೂ ಆಗಿದ್ದಾನೆ. ಅಬ್ಬಬ್ಬ ! ಇವನು ತಾಯಿಯ ಹೊಟ್ಟೆಯಿಂದ ಕುದುರೆಯ ಸಮೇತ ಹುಟ್ಟಿದನೋ ಅಥವಾ ದೇವೇಂದ್ರನ ಕುದುರೆ ಉಚ್ಚೈಶ್ರವಸ್ಸೂ ಇವನೂ ಸಮವಾಗಿ ಸೇರಿಕೊಂಡು ಭೂಲೋಕಕ್ಕೆ ಇಳಿದು

ದೇವ ಚಿತ್ತೈಸೀ ಮಹಾಹಯ । ದೇವಪಶುವಿಂಗುದಿಸಿ ಸೇರಿತು
ರಾವಣಂಗಿದು ಮೊದಲಕಲ್ಪದಲಮರವಲ್ಲಭನ
ಈ ವಿಗಡ ಹಯವಿವನ ಕಲಿಕೆಯ । ಮೈವಳಿಯ ವಶವಾಯ್ತು ಮಗನಿವ
ನಾ ವಿಬುಧರಿಪು ರಾವಣಂಗೆಲೆ ರಾಯ ಕೇಳೆಂದ ೨೪

ಎಂಬ ಮಾತೇನಿವ ನರಾಂತಕ । ನೆಂಬ ರಕ್ಕಸನಿವನಲೇ ಪ್ರತಿ
ಬಿಂಬವಿಲ್ಲೀ ನೆಲೆಗೆ ಸುರನರನಾಗಲೋಕದಲಿ
ನಂಬುಗೆಯ ಭಟನಿವನು ಯುಗಳ ದ । ಶಾಂಬಕಂಗೆಲೆ ಜೀಯ ಸಮರಾ
ಡಂಬರದ ಸಂಭ್ರಮವ ಚಿತ್ತೈಸೆಂದನಸುರೇಂದ್ರ ೨೫

ಎಂದು ನುಡಿವನಿತರೊಳು ಹಯವೈ । ತಂದುದಾ ನೃಪಮೋಹರಕೆ ರಘು
ನಂದನನ ಸಮ್ಮುಖಕೆ ನೂಕಿದನವ ತುರಂಗಮವ
ನಿಂದು ನಿಬ್ಬಗಿಯಾಗಿ ರವಿಜನ । ಮಂದಿ ಬಳಿಕಾ ಸಮಯದಲಿ ಸಿಡಿ
ಲಂದದಲಿ ಹೀವರಿಸುತಂಗದನೆಱಗಿದನು ಖಳನ ೨೬

ದೂಟಿಬಿದ್ದುದು ಶಿರದ ಸೀಸಕ । ಕೂಟದಮಳಾನರ್ಘ್ಯರತ್ನಕಿ
ರೀಟವಂಬರದಿಂದಿಳಾತಳಕುಳುಕಿ ಬೀಳ್ವಂತೆ
ದಾಟಿ ಮುಱುಮುಪ್ಪಿಯಲಿ ರಕ್ಕಸ । ಘೋಟಕದ ಕಟವಾಯನಧಿಕ
ಸ್ಫೋಟದಿಂದೆಱಗಿದನು ಬೆಱಗಿಡೆ ಸಕಲ ಸುರನಿಕರ ೨೭

ಬಂದರೋ ?" ಎಂದು ರಾಮ ವಿಭೀಷಣನನ್ನು ಕೇಳಿದನು. ೨೪. "ದೇವ, ಆಲಿಸು. ಈ ಮಹಾಕುದುರೆಯು ದೇವೇಂದ್ರನ ಉಚ್ಚೈಃಶ್ರವಸ್ಸಿಗೆ ಉದಿಸಿ ಮೊದಲನೆಯ ಕಲ್ಪದಲ್ಲಿ ರಾವಣನಿಗೆ ಸೇರಿತು. ಕುದುರೆಸವಾರಿಯ ಕಲಿಕೆಗೆ ಇದು ಇವನ ಅಧೀನವಾಯಿತು. ರಾವಣಾಸುರನ ಮಗನಿವನು" ಎಂದು ವಿಭೀಷಣ ಹೇಳಿದ. ೨೫. "ಹೆಚ್ಚು ಹೇಳುವುದೇನು, ನರಾಂತಕನೆಂಬ ರಾಕ್ಷಸನೇ ಇವನು. ದೇವ ಮಾನವ ನಾಗಲೋಕಗಳಲ್ಲಿ ಇವನಿಗೆ ಸಮಾನರಿಲ್ಲ. ಇಪ್ಪತ್ತು ಕಣ್ಣುಳ್ಳವನಿಗೆ (ದಶಾನನನಿಗೆ) ಇವನು ನಂಬಿಕೆಯ ಭಟ. ಇವನ ಯುದ್ಧಕೌಶಲ್ಯದ ಸಂಭ್ರಮವನ್ನು ಗಮನಿಸು" ಎಂದ ವಿಭೀಷಣ. ೨೬. ಹೀಗೆಂದು ವಿಭೀಷಣನು ನುಡಿಯುತ್ತಿರುವಷ್ಟರಲ್ಲಿ ರಾಮನ ಸೈನ್ಯದ ಬಳಿಗೆ ಕುದುರೆ ಬಂದಿತು. ನರಾಂತಕನು ರಘುನಂದನನ ಎದುರಿಗೆ ಕುದುರೆಯನ್ನು ತಂದನು. ಸುಗ್ರೀವನ ಸೈನ್ಯವು ಅಧಿಕವಾಗಿ ಹೆದರಿ ನಿಂತಿತು. ಆ ಸಮಯದಲ್ಲಿ ಅಂಗದನು ಅರ್ಭಟಿಸುತ್ತ ಸಿಡಿಲಿನಂತೆ ನರಾಂತಕನ ಮೇಲೆ ಬಿದ್ದನು. ೨೭. ರಾಕ್ಷಸನ ತಲೆಯ ಶಿರಸ್ತ್ರಾಣದ ಜತೆ ಸೇರಿದ್ದ ಅಮೌಲ್ಯರತ್ನಕಿರೀಟವು ಅಲುಗಿ ಆಕಾಶದಿಂದ ನೆಲಕ್ಕೆ ಎಗರಿಬಿದ್ದಿತು. ಅಂಗದನು ನುಗ್ಗಿ ರಾಕ್ಷಸನ ಕುದುರೆಯ ಕಟಬಾಯನ್ನು ಭಾರಿ ಶಬ್ದದೊಡನೆ ಮುಷ್ಟಿ

ಭಾಪು ವೀರರದೇವ ದೇವ । ಸ್ಥಾಪನಾಚಾರಿಯನ ಮಗನ
ಲ್ಲಾ ಪುರಂದರಪೌತ್ರನಲ್ಲಾ ಲೇಸುಲೇಸೆನುತ
ಆ ಪುರಾಂತಕ ಪೊಗಳಿದನು ಗಿರಿ । ಜಾಪುರಂಧ್ರಿಗೆ ತೋರಿ ಖಳನಿವ
ಕೋಪದಲಿ ಕಿಡಿಗೆದರಿ ಜಡಿದೆತ್ತಿದನು ಖಂಡೆಯವ ೨೮

ಕಡಿಯಣವ ಕೊಡಹುವ ತುರಂಗವ । ಮಡದಲೌಕಿದು ತಿರುಹಿ ಹಾಯ್ಕುತ
ಹೊಡೆದನವನೀತನನಡಾಯುಧದಲಿ ನಿಹಾರದಲಿ
ಸಿಡಿದು ಬೊಬ್ಬಿರಿದುಬ್ಬಿ ಕಂಗಳ । ಕಿಡಿಯ ಕೋಪದಲಸುರಹಯ ನೆಲ
ಕಡಿಮಗುಚಲೆರಗಿದನು ವಾಲಿಜನುಗ್ರಮುಷ್ಟಿಯಲಿ ೨೯

ತುರಗದೇರಾಟಿಕೆಯ ಭಟರಿಗೆ । ಗುರುವಲಾ ಜಗದಲಿ ನರಾಂತಕ
ನುರುಳಿದಶ್ವವನುಪ್ಪರಿಸಿ ಚಪ್ಪರಿಸಿದಾಯೆನುತ
ಕರದ ಬಲ್ಲೆಯದಿಂದ ವಾಲಿಯ । ವರಕುಮಾರನ ತಿವಿಯೆ ಹಲಕಿನ
ಸರಿಸದಲಿ ಮೊನೆದೋರಿತುಗುಳುವ ರಕುತಧಾರೆಯಲಿ ೩೦

ಮನದ ಮರವೆಯ ಜೊಮ್ಮಿನಲಿ ಕಪಿ । ತನುವ ಸಂತೈಸುವ ರಣಶ್ರಮ
ದನಿತರೊಳೆ ನೂಕಿದನು ತುರಗವ ತರಣಿವಂಶಜನ
ಮೊನೆಯ ಮೋಹರಕೊನೆದು ಸೂಸಿದ । ವನಚರರು ಪಡಿತಳಿಸಿ ತರುಬಿದ
ರಿನಕುಲೇಂದ್ರನ ಮುಂದೆ ಮಂಡೋದರಿಯ ನಂದನನ ೩೧

ಯಿಂದ ಹೊಡೆದನು. ಅದನ್ನು ನೋಡಿ ಸಮಸ್ತ ದೇವತೆಗಳೂ ಬೆರಗಾದರು. ೨೮. “ಶಹಬಾಸ್, ವೀರರ ದೇವ. ಪಾಲ್ಗಡಲನ್ನು ಕಡೆಯುವಾಗ ದೇವತೆಗಳನ್ನು ಪ್ರತಿಷ್ಠಾಪಿಸಿದವನ ಮಗನಲ್ಲವೇ ? ದೇವೇಂದ್ರನ ಮೊಮ್ಮಗನಲ್ಲವೇ ? ಒಳ್ಳೆಯದು, ಒಳ್ಳೆಯದು” ಎನ್ನುತ್ತ ಈಶ್ವರನು ಗಿರಿಜೆಗೆ ಅಂಗದನ ಪರಾಕ್ರಮವನ್ನು ತೋರಿಸಿ ಅವನನ್ನು ಹೊಗಳಿದನು. ನರಾಂತಕನು ಕ್ರೋಧದಿಂದ ಕಿಡಿಕಾರುತ್ತ ಖಡ್ಗವನ್ನು ಬೀಸಿ ಹೊಡೆಯಲು ಮೇಲೆತ್ತಿದನು. ೨೯. ನರಾಂತಕನು ಕಡಿವಾಣವನ್ನು ಕೊಡಹುವ ಕುದುರೆಯನ್ನು ಹಿಮ್ಮಡಿಯಿಂದ ಅಮುಕಿ ಅದನ್ನು ತಿರುಗಿಸಿ ಕಾಳಗಮಾಡುತ್ತ ಆಡಾಯುಧದಿಂದ ಅಂಗದನನ್ನು ಹೊಡೆದನು. ಆಗ ಅಂಗದನು ಹಾರಿ ಬೊಬ್ಬಿರಿಯುತ್ತ ಕೋಪದಿಂದ ಕಣ್ಣುಗಳಲ್ಲಿ ಕಿಡಿಕಾರುತ್ತ ನರಾಂತಕನ ಕುದುರೆಯು ಅಡಿಮೇಲಾಗಿ ಬೀಳುವಂತೆ ಪ್ರಬಲಮುಷ್ಟಿಯಿಂದ ಹೊಡೆದನು. ೩೦. ಕುದುರೆಸವಾರಿಯ ಕಲೆಯಲ್ಲಿ ನುರಿತ ವೀರರಿಗೆ ನರಾಂತಕನು ಗುರುವಲ್ಲವೇ. ಅವನು ಉರುಳಿದ ಕುದುರೆಯನ್ನು ಎಬ್ಬಿಸಿ ಅದರ ಬೆನ್ನು ಚಪ್ಪರಿಸಿ ‘ಆ’ ಎಂದು ಕೂಗುತ್ತ ಕೈಯಿನ ಭಲ್ಲೆಯಿಂದ ವಾಲಿಕುಮಾರನನ್ನು ತಿವಿದನು. ಭಲ್ಲೆಯು ಅಂಗದನ ಗಲ್ಲದ ಕೆಳಭಾಗಕ್ಕೆ ಚುಚ್ಚಿ ರಕ್ತ ಚಿಮ್ಮಿತು. ೩೧. ಮೈಮರೆತ ಅಂಗದನು ದೇಹವನ್ನು ಸಮಾಧಾನಸ್ಥಿತಿಗೆ ತಂದುಕೊಂಡು ಯುದ್ಧದ ಆಯಾಸವನ್ನು ಪರಿಹರಿಸಿಕೊಳ್ಳುವಷ್ಟರಲ್ಲಿ ನರಾಂತಕನು ರಾಮನ ಸೈನ್ಯದ ಮುಂದುಗಡೆಗೆ ಕುದುರೆಯನ್ನು ನುಗ್ಗಿಸಿದನು. ಹಿಂದಕ್ಕೆ ಚದುರಿದ ವಾನರರು ಹುರುಪಿನಿಂದ ರಾಮನ ಮುಂದು

ಕೆರಳಿ ಬಳಿಕವನಸ್ತ್ರಶಸ್ತ್ರವ । ಸರಗೊಳಿಸಿ ಸವ್ಯಾಪಸವ್ಯದ
ಲುರುಳುಗೆಡಹಿದ ನೂಕುವತಿಬಲ ವೀರ ವಾನರರ
ಗಿರಿತರುಗಳಿಂಜೀತವನು ಬಗೆಯದೆ । ಪರಿಹರಿಸಿದನು ಹರಿಹಯನ ಪ್ರತಿ
ತುರಗವನು ನಿಲಿಸಿದನು ರಾಘವರಾಯನಿದಿರಿನಲಿ ೩೨

ಅರಳ್ವ ನಾಸಾಪುಟದ ಪವನನ । ಘುರುಘುರುಸ್ವನದ ವಿಲಣದ ಕಿಱು
ನೊರೆಯು ಕಬ್ಬಿಯು ಘಣಘಣತ್ಕಾರದ ಗಢಾವಣೆಯು
ಸುರಿವ ಬೆಮರಿನ ಬಾಯ ಲೋಳೆಯು । ಪರಿಸರದ ಪಚ್ಚೆಳದ ಫೇನದ
ಖುರದ ಕುಣಿಪದ ಕುದುರೆ ಬೀಱೀತು ಭಯುವನಹಿತರಿಗೆ ೩೩

ಎಲೆಲೆ ರಾಯನ ಪಡಿಮುಖದೊಳಿ । ಟ್ಟಳಿಸಿತೋ ಹಯ ಬದುಕಿನಾಸೆಯು
ಬಳಿಯ ಬಿಡಿರೋ ಸ್ವಾಮಿಕಾರ್ಯಕೆ ಬಿಸುಡಿರೋ ತನುವ
ಉಳಿದರಳಿವುದು ಕೀರ್ತಿ ರಣದೊಳ । ಗಳಿದರಳಿವುದು ಜನ್ಮ ಜನ್ಮಾ
ವಳಿಯ ಕಲ್ಮಷವೆಂದು ಕಪಿರಾಜೇಂದ್ರ ಗರ್ಜಿಸಿದ ೩೪

ಕೆಣಕಿದುದು ಕಟ್ಟಾಳವಿಯಲಿ ಬಲು । ಕಣೆಯು ಬವರದ ಭಟನ ಬಲು ಭಾ
ರಣೆಯು ಬೆಟ್ಟಗಳಿಂದ ಬಲ್ಲಿದ ಬಲಿಮುಖವ್ರಾತ
ಅಣೆದನವನಾ ಶೈಲಗಳ ಸಂ । ದಣಿಯ ಸಂಧಿಸುವತಿಬಲರ ಕಡಿ
ವೆಣವನುಬ್ಬಿಸಿ ಬೊಬ್ಬಿಱಿದು ನೂಕಿದನು ನಿಜಹಯುವ ೩೫

ಗಡೆಗೆ ಬಂದು ನರಾಂತಕನನ್ನು ಅಡ್ಡಗಟ್ಟಿದರು. ೩೨. ಕೆರಳಿದ ನರಾಂತಕನು ಎಡಬಲಗಳಿಗೆ ಚಲಿಸುತ್ತ ತನ್ನ ಮೇಲೆ ಬೀಳುವ ಬಲಶಾಲಿಗಳಾದ ವೀರ ವಾನರರ ಮೇಲೆ ಅಸ್ತ್ರಶಸ್ತ್ರಗಳನ್ನು ಪ್ರಯೋಗಿಸಿ ಅವರನ್ನು ನೆಲಕ್ಕುರುಳಿಸಿದನು. ವಾನರರ ಬೆಟ್ಟ ಮರಗಳ ಹೊಡೆತವನ್ನು ಲೆಕ್ಕಿಸದೆ ಅವರನ್ನು ನಿವಾರಿಸಿ ಇಂದ್ರನ ಉಚ್ಚೈಃಶ್ರವಸ್ಸಿಗೆ ಸಮಾನವಾದ ಕುದುರೆಯನ್ನು ರಾಘವರಾಯನ ಎದುರಿಗೆ ತಂದು ನಿಲ್ಲಿಸಿದನು. ೩೩. ಮೂಗಿನ ಹೊಳ್ಳೆಯನ್ನರಳಿಸಿ ಉಸಿರುಬಿಡುತ್ತ ಕುದುರೆಯು ಘುರುಘುರು ಎಂದು ಶಬ್ದಮಾಡಿತು. ಅದರ ಕಡಿವಾಣದಲ್ಲಿ ನೊರೆ ಅಂಟಿಕೊಂಡಿತ್ತು. ಬಾಯಿಯಲ್ಲಿ ಕಬ್ಬಿಣದ ಕಡ್ಡಿಯನ್ನು ಕಚ್ಚುತ್ತ ಘಣಘಣ ಎಂದು ಶಬ್ದಮಾಡುತ್ತಿತ್ತು, ಅದರ ಮೈಯಿಂದ ಬೆವರು ಸುರಿಸುತ್ತ, ಬಾಯಲ್ಲಿ ಜೊಲ್ಲು ಸುರಿಸುತ್ತ, ಅಲ್ಲಾಡುವ ಬಾಯ ನೊರೆಯು ಮತ್ತು ಗೊರಸಿನ ಮೇಲೆ ನಿಂತು ಕುಣಿಯುವ ಕುದುರೆಯು ಶತ್ರುಗಳಿಗೆ ಭಯವನ್ನುಂಟುಮಾಡಿತು. ೩೪. "ಲೋಲೋ, ರಾಜನನ್ನು ಎದುರಿನಲ್ಲಿಯೇ ಕುದುರೆ ಮುತ್ತಿತೋ. ಬದುಕುವ ಆಸೆಯನ್ನು ಬಿಟ್ಟುಬಿಡಿ ; ಸ್ವಾಮಿಕಾರ್ಯಕ್ಕೆ ದೇಹವನ್ನು ತ್ಯಾಗಮಾಡಿ. ನೀವು ಜೀವ ಉಳಿಸಿಕೊಂಡರೆ ನಿಮ್ಮ ಕೀರ್ತಿ ನಾಶವಾಗುವುದು ; ಯುದ್ಧದಲ್ಲಿ ಪ್ರಾಣವನ್ನರ್ಪಿಸಿದರೆ ಜನ್ಮಜನ್ಮಾಂತರದ ಪಾಪವು ನಾಶವಾಗುವುದು" ಎಂದು ಸುಗ್ರೀವನು ಗರ್ಜಿಸಿದ. ೩೫. ವೀರವಾನರರು ಭಾರಿ ಯುದ್ಧವೀರ ನರಾಂತಕನನ್ನು ದೊಡ್ಡದೊಡ್ಡ ಬೆಟ್ಟಗಳಿಂದ ಕೆಣಕಿದರು. ರಾಕ್ಷಸನು ಆ ಬೆಟ್ಟಗಳನ್ನು ತಿವಿದು ತನ್ನ ಮೇಲೆ ಬೀಳುವ ವಾನರವೀರ

ಇದಿರಲೌಕುವ ಪನಸ ವಿನತರ । ಹೊದಜ ಮುರಿದನು ವಾಜಿ ವಾಮದ
ಲೊದಗಿದಗ್ಗದ ಕುಮುದ ಮೈಂದ ದ್ವಿವಿದ ದಧಿಮುಖರ
ಕೆದರಲೆಚ್ಚನು ಬಲದಲೌಕುವ । ಕುದುಕುಳಿಗ ಕಪಿಭಟ ಸಮೂಹವ
ಕದಳಿದರಿದನು ಕೊಂದನಪರದಲೌಕುವತಿಬಲರ ೩೬

ತಿರುಹಿ ತೇಜಿಯ ಮತ್ತೆ ಮುಸುಕುವ । ಶರಭ ಶತಬಲಿ ಗಜ ಗವಾಕ್ಷರ
ನೆರವಿಯನು ನಿಂದಿರಿಸಿದನು ಸೇತುವಿನ ಮಧ್ಯದಲಿ
ಧುರದ ಹಂಬಲ ಬಿಡಿಸಿ ಲಂಕಾ । ಪುರಭಯಂಕರನೊಡನೆ ಬಲು ಸಂ
ಗರವ ಸಂಘಟಿಸಿದನು ಹೊಗಳೆ ಸಮಸ್ತ ಸುರನಿಕರ ೩೭

ತಿಳಿದ ಮೂರ್ಛೆಯಲಿಂದ್ರಸುತಸುತ । ನಳವಿಗಭಿಮುಖನಾಗಿ ಕಾದಿದ
ಖಳನ ಕಾಣದೆ ಕೆರಳಿದನು ರಘುನಾಥನೊಡ್ಡಿನಲಿ
ಕಳಕಳದ ಕಾಳಗವನಿದ ಕೈ । ಕೊಳಿಸಿದನಲಾ ರಾಮಚಂದ್ರನ
ಬಳಿಯಲೆನುತೌಡಗಿದು ಹಲುಮೊರೆದುಬ್ಬಿ ಬೊಬ್ಬಿರಿದ ೩೮

ಕೂಡಿದುದು ಕಡುಗೋಪ ಬಳಿಕದ । ನಾಡಲೇನದ ಪ್ರಲಯರುದ್ರನ
ಪಾಡೆನಲು ಫಣಿರಾಜ ಕೂರುಮರಸುಗಳಳ್ಕುಡಿಸೆ
ತೀಡಿ ನೆಲದೊಳು ಕರವನಬ್ಬರ । ಗೂಡಿ ಪುಟನೆಗೆದವನಿಮಂಡಲ
ಬೀಡ ಬಿಡಲೈತಂದು ತಿವಿದನು ಕಲಿನರಾಂತಕನ ೩೯

ರನ್ನು ಕತ್ತರಿಸಿ ಹೆಣಗಳ ರಾಶಿಹಾಕಿ ಬೊಬ್ಬಿರಿಯುತ್ತ ಕುದುರೆಯನ್ನು ಮುಂದಕ್ಕೆ ನುಗ್ಗಿಸಿದನು. ೩೬. ನರಾಂತಕನು ಎದುರುಗಡೆಯಿಂದ ಮೇಲೆ ನುಗ್ಗುವ ಪನಸ ವಿನತರ ಗುಂಪನ್ನು ಚೆದುರಿಸಿದನು ; ಎಡಗಡೆಯಿಂದ ಮುತ್ತಿದ ಕುಮುದ, ಮೈಂದ, ದ್ವಿವಿದ, ದಧಿಮುಖರು ಓಡಿಹೋಗುವಂತೆ ಬಾಣಬಿಟ್ಟನು ; ಬಲಗಡೆಯಿಂದ ನುಗ್ಗಿಬಂದ ಆತುರಗಾರರಾದ ಕಪಿವೀರರ ಸಮೂಹವನ್ನು ಬಾಳೆಯ ವನದಂತೆ ಕತ್ತರಿಸಿಹಾಕಿದನು, ಹಿಂದುಗಡೆಯಿಂದ ಆಕ್ರಮಿಸಿದ ಬಲಶಾಲಿಗಳನ್ನು ಕೊಂದನು. ೩೭. ನರಾಂತಕನು ಕುದುರೆಯನ್ನು ತಿರುಗಿಸಿ ಪುನಃ ಬಂದು ಮುತ್ತುವ ಶರಭ, ಶತಬಲಿ, ಗಜ, ಗವಾಕ್ಷರ ವ್ಯೂಹವನ್ನು ಸೇತುವೆಯ ಮಧ್ಯಕ್ಕೆ ಎಸೆದನು. ಯುದ್ಧದ ಆಸೆಯನ್ನು ಬಿಡಿಸಿ ಲಂಕಾಪುರಭಯಂಕರನ ಜತೆಯಲ್ಲಿ ಭಾರಿ ಹೋರಾಟವನ್ನು ನಡೆಸಿದನು, ಆಗ ಸಮಸ್ತ ದೇವತೆಗಳು ನರಾಂತಕನನ್ನು ಹೊಗಳಿದರು. ೩೮. ಮೂರ್ಛೆತಿಳಿದೆದ್ದ ಅಂಗದನು ತನ್ನೆದುರಿಗೆ ಕಾದಾಡುತ್ತಿದ್ದ ರಾಕ್ಷಸನನ್ನು ಕಾಣದೆ ಕೆರಳಿದನು. ರಘುನಾಥನ ಬಳಿಯ ಸೈನ್ಯದೊಡನೆ ಯುದ್ಧಮಾಡಿ ಗಲಾಟೆಯೆಬ್ಬಿಸಿದನಲ್ಲಾ ಎಂದು ಅಂಗದನು ಹಲ್ಲುಕಡಿದು ಗರ್ಜಿಸಿದ. ೩೯. ಪ್ರಳಯರುದ್ರನಂತೆ ಅಂಗದನಿಗೆ ಪ್ರಚಂಡ ಕೋಪ ಬಂದಿತು, ಆದನ್ನೇನು ವರ್ಣಿಸೋಣ. ಆದಿಶೇಷ ಮತ್ತು ಕೂರ್ಮರ ಪ್ರಾಣಗಳು ಕುಸಿದವು. ಅಂಗದನು ಕೈಯನ್ನು ನೆಲಕ್ಕೆ ಉಜ್ಜಿ ಗರ್ಜಿಸುತ್ತ ಪುಟನೆಗೆದು ನೆಲದಿಂದ ಹಾರಿಬಂದು ನರಾಂತಕನನ್ನು ಗುದ್ದಿ

ಎಱಗಿದಶನೀಘಾತ ಮುಷ್ಟಿಯೊ । ಳೊಱಗಿದನು ಕಿಲಕಸುರ ಕೈಯೊಡ
ನೆಱಗಿದನು ಮತ್ತೇಳ್ವವಸನುಬ್ಬಿಱಿದು ಬೊಬ್ಬಿಱಿದು
ಮಱುಕೊಳಿಸಿ ಮತ್ತೇಳ್ವವನ ಗೋ । ಣಾಱುಗೆ ತಿವಿದನು ಪಡಿಬರಿಸಿ ನಿಲು
ವಱಿಕೆಗನನಿಕ್ಕಿದನು ಮುಗುಳೆ ಮಡಪ್ರಹಾರದಲಿ ೪೦

ಏಳಲೇಳಲು ತಿವಿದನಂಗದ । ಬೀಳಬೀಳಲು ಖಳನನಿಪ್ಪ
ತ್ತೇಳು ಸೂಳಿನ ಮೇಲೆ ಶರಣನು ಸನ್ನೆಯನು ಮಾಡೆ
ಮೇಲೆ ಸುರರುಬ್ಬಿಱಿಯೆ ವಾಲಿಜ । ನಾಳಿ ಬಳಿಕ ತುರಂಗಮದ ಹಿಂ
ಗಾಲ ಹಿಡಿದೆಱಗಿದನು ವೀರ ನರಾಂತಕಾಸುರನ ೪೧

ಎಱಗಿದಾಕ್ಷಣ ಹಯಸಹಿತ ನೆಲ । ಕೊಱಗಿದನು ಹರಿಸಹಿತ ಹೊಕ್ಕನು
ಮೆಱೆಸಿಕೊಳುತೂರೊಳು ನರಾಂತಕನಾ ಕೃತಾಂತಕನ
ಉಱುವ ಘನಸಂತೋಷದಲಿ ಹೆ । ಬ್ಬಱೆಯ ಹೊಯ್ಸಿದನಿಂದ್ರ ಸೇಸೆಯ
ಕಱೆದುದಮರವಧೂಕದಂಬಕ ಹರಸುತಂಗದನ ೪೨

ರಣಗಲಿಯೆ ಮಝು ಭಾಪು ವೀರಾ । ಗ್ರಣಿಯೆ ಬಳಲಿದೆಯೆಂದು ಮೊಮ್ಮನ
ಹಣೆಯ ಮೇಲೊಗಿಸಿದನು ಪನ್ನೀರಿನಲಿ ನೆದಿಸಿದ
ಕಣಲಿಗೆಯ ಕುಸುಮಗಳನಮರಾ । ಗ್ರಣಿ ಶಚೀದೇವಿಯರು ಮಣಿಭೂ
ಷಣವ ಕಳುಹಿದರಂಗದಂಗಮಳಾಂಗದಾಹ್ವಯದ ೪೩

ದನು. ೪೦. ಅಂಗದನ ಸಿಡಿಲಿನ ಮುಷ್ಟಿಯೇಟಿನಿಂದ ನರಾಂತಕನು ಪಕ್ಕಕ್ಕೆ ಬಿದ್ದನು. ಪುನಃ ಏಳುವ ರಾಕ್ಷಸನ ಮೇಲೆರಗಿ ಅಂಗದನು ಬೊಬ್ಬಿರಿದು ಅವನನ್ನು ಕೈಯಿಂದ ಅಪ್ಪಳಿಸಿದನು. ತಿರುಗಿ ಮೇಲೇಳಲು ಹೋದ ರಾಕ್ಷಸನ ಕತ್ತು ವಾಲುವಂತೆ ಹೊಡೆದನು. ಪುನಃ ಎದ್ದು ಬಂದು ನಿಂತ ವೀರನನ್ನು ಹಿಮ್ಮಡಿಯಿಂದ ಒದ್ದನು. ೪೧. ನರಾಂತಕನು ಪುನಃ ಪುನಃ ಏಳುತ್ತಿರಲು ಅವನು ಪುನಃ ಪುನಃ ಬೀಳುವ ಹಾಗೆ ಇಪ್ಪತ್ತೇಳು ಬಾರಿ ಅಂಗದನು ಹೊಡೆದನು. ಆಗ ವಿಭೀಷಣನು ಸಂಜ್ಞೆ ಮಾಡಿ ಸೂಚಿಸಲು ಅಂಗದನು ಆರ್ಭಟಿಸಿ ಕುದುರೆಯ ಹಿಂದಿನಕಾಲನ್ನು ಹಿಡಿದು ನರಾಂತಕನ ಮೇಲೆರಗಲು ದೇವತೆಗಳು ಸಂತೋಷದಿಂದ ಕೂಗಿದರು. ೪೨. ಅಂಗದನು ಮೇಲೆರಗಿದ ಕೂಡಲೆ ನರಾಂತಕನು ಕುದುರೆಯ ಸಮೇತ ನೆಲಕ್ಕುರುಳಿದನು. ಬಳಿಕ ನರಾಂತಕನು ಕುದುರೆಯ ಜತೆಯಲ್ಲಿ ಮೆರೆಸಿಕೊಳ್ಳುತ್ತಾ ಯಮನ ಪಟ್ಟಣವನ್ನು ಪ್ರವೇಶಿಸಿದನು. ಇಂದ್ರನು ಅತ್ಯಂತ ಆನಂದದಿಂದ ದೊಡ್ಡ ನಗಾರಿಯನ್ನು ಹೊಡೆಸಿದನು. ದೇವತಾಸ್ತ್ರೀಯರು ಅಂಗದನನ್ನು ಹರಸುತ್ತ ಅವನ ಮೇಲೆ ಅಕ್ಷತೆಯನ್ನು ಹಾಕಿದರು. ೪೩. 'ರಣಗಲಿಯೆ, ಮಝು ಭಾಪು ! ವೀರಾಗ್ರಣಿ, ಬಳಲಿದೆ' ಎಂದು ಇಂದ್ರನು ಮೊಮ್ಮಗನ ಹಣೆಯಮೇಲಕ್ಕೆ ಪನ್ನೀರಿನಲ್ಲಿ ಅದ್ದಿದ ಕಣಗಿಲೆಯ ಹೂಗಳನ್ನು ಎಸೆದನು. ಶಚೀದೇವಿಯರು ಅಂಗದ ಎಂಬ ಹೆಸರಿನ ಶುದ್ಧವಾದ ರತ್ನದೊಡವೆಯನ್ನು ಅಂಗದನಿಗೆ ಕಳುಹಿಸಿಕೊಟ್ಟಳು.

ಕೆದಱಿದನು ಬಳಿಕಟ್ಟಿ ಮುಟ್ಟಿದ । ಕುದುಕುಳಿಗ ರಾವುತರ ರಣದೊಳು
ಮೆದೆಗೆಡಹಿದನು ಬಾಹುದಂಡ ಪದಾಭಿಘಾತದಲಿ
ಇದಿರ ಮೃಗವೇನಾನುವವೆ ಕೆರ । ಳಿದರೆ ಪುರುಷಾಮೃಗದ ಗಾವಳಿ
ಗಿದಿರದಾರ್ಕೈ ತೊರವೆಯರಸನ ಕೃಪೆಯು ಕಿಂಕರಗೆ ೪೪

೪೪. ಅನಂತರ ಅಂಗದನು ತನ್ನ ಮೇಲೆ ಬಂದ ಉಳಿದ ಆತುರಗಾರ ರಾವುತರನ್ನು ಕೈಕಾಲುಗಳಿಂದ ಹೊಡೆದು ಒದ್ದು ಕೊಂದು ರಾಶಿಹಾಕಿದನು. ಪುರುಷಾಮೃಗದ ಅಬ್ಬರದ ಎದುರಿಗೆ ಬೇರೆ ಮೃಗಗಳು ನಿಲ್ಲಬಲ್ಲವೆ ? ತೊರವೆಯೊಡೆಯನ ಕರುಣೆಯು ಸೇವಕನನ್ನು ಎದುರಿಸಬಲ್ಲವರಾರು ?

# ಮೂವತ್ತೊಂದನೆಯ ಸಂಧಿ

ಸೂಚನೆ॥ ರಣದಿಶಾಪಟಮಲ್ಲ ಮಲೆವರಿ । ಗಣಭಯಂಕರ ಹನುಮನಾ ರಾ
ವಣತನೂಜ ತ್ರಿಶಿರ ದೇವಾಂತಕರ ಮರ್ದಿಸಿದ

ಕುಶಕುಮಾರಕ ಕೇಳು ಬಳಿಕಾ । ತ್ರಿಶಿರ ದೇವಾಂತಕರು ಸಲೆ ಸೈ
ರಿಸುವರೇ ಸಂಗರದೊಳಳಿದ ನರಾಂತಕನ ಕಂಡು
ಮುಸುಗಿದಗ್ಗದ ಕೋಪಶಿಖಿ ದ । ಳ್ಳಿಸೆ ದಿವಾಕರಸುತನ ರಣದಲಿ
ದೆಸೆಯು ದೇವಕದಂಬ ಕಂಪಿಸೆ ನೂಕಿದರು ರಥವ ೧

ಬಳಿಸಲಿಸಿದುದು ವೀರರಿಬ್ಬರ । ಬಳಿಯಲತಿರಥ ವಾಜಿರಾಜಿಗ
ಳಳುಕಿ ವಾರಿಜಸಖನ ವಾರಿಜಬಂಧು ಕಳವಳಿಸೆ
ತೊಲಗದಿಹನೇ ಸೂರ್ಯಸುತನಾ । ಬಳಿಯುವರ ಬಲುಹೇನು ಸಮರಕೆ
ಮಲೆತನೊಬ್ಬನೆ ವೀರನಾಹವಧೀರ ಕಲಿಹನುಮ ೨

ಉಳಿದ ಬಲ ಬಿರಿತೋಡೆ ರಾಮನ । ಬಳಿಯ ನಿಂದುದು ನಿಂದಿದನು ಕೋ
ಲಳವಿಯುಲಿ ಕಪಿನಾಥನಾತನ ಬಳಿಯು ಕಲಿನೀಲ
ಹೊಳಕಿದನು ಹುತವಹಜನೊತ್ತಿನ । ಲಳವಿಗೊಟ್ಟನು ಬೆಟ್ಟಗಳ ಬಲು
ಗಲಹವಿಂದ್ರನ ಸುತನಸುತ ಸುಮ್ಮಾನದುಬ್ಬಿನಲಿ ೩

ಸೂಚನೆ॥ ಶತ್ರುಗಳನ್ನು ದಿಕ್ಕುದಿಕ್ಕುಗಳಿಗೆ ಚದುರಿಸುವ ಜಟ್ಟಿ ಪ್ರತಿಭಟಿಸುವವರ ಭಯಂಕರ ಹನುಮಂತನು ರಾವಣನ ಮಕ್ಕಳಾದ ತ್ರಿಶಿರ ದೇವಾಂತಕರನ್ನು ನಾಶಮಾಡಿದನು. ೧. ಕುಮಾರ ಕುಶ ಕೇಳು, ತ್ರಿಶಿರ ದೇವಾಂತಕರು ಕದನದಲ್ಲಿ ಸತ್ತ ನರಾಂತಕನನ್ನು ಕಂಡು ಸಹಿಸಿಕೊಂಡಿರುತ್ತಾರೆಯೇ ? ಪ್ರಚಂಡ ಕೋಪಾಗ್ನಿಯು ಜ್ವಲಿಸಲು ಸುಗ್ರೀವನ ಮೇಲೆ ಯುದ್ಧಮಾಡುವುದಕ್ಕಾಗಿ ಅವನ ಬಳಿಗೆ ರಥವನ್ನು ನಡೆಸಿಕೊಂಡು ಬಂದರು ; ಇದನ್ನು ನೋಡಿ ದೇವತೆಗಳು ನಡುಗಿದರು. ೨. ಅತಿರಥರು ಮತ್ತು ಕುದುರೆಗಳದಳವು ಇಬ್ಬರು ರಾಕ್ಷಸವೀರರನ್ನು ಹಿಂಬಾಲಿಸಿದರು. ಸುಗ್ರೀವನು ಸಾಯದೆ ಇರುವನೇ ? ಇನ್ನು ಅವನ ಜತೆಯವರ ಸಾಮರ್ಥ್ಯ ಏನಿದೆ ? ಯುದ್ಧಕ್ಕೆ ಸಮರ್ಥನಾದವನು ರಣಧೀರ ಕಲಿಹನುಮಂತನೊಬ್ಬನೆ ! ಎಂದು ಸೂರ್ಯನು ಕಳವಳಗೊಂಡನು. ೩. ಉಳಿದ ವಾನರಸೈನ್ಯವು ಹೆದರಿಕೊಂಡು ಓಡಲು ಶತ್ರುಗಳು ರಾಮನ ಸಮೀಪಕ್ಕೆ ಬಂದರು. ಬಾಣದಳತೆಯ ದೂರದಲ್ಲಿ ಸುಗ್ರೀವನು ನಿಂತಿದ್ದನು. ಅವನ ಸಮೀಪದಲ್ಲಿ ಅಗ್ನಿಕುಮಾರನಾದ ವೀರ ನೀಲನು ಗೋಚರಿಸಿದನು. ಅವನ ಹತ್ತಿರ ವಾಲಿಯ ಮಗ ಅಂಗದನು ಉತ್ಸಾಹದಿಂದ ಬೆಟ್ಟಗಳ ಭಾರಿ ಯುದ್ಧಕ್ಕೆ ಸಿದ್ಧನಾದನು,

ಆತನೆಡವಂಕದಲಿ ಪಂಕಜ । ಜಾತಜನಿತನು ನಿಂದಿದನು ಮೇ
ಲಾತು ನಿಂದನು ಬಲದಲಾ ಧನ್ವಂತರಿಯಸೂನು
ಈತನುಬ್ಬಟೆ ಮಿಕ್ಕುದೀಚೆಯು । ಲಾ ತಮಿಶ್ರೀಚರನ ಸರಿಸದ
ಲಾತು ಹಳಚಿದರವದಿರಾ ಲಂಕಾಭಯಂಕರನ ೪

ಹೊಕ್ಕನಟವೀಸಂಘದಲಿ ಮೊಗ । ವಿಕ್ಕುವಬ್ಬರಗಿಚ್ಚಿನವೊಲಾ
ರಕ್ಕಸನ ರಥರಾಜಿಯಲಿ ರೌದ್ರಾತಿರೇಕದಲಿ
ಮುಕ್ಕುರುಕುವತಿರಥರ ರಥವ ನ । ಭಕ್ಕೆ ಬಿಸುಟನು ಬೀದಿವರಿದೆಡೆ
ಯೊಕ್ಕಿ ರಥಿಕರ ರಥವನಂಬುಧಿಗಿಟ್ಟು ಬೊಬ್ಬಿರಿದ ೫

ತುಳಿದನೆಡಬಲಚಾರಿಯಲಿ ಸಂ । ಕುಲದ ರಥಿಕರ ತೂರಿದನು ನಭ
ಕಳವಿಗೊಂಡೆಸುವತಿರಥರ ಬಾಚಿದನು ಬಳಿರಥರ
ಅಳಿವ ಜಗಕುಬ್ಬೆದ್ದ ರುದ್ರನ । ಕೊಲೆಗೆಲಸಕೆಣೆಯೆನಲು ರಥಿಕರ
ತಳಪಟವ ಮಾಡಿದನು ನಿಮಿಷಾರ್ಧದಲಿ ಕಲಿಹನುಮ ೬

ಭಯದಲೋಡಿದ ಸೇನೆ ಹನುಮನ । ಜಯಮುಖದಲೊದಗಿದುದು ರಿಪುನಿ
ರ್ಭಯ ಮನೋರಾಗಿಗಳು ತರುಶೈಲಾಯುಧಂಗಳಲಿ
ನಿಯತ ರಣಕೃತಮುಖರು ಪರಿಸಂ । ಚಯ ಪರಾಕ್ರಮುಸಖರು ರಿಪುನಿ
ರ್ಭಯ ನಿಶಾಟೋನ್ಮುಖರು ಹಳಚಿದರಸಮ ಸಮರದಲಿ ೭

೪. ಆತನ ಎಡಪಕ್ಕದಲ್ಲಿ ಜಾಂಬವಂತನು ನಿಂತನು. ಅವನ ತರುವಾಯ ಬಲಪಕ್ಕದಲ್ಲಿ ಧನ್ವಂತರಿಯ ಮಗ ಸುಷೇಣನು ಒಡ್ಡಿ ನಿಂತನು. ರಾಕ್ಷಸರ ಎದುರಿನಲ್ಲಿ ಲಂಕಾ ಭಯಂಕರ ಹನುಮಂತನ ಸಾಹಸ ಉಕ್ಕೇರಿತು. ಶತ್ರುಗಳು ಹನುಮಂತನ ಮೇಲೆರಗಿದರು. ೫. ಕಾಡಿನೊಳಗೆ ಹಬ್ಬುವ ಬೆಂಕಿಯ ರಭಸದಂತೆ ಹನುಮಂತನು ರೌದ್ರಾತಿರೇಕದಿಂದ ರಾಕ್ಷಸನ ರಥಗಳ ಮಧ್ಯಕ್ಕೆ ನುಗ್ಗಿದನು. ತನ್ನನ್ನು ಮುತ್ತುವ ಅತಿರಥರ ರಥಗಳನ್ನು ಆಕಾಶಕ್ಕೆಸೆದನು ; ಸ್ವೇಚ್ಛೆಯಾಗಿ ಚಲಿಸಿ ನಡುವೆ ಸಿಕ್ಕಿದ ರಥಿಕರ ರಥಗಳನ್ನು ಸಮುದ್ರಕ್ಕೆ ಎಸೆದು ಬೊಬ್ಬಿರಿದನು. ೬. ಹನುಮಂತನು ಎಡಬಲಗಳಲ್ಲಿ ಸಂಚರಿಸುತ್ತ ರಥಿಕರ ಸಮೂಹವನ್ನು ತುಳಿದುಹಾಕಿದನು ; ಪರಾಕ್ರಮದಿಂದ ಬಾಣಬಿಡುವ ಅತಿರಥರನ್ನು ಆಕಾಶಕ್ಕೆ ತೂರಿಬಿಟ್ಟನು ; ಬಳಿಯಲ್ಲಿದ್ದ ರಥಿಕರನ್ನು ಬಾಚಿಹಾಕಿದನು. ಜಗತ್ತಿನ ಪ್ರಳಯಕ್ಕೆ ಕೆರಳಿದ ರುದ್ರನ ಕೊಲೆಗೆಲಸಕ್ಕೆ ಸಮಾನವೆಂಬಂತೆ ವೀರ ಹನುಮಂತನು ನಿಮಿಷಾರ್ಧದಲ್ಲಿ ರಥಿಕರನ್ನು ಒಟ್ಟಿಗೆ ನಾಶಮಾಡಿದನು. ೭. ಭಯದಿಂದ ಓಡಿಹೋಗಿದ್ದ ವಾನರಸೈನ್ಯವು ಹನುಮಂತನ ಗೆಲುವನ್ನು ಕಂಡು ಬೆಟ್ಟ ಮರಗಳನ್ನು ಹಿಡಿದುಕೊಂಡು ಶತ್ರುಗಳ ಎದುರಿಗೆ ನಿರ್ಭಯದಿಂದ ಬಂದು ಸೇರಿತು. ಯುದ್ಧಗೈಯಲು ನಿರ್ಧಾರ ಮಾಡಿದ, ಕೂಡಿಟ್ಟ ಪರಾಕ್ರಮದ, ಶತ್ರುಗಳಿಗೆ ಹೆದರದ ವಾನರವೀರರು ರಾಕ್ಷಸರನ್ನು ಎದುರಿಸಿ ವಿಷಮಯುದ್ಧದಲ್ಲಿ ಹೋರಾಡಿದರು,

ಬಳಿಕಲಾ ಖಳರಿಬ್ಬರುಬ್ಬಿದ । ಪಳುವಟೆಯು ಕಪಿಭಟರ ಮೋಹರ
ದೊಳಗೆ ಮೋಹರಿಸಿದರು ಮಾರ್ಗಣಗಣ ಮಹಾಂಬುಧಿಯ
ಕಲುಮರನ ಕೋಳಾಹಳದ ಕೈ । ಚಳಕದಿಂದಲೆ ಕೊಂದರಗಣಿತ
ಬಲಿಮುಖರ ಬರ್ಹಿರ್ಮುಖಾವಳಿ ಬೆದರೆ ಗಗನದಲಿ ೮

ನೆಗಹಿ ಹರಿದವು ಹೆಣನ ಬಣಬೆಯ । ನಗಲದಲಿ ನೆತ್ತರಿನ ಹೊಳೆ ಸಾ
ಲುಗಳ ಸಂದಣಿಯಾಯ್ತು ರಣರಂಗದಲಿ ಭೂತಗಳ
ಹಗಲಿರುಳಿನೊತ್ತಂಬರದ ಕಾ । ಳಗದವೊಲು ಖಳಕಪಿಕದಂಬದ
ವಿಗಡ ರಣ ರಂಜಿಸಿತು ಘನರೌದ್ರಾಭಿಸಾರದಲಿ ೯

ಧುರಧುರಂಧರ ಭಟರೊಳಗ್ರೇ । ಸರನಲಾ ತ್ರಿಶಿರನು ಸುರಾಂತಕ
ರೆರಡು ಮಯ್ಯಲಿ ಮುಸುಕುವತಿಬಲ ವೀರವಾನರರ
ಶಿರದ ತೋರಣದೋರಣವನಂ । ಬರದೊಳಗೆ ವಿರಚಿಸುತ ವಿಶ್ವಂ
ಭರನ ಕರುಣದ ಕಿಂಕರನ ಕೆಣಕಿದರು ಖಾತಿಯಲಿ ೧೦

ಸರಳ ಸಾರದ ಸಂದಣಿಯಲಂ । ಬರದಿಶಾವಳಿ ತುಂಬಿತಿಬ್ಬರ
ಕರಚಮತ್ಕೃತಿ ಚಾಪವಿಪುಳಕಳಾಪ ಮುಕ್ತಕದ
ಧರಿಸಿತೋ ಗಿರಿ ಮೇಣು ವಿಪಿನೋ । ತ್ಕರ ತನುತ್ರವನೆಂಬವೊಲು ನಿ
ರ್ಭರ ಶರೌಘಶರೀರನಾಗಿರ್ದನು ಸಮೀರಸುತ ೧೧

೮. ಬಳಿಕ ತ್ರಿಶಿರ ದೇವಾಂತಕಾಸುರರು ಉಬ್ಬಿದ ವಾನರವೀರರ ಸೈನ್ಯದ ಮೇಲೆ ಬಾಣಗಳ ಸಮುದ್ರವನ್ನು ಸುರಿಸಿದರು. ಆಕಾಶದಲ್ಲಿದ್ದ ದೇವತೆಗಳು ಬೆದರುತ್ತಿರಲು ಕಲ್ಲು ಮರಗಳ ಕೋಲಾಹಲದ ಅಸಂಖ್ಯಾತ ವಾನರರನ್ನು ಕೌಶಲದಿಂದ ಕೊಂದರು. ೯. ರಣರಂಗದಲ್ಲಿ ಬಿದ್ದ ಹೆಣಗಳ ಮೆದೆಗಳನ್ನು ಏರಿ ರಕ್ತದ ಹೊಳೆಗಳು ಹರಿದವು, ಯುದ್ಧರಂಗದಲ್ಲಿ ಭೂತಗಳು ಸಾಲುಸಾಲಾಗಿ ಗುಂಪು ಕೂಡಿದವು. ಹಗಲು ರಾತ್ರಿಗಳ ರಭಸದ ಕಾಳಗದಂತೆ ರಾಕ್ಷಸರ ಹಾಗೂ ಕಪಿಗಳ ಗುಂಪಿನ ನಡುವೆ ಭಯಂಕರ ಯುದ್ಧವು ರಂಜಿಸಿತು. ೧೦. ಕದನದ ಹೊಣೆಹೊತ್ತ ವೀರರಲ್ಲಿ ತ್ರಿಶಿರನು ಮುಂದಾಳಲ್ಲವೇ ? ತ್ರಿಶಿರ ದೇವಾಂತಕರು ತಮ್ಮ ಮೇಲೆ ಎರಡು ಕಡೆಯಿಂದ ಮುತ್ತಿದ ವಾನರವೀರರ ತಲೆಗಳ ತೋರಣವನ್ನು ಆಕಾಶದಲ್ಲಿ ಅಂದವಾಗಿ ಕಟ್ಟಿದರು. ಬಳಿಕ ಪರಮಾತ್ಮನ ಕರುಣೆಯ ಕಿಂಕರ ಹನುಮಂತನನ್ನು ಕೆರಳಿ ಕೆಣಕಿದರು. ೧೧. ತ್ರಿಶಿರ ದೇವಾಂತಕರ ಬಾಣಪ್ರಯೋಗದ ಚಮತ್ಕಾರದಿಂದ ಅವರು ಸುರಿಸಿದ ಬಾಣಗಳ ಮಳೆಯು ಆಕಾಶ ಮತ್ತು ಅಷ್ಟದಿಕ್ಕುಗಳನ್ನು ತುಂಬಿತು. ಪರ್ವತವು ಕಾಡೆಂಬ ಕವಚವನ್ನು ಧರಿಸಿತೋ

ಎಲೆಲೆ ರಕ್ಕಸವೀರರಿಬ್ಬರ । ಕಲಹ ಬಲುಹೋ ಹನುಮನುಬ್ಬರ
ಗಲಪ ಹವಣಿಸದೆನುತ । ನಳ ನೀಲಾಂಗದಾದಿಗಳು
ಕಲುಮರನ ಕಾಹುರದ ಕೋಳಾ । ಹಳದಲಾ ರಿಪುರಥಿಕರಿಬ್ಬರ
ಸೆಳೆದು ಸಮರವನಿತ್ತು ಕಾದಿದರಖಿಳ ಬಲಸಹಿತ ೧೨

ಆತು ಕಾದುವ ಕಪಿಮಹಾಬ್ಧಿಗೆ । ಸೇತುವನು ಕಟ್ಟಿದರು ಶರಸಂ
ಘಾತದಲಿ ಸರಿಯಿಲ್ಲ ಸಂಗರವೆಂಬ ಸಾಹಸದ
ಮಾತ ಮೆಱೆದರು ಕೇಳಿರೈ ರಘು । ಜಾತರಿರ ಜಾಳಿಸಿದ ಸೇನಾ
ವ್ರಾತಕವಧಿಯ ಕಾಣೆನತಿರಥರಸಮ ಸಮರದಲಿ ೧೩

ಕೊಂದರೆರಡರ್ಬುದವನನಿಬರು । ಸಂದರೈ ಕೊಲೆಗಾಜಿಯಲಿ ರಘು
ನಂದನನ ಕರುಣದಲಿ ರವಿನಂದನನ ಪಟುಭಟರು
ಮುಂದಣೊಡ್ಡಿನೊಳಾಯ್ತು ದಶರಥ । ನಂದನರನೀಗಾಗ ತಾಗುವ
ರೆಂದು ಬಲು ಬೊಬ್ಬಾಟವದ ಕೇಳಿದನು ಕಲಿಹನುಮ ೧೪

ಕೇಳಿದಾಕ್ಷಣ ಮುಸುಕಿಕೊಂಡಿಹ । ಕೋಲುಗಳನುಱೆ ಕಿದಱಿ ಘನ ದಂ
ಷ್ಟ್ರಾಳಿಯಿಂದವುಡಗಿದು ನೋಡಿದನಾ ಖರಾಂತಕನ
ಮೇಲೆ ಕವಿದೆಸುವಿಬ್ಬರಸುರರ । ಕೋಲ ಕೋಳಾಹಳವ ಕಾಣುತ
ವೇಳೆ ಸೇವೆಗೆ ಸಾಕಿದೊಡೆಯಂಗೆನುತ ಪುಟನೆಗೆದ ೧೫

ಎಂಬಂತೆ ಹನುಮಂತನ ಶರೀರವೆಲ್ಲ ಬಾಣದಿಂದ ತುಂಬಿತು. ೧೨. 'ಎಲೆಲೆ, ಈ
ಇಬ್ಬರು ರಾಕ್ಷಸವೀರರ ಕಾಳಗವು ಜೋರಾಗಿದೆಯೋ. ಹನುಮಂತನ ಪ್ರಬಲಕದನವು
ಶಕ್ತಿಗೆ ಮೀರಿದುದೋ' ಎನ್ನುತ್ತ ನಳ, ನೀಲ, ಅಂಗದನೇ ಮೊದಲಾದವರು ಕಲ್ಲು ಮರ
ಗಳ ಪ್ರವಾಹದ ಕೋಲಾಹಲದಿಂದ ಶತ್ರುರಥಿಕರಿಬ್ಬರನ್ನೂ ತಮ್ಮ ಕಡೆಗೆ ಆಕರ್ಷಿಸಿ
ತಮ್ಮ ಸಮಸ್ತ ಸೈನ್ಯದೊಡನೆ ಕಾದಿದರು. ೧೩. ಎದುರಿಸಿ ಯುದ್ಧಮಾಡುವ ವಾನರ
ಮಹಾಸಾಗರಕ್ಕೆ ಆ ರಾಕ್ಷಸವೀರರು ಬಾಣಗಳ ಸೇತುವೆಯನ್ನು ಕಟ್ಟಿದರು. ಬಾಣ
ಪ್ರಯೋಗದ ಕಾಳಗದಲ್ಲಿ ಇವರಿಗೆ ಸಮಾನರಿಲ್ಲ ಎಂಬ ಹೊಗಳಿಕೆಯ ಮಾತನ್ನು ಪ್ರತ್ಯಕ್ಷ
ಪಡಿಸಿದರು. ಕೇಳಿ ರಘು ಕುಮಾರರೇ, ಅತಿರಥ ರಾಕ್ಷಸವೀರರ ವಿಷಮಯುದ್ಧದಲ್ಲಿ
ಜೀವತೆಗೆದ ವಾನರಸೈನ್ಯಕ್ಕೆ ಕೊನೆಯನ್ನು ಕಾಣೆ ಎಂದು ವಾಲ್ಮೀಕಿಗಳು ನುಡಿದರು,
೧೪. 'ರಾಕ್ಷಸರು ಎರಡರ್ಬುದ ವಾನರರನ್ನು ಕೊಂದರು. ರಾಘವನ ಕರುಣೆಯಿಂದ
ಸುಗ್ರೀವನ ಬಲುವೀರರು ಅಷ್ಟೊಂದು ಜನ ಯುದ್ಧದಲ್ಲಿ ಕೊಲೆಗೊಳಗಾದರು.
ಮುಂದಿನ ಯುದ್ಧಕಾರ್ಯದಲ್ಲಿ ದಶರಥಕುಮಾರರನ್ನು ಈಗಲೋ ಆಗಲೋ
ಮುತ್ತುವರು' ಎಂದೆನ್ನುವ ಬೊಬ್ಬೆಯನ್ನು ಹನುಮಂತ ಕೇಳಿದ. ೧೫. ಈ ಗಲಾಟೆ
ಯನ್ನು ಕೇಳಿದೊಡನೆ ಹನುಮಂತನು ಮೈಯಿಗೆ ಮುತ್ತಿಕೊಂಡಿದ್ದ ಬಾಣಗಳನ್ನು
ಕೆಡವಿ ಹಲ್ಲುಕಚ್ಚಿ ರಾಮನನ್ನು ನೋಡಿದನು. ರಾಮನನ್ನು ಮುತ್ತಿ ಬಾಣಗಳನ್ನು
ಬಿಡುತ್ತಿರುವ ರಾಕ್ಷಸರಿಬ್ಬರ ಕೋಲಾಹಲವನ್ನು ಕಂಡು 'ಸಾಕಿದೊಡೆಯನ ಸೇವೆಗೆ ಇದು

ನಿಂದಿದನು ನಿಮ್ಮಯ್ಯನಿದಿರಲಿ । ಸಂಧಿಸುವ ರಣಗಲಿಗಳುಗ್ರ
ಸ್ಯಂದನದ ಮುಂಭಾಗದಲಿ ಮುಂಬರಿವ ಹೆದ್ದೊರೆಯ
ಮುಂದೆ ನಿಲುವ ಮಹಾದ್ರಿಯವೊಲಾ । ಯೆಂದು ಬೊಬ್ಬಿಱಿದುಬ್ಬಿ ದಶರಥ
ನಂದನರನೀಕ್ಷಿಸುತ ನಲವೇಱಿದನು ಕಲಿಹನುಮ ೧೬

ತೀರಿಸುವೆನೀ ರಕ್ಕಸರ ರಣ । ಹೋರಟೆಯನೆನುತಿಬ್ಬರಸುರರ
ತೇರನಿಕ್ಕೈಗೊಂಡು ತಿರುಹಿಟ್ಟನು ನಭಸ್ಥಳಕೆ
ಊರುಸುಡುಕನ ಕದನಕೌತುಕ । ಸಾರವನು ಚಿತ್ತೈಸೆನುತ ರಘು
ವೀರನಿದಿರಲಿ ಭುಜವ ಹೊಯ್ದುಬ್ಬರಿಸಿದನು ಹನುಮ ೧೭

ಆವ ಸಮರಾಭ್ಯಾಸಿಗಳೊ ಸುಭ । ಟಾವಳಿಯಲಸುರರಲಿ ರಥ ಗಗ
ನಾವಲಂಬಿತವಾಗೆ ವಿದ್ಯಾಧರರ ಕರುಣದಲಿ
ಆ ವಿಬುಧರಿಪುವಾ ತ್ರಿಶಿರಖಳ । ರಾ ವಿಮಾನದ ಸುರರು ಬೆಱಗಿಡೆ
ಪಾವಮಾನಿಯ ಮುಂದೆ ನಿಂದರು ಹಲಗೆ ಖಡುಗದಲಿ ೧೮

ವಿಗಡನೈ ಪವಮಾನಸುತ ನಸು । ನಗೆಯಲಿವರೊಡನಿವರವೊಲು ಕಾ
ಳಗವ ತೋಱುವೆನೀ ಕಕುತ್ಥ್ಸಜನೃಪನ ಕಂಗಳಿಗೆ
ಸೊಗಸ ಸಲಿಸುವೆನೆನುತ ನೋಡುವ । ಗಗನವಳಯದ ವೀರಭದ್ರನ
ಲುಗಿದ ಖಡುಗವ ಖೇಟಕವ ಕೊಂಡುಬ್ಬಿ ಬೊಬ್ಬಿಱಿದ ೧೯

ಸಮಯ' ಎಂದು ಅಲ್ಲಿಂದ ಪುಟನೆಗೆದ. ೧೬. ಮುಂದಕ್ಕೆ ಹರಿಯುವ ನದಿಯ ಎದುರಿಗೆ ನಿಲ್ಲುವ ಮಹಾಪರ್ವತದಂತೆ ನಿಮ್ಮ ತಂದೆಯ ಎದುರಿನಲ್ಲಿ ಕಾದಲು ಬಂದ ಯುದ್ಧವೀರರ ಉಗ್ರರಥದ ಮುಂದುಗಡೆ ಹನುಮಂತನು ನಿಂತುಕೊಂಡನು, 'ಆ' ಎಂದು ಬೊಬ್ಬಿರಿದು ದಶರಥಕುಮಾರರಾದ ರಾಮಲಕ್ಷ್ಮಣರನ್ನು ನೋಡುತ್ತ ಹನುಮಂತನಿಗೆ ಹರ್ಷವುಕ್ಕಿತು. ೧೭. 'ಈ ರಾಕ್ಷಸರ ಯುದ್ಧದ ತೀಟೆಯನ್ನು ತೀರಿಸುತ್ತೇನೆ' ಎನ್ನುತ್ತ ಇಬ್ಬರು ರಾಕ್ಷಸರ ತೇರನ್ನು ಎರಡೂ ಕೈಗಳಿಂದ ಹಿಡಿದುಕೊಂಡು ತಿರುಗಿಸಿ ಆಕಾಶಕ್ಕೆಸೆದನು. 'ಲಂಕಾನಗರ ಸುಟ್ಟವನ ಕದನದಾಟದ ಸಾರವನ್ನು ಗಮನಿಸು' ಎನ್ನುತ್ತ ರಘುವೀರ ರಾಮನ ಎದುರಿನಲ್ಲಿ ಹನುಮಂತನು ಭುಜವನ್ನಪ್ಪಳಿಸಿ ಗರ್ಜಿಸಿದನು. ೧೮. ರಾಕ್ಷಸವೀರರಲ್ಲಿ ತ್ರಿಶಿರ ದೇವಾಂತಕರು ಎಂಥ ಯುದ್ಧಕಲೆಯ ನಿಪುಣರೋ! ರಥವು ಆಕಾಶಕ್ಕೆ ಎಸೆಯಲ್ಪಡಲು ವಿದ್ಯಾಧರರ ಕರುಣೆಯಿಂದ ರಥದಿಂದ ಹೊರಟು ಆ ದೇವಾಂತಕ ತ್ರಿಶಿರಾಸುರರು ಆಕಾಶದಲ್ಲಿದ್ದ ವಿಮಾನದ ದೇವತೆಗಳು ಆಶ್ಚರ್ಯಪಡುತ್ತಿರಲು ಕತ್ತಿ ಗುರಾಣಿಗಳನ್ನು ಹಿಡಿದು ಹನುಮಂತನ ಮುಂದೆ ನಿಂತರು. ೧೯. ಮಾರುತಿ ಮಹಾ ಸಾಹಸಿ. ನಸುನಗುತ್ತ ಈ ರಾಕ್ಷಸರಿಗೆ ಇವರಂತೆ ಯುದ್ಧವನ್ನು ಕೊಡುತ್ತೇನೆ ಮತ್ತು ರಾಮನ ಕಣ್ಣುಗಳಿಗೆ ಹಬ್ಬವನ್ನು ಮಾಡುತ್ತೇನೆ ಎನ್ನುತ್ತ ಆಕಾಶದಲ್ಲಿ ನಿಂತು ಯುದ್ಧವನ್ನು ನೋಡುತ್ತಿದ್ದ ವೀರಭದ್ರನಿಂದ ಕತ್ತಿ ಗುರಾಣಿಗಳನ್ನು ಸೆಳೆದುಕೊಂಡು ಗರ್ವದಿಂದ ಗರ್ಜಿ

ಚಾಚಿದರು ಖಂಡೆಯವನುಭಯ ನಿ । ಶಾಚರರು ಪಯಪಾಡು ಪಾಡಿನ
ಕೈಚಳಕದಡ್ಡಣದ ಹೊಯ್ಲಿನಲಧಿಕ ಚಿತ್ರದಲಿ
ಈ ಚಟುಳ ವಿಕ್ರಮ ಘನಕ್ಷಣ । ರೋಚಿಯಂತಿರೆ ಹೊಳೆವ ಖಡ್ಗವ
ನಾ ಚರಾಚರವಿಭು ನಿರೀಕ್ಷಿಸೆ ಮೆಱೆದನಾ ಹನುಮ ೨೦

ಅಣೆದನೆಡದಲಿ ಬಲದಲಾತಗ । ಳಣೆದ ಖಡ್ಗವ ಖಡ್ಗದಲಿ ಕ
ಡ್ಡಣಿಸಿ ಕೈಮೈಲುಳಿಯಲಿಬ್ಬರಿಗೊಬ್ಬನುರವಣಿಸಿ
ರಣರಹಸ್ಯದ ರಸಿಕತನದು । ಬ್ಬಣದ ವಿದ್ಯಾಪ್ರೌಢಿಯಲಿ ಸುರ
ಗಣ ಹೊಗಳೆ ಹೊಯ್ದಾಡಿದರು ಖಣಿಖಟಿಲ ಸಬುದದಲಿ ೨೧

ಖಳಪಳದ ಕಟ್ಬುಲುಹಿನುರು ಝಳ । ತಳಪಗಳ ಪಡಿತಳದ ಮುಂಡಿಯ
ಹೊಳಹುಗಳ ಹೊಯ್ಲುಗಳ ಖಡುಗದ ಕಿಡಿಯ ತುಂಡುಗಳ
ಲುಳಿಯ ಪಯಪಾಡುಗಳ ಬವರಿಯ । ಸುಳಿವುಗಳ ಲಂಘನೆಯ ಲಾಘವ
ದೊಳು ವಿಚಿತ್ರದ ವೀರರೊಪ್ಪಿದರಸಮ ಸಮರದಲಿ ೨೨

ಆಟವಿಕ ರಕ್ಕಸರ ಹನುಮನ । ಘಾಟಗಲಹದ ಖಡ್ಗಗಳ ಹೊ
ಯ್ಲಾಟವಿದ್ದುದು ಹರಹಿನಮರಾವಳಿಯ ಕಣ್ಮನಕೆ
ಪಾಟಿಸಿದ ಸಿಂಗರದ ಸಮರವ । ಧೂಟಿಯರ ಕಮನೀಯತರ ಕಾ
ಲಾಟದವೊಲೇನೆಂಬೆನಾ ಸಂಗ್ರಾಮಸಂಭ್ರಮವ ೨೩

ಸಿದ ಹನುಮಂತ. ೨೦. ಇಬ್ಬರು ರಾಕ್ಷಸರೂ ವಿವಿಧಗತಿಯಲ್ಲಿ ಹೆಜ್ಜೆಯನ್ನಿಡುತ್ತ ಕೈಚಳಕದಿಂದ ಗುರಾಣಿಯನ್ನು ಹಿಡಿದು ಅತ್ಯಂತ ಕೌಶಲದಿಂದ ಕತ್ತಿಯನ್ನು ಚಾಚಿದರು. ಚರಾಚರಪ್ರಭು ರಾಮನು ನೋಡುತ್ತಿರುವಂತೆ ಈ ಪರಾಕ್ರಮಶಾಲಿ ಹನುಮಂತನು ಮಿಂಚಿನಂತೆ ಹೊಳೆಯುವ ಕತ್ತಿಯುವರಸೆಯನ್ನು ಮೆರೆದನು. ೨೧. ಹನುಮಂತನು ಎಡ ಬಲಗಳಲ್ಲಿ ಕತ್ತಿಯನ್ನು ಬೀಸಿ ತ್ರಿಶಿರ ದೇವಾಂತಕರು ಹೊಡೆದ ಖಡ್ಗವನ್ನು ಖಡ್ಗದಿಂದ ಕತ್ತರಿಸಿ ಕೈಮೈಗಳ ಚತುರ ಚಲನೆಯಿಂದ ಇಬ್ಬರನ್ನು ಒಬ್ಬನೇ ಎದುರಿಸಿದನು, ಕತ್ತಿಯ ಕಾದಾಟದ ರಹಸ್ಯವನ್ನು ಕರಗತಮಾಡಿಕೊಂಡ ಕತ್ತಿವರಸೆ ಪ್ರವೀಣರಾದ ಹನುಮಂತನೂ ರಾಕ್ಷಸರೂ ಖಣಿಖಟಿಲೆಂದು ಶಬ್ದಮಾಡುತ್ತ ಯುದ್ಧಮಾಡಲು ದೇವತೆಗಳು ಕೊಂಡಾಡಿದರು ೨೨. ಗಟ್ಟಿಯಾಗಿ ಕೂಗುಹಾಕುತ್ತ, ಖಳಪಳ ಎಂದು ಕಾಂತಿಬೀರುವ ಕತ್ತಿಯನ್ನು ಝಳಪಿಸುತ್ತ, ಮುಂಡಿಯಿಂದ ಆಕ್ರಮಣ ಮಾಡುತ್ತ, ಹೊಳೆಯುವ ಕತ್ತಿಯಿಂದ ಹೊಡೆದು ಕಿಡಿಗಳನ್ನೆಬ್ಬಿಸುತ್ತ, ಚುರುಕಿನ ಹೆಜ್ಜೆಗಳನ್ನಿಡುತ್ತ ಚಕ್ರಾಕಾರವಾಗಿ ಸುತ್ತುತ್ತ, ಅತ್ತಿಂದಿತ್ತ ಚಲಿಸುತ್ತ ನೆಗೆಯುತ್ತ ಅಸಮಾನವಾದ ಕತ್ತಿವರಸೆಯ ಚಮತ್ಕಾರಗಳನ್ನು ವೀರರು ಪ್ರದರ್ಶಿಸಿದರು. ೨೩. ಧೂರ್ತ ರಾಕ್ಷಸರ ಮತ್ತು ಹನುಮಂತನ ನಡುವಿನ ಅದ್ಭುತ ಖಡ್ಗ ಯುದ್ಧವು ಮನೋಹರವಾಗಿ ಅಲಂಕಾರ ಮಾಡಿಕೊಂಡ ಯುದ್ಧತರುಣಿಯರ ಸುಂದರತರ ನರ್ತನದಂತೆ ಆಕಾಶದಲ್ಲಿದ್ದ ದೇವತೆಗಳ ಕಣ್ಮನಗಳನ್ನು ಸಂತೋಷಗೊಳಿ

ಅವಧರಿಸು ರಾಜೇಂದ್ರ ನೋಡೆಲೆ । ರವಿಜ ಲಕ್ಷ್ಮಣ ಚಿತ್ರವಿಪುದಭಿ
ನವದ ರಣಕೌತುಕದ ಕೌಂಕ್ಷೇಯಕದ ಕೌಶಲವ
ಬವರಕಿದು ಕಡೆ ನೋಡಿ ನೀವೆನು । ತವಿರಳದ ಪದಚಿತ್ರಗತಿಗಳ
ಲವಣಿಯಲಿ ಲಾಗಿಸುತ ಹೊಯ್ದನು ಹನುಮನಾ ಖಳನ ೨೪

ಉಸುರಲಚ್ಚರಿ ಪವನಪುತ್ರನ । ನಿಶಿತ ಖಂಡೆಯವಾ ನಿಶಾಟ
ತ್ರಿಶಿರನುರದಲಿ ಬಿದ್ದುದಿಳಿದುದು ಕಲಿ ಸುರಾಂತಕನ
ವಸನಲಂಬಿತ ಕಟಿಯಲೀವ । ಣ್ಣಿಸುವೆನೈ ನವಕುಂಭವನು ಭಾ
ಗಿಸಿದ ಸೂತ್ರದ ಸೊಗಸು ಮೆಱೆದುದು ಕುಂಭಕಾರಕನ ೨೫

ಝಳಪಿಸುಬ್ಬಣದೊಡ್ಡಣದ ಪಡಿ । ತಳದ ಪಾದುಗಳಿಂದಲನಿಲಜ
ನೊಲಿಯಲೊಲಿದೆಜಗಿದವು ಮೇಲಣ ತುಂಡುಗಳು ಖಳರ
ಗಳದ ಕಪ್ಪಿನ ದೇವಮೌಳಿಯು । ನಲುಗಿದನು ಹಾರೈಸಿ ಹೂವಿನ
ಮಳೆಯ ಕಱೆಸಿದರನಿಲಜನ ಸಿರಿಮುಡಿಯು ಸರಿಸದಲಿ ೨೬

ಭಾಪುರೇ ಬಲವಂತ ಬಲಿಮುಖ । ರೂಪಿನಪರಬ್ರಹ್ಮ ಸಮರವಿ
ರೂಪಲೋಚನ ವಿಮಳ ಲಂಕಾನಗರ ನಿರ್ದಹನ
ಗೋಪಮಂಡಲ ಮಂಡಿತೋಗ್ರಕ । ಲಾಪಭೈರವ ದಶವದನ ಗ
ರ್ವಾಪಹರ ಜಯಜಯಯೆನುತ ಕೊಂಡಾಡಿತಮರಗಣ ೨೭

ಸಿತು. ಆ ಯುದ್ಧದ ಸಂಭ್ರಮವನ್ನು ಏನೆಂದು ವರ್ಣಿಸಲಿ ಎಂದು ವಾಲ್ಮೀಕಿಗಳು ನುಡಿದರು. ೨೪. "ರಾಜೇಂದ್ರರಾಮ! ಗಮನವಿಟ್ಟು ನೋಡು, ಸುಗ್ರೀವ! ಲಕ್ಷ್ಮಣ! ಕುತೂಹಲಕರವಾದ ನೂತನ ಖಡ್ಗಪ್ರಯೋಗದ ಕೌಶಲವನ್ನು ನೋಡಿ. ಇದು ಈ ಕದನದ ಮುಕ್ತಾಯ, ಇದನ್ನು ನೀವು ನೋಡಿ" ಎನ್ನುತ್ತ ಎಡೆಬಿಡದ ಸುಂದರ ನಡಿಗೆಯಿಂದ ಹಿಂದೆ ಮುಂದೆ ಚಮತ್ಕಾರವಾಗಿ ತಿರುಗುತ್ತ ನೆಗೆಯುತ್ತ ಹನುಮಂತನು ರಾಕ್ಷಸನನ್ನು ಹೊಡೆದನು. ೨೫. ಹೇಳಲು ಆಶ್ಚರ್ಯ! ಹನುಮಂತನ ಹರಿತವಾದ ಕತ್ತಿಯು ತ್ರಿಶಿರಾಸುರನ ಹೊಟ್ಟೆಗೆ ಚುಚ್ಚಿ ಅಲ್ಲಿಂದ ವಸ್ತ್ರವನ್ನು ಸುತ್ತಿಕೊಂಡಿದ್ದ ದೇವಾಂತಕನ ಸೊಂಟಕ್ಕೆ ನಾಟಿಕೊಂಡಿತು. ಏನೆಂದು ವರ್ಣಿಸಲಿ, ಕುಂಬಾರನು ಹೊಸಮಡಕೆಯನ್ನು ದಾರದಿಂದ ಕತ್ತರಿಸಿದ ಸೊಗಸು ಕಾಣಿಸಿತು. ೨೬. ಮಾರುತಿಯು ಹೊಳೆಯುವ ಖಡ್ಗವನ್ನು ಹಿಡಿದು ಬೀಸಿ ಅಲುಗಿಸಲು ರಾಕ್ಷಸರ ದೇಹದ ಕತ್ತರಿಸಿದ ಮೇಲಿನ ಭಾಗಗಳು ಅಲ್ಲಾಡಿ ಕೆಳಗೆಬಿದ್ದವು. ನೀಲಕಂಠ ಶಿವನು ಮೆಚ್ಚಿ ತಲೆದೂಗಿದನು. ಹನುಮಂತನ ತಲೆಯ ಮೇಲಕ್ಕೆ ದೇವತೆಗಳು ಹೂವಿನಮಳೆ ಸುರಿಸಿದರು. ೨೭. 'ಶಹಬಾಸ್ ವೀರ! ವಾನರರೂಪಿನ ಎರಡನೆಯ ಬ್ರಹ್ಮ! ಕದನಮುಕ್ಕಣ್ಣ! ಲಂಕಾನಗರವನ್ನು ಭಸ್ಮಮಾಡಿದವನೇ! ಸೂರ್ಯಮಂಡಲಾಲಂಕೃತ ಉಗ್ರರಣಭೈರವ! ದಶಾನನನ ಗರ್ವಾಪಹಾರ ಮಾಡಿದವನೇ! ಜಯ ಜಯ!' ಎನ್ನುತ್ತ ದೇವತೆಗಳು ಹನುಮಂತನನ್ನು ಕೊಂಡಾಡಿ

ಇತ್ತನೈ ಬಳಿಕಸುರರಸುಗಳ । ನುತ್ತರಿಸಿದಾ ಖಂಡೆಯುವನು ವಿ
ಯತ್ತಳದ ವಿಸ್ಮಯದ ನೋಟದ ವೀರಭದ್ರಂಗೆ
ಹೊತ್ತ ಹರುಷದ ಪರಿಷಯಾದಿ ಸು । ರೋತ್ತಮನ ತೊರವೆಯ ನೃಸಿಂಹನ
ಚಿತ್ತವನು ಹಿಡಿದಡಸಿ ನಡೆದನು ಮುಂದಣಾಹವಕೆ ೨೮

ದರು. ೨೮. ತ್ರಿಶಿರ ದೇವಾಂತಕಾಸುರರ ಪ್ರಾಣವನ್ನು ತೆಗೆದ ಖಡ್ಗವನ್ನು ಆಕಾಶದಲ್ಲಿ ಆಶ್ಚರ್ಯದಿಂದ ವೀಕ್ಷಿಸುತ್ತಿದ್ದ ವೀರಭದ್ರನಿಗೆ ಹನುಮಂತನು ಹಿಂದಿರುಗಿ ಕೊಟ್ಟನು. ಹರ್ಷಚಿತ್ತರಾದ ದೇವೇಂದ್ರನೇ ಮೊದಲಾದ ದೇವತೆಗಳ ಮತ್ತು ತೊರವೆಯೊಡೆಯ ನರಸಿಂಹಾವತಾರಿ ರಾಮನ ಮನಸ್ಸಿಗೆ ಮೆಚ್ಚಿಕೆಯಾಗಿ ಹನುಮಂತನು ಮುಂದಿನ ಯುದ್ಧಕ್ಕೆ ನಡೆದನು.

ಅವಧರಿಸು ರಾಜೇಂದ್ರ ನೋಡೆಲೆ । ರವಿಜ ಲಕ್ಷ್ಮಣ ಚಿತ್ತವಿಪುದಭಿ
ನವದ ರಣಕೌತುಕದ ಕೌಂಕ್ಷೇಯಕದ ಕೌಶಲವ
ಬವರಕಿದು ಕಡೆ ನೋಡಿ ನೀವೆನು । ತವಿರಳದ ಪದಚಿತ್ರಗತಿಗಳ
ಲವಣಿಯಲಿ ಲಾಗಿಸುತ ಹೊಯ್ದನು ಹನುಮನಾ ಖಳನ ೨೪

ಉಸುರಲಚ್ಚರಿ ಪವನಪುತ್ರನ । ನಿಶಿತ ಖಂಡೆಯವಾ ನಿಶಾಟ
ತ್ರಿಶಿರನುರದಲಿ ಬಿದ್ದುದಿಳಿದುದು ಕಲಿ ಸುರಾಂತಕನ
ವಸನಲಂಬಿತ ಕಟಿಯಲೀವ । ಣ್ಣಿಸುವೆನೈ ನವಕುಂಭವನು ಭಾ
ಗಿಸಿದ ಸೂತ್ರದ ಸೊಗಸು ಮೆಱೆದುದು ಕುಂಭಕಾರಕನ ೨೫

ಝಳಪಿಸುಬ್ಬಣದೊಡ್ಡಣದ ಪಡಿ । ತಳದ ಪಾಡುಗಳಿಂದಲನಿಲಜ
ನೊಲಿಯಲೊಲೆದೆಜಗಿದವು ಮೇಲಣ ತುಂಡುಗಳು ಖಳರ
ಗಳದ ಕಪ್ಪಿನ ದೇವಮೌಳಿಯು । ನಲುಗಿದನು ಹಾರೈಸಿ ಹೂವಿನ
ಮಳೆಯ ಕಱೆಸಿದರನಿಲಜನ ಸಿರಿಮುಡಿಯ ಸರಿಸದಲಿ ೨೬

ಭಾಪುರೇ ಬಲವಂತ ಬಲಿಮುಖ । ರೂಪಿನಪರಬ್ರಹ್ಮ ಸಮರವಿ
ರೂಪಲೋಚನ ವಿಮಳ ಲಂಕಾನಗರ ನಿರ್ದಹನ
ಗೋಪಮಂಡಲ ಮಂಡಿತೋಗ್ರಕ । ಲಾಪಭೈರವ ದಶವದನ ಗ
ರ್ವಾಪಹರ ಜಯಜಯಯೆನುತ ಕೊಂಡಾಡಿತಮರಗಣ ೨೭

ಸಿತು. ಆ ಯುದ್ಧದ ಸಂಭ್ರಮವನ್ನು ಏನೆಂದು ವರ್ಣಿಸಲಿ ಎಂದು ವಾಲ್ಮೀಕಿಗಳು ನುಡಿದರು. ೨೪. "ರಾಜೇಂದ್ರರಾಮ! ಗಮನವಿಟ್ಟು ನೋಡು, ಸುಗ್ರೀವ! ಲಕ್ಷ್ಮಣ! ಕುತೂಹಲಕರವಾದ ನೂತನ ಖಡ್ಗಪ್ರಯೋಗದ ಕೌಶಲವನ್ನು ನೋಡಿ. ಇದು ಈ ಕದನದ ಮುಕ್ತಾಯ, ಇದನ್ನು ನೀವು ನೋಡಿ" ಎನ್ನುತ್ತ ಎಡೆಬಿಡದ ಸುಂದರ ನಡಿಗೆಯಿಂದ ಹಿಂದೆ ಮುಂದೆ ಚಮತ್ಕಾರವಾಗಿ ತಿರುಗುತ್ತ ನೆಗೆಯುತ್ತ ಹನುಮಂತನು ರಾಕ್ಷಸನನ್ನು ಹೊಡೆದನು. ೨೫. ಹೇಳಲು ಆಶ್ಚರ್ಯ! ಹನುಮಂತನ ಹರಿತವಾದ ಕತ್ತಿಯು ತ್ರಿಶಿರಾಸುರನ ಹೊಟ್ಟೆಗೆ ಚುಚ್ಚಿ ಅಲ್ಲಿಂದ ವಸ್ತ್ರವನ್ನು ಸುತ್ತಿಕೊಂಡಿದ್ದ ದೇವಾಂತಕನ ಸೊಂಟಕ್ಕೆ ನಾಟಿಕೊಂಡಿತು. ಏನೆಂದು ವರ್ಣಿಸಲಿ, ಕುಂಬಾರನು ಹೊಸಮಡಕೆಯನ್ನು ದಾರದಿಂದ ಕತ್ತರಿಸಿದ ಸೊಗಸು ಕಾಣಿಸಿತು. ೨೬. ಮಾರುತಿಯು ಹೊಳೆಯುವ ಖಡ್ಗವನ್ನು ಹಿಡಿದು ಬೀಸಿ ಅಲುಗಿಸಲು ರಾಕ್ಷಸರ ದೇಹದ ಕತ್ತರಿಸಿದ ಮೇಲಿನ ಭಾಗಗಳು ಅಲ್ಲಾಡಿ ಕೆಳಗೆಬಿದ್ದವು. ನೀಲಕಂಠ ಶಿವನು ಮೆಚ್ಚಿ ತಲೆದೂಗಿದನು. ಹನುಮಂತನ ತಲೆಯ ಮೇಲಕ್ಕೆ ದೇವತೆಗಳು ಹೂವಿನಮಳೆ ಸುರಿಸಿದರು. ೨೭. 'ಶಹಬಾಸ್ ವೀರ! ವಾನರರೂಪಿನ ಎರಡನೆಯ ಬ್ರಹ್ಮ! ಕದನಮುಕ್ಕಣ್ಣ! ಲಂಕಾನಗರವನ್ನು ಭಸ್ಮಮಾಡಿದವನೇ! ಸೂರ್ಯಮಂಡಲಾಲಂಕೃತ ಉಗ್ರರಣಭೈರವ! ದಶಾನನನ ಗರ್ವಾಪಹಾರ ಮಾಡಿದವನೇ! ಜಯ ಜಯ!' ಎನ್ನುತ್ತ ದೇವತೆಗಳು ಹನುಮಂತನನ್ನು ಕೊಂಡಾಡಿ

ಇತ್ತನೈ ಬಳಿಕಸುರರಸುಗಳ । ನುತ್ತರಿಸಿದಾ ಖಂಡೆಯುವನು ವಿ
ಯತ್ತಳದ ವಿಸ್ಮಯದ ನೋಟದ ವೀರಭದ್ರಂಗೆ
ಹೊತ್ತ ಹರುಷದ ಹರಿಹಯಾದಿ ಸು । ರೋತ್ತಮನ ತೊರವೆಯ ನೃಸಿಂಹನ
ಚಿತ್ತವನು ಹಿಡಿದಡಸಿ ನಡೆದನು ಮುಂದಣಾಹವಕೆ ೨೮

ದರು. ೨೮. ತ್ರಿಶಿರ ದೇವಾಂತಕಾಸುರರ ಪ್ರಾಣವನ್ನು ತೆಗೆದ ಖಡ್ಗವನ್ನು ಆಕಾಶದಲ್ಲಿ ಆಶ್ಚರ್ಯದಿಂದ ವೀಕ್ಷಿಸುತ್ತಿದ್ದ ವೀರಭದ್ರನಿಗೆ ಹನುಮಂತನು ಹಿಂದಿರುಗಿ ಕೊಟ್ಟನು. ಹರ್ಷಚಿತ್ತರಾದ ದೇವೇಂದ್ರನೇ ಮೊದಲಾದ ದೇವತೆಗಳ ಮತ್ತು ತೊರವೆಯೊಡೆಯ ನರಸಿಂಹಾವತಾರಿ ರಾಮನ ಮನಸ್ಸಿಗೆ ಮೆಚ್ಚಿಕೆಯಾಗಿ ಹನುಮಂತನು ಮುಂದಿನ ಯುದ ಕ್ಕೆ ನಡೆದನು.

# ಮೂವತ್ತೆರಡನೆಯ ಸಂಧಿ

ಸೂಚನೆ॥ ಗಜದಳವನೊರಸಿದನು ಪವನಾ । ತ್ಮಜನು ಪರಸೈನ್ಯದ ಸುದರ್ಶನ
ಗಜವ ಮುಱಿದು ಮಹೋದರನ ಕೆಡಹಿದನು ಕಲಿನೀಲ

ದಶರಥಾತ್ಮಜಸೂನು ಕೇಳ್ ಸುರ । ರೊಸಗೆವಱೆ ಮೊಳಗಿದವು ಹನುಮನ
ಹೊಸಪರಿಗೆ ಪರಬಲದೊಳುಬ್ಬರಿಸಿದವು ಪಟಹಚಯ
ಕೊಸರುಗಹಳೆಯ ಸಬುದ ಸದೆದೆ । ಬ್ಬಿಸಿದವಿವರನು ತರುಶಿಲೋಚ್ಚಯ
ವಿಸರಪಾಣಿಗಳೋರಣಿಸಿ ಮೋಹಿದರು ಸಂಗರಕೆ ೧

ತವಕದಲಿ ತರುಶೈಲಸಂಗದ । ಬವರಿಗರ ಬಲದೊಳಗೆ ಸಾಮೋ
ದ್ಭವ ಘಟಾವಳಿ ಕವಿದುದಾ ಘನಘಟೆಯ ಕಡುಹಿನಲಿ
ಸ್ರವಿಸುವಗ್ಗದ ಗಂಡಮದಜಲ । ದವಿರಳದಲಿಳೆ ನನೆಯೆ ಬರಿಕೈ
ಯವತರಣದ ಜಲೌಘ ಮುಳುಗಿಸೆ ಸುರರ ಸಂದಣಿಯ ೨

ಆರು ನಿಲಬಹುದಮಮ ರಾಕ್ಷಸ । ವಾರಣದ ವೈಹಾಳಿಯಲಿ ಮದ
ನಾರಿಯಲಿ ಮಾಱಾಂತ ಮದಗರ್ವಿತ ಗಜಾಸುರನ
ವೀರತನ ಶತಕೋಟಿಮುಖದಲಿ । ಸೇರಿತೋ ಶುಂಡಾಲಕುಲಕಿನ
ಲಾರುಭಟೆಗಳ ಜೋದರೋಜೆಯಲೇಱಿತುರವಣಿಸಿ ೩

ಸೂಚನೆ॥ ಮಾರುತಿಯು ಆನೆಯ ದಳವನ್ನು ಅಳಿಸಿಬಿಟ್ಟನು. ಶತ್ರುಸೈನ್ಯದ ಸುದರ್ಶನವೆಂಬ ಆನೆಯನ್ನು ಕೊಂದು ನೀಲನು ಮಹೋದರನ ಪ್ರಾಣವನ್ನು ತೆಗೆದನು. ೧. ದಶರಥಪುತ್ರನ ಕುಮಾರನೇ, ಕೇಳು. ಹನುಮಂತನ ಹೊಸ ರೀತಿಯನ್ನು ಕಂಡು ದೇವತೆಗಳ ಮಂಗಳವಾದ್ಯಗಳು ಬಾಜಿಸಿದವು. ರಾಕ್ಷಸರ ಸೈನ್ಯದಲ್ಲಿ ನಗಾರಿಗಳು ಭೋರ್ಗರೆದವು. ಶತ್ರುಗಳ ಭೋರಿಡುವ ಕಹಳೆಯ ಶಬ್ದವು ವಾನರರನ್ನು ಹೊಡೆದೆಬ್ಬಿಸಿದವು. ಮರ ಮತ್ತು ಬಂಡೆಗಳನ್ನು ಕೈಗಳಲ್ಲಿ ಸಿದ್ಧಪಡಿಸಿಕೊಂಡು ವಾನರಸೈನ್ಯವು ಯುದ್ಧದಲ್ಲಿ ತೊಡಗಿತು. ೨. ಬೆಟ್ಟ ಮರಗಳನ್ನು ಹಿಡಿದು ಯುದ್ಧ ಮಾಡಲು ಕಾತುರರಾಗಿದ್ದ ಕಪಿವೀರರ ಮಧ್ಯಕ್ಕೆ ಭಾರಿ ಮೋಡ ನುಗ್ಗಿಬರುವಂತೆ ಆನೆಗಳ ಸೈನ್ಯವು ನುಗ್ಗಿತು. ಆನೆಗಳ ಕಪೋಲಸ್ಥಳದಿಂದ ಒಂದೇಸಮನೆ ಮದಜಲವು ಇಳಿದು ಭೂಮಿ ನೆನೆಯಿತು. ಆನೆಗಳು ಸೊಂಡಿಲುಗಳನ್ನೆತ್ತಿ ಬರಿದುಮಾಡಿದ ನೀರಿನ ಪ್ರವಾಹವು ದೇವತೆಗಳನ್ನು ಮುಳುಗಿಸಿತು. ೩. ರಾಕ್ಷಸರ ಆನೆಗಳ ನುಗ್ಗುವಿಕೆಯನ್ನು ಎದುರಿಸಿ ಯಾರು ನಿಲ್ಲಬಹುದು ? ಈಶ್ವರನನ್ನು ಪ್ರತಿಭಟಿಸಿದ ಮದಿಸಿದ ಗಜಾಸುರನ ಪ್ರತಾಪವು ನೂರುಕೋಟಿಯ ಅಳತೆಯಲ್ಲಿ ಈ ಆನೆಗಳನ್ನು ಸೇರಿತೋ ಎನ್ನುವಂತೆ

ಗಜಘಟೆಯು ಕಾಲ್ದುಳಿಗೆ ಹೆಡೆಯಜಿ । ಗಿಜಿಗಳಾದವು ವಾಸುಗಿಯ ಕಾ
ಳಿಜವನೋಕರಿಸಿದವು ಕಕುಭಮದೇಭ ಕೂರುಮನ
ಭಜಿಸಿತಗ್ಗದ ಮೂರ್ಛೆ ಕಂಪಿಸಿ । ತಜನ ನಗರದ ಮೇಲುಗಡೆ ಪದ
ರಜದೊಳದ್ದುದು ಭುವನವೆನಲುರವಣಿಸಿತಿಭಸೇನೆ ೪

ಇಡುವ ಗಿರಿಗಳನಣೆವುತಾಕುವ । ಗಿಡುಮರನ ಸೆಳೆಸೆಳೆದು ಬಿಸುಡುತ
ಬಿಡುವರಿಯು ಬೀದಿಗಳಲಟ್ಟಿದವಖಿಳ ಕೊಲೆಗಳಲಿ
ಕಡುಗಿ ಕುಧರಕುಲಂಗಳಿಂದ್ರನ । ಪಡೆಯ ಪಡಲಿಡೆ ಕೊಲುವವೊಲು ಕಪಿ
ಪಡೆಯ ಕೊಂದವು ಕೋಟಿಸಂಖ್ಯೆಯುಲಾ ಮದೇಭಚಯ ೫

ಕಿತ್ತುಹಾಯ್ಕಿದವಟ್ಟಿ ಮೆಟ್ಟಿ ವಿ । ಯತ್ತಳಕೆ ತರುಮೃಗದ ತಲೆಗಳ
ಕತ್ತರಿಸಿದವು ಖಂಡೆಯದ ಕಾಹುರದ ಹೊಯ್ಲಿನಲಿ
ತೆತ್ತಿಸಿದ ಸೂನಗಿಯಲಿಬೀದಿಜೀ । ದತ್ತಲಿತ್ತಲು ಕೆದಜೀ ಪದನಖ
ದೊತ್ತುಗಳಲುಗುಳಿಸಿದವಸುಗಳನಸಮ ಕಪಿಭಟರ ೬

ತೂಳಿ ಮೇಲ್ವಾಯ್ದುದುವ ಕಪಿಗಳ । ಸೀಳಿದವು ಸಂಧಿಸುವ ಸುಭಟರ
ಬೀಳಲೊದೆದವು ಬೆಂಬಳಿಯುಲೌಕುವ ವನೇಚರರ
ಬಾಲದಲಿ ಬೀಸಿದವು ಬಿರುದಿನ । ತೋಳುವಲರನು ಮುಜೀಮುಜೀದು ಹಿಂ
ಗಾಲ ಹಿಡಿದಿಡುಕಿದವು ಗಗನಕೆ ಕೋಟಿಸಂಖ್ಯೆಯಲಿ ೭

ಗದ್ದಲಮಾಡುತ್ತ ಯೋಧರು ಕ್ರಮವಾಗಿ ಆನೆಗಳನ್ನೇರಿದರು. ೪. ಆನೆಯ ಸೈನ್ಯದ ಕಾಲಿನ ತುಳಿತಕ್ಕೆ ಆದಿಶೇಷನ ಹೆಡೆಗಳು ಅಜಿಗಿಜಿಯಾದವು ; ದಿಗ್ಗಜಗಳು ಪಿತ್ತರಸವನ್ನು ವಾಂತಿಮಾಡಿಕೊಂಡವು ; ಕೂರ್ಮನು ಮೂರ್ಛೆಹೋದನು ; ಬ್ರಹ್ಮನ ಪಟ್ಟಣದ ಮೇಲುಗಡೆಯು ನಡುಗಿತ್ತು ; ಕಾಲ್ಧೂಳಿನಿಂದ ಜಗತ್ತು ಮುಚ್ಚಿಹೋಯಿತು. ೫. ಮದಿಸಿದಾನೆಗಳು ವಾನರರು ಹೊಡೆಯುವ ಬೆಟ್ಟಗಳನ್ನು ತಿವಿದೆಸೆಯುತ್ತ, ಗಿಡ ಮರಗಳನ್ನು ಕಿತ್ತು ಕಿತ್ತು ಬಿಸಾಡುತ್ತ, ಬಿಡುಬೀಸಾದ ಬೀದಿಗಳಲ್ಲಿ ನುಗ್ಗಿ ಸಮಸ್ತರನ್ನೂ ಅಟ್ಟಿ ಕೊಲ್ಲುತ್ತ ಬಂದವು. ಪರ್ವತಗಳ ಸಮೂಹವು ಮೇರೆ ಮೀರಿ ಇಂದ್ರನ ಸೈನ್ಯದ ಮೇಲೆ ಬಿದ್ದು ಕೊಲ್ಲುವಂತೆ ಆ ಮದಿಸಿದಾನೆಗಳು ಕಪಿಸೈನ್ಯವನ್ನು ಕೋಟಿ ಸಂಖ್ಯೆಯಲ್ಲಿ ಕೊಂದವು. ೬. ರಾಕ್ಷಸರ ಆನೆಗಳು ಕಪಿಗಳನ್ನು ಅಟ್ಟಿಸಿಕೊಂಡು ಹೋಗಿ ಮೆಟ್ಟಿ ಆಕಾಶಕ್ಕೆ ಕಿತ್ತೆಸೆದವು ; ಸೊಂಡಿಲಿಗೆ ಕಟ್ಟಿದ ಕತ್ತಿಗಳನ್ನು ರಭಸದಿಂದ ಬೀಸಿ ವಾನರರ ತಲೆಗಳನ್ನು ಕತ್ತರಿಸಿಹಾಕಿದವು ; ಕಾಲು ಸೊಂಡಿಲು ಮೊದಲಾದುವುಗಳಿಗೆ ಕಟ್ಟಿದ ಬಾಕುಗಳಿಂದ ಇರಿದಿರಿದು ಅತ್ತ ಇತ್ತ ಎಸೆದವು ; ಕಾಲಿನ ಉಗುರುಗಳಿಂದ ಮೆಟ್ಟಿ ಕಪಿವೀರರ ಪ್ರಾಣಗಳನ್ನು ಹೊರಹೊರಡಿಸಿದವು. ೭. ರಾಕ್ಷಸರ ಆನೆ ಗಳು ಮುನ್ನುಗ್ಗಿ ಮೇಲೆ ಬೀಳುವ ಕಪಿಗಳನ್ನು ಸೀಳಿಹಾಕಿದವು ; ವೀರರನ್ನು ಕೆಳಕ್ಕೆ ಬೀಳುವಂತೆ ಒದೆದುವು ; ಹಿಂದುಗಡೆಯಿಂದ ಮುತ್ತುವ ವಾನರರನ್ನು ಬಾಲ ದಿಂದ ಬೀಸಿ ಹೊಡೆದವು ; ಬಿರುದಿನ ಬಲಶಾಲಿಗಳನ್ನು ಮುರಿಮುರಿದು ಅವರ

ಎಸುವ ಜೋದರನಾಳಿಯಂಬಿಗೆ । ಕುಸಿಕಿಱಿದು ಗಿರಿಗಟ್ಟಿ ಹಲುಗಳ
ಹಸರಿಸಿದವಲ್ಲಲ್ಲಿ ಬಲ್ಲಿದ ಭಲ್ಲುಕವ್ರಾತ
ಮುಸಲ ಮುದ್ಗರ ಪರಿಘ ಗದೆಗಳ । ಗಸಣಿವೊಯ್ಲಿಗೆ ಬಿದ್ದ ಕೋಡಗ
ಮುಸುಗಳಿಗೆ ಕಡೆಯಾವುದೆಂಬುದನಱಿಯೆ ತಾನೆಂದ ೮

ತುಱುಗಿ ತೂಳುವ ಮತ್ತವಾರಣ । ದುಱುಬೆಗಾಱದೆ ವೀರ ಹನುಮನ
ಮಱಿಯ ಹೊಕ್ಕುದು ಭೂರಿವಾನರಸೇನೆ ಪೈಸರಿಸಿ
ಮೊಱನ ಬಡಿತಕೆ ಸಿಡಿಲು ಭಯದಲಿ । ಬಿಱಿತು ಹಾಯ್ವುದೆ ಹೊಕ್ಕನಾಕ್ಷಣ
ಕುಱಿಯಹಿಂದಿನ ತೋಳನವೊಲುಬ್ಬಾಳು ಕಲಿಹನುಮ ೯

ಆವುದಾನುವುದೈ ಕನಲ್ದಾ । ಪಾವಮಾನಿಯ ಕೊಲೆಗೆ ರಿಪುಗಳ
ಜೀವಹಿಂಸೆಗೆ ಹೇಸದವನೊಬ್ಬನೆ ಕಣಾ ಜಗಕೆ
ದೇವತತಿ ಬೆಱಗಾಗೆ ಮದದಂ । ತಾವಳಿಯ ಬೆರಸಿದನು ಗಜರಿಪು
ರಾವದಲಿ ರಜನೀಬಲವ ರವಿ ಬೆರಸುವಂದದಲಿ ೧೦

ಜಡಿದು ಜೋದರು ಸಹಿತ ಕರಿಗಳ । ಹಿಡಿಕೆಯಲಿ ನುಗ್ಗೊತ್ತಿದನು ನೆಲ
ಕಡಸಿ ಸೀಡಿದ ಮತ್ತ ಶತಸಾವಿರ ಮದೇಭಗಳ
ಮದದ ಹೊಯ್ಲಲಿ ಲಕ್ಕಸಂಖ್ಯೆಯ । ನೊಡಬಡಿದನುಬ್ಬಿಱಿದು ಬಾಲದ
ತೊಡಕಿನಲಿ ತೂಱಿದನು ಐಂಕೋಟಾನುಕೋಟಿಗಳ ೧೧

ಹಿಂಗಾಲನ್ನು ಹಿಡಿದು ಕೋಟಿಸಂಖ್ಯೆಯಲ್ಲಿ ಆಕಾಶಕ್ಕೆ ಎಸೆದವು. ೮. ಬಾಣಬಿಡುವ ರಾಕ್ಷಸಯೋಧರ ನಾಳಿ ಬಾಣಕ್ಕೆ ಬಲಶಾಲಿ ಕರಡಿಗಳ ಸಮೂಹವು ಕುಸಿದು ಬಿದ್ದು ಹಲ್ಲುಗಳನ್ನು ಗಿಟಕಿರಿಸಿಕೊಂಡು ಅಲ್ಲಲ್ಲಿ ಉರುಳಿದವು. ಮುಸಲ, ಮುದ್ಗರ, ಪರಿಘ, ಗದೆ ಮೊದಲಾದ ಆಯುಧಗಳ ಕಠಿಣ ಹೊಡೆತಕ್ಕೆ ಬಿದ್ದ ಕೋಡಗ ಮತ್ತು ಮುಸುಗಳಿಗೆ ಕೊನೆ ಯಾವುದೆಂಬುದನ್ನು ನಾನರಿಯೆ ಎಂದರು ವಾಲ್ಮೀಕಿಗಳು. ೯. ಗುಂಪಾಗಿ ಬಂದು ಮುತ್ತುವ ಮದಿಸಿದಾನೆಗಳ ರಭಸವನ್ನು ತಾಳಲಾರದೆ ವಾನರಸೈನ್ಯವು ಹಿಮ್ಮೆಟ್ಟಿ ವೀರಹನುಮಂತನ ಮರೆಹೊಕ್ಕಿತು. ಮೊರದ ಹೊಡೆತಕ್ಕೆ ಸಿಡಿಲು ಭಯದಿಂದ ಕಂಗೆಟ್ಟು ಓಡುವುದೆ ? ಕುರಿಯ ಹಿಂದಿನ ತೋಳಿನಂತೆ ಹುರುಪಿನ ವೀರ ಹನುಮಂತನು ಆನೆಗಳ ಸೈನ್ಯದೊಳಕ್ಕೆ ಪ್ರವೇಶಿಸಿದನು. ೧೦. ಮಾರುತಿಯು ಕೊಲ್ಲಲಾರಂಭಿಸಿದರೆ ಯಾವುದು ತಾನೆ ಎದುರು ನಿಲ್ಲಬಲ್ಲುದು ? ಜಗತ್ತಿನಲ್ಲಿ ಶತ್ರುಗಳ ಜೀವಹಿಂಸೆಗೆ ಹೇಸದವನು ಅವನೊಬ್ಬನೇ ! ದೇವತೆಗಳು ಚಕಿತರಾಗಲು ಕತ್ತಲೆಯ ಮೊತ್ತದೊಳಕ್ಕೆ ಸೂರ್ಯನು ಪ್ರವೇಶಿಸುವಂತೆ ಹನುಮಂತನು ಸಿಂಹನಾದ ಮಾಡುತ್ತ ಮದ್ದಾನೆಗಳ ಸೈನ್ಯವನ್ನು ಹೊಕ್ಕನು. ೧೧. ಹನುಮಂತನು ಮಾವಟಿಗರ ಸಮೇತ ಆನೆಗಳನ್ನು ಸೆಳೆದು ಹಿಡಿದು ಪುಡಿಪುಡಿಯಾಗುವಂತೆ ನೆಲಕ್ಕೆ ಬಡಿದನು, ಪುನಃ ನೂರು ಸಾವಿರ ಮದದಾನೆಗಳನ್ನು ಹಿಡಿದು ನೆಲಕ್ಕೆ ಉಜ್ಜಿಹಾಕಿದನು. ಹಿಮ್ಮಡಿಯ ಹೊಡೆತದಿಂದ ಲಕ್ಷ ಆನೆಗಳನ್ನು ಒಟ್ಟಿಗೆ ಬಡಿದುಹಾಕಿದನು. ಹಿಗ್ಗಿನಿಂದ ಆರ್ಭಟಿಸುತ್ತ

ಬೀಸಿ ಬಿಸುಟ ಮದೇಭ ಮಾರುತ । ಪಾಶದಲಿ ಸಿಲುಕಿದವು ಕೆಲವು ಸು
ರೇಶನಾನೆಯನೈದಿದವು ಕೆಲಕೆಲವು ದಿಗಧಿಪರ
ದೇಶವನು ಸಾರಿದವು ಘನವಾ । ರಾಶಿಯೊಳು ಬಿದ್ದಿಭಕುಲಂಗಳು
ಭೂಸುತಾಸುತ ಕೇಳು ಗಜಗತವಾದವಗಲದಲಿ ೧೨

ಹೋದವಾ ಗಜ ಮುಗಿಲ ಮುತ್ತಿಗೆ । ಹೋದ ಶಿಶಿರಾಂಬರದವೊಲು ನೆಲ
ನಾದುದರೆನಿಮಿಷದಲಿ ಕಯ್ಗಾಯದಲಿ ಪವನಜನ
ಬೀದಿಯಲ್ಲದೆ ಬವರಕಾನುವ । ಕೈದುಕಾಱರ ಕಾಣೆ ಬಳಿಕ ಮ
ಹೋದರನ ಗಜ ತಡೆದುದೀತನ ಕಡುಹಿನುಬ್ಬಟೆಯ ೧೩

ಏನದಕೆ ಸುರಪತಿಯ ದಂತಿಸ । ಮಾನವೆಂಬಡದಲ್ಪ ದಿಕ್ಕುಗ
ಳಾನೆಗಳ ಪಡಿಗಟ್ಟ ತೂಗಲು ತೂಕಕವು ಕಿಱಿದು
ಆ ನಿಶಾಟಂಗಾ ದಿಶಾಧಿಪ । ರಾನಿಕೆಗೆ ಕಡುಹೀಗಲನಿಲಜ
ನಾನುವುದು ಕಡುಚಿತ್ರವೆಂದುದು ಮೇಲೆ ಸುರಕಟಕ ೧೪

ತವಕಿಸಿದುದಾ ದಂತಿ ದಂತಿಯ । ಜವಗತಿಗೆ ಜವಗುಂದಿದರು ಬಲು
ಭುವನಕೋಶದ ಹೊರೆಯ ಹೊಱಿಗೆಯ ಹೊಂತಕಾಱಿಗಳು
ಬವರಧಗ್ಗದ ಗಜದ ಪದಹತಿ । ಗವನಿ ಮುಂದಕೆ ತಗ್ಗುತಿರ್ದುದು
ಭುವನನಿಧಿ ತುಳುಕಾಡುತಿರ್ದುದು ಹೇಳಲೇನೆಂದ ೧೫

ಕೋಟ್ಯಾನುಕೋಟಿ ಆನೆಗಳನ್ನು ಬಾಲದಲ್ಲಿ ಸುತ್ತಿ ತೂರಿಬಿಟ್ಟನು. ೧೨. ಹನುಮಂತನು ಬೀಸಿ ಎಸೆದ ಮದದಾನೆಗಳು ಕೆಲವು ಬಿರುಗಾಳಿಯ ಸುಳಿಗೆ ಸಿಕ್ಕಿಕೊಂಡವು ; ಮತ್ತೆ ಕೆಲವು ದೇವೇಂದ್ರನ ಐರಾವತದ ಸಮೀಪದಲ್ಲಿ ಬಿದ್ದುವು ; ಇನ್ನು ಕೆಲವು ದಿಕ್ಕುಗಳ ಒಡೆಯರ ದೇಶವನ್ನು ಸೇರಿದವು. ಜಾನಕೀಸುತನೇ, ಕೇಳು. ಸಾಗರದಲ್ಲಿ ಬಿದ್ದ ಆನೆಗಳಿಂದಾಗಿ ಅಷ್ಟಗಲವೂ ಆನೆಗಳಮಯವಾಯಿತು. ೧೩. ಮೋಡದ ಮುತ್ತಿಗೆಯು ಹಿಂತೆಗೆದ ಚಳಿಗಾಲದ ಆಕಾಶದಂತೆ ಆನೆಗಳು ಬರಿದಾದವು. ಹನುಮಂತನ ಏಟಿನಿಂದ ಗಾಯಗೊಂಡ ಆನೆಗಳಿಂದ ನೆಲ ತುಂಬಿಹೋಯಿತು. ಯುದ್ಧರಂಗವೆಲ್ಲ ಬಯಲಾಯಿತು; ಯುದ್ಧ ಮಾಡಲು ಎದುರಿಸುವ ಯೋಧರು ಕಾಣಿಸಲಿಲ್ಲ. ಆಗ ಮಹೋದರನ ಆನೆಯು ಬಂದು ಹನುಮಂತನ ಪರಾಕ್ರಮದ ಹಾವಳಿಯನ್ನು ತಡೆಯಿತು. ೧೪. 'ಮಹೋದರನ ಆನೆಗೆ ದೇವೇಂದ್ರನ ಐರಾವತವು ಸಮಾನವೆನ್ನಲು ಅದು ಕಡಮೆ. ದಿಗ್ಗಜಗಳನ್ನೂ ಮಹೋದರನ ಆನೆಯನ್ನು ತಕ್ಕಡಿಯಲ್ಲಿ ತೂಕಕ್ಕೆ ಹಾಕಿದರೆ ದಿಗ್ಗಜಗಳ ತೂಕ ಕಡಿಮೆ. ಆ ಮಹೋದರನನ್ನು ಎದುರಿಸುವುದು ದಿಕ್ಪತಿಗಳನ್ನು ಎದುರಿಸುವುದಕ್ಕಿಂತ ಕಠೋರ ಹನುಮಂತನು ಅವನನ್ನು ಎದುರಿಸುವುದು ಬಹಳ ಆಶ್ಚರ್ಯ!' ಎಂದು ಆಕಾಶದಲ್ಲಿದ್ದ ದೇವತೆಗಳು ಮಾತಾಡಿಕೊಂಡರು. ೧೫. ಮಹೋದರನ ಆನೆಯು ಮುನ್ನುಗ್ಗಲು ಆತುರಪಟ್ಟಿತು. ಆನೆಯ ಯಮನಡಿಗೆಗೆ ಭೂಮಿಯನ್ನು ಹೊರುವ ಹೊಣೆಗಾರಿಕೆ ಹೊತ್ತ ಶಕ್ತಿವಂತರು ಬಲಗುಂದಿದರು. ಯುದ್ಧದಾನೆಯ ಹೆಜ್ಜೆಯ

ಕರಿಯು ನಿಶಿತಾಂಕುಶದಿನವನುಜಿ । ಕೆರಳಿಚುತ ನೂಕಿದನು ಹನುಮನ
ಸರಿಸದಲಿ ಬಳಿಕಾ ಸುದರ್ಶನಭದ್ರ ಮದದಂತಿ
ಭರದ ಬರಿಕೈಯಿಂದ ಪವನಜ । ನುರವನೆಜಗಲು ಪ್ರತಿಸಬುದ ಸುರ
ಗಿರಿಯೊಳಾದುದು ನೊಂದನನಿಲಜ ನೆನೆದು ದಶಶಿರನ ೧೬

ತರಹರಿಸಿಕೊಂಡನಿಲಸುತನಾ । ಕರಿಗೆ ಕೈಯಿಕ್ಕಿದನು ದೂರ್ಜಟಿ
ಕರಿವೆಸರ ಬಲುರಕ್ಕಸಗೆ ಕೈಯಿಕ್ಕುವಂದದಲಿ
ಹರುಹನದನಾ ಖಳನಜಿತು ಬಲು । ವರುಣಪಾಶದಲೀತನನು ಬಿಗಿ
ದುರುಳಿಸಿದನಟ್ಟಿದನು ಮುಂದಣ ಘಟ್ಟನತಿಬಲರ ೧೭

ಮಸಗಿದುದು ಬಳಿಕೀ ಮಹಾಂಕುಶ । ನಿಶಿತ ಧಾರಾಹತಿಗೆ ರಣದಲಿ
ಘಸಣಿಗೊಂಡಜಿಯಟ್ಟಿ ಬೀಸಿತು ಕರದ ಖಂಡೆಯುವ
ಮುಸುಕಿಬಿದ್ದ ಮಹಾದ್ರಿಗಳ ಹುಡಿ । ಮಸಗೆ ದಾಡೆಯುಲಿಹೆದು ತಲೆಗಳ
ಸಸಿದು ಹಾಯ್ಕಿತು ಜಾರಿವರಿದಿಭ ಕಳನೊಳಗಲದಲಿ ೧೮

ಮೆಟ್ಟಿ ಸೀಳಿತು ಮುಸಕಿ ದಾಡೆಯೊ । ಳಟ್ಟಿ ತಿವಿದುದು ಹೆಣನ ಬಣಬೆಯ
ನೊಟ್ಟಿದುದು ಕಟ್ಟಿದುದು ರುಧಿರಾಂಬುಧಿಗೆ ಸೇತುವನು
ಜಟ್ಟಿಗರ ರಣಭೈರವರನಜಿ । ಯಟ್ಟಿದುದು ಯಮಕಿಂಕರರನೆ
ಟ್ಟಟ್ಟಿದುದು ಕಕ್ಕಳಿಸಿದುದು ಮಲೆತಿಭಕೆ ಸುರಪತಿಯು ೧೯

ತುಳಿತಕ್ಕೆ ಭೂಮಿಯು ಮುಂದಕ್ಕೆ ತಗ್ಗುತ್ತಿತ್ತು, ಸಮುದ್ರವು ತುಳುಕಾಡುತ್ತಿತ್ತು. ಅದನ್ನು ಏನೆಂದು ವರ್ಣಿಸಲಿ ಎಂದರು ವಾಲ್ಮೀಕಿಗಳು. ೧೬. ಮಹೋದರನು ಆನೆಯನ್ನು ಹರಿತವಾದ ಅಂಕುಶದಿಂದ ತಿವಿದು ಕೆರಳಿಸಿ ಹನುಮಂತನ ಎದುರಿಗೆ ನುಗ್ಗಿಸಿದನು. ಅನಂತರ ಆ ಸುದರ್ಶನವೆಂಬ ಭದ್ರಗಜವು ಸೊಂಡಿಲಿನಿಂದ ರಭಸವಾಗಿ ಹನುಮಂತನ ಎದೆಗೆ ಹೊಡೆಯಲು ಆ ಶಬ್ದವು ಮೇರುಪರ್ವತದಲ್ಲಿ ಪ್ರತಿಧ್ವನಿಸಿತು. ರಾವಣನನ್ನು ನೆನೆಸಿಕೊಂಡು ಹನುಮಂತನು ನೊಂದನು. ೧೭. ಹನುಮಂತನು ಸೈರಿಸಿಕೊಂಡು ಶಿವನು ಗಜಾಸುರನನ್ನು ಹಿಡಿಯುವಂತೆ ಸುದರ್ಶನವೆಂಬ ಆನೆಗೆ ಕೈ ಹಾಕಿದನು. ಅವನ ಯೋಚನೆಯನ್ನು ಅರಿತ ಮಹೋದರನು ವರುಣಪಾಶದಿಂದ ಹನುಮಂತನನ್ನು ಕಟ್ಟಿಹಾಕಿ ಉರುಳಿಸಿದನು. ಅನಂತರ ಮುಂದುಗಡೆಯಲ್ಲಿದ್ದ ಸೈನ್ಯದ ಕಪಿವೀರರನ್ನು ಓಡಿಸಿದನು. ೧೮. ಮಹಾ ಅಂಕುಶದ ಹರಿತ ಮೊನೆಯ ಏಟಿಗೆ ಆನೆಯು ಕೆರಳಿತು. ಘಾಸಿಗೊಂಡ ಆನೆಯು ಕಪಿಗಳನ್ನು ಅಟ್ಟಿಸಿಕೊಂಡು ಹೋಗಿ ಸೊಂಡಿಲಿಗೆ ಕಟ್ಟಿದ ಖಡ್ಗವನ್ನು ಬೀಸಿತು. ಕಪಿಗಳು ಎಸೆದ ದೊಡ್ಡ ಬೆಟ್ಟಗಳನ್ನು ದಂತದಿಂದ ಕುಟ್ಟಿ ಪುಡಿಮಾಡಿ ಯುದ್ಧರಂಗದಲ್ಲಿ ಯುಕ್ತಿಯಿಂದ ಚಲಿಸುತ್ತ ಕಪಿಗಳ ತಲೆಗಳನ್ನು ಕತ್ತರಿಸಿ ಹಾಕಿತು. ೧೯. ಸುದರ್ಶನಗಜವು ರೇಗಿ ವಾನರರನ್ನು ತುಳಿದು ಸೀಳಿಹಾಕಿತು, ದಂತದಿಂದ ಅಟ್ಟಿಸಿಕೊಂಡು ಹೋಗಿ ತಿವಿದು ಕೊಂದಿತು, ಹೆಣಗಳ ರಾಶಿ ಹಾಕಿ ರಕ್ತದ ಸಾಗರಕ್ಕೆ ಸೇತುವೆಯನ್ನು ಕಟ್ಟಿತು. ಜಟ್ಟಿಗಳನ್ನೂ ರಣಭಯಂಕರರನ್ನೂ ಹೊಡೆದೋಡಿಸಿತು. ಸತ್ತವರ ಪ್ರಾಣಗಳನ್ನು ತೆಗೆದುಕೊಂಡು ಹೋಗಲು ಬಂದಿದ್ದ

ಆರು ನಿಲಬಹುದದಮುಮ ದಂತಿಯು । ಭಾರಣೆಯ ಬಲುಗೊಲೆಗೆ ಹೊಕ್ಕುದು
ವಾರಿಜಪ್ರಿಯನಂದನನ ಸೇನಾ ಸರೋವರವ
ಚೂರಿಸುವ ಖಂಡೆಯುದ ಸುಂಡಿಲ । ಹಾರದಲಿ ಬಹುವಿಧದ ಕೊಲೆಯಲಿ
ಕಾರಗಲಿಸಿದುದಖಿಳ ಕಪಿವಾರಿಜಕದಂಬಕವ ೨೦

ನೆಗಹಿ ಹಾಯ್ಕಿತು ಶತಬಲಿಯ ಕರು । ಳುಗಿಯೆ ಮೆಟ್ಟಿತು ದುರ್ಮುಖನ ತಲೆ
ಚಿಗಿಯಲೊದೆದುದು ವೀರ ಗೋಲಾಂಗೂಲ ಪ್ರತಿಭಟರ
ಅಗಿದುದಣಲಲಿ ಧೂಮ್ರವಕ್ತ್ರನ । ನುಗುಳಿಸಿತು ರುಧಿರವನು ಮೈಂದನ
ಚಿಗುಳಿದುಳಿದುದು ಮಿಕ್ಕ ಹಳಚುವ ಮರ್ಕಟವ್ರಜವ ೨೧

ಕಪಿಬಲವೊ ಕೂಷ್ಮಾಂಡವಲ್ಲಿಯ । ವಿಪುಳಫಲವನವೋ ಮಹೋಗ್ರ
ದ್ವಿಪದ ಪದಹತಿಗಿಱಿದುದರ್ಬುದಸೇನೆ ನಿಮಿಷದಲಿ
ಉಪಕರಿಸಿದುದು ಮೃತ್ಯುವಿಗೆ ಕಡು । ಕೃಪೆಯ ಮಾಡಿತು ಮಾಂಸಭೋಜನ
ದಪರಿಮಿತಭೂತಕೆ ಸುದರ್ಶನಭದ್ರಮದದಂತಿ ೨೨

ಮತ್ತೆ ಕವಿದರು ನಳ ಸುಷೇಣರು । ಮತ್ತದಂತಿಯ ಮೇಲೆ ಹೆಮ್ಮರ
ವೊತ್ತಗಳ ಹೆಗ್ಗಿರಿಯ ಬಿಱುಬಿನ ಘೋರಘೋಷದಲಿ
ಸತ್ತ ಸಾವನು ಲೆಕ್ಕಿಸದೆ ತಲೆ । ಯೊತ್ತಿದರು ಮುಂಭಾಗದಲಿ ದಿಗು
ಭಿತ್ತಿ ಬಿರಿಯಲು ಸುಮುಖ ದುರ್ಮುಖರಖಿಳ ಬಲಸಹಿತ ೨೩

ಯಮನ ಸೇವಕರನ್ನು ಅಟ್ಟಿ ಓಡಿಸಿತು. ಸುದರ್ಶನವು ದೇವೇಂದ್ರನ ಆನೆ ಐರಾವತವನ್ನು ಕೋಪದಿಂದ ದುರುಗುಟ್ಟಿಗೊಂಡು ನೋಡಿತು. ೨೦. ಆನೆಯ ಭಾರಿಕೊಲೆಗೆಲಸದ ಎದುರಿಗೆ ಯಾರು ನಿಲ್ಲಬಹುದು ? ಆನೆಯು ಸೂರ್ಯಪುತ್ರ ಸುಗ್ರೀವನ ಸೇನಾ ಸರೋವರವನ್ನು ಪ್ರವೇಶಿಸಿತು. ವಿನಾಶಕರ ಸೊಂಡಿಲಿನ ಖಡ್ಗದ ಹಾರದಿಂದ ಅನೇಕ ರೀತಿಯಲ್ಲಿ ಕೊಂದು ಕಪಿಕಮಲಸಮೂಹವನ್ನು ಧ್ವಂಸಮಾಡಿತು. ೨೧. ಆನೆಯು ಶತಬಲಿಯನ್ನು ಎತ್ತಿಹಾಕಿತು, ದುರ್ಮುಖನ ಕರುಳು ಕಡೆಯುವಂತೆ ತುಳಿಯಿತು, ವೀರವಾನರಯೋಧರ ತಲೆಹಾರಿ ಹೋಗುವಂತೆ ಒದೆಯಿತು, ಧೂಮ್ರ ವಕ್ತ್ರನನ್ನು ದವಡೆಯಲ್ಲಿ ಅಗಿದುಹಾಕಿತು, ಮೈಂದನಿಂದ ರಕ್ತವನ್ನು ಉಗುಳಿಸಿತು, ಇದರ ಮೇಲೆ ಪ್ರತಿಭಟಿಸಿದ ವಾನರ ಸಮೂಹವನ್ನು ಚಿಗುಳಿಉಂಡೆಯನ್ನು ತುಳಿಯುವಂತೆ ತುಳಿದುಹಾಕಿತು. ೨೨. ಕಪಿಸೈನ್ಯವೋ, ಕುಂಬಳಕಾಯಿಗಳು ಬಿಟ್ಟ ಕುಂಬಳಬಳ್ಳಿಯ ತೋಟವೋ! ಭಯಂಕರ ಆನೆಯ ಕಾಲುಗಳಿಗೆ ಸಿಕ್ಕಿ ಒಂದು ನಿಮಿಷ ದಲ್ಲಿ ಅರ್ಬುದ ವಾನರಸೈನ್ಯವು ಪುಡಿಪುಡಿಯಾಯಿತು. ಸುದರ್ಶನವೆಂಬ ಮದಿಸಿದ ಆನೆಯು ಮೃತ್ಯುವಿಗೆ ಉಪಕಾರಮಾಡಿತು ಮತ್ತು ಅಸಂಖ್ಯಾತ ಭೂತಗಳಿಗೆ ಮಾಂಸದ ಊಟವನ್ನು ಕರುಣಿಸಿತು. ೨೩. ಭಾರಿ ಮರಗಳನ್ನೂ ಭಾರಿಬೆಟ್ಟಗಳನ್ನೂ ಹಿಡಿದು ಜೋರಾಗಿ ಕೂಗುತ್ತ ನಳ ಸುಷೇಣರು ಪುನಃ ಮದದಾನೆಯನ್ನು ಮುತ್ತಿದರು. ಕಪಿ ಸೈನ್ಯದ ಸಾವನ್ನು ಲೆಕ್ಕಿಸದೆ ಸುಮುಖ ದುರ್ಮುಖರು ಸಮಸ್ತ ಸೈನ್ಯ ಸಮೇತ ದಿಕ್ಕು

ಔಕಿದರು ಮೈಂದಾದಿ ಸುಭಟರು । ನಾಕು ಮೈಯಲಿ ಗಜ ಗವಾಕ್ಷಕ
ಪಾಕಶಾಸನ ಪೌತ್ರರೊಂದೆಸೆಯಲಿ ಗಜಾನುಜರು
ನೂಕಿದರು ಮತ್ತೊಂದು ದೆಸೆಯಲಿ । ನೋಕಹದ ಕುಲಪರ್ವತೌಘಾ
ನೀಕಗಳ ಶಬ್ದದಲಿ ಸಮರ ಸುದರುಶನದ್ವಿಪವ ೨೪

ಕಣೆಗಳಾಡಿದವನಿತಜಲಿ ಬಲು । ಗಣೆ ಮಹೋದರನೆಸುಗೆಗಳ ಮಾ
ರ್ಗಣಿಗಳಂಬುಧಿಯೊಳಗೆ ನಿಮ್ಮಯ ಬಲದ ಪಟುಭಟರು
ಮುಣುಗಿದರು ಹರಹಿನಲಿ ಹೃದಯದ । ಹುಣುಗುದಾಗದ ಯೂಥನಾಥಾ
ಗ್ರಣಿಗಳನು ನಾ ಕಾಣೆನಾ ರಕ್ಕಸನ ಕದನದಲಿ ೨೫

ಕೋಲ ಖುರಪುಟ ಕರಿಯ ಕದನಕ । ರಾಳ ಘಟ್ಟಣೆ ಕೂಡೆ ಸಾವಿನ
ಸೂಳುಪಾಳಿನ ಭಟರು ಮುಱಿದರು ಮತ್ತೆ ಸೋಲದಲಿ
ತೂಳಿತಿಭವಱಿಯಟ್ಟಿ ಸಿಕ್ಕಿದ । ಬಾಲದಭಿರಂಜಕರನಂಜದೆ
ಸೀಳಿಹಾಯ್ಕುತ ಬೀದಿವರಿದುದು ಬಲದೊಳಗಲದಲಿ ೨೬

ನೆಲೆಯಱಿದು ದಾಂಟಿದುದು ನೆತ್ತರ । ಹೊಳೆಗಳನು ಹೆಣನೊಟ್ಟಲಿನ ಗಿರಿ
ಗಳನಡರ್ದಿಳಿದುದು ಬಲೀಮುಖ ವಿಪಿನವೀಥಿಯಲಿ
ಹೊಳಕಿದುದು ಹೊಸಮದದ ಗಂಡ । ಸ್ಥಳದ ಗಂಧಕೆ ಕವಿವ ತುಂಬಿಗೆ
ತಲೆಯ ಕೊಡಹುತ ಕದನಕೇಳಿಯಲಿಭ ಮಹೋದರನ ೨೭

ಗಳು ಬಿರಿಯುವಂತೆ ಮುಂದುಗಡೆಯಿಂದ ಆನೆಯ ತಲೆಗೆ ಹೊಡೆದರು. ೨೪. ಯುದ್ಧದಾನೆ ಸುದರ್ಶನವನ್ನು ನಾಕು ಕಡೆಯಿಂದಲೂ ಮೈಂದಾದಿ ವೀರರು ಮುತ್ತಿದರು; ಗಜ, ಗವಾಕ್ಷ, ಇಂದ್ರನ ಮೊಮ್ಮಗ ಅಂಗದರು ಒಂದು ಕಡೆಯಿಂದಲೂ ಗಜನ ಸಹೋದರರು ಇನ್ನೊಂದು ಕಡೆಯಿಂದಲೂ ಮರ ಮತ್ತು ಪರ್ವತಗಳ ಶಬ್ದದೊಡನೆ ಆನೆಯ ಮೇಲೆ ನುಗ್ಗಿದರು. ೨೫. ಮುತ್ತಿದ ಅಷ್ಟುಜನ ಕಪಿನಾಯಕರ ಮೇಲೂ ಬಾಣಗಳು ಬಿದ್ದವು. ಬಾಣಪ್ರಯೋಗಕುಶಲಿ ಮಹೋದರನ ಬಾಣಗಳ ಸಮುದ್ರದಲ್ಲಿ ನಿಮ್ಮ ಸೈನ್ಯದ ಪರಾಕ್ರಮಿಗಳು ಮುಳುಗಿದರು. ಮಹೋದರ ರಾಕ್ಷಸನ ಕಾಳಗದಲ್ಲಿ ಹೃದಯಕ್ಕೆ ಹೆದರಿಕೆ ಹೊಡೆಯದ ಪ್ರಮುಖ ಸೇನಾನಾಯಕರನ್ನು ನಾನು ಕಾಣೆ. ೨೬. ಬಾಣಗಳ ಗುರಿ ತಾಗುವಿಕೆಯ ಜತೆಗೆ ಆನೆಯ ಯುದ್ಧದ ಭಯಂಕರ ಹೊಡೆತ ಎರಡೂ ಸೇರಲು ಸಾವಿನ ಸರದಿಯ ವೀರರು ಸೋತು ಪುನಃ ಓಮ್ಮೆಟ್ಟಿದರು, ಆನೆಯು ಬೆನ್ನಟ್ಟಿಹೋಗಿ ಸಿಕ್ಕಿದ ಬಾಲದ ಕಪಿಗಳನ್ನು ಮುತ್ತಿತು, ಹೆದರದೆ ಯುದ್ಧರಂಗದಲ್ಲಿ ಕಪಿಗಳನ್ನು ಸೀಳಿಹಾಕುತ್ತ ಸ್ವೇಚ್ಛೆಯಾಗಿ ಓಡಾಡಿತು. ೨೭. ಆನೆಯು ಸ್ಥಳದ ರೀತಿಯನ್ನರಿತುಕೊಂಡು ರಕ್ತದ ಹೊಳೆಗಳನ್ನು ದಾಟಿತು, ಹೆಣಗಳ ರಾಶಿಯ ಬೆಟ್ಟಗಳನ್ನು ಏರಿ ಇಳಿಯಿತು. ಮಹೋದರನ ಆನೆಯು ಕಪೋಲದಲ್ಲಿ ಹರಿಯುತ್ತಿದ್ದ ಹೊಸಮದಧಾರೆಯ ವಾಸನೆಗೆ ಮುತ್ತುವ ತುಂಬಿಗಳನ್ನು ಓಡಿಸಲು ತಲೆಯನ್ನು ಕೊಡವುತ್ತ ಯುದ್ಧದಾಟದಲ್ಲಿ ವಾನರರೆಂಬ ಅರಣ್ಯದ ದಾರಿಯಲ್ಲಿ ಕಾಣಿಸಿಕೊಂಡಿತು.

ಅದರೆ ರಣಸಿಂಧುರವು ರಣಪು । ಷ್ಕರಣೆಯಲಿ ಪುಷ್ಕರಕೆ ನಿಜ ಪು
ಷ್ಕರದ ಮುಖದಲಿ ಚೆಲ್ಲಿದುದು ನವರುಧಿರಪುಷ್ಕರವ
ಕರುಳನಾಳ ಮೃಣಾಳಗಳನುಚಿ । ಧರಿಸಿದುದು ದಾಡೆಗಳೊಳಿನಕುಲ
ದರಸನೆಡೆಗವ್ವಳಿಸುತಿರ್ದುದು ಸಮರಕೇಳಿಯಲಿ ೨೮

ಕರಿ ಬಿಜಯಿಸು ಕಾದುವರೆ ಕಪಿಗಳ । ಹರಹು ನಿಂದುದು ಜೀಯ ಹನುಮನ
ಪರಿಯನರಿಯಲು ಬಾರದಳುಕಿತು ನಮ್ಮ ಪರಿವಾರ
ಉರವಣಿಸುತಿದೆ ಮುಂದಕಿಭವಿದು । ಸುರರಿಗಸದಳವೆಂಬ ಹಿಡಿಯೆಂ
ದರಸಗಾ ಹರಿಶರಣ ನುಡಿಯಲು ಕೇಳಿದನು ನೀಲ ೨೯

ಏನು ಕೋಪವೊ ಮನದಿ ಕನಲಿದ । ನಾ ನೃಸಿಂಹನ ರೌದ್ರರೋಷ
ಸ್ವಾನುಭವ ಸಂಘಟಿಸಿದಂತೆ ನರೇಂದ್ರನಿದಿರಿನಲಿ
ಈ ನಿಶಾಟನನೀ ಮದೇಭನ । ನೀ ನಿಮಿಷದೊಳಗಂತಕನ ಪರಿ
ಧಾನಕೀಯದಡೆಲೆ ವಿಭೀಷಣ ನೀಲನಲ್ಲೆಂದ ೩೦

ಎನುತ ಮದಗಜದತ್ತ ಬೊಬ್ಬೆಯ । ನಿನದದಲಿ ತಿರುಗಿದನು ಬಳಿಯಲಿ
ವಿನತ ದಧಿಮುಖ ಕಲಿಸುಷೇಣಕ ಗಜ ಗವಾದಿಗಳು
ಕನಲಿ ಕವಿದರು ಕೋಟಿಸಂಖೆಯ । ವನಚರರ ಮೇಳದಲಿ ಗಿರಿಗಳ
ಘನತರದ ಗಾಢಿಕೆಗಳಲಿ ಗುಮ್ಮುವ ಶಿಲಾಳಿಯಲಿ ೩೧

೨೮. ಅಬ್ಬಬ್ಬ, ಆ ಕಾಳಗದ ಆನೆಯು ಯುದ್ಧವೆಂಬ ಕೊಳದಿಂದ ಹೊಸರಕ್ತವೆಂಬ ನೀರನ್ನು ತನ್ನ ಸೊಂಡಿಲ ತುದಿಯಿಂದ ಆಕಾಶಕ್ಕೆ ಚೆಲ್ಲಿತು ; ಕರಳುನಾಳದ ತಾವರೆಯ ದಂಟುಗಳನ್ನು ದಂತಗಳಲ್ಲಿ ಧರಿಸಿತು ; ಕದನಕ್ರೀಡೆಯಿಂದ ರವಿಕುಲದರಸ ರಾಮನ ಕಡೆಗೆ ಮುನ್ನುಗ್ಗುತ್ತಿದ್ದಿತು. ೨೯. "ಆನೆಯು ಉಗ್ರವಾಗಿದೆ. ಅದರೊಡನೆ ಯುದ್ಧಮಾಡಲು ಕಪಿಗಳ ಸಮೂಹವಿಲ್ಲ. ಸ್ವಾಮಿ, ಹನುಮಂತನ ಸ್ಥಿತಿಯೇನು ಎಂಬುದು ತಿಳಿಯದು, ನಮ್ಮ ಸೈನ್ಯ ಹೆದರಿಕೊಂಡಿದೆ. ಆನೆಯು ಮುಂದಕ್ಕೆ ರಭಸದಿಂದ ಬರುತ್ತಿದೆ. ಅದನ್ನು ತಡೆಯಲು ದೇವತೆಗಳಿಗೂ ಅಸಾಧ್ಯ. ಬಾಣವನ್ನು ಹೂಡು" ಎಂದು ವಿಭೀಷಣನು ರಾಮನಿಗೆ ಹೇಳಲು ಅದನ್ನು ನೀಲನು ಕೇಳಿದನು. ೩೦. ನೀಲನಿಗೆ ಅದೇನು ಕೋಪಬಂದಿತೋ, ನರಸಿಂಹನ ರೌದ್ರರೋಷವನ್ನು ಅನುಭವಕ್ಕೆ ತಂದುಕೊಂಡಂತೆ ಕೆರಳಿ ರಾಮನ ಎದುರಿನಲ್ಲಿ ವಿಭೀಷಣನನ್ನು ಕುರಿತು "ಈ ರಾಕ್ಷಸನನ್ನೂ, ಈ ಮದಿಸಿದಾನೆಯನ್ನೂ ಈ ನಿಮಿಷದಲ್ಲಿ ಯಮನ ಹೊದಿಕೆಗೆ ಕೊಡದೆ ಇದ್ದರೆ, ವಿಭೀಷಣ ! ನನ್ನ ಹೆಸರು ನೀಲನಲ್ಲ" ಎಂದ. ೩೧. ಹೀಗೆ ನುಡಿದ ನೀಲನು ಆರ್ಭಟಿಸುತ್ತ ಮದ್ದಾನೆಯ ಕಡೆಗೆ ನಡೆದನು. ಅವನ ಜತೆಯಲ್ಲಿ ವಿನತ, ದಧಿಮುಖ, ಸುಷೇಣಕ, ಗಜ, ಗವಯ ಮೊದಲಾದವರು ಕೆರಳಿ ಕೋಟಿಸಂಖ್ಯೆಯ ವಾನರರನ್ನೊಡ

ಕೆದಱಿತಿಭ ಮುಱಿಮುಱಿದು ಗಿರಿಗಳ । ನುದುರುಗುಟ್ಟುತ ಬೀದಿಯಲಿ ಬೀ
ಸಿದುದು ಬಿರುದಿನ ಭಟರ ಹಿಂಗಾಲುಗಳ ಹಿಡಿಹಿಡಿದು
ಕದಳಿಯಲಿ ಕಾಲಿಕ್ಕಿದವೊಲುಱೆ । ಮೆದೆಗೆಡಹಿದುದು ಮತ್ತೆ ಮತ್ತದ
ರಿದಿರಿನಲಿ ಕಲಿನೀಲ ನಿಂದಬ್ಬರಿಸಿ ಬೊಬ್ಬಿಱಿದ ೩೨

ಕಾಲನುರವಣೆಗಾಂತು ನಿಂದ ಕ । ಪಾಲಿಯಂತಿರೆ ನಿಶಿತಕೋಪ
ಜ್ವಾಲೆಯಲಿ ತಜ್ಜ್ವಲನಸುತ ನಿಂದನು ಸುದರ್ಶನದ
ತೋಳಿಕೆಯ ಸರಿಸದಲಿ ಬಾಹಾ । ಸ್ಫಾಲನಂಗೈದುಬ್ಬಿ ಶತ ಶಾ
ರ್ದೂಲ ಘರ್ಜನೆಯಲಿ ಖಳಾಧಮ ಖೂಳ ಕೇಳೆಂದ ೩೩

ಜಳ್ಳುಗರ ಜಾಳುಗರ ಕೂಟದ । ಕೊಳ್ಳೆಗರ ಕೊಂದುಬ್ಬುಗಿಚ್ಚಿನ
ಕೊಳ್ಳಿಗಿದಲಾ ಕಲ್ಪದಂಭೋರಾಶಿ ಕೇಳಲವೊ
ತುಳ್ಳಿಸಾನೆಯನಿತ್ತ ಮೆಱೆ ನಿನ । ಗುಳ್ಳ ಕದನದ ಕಡುಹುಗಳ ಹೆಂ
ಗಳ್ಳ ಸಾಕಿದ ಸಾಹಸವ ನೀನೆನುತ ಮೇಲ್ವಾಯ್ದ ೩೪

ಬಣಗು ಕಪಿ ಕೇಳೆಲವೊ ರಣಕಲ । ಗಣಸಲಾ ಹನುಮಂತನಾತನ
ಕುಣಿಹವೇನಾಯ್ತೆಂಬುದನು ನೋಡುಳಿದ ಕಪಿಭಟರ
ಎಣಿಸಿಕೋ ನೀನವರ ಹಂತಿಯ । ಹಣೆದಕೊದಗದ ಹೇಡಿಗುಱಿವಾ
ರಣದ ಪರಿಯನು ನೋಡು ನೀನೆನುತುಱಿಬಿದನು ಗಜವ ೩೫

ಗೊಂಡು ಭಾರಿ ಬೆಟ್ಟಗಳ ಬಂಡೆಗಳನ್ನು ಜೋರಾಗಿ ಎಸೆಯುತ್ತ ಮುತ್ತಿದರು. ೩೨. ಆನೆಯು ವಾನರರು ಎಸೆದ ಬೆಟ್ಟಗಳನ್ನು ಪುಡಿಮಾಡಿ ಉದುರಿಸಿ ಚೆಲ್ಲಿತು. ಬಿರುದಿನ ವಾನರವೀರರ ಹಿಂಗಾಲುಗಳನ್ನು ಹಿಡಿಹಿಡಿದು ತಿರುಗಿಸಿ ಎಸೆಯಿತು. ಬಾಳೆಯವನವನ್ನು ತುಳಿಯುಂತೆ ವಾನರವೀರರನ್ನು ತುಳಿತುಳಿದು ರಾಶಿಹಾಕಿತು. ಪುನಃ ಪುನಃ ಕಲಿನೀಲನು ಆನೆಯ ಎದುರಿಗೆ ನಿಂತು ಅಬ್ಬರಿಸಿ ಗರ್ಜಿಸಿದನು. ೩೩. ಯಮನ ಅತಿರೇಕವನ್ನು ಎದುರಿಸಿ ನಿಂತ ಕಪಾಲಿ ಶಿವನಂತೆ ತೀವ್ರ ಕೋಪಜ್ವಾಲೆಯಿಂದ ಅಗ್ನಿಯ ಮಗ ನೀಲನು ಸುದರ್ಶನಗಜದ ಆಕ್ರಮಣದ ಎದುರಿಗೆ ತೋಳು ತಟ್ಟಿ ನಿಂತು ನೂರು ಹುಲಿಗಳಂತೆ ಗರ್ಜಿಸಿ "ನೀಚರಾಕ್ಷಸ, ದುಷ್ಟ! ಕೇಳು" ಎಂದು ನುಡಿದ. ೩೪. "ಹುರುಳಿಲ್ಲದವರನ್ನೂ, ಪೊಳ್ಳುಗರನ್ನೂ, ಕೂಟಕಟ್ಟಿಕೊಂಡ ಸೂರೆಗಾರರನ್ನೂ ಕೊಂದ ನಿನ್ನ ಸೊಕ್ಕಿನ ಬೆಂಕಿಯ ಕೊಳ್ಳಿಗೆ ಇದು ಪ್ರಳಯಸಾಗರ, ಕೇಳೋ. ಆನೆಯನ್ನು .ಇತ್ತ ಕಡೆಗೆ ನಡೆಸು. ನಿನ್ನಲ್ಲಿರುವ ರಣಪರಾಕ್ರಮವನ್ನು ಮೆರೆಸು, ಈ ನಿನ್ನ ಸಾಹಸ ಸಾಕು" ಎಂದು ನೀಲ ಆನೆಯ ಮೇಲೆ ನುಗ್ಗಿದ. ೩೫. "ಕ್ಷುದ್ರಕಪಿಯೆ ಕೇಳೋ, ಹನುಮಂತನು ಯುದ್ಧದಲ್ಲಿ ಕತ್ತಿಯ ಏಟಿಗೆ ಮಾರಿದವನು. ಅವನ ಕುಣಿತವೇನಾಯಿತು ಎಂಬುದನ್ನು ನೋಡು, ಯುದ್ಧದಲ್ಲಿ ಹತರಾದ ಇತರ ಕಪಿವೀರರನ್ನು ಎಣಿಸಿಕೋ. ನೀನು ನನ್ನ ಏಟಿಗೆ ಅವರ ಸರಿಸಮವಾಗಿ ನಿಲ್ಲಲಾರದ ಹೇಡಿಕುರಿ. ನನ್ನ ಆನೆಯ ರೀತಿಯನ್ನು ನೋಡು" ಎನ್ನುತ್ತ

ತೋಳ ನೆಗಹಿನಲಟ್ಟಿಹೊಯ್ದುದು । ನೀಲನನು ನೀಲಾದ್ರಿಯನು ದಂ
ಭೋಳಿ ದಟ್ಟಿಸಿದಂತೆ ನೊಂದನು ಹೊಯ್ಲಲಿಭಪತಿಯ
ಕಾಲನಿದಿರೇ ಕೆರಳಿದರೆ ಕಲಿ । ನೀಲಗವುಮು ಮಹೋಗ್ರ ಮದಶುಂ
ಡಾಲದೆಡದ ಕಪಾಲಭಾಗವ ತಿವಿದು ಬೊಬ್ಬಿರಿದ ೩೬

ಏನ ಹೇಳುವೆನಮುಮ ನೀಲನ । ನೂನ ಶೌರ್ಯವನಿಳೆಯ ತಳೆದಿ
ರ್ದಾನೆ ಘೀಳಿಡೆ ಗಗನ ಮಾರ್ದನಿದೋರೆ ಮಣಿಮಯದ
ಸಾನು ಸಡಿಲೆ ಸುದರ್ಶನಪ್ರತಿ । ಮಾನವನು ಮತ್ತೆರಗಿದನು ಮದ
ದಾನೆ ತಿರುಗಿತು ಹಿನ್ನಲೆಗೆ ಹದಿನೆಂಟು ಹಜ್ಜೆಯನು ೩೭

ಬಿರಿದ ಬಿಡುವನಿ ರುಧಿರಜಾಜಿನ । ಗಿರಿಯ ನಿರ್ಜರದಂತೆ ಮದಕರಿ
ಕರದಲೊಸರಿತು ಬಿದುರಿಕೊಂಡುದು ಶಿರವನೆಡಬಲಕೆ
ಹರನು ನೆನೆದನು ತನ್ನ ಕದನದ । ಕರಹತಿಯಲಳುಕಿದ ಗಜಾಸುರ
ನಿರವನಹುದೋಯೆಂದು ಹೊಗಳಿದನಗ್ನಿನಂದನನ ೩೮

ತಿರುಹಿದನು ಬಳಿಕಸುರನಾನೆಯ । ಶಿರವನಂಕುಶದಿಂದ ಹೊಯ್ದ
ಬ್ಬರಿಸಿ ಭರಿಭರಿಯೆನುತ ಬಹಳಿತ ರೌದ್ರರೋಷದಲಿ
ಕೆರಳಿ ಗಜವಾ ವಹ್ನಿತನುಜನ । ಕೊರಳ ಡೊಕ್ಕರವಾಯ್ದು ತೋಳಲಿ
ಮುರುಹಿ ಬರಸೆಳೆದಿಳೆಗೆ ಕುಸುಕಿದುದಸುರಬಲ ನಲಿಯೆ ೩೯

ಆನೆಯನ್ನು ನುಗ್ಗಿಸಿದನು. ೩೬. ನೀಲಪರ್ವತವನ್ನು ವಜ್ರಾಯುಧವು ಅಪ್ಪಳಿಸಿದಂತೆ ಆನೆಯು ಸೊಂಡಿಲನೆತ್ತಿ ನೀಲನನ್ನು ಅಟ್ಟಿಸಿಕೊಂಡು ಹೋಗಿ ಹೊಡೆಯಿತು. ಆನೆಯ ಏಟಿಗೆ ನೀಲನು ನೊಂದನು. ವೀರ ನೀಲನು ಕೆರಳಿದರೆ ಯಮನು ಎದುರೇ ? ಬಳಿಕ ನೀಲನು ಭಯಂಕರ ಮದ್ದಾನೆಯ ಎಡಕೆನ್ನೆಯನ್ನು ಗುದ್ದಿ ಬೊಬ್ಬಿರಿದ. ೩೭. ನೀಲನ ಕುಂದಿಲ್ಲದ ಪರಾಕ್ರಮವನ್ನು ಏನು ಹೇಳಲಿ. ಭೂಮಿಯನ್ನು ಹೊತ್ತುಕೊಂಡಿರುವ ಆನೆ ಘೀಳಿಡಲು, ಆಕಾಶವು ಪ್ರತಿಧ್ವನಿಸಲು, ರತ್ನಮಯವಾದ ಶಿಖರವು ಸಡಿಲ ಗೊಳ್ಳಲು ಸುದರ್ಶನಗಜದ ದಂತಗಳ ನಡುವಿನ ಸ್ಥಳಕ್ಕೆ ಹೊಡೆದನು. ಆಗ ಆ ಮದ್ದಾನೆಯು ಹದಿನೆಂಟು ಹೆಜ್ಜೆ ಹಿಮ್ಮೆಟ್ಟಿತು. ೩೮. ಕಾವಿಬಣ್ಣದ ಜಾಜುಗಲ್ಲಿನ ಬೆಟ್ಟದ ಮೇಲಿನಿಂದ ಹರಿಯುವ ಪ್ರವಾಹದಂತೆ ಗಾಯದಿಂದ ರಕ್ತದ ಹನಿಗಳು ಒಸರಿ ಆನೆಯ ಸೊಂಡಿಲಿನಮೇಲಿಂದ ರಕ್ತ ಹರಿಯಿತು, ಆನೆಯು ತಲೆಯನ್ನು ಎಡಬಲಕ್ಕೆ ಸಡಿಲಬಿಟ್ಟಿತು. ಶಿವನು ತನ್ನ ಕೈಯೇಟಿನಿಂದ ಗಜಾಸುರನು ನೊಂದ ರೀತಿಯನ್ನು ಸ್ಮರಿಸಿಕೊಂಡು, 'ಹೌದೋ !' ಎಂದು ನೀಲನನ್ನು ಹೊಗಳಿದನು. ೩೯. ಮಹೋದರ ರಾಕ್ಷಸನು ಅಂಕುಶದಿಂದ ತಿವಿದು ಭಯಂಕರ ಕೋಪದಿಂದ ಹೊಡೆದು ಅಬ್ಬರಿಸಿ ಭರಿ ಭರಿ ಎನ್ನುತ್ತ ಆನೆಯನ್ನು ತಿರುಗಿಸಿದನು. ರಾಕ್ಷಸಸೈನ್ಯವು ಹರ್ಷಗೊಳ್ಳುವಂತೆ ಆನೆಯು ಕೆರಳಿ ನೀಲನ ಮೇಲೆ ನುಗಿ ಹೊಡೆದು ಸೊಂಡಿಲಿನಿಂದ ಸುತ್ತಿ ಎಳೆದು

ಸಿಕ್ಕಿದಗ್ನಿಜ ಗಜದ ಸುಂಡಿಲ । ದೊಕ್ಕರಿಸಿ ಘನ ಸಿಂಹನಾದದ
ಲಿಕ್ಕೆಲಕೆ ಬರಸೆಳೆಯೆ ಸೆಳೆದೀಡಾಡಿದುದು ನಭಕೆ
ಕೆಕ್ಕಳಿಸಿ ಕುಡಿದಾಡೆಗಳ ಗಗ । ನಕ್ಕೆ ಲಂಘಿಸಿ ಮರಳಿ ಬಹ ಬಲು
ಮರ್ಕಟರನಾಂತಿಟ್ಟುದೊಡನುದ್ರೇಕ ರೋಷದಲಿ ೪೦

ಪಡಿಬರಿಸಿ ಸಂವರಿಸಿಕೊಳುತು । ಗ್ಗಡದ ಭಟನುಬ್ಬೆದ್ದು ದಾಡೆಯ
ಹಿಡಿದು ತಿವಿದನು ತೀವ್ರಕರಹತಿಗಾನೆ ಘೀಳಿಡಲು
ಮಡದಲೊದೆದು ಮಹೋದರನು ಮುಱಿ । ವಡೆದ ಗಜವನು ತಿರುಹಿ ನೀಲನ
ಹಿಡಿಯಲಂಕುಶಹತಿಯಲೌಕಿದನಾ ಮಹಾಗಜವ ೪೧

ಬೀಳಲಪ್ಪಳಿಸಿದುದು ನಿಗುರಿದ । ತೋಳಿನಲಿ ಬಿದ್ದವನ ಕರಿ ಮುಂ
ಗಾಲಿನಲಿ ಮೆಟ್ಟಿದುದು ಮುಱಿದುದು ಶಿರವ ಹಸ್ತದಲಿ
ಬಾಲದಲಿ ಬರಿಕೈಯನಾ ಕಲಿ । ನೀಲ ಬಿಗಿಯಲು ನಿಟ್ಟುಸುರ ವೈ
ಹಾಳಿ ನಿಂದುಬ್ಬಸದಿ ನಿಂದಿದುದಾ ಮಹಾದಂತಿ ೪೨

ಏಳುತೆಡಗೈತುದಿಯಲಾನೆಯ । ತೋಳ ನೆಗಹುತ ಮೆಟ್ಟಿ ಸಱ್ರನೆ
ಸೀಳಿದನು ಸೀವರಿಸಿ ಕರಿಯಿಂದಾ ಮಹೋದರನು
ಶೈಲಕೆಱಗುವ ಸಿಡಿಲವೋಲು । ಬ್ಬಾಳನಿಂದೆಱಗಿದನು ರಣದಲಿ
ನೀಲನನು ನಿಶಿತಾಂಕುಶದಲಮರಾಳಿ ಕಳವಳಿಸೆ ೪೩

ನೆಲಕ್ಕೆ ಹಾಕಿ ಕುಕ್ಕಿತು. ೪೦. ಸೊಂಡಿಲಿಗೆ ಸಿಕ್ಕಿಕೊಂಡ ನೀಲನು ಆನೆಯ ಸೊಂಡಿಲನ್ನು ಗುದ್ದಿ ಸಿಂಹನಾದ ಮಾಡಿ ಎರಡೂ ಕಡೆಗೆ ಎಳೆದಾಡಲು ಆನೆಯು ನೀಲನನ್ನು ಸೆಳೆದು ಆಕಾಶಕ್ಕೆಸೆಯಿತು. ಮೊನಚಾದ ದಂತಗಳನ್ನು ನೆಟ್ಟಗೆ ಮಾಡಿಕೊಂಡು ಆನೆಯು ಆಕಾಶಕ್ಕೆ ನೆಗೆದು ಪುನಃ ಬರುತ್ತಿರುವ ವಾನರವೀರರನ್ನು ಕೋಪೋದ್ರೇಕದಿಂದ ಎಳೆದುಕೊಂಡಪ್ಪಳಿಸಿತು. ೪೧. ಹಿಂದಕ್ಕೆ ಬಂದು ಸುಧಾರಿಸಿಕೊಂಡು ನೆಗೆದು ಮೇಲಕ್ಕೆದ್ದು ಪ್ರತಾಪಶಾಲಿ ನೀಲನು ಆನೆಯ ದಂತವನ್ನು ಹಿಡಿದುಕೊಂಡು ತಿವಿದನು. ನೀಲನ ಬಲವಾದ ಕೈಯೇಟಿಗೆ ಆನೆ ಘೀಳಿಟ್ಟಿತು. ಆಗ ಮಹೋದರನು ಹಿಂದಕ್ಕೆ ತಿರುಗಿದ ಆನೆಯನ್ನು ಹಿಮ್ಮಡಿಯಿಂದ ಒದೆದು ಮುಂದಕ್ಕೆ ತಿರುಗಿಸಿ ನೀಲನನ್ನು ಹಿಡಿಯುವಂತೆ ಅಂಕುಶದಿಂದ ಹೊಡೆದು ಮುನ್ನುಗ್ಗಿಸಿದನು. ೪೨. ಆನೆಯು ನೀಲನನ್ನು ಕೆಳಗೆ ಬೀಳುವಂತೆ ಸೊಂಡಿಲನ್ನು ನೀಡಿ ಅಪ್ಪಳಿಸಿತು. ಕೆಳಗೆ ಬಿದ್ದ ನೀಲನನ್ನು ಆನೆಯು ಮುಂಗಾಲಿನಿಂದ ಮೆಟ್ಟಿ ಸೊಂಡಿಲು ಬಾಲಗಳಿಂದ ತಲೆಯನ್ನು ತಿರುಚಿತು. ಆನೆಯ ಸೊಂಡಿಲನ್ನು ನೀಲನು ಗಟ್ಟಿಯಾಗಿ ಅಮುಕಿ ಉಸಿರು ಕಟ್ಟಿಸಿದನು. ಸಂಚಾರವನ್ನು ನಿಲ್ಲಿಸಿದ ಆ ಆನೆಯು ಮೇಲುಸುರು ಬಿಡುತ್ತ ನಿಂತಿತು. ೪೩. ನೀಲನು ಏಳುತ್ತ ಎಡಗೈತುದಿಯಿಂದ ಆನೆಯ ಸೊಂಡಿಲನ್ನು ಎತ್ತಿ ಮೆಟ್ಟಿ ಕಿರಿಚುತ್ತ ಸರ್ರನೆ ಆನೆಯನ್ನು ಸೀಳಿಹಾಕಿದನು. ಆಗ ಮಹೋದರನು ಪರ್ವತದ ಮೇಲೆ ಬೀಳುವ ಸಿಡಿಲಿನಂತೆ ಆನೆಯ ಮೇಲಿನಿಂದ ನೆಗೆದು ಹರಿತವಾದ

ಎಱಗಿದಸುರನ ಶಿರವ ಮುಷ್ಟಿಯ । ಲೆಱಗಿದನು ಪ್ರತಿಶಬ್ದ ನಭದೊಳ
ಗೊಱಲೆ ನಿರ್ಜರ ನಿಕರ ಬೆದಱೆ ಮಹೋಗ್ರರೋಷದಲಿ
ತಱಿತಱಿಸುತವ ತವಕದಲಿ ಕೈ । ಮಱೆಯದೊಳಹೊಕ್ಕಗ್ನಿಜನನು
ಬ್ಬೆಱೆದು ಡೊಕ್ಕರವಾಯ್ದು ಕೆಡಹಿದನವನಿತಳ ಕುಸಿಯೆ ೪೪

ತಳವು ಮೇಲಡಿ ಮೇಲು ತಳ ಕಾ । ಲ್ದಳುಕು ಮುಷ್ಟಿನಿಘಾತ ಬಾಹಾ
ಗಳ ನಿಬದ್ಧ ನಿಯುದ್ಧ ಜಾನುಸ್ಫುಟದ ಪದಘಾತ
ತಳ ನಿಹತ ಪತನಪ್ರಹಾರಾ । ಕಲಿತ ದಂತಾದಂತಿಯಲಿ ನಿ
ರ್ಗಳಿತ ಕೇಶಾಕೇಶಿಯಲಿ ಕಾದಿದರು ಕಡುಹಿನಲಿ ೪೫

ಹೋರಿದರು ಹರಿಜಂಭರಿಬ್ಬರ । ಹೋರಟೆಗೆ ಹದಿನೆಂಟು ಮಡಿಯೆನೆ
ವೀರ ಕೇಳೈ ಬಳಿಕ ವೈಶ್ವಾನರಕುಮಾರಕನ
ಘೋರ ಮುಷ್ಟಿನಿಘಾತವಲಿ ಹೆರ । ಸಾರಿತಸು ರಕ್ಕಸನ ನಿರ್ಜರ
ರಾರಿ ಸುರಿದರು ಸುರಮಹೀರುಹದಲರ ಸರಿವಳೆಯ ೪೬

ಕೋಪದಲಿ ಕೊಸರಿಡುವ ಮನದನು । ತಾಪದಲಿ ತಿರುಗಿದನು ತಾತನ
ರೂಪಿನಲಿ ಕಲಿ ನೀಲನೀಚೆಯಲಂಜನಾಸೂನು
ರೂಪುದೋಱಿದನೊಡನೆ ಸಮರಾ । ಟೋಪದಲಿ ರಿಪುಬಲಕೆ ಕಲಿನಿ
ರ್ವಾಪಣನು ಕಲಿ ವೃಷಭ ಬೇಡಿದನಾ ಮಹಾಹವವ ೪೭

ಅಂಕುಶದಿಂದ ನೀಲನ ಮೇಲೆರಗಿದನು. ಅದನ್ನು ಕಂಡ ದೇವತೆಗಳು ಕಳವಳಗೊಂಡರು. ೪೪. ತನ್ನ ಮೇಲೆರಗಿದ ಮಹೋದರನ ತಲೆಯ ಮೇಲೆ ನೀಲನು ಮುಷ್ಟಿಯಿಂದ ಹೊಡೆಯಲು ಆಕಾಶವು ಅರಚುವಂತೆ ಪ್ರತಿಧ್ವನಿ ಕೊಟ್ಟಿತು, ದೇವತೆಗಳು ಬೆದರಿದರು. ಮಹೋದರನು ಕಕ್ಕಾಬಿಕ್ಕಿಯಾಗಿ ಪ್ರಚಂಡಕೋಪದಿಂದ ಹಸ್ತಕೌಶಲವನ್ನು ಕಳೆದುಕೊಳ್ಳದೆ ಅಬ್ಬರಿಸುತ್ತ ನೀಲನನ್ನು ಗುದ್ದಿ ಕೆಡವಲು ನೆಲ ಕುಸಿಯಿತು. ೪೫. ಒಂದು ಸಲ ಅಡಿ ಮೇಲಾಗಿ ಇನ್ನೊಂದು ಸಲ ಮೇಲಡಿಯಾಗಿ, ಕಾಲ್ತೊಡರು, ಮುಷ್ಟಿಪ್ರಹಾರ, ತೋಳು ಕತ್ತುಗಳ ಹಿಡಿತ, ಮೊಳಕಾಲೆತ್ತಿ ಪಾದಪ್ರಹಾರ, ಅಂಗೈಹೊಡೆತ, ಬೀಳುವಿಕೆ, ಒಡೆಯುವಿಕೆ ಮೊದಲಾದ ಹಲವು ಮಲ್ಲಯುದ್ಧದ ಪಟ್ಟುಗಳಿಂದ ನೀಲ ಮಹೋದರರು ಕುಸ್ತಿಮಾಡುತ್ತ ಹಲ್ಲುಹಲ್ಲುಗಳಿಂದ ಕಚ್ಚಿ, ಇಳಿಬಿದ್ದ ಕೂದಲುಗಳನ್ನು ಹಿಡಿದು ಜಿದ್ದಿನಿಂದ ಹೋರಾಡಿದರು. ೪೬. ವಿಷ್ಣು ಮತ್ತು ಜಂಭಾಸುರರ ನಡುವೆ ನಡೆದ ಹೋರಾಟಕ್ಕೆ ಹದಿನೆಂಟು ಪಾಲು ಮಿಗಿಲು ಎನ್ನುವಂತೆ ನೀಲ ಮಹೋದರರು ಹೋರಾಡಿದರು. ವೀರಕುಮಾರ ಕುಶ, ಕೇಳು. ಅನಂತರ ಅಗ್ನಿಕುಮಾರ ನೀಲನ ಉಗ್ರಮುಷ್ಟಿಯ ಹೊಡೆತದಿಂದ ಮಹೋದರಾಸುರನ ಪ್ರಾಣಹೋಯಿತು. ದೇವತೆಗಳು ಆನಂದದಿಂದ ಕೂಗುತ್ತ ಕಲ್ಪವೃಕ್ಷದ ಹೂವಿನಮಳೆಯನ್ನು ಸುರಿಸಿದರು. ೪೭. ಕೋಪ ವೃದ್ಧಿಯಾದಂತೆ ಮನಸ್ಸಿನ ಸಂತಾಪದಿಂದ ತಂದೆಯ ರೂಪಿನಿಂದ ಬೆಂಕಿಯಂತಾದ ವೀರ ನೀಲನು ಹಿಂದಿರುಗಿದನು. ಇತ್ತ ಹನುಮಂತನೂ ಬಂದು ಕಾಣಿಸಿಕೊಂಡನು. ಆ

ಹನುಮ ಕೇಳೀ ಕಾಳಗವ ನೀ । ನನಗೆ ಕೊಡು ಕೊಡುವೆನು ಕೃತಾಂತಕ
ನನುಚರರಿಗರಿಭಟನ ತೊರವೆಯರಾಯ ನರಹರಿಯ
ವನರುಹಾಂಘ್ರಿಯ ಸೇವೆ ತನ್ನಿಂ । ದನುಭವವನೈದಿದಡೆ ಜಗದಲಿ
ಘನ ಕೃತಾರ್ಥನು ತಾನೆನುತ ಮಾಜಿಂತನಾಹವಕೆ ೪೮

ಕೂಡಲೆ ಶತ್ರುಸೈನ್ಯವಿನಾಶಕ ವೀರ ವೃಷಭನು ಯುದ್ಧಗರ್ವದಿಂದ ಬಂದು ಮುಂದಿನ ಮಹಾಕಾಳಗದ ವೀಳೆಯವನ್ನು ತನಗೆ ಕೊಡಬೇಕೆಂದು ಬೇಡಿಕೊಂಡನು. ೪೮. "ಹನುಮಂತ, ಕೇಳು. ಈ ಮುಂದಿನ ಯುದ್ಧವನ್ನು ನನಗೆ ಕೊಡು. ಯಮನ ದೂತರಿಗೆ ಶತ್ರುವೀರನನ್ನು ಒಪ್ಪಿಸಿಕೊಡುವೆನು. ತೊರವೆಯ ಸ್ವಾಮಿ ನರಹರಿ ರೂಪ ರಾಮನ ಪಾದಕಮಲಗಳ ಸೇವೆ ನನ್ನಿಂದ ಸಂದರೆ ಜಗತ್ತಿನಲ್ಲಿ ನಾನು ನಿಜವಾಗಿ ಕೃತ ಕೃತ್ಯನು" ಎಂದು ನುಡಿದು ವೃಷಭನು ಶತ್ರುಗಳನ್ನು ಎದುರಿಸಲು ಸಿದ್ಧನಾದನು.

# ಮೂವತ್ತುಮೂರನೆಯ ಸಂಧಿ

ಸೂಚನೆ॥ ತುಂಗಭುಜಬಲ ಸಹಿತ ಮದಮಾ । ತಂಗ ಕೇಸರಿ ವೃಷಭನಾಹವ
ರಂಗದಲಿ ಕೆಡಹಿದನು ಯುದ್ಧೋನ್ಮತ್ತ ರಕ್ಕಸನ

ಕುಶನೆ ಕೇಳು ಮಹೋದರನು ಜಾ । ಳಿಸಿದ ಜೀವದ ಮೇಲೆ ನಡೆದುದು
ವಿಷಮವಿಗ್ರಹ ವೀರ ಯುದ್ಧೋನ್ಮತ್ತ ರಕ್ಕಸನ
ದೆಸೆಗಳೆಂಟರ ಬಿಗುಹುಗಳ ಬಲು । ಬೆಸುಗೆ ಬಿಡೆ ಬಿರುದನಿಯ ವಾದ್ಯ
ಪ್ರಸರ ಮೊರೆದವು ಮೋಹಿದವು ಮೋಹರಗಳುಭಯದಲಿ ೧

ಕೈಟಭನ ಕಲಿ ತಮನ ಮಹಿಷ ನಿ । ಶಾಟ ಜಂಭನ ಬಲನ ನಮುಚಿಯ
ಪಾಟಗಿಮ್ಮಿಗಿಲೆಂಬ ಕಲಿಗಳ ಕೋಟಿಸಂಖ್ಯೆಯಲಿ
ಮೀಟ ತಲೆಮುಂಡದಲಿ ಕಾದುವ । ಘಾಟಬಲ ಮಾಸಾಳುಗಳು ನಡೆ
ಗೋಟೆಕಾರರು ಕೆಣಕಿದರು ಕಪಿರಾಜಸೈನಿಕವ ೨

ಬಲಿದುದನಿತರ ಮೇಲೆ ರಣ ಕಡು । ಗಲಿಗಳಿಬ್ಬರಿಗೊಡನೆ ಪಡಿಬಲ
ನಿಲುಕಿತಿನನಂದನನ ಸನ್ನೆಯ ಸೂಚನೆಯ ಬಳಿಯ
ಕುಲಶಿಲೋಚ್ಚಯ ಕುಜವಿತಾನದ । ಕಲಿಮನದ ಕಪಿಸೇನೆ ಸಂಧಿಸಿ
ಹಳಚಿದುದು ಹರಹಿನಲಿ ಹರನಯನಾಗ್ನಿಕಣದಂತೆ ೩

ಸೂಚನೆ॥ ಮದಿಸಿದ ಆನೆಗೆ ಸಿಂಹಸ್ವರೂಪನಾದ ಉನ್ನತ ತೋಳ್ಬಲದ ವೃಷಭನು ರಣರಂಗದಲ್ಲಿ ಯುದ್ಧೋನ್ಮತ್ತ ರಾಕ್ಷಸನನ್ನು ಕೊಂದನು. ೧. ಕುಶನೆ, ಕೇಳು. ಮಹೋದರನು ಪ್ರಾಣ ಬಿಟ್ಟ ಮೇಲೆ ಯುದ್ಧೋನ್ಮತ್ತ ರಾಕ್ಷಸನೊಡನೆ ಉಗ್ರ ಯುದ್ಧವು ನಡೆಯಿತು. ಎಂಟುದಿಕ್ಕುಗಳ ಬಿಗಿಯಾದ ಬೆಸುಗೆ ಬಿಟ್ಟುಕೊಳ್ಳುವಂತೆ ರಣವಾದ್ಯಗಳು ಭೋರ್ಗರೆದವು ಹಾಗೂ ಎರಡೂ ಕಡೆಯಲ್ಲಿ ಸೈನ್ಯಗಳು ಹೋರಾಟವಾರಂಭಿಸಿದವು. ೨. ಕೈಟಭ, ತಮ, ಮಹಿಷಾಸುರ, ಜಂಭಾಸುರ, ಬಲಾಸುರ, ನಮುಚಿ ಮೊದಲಾದ ಅಸುರವೀರರಿಗಿಂತ ಎರಡುಪಟ್ಟು ಹೆಚ್ಚು ಎನ್ನುವ, ಕೋಟಿಕೋಟಿ ವೀರರನ್ನು ತಲೆಮೈಗಳಿಂದ ಕಾದಿ ಎಬ್ಬಿಸುವ ಅದ್ಭುತ ಬಲಶಾಲಿಗಳಾದ ನಡೆಯುವ ಕೋಟೆಯಂಥ ರಾಕ್ಷಸವೀರರು ಕಪಿಸೈನ್ಯವನ್ನು ಕೆಣಕಿದರು. ೩. ತರುವಾಯ ಇಬ್ಬರು ವೀರರ ನಡುವೆ ಯುದ್ಧ ತೊಡಗಿತು. ಶತ್ರುಸೈನ್ಯವು ಸಮೀಪಿಸಿತು. ಸುಗ್ರೀವನು ಸಂಜ್ಞೆಯ ಮೂಲಕ ಯುದ್ಧಕ್ಕೆ ಸೂಚನೆ ನೀಡಲು ಬಂಡೆಗಳನ್ನೂ ಮರಗಳನ್ನೂ ಹಿಡಿದ ಧೀರಮನಸ್ಸಿನ ಕಪಿಸೈನ್ಯವು ಶಿವನ ಹಣೆಕಣ್ಣಿನ ಬೆಂಕಿಯ ಕಿಡಿಯಂತೆ ವಿಸ್ತಾರ

ತಿವಿವ ಶಸ್ತ್ರಶಿಲೋಚ್ಚಯದ ಬಲು । ದಿವಿಗುಳಿನ ದೆಖ್ಖಾಳದಿಂದುದು
ಭವಿಸಿದುಬ್ಬರದೊಳು ಕಮಲಭವಾಂಡಮಂಡಲವ
ತವಕದಲಿ ತತ್ಕ್ಷಣದಿನಭ್ರಕೆ । ನವರುಧಿರವುಚ್ಚೈದ್ದು ಸುರಸೈ
ನ್ಯವನು ತೆವರಿಸಿತೇನನೆಂಬೆನು ಸಮರಸಂಭ್ರಮವ ೪

ಆವ ವೀರರೊ ರಕ್ಕಸರು ರಣ । ದೀವಸಿಗ ಕಪಿಭಟರ ಬಲದಲಿ
ಸಾವಿಗಳುಕದೆ ಕಾದಿದರು ಸರಕಟಿಸಿ ಸರಿಸದಲಿ
ಸಾವು ಸರಿಯಾಯ್ತುಭಯದಲಿ ನೆಲ । ತೀವಿದುದು ತಿಂತಿಣಿಯ ವಿಪಿನ ವಿ
ಭಾವರೀಚರರಗಲದಸುವಿನ ಹೆಣನ ರಾಶಿಯಲಿ ೫

ಮತ್ತನಲ್ಲಾ ವೀರ ಯುದ್ಧೋ । ನ್ಮತ್ತ ಖಳ ಕಲಿ ಕುಂಭಕರ್ಣನ
ಹತ್ತುಮಡಿ ಸಾಹಸವ ಮೆರೆದನು ಸಮರಕೇಳಿಯಲಿ
ಹತ್ತು ನೂರಿನ್ನೂರು ಸಾವಿರ । ಹತ್ತು ಸಾವಿರ ಲಕ್ಷ ಲೆಕ್ಕದ
ಹತ್ತುಗೆಯ ಹವಣಿನಲಿ ಹೊಳಕಿಸಿ ನುಂಗಿದನು ಭಟರ ೬

ಅಗಿದನಣಲಲಿ ಲಕ್ಕಸಂಖ್ಯೆಯ । ವಿಗಡ ಕಪಿನಾಯಕರ ಸದೆಸದೆ
ದುಗುಳಿದನು ಸಮ್ಮುಖಕೆ ಸಂಧಿಸಿದಧಿಕ ಯೂಥಪರ
ಜಗಳದಾಟದ ಭೈರವನ ಭಣಿ । ತೆಗಳಲಿರ್ದನು ಭಯರಸದ ಸೋ
ನೆಗಳ ಸೂಸುತ ನಿಮ್ಮ ರಘುರಾಜೇಂದ್ರಸೇನೆಯಲಿ ೭

ವಾಗಿ ಶತ್ರುಸೈನ್ಯವನ್ನು ಮುತ್ತಿತು. ೪. ಆಯುಧಗಳ ಮತ್ತು ಬೆಟ್ಟಗಳ ಹೊಡೆಯು ವಿಕೆಯಿಂದ ದೊಡ್ಡ ತಿವಿಗುಳದಿಂದ ಚುಚ್ಚುವಿಕೆಯಿಂದ ಎದ್ದ ಗಲಾಟೆಯು ಬ್ರಹ್ಮಾಂಡ ವನ್ನು ತುಂಬಿತು. ಆ ಕೂಡಲೆ ಹೊಸರಕ್ತವು ಆಕಾಶಕ್ಕೆ ಚಿಮ್ಮಿ ಉತ್ಸಾಹದಿಂದಿದ್ದ ದೇವತೆಗಳ ಸೈನ್ಯವನ್ನು ಹೆದರಿಸಿತು. ಈ ಯುದ್ಧಸಂಭ್ರಮವನ್ನು ಏನೆಂದು ವಿವರಿ ಸಲಿ ಎಂದರು ವಾಲ್ಮೀಕಿಗಳು. ೫. ರಾಕ್ಷಸರು ಎಂಥ ವೀರರೋ ! ರಭಸದಿಂದ ಮುನ್ನುಗ್ಗಿ ಕದನಸಾಹಸಿಗಳಾದ ವಾನರರಸೈನ್ಯದೊಡನೆ ಸಾವಿಗೆ ಹೆದರದೆ ಸಮಸಮ ವಾಗಿ ಕಾದಿದರು. ಎರಡು ಸೈನ್ಯದಲ್ಲಿ ಸತ್ತವರ ಸಂಖ್ಯೆ ಸಮವಾಯಿತು. ಪ್ರಾಣ ಹೋದ ವಾನರರ ಮತ್ತು ರಾಕ್ಷಸರ ಹೆಣಗಳ ರಾಶಿಯಿಂದ ಯುದ್ಧಭೂಮಿಯು ತುಂಬಿಹೋಯಿತು. ೬. ವೀರ ಯುದ್ಧೋನ್ಮತ್ತಾಸುರನು ಗರ್ವಿಷ್ಠನಲ್ಲವೇ ? ಯುದ್ಧ ದಾಟದಲ್ಲಿ ಕುಂಭಕರ್ಣನಿಗಿಂತ ಹತ್ತರಷ್ಟು ಸಾಹಸವನ್ನು ಪ್ರದರ್ಶಿಸಿದನು. ಹತ್ತು, ನೂರು, ಇನ್ನೂರು, ಸಾವಿರ, ಹತ್ತುಸಾವಿರ, ಲಕ್ಷಲೆಕ್ಕದಲ್ಲಿ ಕಾಣುವಂತೆ ಕಪಿಯೋಧರನ್ನು ನುಂಗಿದನು. ೭. ಲಕ್ಷಸಂಖ್ಯೆಯ ಸಾಹಸಿ ಕಪಿನಾಯಕರನ್ನು ದವಡೆಯಲ್ಲಿ ಅಗಿದು ಹಾಕಿದನು. ಎದುರಿಗೆ ಬಂದು ತಾಗಿದ ಅಧಿಕಸಂಖ್ಯೆಯ ದಳಪತಿಗಳನ್ನು ಬಡಿಬಡಿದು ಉಗುಳಿದನು. ಕದನಕ್ರೀಡೆಯ ಭೈರವನಂತೆ ಅರ್ಭಟಿಸುತ್ತ ನಿಮ್ಮ ರಘುರಾಮನ

ಹೇಳಲದ್ಭುತವವನ ಬಳಿಯಲಿ । ಕಾಳರಕ್ಕಸಭಟರು ಕವಿದರು
ಕಾಳಕೂಟದ ಕಡಲು ಕವಿವಂದದಲಿ ಕಪಿಬಲವ
ಮೇಲೆ ಮೊಳಗುವ ತಂಬಟದ ನಿ । ಸ್ಸಾಳದಬ್ಬರದುಬ್ಬುಗಹಳೆಯ
ಧಾಳಿಯಲಿ ಧರೆಬಿರಿಯೆ ಧೃತಿಗೆಡೆ ಧ್ರುವನ ಪೌರಜನ ೮

ಮಲೆತುದಾ ಖಳಪಾಯದಳವ । ಗ್ಗಳದ ಕಪಿಭಟರೊಡನೆ ಸಂಧಿಸಿ
ಹಳಚಿ ಕಳಚಿದರಸುಗಳನು ಬಲವೆರಡು ಬವರದಲಿ
ಕಲುಮರನ ಕೈದುಗಳ ಕಣೆಗಳ । ಕಲಹ ಮೆಱೆದುದು ಸಿಡಿಲ ಶಿಖರದ
ಕಳಕಳದ ಕಟ್ಟುಲುಹಿನವೊಲೆರಡಂಕದಗ್ರದಲಿ ೯

ತರಹರಿಸಲಱಿಯದೆ ತರುಸ್ಥಳ । ದರಸುನಾಯಕರೋಡಿಕಿಯ ಕಂ
ಡರಿದಿಶಾಪಟ ಪಟುಪರಾಕ್ರಮಿ ವೃಷಭನಡಹಾಯ್ದು
ಧುರಕೆ ಮುಂಚುವ ರಕ್ಕಸರ ರಥ । ದುರವಣೆಯ ತಡೆದವನಿಮಂಡಲ
ಬಿರಿಯೆ ಬೊಬ್ಬಿಱಿದುಬ್ಬಿ ಬಾಹಪ್ಪಳಿಸಿದನು ವೃಷಭ ೧೦

ದೇವಿ ನೋಡಂದೆಮ್ಮ ಸಭೆಯಲಿ । ರಾವಣಾಸುರನೇಡಿಸಲು ಕಡು
ಹೇವದಲಿ ಕಪಿರೂಪಿನಿಂದುದಿಸಿದ ವೃಷಾಧಿಪನ
ಈ ವಿಗಡ ಕಪಿವರನ ಕೈಯಲಿ । ಸಾವನಿವನೀ ಘಳಿಗೆಯಲಿ ನೋ
ಡಾ ವಿಚಿತ್ರವನೆಂದು ಪುರಹರನುಮೆಗೆ ತೋಱಿಸಿದ ೧೧

ಸೈನ್ಯದಲ್ಲಿ ಭಯರಸದ ಮಳೆಯನ್ನು ಸುರಿಸಿದನು. ೮. ವರ್ಣಿಸಲು ಅದ್ಭುತ, ಅವನ ಬಳಿಯ ಕಾಳರಾಕ್ಷಸಯೋಧರು ಕಾಲಕೂಟವಿಷದ ಸಾಗರವು ಮುತ್ತುವಂತೆ ಕಪಿಸೈನ್ಯವನ್ನು ಮುತ್ತಿದರು. ಇದರ ಮೇಲೆ ತಮಟೆಯ ಭೋರ್ಗರೆತ, ನಿಸ್ಸಾಳದ ಅಬ್ಬರ ಮತ್ತು ಉಬ್ಬುಗಹಳೆಯ ಆರ್ಭಟದ ದಾಳಿಯಿಂದ ಭೂಮಿ ಬಿರುಕುಬಿಟ್ಟಿತು, ಧ್ರುವಲೋಕದ ಜನರು ಧೈರ್ಯಗೆಟ್ಟರು. ೯. ರಾಕ್ಷಸ ಪದಾತಿಸೈನ್ಯವು ಗರ್ವಿಸಿ ಕಪಿಯೋಧರನ್ನು ತಾಗಿ ಅವರ ಪ್ರಾಣಗಳನ್ನು ಹೋಗಾಡಿಸಿತು. ಎರಡೂ ಸೈನ್ಯದ ಮುಂದುಗಡೆಗಳಲ್ಲಿ ಸಿಡಿಲುಬೆಟ್ಟದ ಶಿಖರದ ಮೇಲೆ ಬೀಳುವಾಗಿನ ಭಾರಿಶಬ್ದದಂತೆ ಅಬ್ಬರದೊಡನೆ ಕಲ್ಲು, ಮರ, ಆಯುಧ, ಬಾಣಗಳ ಕಾಳಗವು ನಡೆಯಿತು. ೧೦. ರಾಕ್ಷಸ ವೀರರ ಏಟನ್ನು ಸಹಿಸಲರಿಯದೆ ವಾನರರ ಪ್ರಾಣನೀಗಿದುದನ್ನೂ ವಾನರನಾಯಕರು ಓಡಿದುದನ್ನೂ ಕಂಡು ಶತ್ರುವೀರ ಮಹಾಪರಾಕ್ರಮಿ ವೃಷಭನು ಅಡ್ಡಬಂದು ಯುದ್ಧಕ್ಕೆ ಮುನ್ನುಗ್ಗುತ್ತಿರುವ ರಾಕ್ಷಸರ ರಥಗಳ ರಭಸವನ್ನು ತಡೆದು ಭೂಮಂಡಲವು ಬಿರಿಯುವಂತೆ ಆರ್ಭಟಿಸಿ ಉಬ್ಬಿ ತೋಳು ತಟ್ಟಿದನು. ೧೧. "ದೇವಿ, ನೋಡು ಅಂದು ನಮ್ಮ ಸಭೆಯಲ್ಲಿ ರಾವಣಾಸುರನು ಅಪಹೇಳನಮಾಡಲು ಅಪಮಾನಗೊಂಡು ಕಪಿರೂಪಿನಿಂದ ಹುಟ್ಟಿದ ವೃಷಭನನ್ನು ನೋಡು. ಈ ಪ್ರಚಂಡ ಕಪಿಶ್ರೇಷ್ಠನ ಕೈಯಿಂದ ಈ ಗಳಿಗೆಯಲ್ಲಿ ಈ ರಾಕ್ಷಸನು ಸಾಯುವನು. ನೋಡು, ಆ ಆಶ್ಚರ್ಯವನ್ನು" ಎಂದು

ಮಲೆತು ತಲೆವುಟ್ಟುಬ್ಬಿ ಕೆಂಗಲ । ಗೆಲವು ಹೂಂಕೃತಿಗೈದು ದಟ್ಟಿಸಿ
ನೆಲನನಂಘ್ರಿಯಲಡೆದು ನೆಗಹಿದ ನಿಡಿಯ ಬಾಲದಲಿ
ಸಲಗ ಸಲಗನೊಳುಬ್ಬಿ ಹಳಚುವ । ಪಳಹಳಿಕೆಯಲಿ ತಾಗಿದರು ತಳ
ವೆಳಗುಗೊಳೆ ತಳದಿಳೆಯ ಭಾರಕರುಸುರು ನಿಮಿಷದಲಿ ೧೨

ವಿಷಮ ಯುದ್ಧೋನ್ಮತ್ತನೆಂಬೀ । ಪೆಸರವಂಗೊಪ್ಪುವುದಲೇ ಗ
ರ್ಜಿಸಿದನವನಿಳೆ ಬಿರಿಯೆ ಭುಜವನು ಹೊಯ್ದು ಹೊರೆಯೇಱಿ
ಅಸಮ ಸಮ ಪಯಪಾಡಿನಲಿ ಬಾ । ರಿಸಿದ ಮುಷ್ಟಿಯ ದೃಷ್ಟಿವಾಳದ
ಕೊಸರಿಕೆಯ ಕೋಪದಲಿ ಕೈಕೊಂಡನು ಮಹಾಹವಕೆ ೧೩

ಮಲೆತರಿಭಟಾಳಿಯಲಿ ಚಂಡಿಸಿ । ಚಲಿಸದೊಬ್ಬರಿಗೊಬ್ಬರುಬ್ಬರ
ದಳವ ಮೆಱೆದರು ದಂಡೆಗಳ ದಂಡಿಗಳ ಮಂಡಿಯಲಿ
ತಲೆಯ ತಗ್ಗಿನ ಬಗ್ಗಿದುರದ । ವ್ವಳಿಪ ಚರಣಾಲೀಢ ಗಾಢಿಯ
ಕುಲಿಶಮುಷ್ಟಿಯ ಕಲಿಗಳುಪ್ಪರಿಸಿದರು ಕಲಹದಲಿ ೧೪

ಊಱಿ ನಿಂದವು ರೋಮತತಿ ಕಾ । ಹೇಱಿದವು ತನು ತೋರಗಿಡಿಗಳ
ಕಾಱಿದವು ಕಣ್ಣುಗಳು ಕಬ್ಬೊಗೆ ಹಾಯ್ದುದುಸುರಿನಲಿ
ತೋಱಿದವು ದಾಡೆಗಳ ಮುಸುಕದ । ತೂಱಿಂಗಿಡಿ ಗುಡಿಯಿಱಿದು ಕೋಪದ
ಮೋಱೆಗಳ ಮದಮುಖರು ತಿವಿದಾಡಿದರು ತವಕದಲಿ ೧೫

ಶಿವನು ವೃಷಭನನ್ನು ಪಾರ್ವತಿಗೆ ತೋರಿಸಿದ. ೧೨. ವೃಷಭನು ಗರ್ವಿಸಿ ತಲೆತಲೆ ಕೊಟ್ಟು ಕಾದಾಡುವ ಹಟದಿಂದ ಉಬ್ಬಿ ಕೇಕೆಹಾಕಿ ಹೂಂಕಾರಮಾಡಿ ಗದರಿಸಿ ನೆಲವನ್ನು ಹೆಜ್ಜೆಯಿಂದ ಒದ್ದು ಉದ್ದವಾದ ಬಾಲವನ್ನು ಮೇಲಕ್ಕೆತ್ತಿ ನಿಂತನು. ಸಲಗವು ಸಲಗದೊಡನೆ ಸೊಕ್ಕಿನಿಂದ ಕಾದಾಡುವಂತೆ ಭೂಮಿಯನ್ನು ಹೊತ್ತವರ ಉಸುರು ಒಂದು ನಿಮಿಷದಲ್ಲಿ ಕಳವಳಗೊಳ್ಳಲು ಇಬ್ಬರು ವೀರರೂ ಒಬ್ಬರ ಮೇಲೊಬ್ಬರು ಎರಗಿದರು. ೧೩. ಯುದ್ಧೋನ್ಮತ್ತ ಎಂದರೆ ಭಯಂಕರ ಯುದ್ಧದಲ್ಲಿ ಮದಿಸಿದವನು ಎಂಬ ಹೆಸರು ಅವನಿಗೆ ನಿಜವಾಗಿ ಒಪ್ಪುವುದು. ಭೂಮಿ ಬಿರಿಯುವಂತೆ ಗರ್ಜಿಸಿ ಭುಜವನ್ನಪ್ಪಳಿಸಿ ಹುರುಪಿನಿಂದ ಬೆಸ ಸಮದ ಹೆಜ್ಜೆಗಳನ್ನಿಡುತ್ತ ಮುಷ್ಟಿಬಿಗಿದು ದೃಷ್ಟಿನೆಟ್ಟು ಅಧಿಕ ಕೋಪದಿಂದ ಭಾರಿಯುದ್ಧವನ್ನು ಕೈಕೊಂಡನು. ೧೪. ಸೊಕ್ಕಿದ ಶತ್ರುವೀರರು ಬಿಗಿಯಾಗಿ ಅಲ್ಲಾಡದೆ ಮಂಡಿಯನ್ನು ನೆಲಕ್ಕೆ ಊರಿ ನಿಂತು ಕಾಳಗಮಾಡುತ್ತ ಒಬ್ಬರು ಇನ್ನೊಬ್ಬರ ಮೇಲೆ ತಮ್ಮ ಸಾಮರ್ಥ್ಯವನ್ನು ಮೆರೆದರು. ತಲೆಯನ್ನು ತಗ್ಗಿಸಿ ಎದೆಯನ್ನು ಬಾಗಿಸಿ ಕಾಲುಗಳನ್ನು ಆಕ್ರಮಿಸಲು ಅಣಿಯಾಗಿ ಇಟ್ಟು ವಜ್ರಮುಷ್ಟಿಯ ವೀರರು ಹೋರಾಟದಲ್ಲಿ ನೆಗೆದರು. ೧೫. ಕೂದಲುಗಳು ನೆಟ್ಟಗೆ ನಿಂತವು, ದೇಹ ಕಾವೇರಿತು, ಕಣ್ಣುಗಳು ದಪ್ಪಕಿಡಿಗಳನ್ನು ಕಾರಿದವು, ಉಸುರಿನೊಡನೆ ಕಪ್ಪುಹೊಗೆ ಎದ್ದಿತು, ಕೋರೆಹಲ್ಲುಗಳನ್ನು ಮಸೆದಾಗ ಕಿಡಿಗಳು ಹಾರಿದವು. ಹೀಗೆ ಕೋಪದ

ಸಿಡಿಲ ಕುಡಿಯೋ ವಿಲಯಹರನು । ಗ್ಘಡದ ರಭಸವೊ ಕಲ್ಪದಲಿ ಬಿರಿ
ದೊಡೆದಜಾಂಡದ ಘಳಘಳಸ್ವನವೋ ಮಹಾದೇವ
ಕಡುಗಲಿಗಳುಬ್ಬರದ ತಿವಿಗುಳ । ನುಡಿಯೊ ಶಿವಶಿವ ಗಗನತಳ ಗು
ಮ್ಮಿಡುತಲಿರ್ದುದು ಕುಣಿವ ಮುಷ್ಟಿನಿಘಾತದಲಿ ಭಟರ ೧೬

ಬೀಳುತಿರ್ದವು ಮುಷ್ಟಿಮುಷ್ಟಿಗ । ಳೇಳಿಗೆಯ ಸಿಡಿಲಂತೆ ಜಾಜಿನ
ಶೈಲದಗ್ರದಲೊಸರ್ವ ನಿರ್ಝರದಂತೆ ರುಧಿರಜಲ
ಜಾಳಿಸಿದವಿಬ್ಬರಲಿ ಕರ್ಣ ಕ । ಪೋಲ ಕಂಧರಗಳಲಿ ತಿವಿಗುಳ
ಸಾಲ ಸಬುದದಲಬುಧಿ ತುಳುಕುತಲಿರ್ದುದನವರತ ೧೭

ಲವನೆ ಕೇಳಾ ಖಳನು ಪೂರ್ವದ । ಭವದಲಂಧಾಸುರನು ವೃಷಭನು
ಶಿವನು ಸಂಘಟಿಸುವುದೆ ಸೋಲವು ಕಾಲಕಂಧರಗೆ
ತಿವಿದನುನ್ನತ ಶಕ್ತಿಯಲಿ ರಾ । ಘವನ ಮೆಚ್ಚಿನ ಘಾಯವೆನುತಲಿ
ಕವಿದುಬಿದ್ದನು ಬೀಳೆ ದಿಗುಶುಂಡಾಲ ತವಕದಲಿ ೧೮

ಮುಂಡಿಸಿದನವನೆದೆಯಲಾ ದೋ । ರ್ದಂಡಬಲ ಕಲಿ ವೃಷಭನಂದಿನ
ಖಂಡಪರಶುವಿನಂತೆ ನೆಗಹಿದ ಮುಷ್ಟಿ ಕಿಡಿಗೆದಱೆ
ತಂಡತಂಡದ ಹರಗಣಂಗಳು । ತಾಂಡವದ ತೊಡೆವಱೆಯ ಬಾಹಾ
ದಂಡದಬ್ಬರದುಬ್ಬರಂಗಳಲೆಸೆದರಭ್ರದಲಿ ೧೯

ಮುಖದ ದರ್ಪಿಷ್ಠರು ಹುರುಪಿನಿಂದ ಹೊಡೆದಾಡಿದರು. ೧೬. ಸಿಡಿಲಿನ ಕುಡಿಯೋ, ಪ್ರಳಯಶಿವನ ಉತ್ಕಟರಭಸವೋ, ಪ್ರಳಯದಲ್ಲಿ ಬಿರಿದು ಒಡೆದ ಬ್ರಹ್ಮಾಂಡದ ಘಳಘಳ ಎಂಬ ಶಬ್ದವೋ! ಮಹಾದೇವ! ಮಹಾವೀರರ ಅತಿಶಯವಾದ ತಿವಿಗುಳದ ತುಂಡೋ! ಶಿವಶಿವ! ವೀರರ ಮುಷ್ಟಿಯೇಟುಗಳಿಂದ ಆಕಾಶವು ಪ್ರತಿಧ್ವನಿಸುತ್ತಿತ್ತು. ೧೭. ಒಂದರ ಹಿಂದೆ ಒಂದರಂತೆ ಬೀಳುವ ಸಿಡಿಲಿನಂತೆ ಮುಷ್ಟಿ ಮುಷ್ಟಿಯೇಟುಗಳು ಬೀಳುತ್ತಿದ್ದವು. ಜಾಜುಗಲ್ಲಿನ ಬೆಟ್ಟದ ತುದಿಯಿಂದ ಹರಿಯುವ ಕಾವಿಬಣ್ಣದ ನೀರಿನ ಪ್ರವಾಹದಂತೆ ರಕ್ತವು ಇಬ್ಬರು ವೀರರ ಕಿವಿ, ಕೆನ್ನೆ, ಭುಜಗಳಿಂದ ಹರಿಯಿತು. ಗುದ್ದುಗಳ ಸಾಲು ಹೊಡೆತಗಳ ಶಬ್ದಕ್ಕೆ ಸದಾ ಸಮುದ್ರವು ತುಳುಕುತ್ತಿತ್ತು. ೧೮. ಲವನೆ ಕೇಳು, ಹಿಂದಿನ ಜನ್ಮದಲ್ಲಿ ಯುದ್ಧೋನ್ಮತ್ತರಾಕ್ಷಸನು ಅಂಧಕಾಸುರನಾಗಿದ್ದ, ವೃಷಭನು ಶಿವನಾಗಿದ್ದ. ನೀಲಕಂಠ ಶಿವನಿಗೆ ಸೋಲು ಸಂಭವಿಸುವುದುಂಟೆ ? ವೃಷಭನಂ 'ಇದು ರಾಘವನ ಮೆಚ್ಚಿನ ಘಾಯ!' ಎನ್ನುತ್ತ ಬಲವಾಗಿ ಗುದ್ದಿ ಅವನ ಮೇಲೆ ಬಿದ್ದನು. ವೃಷಭನ ಗುದ್ದಿನ ರಭಸಕ್ಕೆ ದಿಗ್ಗಜವು ಕಾತುರಗೊಂಡು ಕೆಳಗೆ ಬಿದ್ದಿತು. ೧೯. ತೋಳ್ಬಲದ ವೀರವೃಷಭನು ಅಂದಿನ ಶಿವನಂತೆ ಎತ್ತಿದ ಮುಷ್ಟಿಯು ಕಿಡಿಗೆದರುತ್ತಿರಲು ಯುದ್ಧೋನ್ಮತ್ತನ ಎದೆಯ ಮೇಲೆ ಕುಳಿತನು. ಆಕಾಶದಲ್ಲಿದ್ದ ಶಿವನ ಗಣಗಳ ತಂಡಗಳು ತೊಡೆತಟ್ಟುತ್ತ ತೋಳುಗಳನ್ನಪ್ಪಳಿಸುತ್ತ ಕೂಗುತ್ತ ತಾಂಡವನೃತ್ಯ

ಒತ್ತಿ ಗಂಟಲನೆಂದನೆಲವೋ । ಸತ್ತ್ವಶುದ್ಧರು ನೀವು ನಿಮಗೀ
ಉತ್ತಮದ ಹೆಸರೇಕೆ ಹೆಸರಿದು ನಮ್ಮ ಕಟಕದಲಿ
ಹತ್ತುವುದು ಕೇಳೆಲವೊ ಯುದ್ಧೋ । ನ್ಮತ್ತನೆಂಬಭಿದಾನ ಖಳರೋ
ಕತ್ತೆಗಳೊ ನೀವೆನುತ ಮಗುಳೆಱಗಿದನು ರಕ್ಕಸನ ೨೦

ವಾರಿ ಕಲ್ಲಿನೊಳುದಿಸೆ ಶಿಖಿ ತಾ । ಧಾರುಣಿಗೆ ಕಡುಚಿತ್ರವಲ್ಲಾ
ವೀರತನ ನಿಮಗುಳ್ಳರೆವಿಮ್ಮಾ ಕಪಿಗಳಾಜಿಯಲಿ
ತೀರಿಸುವಿರೇ ಹರಣಗಳ ನೀವ್ । ತಾರತಮ್ಯವನಱಿದು ಮಗುಳೆ ವಿ
ಚಾರವಿಲ್ಲದೆ ಕಾದುವುದು ಕಡು ಭಂಡತನವೆಂದ ೨೧

ಘಡ ನರಾಂತಕನೆಂಬನೊಬ್ಬನು । ಗಡ ಸುರಾಂತಕನೆಂಬನೊಬ್ಬನು
ಗಡ ಶಿಖಿ ಬ್ರಹ್ಮಮರಾರಿಗಳೆಂಬ ಪೆಸರು ಗಡ
ಕಡುಭಯಂಕರವೆಸರು ಭುಸ್ಸಟೆ । ಕಡೆಗೆ ರಕ್ಕಸರಿವದಿರುಱೆ ಕಳು
ಗುದುಹಿಗಳಲಾಯೆನುತ ತಿವಿದನು ಮತ್ತೆ ರಕ್ಕಸನ ೨೨

ತಪ್ಪದೈ ನೀನೆಂದ ನುಡಿಯೆನು । ತುಪ್ಪರಿಸಿದುದು ಖಳನ ಹೃದಯದೊ
ಳಪ್ಪ ಮಾರುತ ಮಾರುತಧ್ವಕೆ ನಿಮಿಷಮಾತ್ರದಲಿ
ದರ್ಪಮುಖಿನುಪ್ಪರಿಸಿ ಭುಜವನು । ಚಪ್ಪರಿಸಿ ಬೊಬ್ಬಿಱಿದು ಹೊಕ್ಕನು
ನಿಪ್ಪಸರದಲಿ ನಿಗುರಿ ಬಳಿಕುಳುಕಲಿನ ಸೇನೆಯಲಿ ೨೩

ದಿಂದ ಕುಣಿದರು. ೨೦. ವೃಷಭನು ಯುದ್ಧೋನ್ಮತ್ತನ ಗಂಟಲನ್ನು ಅದುಮಿಹಿಡಿದು, "ಎಲವೋ, ನೀವು ಸತ್ತ್ವಶುದ್ಧರು. ನಿಮಗೆ ಈ ಶ್ರೇಷ್ಠ ಹೆಸರು ಏತಕ್ಕೆ ? ಯುದ್ಧೋನ್ಮತ್ತನೆಂಬ ಹೆಸರು ನಮ್ಮ ಸೈನ್ಯದಲ್ಲಿ ಸಲ್ಲುವುದು. ನೀವೇನು ರಾಕ್ಷಸರೋ ಕತ್ತೆಗಳೋ?" ಎನ್ನುತ್ತ ಪುನಃ ಅವನ ಮೇಲೆರಗಿದನು. ೨೧. ನೀರ್ಗಲ್ಲಿನಲ್ಲಿ ಬೆಂಕಿ ಹುಟ್ಟಿದರೆ ಅದು ಜಗತ್ತಿಗೆ ಅತ್ಯಾಶ್ಚರ್ಯವಲ್ಲವೇ ! ನಿಮ್ಮಲ್ಲಿ ಪರಾಕ್ರಮವಿದ್ದರೆ ಯುದ್ಧದಲ್ಲಿ ತಾರತಮ್ಯಜ್ಞಾನ ತಿಳಿದು, ನಮ್ಮ ಈ ಕಪಿಗಳ ಪ್ರಾಣವನ್ನು ತೀರಿಸುವಿರೇ ? ವಿವೇಕವಿಲ್ಲದೆ ಯುದ್ಧಮಾಡುವುದು ಬಲುಭಂಡತನ" ಎಂದು ವೃಷಭ ನುಡಿದ. ೨೨. "ಛೀ, ನರಾಂತಕನೆಂಬವನೊಬ್ಬ ! ದೇವಾಂತಕನೆಂಬವನೊಬ್ಬ ! ಛೇ, ಇವರಿಗೆ ಅಗ್ನಿ ಬ್ರಹ್ಮ ದೇವತೆಗಳ ಹಗೆಗಳೆಂಬ ಹೆಸರುಗಳು ! ಅಬ್ಬಾ, ಭಯಂಕರ ಹೆಸರು ! ಕೊನೆಗೆ ಬರಿ ಭುಸ್ಸೆನ್ನುವ ರಾಕ್ಷಸರು ಇವರು. ಕೇವಲ ಹೆಂಡಕುಡುಕರು !" ಎನ್ನುತ್ತ ವೃಷಭನು ಪುನಃ ರಾಕ್ಷಸನನ್ನು ಗುದ್ದಿದನು. ೨೩. "ನೀನು ಹೇಳಿದ ಮಾತು ಸುಳ್ಳಲ್ಲ !" ಎನ್ನುತ್ತ ಯುದ್ಧೋನ್ಮತ್ತನ ಎದೆಯ ಪ್ರಾಣವು ನಿಮಿಷಮಾತ್ರದಲ್ಲಿ ಆಕಾಶಕ್ಕೆ ಹಾರಿತು. ಬಳಿಕ ಕೊಬ್ಬಿದ ವೃಷಭನು ಭುಜಗಳನ್ನಪ್ಪಳಿಸಿ ಬೊಬ್ಬೆಹಾಕಿ ಎದ್ದು ಉಳಿದ ರಾಕ್ಷಸಸೇನೆ

ಹೇಳಲೇನುದ್ದಂಡ ಚಂಡ ಕ । ರಾಳ ಕರ್ಕಶ ಕದನ ಕೌತುಕ
ದೇಳಿಗೆಯು ಕೈಕೊಂಡು ಕೈಮಾಡುವ ನಿಶಾಚರರ
ತೂಳಿದನು ತೂಱಿದನು ತುಳಿದನು । ಸೀಳಿದನು ಸದೆದಿಕ್ಕಿ ಹೊಳಕಿದು
ಹೂಳಿದನು ಹೊಯ್ದೊದರಿಸಿ ಹರಹಿದನಮರರಬ್ಬರಿಸೆ ೨೪

ಚೆಲ್ಲಬಡಿದನು ಮಿಕ್ಕು ಮೀಱುವ । ಬಲ್ಲಿದರನತಿಬಲರ ರಣದಲಿ
ಹುಲ್ಲ ಕಚ್ಚಿಸಿ ಹುತ್ತನೇಱಿಸಿ ಹೊಗಿಸಿ ಸಾಗರವ
ಬಿಲ್ಲ ಬಿಸುಡಿಸಿ ಬಿರುದ ಹಱಿಯಿಸಿ । ಹಲ್ಲ ಕಿರಿಯಿಸಿ ಮಗುಳ್ದನಪ್ರತಿ
ಮಲ್ಲನುಬ್ಬಿದ ವೈಯಲರಸನ ಹೊರೆಗೆ ಹರುಷದಲಿ ೨೫

ಯನ್ನು ಉಗ್ರವಾಗಿ ಪ್ರವೇಶಿಸಿದನು ೨೪. ಏನೆಂದು ವರ್ಣಿಸಲಿ, ವೃಷಭನು ಪ್ರಚಂಡ ಭಯಂಕರ ಕ್ರೂರ ಯುದ್ಧವನ್ನು ಕೈಕೊಂಡು ತನ್ನ ಮೇಲೆ ಕೈಮಾಡಿದ ರಾಕ್ಷಸರನ್ನು ಓಡಿಸಿದನು, ತೂರಿದನು, ತುಳಿದನು, ಸೀಳಿದನು, ಅಗಿದು ಹೂತುಹಾಕಿದನು, ಹೊಡೆದು ಉಜ್ಜಿ ಹರಡಿದನು. ಆಗ ದೇವತೆಗಳು ಕೇಕೆ ಹಾಕಿದರು. ೨೫. ರಾಕ್ಷಸರು ದಿಕ್ಕುದಿಕ್ಕಿಗೆ ಓಡುವಂತೆ ಬಡಿದನು. ಮಿತಿಮೀರಿ ಮೇಲೆ ಬರುವ ಶೂರರನ್ನೂ ಬಲಶಾಲಿಗಳನ್ನೂ ಯುದ್ಧದಲ್ಲಿ ಹುಲ್ಲು ಕಚ್ಚಿಸಿ, ಹುತ್ತವನ್ನೇರುವಂತೆ ಮಾಡಿದನು. ಕೆಲವರನ್ನು ಸಮುದ್ರಕ್ಕೆಸೆದನು. ಕೆಲವರು ಬಿಲ್ಲು ಬಿಸಾಡುವಂತೆ ಮಾಡಿದನು. ಕೆಲವರು ಹಲ್ಲುಕಿರಿಯುವಂತೆ ಮಾಡಿದನು. ಬಳಿಕ ಅಸಮಾನವೀರ ವೃಷಭನು ಸಂತೋಷದಿಂದ ಉಬ್ಬಿ ರಾಮನ ಬಳಿಗೆ ಬಂದನು.

# ಮೂವತ್ತುನಾಲ್ಕನೆಯ ಸಂಧಿ

ಸೂಚನೆ || ರಾಯ ರಾಕ್ಷಸವಿಜಯ ರಾಯರ । ರಾಯ ಲಕ್ಷ್ಮಣನಾಹವದೊಳತಿ
ಕಾಯನನು ಗೆಲಿದೊಲಿಸಿದನು ಭುಜವಿಜಯಭಾಮಿನಿಯ

ಕೇಳಿದೈ ರಘುವಂಶಲಕ್ಷ್ಮೀ । ಲೋಲಸುತ ನಿಮ್ಮವರ ವೀರಭ
ಟಾಳಿ ಬಲಿದುದು ಮುತ್ತಿಗೆಯನಸುರೇಂದ್ರಪುರವರಕೆ
ಕೇಳಿಸಿತು ಕದನದಲಿ ಜೀವವ । ಜಾಳಿಸಿದ ರಾಕ್ಷಸರ ವಾರ್ತೆ
ಭೀಳ ಭೀಷಣ ವಚನವಚಳಿತ ಖಳಕುಲೋತ್ತಮನ ೧

ಎದ್ದನೋಲಗದಿಂದ ಹರುಷವ । ಕದ್ದ ಕದಡಿನ ಹೃದಯದಲಿ ರವಿ
ಯೆದ್ದನಪರಾಂಬುಧಿಯ ಮಧ್ಯದಲೊಡನೆ ನಿಮಿಷದಲಿ
ಎದ್ದನಾ ಪೂರ್ವಾಬ್ಧಿ ಸಲಿಲವ । ನೊದ್ದು ಮನದಾದಿಯಲಿ ರಾವಣ
ಹೊದ್ದಿದನು ಸಿಂಹಾಸನವ ಸಾಮಂತರೊಗ್ಗಿನಲಿ ೨

ಹೊಗೆಯ ಹೊರಳಿಯನುಗಿದು ದಳ್ಳುರಿ । ಧಗಧಗಿಸುವಂದದಲಿ ದುಃಖದ
ದುಗುಡವನು ದೂಟಕ್ಕಿ ದಳ್ಳಿಸಿತಧಿಕ ರೋಷಾಗ್ನಿ
ಹಗೆಗೆ ಜಯವಿಂದಿನಲಿ ಜಯಸಂ । ಯುಗವು ತನಗಿಂದಿನಲಿ ರಣವನು
ಹೊಗುವೆ ಹಳಚುವೆನೆನುತ ವೀರಾವೇಶಮನನಾದ ೩

ಸೂಚನೆ|| ರಾಕ್ಷಸವಿಜಯ ರಾಜಾಧಿರಾಜ ಲಕ್ಷ್ಮಣನು ಯುದ್ಧದಲ್ಲಿ ಅತಿಕಾಯನನ್ನು ಗೆದ್ದು ಭುಜಲಕ್ಷ್ಮಿಯನ್ನೂ ವಿಜಯಲಕ್ಷ್ಮಿಯನ್ನೂ ಒಲಿಸಿಕೊಂಡನು. ೧. ರಘುವಂಶಲಕ್ಷ್ಮೀಪ್ರಿಯನ ಕುಮಾರನೇ, ಕೇಳಿದೆಯಾ. ನಿಮ್ಮವರ ವೀರಯೋಧರು ಲಂಕಾಪಟ್ಟಣಕ್ಕೆ ಮುತ್ತಿಗೆ ಹಾಕಿದರು. ಯುದ್ಧದಲ್ಲಿ ಪ್ರಾಣವನ್ನೊಪ್ಪಿಸಿದ ರಾಕ್ಷಸರ ಭಯಂಕರ ವಾರ್ತೆಯು ಧೀರ ರಾಕ್ಷಸಕುಲಶ್ರೇಷ್ಠ ರಾವಣನ ಕಿವಿಗೆ ಬಿದ್ದಿತು. ಹೀಗೆಂದು ವಾಲ್ಮೀಕಿಗಳು ಕಥೆಯನ್ನು ಮುಂದುವರಿಸಿದರು. ೨. ಹರ್ಷವನ್ನು ಕಳೆದುಕೊಂಡು ಕಲಕಿದ ಹೃದಯದಿಂದ ರಾವಣನು ಸಭೆಯನ್ನು ಬಿಟ್ಟು ಎದ್ದನು. ಮರುನಿಮಿಷದಲ್ಲಿ ಸೂರ್ಯನು ಪಶ್ಚಿಮಸಾಗರದಲ್ಲಿ ಮುಳುಗಿದನು. ಅನಂತರ ಸೂರ್ಯನು ಬೆಳಗ್ಗೆ ಪೂರ್ವಸಮುದ್ರದ ನೀರಿನಿಂದ ಮೇಲೆದ್ದನು. ಮನಸ್ಸಿನಲ್ಲಿ ಚಿಂತಿಸುತ್ತ ರಾವಣನು ಓಲಗಶಾಲೆಗೆ ಬಂದು ಸಾಮಂತರೊಡನೆ ಸಿಂಹಾಸನದಲ್ಲಿ ಕುಳಿತನು. ೩. ಹೊಗೆಯನ್ನು ಗುಳಿ ದಳ್ಳುರಿಯು ಧಗಧಗಿಸುವಂತೆ ರಾವಣನು ಮನಸ್ಸಿನಿಂದ ದುಃಖವನ್ನು ತಳ್ಳಿದನು, ಅವನಲ್ಲಿ ಕೋಪಾಗ್ನಿಯು ಭುಗ್ಗೆಂದಿತು "ಶತ್ರುವಿಗೆ ಜಯವಾಯಿತು. ಈದಿನ ನನಗೆ ಜಯವು, ಈ ದಿವಸ ನಾನು ಯುದ್ಧಕ್ಕೆ ಹೋಗಿ ಶತ್ರುಗಳನ್ನು ಆಕ್ರಮಿಸುವೆ"

ಅಬಲನೆಂದೇ ತಂದೆನೇ ಮು । ನ್ನಬಲೆಯನು ಕಿಱಿದಸುರರಳಿದೀ
ಸಬುದ ಮಾತ್ರಕೆ ಸರಿವುದೇ ಸಾಹಸದ ಸಿರಿ ತನಗೆ
ಅಬುಧಿಗಬುಧಂಜುವುದೆ ಸಂಗರ । ಲುಬುದನೇ ತಾನಂತಕನ ಕರ
ಕಬಳನರಿಭಟನೆನಿಸದಿರೆ ದಶಕಂಠನಲ್ಲೆಂದ ೪

ಇಂದು ರಾಮನ ರಣದಿ ಕೆಡಹದೆ । ಹಿಂದು ಮುಂದಾನಾದೆನಾದರೆ
ತಂದೆ ಮುನಿಪತಿ ವಿಶ್ರವಸು ಕೈಕಸೆಗಳುದರದಲಿ
ಬಂದವನೆ ತಾನೆನುತ ಹೂಂಕೃತಿ । ಯಿಂದ ಗರ್ಜಿಸೆ ನಗುತ ಬಳಿಕಿಂ
ತೆಂದನಯ್ಯಂಗೊಯ್ಯನಗಕುಲಕಾಯನತಿಕಾಯ ೫

ಎಲೆ ನಿಶಾಚರರಾಯ ತಾಮಸ । ತಿಳಿಯದಿನ್ನೂ ನಿನಗೆ ನೀನೇ
ಕೊಲುವವನೆ ಲಯ ಜನನರಹಿತನು ನಿನ್ನ ಗಂಟಲಲಿ
ಇಳಿವವನೆ ರಘುನಾಥನಾರೆಂ । ದೊಳಗನಱಿಯೆಯಲಾ ನಿಶಾಚರ
ಕುಲ ಕುಲಾಚಲವಜ್ರದಂಡನನಕಟ ನೀನೆಂದ ೬

ನೂಕಲರಿಯದು ಜಯವು ನಿನಗಿ । ಕ್ಷ್ವಾಕುಕುಲಪಾಲಕನೊಳೀ ಜಗ
ದೇಕನಾಥನೊಳಕಟ ನರನೇ ರಾಮ ನೋಡಲಿಕೆ
ಏಕೆ ನಿನಗೀ ಮರುಳುತನ ಮೈ । ಸೋಕು ಸಲ್ಲದು ಸೀತೆಯಲಿ ಪರಿ
ಪಾಕ ಚಿತ್ತದೊಳಿಲ್ಲವಕಟಕಟೆಂದನತಿಕಾಯ ೭

ಎಂದು ವೀರಾವೇಶದಿಂದ ನುಡಿದ. ೪. "ಅಬಲೆ ಸೀತೆಯನ್ನು ನಾನು ಬಲಹೀನನೆಂದು ಕರೆತಂದೆನೇ ? ಕೆಲವುಜನ ರಾಕ್ಷಸರು ಸತ್ತರೆಂಬ ಈ ಗಲಾಟೆಗೆ ನನ್ನ ಸಾಹಸದ ಸಂಪತ್ತು ನಷ್ಟವಾಗುವುದೇ ? ಸಮುದ್ರಕ್ಕೆ ಮೋಡವು ಹೆದರುವುದೇ ? ಯುದ್ಧಲೋಭಿಯೇ ನಾನು. ಯಮನಿಗೆ ಕೈತುತ್ತನ್ನು ನೀಡುವ ಶತ್ರುವೀರನನ್ನಿಸದೆ ಹೋದರೆ ನಾನು ದಶಕಂಠನಲ್ಲ" ಎಂದ ರಾವಣ. ೫. "ಇಂದಿನ ದಿವಸ ರಾಮನನ್ನು ಯುದ್ಧದಲ್ಲಿ ಬೀಳಿಸದೆ ಹಿಂದೆ ಸರಿದೆನಾದರೆ ತಂದೆ ವಿಶ್ರವಸು ಮತ್ತು ಕೈಕಸೆಗಳ ಹೊಟ್ಟೆಯಲ್ಲಿ ಹುಟ್ಟಿದವನೆ ನಾನು ?" ಎನ್ನುತ್ತ ರಾವಣನು ಹೂಂಕಾರ ಮಾಡಿ ಗರ್ಜಿಸಲು ಪರ್ವತಸಮಾನ ಶರೀರಿ ಅತಿಕಾಯನು ನಗುತ್ತ ತಂದೆಯನ್ನು ಕುರಿತು ನುಡಿದನು. ೬. "ರಾಕ್ಷಸಚಕ್ರವರ್ತಿಯೇ, ನೀನು ಅಜ್ಞಾನಿ. ನಿನಗೆ ಇನ್ನೂ ತಿಳಿಯದು. ನೀನೇ ಕೊಲ್ಲುವವನು ? ಜನನ ಮರಣಗಳಿಲ್ಲದ ರಘುನಾಥನು ನಿನ್ನ ಗಂಟಲಲ್ಲಿ ಇಳಿಯುವವನೆ ? ಅವನು ಯಾರೆಂಬ ಸತ್ಯವನ್ನು ತಿಳಿಯೆಯಲ್ಲ ? ಅವನು ರಾಕ್ಷಸ ವಂಶಪರ್ವತಕ್ಕೆ ವಜ್ರದಂಡನೆನ್ನುವುದನ್ನು ತಿಳಿಯೆಯಲ್ಲ ?" ಎಂದ ಅತಿಕಾಯ. ೭. "ಜಗತ್ತಿನ ಪ್ರಭು ಇಕ್ಷ್ವಾಕುವಂಶದೊಡೆಯನೊಡನೆ ನಿನಗೆ ಜಯವು ದೊರಕುವುದಸಾಧ್ಯ. ವಿಚಾರಮಾಡಿ ನೋಡಿದರೆ ರಾಮನು ಮಾನವನೇ ? ನಿನಗೇಕೆ ಭ್ರಮೆ. ಸೀತೆಯ ಮೈಯನ್ನು ನೀನು ಮುಟ್ಟಲಾರೆ. ಅಯ್ಯೋ, ನಿನ್ನ ಮನಸ್ಸು ಪರಿಪಕ್ವ

ಮೀಱಿ ಕಾದಿದಡೀತನಲಿ ಜಯ । ವೇಱುವುದೆ ನಿನಗಕಟ ಜಯವಧು
ಬೇಱೆ ಬಡವರಿಗುಂಟೆ ತೊತ್ತು ಕಣಾ ಖರಾಂತಕನ
ಸಾಱಿದೆನು ಬೇಡಕಟ ಫಲವನು । ಕೂರುಗೊಳದಿರು ಕೇಳು ಹೇಳುವೆ
ತೋಱುವೀ ದೈವದ ಮಹತ್ವವನೆಂದನತಿಕಾಯ ೮

ಭುವನವೀತನ ದೇಹವೀ ದಿಗು । ನಿವಹವೀತನ ಕಿವಿಗಳೀ ಶಶಿ
ರವಿಗಳೀತನ ಕಂಗಳೀ ಪವಮಾನನುಸುರು ಕಣ
ಭುವನನಿಧಿ ತಾನೀ ಮಹಾತ್ಮನ । ಬೆವರು ಕಮಠನು ಪಾದ ಮಸ್ತಕ
ದವಿರಳದ ಕೇಶಾಗ್ರವೀಯಾಕಾಶತುದಿಯೆಂದ ೯

ನೆಲೆಯನಱಿವ ಮಹಾನುಗಳಿಗಂ । ಗುಲವ ಹತ್ತನು ಮಿಕ್ಕಿಹನು ಮನ
ನಿಲುಕಿತೆಂಬಱಿವುಳ್ಳರಿಗೆ ಮೈದೋಱದಿಹನು ಕಣ
ಸುಲಭವೆಂಬ ಮಹಾನುಭವರಿಗೆ । ಜಲದ ಲಿಪಿಯಂತಿಹನು ಯೋಗಿಗ
ಳೊಲುಮೆಗೊಲಿದೊಲಿಯದವೊಲಿಹನೀ ರಾಮ ನೋಡೆಂದ ೧೦

ಆರೊಡನೆ ಕೈಸೋಂಕು ಕದನವ । ದಾರ ಕೂಡಪಚಾರಣೆಯು ಬಿರಿ
ದಾರ ಹತ್ತಿರೆ ಮೂದಲೆಯ ಮಾತಾರ ಸರಿಸದಲಿ
ಆರಿದಿರಲತಿಮಥನ ಕೇಳಶ । ರೀರನೊಳು ಗೋಚರವಿಹೀನನೊ
ಳಾರುಭಟೆ ನಿನಗೆಂತು ಮೆಱೆವುದು ತಂದೆ ಹೇಳೆಂದ ೧೧

ವಾಗಿಲ್ಲ!" ಎಂದನು ಅತಿಕಾಯ. ೮. "ಮೀರಿ ರಾಮನೊಡನೆ ಯುದ್ಧಮಾಡಿದರೆ ಈತನ ಮೇಲೆ ನಿನಗೆ ಜಯ ಲಭಿಸುವುದೆ ? ಜಯಲಕ್ಷ್ಮಿಯು ಬಡವರಿಗೆ ದೊರೆಯುವಳೆ ? ಖರಾಂತಕ ರಾಮನ ದಾಸಿ ಅವಳು. ಸಾರಿ ಹೇಳುತ್ತೇನೆ, ಇದು ಬೇಡ, ಇದರ ಫಲವನ್ನು ಮೋಹಿಸಬೇಡ. ನಮಗೆ ಕಾಣಿಸುತ್ತಿರುವ ಈ ದೇವನ ಮಹತ್ವವನ್ನು ಹೇಳುತ್ತೇನೆ ಕೇಳು" ಎಂದ ಅತಿಕಾಯ. ೯. "ಜಗತ್ತು ಈತನ ದೇಹ, ಈ ದಿಕ್ಕುಗಳು ಈತನ ಕಿವಿಗಳು, ಈ ಸೂರ್ಯ ಚಂದ್ರರು ಈತನ ಕಣ್ಣುಗಳು, ವಾಯುವು ಇವನ ಉಸಿರು, ಸಮುದ್ರವು ಈ ಮಹಾತ್ಮನ ಬೆವರು, ಕೂರ್ಮವು ಈತನ ಪಾದ, ಆಕಾಶದ ತುದಿಯು ಈತನ ಕೂದಲಿನ ತುದಿ" ಎಂದ ಅತಿಕಾಯ. ೧೦. "ಈ ಪರಮ ಪುರುಷನ ನೆಲೆಯನ್ನು ಅರಿತ ಮಹಾತ್ಮರಿಗೆ ಹತ್ತು ಅಂಗುಲ ಮೀರಿದವನು. ಮನಸ್ಸು ಅವನನ್ನು ಮುಟ್ಟಿತು ಎಂಬ ಜ್ಞಾನಿಗಳಿಗೆ ಪ್ರತ್ಯಕ್ಷನಾಗದಿದ್ದಾನೆ. ಈತನು ತಮಗೆ ಸುಲಭ ಎಂಬ ಮಹಾನುಭಾವರಿಗೆ ನೀರಿನ ಮೇಲೆ ಬರೆದ ಅಕ್ಷರದಂತಿದ್ದಾನೆ. ಈ ರಾಮನು ಯೋಗಿಗಳ ಭಕ್ತಿಗೆ ಒಲಿದೂ ಒಲಿಯದಂತಿದ್ದಾನೆ, ನೋಡು" ಎಂದ ಅತಿಕಾಯ. ೧೧. "ಯಾರನ್ನು ನೀನು ಕೈಯಿಂದ ಸ್ಪರ್ಶಮಾಡುವೆ ? ಯಾರೊಡನೆ ಯುದ್ಧ ಮಾಡುವೆ ? ಯಾರೊಡನೆ ಅಗೌರವನಡತೆಯ ಬಿರುದು ? ಯಾರ ಬಳಿ ಹೀಯಾಳಿಸುವ ಮಾತು ? ಯಾರ ಎದುರಿನಲ್ಲಿ ಭಾರಿ ಯುದ್ಧ ? ಅಶರೀರಿಯೊಡನೆ ಅದೃಶ್ಯನೊಡನೆ ನಿನ್ನ ಅರ್ಭಟ ಹೇಗೆ ಒಪ್ಪುವುದು ? ಹೇಳು,

ಇಱಿತಕಂಬರವಳುಕುವುದೆ ನೊರ । ಜುಬಲಗ್ನಿಗೆ ನೋವಹುದೆ ಕ
ಟ್ಟುಜುಹೆ ಕಚ್ಚಿದರಳುಕುವುದೆ ಸುರಗಿರಿ ನಿಧಾನಿಸಲು
ಉಱುಬುಗೊಂಡೆಳೆಗುಬ್ಬಿ ಕುಡಿದರೆ । ಬಱಿವುದೇ ಜಲರಾಶಿ ರಾಮನೊ
ಳಱಿತಕೊಂಬುದೆ ನಿನಗೆ ಹೇಳೆಲೆ ತಂದೆ ತನಗೆಂದ ೧೨

ತರಣಿಶತಸಂಕಾಶನಲಿ ಶಂ । ಕರಸಹಸ್ರ ಬಲಾಢ್ಯನಲಿ ಸರ
ಸಿರುಹಸಂಭವ ಕೋಟಿ ರಾಜಸಗುಣ ಸಮಗ್ರನಲಿ
ಅರಸ ಕೇಳ್ ಬ್ರಹ್ಮಾಂಡಮಯ ವಿ । ಸ್ತರ ಶರೀರನೊಳೆಂತು ಘಟಿಸುವು
ದರಿವಿಜಯ ಪರಿಹಾಸಕರಿಗೊಳಗಾಗಬೇಡೆಂದ ೧೩

ಜಗದುದರನಲಿ ಜಗನುಮಯನಲಿ । ಜಗದ ಚೈತನ್ಯಾತ್ಮನಲಿ ತ
ಜ್ಜಗದ ಲೀಲಾಚರಿತನಲಿ ಜಗದಂತರಾತ್ಮನಲಿ
ಜಗದ ಜನನಸ್ಥಿತಿ ಲಯದ ಪ್ರೈ । ಸೊಗಸುಕಾಱನೊಳೆಂತು ಗೆಲವಿನ
ಬಗೆಯು ಸಂಘಟಿಸುವುದು ಹೇಳೈ ತಂದೆ ತನಗೆಂದ ೧೪

ದಿಟ ವಿಚಾರಿಸಲೀತನನು ನೀ । ನಟಮಟಿಸಲಳುಕುವನೆ ಸೀತೆಗೆ
ವಿಟತನವ ಮಾಳ್ಪವನೆ ಮಾಯಾಪ್ರಕೃತಿಪುರುಷನಲಿ
ಘಟಿಸುವುದೆ ದುರ್ನಯವು ಮೃಣ್ಮಯ । ಘಟವಜಾಂಡವ ಕೆಣಕುವುದೆ ಚಾ
ಪಟೆಯತನವಿದು ಜೀಯ ಜಾಣರ ಮತವಿದಲ್ಲೆಂದ ೧೫

ತಂದೆ" ಎಂದ ಅತಿಕಾಯ. ೧೨. "ಕತ್ತಿಯು ಹೊಡೆತಕ್ಕೆ ಆಕಾಶ ಅಂಜುವುದೆ ? ನೊರಜುಗಾಳಿ ಊದಿದರೆ ಬೆಂಕಿಗೆ ನೋವಾಗುವುದೆ ? ವಿಚಾರಮಾಡಿ ನೋಡಿದರೆ ಕಟ್ಟಿರುವೆ ಕಚ್ಚಲು ಮೇರುಪರ್ವತವು ಹೆದರುವುದೆ ? ಎಳೆಗುಬ್ಬಚ್ಚಿಯು ನೀರನ್ನು ಕುಡಿದರೆ ಸಾಗರವು ಬತ್ತುವುದೇ ? ರಾಮನು ನಿನ್ನಿಂದ ಇರಿತಕ್ಕೊಳಗಾಗುವನೆ ? ಅಪ್ಪಾ, ನನಗೆ ಉತ್ತರ ಕೊಡು" ಎಂದ ಅತಿಕಾಯ. ೧೩. "ನೂರು ಸೂರ್ಯರ ಪ್ರಕಾಶನೊಡನೆ, ಸಾವಿರ ಶಂಕರರ ಬಲಶಾಲಿಯೊಡನೆ, ಕೋಟಿ ಬ್ರಹ್ಮರ ರಜೋಗುಣಸಂಪನ್ನನೊಡನೆ, ಬ್ರಹ್ಮಾಂಡ ಶರೀರಿಯೊಡನೆ ಶತ್ರುಜಯವು ದೊರಕುವುದೆಂತು ? ಅಪಹಾಸ್ಯಕ್ಕೊಳಗಾಗಬೇಡ" ಎಂದ ಅತಿಕಾಯ. ೧೪. "ಜಗತ್ತನ್ನು ಹೊಟ್ಟೆಯಲ್ಲಿ ಧರಿಸಿರುವವನೊಡನೆ, ಜಗತ್ತೇ ತಾನಾಗಿರುವನೊಡನೆ, ಜಗತ್ತಿನ ಚೈತನ್ಯಾತ್ಮನೊಡನೆ, ಜಗತ್ತಿನ ಲೀಲೆಯೇ ತನ್ನ ಚರಿತೆಯಾಗಿರುವವನೊಡನೆ, ಜಗತ್ತಿನ ಅಂತರಾತ್ಮನಾಗಿರುವವನೊಡನೆ, ಜಗತ್ತಿನ ಹುಟ್ಟು ರಕ್ಷಣೆ ನಾಶಗಳ ಕರ್ತನಾದ ‘ಸೊಗಸುಗಾರನೊಡನೆ ಗೆಲವು ಹೇಗೆ ಒದಗುವುದು ? ತಂದೆ, ನನಗೆ ತಿಳಿಸು" ಎಂದ ಅತಿಕಾಯ. ೧೫. "ಸತ್ಯವಾಗಿ ನೋಡಿದಲ್ಲಿ ಈತನನ್ನು ನೀನು ವಂಚಿಸಿದರೆ ಇವನು ಹೆದರುವನೆ ? ಸೀತೆಯಲ್ಲಿ ನೀನು ಕಾಮುಕನಾಗಿ ವರ್ತಿಸಬಹುದೆ ? ಮಾಯಾಪ್ರಕೃತಿಪುರುಷನೊಡನೆ (ಸತ್ವ ರಜಸ್ ತಮಗಳೆಂಬ ಗುಣತ್ರಯಸ್ವರೂಪಿ ಮಾಯಾಪುರುಷನೊಡನೆ) ದುರ್ನಡತೆಯು ನಡೆಯುವುದೆ ? ಮಣ್ಣಿನ ಮಡಕೆಯು ಬ್ರಹ್ಮಾಂಡವನ್ನು ಕೆಣಕಬಲ್ಲುದೆ? (ಮಣ್ಣಿನ ಮಡಕೆಯು ಮಾನವಶರೀರಿಯಾದ

ಈತ ಮುಳಿದಹಿತರನು ರಕ್ಷಿಸಿ । ದಾತಗಳು ಮುನ್ನುಂಟೆ ಪೂರ್ವದ
ಲೀತ ರಕ್ಷಿಸಿದವರ ಕೊಂದವರುಂಟೆ ಜಗದೊಳಗೆ
ಏತಕಕಟಾ ಭ್ರಾಂತು ಭೂಸಂ । ಜಾತೆಯನು ಕೊಂಡೊಯ್ದುಕೊಡು ಸಹ
ಜಾತನನು ಕರೆತಂದು ಸುಖದಲಿ ರಾಜ್ಯವಾಳೆಂದ ೧೬

ನಿನ್ನ ಹವಣೇನೀತನಲಿ ರಣ । ಗನ್ನವನು ಸವೆದವರು ಸೆಣಸಿದ
ಮುನ್ನಿವರೊಳಗೇಕದೇಶಕೆ ಬಹೆಯೊ ಬಂದಿಹೆಯೊ
ಸನ್ನಿಯಿದು ಮಧುಕೈಟಭಾದಿಗ । ಳುನ್ನತಿಕೆಯೇನಾಯ್ತು ಶ್ರುತಿಭೂ
ಕನ್ನೆಯನು ಕದ್ದವರ ಕಡುಹೇನಾಯ್ತು ಹೇಳೆಂದ ೧೭

ದೇವನೀತನು ಸಕಲದೇವರ । ದೇವನೀತನು ಬಂಧುವೀತನು
ಭಾವಕರ ಕುಲದೈವವೀತನು ಭಕ್ತಲೋಲುಪನು
ಸಾವು ತಪ್ಪಿದುದೀತನಿಂ ದಂ । ತಾವಳೀಂದ್ರಂಗಂಬರೀಶ ಮ
ಹಾವಿಭು ಪ್ರಹ್ಲಾದದೇವಂಗರಸ ಕೇಳೆಂದ ೧೮

ಅಂಬುನಿಧಿ ಬಡಬಡವರಿಗೆ ತೆಗೆ । ದಂಬಿಗೊಡಲೊಡ್ಡುವುದೆ ಕಪಿಗಳ
ಡೊಂಬಿಗೀವುದೆ ಬೆನ್ನ ಬೆಟ್ಟಕೆ ಕಥೆಯ ಮಾತಲ್ಲ
ಅಂಬುಜಾಸನ ಮುಖ್ಯ ಸುರನಿಕು । ರುಂಬಕಳುಕದ ಖಳರ ಜೀವವ
ಕೊಂಬರೇ ನರರಱಿಯಬಾರದೆ ತಂದೆ ನಿನಗೆಂದ ೧೯

ನೀನು ಬ್ರಹ್ಮಾಂಡವನ್ನೊಳಕೊಂಡ ಪರಮಾತ್ಮನನ್ನು ಕೆಣಕಬಲ್ಲೆಯಾ ?) ಸ್ವಾಮಿ. ನಿನ್ನದು ಉದ್ಧಟತನ. ಬುದ್ಧಿವಂತರ ವಿಚಾರವಲ್ಲ ಇದು" ಎಂದ ಅತಿಕಾಯ. ೧೬. "ಈತನು ಕೋಪಗೊಂಡ ಶತ್ರುಗಳನ್ನು ಹಿಂದೆ ಕಾಪಾಡಿದವರುಂಟೆ ? ಈತನು ರಕ್ಷಿಸಿದವರನ್ನು ಜಗತ್ತಿನಲ್ಲಿ ಕೊಂದವರುಂಟೆ ? ಸುಮ್ಮನೆ ಭ್ರಾಂತಿ ಏಕೆ ? ಜಾನಕಿಯನ್ನು ಕರೆದುಕೊಂಡುಹೋಗಿ ರಾಮನಿಗೆ ಒಪ್ಪಿಸು. ನಿನ್ನ ತಮ್ಮನನ್ನು ಕರೆದುಕೊಂಡು ಬಂದು ಸುಖವಾಗಿ ರಾಜ್ಯವಾಳು" ಎಂದ ಅತಿಕಾಯ. ೧೭. "ಈತನಲ್ಲಿ ನಿನ್ನ ಸಾಮರ್ಥ್ಯವೇನು ನಡೆಯುವುದು ? ಈತನೊಡನೆ ಹಿಂದೆ ಯುದ್ಧದ ಕುತಂತ್ರವನ್ನು ನಡೆಸಿದವರ ಸ್ಥಿತಿಗೇ ನೀನೂ ಬರುತ್ತೀಯೋ, ಇಲ್ಲವೋ ? ಇದು ಸತ್ಯ. ಮಧುಕೈಟಭಾದಿ ಅಸುರರ ಸಾಹಸವೇನಾಯಿತು ? ವೇದವನ್ನೂ ಭೂಮಿಯನ್ನೂ ಕದ್ದ ಸೋಮಕಾಸುರ ಹಿರಣ್ಯಾಕ್ಷರ ಪರಾಕ್ರಮವೇನಾಯಿತು ? ಹೇಳು" ಎಂದ ಅತಿಕಾಯ. ೧೮. "ಈತನು ಪರಮಾತ್ಮ, ಸಕಲ ದೇವರದೇವ, ಬಂಧು, ಹಿತಚಿಂತಕರ ಕುಲದೇವರು, ಭಕ್ತಪ್ರಿಯ, ಗಜೇಂದ್ರ, ಅಂಬರೀಶ. ಪ್ರಹ್ಲಾದರುಗಳಿಗೆ ಈತನಿಂದ ಮರಣವು ತಪ್ಪಿತು. ೧೯. ಸಮುದ್ರವು ಬಲಹೀನರಿಗೆ ಹೆದರಿ ಬಾಣಕ್ಕೆ ದೇಹವನ್ನು ಒಡ್ಡುವುದೇ ? ಕಪಿಗಳ ಆಡಂಬರಕ್ಕೆ ಪರ್ವತವು ಬೆನ್ನನ್ನು ಕೊಡುವುದೇ ? ಇದೆಲ್ಲ ಕಥೆಯ ಮಾತಲ್ಲ. ಬ್ರಹ್ಮನೇ ಮೊದಲಾದ ಮುಖ್ಯ ದೇವತೆಗಳಿಗೆ ಹೆದರದ ರಾಕ್ಷಸರನ್ನು ಮಾನವರು ಕೊಲ್ಲಬಲ್ಲರೇ ? ನಿನಗೆ

ಖರ ವಿರಾಧ ಸುಬಾಹು ಮಾರೀ । ಚರುಗಳೇನಾದರು ಬಲಾನ್ವಿತ
ಸುರಪಸುತನೇನಾದನಿತ್ತಲು ನಿನ್ನ ಸೇನೆಯಲಿ
ಕರವ ಪೂಜಿಸಿಕೊಂಬ ಸುಭಟರ । ನೆರವಿ ತಾನೇನಾಯ್ತು ರಕ್ಕಸ
ರರಸನಲ್ಲಾ ಕುಂಭಕರ್ಣನದೆಲ್ಲಿ ತೋಱೆಂದ ೨೦

ಮಱೆಯಬೇಕಿನ್ನಾದಡೆಯು ಬಿಡು । ಸೆಱೆಯ ಸೀತೆಯ ಹೆಚ್ಚು ಕುಂದಿನ
ಕೊಱತೆ ಬಾರದು ಭಾವಿಸೀ ನುಡಿ ವೇದಮತವೆಂದು
ಹೊಱದಿರಪಕೀರ್ತಿಯನು ಪಾತಕ । ಕುಱುಸದಿರು ದುರ್ಜನರು ಬಳಸುವ
ಕೆಱೆಗೆ ಕಲ್ಲಿನ ಕಟ್ಟೆಯಾಗದಿರೆಂದನತಿಕಾಯ ೨೧

ಎಲವೊ ಕೇಳತಿಕಾಯ ಮತಿಗಳು । ನಿಲುಕಲರಿಯವು ತುದಿಗೆ ನಿನ್ನಯ
ನಿಲುಕಡೆಗಳವು ಬೇಱೆ ಮಾರೀಚನ ವಿಭೀಷಣನ
ಬಳಿಯ ಕೈಕಸೆ ಮಾಲ್ಯವಂತರ । ತಿಳುಹುಗಳ ತುದಿ ನಿನ್ನದೈಸಲೆ
ಕಲಹಕಂಜುವಡತ್ತ ಸಾರ್ಕಾಳ್ಗೆಡೆಯಬೇಡೆಂದ ೨೨

ಕಥೆಯನಿದನಾ ಕೇಳಿದೆನು ಕಡು । ಶಿಥಿಲವಾದವು ಹಿಂದಕಿವು ರಿಪು
ಮಥನವುಂಟೇ ಹೇಳು ಬೊಮ್ಮದ ಮಾತದಂತಿರಲಿ
ಮಿಥುಳಜೆಯ ಬಿಡೆ ಬಿಡೆ ಛಲವನತಿ । ಮಥನವನು ಬಿಡೆ ರಾಮನಲಿ ಪುರ
ಮಥನ ಕೂಗಿಟ್ಟಡೆಯು ಕಡೆಯಣ ಮಾತಿದೀಗೆಂದ ೨೩

ತಿಳಿಯಬಾರದೆ ತಂದೆ" ಎಂದ ಅತಿಕಾಯ. ೨೦. "ಖರ, ವಿರಾಧ, ಸುಬಾಹು, ಮಾರೀಚರುಗಳು ಏನಾದರು ? ಬಲಶಾಲಿ ಇಂದ್ರನಮಗ ವಾಲಿ ಏನಾದ ? ಇತ್ತ ನಿನ್ನ ಸೈನ್ಯದಲ್ಲಿ ತೋಳನ್ನು ಪೂಜಿಸಿಕೊಳ್ಳುವ ವೀರರ ಗುಂಪು ಏನಾಯಿತು ? ರಾಕ್ಷಸ ರಾಜನಲ್ಲವೇ ಕುಂಭಕರ್ಣ, ಅವನೆಲ್ಲಿ ತೋರಿಸು" ಎಂದು ಕೇಳಿದ ಅತಿಕಾಯ. ೨೧. "ಇನ್ನಾದರೂ ಹಗೆತನವನ್ನು ಮರೆಯಬೇಕು. ಸೀತೆಯನ್ನು ಸೆರೆಯಿಂದ ಬಿಡುಗಡೆ ಮಾಡು. ಇನ್ನು ಹೆಚ್ಚು ದೋಷವುಂಟಾಗದು. ಈ ಮಾತನ್ನು ವೇದಾರ್ಥವೆಂದು ತಿಳಿ. ಅಪಕೀರ್ತಿಯನ್ನು ಹೊರಬೇಡ. ಪಾಪಕ್ಕೆ ಈಡಾಗಬೇಡ. ದುರ್ಜನರು ಉಪಯೋಗಿಸುವ ಕೆರೆಗೆ ಕಲ್ಲಿನ ಕಟ್ಟೆಯಾಗಬೇಡ" ಎಂದ ಅತಿಕಾಯ. ೨೨. "ಲೋ ಅತಿಕಾಯ, ನಿನ್ನ ಮಾತು ನನ್ನ ಬುದ್ಧಿಗೆ ಎಟುಕದು. ನಿನ್ನ ಅಭಿಪ್ರಾಯಗಳು ಬೇರೆ. ಮಾರೀಚ, ವಿಭೀಷಣ ಹಾಗೂ ಕೈಕಸೆ. ಮಾಲ್ಯವಂತರ ತಿಳುವಳಿಕೆಯ ನಿಲವು ನಿನ್ನದು. ಯುದ್ಧಕ್ಕೆ ಹೆದರುವುದಾದರೆ ,ಅತ್ತ ತೊಲಗು. ಸುಮ್ಮನೆ ಹರಟಬೇಡ" ಎಂದ ರಾವಣ. ೨೩. "ಈ ನಿನ್ನ ಕಥೆಗಳನ್ನು ಕೇಳಿದೆ. ಇವು ಸತ್ವವಿಲ್ಲದವು ಹಿಂದೆ ಶತ್ರುವಿನೊಡನೆ ಇಂಥ ಯುದ್ಧವುಂಟೇ ಹೇಳು. ವಿಧಿಯ ಮಾತು ಹಾಗಿರಲಿ. ಮೈಥಿಲಿಯನ್ನು ಬಿಡುವುದಿಲ್ಲ ; ನನ್ನ ಛಲವನ್ನೂ ಬಿಡುವುದಿಲ್ಲ. ತ್ರಿಪುರಾರಿ ಶಿವನು ಕೂಗಿಟ್ಟರೂ ಭಾರಿ ಯುದ್ಧವನ್ನು

ಅಹುದು ಮತ್ತೇನಾರ ಚಿತ್ತದ । ಲಿಹುದನವರೇ ಬಲ್ಲರಿದು ತಾ
ವಿಹಿತವೇ ನಿನಗಾದಡೀ ವೀಳೆಯವ ತನಗೆನಲು
ವಿಹಿತವಿದು ನಮಗೆನುತಲಾ ದು । ಸ್ಸಹನು ಬಳಿಕಾ ನಿರ್ಭಯನ ನಿ
ಸ್ಪೃಹನ ಕಳುಹಿದನಿತ್ತು ವೀಳೆಯವನು ಮಹಾಹವಕೆ ೨೪

ತರಿಸಿ ತುಳಸಿಯದಂಡೆಗಳ ನಿಜ । ಶಿರಕಲಂಕರಿಸಿದನು ಕೊರಳಿನ
ಲಿರಿಸಿದನು ಕೋಮಲದ ವಿವಿಧಾಭರಣಗಳು ಸಹಿತ
ವರ ಲಲಾಟದಲೂರ್ಧ್ವತಿಲಕವ । ಧರಿಸಿ ತಾಯಿಗೆ ನಮಿಸಿ ವೈಷ್ಣವ
ರರಸ ನಡೆದನು ಜನಮನೋಹರಕಾಯನತಿಕಾಯ ೨೫

ಬಹಡೆ ಬನ್ನಿ ಭವಾಬ್ಧಿಪೋತನ । ಬಹಳ ಪದವಿಯ ಬಯಸುವಡೆ ನೀವ್
ಬಹಡೆ ಬನ್ನಿ ಜರಾಮರಣವರ್ಜಿತನನೈದುವಡೆ
ಬಹುದು ಮತ ವೈಕುಂಠವಾಸಿಯ । ಗೃಹದ ಭಕ್ತರ ಮೇಳವೋಳದ
ಲಿಹುದು ನಿಮಗುಂಟಾದಡೆಂದನು ಭಟರಿಗತಿಕಾಯ ೨೬

ಇಲ್ಲಿಗಿಂದ ಸಹಸ್ರಮಡಿ ನಿಮ । ಗಲ್ಲಿ ಸುಖಸಾಮ್ರಾಜ್ಯಪದವಿಂ
ತಿಲ್ಲಿಗಿಂದವೆ ಕೋಟಿಗುಣ ಬಯಕೆಯ ಫಲಪ್ರಾಪ್ತಿ
ಇಲ್ಲಿಗಿಂದತಿಶಯ ಮನೋಹರ । ವಲ್ಲಿ ಹುಸಿಯೆನಬೇಡ ಲಕ್ಷ್ಮೀ
ವಲ್ಲಭನ ಪದದಾಣೆ ಬಹುದತಿಲೇಸು ನಿಮಗೆಂದ ೨೭

ಬಿಡುವುದಿಲ್ಲ. ಇದೇ ಕಡೆಯ ಮಾತು" ಎಂದ ರಾವಣ. ೨೪. "ಹೌದು, ಮತ್ತೇನು. ಯಾರ ಮನಸ್ಸಿನಲ್ಲಿ ಏನಿದೆಯೋ ಅದನ್ನು ಅವರೇ ಬಲ್ಲರು. ಇದು ನಿನಗೆ ಯೋಗ್ಯವಾಗಿ ಕಾಣುತ್ತದೆಯೇ ? ಹಾಗಿದ್ದರೆ ನನಗೆ ಯುದ್ಧಕ್ಕೆ ವೀಳೆಯವನ್ನು ಕೊಡು" ಎಂದು ಅತಿಕಾಯನು ಹೇಳಲು ರಾವಣನು, "ಇದು ನಮಗೆ ವಿಹಿತ" ಎಂದು ಹೇಳಿದನು. ಬಳಿಕ ಆ ನಿರ್ಭಯನೂ ನಿಸ್ವಾರ್ಥಿಯೂ ಆದ ಅತಿಕಾಯನಿಗೆ ಯುದ್ಧಕ್ಕೆ ವೀಳೆಯವನ್ನು ಕೊಟ್ಟು ಕಳುಹಿಸಿದನು. ೨೫. ಅತಿಕಾಯನು ತುಳಸಿಮಾಲೆಯನ್ನು ತರಿಸಿ ತಲೆಗೆ ಮುಡಿದುಕೊಂಡನು : ಕತ್ತಿಗೆ ಸುಂದರ ಆಭರಣಗಳನ್ನು ಧರಿಸಿದನು ; ಹಣೆಗೆ ಉನ್ನತ ತಿಲಕವನ್ನು ಹಾಕಿಕೊಂಡು ತಾಯಿಗೆ ನಮಸ್ಕರಿಸಿ ವಿಷ್ಣುಭಕ್ತರೊಡೆಯನಾದ ಮನೋಹರ ಶರೀರದ ಅತಿಕಾಯನು ಯುದ್ಧಕ್ಕೆ ನಡೆದನು. ೨೬. ಸಂಸಾರಸಾಗರವನ್ನು ದಾಟಿಸುವ ದೋಣಿಯಾದ ಪರಮಾತ್ಮನ ಪದವಿಯನ್ನು ಬಯಸುವವರು ಬರುವುದಾದರೆ ಬನ್ನಿ, ಮುಪ್ಪು ಮರಣಗಳಿಲ್ಲದವನನ್ನು ಹೊಂದಲಿಚ್ಛಿಸುವ ನೀವು ಬರುವುದಾದರೆ ಬನ್ನಿ, ವೈಕುಂಠವಾಸಿಯ ಭಕ್ತರ ವಿನೋದಗೋಷ್ಠಿಯಲ್ಲಿರುವುದು ನಿಮಗೆ ಬೇಕಾದರೆ ನೀವು ಬರುವುದು ಸಮ್ಮತ" ಎಂದು ಯೋಧರನ್ನು ಅತಿಕಾಯ ಯುದ್ಧಕ್ಕೆ ಆಹ್ವಾನಿಸಿದ. ೨೭. "ಇಲ್ಲಿಗಿಂತ ಸಾವಿರಪಾಲು ಮೀರಿದ ಸುಖಸಾಮ್ರಾಜ್ಯವು ನಿಮಗೆ ಅಲ್ಲಿ ದೊರೆಯುವುದು. ಇಲ್ಲಿಗಿಂತ ಕೋಟಿಪಾಲು ನಿಮ್ಮ ಮನೋರಥಗಳು ಅಲ್ಲಿ ಫಲಿಸುವವು. ಇಲ್ಲಿಗಿಂತ ಅತಿಶಯ ಮನೋಹರವಾಗಿದೆ ಅಲ್ಲಿ. ಇದನ್ನು ಸುಳ್ಳೆನಬೇಡಿ, ಲಕ್ಷ್ಮೀಕಾಂತನ ಪಾದಗಳಾಣೆ. ನೀವು ಯುದ್ಧಕ್ಕೆ ಬರುವುದು ಬಹಳ ಒಳ್ಳೆಯದು" ಎಂದ ಅತಿಕಾಯ.

ಈಶನಹುದುಂಟಾದಡಂಭೋ । ಜಾಸನನ ರೂಪಹಡೆ ದಿವಿಜಾ
ಧೀಶನಹಡೆ ಚತುರ್ವಿಧೋದಯ ಫಲವ ಬಯಸುವಡೆ
ಕೇಶವನ ಕೂಡುವಡೆ ತಪದಭಿ । ಲಾಷೆಯಿಲ್ಲದೆ ತೀರ್ಥಯಾತ್ರಾ
ಯಾಸವಿಲ್ಲದೆ ಬಹುದೆನುತ ಹೊಯ್ಸಿದನು ಡಂಗುರವ ೨೮

ಮನೆಗೆ ಮನವಾರತೆಗೆ ಧನವಿಗೆ । ವನಿತೆಯರಿಗಭಿಲಾಷೆ ಮಾಡುವ
ಮನಬಜಿಡರಿರಿ ಜೀವದಾಸೆಗೆ ಜವನ ಕೈವಶದ
ಅನುವರದ ಭಯಭರಿತರಿರಿ ಹಿಂ । ದನು ವಿಚಾರಿಸದಂಜದೊಂದೇ
ಮನದ ವೀರರು ಬನ್ನಿ ತನ್ನೊಡನೆಂದನತಿಕಾಯ ೨೯

ಅಕಟ ಕೆಡಬೇಡಿದುವೆ ಪರಮಾ । ರ್ಥಕದ ನುಡಿ ಪರಬೊಮ್ಮವಿದಿರಲಿ
ಪ್ರಕಟಿಸುತ್ತಿದೆ ಮರಳಿ ಬಯಸಿದಡಿಲ್ಲ ಗತಿ ನಿಮಗೆ
ಸಕಲ ತೀರ್ಥಸ್ನಾನ ದಾನಾ । ಧಿಕ ತಪೋಯಜ್ಞಾದಿ ಫಲವಿವು
ಮುಕುತಿಪದ್ಧತಿಯಲ್ಲ ಬಲ್ಲರೆ ಬಹುದು ಲೇಸೆಂದ ೩೦

ಅಱಿಯಬೇಡಧ್ಯಾತ್ಮವಿದ್ಯೆಯ । ನಱಿದೆನೆಂದೆನಬೇಡ ಬೊಮ್ಮನ
ನಱಿದು ಭಜಿಸಲು ಬೇಡ ಭಕ್ತಿಯಲಕಟ ಕರ್ಮದಲಿ
ಕುಱಿಗಳಾಗಲು ಬೇಡ ಬೇಗೆ । ಚ್ಚಱುವಡಿದು ತಾ ಸಮಯವಿದನುಳಿ
ದಱಸಿದರೆ ಬಳಿಕಿಲ್ಲ ಕಲ್ಪಸಹಸ್ರ ಪರಿಯಂತ ೩೧

೨೮. "ಈಶ್ವರನೇ ಆಗಬಯಸುವುದಾದರೆ, ಬ್ರಹ್ಮನ ರೂಪ ಪಡೆಯಲಿಚ್ಛಿಸಿದರೆ, ದೇವೇಂದ್ರನಾಗಬಯಸುವುದಾದರೆ, ಚತುರ್ವಿಧಫಲವನ್ನು ಅಪೇಕ್ಷಿಸುವುದಾದರೆ, ಕೇಶವನ ಪ್ರಾಪ್ತಿಯಾಗಬೇಕಿದ್ದರೆ ತಪಸ್ಸಿನ ಆಸೆ ಬಿಟ್ಟು ತೀರ್ಥಯಾತ್ರೆಯ ಶ್ರಮವಿಲ್ಲದೆ ಬರುವುದು" ಎಂದು ಅತಿಕಾಯ ಡಂಗುರವನ್ನು ಹೊಡೆಸಿದನು. ೨೯. "ಮನೆಗೆ, ಗೃಹಕೃತ್ಯಕ್ಕೆ, ಹಣಕ್ಕೆ, ಸ್ತ್ರೀಯರಿಗೆ ಆಸೆಪಡುವ ಪೊಳ್ಳುಮನಸ್ಸಿನವರಾಗಿರಿ, ಪ್ರಾಣದ ಮೇಲಿನ ಆಸೆಯಿಂದ ಯಮನ ಕೈವಶವಾಗುವ ಯುದ್ಧದ ಬಗ್ಗೆ ಭಯಭರಿತರಾಗಿರಿ, ನಿಮ್ಮ ಹಿಂದಿನ ಜೀವನವನ್ನು ಕುರಿತು ಆಲೋಚಿಸದೆ ಅಂಜದೆ ಒಂದೇ ಮನಸ್ಸಿನ ವೀರರು ನನ್ನೊಡನೆ ಬನ್ನಿ" ಎಂದ ಅತಿಕಾಯ. ೩೦. "ಅಯ್ಯೋ, ಕೆಡಬೇಡಿ. ಇದು ಪರಮ ಸತ್ಯವಚನ. ಎದುರಿನಲ್ಲಿ ಪರಬ್ರಹ್ಮನು ಪ್ರತ್ಯಕ್ಷ ಗೋಚರನಾಗಿದ್ದಾನೆ. ಪುನಃ ಬಯಸಿದರೆ ನಿಮಗೆ ಈ ಅದೃಷ್ಟ ದೊರೆಯದು. ಸಮಸ್ತ ಪುಣ್ಯತೀರ್ಥಗಳ ಸ್ನಾನ, ದಾನ, ಶ್ರೇಷ್ಠ ತಪಸ್ಸು, ಯಜ್ಞ ಮೊದಲಾದುವುಗಳು ಮುಕ್ತಿಗೆ ಮಾರ್ಗವಲ್ಲ. ತಿಳಿದು ಬರುವುದಾದರೆ ಒಳ್ಳೆಯದು" ಎಂದ ಅತಿಕಾಯ. ೩೧. "ಅಧ್ಯಾತ್ಮವಿದ್ಯೆ ತಿಳಿಯದಿದ್ದರೆ ಬೇಡ, ಬ್ರಹ್ಮನನ್ನು ತಿಳಿದೆವೆನ್ನಬೇಡ, ಭಕ್ತಿಯಿಂದ ಪೂಜಿಸಬೇಕಾದುದೂ ಇಲ್ಲ. ಕರ್ಮದಿಂದ ಕುರಿಗಳಾಗಬೇಡಿ. ಶೀಘ್ರ ಎಚ್ಚರಗೊಳ್ಳಲು ಇದೇ ಸಮಯ. ಈ ಸಮಯವನ್ನು ಬಿಟ್ಟು ಹುಡುಕಿದರೆ ಸಹಸ್ರಕಲ್ಪಗಳವರೆಗೂ ಈ ಅವಕಾಶ ಸಿಗುವುದಿಲ್ಲ.

ಆವ ಸುಕೃತವ ಮಾಡಿ ನೋಡಿದ । ಡೀವ ಫಲವಿನಿತಿಲ್ಲ ನೋಡಿದ
ಡಾವ ಸಿದ್ಧಾಂತದಲಿ ನಾನಾ ದರ್ಶನಂಗಳಲಿ
ಈ ವಿಶೇಷವ ಕಾಣೆನಿದು ಮ । ತ್ತಾವ ಮಾರ್ಗದೊಳಿಲ್ಲ ಬಹು ಮಾ
ಯಾವಿಲಾಸದ ಬಲೆಗೆ ಬೀಳದೆ ಬಹುದು ಲೇಸೆಂದ ೩೨

ಆದಿಪುರುಷನನಪ್ರಮೇಯನ । ವೇದಸಿದ್ಧನ ವಿಶ್ವಪೂಜ್ಯನ
ಭೂದಿವಾನಲ ಸಲಿಲ ಸೂರ್ಯಾತ್ಮಕನನಚ್ಯುತನ
ಐದುವವರೈತನ್ನಿ ಪರಿಸಿರಿ । ಪಾದ ಭಜಕರು ಬನ್ನಿ ಪರತರ
ವಾದ ವಸ್ತುವಿದಲ್ಲದಿಲ್ಲೆಂದೆತ್ತಿದನು ಕರವ ೩೩

ಮುತ್ತು ನೀರಿನಲಾದ ಬಳಿಕದು । ಮತ್ತೆ ನೀರಹುದೇ ಸುವರ್ಣಿಕ
ವೆತ್ತ ಕಬ್ಬಿನ ಮತ್ತೆ ಕಬ್ಬಿನವಹುದೆ ರಸ ತಾಗಿ
ಸತ್ತು ಹುಟ್ಟುವ ಹುಟ್ಟಿ ಹೊಂದುವ । ಸುತ್ತುದೊಡಕಿನ ತೊಡಕನೊಲ್ಲದ
ಚಿತ್ತಶುದ್ಧಿಯ ಸುಭಟರೈತಹುದೆಂದನತಿಕಾಯ ೩೪

ಬಳಸಿ ಬಂದುದು ಬಳಿಕ ತತ್ವದ । ತಿಳಿವಿನಸುರರು ರಾಮನೇ ನಿಜ
ವಳಿಯದಮಲಬ್ರಹ್ಮವೆಂದೇ ಭಕ್ತಿಭಾವದಲಿ
ಕಲಿಗಳೈದಿದರಶ್ವ ದಂತಿ । ವಳಿ ವರೂಥ ಪದಾತಿಯಲಿ ನಿ
ರ್ಮಲ ಮನೋರಂಜಕನನಘಶತಕೋಟಿಭಂಜಕನ ೩೫

೩೨. "ಯಾವ ಪುಣ್ಯಕಾರ್ಯಗಳನ್ನು ಮಾಡಿದರೂ ಅವು ಇಷ್ಟು ಫಲ ಕೊಡಲಾರವು. ಯಾವ ತತ್ವವಲ್ಲಾಗಲಿ ನಾನಾ ದರ್ಶನಗಳಲ್ಲಾಗಲಿ ಈ ವಿಶೇಷವನ್ನು ಕಾಣೆ. ಇದು ಇನ್ನಾವ ಮಾರ್ಗದಲ್ಲಿಯೂ ಇಲ್ಲ. ಆದುದರಿಂದ ಮಾಯಾವಿಲಾಸದ ಬಲೆಗೆ ಬೀಳದೆ ಈಗ ಬರುವುದೊಳ್ಳೆಯದು" ಎಂದ ಅತಿಕಾಯ. ೩೩. "ಆದಿಪುರುಷ, ಅಳತೆಗೆ ಸಿಕ್ಕದವನು, ವೇದಸಿದ್ಧ, ವಿಶ್ವಪೂಜ್ಯ, ಭೂಮಿ ಆಕಾಶ ಅಗ್ನಿ ಜಲ ಸೂರ್ಯರುಗಳು ತಾನೇ ಆದ ಅಚ್ಯುತ (ನಾಶರಹಿತ)ನನ್ನು ಪಡೆಯುವವರು ಬನ್ನಿ, ಪಾದವನ್ನು ಬೆಳೆಸಿ, ಪೂಜಿಸುವವರು ಬನ್ನಿ. ಅನನ್ಯವಾದ ಮೋಕ್ಷವಸ್ತು ಇದಲ್ಲದೆ ಇನ್ನೊಂದಿಲ್ಲ" ಎಂದು ಅತಿಕಾಯನು ಕೈಯೆತ್ತಿ ಕೇಳಿಕೊಂಡನು. ೩೪. "ನೀರಿನಿಂದ ಮುತ್ತು ಹುಟ್ಟಿದ ಮೇಲೆ ಆ ಮುತ್ತು ಪುನಃ ನೀರಾಗುವುದೇ ? ರಸಸಿದ್ಧಿಯಿಂದ ಚಿನ್ನವಾದ ಕಬ್ಬಿಣ ಪುನಃ ರಸ ತಗುಲಿ ಕಬ್ಬಿಣವಾಗುವುದೇ ? ಸತ್ತು ಹುಟ್ಟುವ, ಹುಟ್ಟಿ ಹೊಂದುವ ಈ ಸುತ್ತು ಚಕ್ರದಲ್ಲಿ ಸಿಲುಕಿಕೊಳ್ಳಲು ಬಯಸದ ಚಿತ್ತಶುದ್ಧಿಯ ವೀರರು ಬನ್ನಿ" ಎಂದ ಅತಿಕಾಯ, ೩೫. ರಾಮನೇ ಸತ್ಯಸ್ವರೂಪಿ ಬ್ರಹ್ಮನೆಂಬ ಭಕ್ತಿಭಾವದಿಂದ ತತ್ವವನ್ನು ಅರಿತುಕೊಂಡ ರಾಕ್ಷಸರು ಅತಿಕಾಯನನ್ನು ಬಳಸಿ ಬಂದರು. ಕುದುರೆ, ಆನೆ, ರಥದ ಸೈನಿಕರು, ಕಾಲುದಳಗಳ ವೀರರು ಮನಸ್ಸಿಗೆ ಆಹ್ಲಾದವನ್ನೀಯುವ, ಶತಕೋಟಿ ಪಾಪಗಳನ್ನು ಒಡೆದು

ಮೊಳಗಿದವು ದಿಗುಬಂಧದವನಿಯು । ಹೊಲಿಗೆ ಹರಿಯಲು ವಾದ್ಯತತಿ ನಭ
ದೊಳಗೆ ಗುಡಿವಿಡಿದಾಡಿದನು ನಾರದನು ನಲವಿನಲಿ
ಒಲಿದು ಸನಕಾದಿಗಳು ಹೂವಿನ । ಮಳೆಯ ಕರೆದರು ಹರಮ ವೈಷ್ಣವ
ತಿಲಕನಂಗದಲಜಭವಾಮರ ನಿಕರ ನಲಿದಾಡೆ ೩೬

ಹೊಳಲ ಹೊರವಂಟನು ಸರಾಗದಿ । ನೊಳುಭಟಾವಳಿ ಸಹಿತ ಕಹಳಾ
ವಳಿಯ ಬಿರುದಿನ ಪಾಠಕರ ಕಳಕಳದ ರಭಸದಲಿ
ನೆಲನನಳೆದ ತ್ರಿವಿಕ್ರಮನ ಮೈ । ಯಳತೆಯಲಿ ಮೈದೋರಿದನು ಕಪಿ
ಬಲಕೆ ಬಲವಿದ ಕಂಡು ಕಳವಳಿಸಿತ್ತು ಭೀತಿಯಲಿ ೩೭

ಮಾರಿ ಬಂದುದು ಮತ್ತೆ ಬಂದನ । ಘೋರರರಕ್ಕಸ ಕುಂಭಕರ್ಣನು
ವೀರರಾಘವನವನ ಕೊಂದುದು ಹುಸಿಯೊ ಮೇಣ್ ದಿಟವೊ
ಆರು ಕಾದುವರಿವನೊಡನೆ ಮದ । ನಾರಿ ಮಲೆವಡಸಾಧ್ಯ ಸಾಕು ಖ
ರಾರಿ ತಾನೇ ಕಾದಿಕೊಳಲೆನುತೋಡಿತಗಲದಲಿ ೩೮

ಮೊಗ್ಗರದ ಮೊದಲಿಗರ ತಪ್ಪಿಸಿ । ನುಗ್ಗನಿದಿರಲಿ ಕಾಣೆನಸುರನ
ನಿಗ್ಗರಕೆ ತನು ದಿಕ್ಕುದಿಗಿಲೆನುತಿರ್ದುದಿನಸುತನ
ತಗ್ಗುತಿರ್ದುದು ಧರಣಿ ದಿಗ್ಗಜ । ಮುಗ್ಗುತಿರ್ದುವು ಕಂಡು ರಘುಪತಿ
ಹಿಗ್ಗಿದನು ಹೇರಾಳ ನಗೆಯಲಿ ನೋಡಿ ಲಕ್ಷ್ಮಣನ ೩೯

ಹಾಕುವ ಶ್ರೀರಾಮನ ಬಳಿಗೆ ಬಂದರು. ೩೬. ದಿಕ್ಕು ಭೂಮಿಗಳ ಸೇರುವೆಯು ಹರಿದು ಹೋಗುವಂತೆ ವಾದ್ಯಗಳು ಗರ್ಜಿಸಿದವು. ಆಕಾಶದಲ್ಲಿ ನಾರದನು ಆನಂದದಿಂದ ರೋಮಾಂಚಗೊಂಡು ಕುಣಿದಾಡಿದನು. ಸನಕಾದಿಗಳು ಸಂತೋಷದಿಂದ ಪರಮವಿಷ್ಣು ಭಕ್ತನ ಮೈಮೇಲಕ್ಕೆ ಹೂವಿನ ಮಳೆಯನ್ನು ಸುರಿಸಿದರು. ಬ್ರಹ್ಮ ಶಿವ ದೇವತೆಗಳು ನಲಿದಾಡಿದರು. ೩೭. ಕಹಳೆಗಳ ಧ್ವನಿ ಮತ್ತು ಬಿರುದಾವಳಿಗಳನ್ನು ಹೊಗಳುವ ಹೊಗಳುಭಟರ ಶಬ್ದಗಳಾಗುತ್ತಿರಲು ಅತಿಕಾಯನು ಒಳ್ಳೆಯ ವೀರರೊಡನೆ ಲಂಕಾಪಟ್ಟಣದಿಂದ ಹೊರಟು ವೇಗವಾಗಿ ಬಂದನು. ಭೂಮ್ಯಾಕಾಶಗಳನ್ನು ಹೆಜ್ಜೆಯಿಂದ ಅಳೆದ ಅದ್ಭುತಾಕಾರದ ತ್ರಿವಿಕ್ರಮನಂತೆ ಅತಿಕಾಯನು ಕಪಿಸೈನ್ಯಕ್ಕೆ ಕಾಣಿಸಿದನು. ಈ ರಾಕ್ಷಸರ ಸೈನ್ಯವನ್ನು ಕಂಡು ಕಪಿಸೈನ್ಯವು ಭಯದಿಂದ ಕಳವಳಿಸಿತು. ೩೮. "ಮಾರಿ ಬಂದಿತು. ಬಹು ಘೋರರಾಕ್ಷಸ ಕುಂಭಕರ್ಣನು ಪುನಃ ಬಂದನು. ಅವನನ್ನು ವೀರರಾಮನು ಕೊಂದುದು ಸುಳ್ಳೋ ನಿಜವೋ ? ಇವನೊಡನೆ ಯಾರು ಯುದ್ಧಮಾಡಬಲ್ಲರು ? ಶಿವನೇ ಎದುರಿಸಿದರೂ ಅಸಾಧ್ಯ. ಖರಾರಿ ರಾಮನೇ ಯುದ್ಧಮಾಡಿಕೊಳ್ಳಲಿ" ಎಂದು ಹೇಳುತ್ತ ಕಪಿಸೈನ್ಯವು ಸುತ್ತಮುತ್ತ ಓಡಿತು. ೩೯. ಈ ರಾಕ್ಷಸನು ಸೈನ್ಯದ ಮುಂದಿನವರನ್ನು ತಪ್ಪಿಸಿ ನುಗ್ಗುವುದಿಲ್ಲ. ಈ ರಾಕ್ಷಸನ ಪೀಡೆಗೆ ಎದುರಿಲ್ಲ. ಇವನನ್ನು ಕಂಡು ಸುಗ್ರೀವನ ದೇಹವು ದಿಕ್ಕುದಿಗಿಲೆಂದು ನಡುಗಿತು. ಅತಿಕಾಯನು ಬರುತ್ತಿದ್ದರೆ ನೆಲ ತಗ್ಗುತ್ತಿತ್ತು, ದಿಗ್ಗಜಗಳು ಮುಗ್ಗುರಿಸಿದವು. ಅತಿಕಾಯನನ್ನು ಕಂಡು ರಘುಪತಿ

ಇವನದಾರೈ ಸತ್ತ ಕುಂಭ । ಶ್ರವಣ ಮತ್ತುದಯಿಸನಲೇ ಭಾ
ರವಿಸುತಿದೆ ಬೆಱಗಮಗೆ ಕಡುಕೌತುಕದ ಭಟನಿವನು
ಇವನ ರೂಪಿನ ರಕ್ಕಸರು ನಿ । ಮ್ಮವನ ಕಟಕದಲೆನಿಬರೆಂಬುದ
ನೆವಗೆ ಹೇಳೆಂದರಸ ಬೆಸಗೊಂಡನು ವಿಭೀಷಣನ ೪೦

ಈತನೀಗಲೆ ಜೀಯ ಬಾಹುಬ । ಲಾತಿಶಯನಾಹವಕೆ ಹಾವಿನ
ಲಾ ತಮಿಸ್ರೆಯಲೆಮ್ಮ ಬಲವನು ಬೆದಱಿಸಿದ ಭಟನ
ಮಾತೆಗವ ಮಗನಿವನವನ ಸಹ । ಜಾತನಿವನು ಕುಮಾರರಲಿ ವಿ
ಖ್ಯಾತನಿವನತಿಕಾಯನೆಂಬುದು ಹೆಸರಲೇಯೆಂದ ೪೧

ಅವನು ಕಡುಪಾತಕನು ಪುಣ್ಯ । ಶ್ರವಣನಿವನೆಲೆ ಜೀಯ ಜಗದೊಳ
ಗವನು ದೈವದ್ರೋಹಿಯಿವನು ಸದೈವನಸುರರಲಿ
ಇವಗವನ ಜಡಿಗಟ್ಟಬಹುದಾ । ಹವದ ವೈಚಿತ್ರತೆಗೆ ಮಿಕ್ಕಂ
ತಿವಗೆ ಸರಿಯಹ ಸುಭಟರಿಲ್ಲೆಲೆ ದೇವ ಕೇಳೆಂದ ೪೨

ಇನಿತ ಕೇಳ್ದಿನಸೂನು ಜಾಂಬವ । ಹನುಮ ನಳ ನೀಲಾಂಗದಾದ್ಯರು
ಮನದ ಭೀತಿಯ ಬಿಸುಟು ಮನುಕುಲಸಾರ್ವಭೌಮಕನ
ಮನವ ಮೆಚ್ಚಿಸಲಿದು ಸಮಯವೆಮ । ಗೆನುತ ತನುಗಳನೋವದೊಂದೇ
ಮನದಲರಿಭಟರಿದಿರಿನಲಿ ಮಾಜಾಂತರಾಹವಕೆ ೪೩

ಜೋರಾಗಿ ನಗುತ್ತ ಲಕ್ಷ್ಮಣನನ್ನು ನೋಡಿ ಹಿಗ್ಗಿದನು. ೪೦. "ಇವನು ಯಾರು ? ಸತ್ತ ಕುಂಭಕರ್ಣನು ಪುನಃ ಹುಟ್ಟಲಾರನಲ್ಲವೇ ? ಈ ಕುತೂಹಲಕಾರಿ ವೀರನನ್ನು ನೋಡಿ ನಮಗೆ ಆಶ್ಚರ್ಯವುಂಟಾಗುತ್ತಿದೆ. ಇವನ ರೂಪಿನ ರಾಕ್ಷಸರು ನಿಮ್ಮ ರಾವಣನ ಸೈನ್ಯದಲ್ಲಿ ಎಷ್ಟು ಜನರಿದ್ದಾರೆಂಬುದನ್ನು ನಮಗೆ ಹೇಳು" ಎಂದು ರಾಮನು ವಿಭೀಷಣನನ್ನು ಕೇಳಿದನು. ೪೧. "ಪ್ರಭು, ಈತನು ಯುದ್ಧದಲ್ಲಿ ಮಹಾಪ್ರತಾಪಶಾಲಿ. ಅಂದು ರಾತ್ರಿ ಸರ್ಪಾಸ್ತ್ರದಿಂದ ನಮ್ಮ ಸೈನ್ಯವನ್ನು ಬೆದರಿಸಿದ ವೀರ ಇಂದ್ರಜಿತುವಿನ ತಾಯಿಯ ಮಗನಿವನು ; ಅವನ ಸಹೋದರನಿವನು. ರಾವಣನ ಮಕ್ಕಳಲ್ಲಿ ಬಹಳ ಪ್ರಸಿದ್ಧನು. ಅತಿಕಾಯನೆಂದು ಇವನ ಹೆಸರು" ಎಂದ ವಿಭೀಷಣ. ೪೨. "ಅವನು ಮಹಾಪಾಪಿ, ಇವನು ಪುಣ್ಯಶಾಲಿ. ಜಗತ್ತಿನಲ್ಲಿ ಅವನು ದೈವದ್ರೋಹಿ, ಇವನು ರಾಕ್ಷಸರಲ್ಲಿ ದೈವಭಕ್ತ. ಯುದ್ಧನೈಪುಣ್ಯದಲ್ಲಿ ಇವನಿಗೆ ಅವನನ್ನು ಹೋಲಿಸಬಹುದು, ಉಳಿದ ವಿಚಾರದಲ್ಲಿ ಇವನಿಗೆ ಸಮಾನರಾದ ವೀರರಿಲ್ಲ, ಸ್ವಾಮಿ" ಎಂದ ವಿಭೀಷಣ. ೪೩. ಇಷ್ಟನ್ನು ವಿಭೀಷಣನಿಂದ ಕೇಳಿದ ಸುಗ್ರೀವ, ಜಾಂಬವ, ಹನುಮಂತ, ನಳ, ನೀಲ, ಅಂಗದ ಮೊದಲಾದವರು ಮನಸ್ಸಿನ ಭಯವನ್ನು ಬಿಟ್ಟು ಮನುಕುಲಚಕ್ರವರ್ತಿ ರಾಮನನ್ನು ಮೆಚ್ಚಿಸಲು ಇದು ಸಮಯವು ಎನ್ನುತ್ತ ದೇಹದ ಮೇಲಿನ ಪ್ರೀತಿಯನ್ನು ಬಿಟ್ಟು ಒಂದೇ ಮನಸ್ಸಿನಿಂದ ಶತ್ರುವೀರನನ್ನು ಎದುರಿಸಿ

ಹದನನಿದ ಕಂಡಂತರಿಸಿ ನಿಂ । ದಿದರು ಗವಯ ಗವಾಕ್ಷ ದುರ್ಮುಖ
ರದಟು ಹವಣಱಿದಾ ಶರಭ ಶತಬಲಿ ಸುಷೇಣಕರು
ಎದೆವೊಯಿಲಿನಂಜಿಕೆಗಳನು ಕೆಲ । ಕೊದೆದು ನಿಂದರು ಮಿಕ್ಕವರು ದೂ
ರದಲಿ ಥರಥರಗಟ್ಟಿ ಕದನಕೆ ಮಾಡಿದರು ಮನವ ೪೪

ಹಿಡಿದ ಗಿರಿತರುಗಳಲಿ ಬಲವಂ । ಗಡದ ವಿಂಗಡಗಳಲಿ ಕಲ್ಪದ
ಸಿಡಿಲ ಸಡಗರದಂತೆ ಬಲನೆಡಕೋಡ ಕೈಗಳಲಿ
ಪಡಿಮುಖದೊಳಾಹವದುಪಕ್ರಮ । ಕೊಡರಿಸಿದನತಿಕಾಯ ರಕ್ಕಸ
ಪಡೆಯ ಗಡಣದಲೇಱಿದನು ಬಹುವಾದ್ಯರಭಸದಲಿ ೪೫

ಹರಿಗೆ ಖಡ್ಗ ಕಠಾರಿ ಕುಂತದ । ಚರಣಚರರುಪ್ಪರದ ಕುದುರೆಯ
ಕರದ ಖಡುಗದ ರಾವುತರ ರಣಮದದ ರದನಿಗಳ
ಶಿರದ ನಿಶಿತಾಂಕುಶದ ಜೋದರ । ವರ ವರೂಥಾರೋಹಕರ ಮೋ
ಹರದ ಮೇಳದಲಬ್ಬರಿಸುತೊಳಹೊಕ್ಕನತಿಕಾಯ ೪೬

ಏನ ಹೇಳುವೆ ಕುಂಭಕರ್ಣ ಮ । ಹಾ ನಿಶಾಚರಗಿಮ್ಮಿಗಿಲ ರಣ
ದಾನಿಕೆಯ ರಕ್ಕಸನ ರಣರಂಜಕದ ರೌರವದ
ಸೂನೆಗಾಱನೊ ಕೊಲೆಯಲಮರರ । ಮಾನಿನಿಯರಪ್ಪುಗೆಯಲಡರುವ
ವಾನರರನೇ ಕಾಣಲಾಯ್ತಂಬರದ ವಳಯದಲಿ ೪೭

ಯುದ್ಧಕ್ಕೆ ಸಿದ್ಧರಾದರು. ೪೪. ಈ ಸಂಗತಿಯನ್ನು ಕಂಡು ಗವಯ, ಗವಾಕ್ಷ, ದುರ್ಮುಖರು ಬಂದು ನಿಂತರು. ಇದನ್ನು ತಿಳಿದ ಶರಭ ಶತಬಲಿ ಸುಷೇಣಕರು ಎದೆ ಹೊಡೆದುಕೊಳ್ಳುವ ಭಯವನ್ನು ಒದ್ದು ನಿಂತರು. ಉಳಿದವರು ದೂರದಲ್ಲಿ ಥರಥರ ನಡುಗುತ್ತ ನಿಂತು ಯುದ್ಧಕ್ಕೆ ಹೋಗಲು ನಿಶ್ಚಯಿಸಿದರು. ೪೫. ಬೆಟ್ಟ ಮರಗಳನ್ನು ಹಿಡಿದು ತಂಡ ತಂಡವಾಗಿ ಬಲಗಡೆಯಲ್ಲಿ ನಿಂತ, ಪ್ರಳಯಕಾಲದ ಸಿಡಿಲಿನ ಸಡಗರದಂತೆ ಎಡಗಡೆಯಲ್ಲಿ ಬೆಟ್ಟದ ಶಿಖರಗಳನ್ನು ಹಿಡಿದು ನಿಂತ ಕಪಿಸೈನ್ಯದ ಮುಂದುಗಡೆಯಲ್ಲಿ ಅತಿಕಾಯನು ಯುದ್ಧಾರಂಭಕಾರ್ಯದಲ್ಲಿ ತೊಡಗಿದನು. ಬಹುವಿಧ ವಾದ್ಯಗಳು ಭೋರ್ಗರೆಯುತ್ತಿರಲು, ರಾಕ್ಷಸಸೈನ್ಯಸಮೂಹದೊಡನೆ ಅತಿಕಾಯನು ಕಪಿಸೈನ್ಯದ ಮೇಲೆ ಏರಿಬಂದನು. ೪೬. ಗುರಾಣಿ, ಕತ್ತಿ, ಕಠಾರಿ, ಕುಂತಗಳನ್ನು ಹಿಡಿದ ಕಾಲಾಳುಗಳು, ಕೈಯಲ್ಲಿ ಖಡ್ಗ ಹಿಡಿದು ಎತ್ತರದ ಕುದುರೆಗಳನ್ನೇರಿದ ರಾವುತರು, ಹರಿತವಾದ ಅಂಕುಶವನ್ನು ಹಿಡಿದು ಮದದಾನೆಗಳ ಮೇಲೆ ಕುಳಿತ ಯೋಧರು ಮತ್ತು ರಥವನ್ನೇರಿದ, ವೀರರು—ಇವರ ಸೈನ್ಯದೊಡನೆ ಅಬ್ಬರಿಸುತ್ತ ಅತಿಕಾಯನು ವಾನರಸೈನ್ಯದೊಳಹೊಕ್ಕನು. ೪೭. ಯುದ್ಧವನ್ನು ಎದುರಿಸುವಲ್ಲಿ ಕುಂಭಕರ್ಣ ಮಹಾರಾಕ್ಷಸನನ್ನು ಎರಡುಪಟ್ಟು ಮೀರಿಸುವ ಭಯಂಕರ ಯುದ್ಧಪ್ರಿಯ ಅತಿಕಾಯರಾಕ್ಷಸನ ವಿಷಯವನ್ನು ಏನು ಹೇಳಲಿ. ಕೊಲೆಮಾಡುವಲ್ಲಿ ಕಟುಕನೋ ! ದೇವಲೋಕದ ನಾರಿಯರನ್ನು ಆಲಿಂಗಿಸಿ ಸ್ವರ್ಗಲೋಕಕ್ಕೆ ಹೋಗುವ ವಾನರರನ್ನೇ

ಹರಣದಾಸೆಯ ನೋಡದೀ ಬಲ । ಬೆರಸಿತಾ ಬಲದೊಳಗೆ ಕೈ ಮೈ
ಮುರಿಯದೋಸರ ಪೈಸರಗಳೊಳಹೊಗದ ಹರಹಿನಲಿ
ಸರಿಬೆಸನ ಸಂಗರವ ಮಾಡಿದರು । ಸುರಕದಂಬಕ ಮೆಚ್ಚೆ ಹೆಣನು
ಪ್ಪರಿಸೆ ರುಧಿರಾಂಬುಪ್ರವಾಹದಲಣಾಗ ಕೇಳೆಂದ ೪೮

ಚಟುಳ ಭಟರುಭಯದಲಿ ಮಾಡಿದರು । ಪಟುತನವನಪವರ್ಗ ಸರ್ಗ
ಸ್ಫುಟನಿಕೇತನ ವೀಥಿಗಳಲಂಭೋಜಭವಪುರದ
ಘಟಿಸಿತಲ್ಲಿಂ ಮೇಲೆ ಕಪಿಪಟು । ಭಟರೊಳಾಹವವಾ ನಿಶಾಚರಿ
ಯಟನ ರಥ ಹಯ ವಾರಣಾರೋಹಕರ ಸೇನೆಯಲಿ ೪೯

ಸೀಳಿಹಾಯ್ಕಿದರಾನೆಗಳನು ನ । ಖಾಳಿಯಲಿ ಬಗಿದುಗಿದು ಕರುಳ್ಗಳ
ಮಾಲೆಗಳ ಮರುಳುಗಳ ಕೊರಳ್ಗಳೊಳಿಕ್ಕಿದರು ಹಯವ
ತೂಳುವತಿರಥರಾಜಿಗಳ ಗಿರಿ । ಚೂಳಿಕೆಯಲೇ ಚಲ್ಲಬಡಿದಮ
ರಾಳಿ ಹೊಗಳಲು ಕಾದಿದರು ನೀಲಾಂಗದಾದಿಗಳು ೫೦

ಬಳಿಕಲೇವೇಳುವೆನು ಕುಧರಾ । ವಳಿಯ ಕಾಳಗದೊಳಗೆ ವಜ್ರಿಯ
ಕುಲಿಶ ಕೋಳಾಹಳಿಸುವನೊಲತಿಕಾಯನುರವಣಿಸಿ
ಹಳಚಿದನು ಹರಿದಶ್ವತನುಜನ । ನಳನ ನೀಲನ ಜಾಂಬವನ ಶತ
ಬಲಿ ಸುಷೇಣ ಗವಾಕ್ಷ ಮೈಂದ ದ್ವಿವಿದ ಪಟುಭಟರ ೫೧

ಆಕಾಶದಲ್ಲಿ ಎಲ್ಲೆಲ್ಲಿಯೂ ಕಾಣಲಾಯಿತು. ೪೮. ಪ್ರಾಣದ ಮೇಲಿನ ಆಸೆಯನ್ನು ತೊರೆದು ವಾನರಸೈನ್ಯವು ದೇಹವನ್ನು ಹಿಂದಕ್ಕೆ ತಿರುಗಿಸದೆ, ಅರುಗಾಗದೆ, ಹಿಂಜರಿಯದೆ ರಾಕ್ಷಸಸೈನ್ಯದ ಮೇಲೆ ಬಿದ್ದಿತು. ದೇವತೆಗಳು ಮೆಚ್ಚುತ್ತಿರಲು ಇಬ್ಬರೂ ಸರಿ ಬೆಸದ ಯುದ್ಧವನ್ನು ಮಾಡಿದರು. ರಕ್ತದ ಪ್ರವಾಹದಲ್ಲಿ ಹೆಣಗಳ ರಾಶಿಗಳೆದ್ದುನಿಂತವು, ಕಂದ ಕೇಳು ಎಂದರು ವಾಲ್ಮೀಕಿಗಳು. ೪೯. ಎರಡೂ ಕಡೆಯ ಕ್ರಿಯಾಶೀಲ ವೀರರು ಮೋಕ್ಷ ಸ್ವರ್ಗಗಳನ್ನು ಪಡೆದವರಿಗಾಗಿ ಮನೆಗಳಿರುವ ಬ್ರಹ್ಮನ ಪಟ್ಟಣದ ಬೀದಿಗಳಲ್ಲಿ ಚಟುವಟಿಕೆಯಿಂದ ಓಡಾಡಿದರು. ಅನಂತರ ಅತಿಕಾಯನ ರಥಿಕರು, ರಾವುತರು ಮತ್ತು ಆನೆಯನ್ನೇರಿದ ಯೋಧರುಗಳ ಸೈನ್ಯದಲ್ಲಿ ಸಮರ್ಥ ವಾನರವೀರರ ಕದನವು ಆರಂಭವಾಯಿತು. ೫೦. ರಾಕ್ಷಸಪಡೆಯ ಆನೆಗಳನ್ನು ಸೀಳಿಹಾಕಿದರು. ಉಗುರುಗಳಿಂದ ಬಗೆದು ಕಿತ್ತು ಕರುಳಮಾಲೆಗಳನ್ನು ರಣಪಿಶಾಚಿಗಳ ಕೊರಳಿಗೆ ತೊಡಿಸಿದರು. ಕುದುರೆಗಳನ್ನೂ, ಮುನ್ನುಗ್ಗುವ ರಥಗಳ ಸಾಲನ್ನೂ ಬೆಟ್ಟದ ಶಿಖರಗಳಿಂದ ಚದುರುವಂತೆ ಬಡಿದು ದೇವತೆಗಳು ಕೊಂಡಾಡುವಂತೆ ನೀಲ ಅಂಗದನೇ ಮೊದಲಾದವರು ಹೋರಾಡಿದರು. ೫೧. ಬಳಿಕ ನಡೆದುದನ್ನು ಏನುಹೇಳಲಿ. ಕಾಳಗದಲ್ಲಿ ಪರ್ವತಗಳ ಮೇಲೆ ದೇವೇಂದ್ರನ ವಜ್ರಾಯುಧವು ಅಬ್ಬರಿಸುವಂತೆ ಅತಿಕಾಯನು ರಭಸದಿಂದ ಬಂದು ಸೂರ್ಯಸುತ ಸುಗ್ರೀವ, ನಳ, ನೀಲ, ಜಾಂಬವ, ಶತಬಲಿ, ಸುಷೇಣ, ಗವಾಕ್ಷ, ಮೈಂದ,

ಕೋಲಿಗೊಬ್ಬೊಬ್ಬರ ಸಮಾಕದ । ಲೀಲೆಯನು ಸಂತೈಸಿ ಮಿಕ್ಕಿನ
ಬಾಲದಣ್ಣಗಳಸುವನುಗಿದನು ಹೊಕ್ಕ ಮೈಗಳಲಿ
ಕಾಲನುರವಣೆಯೋ ಕಪರ್ದಿಯ । ಕೋಲುಗೊಲೆಯೋ ಭೈರವನ ರಣ
ಕೇಳಿಯೋ ನಾನರಿಯೆನತಿಕಾಯನ ರಣೋತ್ಸವವ ೫೨

ಎತ್ತ ನೋಡಿದಡತ್ತ ತಲೆಗಳು । ಕತ್ತರಿಸಿ ಬಿದ್ದಿರ್ದ ಕಪಿವೆಣ
ನೆತ್ತ ನೋಡಿದಡತ್ತ ಕೈಕಾಲುಡಿದ ಕಪಿಸೇನೆ
ಎತ್ತ ನೋಡಿದಡತ್ತ ಹೆಣಗಳ । ನೆತ್ತಿ ನಭಕುಪ್ಪರಿಸಿ ನಿಗುರುವ
ನೆತ್ತರಿನ ಮಯವಲ್ಲದಿಲ್ಲಾ ಕಳನೊಳಗಲದಲಿ ೫೩

ಮುಟ್ಟಿ ಕಾದಲು ಬಂದ ಹನುಮನ । ಕಟ್ಟಿದನು ಕಮಲಜಭವಾಸ್ತ್ರದ
ಲಿಟ್ಟಣಿಸುವತಿಬಲರ ಹೇರೊಡಲುಗಳಲಂಬುಗಳ
ಒಟ್ಟಿದನು ತನ್ನೊಡನೆ ಬವರದ । ಬಟ್ಟೆಯನು ಬಾರದವೊಲಸುರಘ್ನ
ರಟ್ಟನಿದಿರಲಿ ಹೊಳಕಿದನು ಹೊಂದೇರನತಿಕಾಯ ೫೪

ಅಹುದೆ ಜೀಯ ಸಮಗ್ರ ಸಾಹಸ । ನಹನೆ ಮೊದಲೇ ದೇವರಿಗೆ ಬಿ
ನ್ನಹವ ಮಾಡಿದ ಮಾತಿಗನೃತವು ಹೊದ್ದದಲೆ ತನಗೆ
ಅಹತಬಲನಿವನಿವನ ಘನ ವಿ । ಗ್ರಹವನಾನುವುದರಿದೆನಲು ಗಹ
ಗಹಿಕೆಯಲಿ ತೂಷ್ಣೀಕರಿಸಿ ಸೌಮಿತ್ರಿ ಮಾಱಾಂತ ೫೫

ದ್ವಿವಿಧ ಮೊದಲಾದ ಪ್ರಮುಖವೀರರ ಮೇಲೆ ಬಿದ್ದನು. ೫೨. ಅತಿಕಾಯನು ಒಂದೊಂದು ಬಾಣದಿಂದ ಒಬ್ಬೊಬ್ಬರ ಯುದ್ಧದಾಟವನ್ನು ಶಾಂತಗೊಳಿಸಿ, ಹೋದ ಕಡೆಗಳಲ್ಲಿ ಉಳಿದ ಬಾಲದಣ್ಣಗಳ ಪ್ರಾಣವನ್ನು ಸೆಳೆದುಹಾಕಿದನು. ಯಮನ ರಭಸವೋ, ಶಿವನ ಬಾಣಗಳ ಕೊಲೆಯೋ, ಭೈರವನ ಯುದ್ಧದಾಟವೋ ! ಅತಿಕಾಯನ ಯುದ್ಧ ಸಡಗರವೆಂಥದು ಎಂಬುದನ್ನು ನಾನರಿಯೆ. ೫೩. ರಣರಂಗದಲ್ಲಿ ಎಲ್ಲಿ ನೋಡಿದರೆ ಅಲ್ಲಿ ತಲೆ ಕತ್ತರಿಸಿ ಬಿದ್ದಿದ್ದ ಕಪಿಗಳ ಹೆಣಗಳು ; ಎಲ್ಲಿ ನೋಡಿದರೆ ಅಲ್ಲಿ ಕೈಕಾಲು ಮುರಿದ ಕಪಿಸೈನ್ಯ ; ಎಲ್ಲಿ ನೋಡಿದರೆ ಅಲ್ಲಿ ಹೆಣಗಳನ್ನು ತೇಲಿಸಿ ಆಕಾಶಕ್ಕೆ ಚಿಮ್ಮುವ ರಕ್ತವಲ್ಲದೆ ಇಲ್ಲ. ೫೪. ತನ್ನ ಮೇಲೆ ಕಾಳಗಮಾಡಲು ಸಮೀಪಕ್ಕೆ ಬಂದ ಹನುಮಂತನನ್ನು ಬ್ರಹ್ಮಾಸ್ತ್ರದಿಂದ ಕಟ್ಟಿಹಾಕಿದನು. ತನ್ನನ್ನು ಮುತ್ತಲು ಬಂದ ಬಲಶಾಲಿಗಳ ದೊಡ್ಡ ಶರೀರಗಳನ್ನು ಅವರು ಪುನಃ ತನ್ನೆದುರಿಗೆ ಯುದ್ಧಕ್ಕೆ ಬರದಂತೆ ಬಾಣಗಳಿಂದ ತುಂಬಿಬಿಟ್ಟನು. ಅನಂತರ ಅಸುರಾರಿ ರಾಮನ ಎದುರಿಗೆ ಅತಿಕಾಯನು ತನ್ನ ಚಿನ್ನದ ರಥವನ್ನು ಸುಳಿಸಿದನು. ೫೫. "ಇವನು ಸಂಪೂರ್ಣ ಸಾಹಸಿಯೆಂಬುದು ನಿಜವೇ, ಸ್ವಾಮಿ ? ಮೊದಲೇ ಸ್ವಾಮಿಯವರಿಗೆ ಅರಿಕೆಮಾಡಿದ ಮಾತು ಸುಳ್ಳೆಂಬ ಅಪವಾದ ನನ್ನ ಮೇಲೆ ಹೊರದಲ್ಲವೆ ? ಪ್ರತಿಯಿಲ್ಲದ ಬಲಶಾಲಿ ಇವನು. ಇವನ ಶರೀರವನ್ನು ಎದುರಿಸುವುದು ಅಸಾಧ್ಯ" ಎಂದು ವಿಭೀಷಣನು ಹೇಳಲು ಲಕ್ಷ್ಮಣನು ಗಹಗಹಿಸಿ ನಗುತ್ತ ವಿಭೀಷಣನ ಬಾಯಿ ಮುಚ್ಚಿಸಿ ಅತಿಕಾಯನನ್ನು ಎದು

ರಾಯ ಚಿತ್ತೈಸಿವನ ಗೆಲುವ ರ । ನ್ನಾಯತದ ರಂಜಕವನೆನುತಸ
ಹಾಯಶೂರನು ಹೊಕ್ಕನೇಕಾಂಗದಲಿ ಸಂಗರವ
ಸಾಯಕದ ಬಿಗುಹಿನಲಿ ಕಂಡತಿ । ಕಾಯನಿಂಗಿತದಿಂದ ಸಿರಿನಾ
ರಾಯಣಾಂಶೀಭೂತನೆಂದರಿದಂತರಿಸಿ ನಿಂದ ೫೬

ಏನ ಹೇಳುವೆ ಬಳಿಕಲಾ ರಘು । ಸೂನುವಿನ ಸಹಭವನ ಚಾಪ
ಧ್ವಾನವನು ಸಡಗರಿಸುತಾ ಲಂಕಾಪುರಾಧಿಪನ
ಸೂನುವಿನ ಸರಿಸದಲಿ ಸಿಂಹ । ಧ್ವಾನದಲಿ ನಿಲುಕಿದನು ಮದಮುಖ
ದಾನೆಯಲಿ ಮುಳಿದೆದ್ದ ಮೃಗರಾಜೇಂದ್ರನಂದದಲಿ ೫೭

ಬಂದ ಭರದೊಳಗಾತನೀತನ । ನೆಂದನಳವಿಯೊಳುಬ್ಬರಿದು ರಘು
ನಂದನನೊ ಲಕ್ಷ್ಮಣನೊ ನೀನಾರೆಂದು ಸರಿಸದಲಿ
ನಿಂದು ಕೇಳಲು ಕೇಳಿ ಲಕ್ಷ್ಮಣ । ನೆಂದನೆಲವೋ ನಿನ್ನ ಮನಕೇ
ನೆಂದು ತೋರಿತು ತೋರಿದನಿತನೆ ಬಗೆದುಕೋಯೆಂದ ೫೮

ರಣಕೆ ನಮಗಾರಾದರೇನದ । ರೆಣಿಕೆ ನಮಗಿಲ್ಲಾವು ಸಮರಾಂ
ಗಣದೊಳಾತ್ಮನಿವೇದಕರು ಸಚರಾಚರಾತ್ಮಂಗೆ
ರಣಕುತೂಹಲ ರಚನೆಯನು ಸುರ । ಗಣವು ಮೆಚ್ಚಲು ತೋರುವೆನು ಭಾ
ರಣೆಯ ಭಟ ನೀನಾದರನುವಾಗೆಂದು ಬೊಬ್ಬಿರಿದ ೫೯

ರಿಸಿದನು. ೫೬. "ಅರಸ, ಇವನನ್ನು ಯುದ್ಧದಲ್ಲಿ ಗೆಲ್ಲುವ ಸೊಗಸನ್ನು ಗಮನಿಸು" ಎನ್ನುತ್ತ ಅಸಹಾಯಶೂರ ಲಕ್ಷ್ಮಣನು ಏಕಾಂಗಿಯಾಗಿ ಯುದ್ಧವನ್ನು ಪ್ರವೇಶಿಸಿದನು, ಲಕ್ಷ್ಮಣನ ಆಯುಧದ ಹಿಡಿತವನ್ನು ಕಂಡು ಅತಿಕಾಯನು ಇವನು ಶ್ರೀಮನ್ನಾರಾಯಣನ ಅಂಶದಿಂದ ಹುಟ್ಟಿದವನೆಂಬುದನ್ನು ಊಹಿಸಿ ತಿಳಿದು ಲಕ್ಷ್ಮಣನಿಗೆ ಎದುರಾಗಿ ನಿಂತನು. ೫೭. ತರುವಾಯ ಆ ರಾಘವನ ತಮ್ಮನ ಧನುಷ್ಟಂಕಾರವನ್ನು ಏನೆಂದು ಹೇಳೋಣ. ಮದಿಸಿದ ಆನೆಯಮೇಲೆ ಬಿದ್ದು ಕೆರಳಿದ ಸಿಂಹದಂತೆ ಲಕ್ಷ್ಮಣನು ಸಿಂಹನಾದ ಮಾಡಿ ಲಂಕೆಯರಸನ ಮಗನನ್ನು ಎದುರಿಸಿ ನಿಂತನು. ೫೮. ಲಕ್ಷ್ಮಣನು ಬಂದ ಭರವನ್ನು ಕಂಡು ಅತಿಕಾಯನು ಜೋರಾಗಿ ಅಬ್ಬರಿಸಿ, "ರಘುನಂದನನೋ, ಲಕ್ಷ್ಮಣನೋ ನೀನು ಯಾರು ?" ಎಂದು ಎದುರಿನಲ್ಲಿ ನಿಂತು ಕೇಳಿದನು. ಅದನ್ನು ಕೇಳಿ ಲಕ್ಷ್ಮಣನು, "ಲೋ, ನಿನ್ನ ಮನಸ್ಸಿಗೆ ಏನೆಂದು ತೋರುತ್ತದೆಯೋ ಅದನ್ನೇ ಭಾವಿಸಿಕೋ" ಎಂದು ಹೇಳಿದ. ೫೯. ನಮಗೆ ಯುದ್ಧಕ್ಕೆ ಯಾರು ಬಂದರೂ ಅದರ ಯೋಚನೆಯಿಲ್ಲ. ಯುದ್ಧರಂಗದಲ್ಲಿ ಚರಾಚರಾತ್ಮನಿಗೆ ಸಮರ್ಪಿಸಿಕೊಳ್ಳುವವರು ನಾವು. ದೇವತೆಗಳು ಮೆಚ್ಚುವಂತೆ ಕುತೂಹಲಭರಿತವಾದ ಯುದ್ಧರಚನೆಯನ್ನು ತೋರಿಸುತ್ತೇವೆ. ತೂಕದ

ಜರಿದವಮರವಧೂಜನದ ನಿ । ರ್ಭರದ ಗರ್ಭದ ಪಿಂಡಗಳು ಧರೆ
ಗುರುಳಿಬಿದ್ದವು ಕೈಯ ಕೈದುಗಳಜಸುರಾದಿಗಳ
ಹರನ ಶಿರದ ಸುಧಾಂಶುಮಂಡಲ । ಜರಿದುದರ್ಧಕೆ ರಾಘವೇಂದ್ರನ
ಕರಣ ಕಳವಳಿಸಿದುದು ಬೊಬ್ಬಿರಿತಕೆ ನಿಶಾಚರನ ೬೦

ಮೋಹಿದರು ಬಳಿಕಿಬ್ಬರಳವಿಯ । ಲಾಹವದ ಸಂಕೇತ ಸಮಯದ
ಸಾಹಸದ ಸೌರಂಭದುಬ್ಬಿನ ಬೊಬ್ಬೆಗಳ ಬಳಿಯ
ಕಾಹುರದ ಕಣೆಗಳಲಿ ರಣಸ । ನ್ನಾಹರೆಚ್ಚಾಡಿದರು ಸುರರು
ತ್ಸಾಹಿಸಲು ನರರಾಕ್ಷಸಾನ್ವಯರಾಜಿರಂಗದಲಿ ೬೧

ಎಸುಗೆಗಳ ಕೈಚಳಕಗಳ ಬಿಂ । ಬಿಸಿದ ಬಿಲುಗಳ ಚಂದಕಾಂಡ
ಪ್ರಸರದುಬ್ಬರದಬ್ಬರದ ಬೊಬ್ಬೆಗಳ ಭಟರುಗಳ
ವಿಷಮ ರಣರಂಜನೆಗೆ ದೇವ । ಪ್ರಸರವಿದ್ದುದು ನಟ್ಟದೃಷ್ಟಿಯ
ಮುಸುಡಿನೊಲಹಿನ ಬಿಗಿದ ಬೆಜಗಿನ ಸುಖದ ಸುಗ್ಗಿಯಲಿ ೬೨

ಬಿಸಿಬಿಸಿಯ ಬೋಳೆಗಳ ತಳಪದ । ರಸುವೆಗಳ ಕವಲಂಬುಗಳ ಡಾ
ಳಿಸುವ ಹೊಗರಿನ ಕಂಡಳದ ಕಣಲಿಗೆಯ ಕೋಲುಗಳ
ವಿಶಿಖಗಳ ಘನವಿಸ್ಫುಲಿಂಗ । ಪ್ರಸರಗಳ ನಾನಾ ಶರಾವಳಿ
ಮುಸುಕಿದವು ಮುಂಬರಿದು ಭೂಮ್ಯಾಕಾಶಮಂಡಲವ ೬೩

ವೀರ ನೀನಾಗಿದ್ದರೆ ಯುದ್ಧಕ್ಕೆ ಸಿದ್ಧವಾಗು" ಎಂದು ಅತಿಕಾಯ ಗರ್ಜಿಸಿದ. ೬೦. ಅತಿಕಾಯನ ಗರ್ಜನೆಗೆ ದೇವತಾಸ್ತ್ರೀಯರ ತುಂಬಿದ ಬಸಿರು ಇಳಿದು ಗರ್ಭದ ಪಿಂಡಗಳು ಜಾರಿದವು ; ಬ್ರಹ್ಮನೇ ಮೊದಲಾದ ದೇವತೆಗಳ ಕೈಯ ಆಯುಧಗಳು ಕಳಚಿ ನೆಲಕ್ಕು ರುಳಿಬಿದ್ದವು ; ಶಿವನ ತಲೆಯ ಮೇಲಿನ ಚಂದ್ರಮಂಡಲವು ಅರ್ಧಕ್ಕೆ ಕುಸಿಯಿತು ; ರಾಮನು ಕಳವಳಗೊಂಡನು. ೬೧. ಯುದ್ಧದ ಕಟ್ಟಳೆಗನುಸಾರವಾದ ಸಾಹಸದ ಸಂಭ್ರಮದಿಂದ ಉಬ್ಬಿ ಬೊಬ್ಬೆಹಾಕುತ್ತ ಇಬ್ಬರೂ ಒಬ್ಬರನ್ನೊಬ್ಬರು ಹೊಡೆದರು. ಮನುಷ್ಯಕುಲದ ಲಕ್ಷ್ಮಣ ರಾಕ್ಷಸಕುಲದ ಅತಿಕಾಯ ಇಬ್ಬರೂ ದೇವತೆಗಳು ಉತ್ಸಾಹ ಗೊಳ್ಳುವಂತೆ ಬಾಣಗಳ ಮಳೆಗರೆದು ಕಾಳಗವಾಡಿದರು. ೬೨. ಇಬ್ಬರು ವೀರರೂ ಬೊಬ್ಬೆಹಾಕುತ್ತ ಉಗ್ರಬಾಣಗಳನ್ನು ಬಿಲ್ಲುಗಳಿಗೆ ಹೂಡಿ ಕೌಶಲದಿಂದ ಬಾಣಪ್ರಯೋಗ ಮಾಡುವಾಗಿನ ಶಬ್ದದೊಡನೆ ನಡೆಯುತ್ತಿದ್ದ ಅಸಮಾನ ಯುದ್ಧವನ್ನು ನೆಟ್ಟದೃಷ್ಟಿ ಯಿಂದ ನೋಡುತ್ತ ಮುಖವನ್ನು ತಿರುಗಿಸುತ್ತ ಬೆರಗಿನಿಂದಿದ್ದ ದೇವತೆಗಳು ಯುದ್ಧದ ನೋಟದ ಸುಖದ ಸುಗ್ಗಿಯಿಂದ ಆನಂದಿತರಾದರು. ೬೩. ಬಿಸಿಬಿಸಿಯ ಬೋಳೆ ಯಂಬುಗಳು, ಹೊಳೆಹೊಳೆಯುವ ಕವಲಂಬುಗಳು, ಕಾಂತಿಬೀರುವ ಕಡೆದ ಕಣೆಗಿಲೆ ಬಾಣಗಳು, ಬೆಂಕಿಯಕಿಡಿಗಳನ್ನು ಕಾರುವ ಕಣೆಗಳು–ಮೊದಲಾದ ನಾನಾ ವಿಧವಾದ

ಬಳಿಕಲೇವೇಳುವೆನು ಬಾಹಾ । ಲುಳಿತಬಲನತಿಕಾಯನೆಸುಗೆಯ
ಚಳಚಮತ್ಕೃತಿ ಚಟುಳ ನಿಶಿತ ಮಹೋಗ್ರ ಬಾಣಗಳ
ಓಳುಕ ಹೊದೆಸಿದವಗಜೆಯನುಜನ । ಜಲಧಿ ಬೈಚಿಟ್ಟಂತೆ ನಿಮಿಷದೊ
ಳಳವಳಿದನತಿಕಾಯನಾಹವದೆಸುಗೆಗಸುರಾರಿ ೬೪

ಬಿಚ್ಚಿದನು ಬಳಿಕೀತನಸುರನ । ನಿಚ್ಚಟದ ಶರಪಂಜರವ ಮಗು
ಳೆಚ್ಚು ಬಾಣವ ಕಡಿದು ನೋಯಿಸಿದನು ನಿಶಾಚರನ
ಚುಚ್ಚುವಸ್ತ್ರವ್ಯಥೆಯ ಸೈರಿಸು । ತೆಚ್ಚನವನೀತನನು ಕವಚವ
ನುಚ್ಚಿ ಮುಳುಗಿದವಂಬು ಲಕ್ಷ್ಮಣದೇವನಂಗದಲಿ ೬೫

ಸಂಧಿಸಿದ ಸರಳಿಜೀತದಲಿ ಮಿಗೆ । ನೊಂದು ಲಕ್ಷ್ಮಣದೇವನಹುದೋ
ಸಂದ ಭಟರೊಳಗಗ್ಗಳನು ಮಾಮಾ ಪ್ರಸಿದ್ಧನಲ
ಅಂದ ಲೇಸೆಸುಗೆಗಳ ಹಗೆಗಳ । ಲೊಂದೆರಡು ಗುಣವಿರಲಸೂಯೆಯ
ತಂದರಿತರರು ನಗುವರೆನುತಿಂತೆಂದನಸುರಂಗೆ ೬೬

ಬಲ್ಲಿದರು ನೀವ್ ನಿಮ್ಮ ಸಾಹಸ । ಕಿಲ್ಲ ಸರಿ ಸುರನರಭುಜಂಗಮ
ರಲ್ಲಿ ನಾವಾ ಸುರನರೋರಗಭುವನದವರೈಸೆ
ಕಲ್ಲುಮರನವರುಳಿದವರು ಬಿಡು । ಬಿಲ್ಲಿನವರಾವಿಬ್ಬರದಜರೊಳು
ಬಲ್ಲಿದನು ತಾನಲ್ಲ ತನ್ನಯ ಪರಿಯ ನೋಡೆಂದ ೬೭

ಬಾಣಗಳು ಮುಂದುವರಿದು ಭೂಮಿ ಆಕಾಶಗಳನ್ನು ಮುಚ್ಚಿಬಿಟ್ಟವು. ೬೪. ಬಲಶಾಲಿ ತೋಳುಗಳ ಶಕ್ತಿಶಾಲಿ ಅತಿಕಾಯನು ಚಮತ್ಕಾರದಿಂದ ಬಿಡುತ್ತಿದ್ದ ಹರಿತವಾದ ಚುರುಕಿನ ಉಗ್ರಬಾಣಗಳ ಗರಿಗಳು, ಪಾರ್ವತಿಯ ತಮ್ಮ ಮೈನಾಕನನ್ನು ಸಮುದ್ರವು ಮುಚ್ಚಿಟ್ಟಹಾಗೆ ಲಕ್ಷ್ಮಣನನ್ನು ಮುಚ್ಚಿಬಿಟ್ಟವು ; ಇದನ್ನು ಏನೆಂದು ವರ್ಣಿಸಲಿ. ಅತಿಕಾಯನ ಬಾಣಗಳ ಏಟಿನಿಂದ ನಿಮಿಷದಲ್ಲಿ ಲಕ್ಷ್ಮಣನು ಆಯಾಸಗೊಂಡನು. ೬೫. ಬಳಿಕ ಲಕ್ಷ್ಮಣನು ರಾಕ್ಷಸನ ಬಾಣಗಳ ಬಿಗಿಪಂಜರವನ್ನು ಬಿಚ್ಚಿದನು ; ಪುನಃ ಬಾಣಗಳನ್ನು ಬಿಟ್ಟು ಅತಿಕಾಯನ ಬಾಣಗಳನ್ನು ಕತ್ತರಿಸಿ ಅವನನ್ನು ನೋಯಿಸಿದನು. ತನಗೆ ಚುಚ್ಚಿಕೊಂಡ ಬಾಣಗಳ ನೋವನ್ನು ಸಹಿಸಿಕೊಂಡು ಅತಿಕಾಯನು ಬಾಣಗಳನ್ನು ಬಿಡಲು ಆ ಬಾಣಗಳು ಲಕ್ಷ್ಮಣನ ಕವಚವನ್ನು ಸೀಳಿಕೊಂಡು ಹೋಗಿ ಅವನ ದೇಹಕ್ಕೆ ನಾಟಿಕೊಂಡವು. ೬೬. ತನಗೆ ತಗುಲಿದ ಬಾಣಗಳ ಪೆಟ್ಟಿನಿಂದ ನೊಂದ ಲಕ್ಷ್ಮಣನು, "ಹೌದೋ, ಬಂದ ವೀರರೆಲ್ಲರಲ್ಲಿ ನೀನು ಶ್ರೇಷ್ಠನು. ಭೇಷ್ ಭೇಷ್, ನೀನು ಹೆಸರಾಂತವನು. ನಿನ್ನ ಬಾಣಪ್ರಯೋಗದ ರೀತಿ ಚೆನ್ನಾಗಿದೆ. ಶತ್ರುಗಳಲ್ಲಿ ಒಂದೆರಡು ಒಳ್ಳೆಯ ಗುಣಗಳಿರುವುದನ್ನು ಕಂಡು ಹೊಟ್ಟೆಕಿಚ್ಚುಪಟ್ಟರೆ ತಿಳಿದವರು ನಗುವರು" ಎಂದ ಅತಿಕಾಯನಿಗೆ. ೬೭. "ನೀವು ಸಮರ್ಥರು, ದೇವ ಮಾನವ ನಾಗರುಗಳಲ್ಲಿ ನಿಮ್ಮ ಸಾಹಸಕ್ಕೆ ಸಮನಾದವರು ಯಾರೂ ಇಲ್ಲ. ನಾವಾದರೋ ಆ ದೇವ ಮಾನವ ನಾಗ ಲೋಕಗಳಿಗೆ ಸೇರಿದವರು. ನಮ್ಮವರೆಲ್ಲ ಕಲ್ಲುಮರಗಳ ಆಯುಧದವರು. ಬಿಲ್ಲನ್ನು

ಎನುತ ಶರವೈದಱಲಿ ದಶಮುಖ । ತನುಜನುರುವಕ್ಷವನು ಕೀಲಿಸಿ
ದನು ಸುಮಿತ್ರಾಸೂನು ಸುಮ್ಮಾನಿಸೆ ಸುರವ್ರಾತ
ಧನು ಸಡಿಲಿ ಕಾಲ್ನಡುಗಿ ಕಂಪಿಸಿ । ತನು ಬಳಲಿ ಕೈಗುಂದಿ ಕಡುಹಿನ
ಮೊನೆಮುಱಿದು ಮೈಮಱೆದು ಸೋಲಕೆ ಸಂದನತಿಕಾಯ ೬೮

ಮೆಲ್ಲನೆಚ್ಚಱಿಕೆಯಲಿ ಸೀತಾ । ವಲ್ಲಭನ ನೆನಹಿನಲಿ ಸಡಿಲಿದ
ಬಿಲ್ಲ ಬಲುವಿಡಿದುಗಿದು ಮೂಡಿಗೆಯಂಬನತಿಕಾಯ
ಕೆಲ್ಲಯಿಸಿ ತಿರುವಿನಲಿ ಭಾರಿಯ । ಭುಲ್ಲವಣೆಯಲಿ ಮುಕ್ತಿವಧು ಧ
ಮ್ಮಿಲ್ಲಹಸ್ತನ್ಯಸ್ತನಿದಿರಾದನು ಸರಾಗದಲಿ ೬೯

ನೀವು ಜಗದಧಿದೈವವೆಂಬುದ । ನಾವು ಬಲ್ಲೆವು ನಿಜಕುಲಸ್ವಾ
ಭಾವವಿದ ನಾವ್ ಬಿಡಲುಬಹುದೇ ಪೂರ್ವಪದ್ಧತಿಯ
ನಾವು ಮಾಡುವ ಸಮರಮುಖಸಂ । ಭಾವನೋಚಿತ ಸರಳಭಕ್ತಿಯ
ನೀವು ಕೈಕೊಳಬೇಕೆನುತ ತೆಗೆದೆಚ್ಚನತಿಕಾಯ ೭೦

ಕೇಳು ಕುಶ ನಿಮ್ಮಯ್ಯನನುಜನ । ಭಾಳದಲಿ ಬಿದ್ದುಗಿದ ಕೆಂಗಱಿ
ಗೋಲು ನೂಕಿದವರುಣಜಲಧಾರೆಗಳನಿದ್ದೆಸೆಗೆ
ಕೇಳಿದೈ ಲವ ಕೋಪಿಸಿದ ಲಯ । ಕಾಲದುಗ್ರ್ಯಂಬಕನ ನಯನ
ಜ್ವಾಲೆಯಂತಿರೆ ತೋಱಿದನು ಸುರಬಲದ ಕಣ್ಮನಕೆ ೭೧

ಹೊಂದಿರುವವರೆಂದರೆ ನಾವಿಬ್ಬರೇ. ಆ ಇಬ್ಬರಲ್ಲಿ ನಾನೇನು ಸಮರ್ಥನಲ್ಲ. ಆದರೂ ನನ್ನ ರೀತಿಯನ್ನು ನೋಡು" ಎಂದು ನುಡಿದ ಲಕ್ಷ್ಮಣ, ೬೮. ಮೇಲಿನಂತೆ ನುಡಿದ ಲಕ್ಷ್ಮಣನು ಐದು ಬಾಣಗಳನ್ನು ರಾವಣನ ಮಗನ ಎದೆಗೆ ನಾಟುವಂತೆ ಹೊಡೆದನು. ಆಗ ದೇವತೆಗಳು ಹರ್ಷಗೊಂಡರು. ಅತಿಕಾಯನ ಬಿಲ್ಲು ಕೈಯಿಂದ ಸಡಿಲಿತು, ಕಾಲು ನಡುಗಿತು, ದೇಹ ಅದುರಿತು, ಆಯಾಸದಿಂದ ಕೈ ಬಳಲಿತು, ಅವನ ಪರಾಕ್ರಮದ ತೀವ್ರತೆ ಕುಗ್ಗಿತು. ಮೂರ್ಛೆಹೋಗಿ ಅತಿಕಾಯನು ಸೋಲಿಗೊಳಗಾದನು. ೬೯. ಮೆಲ್ಲಗೆ ಎಚ್ಚರಗೊಂಡ ಅತಿಕಾಯನು ಸೀತಾಪತಿಯನ್ನು ಸ್ಮರಿಸುತ್ತ ಕೈಯಿಂದ ಜಾರಿದ್ದ ಬಿಲ್ಲನ್ನು ಬಿಗಿಯಾಗಿ ಹಿಡಿದುಕೊಂಡನು. ಬತ್ತಳಿಕೆಯಿಂದ ಬಾಣವನ್ನು ಸೆಳೆದು ಕೆರಳಿ ಬಿಲ್ಲಿನ ಹಗ್ಗಕ್ಕೆ ಸೇರಿಸಿ ಮೋಕ್ಷಲಕ್ಷ್ಮಿಯ ಮುಡಿಗೆ ಕೈಹಾಕಿದ ರಾಕ್ಷಸನು ಲಕ್ಷ್ಮಣನ ಎದುರಿಗೆ ಬಂದನು. ೭೦. "ನೀವು ಜಗತ್ತಿನ ಅಧಿದೇವತೆಗಳೆಂಬುದನ್ನು ನಾವು ಬಲ್ಲೆವು. ನಮ್ಮ ಕುಲಕ್ಕೆ ಹಿಂದಿನಿಂದ ಬಂದ ಸ್ವಭಾವವನ್ನು ನಾವು ಬಿಡಲು ಸಾಧ್ಯವೇ. ನಾವು ಯುದ್ಧದ ಮೂಲಕ ಮಾಡುವ ಗೌರವಯುತವಾದ ಸರಳ (ಬಾಣದ)ಭಕ್ತಿಯನ್ನು ನೀವು ಸ್ವೀಕರಿಸಬೇಕು" ಎಂದು ನುಡಿದು ಅತಿಕಾಯನು ಬಾಣವನ್ನು ಬಿಟ್ಟನು. ೭೧. ಕೇಳು ಕುಶ, ನಿಮ್ಮ ಅಯ್ಯನ ತಮ್ಮನ ಹಣೆಗೆ ಚುಚ್ಚಿಕೊಂಡ ಕೆಂಪುಗರಿಗಳ ಬಾಣದಿಂದ ಎರಡೂ ಕಡೆಗಳಿಗೆ ರಕ್ತದ ಪ್ರವಾಹಗಳು ಚಿಮ್ಮಿದವು. ಕೇಳಿದೆಯಾ ಲವ, ಕೆರಳಿದ ಪ್ರಳಯ ಶಿವನ ಹಣೆಗಣ್ಣಿನ ಬೆಂಕಿಯುರಿಯಂತೆ ಲಕ್ಷ್ಮಣನು ದೇವತೆಗಳ ಕಣ್ಣುಗಳಿಗೆ ಕಾಣಿಸಿದನು

ಲೇಸುಲೇಸೈ ಚಾಪತಂತ್ರವಿ । ಲಾಸವೊಳ್ಳಿತು ವೀರನಹೆ ಮಾ
ಮಾ ಸಮಗ್ರ ಪ್ರಬಲನಹೆ ರಘುಪತಿಯ ಪದದಾಣೆ
ಈಸುದಿನ ಕಾದಿದ ನಿಶಾಟವು । ಹಾಸುಭಟರಾಹವಕೆ ಮಿಗಿಲೆಂ
ದಾ ಸುಮಿತ್ರಾಸುತ ಸುರಾರಿಯನೆಚ್ಚು ಬೊಬ್ಬಿಱಿದ ೭೨

ಕಾಯ ಕಂಪಿಸಿತುರದೊಳದ್ದಿದ । ಸಾಯಕದ ಘಾತಿಯಲಿ ನೊಂದನು
ಘಾಯದಲಿ ಮುರ್ಛಿಸುವ ಮೂರ್ಛೆಯ ಬಳಿಯ ಮಱುಕದಲಿ
ಅಯಿತಕಟಾ ತಂದೆ ರಾವಣ । ನಾಯುವಿಗೆ ಕಡೆಯೆನುತ ಸಿರಿನಾ
ರಾಯಣಧ್ಯಾನದಲಿ ಮುಕ್ತಿಗೆ ಮಾಡಿದನು ಮನವ ೭೩

ನರರಿಗೀ ಬಲುಹೆಲ್ಲಿಯದು ವಾ । ನರರಿಗೀ ಕಡುಹೆಲ್ಲಿಯದು ನರ
ಹರಿಯ ಲೀಲಾಚರಿತವಿದು ನಾವಿನ್ನು ಕಾದುವುದು
ಮರುಳುತನವೆನುತಂತರಂಗದ । ಸರಸಿಜದ ಕರ್ಣಿಕೆಯ ಮಧ್ಯದ
ಲಿರಿಸಿ ರಾಮನ ಮೂರ್ತಿಯನು ಸೌಮಿತ್ರಿಗಿಂತೆಂದ ೭೪

ಕಲಹಕಾವ್ ವೆಗ್ಗಳರು ಲೋಕಾ । ವಳಿಯ ವೀರರೊಳಱಿದೆವಾವ್ ನೀವ್
ಜಲರುಹಾಕ್ಷನ ಬಿಂಬವೆಂಬುದು ಮಱೆಯಮಾತಲ್ಲ
ತಿಳಿಯಲಿದು ತುದಿಗಾಲವೆನುತಾ । ಕಲಿತ ಶರಸಂಧಾನದಲಿ ಕೈ
ಲುಳಿಯಲೆಚ್ಚನು ವೀರವೈಷ್ಣವನೂರ್ಮಿಳಾಪತಿಯ ೭೫

ಎಂದು ವಾಲ್ಮೀಕಿಗಳು ಹೇಳಿದರು. ೭೨. "ಒಳ್ಳೆಯದು ಒಳ್ಳೆಯದು. ನಿನ್ನ ಬಿಲ್ವಿದ್ಯಾ ಕೌಶಲವು ಚೆನ್ನಾಗಿದೆ. ನೀನು ವೀರ ನಿಜ. ಅಬ್ಬ, ಸಂಪೂರ್ಣ ಸಮರ್ಥನಿದ್ದೀಯೆ, ರಘುಪತಿಯ ಪಾದದಾಣೆ. ಇಷ್ಟುದಿನ ಕಾದಿದ ರಾಕ್ಷಸಮಹಾವೀರರ ಯುದ್ಧಕ್ಕೆ ಇದು ಮಿಗಿಲಾಯಿತು" ಎನ್ನುತ್ತ ಲಕ್ಷ್ಮಣನು ರಾಕ್ಷಸನ ಮೇಲೆ ಬಾಣ ಬಿಟ್ಟು ಬೊಬ್ಬಿರಿದ. ೭೩. ಅತಿಕಾಯನ ದೇಹ ನಡುಗಿತು. ಎದೆಗೆ ನಟ್ಟ ಬಾಣದ ಏಟಿನಿಂದ ನೊಂದನು. ಗಾಯದ ನೋವನ್ನು ಸಹಿಸಿ ಮೂರ್ಛೆಯಿಂದ ಚೇತರಿಸಿಕೊಂಡ ಬಳಿಕ ದುಃಖದಿಂದ, "ಅಯ್ಯೋ ! ತಂದೆ ರಾವಣನ ಆಯುಸ್ಸಿಗೆ ಕೊನೆ ಬಂದಿತು !" ಎನ್ನುತ್ತ ಶ್ರೀಮನ್ನಾರಾಯಣನ ಧ್ಯಾನದಲ್ಲಿ ಮುಕ್ತಿಯನ್ನು ಪಡೆಯಲು ನಿಶ್ಚಯಿಸಿದನು. ೭೪. 'ಮಾನವರಿಗೆ ಈ ಸಾಮರ್ಥ್ಯವೆಲ್ಲಿಯದು ; ವಾನರರಿಗೆ ಈ ಪರಾಕ್ರಮವೆಲ್ಲಿಯದು. ಇದು ನರಹರಿಯ ಲೀಲೆಯ ನಡೆವಳಿಕೆ. ನಾವು ಇನ್ನು ಕಾದುವುದು ಮರುಳುತನ' ಎನ್ನುತ್ತ ಹೃದಯಕಮಲದ ಮಧ್ಯಭಾಗದಲ್ಲಿ ರಾಮನ ಮೂರ್ತಿಯನ್ನು ಇರಿಸಿ ಲಕ್ಷ್ಮಣನನ್ನು ಕುರಿತು ಅತಿಕಾಯನು ಮುಂದಿನಂತೆ ನುಡಿದನು. ೭೫. "ಲೋಕಗಳ ವೀರರುಗಳಲ್ಲಿ ಯುದ್ಧಮಾಡುವುದರಲ್ಲಿ ನಾವು ಶ್ರೇಷ್ಠರು. ನೀವು ಕಮಲಾಕ್ಷನ ಬಿಂಬ ವೆಂಬುದು ಸುಳ್ಳಲ್ಲ. ತಿಳಿದುನೋಡಿದರೆ ಇದು ನಮ್ಮ ಕೊನೆಗಾಲ" ಎನ್ನುತ್ತ ನೈಪುಣ್ಯದಿಂದ ವೀರವಿಷ್ಣುಭಕ್ತ ಅತಿಕಾಯನು ಲಕ್ಷ್ಮಣನ ಮೇಲೆ ಬಾಣಬಿಟ್ಟನು.

ಬಾಣವದ ಕಡಿದಬ್ಬರಿಸಿ ಗೀ । ರ್ವಾಣಪತಿ ಹೊಗಳಲು ಚತುರ್ಮುಖ
ಬಾಣದಲಿ ನೆಗಹಿದನು ಮಸ್ತಕವನು ನಿಶಾಚರನ
ಪ್ರಾಣ ತೊಲಗದ ಮುನ್ನ ಜಿಂಹ । ತ್ರಾಣದಲಿ ಹರಿ ವಿಷ್ಣು ಲಕ್ಷ್ಮೀ
ಪ್ರಾಣನಾಥಾಯೆನುತ ಶಿರವಡರಿತು ನಭಸ್ಥಳಕೆ ೭೬

ಅಡರೆ ಮಸ್ತಕ ನಭವ ಹರಿಪದ । ಕಡರಿತಾತ್ಮಜ್ಯೋತಿ ಮಿಗೆ ಬೆಳ
ಗಿಡುತಲುಚ್ಚಳಿಸಿದುದು ರವಿಮಂಡಲದ ಮಧ್ಯದಲಿ
ಜಡಿವ ಪರಮಾನಂದರಸದು । ಗ್ಗಡದಲಿರೆ ಬ್ರಹ್ಮಾದಿಗಳು ಬೆಬಿ
ಗಿಡೆ ಬಹುಶ್ರುತಿ ಹಾರವಿಸೆ ಸನಕಾದಿ ಮುನಿನಿಕರ ೭೭

ಮಿಸುಪ ಮಣಿಮಯಕುಂಡಲದ ಡಾ । ಳಿಸುವ ಕದಪಿನ ಮುಗುಳುನಗೆ ಲಂ
ಬಿಸಿದ ವದನದ ವೀರರಸದಭಿನವದ ಲೋಚನದ
ಅಸುರಪತಿ ಲಂಕೇಶ್ವರನ ಮೊಗ । ರಸದ ಸಿರಿ ಕೆಲಸಿಡಿವವೊಲು ತಲೆ
ವಿಶಿಖಮುಖದಲಿ ಕೆಡೆದುದಿಳೆಗತಿಕಾಯರಕ್ಕಸನ ೭೮

ಹೊರಳಿದನು ಬಳಿಕವನ ಸಾರಥಿ । ಸುರಿವ ಕಂಬನಿಗಳಲಿ ಮಿಡಿದನು
ಬೆರಳಲಶ್ರುಜಲಂಗಳನು ಲಂಕೇಶನೆರಡನೆಯ
ಹರಿಪರಾಯಣನಸ್ತಮಿಸಿದನೆ । ಹರಮಹಾದೇವೆನುತ ದುಗುಡದ
ಲರಿಯಮನು ಹಮ್ಮೈಸಿ ಬಿದ್ದನು ಪಡುವಣಬುಧಿಯಲಿ ೭೯

೭೬. ಲಕ್ಷ್ಮಣನು ಅತಿಕಾಯನ ಬಾಣವನ್ನು ಕತ್ತರಿಸಿ, ದೇವೇಂದ್ರನು ಕೊಂಡಾಡಲು, ಬ್ರಹ್ಮಾಸ್ತ್ರದಿಂದ ಅತಿಕಾಯನ ತಲೆಯನ್ನು ಹಾರಿಸಿದನು. ಪ್ರಾಣ ಹೋಗುವುದಕ್ಕೆ ಮುಂಚೆ ನಾಲಗೆಯ ಶಕ್ತಿಯಿಂದ 'ಹರಿ ! ವಿಷ್ಣು ! ಲಕ್ಷ್ಮೀಕಾಂತ !' ಎನ್ನುತ್ತ ಅತಿಕಾಯನ ತಲೆಯು ಆಕಾಶಕ್ಕೇರಿತು. ೭೭. ಅತಿಕಾಯನ ತಲೆಯು ಆಕಾಶಕ್ಕೇರಲು ಅವನ ಆತ್ಮಜ್ಯೋತಿಯು ವಿಷ್ಣು ಪಾದವನ್ನು ಸೇರಿ ಅಲ್ಲಿಂದ ಚಿಮ್ಮಿ ಸೂರ್ಯಮಂಡಲದ ನಡುವೆ ಪ್ರಕಾಶಿಸಿತು. ಬ್ರಹ್ಮಾದಿ ದೇವತೆಗಳು ಅತಿಶಯ ಆನಂದರಸದಲ್ಲಿ ಮುಳುಗಿದರು, ವೇದಗಳು ಅಚ್ಚರಿಪಟ್ಟವು. ಸನಕಾದಿ ಮುನಿಗಳು ಕೊಂಡಾಡಿದರು. ೭೮. ಹೊಳೆಯುವ ವಜ್ರದ ಕುಂಡಲಗಳಿಂದ ಹೊಳೆಯುವ ಕೆನ್ನೆಯ, ಮುಗುಳುನಗೆಯ ಮುಖದ, ವೀರರಸವುಕ್ಕುವ ಕಣ್ಣುಗಳ ಅತಿಕಾಯನ ತಲೆಯು ರಾಕ್ಷಸೇಶ್ವರ ರಾವಣನ ಮುಖದ ಕಳೆಯು ಸಿಡಿದುಬೀಳುವಂತೆ ಬಾಣದ ತುದಿಯಲ್ಲಿ ನೆಲಕ್ಕೆ ಬಿದ್ದಿತು. ೭೯. ಅತಿಕಾಯನ ಸಾರಥಿ ಕಣ್ಣೀರು ಸುರಿಸುತ್ತ ಬೆರಳಿನಿಂದ ಕಣ್ಣೀರು ಮಿಡಿಯುತ್ತ ಹಿಂದಿರುಗಿದನು. 'ಲಂಕಾಧಿಪತಿಯ ಎರಡನೆಯ ವಿಷ್ಣುಭಕ್ತನು ಮುಳುಗಿದನೆ ! ಹರಹರ ಮಹಾದೇವ !' ಎನ್ನುತ್ತ ಸೂರ್ಯನು ಹಂಬಲಿಸುತ್ತ ಪಶ್ಚಿಮ ಸಮುದ್ರದಲ್ಲಿ ಮುಳುಗಿ

ಉಳಿದ ಬಲವೀ ಲಕ್ಷ್ಮಣಾಂಕನ । ಹಳಚಿ ಹರಿದುದು ಹರಿಪದದ ಪದ
ದೊಳಗೆ ಹೊಸಲಿದ್ದುದು ಸುರಾವಳಿ ಸುರಿಯೆ ಹೂಮಳೆಯು
ಮೊಳಗಿದವು ದುಂದುಭಿಗಳಮರರ । ಹೊಳಲೊಳಗೆ ಹರಿಸೇನೆ ಮಾಯಾ
ಬಲೆಯ ಬಿಡುಗಡೆಯಿಂದ ಬೊಬ್ಬಿಟಾಡಿತಗಲದಲಿ ೮೦

ರಥವ ತಿರುಗಿಸಿಕೊಂಡು ರಿಪುಸಾ । ರಥಿ ಪುರಾಂತರಕೈದಿದನು ಬಲ
ಮಥನ ಹೊಗಳಲು ಹರುಷದುಬ್ಬಿನಲನುಜನೊಡಗೂಡಿ
ಪೃಥುಳಬಲ ತೊರವೆಯ ಹಿರಣ್ಯಕ । ಮಥನ ತಿರುಗಿದನಿತ್ತಲಧಿಕ
ಪ್ರಥಿತ ವಿಜಯಾಭ್ಯುದಯದೇಳಿಗೆಯಿಂದ ಪಾಳಯಕೆ ೮೧

ದನು. ೮೦. ಅತಿಕಾಯನ ಉಳಿದ ಸೈನ್ಯವು ಲಕ್ಷ್ಮಣನನ್ನು ತಾಗಿ ಕದನದಲ್ಲಿ ಪ್ರಾಣ ಬಿಟ್ಟು ವಿಷ್ಣುಪಾದವನ್ನು ಸೇರಿಕೊಂಡಿತು. ದೇವತೆಗಳು ಹೂಮಳೆಯನ್ನು ಸುರಿಸಿದರು. ದೇವತೆಗಳ ರಾಜಧಾನಿಯಲ್ಲಿ ದುಂದುಭಿಗಳು ಭೋರ್ಗರೆದವು. ಕಪಿಸೈನ್ಯವು ಮಾಯಾಬಲೆಯ ಬಿಡುಗಡೆಯಿಂದ ಬೊಬ್ಬೆಹಾಕುತ್ತ ಕುಣಿದಾಡಿತು. ೮೧. ಅತಿಕಾಯನ ಸಾರಥಿಯು ರಥವನ್ನು ತಿರುಗಿಸಿಕೊಂಡು ಲಂಕಾನಗರಕ್ಕೆ ಹೋದನು. ಇಂದ್ರನು ಹೊಗಳುತ್ತಿರಲು ಮಹಾಬಲಶಾಲಿ ತೊರವೆಯ ನರಸಿಂಹನ ಅವತಾರರೂಪಿ ರಾಮನು ಗೆಲುವಿನ ಏಳಿಗೆಯ ಆನಂದದಿಂದ ಉಬ್ಬಿ ತಮ್ಮನೊಡನೆ ಪಾಳಯಕ್ಕೆ ಹಿಂದಿರುಗಿದನು.

35

# ಮೂವತ್ತೈದನೆಯ ಸಂಧಿ

ಸೂಚನೆ॥ ರಾಯ ವೈರಿಘರಟ್ಟನಮರರ । ರಾಯದಲ್ಲಣನಿಂದ್ರಜಿತುವಜ
ಸಾಯಕದ ಸಮರದಲಿ ಗೆಲಿದನು ಸಕಲ ಕಪಿಬಲವ

ಕೇಳಿದೈ ಕುಶ ನಿಮ್ಮ ರಘುಭೂ । ಪಾಲನನುಜನು ಸಮರಮುಖದ ಸ
ಲೀಲೆಯಲಿ ಸಾಯುಜ್ಯ ಪಡೆದತಿಕಾಯರಕ್ಕಸನ
ಕಾಳಗದ ವಾರ್ತೆಯನು ಬಳಿಕೊ । ಡ್ಡೋಲಗದೊಳಿದ್ದಸುರಪತಿ ಕೇ
ಳ್ದಾಲಿಗಳ ಬಿಡುವನಿಯಲಿಳಿದನು ಸಿಂಹವಿಷ್ಟರವ ೧

ಕಳುಹಿ ರಕ್ಕಸನಾಯಕರನೊಳ । ನಿಳಯಕೈತರೆ ಧಾನ್ಯಮಾಲಿನಿ
ಯಳಲಿದಳು ಸುತಶೋಕದಲಿ ಹಳವಿಸುತ ನಂದನನ
ಬಳಿಕ ಶಕ್ರಾರಾತಿ ತಂದೆಯ । ಬಳಿಗೆ ಬಂದಾ ಜನನಿ ಜನಕರ
ತಿಳುಹಿ ತನ್ನ ಪರಾಕ್ರಮವ ಪಸರಿಸಿದನಯ್ಯಂಗೆ ೨

ಜನಕ ಚಿತ್ತೈಸುದಯಮುಖದಲಿ । ಮನುಜ ಮರ್ಕಟಮಾಂಸದಲಿ ಶಾ
ಕಿನಿಜನೌಘವ ಸಾಕದಿರೆ ಮಂಡೋದರಿಗೆ ನಿನಗೆ
ಜನಿಸಿದವನಲ್ಲೀ ಪ್ರತಿಜ್ಞೆಗೆ । ಜಿನುಗಿದರೆ ಜಾಱುವೆನು ಶಿಖಿಯೊಳು
ಮನದ ದುಗುಡವ ಬಿಟ್ಟು ಬಯಸು ಮನೋರಥವನೆಂದ ೩

ಸೂಚನೆ ॥ ದೇವೇಂದ್ರನ ದರ್ಪವನ್ನು ಚೂರು ಚೂರು ಮಾಡಿದ ಶತ್ರುಗಳ ಬೀಸುವ ಕಲ್ಲಾದ ಇಂದ್ರಜಿತು ಬ್ರಹ್ಮಾಸ್ತ್ರದಿಂದ ಯುದ್ಧದಲ್ಲಿ ಸಮಸ್ತ ಕಪಿಸೈನ್ಯವನ್ನೂ ಗೆದ್ದನು. ೧. ಕೇಳಿದೆಯಾ, ಕುಶ. ನಿಮ್ಮ ರಘುಭೂಪಾಲನ ತಮ್ಮನ ಸರಾಗದ ಯುದ್ಧದಲ್ಲಿ ಮೋಕ್ಷವನ್ನು ಪಡೆದ ಅತಿಕಾಯರಾಕ್ಷಸನ ಯುದ್ಧದ ವೃತ್ತಾಂತವನ್ನು ಆಸ್ಥಾನದಲ್ಲಿದ್ದ ರಾವಣನು ಕೇಳಿ ಕಣ್ಣೀರು ಸುರಿಸುತ್ತ ಸಿಂಹಾಸನದಿಂದ ಕೆಳಗಿಳಿದನು. ೨. ರಾಕ್ಷಸನಾಯಕರನ್ನು ಕಳುಹಿಸಿಕೊಟ್ಟು ಒಳನಿವಾಸಕ್ಕೆ ರಾವಣನು ಬರಲು ಅತಿಕಾಯನ ತಾಯಿ ಧಾನ್ಯಮಾಲಿನಿ ಮಗನ ಸಾವಿಗೆ ಅಳುತ್ತ ದುಃಖಿಸಿದಳು. ಅನಂತರ ಇಂದ್ರಜಿತು ತಂದೆಯ ಬಳಿಗೆ ಬಂದು ತಂದೆತಾಯಿಗಳಿಗೆ ಸಮಾಧಾನ ಹೇಳಿ ತಂದೆಯ ಎದುರಿಗೆ ತನ್ನ ಪರಾಕ್ರಮವನ್ನು ಹೊಗಳಿಕೊಂಡನು. ೩. "ತಂದೆ ಆಲಿಸು. ನಾಳೆ ಬೆಳಗಾದ ಮೇಲೆ ಮಾನವ ಮರ್ಕಟಮಾಂಸದಿಂದ ಶಾಕಿನಿಗಳನ್ನು ಸಾಕದಿದ್ದರೆ ಮಂಡೋದರಿಗೂ ನಿನಗೂ ಹುಟ್ಟಿದವನಲ್ಲ ನಾನು. ಈ ಪ್ರತಿಜ್ಞೆಗೆ ತಪ್ಪಿದರೆ ಅಗ್ನಿ ಪ್ರವೇಶ ಮಾಡುವೆನು. ಮನಸ್ಸಿನ ಚಿಂತೆಯನ್ನು ಬಿಟ್ಟು ನಿನ್ನ ಅಭೀಷ್ಟವನ್ನು

ಎಣಿಸಬೇಡನ್ಯವನು ಕದನದ । ಕಣೆಯಿಕಿದು ಕಡೆಯೆನುತ ಕಲಿರಾ
ವಣಿ ದಶಗ್ರೀವಂಗೆ ಭಾಷೆಯನಿತ್ತು ರೋಷದಲಿ
ಮಣಿರಥವನೇಱಿದನು ರಿಪುಮಾ । ರಣದ ಮಂತ್ರದ ರಾಕ್ಷಸದ್ವಿಜ
ಗಣಸಹಿತ ಬಂದನು ನಿಕುಂಭಿಳೆಯೆಡೆಗೆ ರಜನಿಯಲಿ ೪

ಬಿಸರುಹಾಸನನಿಂದ ವರವವ । ಗೊಸೆದುದಾಸುರಹೋಮದಲಿ ರಿಪು
ವಿಶಸನ ಬ್ರಹ್ಮಾಸ್ತ್ರ ಸೇರುವುದಾ ನಿಶಾಟಂಗೆ
ನಿಶಿಯೊಳದು ತಾ ಸಿದ್ಧವಾಗಿಹು । ದಸುರ ವಿಪ್ರರ ಮುಖದಿನಾರಂ
ಭಿಸಿದನಧ್ವರವನು ಮಹಾಮಾರಣಮುಖಾಹ್ವಯದ ೫

ಉರಿಯನುದರವ ಬಗಿದುಗಿದು ವಿ । ಸ್ತರಿಸಿದನು ಕುಂಡದಲಿ ಮಾಂಸದ
ಚರುವಿನರುಣಜಲಾಜ್ಯಧಾರೆಯ ನರದ ದರ್ಭೆಗಳ
ಬೆರಳ ಸಮಿಧೆಯಲಾಭಿಚಾರಾ । ಧ್ವರವ ನಿರ್ವರ್ತಿಸಿದನೈ ನಡು
ವಿರುಳು ನಿರ್ವಿಘ್ನದಲಿ ವರವಾಯ್ತುಬುಜಸಂಭವನ ೬

ಮುರಿದನವ ಪುರವರಕೆ ಪುರಹರ । ಹರಿ ಯಮಾದಿಗಳಳುಕೆ ತಂದೆಯ
ಭರದ ದುಗುಡವ ಬಿಡಿಸಿ ತೋಱಿಸಿದನು ಸರೋಜಜನ
ವರವಲೊದಗಿದ ದಿವ್ಯರಥ ಹಯ । ಶರ ಶರಾಸನಗಳನು ಹರುಷೋ
ತ್ಕರುಷವನು ಬಗೆಗೊಳಿಸಿ ಬಳಿಕಿಂತೆಂದನಯ್ಯಂಗೆ ೭

ಬಯಸು" ಎಂದ ಇಂದ್ರಜಿತು, ೪. "ಬೇರೆ ಯೋಚಿಸಬೇಡ. ಯುದ್ಧಪ್ರಸಂಗಕ್ಕೆ ಇದು ಕಡೆ" ಎನ್ನುತ್ತ ವೀರ ಇಂದ್ರಜಿತು ರಾವಣನಿಗೆ ಮಾತುಕೊಟ್ಟು ಕೋಪದಿಂದ ರತ್ನದ ರಥವನ್ನು ಹತ್ತಿದನು. ಶತ್ರುಸಂಹಾರಮಂತ್ರಜ್ಞರಾದ ರಾಕ್ಷಸಬ್ರಾಹ್ಮಣ ರೊಡನೆ ರಾತ್ರಿಯಲ್ಲಿ ನಿಕುಂಭಿಳಾದೇವತೆಯ ಗುಡಿಗೆ ಇಂದ್ರಜಿತು ಬಂದ. ೫. ಉಗ್ರ ಹೋಮದಿಂದ ಶತ್ರುವಿನಾಶಕ ಬ್ರಹ್ಮಾಸ್ತ್ರವು ಕೈಸೇರುವುದೆಂಬ ವರವು ಬ್ರಹ್ಮನಿಂದ ಇಂದ್ರಜಿತುವಿಗೆ ದೊರೆತಿದೆ. ರಾತ್ರಿ ಅದು ಸಿದ್ಧಿಯಾಗುವುದು. ಇಂದ್ರಜಿತು ರಾಕ್ಷಸ ಬ್ರಾಹ್ಮಣರ ಮೂಲಕ ಮಹಾಮಾರಣಹೋಮವೆಂಬ ಯಾಗವನ್ನು ಆರಂಭಿಸಿದನು. ೬. ಹೊಟ್ಟೆಯನ್ನು ಬಗೆದು ಉದರಾಗ್ನಿಯನ್ನು ಕಿತ್ತು ಬೆಂಕಿ ಮಾಡಿದನು. ಆ ಬೆಂಕಿಯ ಕುಂಡದಲ್ಲಿ ಮಾಂಸದ ಹವಿಸ್ಸನ್ನು ಅರ್ಪಿಸಿ ರಕ್ತದ ತುಪ್ಪವನ್ನೆರೆದು ನರದ ದರ್ಭೆಗಳನ್ನು ತೊಟ್ಟು ಬೆರಳಿನಲ್ಲಿ ಸಮಿತ್ತನ್ನು ತೆಗೆದುಕೊಂಡು ಮಾಟದ ಹೋಮವನ್ನು ಮಾಡಿ ಮುಗಿಸಿದನು. ನಡುರಾತ್ರಿಯಲ್ಲಿ ಯಾವ ಅಡ್ಡಿಯೂ ಇಲ್ಲದೆ ಬ್ರಹ್ಮನ ವರವು ದೊರಕಿತು. ೭. ಶಿವ, ವಿಷ್ಣು, ಯಮನೇ ಮೊದಲಾದವರು ಹೆದರಲು ಇಂದ್ರಜಿತು ನಗರಕ್ಕೆ ಹಿಂದಿರುಗಿದನು. ತಂದೆಯ ದುಃಖದ ಭಾರವನ್ನಿಳಿಸಿ ಬ್ರಹ್ಮನ ವರದಿಂದ ದೊರಕಿದ ದಿವ್ಯರಥ, ಕುದುರೆ, ಬಾಣ ಬಿಲ್ಲುಗಳನ್ನು ತೋರಿಸಿ ಮನಸ್ಸಿಗೆ ಸಂತೋಷ ವನ್ನು ತಂದುಕೊಟ್ಟು ಇಂದ್ರಜಿತು ತಂದೆಯನ್ನು ಕುರಿತು ಮುಂದಿನಂತೆ ನುಡಿದನು.

ಅಸುರಪತಿ ಕೇಳ್ ನಿನ್ನ ಸೋಲದ । ಸಸಿಯ ಕಿತ್ತಿಕ್ಕುವೆನು ರಾಮನ
ಬಸುರಿನೊಳು ಬೆಳಸುವೆನು ಲಕ್ಷ್ಮಣನರುಣವಾರಿಯಲಿ
ಒಸೆದು ಸುಗ್ರೀವಾದಿ ವಿಪಿನೌ । ಕಸರು ತತ್ಕುಜಫಲಗಳನು ಭುಂ
ಜಿಸುವವೊಲು ಮಾಡುವೆನು ತಾ ವೀಳೆಯುವ ತನಗೆಂದ ೮

ಅಳಿದ ಧೂಮ್ರಾಕ್ಷಾದಿ ಸುಭಟಾ । ವಳಿಯ ನಿನ್ನೋಲಗದ ಸಭೆಯಲಿ
ಸುಳಿಸುವೆನು ಕೊಡದಿರೆ ಕೃತಾಂತನ ಕುಕ್ಷಿಯನು ಬಗಿದು
ಕಲುಮರನ ತುಂಬುವೆನು ಹಿಂದಣ । ಗಲಬೆಗಲಹದ ಗಾವಳಿಯರಳು
ಜುಳುಕಿನಾಹವದವನೆ ತಾನೆಂದುಬ್ಬಣವ ಜಡಿದ ೯

ಇಂದ್ರಜಿತುವಿಂತೆಂದು ಬಳಿಕ ಸು । ರೇಂದ್ರನಾನನಕುಮುದದಲಿ ಮುದ
ಚಂದ್ರಿಕೆಯ ಹರಹಿದನು ಕಳುಹಿಸಿಕೊಂಡನಾಹವಕೆ
ಇಂದ್ರನಿನಕುಲಚಕ್ರಿಗುದಯನ । ಗೇಂದ್ರನಲಿ ನಿಂದಿರ್ದು ತೋಱುವ
ಸಾಂದ್ರಮಣಿಮುಕುರದವೊಲುದಿಸಿತು ಬಿಂಬ ದಿನಮಣಿಯ ೧೦

ಶರಧಿ ಮುಮ್ಮಳೆಗಾಲದಲಿ ಘೋ । ರ್ಗರೆವವೊಲು ಘೋರೆಂದು ಹಱೆಯ
ಬ್ಬರಿಸಿದವು ಕೂಗಿಡೆ ಕುಲಾಚಲ ಕೋಟಿಸಂಖ್ಯೆಯಲಿ
ತುರಗ ತಲೆದೋಱಿದವು ಮದಸಿಂ । ಧುರದ ಮೋಹರ ಮೆಱೆದುದತಿರಥ
ರುರವಣಿಸಿದರು ಪಾಯದಳ ದಳವುಳಿಸಿತಿದಿರಿನಲಿ ೧೧

೮. "ರಾಕ್ಷಸೇಶ್ವರ, ಕೇಳು. ನಿನ್ನ ಸೋಲಿನ ಸಸಿಯನ್ನು ಕಿತ್ತು ರಾಮನ ಹೊಟ್ಟೆಯಲ್ಲಿ ನಟ್ಟು ಲಕ್ಷ್ಮಣನ ರಕ್ತದಿಂದ ಅದನ್ನು ಬೆಳಸುವೆನು. ಸುಗ್ರೀವನೇ ಮೊದಲಾದ ವಾನರರು ಆ ಗಿಡದ ಫಲಗಳನ್ನು ಊಟಮಾಡುವಂತೆ ಮಾಡುವೆನು. ನನಗೆ ವೀಳಯವನ್ನು ಕೊಡು" ಎಂದು ಇಂದ್ರಜಿತು ಕೇಳಿದ. ೯. "ಸಾವಿಗೀಡಾದ ಧೂಮ್ರಾಕ್ಷಾದಿ ವೀರರನ್ನು ನಿನ್ನ ಆಸ್ಥಾನದ ಸಭೆಗೆ ಬರುವಂತೆ ಮಾಡುತ್ತೇನೆ. ಅವರನ್ನು ಹಿಂದಕ್ಕೆ ಕೊಡದೆಹೋದರೆ ಯಮನ ಹೊಟ್ಟೆಯನ್ನು ಬಗೆದು ಅದರೊಳಕ್ಕೆ ಕಲ್ಲುಮರಗಳನ್ನು ತುಂಬುತ್ತೇನೆ. ಇದಕ್ಕೆ ಮೊದಲಿನ ಗಲಾಟೆ ಜಗಳದ ಗುಂಪುಗುಳಿ ಜನರಂತೆ ನಾನು ಅಂಜಿ ಜಾರಿಕೊಳ್ಳುವವನೆ ?" ಎಂದು ಇಂದ್ರಜಿತು ಕತ್ತಿಯನ್ನು ಝಳಪಿಸಿದ. ೧೦. ಹೀಗೆ ನುಡಿದ ಇಂದ್ರಜಿತು ರಾವಣನ ಮುಖನೈದಿಲೆಯ ಮೇಲೆ ಸಂತೋಷದ ಬೆಳುದಿಂಗಳನ್ನು ಹರಡಿದನು. ಅನಂತರ ಯುದ್ಧಕ್ಕೆ ಹೊರಟನು. ಇಂದ್ರನು ರವಿವಂಶ ಚಕ್ರವರ್ತಿಗೆ ಉದಯಪರ್ವತದ ಮೇಲೆ ನಿಂತು ತೋರಿಸುತ್ತಿರುವ ವಜ್ರದ ಕನ್ನಡಿಯಂತೆ ಸೂರ್ಯನು ಉದಿಸಿದನು. ೧೧. ಮಳೆಗಾಲದ ಮೊದಲಲ್ಲಿ ಸಮುದ್ರವು ಭೋರ್ಗರೆಯುವಂತೆ ತಮಟೆಗಳು ಭೋರ್ಗರೆಯಲು ಕುಲಪರ್ವತವು ಪ್ರತಿಧ್ವನಿಸಿತು. ಕೋಟಿಸಂಖ್ಯೆಯಲ್ಲಿ ಕುದುರೆಗಳು ಬಂದವು. ಮದದಾನೆಗಳ ಸೈನ್ಯ

ನಿಮ್ಮವರು ಬಳಿಕರಿಬಲದ ಭರ । ದುಮ್ಮಹವನೀಕ್ಷಿಸುತ ಹೊಸಗಿರಿ
ಹೆಮ್ಮರಗಳುಬ್ಬರದಲಬ್ಬರ ಮಿಗಲು ಮೋಹರದ
ಸಮ್ಮುಖದೊಳೊಡ್ಡಿದರು ನೆರೆದರು । ಬೊಮ್ಮ ಮೊದಲಾದವರು ಜಲನಿಧಿ
ಗುಮ್ಮಿಗುಳ್ಳಿಗಳೇಳೆ ರಣದಬ್ಬರಿನ ಬೊಬ್ಬೆಯಲಿ ೧೨

ಎಲೆ ರಘುಕ್ಷಿತಿನಾಥಸುತ ಕೇ । ಳೆಳವಿಗೊಟ್ಟೆರಡೊಡ್ಡು ಜಲನಿಧಿ
ಜಲನಿಧಿಗೆ ಮಾಱಾಂತವೊಲು ಮಾಱಾಂತವಿದಿರಿನಲಿ
ಬಳಿಕ ಮಹದುತ್ಪಾತ ಕಪಿಬಲ । ದೊಳಗೆ ಮೈದೋಱಿದುದು ಬಲುಕಳ
ವಳಿಕೆ ಕಾಲೂಱಿದುದು ಕಂದಿದುದಭ್ರಮಣಿಬಿಂಬ ೧೩

ಶೈಲ ಜರಿದವು ಕಪಿಕದಂಬದ । ತೋಳತುದಿಯಿಂದಿಳೆಗೆ ಸುಂಟರು
ಗಾಳಿಯೆದ್ದುದು ಬೀಸಿದುದು ಬಲ ಬೆದಱೆ ದೆಸೆದೆಸೆಗೆ
ಜಾಱಿಸಿದುದಿಳೆಗಭ್ರತಳ ತಾ । ರಾಳಿಗಳ ತಳಮಗುಚಿತಂಬುಧಿ
ಮಾಲೆಗಿಡಿಗಳನುಗುಳಿತಂಬರವರುಣಜಲಸಹಿತ ೧೪

ಉಕ್ಕಿದವು ನದಿ ಧೂಮಕೇತು ಐ । ದಿಕ್ಕಿನಲಿ ತೋಱಿದವು ನೆಲ ಬೊ
ಬ್ಬಿಕ್ಕಿದುದು ನೆಗೆದವು ನಗಂಗಳಲುರಿ ಚಡಾಳದಲಿ
ಮುಕ್ಕುರುಕಿ ಸಿಡಿಲೊದಱಿದವು ರಣ । ರಕ್ಕಸಿಯರಬ್ಬರಿಸಿದರು ಕಾ
ಲಿಕ್ಕಿದುದು ಕಡುಭೀತಿ ಕಪಿರಾಜೇಂದ್ರಸೇನೆಯಲಿ ೧೫

ಬಂದಿತು, ಅತಿರಥರು ಸಡಗರಿಸಿದರು, ಪದಾತಿಸೈನ್ಯವು ಮುನ್ನುಗ್ಗಿತು. ೧೨. ನಿಮ್ಮವರು ಶತ್ರುಸೈನ್ಯದ ಉತ್ಸಾಹದ ಭರವನ್ನು ನೋಡಿ ಹೊಸಬೆಟ್ಟ ಮತ್ತು ಮರಗಳನ್ನು ತೆಗೆದುಕೊಂಡು ಉಬ್ಬಿ ಅಬ್ಬರಿಸುತ್ತ ರಾಕ್ಷಸಸೈನ್ಯದ ಎದುರಿನಲ್ಲಿ ಒಡ್ಡಿ ನಿಂತರು. ಬ್ರಹ್ಮನೇ ಮೊದಲಾದವರು ಯುದ್ಧ ನೋಡಲು ಗುಂಪು ಗೂಡಿದರು. ಯುದ್ಧದ ಅಬ್ಬರದ ಬೊಬ್ಬೆಯಿಂದ ಸಮುದ್ರ ಉಕ್ಕಿ ಗುಳ್ಳೆಗಳೆದ್ದವು. ೧೩. ರಘುಭೂಪಾಲಪುತ್ರ, ಕೇಳು. ಯುದ್ಧಕ್ಕೆ ನಿಂತ ಎರಡು ಸೈನ್ಯಗಳು ಸಮುದ್ರ ಸಮುದ್ರವನ್ನು ಎದುರಿಸಿದಂತೆ ಪರಸ್ಪರ ಪ್ರತಿಭಟಿಸಿ ನಿಂತವು. ಅನಂತರ ಕಪಿಸೈನ್ಯದಲ್ಲಿ ಭಾರಿ ಉತ್ಪಾತಗಳು ಕಾಣಿಸಿಕೊಂಡವು, ಅತಿಶಯ ತಳಮಳವೇರ್ಪಟ್ಟಿತು. ಸೂರ್ಯಬಿಂಬವು ಕಂದಿತು. ೧೪. ಕಪಿವೀರರ ಕೈಯಿಂದ ಬೆಟ್ಟಗಳು ನೆಲಕ್ಕೆ ಜಾರಿ ಬಿದ್ದವು, ಸುಂಟರಗಾಳಿಯೆದ್ದು ದಿಕ್ಕುದಿಕ್ಕಿಗೆ ಬೀಸಲು ಸೈನ್ಯ ಬೆದರಿತು, ಆಕಾಶವು ನಕ್ಷತ್ರಗಳನ್ನು ಭೂಮಿಗೆ ಉದುರಿಸಿತು, ಸಮುದ್ರ ಅಡಿಮೇಲಾಯಿತು, ಗಗನವು ರಕ್ತದ ಮಳೆಯೊಡನೆ ಕಿಡಿಗಳ ಸಮೂಹವನ್ನು ಉಗುಳಿತು. ೧೫. ನದಿಗಳು ಉಕ್ಕಿ ಹರಿದವು, ಧೂಮಕೇತುಗಳು ಈಶಾನ್ಯ ವಾಯುವ್ಯ ಮೊದಲಾದ ಎರಡು ದಿಕ್ಕುಗಳ ನಡುವಿನ ಪ್ರದೇಶದಲ್ಲಿ ಕಾಣಿಸಿಕೊಂಡವು ; ನೆಲ ಗುಡುಗಿತು ; ಬೆಟ್ಟಗಳಲ್ಲಿ ಉರಿ ರಭಸದಿಂದೆದ್ದಿತು ; ಸಿಡಿಲುಗಳು ಗರ್ಜಿಸಿದವು ; ರಣಪಿಶಾಚಿಗಳು ಅಬ್ಬರಿಸಿದರು.

ಏನಿದುತ್ಪಾತಪ್ರಭೂತ ಭ । ಯಾನಕವು ತಾನೆನುತ ದಶರಥ
ಸೂನು ಬೆಸಗೊಂಡನು ಸರೋಜಾಸನನ ನಂದನನ
ಏನನೆನಬಹುದಿಂದಿನಾಹವ । ವೇನು ಲೇಸಾಗಿರದು ಹರಣದ
ಹಾನಿ ತಪ್ಪದು ಜೀಯ ನಮ್ಮಾ ರಾಜಬಲಕೆಂದ ೧೬

ಎಂದು ಜಾಂಬವದೇವ ಭಾಸ್ಕರ । ನಂದನನನೇಕಾಂತದಲಿ ಕರೆ
ದೆಂದನಿಂದಿನ ರಣ ದುದೀಯಬಲಕ್ಕೆ ಮಾರಣವ
ತಂದುಕೊಡದಿರದೀ ಭಗೀರಥ । ನಂದನರ ಸುಯ್ದಾನ ನಿನ್ನದು
ಮುಂದನಱಿದಾಹವವನೆಸಗುವುದಣುಗ ಕೇಳೆಂದ ೧೭

ಇರಿಸಿದನು ಬಳಿಕವನಿಪನ ಹ । ತ್ತಿರೆ ಸಮೀರನಸುತ ಸುಷೇಣರ
ಧುರದ ಮೂಡಣಭಾಗೆಯಲಿ ಶತಬಲಿ ವಿಭೀಷಣರ
ಪರುಟವಿಸಿ ಪಡುವಲು ಗವಾಕ್ಷನ । ಶರಭ ಮೈಂದ ದ್ವಿವಿದರನು ನಿಂ
ದಿರಿಸಿ ನೀಲಾಂಗದರು ಸಹಿತಿದಿರಾದನಾಹವಕೆ ೧೮

ಉದಯವಾದರೆಜಾವದಲಿ ಮೋ । ಹಿದವು ಬಲವೆರಡುದಧಿಯುದಧಿಯ
ನೊದೆವವೊಲು ಹಳಚಿದವು ಹೊಳೆಹೊಳೆವಸ್ತ್ರಶೈಲಗಳ
ಹೊದಱಿ ಹೊದಿಸೆ ದಿಗಂತವನು ಹರಿ । ಪದವ ಪದ್ಮಭವಾಮರೇಂದ್ರರ
ಹೃದಯ ಹಾತಕವಾರೆ ಮೊಳಗುವ ವಾದ್ಯರಭಸದಲಿ ೧೯

ಸುಗ್ರೀವನ ಸೈನ್ಯದಲ್ಲಿ ಭಯವು ಕಾಲಿಕ್ಕಿತು. ೧೬. 'ಏನೀ ಅಧಿಕ ಉತ್ಪಾತಗಳು ? ಇವು ಭಯಾನಕವಾಗಿವೆ' ಎಂದು ರಾಮನು ಜಾಂಬವಂತನನ್ನು ಪ್ರಶ್ನಿಸಿದನು. "ಏನೆಂದು ಹೇಳೋಣ. ಇಂದಿನ ಯುದ್ಧ ಶುಭಪ್ರದವಾಗದು. ಪ್ರಾಣಹಾನಿ ನಮ್ಮ ಸೈನ್ಯಕ್ಕೆ ತಪ್ಪುವುದಿಲ್ಲ, ದೇವ" ಎಂದ ಜಾಂಬವಂತ. ೧೭. ಅನಂತರ ಜಾಂಬವದೇವನು ಸುಗ್ರೀವನನ್ನು ಏಕಾಂತದಲ್ಲಿ ಕರೆದು, "ಇಂದಿನ ಯುದ್ಧವು ನಮ್ಮ ಸೈನ್ಯಕ್ಕೆ ನಾಶವನ್ನುಂಟುಮಾಡದೆ ಇರದು. ಈ ರಾಮಲಕ್ಷ್ಮಣರ ರಕ್ಷಣೆ ನಿನ್ನ ಜವಾಬ್ದಾರಿ. ಮುಂದಿನದನ್ನು ಯೋಚಿಸಿ ಯುದ್ಧವನ್ನು ನಡೆಸು" ಎಂದು ನುಡಿದ. ೧೮. ಅನಂತರ ಸುಗ್ರೀವನು ರಾಮನ ಹತ್ತಿರ ಹನುಮಂತ ಸುಷೇಣರನ್ನು ನಿಲ್ಲಿಸಿದನು ; ಯುದ್ಧದ ಪೂರ್ವದಿಕ್ಕಿನಲ್ಲಿ ಶತಬಲಿ ವಿಭೀಷಣರನ್ನು ಇರಿಸಿದನು ; ಪಶ್ಚಿಮದಿಕ್ಕಿನಲ್ಲಿ ಗವಾಕ್ಷ, ಶರಭ, ಮೈಂದ, ದ್ವಿವಿದರನ್ನು ಸ್ಥಾಪಿಸಿದನು, ನೀಲ ಅಂಗದರೊಡನೆ ಸುಗ್ರೀವನು ಕಾಳಗಕ್ಕೆ ಎದುರಾದನು. ೧೯. ಸೂರ್ಯನು ಹುಟ್ಟಿದ ಅರ್ಧಜಾವದಲ್ಲಿ ಎರಡು ಸೈನ್ಯಗಳೂ ಹೋರಾಟಕ್ಕೆ ತೊಡಗಿದವು ; ಸಮುದ್ರ ಸಮುದ್ರವನ್ನು ಒದೆಯುವಂತೆ ರಭಸದಿಂದ ಅಪ್ಪಳಿಸಿದವು. ಅಸ್ತ್ರಗಳೂ ಬೆಟ್ಟಗಳೂ ದಿಗಂತವನ್ನೂ ಆಕಾಶವನ್ನೂ ಮುಚ್ಚಿದವು. ವಾದ್ಯಗಳ

ಹರಿಬಲದ ಹರಿವೈರಿಬಲದು । ಬ್ಬರದ ಚೂಣಿಯ ಚಟುಳತರ ಸಂ
ಗರದ ಸೌರಂಭಾತಿಶಯ ಸುರನರಭುಜಂಗಮರ
ಸರಕುದೆಗೆಸಿತು ಶಸ್ತ್ರಶೈಲದ । ಸರಭಸದ ಸಂಗ್ರಾಮಕುಬ್ಬಿದ
ಹೊರಳಿಗಿಡಿ ಹೋಗಾಡಿತಬುಧಿಯ ನೀರ ನಿರ್ಝರವ ೨೦

ಅರರೆ ಯಮಲಯಭೈರವರ ವಿ । ಸ್ತರ ವಸಂತಕ್ರೀಡೆಯೋ ಸಂ
ಗರದ ಶಾಕಿನಿಡಾಕಿನಿಯರುದ್ವಾಹದೋಕುಳಿಯೊ
ತರುಚರರ ರಜನೀಚರರ ಸಂ । ಚರದ ಚರಣೋದ್ಧೂತ ಧೂಳಿ ವಿ
ಸರವೊ ಶರಗಿರಿಘಾತ ರುಧಿರೋದ್ಧೂತವೋಯೆಂದ ೨೧

ಮಡಿದುದುಭಯದ ಚೂಣಿ ಶೋಣಿತ । ಗುಡುಹಿಗಳ ಕೈಬೆಳೆದುದಿವರನು
ಹಿಡಿಯಬಗೆದಳು ಜಯವಧೂಟಿ ನಿಶಾಟಸೈನಿಕವ
ಬಿಡಬಗೆದಳಾ ಸಮಯದಲಿ ಮುಡಿ । ಹಿಡಿದನೈ ಮಂಡೋದರಿಯ ಮಗ
ನುಡಿವಡಚ್ಚರಿ ಕಂದ ಕೇಳಿಂದ್ರಾರಿಯುಬ್ಬಟೆಯ ೨೨

ಮಾಯೆಯಲಿ ಶಂಬರನು ದಿವಿಜರ । ರಾಯನಲಿ ಕಾದಿದನು ಹಿಂದೆ ಸ
ಹಾಯವಿಲ್ಲದೆ ಗೆಲಿದನಾ ಮಾರೀಚ ದಿಗಧಿಪರ
ತಾಯಿವನೆಯಿವರಬ್ಬರಿಗೆ ವ । ಜ್ರಾಯುಧಾದಿ ಸಮಸ್ತ ಸೇನೆಯ
ನೋಯಿಸಿದ ನಿರ್ಣಯವ ಕುಶ ಕೇಳೆಂದು ಮುನಿ ನುಡಿದ ೨೩

ಭೋರ್ಗರೆತಕ್ಕೆ ಬ್ರಹ್ಮದೇವೇಂದ್ರರ ಎದೆಗಳು ಬಡಿದುಕೊಂಡವು. ೨೦. ವಾನರ ಸೈನ್ಯ ಮತ್ತು ರಾಕ್ಷಸಸೈನ್ಯದ ಮುಂದಿನ ದಳಗಳ ನಡುವೆ ನಡೆದ ತೀವ್ರತರವಾದ ಯುದ್ಧದ ರಭಸವು ದೇವತೆಗಳು ಮಾನವರು ಮತ್ತು ನಾಗರುಗಳು ಓಡಿಹೋಗುವಂತೆ ಮಾಡಿತು. ಶಸ್ತ್ರಗಳ ಹಾಗೂ ಬೆಟ್ಟಗಳ ಬಿರುಸಿನ ಯುದ್ಧದಿಂದೆದ್ದ ಕಿಡಿಗಳ ಸಮೂಹವು ಸಮುದ್ರದಲ್ಲಿ ತುಂಬಿದ್ದ ನೀರನ್ನು ಹೀರಿಬಿಟ್ಟಿತು. ೨೧. ಅಬ್ಬಬ್ಬ, ಯಮ ಮತ್ತು ಪ್ರಳಯಭೈರವರ ವಸಂತಕ್ರೀಡೆಯೋ ! ಯುದ್ಧರಂಗದ ಶಾಕಿನಿ ಡಾಕಿನಿಯರ ಮದುವೆಯ ಓಕುಳಿಯೋ ! ವಾನರ ರಾಕ್ಷಸಯೋಧರ ಕಾಲ್ತುಳಿತದಿಂದೆದ್ದ ಧೂಳಿನ ಮೋಡವೋ ! ಬಾಣ ಬೆಟ್ಟಗಳ ಏಟಿನಿಂದೆದ್ದ ರಕ್ತವೋ ! ಎಂದು ವಾಲ್ಮೀಕಿಗಳು ವರ್ಣಿಸಿದರು. ೨೨. ಎರಡೂ ಸೈನ್ಯಗಳ ಮುಂದಳದ ಸೈನಿಕರು ಸತ್ತರು. ರಕ್ತ ಕುಡಿಯುವವರ ಕೈ ಮೇಲಾಯಿತು. ವಾನರಪಕ್ಷ ಸೇರಲು ವಿಜಯಲಕ್ಷ್ಮಿಯು ಬಯಸಿದಳು ; ರಾಕ್ಷಸಸೈನ್ಯವನ್ನು ತ್ಯಜಿಸಲಾಶಿಸಿದಳು. ಆ ಸಮಯದಲ್ಲಿ ಮಂಡೋದರಿಯ ಮಗನು ಜಯಲಕ್ಷ್ಮಿಯ ತುರುಬನ್ನು ಹಿಡಿದುಕೊಂಡನು. ಇಂದ್ರಜಿತುವಿನ ಪರಾಕ್ರಮವನ್ನು ವರ್ಣಿಸಲು ಆಶ್ಚರ್ಯ, ಕಂದ ಕೇಳು ಎಂದು ವಾಲ್ಮೀಕಿಗಳು ಕುಶಲವರಿಗೆ ತಿಳಿಸಿದರು. ೨೩. ಪೂರ್ವದಲ್ಲಿ ಶಂಬರಾಸುರನು ಮಾಯೆಯಿಂದ ದೇವೇಂದ್ರನೊಡನೆ ಯುದ್ಧ ಮಾಡಿದನು. ಮಾರೀಚನು ಯಾರ ಸಹಾಯವಿಲ್ಲದೆ ದಿಕ್ಪತಿಗಳನ್ನು ಗೆದ್ದನು. (?) ಇಂದ್ರಜಿತು ಇವರಿಬ್ಬರಿಗೆ ತವರುಮನೆಯಂತೆ. ಇಂದ್ರಜಿತು ಸಮಸ್ತ

ಪ್ರಳಯಕಾಲದಲಖಿಳ ಭುವನಾ । ವಳಿಯ ಕೊಲೆಗೆಲಸಕ್ಕೆ ಹೊಕ್ಕ
ಗ್ಗಳದ ಭಾಳಾಂಬಕನವೊಲು ಬಲಿಮುಖವರೂಥಿನಿಯ
ಬಲದೊಳಗೆ ವ್ಯೆದೋಱಿ ಮಾಯೆಯ । ಬಳಸಿ ಬಹುರೂಪಿನಲಿ ಬಹುಕೊಲೆ
ಗಳಲಿ ಕೊಂದನು ಕಡುಹಿನಗ್ಗದ ಕಪಿಭಟಾವಳಿಯ ೨೪

ಕಣೆಗಳಲಿ ಕರಗಸಗಳಲಿ ಖ । ರ್ಪಣಗಳಲಿ ಡಬ್ಬುಕಗಳಲಿ ಡೊಂ
ಕಣಿಗಳಲಿ ಪರಿಘದಲಿ ಪರಶುಗಳಲಿ ಮುಸುಂಡಿಯಲಿ
ಮಣಿಗದಾಯುಧದಲಿ ಮಹಾ ಮಾ । ರ್ಗಣಗಳಲಿ ಚಕ್ರದಲಿ ಬಲುಭಾ
ರಣೆಯ ಕೈದುಗಳಿಂದ ಕೆಡಹಿದನಖಿಳ ಕಪಿಬಲವ ೨೫

ಉರವಣಿಸಿ ಕೈಯೊಡನೆ ಭೂಜದ । ಲುರು ಕೃಪಾಣದಲೀಟಿಯಲಿ ಭೀ
ಕರದ ಸೆಲ್ಲಿಹ ಬಲ್ಲೆಯದಲುಗ್ರಾಹಿ ಕುಂತದಲಿ
ಸುರಗಿಯಲಿ ಶೂಲದಲಿ ಗದೆ ಮು । ದ್ಗರ ಮಹಾಮಂತ್ರಾಸ್ತ್ರಶಸ್ತ್ರೋ
ತ್ಕರಗಳಲಿ ಸಂಹರಿಸಿದನು ಸಂಗರದ ಕಪಿಭಟರ ೨೬

ಕೊಲೆ ಬಿಱುಸು ರಕ್ಕಸನ ಕೈಯಲಿ । ತಲೆಯ ಹೊಱದಿರಿ ಹೇಡಿತನದ
ಗ್ಗಳವ ಮೆಱೆಯಿರೊ ವೀರತನದ ಯಶೋವಿಲಾಸಕವ
ತಲೆಯನೊಡೆಯಗೆ ಕೊಡುವಡಿದು ರಣ । ಗಲಿಗಳಿಗೆ ತಾ ಸಮಯವೆನುತರಿ
ಬಲಭಯಂಕರ ಭಾನುಸುತ ಬೊಬ್ಬಿಱಿದನಗಲದಲಿ ೨೭

ವಾನರಸೈನ್ಯವನ್ನು ನೋಯಿಸಿದ ಪರಾಕ್ರಮವನ್ನು ಕುಶ ಕೇಳು ಎಂದು ವಾಲ್ಮೀಕಿಮುನಿ ನುಡಿದರು. ೨೪. ಪ್ರಳಯಕಾಲದಲ್ಲಿ ಸಮಸ್ತಲೋಕಗಳ ನಾಶಕ್ಕೆ ಹೊಕ್ಕ ಶ್ರೇಷ್ಠ ಮುಕ್ಕಣ್ಣನಂತೆ ಇಂದ್ರಜಿತು ವಾನರಸೈನ್ಯದೊಳಗೆ ಕಾಣಿಸಿಕೊಂಡು ಮಾಯೆಯನ್ನು ಬಳಸಿ ಬಹುರೂಪು ಧರಿಸಿ ಸಾಹಸಿ ಕಪಿವೀರರನ್ನು ಅನೇಕರೀತಿಯ ಕೊಲೆಗಳಿಂದ ಕೊಂದನು. ೨೫. ಬಾಣ, ಗರಗಸ, ಖರ್ಪಣ, ಡಬ್ಬುಕ, ಡೊಂಕಣಿ, ಪರಿಘ, ಪರಶು, ಮುಸುಂಡಿ, ವಜ್ರದಗದೆ, ಮಹಾಸ್ತ್ರಗಳು, ಚಕ್ರ ಇವೇ ಮೊದಲಾದ ಭಾರಿ ಆಯುಧ ಗಳಿಂದ ಇಂದ್ರಜಿತು ಸಮಸ್ತ ಕಪಿಸೈನ್ಯವನ್ನು ಬೀಳಿಸಿದ. ೨೬. ರಭಸದಿಂದ ಮುಂದು ವರಿದು ಮರ, ಕೃಪಾಣ, ಈಟಿ, ಶಲ್ಯ, ಭಲ್ಲೆ, ಉಗ್ರಸರ್ಪಕುಂತ, ಸುರಗಿ, ಶೂಲ, ಗದೆ, ಮುದ್ಗರ, ಮಹಾಮಂತ್ರಾಸ್ತ್ರಶಸ್ತ್ರಗಳಿಂದ ಕಪಿವೀರರನ್ನು ಇಂದ್ರಜಿತು ಸಂಹರಿಸಿದನು. ೨೭. "ಈ ರಾಕ್ಷಸನ ಕೈಯ ಕೊಲೆಯು ಕಠಿಣ, ಹೇಡಿತನದ ತಲೆಯನ್ನು ಹೊರಬೇಡಿ, ಶೌರ್ಯವನ್ನು ಪ್ರದರ್ಶಿಸಿ ಶ್ರೇಷ್ಠ ಕೀರ್ತಿಯನ್ನು ಮೆರೆಯಿರೋ. ಒಡೆಯನಿಗೆ ತಲೆಯನ್ನು ಸಮರ್ಪಿಸಲು ರಣಗಲಿಗಳಿಗೆ ಇದು ಒಳ್ಳೆಯ ಸಂದರ್ಭ" ಎನ್ನುತ್ತ ಶತ್ರುಸೈನ್ಯಭಯಂಕರ

ಬೀಳೆ ಕರ್ಣದಲಿನಸುತನ ನುಡಿ । ಗೇಳೆ ಕವಿದುದು ಕದನಕೆಪ್ಪ
ತ್ತೇಳು ಕೋಟಿ ಕಪೀಶರಣುವಿಂಗವನ ಬಗೆಗೊಳದೆ
ಶೈಲತರುಸಂಘದಲಿ ಹಗೆಯನು । ಹೂಳಿದರು ಬಳಿಕಸುರಮಾಯೆಯ
ಮೇಳವಿಸಿ ಮೈದೋಱದೀಪರಿ ಕೊಂದನತಿಬಲರ ೨೮

ತಾಗಿದನು ತಗರಾಗಿ ಕಬ್ಬೊಗೆ । ಯಾಗಿ ಕವಿದನು ಹೊಯ್ದನಾ ಹರಿ
ಯಾಗಿ ಹೊರಳಿದನದ್ರಿಯಾಗಿ ಸಮುದ್ರರೂಪಿನಲಿ
ಮೇಗೆ ಕವಿದನು ಕಾಲಭೈರವ । ನಾಗಿ ಜಟ್ಟಿಗನಾಗಿ ವಿಷದುರಿ
ಯಾಗಿ ಬೆಚ್ಚಿಸಿ ಬೆದಱಿಸಿದನತಿಬಲ ವನೇಚರರ ೨೯

ಎಱಗಿದನು ಸಿಡಿಲಾಗಿ ಶಿಖಿಯಾ । ಗುಱುಬಿದನು ಭೇರುಂಡನಾಗಿಯೆ
ತುಱುಗಿದನು ಸೀಳಿದನು ಸೈರಿಭನಾಗಿ ಪುಲಿಯಾಗಿ
ಮುಱಿದನಹಿಯಾಗೌಡಿದನು ಹಿಡಿ । ದಿಱುಕಿದನು ಗ್ರಹವಾಗಿ ರಣದೆಡೆ
ದೆಱಹ ಕಾಣೆನು ಕೊಂದನೀಪರಿ ಕೋಟಿಸಂಖೆಗಳ ೩೦

ಅವನ ಮಾಯಾಸಮರಕೊಡೆದುದು । ರವಿಸುತಾದಿಗಳೊಡ್ಡು ನಿಲ್ಲದೆ
ರವಿಕುಲೇಂದ್ರನ ಮಱೆಯ ಹೊಕ್ಕುದು ಮರಳಿ ಮಾತೇನು
ಬವರ ಬಲಿದುದು ಬಳಿಕಲಗ್ಗದ । ಭುವನಪತಿಗಮರೇಂದ್ರಜಿತುವಿಂ
ಗವಿರಳಾಹವದಬ್ಬರಣೆ ಗಬ್ಬರಿಸೆ ದಿಕ್ತಟವ ೩೧

ಸುಗ್ರೀವನು ಸೈನ್ಯದಲ್ಲೆಲ್ಲ ಗರ್ಜಿಸಿದನು. ೨೮. ಸುಗ್ರೀವನ ಮಾತು ಕಿವಿಯ ಮೇಲೆ ಬೀಳಲು ಅದನ್ನು ಕೇಳಿ ಎಪ್ಪತ್ತೇಳುಕೋಟಿ ಕಪಿನಾಯಕರು ಯುದ್ಧಕ್ಕೆ ಮುಂದೆ ಬಂದರು. ಇಂದ್ರಜಿತುವನ್ನು ಅಣುವಿಗಿಂತ ಕಡೆಯಾಗಿ ಪರಿಗಣಿಸಿ ಬೆಟ್ಟಮರಗಳಿಂದ ಮುಚ್ಚಿಬಿಟ್ಟರು, ಆಗ ಇಂದ್ರಜಿತು ಮಾಯೆಯಿಂದ ಅದೃಶ್ಯನಾಗಿ ಮುಂದಿನ ರೀತಿಯಲ್ಲಿ ಮಹಾವೀರರನ್ನು ಕೊಂದನು. ೨೯. ಇಂದ್ರಜಿತು ಮಾಯೆಯಿಂದ ಟಗರಾಗಿ ಮೇಲೆ ಬಿದ್ದನು ; ದಟ್ಟವಾದ ಕಪ್ಪುಹೊಗೆಯಾಗಿ ಮುತ್ತಿದನು ; ಸಿಂಹವಾಗಿ ಹೊಡೆದನು ; ಬೆಟ್ಟವಾಗಿ ಹೊರಳಾಡಿದನು ; ಸಮುದ್ರವಾಗಿ ಮೇಲೆ ಉರುಳಿದನು; ಕಾಲಭೈರವನಾಗಿ, ಜಟ್ಟಿಯಾಗಿ, ವಿಷದ ಉರಿಯಾಗಿ ಬಲಶಾಲಿ ವಾನರರನ್ನು ಬೆಚ್ಚಿಸಿ ಹೆದರಿಸಿದನು. ೩೦. ಇಂದ್ರಜಿತು ಸಿಡಿಲಾಗಿ ವಾನರರ ಮೇಲೆರಗಿದನು, ಬೆಂಕಿಯಾಗಿ ಉರಿಸಿದನು, ಭೇರುಂಡನಾಗಿ ದಟ್ಟವಾಗಿ ಅಮುಕಿದನು, ಕೋಣನಾಗಿ ಹುಲಿಯಾಗಿ ತುಂಡರಿಸಿದನು, ಸರ್ಪವಾಗಿ ಕಚ್ಚಿದನು, ಗ್ರಹವಾಗಿ ಹಿಡಿದು ಅದುಮಿದನು. ಈ ರೀತಿ ಕೋಟಿಸಂಖ್ಯೆಯಲ್ಲಿ ವಾನರರನ್ನು ಕೊಂದನು. ಯುದ್ಧರಂಗದಲ್ಲಿ ಎಲ್ಲೂ ಅವನಿಲ್ಲದ ಜಾಗವಿಲ್ಲ. ೩೧. ಇಂದ್ರಜಿತುವಿನ ಮಾಯಾಯುದ್ಧಕ್ಕೆ ಸುಗ್ರೀವಾದಿಗಳ ಸೈನ್ಯದವ್ಯೂಹವು ಒಡೆದುಹೋಯಿತು. ವಾನರಸೈನ್ಯವು ರಾಮನ ಮರೆಹೊಕ್ಕಿತು. ಇದಾದ ಬಳಿಕ ಹೇಳುವುದೇನು. ರಾಮನಿಗೂ ಇಂದ್ರಜಿತುವಿಗೂ ಯುದ್ಧ ಹತ್ತಿತು. ನಿರಂತರವಾದ ಯುದ್ಧದ ಗರ್ಜನೆಯು ದಿಕ್ಕು

ಕಱೆದನವನಿಪನಿದಿರಿನಲಿ ಹೊಂ । ಗಱೆಯ ಹೊಸ ಹೊಗರುಗಳ ತಳಪದ
ಮಿಱುಗುವಸ್ತ್ರಾಸಾರವನು ಕಾರ್ಮುಗಿಲ ಮಳೆಯಂತೆ
ತೆಱಪುಗುಡದಿವ ತಾಕುವಸ್ತ್ರವ । ತಱಿದು ತೂಱಿದನಂಬುಗಳನೆಡ
ದೆಱಪ ಕಾಣೆನು ಕಾಳಗಕೆ ರಾವಣಿ ನರೋತ್ತಮರ ೩೨

ಕವಿದುದಾ ಸಮಯದಲಿ ಕಪಿಭಟ । ನಿವಹ ನಿಡುಗಲ್ಲುಗಳಲಱೆಗಳ
ಲವನಿಜೌಘಗಳಿಂದ ಹೊಳಕುವ ರಥದ ಸರಿಸದಲಿ
ಅವನ ರಣರಂಜಕದ ಪರಿಯಭಿ । ನವವಲೈ ವ್ಯೈದೋಱದೌಕುವ
ಪವನಜಾದ್ಯರ ಪಾಡುಗೆಡಿಸಿದನಸ್ತ್ರಾಸಾರದಲಿ ೩೩

ಕಪಿಬಲವ ಮುಱಿಯೆಚ್ಚು ರಘುಭೂ । ಮಿಪನ ಸಂಗರಕೊದಗಿದನು ಮಗು
ಳಪರಿಮಿತ ಶರಸಮಿತಿಯನು ಸುರಿವುತ ಸರೋಷದಲಿ
ತಪನಕುಲದವರಲ್ಲರೇ ರಣ । ನಿಪುಣರಲ್ಲಾ ನಿಶಿತ ವಿಶಿಖದ
ಲಪಜಯಕೆ ನಿಲಿಸಿದನು ನೈರುತರಾಜಸಂಭವನ ೩೪

ಒತ್ತಬರಿಸಿದುದಾ ಸಮಯದಲಿ । ಪತ್ತಿ ರಥ ಹಯ ಗಜ ಘಟಾವಳಿ
ಕುತ್ತುವಂಬಿನ ತಱಿವ ಖಡುಗದ ಹೊಡೆವ ಪರಿಘದಲಿ
ಚಿತ್ತವೆಂತುಟೊ ರಣದಲಿನವಂ । ಶೋತ್ತಮನ ಕವಿವರಿಬಲಾಂಬುಧಿ
ಬತ್ತಿದುದು ಬಾಣಾಗ್ನಿಯಲಿ ಭಾಸ್ಕರಕುಲಾಧಿಪನ ೩೫

ಗಳನ್ನು ಮುತ್ತಿಗೆಹಾಕಿತು. ೩೨. ಇಂದ್ರಜಿತು ಕಾರ್ಮೋಡ ಮಳೆ ಸುರಿಸುವಂತೆ ರಾಮನ ಮೇಲೆ ಚಿನ್ನದ ಗರಿಯ ಹೊಸಕಾಂತಿಯಿಂದ ಹೊಳೆಯುವ ಬಾಣಗಳ ಮಳೆಯನ್ನು ಕರೆದನು. ಎಡಬಿಡದೆ ತನ್ನ ಮೇಲೆ ಬರುವ ಅಸ್ತ್ರಗಳನ್ನು ರಾಮನು ಕತ್ತರಿಸಿ ಬಾಣಗಳನ್ನು ಬಿಟ್ಟನು. ಇಂದ್ರಜಿತು ಮತ್ತು ರಾಮ ಇವರ ಬಾಣಗಳ ಯುದ್ಧವು ಒಂದೇ ಸಮನೆ ಸಾಗಿತು. ೩೩. ಆ ಸಮಯದಲ್ಲಿ ಕಪಿವೀರರ ಸಮೂಹವು ಉದ್ದಕಲ್ಲುಗಳು, ಅರೆಬಂಡೆಗಳು ಮತ್ತು ಮರಗಳನ್ನು ಹಿಡಿದು ಹೊಳೆಯುವ ರಥಕ್ಕೆ ಮುತ್ತಿಗೆ ಹಾಕಿತು. ಇಂದ್ರಜಿತುವಿನ ಯುದ್ಧದ ರೀತಿಯು ನವೀನವಾದುದು. ಅದೃಶ್ಯನಾಗಿದ್ದುಕೊಂಡ ಇಂದ್ರಜಿತು ಮೇಲೆಬೀಳುವ ಹನುಮಂತನೇ ಮೊದಲಾದವರನ್ನು ಬಾಣಗಳಿಂದ ಪಾಡುಪಡಿಸಿದನು. ೩೪. ಕಪಿಸೈನ್ಯವನ್ನು ಬಾಣಬಿಟ್ಟು ತೊಲಗಿಸಿ ಇಂದ್ರಜಿತು ಕೋಪದಿಂದ ಪುನಃ ಅಸಂಖ್ಯಾತ ಬಾಣಗಳನ್ನು ಸುರಿಸುತ್ತ ರಾಮನೊಡನೆ ಕಾಳಗಕ್ಕೆ ಬಂದನು. ಸೂರ್ಯವಂಶದವರು ಅಲ್ಲರೇ, ಅವರು ಯುದ್ಧಕುಶಲಿಗಳಲ್ಲವೇ. ರಾಮನು ರಾಕ್ಷಸರಾಜನ ಮಗನನ್ನು ಹರಿತವಾದ ಬಾಣಗಳಿಂದ ಸೋಲಿಗೀಡುಮಾಡಿದನು. ೩೫. ಆ ಸಮಯದಲ್ಲಿ ರಥ, ಆನೆ, ಕುದುರೆ ಮತ್ತು ಕಾಲಾಳುಸೈನ್ಯವು ಬಾಣದಿಂದ ಚುಚ್ಚುತ್ತ, ಕತ್ತಿಯಿಂದ ಕತ್ತರಿಸುತ್ತ, ಪರಿಘಾಯುಧದಿಂದ ಹೊಡೆಯುತ್ತ ರಭಸದಿಂದ ನುಗ್ಗಿ ಬಂದಿತು. ಯುದ್ಧರಂಗದಲ್ಲಿ ರವಿಕುಲಶ್ರೇಷ್ಠನ ಮನಸ್ಸು ಹೇಗಿರುವುದೋ ! ಅವನ ಬಾಣಗಳ

ಔಕುವುದು ಬಲವೈದುವುದು ಸುರ । ಲೋಕವನು ರಾಮಾಸ್ತ್ರದಲಿ ಹದಿ
ನಾಲ್ಕು ಸೂಳಲಿ ಸುಳಿದು ಸುರರಲಿ ಸಂದುದರಿಸೇನೆ
ಸಾಕು ಸಮರಪ್ರೌಢಿಯೆನುತ ಸ । ಮೀಕರೊದರಿಸುತಿಂದ್ರಜಿತು ನೆಚಿ
ನೂಕಿದನು ದಿವಸವನು ದಿನೇಂದ್ರ ಕುಲೇಂದ್ರನಾಜಿಯಲಿ ೩೬

ವೀರನವ ಬಳಿಕಿರುಳುಗಾಳಗ । ಕಾರವನ ಮುಂದಿದಿರು ಮಾಯಾ
ಸಾರದಲಿ ನಿರ್ಮಿಸಿದನೈ ವಿಲಯಾಂಧಕಾರವನು
ಬಾರಿಸಿತು ಬಲುತಿಮಿರ ಘೋರಾ । ಕಾರದಲಿ ಶತಕೋಟಿರಾಹು ಶ
ರೀರದಾರು ಕಾಳಿಕೆಯುಪ್ಪೊಲು ಕುಪ್ಪಳಿಸಿತುರ್ವರೆಯ ೩೭

ವಿಸ್ತರಿಸಲೇನದನು ನಿಮ್ಮ ಸ । ಮಸ್ತಬಲ ನಯನೇಂದು ರಾಹು
ಗ್ರಸ್ತವಾದುದು ಕಾಣರೊಬ್ಬರನೊಬ್ಬರಾಜಿಯಲಿ
ಹಸ್ತಗಳ ಸೋಂಕುಗಳ ಕುಱುಹಿನ । ಕುಸ್ತರಣೆಗಳ ಭಯದ ಕರವಿ
ನ್ಯಸ್ತ ಗಿರಿತರುಗಳ ಸಗಾಢದಲಿದ್ದುದಾ ಸೇನೆ ೩೮

ಪೊಳೆದುದೈ ಬಳಿಕಿಂದ್ರಜಿತುವಿನ । ಚಳಚಮತ್ಕೃತಿ ರಥ ನಭೋಮಂ
ಡಲದೊಳಬ್ಬರವಾಯ್ತು ಕಮಲಜದತ್ತ ಕಾರ್ಮುಕದ
ಪ್ರಳಯ ದಿವಸದ ಸಿಡಿಲ ಜಂಗುಳಿ । ಗಳ ಭಯಂಕರ ರವದ ಕೋಳಾ
ಹಳದ ಹೊದಕುಳಿ ತೀವಿತಬುಜಭವಾಂಡಮಂಡಲವ ೩೯

ಬೆಂಕಿಯಿಂದ ಮುತ್ತುವ ಶತ್ರುಸೈನ್ಯಸಾಗರವು ಬತ್ತಿತು. ೩೬. ರಾಕ್ಷಸಸೈನ್ಯವು ರಾಮನ ಮೇಲೆ ನುಗ್ಗುವುದು, ತತ್‌ಕ್ಷಣ ರಾಮನ ಅಸ್ತ್ರಗಳಿಂದ ದೇವಲೋಕವನ್ನು ಸೇರುವುದು. ಹೀಗೆ ಹದಿನಾಲ್ಕು ಬಾರಿ ರಾಕ್ಷಸಸೈನ್ಯವು ಮುನ್ನುಗ್ಗಿ ಬಂದು ದೇವತೆಗಳ ಜತೆಸೇರಿ ಕೊಂಡಿತು. ಇನ್ನು ಯುದ್ಧಕೌಶಲ್ಯ ಸಾಕು ಎಂದು ಇಂದ್ರಜಿತು ನೇರ ಕಾಳಗಕ್ಕೆ ಪ್ರಯತ್ನಿಸುತ್ತ ರವಿಕುಲದೊಡೆಯನ ಯುದ್ಧದಲ್ಲಿ ಹಗಲನ್ನು ಕಳೆದನು. ೩೭. ಇಂದ್ರಜಿತು ವೀರ, ರಾತ್ರಿಯುದ್ಧಕ್ಕೆ ಅವನ ಸಮಾನರಿಲ್ಲ. ಮಾಯೆಯಿಂದ ಪ್ರಳಯದ ಗಾಢಾಂಧ ಕಾರವನ್ನು ಸೃಷ್ಟಿಸಿದನು. ಭಾರಿ ಕತ್ತಲೆಯು ಭಯಂಕರವಾಗಿ ರಭಸದಿಂದ ಬಂದಿತು ; ನೂರುಕೋಟಿ ರಾಹುಗಳ ಕಪ್ಪಿನಂತೆ ಭೂಮಿಯನ್ನು ಮುತ್ತಿತು. ೩೮. ಅದನ್ನು ಏನೆಂದು ವರ್ಣಿಸಲಿ. ನಿಮ್ಮ ಸಮಸ್ತ ಸೈನ್ಯದ ಕಣ್ಣುಗಳ ಚಂದ್ರನನ್ನು ರಾಹು ಹಿಡಿದನು. ಒಬ್ಬರು ಇನ್ನೊಬ್ಬರಿಗೆ ಕಾಣಿಸಲಿಲ್ಲ. ಒಬ್ಬರನ್ನೊಬ್ಬರು ಕೈಯಿಂದ ಮುಟ್ಟಿ ಗುರುತುನೋಡಿ ಅಲುಗಾಡಿಸುತ್ತ ಭಯದಿಂದ ಕೈಗಳಲ್ಲಿ ಮರಗಳನ್ನು ಹಿಡಿದುಕೊಂಡು ವಾನರಸೈನ್ಯವು ನಿಂತಿತ್ತು. ೩೯. ಚಮತ್ಕಾರವಾಗಿ ಚಲಿಸುತ್ತಿದ್ದ ಇಂದ್ರಜಿತುವಿನ ರಥವು ಆಕಾಶದಲ್ಲಿ ಹೊಳೆಯಿತು. ಬ್ರಹ್ಮನು ಕೊಟ್ಟ ಬಿಲ್ಲಿನ ಅಬ್ಬರವು ಪ್ರಳಯ ಕಾಲದ ಸಿಡಿಲಸಮೂಹ ಮಾಡುವ ಭಯಂಕರ ಶಬ್ದದ ಕೋಲಾಹಲದಂತೆ ಬ್ರಹ್ಮಾಂಡ

ಬೆದಱಿ ಬಿದ್ದುದು ಬಲುರಭಸ ತಾ । ಗಿದ ವನೇಚರನಿಚಯವಂಬುಧಿ
ಯೊದೆದುಕೊಂಡುದು ಬಿದಿರಿಕೊಂಡುದು ಮೇರುಮಸ್ತಕವ
ಬಿದುವಿಗಂಕುಶವಿಕ್ಕಿ ಬೊಮ್ಮನ । ಸದನಕಭಿಮುಖನಾದನಗ್ಗದ
ತ್ರಿದಶಪತಿ ಬೆಚ್ಚಿದವು ಪಟ್ಟಣವಾ ದಿಶಾಧಿಪರ ೪೦

ಸರಿದನಂತಕನಗ್ನಿ ಹಾಯ್ದನು । ವರುಣ ನೋಡಿದನಡಗಿದನು ಕಿ
ನ್ನರಕುಲಾಧಿಪನನಿಲ ಮಱೆಯೊಕ್ಕನು ಪಲಾಯನದ
ತರುಣ ಕೇಳೀಶ್ವರನದೃಶ್ಯಾ । ಕರಣನಾದನು ನಿರುತಿಯಸುರನ
ಮಱೆಯ ಹೊಕ್ಕನು ಹರಿವಿರೋಧಿಯ ಸಮರಕೇಳಿಯಲಿ ೪೧

ಕಟ್ಟಿದನು ಕಮಲಜಭವಾಸ್ತ್ರದ । ಲಿಟ್ಟಣಿಸುವ ವಿಭೀಷಣನನೆ
ಬ್ಬಟ್ಟಿದನು ಯಮಲೋಕಕಾತನ ಬಳಿಯ ಮಂತ್ರಿಗಳ
ಮುಟ್ಟವಿಸಿದನು ಮತ್ತೆಯಸುರಘ । ರಟ್ಟನಿದಿರಲಿ ಸುರರ ಗಮನದ
ಬಟ್ಟೆಯಲಿ ಬಹುವಿಧದ ಮಾಯೆಯಲಿಂದ್ರಜಿತು ಬಳಿಕ ೪೨

ವಿಲಯಮೇಘದ ಮೇಚಕವೊ ದಶ । ಗಳನ ತನುಜನ ಕಾಯಕಾಂತಿಯೊ
ಮೊಳಗುಗಳೊ ಮುರಿಮುರಿದು ಚರಿಸುವ ರಥದ ಚೀತ್ಕೃತಿಯೊ
ಹೊಳೆವ ಮಿಂಚಿನ ಸಂಚರವೊ ಹೊಂ । ಬೆಳಕುಗಳ ಹರಹುಗಳೊ ಸಿಡಿಲಿನ
ಸುಳಿವೊ ಸರಳಬ್ಬರವೊ ತಾನೆನೆ ಮೆಱೆದನಿಂದ್ರಾರಿ ೪೩

ವನ್ನು ತುಂಬಿತು. ೪೦. ಬಿಲ್ಲಿನ ರಭಸ ತಗುಲಿದ ವಾನರಸಮೂಹವು ಬೆದರಿ ಬಿದ್ದಿತು : ಸಮುದ್ರ ಅಪ್ಪಳಿಸಿತು ; ಮೇರುಪರ್ವತದ ಶಿಖರವು ಹೊಯ್ದಾಡಿತು. ದೇವೇಂದ್ರನು ತಾನು ಕುಳಿತಿದ್ದ ಆನೆಯ ಕುಂಭಸ್ಥಳವನ್ನು ಅಂಕುಶದಿಂದ ಚುಚ್ಚಿ ಬ್ರಹ್ಮಲೋಕಕ್ಕೆ ತಿರುಗಿದನು ; ದಿಕ್ಪತಿಗಳ ಪಟ್ಟಣಗಳು ಬೆಚ್ಚಿದವು. ೪೧. ಹರಿವಿರೋಧಿ ಇಂದ್ರಜಿತುವಿನ ಕದನಕ್ರೀಡೆಯನ್ನು ಕಂಡು ಯಮನು ಜಾರಿಕೊಂಡನು ; ಅಗ್ನಿ ಕಾಲ್ತೆಗೆದನು ; ವರುಣನು ಓಡಿದನು ; ಕುಬೇರನು ಅಡಗಿಕೊಂಡನು ; ವಾಯು ಪಲಾಯನಮಾಡಿದನು ; ತರುಣ ಲವ ಕೇಳು, ಈಶ್ವರನು ಅದೃಶ್ಯನಾದನು ; ನಿರ್ಋತಿಯು ಅಸುರನ ಮರೆಹೊಕ್ಕನು. ೪೨. ಆಕ್ರಮಣಮಾಡುವ ವಿಭೀಷಣನನ್ನು ಬ್ರಹ್ಮಾಸ್ತ್ರದಿಂದ ಕಟ್ಟಿಹಾಕಿದನು. ಅವನ ಮಂತ್ರಿಗಳನ್ನು ಯಮಲೋಕಕ್ಕೆ ಎಬ್ಬಿಸಿ ಓಡಿಸಿದನು. ಅನಂತರ ಇಂದ್ರಜಿತು ಮಾಯೆ ಯಿಂದ ಆಕಾಶಮಾರ್ಗವಾಗಿ ಬಂದು ಪುನಃ ರಾಮನನ್ನು ಸಮೀಪಿಸಿದನು. ೪೩. ಪ್ರಳಯಮೇಘದ ಕಡುನೀಲಿಯೋ, ದಶಕಂಠನ ಮಗನ ದೇಹಕಾಂತಿಯೋ ! ಗುಡುಗುಗಳೋ, ತಿರುತಿರುಗಿ ಚಲಿಸುವ ರಥದ ಚೀತ್ಕಾರಧ್ವನಿಯೋ ! ಹೊಳೆಯುವ ಮಿಂಚುಗಳ ಸುಳಿವೋ, ಚಿನ್ನದ ಕಾಂತಿಯ ಹರವೋ ! ಸಿಡಿಲಿನ ಹೊಡೆತವೋ, ಬಾಣ

ಘೋರಿಸುತ ಮುಂಗಾರಮುಖದಲಿ । ವಾರಿಧಾರಾಸಾರವಿಳೆಗೆ ವಿ
ಹಾರಿಸುವವೊಲು ಬಾಣವೃಷ್ಟಿಯು ಕಾಣಲಾಯ್ತಲ್ಲಿ
ಆರು ಪವಣಿಸಬಹುದು ಶಿವ ಶಿವ । ಮಾರಿ ಮುಳಿದಂತಾಯ್ತು ನೆತ್ತರ
ಪೂರದಲಿ ಹೋಹ ಪ್ಲವಂಗಕ್ಕವಧಿಯಿಲ್ಲೆಂದ ೪೪

ಹೆಣಗಳನು ಬಗಿಬಗಿದು ಕಪಿಗಳು । ಹಣುಗಿದರು ಕೆಲರದ್ರಿಕುಜ ಸಂ
ದಣಿಗಳೊಳು ಹುದುಗಿದರು ಹರಿವರುಣಾಂಬುನದಿಗಳಲಿ
ಮುಣುಗಿದರು ಮುಂಬರಿದೆಸುವ ಮಾ । ರ್ಗಣದ ಹತಿಗೇನೆಂಬೆನಸುರನ
ಕಣೆಯ ಕೋಳಾಹಳಿಕೆಯೆಂತುಟೊ ಹೇಳಲೇನೆಂದ ೪೫

ಬೆಟ್ಟವನು ಕೊಡೆವಿಡಿದು ಮರದಿಂ । ದಿಟ್ಟು ಪುಟನೆಗೆದಂಬರದೊಳುಚಿ
ಚಿಟ್ಟುಮುರಿಯಾಡುವನೊಳಾದಿಪ್ರಮುಖ ಪಟುಭಟರ
ಹೊಟ್ಟೆಯೊಳು ತುಂಬಿದನು ತಲೆಗಳ । ನೊಟ್ಟಿದನು ಬಾಣವ ರಣಾಂಗಣ
ದಿಟ್ಟೆಡೆಯನೇನೆಂಬೆನಸು ಕಳಲಿದ ಕಪಿವ್ರಜವ ೪೬

ಹಱಿದಲೆಯ ತೋಳುಗಳ ಬಾದಣ । ಗೊಱೆದ ಬಸುಱುಗಳುಚ್ಚುಗರುಳಿನ
ಮುಱಿದ ಮೊಳೆಯುಲುಡಿದ ನಡುತೊಡೆ ಜಾನುಜಂಘೆಗಳ
ಗಿಱಿಕಿಱಿದ ಹಲುಗಿರಿಕುಗಳ ನೆಗೆ । ದಱಿಚಿ ಬೀಳುವ ಕಪಿವೆಣಂಗಳ
ಹಱುಬಿನಲಿ ರೌಕುಳದ ಮಯವಾಯ್ತವನಿ ರಣಮುಖದ ೪೭

ಗಳ ಅಬ್ಬರವೋ ! ಎನ್ನುವಂತೆ ಇಂದ್ರಜಿತು ಮೆರೆದನು. ೪೪. ಮುಂಗಾರುಮಳೆಯು ಘೋರೆಂದು ಧಾರಾಕಾರವಾಗಿ ಸುರಿಯುವ ಹಾಗೆ ಬಾಣದ ಮಳೆ ಸುರಿಯಿತು. ಯಾರು ಎದುರಿಸಬಹುದು ! ಶಿವಶಿವ, ಮಾರಿ ಮುಳಿದಂತಾಯಿತು. ರಕ್ತಪ್ರವಾಹದಲ್ಲಿ ಕೊಚ್ಚಿ ಹೋದ ವಾನರರುಗಳಿಗೆ ಲೆಕ್ಕವಿಲ್ಲ. ೪೫. ಕಪಿಗಳು ಹೆಣಗಳನ್ನು ಬಗೆದು ಬಗೆದು ಅದರಡಿಯಲ್ಲಿ ಅಡಗಿಕೊಂಡರು. ಕೆಲವು ಕಪಿಗಳು ಬೆಟ್ಟ ಮರಗಳ ನಡುವೆ ಮುಚ್ಚಿಟ್ಟುಕೊಂಡರು. ಕೆಲವು ಕಪಿಗಳು ಹರಿಯುವ ರಕ್ತದ ಪ್ರವಾಹಗಳಲ್ಲಿ ಮುಳುಗಿದರು. ಮುಂದೆ ನುಗ್ಗಿ ಬಾಣಬಿಡುವ ಏಟನ್ನು ಏನೆಂದು ವರ್ಣಿಸಲಿ ; ಇಂದ್ರಜಿತುವಿನ ಬಾಣಗಳ ಕೋಲಾಹಲವನ್ನು ಹೇಗೆ ವರ್ಣಿಸಲಿ–ಎಂದು ವಾಲ್ಮೀಕಿಗಳು ನುಡಿದರು. ೪೬. ಬೆಟ್ಟವನ್ನು ಕೊಡೆಯಂತೆ ಹಿಡಿದುಕೊಂಡು ಮರದಿಂದ ಅಪ್ಪಳಿಸಿ ಪುಟನೆಗೆದು ಆಕಾಶದಲ್ಲಿ ಚಿಟ್ಟುಮುರಿ ಆಟವಾಡುವ ಪ್ರಧಾನವೀರರ ಹೊಟ್ಟೆಯೊಳಕ್ಕೆ ಬಾಣಗಳನ್ನು ತುಂಬಿದನು. ಬಾಣಗಳಿಂದ ತಲೆಗಳನ್ನು ಕಡಿದು ರಾಶಿಹಾಕಿದನು : ಯುದ್ಧರಂಗದ ಸಂದು ಸಂದುಗಳಲ್ಲಿಯೂ ಪ್ರಾಣ ಹೋದ ಕಪಿಗಳು ತುಂಬಿದ್ದುದನ್ನು ಏನೆಂದು ವರ್ಣಿಸಲಿ. ೪೭. ಕತ್ತರಿಸಿದ ತಲೆ ತೋಳುಗಳ, ರಂಧ್ರಕೊರೆದ ಹೊಟ್ಟೆಗಳಿಂದ ಹೊರಟುಕೊಂಡ ಕರುಳಿನ, ಮುರಿದ ಮೂಳೆಯಿಂದ ತುಂಡಾದ ಸೊಂಟ, ತೊಡೆ, ಮೊಣಕಾಲು ಮತ್ತು ಕಿರುದೊಡೆಗಳ ಗಿಟುಕಿರಿದ ಹಲ್ಲುಗಳ, ನೆಗೆದು ಅರಿಚಿಕೊಂಡು ಕೆಳಗೆ ಬೀಳುವ ಕಪಿಹೆಣಗಳ ಸಾವಿನಿಂದ ಯುದ್ಧರಂಗವು ಅದ್ಭುತವಾಗಿ ತೋರಿತು.

ಆದಲೇನದನಿಂದ್ರಜಿತುವಿನ । ಮೋಡಿ ಬೇಱೋಸರಿಸಿ ದಿನದಿನ
ಕೋಡಿ ಹಿಂಗಿದ ಜಯವಧುವ ತಿರುಹಿದನು ನಿಮಿಷದಲಿ
ತೋಡಿ ನೆತ್ತಿಯನುಗಿದು ಪದದಲಿ । ಮೂಡಿದಂಬಿನ ಕಪಿಗಳಿಂದ
ಲ್ಕಾಡಿತಿಳೆ ಹೊದಱಿದ್ದ ಹೊನಲಿನ ಹರಿವ ರಕುತದಲಿ ೪೮

ಕೋಲು ಹೆಣನೊಂದಾಗಿ ಬೀಳುವ । ಬಾಲ ಯವ್ವನ ವೃದ್ಧ ಮರ್ಕಟ
ಜಾಲದೆಣಿಕೆಗೆ ಕಡೆಯ ಕಾಣೆನು ಕದನಕೇಳಿಯಲಿ
ಕೇಳಿದೈ ಕುಶ ಕೂಡಿದೆಪ್ಪ । ತ್ತೇಳು ಕೋಟಿ ಪ್ಲವಗನಾಯಕ
ರಾಳು ಸಹಿತೊಱಗಿದರು ಮಿಕ್ಕಿನ ಮಾತದೇನೆಂದ ೪೯

ಹನುಮನನು ಕಟ್ಟಿದನು ಬಿಗಿದನು । ವನರುಹಾಸನನಂದನನನುೞ
ದಿನಸುತಾದಿ ಸಮಸ್ತ ಸೇನೆಯನಾ ರಣಾಂಗನೆಯ
ಸ್ತನದ ಮೇಲೊಱಗಿಸಿದನಾ ಯೋ । ಜನದ ಶತವಿಸ್ತರದ ರಣಕುಂ
ಭನಿಯ ಮಂಚದ ಮೇಲೆ ಮೇಲಣ ಕಥೆಯ ಕೇಳೆಂದ ೫೦

ಮಡದಿಗೋಸುಗ ಹಂಗ ಕೊಳ್ಳದ । ಕೊಡದ ಕಪಿಗಳನಿಕ್ಕಿ ಹೊತ್ತನು
ಕಡೆಯಲಪಕೀರ್ತಿಯನು ಕಮಲಜಕಲ್ಪಪರಿಯಂತ
ಸುಡುಸುಡಾತನ ಮಾತದೇಕೆಂ । ದಡಿಗಡಿಗೆ ಜನವೆನ್ನನೀಪರಿ
ನುಡಿಯದಿರದೆಂದಂಗಲಾಚಿದನರಸನಾಜಿಯಲಿ ೫೧

೪೮. ಅದನ್ನು ಹೇಳಿ ಏನು, ಇಂದ್ರಜಿತು ತನ್ನ ಮಾಯೆಯಿಂದಾಗಿ ದಿನದಿನಕ್ಕೂ ಓಡಿ ಹಿಮ್ಮೆಟ್ಟುತ್ತಿದ್ದ ಜಯಲಕ್ಷ್ಮಿಯನ್ನು ನಿಮಿಷದಲ್ಲಿ ಹಿಂದಿರುಗಿಸಿದನು. ನೆತ್ತಿಯನ್ನು ತೋಡಿಕೊಂಡುಹೋಗಿ ಅಂಗಾಲಿನಲ್ಲ ಹೊರಟುಕೊಂಡ ಬಾಣಗಳ ಕಪಿಗಳಿಂದ ಹೊರಟ ರಕ್ತಪ್ರವಾಹದಲ್ಲಿ ಭೂಮಿ ಪೂರ್ತಿಯಾಗಿ ಮುಚ್ಚಿಹೋಯಿತು. ೪೯. ಇಂದ್ರಜಿತುವಿನ ಕಾಳಗದಾಟದಲ್ಲಿ ಬಾಣಗಳೂ ಹೆಣಗಳೂ ಒಂದಾಗಿ ಬೀಳುವ ಹುಡುಗ, ಹರೆಯ, ಮುದುಕ ಕಪಿಗಳನ್ನು ಎಣಿಸುತ್ತ ಹೋದರೆ ಅದಕ್ಕೆ ಕೊನೆಯೇ ಇಲ್ಲ. ಕೇಳಯ್ಯ ಕುಶ, ಎಪ್ಪತ್ತೇಳು ಕೋಟಿ ವಾನರನಾಯಕರು ತಮ್ಮ ಸೈನ್ಯ ಸಮೇತ ಮರಣ ಹೊಂದಿದರು. ಇನ್ನು ಹೆಚ್ಚಿನ ಮಾತೇನಿದೆ ಎಂದರು ವಾಲ್ಮೀಕಿಗಳು. ೫೦. ಹನುಮಂತನನ್ನು ಕಟ್ಟಿಹಾಕಿದನು, ಜಾಂಬವಂತನನ್ನು ಗಟ್ಟಿಯಾಗಿ ಬಂಧಿಸಿದನು. ನೂರು ಯೋಜನ ವಿಸ್ತಾರವಾದ ಯುದ್ಧಭೂಮಿಯ ಮಂಚದ ಮೇಲಿದ್ದ ಯುದ್ಧನಾರಿಯ ಸ್ತನಗಳ ಮೇಲೆ ಸುಗ್ರೀವನೇ ಮೊದಲಾದ ಸಮಸ್ತವಾನರ ಸೈನ್ಯವನ್ನು ಮಲಗಿಸಿದನು. ೫೧. ಹೆಂಡತಿಗೋಸ್ಕರ ಹಂಗಿಗರಾಗದ ಕಪಿಗಳನ್ನು ಯುದ್ಧದಲ್ಲಿ ಬಲಿಕೊಟ್ಟು ಬ್ರಹ್ಮಕಲ್ಪದವರೆಗೆ ಅಪಕೀರ್ತಿಯನ್ನು ರಾಮನು ಹೊತ್ತನು ; ಸುಡು ಸುಡು, ಅವನ ಮಾತೇಕೆ ಎಂದು ಮೇಲಿಂದ ಮೇಲೆ ಜನ

ಮುಟ್ಟವಿಸಿದವು ಸರಳು ತನ್ನೊಡ । ಹುಟ್ಟಿದನ ಮೇಲೊಡನೆ ತನ್ನನು
ಕಟ್ಟಿದವು ಕಾಹುರದ ಕಟ್ಟಿಸುಗೆಯಲಿ ಶರಜಾಲ
ಕಟ್ಟಿದರಿಶರಜಾಲವನು ತರಿ । ದೊಟ್ಟಿದನು ಬಹ ಬಾಣಗಳ ತಲೆ
ಮುಟ್ಟು ಸಂಧಿಸುವಂಬ ಸಂಹರಿಸಿದನು ರಘುನಾಥ ೫೨

ಇಳಿದ ಕಣೆಗಳನೇರುಗಣೆ ಮು । ಕ್ಕುಳಿಸಿದವು ಬೀಳ್ವಂಬನಡರ್ವಂ
ಬುಲಿದು ಸೀಳ್ದವು ಬಹ ಶರೌಘವ ಹೋಹ ಶರಜಾಲ
ತೊಲಗಗಡಿದವು ಹೇಳಲೇನದ । ನಿಳೆಯು ಗಗನದ ಹರುಕು ಸರಳಿನ
ಹೊಲಿಗೆಯಲಿ ಹುದುಗಿದವು ರಾವಣಿ ರಾಮರೆಸುಗೆಯಲಿ ೫೩

ತರಣಿಬಿಂಬವ ಸಿಡಿಲಜಂತ್ರಗೆ । ಯೊರಳಲೊತ್ತಿದನೋ ಲಯಾಗ್ನಿಯ
ಹುರಿಯನುಗಿದನೊ ಹೊದರುವೆಳಗಿನ ಹೊಳೆವ ಮಿಂಚುಗಳ
ಸರಿಗದೆಗೆದನೊ ನಭದಿನಿಳೆಗೆನೆ । ಸರಳು ಸುರಿದವು ಸಾರ್ವಭೌಮನ
ಸರಿಸದಲಿ ಸರಗೊಳಿಸಿ ಸುರಕುಲರಾಜದಲ್ಲಣನ ೫೪

ಖಚರಿಯರ ಹೂಮುಡಿಗೆ ಸುರಪನ । ಶಚಿಯ ಮುಖಸಾರಸಕೆ ರುದ್ರನ
ಕಚದ ಗಂಗಾಂಬುವಿಗೆ ಸರಸಿಜಭವನ ಗದ್ದುಗೆಗೆ
ಪ್ರಚುರ ದಿಗ್ವನಿತಾಬ್ಜಕುಟ್ಮಳ । ಕುಚಗಳಿಗೆ ಮೊಗಸುವ ಶಿಲೀಮುಖ
ನಿಚಯವೆನಲಡರಿದವು ರಾಮನ ಶಿಲೀಮುಖವ್ರಾತ ೫೫

ನನ್ನನ್ನು ಕುರಿತು ಆಡಿಕೊಳ್ಳದೆ ಇರರು ! ಎಂದು ರಾಮನು ಯುದ್ಧದಲ್ಲಿ ಮೊರೆಯಿಟ್ಟನು. ೫೨. ಇಂದ್ರಜಿತುವಿನ ಬಾಣಗಳು ಲಕ್ಷ್ಮಣನ ಮೇಲೆ ಬಿದ್ದವು, ರಭಸದಿಂದ ಬಿಟ್ಟ ಬಾಣಗಳು ರಾಮನನ್ನು ಕಟ್ಟಿಹಾಕಿದವು. ರಘುನಾಥನು ತನ್ನನ್ನು ಕಟ್ಟಿಹಾಕಿದ ಬಾಣಗಳನ್ನು ಕತ್ತರಿಸಿ ಗುಡ್ಡೆಹಾಕಿದನು ; ತಲೆಯ ಸಮೀಪಕ್ಕೆ ಬರುವ ಬಾಣಗಳನ್ನು ನಾಶಪಡಿಸಿದನು. ೫೩. ಕೆಳಕ್ಕೆ ಇಳಿದ ಬಾಣಗಳನ್ನು ಏರುವ ಬಾಣಗಳು ನುಂಗಿದವು ; ಬೀಳುವ ಬಾಣಗಳನ್ನು ಮೇಲಕ್ಕೆ ಹತ್ತುವ ಬಾಣಗಳು ಶಬ್ದಮಾಡುತ್ತ ಸೀಳಿಹಾಕಿದವು ; ಬರುವ ಬಾಣಗಳನ್ನು ಹೋಗುವ ಬಾಣಗಳು ಅಟ್ಟಿ ಕತ್ತರಿಸಿ ಹಾಕಿದವು. ಇಂದ್ರಜಿತು ರಾಮರ ಯುದ್ಧದಲ್ಲಿ ಭೂಮಿ ಆಕಾಶಗಳು ಸೇರುವಲ್ಲಿನ ಹರಕನ್ನು ಬಾಣಗಳು ಹೊಲಿದು ಮುಚ್ಚಿದವು. ೫೪. ಸೂರ್ಯಬಿಂಬವನ್ನು ಸಿಡಿಲ ಯಂತ್ರದ ಒರಳಲ್ಲಿ ಒತ್ತಿದನೋ, ಪ್ರಳಯಾಗ್ನಿಯ ಹುರಿಯನ್ನು ಕಿತ್ತನೋ, ಹೊಳೆ ಹೊಳೆಯುವ ಮಿಂಚುಗಳಿಂದ ಆಕಾಶದಿಂದ ಭೂಮಿಗೆ ಜರಿವಳೆಯನ್ನು ತೆಗೆದನೋ ! ಎನ್ನುವಂತೆ ಇಂದ್ರಜಿತುವಿನ ಬಾಣಗಳು ಮಾಲೆಮಾಲೆಯಾಗಿ ರಾಮನ ಎದುರಿಗೆ ಬಿದ್ದವು. ೫೫. ದೇವತಾಸ್ತ್ರೀಯರ ಹೂಮುಡಿಯನ್ನು, ದೇವೇಂದ್ರ ಶಚಿಯರ ಮುಖಕಮಲಗಳನ್ನು, ಶಿವನ ಮುಡಿಯ ಗಂಗೆಯ ನೀರನ್ನು, ಬ್ರಹ್ಮನ ಪೀಠವನ್ನು, ದಿಗ್ವನಿತೆಯರ ತಾವರೆಯಮೊಗ್ಗಿನಂಥ ಸ್ತನಗಳನ್ನು ಬಯಸುವ ಬಾಣಗಳೋ

ಜಾಣರೊಳಗಿಬ್ಬರೆ ಜವಾಯ್ಲ । ತ್ರಾಣ ತೋಮರವಿದ್ಯೆಯಲಿ ಗೀ
ರ್ವಾಣರಿಪು ಮತ್ತಿನಕುಲೇಂದ್ರನ ಸರಳ ಸರಸದಲಿ
ಬಾಣಬಾಣದ ಬವರಕಭ್ರ । ಕ್ಷೋಣಿ ಬೇಸಱಿಸೈದಿದವು ಬಗೆ
ಗಾಣೆನಿಬ್ಬರ ನಿರ್ಭರದ ನಿರ್ಭಯದ ರಣಕೆಂದ ೫೬

ಹುಗಗೊಡದೆ ಕಣೆ ಕಣೆಯ ಕಣೆಗಾ । ಳಗಗಳಿಬ್ಬರಿಗಾಯ್ತು ಸಂಧಿಸಿ
ಪೊಗುವ ಸರಳಿಗೆ ಲಕ್ಷ್ಯನಾದನು ನಭದೊಳಿಂದ್ರಜಿತು
ಉಗಿದನೈ ಬಳಿಕಾಭಿಚಾರದ । ವಿಗಡಮುಖ ಮುಖದುದಿತ ಮಂತ್ರಾ
ಶುಗವನಾಶುಗ ಸರಣಿಯಲಿ ವೈದೋಱದಿಂದ್ರಾರಿ ೫೭

ಮಾತುದೋಱದೆ ರಥದ ಶಬ್ದವ । ಸೂತನಿಂದಱಿಸದೆ ಮೇಘ
ವ್ರಾತವನು ಮಱೆಗೊಂಡು ಮಾಯಾಸುರ ವಿಚಾರದಲಿ
ಘಾತಕನು ರಣಚೋರವಿದ್ಯಾ । ಪಾತಕನು ಬಳಿಕೆಚ್ಚನೈ ಮಾ
ಯಾತಿರೋಧಾನದ ಮನುಕ್ಷಿತಿರಾಜವಲ್ಲಭನ ೫೮

ಒಡನೆ ಲಕ್ಷ್ಮಣನನು ಶರೌಘದ । ಹುಡಿಕೆಯಲಿ ಹುಗಿಸಿದನು ಥಲ್ಲಿಸಿ
ಗಿಡಿಕಿಱಿದವಂಬುಗಳು ರಘುರಾಜೇಂದ್ರಚಂದ್ರಮನ
ಮಡಿದ ಮಂಡಿಯ ಕಿವಿಗಡಿಯ ಬೆರ । ಳೆಡೆಯ ಹಿಳುಕಿನ ಮಾನುಷಾಂಗದ
ತೊಡಹದಮಲ ಪುರಾಣಪುರುಷರು ಮೆಱೆದರಾಜಿಯಲಿ ೫೯

ಎನ್ನುವಂತೆ ರಾಮನ ಬಾಣಗಳು ಮೇಲೇರಿದವು. ೫೬. ಚುರುಕುತನ ಮತ್ತು ಶಕ್ತಿಯ ತೋಮರವಿದ್ಯೆಯಲ್ಲಿ ಇಂದ್ರಜಿತು ಮತ್ತು ಬಾಣವಿದ್ಯೆಯಲ್ಲಿ ರಾಮ–ಇವರಿಬ್ಬರೆ ಜಾಣರು. ಬಾಣ ಬಾಣಗಳ ಯುದ್ಧಕ್ಕೆ ಆಕಾಶ ಭೂಮಿಗಳು ಬೇಸರಗೊಂಡವು. ಇಬ್ಬರ ನಿರ್ಭಯದ ರಭಸದ ಯುದ್ಧದಲ್ಲಿ ಇವರಿಬ್ಬರಿಗೆ ಸಮಾನರಾದವರನ್ನಾರನ್ನೂ ಕಾಣೆ–ಎಂದು ನುಡಿದರು ವಾಲ್ಮೀಕಿಗಳು. ೫೭. ಬಾಣ ಬಾಣಗಳು ಒಂದನ್ನೊಂದು ತಡೆದು ಮುಂದೆ ಬರದಂತೆ ಪ್ರಯೋಗಿಸಿದ ಬಾಣಗಳ ಕಾಳಗವು ಇಂದ್ರಜಿತು ರಾಮ ಇವರ ನಡುವೆ ನಡೆಯಿತು. ಒಳನುಗ್ಗುವ ರಾಮನ ಬಾಣಗಳಿಗೆ ಆಕಾಶದಲ್ಲಿದ್ದ ಇಂದ್ರಜಿತು ಗುರಿಯಾದನು. ಆಗ ಮಾಯಾಮಾಟದ ಉಗ್ರ ಹೋಮದಲ್ಲಿ ಹುಟ್ಟಿದ ಮಂತ್ರಾಸ್ತ್ರವನ್ನು ಆಕಾಶಮಾರ್ಗದಲ್ಲಿ ಕಾಣಿಸಿಕೊಳ್ಳದಂತಿದ್ದ ಇಂದ್ರಜಿತು ಹೊರಕ್ಕೆ ತೆಗೆದನು. ೫೮. ಮಾತನಾಡದೆ, ರಥವನ್ನು ಶಬ್ದವಿಲ್ಲದಂತೆ ನಡೆಸಲು ಸಾರಥಿಗೆ ಹೇಳಿ ಮೋಡಗಳ ಹಿಂದೆ ಮರೆಯಾಗಿ ಮಾಯಾಸುರ, ಕೊಲೆಗೇಡಿ, ಕಳ್ಳಯುದ್ಧವಿದ್ಯೆಯ ಪಾಪಿ ಇಂದ್ರಜಿತು ಮಾಯಾನಾಶಕ ಮನುವಂಶಭೂಪಾಲ ರಾಮನ ಮೇಲೆ ಮಂತ್ರಾಸ್ತ್ರವನ್ನು ಬಿಟ್ಟನು. ೫೯. ಕೂಡಲೆ ಇಂದ್ರಜಿತು ಲಕ್ಷ್ಮಣನನ್ನು ಬಾಣಗಳ ಪಂಜರದೊಳಕ್ಕೆ ಕೂಡಿಹಾಕಿದನು. ಇಂದ್ರಜಿತುವಿನ ಬಾಣಗಳು ರಾಮಚಂದ್ರನನ್ನು ಚುಚ್ಚಿ ಸುತ್ತ ಒತ್ತಾಗಿ ಮುತ್ತಿದವು. ಮಡಿಸಿದ ಮಂಡಿ, ಕಿವಿದುದಿ, ಬೆರಳ ಸಂದು ಗಳಲ್ಲಿ ಮಾನವಶರೀರಕ್ಕೆ ನಾಟಿದ ಬಾಣಗಳ ಗರಿಗಳು ಅಲಂಕಾರವಾಗಿ ಕಾಣಿಸುತ್ತಿರಲು

ಆಯೆನುತ ಕವಿದಬ್ಬರಿಸಿ ಮುಝು । ಮಾಯೆ ದೇವಿ ನಿಕುಂಭಿಳೆಯೆ ವರ
ದಾಯುಕಿಯೆ ನಮೊಯೆನುತ ನೂಕಿದನವನು ನಿಜರಥವ
ವಾಯುಂ ಮೇಘಗಳಿಲ್ಲದಂಬರ । ದಾಯತವ ಪಡೆದಿರ್ದುದಾ ರಘು
ರಾಯ ಸೇನಾಜಲಧಿ ಬಳಿಕೆಲೆ ಕಂದ ಕೇಳೆಂದ ೬೦

ಇಳಿದು ರಥವನು ಕೈಮುಗಿದು ರಣ । ಲಲನೆಗಭಿವಂದಿಸಿ ಲಲಾಟಕೆ
ತಿಲಕವನು ರಚಿಸಿದನು ಸಂತೋಷದಲಿ ಶ್ರೋಣಿತದ
ಹೊಳಲಿಗಭಿಮುಖನಾದನವ ಹೆ । ಕ್ಕಳದ ಹರುಷದಲಿತ್ತ ರಘುಕುಲ
ತಿಲಕನಭ್ಯುದಯಪ್ರಪಂಚವ ಕೇಳಿರೈಯೆಂದ ೬೧

ಪುರಾಣಪುರುಷರಾದ ರಾಮಲಕ್ಷ್ಮಣರು ಯುದ್ಧರಂಗದಲ್ಲಿ ಮೆರೆದರು. ೬೦. ಇಂದ್ರಜಿತು 'ಆ' ಎಂದು ಗರ್ಜಿಸಿ 'ಮುಝು! ಮಾಯೆ! ನಿಕುಂಭಿಳಾದೇವಿ! ವರದಾಯಕಿ! ನಮೋ!' ಎನ್ನುತ್ತ ರಥವನ್ನು ಮುಂದಕ್ಕೆ ನಡೆಸಿದನು. ಆಗ ರಘುರಾಮನ ಸೇನಾಸಮುದ್ರವು ಗಾಳಿ ಮೋಡಗಳಿಲ್ಲದ ಆಕಾಶದ ವಿಸ್ತಾರದಂತೆ ತೋರುತ್ತಿತ್ತು, ಕೇಳು ಕಂದ ಕುಶ ಎಂದು ವಾಲ್ಮೀಕಿಗಳು ನುಡಿದರು. ೬೧. ಇಂದ್ರಜಿತು ರಥದಿಂದಿಳಿದು ಯುದ್ಧಭೂಮಿಗೆ ನಮಸ್ಕರಿಸಿ ಸಂತೋಷದಿಂದ ಹಣೆಗೆ ರಕ್ತದ ತಿಲಕವನ್ನು ಹಚ್ಚಿಕೊಂಡನು. ಆತನು ಅತ್ಯಾನಂದದಿಂದ ಲಂಕಾಪಟ್ಟಣದ ಕಡೆಗೆ ಹೊರಟನು. ಇತ್ತ ರಘುಕುಲತಿಲಕನ ಏಳಿಗೆಯ ಮುಂದಿನ ಕಥೆಯನ್ನು ಕೇಳಿ ಲವಕುಶರೇ, ಎಂದು ವಾಲ್ಮೀಕಿ ಕುಮಾರರಿಗೆ ಹೇಳಿದ.

# ಮೂವತ್ತಾರನೆಯ ಸಂಧಿ

ಸೂಚನೆ॥ ರಣದೊಳಳಿದ ಸಮಸ್ತ ವಾನರ । ಗಣವನಪರಬ್ರಹ್ಮ ಮಾರುಜೀ
ವಣಿಯ ತಂದೆಬ್ಬಿಸಿದನಭವಾದಿಗಳು ನಲಿದಾಡೆ

ಕುಶನೆ ಕೇಳಿಂದ್ರಾರಿ ತಂದೆಯ । ವಸತಿಯನು ಸಾರಿದನು ಹೊಯ್ಸಿದ
ನೊಸಗೆವಱೆಗಳನೆತ್ತಿಸಿದನೂರೊಳಗೆ ತೋರಣವ
ಕುಶನನುಜ ಕೇಳ್ ದುರ್ಜನಗೆ ಸಂ । ಧಿಸಿದ ಸಿರಿಯವೊಲುಬ್ಬಿದನು ರ
ಕ್ಕಸರರಾಯನು ರಾಜಸಭೆಯಲಿ ರಾಗರಸವೊಸರೆ ೧

ಮಗನೆ ತನ್ನಯ ಹಾನಿ ಹರಿಬಕೆ । ನಗೆಗೆಡೆಯ ಮಾಡದೆ ಭಟೋಕ್ತಿಯ
ನೆಗಹಿಕೊಂಡೆ ನರೋರಗಾಮರಜಗದ ಜನರುಗಳ
ಬಿಗುಹ ಬಿಡಿಸಿದೆ ಮನ್ಮನೋರಥ । ದಗುಳಿವನೆ ನೀನಾದೆಲಾಯೆಂ
ದೊಗುಮಿಗೆಯ ಹರುಷದಲಿ ಹೊಗಳಿದನಿಂದ್ರಜಿತುಖಳನ ೨

ಕಳುಹಿದನು ಬಳಿಕುಚಿತದುಡುಗೊಱೆ । ಗಳಲಿ ಮನ್ನಿಸಿ ಮನೆಗೆ ಮಗನನು
ತಳಿತ ರೋಮಾಂಚನದ ತನುಪುಳಕಾಂಬು ಕೈಮಿಗಲು
ಖಳಪತಿಗೆ ಬಳಿಕೀಚೆಯಲಿ ನಿ । ಶ್ಚಲಿತ ರಣವನು ಕಂಡು ಕಂಗಳ
ಲಿಳುಹಿದನು ಕಂಬನಿಯ ನಂಬಿದ ಭಕ್ತ ರಾಘವನ ೩

ಸೂಚನೆ॥ ಎರಡನೆಯ ಬ್ರಹ್ಮನಾದ ಹನುಮಂತನು ಯುದ್ಧದಲ್ಲಿ ಸತ್ತ ಸಮಸ್ತ ವಾನರರನ್ನೂ ಸಂಜೀವನಿಯನ್ನು ತಂದು ಬದುಕಿಸಿದನು, ಶಿವನೇ ಮೊದಲಾದವರೆಲ್ಲ ನಲಿದಾಡಿದರು. ೧. ಕೇಳು ಕುಶ, ಇಂದ್ರಜಿತು ತಂದೆಯ ಮನೆಗೆ ಹೋದನು ; ಮಂಗಳ ವಾದ್ಯಗಳನ್ನು ಹೊಡೆಸಿದನು ; ಊರಿನಲ್ಲಿ ತೋರಣವನ್ನು ಕಟ್ಟಿಸಿದನು. ಲವನೇ ಕೇಳು, ದುಷ್ಟನಿಗೆ ಸಂಪತ್ತು ದೊರೆತಂತೆ ರಾಕ್ಷಸರಾಜ ರಾವಣನು ರಾಜಸಭೆಯಲ್ಲಿ ಆನಂದದಿಂದ ಉಬ್ಬಿಹೋದನು ಎಂದು ವಾಲ್ಮೀಕಿಮಹರ್ಷಿಗಳು ನುಡಿದರು. ೨. "ಮಗನೆ, ನನ್ನ ಶತ್ರುನಾಶದ ಕಾರ್ಯವನ್ನು ನಗೆಗೇಡುಮಾಡದೆ ನಿನ್ನ ಶೌರ್ಯದ ಮಾತನ್ನು ಉಳಿಸಿಕೊಂಡೆ. ಭೂಲೋಕ, ಪಾತಾಳ, ದೇವಲೋಕಗಳ ಜನರ ಗರ್ವವನ್ನು ಇಳಿಸಿದೆ. ನನ್ನ ಮನಸ್ಸಿನ ಬಯಕೆಯ ಅಗುಳಿಯ ಮನೆ (ರಕ್ಷಿಸುವ ಮನೆ) ನೀನಾದೆಯಲ್ಲವೇ" ಎಂದು ರಾವಣನು ಹರ್ಷಾಧಿಕ್ಯದಿಂದ ಇಂದ್ರಜಿತುವನ್ನು ಹೊಗಳಿದ. ೩. ಉಚಿತವಾದ ಉಡುಗೊರೆಗಳನ್ನಿತ್ತು ಗೌರವಿಸಿ ರಾವಣನು ಮಗನನ್ನು ಮನೆಗೆ ಕಳುಹಿಸಿದನು. ರೋಮಾಂಚಗೊಂಡು ಅತಿಶಯ ಸುಖದಿಂದ ರಾವಣನಿರಲು ಇತ್ತ ರಾಮನನ್ನು ನಂಬಿದ ಭಕ್ತ ವಿಭೀ

ಮಱುಗಿದನು ಮನದೊಳಗೆ ಮೋಸದ । ಮಱೆಯ ರಕ್ಕಸಗದನಕಕಟಾ
ಬಱಿತುದೇ ಬಲಿಮುಖ ಬಲಾಂಬುಧಿ ರಾಮಚಂದ್ರಮನ
ತೆಱನದಾವುದೊ ಜೀವಕಳೆಯನು । ತೊಱೆಯರಲೆ ಸುಗ್ರೀವ ಜಾಂಬವ
ರುಱುವ ಪವಮಾನಜ ಸುಷೇಣಕರೆನುತ ನಡೆತಂದ ೪

ಸುರಿವ ಕಂಬನಿಧಾರೆಗಳ ಮುಖ । ದಿರುಹಿದುಮ್ಮಹದಾನನಾಬ್ಜದ
ಹರಹು ಮಗ್ಗಿದ ಮತಿಯ ಮನದ ಸ್ವಾಮಿಕಾರಿಯದ
ಹುರಿಯ ಹಮ್ಮುಗೆ ಹಱಿದ ಚಿಂತೆಯ । ಭರವಸಿಗ ಬರುತಿರ್ದನೈ ಸಂ
ಗರ ಮಹೀರಂಗದಲಿ ನೋಡುತ ರಾಘವೇಶ್ವರನ ೫

ಮೊರೆವುತಿರ್ದವು ಹೆಣನು ರಣದೊಳ । ಗುರಗಬಲವುಸುರಿಕ್ಕುವವೊಲು
ಬ್ಬರದ ರಕುತದ ಪೂರಗಳ ಹೊರಳಿಗಳ ಹಱಿದಲೆಯ
ಕರಿ ತುರಂಗಮ ರಕ್ಕಸರ ವನ । ಚರರ ಕಾಳಿಜ ಕಾವಣದ ದು
ಸ್ತರ ರಣಾಂಗಣದೊಳಗೆ ನಡೆತರುತಿರ್ದನಸುರೇಂದ್ರ ೬

ಚಿಗಿದು ನೆತ್ತರ ಮಡುಗಳನು ಫುಟ । ನೆಗೆವುತೊಟ್ಟಿಲುವೆಣನನಗಲಕೆ
ಮಗುಚಿ ನೋಡುತ ದನಿಯನಾಲಿಸುತಿದಿರುಬಲನೆಡದ
ಹೊಗುವ ರಣವೇತಾಳಗಳ ಹು । ಬ್ಬುಗಳಲೆಬ್ಬುತ ಶಕ್ರಜಿತುವಿನ
ಸೊಗಡನಾಲಿಸುತೊಯ್ಯನೈತರುತಿರ್ದನಸುರೇಂದ್ರ ೭

ಷಣನು ಯುದ್ಧವು ತಟಸ್ಥವಾದುದನ್ನು ಕಂಡು ಕಣ್ಣೀರು ಹರಿಸಿದನು. ೪. ಮರೆ ಮೋಸದಿಂದ ರಾಕ್ಷಸನು ನಡೆಸಿದ ಕಾಳಗವನ್ನು ಕಂಡು ವಿಭೀಷಣನು ದುಃಖಿಸಿದನು, 'ಅಯ್ಯೋ, ರಾಮಚಂದ್ರನ ವಾನರಸೇನಾಸಾಗರವು ಬತ್ತಿತೇ ! ಇದಕ್ಕೇನು ಉಪಾಯ ? ಸುಗ್ರೀವ, ಜಾಂಬವ, ಹನುಮಂತ, ಸುಷೇಣಕರು ಪ್ರಾಣಬಿಡುವರಲ್ಲ !' ಎನ್ನುತ್ತ ಅಲ್ಲಿಂದ ಹೊರಟನು. ೫. ಕಣ್ಣೀರುಧಾರೆ ಹರಿಸುತ್ತ, ಮುಖ ತಿರುಗಿಸಿಕೊಂಡು ಚಿಂತೆ ಕವಿದ ಮೊಗದಿಂದ, ಬುದ್ಧಿ ಮನಸ್ಸುಗಳು ಕುಗ್ಗಿದ ಸ್ವಾಮಿಕಾರ್ಯದ ಕೆಚ್ಚಿನ ಹಗ್ಗ ಕಿತ್ತ, ಚಿಂತಾಭರದ ವಿಭೀಷಣನು ಯುದ್ಧಭೂಮಿಯಲ್ಲಿ ರಾಮನನ್ನು ಹುಡುಕುತ್ತ ಬಂದನು. ೬. ಸರ್ಪಗಳ ಸಮೂಹವು ಉಸಿರುಬಿಡುವಂತೆ ಯುದ್ಧದ ಹೆಣಗಳು ಮೊರೆಯುತ್ತಿದ್ದವು. ಉಕ್ಕಿಹರಿಯುವ ರಕ್ತಪ್ರವಾಹದಲ್ಲಿ ಆನೆ ಕುದುರೆ ರಾಕ್ಷಸ ವಾನರರ ಕತ್ತರಿಸಿದ ತಲೆಗಳ ಮತ್ತು ಹೊರಹೊರಟ ಪಿತ್ತಾಶಯಗಳ ಹಂದರದ ಅಸಾಧ್ಯ ರಣರಂಗದಲ್ಲಿ ವಿಭೀಷಣ ನಡೆತರುತ್ತಿದ್ದನು. ೭, ರಕ್ತದ ಮಡುಗಳನ್ನು ದಾಟಿ ಪುಟನೆಗೆದು ಹೆಣಗಳ ರಾಶಿಯನ್ನು ಕೆದಕಿ ನೋಡುತ್ತಾ, ರಾಮನ ಧ್ವನಿಯನ್ನು ಆಲಿಸುತ್ತಾ, ತನ್ನ ಎದುರುಗಡೆ ಮತ್ತು ಎಡಬಲಗಳಲ್ಲಿ ಬರುವ ರಣಪಿಶಾಚಿಗಳನ್ನು ಹುಬ್ಬಿನಿಂದ ಹೆದರಸಿ ಓಡಿಸುತ್ತಾ, ಇಂದ್ರಜಿತುವಿನ ಮೈಯ ವಾಸನೆಯನ್ನು ಹಿಡಿಯುತ್ತಾ ವಿಭೀಷಣ ನಿಧಾನವಾಗಿ ರಣರಂಗ

ವೀರರನು ಕೊಂಡೊಯ್ವ ನಿರ್ಜರ । ನಾರಿಯರ ಹಿಡಿಹಿಡಿದು ರಘುಕುಲ
ವೀರನನು ಕೊಂಡೊಯ್ವರಲೆ ನೀವೆಂದು ಶೋಧಿಸುತ
ಭೂರಿಭೂತದ ಹೆಗಲ ಹೆಣಗಳ । ತೋಱಿಸಿಯೆ ಕೊಳುತೈದಿದನು ರಣ
ಧೀರರನು ವೀರರನು ಹೃದಯುಸಮೀರರನು ನೃಪರ ೮

ಹೋರಿ ಹೊದಕುಳಿಗುಟ್ಟುತೊಯ್ವುತ । ಭಾರಿಭುಜವನು ಪಸರಿಸುತ ಪಂ
ಕೇರುಹಾಸನ ಪಾಶಬಾಣದ ಕಲಹದನುಪಮದ ।
ವೀರನನು ಕಂಡೀ ಕಪೀಶ್ವರ । ನಾರೊ ನೊಡುವೆನೆನುತ ಸರಿಸಕೆ
ಸಾರಿದನು ಹರಿಭಕ್ತ ಸಂತೋಷಾಂಗನಾತನನು ೯

ಹನುಮನೆಂದಱಿದೀತ ಹರುಷಾ । ನನದ ಹರಹಿನಲುಬ್ಬಿ ನುಡಿದನು
ನೆನೆ ಪುರಾತನ ಏರವನಜ ಹರಿ ಹರ ಸುರೇಶ್ವರರ
ಹನುಮ ನಿನಗಿದು ಗಹನವೇ ಬೇ । ಗೆನಲು ಬೆಳೆದನು ಬಿಚ್ಚಿ ಬಿಸುಟನು
ವನಜಸಂಭವ ಶರಪ ಶರಣನನಪ್ಪಿದನು ಹನುಮ ೧೦

ಇಬ್ಬರಾದರು ನೋಡಲಿಕೆ ಜಗ । ದೊಬ್ಬ ವೀರನನಱಸಿದರು ಕಡು
ಮಬ್ಬಿನಲಿ ಕೈದೊಳಸಿ ಕೆಡೆದಿಭಹಯವರೂಥದಲಿ
ಒಬ್ಬುಳಿಯ ರಕುತದಲಿ ನೋಡುತ । ನಿಬ್ಬರದ ನಡೆಗಳಲಿ ಬರೆಬರೆ
ಯುಬ್ಬಿದಟವೀಚರಕುಲೇಂದ್ರನ ಕಂಡು ಮಱುಗಿದರು ೧೧

ದಲ್ಲಿ ಬರುತ್ತಿದ್ದ. ೮. ಯುದ್ಧದಲ್ಲಿ ಸತ್ತು ವೀರಸ್ವರ್ಗ ಪಡೆದ ಶೂರರನ್ನು ಕರೆದು ಕೊಂಡು ಹೋಗುವ ದೇವತಾಸ್ತ್ರೀಯರನ್ನು ಹಿಡಿದು ನಿಲ್ಲಿಸಿ ರಘುಕುಲವೀರನನ್ನು ಕೊಂಡುಹೋಗುತ್ತಿದ್ದೀರಾ ಎಂದು ಕೇಳುತ್ತ ಅವರನ್ನು ವಿಭೀಷಣನು ಶೋಧಿಸಿದನು. ಭಾರಿ ಭೂತಗಳು ಹೆಗಲ ಮೇಲೆ ಹೊತ್ತುಕೊಂಡು ಹೋಗುತ್ತಿದ್ದ ಹೆಣಗಳನ್ನು ನೋಡಿ ಪರೀಕ್ಷಿಸುತ್ತ ರಣಧೀರರಾದ ಹೃದಯಪ್ರಾಣರಾದ ವೀರ ರಾಮಲಕ್ಷ್ಮಣರನ್ನು ಹುಡುಕುತ್ತ ಬಂದನು. ೯. ಬಿಡಿಸಿಕೊಳ್ಳಲು ಕಷ್ಟಪಡುತ್ತ ನೋವನ್ನನುಭವಿಸುತ್ತ ಭಾರಿ ತೋಳನ್ನು ನೀಡುತ್ತ ಬ್ರಹ್ಮಾಸ್ತ್ರದ ಕಟ್ಟಿನೊಡನೆ ಹೋರಾಡುತ್ತಿದ್ದ ವೀರನನ್ನು ಕಂಡು 'ಈ ಕಪೀಶ್ವರನು ಯಾರೋ, ನೋಡುವೆನು' ಎನ್ನುತ್ತ ವಿಷ್ಣುಭಕ್ತ ವಿಭೀಷಣನು ಆತನ ಸಮೀಪಕ್ಕೆ ಬಂದನು. ೧೦. ಆತನು ಹನುಮಂತನೆಂಬುದನ್ನು ತಿಳಿದ ವಿಭೀಷಣನು ಸಂತೋಷಹೊಂದಿ ಹಿಗ್ಗಿದ ಮುಖದಿಂದ ಹನುಮಂತನನ್ನು ಕುರಿತು, "ಬ್ರಹ್ಮ, ವಿಷ್ಣು, ಮಹೇಶ್ವರ, ದೇವೇಂದ್ರರು ನಿನಗೆ ಹಿಂದೆ ಕೊಟ್ಟ ವರವನ್ನು ಸ್ಮರಿಸಿಕೋ. ಹನುಮಂತ ನಿನಗಿದು ಅಸಾಧ್ಯವೇ ? ಬೇಗ ಮಾಡು" ಎಂದು ನುಡಿದನು. ಆಗ ಹನುಮಂತನು ಬೆಳೆದುನಿಂತು ಬ್ರಹ್ಮಾಸ್ತ್ರದ ಕಟ್ಟನ್ನು ಬಿಚ್ಚಿ ಎಸೆದು ಹರಿಭಕ್ತನನ್ನು ಅಪ್ಪಿಕೊಂಡನು. ೧೧. ರಣರಂಗದಲ್ಲಿ ಹುಡುಕಲು ಈಗ ಇಬ್ಬರಾದರು. ರಣರಂಗದ ಮಬ್ಬಿನಲ್ಲಿ ಜಗದೇಕವೀರನನ್ನು ಹುಡುಕಿದರು. ನೆಲದ ಮೇಲೆ ಬಿದ್ದಿದ್ದ ಆನೆ ಕುದುರೆ ರಥಗಳನ್ನು ಎಳೆದುಹಾಕಿ ರಕ್ತಪ್ರವಾಹದಲ್ಲಿ ನೋಡುತ್ತ ವೇಗವಾಗಿ ಹೆಜ್ಜೆಹಾಕುತ್ತ ಬರುತ್ತಿರಲು

ಅಳಲಿದರು ಹಿರಿದಾಗಿ ಕಯ್ಗಳೊ । ಳಳವಡಿಸಿದರು ಬಿಟ್ಟರಾ ಕಪಿ
ಕುಲಲಲಾಮನ ಕಂಡರೆಡೆಯುಲಿ ವಾಲಿನಂದನನ
ಹೊಳಕಿದಶ್ರುಕಣಾಳಿಗಳನಂ । ಗುಲಿಯ ತುದಿಗಳಲುಜುಬಿ ಮುಂದಕೆ
ನಿಲುಕಿ ಕಂಡರು ನೀಲ ನಳ ಗಜ ಗಂಧಮಾದನರ ೧೨

ಹಿರಿದು ಸಂಕಟಗೊಂಡು ಮುಂದಕೆ । ಬರಬರಲು ಚೈತನ್ಯವಡಗಿದ
ಶರಭ ಶತಬಲಿ ಸುಮುಖ ದುರ್ಮುಖ ದಧಿಮುಖಾದಿಗಳ
ಇರವ ಕಂಡಕಟೆಂದು ಚಿಂತಾ । ಭರದ ಭಾರದಲಳಿವ ಸುಭಟರ
ನೆರವಿಗಳ ಕಳಿದಿವರು ನೋಡುತ ನಡೆದರಂದಿರಿನಲಿ ೧೩

ಪನಸನನು ಕುಮುದನನು ಕಡುಗಲಿ । ವಿನತನನು ಕೇಸರಿಯುನಗ್ಗದ
ಘನಬಲಾಯುತ ವೃಷಭನನು ಕಂಡಸುರನವರುಗಳ
ತನುಗಳನು ತಡವರಿಸಿ ಕಾಣದೆ । ಮನದ ಮಜುಕದ ಮುಸುಡ ದುಗುಡದ
ಮೊನೆಮುಖದ ಮತಿವಂತರೈದಿದರಿದಿರ ಕೊಳುಗುಳದ ೧೪

ಕಂಡರಡಗಿದ ಜೀವಗಳ ರಣ । ಗಂಡುಗಲಿಗಳನುಗ್ರಬಾಹಾ
ದಂಡಬಲ ಮೈಂದ ದ್ವಿವಿದ ಮೊದಲಾದ ಯೂಥಪರ
ಕಂಡು ಮಜುಗುವುದಾವುದಿನ್ನೆನು । ತಂಡಲೆವ ಚಿಂತೆಯುಲಿ ಬರೆಬರೆ
ಕಂಡರಾ ಕಪಿರಾಯಕಟಕದ ವೈದ್ಯವಲ್ಲಭನ ೧೫

ನಡುವೆ ವಾನರೇಂದ್ರ ಸುಗ್ರೀವನನ್ನು ಕಂಡು ಮರುಗಿದರು, ೧೨. ವಿಭೀಷಣ ಹನುಮಂತರು ಬಹುವಾಗಿ ದುಃಖಿಸಿ ಕೈಮುಗಿದು ಕಪಿಕುಲಶ್ರೇಷ್ಠನನ್ನು ಬಿಟ್ಟು ಮುಂದೆ ನಡೆದರು. ದಾರಿಯುಲ್ಲಿ ವಾಲಿಯ ಮಗ ಅಂಗದನನ್ನು ಕಂಡರು. ಕಣ್ಣುಗಳಿಂದುದುರಿದ ಕಣ್ಣೀರನ್ನು ಬೆರಳ ತುದಿಯಿಂದ ಮಿಡಿದು ಮುಂದೆ ಬರುತ್ತ ನೀಲ, ನಳ, ಗಜ, ಗಂಧಮಾದನರನ್ನು ಕಂಡರು, ೧೩. ತುಂಬ ಸಂಕಟದಿಂದ ಮುಂದಕ್ಕೆ ನಡೆದುಬರುತ್ತಿರಲು ಚೈತನ್ಯವಳಿದ ಶರಭ, ಶತಬಲಿ, ಸುಮುಖ, ದುರ್ಮುಖ, ದಧಿಮುಖನೇ ಮೊದಲಾದವರ ಸ್ಥಿತಿಯನ್ನು ಕಂಡು 'ಅಯ್ಯೋ' ಎನ್ನುತ್ತ ಅಳಿದ ವೀರರ ಸಮೂಹವನ್ನು ಕಾಣುತ್ತ ದುಃಖಭಾರದಿಂದ ಮುಂದಕ್ಕೆ ಹೆಜ್ಜೆಯಿಟ್ಟರು. ೧೪. ಪನಸ, ಕುಮುದ, ಕಡುಗಲಿ ವಿನತ, ಕೇಸರಿ, ಮಹಾಬಲಶಾಲಿ ವೃಷಭ-ಇವರುಗಳನ್ನು ಕಂಡು ವಿಭೀಷಣನು ಅವರ ದೇಹಗಳನ್ನು ತಡವರಿಸಿದನು. ಜೀವವಿರುವುದನ್ನು ಕಾಣದೆ ದುಃಖತಪ್ತ ಚಿತ್ತದಿಂದ ಚಿಂತೆ ಮುಸುಕಿದ ಮುಖದಿಂದ ಉತ್ಸಾಹಗುಂದಿ ಬುದ್ಧಿಶಾಲಿಗಳಾದ ವಿಭೀಷಣ ಹನುಮಂತರು ಎದುರುಗಡೆಯ ರಣಭೂಮಿಗೆ ಬಂದರು. ೧೫. ಪ್ರಾಣ ಹೋದ ಯುದ್ಧವೀರರನ್ನೂ, ಭಯಂಕರ ತೋಳ್ಬಲದ ಮೈಂದ, ದ್ವಿವಿದ ಮೊದಲಾದ ದಳಪತಿಗಳನ್ನೂ ಕಂಡು 'ಇನ್ನು ಮರುಗಿ ಏನು'? ಎನ್ನುತ್ತ ಚಿಂತಾಕ್ಲೇಶದಿಂದ ಬರುತ್ತಿರಲು ವಾನರ

ಈತನೀಪರಿಯಾದನೇಯ । ನ್ನೇತಱಿವು ನಮ್ಮಭ್ಯುದಯವೆನು
ತಾತನನು ತಳವುಗುಚಿ ಮೂಗಿನಲುಸುರನಾರೈದು
ಪಾತಕನಲಾ ವಿಧಿಯೆನುತ ನಿ । ಮ್ಮಾತಗಳು ಬಿಡೆ ಬೈದು ವಿಕ್ಕವ
ಭೂತಜೀವರ ಬಿಡುತ ಬರೆ ಕೇಳಿದರು ಕಿಱುದನಿಯ ೧೬

ಹವಣಿಸಿದರಾಯೆಡೆಯಲತಿಶೋ । ದವನು ಕಿವಿಗೊಟ್ಟೊಯ್ಯನೊಯ್ಯನೆ
ತವಕಿಸದೆ ತಡೆತಡೆದು ತೋಱುವ ದನಿಯನಾಲಿಸುತ
ಇವರು ಬರೆಬರೆ ರಾಮಕವಚ । ಸ್ತವದ ರಾಮಧ್ಯಾನಪರ ಜಾಂ
ಬವನ ಜಗದಧಿಜನಕ ತನುಜನ ಕಂಡರಿದಿರಿನಲಿ ೧೭

ಅಱಿದರಲ್ಲಿಂ ಮೇಲೆ ವಿದ್ಯೆಯ । ನುಱುಬಿ ತತ್ವಜ್ಞಾನದಲಿ ಕ
ಣ್ದೆಱೆದ ನಿರ್ಮ್ಮಲ ಪರಮಹಂಸನ ಹರಹಿಸಂದದಲಿ
ತೊಱೆದ ಜೀವದ ಕಪಿಕದಂಬದ । ಹೊಱೆಗೆವಾಳನು ಸಿಕ್ಕಿದನು ನಮ
ಗಱಿವುದಿನ್ನಭ್ಯುದಯವೆಂದುಬ್ಬಿದರು ತಮ್ಮೊಳಗೆ ೧೮

ಸರಸರಿಸಿ ಸಾರಿದರು ಬಳಿಕಾ । ಶರಣನಾ ಶರಣ್ಯೈಕಜನ ವಿ
ಸ್ಮರಣನನು ಸುಳಿವವರಿದಾರೈ ಮಾರುತಾತ್ಮಜನೆ
ತರಣಿವಂಶಲಲಾಮ ಸೇವಾ । ಪರಿಣತನೆ ಪೌರಂದರ ವ್ಯಾ
ಕರಣ ವಿದ್ಯಾಪಂಡಿತನೆ ನೀನಾರು ಹೇಳೆಂದ ೧೯

ಸೈನ್ಯದ ವೈದ್ಯಶ್ರೇಷ್ಠ ಸುಷೇಣನನ್ನು ಕಂಡರು. ೧೬. 'ಇವನೂ ಹೀಗಾದನೇ ? ಇನ್ನು ನಮ್ಮ ಏಳಿಗೆ ಇನ್ನೆಲ್ಲಿ ?' ಎನ್ನುತ್ತ ಆತನನ್ನು ನೆಟ್ಟಗೆ ಮಾಡಿ ಮೂಗಿನಲ್ಲಿ ಉಸಿರಾಡುತ್ತಿದೆಯೇ ಎಂಬುದನ್ನು ಪರೀಕ್ಷಿಸಿದರು. 'ವಿಧಿಯು ಪಾಪಿ' ಎಂದು ನಿಮ್ಮವರು ಬೈದುಕೊಂಡು ಯುದ್ಧದಲ್ಲಿ ಸತ್ತ ಇತರರನ್ನು ಬಿಟ್ಟು ಬರುತ್ತಿರಲು ಅವರಿಗೆ ಕ್ಷೀಣಧ್ವನಿಯೊಂದು ಕೇಳಿಸಿತು. ೧೭. ವಿಭೀಷಣ ಹನುಮಂತರು ಅತೀವ ದುಃಖದಿಂದ ನಿಧಾನವಾಗಿ ತಡೆತಡೆದು ಬರುತ್ತಿದ್ದ ಧ್ವನಿಯನ್ನು ಕಿವಿಗೊಟ್ಟು ಆಲಿಸುತ್ತ ಬಂದರು. ಆಗ ರಾಮರಕ್ಷಾಮಂತ್ರವನ್ನು ಪಠಿಸುತ್ತ ರಾಮಧ್ಯಾನದಲ್ಲಿ ಮುಳುಗಿದ ಬ್ರಹ್ಮನ ಮಗ ಜಾಂಬವಂತನನ್ನು ಎದುರುಗಡೆಯಲ್ಲಿ ಕಂಡರು. ೧೮. ವಿದ್ಯೆಯನ್ನು ತ್ಯಜಿಸಿ ತತ್ವಜ್ಞಾನದಲ್ಲಿ ಕಣ್ತೆರೆದ ಪರಿಶುದ್ಧ ಪರಮಹಂಸ (ಶ್ರೇಷ್ಠ ಸನ್ಯಾಸಿ) ನಂತೆ ಜಾಂಬವನನ್ನು ಕಂಡರು. 'ಅಸುನೀಗಿದ ಕಪಿಸಮೂಹದ ಹೊಣೆಹೊತ್ತವನು ಸಿಕ್ಕಿದನು, ಇನ್ನು ನಮ್ಮ ಏಳಿಗೆಯಾಗುವುದು !' ಎಂದು ತಮ್ಮ ತಮ್ಮಲ್ಲಿ ವಿಭೀಷಣ ಹನುಮಂತರು ಹಿಗ್ಗಿದರು. ೧೯. ಸರಸರನೆ ಹನುಮಂತ ವಿಭೀಷಣರು ಭಕ್ತಶ್ರೇಷ್ಠ ಜಾಂಬವಂತನನ್ನು ಸಮೀಪಿಸಿದರು. "ಬಂದವರು ಯಾರು ? ವಾಯುಪುತ್ರನೆ ? ಸೂರ್ಯವಂಶಭೂಷಣನ ಕಿಂಕರನೆ ? ಐಂದ್ರವ್ಯಾಕರಣ ಪಂಡಿತನೆ ? ನೀನಾರು ಹೇಳು" ಎಂದು ಜಾಂಬವಂತ ಪ್ರಶ್ನಿಸಿದ.

ಜೀಯ ನಾನು ವಿಭೀಷಣನು ಬರ । ವಾಯಿತಱಸಲು ನಿಮ್ಮಡಿಯನಾ
ವಾಯುಸುತ ತಾನಲ್ಲ ನಿಮಗೇಕಾತನೆಂದೆನಲು
ನೋಯದ್ದೈತಂದ್ಯೆ ಮಗನೆ ವ । ಜ್ರಾಯುಧಾರಿಯ ರಣದಲಾ ರಘು
ರಾಯ ಪದಪದ್ಮಾನುಭೃಂಗನ ಕಾಣೆಯಲೆಯೆಂದ ೨೦

ದೇವರಾತನನೇಕೆ ಬೆಸಗೊಂ । ಬೀ ವಿಚಾರಣೆ ವೀರರಾಘವ
ದೇವ ಲಕ್ಷ್ಮಣರಿರಲು ಕಪಿಕುಲಸಾರ್ವಭೌಮನಿರೆ
ಪಾವಕಾತ್ಮಜ ಮುಖ್ಯ ಬಹಳ ಭ । ಟಾವಳಿಗಳಿರಲಂಜನಾಸುತ
ನೀವನಿವರಿರಲೆಂದು ಬಿನ್ನಹ ಮಾಡಿದನು ನಗುತ ೨೧

ಮಗನೆ ಕೇಳಾದರೆ ಸಮೀರನ । ಮಗನ ಮುಖ್ಯ ಪ್ರಾಣಮಾರುತ
ನಗಲದಿರ್ದಡೆಯಿದ್ದುದೆಂದಱಿ ರಾಮ ಮೊದಲಾದ
ತೆಗೆದಸುರ ಕಪಿಸೇನೆ ಹನುಮನು । ವಿಗತ ವಿಗ್ರಹನಾದಡಸು ಬಿ
ದ್ದಗಲಿತೆಂದಱಿ ಮರಳಿ ಮಾತಿನ್ನೇಕೆ ನಿನಗೆಂದ ೨೨

ತೋಱಿಕೊಡು ಸಾಕಿರ್ದಡಾತನ । ತೋಱುವೆನು ಮೇಲೊಲಿವ ಲೇಸಿನ
ತೋಱಿಕೆಯ ಕಣೆಯುವನು ನಿನ್ನ ಸಮಕ್ಷದಿಂದೆನಲು
ತೋಱಿತುತ್ಸವ ರೋಮದುಬ್ಬಿನ । ತೋಱಿಕೆಯ ಹರುಷಾಶ್ರುವಾರಿಯ
ತೋಱಿಕೆಯುಲಿ ಕಲಿವಿಭೀಷಣನೊಲೆದನವಯವವ ೨೩

೨೦. "ಸ್ವಾಮಿ, ನಾನು ವಿಭೀಷಣ. ನಿಮ್ಮನ್ನು ಹುಡುಕುತ್ತ ಬಂದೆ. ನಾನು ವಾಯು ಸುತನಲ್ಲ. ನಿಮಗೇಕೆ ಆತನು ?" ಎಂದು ವಿಭೀಷಣನು ಕೇಳಿದನು. "ಇಂದ್ರಜಿತುವಿನ ಯುದ್ಧದಲ್ಲಿ ಗಾಯಗೊಳ್ಳದೆ ಬಂದೆಯಾ ಮಗು ? ರಘುರಾಮನ ಪಾದಪದ್ಮಗಳ ತುಂಬಿಯನ್ನು ಕಾಣಲಿಲ್ಲವೆ ?" ಎಂದ ಜಾಂಬವಂತ. ೨೧. "ವೀರ ರಾಘವದೇವ ಲಕ್ಷ್ಮಣರು ಇರಲು ಕಪಿಕುಲಸಾರ್ವಭೌಮ ಸುಗ್ರೀವನಿರಲು ಸ್ವಾಮಿಯವರು ಹನುಮಂತನನ್ನೇ ಏಕೆ ವಿಚಾರಿಸುತ್ತೀರಿ ? ಅಗ್ನಿಕುಮಾರ ಮೊದಲಾದ ಪ್ರಮುಖ ವೀರರಿದ್ದಾರೆ. ಆದರೆ ಇವರೆಲ್ಲರನ್ನುಳಿದು ಆ ಆಂಜನೇಯನು ಏನು ಮುಖ್ಯ ?" ಎಂದು ನಗುತ್ತ ವಿಭೀಷಣ ವಿನಯದಿಂದ ಕೇಳಿದನು. ೨೨. "ಮಗನೆ, ಹಾಗಿದ್ದರೆ ಕೇಳು. ವಾಯುಪುತ್ರನ ಮುಖ್ಯ ಪ್ರಾಣವಾಯುವು ಹೋಗದೆ ಅವನು ಬದುಕಿದ್ದರೆ ಪ್ರಾಣ ಹೋದ ರಾಮ ಲಕ್ಷ್ಮಣರು ಮತ್ತು ಸಮಸ್ತ ಕಪಿಸೈನ್ಯ ಬದುಕಿದರೆಂದು ತಿಳಿ. ಹನುಮಂತನು ಸಾವನ್ನಪ್ಪಿದರೆ ಉಳಿದವರು ಸತ್ತುಹೋದರೆಂದು ತಿಳಿ. ಹೆಚ್ಚಿನ ಮಾತೇಕೆ ನಿನಗೆ ?" ಎಂದ ಜಾಂಬವಂತ. ೨೩. "ಅವನು ಬದುಕಿದ್ದರೆ ತೋರಿಸಿ ಕೊಡು ಸಾಕು. ನಿನ್ನ ಕಣ್ಣೆದುರಿಗೇ ಮುಂದಾಗುವ ಮಂಗಳಕರ ಪ್ರಸಂಗವನ್ನು ತೋರಿಸಿಕೊಡುವೆನು" ಎಂದು ಜಾಂಬವಂತನು ನುಡಿಯಲು ವಿಭೀಷಣನಿಗೆ ಉತ್ಸಾಹ ಹುಟ್ಟಿತು. ರೋಮಾಂಚಗೊಂಡು ಸಂತೋಷದ ಕಣ್ಣೀರನ್ನು ಹರಿಸಿ ಕಲಿವಿಭೀಷಣನು

ರಾಮನೆಂಬುದು ವಿಮಲಲಕ್ಷ್ಮೀ । ಧಾಮನಿದು ತಾ ಸಿದ್ಧನಾತಂ
ಗೀ ಮರುತ್ಸುತನೇನು ವೆಗ್ಗಳನೋ ಗುಣಂಗಳಲಿ
ಸೋಮಧರನೇ ಬಲ್ಲ ಶಿವಶಿವ । ನಾಮಧಾರಕರೇನು ಬಲ್ಲಿದ
ರೋ ಮಹಾದೇವೆನುತ ಕೊಂಡಾಡಿದನು ಪವನಜನ ೨೪

ಹನುಮನಿದನೆಲೆ ಜೀಯ ಹನುಮನ । ಕೊನರಿ ಕೊಂಡಾಡಿದರಿ ನೀವೀ
ತನಿಗೆ ನೃಪನಭ್ಯುದಯವೇನದ ಬೆಸಸಿ ಬೇಗವೆನೆ
ಹನುಮ ಬಂದೈ ತಂದೆ ರಘುನಂ । ದನನ ಭಾಗ್ಯದ ಕಣಿಯೆ ಬಂದೈ
ವನಚರಾಂಬುಧಿಸೋಮ ಬಂದೈಯೆಂದನಜಸೂನು ೨೫

ಚರಣಕೆಱಗಿದ ಪಾವಮಾನಿಯ । ಶಿರವ ಸಿರಿಹಸ್ತಾಬ್ಜದಲಿ ತಡ
ವರಿಸಿ ತಕ್ಕೈಸಿದನು ಪರಮಾನಂದಮಯನಾಗಿ
ಸುರರ ಭಾಗ್ಯತೆ ಚಲುವದಿನ್ನೂ । ರ್ವರೆಯ ಹರ್ಷತೆ ಲೇಸು ಲಂಕೆಯ
ಸಿರಿ ವಿಭೀಷಣಗಿನ್ನು ನಿಶ್ಚಯವಾಯ್ತಲೇಯೆಂದ ೨೬

ಬನ್ನಿರೈ ನೀವ್ ತರಣಿವಂಶೋ । ತ್ಪನ್ನನನು ಕಂಡಱಿದು ಕೊಂಡೊ
ಯ್ದೆನ್ನ ನೀವಲ್ಲಿರಿಸಿ ಬೇಗನೆ ಬಳಿಕ ವಹಿಲದಲಿ
ಜೊನ್ನವಿಲ್ಲದ ರಜನಿಯಲಿ ಸಂ । ಪನ್ನಬಲರೈತಂದು ಜನಕನ
ಕನ್ನಿಕೆಯ ಗಂಡನನು ಕಂಡರು ಕಣನ ಮಧ್ಯದಲಿ ೨೭

ಮೈಯನ್ನು ಒಲಿದನು. ೨೪. "ರಾಮನೆಂಬುವನು ಲಕ್ಷ್ಮೀನಿಲಯನೆಂಬುದು ಪರಮ ಸತ್ಯ. ಈ ವಾಯುಪುತ್ರನು ತನ್ನ ಗುಣಗಳಿಂದ ಆತನನ್ನೂ ಮೀರಿಸಿದ ಎಂಥ ಶ್ರೇಷ್ಠನೋ! ಚಂದ್ರಶೇಖರನೇ ಬಲ್ಲ. ಶಿವ ಶಿವ! ವಿಷ್ಣುಭಕ್ತರು ಅದೆಷ್ಟು ಸಮರ್ಥರೋ! ಮಹಾದೇವ!" ಎಂದು ವಿಭೀಷಣನು ಹನುಮಂತನನ್ನು ಕೊಂಡಾಡಿದನು. ೨೫. "ಹನುಮಂತನು ಇಲ್ಲಿದ್ದಾನೆ, ಸ್ವಾಮಿ. ಹನುಮಂತನನ್ನು ನೀವು ವಿಶೇಷವಾಗಿ ಹೊಗಳಿದಿರಿ. ಶ್ರೀರಾಮನ ಏಳಿಗೆಯೇನೋ ಅದನ್ನು ಈತನಿಗೆ ಬೇಗ ಅಪ್ಪಣೆಮಾಡಿ" ಎಂದ ವಿಭೀಷಣ. ಆಗ "ಹನುಮಂತ, ಬಂದೆಯಾಪ್ಪ. ರಘುನಂದನನ ಭಾಗ್ಯದ ಗಣಿಯೆ ಬಂದೆಯಾ, ಕಪಿಕುಲಸಾಗರದ ಚಂದ್ರನೇ ಬಂದೆಯಾ" ಎಂದು ಜಾಂಬವ ಹನುಮಂತನನ್ನು ಕರೆದ. ೨೬. ತನ್ನ ಪಾದಗಳಿಗೆರಗಿದ ಹನುಮಂತನ ಮೈಯನ್ನು ತನ್ನ ಶ್ರೀಹಸ್ತಗಳಿಂದ ಸವರಿ ಆನಂದಪರವಶನಾಗಿ ಜಾಂಬವಂತನು ಹನುಮಂತನನ್ನು ಅಪ್ಪಿಕೊಂಡನು. "ದೇವತೆಗಳ ಭಾಗ್ಯ ಸುಂದರವಾಗಿದೆ, ಭೂಮಿಯ ಆನಂದ ಚೆನ್ನಾಗಿದೆ, ಲಂಕೆಯ ಸಂಪತ್ತು ವಿಭೀಷಣನಿಗೆ ಇನ್ನು ನಿಶ್ಚಯವಾದಂತೆಯೇ" ಎಂದ ಜಾಂಬವಂತ. ೨೭. "ನೀವು ಬನ್ನಿರಪ್ಪ. ರವಿಕುಲೋದ್ಭವನನ್ನು ಹುಡುಕಿ ನೋಡಿ. ನನ್ನನ್ನು ಅವನ ಬಳಿಗೆ ಬೇಗ ಕರೆದುಕೊಂಡು ಹೋಗಿ ಇಳಿಸಿ" ಎಂದ ಜಾಂಬವಂತ. ಬಳಿಕ ಬೆಳುದಿಂಗಳಿಲ್ಲದ ಇರುಳಿನಲ್ಲಿ ಬಲಶಾಲಿಗಳಾದ ವಿಭೀಷಣ ಹನುಮಂತರು ಶೀಘ್ರವಾಗಿ ಹುಡುಕುತ್ತ ಬಂದು ಜಾನಕಿಯ ಪತಿಯನ್ನು ಯುದ್ಧರಂಗದ

ಧುರದ ಮುಂಡಿಯ ಮುಂಡಲಾಗ್ರದ । ಶರಧಿಕಕ್ಷದ ಬೆಂಗಡೆಯ ತೆಗೆ
ಸರಳಿನಾಕರ್ಣಾಂತ ಮುಷ್ಟಿಯ ಮುಗಿಯದಕ್ಷಿಗಳ
ಮುರಿದ ಹಲುಗಳಲೌಕಿದಮಳಾ । ಧರದ ಗಜಿಂದೋಜಿಂಕೆಯ ಸರಳಿನ
ನರಶರೀರದ ನಿರ್ವಿಕಾರನ ಕಂಡರಿದಿರಿನಲಿ ೨೮

ದೇವದೇವನ ಸಕಲದೇವರ । ದೇವ ಚಕ್ರೇಶ್ವರನ ನಾನಾ
ಜೀವನಾಟಕ ಸೂತ್ರಧಾರ ಚರಾಚರಾತ್ಮಕನ
ಪಾವಕಾನಿಲ ಪೃಥ್ವಿಪುಷ್ಕರ । ಜೀವನಾಖಿಲ ತತ್ವಮಯ ಮಾ
ಯಾವಿನೋದನ ಕಂಡು ವೈಯಿಕ್ಕಿದರು ಭಕ್ತಿಯಲಿ ೨೯

ಜನನ ಮರಣವಿಹೀನನನು ಮುನಿ । ಜನಮನೋಗಮ್ಯನನು ಕಮಲಾ
ಸನ ಸುರೇಂದ್ರಶರಣ್ಯನನು ಸರ್ವೇಶ್ವರೇಶ್ವರನ
ಅನಘನವ್ಯಯನನು ನಿರೀಕ್ಷಿಸಿ । ತನುಪುಳಕದುಬ್ಬುಗಳ ರೋಮಾಂ
ಚನದ ಬಿಗುಹಿನಲೆಜಿಗಿ ಜಯಜಯಯೆಂದರಿದಿರಿನಲಿ ೩೦

ಕರಸರೋಜವನುತ್ತಮಾಂಗದೊ । ಳಿರಿಸಿ ವಿನಮಿತರಾಗಿ ಬಲ ಬಂ
ದುರು ಪರಾಕ್ರಮಭಟರು ಬಳಿಕೈದಿದರು ಜಾಂಬವರ
ಇರವ ಬಿನ್ನಹಮಾಡಿ ಕೊಂಡೊ । ಯ್ದರು ಸರಾಗದಲಾ ಚರಾಚರ
ಭರಿತ ಬಹಳ ಬ್ರಹ್ಮದೆಡೆಗೆಲೆ ಕಂದ ಕೇಳೆಂದ ೩೧

ನಡುವೆ ಕಂಡರು. ೨೮. ನಡುಗುವ ಮುಂಡಿಯ, ಅಡಾಯುಧದ, ಕಂಕುಳಿಗೆ ಕಟ್ಟಿದ ಬತ್ತಳಿಕೆಯ, ಬೆನ್ನ ಕಡೆಯಿಂದ ಎಳೆದ ಬಾಣದ, ಕಿವಿಯವರೆಗೆ ಬಿಲ್ಲಿನ ಹಗ್ಗವನ್ನು ಎಳೆದು ಹಿಡಿದ ಮುಷ್ಟಿಯ, ಬಿಟ್ಟ ಕಣ್ಣುಗಳ, ಹಲ್ಲು ಮತ್ತು ತುಟಿ ಕಚ್ಚಿದ, ದೇಹಕ್ಕೆ ಬಾಣ ನಾಟಿ ಗರಿ ಮಾತ್ರ ಮೇಲೆ ಕಾಣುವ ಮಾನವಶರೀರದ ನಿರ್ವಿಕಾರಸ್ವರೂಪಿ ರಾಮನನ್ನು ಎದುರಿನಲ್ಲಿ ಕಂಡರು. ೨೯. ದೇವದೇವನೂ ಸಮಸ್ತ ದೇವತೆಗಳ ಒಡೆಯನೂ ಆಗಿ, ಚಕ್ರವರ್ತಿ ಮತ್ತು ನಾನಾ ಜೀವಿಗಳ ಜೀವನನಾಟಕದ ಸೂತ್ರಧಾರ ನೆನ್ನಿಸಿಕೊಂಡು ಚರ ಅಚರಗಳು ತಾನೇ ಆದ, ಅಗ್ನಿ ವಾಯು ಪೃಥ್ವಿ ಆಕಾಶಗಳಿಗೆ ಆಧಾರನಾದ, ತತ್ವಮಯನಾಗಿ ಮಾಯೆಯಲ್ಲಿ ವಿನೋದಗೊಳ್ಳುವ ರಾಮನನ್ನು ಕಂಡು ವಿಭೀಷಣ ಆಂಜನೇಯರು ನಮಸ್ಕರಿಸಿದರು. ೩೦. ಹುಟ್ಟು ಸಾವುಗಳಿಲ್ಲದ, ಮುನಿ ಜನರ ಮನಸ್ಸಿಗೆ ವೇದ್ಯವಾಗುವ, ಬ್ರಹ್ಮ ದೇವೇಂದ್ರರ ರಕ್ಷಕನಾದ ವಿಶ್ವದ ಏಕೈಕ ಪ್ರಭುವನ್ನು, ಪಾಪರಹಿತನೂ ನಾಶರಹಿತನೂ ಆದವನನ್ನು ನೋಡಿ ಆನಂದ ದಿಂದ ಉಬ್ಬಿ ರೋಮಾಂಚಗೊಂಡು ನಮಸ್ಕರಿಸಿ ಜಯ ಜಯ ಎಂದು ಸ್ತುತಿಸಿದರು. ೩೧. ಕೈಗಳನ್ನು ತಲೆಯ ಮೇಲಿಟ್ಟುಕೊಂಡು ನಮಸ್ಕರಿಸಿ ಪ್ರದಕ್ಷಿಣೆ ಮಾಡಿ ಮಹಾ ವೀರರಾದ ವಿಭೀಷಣ ಆಂಜನೇಯರು ಜಾಂಬವರ ಬಳಿಗೆ ಬಂದರು. ಅವರಿಗೆ ರಾಮ ಲಕ್ಷ್ಮಣರ ಸ್ಥಿತಿಯನ್ನು ವರದಿ ಮಾಡಿ ಚರಚರಾತ್ಮಕ ಪರಾಮಾತ್ಮನ ಬಳಿಗೆ ಜಾಂಬವ ರನ್ನು ಕರೆದುಕೊಂಡು ಬಂದರು.-ಕೇಳು ಮಗು ಕಥೆಯನ್ನು ಎಂದು ವಾಲ್ಮೀಕಿಗಳು

ಕಾಣಿಸಿದರೊಳ್ಳಿತು ಮದೀಯ ಸು । ಷೇಣನನು ನೀವೆಂಬ ಜಾಂಬವ
ನಾಣತಿಗೆ ತಂದಿಳುಹಿದರು ಮುಂದಾ ಸುಷೇಣಕನ
ಮಾಣಲದಕೇನಿನ್ನು ಭುವನ । ಪ್ರಾಣಸುತ ಬಾ ಸುಭಟರೊಳು ಕ
ಟ್ಟಾಣಿ ಬಾರೈ ತಂದೆ ಬಾಯೆನ್ನಾನೆ ಬಾಯೆಂದ ೩೨

ಮನದೊಳಿಂತೆನುತಿರ್ದನಾ ಹನು । ಮನು ಭವ ಬ್ರಹ್ಮಾಮರೇಂದ್ರರ
ಇನಕುಲೇಂದ್ರನ ಬಳಿಗೆ ತರಹೇಳಲಿ ಯಮಾದಿಗಳ
ತನುಗತಪ್ರಾಣಂಗಳನು ತರ । ಲಿನಲಿ ತಹೆನೀ ಘಳಿಗೆಯಲಿ ತಾ
ನೆನುತ ತುದಿಗಾಲುಗಳಲಿರ್ದನು ವೀರ ಹನುಮಂತ ೩೩

ಆತ ಬಳಿಕೇನುವನು ಹೇಳದೆ । ಮಾತನಾಡಿದನೊಂದ ಬಾರೈ
ವಾತಸುತ ಕಂಡೈ ರಘುಪ್ರಭವಾದಿ ಭಟರುಗಳ
ತಾತ ನೀನೀ ಜಗಕೆ ಬೊಮ್ಮನ । ತಾತ ಮುಖ್ಯ ಸಮಸ್ತ ಸೇನಾ
ವ್ರಾತದಸು ತಾ ನಿನ್ನ ವಶವದು ಕೇಳಿದೈಯೆಂದ ೩೪

ಈ ಸುಷೇಣನು ಹಿಂದೆ ಪನ್ನಗ । ಪಾಶದಲಿ ರಾಘವನ ರಣದಲಿ
ವಾಸವಾಂತಕ ಬಿಗಿದ ದಿನ ಮರುಜೀವಣಿಗಳೆಂಬ
ಔಷಧವ ಹೇಳಿದನು ತಾ ಹೋ । ಗೀ ಸಮಯದಲಿ ತತ್ತ ಕೆಲಸವಿ
ದೈಸಲೇಯೆಂದೆನ್ನದೀಕ್ಷಣ ತೆರಳು ನೀನೆಂದ ೩೫

ಕುಶಲವರಿಗೆ ಹೇಳಿದರು. ೩೨. ನಮ್ಮ ಸುಷೇಣನನ್ನು ನೀವು ತೋರಿಸಿದರೆ ಒಳ್ಳೆಯದು ಎಂದ ಜಾಂಬವರ ಅಪ್ಪಣೆಗೆ ವಿಭೀಷಣ ಆಂಜನೇಯರು ಜಾಂಬವನನ್ನು ಸುಷೇಣನ ಬಳಿಗೆ ಕರೆತಂದರು. "ಅದಕ್ಕೇನಿನ್ನು ಬಿಡು. ವಾಯುಪುತ್ರ ಬಾ, ಮಹಾಬಲಶಾಲಿಗಳ ಕಟ್ಟಾಣಿ ಬಾರಯ್ಯ, ಬಾಪ್ಪ ನನ್ನ ಆನೆಯೇ" ಎಂದು ಜಾಂಬವನು ಹನುಮಂತನನ್ನು ಕರೆದನು. ೩೩. ಈಶ್ವರ ಬ್ರಹ್ಮ ದೇವೇಂದ್ರರುಗಳನ್ನು ರಾಮನ ಬಳಿಗೆ ತರಹೇಳಲಿ, ಯಮಾದಿಗಳ ಪ್ರಾಣಗಳನ್ನು ತರಲು ಹೇಳಲಿ. ಈ ಗಳಿಗೆಯಲ್ಲಿ ತರುವೆನು ಎಂದು ಮನಸ್ಸಿನಲ್ಲಿ ಯೋಚಿಸುತ್ತ ವೀರ ಹನುಮಂತನು ತುದಿಗಾಲುಗಳ ಮೇಲೆ ನಿಂತನು. ೩೪. ಜಾಂಬವಂತ ಮತ್ತೇನನ್ನೂ ಹೇಳದೆ "ವಾಯುಪುತ್ರ, ರಘುವೀರನೇ ಮೊದಲಾದ ವೀರರುಗಳನ್ನು ನೀನು ನೋಡಿದೆಯಾಪ್ಪ. ಈ ಜಗತ್ತಿನ ಬ್ರಹ್ಮನ ತಂದೆಯೇ ಮೊದಲಾದ ಸಮಸ್ತ ಸೈನ್ಯದ ಪ್ರಾಣ ನಿನ್ನ ಕೈಯಲ್ಲಿದೆ, ಕೇಳಿದೆಯಾ ?" ಎಂಬುದಾಗಿ ಒಂದು ಮಾತನ್ನು ಹೇಳಿದನು. ೩೫. "ಹಿಂದೆ ಇಂದ್ರಜಿತು ನಾಗಪಾಶದಿಂದ ಯುದ್ಧದಲ್ಲಿ ರಾಮನನ್ನು ಕಟ್ಟಿಹಾಕಿದಾಗ ಈ ಸುಷೇಣನು ಮರುಜೀವಣಿ (ಸಂಜೀವಿನಿ) ಎಂಬ ಔಷಧವನ್ನು ಹೇಳಿದ್ದ. ಈ ಸಮಯದಲ್ಲಿ ನೀನು ಹೋಗು. ಈ ಕೆಲಸ

ದಾರಿ ನಿನಗುತ್ತರದ ನಾನಾ । ಧಾರುಣಿಯನುಱಿ ದಾಂಟಿ ಹಿಮವ
ತ್ಪಾರಿಯಾತ್ರಕ ನೀಲ ನಿಷಧ ಮಹೇಂದ್ರಪರ್ವತದ
ಮೇರುದುದಿಯಲಿ ನಿಂದಡತ್ತಲು । ಗೌರಿಯರಸನ ಗಿರಿಯನೀಕ್ಷಿಸು
ಸಾರು ಬಳಿಕೀಶಾನ್ಯಮುಖವನು ಕಂದ ಕೇಳೆಂದ ೩೬

ಕಾಣಬರುತಿಹವಲ್ಲಿ ಚಂದ್ರ । ದ್ರೋಣ ಮೊದಲಾದೈದು ಗಿರಿ
ಗೀರ್ವಾಣಬಲ ಕಾದಿಹುದು ಕದನವನೆಸಗದವರೊಡನೆ
ಕಾಣಿಸಿದ ನಾಲ್ಕೌಷಧಿಗಳನು । ಜಾಣತನದಲಿ ಕಿತ್ತು ರಿಪುಗಳು
ಕಾಣದವೊಲೈತಹುದು ಹೋಗೆನ್ನಯ್ಯ ಹೋಗೆಂದ ೩೭

ಉದಯುವೆರಡೇ ಘಳಿಗೆಯಿದೆ ನೀ । ನಿದಱೊಳಗೆ ಬರಬೇಡ ಪಶ್ಚಿಮ
ದುದಧಿಗಿನ ಸಾರಿದರೆ ಸಾರುವುದಿರುಳು ನಮ್ಮಾವನು
ಪದುಳದಿಂ ತಹುದೆನಲು ಪದಕೆಱ । ಗಿದ ಕಪೀಂದ್ರನ ಹರಸಿ ಹರುಷದ
ಹೊದಱ ಹೊಂಗಿನಲೊಲಿದು ಕಳುಹಿದನಾ ಸ್ವಯಂಭುಸುತ ೩೮

ಕರವ ಮುಗಿದಾ ಹನುಮ ಹೃತ್ಸರ । ಸಿರುಹದನಿಲಗೆ ನಮಿಸಿ ರಾಮನ
ಚರಣಕಾನತನಾಗಿ ಬೀಳ್ಕೊಂಡನು ವಿಭೀಷಣನ
ಇರವು ವಾಯುಸ್ಕಂದದಲಿ ಗೋ । ಚರಿಸಿತೆಲೆ ಕುಶ ಕೇಳು ಹನುಮನು
ಪರಮಪುರುಷನ ಜೀವಮಾರುತನೆಂದು ಬಗೆಯೆಂದ ೩೯

ವೊದಗಿತಲ್ಲ ಎನ್ನದೆ ಈ ಕ್ಷಣ ನೀನು ಹೊರಡು" ಎಂದ ಜಾಂಬವಂತ. ೩೬. "ಉತ್ತರದಿಕ್ಕಿನ ದಾರಿಯನ್ನು ಹಿಡಿದು ಅನೇಕ ದೇಶಗಳನ್ನು ದಾಟಿ ಹಿಮವತ್ಪರ್ವತ, ಪಾರಿಯಾತ್ರಕ, ನೀಲ, ನಿಷಧ, ಮಹೇಂದ್ರಪರ್ವತಗಳನ್ನು ಕಳೆದು ಹೋಗು. ಅನಂತರ ಮೇರುಪರ್ವತದ ತುದಿಯಲ್ಲಿ ನಿಂತುಕೊಂಡರೆ ಶಿವನ ಕೈಲಾಸಪರ್ವತ ಕಾಣಿಸುತ್ತದೆ. ಬಳಿಕ ಈಶಾನ್ಯದಿಕ್ಕಿಗೆ ಹೋಗು" ಎಂದ ಜಾಂಬವಂತ. ೩೭. "ಅಲ್ಲಿ ಚಂದ್ರದ್ರೋಣ ಮೊದಲಾದ ಐದು ಪರ್ವತಗಳು ಕಾಣಬರುತ್ತವೆ. ದೇವತೆಗಳ ಸೈನ್ಯವು ಅಲ್ಲಿ ಕಾವಲಿರುತ್ತದೆ. ಅವರೊಡನೆ ಯುದ್ಧದಲ್ಲಿ ತೊಡಗದೆ ಅಲ್ಲಿ ಕಾಣಿಸುವ ನಾಲ್ಕು ಔಷಧಿಗಳನ್ನು ಜಾಣತನದಿಂದ ಕಿತ್ತು, ತೆಗೆದುಕೊಂಡು ಶತ್ರುಗಳಿಗೆ ಕಾಣದ ಹಾಗೆ ಬಾ, ಹೋಗು ನನ್ನಪ್ಪ" ಎಂದ ಜಾಂಬವ. ೩೮. "ಸೂರ್ಯೋದಯಕ್ಕೆ ಇನ್ನು ಎರಡೇ ಗಳಿಗೆ ಇರುವುದು. ಅಷ್ಟರಲ್ಲಿ ನೀನು ಬರಬೇಡ, ಪಶ್ಚಿಮ ಸಮುದ್ರಕ್ಕೆ ಸೂರ್ಯನು ಇಳಿದರೆ ನಮಗೆ ರಾತ್ರಿಯುಂಟಾಗುತ್ತದೆ. ಆಗ ಯಾವ ತೊಂದರೆಯೂ ಇಲ್ಲದೆ ಔಷಧಿಯನ್ನು ತೆಗೆದುಕೊಂಡು ಬಾ" ಎಂದು ಜಾಂಬವಂತನು ಹೇಳಲು ಪಾದಗಳಿಗೆ ನಮಸ್ಕರಿಸಿದ ಹನುಮಂತನನ್ನು ಹರಸಿ ಆತ್ಮಾನಂದದಿಂದ ಉಬ್ಬಿ ಕಳುಹಿಸಿಕೊಟ್ಟನು. ೩೯. ಹನುಮಂತನು ತನ್ನ ಹೃದಯಕಮಲದಲ್ಲಿ ವಾಯುವಿಗೆ ಕೈಮುಗಿದು ನಮಸ್ಕರಿಸಿ, ರಾಮನ ಪಾದಗಳಿಗೆರಗಿ, ವಿಭೀಷಣನನ್ನು ಬೀಳ್ಕೊಂಡು ಹೊರಟನು. ಹನುಮಂತನು ವಾಯುವೇಗದಿಂದ ನೆಗೆಯಲು ಆಗಲೇ ಆಕಾಶದಲ್ಲಿ

ಕಂಡನೈ ಬಳಿಕಾತನೀ ಭೂ । ಮಂಡಲದ ವಿಸ್ತಾರವನು ಮಾ
ರ್ತಂಡಪಥದಲಿ ಶೈಲ ಸಪ್ತದ್ವೀಪ ಶರಧಿಗಳ
ಖಂಡಿತೋರ್ವೀಭೇದಗಳನಾ । ಖಂಡಲಕ್ಷ್ಮಾಧರದ ರತುನದ
ಮಂಡೆಯಲಿ ಕಾಲೂಱಿ ಬಳಿಕೀಕ್ಷಿಸಿದನುತ್ತರವ ೪೦

ಉದಯಕಾಲಕೆ ಚಂದ್ರಶೈಲದ । ತುದಿಯ ಸಾರ್ದನು ಕೇಳಿದೈ ದಶ
ವದನ ಬಳಿಕಿತ್ತಲು ಕುಬೇರವಿಮಾನವನು ಧರಿಸಿ
ಕದನಭೂಮಿಗೆ ಬಂದನೈ ಹುಸಿ । ಯದಲೆ ರಣವಂದಿನವೊಲೆಂದು
ನ್ಮದಿತ ಮಾನಸ ನೋಡಿದನು ಸಂಗ್ರಾಮಮಂಡಲವ ೪೧

ಮೊಱೆವುತಿರ್ದವು ರಣಸಮುದ್ರದ । ತೆರೆಯ ಬಲುರವದಂತೆ ನೆಣನು
ಬ್ಬರದ ನೆತ್ತರಿನಸ್ಥಿಮಾಂಸದ ಮಿದುಳದೊಂಡೆಗಳ
ಶಿರದ ಮುಂಡದ ಕಾಲು ಕೈ ನಡು । ಹಱಿದ ಕಪಿಗಳ ಖಳಕದಂಬದ
ಸರಿಬೆರಕೆಯಲಿ ಸಪ್ತ ತಾಳೋತ್ಸೇಧದುದ್ದದಲಿ ೪೨

ಕಾಲನಿಕ್ಕಿದ ಕಡಿತವೋ ಲಯ । ಶೂಲಿ ಸುಳಿದಿಳೆಯೋ ನೃಸಿಂಹನ
ಕಾಲುದುಳಿಯ ರಣಾಂಗಣವೊ ಮೃತ್ಯುವಿನ ಬಾಣಸದ
ಶಾಲೆಯೋ ಸಮರಾಂಗಣವೊಯೆನೆ । ಕಾಳರಕ್ಕಸರಾಯನಕ್ಷಿಗ
ಳೋಳಿಗತಿಶಯ ರಸವ ಬೀಱಿದುದಣುಗ ಕೇಳೆಂದ ೪೩

ಕಾಣಿಸಿದನು. ಕುಶನೇ ಕೇಳು, ಹನುಮಂತನು ಪರಮಪುರುಷ ರಾಮನ ಜೀವದುಸಿರು ಎಂದು ತಿಳಿ ಎಂದರು ವಾಲ್ಮೀಕಿಮುನಿಗಳು. ೪೦. ಬಳಿಕ ಹನುಮಂತನು ಸೂರ್ಯಪಥದಿಂದ ಭೂಮಂಡಲದ ವಿಸ್ತಾರವನ್ನೂ ಸಪ್ತದ್ವೀಪ ಪರ್ವತ ಸಾಗರಗಳು ಬೇರ್ಪಡಿಸಿದ ಭೂಭೇದಗಳನ್ನೂ ಕಂಡನು. ಮೇರುಪರ್ವತದ ರತ್ನಶಿಖರದಲ್ಲಿ ನಿಂತು ಉತ್ತರದಿಕ್ಕನ್ನು ನೋಡಿದನು. ೪೧. ಹನುಮಂತನು ಸೂರ್ಯೋದಯದ ಸಮಯಕ್ಕೆ ಚಂದ್ರದ್ರೋಣಪರ್ವತದ ಶಿಖರವನ್ನು ಸೇರಿದನು. ಇತ್ತ ದಶಮುಖನು ಕುಬೇರನ ವಿಮಾನದಲ್ಲಿ ಕುಳಿತು ಯುದ್ಧಭೂಮಿಗೆ ಬಂದನು. ಅಂದಿನ ಯುದ್ಧವು ಸುಳ್ಳಾಗಲಿಲ್ಲವೆಂದು ಗರ್ವದಿಂದ ಯುದ್ಧರಂಗವನ್ನು ಈಕ್ಷಿಸಿದನು. ೪೨. ಕೊಬ್ಬು, ಉಕ್ಕುವ ರಕ್ತ, ಮಜ್ಜೆ, ಮಾಂಸ, ಮಿದುಳ ಮುದ್ದೆಗಳಿಂದ ಕೂಡಿ ತಲೆ, ಮುಂಡ, ಕಾಲು, ಕೈ, ಸೊಂಟಗಳು ಮುರಿದು ಸರಿಸಮವಾಗಿ ಬೆರೆತಿದ್ದ ಕಪಿಗಳ ಮತ್ತು ರಾಕ್ಷಸರ ಸಮೂಹವು ಏಳು ತಾಳೆಮರಗಳಷ್ಟು ಎತ್ತರಕ್ಕೆ ರಾಶಿಬಿದ್ದಿದ್ದ ಕದನಕಣವು ರಣಸಮುದ್ರದ ಅಲೆಗಳ ಭೋರ್ಗರೆತದಂತೆ ಮೊರೆಯುತ್ತಿತ್ತು. ೪೩. 'ಯಮನು ಕಡಿದುಹಾಕಿದ ರಾಶಿಯೋ, ಪ್ರಳಯಶಿವನು ಸಂಚರಿಸಿದ ನೆಲವೋ, ನರಸಿಂಹನ ಕಾಲ್ತುಳಿತಕ್ಕೆ ಸಿಕ್ಕಿದ ಯುದ್ಧ ಕಣವೋ, ಮೃತ್ಯುವಿನ ಅಡುಗೆಮನೆಯೋ ! ಯುದ್ಧರಂಗವೋ ಇದು !' ಎನ್ನುವಂತೆ

ಮುಟ್ಟಿ ನಿಲುವವರಾರು ಮಗ ಮನ । ಮುಟ್ಟಿ ಕಾದಲು ಮಗನೆ ಸರಿಯುಹ
ಘಟ್ಟಿವಾಳರದಾರು ಸುರ ನರ ನಾಗಲೋಕದಲಿ
ತುಟ್ಟಿಸಿದ ರಣವಧುವಿಗೋಲೆಯು । ನಿಟ್ಟನೇ ಮಗ ರಾಗರಸವನು
ಹುಟ್ಟಿಸಿದನೆಂದುಬ್ಬಿ ಕೊಂಡಾಡಿದನು ನಂದನನ ೪೪

ತಿರುಗಿಬರೆ ನೋಡಿದನು ನಿಜ ಸಚಿ । ವರಿಗೆ ತೋಱಿಸುತಾ ಮಹಾಸಂ
ಗರಮಹೀರಂಗವನು ಪೊಗಳುತಲಾ ವಿಮಾನದಲಿ
ತರತರದ ಹೆಣವೆಟ್ಟಗಳ ನಿ । ರ್ಭರದ ನಿಡುರಕುತಗಳ ಕಡು ಭೀ
ಕರದಿ ರಣ ರಂಜಿಸಿತು ಕಂಗಳಿಗಾ ದಶಾನನನ ೪೫

ಪಿಡಿದು ಪಕ್ಕಲೆಗಳಲಿ ರಕುತವ । ನಡಕುತಿರ್ದರು ಜಟ್ಟಿಗರು ಕಡಿ
ಕಡಿದು ಕುನಿಕಿಲಲೊಟ್ಟುತಿರ್ದವು ರಣಪಿಶಾಚಿಗಳು
ಮಡಕೆಗಳಲೆಳಿಗರುಳ ತಾಳಿಸಿ । ಪಿಡಿದು ಬೋನವ ಮಿದುಳದಂಡೆಯ
ಮುಡಿದು ನೆರೆದರ್ಚಿಸುತಲಿರ್ದರು ರಣವನಸುರೆಯರು ೪೬

ಹೆಣಗಳನು ಬಾಯ್ಗಡಸಿ ಕೈಪರೆ । ಯಣೆಯುರದಲೊಲೆದೊಲೆದು ರಾಗಿಸಿ
ಕುಣಿವುತಿರ್ದವು ಮರುಳುಗಳು ಮದಿರಾ ವಿಕಾರದಲಿ
ಕ್ಷಣಿಸಿಕೊಂಡಕ್ಷತೆಯ ಗಂಧವ । ಹಣೆಗೆ ಹತ್ತಿಸಿ ಹಂತಿಯಾರೋ
ಗಣೆಯಲೆಸೆದರು ಬೊಮ್ಮರಕ್ಕಸರೊಂದು ತಾಣದಲಿ ೪೭

ರಾಕ್ಷಸೇಶ್ವರನ ಕಣ್ಣುಗಳಿಗೆ ಅದ್ಭುತ ದೃಶ್ಯವಾಗಿ ಕಂಡಿತು ಯುದ್ಧರಂಗ. ೪೪. 'ನನ್ನ ಮಗನು ಮನಸ್ಸಿಟ್ಟು ಯುದ್ಧಮಾಡಿದರೆ ಅವನನ್ನು ಎದುರಿಸಿ ನಿಲ್ಲುವವರಾರು ? ನನ್ನ ಮಗನಿಗೆ ಸರಿಸಮಾನರಾದ ಬಲಶಾಲಿಗಳು ದೇವ ಮಾನವ ನಾಗಲೋಕಗಳಲ್ಲಿ ಯಾರಿದ್ದಾರೆ ? ಶಕ್ತಿಗುಂದಿದ ಯುದ್ಧಲಕ್ಷ್ಮಿಗೆ ಓಲೆಯನ್ನು ತೊಡಿಸಿದನಲ್ಲವೇ ನನ್ನ ಮಗ. ನನಗೆ ಸಂತೋಷವನ್ನುಂಟುಮಾಡಿದನು" ಎಂದು ಹಿಗ್ಗಿನಿಂದ ರಾವಣನು ಮಗನನ್ನು ಕೊಂಡಾಡಿದನು. ೪೫. ತನ್ನ ಮಂತ್ರಿಗಳಿಗೆ ತೋರಿಸುತ್ತ ಯುದ್ಧರಂಗವನ್ನು ಹೊಗಳುತ್ತ ರಾವಣನು ವಿಮಾನದಲ್ಲಿ ಸಂಚರಿಸಿ ಬಂದನು. ವಿವಿಧ ರೀತಿಯ ಹೆಣದ ಬೆಟ್ಟಗಳಿಂದಲೂ ಉಕ್ಕಿಹರಿಯುವ ರಕ್ತಪ್ರವಾಹಗಳಿಂದಲೂ ರಣರಂಗವು ರಾವಣನ ಕಣ್ಣುಗಳಿಗೆ ಬಹು ಭಯಂಕರವಾಗಿ ಕಾಣಿಸಿತು. ೪೬. ಗಟ್ಟಿಮುಟ್ಟಾದ ದೆವ್ವಗಳು ಕೊಪ್ಪರಿಗೆಗಳಲ್ಲಿ ರಕ್ತವನ್ನು ತುಂಬಿ ಒಂದರ ಮೇಲೊಂದನ್ನು ಪೇರಿಸುತ್ತಿದ್ದವು. ಯುದ್ಧಪಿಶಾಚಿಗಳು ಮಾಂಸವನ್ನು ಕತ್ತರಿಸಿ ಕತ್ತರಿಸಿ ಚೀಲಗಳಲ್ಲಿ ತುಂಬಿ ರಾಶಿಹಾಕುತ್ತಿದ್ದವು. ಮಿದುಳು ದಂಡೆಗಳನ್ನು ಮುಡಿದ ರಾಕ್ಷಸಿಯರು ಎಳೆಕರುಳುಗಳನ್ನು ಮಡಕೆಗಳಲ್ಲಿ ಬೇಯಿಸಿ ನೈವೇದ್ಯಕ್ಕಿಟ್ಟು ಯುದ್ಧವನ್ನು ಪೂಜಿಸುತ್ತಿದ್ದರು. ೪೭. ಹೆಣಗಳನ್ನು ಬಾಯ್ಗೆ ತುರುಕಿಕೊಂಡು ಸಡಗರದಿಂದ ಚಪ್ಪಾಳೆ ಹೊಡೆಯುತ್ತ ಭೂತಗಳು ಮದ್ಯದ ಅಮಲೇರಿದಂತೆ ಆನಂದದಿಂದ ಕುಣಿಯುತ್ತಿದ್ದವು. ಕರೆಯಿಸಿಕೊಂಡು ಬಂದು ಅಕ್ಷತೆ ಗಂಧಗಳನ್ನು ಹಣೆಗೆ ಹತ್ತಿಸಿಕೊಂಡು ಸಾಲಾಗಿ ಊಟಕ್ಕೆ ಕುಳಿತ ಬ್ರಹ್ಮರಾಕ್ಷಸರು ಒಂದು ಕಡೆಯಲ್ಲಿ

ತೊಗಲಹಂದರವಿಕ್ಕಿ ತಲೆಯಲಿ । ಜಗತಿಗಳ ವಿಸ್ತರಿಸಿ ನಿಡುಗರು
ಳುಗಳ ತೋರಣಗಟ್ಟಿ ರಣವಾದ್ಯಗಳ ನಿನಾದದಲಿ
ಹೊಗಳಿಕೆಯ ತೆಲ್ಲಟೆಗಳಲಿ ಬೀ । ಯಗರು ತಮ್ಮೊಳಗಾಗಿ ಕೊಡಗೂ
ಸುಗಳ ಮದುವೆಯ ಮಾಡುತಿರ್ದರದೊಂದು ತಾಣದಲಿ ೪೮

ಹೆಣನ ಜೊಂಪದ ನಿಟ್ಟೆಲುವಿನು । ಬ್ಬಣದ ತೊಂಗಲುಗರುಳ ದಂಡೆಯು
ಹಣೆಯ ಬಾಸಿಗದುಡಿದ ಮಕುಟದ ಹರಿಗೆ ಹಲಗೆಗಳ
ಕುಣಿಹಗಳ ಕುಬುಬಿಲಿತಗಳ ಸಂ । ದಣಿಯ ರಣಭೇತಾಳ ಭೈರವ
ಗಣವು ರಚನೆಯಲಾಡುತಿರ್ದುದದೊಂದು ತಾಣದಲಿ ೪೯

ತೇರ ತುಂಬಿನೊಳುಡಿದ ಮುತ್ತಿನ । ಹಾರಗಳ ಹರಿದಿಕ್ಕಿ ಬಿದ್ದಿಹ
ವಾರಣದ ದಂತಂಗಳೊನಕೆಯಲೆಳೆಯ ರಕ್ಕಸರ
ನಾರಿಯರು ಸರವೆತ್ತಿ ಸುವ್ವಿ ಸು । ರಾರಿ ರಾವಣಿ ಸುವ್ವಿ ಜಯವಿ
ಸ್ಫಾರಿ ಸುವ್ವಿಯೆನುತ್ತ ಪಾಡಿದರೊಂದು ತಾಣದಲಿ ೫೦

ಆಲಿಗಳನುಗಿದುಗಿದು ಕುಟುಕನು । ತಾಳಿಗೆಗೆ ನೂಕಿದವು ಬಲಿಭು
ಗ್ಜಾಲವೆಳೆದವು ನರಗಳನು ನರಿಗಳು ನಿಶಾಚರರ
ತೋಳು ತೊಡೆ ನಡುಗಳನು ವೃಕ ಶಾ । ರ್ದೂಲಗಳು ಮುರಿದಾಡುತಿರ್ದವು
ಕಾಳಗದ ಕಡೆನೆಲನ ಸೀಮಾಸನ್ನಿವೇಶದಲಿ ೫೧

ದ್ದರು. ೪೮. ಅದೊಂದು ಕಡೆಯಲ್ಲಿ ಚರ್ಮದ ಚಪ್ಪರ ಹಾಕಿ, ತಲೆಗಳನ್ನು ಜೋಡಿಸಿ ಜಗಲಿಯನ್ನು ಮಾಡಿ, ಉದ್ದವಾದ ಕರುಳುಗಳ ತೋರಣ ಕಟ್ಟಿ, ರಣವಾದ್ಯಗಳು ಭೋರ್ಗರೆಯುತ್ತಿರಲು ಹೊಗಳುತ್ತ ಉಡುಗೊರೆಗಳೊಡನೆ ಬೀಗರು ತಮ್ಮತಮ್ಮಲ್ಲಿ ಕೊಟ್ಟು ತೆಗೆದುಕೊಂಡು ಕನ್ಯೆಯರ ಮದುವೆಯನ್ನು ಮಾಡುತ್ತಿದ್ದರು. ೪೯. ಹೆಣಗಳ ಪೊದೆಗಳಲ್ಲಿ ಉದ್ದ ಮೂಳೆಗಳನ್ನು ಕತ್ತಿಯಂತೆ ಹಿಡಿದು, ಕರುಳುಗೊಂಚಲುಗಳ ದಂಡೆಯನ್ನು ಮುಡಿದುಕೊಂಡು, ಮುರಿದ ಕೀರಿಟಗಳನ್ನು ಬಾಸಿಗದಂತೆ ತಲೆಗೆ ಧರಿಸಿ ಗುರಾಣಿಗಳನ್ನು ಹಿಡಿದು ಕುಬುಬೆಂದು ಕೇಕೆ ಹಾಕುತ್ತ ಭೇತಾಳಗಳ ಹಾಗೂ ಭೈರವಗಳ ಸಮೂಹವು ಇನ್ನೊಂದು ಕಡೆಯಲ್ಲಿ ಕುಣಿಯುತ್ತಲಿದ್ದಿತು. ೫೦. ಮತ್ತೊಂದು ಕಡೆಯಲ್ಲಿ ರಥಗಳ ಗುಂಬದಿಂದ ಹರಿದ ಮುತ್ತಿನ ಹಾರಗಳನ್ನು ಕಿತ್ತು ರಾಶಿ ಹಾಕಿ ಸತ್ತುಬಿದ್ದ ಆನೆಗಳ ದಂತಗಳನ್ನು ಒನಕೆ ಮಾಡಿಕೊಂಡು ಕುಟ್ಟುತ್ತ ರಾಕ್ಷಸತರುಣಿಯರು "ಸುವ್ವಿ ಇಂದ್ರಜಿತು, ಸುವ್ವಿ ರಾವಣಪುತ್ರ, ಜಯವಿಸ್ಫಾರಿ ಸುವ್ವಿ !" ಎನ್ನುತ್ತ ಎತ್ತರದ ಧ್ವನಿಯಲ್ಲಿ ಹಾಡುತ್ತಿದ್ದರು. ೫೧. ಕಾಗೆಗಳು ಹೆಣಗಳ ಕಣ್ಣುಗುಡ್ಡೆಗಳನ್ನು ಕಿತ್ತು ಕಿತ್ತು ಗಂಟಲಿಗೆ ತುತ್ತನ್ನು ಹಾಕಿದವು, ನರಿಗಳು ನರಗಳನ್ನು ಎಳೆದವು. ರಾಕ್ಷಸರ ತೋಳು. ತೊಡೆ, ನಡುಗಳನ್ನು ಮುರಿದುಕೊಂಡು ತೋಳ ಹುಲಿಗಳು ಯುದ್ಧರಂಗದ ಅಂಚಿನ

ನಗುತ ನೋಡುತ ರಣಕೆ ಮೆಚ್ಚುತ । ಮಗನ ಕೊಂಡಾಡುತ್ತ ಬರೆ ಸಂ
ಯುಗದ ಮಧ್ಯದೊಳಿರ್ದ ರಘುರಾಜೇಂದ್ರಚಂದ್ರಮನ
ಜಗದುದರನ ಜನಾರ್ದನನ ಘನ । ಸಗುಣ ನಿರ್ಗುಣ ನಿರುಪಮನ ಸ
ರ್ವಗನ ವಿಮಲ ಸುದರ್ಶನಪ್ರಭೆ ಬೆದಱಿಸಿತು ಖಳನ ೫೨

ತರಣಿಶತದೀಧಿತಿಯಲಾ ನಿ । ರ್ಮರಣನ ಶ್ರೀಯಂಗರಕ್ಷೆಗೆ
ತಿರುಗಿ ಬರುತಿರ್ದುದು ಕಣಾ ಕಾಲಾಗ್ನಿತೇಜದಲಿ
ಧುರದ ಮಹದುತ್ಪಾತ ಭೀಷಣ । ಕರವಿದೆನುತಸುರೇಂದ್ರ ಭಯದಲಿ
ತಿರುಗಿದನು ಪಟ್ಟಣಕೆ ಪಡುವಣ ಜಲಧಿಗಿನನಿಳಿದ ೫೩

ಎಲೆ ಕುಶನೆ ಕೇಳಿತ್ತ ಹನುಮನ । ಕೆಲಸವನು ಬಳಿಕಿರುಳಮುಖದಲಿ
ಸುಳಿದನೈ ಸಂಜೀವಿನಿಯ ಶೈಲಕೆ ಸರಾಗದಲಿ
ಹೊಳಕಿತಲ್ಲಿಯ ಕಾವಲಿನ ಸುರ । ರಳವಿಯಲಿ ಹುಗಲೀಸದೀತನ
ಕಲಹವನು ಕೈಗಟ್ಟಿ ಕೆಣಕಿದರಾ ಸಮೀರಜನ ೫೪

ಪವನತನುಜನ ಕೆಣಕಿ ಜೀವಿಸಿ । ದವರು ಲೋಕದೊಳುಂಟೆ ಕೇಳೈ
ಲವನೆ ತೋಳನ ತೋಟಿ ಸದರವೆ ತಗರ ಜಂಗುಳಿಗೆ
ದಿವಿಜಪುರಿ ಪರಿಯಂತ ಸದೆಬಡಿ । ದವರುಗಳನೆಬ್ಬಟ್ಟಿ ಮರಳಿದು
ತವಕಿಸಿದನೌಷಧಿಗೆ ಝಡಿತೆಯಲಂಜನಾಸೂನು ೫೫

ಆಚೆಯ ಪ್ರದೇಶದಲ್ಲಿ ಆಟವಾಡುತ್ತಿದ್ದವು. ೫೨. ಯುದ್ಧರಂಗವನ್ನು ನೋಡಿ ನಗುತ್ತ, ಯುದ್ಧವನ್ನು ಮೆಚ್ಚಿಕೊಳ್ಳುತ್ತ, ಮಗನನ್ನು ಕೊಂಡಾಡುತ್ತ ರಾವಣನು ಬರುತ್ತಿದ್ದನು. ಆಗ ರಣರಂಗದ ಮಧ್ಯದಲ್ಲಿ ಜಗತ್ತನ್ನು ಉದರವಾಗುಳ್ಳ, ಜನಾರ್ದನನಾದ, ಸಗುಣ ನಿರ್ಗುಣ ಪರಬ್ರಹ್ಮನಾದ, ಸರ್ವಾಂತರ್ಯಾಮಿಯಾದ ರಘುರಾಮಚಂದ್ರನ ಹೊಳೆಯುವ ಸುದರ್ಶನಚಕ್ರದ ಪ್ರಕಾಶವು ರಾವಣನನ್ನು ಬೆದರಿಸಿತು. ೫೩. ನೂರು ಸೂರ್ಯರ ಪ್ರಕಾಶದಿಂದ ಪ್ರಜ್ವಲಿಸುತ್ತ ಪ್ರಳಯಾಗ್ನಿಯ ಕಾಂತಿಯಿಂದ ಸುದರ್ಶನ ಚಕ್ರವು ಮೃತ್ಯುರಹಿತನ ದೇಹರಕ್ಷಣೆಗಾಗಿ ರಾಮನ ಸುತ್ತ. ಸುತ್ತುತ್ತಿದ್ದಿತು. ಇದು ಯುದ್ಧದ ಭಯಂಕರವಾದ ಭಾರಿ ಅಪಶಕುನವೆನ್ನುತ್ತ ರಾಕ್ಷಸೇಶ್ವರನು ಲಂಕಾಪಟ್ಟಣಕ್ಕೆ ಹಿಂದಿರುಗಿದನು. ಇತ್ತ ಸೂರ್ಯನು ಪಶ್ಚಿಮಾಂಬುಧಿಗೆ ಇಳಿದನು. ೫೪. ಕುಶನೇ, ಇತ್ತ ಹನುಮಂತನು ನಡೆಸಿದ ಕೆಲಸವನ್ನು ಕೇಳು. ಸಂಜೆಯು ಮುಗಿಯುತ್ತಿದ್ದಂತೆ ಸಂಜೀವನಿಪರ್ವತಕ್ಕೆ ಹನುಮಂತನು ಸರಾಗವಾಗಿ ಬಂದನು. ಅಲ್ಲಿ ಕಾವಲಿದ್ದ ದೇವತೆಗಳು ಹನುಮಂತನಿಗೆ ಪ್ರವೇಶಿಸಲು ಅವಕಾಶಕೊಡದೆ ಪರಾಕ್ರಮದಿಂದ ಯುದ್ಧಕ್ಕೆ ಸಿದ್ಧರಾಗಿ ಅವನನ್ನು ಕೆಣಕಿದರು. ೫೫. ಮಾರುತಿಯನ್ನು ಕೆಣಕಿ ಲೋಕದಲ್ಲಿ ಬದುಕಿದವರುಂಟೇ ? ಕೇಳು ಲವ, ಟಗರ ಗುಂಪಿಗೆ ತೋಳನೊಡನೆ ಕಾದಾಟ ಸುಲಭವೇ ? ಕಾವಲಿನ ದೇವತೆಗಳನ್ನು ಸದೆಬಡಿದು ಅವರನ್ನು ಅಮರಾವತಿಗೆ ಅಟ್ಟಿದನು. ಹಿಂದಿರುಗಿ ಬಂದು ತಕ್ಷಣ ಸಂಜೀವಿನೀಮೂಲಿಕೆಯನ್ನು ಪಡೆದು

ಕೇಳದಾದೆನು ಜಾಂಬವರ ಜೀ । ವಾಳದಮಳೌಷಧಿಯ ನಾಲ್ಕಱ
ಮೂಲಿಕೆಯ ಸಂಧಾನ ಶಲ್ಯವಿಶಲ್ಯ ಕರಣಿಗಳ
ಖೂಳನಾದೆನು ತಾನೆನುತ ಕ । ಟ್ಟಾಳು ಬೆಱಗಿನೊಳಿರ್ದು ಮಗುಳು
ಬ್ಬಾಳುತನದಲಿ ಕಂಡನೊಂದನುಮಾನ ಸಾಧನವ ೫೬

ಐಸಲೇ ಬೆಱಗೇಕೆ ಕೀಳುವೆ । ನೀ ಶಿಲೋಚ್ಚಯವನು ಸರೋಜಮ
ಹಾಸನನ ಸುತನಱಸಿಕೊಳಲೌಷಧಿಯನಿದಱೊಳಗೆ
ಓಸರಿಸಲೇಕಿದಕೆನುತ ಭುಜ । ಪಾಶದಲಿ ಪರ್ವತವ ಬಿಗಿದಾ
ಕಾಶಕೆತ್ತಿದನೊದಱಲಂಬರವದುರಲವನಿತಳ ೫೭

ಧರಿಸಿ ಗಿರಿಯನು ಹೋದ ಪಥದಲಿ । ತಿರುಗಿದನು ನಿಶಿಯಲಿ ನಿಶಾಕರ
ನಿರವಿನವೊಲೊಪ್ಪಿದುದು ತದ್ಗಿರಿ ಕರದೊಳನಿಲಜನ
ಶರಣನಱಿದೆಚ್ಚಱಿಸಿ ನುಡಿದನು । ಹಿರಿಯನೀ ಸಂಗರದ ಭೂಮಿಯ
ಮರುತಜನ ಹೊಗಲೀಯದಿರು ಹೊಱಗಿರಿಸಿಬಾಯೆಂದ ೫೮

ಆತ ನಡೆದನು ವಾಯುಪಥದಲಿ । ವಾತಜನ ನಿಲಿಸಿದನು ಜಲಧಿಯ
ಸೇತುವಿನ ದಕ್ಷಿಣದ ದೆಸೆಯಲಿ ತಿರುಗಿ ನಡೆತಂದು
ಮಾತನುಸುರಿದನೊಯ್ಯನಂಬುಜ । ಜಾತಜಂಗೆಲೆ ಜೀಯ ಬಂದನ
ಭೀತನೌಷಧಸಹಿತ ಬೆಸಸಿನ್ನುತ್ತರವನೆಂದ ೫೯

ಕೊಳ್ಳಲು ಕಾತರನಾದನು. ೫೬. 'ಬದುಕಿಸುವ ಸಂಜೀವಿನಿ ಔಷಧಿಯು ಸಂಧಾನ ಕರಣಿ (ಕತ್ತರಿಸಿದ ಅಂಗಾಂಗಗಳನ್ನು ಸೇರಿಸುವ ಮೂಲಿಕೆ), ಶಲ್ಯ ವಿಶಲ್ಯಕರಣಿ (ಮುರಿದ ಬಾಣಾದಿಗಳನ್ನು ತೆಗೆದುಹಾಕುವ ಮೂಲಿಕೆ) ಮೊದಲಾದ ನಾಲ್ಕು ಮೂಲಿಕೆಗಳ ವಿಷಯವನ್ನು ಜಾಂಬವರಿಂದ ಕೇಳಿ ತಿಳಿದುಕೊಳ್ಳದೆ ಮೂರ್ಖನಾದೆ' ಎನ್ನುತ್ತ ವೀರ ಹನುಮನು ಚಿಂತೆಗೊಳಗಾದನು. ಆ ಬಳಿಕ ಪರಾಕ್ರಮದಿಂದ ಮೂಲಿಕೆಗಳನ್ನು ಪಡೆದುಕೊಳ್ಳುವ ಒಂದು ಮಾರ್ಗವನ್ನು ಊಹೆಯಿಂದ ಕಂಡುಕೊಂಡನು. ೫೭. 'ಇದಕ್ಕೇಕೆ ಹೆದರಿಕೆ, ಈ ಬೆಟ್ಟವನ್ನು ಕಿತ್ತು ಎತ್ತಿಕೊಂಡು ಹೋಗುವೆನು, ಬ್ರಹ್ಮನ ಮಗ ಜಾಂಬವಂತನು ಇದರಲ್ಲಿ ಮೂಲಿಕೆಯನ್ನು ಹುಡುಕಿಕೊಳ್ಳಲಿ. ಇದಕ್ಕೇಕೆ ಹಿಂಜರಿಯಲಿ' ಎನ್ನುತ್ತ ಪರ್ವತವನ್ನು ತೋಳಿನಿಂದ ಸುತ್ತಿ ಬಿಗಿಯಾಗಿ ಹಿಡಿದುಕೊಂಡು ಆಕಾಶಕ್ಕೆ ಎತ್ತಿದನು ; ಆಗ ಆಕಾಶ ಕಿರುಚಿಕೊಂಡಿತು, ಭೂಮಿ ನಡುಗಿತು. ೫೮. ಸಂಜೀವಿನೀಪರ್ವತವನ್ನು ಹೊತ್ತುಕೊಂಡು ಹನುಮಂತನು ಹೋದ ದಾರಿಯಿಂದ ಹಿಂದಿರುಗಿದನು ಹನುಮಂತನ ಕೈಯ ಪರ್ವತವು ರಾತ್ರಿಯಲ್ಲಿ ಹೊಳೆಯುವ ಚಂದ್ರನಂತೆ ಶೋಭಿಸಿತು. ವಿಭೀಷಣನು ಹನುಮಂತನ ಬರುವಿಕೆಯನ್ನು ತಿಳಿದು ಎಚ್ಚರಿಕೆ ಕೊಟ್ಟನು. ಆಗ ಹಿರಿಯ ಜಾಂಬವಂತನು "ಈ ಯುದ್ಧಭೂಮಿಗೆ ಹನುಮಂತನು ಬರದಂತೆ ಹೊರಗೆ ನಿಲ್ಲಿಸಿ ಬಾ" ಎಂದು ಹೇಳಿದನು. ೫೯. ವಿಭೀಷಣನು ಆಕಾಶಮಾರ್ಗವಾಗಿ ಹೋಗಿ ಸಮುದ್ರದ ಸೇತುವೆಯ ದಕ್ಷಿಣದಿಕ್ಕಿನಲ್ಲಿ ಹನುಮಂತನನ್ನು ನಿಲ್ಲಿಸಿದನು. ಹಿಂದಿರುಗಿಬಂದು ಜಾಂಬವನನ್ನು ಕುರಿತು, "ಸ್ವಾಮಿ,

ಆದಡೆನ್ನನು ಕೊಂಡುನಡೆ ಲವ । ಣೋದಧಿಕ್ರಮನೆಡೆಗೆನಲು ಹರಿ
ಪಾದಪದ್ಮಾರಾಧಕನು ಕೊಂಡೊಯ್ದನಜಸುತನ
ಐದಿದಮಲಬ್ರಹ್ಮವಿದ್ಯಾ । ವಾದಿಗಳ ಸುಖಮಯನ ಪರಮಾ
ಹ್ಲಾದಕಿಮ್ಮಿಗಿಲೆನಲು ಪೊಂಗಿದನಾ ವಿರಿಂಚಿಸುತ ೬೦

ಮಗನೆ ಬಂದ್ಯೆ ಬ್ರಹ್ಮವೈಭವ । ಸುಗಮ ಬಂದ್ಯೆ ಕಂದ ಬಂದ್ಯೆ
ಜಗದ ಜೀವಕುಮಾರ ಬಂದ್ಯೆ ತಂದೆ ಹನುಮಂತ
ಗಗನಮಣಿಕುಲವನಧಿವರ್ಧನ । ಮೃಗಧರನೆ ಬಂದ್ಯೆ ಮಹೀರುಹ
ಮೃಗಕದಂಬಪ್ರಾಣಮಾರುತ ಬಂದೆಯ್ಯೆಯೆಂದ ೬೧

ಮದ್ದ ನಾವ್ ತರಹೇಳದರೆ ಕಿ । ತ್ತದ್ರಿಯನು ತಂದೀ ವಿವೇಕದ
ಮುದ್ದುತನವನು ನೋಡಿದ್ಯೆ ಲಂಕಾಪುರಾಧಿಪನೆ
ಇದ್ದದೀ ಹನುಮಂತನೀ ಬಲ । ವೆದ್ದುದೆಂದಾವ್ ನಿನಗೆ ಮೊದಲಲಿ
ಹೊದ್ದಿಸಿದ ನುಡಿಗೂಣಯವು ನಮಗಿಲ್ಲಲೇಯೆಂದ ೬೨

ಈತನನು ಪೊಗಳುವರೆ ಜಿಂಹೆಗ । ಳೀತಬಿವು ನಮ್ಮವು ಚರಾಚರ
ಚೇತನನ ಚೈತನ್ಯವಾಯುು ಕಣಾ ನಿದಾನಿಸಲು
ಈತನಿಂದಧಿಕರು ನಿದಾನಿಸೆ । ಭೂತನಿಕರದೊಳಿಲ್ಲವಿದು ಸಾ
ಕ್ಷಾತ ಪೌರಾಣಪ್ರಸಿದ್ಧ ರಹಸ್ಯ ಕೇಳೆಂದ ೬೩

ನಿರ್ಭೀತ ಹನುಮನು ಔಷಧಿಯೊಡನೆ ಬಂದಿದ್ದಾನೆ. ಮುಂದಿನ ಅಪ್ಪಣೆಯೇನು ?" ಎಂದು ಮೆಲ್ಲಗೆ ಕೇಳಿದನು. ೬೦. "ಹಾಗಿದ್ದರೆ ನನ್ನನ್ನು ಆ ಸಾಗರ ದಾಟಿದವನ ಬಳಿಗೆ ಕರೆದುಕೊಂಡು ಹೋಗು" ಎನ್ನಲು ವಿಷ್ಣುಪಾದಪೂಜಕನು ಜಾಂಬವನನ್ನು ಹನುಮಂತನ ಬಳಿಗೆ ಕರೆದುಕೊಂಡು ಹೋದನು. ಪರಮಾತ್ಮನನ್ನು ಕಂಡ ಬ್ರಹ್ಮ ವಿದ್ಯಾವಾದಿಗಳ ಪರಮ ಸಂತೋಷಕ್ಕೆ ಇಮ್ಮಡಿ ಎನ್ನುವಂತೆ ಜಾಂಬವನು ಸಂತೋಷ ದಿಂದ ಉಬ್ಬಿದನು. ೬೧. 'ಮಗನೇ ಬಂದೆಯಾ, ಬ್ರಹ್ಮಪದವಿಗೆ ಸುಲಭನಾದವನೇ, ಕಂದ ಬಂದೆಯಾ, ಜಗತ್ತಿಗೆ ಚೈತನ್ಯದಾಯಕನೇ ಬಂದೆಯಾಪ್ಪ ಹನುಮಂತ. ಸೂರ್ಯ ಕುಲವೆಂಬ ಸಾಗರಕ್ಕೆ ಚಂದ್ರನಂತಿರುವವನೇ ಬಂದೆಯಾ, ವಾನರರ ಪ್ರಾಣದ ಉಸಿರೇ ಬಂದೆಯಾ" ಎಂದು ನುಡಿದ ಜಾಂಬವ. ೬೨. "ಔಷಧಿಯನ್ನು ತೆಗೆದುಕೊಂಡು ಬರು ವಂತೆ ಹೇಳಿದರೆ ಬೆಟ್ಟವನ್ನೇ ಕಿತ್ತು ತಂದ ಈ ವಿವೇಕದ ಮುದ್ದುತನವನ್ನು ನೋಡಿ ದೆಯಾ ವಿಭೀಷಣ. ಹನುಮಂತನು ಬದುಕಿದ್ದರೆ ಇದೇ ವಾನರಸೇನೆಯು ಬದುಕಿ ಎದ್ದಂತೆ ಎಂದು ನಾವು ಮೊದಲು ನುಡಿದ ಮಾತಿಗೆ ಕುಂದುಂಟಾಗಲಿಲ್ಲವಲ್ಲ" ಎಂದು ಹೇಳಿದ ಜಾಂಬವಂತ. ೬೩. "ಈತನನ್ನು ಹೊಗಳಲು ನಮ್ಮ ನಾಲಗೆ ಎಷ್ಟರದು ? ನೋಡಿದರೆ ಈತನು ಚರಾಚರಗಳಿಗೆ ಚೈತನ್ಯದಾಯಕನಾದ ವಿಷ್ಣುವಿನ ಜೀವದುಸಿರು. ಸಮಸ್ತ ಪ್ರಾಣಿಗಳಲ್ಲಿ ಇವನಿಗಿಂತ ಶ್ರೇಷ್ಠರಿಲ್ಲ. ಇದು ಪುರಾಣಗಳಲ್ಲಿಯೇ ಸುಪ್ರಸಿದ್ಧ

ಎಲೆ ವಿಭೀಷಣದೇವ ಕಾದಿರು । ದಳದುಳವ ಹಾಯದವೊಲಸುರರು
ಬಳಲಿದೈ ಹನುಮಂತ ಕಡುಗುಣವಂತ ಬಲವಂತ
ಅಲಸದೆನ್ನಯ ಮಾತ ಮನ್ನಿಸಿ । ಸಲಿಸಿದೈಯೆಲೆ ತಂದೆಯೆನುತು
ಜ್ವಲಿಸುವೌಷಧಿ ನಾಲ್ಕ ಕಿತ್ತಿಳಿದನು ಮಹೀಧರವ ೬೪

ಸರಸರಿಸಿ ನಡೆತಂದು ಸಚರಾ । ಚರಪತಿಯಸಾಸ್ಯದಲಿ ಬೆರಳಿಂ
ದೊರಸಿ ಹಿಂಡಿದನಮಲ ಸಂಜೀವಿನಿಯ ಮೂಲಿಕೆಯ
ನರಚರಿತ್ರದ ರಾಮ ತೊರವೆಯ । ನರಹರಿಯ ನಿಖಿಳಾಭ್ಯುದಯ ವಿ
ಸ್ತರದ ರಚನೆಯ ಬಣ್ಣಿಸಲು ಗೋಚರವೆ ತನಗೆಂದ ೬೫

ಹರುಷ ಮಿಗಲಾ ಸೃಷ್ಟಿಕರ್ತನ । ಹಿರಿಯ ಮಗನೆತ್ತಿದನು ಸಮನಂ
ತರದಲಾದಿ ಫಣೀಂದ್ರನನು ಮನುಜೇಂದ್ರ ಲಕ್ಷ್ಮಣನ
ಶರಧಿ ಸುಮ್ಮಾನಿಸಿತು ಸುರಕುಲ । ದರಸು ಮೊದಲಾದಖಿಳ ಲೋಕೇ
ಶ್ವರರು ಹೊಯ್ಸಿದರೊಸಗೆವಣಿಗಳ ನಿಜಪುರಂಗಳಲಿ ೬೬

ಜಾಣನಲ್ಲಾ ಜಾಂಬವನು ಗೀ । ರ್ವಾಣ ಧನ್ವಂತರಿಯ ಮಗನಾ
ಘ್ರಾಣದಲಿ ಹಿಂಡಿದನು ಕೊಟ್ಟನು ಕೈಯಲೌಷಧಿಯ
ಕೌಣಪರು ನಟಿಸದವೊಲಾ ಕಪಿ । ಘ್ರೂಣ ಮೊದಲಾದಖಿಳ ಸುಭಟ
ತ್ರಾಣವನು ಪಡೆದೆತ್ತಿದನು ರಣದೊಳು ಸುಷೇಣಕನು ೬೭

ವಾಗಿರುವ ರಹಸ್ಯ" ಎಂದ ಜಾಂಬವಂತ. ೬೪. "ವಿಭೀಷಣ, ರಾಕ್ಷಸರು ರಣರಂಗಕ್ಕೆ ಬಂದು ಸೂರೆಮಾಡದಂತೆ ಕಾವಲಿರು" ಎಂದು ಹೇಳಿದನು. ಬಳಿಕ "ತುಂಬ ಆಯಾಸ ಪಟ್ಟೆ ಹನುಮಂತ, ಬಹು ಗುಣವಂತ, ಬಲವಂತ. ಉದಾಸೀನ ಮಾಡದೆ ನನ್ನ ಮಾತಿಗೆ ಗೌರವ ಕೊಟ್ಟು ಅದನ್ನು ನಡೆಸಿಕೊಟ್ಟೆ" ಎಂದು ನುಡಿದಂ ಬೆಟ್ಟದಲ್ಲಿ ಹೊಳೆಯು ತ್ತಿದ್ದ ನಾಲ್ಕು ಔಷಧಿಗಳನ್ನು ಕಿತ್ತುಕೊಂಡು ಬೆಟ್ಟವನ್ನಿಳಿದುಬಂದನು. ೬೫. ಸಚರಾ ಚರಾಧಿಪತಿ ರಾಮನ ಬಳಿಗೆ ಸರಸರನೆ ಬಂದು ಜಾಂಬವನು ರಾಮನ ಬಾಯಲ್ಲಿ ಪವಿತ್ರ ಸಂಜೀವಿನಿ ಮೂಲಿಕೆಯನ್ನು ಬೆರಳುಗಳಿಂದ ತೀಡಿ ಹಿಂಡಿದನು. ಮಾನವ ಅವತಾರ ಧರಿಸಿದ ಲೀಲಾವಿನೋದಿ ತೊರವೆಯ ನರಹರಿಯ ಅವತಾರಿಯಾದ ರಾಮನ ಏಳಿಗೆಯ ಕಥೆಯನ್ನು ವರ್ಣಿಸಲು ನನಗೆ ಸಾಧ್ಯವೇ ಎಂದು ನುಡಿದರು ವಾಲ್ಮೀಕಿಮಹರ್ಷಿ ಗಳು. ೬೬. ಸೃಷ್ಟಿಕರ್ತನ ಹಿರಿಯಮಗ ಜಾಂಬವಂತನು ಹರ್ಷದಿಂದ ರಾಮನನ್ನು ಬದುಕಿಸಿದನು, ಅನಂತರ ಆದಿಶೇಷನ ಅವತಾರಿ ಲಕ್ಷ್ಮಣನನ್ನು ಬದುಕಿಸಿದನು. ಆಗ ಸಮುದ್ರವುಬ್ಬಿತು, ದೇವೇಂದ್ರನೇ ಮೊದಲಾದ ದಿಕ್ಪಾಲಕರು ತಮ್ಮ ತಮ್ಮ ಪಟ್ಟಣಗಳಲ್ಲಿ ಮಂಗಳವಾದ್ಯಗಳನ್ನು ಹೊಡೆಸಿದರು. ೬೭. ಜಾಂಬ ವಂತನು ಬುದ್ಧಿವಂತನಲ್ಲವೇ. ಧನ್ವಂತರಿಯ ಮಗ ಸುಷೇಣನ ಮೂಗಿನಲ್ಲಿ ಔಷಧಿ ಯನ್ನು ಹಿಂಡಿ ಅವನನ್ನು ಬದುಕಿಸಿ ಅವನ ಕೈಗೆ ಔಷಧಿಯನ್ನು ಕೊಟ್ಟನು. ರಾಕ್ಷಸರು ಬಂದು ನಟಿಸಿ ಅನುಕೂಲ ಪಡೆಯದಂತೆ ಎಚ್ಚರಿಕೆ ವಹಿಸಿ ಸತ್ತ ಕಪಿಗಳ ಭ್ರೂಣವೇ

ಎದ್ದವರ ಕೈಯಿಂದ ರಣದೊಳ । ಗಿದ್ದ ರಕ್ಕಸವೆಣನನೆಳದೆಳ
ದದ್ದಿಸಿದನಬ್ಧಿಯೊಳು ವಾರಣ ವಾಜಿಕುಲಸಹಿತ
ಹೊದ್ದಿದನು ಬಳಿಕೊಯ್ಯನೊಯ್ಯನೆ । ತಿದ್ದುಡಿಕೆಯಱಿದನಿಲಸುತ ಕಿ
ತ್ತುದ್ದಿಸಿದನೈ ಬಾಲದಲಿ ರಣದೊಳು ಮಹೌಷಧಿಯ ೬೮

ಕೇಳದೈ ಬಳಿಕೆದ್ದುದೆಪ್ಪ । ತ್ತೇಳು ಕೋಟಿ ಪ್ಲವಗನಾಯಕ
ರಾಳುಸಹಿತೊಂದೇ ಕ್ಷಣಾರ್ಧದೊಳೇನು ವಿಸ್ಮಯವೊ
ಶೈಲಸಂಕುಲ ಸಹಿತ ರಘುಭೂ । ಪಾಲಕನನೋಲೈಸುತಿರ್ದುದು
ಕಾಳಿಗದೊಳಳಿವಾಯಿತೆಂಬುದನಱಿಯದಾಯ್ತೆಂದ ೬೯

ಎಲೆ ಮುನೀಶ್ವರ ಹೇಳಿದೀ ಕಥೆ । ನೆಲೆಗೊಳದು ಚಿತ್ತದಲಿ ಲಕ್ಷ್ಮೀ
ನಿಳಯನೆಂದೇ ನುಡಿದೆ ರಘುರಾಜೇಂದ್ರಚಂದ್ರಮನ
ಅಳಿವ ತೋಱಿದಿರಕ್ಷಯಂಗೊಡ । ನುಳಿದ ತೋಱಿದಿರನುಚರರಿಗಿದ
ರೊಳಗನಱುಹಿಸಬೇಕೆನುತ ನುಡಿದರು ಕುಮಾರಕರು ೭೦

ಇದು ಕಥಾ ನಾಟಕದ ನರರೂ । ಪದ ವಿನೋದವಿದೀಗಲಾ ದಶ
ವದನನುಳಿದಮರಾಸುರೋರಗಭಟರ ಕೈಯಿಂದ
ಉದುಗಲಿಸದಾಯುಃಷ್ಯವನು ಕೇ । ಳದಱಿನಚ್ಯುತನಚ್ಚರಿಯ ಬೀ
ಱಿದನು ಬಾಧೆಗಳುಂಟೆ ಬೊಮ್ಮಕೆ ಬೆಱಗದೇನೆಂದ ೭೧

ಮೊದಲಾಗಿ ಸಮಸ್ತ ಕಪಿವೀರರನ್ನು ಸುಷೇಣಕನು ಜೀವಂತಗೊಳಿಸಿದನು. ೬೮. ಔಷಧಿಯಿಂದ ಎದ್ದುಬಂದವರ ಕೈಯಿಂದ ಯುದ್ಧರಂಗದಲ್ಲಿ ಬಿದ್ದಿದ್ದ ರಾಕ್ಷಸರ ಹೆಣಗಳನ್ನು ಎಳೆದೆಳೆದು ಆನೆ ಕುದುರೆಗಳ ಸಮೇತವಾಗಿ ಸಮುದ್ರದಲ್ಲಿ ಮುಳುಗಿಸಿದನು. ಅನಂತರ ನಿಧಾನವಾಗಿ ಬಳಿಸಾರಿ ತಿದ್ದಿದ ಉಡುಗೆಯಿಂದ (?) ಗುರುತುಹಿಡಿದು ಹನುಮಂತನು ಬಾಲದಿಂದ ಮೂಲಿಕೆಯನ್ನು ಕಿತ್ತು ಯುದ್ಧರಂಗದಲ್ಲಿ ಬಿದ್ದಿದ್ದ ವಾನರರ ಮೇಲೆ ಉಜ್ಜಿದನು. ೬೯. ಕೇಳು ಕುಶ, ಅನಂತರ ಎಪ್ಪತ್ತೇಳು ಕೋಟಿ ವಾನರ ನಾಯಕರು ತಮ್ಮ ತಮ್ಮ ಸೇನಾಸಮೇತವಾಗಿ ಒಂದರ್ಧಕ್ಷಣದಲ್ಲಿ ಬದುಕಿ ಎದ್ದು ಬಂದರು. ಈ ಆಶ್ಚರ್ಯವನ್ನು ಏನೆಂದು ಹೇಳೋಣ. ವಾನರಸೈನ್ಯವು ಕೈಯಲ್ಲಿ ಬೆಟ್ಟಗಳನ್ನು ಹಿಡಿದುಕೊಂಡು ರಘುಪತಿಯನ್ನು ಓಲೈಸುತ್ತಿದ್ದಿತು. ವಾನರಸೈನ್ಯವು ಯುದ್ಧದಲ್ಲಿ ನಾಶಹೊಂದಿತ್ತು ಎಂಬುದರ ಗುರುತೂ ಇರಲಿಲ್ಲ. ೭೦. "ಮುನೀಶ್ವರರೇ, ನೀವು ಹೇಳಿದ ಈ ಕಥೆ ಮನಸ್ಸಿಗೆ ಅರ್ಥವಾಗುತ್ತಿಲ್ಲ. ರಘುರಾಜೇಂದ್ರಚಂದ್ರನನ್ನು ಲಕ್ಷ್ಮೀನಿಲಯನೆಂದು ತಿಳಿಸಿದಿರಿ. ಈಗ ನಾಶರಹಿತನಾದ ರಾಮನು ಸತ್ತನೆಂದು ಹೇಳಿ ಅವನು ಪುನಃ ಬದುಕಿದ ರೀತಿಯನ್ನು ವರ್ಣಿಸಿದಿರಿ. ತಮ್ಮ ಪಾದಸೇವಕರಾದ ನಮಗೆ ಇದರ ಗುಟ್ಟನ್ನು ತಿಳಿಸಿಕೊಡಬೇಕು" ಎಂದು ಲವಕುಶರು ಕೇಳಿಕೊಂಡರು. ೭೧. "ಮಾನವರೂಪಿನ ವಿಷ್ಣುವಿನ ಲೀಲೆಯಿದು. ರಾವಣನಲ್ಲದೆ ದೇವತೆಗಳು, ಅಸುರರು ಮತ್ತು ಉರಗವೀರರ ಕೈಯಿಂದ ನಾಶವಾಗದುದು ಆಯುಷ್ಯ. ಆದುದರಿಂದ ಅಚ್ಯುತನ

ಧರಣಿಜೆಯ ಸುದ್ದಿಯನು ತಂದಂ । ದರಸ ರಾಘವನಿತ್ತ ವರದಿಂ
ದಿರವು ಘಟಿಸಿತು ಮಾರುತಿಗೆ ನೈರುತಿಯನುಜಜಿದು
ಶರಣುವೊಗಲು ವಿಭೀಷಣಂಗಾ । ಯ್ತಿರವು ಬೊಮ್ಮನ ವರದಿನಜಸುತ
ಹರಣ ಹಿಂಗದೆ ಬದುಕಿದನು ಬಾಣದಲಿ ಕಮಲಜನ ೭೨

ಉಳಿದರರದಂದಿವರು ಮೂವರು । ತಿಳಿಯಲಧಿಕರು ದೇವರಿಗೆ ವೆ
ಗ್ಗಳದ ಭಕ್ತರು ಜನನ ಮರಣವಿಹೀನರಹರವರು
ನಳಿನನಾಭನ ಭಜಕರೇನ । ಗ್ಗಳರೊ ಜಗದೊಳು ದೃಷ್ಟವಿದು ಕೇ
ಳಿಲೆ ಕುಶಾನುಜ ಕೇಳು ಕುಶ ನೀನೆಂದು ಮುನಿ ನುಡಿದ ೭೩

ವಾಯುಜನ ಕಂಡಸುರರಿಪು ಪುಳ । ಕಾಯಮಾನಿತನಾಗಿ ಸಾಸಿರ
ಬಾಯ ಶೇಷನ ಹೊಗಳಿಕೆಯ ಹೊಗಳಿದನಲ್ಲೆ ಬಳಿಕ
ಆಯಿದೌಷಧಿಗಳನು ಕಟಕದ । ರಾಯವೈದ್ಯನು ಸಂಹರಿಸಿದನು
ಮಾಯವಾದುದು ಶೈಲ ಹನುಮನ ಹಸ್ತದಲಿ ಬಳಿಕ ೭೪

ಕಪಿಗಳುಬ್ಬರದಬ್ಬರಣೆ ಕಾ । ಶ್ಯಪಿಯ ಕುಂಭಿಕ್ಕಿಸಿದವನಿಮಿಷ
ರಪರಿಮಿತ ಸಂತೋಷದಲಿ ಸುರಲತೆಯ ಕುಸುಮಗಳ
ತಪನವಂಶದ ತೊರವೆಯುರಸನ । ವಿಪುಳ ಬಲದಲಿ ಸೂಸಿದರು ರಣ
ಕುಪಿತಬಲ ಉಳಿಮಸಗಿತಲ್ಲಿಂ ಮೇಲೆ ರಜನಿಯಲಿ ೭೫

ಆಶ್ಚರ್ಯಕರವಾದ ಚರಿತ್ರೆಯನ್ನು ಕೇಳು. ಪರಬ್ರಹ್ಮವಸ್ತುವಿಗೆ ನಾಶವುಂಟೇ? ಇದರಲ್ಲಿ ಆಶ್ಚರ್ಯವೇನಿದೆ ಎಂದರು ವಾಲ್ಮೀಕಿಮಹರ್ಷಿಗಳು. ೭೨. ಸೀತೆಯ ಸುದ್ದಿಯನ್ನು ತಂದಾಗ ರಾಘವನು ಕೊಟ್ಟ ವರದಿಂದ ಮಾರುತಿ ಬದುಕಿದನು. ರಾಕ್ಷಸ ರಾವಣನನ್ನು ನಿಂದಿಸಿ ಶ್ರೀರಾಮನ ಮರೆಹೊಕ್ಕ ಕಾರಣದಿಂದ ವಿಭೀಷಣ ಉಳಿದುಕೊಂಡನು. ಬ್ರಹ್ಮನ ವರದ ಫಲವಾಗಿ ಬ್ರಹ್ಮನ ಮಗ ಜಾಂಬವಂತನು ಬ್ರಹ್ಮಾಸ್ತ್ರದಿಂದ ಪ್ರಾಣಹೋಗದೆ ಉಳಿದುಕೊಂಡನು. ೭೩. ಈ ಕಾರಣಗಳಿಂದಾಗಿ ಈ ಮೇಲೆ ಹೇಳಿದ ಮೂರುಜನರು ಬ್ರಹ್ಮಾಸ್ತ್ರದಿಂದ ಉಳಿದುಕೊಂಡರು. ಇವರುಗಳು ಶ್ರೀರಾಮನ ಅತಿಶಯದ ಭಕ್ತರು. ಆದುದರಿಂದ ಜನನ ಮರಣವನ್ನು ಅವರು ಕಳೆದುಕೊಂಡವರಾಗಿದ್ದಾರೆ. ಕೇಳಿ ಲವಕುಶರೇ, ವಿಷ್ಣುವಿನ ಭಕ್ತರು ಎಷ್ಟು ಶ್ರೇಷ್ಠರೋ! ಇದು ಜಗತ್ತಿನಲ್ಲಿ ಅನುಭವಕ್ಕೆ ಬಂದ ವಿಚಾರ ಎಂದು ವಾಲ್ಮೀಕಿಮುನಿಗಳು ನುಡಿದರು. ೭೪. ಮಾರುತಿಯನ್ನು ಕಂಡು ರಾಮನು ರೋಮಾಂಚಗೊಂಡು ಸಾವಿರ ಹೆಡೆಗಳ ಆದಿಶೇಷನಂತೆ ಅವನನ್ನು ಹೊಗಳಿದನು. ವಾನರಸೈನ್ಯದ ರಾಜವೈದ್ಯ ಸುಷೇಣನು ಅರಿಸಿಕೊಂಡುಬಂದ ಔಷಧಿಯ ಮೂಲಿಕೆಗಳನ್ನು ಹಿಂದಕ್ಕೆ ಹಾಕಿದನು. ಅನಂತರ ಹನುಮಂತನ ಕೈಯಲ್ಲಿ ಸಂಜೀವಿನೀಪರ್ವತವು ಅದೃಶ್ಯವಾಯಿತು. ೭೫. ವಾನರರ ಅತಿಶಯ ಅಬ್ಬರದಿಂದ ಭೂಮಿಯು ಕುಸಿಯುವಂತಾಯಿತು. ದೇವತೆಗಳು ಅತ್ಯಾನಂದದಿಂದ ಕಲ್ಪವೃಕ್ಷದ ಹೂವುಗಳನ್ನು ರವಿವಂಶದ ರಾಮನ ಅಪರಿಮಿತ ಸೈನ್ಯದ ಮೇಲೆ ಸುರಿಸಿದರು. ಕೆರಳಿದ ವಾನರಸೈನ್ಯ ಆ ರಾತ್ರಿಯಲ್ಲಿ ಹುರುಪಿನಿಂದ ವಿಜೃಂಭಿಸಿತು.

# ಮೂವತ್ತೇಳನೆಯ ಸಂಧಿ

ಸೂಚನೆ॥ ದೇವ ರಾಮನ ಕಟಕ ಮೃತಸಂ । ಜೀವಿನಿಯಲಸುವಡೆದ ಬಳಿಕ ವಿ
ಭಾವರಿಯೊಳಂದಾಯ್ತು ಲಂಕಾಪುರ ಪುನರ್ದಹನ

ಕುಶನೆ ಕೇಳೈ ನಿರ್ಭಯದ ನಿಗು । ರಿಸಿದ ಹರುಷದ ನಿಸ್ಸಪತ್ನದಿ
ನಸುರಕುಲವಿದ್ದುದು ಸುನಿದ್ರಾಭರದ ಭಾರದಲಿ
ಕುಶನನುಜ ಕೇಳವರು ಮಾಡಿದ । ಹೊಸಪರಿಯ ಕನಲಿಕೆಯ ಕೆಣಕಿನ
ವಿಷಮವಿಗ್ರಹದಭಿನವಪ್ರಾರಂಭಸಂಭ್ರಮವ ೧

ರಚಿಸಿದರು ಶರಮುಖದಲುಗ್ರ । ಪ್ರಚುರ ಪಾವಕನನು ಸರೋಷದ
ಲಚಲ ಸಾಹಸಮಲ್ಲರಾ ರಘುನಾಥ ಲಕ್ಷ್ಮಣರು
ವಚಿಸಲೇನದನಖಿಳ ಸುಭಟ । ಪ್ರಚಯ ನೀರಸ ನಿರ್ಗಳಿತ ತರು
ನಿಚಯದಲಿ ನೆಲೆಗೊಳಿಸಿದರು ಪವಮಾನಬಾಂಧವನ ೨

ರಣಮಹೀಮಂಡಲದ ಭೈರವ । ಗಣದ ದೀಪಾಳಿಯೊ ಮಹೇಶನ
ಹಣೆಯ ಹುತವಹನಟ್ಟಹಾಸವೊ ಶಿವಮಹಾದೇವ
ಸೆಣಸಿ ಜ್ಯೋತಿರ್ಲೋಕವೀ ರಾ । ವಣನ ಪಟ್ಟಣಕೆತ್ತಿ ಕದನವ
ಕೆಣಕಲೈದಿದ ದಂಡೊ ಕೈಗೊಳ್ಳಿಗಳೊ ಕಪಿಬಲದ ೩

ಸೂಚನೆ॥ ರಾಮನ ಸೈನ್ಯವು ಸತ್ತವರನ್ನು ಬದುಕಿಸುವ ಸಂಜೀವಿನಿಔಷಧಿಯಿಂದ ಪ್ರಾಣಪಡೆದುಕೊಂಡ ಬಳಿಕ ಅಂದಿನ ರಾತ್ರಿಯಲ್ಲಿ ಎರಡನೆಯ ಬಾರಿ ಲಂಕಾನಗರದ ದಹನವು ನಡೆಯಿತು. ೧. ಕುಶನೇ ಕೇಳು, ಶತ್ರುರಹಿತರಾದ ರಾಕ್ಷಸರು ಹರ್ಷಾಧಿಕ್ಯದಿಂದ ನಿರ್ಭೀತರಾಗಿ ಗಾಢನಿದ್ರೆಯಲ್ಲಿ ಮುಳುಗಿದರು. ಲವನೇ ವಾನರವೀರರು ಕೆರಳಿ ಹೊಸರೀತಿಯಲ್ಲಿ ನಡೆಸಿದ ಭಯಂಕರ ಯುದ್ಧದಾರಂಭದ ಸಡಗರವನ್ನು ಕೇಳು, ಎಂದು ವಾಲ್ಮೀಕಿಗಳು ಕಥೆಯನ್ನು ಮುಂದುವರಿಸಿದರು. ೨. ಸಾಹಸಮಲ್ಲರಾದ ರಾಮಲಕ್ಷ್ಮಣರು ಬಾಣಾಗ್ರದಿಂದ ಭಯಂಕರ ಬೆಂಕಿಯನ್ನು ಹುಟ್ಟಿಸಿದರು. ಇನ್ನು ಮುಂದಿನದನ್ನು ಏನೆಂದು ವರ್ಣಿಸಲಿ, ಸಮಸ್ತ ವಾನರವೀರರು ಒಣಗಿಬಿದ್ದ ಮರಗಳನ್ನು ತೆಗೆದುಕೊಂಡು ಬೆಂಕಿಯನ್ನು ಹೊತ್ತಿಸಿದರು. ೩. ಯುದ್ಧಭೂಮಿಯ ಬೈರವಸಮೂಹದ ದೀಪಗಳ ಸಾಲೋ, ಈಶ್ವರನ ಹಣೆಗಣ್ಣಿನ ಬೆಂಕಿಯ ಅಟ್ಟಹಾಸವೋ, ಶಿವಮಹಾದೇವ ! ಹಗೆತನದಿಂದ ರಾವಣನ ಪಟ್ಟಣವನ್ನು ಮುತ್ತಿಗೆಹಾಕಲು ಬಂದ ನಕ್ಷತ್ರಗಳ ಸೈನ್ಯವೋ, ವಾನರರ ಕೈಗೊಳ್ಳಿಗಳೋ !

ಏಱಿದರು ದುರ್ಗವನು ಬೊಬ್ಬೆಯ । ತೋಱಿಸದೆ ತುದಿವರೆಗೆ ಕಿಡಿಗಳ
ಹಾಱಿಸಿದ ರೂಢಿಕೆಯಲೊಳಬದ್ದಾಳುವೇರಿಯಲಿ
ಮೂಱು ಸುತ್ತಿನ ವಲಯದಲಿ ಕಾ । ಲೂಱಿ ನಿಂದುದು ನಿಂದ ಮೈಯಲಿ
ತೋಱಿತಾ ಕಪಿಸೇನೆ ಪರಿವೇಷದವೊಲರ್ಯಮನ ೪

ರಣಪರಿಶ್ರಮ ನಿರ್ಗಮದ ಭಾ । ರಣೆಯ ನಿದ್ರಾಂಗನೆಯ ನಿಬಿಡ
ಪ್ರಣಯ ಪಟುಭಟರಿರ್ದರಬಲಾಜನದ ತೋಳಿನಲಿ
ಮಣಿದ ಮೋಱೆಯ ತೂಕಡಿಕೆಗಳ । ಕಣುಗಳರೆಮುಚ್ಚುಗಳ ಹಯ ವಾ
ರಣಕದಂಬಕವಿರ್ದುದುರುಶಾಲಾ ಸುವೀಥಿಯಲಿ ೫

ಬಳಿಕ ಬೊಬ್ಬೆಱಿದಬ್ಬರಿಸಿ ಕೈ । ದೊಳಸುಕಾಱರು ಹೊಕ್ಕು ಹೊಯ್ದರು
ತೊಳಲಿಕೆಯ ತಳವಾರರ ತರುಗೊಳ್ಳಿಗಳ ಕಡುಹಿನಲಿ
ಬೆಳಗಿಸಿದರುರಿಗಳನು ಮಣಿಮಯ । ನಿಳಯ ನಿಳಯದಲೂರೊಳಗೆ ಗಾ
ವಳಿಯ ಮಾಡಿದರುರವಣಿಗರೊಳಹೊಕ್ಕರಗಲದಲಿ ೬

ಬೆದಱಿ ಕೈದುವನಱಸುತೇಳುವ । ಮದಮುಖರನುರಿಗೊಳ್ಳಿಗಳಲೇ
ಸದೆದು ಸಂಹರಿಸಿದರು ಬಾಗಿಲುಗಳಲಿ ಮನೆಮನೆಯ
ಕುದುರೆಗಳ ಹಲ್ಲಣಿಸುವರ ಮದ । ರದನಿಗಳ ಹಣ್ಣುವರನುರಿಯಲಿ
ಹುದುಗಿ ಹರಿದಾಡುವರ ಹೊಗಿಸಿದರಂತಕನ ಪುರವ ೭

೪. ಸ್ವಲ್ಪವೂ ಸದ್ದುಮಾಡದೆ ವಾನರವೀರರು ಕಿಡಿಗಳು ಮೇಲಕ್ಕೆ ಹಾರುವ ರೀತಿಯಲ್ಲಿ ತುದಿಯುವರೆಗೆ ದುರ್ಗವನ್ನು ಹತ್ತಿದರು. ಕೋಟೆಯ ಒಳಗಡೆಗೆ ಹೋಗಿ ಕೋಟೆಯ ತೆನೆಗಳ ಒಳಗಡೆ ಇರುವ ದಾರಿಯಲ್ಲಿ ಮೂರು ವಲಯಗಳಲ್ಲಿ ವಾನರ ವೀರರು ಕಾಲೂರಿ ನಿಂತರು. ಕೊಳ್ಳಿಗಳನ್ನು ಹಿಡಿದು ಸುತ್ತಲೂ ಕೋಟೆಯ ಮೇಲೆ ನಿಂತ ವಾನರಸೈನಿಕರು ಸೂರ್ಯನ ಸುತ್ತಲಿನ ಪ್ರಭಾವಲಯದಂತೆ ಕಂಡರು. ೫. ಲಂಕಾಪಟ್ಟಣದಲ್ಲಿ ರಾಕ್ಷಸವೀರರು ಯುದ್ಧದಾಯಾಸವನ್ನು ನೀಗಿಕೊಳ್ಳುತ್ತ ಸ್ತ್ರೀಯರ ತೋಳತೆಕ್ಕೆಯಲ್ಲಿ ಸೇರಿ ಗಾಢನಿದ್ದೆಯಲ್ಲಿ ಮುಳುಗಿದ್ದರು. ಲಾಯಗಳಲ್ಲಿ ಸಾಲಾಗಿ ಆನೆ ಕುದುರೆಗಳು ಮುಖವನ್ನು ತಗ್ಗಿಸಿ ತೂಕಡಿಕೆಯಿಂದ ಅರ್ಧಕಣ್ಣುಗಳನ್ನು ಮುಚ್ಚಿಕೊಂಡಿದ್ದವು. ೬. ಅನಂತರ ವಾನರ ಕೈಹೋರಾಟಗಾರರು ಬೊಬ್ಬೆಹಾಕುತ್ತ ನುಗ್ಗಿ ತಿರುಗಾಡುತ್ತಿದ್ದ ತಳವಾರರನ್ನು ಮರದಕೊಳ್ಳಿಗಳಿಂದ ಹೊಡೆದರು. ರತ್ನಮಯ ಭವನಗಳಿಗೆ ಬೆಂಕಿಕೊಟ್ಟು ಉರಿಗಳನ್ನೆಬ್ಬಿಸಿದರು. ಆ ಆತುರಗಾರರು ಊರಿನಲ್ಲಿ ಗಲಭೆಯೆಬ್ಬಿಸಿ ನಗರದ ಒಳಭಾಗಕ್ಕೆ ಎಲ್ಲ ಕಡೆಯಿಂದ ಪ್ರವೇಶಿಸಿದರು. ೭. ಆಯುಧಗಳನ್ನು ಹುಡುಕುತ್ತ ಗಾಬರಿಯಿಂದೇಳುವ ಮದಿಸಿದ ರಾಕ್ಷಸರನ್ನು ಮನೆಮನೆಯ ಬಾಗಿಲುಗಳಲ್ಲಿಯೇ ಉರಿಗೊಳ್ಳಿಗಳಿಂದ ಅಪ್ಪಳಿಸಿ ಕೊಂದರು. ಕುದುರೆಗಳಿಗೆ ಜೀನು ಹಾಕುವವರನ್ನೂ ಆನೆಗಳನ್ನು ಸಜ್ಜುಗೊಳಿಸುವವರನ್ನೂ ಬೆಂಕಿಗೆ ಹಾಕಿ ಓಡಾಡುವವರನ್ನೂ ಯಮನ

ಕಳವಳದಲಿವ ಹನುಮನಿವನ । ಗ್ಗಳ ಸುಷೇಣ ಗವಾಕ್ಷ ಗಜನಿವ
ನಳ ಸುರೇಂದ್ರಜಸೂನುವಿವನಿವ ನೀಲನೆಂದೆನುತ
ಬಳಸಲಿಸಿ ಬಲಿದಂಕದಲಿ ತ । ಮ್ಮೊಳಗೆ ತಾವೆರಡಿಟ್ಟು ಪುರ ರಾ
ಕುಳದ ರಕುತದೊಳಾಳೆ ಹೊಯ್ದಾಡಿದರು ಹರಹಿನಲಿ ೮

ಬೊಬ್ಬೆ ಬಲಿದುದು ನಗರದಲಿ ಬಳಿ । ಕುಬ್ಬಿದುರಿ ದಿವದಂತ ಪರಿಯಂ
ತೆಬ್ಬಿದುದು ಕತ್ತಲೆಯ ಕಲ್ಪದ ಕಿಚ್ಚಿನಂದದಲಿ
ಎಬ್ಬಿಸಿತು ಕಳಕಳಿಕೆ ಮಾಜಗ । ದೊಬ್ಬ ವೀರನು ಕಂಡು ಬೆಱಗಿನ
ಬೆಬ್ಬಳದಲೇಱಿದನು ಮಣಿಮಯ ದಿವ್ಯಪುಷ್ಪಕವ ೯

ಮಾರಿ ಮತ್ತೈತಂದುದಕಟಾ । ದ್ವಾರಿ ಹರಿಮೇಖಲೆಯು ಹರಹಿದ
ನೂರೊಳಗೆ ಕರೆ ಮಗನನೆನುತುತ್ತರದ ಗೋಪುರವ
ಸಾರಿ ಸಂಧಿಸಿದಧಿಕ ಭೀತಿಯ । ಭಾರಣೆಯಲಿರಲುರಿ ಭಡಾಳಿಸಿ
ಭೋರೆನುತ ಹಬ್ಬಿದುದು ಹನುಮನ ಕಿಚ್ಚಿನಂದದಲಿ ೧೦

ಕೂಡಿದುದು ಬಳಿಕುಗಿದು ನಿದ್ರೆಯ । ಜೋಡ ಜೋಡಿಸಿತಿಭ ವರೂಥದ
ಗಾಡಿಕೆಯ ಸಂಗಟದ ಸಮರದ ಸೇನೆ ಚಳಕದಲಿ
ತೋಡುಗೈದುಗಳುಬ್ಬರದ ಹೊ । ಮ್ಮೊಡಿಗೆಯ ಹೊದಱುಗಳ ಬಿರುದಿನ
ಬೀಡುಕಾಱರು ಬೀದಿವರಿದಟ್ಟಿದರು ಬಲಿಮುಖರ ೧೧

ಪಟ್ಟಣಕ್ಕೆ ಕಳುಹಿಸಿದರು. ೮. ಕಳವಳದಿಂದ ಇವನು ಹನುಮಂತ, ಇವನು ಶ್ರೇಷ್ಠ ಸುಷೇಣ, ಇವನು ಗವಾಕ್ಷ, ಇವನು ಗಜ, ಇವನು ನಳ, ಇವನು ಅಂಗದ, ಇವನು ನೀಲ ಎಂದು ನುಡಿಯುತ್ತ ಬೆನ್ನಟ್ಟಿಬಂದು ತಮ್ಮಲ್ಲಿ ತಾವು ಎರಡುಭಾಗವಾಗಿ ನಗರವು ರಕ್ತದ ಮಡುವಿನಲ್ಲಿ ಮುಳುಗುವಂತೆ ವಿಸ್ತಾರವಾಗಿ ಹೊಡೆದಾಡಿದರು. ೯. ಲಂಕಾನಗರದಲ್ಲಿ ಎಲ್ಲೆಲ್ಲೂ ಬೊಬ್ಬೆಯೆದ್ದಿತು. ಪ್ರಳಯಾಗ್ನಿಯಂತೆ ರಭಸದಿಂದ ಎದ್ದ ಉರಿಯು ಆಕಾಶದವರೆಗೂ ಕತ್ತಲೆಯನ್ನು ಹೊಡೆದೋಡಿಸಿತು. ನಗರದ ಗಲಾಟೆಯನ್ನು ಕೇಳಿ ಎಚ್ಚರಗೊಂಡ ತ್ರಿಲೋಕವೀರ ರಾವಣನು ಉರಿಯನ್ನು ನೋಡಿ ವಿಸ್ಮಯಗೊಂಡು ಗಾಬರಿಯಿಂದ ರತ್ನನಿರ್ಮಿತ ದಿವ್ಯಪುಷ್ಪಕವಿಮಾನವನ್ನು ಏರಿದನು. ೧೦. "ಅಯ್ಯೋ, ಮಾರಿ ಪುನಃ ಬಂದಿತೆ ! ಊರೊಳಕ್ಕೆ ಬೆಂಕಿಯನ್ನು ಹಬ್ಬಿಸಿದ್ದಾರೆ. ಮಗನನ್ನು ಕರೆ" ಎನ್ನುತ್ತ ರಾವಣನು ಉತ್ತರದಿಕ್ಕಿನ ಗೋಪುರದ ಬಳಿಗೆ ಹೋಗಿ ಅಧಿಕಭೀತಿಯಿಂದ ಅಲ್ಲಿ ನಿಂತನು. ಹನುಮಂತನು ಹಿಂದೆ ಲಂಕೆಗೆ ಹಚ್ಚಿದ ಬೆಂಕಿಯಂ[illegible]ತೆ ಭೋರ್ಗರೆಯುತ್ತ ಮಿತಿಮೀರಿ ಉರಿಯು ಪ್ರಜ್ವಲಿಸಿತು. ೧೧. ನಿದ್ದೆಯನ್ನು ಜಾ[illegible]ಡಿಸಿ ಎಲ್ಲ ಯುದ್ಧದ ತುರ್ತುಕಾಲದ ರಾಕ್ಷಸಸೈನ್ಯವು ಆನೆಗಳನ್ನು ತೆಗೆದುಕೊಂಡು ರಥ[illegible]ಗಳ ಸಮೇತ ಶೀಘ್ರವಾಗಿ ಬಂದು ಕೂಡಿತು. ಆಯುಧಗಳಿಂದ ಸಜ್ಜಿತರಾದ ಚಿನ್ನದ ಬತ್ತ[illegible]ಳಿಕೆಗಳನ್ನು ಧರಿಸಿದ ಬಿರುದಿನ ಪಾಳಯದ ವೀರರು ಸ್ವೇಚ್ಛೆಯಾಗಿ ಸುತ್ತಾಡಿ ವಾನರರನ್ನು[illegible]

ಕುಂಭನೊಂದೆಸೆಯಲಿ ರಣೋಗ್ರನಿ । ಕುಂಭನೊಂದೆಸೆಯಲಿ ಮಹಾಗ್ನಿ
ಸ್ತಂಭನೆಯ ಖಳರೊಗ್ಗಿನಲಿ ತಗ್ಗಿಸಿದರಿವರಧಟ
ಜಂಭರಿಪುಜಿತು ಬೆಱಗುಗೊಂಡು ನಿ । ಕುಂಭಿಳೆಯ ಸಮ್ಮುಖ ಮುಖಸ್ವಾ
ಯಂಭುಶರ ಕನಸಾಯ್ತೆನುತ ಹೊಱವಂಟನರಮನೆಯ ೧೨

ಬೆರಸಿತಾತನ ಬಳಿಯಲಂದಿನ । ಖರನ ಮಗ ಮಕರಾಕ್ಷ ರಜನೀ
ಚರ ಸುಪಾರ್ಶ್ವಕ ಶೋಣಿತಾಕ್ಷ ಪ್ರಮುಖ ಭಟನಿಕರ
ಸರಳ ಸಾರದಲಟ್ಟಿಗಳನಿಳೆ । ಗಿರಿಸಿ ನಭಕೆಬ್ಬಿಸಿದರಹಿತರ
ಶಿರವನುರಿಗೊಳ್ಳಿಗಳ ಬೆಳಗಂತರಿಸೆ ನಗರದಲಿ ೧೩

ಜಱಿದು ಜೋಡಿಸಿ ಕೇರಿಕೇರಿಯೊ । ಳಿಱಿತಕಾಱರನಿಕ್ಕಿದರು ಮು
ಕ್ಕುಱುಕಿ ಮುಂಬರಿವತಿಬಲರ ಸೆಕ್ಕಿದರು ಸಬಳದಲಿ
ತಱುಬಿ ಕಾದುವ ಕಲಿಗಳೆಲುಗಳ । ಮುಱಿದು ರಕುತವ ಹಿಂಡಿ ನೆತ್ತರ
ತೊಱೆಯ ಹರಿಸಿದರೂರೊಳಗಲದಲಸುರಭಟನಿಕರ ೧೪

ಅಲ್ಲಿಗಲ್ಲಿಗೆ ತಱುಬಿ ಕಾದುವ । ಕಲ್ಲು ಮರದಣ್ಣಗಳನಗ ಲಕೆ
ಕೊಲ್ಲುಗೊಲೆಯಲಿ ಕೊಂದು ಕೊಡಹಿದರುಸುರ ಹಸರಗಳ
ಹಲ್ಲುಗಿರುಕಿನ ಹುಣುಬುದಲೆಗಳ । ತಲ್ಲಣದ ತಳವೇಲುಗಳ ಕೈ
ಗಲ್ಲಗಳ ಹರಿಸೇನೆ ಸೈಗೆಡೆದಿರ್ದುದಗಲದಲಿ ೧೫

ಓಡಿಸಿದರು. ೧೨. ಕುಂಭನು ಒಂದು ಕಡೆಯಲ್ಲಿ, ಯುದ್ಧಭಯಂಕರ ನಿಕುಂಭನು ಇನ್ನೊಂದು ಕಡೆಯಲ್ಲಿ ಬೆಂಕಿಯನ್ನು ತಡೆಯುವ ಪ್ರಯತ್ನದಲ್ಲಿದ್ದ ರಾಕ್ಷಸರ ಗುಂಪಿನೊಡನೆ ಸೇರಿ ವಾನರರ ಪರಾಕ್ರಮವನ್ನು ಕುಗ್ಗಿಸಿದರು. ಇಂದ್ರಜಿತು ಇದನ್ನು ನೋಡಿ ನಿಕುಂಭಿಳಾದೇವಿಯ ಎದುರಿನಲ್ಲಿ ಬ್ರಹ್ಮಾಸ್ತ್ರವು ಕನಸಾಯಿತು ಎಂದುಕೊಳ್ಳುತ್ತ ಅರಮನೆಯಿಂದ ಹೊರಟನು. ೧೩. ಖರನ ಮಗ ಮಕರಾಕ್ಷ, ಅಸುರರಾದ ಸುಪಾರ್ಶ್ವಕ, ಶೋಣಿತಾಕ್ಷ ಮೊದಲಾದ ಪ್ರಮುಖ ವೀರರು ಇಂದ್ರಜಿತುವನ್ನು ಕೂಡಿಕೊಂಡರು. ಅವರು ಬಾಣಗಳ ಮಳೆ ಸುರಿಸಿ, ವಾನರರ ತಲೆಕಡಿದ ದೇಹಗಳನ್ನು ನೆಲಕ್ಕೆ ಬೀಳಿಸಿ ಆಕಾಶಕ್ಕೆ ಹಾರಿಸಿದರು. ಆಗ ನಗರದಲ್ಲಿ ಉರಿಗೊಳ್ಳಿಗಳ ಬೆಳಕು ನಂದಿಹೋಯಿತು. ೧೪. ಗದರಿಸುತ್ತ ಒಟ್ಟುಗೂಡಿ ರಾಕ್ಷಸವೀರರು ಕೇರಿಕೇರಿಗಳಲ್ಲಿನ ವಾನರಸೈನಿಕರನ್ನು ಕೊಂದುಹಾಕಿದರು ; ಮುಕ್ಕುರುಕಿ ಮುಂದುವರಿಯುವ ಬಲಶಾಲಿಗಳನ್ನು ಈಟಿಗೆ ಸಿಕ್ಕಿಸಿದರು ; ಮುತ್ತಿ ಕಾದುವ ವೀರರ ಮೂಳೆಮುರಿದು ರಕ್ತವನ್ನು ಹಿಂಡಿ ನಗರದ ಎಲ್ಲೆಡೆಯೂ ರಕ್ತದ ಹೊಳೆಯನ್ನು ಹರಿಸಿದರು. ೧೫. ಅಲ್ಲಲ್ಲಿ ಅಡ್ಡಗಟ್ಟಿ ಕಾದುವ ಕಲ್ಲುಮರಗಳನ್ನು ಆಯುಧವಾಗಿ ಬಳಸಿದ ವಾನರರನ್ನು ಅಸುರರು ಕಗ್ಗೊಲೆಮಾಡಿ ಕೊಂದು ಅವರ ಪ್ರಾಣಗಳನ್ನು ಕೊಡವಿಹಾಕಿದರು. ಹಲ್ಲುಗಿರಿದ, ಬಾಣ ಚುಚ್ಚಿಕೊಂಡ ತಲೆಗಳ, ಕಳವಳದಿಂದ ಕೂಡಿ ಗಲ್ಲಗಳಿಗೆ ಕೈಹಚ್ಚಿದ ವಾನರಸೈನ್ಯವು ಅಡಿಮೇಲಾಗಿ

ಬಳಿಕ ನಳ ನೀಲಾದಿ ಸುಭಟಾ । ವಳಿಗಳೊತ್ತಂಬರಿಸಿ ರಕ್ಕಸ
ದಳವನಾನುತ ನಿಲುತ ತಾಗುತ ತೆಗೆವುತವುಕುತಲಿ
ಕಲಹವನು ಕೈಕಟ್ಟಿಕೊಂಡೊಡ । ನಿಳಿದರಾ ದುರ್ಗವನು ಭಯದಲಿ
ನಳಿನಸಖನೇಱಿದನು ದುರ್ಗವನಿಂದ್ರದಿಕ್ತಟವ ೧೬

ಮೋಹರಿಸಿದವು ಕಳನೊಳಗೆ ಸ । ನ್ನಾಹದಲಿ ಬಲವೆರಡು ಬಳಿಕು
ತ್ಸಾಹರಣಭೇರಿಗಳು ಮೊಳಗಿದವಸುರಸೇನೆಯಲಿ
ವಾಹವಾರಣ ವರವರೂಥ । ವ್ಯೂಹ ವೀರ ಪದಾತಿಚಯವವ
ಗಾಹಿಸಿತು ಕಾಳೆಗಕೆ ಕಪಿಸೇನಾಕದಂಬದಲಿ ೧೭

ನೆಲದಮೇಲೆ ಎಲ್ಲ ಕಡೆಯೂ ಸಾಷ್ಟಾಂಗವಾಗಿ ಬಿದ್ದಿತ್ತು. ೧೬. ಬಳಿಕ ನಳ ನೀಲಾದಿ ವಾನರವೀರರು ಮುತ್ತಿ ರಾಕ್ಷಸದಳವನ್ನು ಎದುರಿಸಿ ನಿಂತು ಅವರ ಮೇಲೆ ಬಿದ್ದು ಒತ್ತರಿಸುತ್ತ ಯುದ್ಧಮಾಡುತ್ತ ಭಯದಿಂದ ಕೋಟೆಯನ್ನಿಳಿದುಬಂದರು. ಆಗ ಪೂರ್ವದಿಕ್ಕಿನಲ್ಲಿ ಸೂರ್ಯನು ಹುಟ್ಟಿದನು. ೧೭. ಯುದ್ಧರಂಗದಲ್ಲಿ ವಾನರ ರಾಕ್ಷಸ ಸೈನ್ಯಗಳೆರಡೂ ಯುದ್ಧಸನ್ನದ್ಧವಾದವು. ರಾಕ್ಷಸಸೈನ್ಯದಲ್ಲಿ ರಣಭೇರಿಗಳು ಭೋರ್ಗರೆದವು. ಕುದುರೆ ಆನೆ ರಥಗಳ ವ್ಯೂಹದೊಡನೆ ರಾಕ್ಷಸ ಕಾಲುಬಲವು ಕಪಿಸೈನ್ಯದ ಮೇಲೆ ಬಿದ್ದಿತು.

# ಮೂವತ್ತೆಂಟನೆಯ ಸಂಧಿ

ಸೂಚನೆ॥ ವೈರಿವಿಜಯಸ್ತಂಭನನು ಜ । ಜ್ಝಾರಬಲಸಂರಂಭನನು ರಣ
ವೀರರಸಕುಂಭನನು ಕೆಡಹಿದನಾಜಿಯಲಿ ರವಿಜ

ಎಲೆ ಧರಾಧಿಪಸೂನು ಕೇಳ್ ಬಲ । ಬಲಕೆ ತಲೆಮುಟ್ಟಾಯ್ತು ದಿವಿಜಾ
ವಳಿಯೊಳಂದು ನಿಶಾಟಬಲ ಮಲೆತಾಂತು ನಿಂದಂತೆ
ಕಲುಮರನ ಕೈದುಗಳ ನೆಗಹಿನ । ಕಳಕಳದ ಬೊಬ್ಬೆಗಳ ಕೋಳಾ
ಹಳದ ಕೈಮನದುಭಯಬಲ ಮೋಹಿದುದು ಮುಂಬಿನಲಿ ೧

ತೆಗೆದು ತಲೆಯೊತ್ತುವ ನಿಯುದ್ಧದ । ತಗರಿನಂತತಿಬಲವ ಪಳಚಿದ
ರಗಮಹೀಜಾಯುಧದಲಿಪರವರಸ್ತ್ರಸಾರದಲಿ
ಗಗನವನು ಹೂಳಿದರು ಹೊದೆಸಿತು । ಜಗಗಳನು ಪದಧೂಳಿ ಧೂಳಿಯ
ನೆಗಹಿ ನೆತ್ತರುಗಡಲೊಳದ್ದಳವೆದ್ದುದಗಲದಲಿ ೨

ಬೆರಸಿ ಧಾಳಾಧೂಳಿಯಲಿ ಬೊ । ಬ್ಬಿರಿಸಿ ಖಾಡಾಖಾಡಿಯಲಿ ಮೋ
ಹರಿಸಿ ಮೋಡಾಮೋಡಿಯಲಿ ಮುಷ್ಟಿಪ್ರಹಾರದಲಿ
ಗಿರಿಗದಾಘಾತದಲಿ ಖಂಡೆಯ । ತರುವಿಘಾತಿಯಲಂಬುಕಲುಗಳ
ಕರಚಮತ್ಕೃತಿಯಿಂದ ಕಾದಿತು ಸೇನೆ ಸೇನೆಯಲಿ ೩

ಸೂಚನೆ॥ ಶತ್ರುಗಳನ್ನು ಗೆದ್ದು ವಿಜಯಸ್ತಂಭ ನೆಡಿಸಿದ, ವೀರಸೇನಾ ಸಂಭ್ರಮಿಯಾದ ರಣವೀರ ಕುಂಭನನ್ನು ಸುಗ್ರೀವನು ಯುದ್ಧದಲ್ಲಿ ಕೆಡವಿದನು. ೧. ಎಲೈ ರಾಜಕುಮಾರ ಕೇಳು. ರಾಕ್ಷಸ ಸೈನ್ಯವು ಪ್ರತಿಭಟಿಸಿ ನಿಲ್ಲಲು ದೇವತೆಗಳ ಸೈನ್ಯಸೈನ್ಯಗಳ ನಡುವೆ ತಲೆತಲೆ ತಿಕ್ಕಾಟವಾಯಿತು. ಕಲ್ಲುಮರಗಳನ್ನೂ ಆಯುಧಗಳನ್ನೂ ಎತ್ತಿಹಿಡಿದುಕೊಂಡು ಬೊಬ್ಬೆಹಾಕುತ್ತ ಕೋಲಾಹಲ ಮಾಡುತ್ತ ಹುರುಪಿನ ವಾನರ ರಾಕ್ಷಸಸೈನ್ಯಗಳು ಮುಂಬದಿಯಲ್ಲಿ ಕಾದಾಡಿದವು. ೨. ತಲೆಯಿಂದ ಗುದ್ದಿ ಕಾದಾಡುವ ಕಾಳಗದ ಟಗರಿನಂತೆ ಮಹಾಸೈನ್ಯವನ್ನು ಮುತ್ತಿದರು. ವಾನರರು ಬೆಟ್ಟಮರಗಳಿಂದಲೂ ಅಸುರರು ಅಸ್ತ್ರಗಳಿಂದಲೂ ಆಕಾಶವನ್ನು ಮುಚ್ಚಿಬಿಟ್ಟರು. ಕಾಲ್ತುಳಿತದಿಂದೆದ್ದ ಧೂಳು ಲೋಕಗಳನ್ನು ಆವರಿಸಿತು. ಧೂಳಿನ ಮೇಲೆದ್ದ ರಕ್ತದ ಮಡುವಿನಲ್ಲಿ ಬೊಬ್ಬೆಯೋಬೊಬ್ಬೆಯಾಯಿತು. ೩. ಧಾಳಾಧೂಳಿಯಿಂದ ಮೇಲೆ ಬಿದ್ದು ಮುತ್ತಿ ಖಡಾಖಡಿ ಯುದ್ಧದಲ್ಲಿ ತಿವಿದು ಮೋಡಾಮೋಡಿಯುದ್ಧದಲ್ಲಿ ಚಮತ್ಕಾರದಿಂದ ಹೊಡೆದು ಮುಷ್ಟಿಯೇಟು, ಬೆಟ್ಟ ಮತ್ತು ಗದೆಗಳ ಹೊಡೆತ, ಖಡ್ಗ ಮತ್ತು ಮರಗಳ ಪೆಟ್ಟು, ಕಲ್ಲು ಮತ್ತು ಬಾಣಗಳ ಚಮತ್ಕಾರದ ಎಸೆಯುವಿಕೆಗಳಿಂದ ಎರಡು ಸೈನ್ಯಗಳೂ

ಚೂಣಿ ಬಿದ್ದುದು ಜವನದೂತ । ಶ್ರೇಣಿಯೆದ್ದುದು ಭೂತಯೂಥದ
ಜಾಣಗತಿಯಲಿ ಕೈಯೊಡನೆ ಕುಂಭನ ಕರಾಯತದ
ಬಾಣವೃಷ್ಟಿಯು ಬಹಳತೆಯು ಸರಿ । ಗಾಣಿಸಿತು ಕಪಿಯೂಥನಾಥರ
ತಾಣದಲಿ ತಳವೆಳಗುಗೊಳೆ ತರಣಿಜ ಸಮೀರಜರು ೪

ತಾಗಿದನು ರಘಾಡಿಸಿದು ರಣಗಲಿ । ಯಾಗಿ ಪವನಜ ಪತಂಗಜ ಪಡಿ
ಲಾಗಿನಲಿ ಪಾವಕನ ಪಂಕೇಜಜನ ನಂದನರ
ತಾಗಿ ಗವಯನ ಗಜ ಗವಾಕ್ಷರ । ಕೂಗಿಡಿಸಿ ಪರಿಭವಿಸಿ ರವಿಜನ
ಮೇಗೆ ಬಿದ್ದನು ಕುಂಭಸಹಿತ ವಿಜೃಂಭನುರವಣಿಸಿ ೫

ಮೂಕೊಜೀಯರೈ ರಕ್ಕಸರು ನಿಮ । ಗೇಕೆಲವೊ ರಣವಕಟ ತಂದೆಯ
ಕೊಯ್ಕತನವನು ಕಾಣುತಂಗೈಸುವರೆ ಸಂಗರಕೆ
ಕಾಕಬಲನವನೊಬ್ಬ ಸಂಜೆಯ । ಸೋಕಿನಲಿ ಸುಳಿವವನು ಕಳವಿನ
ಕೈಕರಣೆಯವನೊಬ್ಬ ಭಂಡರು ಜಗಕೆ ಖಳರೆಂದ ೬

ಎಷ್ಟು ಸಾಹಸಗೊಂಡಡೆಯು ನಿ । ಮ್ಮಿಷ್ಟ ಕೈವಶವಾಗದಿದು ಪರ
ಮೇಷ್ಠಿಲಿಖಿತ ತದೀಯ ಲಿಖಿತವ ಮೀಜಲಾರಳವು
ಭ್ರಷ್ಟತನದಲಿ ನಡೆದು ಲೋಕಕೆ । ಕಷ್ಟರಾದಿರಲಾಯೆನುತ ಬಲು
ಮುಷ್ಟಿಯನು ಬಲಿದೆಱಗಿದನು ಕಲಿಕುಂಭನನು ರವಿಜ ೭

ಪರಸ್ಪರ ಕಾದಾಡಿದವು. ೪. ಸೈನ್ಯಗಳ ಮುಂದಳವು ಬಿದ್ದಿತು, ಯಮನ ದೂತರ ಸಾಲು ಎದ್ದು ಬಂದಿತು. ಭೂತಗಣಗಳ ಜಾಣ ನಡಿಗೆಗೆ ಸಮವಾಗಿ ಕುಂಭನ ನಿಪುಣ್ಯೆಗಳಿಂದ ಹೊರಟ ಬಾಣಗಳ ಮಳೆ ಕಪಿಸೇನಾನಾಯಕರ ಸ್ಥಳದಲ್ಲಿ ಸುರಿಯಿತು. ಇದನ್ನು ಕಂಡು ಸುಗ್ರೀವ ಹನುಮಂತರು ದಿಗ್ಭ್ರಾಂತರಾದರು. ೫. ಕುಂಭನು ಸುಗ್ರೀವ ಹನುಮಂತರ ಮೇಲೆ ಪ್ರತಿಪಟ್ಟಿನಿಂದ ನೆಗೆದು ಎಗರಿದನು. ನೀಲ ಜಾಂಬವಂತರ ಮೇಲೆ ಬಿದ್ದು ಗವಯ, ಗಜ, ಗವಾಕ್ಷರುಗಳನ್ನು ಕೂಗಿಡಿಸಿ ಸೋಲಿಸಿ ಕುಂಭನ ಜತೆ ಸೇರಿ ವಿಜೃಂಭನು ರಭಸದಿಂದ ಸುಗ್ರೀವನ ಮೇಲೆ ಬಿದ್ದನು. ೬. "ರಾಕ್ಷಸರು ಮೂಗುಹರುಕ ಮರ್ಯಾದಾಹೀನರು. ನಿಮಗೇಕೋ ಯುದ್ಧ ? ಅಯ್ಯೋ, ತಂದೆಯ ಕುಹಕತನವನ್ನು ನೋಡಿಯೂ ಯುದ್ಧಕ್ಕಾಶಿಸುವರೆ ? ಅವನೊಬ್ಬ ನೀಚಬಲದವನು, ರಾತ್ರಿಯಲ್ಲಿ ಸುಳಿಯುವ ಕಳ್ಳತನದ ಕೈಚಳಕದವನು ಒಬ್ಬ. ಈ ಜಗತ್ತಿನ ರಾಕ್ಷಸರು ಭಂಡರು" ಎಂದ ಸುಗ್ರೀವ. ೭. "ಎಷ್ಟು ಸಾಹಸ ಕೈಗೊಂಡರೂ ನಿಮ್ಮಿಷ್ಟ ನೆರವೇರದು ; ಇದು ವಿಧಿಯ ಬರೆಹ. ಬ್ರಹ್ಮನ ಬರೆಹವನ್ನು ಯಾರು ಮೀರಬಲ್ಲರು ? ದುರಾಚಾರಿಗಳಾಗಿ ನಡೆದುಕೊಂಡು ಲೋಕಕ್ಕೆ ತೊಂದರೆ ಕೊಡುವವರಾದಿರಲ್ಲಾ" ಎನ್ನುತ್ತ ಬಿಗಿಮುಷ್ಟಿ

ಅಣೆದು ಗದೆಯಲಿ ರವಿಸುತನ ಬಲು । ಕಣೆಯು ಮುಷ್ಟಿಯಲಸುರನಾ ದಿಗು
ಗಣವು ಮಾರ್ದನಿದೋಱಲಾಯೆಂದೆಱಗಿದನು ಕಪಿಯು
ಕಣ್ಗಳಲಿ ದೀವಿಗೆಯು ಬೆಳಗೋ । ರಣಿಸೆ ಬಿದ್ದನು ನೆಲಕೆ ಬಿದ್ದಾ
ಕ್ಷಣದೊಳೆದ್ದಬ್ಬರಿಸಿ ತುಡುಕಿದನರಿಭಟನ ರಥವ ೮

ಎದ್ದ ಭರದೊಳಗೀತ ರಿಪುರಥ । ದುದ್ದಿಗೆಯ ಹಿಡಿದಿಟ್ಟನಾ ರಥ
ಬಿದ್ದುದಂಬರನದಿಯೊಳಂಬರಚರರು ಕೊಂಡಾಡೆ
ಹದ್ದು ಹಾವಿಂಗೆಱಗುವವೊಲವ । ನದ್ದಲಿಸುತೈತಂದು ರವಿಜನ
ಗುದ್ದಿದನು ಗುಡಿಯುಱೆವ ಕೋಪದಲವನಿ ದನಿದೋಱೆ ೯

ರಾವಣನ ಕರಘಾತದಲಿ ಕಲಿ । ಪಾವಮಾನಿ ಮಹಾವ್ಯಥೆಯು ಗತ
ರಾವದಲಿ ರಣ ಮುಱಿದು ನೊಂದವೊಲಿನಜನುಱೆ ನೊಂದು
ತೀವಿದತಿಶಯ ಕೋಪದಲಿ ಮಗು । ೞಾ ವಿಬುಧ ವಿದ್ವಿಷನ ವಿಪುಳ
ಗ್ರೀವವನು ತಿವಿದಾಯೆನುತ ಭುಜವೊಯ್ದು ಬೊಬ್ಬಿಱಿದ ೧೦

ದೊಪ್ಪನವನಾ ಘಾಯದಲಿ ನೆಲ । ಕಪ್ಪಳಿಸೆ ಕಂಡನಿಲಸುತನೆ
ನ್ನಪ್ಪ ಬಾಯೆನ್ನಯ್ಯ ಮಾಮಾ ಲೇಸುಲೇಸೆನುತ
ಉಪ್ಪರಿಸಿ ಕುಣಿದಾಡಿ ಕುಬುಬಿಱೆ । ದಪ್ಪಿದನು ಯುವರಾಜನನು ಮೇ
ಲಿಪ್ಪ ಸುರರಿಗೆ ತೋಱೆ ಕೊಂಡಾಡಿದನು ಕಪಿವರನ ೧೧

ಸುಗ್ರೀವನು ಕುಂಭನ ಮೇಲೆರಗಿದನು. ೮. ಸುಗ್ರೀವನನ್ನು ಗದೆಯಿಂದ ಹೊಡೆದು ಕುಂಭನು ದಿಕ್ಕುಗಳು ಪ್ರತಿಧ್ವನಿಸುವಂತೆ 'ಆ' ಎಂದು ಆರ್ಭಟಿಸಿ ಬಿಗಿಮುಷ್ಟಿಯಿಂದ ಸುಗ್ರೀವನ ಮೇಲೆರಗಿದನು. ದೀಪದ ಬೆಳಗು ಬಿದ್ದಂತೆ ಕಣ್ಣುಗಳು ಬೆಳ್ಳಗಾಗಲು ಸುಗ್ರೀವನು ನೆಲಕ್ಕೆ ಬಿದ್ದನು ; ಬಿದ್ದ ಮರುನಿಮಿಷದಲ್ಲಿಯೇ ಮೇಲಕ್ಕೆದ್ದು ಅಬ್ಬರಿಸಿ ಶತ್ರುವೀರನ ರಥವನ್ನು ಹಿಡಿದನು. ೯. ಎದ್ದ ರಭಸದಲ್ಲಿ ಸುಗ್ರೀವನು ಶತ್ರುರಥದ ಮುಂಭಾಗದ ಈ ಸಮರವನ್ನು ಹಿಡಿದು ಆಕಾಶಕ್ಕೆ ಬೀಸಿ ಎಸೆದನು. ಆ ರಥವು ಆಕಾಶ ಗಂಗಾನದಿಯಲ್ಲಿ ಹೋಗಿ ಬಿದ್ದಿತು ; ಅದನ್ನು ಕಂಡ ದೇವತೆಗಳು ಸುಗ್ರೀವನನ್ನು ಕೊಂಡಾಡಿದರು. ಹದ್ದು ಹಾವಿನ ಮೇಲೆರಗುವಂತೆ ಕುಂಭಾಸುರನು ಮಿತಿಮೀರಿದ ಕೋಪದಿಂದ ಭೂಮಿಯು ಪ್ರತಿಧ್ವನಿಸುವಂತೆ ಅಬ್ಬರಿಸುತ್ತ ಬಂದು ಸುಗ್ರೀವನನ್ನು ಗುದ್ದಿದನು. ೧೦. ರಾವಣನ ಕೈಯೇಟಿಗೆ ಹನುಮಂತನ ಸ್ವರ ಉಡುಗಿ ಉತ್ಸಾಹ ಭಂಗವಾಗಿ ಅವನು ನೊಂದ ಹಾಗೆ ಸುಗ್ರೀವನು ಪೆಟ್ಟುತಿಂದು ಅತಿಶಯ ಕೋಪದಿಂದ ಪುನಃ ರಾಕ್ಷಸನ ಭಾರಿ ಕತ್ತಿನ ಮೇಲೆ ಅಪ್ಪಳಿಸಿ 'ಆ'ಯೆಂದು ಕೂಗುಹಾಕಿ ಭುಜ ವನ್ನಪ್ಪಳಿಸಿದನು. ೧೧. ಕುಂಭನು ಸುಗ್ರೀವನ ಏಟಿಗೆ ದೊಪ್ಪನೆ ನೆಲಕ್ಕೆ ಅಪ್ಪಳಿಸಿ ಬಿದ್ದನು. ಇದನ್ನು ನೋಡಿ ಹನುಮಂತನು, "ನನ್ನಪ್ಪ, ಬಾ, ನನ್ನಯ್ಯ ಭೇಷ್, ಒಳ್ಳೆಯದು ಮಾಡಿದೆ" ಎನ್ನುತ್ತ ನೆಗೆದು ಕುಣಿದಾಡಿ ಕುಬುಬೆಂದು ಕೂಗುತ್ತ ಅವನನ್ನು ಅಪ್ಪಿಕೊಂಡನು. ಯುವರಾಜನನ್ನು ಮೇಲಿರುವ ದೇವತೆಗಳಿಗೆ ತೋರಿಸಿ

ಎದ್ದನವನಿನನಂದನನ ಬಲು । ಗುದ್ದ ಬಗೆಯದೆ ಬಱಸಿಡಿಲು ಮಾಳಿ
ಬಿದ್ದ ಮಂದರಗಿರಿಯ ಮಂಡೆಯನೆಱಗುವಂದದಲಿ
ಅದ್ದಲಿಸುತೆಱಗಿದನು ಕಂಗಳು । ಕದ್ದವೈ ಕತ್ತಲೆಯನಿರುಳಿನ
ಮದ್ದ ನೆನೆದನು ನೊಂದು ಕಲಿಗಳದೇವ ಸುಗ್ರೀವ ೧೨

ತರಹರಿಸಿಕೊಂಡೊಡನೆ ರವಿಸುತ । ನುರುತರಕ್ರೋಧದಲಿ ಕುಂಭನ
ಶಿರವ ತಿವಿದನು ತಿವಿದ ಘಾಯವ ಗಣಿಸದಬ್ಬರಿಸಿ
ಗಿರಿಗುಹಾವಳಿಯುದಲಿ ಬಲು ನಿ । ಷ್ಠುರದ ಮುಷ್ಟಿಯ ಸಬುದ ಸುಳಿಯಲು
ಮುರಳಿ ತಿವಿದನು ನಿಮ್ಮ ರಘುರಾಜೇಂದ್ರಬಾಂಧವನ ೧೩

ತಿವಿದ ಘಾಯವನಣೆದು ಮುಷ್ಟಿಯ । ಲವಣೆಯಿಂದೆಱಗಿದನು ಕುಂಭ
ಶ್ರವಣಜನ ಕುಂಭಾಂಬುವೆನಲಂಬುಧಿಯು ತುಳುಕಾಡೆ
ಕವಿದು ಬಿದ್ದನು ನೆಲಕೆ ನೆಲ ಭಾ । ರವಿಸಿತಹಿಪನ ಶಿರಕೆ ಶಿರದಲಿ
ನವರುಧಿರ ಹೊಱವಂಟವಾ ಬಿಱುಸಿಗೆ ದಿಶಾಗಜದ ೧೪

ಬಿದ್ದ ಕುಂಭನ ಕಾಲ ಹಿಡಿದು । ಬ್ಬೆದ್ದು ನಭದಲಿ ತಿರುಹಿ ಕಲಹದ
ಬಿದ್ದಿಕಾಱರ ದೇವದೇವಾದಿಗಳುಘೇಯೆನಲು
ಅದ್ದಿಸಿದನಿಟ್ಟಬುಧಿಯೊಳಗವ । ನೆದ್ದು ಹರಿತಂದಿನತನೂಜನ
ಗದ್ದವನು ಹಿಡಿದಿಱುಕಿ ಕೋಪದೊಳೆಱಗಿ ಬೊಬ್ಬಿಱಿದ ೧೫

ಕಪಿಶ್ರೇಷ್ಠ ಸುಗ್ರೀವನನ್ನು ಕೊಂಡಾಡಿದನು. ೧೨. ಸುಗ್ರೀವನ ಭಾರಿಗುದ್ದನ್ನು ಲಕ್ಷಿಸದೆ ಕುಂಭನು ಮೇಲೆದ್ದು ಬರಸಿಡಿಲು ಕೆರಳಿ ಎದ್ದು ಮಂದರಪರ್ವತದ ನೆತ್ತಿಯ ಮೇಲೆರಗುವಂತೆ ಆರ್ಭಟಿಸುತ್ತ ಸುಗ್ರೀವನ ಮೇಲೆ ಬಿದ್ದನು. ವೀರ ಸುಗ್ರೀವನ ಕಣ್ಣುಗಳಿಗೆ ಕತ್ತಲೆ ಹಿಡಿಯಿತು. ಕತ್ತಲೆಯ ಮದ್ದನ್ನು ಸ್ಮರಿಸಿಕೊಂಡು ನೊಂದನು. ೧೩. ಸ್ಥಿರಿಸಿಕೊಂಡು ತಕ್ಷಣ ಸುಗ್ರೀವನು ಉಗ್ರಕೋಪದಿಂದ ಕುಂಭನ ತಲೆಗೆ ಗುದ್ದಿದನು. ಸುಗ್ರೀವನ ಮುಷ್ಟಿಯ ಪೆಟ್ಟನ್ನು ಲಕ್ಷಿಸದೆ ಬೆಟ್ಟಗಳ ಗುಹೆಗಳಿಂದ ಬಗಿದ ಮುಷ್ಟಿಯ ಕಠಿಣಶಬ್ದವು ಪ್ರತಿಧ್ವನಿಸುವಂತೆ ಕುಂಭನು ಪುನಃ ಸುಗ್ರೀವನನ್ನು ತಿವಿದನು. ೧೪. ಕುಂಭಾಸುರನ ತಿವಿತದಿಂದಾದ ಪೆಟ್ಟನ್ನು ತಡೆದು ಸುಗ್ರೀವನು ಮುಷ್ಟಿಯನ್ನು ಚಮತ್ಕಾರವಾಗಿ ತಿರುಗಿಸಿ ಕುಂಭಕರ್ಣನ ಮಗನ ಮೇಲೆರಗಿದನು. ಗಡಿಗೆಯ ನೀರೋ ಎನ್ನುವಂತೆ ಸಮುದ್ರವು ತುಳುಕಾಡಲು ಕುಂಭನು ನೆಲಕ್ಕೆ ಬಿದ್ದನು. ಆ ರಭಸಕ್ಕೆ ಆದಿಶೇಷನ ತಲೆಗೆ ಭೂಮಿ ಭಾರವಾಯಿತು ; ದಿಗ್ಗಜಗಳ ತಲೆಯಿಂದ ಬಿಸಿರಕ್ತ ಸುರಿಯಿತು. ೧೫. ಕೆಳಕ್ಕೆ ಬಿದ್ದ ಕುಂಭಾಸುರನ ಕಾಲನ್ನು ಯುದ್ಧೋತ್ಸಾಹಿಗಳೊಡೆಯ ಸುಗ್ರೀವನು ಉತ್ಸಾಹದಿಂದ ಎತ್ತಿ ಆಕಾಶದಲ್ಲಿ ತಿರುಗಿಸಿ ದೇವತೆಗಳು ಉಘೇ ಎಂದು ಹೊಗಳುತ್ತಿರುವಂತೆ ಹಿಂಸಿಸಿ ಸಮುದ್ರಕ್ಕೆ ಎಸೆದನು. ಅವನು ಅಲ್ಲಿಂದ ಎದ್ದುಬಂದು

ಮುಳಿದು ಮರ್ಕಟರಾಯ ಪುನರಪಿ । ಮುಳುಗಿಸಿದನಿಟ್ಟಂಬುಧಿಯೊಳವ
ಘಳಿದು ತಿವಿದನು ತರಣಿಜನನಾ ತರಣಿಸುತ ಖಳನ
ಜಲಧಿಗಿಟ್ಟನು ಮತ್ತೆ ಮತ್ತವ । ಹಳಚಿದನು ಹರಿದಶ್ವತನುಜನ
ಘಳಿಗೆ ನಡೆದುದು ಸಮರವೀಪರಿ ಸುಮನಸರು ಪೊಗಳೆ ೧೬

ಸಾಯನವನೀ ಪರಿಯಲೆಂದಸ । ಹಾಯಶೂರಂಗೆಚ್ಚರಿಸಿದನು
ಮಾಯ ಹೊಗದ ನಿಜೈಕಕರಣನು ಬೆರಳ ಸನ್ನೆಯಲಿ
ರಾಯನಲ್ಲಾ ವೀರರಿಗೆ ರಘು । ರಾಯಬಾಂಧವ ಬಳಿಕವನ ಬಲು
ಕಾಯವನು ಸೀಳಿದನು ಹೋಳೆರಡಾಗಿ ನಿಮಿಷದಲಿ ೧೭

ಇಟ್ಟನದರೊಳಗೊಂದು ಹೋಳನು । ಪಟ್ಟಣಕೆ ಪೌಲೋಮಿಯರಸನ
ಪಟ್ಟಣಕೆ ಮಗುಳೊಂದ ಕಳುಹಿದನಾ ಕೃತಾಂತಕನ
ಇಟ್ಟ ಹಾರವ ಹರಸಿ ಮುಗಿಲಿನ । ಬಟ್ಟೆಗರ ಕೈಯಿಂದ ಕಳುಹಿದ
ನಿಟ್ಟೆಡೆಯ ಹರುಷದಲಿ ನಿಜನಂದನಗೆ ದಿನನಾಥ ೧೮

ಸುರರು ಬಳಿಕುಬ್ಬರಿಸಿದು ಹೂವಿನ । ಸರಿಯ ಸುರಿದರು ಸೂತಮಾಗಧ
ರೆರಡು ಮಯ್ಯಲಿ ಹೊಗಳಿದರು ಕೊಂಡಾಡಿ ಕಪಿವರನ
ಸರಿಯದಾರೈ ನಿನಗೆ ನಂಬುಗೆ । ಗೆರವ ತಾರದೆ ಸ್ವಾಮಿಕಾರ್ಯದ
ದುರಧುರೀಣತೆ ನಿನ್ನೊಳಾಯ್ತೆಂದಮರಮುನಿ ನುಡಿದ ೧೯

ಸುಗ್ರೀವನ ಗದ್ದವನ್ನು ಅದುಮಿಹಿಡಿದು ಕೆರಳಿ ಮೇಲೆರಗಿ ಆರ್ಭಟಿಸಿದ. ೧೬. ವಾನರೇಶ್ವರ ಸುಗ್ರೀವನು ಕೋಪದಿಂದ ಪುನಃ ಕುಂಭನನ್ನು ಸಮುದ್ರಕ್ಕೆ ಎಸೆದು ಮುಳುಗಿಸಿದನು. ಅವನು ಎದ್ದುಬಂದು ಸುಗ್ರೀವನನ್ನು ಮುಷ್ಟಿಯಿಂದ ಹೊಡೆದನು. ಸುಗ್ರೀವನು ಪುನಃ ಕುಂಭನನ್ನು ಸಮುದ್ರಕ್ಕೆ ಎಸೆದನು. ಪುನಃ ಕುಂಭನು ಎದ್ದುಬಂದು ಸುಗ್ರೀವನ ಮೇಲೆರಗಿದನು. ದೇವತೆಗಳು ಹೊಗಳುತ್ತಿರಲು ಈ ರೀತಿಯಲ್ಲಿ ಅವರಿಬ್ಬರ ನಡುವೆ ಯುದ್ಧವು ಒಂದು ಗಳಿಗೆಯವರೆಗೆ ನಡೆಯಿತು. ೧೭. ಅವನು ಈ ರೀತಿಯಲ್ಲಿ ಸಾಯುವುದಿಲ್ಲವೆಂದು ಅಸಹಾಯಶೂರ ಸುಗ್ರೀವನಿಗೆ ಮಾಯಾತೀತ ರಾಮನ ಭಕ್ತನಾದ ವಿಭೀಷಣನು ಬೆರಳಿನಿಂದ ಸಂಜ್ಞೆಮಾಡಿ ತೋರಿಸಿದನು. ರಘುರಾಮನ ಮಿತ್ರನಾದ ಸುಗ್ರೀವನು ವೀರರೊಡೆಯನಲ್ಲವೇ. ಅನಂತರ ಕುಂಭನ ಭಾರಿದೇಹವನ್ನು ಒಂದೇ ನಿಮಿಷದಲ್ಲಿ ಎರಡು ಹೋಳಾಗುವಂತೆ ಸೀಳಿದನು. ೧೮. ಅದರಲ್ಲಿ ಒಂದು ಹೋಳನ್ನು ಲಂಕಾನಗರದೊಳಕ್ಕೆ ಎಸೆದನು. ಇನ್ನೊಂದು ಹೋಳನ್ನು ಶಚೀಪತಿಯ ಪಟ್ಟಣಕ್ಕೆ ಎಸೆದನು. ಯಮನು ಕೊಟ್ಟ ಹಾರವನ್ನು ಸೂರ್ಯನು ಆನಂದದಿಂದ ಆಶೀರ್ವದಿಸಿ ದೇವತೆಗಳ ಮೂಲಕ ತನ್ನ ಮಗ ಸುಗ್ರೀವನಿಗೆ ಕಳುಹಿಸಿಕೊಟ್ಟನು. ೧೯. ದೇವತೆಗಳು ಆನಂದದಿಂದ ಹೂವಿನಮಳೆಯನ್ನು ಸುರಿಸಿದರು. ಹೊಗಳುಭಟರು ಕಪಿವೀರನನ್ನು ವಿಶೇಷವಾಗಿ ಹೊಗಳಿದರು. "ನಿನಗೆ ಸಮಾನರಾರು ? ನಿನ್ನಲ್ಲಿಟ್ಟ ನಂಬಿಕೆಗೆ ಕುಂದುಂಟಾಗ ದಂತೆ ಒಡೆಯನ ಯುದ್ಧದ ಕಾರ್ಯಭಾರವು ನಿನ್ನಿಂದಾಯಿತು" ಎಂದು ನಾರದನು

ಕೆಲಸ ಮುಗಿದುದು ಕುಂಭನೆಂಬ । ಗ್ಗಳಿಯ ಸುಭಟನ ರಣದೊಳಿತ್ತಣ
ಕೆಲಸವನು ಕೇಳ್ವೈ ಕುಶಾನುಜ ಕೇಳು ಕುಶ ಬಳಿಕ
ಸುಲಭಮಾರುತಿ ತೊರವೆಯಧಿಪತಿ । ಕಲಿನೃಸಿಂಹನ ಕಿಂಕರನ ಕದು
ಗಲಿ ನಿಕುಂಭಾಸುರನ ಘನ ಸಂಗ್ರಾಮಸಂಭ್ರಮವ ೨೦

ನುಡಿದನು. ೨೦. ರಣದಲ್ಲಿ ಕುಂಭನೆಂಬ ಉತ್ತಮವೀರನ ಕೆಲಸ ಮುಗಿಯಿತು. ಇತ್ತ ನಡೆದ ಕದನದ ವಿಚಾರವನ್ನು ಕುಶಲವರೇ ಕೇಳಿ. ಭಕ್ತರಿಗೆ ಸುಲಭನಾದ ತೊರವೆಯೊಡೆಯ ನೃಸಿಂಹನ ಅವತಾರಿ ರಾಮನ ಭಕ್ತನಾದ ಹನುಮಂತನಿಗೂ ನಿಕುಂಭಾಸುರನಿಗೂ ನಡೆದ ಕದನದ ವೈಭವವನ್ನು ಕೇಳಿ.

389

# ಮೂವತ್ತೊಂಬತ್ತನೆಯ ಸಂಧಿ

ಸೂಚನೆ ॥ ಕಲಿ ನಿಕುಂಭನನನಿಲಸುತ ಗೆಲಿ । ದೊಲಿಸಿದನು ಜಯವಧುವ ಮೆಱೆದನು
ಬಲುಹನಗ್ಗದ ಶ್ರೋಣಿತಾಕ್ಷನ ಕೆಡಹಿದನು ನೀಲ

ಕೆಣಕಿದಾ ಕುಂಭನನು ಗಗನದ । ಗಣಿಕೆಯರು ಕೊಂಡೊಯ್ಯೆ ಕಪಿವಾ
ರಣನನಾ ಬಳಿಯಲಿ ನಿಕುಂಭನುದಾರ ಶೌರ್ಯದಲಿ
ರಣಭಯಂಕರ ಹನುಮನದ ಸೈ । ರಣೆಗೆ ತಹನೇ ತರುಣ ಕೇಳಾ
ಕ್ಷಣ ವಿರೂಕ್ಷಣ ತೀಕ್ಷ್ಣತನದಲಿ ತೋಟಿಗನುವಾದ ೧

ಕೆಲಕೆ ಕಪಿಕುಲಸಾರ್ವಭೌಮನ । ತೊಲಗಹೇಳಿ ಮಹೋಗ್ರಕೋಪದಿ
ಕೊಲೆಗಡಿಗನಿದಿರಾದನಾ ಕುಂಭಾನುಜನ ರಣಕೆ
ಎಲೆ ಕುಮಾರರು ಕೇಳಿ ಕುಂಭನ । ಬಳಿಯ ಭಾರಿಯ ಭೂರಿಬಲವೆಡೆ
ಗಲಸಿಕೊಂಡುದಖಂಡಚಂಡ ಪರಾಕ್ರಮಾನ್ವಿತನ ೨

ಒತ್ತಬರಿಸುವ ಭಾನುಬಿಂಬವ । ಕುತ್ತಿ ತೂಳುವ ಕಾಳಮೇಘದ
ವೊತ್ತದವೊಲುಱೆ ಮಸಗಿ ಮುಸುಕಿದರಸ್ತ್ರಸಾರದಲಿ
ಮೃತ್ಯುವಲ್ಲಾ ರಕ್ಕಸರಿಗೆ ಮ । ರುತ್ತನೂಭವ ವಿಲಯಮಾರುತ
ನೊತ್ತಬರದವೊಲರಿಭಟಾಂಬುಧಿಬಲವ ಬಱಿಕೈದ ೩

ಸೂಚನೆ॥ ಕಲಿ ನಿಕುಂಭನನ್ನು ಗೆದ್ದು ಹನುಮಂತನು ವಿಜಯಲಕ್ಷ್ಮಿಯನ್ನು ಒಲಿಸಿಕೊಂಡು ಅತಿಶಯ ಪರಾಕ್ರಮವನ್ನು ಮೆರೆದನು. ವೀರಶ್ರೋಣಿತಾಕ್ಷನನ್ನು ನೀಲನು ಕೊಂದನು. ೧. ಯುದ್ಧದಲ್ಲಿ ಕೆಣಕಿ ಸತ್ತ ಕುಂಭನನ್ನು ದೇವಲೋಕದ ವೇಶ್ಯೆಯರು ಕರೆದುಕೊಂಡು ಹೋದರು. ಕಪಿವೀರ ಸುಗ್ರೀವನ ಬಳಿಯಲ್ಲಿ ನಿಕುಂಭನು ಪ್ರಬಲಪರಾಕ್ರಮವನ್ನು ತೋರಿಸಿದರೆ ರಣಭಯಂಕರ ಹನುಮಂತನು ಅದನ್ನು ಸಹಿಸುವನೆ? ಅವನು ಉಗ್ರವಿರೂಪಾಕ್ಷನಂತೆ ಯುದ್ಧಕ್ಕೆ ಸಿದ್ಧನಾದನು. ೨. ಕಪಿಕುಲಚಕ್ರವರ್ತಿ ಸುಗ್ರೀವನನ್ನು ಪಕ್ಕಕ್ಕೆ ಸರಿಯಲು ಹೇಳಿ ಭಯಂಕರ ಕೋಪದಿಂದ ಕೊಲೆಗಡುಕ ಹನುಮಂತನು ಕುಂಭನ ತಮ್ಮನನ್ನು ಎದುರಿಸಿದನು. ಅಯ್ಯಾ ಕುಮಾರರೇ ಕೇಳಿ, ಕುಂಭನ ಬಳಿಯಿದ್ದ ಭಾರಿ ಸೈನ್ಯವು ಪ್ರಚಂಡ ಪರಾಕ್ರಮಿ ಹನುಮಂತನನ್ನು ಸುತ್ತುಗಟ್ಟಿತು. ೩. ವೇಗವಾಗಿ ಸಂಚರಿಸುವ ಸೂರ್ಯಬಿಂಬವನ್ನು ಹಿಡಿದಾಕ್ರಮಿಸುವ ಕಾಲಮೇಘದ ಸಮೂಹದಂತೆ ಕೆರಳಿ ರಾಕ್ಷಸಸೈನ್ಯವು ಹನುಮಂತನನ್ನು ಮುತ್ತಿತು. ಮಾರುತಿಯು ರಾಕ್ಷಸರಿಗೆ ಮೃತ್ಯುವಲ್ಲವೇ ? ಅವನು ಪ್ರಳಯಮಾರುತನ ರಭಸದಂತೆ ಶತ್ರುಯೋಧರ ಸೇನಾ

ರಥಿಕರನು ನುಗ್ಗೊತ್ತಿ ಗಗನದ । ಪಥಿಕರನು ಮಾಡಿದನು ಬಳಿಯಲಿ
ಪೃಥುಳಬಲ ರಾವುತರ ನಡೆಸಿದನವರ ಬೆಂಬಳಿಯ
ಪ್ರಥಿತ ನಾಗಾರೋಹಕರ ಬಲ । ಮಥನನಗರಿಗೆ ಕಳುಹಿ ಸುಮನೋ
ರಥನು ಕಳುಹಿದನವರ ಬಳಿಯಲಿ ಬಹಳ ಪದಚರರ ೪

ಕಾಣಲಾದುದು ಬಂದ ಸುಭಟ । ಶ್ರೇಣಿ ನಿರುಪಮ ದೇವಲೋಕದ
ಜಾಣೆಯರ ಜವ್ವನದ ಲಲನಾಜನದ ಮೇಳದಲಿ
ಭ್ರೂಣಹತ್ಯಾದ್ಯಖಿಳ ಪಾಪ । ಶ್ರೇಣಿ ಹರಿಪದ ಭಕ್ತಿಯುಕ್ತರ
ಕಾಣುತಡಗುವಪೋಲು ನಿಮಿಷದೊಳಡಗಿತರಿಸೇನೆ ೫

ಪಡೆ ಮಡಿಯೆ ಘಡಯಿಸುತ ಕಲಿಗಳ । ಕಡುಹಿನಧಟ ನಿಕುಂಭ ಥರಥರ
ದಡಿಕಿಲಿನ ಜಗವದುರೆ ಬಾಹಪ್ಪಳಿಸಿ ಬೊಬ್ಬಿರಿದ
ಅಡಸಿ ಹರಿತಂದನಿಲತನಯನ । ಹೆಡಕನಪ್ಪಳಿಸಿದನು ನಭ ಗು
ಮ್ಮಿಡಲು ನಿರ್ಘರ ಕಾಲದಂಡ ಸಮಾನ ದಂಡದಲಿ ೬

ನೊಂದನಾ ಕರದಂಡಹತಿಯಲಿ । ತಂದೆಯನು ನೆನೆವುತ್ತ ಕರತಳ
ದಿಂದ ತಡವರಿಸಿದನು ಶಿರವನು ಬಿರಿಯದಲೆಯೆನುತ
ಮುಂದನೆಯ ಮದದುಬ್ಬುಗೊಬ್ಬಿನ । ಛಂದ ಸಾಲಂಕಾರದಲಿ ಹರಿ
ನಂದನನು ಹಲುದಿನುತ ಹರಿತಂದೊದೆದನತಿರಥನ ೭

ಸಾಗರವನ್ನು ಬತ್ತಿಸಿದನು. ೪. ಮನಸ್ಸಿನ ಇಷ್ಟಾರ್ಥವನ್ನು ಪೂರೈಸಿಕೊಂಡ ಹನುಮಂತನು ರಥಿಕರನ್ನು ಪುಡಿಪುಡಿಮಾಡಿ ಆಕಾಶಯಾತ್ರಿಗಳನ್ನಾಗಿ ಮಾಡಿದನು. ಅನಂತರ ಬಲಶಾಲಿ ರಾವುತರನ್ನು ಅವರ ಬೆನ್ನ ಹಿಂದೆ ನಡೆಸಿದನು. ಪ್ರಸಿದ್ಧ ಗಜಾರೋಹಿ ವೀರರನ್ನು ದೇವೇಂದ್ರನ ಪಟ್ಟಣಕ್ಕೆ ಕಳುಹಿಸಿದನು. ಅವರ ಹಿಂದೆ ಅಸಂಖ್ಯಾತ ಪದಾತಿ ಸೈನಿಕರನ್ನು ಕಳುಹಿಸಿಕೊಟ್ಟನು. ೫. ಸ್ವರ್ಗವನ್ನಡರಿದ ರಾಕ್ಷಸವೀರರು ದೇವಲೋಕದ ಯೌವನವತಿಯರಾದ ಚತುರ ತರುಣಿಯರ ಸಹವಾಸದಲ್ಲಿರುವುದನ್ನು ಕಾಣಲಾಯಿತು. ಶ್ರೀಹರಿಯ ಭಕ್ತರನ್ನು ಕಾಣುತ್ತಲೇ ಭ್ರೂಣಹತ್ಯೆಯೇ ಮೊದಲಾದ ಸಮಸ್ತ ಪಾಪಗಳು ಅಡಗಿಹೋಗುವಂತೆ ರಾಕ್ಷಸಸೈನ್ಯವು ಒಂದು ನಿಮಿಷದಲ್ಲಿ ಮಾಯವಾಯಿತು. ೬. ತನ್ನ ಕಡೆಯ ಸೈನ್ಯ ಮಡಿದುದನ್ನು ನೋಡಿ ವೀರರವೀರ ನಿಕುಂಭನು ಭುಜವನ್ನಪ್ಪಳಿಸಿ ಬೊಬ್ಬಿರಿಯಲು ಒಂದರಮೇಲೊಂದರಂತೆ ನಿಂತ ವಿವಿಧ ಲೋಕಗಳು ನಡುಗಿದವು. ಮುಂದುವರಿದು ನುಗ್ಗಿ ನಿಕುಂಭನು ಯಮದಂಡಕ್ಕೆ ಸರಿಸಮಾನವಾದ ದೊಣ್ಣೆಯಿಂದ ಮಾರುತಿಯ ಹೆಕ್ಕತ್ತನ್ನು ಹೊಡೆಯಲು ಶಬ್ದವು ಆಕಾಶದಲ್ಲಿ ಪ್ರತಿಧ್ವನಿಸಿತು. ೭. ನಿಕುಂಭನ ಕೈದೊಣ್ಣೆಯ ಏಟಿಗೆ ಮಾರುತಿಯು ನೊಂದನು. ತಂದೆಯನ್ನು ನೆನೆಸಿಕೊಳ್ಳುತ್ತ ತಲೆ ಬಿರಿಯಲಿಲ್ಲವಲ್ಲ ಎನ್ನುತ್ತ ಕೈಯಿಂದ ತಡವರಿಸಿಕೊಂಡನು. ಮದಿಸಿದ ಆನೆಯೋಪಾದಿಯಲ್ಲಿ ಅತಿಶಯವಾದ ಸೊಕ್ಕಿನಿಂದ ಮಾರುತಿಯು ಹಲ್ಲುಕಚ್ಚುತ್ತ ಬಂದು

ಮುನ್ನ ಹನುಮನ ಪಾದಘಾತಿಗೆ । ಭಿನ್ನವಾಗದದೇನು ರಥ ಶತ
ಚೂರ್ಣವಾದುದು ಕೋಡು ಗದೆಯು ನಿಕುಂಭನಿನಕುಲನ
ಮನ್ನಣೆಯು ಮನವಚ್ಚುಗಾಜನ । ಬೆನ್ನನಪ್ಪಳಿಸಿದನು ನಿಟ್ಟೆಲು
ಭಿನ್ನವಾಗದೆ ಮಾಣದಿರದೆಂದಮರಗಣ ನುಡಿಯೆ ೮

ಹೊಯ್ದು ಘಾಯಕೆ ಬೆನ್ನನಿತ್ತು ಮ । ಹೋದಧಿಕ್ರಮನಾ ಖಳನ ಮೇ
ಲ್ವಾಯ್ದು ತಿವಿದನು ತಿವಿದ ಘಾಯದಲವನ ತಲೆ ಕೊರಳ
ಹಾದಿಯಲಿ ನಡೆದೊಡಲೊಳದ್ದುದು । ಸೇದಿದರು ಬಳಿಕಸುರ ಶನಿಯ ಸ
ಹೋದರನ ಕಿಂಕರನು ಶಂಕಿಸದಾ ನಿಶಾಚರನ ೯

ಒಡನೆ ಪಾದಾಗ್ರದಲಿ ಹಗೆವನ । ನಡಿಮುಗುಚಿ ನೋಡಿದನು ನೆಟಿ ಎಂ
ಗಡಿಸಿದಸುವಿನ ಮೇಲೆ ಯಮಕಿಂಕರರಿಗಿಂತೆಂದ
ತಡೆದನಿವನೆಂದೀತನನು ಸಂ । ಗಡಿಯ ಮನದಲಿ ಮಾಡದಂತಿರೆ
ತೊಡಚಬಿಡಿ ನೀವೆನುತ ತಿರುಗಿದನಿನಜನಿದ್ದೆಡೆಗೆ ೧೦

ತಿರುಗುವಾತನ ಕಂಡು ಪಡಿಮೋ । ಹರದ ಪಟುಭಟ ಶ್ರೋಣಿತಾಂಬಕ
ತಿರುಹಿದನು ಪವನಜನನದ ಕಂಡನಿಲಸಖಸೂನು
ಕರವ ಮುಗಿದಿಂತೆಂದನಿವನಲಿ । ಕರವಿಘಾತಿಯ ಕದನವನು ನೀವ್
ಪರಿಕಿಸಲುಬೇಕೆಂದು ಬಿನ್ನಹ ಮಾಡಿದನು ನೀಲ ೧೧

ನಿಕುಂಭನ ರಥವನ್ನು ಒದ್ದನು. ೮. ಹನುಮಂತನ ಒದೆತಕ್ಕೆ ಮೊದಲು ರಥವೇ ಪುಡಿಪುಡಿಯಾಯಿತು. ಆಗ ನಿಕುಂಭನು ರವಿಕುಲದ ರಾಮನ ಪ್ರೀತಿಗೆ ಪಾತ್ರನಾದ ಮಾರುತಿಯ ಬೆನ್ನನ್ನು ಅಪ್ಪಳಿಸಿದನು. ಮಾರುತಿಯ ಬೆನ್ನುಮೂಳೆ ಮುರಿಯದಿರದು ಎಂದುಕೊಂಡರು ದೇವತೆಗಳು. ೯. ನಿಕುಂಭನ ಏಟಿಗೆ ಬೆನ್ನುಕೊಟ್ಟು ಸಾಗರವನ್ನು ದಾಟಿದವನಾದ ಹನುಮಂತನು ನಿಕುಂಭಾಸುರನ ಮೇಲೆಬಿದ್ದು ತಿವಿದನು. ತಿವಿದ ಏಟಿಗೆ ಅವನ ತಲೆಯು ಕತ್ತಿನಮಾರ್ಗವಾಗಿ ದೇಹದೊಳಗೆ ಹೂತುಕೊಂಡಿತು. ಶನಿಯ ಸಹೋದರನಾದ ಯಮನ ದೂತರು ಸಂದೇಹಿಸದೆ ರಾಕ್ಷಸನ ಪ್ರಾಣವನ್ನು ಎಳೆದುಕೊಂಡರು. ೧೦. ಕೂಡಲೆ ಹನುಮಂತನು ಕಾಲಿನ ತುದಿಯಿಂದ ಶತ್ರುವನ್ನು ಅಡಿಮೇಲುಮಾಡಿ ಅವನ ಪ್ರಾಣ ಹೋಗಿರುವುದನ್ನು ನೋಡಿದನು. ಮೇಲೆ ಯಮದೂತರನ್ನು ನೋಡಿ, "ಇವನು ನಿಶ್ಚಲನಾಗಿ ಬಿದ್ದಿದ್ದಾನೆ ಎಂದು ಶಂಕಿಸದೆ ಪುನಃ ಇವನ ಪ್ರಾಣವು ಜತೆಸೇರದಂತೆ ಇವನನ್ನು ಸಿಕ್ಕಿಸಿಕೊಂಡು ಬಿಡಿ" ಎಂದು ನುಡಿದು ಸುಗ್ರೀವನಿದ್ದ ಕಡೆಗೆ ತಿರುಗಿದನು. ೧೧. ತಿರುಗಿ ಹೋಗುತ್ತಿರುವ ಹನುಮಂತನನ್ನು ನೋಡಿ ಪ್ರತಿಸೈನ್ಯದ ಶತ್ರುವೀರ ಶ್ರೋಣಿತಾಕ್ಷನು ಅವನನ್ನು ಹಿಂದಿರುಗಿಸಿದನು. ಅದನ್ನು ಕಂಡು ನೀಲನು ಮಾರುತಿಗೆ ಕೈಮುಗಿದು 'ಈ ಅಸುರನೊಡನೆ ನೀಲನ ಕೈಹೊಡೆತದ

ಆವನ ಬಳಿಯಲಿ ಕೋಟಿಸಂಖ್ಯೆಯ । ನವವರೂಥ ತುರಂಗ ಸಾಮೋ
ದ್ಭವ ಘಟಾಳಿ ಪದಾತಿ ಬಂದುದು ಬವರಕಗ್ನಿಜನ
ಪವನಸಖನುಪಟಳಕೆ ಪರ್ವತ । ದವನಿಜೌಘ ತೃಣೌಘ ಮಾಜಿಸಾಂ
ತವಗಡಿಸುವವೆ ಹೊಕ್ಕು ಹಳಚಿದನಾ ಚತುರ್ಬಲವ ೧೨

ಆವ ಮೈಯಲಿ ಹೊಕ್ಕನೋ ಕೊಲೆ । ಗಾವ ರೀತಿಯಲಂಗವಿಸಿದನೊ
ಪಾವಮಾನಿಗೆ ಪಾಡೆನಲು ಪರಬಲವ ನಿಮಿಷದಲಿ
ದೇವಲೋಕದೊಳೇರಿಸಿದನು ಘನ । ರಾವದಲಿ ಕಲಿಶ್ರೋಣಿತಾಕ್ಷನ
ಡಾವರಿಸಿ ಡೊಕ್ಕರಕೆ ಹೊಯ್ದನು ಹೊಯ್ದು ಭುಜಯುಗವ ೧೩

ಎತ್ತಿ ರಥದಿಂದಿಳೆಗೆ ನೆಗೆದು ವಿ । ಯತ್ತಳಕೆ ಲಂಘಿಸಲು ಕುಸುಕಿ ಮ
ರುತ್ತನಯಗಿಂತೆಂದನಹುದೇ ಸಮರಸೌರಂಭ
ಚಿತ್ತಕೊದಗಿತೆ ನಿಮ್ಮಡಿಯ ನೀ । ವಿತ್ತ ರಣದುಪದೇಶವಿದುವೆಯೆ
ನುತ್ತಲಾ ಕಲಿನೀಲ ಬಳಿಕಾ ಖಳನೊಳಿಂತೆಂದ ೧೪

ದೋಷಿ ರಾವಣನೊಬ್ಬನೇ ನಿ । ರ್ದೋಷಿಗಳು ನೀವ್ ಕುಂಭಕರ್ಣ ವಿ
ಭೀಷಣರ ಸಂತಾನವಿರಲಜನಿರವು ಪರಿಯಂತ
ದೋಷಕೃತ ದಶಮುಖನ ಜೀವನ । ಶೋಷಣವೆ ತಾ ಮುಖ್ಯವಿದಕೋ
ಭಾಷೆ ನಿನ್ನದು ಬದುಕಿಸುವೆ ನಡೆ ರಾಮನೆಡೆಗೆಂದ ೧೫

ಯುದ್ಧವನ್ನು ನೀವು ಪರೀಕ್ಷಿಸಬೇಕು' ಎಂದು ವಿನಂತಿ ಮಾಡಿಕೊಂಡನು. ೧೨. ಕೋಟಿಸಂಖ್ಯೆಯ ಹೊಸರಥಗಳ, ಕುದುರೆಗಳ ಆನೆಗಳ, ಮತ್ತು ಕಾಲಾಳುಗಳ ಅಸುರ ಸೈನ್ಯವು ನೀಲನಮೇಲಿನ ಕದನಕ್ಕೆ ಶ್ರೋಣಿತಾಕ್ಷನನ್ನು ಹಿಂಬಾಲಿಸಿತು. ಅಗ್ನಿಯು ಕಾಟವನ್ನು ಪರ್ವತದ ಮೇಲಿನ ಮರಗಳು ಮತ್ತು ಹುಲ್ಲು ಎದುರಿಸಿ ಸೋಲಿಸಬಲ್ಲವೆ ? ಅಗ್ನಿಕುಮಾರನು ಒಳಹೊಕ್ಕು ಶತ್ರುಗಳ ಚತುರಂಗಸೈನ್ಯದ ಮೇಲೆ ಬಿದ್ದನು. ೧೩. ಯಾವ ಕಡೆಯಿಂದ ಪ್ರವೇಶಿಸಿದನೋ ಕೊಲೆಗೆ ಯಾವ ರೀತಿಯ ಸಾಹಸವನ್ನೆಸಗಿದನೋ ಹನುಮಂತನಿಗೆ ಸರಿಸಮಾನವೆನ್ನುವಂತೆ ನೀಲನು ಶತ್ರುಸೈನ್ಯವನ್ನು ನಿಮಿಷಮಾತ್ರದಲ್ಲಿ ದೇವಲೋಕಕ್ಕೆ ಸೇರಿಸಿದನು. ಭಾರಿ ಆರ್ಭಟದೊಡನೆ ಭುಜಗಳನ್ನಪ್ಪಳಿಸಿ ವೀರ ಶ್ರೋಣಿತಾಕ್ಷನನ್ನು ಉಗ್ರವಾಗಿ ಗುದ್ದಿದನು. ೧೪. ನೀಲನು ಶ್ರೋಣಿತಾಕ್ಷನನ್ನು ರಥದಿಂದ ಎತ್ತಿಕೊಂಡು ಭೂಮಿಗೆ ನೆಗೆದನು. ಅವನು ಅಲ್ಲಿಂದ ಆಕಾಶಕ್ಕೆ ಹಾರಲು ನೀಲನು ಅವನನ್ನು ಕುಕ್ಕಿದನು. ಅನಂತರ ಮಾರುತಿಯನ್ನು ಕುರಿತು, "ನನ್ನ ಯುದ್ಧ ವೈಭವವು ನಿಮ್ಮ ಮನಸ್ಸಿಗೆ ಬಂದಿತೇ, ಹೇಗೆ ? ನೀವು ಕಲಿಸಿದ ಯುದ್ಧವಿದ್ಯೆಯೇ ಇದು" ಎನ್ನುತ್ತ ಕಲಿನೀಲನು ಶ್ರೋಣಿತಾಕ್ಷನನ್ನು ಕುರಿತು ಮುಂದಿನಂತೆ ನುಡಿದನು. ೧೫. "ರಾವಣನೊಬ್ಬನೇ ದೋಷಿ. ಕುಂಭಕರ್ಣ ವಿಭೀಷಣರ ಮಕ್ಕಳಾದ ನೀವು ನಿರ್ದೋಷಿಗಳು. ಬ್ರಹ್ಮನ ಆಯುಷ್ಯವಿರುವವರೆಗೆ ನೀವು ಬದುಕಿ ಉಳಿಯಿರಿ. ಪಾಪಿ ರಾವಣನ ಪ್ರಾಣವನ್ನು ನಾಶಪಡಿಸುವುದೇ ಮುಖ್ಯ. ಇಗೋ ನಾನು ಮಾತು ಕೊಡು

ಅಳುಕಿ ಸಾವಿಗೆ ಸಹಭವನ ರಣ । ಕುಳುಹಿ ಹಗೆವನ ಹೊಕ್ಕರಿಯ ತಂ
ಬುಲಕೆ ಕೈಯಾಂತಧಮರಕ್ಕಸನೆಂದು ಬಗೆದೆಯಲ
ಛಲಪರಿಗ್ರಹ ರಾಮ ಕೀರ್ತಿಯ । ವೊಲೆಯ ಮೇಲಣ ಮೌಕ್ತಿಕದ ಪರಿ
ಲುಳಿತ ನಿರ್ಮಲಹಾರರಾವ್ ರಣಕಂಜಲೇಕೆಂದ ೧೬

ಎನುತ ಡೊಕ್ಕರಿಸಿದನು ಶಿಖಿನಂ । ದನನ ಕಾಲ್ದೊಡಕಿನಲಿ ಕೆಡಹಿದ
ನನುವರವು ಸರಿಸಾಟಿಯೆನೆ ನೋಟಕರ ಕಣ್ಮನಕೆ
ಘನಬಲಾಯುತರೊದಗಿದರು ಬಳಿ । ಕನಿಲಬಾಂಧವಸೂನು ರಿಪುವಿನ
ತನುವ ತಳುಕಿನ ಕಾಲ್ಗಳಲಿ ಬಿಗಿದೆಂದನೀ ಹದನ ೧೭

ನೋಡೆಲವೊ ಖಳ ಕಪಿಯ ಕದನದ । ಪಾಡುಪಂಥವನಿನ್ನು ನಿನ್ನಸು
ರೋಡದಿರೆ ಹೊಗೆನೀ ರಣಾಂಗಣವನು ಪ್ರತಿಜ್ಞೆಯಿದು
ಬೇಡಿಕೋ ನಿನ್ನಿಷ್ಟದೈವವ । ಖೇಡನಾಗದೆ ಬೇಗೆನುತ್ತ ಸ
ಗಾಢಬಲನೆಜಿಗಿದನು ಶಿರವನು ಶ್ರೋಣಿತಾಂಬಕನ ೧೮

ಬಿರಿದುದೆರಡಿಟ್ಟವನ ಶಿರವದ । ರೆರಡರೊಳಗೊಂದನು ಸಮೀಪದ
ನೆರೆದ ಭೂತಗಣಂಗಳೊಡೆಯಂಗೊಂದ ಭೈರವಗೆ
ಕರೆದುಕೊಟ್ಟುಳಿವೆಣನ ಕಾಲನ । ಚರರ ಕೈವರ್ತಿಸಿ ಜಯಶ್ರೀ
ಸುರತಲಂಪಟ ಮರಳಿದನು ಮಾರುತಿಯ ಹೊರೆಗಾಗಿ ೧೯

ತ್ತೇನೆ. ರಾಮನ ಬಳಿಗೆ ಬಾ, ನಿನ್ನನ್ನು ಉಳಿಸುತ್ತೇನೆ" ಎಂದ ನೀಲ. ೧೬. "ಸಾವಿಗೆ ಹೆದರಿ ಒಡಹುಟ್ಟಿದವನನ್ನು ಯುದ್ಧಕ್ಕೆ ನೂಕಿ ಶತ್ರುವಿನ ಮರೆಹೊಕ್ಕು ಅವನ ತಂಬುಲಕ್ಕೆ ಕೈನೀಡುವ ನೀಚರಾಕ್ಷಸ ನಾನು ಎಂದು ಯೋಚಿಸಿದೆಯಲ್ಲವೆ ? ನಾವು ದೃಢ ಸಂಕಲ್ಪವುಳ್ಳವರು. ಕೀರ್ತಿಲಕ್ಷ್ಮಿಯ ಎದೆಯಮೇಲಾಡುವ ಪರಿಶುದ್ಧ ಮುತ್ತಿನಹಾರ ನಾವು. ಯುದ್ಧಕ್ಕೇಕೆ ಹೆದರಬೇಕು ?" ೧೭. ಎಂದು ಹೇಳುತ್ತ ಶ್ರೋಣಿತಾಕ್ಷನು ನೀಲನನ್ನು ಗುದ್ದಿ ಕಾಲುಕೊಟ್ಟು ಬೀಳಿಸಿದನು. ಇಬ್ಬರ ಕಾಳಗವು ಸರಿಸಮವಾಗಿರಲು ಬಲಶಾಲಿಗಳಾದ ಶ್ರೋಣಿತಾಕ್ಷ ನೀಲರು ನೋಟಕರ ಕಣ್ಮನಗಳನ್ನು ತಣಿಸಿದರು. ಅನಂತರ ನೀಲನು ಅಸುರನ ದೇಹವನ್ನು ಕಾಲುಗಳಿಂದ ಹೆಣೆದು ಕಟ್ಟಿ ಮುಂದಿನಂತೆ ನುಡಿದನು. ೧೮. "ಕಪಿಯ ಜಿದ್ದಿನ ಕಾಳಗದ ರೀತಿಯನ್ನು ನೋಡೋ ರಾಕ್ಷಸ. ಇನ್ನು ನಿನ್ನ ಪ್ರಾಣ ಹೋಗದಿದ್ದರೆ ನಾನು ಇನ್ನುಮೇಲೆ ಯುದ್ಧರಂಗವನ್ನು ಪ್ರವೇಶಿಸುವುದಿಲ್ಲ. ಇದು ನನ್ನ ಪ್ರತಿಜ್ಞೆ. ಹೇಡಿಯಾಗದೆ ಬೇಗ ನಿನ್ನಿಷ್ಟದೈವವನ್ನು ಪ್ರಾರ್ಥಿಸಿಕೋ" ಎಂದು ನುಡಿದು ಮಹಾಬಲಶಾಲಿ ನೀಲನು ಶ್ರೋಣಿತಾಕ್ಷನ ತಲೆಯಮೇಲೆರಗಿದನು. ೧೯. ನೀಲನ ಹೊಡೆತಕ್ಕೆ ಶ್ರೋಣಿತಾಕ್ಷನ ತಲೆಯು ಎರಡುಭಾಗವಾಗಿ ಸೀಳಿತು. ಒಡೆದ ತಲೆಯ ಒಂದು ಭಾಗವನ್ನು ಸಮೀಪದಲ್ಲಿ ನೆರೆದ ಭೂತಗಣಗಳ ಒಡೆಯನಿಗೂ ಇನ್ನೊಂದನ್ನು ಭೈರವನಿಗೂ ಕರೆದುಕೊಟ್ಟು, ಉಳಿದ ಹೆಣವನ್ನು ಯಮದೂತರ ಕೈಗೊಪ್ಪಿಸಿ ಜಯಲಕ್ಷ್ಮಿಕಾಮುಕನಾದ ನೀಲನು ಮಾರುತಿಯ ಸಮೀಪಕ್ಕೆ ಹಿಂದಿರುಗಿ

ಉಳಿದ ಬಲ ಹುರಿಕಟಿಸಿ ಹೊಕ್ಕುದು । ದಳವನೀ ಕಪಿನಾಯಕರ ಕೈ
ಗೊಳಿಸಿತಾಹವ ಮತ್ತೆ ಮೊಳಗುವ ವಾದ್ಯರಭಸದಲಿ
ಅಳವ ಮೆಱೆದನು ಹಿಂದಣಸುರರ । ಕಲಹಕೆಣೆಯೆನೆ ಹೊಕ್ಕ ಮೈಯಲಿ
ಕಲಕಿದನು ಕಪಿಬಲಮಹಾಜಲಧಿಯನು ಯೂಪಾಕ್ಷ ೨೦

ಆತು ಬಳಿಕಾ ದ್ವಿವಿದನೆಂಬ ಮ । ಹಾತಿಬಲ ಕಪಿನಾಯಕನು ರಣ
ರೀತಿ ಲೇಸೆಂಬಂತೆ ಹಳಚಿದನಾ ನಿಶಾಚರನ
ಚಾತುರಂಗವನುರು ಚಪೇಟ ನಿ । ಘಾತದಲಿ ನಿರ್ಜೈಸಿ ಯಮನ ನಿ
ಕೇತನಕೆ ಕಳುಹಿದನು ಕಲಿಯೂಪಾಕ್ಷ ರಾಕ್ಷಸನ ೨೧

ಪಡಿಬರಿಸಿ ಬಳಿಕುಳುಕಲಿನ ಖಳ । ಪಡೆ ಸಹಿತ ಹೊಗೆದೆಗೆದ ವಹ್ನಿಯ
ಕಡುಹಿನಲಿ ಕದನಪ್ರಜಂಘ ನಿಶಾಟನೆಂಬವನು
ಕಡುಮುಳಿದು ತಾಗಿದನು ಕದನದ । ಕಡುಹು ತಪ್ಪಲ್ಲೆನಲು ಕಪಿಬಲ
ಸಿಡಿಯೆ ಸೀವರಿಸುತ್ತ ಮದದಲಿ ಮೈಂದ ಮಾಱಾಂತ ೨೨

ಒಬ್ಬರದಱೊಳಗುಳಿಯದಂತಿರೆ । ಜಬ್ಬುದುಳಿದನು ಜೋಹವಿಕ್ಕಿದ
ಹಬ್ಬದಭಿನಯದಂತೆ ಹರುಷವನೈದಲಮರಗಣ
ಉಬ್ಬಿ ರಣದೇವತೆಗೆ ಮಿಕ್ಕಿನ । ಕರ್ಬುರರ ತೋಱಿಸಲಿಕಸುರನ
ತುಬ್ಬುಗೊಟ್ಟನು ತೋಟಿ ನಿಂದುದು ತಾಮಸೀಚರನ ೨೩

ದನು. ೨೦. ಉಳಿದ ಅಸುರದಳವು ಹುರುಪಿನಿಂದ ವಾನರಸೈನ್ಯದ ಮೇಲೆ ನುಗ್ಗಿತು. ರಭಸದಿಂದ ವಾದ್ಯಗಳು ಭೋರ್ಗರೆಯುತ್ತಿರುವಂತೆ ಪುನಃ ಕಪಿನಾಯಕರು ಯುದ್ಧ ಕ್ಕೊಳಗಾಗುವಂತೆ ಮಾಡಿತು. ಹಿಂದೆ ಆಗಿಹೋದ ಅಸುರರ ಕಾಳಗಕ್ಕೆ ಸಮವೆಂಬಂತೆ ಯೂಪಾಕ್ಷನು ಯುದ್ಧದಲ್ಲಿ ತನ್ನ ಪರಾಕ್ರಮವನ್ನು ಪ್ರದರ್ಶಿಸಿದನು ; ಎರಗಿದೊಡನೆ ಕಪಿಸೈನ್ಯಸಾಗರವನ್ನು ಕದಡಿಬಿಟ್ಟನು. ೨೧. ಅನಂತರ ದ್ವಿವಿದನೆಂಬ ಮಹಾಬಲಶಾಲಿ ಕಪಿನಾಯಕನು ತನ್ನ ಕದನದ ಕ್ರಮವು ಸರಿಯೆನ್ನುವಂತೆ ಯೂಪಾಕ್ಷನನ್ನು ಎದುರಿಸಿ ಅವನ ಮೇಲೆರಗಿದನು. ದ್ವಿವಿದನು ಅಗಲಿಸಿದ ಅಂಗೈ ಹೊಡೆತದಿಂದ ರಾಕ್ಷಸರ ಚತುರಂಗಬಲವನ್ನು ಮುಗಿಸಿ ವೀರ ಯೂಪಾಕ್ಷನನ್ನು ಯಮನ ಪಟ್ಟಣಕ್ಕೆ ಕಳುಹಿಸಿ ದನು. ೨೨. ಬಳಿಕ ಉಳಿದ ಅಸುರಸೇನೆಯೊಡನೆ ಹೊಗೆಯಿಲ್ಲದ ಬೆಂಕಿಯಂತೆ ಕೆರಳಿ ಕದನಪ್ರಜಂಘನೆಂಬ ಅಸುರನು ಪ್ರತಿಭಟಿಸಿ ಪರಾಕ್ರಮಕ್ಕೆ ಕುಂದಿಲ್ಲ ಎನ್ನುವಂತೆ ವಾನರ ಸೈನ್ಯದ ಮೇಲೆರಗಿದನು. ವಾನರಸೈನ್ಯವು ಹಿಂದಕ್ಕೆ ಓಡಲು ಕೂಗುಹಾಕುತ್ತ ಮೈಂದನು ಶೌರ್ಯದಿಂದ ರಾಕ್ಷಸನನ್ನು ಎದುರಿಸಿದನು. ೨೩. ಮೈಂದನು ರಾಕ್ಷಸಸೈನ್ಯದಲ್ಲಿ ಒಬ್ಬರೂ ಉಳಿಯದ ಹಾಗೆ ಜಬ್ಬಿಹೋಗುವಂತೆ ತುಳಿದುಹಾಕಿದನು. ವೇಷಹಾಕಿ ಕೊಂಡು ನಲಿಯುವ ಹಬ್ಬದಂತೆ ದೇವತೆಗಳು ಹರ್ಷಿತರಾದರು. ಉಳಿದ ರಾಕ್ಷಸರನ್ನು ತೋರಿಸಲೆಂದು ಕದನಪ್ರಜಂಘನನ್ನು ರಣದೇವತೆಗೆ ಪತ್ತೆಮಾಡಿಕೊಟ್ಟನು. ಆ ರಾಕ್ಷಸನ

ಸಾಲದೇ ಸಂಗ್ರಾಮಸಿರಿ ಕ । ಣ್ಣಾಲಿ ದಣಿದವು ನೋಡಿ ನೋಡುವ
ನಾಳೆ ಮಿಕ್ಕಿನ ರಣವನೆಂದಿನನಧಿಕ ಹರುಷದಲಿ
ಶ್ರೀಲತಾಂಗಿಯ ರಮಣನನುಪಮ । ಲೀಲೆಗುತ್ಸಾಹಿಸುತ ವರ ವರು
ಣಾಲಯವ ಸಾರಿದನು ವರುಣದಿಶಾಂಗನಾರತಿಗೆ ೨೪

ಮುತ್ತಿಗೆಯ ಪುರಕಿಕ್ಕಿ ತಿರುಗಿದ । ರಿತ್ತಲೀ ತೊರವೆಯ ನೃಸಿಂಹನ
ಹತ್ತಿರಕೆ ಸುಗ್ರೀವ ಮುಖ್ಯ ಸಮಸ್ತ ನಾಯಕರು
ಚಿತ್ತದುಮ್ಮಹದುಬ್ಬರದ ವಿಜ । ಯೋತ್ತರದ ಸುಮ್ಮಾನದಲಿ ದೇ
ವೋತ್ತಮನು ಬೀಡಿಕೆಗೆ ಬಿಜಯಂಗೈದನೊಲವಿನಲಿ ೨೫

ಹೋರಾಟ ನಿಂತಿತು. ೨೪. "ಯುದ್ಧದ ವೈಭವವು ಸಾಲದೇ ! ಕಾಳಗವನ್ನು ನೋಡಿ ಕಣ್ಣುಗುಡ್ಡೆಗಳು ಬಳಲಿದವು. ನಾಳೆ ಉಳಿದ ಯುದ್ಧವನ್ನು ನೋಡೋಣ" ಎಂದು ಅತ್ಯಾನಂದದಿಂದ ಲಕ್ಷ್ಮೀರಮಣನ ಲೀಲೆಗೆ ಉತ್ಸಾಹಗೊಳ್ಳುತ್ತ ಸೂರ್ಯನು ಪಶ್ಚಿಮ ದಿಗಂಗನೆಯ ಒಡನಾಟಕ್ಕೆ ಆಶಿಸಿ ಪಶ್ಚಿಮ ಸಮುದ್ರವನ್ನು ಸೇರಿದನು. ೨೫. ಲಂಕಾ ನಗರಕ್ಕೆ ಮುತ್ತಿಗೆ ಹಾಕಿ ಇತ್ತ ಸುಗ್ರೀವನೇ ಮೊದಲಾದ ಪ್ರಮುಖ ವಾನರನಾಯಕರು ತೊರವೆಯ ನರಸಿಂಹನ ಅವತಾರಿಯಾದ ಶ್ರೀರಾಮನ ಬಳಿಗೆ ಹಿಂದಿರುಗಿದರು. ಉತ್ಸಾಹದ ಮನಸ್ಸಿನಿಂದ ವಿಜಯದ ಅತ್ಯಾನಂದದಿಂದ ಶ್ರೀರಾಮನು ಪಾಳಯಕ್ಕೆ ದಯಮಾಡಿಸಿದನು.

# ನಲವತ್ತನೆಯ ಸಂಧಿ

ಸೂಚನೆ॥ ರಾಮನುರುಕೋದಂಡ ದೀಕ್ಷಾ । ರಾಮನಸುರಕುಲೌಘ ರಣಜಯ
ಭೀಮ ಗೆಲಿದನು ಕದನದಲಿ ಮಕರಾಕ್ಷರಾಕ್ಷಸನ

ಕೇಳಿರೈ ಯಮಳರು ರಣಾಂಗಣ । ಕೇಳಿಯಲಿ ನಿಮ್ಮವರು ಗೆಲಿದರು
ಮೇಲೆ ಮುತ್ತಿಗೆಯಾಯ್ತು ದುರ್ಗಕೆ ದುಷ್ಟ ರಾವಣನ
ಓಲಗದೊಳಸುರೇಂದ್ರನನುಜರ । ಬಾಲಕರ ಮರಣವನು ಕೇಳುತ
ಕೌಳುಡೆಯ ನೆಮ್ಮಿನಲಿ ಚಿಮ್ಮಿದನುಗುರಲಶ್ರುಗಳ ೧

ಮೊಳಗಿನಬ್ಬರವಳಿದ ಗಗನ । ಸ್ಥಳವೊ ಮೇಣ್ಮುಂಗಾರ ಮೇಘದ
ಸುಳಿವು ನಿಂದಂಬುಧಿಯೊ ವಿವಿಧೇಂದ್ರಿಯಗಳುಪಟಳದ
ಕಳಕಳಿಕೆ ತಗ್ಗಿದ ಮಹಾತ್ಮನ । ನಿಲವೊ ದಶಕಂಠನ ಸಭಾಮಂ
ಡಲವೊ ಹೇಳುವುದೇನು ಮೋನದೊಳಿರ್ದುದಾಸ್ಥಾನ ೨

ದುಗುಡಭಾರದ ಹತ್ತು ಮುಸುಡಿನ । ಬೆಗಡುದೋರಿದ ಮನದ ನೆನಹಿನ
ತಗಹು ಕೈಗಲ್ಲಗಳ ಚಿಂತಾಭರದ ಭಾರದಲಿ
ದೃಗುವಿಹೀನನು ಕತ್ತಲೆಯ ಮೊಗ । ಮೊಗೆದು ಕಡೆಗಾಣದವೊಲರಿಸಂ
ಯುಗಕೆ ಸರಣಿಯ ಕಾಣದುಸುರಿಡುತಿರ್ದನಸುರೇಂದ್ರ ೩

ಸೂಚನೆ॥ ಕೋದಂಡರಾಮ, ರಾಕ್ಷಸರಣವಿಜಯಭಯಂಕರ ರಾಮ ಮಕರಾಕ್ಷ ರಾಕ್ಷಸನನ್ನು ಯುದ್ಧದಲ್ಲಿ ಗೆದ್ದನು. ೧. ಲವಕುಶರೇ ಕೇಳಿ, ಯುದ್ಧದಾಟದಲ್ಲಿ ನಿಮ್ಮವರು ಗೆದ್ದರು. ಅನಂತರ ದುಷ್ಟ ರಾವಣನ ದುರ್ಗಕ್ಕೆ ಮುತ್ತಿಗೆ ಬಿದ್ದಿತು. ಆಸ್ಥಾನದಲ್ಲಿ ರಾಕ್ಷಸೇಶ್ವರನು ತಮ್ಮಂದಿರ ಮಕ್ಕಳ ಮರಣವನ್ನು ಕೇಳಿ ದಿಂಬನ್ನು ಒರಗಿಕೊಂಡು ಉಗುರಿನಿಂದ ಕಣ್ಣೀರನ್ನು ಮಿಡಿದನು. ೨. ಗುಡುಗಿನ ಆರ್ಭಟವು ನಿಂತ ಬಳಿಕಿನ ಆಕಾಶವೋ, ಮುಂಗಾರ ಮೋಡದ ಚಲನೆ ನಿಂತ ತರುವಾಯದ ಸಾಗರವೋ, ಪಂಚೇಂದ್ರಿಯಗಳ ಕಾಟ ನಿಂತು ಚಿಂತೆ ಕಳೆದ ಮಹಾತ್ಮನ ಸ್ಥಿತಿಯೋ, ದಶಕಂಠನ ಆಸ್ಥಾನಮಂಟಪವೋ ! ಎನ್ನುವಂತೆ ರಾವಣನ ಸಭೆಯು ಮೌನದಲ್ಲಿ ಮುಳುಗಿತ್ತು. ೩. ದುಃಖದ ಭಾರ ಹೊತ್ತ ಹತ್ತುಮುಖಗಳ, ಚಕಿತಚಿತ್ತದ. ಯೋಚನೆಯ ಬಿಗುಹಿನ, ಚಿಂತೆಯ ಭಾರದಿಂದ ಕುಗ್ಗಿ ಕೆನ್ನೆಗೆ ಕೈಹಚ್ಚಿ ಕುಳಿತ ರಾವಣನು ಕುರುಡನು ಕತ್ತಲೆಯನ್ನು ಎಷ್ಟು ತೋಡಿದರೂ ಕಡೆಗಾಣದಂತೆ ಶತ್ರುಗಳೊಡನೆ ಯುದ್ಧಕ್ಕೆ ದಾರಿಯನ್ನು

ಜೀಯ ದುಗುಡವಿದೇಕೆ ಕಮಲಜ । ಸಾಯಕದಲಳಿದುಳಿದರೀ ನರ
ರಾಯರೆಂಬುಮ್ಮಳವ ಬಿಸುಡಿನ್ನೊಂದು ಕಣೆಯದಲಿ
ಆಯಸವ ಬಿಡಿಸುವೆನು ನಿನ್ನ ನಿ । ರಾಯಸದೊಳರಿಭಟನ ಕಾಲನ
ಬಾಯೊಳಡಸದಡಿಂದ್ರಜಿತುವೆಂಬಸುರನಲ್ಲೆಂದ ೪

ಸೇವಿಸಲಿ ಸುಧೆಯನು ಮಹಾಮರು । ಜೀವಣಿಯಲೆಬ್ಬಿಸಲಿ ಪಡೆಯಲಿ
ಸಾವು ತಮಗಿಲ್ಲೆಂದು ವರವನು ಹರಸರೋಜಜರ
ದೇವರಿಪು ಚಿತ್ತೈಸು ಮೇಲಿ । ನ್ನಾವುದತಿಶಯವಾಡಿ ಕೆಡಿಸೆನು
ರಾವಣಾಸುರನಲ್ಲದಿಲ್ಲೆನಿಸುವೆನು ಜಗಕೆಂದ ೫

ಎಂಬ ಮಾತನು ಕೇಳಿ ಕಲಿ ಮಕ । ರಾಂಬಕನು ಕೈಮುಗಿದು ಹರಿಜಿತು
ವೆಂಬ ಮಾತಿದು ತುದಿಯಲಾಗಲಿ ನಾಳಿನಾಜಿಯಲಿ
ತಿಂಬೆನಗ್ಗದ ಕದನಕೇಶಕ । ದಂಬವನು ರಿಪುನೃಪರ ಜೀವವ
ಕೊಂಬೆ ತಾ ವೀಳೆಯವ ತನಗೆಂದಸುರ ಗರ್ಜಿಸಿದ ೬

ಅಂದು ವನದಲಿ ತನ್ನ ತಂದೆಯ । ಕೊಂದ ಬಳಿವಗೆ ಕೊಲೆಗೆ ಕೊಲೆಯನು
ನಿಂದಿರಿಸುವೆನು ನಿಲಿಸುವೆನು ಚಿತ್ತಕೆ ಮನೋರಥವ
ಹಿಂದೆ ಹಿಂಗಿದ ಭಟರ ಸೋಲದ । ಸಂದ ಸಂಧಿಸಿ ಬೆಸುವೆನತಿಶಯ
ದಿಂದ ರಾಕ್ಷಸರಾಜತೇಜದ ಸುಪ್ರತಾಪಕವ ೭

ಕಾಣದೆ ನಿಟ್ಟುಸಿರುಬಿಡುತ್ತಿದ್ದನು. ೪. "ಸ್ವಾಮಿ ದುಃಖವೇತಕ್ಕೆ. ಈ ಮಾನವರರಸರು ಬ್ರಹ್ಮಾಸ್ತ್ರದಲ್ಲಿ ಸತ್ತು ಬದುಕಿದರು ಎಂಬ ಚಿಂತೆಯನ್ನು ಬಿಡಿ. ಇನ್ನೊಂದು ಬಾಣದಿಂದ ನಿಮ್ಮ ಚಿಂತೆಯನ್ನು ಬಿಡಿಸಿ ಸರಾಗದಿಂದ ಶತ್ರುವೀರನನ್ನು ಯಮನ ಬಾಯಿಗೆ ತುರುಕ ದಿದ್ದರೆ ನಾನು ಇಂದ್ರಜಿತುವೆಂಬ ಅಸುರನಲ್ಲ. ೫. ಶತ್ರುಗಳು ಅಮೃತವನ್ನು ಕುಡಿ ಯಲಿ, ಮಹಾಸಂಜೀವಿನಿ ಔಷಧಿಯಿಂದ ಬದುಕಿಸಲಿ. ಸೈನ್ಯದಲ್ಲಿ ತಮಗೆ ಮರಣವಿಲ್ಲ ಎಂಬ ಈಶ್ವರ ಬ್ರಹ್ಮ ಇವರು ಕೊಟ್ಟಿರುವ ವರವನ್ನು ಸ್ಮರಿಸಿಕೊಳ್ಳಿ. ಇದರ ಮೇಲೆ ಇನ್ನು ಹೆಚ್ಚಿನದು ಯಾವುದಿದೆ. ಸುಮ್ಮನೆ ಮಾತನಾಡಿ ಕೆಡಿಸುವುದಿಲ್ಲ. ಜಗತ್ತಿಗೆ ರಾವಣಾಸುರನಲ್ಲದೆ ಇನ್ನೊಬ್ಬರಿಲ್ಲ ಎನ್ನಿಸುವೆನು" ಎಂದ ಇಂದ್ರಜಿತು. ೬. ಈ ಮಾತನ್ನು ಕೇಳಿ ವೀರ ಮಕರಾಕ್ಷನು ಕೈಮುಗಿದು, "ಇಂದ್ರಜಿತು ಹೇಳಿದ ಮಾತು ಕೊನೆ ಯಲ್ಲಿ ನಡೆಯಲಿ. ನಾಳಿನ ಯುದ್ಧದಲ್ಲಿ ಕಾಳಗಕ್ಕೆ ಬರುವ ಶ್ರೇಷ್ಠ ವಾನರಸಮೂಹ ವನ್ನು ತಿಂದುಹಾಕುವೆನು. ಶತ್ರುರಾಜರ ಪ್ರಾಣವನ್ನು ಹೀರುವೆನು. ನನಗೆ ವೀಳೆಯ ವನ್ನು ಕೊಡಿ" ಎಂದು ಗರ್ಜಿಸಿದನು. ೭. "ಹಿಂದೆ ವನದಲ್ಲಿ ನನ್ನ ತಂದೆಯಾದ ಖರಾ ಸುರನನ್ನು ಕೊಂದ ವಂಶದ ಶತ್ರುವನ್ನು ಕೊಲೆಗೆ ಪ್ರತಿಯಾಗಿ ಕೊಂದು ನನ್ನ ಮನಸ್ಸಿನ ಆಸೆಯನ್ನು ನೆರವೇರಿಸಿಕೊಳ್ಳುವೆನು. ಆಗಿನ ಯುದ್ಧದಲ್ಲಿ ಪ್ರಾಣಬಿಟ್ಟ ವೀರರ ಸೋಲಿ ನಿಂದುಂಟಾದ ಬಿರುಕನ್ನು ಸೇರಿಸಿ ರಾಕ್ಷಸಕೀರ್ತಿಯ ಪರಾಕ್ರಮದಿಂದ ಅತಿಶಯವಾದ

ತರಿಸಿ ಬಳಿಕವಗಸುರಪತಿ ಕ । ರ್ಪೂರದ ವೀಳೆಯವಿತ್ತು ನಾನಾ
ಭರಣವನು ತೊಡಲಿತ್ತು ನೇಮಿಸಿದನು ಮಹಾಹವಕೆ
ಹರೆದುದೋಲಗವಂದಿನಿರುಳಿನ । ಭರವು ಬೀತುದು ಸೂತನಿನನೆ
ಚ್ಚಱಿಸೆ ನೂಕಿದನರುಣ ಮೂಡಣಗಿರಿಗೆ ಮಣಿರಥವ ೮

ಆಹವಕೆ ಮಕರಾಕ್ಷ ನೂಱು । ಕ್ಷೋಹಿಣಿಯು ಬಲಸಹಿತ ಮಹದು
ತ್ಸಾಹದಲಿ ಹೊಱಮಟನಾ ಲಂಕಾಮಹಾಪುರವ
ಮೋಹರಿಸಿತೀಚೆಯಲಿ ರಣಸ । ನ್ನಾಹದಲಿ ಸುಗ್ರೀವಬಲವವ
ಗಾಹಿಸಿತು ಮಕರಾಕ್ಷ ಸೈನಿಕ ಸರ್ವಲಗ್ಗೆಯಲಿ ೯

ಹೇಳಿದರೆ ಹೆದಱುವುದು ಮನವಾ । ಭೀಳ ರಕ್ಕಸಬಲವನೆಲೆ ಕುಶ
ಕೇಳು ಗರಳಾಂಬುಧಿಯ ತೆರೆಗಳೊ ತುರಗದೊಡ್ಡುಗಳೊ
ವ್ಯಾಳದಂತಿಯೊ ಕಾಲಯಮನ ಕ । ರಾಳ ಸೈರಿಭದೊಡ್ಡೊ ರಕ್ಕಸ
ನಾಳೊ ರಣಭೈರವರೊ ಬಣ್ಣಿಸಲರಿದು ತನಗೆಂದ ೧೦

ಉಳಿದುದೆಡೆಯಿಲ್ಲದೆ ನಭೋಮಂ । ಡಲ ಮಹಾದೇವಮವು ಬದುಕಿದ
ನೆಲ-ಗಳೊಳಗಿಲ್ಲದೆ ಸಮೀರಣನಖಿಳ ಜಲರಾಶಿ
ನೆಲೆಗಳಿಲ್ಲದೆ ಜೀವಿಸಿದನಿನ । ನುಳಿದ ದೂರದಲಿರ್ದು ಸೈರಿಸಿ
ತಿಳೆ ಕುಲಾದ್ರಿಗಳಿಂದ ರಿಪುಸೇನಾ ನಿನಾದದಲಿ ೧೧

ಬೆಸುಗೆ ಹಾಕುವೆನು." ೮. ರಾಕ್ಷಸೇಶ್ವರನು ಮಕರಾಕ್ಷನಿಗೆ ಕರ್ಪೂರದ ವೀಳೆಯವನ್ನು ತರಿಸಿಕೊಟ್ಟು, ಧರಿಸಲು ಹಲವು ವಿಧದ ಒಡವೆಗಳನ್ನಿತ್ತು ಭಾರಿ ಯುದ್ಧಕ್ಕೆ ನೇಮಿಸಿದನು. ಅನಂತರ ರಾವಣನ ಸಭೆಯು ಚದುರಿತು. ಇತ್ತ ರಾತ್ರಿಯ ರಭಸವು ತಗ್ಗಿತು. ಸೂರ್ಯನು ಸಾರಥಿಯನ್ನು ಎಚ್ಚರಿಸಲು ಅರುಣನು ಸೂರ್ಯರಥವನ್ನು ಪೂರ್ವಾಚಲಕ್ಕೆ ನಡೆಸಿದನು. ೯. ಮಕರಾಕ್ಷನು ನೂರು ಅಕ್ಷೋಹಿಣಿಸೈನ್ಯದೊಡನೆ ಲಂಕಾನಗರದಿಂದ ಅತ್ಯುತ್ಸಾಹದೊಡನೆ ಕದನಕ್ಕೆ ಹೊರಟನು. ಇತ್ತ ಯುದ್ಧರಂಗದಲ್ಲಿ ಸುಗ್ರೀವನ ಸೈನ್ಯವು ಯುದ್ಧಕ್ಕೆ ಸಜ್ಜಾಗಿ ನಿಂತಿತು. ಮಕರಾಕ್ಷನ ಸೈನ್ಯವು ಆಕ್ರಮಣಕ್ಕೆ ಎಲ್ಲ ಕಡೆಯಿಂದ ನುಗ್ಗಿತು. ೧೦. "ಭಯಂಕರ ರಾಕ್ಷಸಸೈನ್ಯವನ್ನು ವರ್ಣಿಸಲು ಮನಸ್ಸು ಹೆದರುವುದು. ಅಯ್ಯಾ ಕುಶ ಕೇಳು, ವಿಷಸಾಗರದ ಅಲೆಗಳೋ ಕುದುರೆಯ ಪಡೆಯೋ ! ಸೊಕ್ಕಿದ ಆನೆಯ ಗುಂಪೋ ಕಾಲಯಮನ ಭಯಂಕರ ಕೋಣಗಳ ಸಮೂಹವೋ ! ರಾಕ್ಷಸಬಲವೋ ರಣಭೈರವರೋ ! ನನಗೆ ವರ್ಣಿಸಲಸಾಧ್ಯ" ಎಂದು ವಾಲ್ಮೀಕಿಗಳು ನುಡಿದರು. ೧೧. ಶತ್ರುಸೈನ್ಯದ ಬೊಬ್ಬೆಯಿಂದ ಆಕಾಶದಲ್ಲಿ ಜಾಗವುಳಿಯಲಿಲ್ಲ ; ಮಹಾದೇವ, ಒಳಗೆ ಮೂಳೆಗಳಿಲ್ಲದೆ ಇದ್ದುದರಿಂದ ವಾಯು ಬದುಕಿಕೊಂಡನು ; ಸಮಸ್ತ ಸಾಗರಗಳು ನೆಲೆಯಿಲ್ಲದೆ ಉಳಿದವು ; ಸೂರ್ಯನು ದೂರದಲ್ಲಿದ್ದು ಬದುಕಿಕೊಂಡ ; ಕುಲಪರ್ವತಗಳಿದ್ದುದರಿಂದ ಭೂಮಿಯು ಸೈರಿಸಿಕೊಂಡಿತು.

ಇಂಬುದೋಱದುದಿಲ್ಲ ಕೇತುಕ । ದಂಬದಲಿ ನಭವಮುವ ತರಣಿಯ
ಬಿಂಬವೇನಾದುದೊ ಚತುರ್ಬಲ ಚರಣಧೂಳಿಯಲಿ
ಚುಂಬಿಸುವ ಚೂರಿಸುವ ಶಸ್ತ್ರಾ । ಡಂಬರದ ಡಾವರಕೆ ಕಪಿಗಳ
ಡೊಂಬಿನುಬ್ಬರವೆತ್ತ ಹೋದುದೊ ಹೇಳಲೇನೆಂದ ೧೨

ನಿಂದನಾ ನಿಜಸಕಲಸೇನೆಯ । ಮುಂದುಗಡೆಯಲಿ ತಾರಕಾಗ್ರಹ
ವೃಂದ ಮಧ್ಯದ ರವಿಯವೊಲು ಮಕರಾಕ್ಷ ರಥದೊಳಗೆ
ಹಿಂದಣತಿಬಲ ಖಳರಿಗಿವ ಹ । ನ್ನೊಂದು ಮಡಿ ತೇಜದಲಿ ದಶರಥ
ನಂದನನ ಕಂಗಳಿಗೆ ಕೌತುಕವೆನಲು ಕಾಣಿಸಿದ ೧೩

ಇವನು ಕೈಟಭನೋ ಮಹಾದೇ । ವಿವನು ಜಂಭನೊ ತಮನೊ ತಾನಿಂ
ತಿವ ಹಿರಣ್ಯಾಕ್ಷನೊ ಜಗಕ್ಷೋಭಾಂಧಕಾಸುರನೊ
ಇವನದಾರೈ ಬಂದ ರಾಕ್ಷಸ । ನಿವಹದಲಿ ಹೇಳೆಂದು ಸಿರಿರಾ
ಘವನರೇಶ್ವರ ಕೇಳಿದನು ಬಳಿಕಾ ವಿಭೀಷಣನ ೧೪

ಜೀಯ ಚಿತ್ತೈಸಿವನು ರಣಯುವ । ತೀ ಯಶಶ್ಶ್ರುತಿಪೂರನಿವನತಿ
ಕಾಯನಿಂ ಬಲ್ಲಿದನು ಬಲ್ಲಿದನಿಂದ್ರಜಿತುವಿಂಗೆ
ರಾಯ ಕೇಳಂದಡವಿಯಲಿ ಸಮ । ರಾಯತದೊಳುಬ್ಬೆದ್ದು ನಿಮ್ಮಯ
ಸಾಯಕದ ಸರಿಗೊದಗಿದತಿಬಲ ಖರನ ಮಗನೆಂದ ೧೫

೧೨. ದೇವತೆಗಳ ವಿಮಾನಗಳ ಮೇಲಿನ ಧ್ವಜಸಮೂಹ ತುಂಬಿಕೊಂಡು ಆಕಾಶದಲ್ಲಿ ಎಡೆಯಿರಲಿಲ್ಲ. ಅಬ್ಬಬ್ಬ, ಚತುರಂಗಸೈನ್ಯದ ಕಾಲ್ತುಳಿತದಿಂದೆದ್ದ ಧೂಳಿನಲ್ಲಿ ಸೂರ್ಯ ಬಿಂಬವೇನಾಯಿತೋ! ಹೊಳೆಹೊಳೆದು ಝಳಪಿಸುವ ಶಸ್ತ್ರಗಳ ಪೀಡೆಗೆ ವಾನರರ ಭಾರಿ ಗದ್ದಲವೆಲ್ಲಿ ಹೋಯಿತೋ! ಇದನ್ನು ಏನೆಂದು ವರ್ಣಿಸಲಿ ಎಂದರು ವಾಲ್ಮೀಕಿಗಳು. ೧೩. ತನ್ನ ಸೇನಾವ್ಯೂಹದ ಮುಂದುಗಡೆ ಗ್ರಹನಕ್ಷತ್ರಗಳ ಮಧ್ಯದ ರವಿಯಂತೆ ಮಕರಾಕ್ಷನು ರಥದಲ್ಲಿ ನಿಂತನು. ಹಿಂದಿನ ಮಹಾಬಲಶಾಲಿ ರಾಕ್ಷಸರಿಗಿಂತ ಹನ್ನೊಂದರಷ್ಟು ತೇಜಸ್ಸಿನಿಂದ ರಾಮನ ಕಣ್ಣುಗಳಿಗೆ ಮಕರಾಕ್ಷನು ಕುತೂಹಲಕರವಾಗಿ ಕಾಣಿಸಿದನು. ೧೪. "ಇವನು ಕೈಟಭನೋ! ಮಹಾದೇವ! ಇವನು ಜಂಭಾಸುರನೋ, ತಮನೋ, ಹಿರಣ್ಯಾಕ್ಷನೋ, ಜಗತ್ಪೀಡಕ ಅಂಧಕಾಸುರನೋ? ರಾಕ್ಷಸಗುಂಪಿನೊಡನೆ ಬಂದ ಇವನು ಯಾರೆಂಬುದನ್ನು ಹೇಳು" ಎಂದು ಶ್ರೀ.ರಾಘವೇಂದ್ರನು ವಿಭೀಷಣನನ್ನು ಪ್ರಶ್ನಿಸಿದನು. ೧೫. "ಸ್ವಾಮಿ, ಆಲಿಸಿ. ರಣಯುವತಿಯ ಕೀರ್ತಿಕರ್ಣಾಭರಣನಿವನು. ಅತಿಕಾಯನಿಗಿಂತ ಬಲಿಷ್ಠ, ಇಂದ್ರಜಿತುವಿಗಿಂತ ಹೆಚ್ಚು ಪರಾಕ್ರಮಿ. ಅಂದು ಕಾಡಿನಲ್ಲಿ ಯುದ್ಧದ ಮದದಿಂದ ಉಬ್ಬಿ ನಿಮ್ಮ ಖಡ್ಗಕ್ಕೆ ಆಹುತಿಯಾದ ಬಲಶಾಲಿ ಖರನ ಮಗ ಇವನು" ಎಂದ ವಿಭೀಷಣ.

ಆವಡಿವ ಬಲ್ಲಿದನು ತಪ್ಪ । ಲ್ಲೈದಲುಳ್ಳವ ನಮ್ಮ ರಣಸಂ
ವಾದಕಿವನಯ್ಯನ ಪರಾಕ್ರಮಕಾರು ಸರಿ ಜಗದ
ಆದಿವೀರರಲೆಮ್ಮ ಬಲು ಬಿಲು । ಗೈದುವನು ಮುಱಿಯೆಚ್ಚು ಮೂವ
ತ್ತೈದು ಹಜ್ಜೆಯ ಹಿನ್ನೆಲೆಗೆ ಹಿಂಗಿಸಿದನವನೆಂದ ೧೬

ಹಗೆಗಳಾವೀಗಿವಗೆ ನಮ್ಮೊಳು । ಜಗಳವನು ಗಂಟಿಕ್ಕಿ ಕೊಂಬು
ದ್ಯೋಗವು ತಪ್ಪದು ಬಱಿದೆ ಸೇನೆಯನಿವನ ಕೈಯಿಂದ
ಗಗನಪಥಿಕರ ಮಾಡಿಸುವದಿದು । ನಿಗರವಲ್ಲೆಮಗೆನುತ ಕರುಣಾ
ಳುಗಳ ದೇವನು ಕೊಂಡನಗ್ಗದ ಚಾಪಮಾರ್ಗಣವ ೧೭

ನಿಲುಕಿತವನ ವರೂಥ ಕಾಲಾ । ನಳನ ನಿಡುನಾಲಗೆಯವೊಲು ಕಳ
ಕಳದ ಕಲಿಗಳ ತೇರು ತೇರೈಸಿದವು ತವಕದಲಿ
ಸೆಳೆದ ಖಡುಗದಲೇಱಿದರು ವೆ । ಗ್ಗಳದ ರಾವ್ತರು ಮುಂಚಿದವು ಸುಂ
ಡಿಲಲಿ ಸೆಕ್ಕಿದ ಪಟ್ಟೆಯದ ನೆಗಹುಗಳಿಭನಿಕರ ೧೮

ಕಿತ್ತ ಸುರಗಿಯ ಕಿವಿವರೆಗೆ ತೆಗೆ । ದೆತ್ತುಗಣೆಗಳ ತೊಡವಲಗೆಗಳ
ಕತ್ತಿಗಳ ಝಳಪುಗಳ ಹೊಹಿದ ಸಬಳದುಬ್ಬರದ
ಪತ್ತಿಚಯದುಬ್ಬರದಲೊಳಹೊ । ಕ್ಕೊತ್ತಬರಿಸಿತು ಸರ್ವಲಗ್ಗೆಯ
ಲೆತ್ತಿದದ್ರಿಕುಜಾಯುಧರನೊಡೆಬಗಿದು ಸರಿಸದಲಿ ೧೯

೧೬. "ಹಾಗಿದ್ದರೆ ಇವನು ವೀರನೆನ್ನುವುದು ಸುಳ್ಳಲ್ಲ. ನಮ್ಮೊಡನೆ ಯುದ್ಧಕ್ಕೆ ಸ್ಪರ್ಧಿಸಲು ಇವನು ಯೋಗ್ಯ. ಜಗತ್ತಿನ ಪೂರ್ವದ ವೀರರಲ್ಲಿ ಇವನ ತಂದೆಯ ಪರಾಕ್ರಮದ ಸಮಕ್ಕೆ ಯಾರು ಬರುತ್ತಾರೆ. ಅವನು ನಮ್ಮ ಬಿಲ್ಲನ್ನು ಬಾಣ ಪ್ರಯೋಗದಿಂದ ಮುರಿದು ಮೂವತ್ತೈದು ಹೆಜ್ಜೆ ಹಿಂದಕ್ಕೆ ಸರಿಯುವಂತೆ ಮಾಡಿದನು" ಎಂದ ರಾಮ. ೧೭. "ನಾವು ಈಗ ಇವನಿಗೆ ಶತ್ರುಗಳಾಗಿದ್ದೇವೆ. ಇವನೊಡನೆ ಜಗಳವನ್ನು ಗಂಟುಹಾಕಿಕೊಳ್ಳುವ ಕಾರ್ಯ ತಪ್ಪುವುದಿಲ್ಲ. ವ್ಯರ್ಥವಾಗಿ ನಮ್ಮ ಸೈನ್ಯವನ್ನು ಇವನ ಕೈಯಿಂದ ಆಕಾಶದ ಯಾತ್ರಿಕರನ್ನಾಗಿ ಮಾಡಿಸುವುದು ಒಳ್ಳೆಯದಲ್ಲ" ಎನ್ನುತ್ತ ಕರುಣಾಳುಗಳೊಡೆಯನಾದ ಶ್ರೀರಾಮನು ತನ್ನ ಬಿಲ್ಲು ಬಾಣಗಳನ್ನು ತೆಗೆದುಕೊಂಡನು. ೧೮. ಪ್ರಳಯಕಾಲಾಗ್ನಿಯ ಉದ್ದ ನಾಲಗೆಯಂತೆ ಮಕರಾಕ್ಷನ ರಥವು ಮುಂದಕ್ಕೆ ಚಾಚಿತು. ಉಳಿದ ವೀರರ ರಥಗಳು ಗಲಾಟೆಮಾಡುತ್ತ ಆತುರವಾಗಿ ಹಿಂದಕ್ಕೆ ಸರಿದು ಅದಕ್ಕೆ ದಾರಿಮಾಡಿಕೊಟ್ಟವು. ಕತ್ತಿಯನ್ನು ಸೆಳೆದು ಹಿಡಿದು ಅಶ್ವಾರೋಹಿಗಳು ಕುದುರೆಗಳನ್ನೇರಿದರು. ಆನೆಗಳು ಸೊಂಡಿಲಿಗೆ ಕಟ್ಟಿದ್ದ ಕತ್ತಿಯನ್ನು ಮೇಲಕ್ಕೆತ್ತಿ ಮುನ್ನಡೆದವು. ೧೯. ಸುರಗಿಯನ್ನು ಸೆಳೆದ, ಕಿವಿಯವರೆಗೆ ಎತ್ತಿಹಿಡಿದ ಎತ್ತುಬಾಣಗಳ ತೊಡವಲಗೆಗಳ, ಬೀಸುವ ಕತ್ತಿಗಳ, ಹೊಡೆಯುವ ಈಟಿಗಳ ಅತಿಶಯದ ರಾಕ್ಷಸ ಕಾಲುಬಲವು ರಭಸದಿಂದ ಒಳಹೊಕ್ಕು ಎಲ್ಲ ಕಡೆ ಆಕ್ರಮಿಸಿ ಬಂಡೆ ಮತ್ತು ಮರಗಳನ್ನು ಆಯುಧಗಳನ್ನಾಗಿ ಹಿಡಿದ ವಾನರರ ಸಾಲನ್ನು

ಎಲವೊ ಸಾರಥಿ ಕೇಳು ರಾಮನ । ಬಳಿಗೆ ಬಿಡು ನಿಜರಥವ ಬಲಿಮುಖ
ಬಲದೊಳಗೆ ಬಳಿಸಲಿಸದಿರು ಬಿಲುದುಡುಕೆನಿವದಿರಿಗೆ
ಕಲಹ ರಾಮನ ಕೂಡೆ ಗೆಲನಿನ । ಬಲುಹು ರಾಮನ ಕೂಡೆ ತಂದೆಯ
ಕೊಲೆಗೆ ಕೊಲೆಯನು ಕೊಂಬೆನಲ್ಲಿಗೆ ರಥವನೆಸಗೆಂದ ೨೦

ತುರಗವನು ಚಪ್ಪರಿಸಿ ಸಾರಥಿ । ಹರಿಸಿದನು ಹೊಂದೇರನಹಿತನ
ಭರದ ಭಾರಿಯ ಬವರವೆಮ್ಮೊಳಗಹುದಲೇಯೆನುತ
ಅರಿವರೂಥವ ತಱುಬುವತಿಬಲ । ಪರಿ ಚಮೂಪರ ಕೈಯ ಸನ್ನೆಯ
ಲೆರಡು ಭಾಗವ ಮಾಡಿ ಬಿಲುದನಿದೋಱಿದನು ರಾಮ ೨೧

ರಸಿಕನಲ್ಲಾ ರಾಮ ರಣಸಾ । ಹಸಿಕರಲಿ ಸಿಂಜಿನಿಯ ಸಬುದಕೆ
ಸಸಿದು ಬಿದ್ದವು ತಾರೆಗಳು ತಳಮಗುಚಿತಂಬುನಿಧಿ
ಉಸುರಲೇನದನಾ ಕಪರ್ದಿಯ । ಐಷವು ಕಾರ್ಮುಕ ವಿದ್ಯದಳತೆಗೆ
ಹಸನು ಹರಕೋದಂಡಖಂಡನ ಬಾಣಗತಿಯೆಂದ ೨೨

ಈತನೀಗಾಜಿಯಲಿ ನಮ್ಮಯ । ತಾತನನು ಹಗೆಗೊಂದ ಹಗೆ ಕೇಳ್
ಸೂತ ನೋಡೆನುತಬ್ಬಿ ಬೊಬ್ಬಿಱಿದಸ್ತ್ರಸಾರದಲಿ
ಭೂತಳವದಾವುದು ದಿಶಾಸಂ । ಘಾತವಾವುದು ನಭವದಾವುದ
ರಾತಿಸೇನೆಯದಾವುದೆನೆ ಮುಸುಕಿದನು ಮಕರಾಕ್ಷ ೨೩

ಭೇದಿಸಿತು. ೨೦. "ಸಾರಥಿ, ರಾಮನ ಬಳಿಗೆ ನನ್ನ ರಥವನ್ನು ಬಿಡು. ಕಪಿಸೈನ್ಯದೊಳಕ್ಕೆ ರಥವನ್ನು ನಡೆಸಬೇಡ. ಇವರ ಮೇಲೆ ಬಿಲ್ಲನ್ನು ಎತ್ತುವುದಿಲ್ಲ. ನನ್ನ ಕಾಳಗವು ರಾಮನೊಡನೆ, ನನ್ನ ಪರಾಕ್ರಮ ರಾಮನ ಮೇಲೆ. ತಂದೆಯ ಕೊಲೆಗೆ ಸೇಡನ್ನು ತೀರಿಸಿಕೊಳ್ಳುವೆನು. ಅಲ್ಲಿಗೆ ರಥವನ್ನು ನಡೆಸು" ಎಂದ ಮಕರಾಕ್ಷ ೨೧. ಸಾರಥಿಯು ಕುದುರೆಯ ಬೆನ್ನು ತಟ್ಟಿ ಚಿನ್ನದ ರಥವನ್ನು ಮುಂದಕ್ಕೆ ಓಡಿಸಿದನು. ಶತ್ರುವಿನ ಬಿರುಸಿನ ಕಾಳಗವು ನಮ್ಮ ಪಾಲಿನದು ಎಂದು ನುಡಿದು ಶತ್ರುವಿನ ರಥವನ್ನು ಮುತ್ತುವ ಬಲಶಾಲಿ ವಾನರದಳಪತಿಗಳಿಗೆ ಕೈಸಂಜ್ಞೆಯಿಂದ ತಿಳಿಸಿ ಸೈನ್ಯವು ಎರಡು ಭಾಗವಾಗುವಂತೆ ಮಾಡಿ ರಾಮನು ಧನುಷ್ಟಂಕಾರ ಮಾಡಿದನು. ೨೨. ರಣಸಾಹಸಿಗಳಲ್ಲಿ ರಾಮನು ರಸಿಕನಲ್ಲವೇ ? ರಾಮನ ಧನುಷ್ಟಂಕಾರದ ಶಬ್ದಕ್ಕೆ ನಕ್ಷತ್ರಗಳು ಚೆಲ್ಲಾಪಿಲ್ಲಿಯಾಗಿ ಉದುರಿದವು ಮತ್ತು ಸಮುದ್ರವು ಅಡಿಮೇಲಾಯಿತು. ಶಿವಧನುಸ್ಸನ್ನು ಮುರಿದ ರಾಮನ ಬಾಣಪ್ರಯೋಗವು ಈಶ್ವರನ ಉಗ್ರ ಬಿಲ್ವಿದ್ಯಾಕೌಶಲಕ್ಕೆ ಸರಿಸಮ, ಇದನ್ನು ಹೇಗೆ ವರ್ಣಿಸಲಿ ! ಎಂದರು ವಾಲ್ಮೀಕಿಗಳು. ೨೩. "ಕೇಳು ಸಾರಥಿ, ಈತನು ಕದನದಲ್ಲಿ ನಮ್ಮ ತಂದೆಯ ಹಗೆತನವನ್ನು ಸಂಪಾದಿಸಿದ ನಮ್ಮ ಶತ್ರು, ಈಗ ನೋಡು" ಎನ್ನುತ್ತ ಮಕರಾಕ್ಷನು ಗರ್ಜಿಸಿ ಬೊಬ್ಬಿರಿದು ಬಾಣಗಳ ಮಳೆಯನ್ನು ಸುರಿಸಿದನು. ಅವನ ಬಾಣಗಳು ಮುಚ್ಚಿ ನೆಲವಾವುದು, ಭೂಮ್ಯಾಕಾಶಗಳ ಸೇರುವೆಯಾವುದು, ಗಗನವಾವುದು, ಶತ್ರುಸೈನ್ಯವದಾ

ಗಬ್ಬರಿಸಿ ಗಟಲಿಕ್ಕಿ ಮುಸುಕುವ । ಹಬ್ಬುಗಣೆಗಳನಿದಿರುಗಣೆಯಿಂ
ದೆಬ್ಬಿಸಿದನುಬ್ಬಿಸಿದನೆಸುಗೆಯುಲಮರಸಂತತಿಯ
ಬೊಬ್ಬಿರಿದು ಮೂರಂಬುಗಳಲುರೆ । ಯೆಬ್ಬಿಸಿದನಾ ಖಳತನೂಜನ
ಹೆಬ್ಬಲದ ರಥ ಹಯ ಮದೇಭ ಪದಾತಿಸಂತತಿಯ ೨೪

ಬಾಣವೊಂದೇ ಕೊಲುತಲಿರ್ದುದು । ಜೋಣಿಯಲಿ ಸಂಧಿಸುವ ಸುಭಟ
ಶ್ರೇಣಿಯನು ಬಳಿಸಲಿಸಿ ಬವರಕೆ ನಿಲುವ ಪಡೆಬಲವ
ಕೇಣಿಗೊಂಡೊಂದಂಬು ಕರಿಗಳ । ಗೋಣ ಕುದುರೆಯ ಕೊರಳ ಸುಭಟ
ಪ್ರಾಣಗಳನೆಬ್ಬಿಸುತಲಿರ್ದುದು ರಾಮನೆಸುಗೆಯಲಿ ೨೫

ಅರಿದ ತಲೆ ನಭಕಡರೆ ಭರದಲಿ । ಸುರಿವ ರಕ್ತಾಂಬುಗಳಲಂಬಿನ
ಉರವಣಿಪ ಬಿರುಗಾಳಿ ಸೂಸಿತು ಸುರರ ಮೈಗಳಲಿ
ಅರುಣಲೋಕದವೋಲು ಗಗನಾಂ । ತರ ವಿರಾಜಿಸಿತವನಿ ರಕ್ತಾಂ
ಬರವನುಟ್ಟಂತೆಸೆದುದೊಗುನೆತ್ತರಿನ ಹೂರದಲಿ ೨೬

ಬೇರೆ ಮತ್ತೊಂದಂಬು ಸಮ್ಮುಖ । ಕೇರುವರಿಭಟನಂಬುಗಳ ಕೆಲ
ಜಾರಿಗಡಿವುತ್ತಿರ್ದುದೊಂದಂಬಖಿಳ ಭೂತಗಳ
ಸಾರಿ ಕರೆಕರೆದಸುರಸೇನೆಯ । ಸೂರೆಗೊಡುತಿರ್ದುದು ವಿಚಿತ್ರದ
ತೋರಿಕೆಯಲೇ ರಾಘವೇಂದ್ರನ ಸರಳ ಸೌರಂಭ ೨೭

ವುದು ಎನ್ನುವುದು ಕಾಣದಂತಾಯಿತು. ೨೪. ಮುತ್ತಿ ಶತ್ರುಗಳನ್ನು ಕಬಳಿಸುತ್ತಾ ವ್ಯಾಪಕವಾಗಿ ಹಬ್ಬುವ ರಾಕ್ಷಸನ ಬಾಣಗಳನ್ನು ಎದುರುಬಾಣಗಳಿಂದ ರಾಮನು ತೆರವು ಮಾಡಿದನು. ರಾಮನು ತನ್ನ ಬಾಣಪ್ರಯೋಗದಿಂದ ದೇವತೆಗಳನ್ನು ಸಂತೋಷ ಪಡಿಸಿದನು. ಆರ್ಭಟಿಸಿ ಮೂರು ಬಾಣಗಳಿಂದ ರಾಮನು ಮಕರಾಕ್ಷನ ಭಾರಿ ಸೈನ್ಯದ ರಥ, ಕುದುರೆ, ಆನೆ, ಕಾಲಾಳುಗಳ ಸಮೂಹವನ್ನು ಚದುರಿಸಿದನು. ೨೫. ರಾಮನ ಬಾಣಪ್ರಯೋಗದ ವೈಖರಿಯಲ್ಲಿ ಮುಂದುಗಡೆ ಸಾಲಾಗಿ ಮುತ್ತುವ ವೀರರ ಸಾಲನ್ನು ಒಂದೇ ಬಾಣ ಕೊಂದುಹಾಕುತ್ತಿತ್ತು ಮತ್ತು ಹಿಂದಿನಿಂದ ಯುದ್ಧಕ್ಕೆ ಬಂದು ನಿಲ್ಲುವ ಮಾರ್ಬಲವನ್ನು ವಶಪಡಿಸಿಕೊಂಡಿತು. ಒಂದು ಬಾಣವು ಆನೆ ಕುದುರೆಗಳ ಕತ್ತುಗಳನ್ನು ಕತ್ತರಿಸಿ ಯೋಧರ ಪ್ರಾಣಗಳನ್ನು ಹೊರಚೆಲ್ಲುತ್ತಿತ್ತು. ೨೬. ಕತ್ತರಿಸಿದ ತಲೆಗಳು ಆಕಾಶಕ್ಕೆ ಚಿಮ್ಮಲು ಅವುಗಳಿಂದ ಜೋರಾಗಿ ಸುರಿಯುವ ರಕ್ತವನ್ನು ಬಾಣಗಳ ವೇಗದಿಂದೆದ್ದ ಬಿರುಗಾಳಿಯು ದೇವತೆಗಳ ಮೈಮೇಲಕ್ಕೆ ಹಾರಿಸಿತು. ಆಕಾಶಮಂಡಲವು ಕೆಂಪುಲೋಕವೊಂದರಂತೆ ಪ್ರಕಾಶಿಸಿತು. ಹೊರಸೂಸುವ ರಕ್ತಪ್ರವಾಹದಿಂದ ಭೂಮಿಯು ಕೆಂಪುವಸ್ತ್ರವನ್ನುಟ್ಟಂತೆ ಶೋಭಿಸಿತು. ೨೭. ಎದುರಿಗೆ ಬರುವ ಶತ್ರು ವೀರ ಮಕರಾಕ್ಷನ ಬಾಣಗಳನ್ನು ರಾಮನ ಮತ್ತೊಂದು ಬಾಣವು ಕತ್ತರಿಸಿ ಪಕ್ಕಕ್ಕೆ ಬೀಳಿಸುತ್ತಿತ್ತು. ಒಂದು ಬಾಣವು ಸಮಸ್ತ ಭೂತಗಣಗಳನ್ನು ಕೂಗಿ ಕರೆಕರೆದು ಶತ್ರುಸೈನ್ಯವನ್ನು ಸೂರೆಗೊಡುತ್ತಿತ್ತು. ರಾಘವೇಂದ್ರನ ಬಾಣಪ್ರಯೋಗ

ಚಿಗಿದ ರಕ್ಕಸಭಟರ ತಲೆ ಕುದು । ರೆಗಳ ಕೊರಳಲಿ ಬೆಚ್ಚವಾ ಕುದು
ರೆಗಳ ತಲೆ ಕುಳ್ಳಿದವು ಕುಂಜರದುಡಿದ ಕೊರಳಿನಲಿ
ಅಗಲಿದಿಭದ ಶಿರಂಗಳಾ ಭಟ । ರುಗಳ ಮುಂಡದಲಡಸಿ ಬೊಬ್ಬಿಱಿ
ತಗಳಲೊದಗಿತು ಮತ್ತೆ ಬಲವಳ್ಳಿಱಿವ ವಾದ್ಯದಲಿ ೨೮

ಕಡಿದ ಕಾಲ್ಗಳ ಭಟರು ಮುಂಡದ । ಹೆಡಕುಗಳ ಚಿಗಿದೇಱಿ ಹೊಯ್ದರು
ಖಡುಗ ಖರ್ಪರ ಪರಶು ಪರಿಘ ಮುಸುಂಡಿ ಮುಸಲದಲಿ
ಸಿಡಿದ ತಲೆಗಳ ಕೆಲವು ಮುಂಡಗ । ಳಡಸಿ ಶಿರದಲಿ ಬೊಬ್ಬಿಱಿದು ನಡೆ
ನಡೆದು ತಿವಿದವು ಸುರಗಿ ಕುಂತ ಕಠಾರಿ ಸಬಳದಲಿ ೨೯

ಉಡಿದ ತೇರ್ಗಳಲಿಟ್ಟರಿಟ್ಟರು । ಮಡಿದ ಮದಕರಿಗಳಲಿ ಕಾಲ್ಗಳ
ಹಿಡಿದು ಹಯದಿಂದಪ್ಪಳಿಸಿದರು ತೆಗೆತೆಗೆದು ಹೆಣನ
ತುಡುಕಿ ತೂಱಿದರಿದಿರ ಕಪಿಗಳ । ಹುಡುಕುನೀರದ್ದಿದರು ರಕುತದ
ಮಡುಗಳಲಿ ಮಕರಾಕ್ಷರಾಕ್ಷಸನಸಮ ಭಟನಿಕರ ೩೦

ಆವ ಯುಗದಲಿ ಕಂಡುದಿಲ್ಲಿಂ । ತೀ ವಿಗುರ್ಬಣೆಯನು ಮಹಾಹವ
ಕೋವಿದರೊಳೆಂತುಟೊ ನಿಶಾಚರಭಟರ ವೀರತನ
ಜಾವ ಕಾದಿತು ಕಡಿದಲೆಯ ಸ । ಜ್ಜೀವದಾಸುರಸೇನೆ ರಾಘವ
ದೇವನೊಳು ದೇವಾಳಿ ಬೆಱಗಿಡೆ ಬಹಳ ಚಿತ್ರದಲಿ ೩೧

ಸಾಮರ್ಥ್ಯವು ಆಶ್ಚರ್ಯಕರವಾಗಿ ತೋರುತ್ತಿತ್ತೆಂಬುದು ಸಹಜ. ೨೮. ಕತ್ತರಿಸಿ ಚಿಮ್ಮಿದ ರಾಕ್ಷಸವೀರರ ತಲೆಗಳು ಕುದುರೆಗಳ ಕತ್ತರಿಸಿದ ಕತ್ತುಗಳ ಮೇಲೆ ಬೆಸೆದುಕೊಂಡವು. ಕುದುರೆಗಳ ತಲೆಗಳು ತಲೆ ಕತ್ತರಿಸಿದ ಆನೆಗಳ ಕತ್ತುಗಳ ಮೇಲೆ ಕುಳಿತವು. ಕತ್ತರಿಸಿದ ಆನೆಗಳ ತಲೆಗಳು ತಲೆ ಹೋದ ವೀರರ ಮುಂಡದ ಮೇಲೆ ಕಚ್ಚಿಕೊಂಡವು. ಪುನಃ ರಾಕ್ಷಸಸೈನ್ಯವು. ವಾದ್ಯಗಳ ಭೋರ್ಗರೆತದೊಡನೆ ಯುದ್ಧಕ್ಕೆ ಬಂದೊದಗಿತು. ೨೯. ಕಾಲುಗಳು ಕತ್ತರಿಸಿದ ಭಟರು ಮುಂಡದ ಹೆಕ್ಕತ್ತುಗಳ ಮೇಲೇರಿ ಖಡ್ಗ, ಖರ್ಪರ, ಗಂಡುಗೊಡಲಿ, ಪರಿಘಾಯುಧ, ಮುಸುಂಡಿ, ಒನಕೆ ಮೊದಲಾದ ಆಯುಧಗಳಿಂದ ವಾನರರನ್ನು ಹೊಡೆದರು. ತಲೆಗಳು ಕತ್ತರಿಸಿಹೋದ ಕೆಲವು ಮುಂಡಗಳು ಬೇರೆ ತಲೆಗಳೊಡನೆ ಸೇರಿಕೊಂಡು ಬೊಬ್ಬೆಹಾಕುತ್ತ ಓಡಾಡುತ್ತ ಸುರಗಿ, ಕುಂತ, ಕಠಾರಿ, ಈಟಿಗಳಿಂದ ತಿವಿದವು. ೩೦. ಮಕರಾಕ್ಷರಾಕ್ಷಸನ ಅಸಮಾನ ವೀರರು ಮುರಿದ ರಥಗಳಿಂದ ವಾನರರನ್ನು ಹೊಡೆದರು, ಸತ್ತ ಮದ್ದಾನೆಗಳಿಂದ ಬಡಿದರು, ಕುದುರೆಗಳ ಕಾಲುಗಳನ್ನು ಹಿಡಿದು ಅಪ್ಪಳಿಸಿದರು, ಹೆಣಗಳನ್ನು ಹಿಡಿದೆಸೆದರು, ಎದುರಿಗೆ ಸಿಕ್ಕಿದ ಕಪಿಗಳನ್ನು ರಕ್ತದ ಮಡುಗಳಲ್ಲಿ ಕುದಿನೀರದ್ದಿದರು. ೩೧. ಅತಿಶಯ ಯುದ್ಧ ವಿಶಾರದರಲ್ಲಿ ಯಾವ ಯುಗದಲ್ಲಿಯೂ ಇಂಥ ಭೀಕರತೆಯನ್ನು ಕಂಡುದಿಲ್ಲ. ರಾಕ್ಷಸ ವೀರರ ಪರಾಕ್ರಮವೆಂಥದೋ ! ತಲೆ ಕತ್ತರಿಸಿದ ಮೇಲೂ ಜೀವಗೊಂಡ ಭಯಂಕರ ರಾಕ್ಷಸಸೈನ್ಯವು ರಾಮನೊಡನೆ ಬಹಳ ವಿಚಿತ್ರ ರೀತಿಯಲ್ಲಿ ಒಂದು ಜಾವ ಪರ್ಯಂತ

ಜಲನಿಧಿಯು ಜಲ ಜಾಜಿದಂದುರಿ । ಗೊಳುವ ಮಹದಗ್ನಿಯಂತೊಲಾನನ
ವಳಯದಲಿ ಕುಡಿಯಿಟ್ಟ ಕೋಪಜ್ವಾಲೆ ಭುಗುಭುಗಿಸೆ
ಹೊಳೆಹೊಳೆವ ಹೊಸಹೊಗರ ತಳಪದ । ತಳಿತ ಕಿಡಿಗಳ ದಿವ್ಯಬಾಣಾ
ವಳಿಗಳನು ಮಕರಾಕ್ಷ ಕಜಿದನು ಮೇಲೆ ರಾಘವನ ೩೨

ಮುಸುಕುವರಿಶರವೀಧಿಯನು ಖಂ । ಡಿಸುವನೀ ರಘುನಾಥನವ ನಿ
ಪ್ಪಸರದಲಿ ಹೂಳುವನು ಹೊಜಬೀಳುವನು ರಘುನಾಥ
ಎಸುಗೆ ಸಡೆದುದು ಮೇಲೆ ಮೇಲಾ । ಲಸಿಕೆದೋಜದೆ ತೋಮರದಲಾ
ಗಸ ಧರಾತಳ ತುಂಬೆ ಮಕರ ಸರೋಜನಯನರಲಿ ೩೩

ಹಳಚುವಲಗಲಗುಗಳ ಖಳಪಳ । ದುಲುಹು ಕಣೆಕಣೆ ತಾಗುಗಳ ಕಂ
ಡೆಳೆಗಳಬ್ಬರ ಗಜಿಯ ಗಾಳಿಯ ಬೊಬ್ಬೆ ಬವರಿಗರ
ಬಲುರಭಸ ಭೀಂಕೃತಿಯು ಸರಳಿನ । ಸುಳಿವಿನಬ್ಬರ ರಭಸವಿನಿತಜಿ
ಕಲಹದಲಿ ಕಿವಿ ಕಿವುಡುಗೊಂಡುದಜಾಂಡಮಂಪಲದ ೩೪

ಬಳಿವಗೆಯು ಬಲುಗೋಪದಲಿ ಬಳಿ । ಕಳವಿನತಿಬಲ ಖಳತನೂಭವ
ನಿಳೆಯ ನಾಡಾಡಿಯ ನರಾಧಿಪನೈಸಲೇಯೆಂಬ
ಬಳಕೆಯಲಿ ಬೊಬ್ಬಿಜಿದು ಬಾಣದ । ಹಿಳುಕನಂತಕಮಂತ್ರದಲಿ ನೆಲೆ
ಗೊಳಿಸಿ ನಿಡುದನಿದೋಜಲೆಚ್ಚನು ರಾಘವೇಶ್ವರನ ೩೫

ಕಾದಾಡಿತು. ಇದನ್ನು ಕಂಡು ದೇವತೆಗಳು ಬೆರಗಾದರು. ೩೨. ಸಾಗರದ ನೀರು ಬತ್ತಿದಾಗ ಪ್ರಜ್ವಲಿಸುವ ಪ್ರಚಂಡಾಗ್ನಿಯಂತೆ ಮುಖದಲ್ಲಿ ಹುಟ್ಟಿದ ಕೋಪದ ಉರಿ ಭುಗು ಭುಗಿಸಲು ಮಕರಾಕ್ಷನು ಕಿಡಿಗಳನ್ನುಗುಳುವ ಹೊಳೆಹೊಳೆಯುವ ಹೊಸ ಕಾಂತಿಯ ದಿವ್ಯ ಬಾಣಗಳನ್ನು ರಾಮನ ಮೇಲೆ ಬಿಟ್ಟನು. ೩೩. ತನ್ನನ್ನು ಮುಸುಕುವ ಶತ್ರು ಬಾಣಗಳ ಸಮೂಹವನ್ನು ರಾಘವನು ಕತ್ತರಿಸುವನು. ಆಗ ಮಕರಾಕ್ಷನು ನಿಷ್ಠುರ ನಾಗಿ ಬಾಣಗಳಿಂದ ರಾಮನನ್ನು ಮುಚ್ಚುವನು. ರಾಮನು ಬಾಣಗಳೊಳಗಿನಿಂದ ಹೊರಬರುವನು. ಮಕರಾಕ್ಷ ಮತ್ತು ಕಮಲಾಕ್ಷರಾಮ ಇವರು ಆಯಾಸ ತೋರಿಸಿ ಕೊಳ್ಳದೆ ಮೇಲಿಂದ ಮೇಲೆ ಬಾಣಗಳ ಯುದ್ಧ ಮಾಡಿದರು. ಆಗ ಆಕಾಶ ಭೂಮಿಗಳು ಆಯುಧಗಳಿಂದ ತುಂಬಿಹೋದವು. ೩೪. ಬಾಣಬಾಣಗಳ ಹರಿತ ಬಾಯಿಗಳ ಅಪ್ಪಳಿ ಸುವಿಕೆಯ ಖಳಪಳ ಶಬ್ದ, ಬಾಣಬಾಣಗಳು ತಗಲಿ ಮುರಿದ ಅಬ್ಬರ, ಬಾಣಗಳ ಗರಿಗಳು ಗಾಳಿಯಲ್ಲಿ ಮಾಡುವ ಭೋರ್ಗರೆತ, ಕಾದಾಡುವವರ ಬಿಲ್ಲಿನ ರಭಸದ ಶಬ್ದ, ಬಾಣಗಳು ವೇಗವಾಗಿ ಧಾವಿಸುವಾಗಿನ ಭೀಂಕಾರ–ಹೀಗೆ ಯುದ್ಧದ ನಾನಾ ಶಬ್ದಗಳ ಸಂಗಮದಿಂದ ಬ್ರಹ್ಮಾಂಡದ ಕಿವಿ ಕಿವುಡಾಯಿತು. ೩೫. ಕುಲದ್ವೇಷದ ಉಗ್ರಕೋಪದಿಂದ ಮಹಾ ವೀರ ಖರಕುಮಾರ ಮಕರಾಕ್ಷನು ಈತನು ಭೂಮಿಯ ಮೇಲಿನ ಸಾಧಾರಣದ ಮಾನವರ ರಸನಲ್ಲವೇ ಎಂಬ ಭಾವನೆಯಿಂದ ಗರ್ಜಿಸಿ ಬಾಣದ ಹಿಂತುದಿಯಲ್ಲಿ ಯಮನ ಮಂತ್ರ

ಕಂಜಲೋಚನ ನಗುತಲಾ ಮೃ । ತ್ಯುಂಜಯಾಸ್ತ್ರದಿನಂತಕಾಸ್ತ್ರವ
ಭಂಜಿಸಲು ಖರಸೂನು ಕವಿಸಿದನಗ್ನಿ ಮಾರ್ಗಣವ
ಎಂಜಲಿಸಿತುರಿ ಜಗವನೆಂಬವ । ರಂಜಿಕೆಯನಾ ವಾರಣಾಸ್ತ್ರ ಸ
ಮಂಜಸದಿನಪಹರಿಸಿ ಹದುಳಿಸಿದನು ಜಗತ್ರಯವ ೩೬

ರಾಮ ಕೋ ರಣದಾಸುರಾಹ್ವಯ । ಭೀಮ ಬಾಣವ ಮಱೆಯದೇತಕೆ
ಕಾಮಹರ ಕಮಲಾಸನಾದಿಗಳಿದಱ ವಿಲಗದಲಿ
ಮೈಮಱೆಸಿ ಬದುಕಿದರು ಬದುಕಿನ । ಸೀಮೆ ನಿನಗಿದು ಕೋಯೆನುತ ಸು
ತ್ರಾಮಬಲ ಬಿರಿತೋಡೆ ಬೊಬ್ಬಿಱಿದೆಚ್ಚನಿನಕುಲನ ೩೭

ಈದುದಾಸುರಬಾಣ ಘನಶ । ಸ್ತ್ರೋದಧಿಯ ನೀದಿತು ಜಗತ್ರಯ
ಕೈದುಗಳ ಕಾಲಾಟದಲಿ ಕವಿದಿಱಿವ ರಕ್ಕಸರ
ಬೀದಿವರಿಗಳಲಡಗೆಡೆದುದಿಂ । ದ್ರಾದಿ ದೇವಕದಂಬ ಕಪಿಬಲ
ಸಾಧಿಸಿತು ಕೈವಲ್ಯವನು ಕಮಲಾಕ್ಷನಿದಿರಿನಲಿ ೩೮

ತಱುಬಿದನು ನಾನಾಸ್ತ್ರಮುಖದಲಿ । ಮಱೆಯದಸುರಾರಾತಿ ಲೆಕ್ಕಿಸ
ದುಱುಬಿತದು ಕಟ್ಟಿದಿರಿನಲಿ ಹರಿಶರಣನೀ ಹದನ
ಅಱಿದು ನಾರಾಯಣನ ನಾಮವ । ನೊಱಲಿ ಮರುಭಾಪೆನಲು ಹೂಡಿದ
ನುಱುವ ನಾರಾಯಣಮಹಾಸ್ತ್ರವನಾ ಖರಧ್ವಂಸಿ ೩೯

ವನ್ನು ಪ್ರತಿಷ್ಠಿಸಿ ಸೊಯ್ಯೆಂದು ಶಬ್ದಮಾಡುವಂತೆ ರಾಮನ ಮೇಲೆ ಬಿಟ್ಟನು. ೩೬. ಕಮಲಲೋಚನ ರಾಮನು ನಗುತ್ತ ಮೃತ್ಯುಂಜಯಾಸ್ತ್ರದಿಂದ ಯಮಾಸ್ತ್ರವನ್ನು ನಾಶಪಡಿಸಿದನು. ಆಗ ಮಕರಾಕ್ಷನು ಅಗ್ನಿಬಾಣವನ್ನು ಬಿಟ್ಟನು. ಜಗತ್ತನ್ನೆಲ್ಲ ಉರಿ ವ್ಯಾಪಿಸಿತು ಎಂದು ಎಲ್ಲರೂ ಅಂಜುತ್ತಿರಲು ರಾಮನು ವಾರಣಾಸ್ತ್ರದಿಂದ ಅವರ ಹೆದರಿಕೆಯನ್ನು ಹೋಗಲಾಡಿಸಿ ಮೂರು ಲೋಕಗಳಿಗೂ ಕ್ಷೇಮವನ್ನುಂಟುಮಾಡಿದನು. ೩೭. "ರಾಮ, ಇದೋ ಆಸುರವೆಂಬ ಹೆಸರಿನ ಭಯಂಕರಾಸ್ತ್ರವನ್ನು ಸ್ವೀಕರಿಸು. ಇದರಲ್ಲಿ ಮುಚ್ಚುಮರೆಯೇಕೆ ? ಶಿವ ಬ್ರಹ್ಮ ಮೊದಲಾದವರು ಇದರ ಪೀಡೆಯನ್ನು ಸಹಿಸಲಾರದೆ ಮೈಮರೆಸಿಕೊಂಡು ಬದುಕಿದರು. ಇದು ನಿನ್ನ ಬಾಳಿನ ಎಲ್ಲೆ, ತೆಗೆದುಕೋ" ಎನ್ನುತ್ತ ದೇವೇಂದ್ರನ ಸೈನ್ಯವು ಹೆದರಿಕೊಂಡು ಓಡಿಹೋಗಲು ಮಕರಾಕ್ಷನು ಸಿಂಹ ನಾದ ಮಾಡುತ್ತ ರಾಮನ ಮೇಲೆ ಅಸ್ತ್ರವನ್ನು ಬಿಟ್ಟನು. ೩೮. ಮಕರಾಕ್ಷನು ಪ್ರಯೋಗಿಸಿದ ಆಸುರಾಸ್ತ್ರವು ಭಾರಿ ಶಸ್ತ್ರಗಳ ಸಮುದ್ರವನ್ನೇ ಮರಿಹಾಕಿತು; ಮೂರು ಲೋಕಗಳನ್ನು ಸುತ್ತಿ ಆಕ್ರಮಿಸಿ ಕೊಲ್ಲಬಲ್ಲ ರಾಕ್ಷಸರನ್ನು ಸೃಷ್ಟಿಸಿತು. ಅವರ ಮನಸ್ವೀ ಓಡಾಟದಿಂದ ಇಂದ್ರಾದಿ ದೇವತೆಗಳು ಅಡ್ಡಲಾಗಿ ಉರುಳಿಬಿದ್ದರು. ಕಮಲಾಕ್ಷ ರಾಮನ ಸಮ್ಮುಖದಲ್ಲಿ ಆ ಅಸುರರ ಧಾಳಿಯಿಂದ ಕಪಿಸೈನ್ಯವು ಮೋಕ್ಷವನ್ನು ಸಾಧಿಸಿತು. ೩೯. ನಾನಾ ವಿಧವಾದ ಅಸ್ತ್ರಗಳಿಂದ ರಾಮನು ಆ ಅಸ್ತ್ರವನ್ನು ನಿಗ್ರಹಿಸಲು ಪ್ರಯತ್ನಿಸಿದರೂ ಅದು ರಾಮನೆದುರಿನಲ್ಲಿ ಇನ್ನಷ್ಟು ಉಗ್ರವಾಯಿತು. ಇದನ್ನು

ಉಳುಹಿಕೊಂಡರು ಹರಣವನು ಹರ । ನಳಿನಭವ ಶಕ್ರಾದ್ಯರಿದಿರಲಿ
ಸುಳಿಯರೆಂದೇ ಬಗುಳಿದೆಯಲಾ ನಿನ್ನ ಸಾಯಕಕೆ
ತೊಲಗುವವರಾವಲ್ಲ ಹಗೆಗಳ । ತೊಲಗಿಸುವೆವೈ ಸಲ್ಲದಿದಕೋ
ಗೆಲವದುಳ್ಳಡೆ ಕಳುಹು ಕಣೆಗಳನೆನುತ ತೆಗೆದೆಚ್ಚ ೪೦

ವರಸುದರ್ಶನದುಗ್ರರೂಪವ । ಧರಿಸಿ ತಂದವುಲಾಸ್ತ್ರವಾಸುರ
ಶರಮುಖದಿನುದಿಸುವ ಮಹಾ ರೌದ್ರಾಸುರಾವಳಿಯ
ಉರುನಿಶಿತ ಧಾರಾಗ್ನಿಯಲಿ ಹುರಿ । ಕರಿಯ ಮಾಡಿತು ಹರಹಿತಗಲಕೆ
ನೆರೆದ ನಾನಾಯುಧ ಕದಂಬವನುಡಿದು ಝಡಿತೆಯಲಿ ೪೧

ಮರಳಿ ಲಘುಸಂಧಾನದೆಸುಗೆಯ । ಭರವಸದ ಬಿನ್ನಣಿಗನನು ಲಘು
ತರದಲೆಚ್ಚನು ವೀರ ಮಕರಾಕ್ಷನ ಶರಾಸನವ
ಕರದಲಿದ್ದುದು ಚಾಪ ಚಾಪದ । ತಿರು ತಿರೋಧಾನವನು ಸಾರ್ದುದು
ಸರಳು ಸೈವೆಱಗಾಗಿ ಕೈಯೊಳಗಿರ್ದುದಾ ಖಳನ ೪೨

ಭಾಪುರೇ ಬಿಲುಜಾಣನೆನುತಾ । ಟೋಪದಲಿ ಮಕರಾಕ್ಷನಾಕ್ಷಣ
ವಾ ಪುರಾಂತಕದತ್ತ ಬಾಣಾಸನವ ದನಿಮಾಡಿ
ಕೋಪ ಕೊನರಿಡೆ ಕುಬುಬಿಱಿದು ಘೂ । ರ್ವಾಪರಸ್ಥಿತಿ ಜನನ ಲಯ ದೂ
ರೋಪಮಾತೀತನನು ಮುಂಬರಿದೆಚ್ಚು ಬೊಬ್ಬಿಱಿದ ೪೩

ತಿಳಿದ ವಿಭೀಷಣನು ನಾರಾಯಣ ನಾಮವನ್ನು ಜಪಿಸಿ ಮಝು ಭಾಪು ಎನ್ನಲು ಖರನನ್ನು ಕೊಂದವನಾದ ರಾಮನು ನಾರಾಯಣ ಮಹಾಸ್ತ್ರವನ್ನು ಹೂಡಿದನು. ೪೦. "ಈಶ್ವರ, ಬ್ರಹ್ಮ, ಇಂದ್ರಾದಿಗಳು ಪ್ರಾಣವನ್ನು ಉಳಿಸಿಕೊಂಡರು. ನಿನ್ನ ಅಸ್ತ್ರದ ಎದುರಿಗೆ ಅವರು ಸುಳಿಯಲೇ ಇಲ್ಲ ಎಂದು ಬೊಗುಳಿದೆಯಲ್ಲ. ನಿನ್ನ ಅಸ್ತ್ರಕ್ಕೆ ಹೆದರಿ ಓಡಿ ಹೋಗುವವರಲ್ಲ ನಾವು. ಶತ್ರುಗಳನ್ನೇ ನಾಶಪಡಿಸುವವರು ನಾವು. ಇದನ್ನು ತಾಳಿಕೋ. ಗೆಲ್ಲುವುದಿದ್ದರೆ ಇದಕ್ಕೆ ಸಮಾನವಾದ ಬಾಣಗಳನ್ನು ಕಳುಹಿಸು" ಎಂದು ನುಡಿದು ರಾಮನು ಅಸ್ತ್ರವನ್ನು ಬಿಟ್ಟನು. ೪೧. ವಿಷ್ಣುವಿನ ಸುದರ್ಶನಚಕ್ರದ ಉಗ್ರರೂಪವನ್ನು ಧರಿಸಿ ಬಂದ ರಾಮನ ಶ್ರೇಷ್ಠ ಅಸ್ತ್ರವು ತನ್ನ ಹರಿತವಾದ ಅಲಗಿನಿಂದ ಮಕರಾಕ್ಷನ ಅಸುರಶಸ್ತ್ರದಿಂದ ಹುಟ್ಟುವ ಮಹಾಭಯಂಕರ ರಾಕ್ಷಸರನ್ನು ಸುಟ್ಟು ಕರಿಕುಮಾಡಿತು ಮತ್ತು ಆ ಕ್ಷಣದಲ್ಲಿ ನಾನಾ ಆಯುಧಸಮೂಹವನ್ನು ಅಷ್ಟಗಲಕ್ಕೂ ಕತ್ತರಿಸಿಹಾಕಿತು. ೪೨. ಲಘುಸಂಧಾನದಿಂದ ಪುನಃ ಬಾಣಪ್ರಯೋಗ ಮಾಡಿದ ಬಿಲ್ವಿದ್ಯಾಚತುರನ ಮೇಲೆ ಲಘುತರದ ಬಾಣವನ್ನು ಬಿಟ್ಟು ರಾಮನು ಮಕರಾಕ್ಷನ ಬಿಲ್ಲಿಗೆ ಹೊಡೆದನು. ಮಕರಾಕ್ಷನ ಕೈಯಲ್ಲಿ ಬಿಲ್ಲು ಹಾಗೆಯೇ ಇದ್ದಿತು ; ಆದರೆ ಬಿಲ್ಲಿನ ಹಗ್ಗ ಮಾತ್ರ ಮಾಯವಾಗಿತ್ತು. ಚಕಿತನಾದ ರಾಕ್ಷಸನ ಕೈಯಲ್ಲಿ ಬಾಣ ಮಾತ್ರ ಉಳಿದಿದ್ದಿತು. ೪೩. "ಭೇಷ್, ನೀನು ಒಳ್ಳೆಯ ಬಿಲ್ಲುಜಾಣ" ಎನ್ನುತ್ತ ಮಕರಾಕ್ಷನು ಗರ್ವದಿಂದ ತ್ರಿಪುರಾರಿ ಶಿವನು ಕೊಟ್ಟ ಬಿಲ್ಲಿನ ಹಗ್ಗವನ್ನು ಮಿಡಿದು ಶಬ್ದಮಾಡಿದನು.

ದಾಟಿದುದು ಬಲುಬಾಣ ನಡೆದು ನಿ । ಶಾಟಪರನಂಗದಲಿ ಪ್ರಳಯಕ
ರೋಟಿವಾಲಿಯ ಕೋಪಶಿಖಿ ಲಂಬಿಸಿದುದೆಂಬಂತೆ
ನೋಟದಲಿ ವರವಿಶ್ವಕರ್ಮನ । ಘಾಟ ಬಾಣದಲರಿಭಟನ ಕಾ
ಲಾಟವಕ್ಕುದವಾಗೆ ಕೈಯೊಡನೆಚ್ಚನಾ ರಾಮ ೪೪

ನಿಟಲದಲಿ ಕೊಂಡಂಬು ಪಶ್ಚಿಮ । ತಟದೊಳಗೆ ತಲೆದೋಱಿದುದು ಸಂ
ಘಟಿಸಿದವು ಮಕರಾಕ್ಷನಕ್ಷಿಯ ಪಕ್ಷ ಪೈಸರಿಸೆ
ತಟಕುವನಿ ನೆತ್ತರಿನ ಲಯಸಂ । ಘಟದ ಚಂಚಲಜೀವದಿಂದವ
ಘಟೆಯು ಖಳ ನೆಮ್ಮಿದನು ಬಳಲಿಕೆಯಿಂದ ಪಳವಿಗೆಯ ೪೫

ಎಲವೊ ಸಾರಥಿ ನಿಮ್ಮ ರಥಿಕನ । ಬಳಲುಮೋಱೆಯ ಮೇಲೆ ತಳಿಸ
ಗ್ಗಳೆಯ ಸಲಿಲವ ಸರಳ ಕೀಳೇಱೆನಲಿ ಮದ್ದುಗಳ
ಗುಳಿಗೆಗಳ ಹಿಡಿ ಹೆದಱದಿರು ನೀ । ನುಳುಹಿಕೋ ನಿಮ್ಮವನನೊಂದರೆ
ಘಳಿಗೆ ಪರಿಯಂತೊಂದು ಮಾತುಂಟವನೊಳೆಮಗೆಂದ ೪೬

ಎದ್ದು ಸಾರಥಿ ಬಳಿಕ ಭಾಳದೊ । ಳದ್ದ ಬಾಣವನುಗಿದು ಘಾಯಕೆ
ಮದ್ದ ಕೈಯಲಿ ತೀಡಿ ಕಲಶೋದಕದ ಧಾರೆಗಳ
ತಿದ್ದಿದನು ಕಂಗಳಿಗೆ ಕೆಲಸಿಡಿ । ದಿದ್ದ ಕಾರ್ಮುಕವಿತ್ತು ಕುಬುಬಿಱಿ
ದದ್ದಲಿಸಿದನು ನಗಲು ಮೇಲೆ ಸಮಸ್ತ ಸುರನಿಕರ ೪೭

ಅನಂತರ ಕೋಪದಿಂದ ಕುಬುಬೆಂದು ಗರ್ಜಿಸುತ್ತ ಹಿಂದುಮುಂದಿಲ್ಲದ ಹುಟ್ಟುಸಾವುಗಳಿಲ್ಲದ ಹೋಲಿಕೆಗೆ ಸಿಗದ ಮಹಾತ್ಮನಾದ ರಾಮನಮೇಲೆ ಬಾಣಬಿಟ್ಟನು. ೪೪. ಮಕರಾಕ್ಷನ ಬಾಣವು ಅಸುರಾರಿಯ ದೇಹದ ಮೆ ಲೆ ನಡೆದು ದಾಟಿಹೋಯಿತು. ಪ್ರಳಯ ಶಿವನ ಕೋಪಾಗ್ನಿಯು ಮುನ್ನಡೆಯಿತೋ ಎಂಬಂತೆ ಕೋಪದಿಂದ ದೃಷ್ಟಿಸುತ್ತ ರಾಮನು ಒಡನೆ ಶತ್ರುವೀರನ ಸಂಚಾರವು ಕುಗ್ಗುವಂತೆ ಬ್ರಹ್ಮನ ಬಾಣವನ್ನು ಬಿಟ್ಟನು. ೪೫. ಮಕರಾಕ್ಷನ ಹಣೆಗೆ ನಟ್ಟ ಬಾಣವು ಹಿಂದುಗಡೆಯಲ್ಲಿ ಕಾಣಿಸಿಕೊಂಡಿತು ; ಅವನ ಕಣ್ಣುರೆಪ್ಪೆಗಳು ಮುಚ್ಚಿಕೊಂಡವು. ರಕ್ತವು ತೊಟ್ಟಿಕ್ಕುತ್ತಿರಲು ಮರಣಸನ್ನಿಹಿತವಾದ ಚಂಚಲಜೀವದ ವೀರಮಕರಾಕ್ಷನು ಬಳಲಿಕೆಯಿಂದ ಧ್ವಜಸ್ತಂಭವನ್ನು ಒರಗಿಕೊಂಡನು. ೪೬. "ಲೋ ಸಾರಥಿ, ನಿಮ್ಮ ರಥಿಕನ ದಣಿದ ಮುಖದ ಮೇಲಕ್ಕೆ ನೀರನ್ನು ಚಿಮುಕಿಸು, ಬಾಣವನ್ನು ಕಿತ್ತು ಔಷಧಿಯ ಗುಳಿಗೆಗಳನ್ನು ಹಾಕು, ಹೆದರಬೇಡ, ಒಂದರ್ಧಘಳಿಗೆಯವರೆಗೆ ನಿಮ್ಮವನನ್ನು ಬದುಕಿಸಿಕೋ. ಅವನೊಡನೆ ನಮಗೆ ಆಡುವ ಮಾತೊಂದಿದೆ" ಎಂದ ರಾಮ. ೪೭. ಆಗ ಸಾರಥಿಯು ಎದ್ದು ಮಕರಾಕ್ಷನ ಹಣೆಗೆ ನಾಟಿದ್ದ ಬಾಣವನ್ನು ಕಿತ್ತು ಕೈಯಿಂದ ಔಷಧಿಯನ್ನು ಗಾಯಕ್ಕೆ ಹಚ್ಚಿ ಪಾತ್ರೆಯಲ್ಲಿದ್ದ ನೀರನ್ನು ಕಣ್ಣುಗಳಿಗೆ ತಿಕ್ಕಿದನು. ಪಕ್ಕಕ್ಕೆ ಬಿದ್ದಿದ್ದ ಬಿಲ್ಲನ್ನು ಕೈಗೆ ಕೊಟ್ಟು ಅವನನ್ನು ಎಚ್ಚರಿಸಲು ಜೋರಾಗಿ ಕೂಗಿ ಶಬ್ದ ಮಾಡಿದನು. ಆಗ ಮೇಲಿದ್ದ ಸಮಸ್ತದೇವತೆಗಳೂ ನಕ್ಕರು.

ಅನುಜೆಗೋಸುಗ ಹಿಂದೆ ನಿಮ್ಮಯ । ಜನಕನೆಮ್ಮೊಳು ಕಾದಿ ಜೀವವ
ಜನುಗಿಸಿದ ದಿವಸದಲಿ ಜಾಱಿತು ಜಾತಿವೈರತನ
ತನಯ ಗಡ ನೀನವಗೆ ನಿನ್ನಯ । ಹನನಕೊಡಬಡದೆನ್ನ ಮನ ಸಂ
ಜನಿಸುತಿದೆ ಕೃಪೆ ನಿನ್ನ ಮನದನುಮಾನವೇನೆಂದ ೪೮

ಮಂದಮತಿಗಳು ನರರು ಮುನ್ನೈ । ತಂದು ಹೆಚ್ಚಿನ ಕಿವಿಗಳಿಂ ಬಳಿ
ಸಂದ ಕೋಡತಿ ಕೂರಿತೆಂಬುದನಱಿಯದಾದೆಯಲ
ಸಂದ ವೈರದ ಕಿಚ್ಚು ನಿನ್ನಲಿ । ನಂದಿದರೆ ನಂದುವುದೆ ನಮಗೆನು
ತಂದಗೆಡದನುಗತದ ಕೋಪದಲೆಚ್ಚು ಬೊಬ್ಬಿಱಿದ ೪೯

ಮುಂಚಿತೇ ನಿನ್ನೆಸುಗೆ ಶರಳಿನ । ಸಂಚವನು ನೋಡಾದಡೆನುತ ವಿ
ರಿಂಚಿಪಿತನೊಂದಂಬಿನಲಿ ರಿಪುಭಟನ ಸಾರಥಿಯ
ವಂಚಿಸಿದನಾ ತುರಗ ನಾಲ್ಕನ । ಮಿಂಚ ಕೆಡಿಸಿದನಾ ಧ್ವಜವ ಹಱಿ
ಹಂಚ ಮಾಡಿ ಮದಾಂಧನೆಸುಗೆಯ ಧನುವ ಖಂಡಿಸಿದ ೫೦

ಏಱಿತಧಿಕ ಕ್ರೋಧಶಿಖಿ ಕಿಡಿ । ಹಾಱಿದವು ಕಂಗಳಲಿ ತನು ಕಾ
ಹೇಱಿದುದು ಕಬ್ಬೊಗೆ ವಿತಾಳಿಸಿತುಸುರ ಜೂಣಿಯಲಿ
ಮಾಱುಗೊಂಡನು ವಿಲಯರುದ್ರನ । ತೋಱಿಕೆಯ ತಮದುಬ್ಬರವನೆನೆ
ತೂಱುಗಿಡಿಗಳ ದಿವ್ಯಶೂಲವನೆತ್ತಿ ಬೊಬ್ಬಿಱಿದ ೫೧

೪೮. "ತನ್ನ ಸಹೋದರಿಯ ಕಾರಣದಿಂದಾಗಿ ನಿಮ್ಮ ತಂದೆ ಖರಾಸುರನು ನಮ್ಮೊಡನೆ ಯುದ್ಧಮಾಡಿ ಪ್ರಾಣವನ್ನು ನೀಗಿಕೊಂಡ ದಿವಸವೇ ನಮಗೆ ಜಾತಿವೈರವು ಹೊರಟು ಹೋಯಿತು. ನೀನು ಅತನ ಮಗ. ನಿನ್ನನ್ನು ಕೊಲ್ಲಲು ನನ್ನ ಮನಸ್ಸು ಒಪ್ಪುವುದಿಲ್ಲ. ನಿನ್ನ ಮೇಲೆ ಕರುಣೆ ಹುಟ್ಟುತ್ತಿದೆ. ನಿನ್ನ ಮನಸ್ಸಿನ ಯೋಚನೆಯೇನು ?" ಎಂದು ರಾಮನು ಮಕರಾಕ್ಷನನ್ನು ಕೇಳಿದನು. ೪೯. "ಮಾನವರು ಬುದ್ಧಿಹೀನರು. ಮೊದಲು ಹುಟ್ಟಿ ಬೆಳೆದ ಕಿವಿಗಳಿಗಿಂತಲೂ ಈಚೆಗೆ ಹುಟ್ಟಿದ ಕೋಡು ಹೆಚ್ಚು ಹರಿತ ಎಂಬುದನ್ನು ತಿಳಿಯಲಾರದೆ ಹೋದೆಯಲ್ಲ. ದ್ವೇಷದ ಬೆಂಕಿ ನಿನ್ನಲ್ಲಿ ಆರಿಹೋದರೂ ನನ್ನಲ್ಲಿ ಅದು ಆರುವುದೆ ?" ಎಂದು ನುಡಿದು ಕೋಪದಿಂದ ಬಾಣ ಹೊಡೆದು ಬೊಬ್ಬಿರಿದ ಮಕರಾಕ್ಷ. ೫೦. "ನಿನ್ನ ಬಾಣದ ಹೊಡೆತವು ಮೊದಲಾಯಿತಲ್ಲವೆ. ಹಾಗಿದ್ದರೆ ನನ್ನ ಬಾಣದ ನೈಪುಣ್ಯವನ್ನು ನೋಡು" ಎನ್ನುತ್ತ ರಾಮನು ಒಂದು ಬಾಣದಿಂದ ಶತ್ರುವೀರನ ಸಾರಥಿಯನ್ನು ಮುಂದುಗೆಡಿಸಿ, ರಥದ ನಾಲ್ಕೂ ಕುದುರೆಗಳ ವೇಗವನ್ನು ತಗ್ಗಿಸಿ ಬಾವುಟವನ್ನು ಚೂರುಚೂರುಮಾಡಿ ಮಕರಾಕ್ಷನ ಬಿಲ್ಲನ್ನು ಕತ್ತರಿಸಿದನು. ೫೧. ಮಕರಾಕ್ಷನ ಕೋಪದ ಉರಿ ಜೋರಾಯಿತು. ಕಣ್ಣುಗಳಿಂದ ಕಿಡಿಗಳು ಚೆಲ್ಲಿದವು ; ಉಸುರಿನ ಜೊತೆಯಲ್ಲಿ ಕಪ್ಪುಹೊಗೆ ಎದ್ದಿತು. ಪ್ರಳಯಕಾಲದ ರುದ್ರನ ಸಮಾನವಾದ ತೀವ್ರ ತಮೋಗುಣವನ್ನು ಪಡೆದನೋ ಎಂಬಂತೆ ಕಿಡಿಕಾರುವ ಶೂಲವನ್ನು ಎತ್ತಿ ಗರ್ಜಿಸಿ

ಹೇಳಲೇನದ ಹರನ ಹಸ್ತದ । ಶೂಲವನು ಜಱಿದುಱುಬಿತುರಿಗಳ
ಮಾಲೆಗಳ ಮಂಡಳಿಸಿ ಕಱಿದುದು ಕಿಡಿಯ ಗಡಣಗಳ
ಮೇಲುಜಗ ಬೆದಱಿದವು ತಾರಾ । ಮಾಲೆ ಹಱಿದುರುಳಿದವು ನೆಲ ಧೂ
ಮಾಳಿ ಮಸಗಿದುದುಕ್ಕಿತಂಬುಧಿ ನಿಮಿಷಮಾತ್ರದಲಿ ೫೨

ಹಾ ರಘುಕ್ಷಿತಿನಾಥ ಹಾ ರಘು । ವೀರ ಹಾಯೆಂಬಬ್ಬರಣೆ ಕಪಿ
ವೀರರಲಿ ನಿಡಿದಾಯ್ತು ನಿಗುರಿತು ನಿರ್ಜರಾಳಿಯಲಿ
ಆರಿಗಱಿವಿರದಿರಲು ವಿಜ್ಞಾ । ಸಾರನಲ್ಲಾ ಶಿವನು ಜಱಿದನು
ಗೌರಿದೇವಿಯರಂಜುತಿರೆ ಮೃತ್ಯುಂಜಯನು ನಗುತ ೫೩

ಆದಡಿದಕೋಯೆನುತಲಾ ಖರ । ಸೂದನನ ಖರಸೂನು ಘನ ನಿ
ಹ್ರಾದದಲಿ ಬೊಬ್ಬಿಱಿದು ಜಡಿದಿಟ್ಟನು ಮಹಾಯುಧವ
ಆದಿನಾರಾಯಣನು ನಗುತಲ । ನಾದರದಲಂಭೋಜಭವ ಬಾ
ಣೋದರಕ್ಕಾಹುತಿಯನಿತ್ತುಳುಹಿದನು ಮೂಜಗವ ೫೪

ಕಾಣೆನಾ ಮಹದಾಯುಧವನಜ । ಬಾಣಮುಖದಲಿ ಖಳನ ಶಿರ ಹರಿ
ವಾಣದಾರತಿಯಂತೆ ನೆತ್ತರ ರಹಿಯಲಭ್ರದಲಿ
ಸ್ಥಾಣು ಮುಖ್ಯ ಸಮಸ್ತ ದೇವ । ಶ್ರೇಣಿಯಿದಿರಲಿ ಸುಳಿದುದಾ ಶ
ರ್ವಾಣಿ ಸಂತೋಷದಲಿ ಬಗಿಯಪ್ಪಿದಳು ಶಂಕರನ ೫೫

ದನು. ೫೨. ಶಿವನ ಕೈಯ ಶೂಲವನ್ನು ಮೀರಿಸಿ ಮಕರಾಕ್ಷನ ಕೈಯ ಶೂಲವು ಬೆಂಕಿಯ ಜ್ವಾಲೆಗಳನ್ನು ಬೀರಿತು. ಅದರಿಂದ ಕಿಡಿಗಳ ಸಮೂಹವು ವರ್ತುಲಾಕಾರವಾಗಿ ಹಾರಿತು. ಇದನ್ನು ನೋಡಿ ಮೇಲಿನ ಲೋಕಗಳು ಬೆದರಿದವು ; ನಕ್ಷತ್ರಗಳ ಸಾಲುಗಳು ಕಿತ್ತುಬಿದ್ದವು ; ಭೂಮಿಯನ್ನು ಹೊಗೆ ಆವರಿಸಿತು ; ನಿಮಿಷಮಾತ್ರದಲ್ಲಿ ಸಮುದ್ರ ಉಕ್ಕಿತು. ೫೩. 'ಅಯ್ಯೋ ರಘುಭೂಪಾಲ ! ಅಯ್ಯೋ ರಘುವೀರ !' ಎಂದು ಕಪಿವೀರರು ನೀಳವಾಗಿ ಸ್ವರ ತೆಗೆದು ಕೂಗಿಕೊಂಡರು ; ದೇವತೆಗಳು ನೆಟ್ಟಗೆ ಕುಳಿತರು. ಯಾರಿಗೆ ತಿಳಿವಿಲ್ಲದಿದ್ದರೂ ಶಿವನು ಜ್ಞಾನಿಯಲ್ಲವೆ. ಗೌರಿದೇವಿಯು ಹೆದರುತ್ತಿರಲು ಮೃತ್ಯುಂಜಯನು ನಗುತ್ತ ಅವಳನ್ನು ಜರೆದನು. ೫೪. 'ಹಾಗಿದ್ದರೆ ಇದನ್ನು ತೆಗೆದುಕೋ' ಎನ್ನುತ್ತ ಖರನ ಮಗ ಮಕರಾಕ್ಷನು ಗುಡುಗಿನ ಶಬ್ದದಂತೆ ಗರ್ಜಿಸಿ ಮಹಾಯುಧವನ್ನು ಖರನನ್ನು ಕೊಂದವನ ಮೇಲೆ ಜೋರಾಗಿ ಎಸೆದನು. ಆದಿನಾರಾಯಣನ ಅವತಾರಸ್ವರೂಪಿಯಾದ ಶ್ರೀರಾಮನು ನಗುತ್ತ ಆ ಮಹಾಯುಧವನ್ನು ಬ್ರಹ್ಮಾಸ್ತ್ರದ ಹೊಟ್ಟೆಗೆ ಆಹುತಿಯನ್ನು ಕೊಟ್ಟು ಮೂರುಲೋಕಗಳನ್ನೂ ರಕ್ಷಿಸಿದನು. ೫೫. ಅಸುರನ ಮಹಾಸ್ತ್ರವು ಕಾಣಿಸದಾಯಿತು. ಬ್ರಹ್ಮಾಸ್ತ್ರದ ತುದಿಯಲ್ಲಿ ಮಕರಾಕ್ಷನ ತಲೆಯು ತಟ್ಟೆಯಲ್ಲಿನ ಆರತಿಯಂತೆ ರಕ್ತದಿಂದ ಸೊಗಸುತ್ತ ಶಿವನೇ ಮೊದಲಾದ ಸಮಸ್ತ ದೇವತೆಗಳ ಸಮೂಹದ ಎದುರುಗಡೆಯಲ್ಲಿ ಸುಳಿಯಿತು. ಆಗ

ಶರಕೆ ಕಾಣಿಕೆಯಿತ್ತು ನಭದಲಿ । ಕರವ ಮುಗಿದರು ಸುರರು ಸುಮನೋ
ವರುಷವನು ಸೂಸಿದರು ತೊರವೆಯರಾಯ ನರಹರಿಯ
ಚರಣಕಮಲದೊಳೊಯ್ಯನಾ ಶರ । ಹರಿಯ ಬಳಿಗೈತಂದು ಹೊಕ್ಕುದು
ಸರಳು ಹೊಮ್ಮಾಡಿಗೆಯೊಳಗೆ ನಾರದನು ನಲಿದಾಡೆ ೫೬

ಪಾರ್ವತಿಯು ಸಂತೋಷದಿಂದ ಶಂಕರನನ್ನು ಬಿಗಿಯಾಗಿ ಅಪ್ಪಿಕೊಂಡಳು. ೫೬. ಆಕಾಶದಲ್ಲಿ ದೇವತೆಗಳು ಬಾಣಕ್ಕೆ ಕಾಣಿಕೆಯನ್ನು ಸಮರ್ಪಿಸಿ ಕೈಮುಗಿದರು ; ತೊರವೆಯ ನರಹರಿರೂಪನಾದ ರಾಮನ ಪಾದಕಮಲದಲ್ಲಿ ಹೂವಿನ ಮಳೆಗರೆದರು. ಅನಂತರ ಬಾಣವು ರಾಮನ ಬಳಿಗೆ ಬಂದು ಚಿನ್ನದ ಬತ್ತಳಿಕೆಯನ್ನು ಸೇರಿಕೊಂಡಿತು. ನಾರದನು ನಲಿದಾಡಿದನು.

41

# ನಲವತ್ತೊಂದನೆಯ ಸಂಧಿ

ಸೂಚನೆ॥ ವಾತಜನ ಸಂಗ್ರಾಮದಲಿ ಪುರು । ಹೂತಜಿತು ಮದವಳಿದು ಮಾಯಾ
ಸೀತೆಯನು ಕಡಿದಂಜಿಸಿದನಿನವಂಶವಲ್ಲಭನ

ಕೇಳಿದೈಯೆಲೆ ರಾಜಸೂನು ಸು । ರಾಲಯದ ಸುರಯುವತಿಯರ ಸ
ಮ್ಮೇಳದಲಿ ಮಕರಾಕ್ಷ ಹಾಯ್ದನು ಸುರರ ಪಟ್ಟಣಕೆ
ಮೇಲೆ ರಣದುಳುಕಲಿನ ರಕ್ಕಸ । ರೋಲಗವ ಮುಟ್ಟಿಸಿದಡುಗುಳ್ದನು
ವೀಳಿಯವನುಪ್ಪರದ ಹುಬ್ಬಿನಲೊಲೆದನವಯವವ ೧

ಮಡಿದನೇ ಮಕರಾಕ್ಷ ಗೆಲವಿನ । ಗುಡಿಯನೆತ್ತಿದರೇ ವಿರೋಧಿಗ
ಳೊಡೆದುದೇ ರಾಕ್ಷಸ ಚಮೂಪರ ವೀರರಸಕುಂಭ
ರಡುಡಿದು ಹತ್ತಿದಳೇ ಜಯಶ್ರೀ । ತೊಡೆಯನಹಿತನರೇಶ್ವರನ ನಾವ್
ಹಿಡಿದ ಛಲ ಕನಸಾದುದೇಯೆಂದಸುರನಳವಳಿದ ೨

ವಾಯುವಾಯ್ತುಹಿಪಾಶ ಪದ್ಮಜ । ಸಾಯಕವು ಸಡಿಲಾಯ್ತು ಸದೆಸ
ಟ್ಟಾಯಿತನುಜನ ಬಿಣ್ಪು ಬೀತುದು ಗುಮ್ಮತನ ಭಟರ
ಆಯುಧದ ಹೆಮ್ಮೆಗಳಲರಿಬಲ । ಸಾಯದಿದೆ ಸಂಗ್ರಾಮವಿಜಯೋ
ಪಾಯಕೆಡೆಯನು ಕಾಣೆನೆಂದಸುರೇಂದ್ರ ಚಿಂತಿಸಿದ ೩

ಸೂಚನೆ॥ ಮಾರುತಿಯೊಡನೆ ನಡೆದ ಯುದ್ಧದಲ್ಲಿ ದರ್ಪವಳಿದ ಇಂದ್ರಜಿತು ಮಾಯಾಸೀತೆಯನ್ನು ಕೊಂದು ರಾಮನನ್ನು ಹೆದರಿಸಿದನು. ೧. ಕೇಳಿದೆಯ ರಾಜ ಕುಮಾರ, ದೇವಲೋಕದ ಸ್ತ್ರೀಯರ ಜತೆಯಲ್ಲಿ ಮಕರಾಕ್ಷನು ದೇವೇಂದ್ರನಗರಿಗೆ ಹೋದನು. ಯುದ್ಧದಲ್ಲಿ ಉಳಿದುಳಿದ ರಾಕ್ಷಸರು ರಾವಣನ ಆಸ್ಥಾನಕ್ಕೆ ಮಕರಾಕ್ಷನ ಮರಣವಾರ್ತೆಯನ್ನು ತಲಪಿಸಲು, ಅದನ್ನು ಕೇಳಿ ರಾವಣನು ಬಾಯಲ್ಲಿದ್ದ ಎಲೆಅಡಿಕೆ ಉಗುಳಿ ಹುಬ್ಬೇರಿಸಿ ದೇಹವನ್ನು ಒಲೆದನು. ೨. 'ಮಕರಾಕ್ಷನು ಮಡಿದನೇ ? ಶತ್ರುಗಳು ವಿಜಯಧ್ವಜವನ್ನು ಹಾರಿಸಿದರೇ ? ರಾಕ್ಷಸಸೇನಾಪತಿಗಳ ವೀರರಸದ ಕೊಡವು ಒಡೆದುಹೋಯಿತೇ ? ಜಯಲಕ್ಷ್ಮಿಯು ಬೆದರಿ ಶತ್ರುರಾಜನ ತೊಡೆಯನ್ನೇರಿದಳೇ ? ನಾವು ಹಿಡಿದಹಟ ಕನಸಾಯಿತೇ' ಎಂದು ರಾವಣನು ವ್ಯಥೆಪಟ್ಟನು. ೩. 'ಸರ್ಪಪಾಶವು ವ್ಯರ್ಥವಾಯಿತು, ಬ್ರಹ್ಮಾಸ್ತ್ರವು ಕಳಚಿಕೊಂಡಿತು, ತಮ್ಮನ ಗರ್ವವು ಒಡೆದು ಪುಡಿಯಾಯಿತು, ಯೋಧರ ಹೋರಾಟವು ನಷ್ಟವಾಯಿತು. ನಮ್ಮ ಹೆಮ್ಮೆಯ ಆಯುಧಗಳಿಂದ ಶತ್ರುಸೈನ್ಯವು ಸಾಯಲಿಲ್ಲ. ಯುದ್ಧದಲ್ಲಿ ಜಯಪಡೆಯಲು ಏನುಪಾಯಮಾಡ

ಚಿಂತೆಯೇಕೆಲೆ ಜೀಯ ರಿಪುಬಲ । ದಂತಕನು ತಾನಿರಲು ನಿನ್ನ ಮು
ಖಾಂತರದಲಹುದೆನಿಸಿಕೊಂಬೆನು ಕಡೆಯ ಮಾತೇನು
ಕಂತುಹರ ಕಮಲಾಕ್ಷ ಕಮಲಜ । ರಂತಕಿದಕೋ ಬಾಣವೀ ನೃಪ ೪
ರಂತ್ರರವದೇನೆನುತ ಗರ್ಜಿಸಿ ನುಡಿದನಿಂದ್ರಾರಿ

ಕೇಳಿದೈಯೆಲೆ ತಾತ ಮನ ಹೀ । ಹಾಳಿಗೆಡದಿರು ಮೇಣದುರಗನ
ಹೇಳಿಗೆಗೆ ಹೆದಜದಿರು ಹೇದೈಸದಿರು ಧೈರ್ಯದಲಿ
ನಾಳಿನಲಿ ನರಮೃಗವ ಮಾರಿಯು । ತಾಳಿಗೆಯ ತಳಕಿಳುಹದಿರೆ ನಿ ೫
ನ್ನಾಲಯವ ಹೊಗಗೊಡದಿರೆಂದಿಂದ್ರಾರಿ ಗರ್ಜಿಸಿದ

ಬೀಳುಕೊಳುತಯ್ಯನನು ಜನಿತ ಕ । ರಾಳ ರೋಷದಲಿಳಿದನಸುರ ಸ
ಭಾಲಯವನುಬ್ಬಣವ ಝಳಪಿಸುತಸುರರೊಗ್ಗಿನಲಿ
ಕಾಲ ಖಡೆಯದ ಝಣರವದ ರಣ । ದೇಳಿಗೆಯ ಮೈಯುಬ್ಬರದ ರೋ ೬
ಮಾಳಿಗಳ ಹೊಗರಿನಲಿ ಹೊಱವಂಟನು ಪುರಾಂತರವ

ಜೋಡಿಸಿದ ಹೊಂದೇರಿನಲಿ ಕಾ । ಲ್ನೀಡುತೆಜಗಿದನಶ್ವನಿಕರಕೆ
ನೀಡಿ ನಿಗುರಿದವಾ ತುರಂಗವುವಭ್ರಮಂಡಲಕೆ
ಕೂಡೆ ರಕ್ಕಸರಥದ ಗಡಬಡೆ । ಗಾಢಿಸಿತು ಗಗನದಲಿ ನೆಜಿ ಕೈ ೭
ಗೂಡಿದುದು ಬಲ ಬಲವಿರೋಧಿಯ ಹಗೆಯ ಬೆಂಬಳಿಯ

ಬೇಕೆಂಬುದು ಕಾಣುತ್ತಿಲ್ಲ' ಎಂದು ರಾವಣ ಚಿಂತಿಸಿದ. ೪. "ಶತ್ರುಸೈನ್ಯಕ್ಕೆ ಯಮನಾದ ನಾನು ಇರುವಾಗ ಚಿಂತೆಯೇಕೆ ಸ್ವಾಮಿ. ನಿಮ್ಮ ಬಾಯಿಂದ ಹೌದು ಎಂಬ ಪ್ರಶಂಸೆಯನ್ನು ಪಡೆದುಕೊಳ್ಳುವೆನು. ಇನ್ನು ಕೊನೆಯ ಮಾತೇನು ? ಶಿವ, ವಿಷ್ಣು, ಬ್ರಹ್ಮ ಇವರ ನಾಶಕ್ಕೆ ಈ ಬಾಣವಿರುವಾಗ ಈ ಮಾನವರಾಜರದೇನು !" ಎನ್ನುತ್ತ ಇಂದ್ರಜಿತು ಗರ್ಜಿಸಿ ನುಡಿದನು. ೫. "ನನ್ನ ಮಾತನ್ನು ಕೇಳಿದೆಯಾ ತಂದೆ. ಮನಸ್ಸಿನಲ್ಲಿ ಜಿಗುಪ್ಸೆಗೊಳಗಾಗಬೇಡ ಮತ್ತು ಮೇಣದ ಹಾವಿನ ಬುಟ್ಟಿಗೆ ಹೆದರಬೇಡ, ಬೇಸರಗೊಳ್ಳಬೇಡ. ಧೈರ್ಯದಿಂದ ನಾಳೆಯ ದಿವಸ ಮಾನವಮೃಗವನ್ನು ಮಾರಿಯ ಗಂಟಲೊಳಕ್ಕೆ ಇಳಿಸದಿದ್ದರೆ ನಿನ್ನ ಮನೆಗೆ ನನ್ನನ್ನು ಸೇರಿಸಬೇಡ" ಎಂದು ಇಂದ್ರಜಿತು ಗರ್ಜಿಸಿದ. ೬. ತಂದೆಯಿಂದ ಬೀಳ್ಕೊಂಡು ಇಂದ್ರಜಿತು ಪ್ರಚಂಡಕೋಪದಿಂದ ಸಭಾಗೃಹದಿಂದ ಹೊರಟನು. ಉಬ್ಬಣವನ್ನು ಝಳಪಿಸುತ್ತ ರಾಕ್ಷಸರ ಗುಂಪಿನೊಡನೆ ಸಭಾಗೃಹದಿಂದ ಹೊರಟನು. ಕಾಲಿನ ಕಡಗವು ಝಣಝಣ ಎಂದು ಶಬ್ದ ಮಾಡುತ್ತಿರಲು ಯುದ್ಧದ ಮದದಿಂದ ರೋಮಾಂಚಗೊಂಡ ಇಂದ್ರಜಿತು ಲಂಕಾಪಟ್ಟಣದಿಂದ ಹೊರಟನು. ೭. ಹೂಡಿ ಸಿದ್ಧವಾದ ಚಿನ್ನದ ತೇರನ್ನೇರಿ ಇಂದ್ರಜಿತು ಕಾಲನ್ನು ನೀಡಿ ಕುದುರೆಗಳನ್ನು ತಿವಿಯಲು ಆ ಕುದುರೆಗಳು ಆಕಾಶಕ್ಕೆ ನೆಗೆದವು. ಒಡನೆ ರಾಕ್ಷಸರಥವು ಹೊರಟಿತು. ಅದರ ಗಡಗಡ ಶಬ್ದವು ಆಕಾಶವನ್ನು ವ್ಯಾಪಿಸಿತು. ಜತೆಗೆ ಇಂದ್ರಜಿತುವಿನ ಸೈನ್ಯವು ಶತ್ರು

ಕೇಳುತಿವನಿಂದ್ರಾರಿಯೆಂದೇ । ಮೇಳವಿಸಿದುದು ಸೇನೆ ಗೋಲಾಂ
ಗೂಲರಾಯನ ನೇಮದಲಿ ಲಂಕಾಮಹಾಪುರದ
ಮೂಲೆ ನಾಲ್ಕಱ ಹೊಱವಳಯದಲಿ । ಶೈಲಪಾಣಿಗಳಿರಲು ಸಮರಾ
ಭೀಳ ಬಲನದನಱಿದು ಬಲ ನಾಲ್ಕಾಗಿ ಹೊಱವಂಟ ೮

ಪಡುವಲನಿಲಜಗಾಯ್ತು ರಣ ರಣ । ನಡೆದುದಂಗದಗಾಯ್ತು ತೆಂಕಣ
ನಡೆಯೊಳಿಂದ್ರದಿಶಾವಿಭಾಗದೊಳಾಯ್ತು ನೀಲಂಗೆ
ಕಡುಗಲಹವಾ ಬಡಗದಿಕ್ಕಿನ । ತೊಡರಿಸಿತು ಸುಗ್ರೀವ ರಘುಕುಲ
ದೊಡೆಯರಲಿ ವಿಗ್ರಹ ವಿಚಿತ್ರ ಮಹೇಂದ್ರದಲ್ಲಣನ ೯

ಸ್ಮರಿಸಿದನು ರಾಹುವನು ರಾಹುವಿ । ನುರುಜಠರ ಮಧ್ಯದಲಿ ತರಣಿಯ
ನಿರಿಸಿದನು ನೆರಹಿದನು ಲಯಜೀಮೂತ ಕೋಟಿಗಳ
ಹರಹಿದನು ನೆಲದಗಲದಲಿ ನಿ । ರ್ಭರದ ನಿಬಿಡ ಮಹಾಂಧಕಾರದ
ಹೊರಳಿಯನು ಹೊದಿಸಿದನು ಕತ್ತಲೆಯಲಿ ಜಗತ್ರಯವ ೧೦

ನೆರೆದು ಹೊಯ್ದವು ಸಿಡಿಲುಗಳು ಮೊಱೆ । ದುರವಣಿಸಿ ಕಪಿಭಟರ ಕೈಗಳ
ಗಿರಿಗಳನು ಗಬಲಿಕ್ಕಿದವು ಮುಂಬರಿದು ಮುಗಿಲುಗಳು
ಭರದ ಹೊಯ್ಲಿನ ಹೊದಱಿನಲಿ ಕದು । ಕಿಱಿದವೈ ಕಂಗಳನು ಮಿಂಚುಗ
ಳರರೆ ಮೇಘಧ್ವಾನನಾಹವ ಬೆದಱಿಸಿತು ಜಗವ ೧೧

ಗಳನ್ನು ಬೆನ್ನಟ್ಟಿ ಬಂದಿತು. ೮. ಶಬ್ದವನ್ನು ಕೇಳಿಯೇ ಇವನು ಇಂದ್ರಜಿತುವೆಂದು ತಿಳಿದು ಕಪಿಸೈನ್ಯವು ಬಂದುಸೇರಿತು. ವಾನರರಾಜನ ಅಪ್ಪಣೆಯಂತೆ ಲಂಕಾನಗರದ ಹೊರವಲಯದಲ್ಲಿ ನಾಲ್ಕು ಮೂಲೆಗಳಲ್ಲೂ ಬೆಟ್ಟಗಳನ್ನು ಹಿಡಿದ ವಾನರಸೈನ್ಯವಿರಲು ಕದನಭಯಂಕರ ಬಲಶಾಲಿ ಇಂದ್ರಜಿತು ಅದನ್ನು ತಿಳಿದು ತನ್ನ ಸೈನ್ಯವನ್ನು ನಾಲ್ಕು ಭಾಗವಾಗಿ ವಿಂಗಡಿಸಿ ಕೋಟೆಯಿಂದ ಹೊರಹೊರಟ. ೯. ಪಶ್ಚಿಮದಿಕ್ಕಿನ ಕದನಕ್ಕೆ ಮಾರುತಿಯನ್ನು ನೇಮಿಸಲಾಯಿತು ; ದಕ್ಷಿಣದಿಕ್ಕಿನ ಯುದ್ಧದ ಹೊಣೆ ಅಂಗದನ ಪಾಲಿಗಾಯಿತು ; ಪೂರ್ವದಿಕ್ಕಿನ ಯುದ್ಧ ನೀಲನಿಗೆ ಸೇರಿತು. ಉತ್ತರದಿಕ್ಕಿನಲ್ಲಿ ಸುಗ್ರೀವ ಮತ್ತು ರಾಮಲಕ್ಷ್ಮಣರೊಡನೆ ಇಂದ್ರಜಿತುವಿನ ಆಶ್ಚರ್ಯಕರವಾದ ಯುದ್ಧ ಪ್ರಾರಂಭವಾಯಿತು. ೧೦. ಇಂದ್ರಜಿತು ರಾಹುವನ್ನು ಸ್ಮರಿಸಿ ಅವನ ಹೊಟ್ಟೆಯ ಮಧ್ಯದ ಸೂರ್ಯನನ್ನಿರಿಸಿದನು ; ಪ್ರಳಯಮೇಘಗಳ ಗುಂಪನ್ನು ಕೂಡಿಸಿದನು ; ಗಾಢವಾದ ಮಹಾಂಧಕಾರವನ್ನು ಭೂಮಿಯಮೇಲೆಲ್ಲ ಹರಡಿದನು ; ಮೂರು ಲೋಕಗಳನ್ನೂ ಕತ್ತಲೆಯಿಂದ ಮುಚ್ಚಿದನು. ೧೧. ಕಪಿವೀರರು ಕೈಗಳಲ್ಲಿ ಹಿಡಿದಿದ್ದ ಬೆಟ್ಟಗಳನ್ನು ಆರ್ಭಟಿಸಿ ಸಿಡಿಲುಗಳು ರಭಸದಿಂದ ಅಪ್ಪಳಿಸಿದವು ; ಮೋಡಗಳು ಮುಂಬರಿದು ಬಂದು ಜೋರಾಗಿ ಬಡಿದು ನುಂಗಿದವು ; ಮಿಂಚುಗಳು ಕಪಿಭಟರ ಕಣ್ಣುಗಳನ್ನು ಕುಕ್ಕಿದವು.

ಉಸುರಲೇನಚ್ಚರಿಯನಸುರನ । ವಿಶಿಖವೀ ಕಪಿಭಟರ ನೆತ್ತಿಯ
ಲಸದಳಿಸಿ ಮೂಡಿದವು ಪಟ್ಟೆಳವೆರಡಱಂತರದ
ಸಸಿನದಲಿ ಚಿಗಿಚಿಗಿದು ನೆಲದಲಿ । ಬಸವಳಿದು ಬಾಯ್ದೆಱೆದು ಜೀವವ
ಬಿಸುಡುತಿರ್ದವು ಕಿರಿದ ಹಲುಗಳ ಕರದ ಮುಗ್ಗುಲಲಿ ೧೨

ಅಱಚಿ ಬೀಳುವ ಕಪಿಭಟರ ಕ । ಟ್ಟೊಱಲಿಕೆಯ ಕೇಳ್ದಸುರಮರ್ದನ
ಮಱುಗಿದನು ನಿರ್ಲಕ್ಷ್ಯ ಲಕ್ಷಣದಾ ಚರಾಧಮನ
ಕುಱುಹುಗಾಣದೆ ಸಂಧಿಸಿದ ಹೊಂ । ಗಱಿಯ ಹಿಳುಕಿನ ಸರಳ ಸಂಜ್ಞೆಯ
ಲಱಸಿದನು ಮುಱಿಮುಱಿದು ಮೇಘಧ್ವಾನದಬ್ಬರವ ೧೩

ಮೊಳಗುವತಿರಥ ರಥದ ಸರಿಸಕೆ । ಕಳುಹಿದನು ಕವಲಂಬ ಕಡಿದಿಳೆ
ಗಿಳುಹಿದುದು ಕುದುರೆಗಳನುಡಿದುದು ಸರಳು ಸಾರಥಿಯ
ನಿಲುಕಿದುದು ಮೇಲಣಗೆ ವೈರಿಯ । ತಲೆಗೆ ತಪ್ಪಿಸಿಕೊಂಡು ರಾವಣಿ
ಬಳಿರಥಕೆ ಕಾಲಿಕ್ಕಿ ಕಱೆದನು ಮತ್ತೆ ಮಾರ್ಗಣವ ೧೪

ದೇವ ರಾಘವನಹಿತ ನಿಶಿತ ಶ । ರಾವಳಿಯ ತಱಿದೊಟ್ಟಿ ಮೊಳಗಿನ
ಠಾವಿನಲಿ ತಡವಿಲ್ಲದಶ್ವ ವರೂಥ ಸಾರಥಿಯ
ಸಾವಿರದನೂಱೆಂಟು ಸೂಳಿನೊ । ಳೋವದೊಡನೊಡನೆಚ್ಚು ಮುಱಿದನು
ರಾವಣಿಯ ರಥದುಬ್ಬರವನಂಬರದ ವಳಯದಲಿ ೧೫

ಅಬ್ಬಬ್ಬ, ಮೇಘನಾದನ (ಇಂದ್ರಜಿತುವಿನ) ಯುದ್ಧವು ಜಗತ್ತನ್ನು ಬೆದರಿಸಿತು. ೧೨. ಆ ಆಶ್ಚರ್ಯವನ್ನು ಏನೆಂದು ವರ್ಣಿಸಲಿ. ಇಂದ್ರಜಿತುವಿನ ಬಾಣವು ಕಪಿವೀರರ ನೆತ್ತಿಗೆ ಜೋರಾಗಿ ನಾಟಿ ಅಡಿಯಲ್ಲಿ ಎರಡು ಪಿರ್ರೆಗಳ ನಡುವೆ ನೇರವಾಗಿ ಹೊರಹೊರಟು ಕೊಂಡವು. ಕಪಿಗಳು ನೆಗೆನೆಗೆದು ಶಕ್ತಿಗುಂದಿ ಬಿದ್ದು ಮಗ್ಗುಲಿಗೆ ಕೈಗಳನ್ನು ಊರೆ ಕೊಟ್ಟುಕೊಂಡು ಹಲ್ಲುಗಳನ್ನು ಕಚ್ಚಿ ಬಾಯಿಬಿಡುತ್ತ ಪ್ರಾಣಬಿಡುತ್ತಿದ್ದವು. ೧೩. ಅರಚಿಕೊಂಡು ಉರುಳಿಬೀಳುವ ಕಪಿಸೈನಿಕರ ಚೀರಾಟವನ್ನು ಕೇಳಿ ಅಸುರಾರಿ ರಾಮನು ಮರುಗಿದನು. ಗುರಿಗೆ ಸಿಕ್ಕದಂತೆ ಅದೃಶ್ಯನಾಗಿದ್ದುಕೊಂಡು ಸಂಚರಿಸುತ್ತಿರುವ ರಾಕ್ಷಸ ನೀಚನು ಇರುವ ಸ್ಥಳದ ಗುರುತು ಕಾಣದೆ ಮೋಡದ ಗುಡುಗಿನ ಅಬ್ಬರವನ್ನು ಕೇಳಿ ಅದಕ್ಕೆ ಚಿನ್ನದಗರಿಗಳ ಬಾಣವನ್ನು ಬಿಟ್ಟು ಮೋಡವನ್ನು ಚದುರಿಸಿ ಬಾಣಗಳು ಕೊಡುವ ಸಂಜ್ಞೆಯ ಮೂಲಕ ಇಂದ್ರಜಿತು ಇರುವ ಸ್ಥಳವನ್ನು ಹುಡುಕಿದನು. ೧೪. ಅತಿರಥನಾದ ಇಂದ್ರಜಿತುವಿನ ರಥದಿಂದ ಹೊರಡುವ ಗುಡುಗಿನ ಶಬ್ದದ ಸಮೀಪಕ್ಕೆ ರಾಮನು ಕವಲುಬಾಣವನ್ನು ಕಳುಹಿಸಿದನು. ಅದು ರಥದ ಕುದುರೆಗಳನ್ನು ಕತ್ತರಿಸಿ ನೆಲಕ್ಕೆ ಕೆಡವಿತು. ಸಾರಥಿಯನ್ನು ಕೊಂದಿತು. ಅನಂತರ ಮೇಲಿದ್ದ ವೈರಿಯ ತಲೆಯನ್ನು ಹುಡುಕಿತು. ಆಗ ಇಂದ್ರಜಿತು ತಲೆತಪ್ಪಿಸಿಕೊಂಡು ಇನ್ನೊಂದು ರಥವನ್ನು ಹತ್ತಿ ಪುನಃ ಬಾಣಗಳನ್ನು ಸುರಿಸಿದನು. ೧೫. ರಾಘವದೇವನು ಶತ್ರುವಿನ ಹರಿತ ಬಾಣಗಳ ಸಾಲನ್ನು ಕತ್ತರಿಸಿ ರಾಶಿಹಾಕಿ ಗುಡುಗಿನ ಶಬ್ದ ಕೇಳಿಬಂದ ಸ್ಥಳಕ್ಕೆ ಬಾಣ ಬಿಟ್ಟು ಕುದುರೆಗಳನ್ನೂ, ರಥದ ಸಾರಥಿಯನ್ನೂ ಸಾವಿರದ ನೂರೆಂಟುಸಲ ಒಂದೇ

ಸೂತನಾಗಲಿ ಮೇಣು ತುರಗ । ವ್ರಾತವಾಗಲಿ ನಭದೊಳಸುರ ನಿ
ಶಾತ ಶರಸಂಧಾನವಾಗಲಿ ಸಬುದದೋಱಿದಡೆ
ಯಾತುಧಾನಧ್ವಂಸಕನ ಸರ । ಳಾ ತತುಕ್ಷಣ ತಱಿವುತಿರ್ದುದು
ಭೀತಿಯಲಿ ಬಿರಿತಸುರ ತೆಗೆದೋಡಿದನು ಹಿನ್ನೆಲೆಗೆ ೧೬

ನೆನೆದುಕೊಂಡನುಪಾಯಕೌಶಲ । ವನು ಮಹಾ ಮಾಯಾ ವಿನೋದದ
ಜನಕಜೆಯ ನಿರ್ಮಿಸುವೆನಂಜಿಸುವೆನು ನೃಪಾಲಕನ
ವನಚರರ ಕಾಳಗವನೀ ಹೊ । ತ್ತಿನಲಿ ತೆಗೆಸುವೆನಿಂದಿನಿರುಳಲಿ
ವನಜಗರ್ಭನ ಮೆಚ್ಚಿಸುವೆನೆಂದವನು ಮನದಂದ ೧೭

ಎಂದು ಹನುಮನ ರಣಕೆ ಸಮರ । ಸ್ಯಂದನವ ನೂಕಿದನು ಕಪಿಗಳ
ಕೊಂದನಗಣಿತವನು ಮಹಾ ಮಾಯಾ ವಿಯೋಗದಲಿ
ನೊಂದು ಕಾಳಗಕಾನಲಾರದೆ । ಹಿಂದುಮುಂದಾಯ್ತುಳಿದ ಬಲ ರಘು
ನಂದನನ ನಿಜಭೃತ್ಯನೊಬ್ಬನೆ ಮಲೆತನಾಹವಕೆ ೧೮

ಕಾದಿದನು ಬೆಟ್ಟದಲಿ ಮುಷ್ಟಿಯ । ಲಾದುಕೊಂಡಟ್ಟಿದನು ಖಳ ಬಯ
ಲಾದ ಠಾವಿನಲಱಸಿದನು ಕಿವಿಗೊಟ್ಟು ಕಿಡಿ ಮಸಗಿ
ಆ ದುರಾತ್ಮನೊಳೀ ಪರಿಯಲಿಪ । ರೋದಧಿಗೆ ತರಣಿಯ ತುರಂಗಮ
ವೈದುವನ್ನಬರೊದಗಿ ಕದನವ ಮೆಱಿದನಾ ಹನುಮ ೧೯

ಸವನೆ ಹೊಡೆದು ಆಕಾಶದಲ್ಲಿ ಇಂದ್ರಜಿತುವಿನ ರಥದ ರಭಸವನ್ನು ಮುರಿದನು. ೧೬. ಇಂದ್ರಜಿತುವಿನ ಸಾರಥಿಯಾಗಲಿ, ಕುದುರೆಗಳಾಗಲಿ, ಆಕಾಶದಲ್ಲಿ ಅಸುರನ ಬಾಣ ಪ್ರಯೋಗವಾಗಲಿ ಸ್ವಲ್ಪ ಶಬ್ದ ಕೇಳಿದರೂ ಸಾಕು ಅಸುರಾರಿ ರಾಮನ ಬಾಣಗಳು ಆ ಕ್ಷಣ ಹೋಗಿ ಕತ್ತರಿಸಿಹಾಕುವವು. ಆಗ ಇಂದ್ರಜಿತು ಭಯದಿಂದ ದಿಗ್ಭ್ರಮೆಗೊಂಡು ಹಿನ್ನೆಲೆಗೆ ಓಡಿಹೋದನು. ೧೭. ಇಂದ್ರಜಿತು ಒಂದು ಉಪಾಯಕೌಶಲ್ಯವನ್ನು ಆಲೋಚಿಸಿದನು. 'ವಿನೋದದ ಮಾಯಾಸೀತೆಯನ್ನು ನಿರ್ಮಿಸಿ ರಾಮನನ್ನು ಹೆದರಿಸುವೆನು. ಈಗ ವಾನರರ ಯುದ್ಧವನ್ನು ತೆಗೆಸುವೆನು. ಇಂದು ರಾತ್ರಿ ಬ್ರಹ್ಮನನ್ನು ಮೆಚ್ಚಿಸುವೆನು' ಎಂದು ಇಂದ್ರಜಿತು ನಿಶ್ಚಯಿಸಿದ. ೧೮. ಹೀಗೆ ನಿಶ್ಚಯಿಸಿದ ಇಂದ್ರಜಿತು ಹನುಮಂತನೊಡನೆ ಕಾಳಗಕ್ಕೆ ತನ್ನ ಯುದ್ಧದ ರಥವನ್ನು ಮುಂದೆ ನಡೆಸಿದನು ; ಇಂದ್ರಜಿತು ಮಹಾಮಾಯೆಯನ್ನು ಬಿಟ್ಟು ಅಸಂಖ್ಯಾತ ಕಪಿಗಳನ್ನು ಕೊಂದನು. ಉಳಿದ ಕಪಿಸೈನ್ಯವು ಏಟುತಿಂದು ಯುದ್ಧವನ್ನು ಎದುರಿಸಲಾರದೆ ಹಿಂದುಮುಂದಾಯಿತು. ರಾಮನ ಸೇವಕ ಹನುಮಂತನೊಬ್ಬನೆ ಇಂದ್ರಜಿತುವಿನೊಡನೆ ಯುದ್ಧಕ್ಕೆ ಗರ್ಜಿಸಿದನು. ೧೯. ಹನುಮಂತನು ಬೆಟ್ಟವನ್ನು ಹಿಡಿದು ಯುದ್ಧಮಾಡಿದನು ; ಮುಷ್ಟಿಯಲ್ಲಿ ಆಯ್ದುಕೊಂಡು ರಾಕ್ಷಸರನ್ನು ಹೊಡೆದಟ್ಟಿದನು. ಇಂದ್ರಜಿತು ಕಿಡಿಸೂಸಿ ತನ್ನ ಕಡೆಯವರೆಲ್ಲ ಬಿದ್ದು ಬಯಲಾದ ಪ್ರದೇಶದಲ್ಲಿ ಕಿವಿಗೊಟ್ಟು ಆಲಿಸುತ್ತ ಹನುಮಂತನನ್ನು ಹುಡುಕಿದನು. ಸೂರ್ಯನ ರಥದ ಕುದುರೆಗಳು ಪಶ್ಚಿಮಸಾಗರ

ಮಾಱಿಮಾಱಿಯಲವನಿಂದ್ರ ವಾರುಣ । ಹರ ಸಖಾನಿಲ ವಹ್ನಿ ಪಿತೃಪತಿ
ನಿರುತಿ ನೀರಜಭವಭವಾಸ್ತ್ರಂಗಳಲಿ ಮಾರುತಿಯ
ಸರಿಸದಲಿ ಸೈಗಱೆದು ಗೆಲವಿನ । ಪರಿಯ ಕಾಣದೆ ಪಾದಳಿದು ಪೈ
ಸರಿಸಿ ಮಾಯಾಸೀತೆಯನು ನಿಮಿಷದಲಿ ನಿರ್ಮಿಸಿದ ೨೦

ಮಾಯೆಯೆಂದಱಿವಡೆ ವಿಧಾತ್ರನು । ಪಾಯವೇತಜಿದಿಂದ್ರಜಿತುವಿನ
ಮಾಯೆಯೆಂತುಟೊ ಶಿವಶಿವಾ ಮಾಯಾ ಮಹೀಸುತೆಯ
ವಾಯುಜನ ಸಮ್ಮುಖದೊಳಾ ವ । ಜ್ರಾಯುಧಾಂತಕನೆತ್ತಿ ತೋಱಿಸೆ
ಬಾಯ ಬಿಟ್ಟಳು ಹನುಮ ಕೆಟ್ಟೆನು ಕೆಟ್ಟೆನಕಟೆನುತ ೨೧

ಕಂಡನಾ ಹನುಮಂತ ವನದಲಿ । ಕಂಡ ಸೀತೆಯ ರೂಪಿನಬಲೆಯ
ಖಂಡೆಯದ ಬಾಯ್ಧಾರೆಗೌಕಿದ ಕೊರಳ ಕಳಕಳದ
ಚಂಡಿಸಿದ ಕೋಪಾಗ್ನಿ ಬಳಿಕು । ದ್ದಂಡ ಹನುಮಂಗೆದ್ದುದುದರದ
ಗುಂಡಿಗೆಯ ಘನಶೋಕರಸ ಕುದಿದುಕ್ಕಿ ನಯನದಲಿ ೨೨

ಬೆರಳ ಬಾಯೊಳಗಡಸಿ ಭಯಸಂ । ಕರದ ಸಲೆ ಜೀವಾಭಿಲಾಷೆಯ
ಭರದ ಬಾಯಾರಿಕೆಯ ಬಳಲುವ ಕೊರಳ ಕೊಂಕಿನಲಿ
ಅರಸ ರಘುರಾಜೇಂದ್ರಚಂದ್ರಮ । ನರಸಿಯಲ್ಲವೆ ಹನುಮ ಕರುಣವ
ನಿರಿಸಲಾಗದೆ ತನ್ನ ಮೇಲೆಂದೊಱಲಿತಾ ಮಾಯೆ ೨೩

ವನ್ನು ಸೇರುವವರೆಗೆ ಆ ದುರಾತ್ಮ ಇಂದ್ರಜಿತುವಿನೊಡನೆ ಈ ರೀತಿಯಲ್ಲಿ ಹನುಮಂತನು ಯುದ್ಧವನ್ನು ಮೆರೆದನು. ೨೦. ಮರೆಯಲ್ಲಿದ್ದುಕೊಂಡು ಇಂದ್ರಜಿತು ಇಂದ್ರ, ವರುಣ, ಕುಬೇರ, ವಾಯು, ಅಗ್ನಿ, ಯಮ, ನಿಋುತಿ, ಬ್ರಹ್ಮ ಈಶ್ವರಾಸ್ತ್ರಗಳನ್ನು ಮಾರುತಿಯ ಮೇಲೆ ಮಳೆಗರೆದೂ ಕೂಡ ಗೆಲ್ಲುವ ರೀತಿಯನ್ನು ಕಾಣದೆ ಸ್ಥಿತಿಗೆಟ್ಟು ಹಿಂದೆಗೆದು ಮಾಯಾಸೀತೆಯನ್ನು ನಿಮಿಷದಲ್ಲಿ ನಿರ್ಮಿಸಿದ. ೨೧. ಮಾಯೆ ಎಂದು ತಿಳಿಯಲು ಬ್ರಹ್ಮನ ಉಪಾಯವೇನಾದೀತು ; ಇಂದ್ರಜಿತುವಿನ ಮಾಯೆ ಎಂಥದೋ, ಶಿವಶಿವಾ! ಮಾಯಾಸೀತೆಯನ್ನು ಮಾರುತಿಯ ಎದುರಿನಲ್ಲಿ ಇಂದ್ರಜಿತು ಎತ್ತಿ ತೋರಿಸಿದನು. ಮಾಯಾಸೀತೆಯು 'ಹನುಮಂತ, ಕೆಟ್ಟೆ, ಕೆಟ್ಟೆ !' ಎಂದು ಅತ್ತಳು. ೨೨. ತಾನು ಅಶೋಕವನದಲ್ಲಿ ಕಂಡಿದ್ದ ಅಬಲೆಯ ರೂಪಿನ ಸೀತೆಯನ್ನು ಹನುಮಂತನು ಕಂಡನು ; ಕೊರಳಿಗೆ ಕತ್ತಿಯು ಚಾಚಿದ್ದುದರಿಂದ ಅವಳು ಚಿಂತಾತುರಳಾಗಿದ್ದುದಂ ಕಂಡುಬಂದಿತು. ಹೊಟ್ಟೆಯಲ್ಲಿ ತೀವ್ರಶೋಕರಸವು ಕುದಿದು ಕಣ್ಣುಗಳಿಂದ ಉಕ್ಕಲು ವೀರಹನುಮಂತನಲ್ಲಿ ಪ್ರಚಂಡ ಕೋಪದ ಬೆಂಕಿಯು ಪ್ರಜ್ವಲಿಸಿತು. ೨೩. ಬಾಯಲ್ಲಿ ಬೆರಳಿಟ್ಟು ಭಯಾಕುಲೆಯಾಗಿ ಜೀವದ ಮೇಲಿನ ಆಸೆಯಿಂದ ಬಾಯಾರಿ ಬಳಲಿ ಕೊರಳು ಕೊಂಕಿಸಿದ ಮಾಯಾಸೀತೆಯು, "ಅರಸ ರಘುರಾಜೇಂದ್ರ, ಚಂದ್ರಮನ ಅರಸಿಯಲ್ಲವೆ ನಾನು ? ಹನುಮ, ನನ್ನಮೇಲೆ ಕರುಣೆ ತೋರಿಸಬಾರದೆ ?" ಎಂದು ಮೊರೆಯಿಟ್ಟಳು.

ಆರಿಗೋಸುಗ ಸಮರವಿದು ತಾ । ನಾರಿಗೀಯಭಿಮಾನ ಲಜ್ಜಾ
ದಾರುಣವು ನಿಮಗಿನ್ನು ಕೇಳೈ ತಂದೆ ಹನುಮಂತ
ಕ್ರೂರಕರ್ಮದ ಖಳನ ಕೈಯಲಿ । ತೀರುವಂತಾಯ್ತುಕಟಕಟ ಕ
ಣ್ಣಾರೆ ಕಂಡೈ ತನ್ನ ಪಾಪವನೆಂದುದಾ ಮಾಯೆ ೨೪

ಆವ ರಾಯನ ಬಸುಱಿನಲಿ ಬಂ । ದಾವರಾಯನ ಮಗನ ಕೈವಿಡಿ
ದೀ ವಿಧಿಯನುಣಲಿದ್ದುದೇ ನೋಡಯ್ಯ ಹನುಮಂತ
ಆವ ಪೂರ್ವದ ಫಲವೊ ಬಳಿವಿಡಿ । ದಾವರಿಸಿತೆನ್ನುವನು ಕಂಡೈ
ಕಾವ ಕರುಣಿಗಳಿಲ್ಲದಿದೆ ನೋಡೆಂದುದಾ ಮಾಯೆ ೨೫

ಗಂಡ ಬೇಡೆನೆ ಬಂದೆನತ್ತೆಯು । ನಂಡಲೆದೆ ನೀ ಹೋಗಬೇಡೆನೆ
ಕಂಡವರ ಕನಲಿದೆನು ಕಳುಹದದೆನ್ನ ಪತಿಯೊಡನೆ
ಉಂಡೆನಾಪತ್ತನು ಸಮಗ್ರದ । ಖಂಡಿತದಲೆಲೆ ಹನುಮ ಕೇಡನು
ಕಂಡೆಯೈ ಕಡೆಗಾದ ಕೆಲಸವನೆಂದುದಾ ಮಾಯೆ ೨೬

ಮುಡಿವಿಡಿದು ಕರವಾಳತಟ್ಟನ । ಲಡಿಗಡಿಗೆ ಹೊಯ್ಹೊಯ್ದು ಕುಬುಬಿಱಿ
ದೆಡಬಲಕೆ ಬರಸೆಳೆದು ಬೆದಱಿಸುತಳಿಸುತೊದಱಿಸುತ
ಖಡುಗವನು ಮಗುಳೆತ್ತಿ ಝಳಪಿಸಿ । ಹೊಡೆಯಲನುಗೈದನಿಲಜನ ಕಂ
ಗೆಡಿಸಿದನು ಕಡುಹೇಱಿ ಖಳ ಮಾಯಾವಿಕಾರದಲಿ ೨೭

೨೪. "ಯಾರಿಗೋಸ್ಕರ ಈ ಯುದ್ಧ ? ಯಾರಿಗಾಗಿ ಈ ಗರ್ವ ? ಕೇಳಪ್ಪಾ ಹನುಮಂತ, ಇನ್ನು ನಿಮಗೆ ತೀವ್ರ ನಾಚಿಕೆಯೇ ಸರಿ. ದುಷ್ಟನಾದ ರಾಕ್ಷಸನ ಕೈಯಿಂದ ಸಾಯುವಂತಾಯಿತು. ಅಯ್ಯೋ, ಕಣ್ಣಾರೆ ಕಂಡೆಯಾ ನನ್ನ ಪಾಪವನ್ನು ?" ಎಂದಳು ಮಾಯಾಸೀತೆ. ೨೫. "ಯಾವ ರಾಜನ ಹೊಟ್ಟೆಯಲ್ಲಿ ಹುಟ್ಟಿ ಯಾವ ರಾಜನ ಮಗನ ಕೈಹಿಡಿದು ಈ ವಿಧಿಯನ್ನನುಭವಿಸಬೇಕಾಗಿದೆ, ನೋಡಯ್ಯ ಹನುಮಂತ. ಯಾವ ಪೂರ್ವಜನ್ಮದ ಕರ್ಮಫಲವೊ ನನ್ನನ್ನು ಬಿಡದೆ ಹಿಂಬಾಲಿಸಿ ಆವರಿಸಿದೆ. ನನ್ನನ್ನು ನೋಡಿದೆಯಾ, ರಕ್ಷಿಸುವ ಕರುಣಿಗಳಾರೂ ಇಲ್ಲ" ಎಂದಿತು ಮಾಯೆ. ೨೬. "ಗಂಡ ಬೇಡ ಬೇಡ ಎಂದರೂ ಅವನೊಡನೆ ಅರಣ್ಯಕ್ಕೆ ಬಂದೆ. ನೀನು ಕಾಡಿಗೆ ಹೋಗಬೇಡ ಎಂದು ಅತ್ತೆ ಹೇಳಲು ಅವರನ್ನು ಕಾಡಿಬೇಡಿದೆ. ನನ್ನ ಪತಿಯೊಡನೆ ನನ್ನನ್ನು ಕಳುಹಿಸುವುದಿಲ್ಲ ಎಂದು ಕಂಡವರ ಮೇಲೆ ಕೋಪಿಸಿಕೊಂಡೆ. ಎಡೆಬಿಡದೆ ಅಧಿಕ ಆಪತ್ತನ್ನನುಭವಿಸಿದೆ. ಹನುಮ, ಕೊನೆಗಾದ ಕಾರ್ಯವನ್ನು ನೋಡಿದೆಯಾ ?" ಎಂದಿತು ಮಾಯೆ. ೨೭. ಮಾಯಾಸೀತೆಯ ಕೂದಲು ಹಿಡಿದುಕೊಂಡು ಕತ್ತಿಯ ಅಲಗಿನ ಚಪ್ಪಟೆಭಾಗದಿಂದ ಅಡಿಗಡಿಗೆ ಹೊಡೆಹೊಡೆದು ಕೂಗುತ್ತ ಎಡಬಲಕ್ಕೆ ಎಳೆದಾಡಿ ಬೆದರಿಸುತ್ತ, ಅಳಿಸುತ್ತ, ನಡಗಿಸುತ್ತ, ಪುನಃ ಕತ್ತಿಯನ್ನು ಮೇಲಕ್ಕೆತ್ತಿ ಝಳಪಿಸಿ ಹೊಡೆಯಲು ಸಿದ್ಧನಾಗಿ ಮಾಯೆಯಿಂದ ಇಂದ್ರಜಿತು ಹನುಮಂತನನ್ನು ಕಂಗೆಡಿಸಿ

ಪವನಸುತ ನೋಡೆನ್ನ ಪ್ರಾರ । ಬ್ಧವನು ನಿಲ್ಲದೆ ಹೋಗಹೇಳಿ
ನ್ನವನಿಪನ ಮಜ್ಜೀವಿತೇಶನ ಮನುಕುಲಾಧಿಪನ
ಯುವತಿಯಾಸೆಯ ಬಿಟ್ಟಯೋಧ್ಯೆಗೆ । ರವಿತನೂಭವಸಹ ಸುಮಿತ್ರಾ
ಭವನು ಸಹಿತವೆ ಹೋಗಹೇಳೆಂದೊದರಿತಾ ಮಾಯೆ ೨೮

ತೋಱು ಕೊಂಡೊಯ್ದವನಿಪಂಗಸು । ಜಾಱಿತೆನ್ನುವ ಮಾತನಿದ ನೀ
ಮೀಱದಿರು ಕೊಂಡೊಯ್ ಕಕುತ್ಸ್ಥಾನ್ವಯ ಶಿರೋಮಣಿಯ
ಬೇಱೆ ಬುದ್ಧಿಯ ಬಳಸದಿರು ಕೊಲೆ । ಗಾಱರಿವದಿರು ಹರಿವ ಕಂಡರು
ಸಾಱಿದೆನು ನಿನಗಯ್ಯ ಹೋಗೆಂದೊದರಿತಾ ಮಾಯೆ ೨೯

ಐಸೆ ಮತ್ತೇನಕಟ ದುಷ್ಕೃತ । ದೋಷವಿದು ತಾ ಮೀಱಲಾರಳ
ವೀ ಸತಿಯ ಸೌಭಾಗ್ಯವನಿತೆಯ ಮರಣ ದರುಶನಕೆ
ಮೀಸಲಿರ್ದಪೆ ಕಂಗಳೆಂದುಱೆ । ಘಾಸಿಯಾದನು ಚಿತ್ತದಲಿ ಸಂ
ತೈಸಿಕೊಂಡೀ ಮಾತ ನುಡಿದನು ಮೇಘನಾದಂಗೆ ೩೦

ತ್ರಿಜಗವಱಿಯೆ ಪುಲಸ್ತ್ಯಮುನಿವಂ । ಶಜನಲಾ ನಿಮ್ಮಯ್ಯನೀಶ್ವರ
ಭಜಕನಲ್ಲಾ ಶ್ರುತಿಸದಾಗಮಗಳಲಭಿಜ್ಞನಲ
ಭಜಿಸನವನನ್ಯಾಯವನು ಗಜ । ಬಜಿಸನಿನ್ನೂ ಸೀತೆಯಲಿ ಕಡು
ವೃಜಿನಕೊದಗಿದೆ ನೋಡವಗೆ ಮಗನಲ್ಲ ನೀನೆಂದ ೩೧

ದನು. ೨೮. "ಮಾರುತಿ, ನೋಡು ನನ್ನ ವಿಧಿಯನ್ನು. ಇನ್ನು ನನ್ನ ಪ್ರಾಣೇಶನನ್ನು, ಮನುವಂಶದೊಡೆಯನನ್ನು ಇಲ್ಲಿ ನಿಲ್ಲದೆ ಹೋಗುವಂತೆ ಹೇಳು. ಹೆಂಡತಿಯ ಆಸೆಯನ್ನು ಬಿಟ್ಟು ರವಿವಂಶದೊಡೆಯನು ಲಕ್ಷ್ಮಣನೊಡನೆ ಅಯೋಧ್ಯೆಗೆ ಹೊರಟುಹೋಗಲಿ ಹೇಳು" ಎಂದು ಮಾಯೆ ಹೇಳಿತು. ೨೯. "ಇಲ್ಲಿಂದ ರಾಮನನ್ನು ಕರೆದುಕೊಂಡು ಹೋಗಿ ನನ್ನ ಪ್ರಾಣವು ಹೋದ ಸಂಗತಿಯನ್ನು ಅವನಿಗೆ ತಿಳಿಸು. ಈ ನನ್ನ ಮಾತನ್ನು ಮೀರಬೇಡ. ಕಾಕುತ್ಸ್ಥ ಶ್ರೇಷ್ಠನನ್ನು ಕರೆದುಕೊಂಡು ಹೋಗು. ಬೇರೆ ಯೋಚನೆ ಮಾಡಬೇಡ. ಈ ಕೊಲೆಗಾರರು ನನ್ನನ್ನು ಮುಗಿಸದೆ ಬಿಡರು. ನಿನಗೆ ಸಾರಿ ಸಾರಿ ಹೇಳುತ್ತೇನೆ, ಹೋಗು" ಎಂದು ಮಾಯೆ ಕೂಗಿತು. ೩೦. 'ಅಯ್ಯೋ, ಇನ್ನೇನು ! ಇದು ದುಷ್ಕೃತ್ಯದ ದೋಷವೇ ಸರಿ. ಯಾರ ಕೈಯಲ್ಲಿ ಇದನ್ನು ಮೀರಲು ಸಾಧ್ಯ ! ಈ ಮುತ್ತೈದೆ ಸತಿಯ ಮರಣವನ್ನು ಕಾಣಲು ಈ ಕಣ್ಣುಗಳು ಮೀಸಲಾದುವೆ ?' ಎಂದು ಹನುಮಂತನು ಮನಸ್ಸಿನಲ್ಲಿ ಬೆದರಿದನು. ಅನಂತರ ಸಮಾಧಾನ ತಂದುಕೊಂಡು ಹನುಮಂತನು ಮೇಘನಾದನನ್ನು ಕುರಿತು ಮುಂದಿನಂತೆ ನುಡಿದನು. ೩೧. "ನಿಮ್ಮ ತಂದೆಯು ಪುಲಸ್ತ್ಯಮುನಿಯ ವಂಶದಲ್ಲಿ ಹುಟ್ಟಿದವನೆಂಬುದು ಮೂರು ಲೋಕಗಳಲ್ಲೂ ಪ್ರಸಿದ್ಧವಾಗಿದೆ. ಅವನು ಈಶ್ವರಾರಾಧಕನು ಮತ್ತು ವೇದಶಾಸ್ತ್ರಗಳನ್ನು ಚೆನ್ನಾಗಿ ತಿಳಿದವನು. ಅವನು ಅನ್ಯಾಯಕ್ಕೆ ಆಸ್ಪದ ಕೊಡುವುದಿಲ್ಲ. ಇನ್ನೂ ಅವನು ಸೀತೆಯೊಡನೆ ಮೀರಿ ವರ್ತಿಸಿಲ್ಲ. ನೀನು ಅವನಿಗೆ

ವೀರರೊಳಗಗ್ಗಳನು ನೀ ಜಂ । ಭಾರಿಜಿತುವೆಂಬೀ ಪ್ರಸಿದ್ಧಿಯ
ಭಾರಣೆಯ ಹೆಸರುಳ್ಳವನು ಹರೆಯದಲಿ ತಿಳಿದವನು
ನಾರಿಯಸುವನು ಕೊಂದನೆಂಬಪ । ಕೀರ್ತಿಯನು ಕಯ್ವಿಡಿದು ಕೆಡದಿರು
ಸೈರಣೆಯ ಕೋ ಕೊಲೆಗೆ ಮನವನು ಮಾಡಬೇಡೆಂದ ೩೨

ಬಿಡು ದುರಾತ್ಮರ ಬುದ್ಧಿಯನು ಕೈ । ವಿಡಿಯದಿರು ದುಷ್ಕೀರ್ತಿಯನು ಸಂ
ಗಡಿಗನಾಗದಿರಸುರ ಕೇಳಪಜಯನಿತಂಬಿನಿಯ
ಕಡೆಗೆ ನೀನೀ ಸತಿಯ ಕಡಿದಡೆ । ಕಡಿದು ಬಿಸುಡದೆ ಮಾಣನಿನಕುಲ
ದೊಡೆಯ ನಿಮ್ಮನ್ವಯದ ವಿಪಿನವನೆಂದನಾ ಹನುಮ ೩೩

ಬರಲಿದಱ ದೆಸೆಯಿಂದಪಪ್ರಥೆ । ದೊರಕಲಿದಱಿಂದಪಜಯವು ಜಱಿ
ದುರಿಯೊಳದ್ದಲಿ ಜಗದ ಜನವದಕಂಜುವವನಲ್ಲ
ಮರುತಸುತ ಕೇಳಸುರರಾವಾ । ಸುರವಿಕರ್ಮವೆ ಧರ್ಮಪಥವೆಮ
ಗರಿದು ಬಿಸುಡುವೆನಿವಳನೆನುತೆತ್ತಿದನು ಖಂಡೆಯವ ೩೪

ನೋಡು ನೋಡೆಲೆ ಹನುಮ ಸೀತೆಯ । ನೋಡು ಕಂಡಾ ಕಾಣೆನೆನ್ನದೆ
ನೋಡೆನುತ ಬೊಬ್ಬಿಱಿದು ರಥದಗ್ರದಲಿ ಖಂಡೆಯವ
ನೀಡಿ ಝಳಪಿಸೆ ಹಾ ಸಮೀರಜ । ಕೇಡ ಕಂಡೈಯೆಂಬ ಮಾಯೆಯ
ಜೋಡಣೆಯ ಜಾನಕಿಯ ಕಡಿದಿಳುಹಿದನು ಧರಣಿಯಲಿ ೩೫

ಪಾಪವನ್ನೊದಗಿಸಲು ಹುಟ್ಟಿದೆ, ಅವನಿಗೆ ಮಗನಲ್ಲ" ಎಂದ ಹನುಮಂತ. ೩೨. "ನೀನು ವೀರರಲ್ಲಿ ಶ್ರೇಷ್ಠ, ಇಂದ್ರನನ್ನು ಗೆದ್ದವನಾದುದರಿಂದ ಇಂದ್ರಜಿತು ಎಂಬ ಪ್ರಸಿದ್ಧಿಯ ದೊಡ್ಡ ಹೆಸರನ್ನು ಪಡೆದಿದ್ದೀಯೆ. ಯೌವನದಲ್ಲಿರುವವನೂ ತಿಳಿದವನೂ ಆಗಿದ್ದೀಯೆ. ಹೆಂಗಸಿನ ಪ್ರಾಣವನ್ನು ತೆಗೆದನೆಂಬ ಕೆಟ್ಟ ಹೆಸರಿಗೆ ಈಡಾಗಿ ಕೆಡಬೇಡ. ಸೈರಣೆಯನ್ನು ತಂದುಕೋ, ಕೊಲ್ಲಲು ಮನಸ್ಸು ಮಾಡಬೇಡ" ಎಂದ ಹನುಮಂತ. ೩೩. ದುರಾತ್ಮರ ಬುದ್ಧಿಯನ್ನು ಬಿಡು. ಅಪಕೀರ್ತಿಯ ಕೈಹಿಡಿಯಬೇಡ. ಸೋಲೆಂಬ ಸ್ತ್ರೀಯ ಸಂಗಡಿಗನಾಗಬೇಡ. ಕೇಳು ಅಸುರ, ನೀನು ಈ ಸತಿಯನ್ನು ಕತ್ತರಿಸಿದರೆ ರವಿಕುಲದರಸನು ನಿಮ್ಮ ವಂಶವೆಂಬ ಅರಣ್ಯವನ್ನು ಕತ್ತರಿಸಿ ಎಸೆಯದೆ ಬಿಡುವುದಿಲ್ಲ" ಎಂದು ನುಡಿದನು ಹನುಮಂತ. ೩೪. "ಈ ಕಾರಣದಿಂದ ಕೆಟ್ಟ ಹೆಸರು ಬಂದರೂ ಬರಲಿ ; ಇದರಿಂದ ಸೊಲುಂಟಾದರೂ ಆಗಲಿ ; ಜಗತ್ತಿನ ಜನರು ನಿಂದಿಸಿ ಉರಿಯಲ್ಲಿ ಹಾಕಲಿ, ಇದಕ್ಕೆಲ್ಲ ನಾನು ಹೆದರುವವನಲ್ಲ. ಮಾರುತಿ ಕೇಳು, ನಾವು ಅಸುರರು, ಭಯಂಕರ ಕಾರ್ಯವೆ ನಮ್ಮ ಧರ್ಮಮಾರ್ಗ. ಇವಳನ್ನು ಕತ್ತರಿಸಿ ಹಾಕುವೆನು" ಎನ್ನುತ್ತ ಇಂದ್ರಜಿತು ಖಡ್ಗವನ್ನೆತ್ತಿದನು. ೩೫. "ನೋಡು ನೋಡು ಹನುಮ, ಸೀತೆಯನ್ನು ನೋಡು. ನೋಡಿದೆಯಾ ? ಕಾಣಲಿಲ್ಲ ಎನ್ನಬೇಡ, ಚೆನ್ನಾಗಿ ನೋಡು" ಎನ್ನುತ್ತ ಗರ್ಜಿಸಿ ಇಂದ್ರಜಿತು ರಥದ ಮೇಲೆ ಕತ್ತಿಯನ್ನೆತ್ತಿ ಝಳಪಿಸಿದನು. ಆಗ "ಅಯ್ಯೋ, ವಾಯುಸುತ ! ಕೇಡನ್ನು ಕಂಡೆಯಾ" ಎಂಬುದಾಗಿ ಕೂಗಿಕೊಂಡ ಮಾಯಾರೂಪಿನ ಸೀತೆಯನ್ನು ಇಂದ್ರಜಿತು ಕತ್ತರಿಸಿ ನೆಲದ ಮೇಲಕ್ಕೆ ಬೀಳಿಸಿದನು.

ಕಡಿದುಬೀಳದ ಮುನ್ನ ಕೋಪದ । ಕಿಡಿಸಹಿತ ಪುಟನೆಗೆದು ತಿವಿದನು
ರಥದಿ ತೆಯಲಿ ಜಜ್ಜರಿತವಾಗಲು ತೇರು ರಾವಣಿಯು
ಅಡಗಿದನು ಬಳಿಕವನು ಮಾಯೆಯು । ನಡಪನೊಡ್ಡಿ ಸವಿಾರಸುತ ಕಡು
ಹಡಗಿ ಮುರಿದನು ಬಳಿಕ ಮಾಯಾಸೀತೆಯಿದ್ದೆಡೆಗೆ ೩೬

ನಡುಗುವಂಘ್ರಿದ್ವಯದ ಬಾಯ್ದೆಜಿ³ । ಮಿಡುಕುವವುಲ ಮುಖೇಂದುವಿನ ತಡೆ
ತಡೆದು ಮುಚ್ಚುವ ತೆಜಿ³ವ ಕಂಗಳ ಕೆತ್ತುವಂಗುಳಿನ
ಬಿಡುವ ಜೀವದ ಬಯಲ ಸೀತೆಯು । ಕಡಿಯೆರಡಜಲಿ ಸುರಿವ ನೆತ್ತರ
ನಿಡುವೊನಲನೀಕ್ಷಿಸುತ ಮೂರ್ಛಿತನಾದನಾ ಹನುಮ ೩೭

ನಿಂದುದಬ್ಬರವಭ್ರದುಬ್ಬರ । ನಿಂದ ಗಗನಸ್ಥಳದವೊಲು ಕೈ
ಗುಂದಿದರು ಗಜ ಗವಯ ಶತಬಲಿ ಮುಖ್ಯನಾಯಕರು
ತಂದರಕ್ಷಿಗೆ ಜಲವನಕಟಕ । ಟೆಂದು ಸುರನಾರಿಯರು ಸೂಚನೆ
ಸಂದುದರಸಂಗನಿಲಜನ ನಿಶ್ಶಬ್ದದಾಹವದ ೩೮

ಹನುಮನೊಡ್ಡಿನೊಳಿಲ್ಲ ಸಿಂಹ । ಧ್ವನಿ ಸುರೇಂದ್ರವಿರೋಧಿಯುಪಟಳ
ಘನವದೇನಾದರೊ ಹುತಾಶನ ವಾಲಿನಂದನರು
ಅನುಜ ನೀ ಹೋಗಂಗದನ ಬಳಿ । ಗನಿಲಜನನಾರಯ್ಯಲಿಕೆ ನೀವ್
ಮಗನ ಮಾಡಿರೆ ಜಾಂಬವರೆಯೆಂದವರ ಬೀಳ್ಕೊಟ್ಟ ೩೯

೩೬. ಮಾಯಾಸೀತೆಯು ಕತ್ತರಿಸಿ ಬೀಳುವುದಕ್ಕೆ ಮೊದಲು ಕೋಪದಿಂದ ಕಿಡಿಕಾರುತ್ತ ಹನುಮಂತನು ಪುಟನೆಗೆದು ವೇಗದಿಂದ ತಿವಿಯಲು ಇಂದ್ರಜಿತುವಿನ ರಥವು ಮುರಿಯಿತು. ಆಗ ಇಂದ್ರಜಿತು ಮಾಯೆಯ ಆಶ್ರಯ ಹೊಂದಿ ಮರೆಯಾದನು. ಹನುಮಂತನು ಪರಾಕ್ರಮ ತಗ್ಗಿ ಮಾಯಾಸೀತೆ ಇದ್ದ ಸ್ಥಳಕ್ಕೆ ತಿರುಗಿದನು. ೩೭. ನಡುಗುವ ಕಾಲುಗಳು, ತುಟಿಗಳು, ಅದುರುತ್ತಿರುವ ಮುಖಕಮಲ, ತಡೆತಡೆದು ಮುಚ್ಚಿ ತೆರೆಯುವ ಕಣ್ಣುಗಳು, ಕಂಪಿಸುವ ಅಂಗಗಳು ಈ ಸ್ಥಿತಿಯಲ್ಲಿ ಇನ್ನೇನು ಜೀವ ಬಿಡುವಳೆಂಬಂತಿರುವ ಮಾಯಾಸೀತೆಯ ಕತ್ತರಿಸಿದ ದೇಹದ ಎರಡೂ ಭಾಗಗಳಿಂದ ಧಾರಾಕಾರವಾಗಿ ಸುರಿಯುತ್ತಿರುವ ರಕ್ತದ ಪ್ರವಾಹವನ್ನು ನೋಡಿ ಹನುಮಂತನು ಮೂರ್ಛೆಹೋದನು. ೩೮. ಮೇಘದ ಗರ್ಜನೆ ನಿಂತ ಆಕಾಶದಂತೆ ಗಲಾಟೆಯು ನಿಂತಿತು. ಗಜ, ಗವಯ, ಶತಬಲಿ ಮೊದಲಾದ ಮುಖ್ಯ ವಾನರನಾಯಕರು ಶಕ್ತಿ ಗುಂದಿದರು. ದೇವತರುಣಿಯರು "ಅಯ್ಯೋ !" ಎಂದು ದುಃಖಿಸಿ ಕಣ್ಣುಗಳಲ್ಲಿ ನೀರು ತುಂಬಿಕೊಂಡರು. ಹನುಮಂತನ ಯುದ್ಧದಲ್ಲಿ ನಿಶ್ಶಬ್ದತೆ ಆವರಿಸಿದ ಸೂಚನೆ ರಾಮನಿಗೆ ದೊರೆಯಿತು. ೩೯. "ಹನುಮಂತನ ಯುದ್ಧದಲ್ಲಿ ಸಿಂಹನಾದವು ಕೇಳಿಸುತ್ತಿಲ್ಲ. ಇಂದ್ರಜಿತುವಿನ ಹಿಂಸೆಯಾದರೋ ಅಧಿಕ. ನೀಲ, ಅಂಗದರು ಏನಾದರೋ ? ತಮ್ಮ ಲಕ್ಷ್ಮಣ, ನೀನು ಅಂಗದನ ಬಳಿಗೆ ಹೋಗು. ಹನುಮಂತನನ್ನು ವಿಚಾರಿಸಿಕೊಂಡು ಬರಲು ನೀವು ಮನಸ್ಸುಮಾಡಿ ಜಾಂಬವತಿ" ಎಂದು ಹೇಳಿ ರಾಮನು ಅವರನ್ನು

ಬಾ ವಿಭೀಷಣದೇವ ನೀನಾ । ಪಾವಕನಸುತನೆಡೆಗೆ ನಡೆ ತಿಳಿ
ದೀ ವಿಘಳಿಗೆಗೆ ಬಹುದು ನೀವೆಂದನಿಬರನು ಕಳುಹಿ
ಆ ವಿರಾಧವಿರೋಧಿಚಿಂತೆಯು । ನೋವಿಕೊಂಡಿರೆ ಹನುಮನೆಡೆಗಾ
ತಾವರೆಯನಂದನನ ನಂದನನಂಜುತ್ತೈತಂದ ೪೦

ಬರುತ ಕಂಡನಖಂಡಬಲನು । ಬ್ಬರದ ಕರಹತಿಯಿಂದ ಕೆಡೆದಿಹ
ಕರಿಘಟಾಳಿಯ ಪಾದಘಾತಿಯಲಳಿದ ಪಯದಳವ
ಮರದ ಹೊಯ್ಲಲಿ ಮುಗ್ಗಿದಶ್ವವ । ವರರಥಾಳಿಯ ಸಂದಣಿಯ ಸಂ
ಗರದ ಭೂಮಿಯ ಹಾ ಮಹಾದೇವೆನುತ ನಡೆತಂದ ೪೧

ಹತ್ತಿರಕೆ ಬರಲಂಜಿ ಹನುಮನ । ಸುತ್ತಿ ದೂರದೊಳಿಹ ಮರುಳ್ಗಳ
ಮೊತ್ತವನು ಬಗಿದೆಜಿಗುತಖಿಳ ವಿಹಂಗಮವ್ರಜವ
ಹತ್ತುಗೆಯ ಕರತಾಳದಲಿ ಕೆದ । ಱುತ್ತ ಬರೆಬರೆ ದೂರದಲಿ ದೂ
ಹತ್ತಿಯಲಿ ಕಡಿವಡೆದ ಸೀತೆಯ ಕಂಡನಜಸೂನು ೪೨

ದೃಗುಜಲಗಳೊಱತೆಗಳ ತೋಳ । ಪ್ಪುಗೆಯ ವಿಗತೋತ್ಸವದ ಸಮರದ
ನಗಮಹೀರುಹ ಮುಕ್ತಹಸ್ತರ ನೋಡುತೈತರಲು
ತೆಗೆದ ಹರುಷದಲೂರ್ವರೆಗೆ ಮೈ । ದೆಗಹನಿಕ್ಕಿದ ರಾಮಭೃತ್ಯನ
ಜಗದ ಜೀವಕುಮಾರಕನ ಕಂಡಂಜಿ ನಿಂದಿರ್ದ ೪೩

ಕಳುಹಿಸಿಕೊಟ್ಟನು. ೪೦. ಬಾ ವಿಭೀಷಣ, ನೀನು ಅಗ್ನಿಕುಮಾರ ನೀಲನ ಬಳಿಗೆ ನಡೆ" ಅಲ್ಲಿಯ ವಿಚಾರವನ್ನು ತಿಳಿದು ನೀವು ಇಷ್ಟು ವಿಘಳಿಗೆಗೆ ಬರಬೇಕು ಎಂದು ಹೇಳಿ ಅವರನ್ನು ಕಳುಹಿಸಿಕೊಟ್ಟನು. ಹೀಗೆ ರಾಮನು ಚಿಂತೆಯನ್ನು ಬೆಳೆಸಿಕೊಂಡಿರಲು ಹನಮಂತನ ಬಳಿಗೆ ಬ್ರಹ್ಮಪುತ್ರ ಜಾಂಬವನು ಅಳುಕುತ್ತ ಬಂದನು. ೪೧. ಅಖಂಡ ಬಲ ಶಾಲಿ ಜಾಂಬವಂತನು ದಾರಿಯಲ್ಲಿ ಬರುತ್ತ ಯುದ್ಧಭೂಮಿಯಲ್ಲಿ ಬಲವಾದ ಕೈಯೇಟಿನಿಂದ ಸತ್ತುಬಿದ್ದ ಆನೆಗಳ ಪಡೆಯನ್ನೂ, ಒದೆತದಿಂದ ಸತ್ತ ಪದಾತಿಸೈನ್ಯವನ್ನೂ ಮರವನ್ನಪ್ಪಳಿಸಿದುದರಿಂದ ಕುಸಿದುಬಿದ್ದ ಕುದುರೆಗಳ ಮತ್ತು ರಥಗಳ ಸಮೂಹವನ್ನು ನೋಡಿ 'ಹಾ, ಮಹಾದೇವ !' ಎಂದು ಉದ್ಗರಿಸಿದ. ೪೨. ಜಾಂಬವನು ಹನುಮನ ಹತ್ತಿರಕ್ಕೆ ಬರಲು ಹೆದರಿ ಬಳಸಿಕೊಂಡು ಬಂದು ದೂರದಲ್ಲಿದ್ದ ಪಿಶಾಚಿಗಳ ಸಮೂಹವನ್ನು ಭೇದಿಸಿಕೊಂಡು ಹೋಗಿ ಹಾರಾಡುತ್ತಿದ್ದ ಹದ್ದುಗಳ ಮೇಲೆರಗಿ ಎತ್ತಿದ ಕೈಗಳಿಂದ ಅವುಗಳನ್ನು ಚದುರಿಸಿ ಮುಂದೆ ಬರುತ್ತಿರಲು ದೂರದಲ್ಲಿ ಎರಡು ಭಾಗವಾಗಿ ಕತ್ತಿಯಿಂದ ಕತ್ತರಿಸಿ ಬಿದ್ದಿದ್ದ ಸೀತೆಯನ್ನು ಕಂಡನು. ೪೩. ಕಣ್ಣೀರು ಹರಿಸುತ್ತ ಕೈಕಟ್ಟಿಕೊಂಡು ಉತ್ಸಾಹಹೀನರಾಗಿ ಬೆಟ್ಟಮರಗಳನ್ನು ಎಸೆದು ಬರಿಗೈಯಲ್ಲಿ ನಿಂತಿರುವ ವಾನರರನ್ನು ನೋಡುತ್ತ ಬರಲು ಹರ್ಷಗುಂದಿ ನೆಲಕ್ಕೆ ಮೈಚೆಲ್ಲಿದ್ದ ಜಗತ್ತಿಗೆ ಪ್ರಾಣದಾಯಕನಾದ ರಾಮಕಿಂಕರನನ್ನು ಕಂಡು ಜಾಂಬವನು ಭಯಗೊಂಡು ನಿಂತನು.

ಕಂಡನೀ ಕೌತುಕವ ಮುಮ್ಮುಳಿ । ಗೊಂಡು ಮನದಲಿ ಪವನಜನ ದೋ
ರ್ದಂಡವನು ಪಿಡಿದೆತ್ತಿ ಕರುಣರಸಾತಿರೇಕದಲಿ
ಅಂಡಲೆವ ಶೋಕದಲಿ ಸರವನಿ । ಗೊಂಡೊಗುವ ಕಂಬನಿಗಳಲಿ ಬೆಸ
ಗೊಂಡನೇನಾಯ್ತೆಂದು ಜಾಂಬವನಂಜನಾಸುತನ ೪೪

ಚಿತ್ತವಿಸಿದಿರೆ ಜಾಂಬವರೆ ಜನ । ಪೋತ್ತಮನ ಲಲಿತಾಂಗಿಯನು ಮುಗಿ
ಯಿತ್ತು ಕಂಡಿರೆ ರಾಜಕಾರಿಯು ರಾಘವೇಶ್ವರನ
ಕತ್ತಲೆಗೆ ಠಾವಾಯ್ತು ಬೆಳಗಡ । ಗಿತ್ತು ಹಗೆ ತಾನಿನ್ನು ರಣದಲಿ
ಸತ್ತರೇನಿದ್ದೇನು ಕಂಡಿರೆ ಕೇಡ ನೀವೆಂದ ೪೫

ಕಲಹಕಿದು ಕಡೆಯೆಂದು ಸೀತೆಯು । ನೆಳೆದುತಂದನು ಸರಿಸಕಾಖಂ
ಡಲವಿರೋಧಿ ವಿಘಾಡಿಸಿದನವನಿಜೆಯು ತನುಲತೆಯು
ಗೆಲವು ಸಿದ್ಧಿಸದಾಯ್ತು ಹೊತ್ತವು । ಕೊಲೆಹೊಲೆಗಳೆನ್ನುವನು ದ್ರೋಹಕೆ
ಕಲಶವಾದೆನು ರಾಮನೇನೆಂದೆಂಬನೋಯೆಂದ ೪೬

ಅನುವರದೊಳರಿಭಟನ ಜೀವವ । ಜಿನುಗಿಸದೆ ಜಾನಕಿಯು ಕೊಲಿಸುವು
ದನುನಯವೆ ನಿನಗೆಂದು ರಘುರಾಜೇಂದ್ರನೆನ್ನೊಡನೆ
ಮುನಿಯದಿರನನ್ಯಾಯ ಹೋಗೆಂ । ದಿನಜ ಮೋಱೆಯು ತಿರುಹದಿರನಿ
ನ್ನೆನಗೆ ಗತಿಯೇನೆಂದು ಮಱುಗಿದನಂಜನಾಸೂನು ೪೭

೪೪. ಅತಿಶಯವಾಗಿ ಮನನೊಂದ ಜಾಂಬವನು ಈ ಆಶ್ಚರ್ಯವನ್ನು ಕಂಡನು. ಬಳಿಕ ಜಾಂಬವಂತನು ಹನುಮಂತನ ತೋಳನ್ನು ಹಿಡಿದೆತ್ತಿ ಕರುಣಾತಿಶಯದಿಂದ ತೀವ್ರ ಶೋಕಗೊಂಡು ಕಣ್ಣೀರುಹನಿಗಳನ್ನು ಉದುರಿಸುತ್ತಾ ಏನಾಯಿತು ಎಂದು ಹನುಮಂತನನ್ನು ಪ್ರಶ್ನಿಸಿದನು. ೪೫. "ರಾಜಶ್ರೇಷ್ಠ ರಾಮನ ಸತಿಯನ್ನು ಗಮನಿಸಿದರೆ, ಜಾಂಬವರೇ, ರಾಘವೇಶ್ವರನ ರಾಜಕಾರ್ಯವು ಮುಗಿಯಿತು, ನೋಡಿದಿರಾ. ಕತ್ತಲೆ ಹಬ್ಬಿತು, ಬೆಳಕು ಅಡಗಿತು. ಶತ್ರು ಇನ್ನು ಯುದ್ಧದಲ್ಲಿ ಸತ್ತರೇನು ಇದ್ದರೇನು ? ಈ ಕೇಡನ್ನು ನೀವು ಕಂಡಿರಲ್ಲವೇ?" ಎಂದ ಹನುಮಂತ. ೪೬. "ಇದು ಯುದ್ಧದ ಕೊನೆ ಎಂದು ಹೇಳಿ ಇಂದ್ರಜಿತು ಸೀತೆಯನ್ನು ನನ್ನ ಎದುರಿಗೆ ಎಳೆದುತಂದು ಕೊಂದನು. ನಮಗೆ ಜಯವು ಸಿದ್ಧಿಸದಾಯಿತು, ಕೊಲೆ ಹೊಲೆಗಳನ್ನು ನಾನು ಹೊತ್ತೆ ; ದ್ರೋಹಕ್ಕೆ ಆಶ್ರಯವಾದೆ. ರಾಮನು ಏನೆಂದು ಹೇಳುವನೋ ? " ಎಂದ ಹನುಮಂತ. ೪೭. "ಯುದ್ಧದಲ್ಲಿ ಶತ್ರುವೀರನ ಜೀವವನ್ನು ಹೋಗಲಾಡಿಸದೆ ಜಾನಕಿಯನ್ನು ಕೊಲ್ಲಿಸುವುದು ನಿನಗೆ ನೀತಿಯೆ ಎಂದು ರಘುರಾಮನು ನನ್ನ ಮೇಲೆ ಕೋಪಗೊಳ್ಳದೆ ಇರನು. ಅನ್ಯಾಯ ಮಾಡಿದೆ ಹೋಗು ಎಂದು ಸುಗ್ರೀವನು ಮುಖವನ್ನು ತಿರುಗಿಸಕೊಳ್ಳದೆ ಇರನು.

ಮಱುಗದಿರು ಹನುಮಂತ ನಿನ್ನಲಿ । ಕೊಱತೆಯುಂಟೇ ಮಗನೆ ಜೀವವ
ತೊಱೆದವರನೆಬ್ಬಿಸುವ ದಿವ್ಯೌಷಧಿಗ ನೀನಲ್ಲ
ಮಱೆಯ ಮಾಯಾಸುರರ ಕಪಟದ । ನಿಱುಗೆಯೋ ನಿಜವೋ ವಿಚಾರದಿ
ನಱಿವ ತೆಗೆದಿದಕೊಂಡು ನಡೆ ಮನಗುಂದಬೇಡೆಂದ ೪೮

ಬಳಿಕ ಮಾಯಾರೂಪಕದ ಮೈ । ಥಿಳಿಯ ಖಂಡಿತ ತನುವೆರಡ ತಂ
ದಿಳುಹಿದನು ಮಾಯಾನರೇಂದ್ರನ ಬಳಿಯಲಾ ಹನುಮ
ಎಲೆ ಹನುಮ ಕೇಳೆಮ್ಮ ಹುಯ್ಯಲ । ಕೆಲಸವೇ ತಾನಿದುವೆಯೆಂದಳ
ವಳಿದು ಮೆಲ್ಲನೆ ಮಹಿಗೆ ಮೈಯಿಕ್ಕಿದನು ಮೂರ್ಛೆಯಲಿ ೪೯

ತುಱುಗಿದಶ್ರುಗಳಿಂದ ಮಮ್ಮಲ । ಮಱುಗಿದನು ಸುಗ್ರೀವನಂಬಕ
ದೊಱತೆಗಳ ಬೆರಳುಗಳಲಿದರ್ದು ಬೇಹ ಭಟನಿಕರ
ಅಱಸಿ ತಹೆನೌಷಧಿಯನೇತಕೆ । ಮಱುಕವರಸಂಗೆಂಬ ಗಮನದ
ಹೊಱಿಗೆಯಲಿ ಹನುಮಂತನಿರ್ದನು ಕಂದ ಕೇಳೆಂದ ೫೦

ಎಚ್ಚಱಿಕೆ ತನ್ನಿಮಿಷದಲಿ ಮನ । ದೊಚ್ಚತದ ವಲ್ಲಭೆಯ ನೆನೆಯಿಸಿ
ಬಿಚ್ಚಿಸಿದುದೆವೆಗಳನು ಸೀತೆಯ ಗುಣವು ನಾಲಗೆಗೆ
ಉಚ್ಚರಣೆಗೊಡರಿಸಿತು ದೇಹದ । ಮಚ್ಚು ಮಕರಿಸಿತಱಿವನಾ ನೃಪ
ನಿಚ್ಚಟದಿ ಹಲುಬದನು ಹಲವಂಗದಲಿ ಜಾನಕಿಯ ೫೧

ಇನ್ನು ನನಗೆ ಗತಿಯೇನು” ಎಂದು ಆಂಜನೇಯನು ಮರುಗಿದನು. ೪೮. “ನೀನು ಕೊರಗಬೇಡ ಹನುಮಂತ, ಮಗನೆ, ನಿನ್ನಲ್ಲಿ ದೋಷವಿದೆಯೆ ? ಜೀವ ಹೋದವರನ್ನು ಬದುಕಿಸುವ ದಿವ್ಯವಾದ ಔಷಧಿಯನ್ನು ಕೊಡುವವನು ನೀನಲ್ಲವೆ ? ರಾಕ್ಷಸರ ಮಾಯೆಯ ಮೋಸದ ರೀತಿಯೋ ಇದು, ಇಲ್ಲ ನಿಜವೋ ಎಂಬುದನ್ನು ವಿಚಾರಮಾಡಿ ತಿಳಿಯೋಣ. ಈಗ ಈ ದೇಹವನ್ನು ತೆಗೆದುಕೊಂಡು ನಡೆ. ಖಿನ್ನನಾಗಬೇಡ” ಎಂದ ಜಾಂಬವಂತ. ೪೯. ತರುವಾಯ ಹನುಮಂತನು ಮಾಯಾರೂಪದ ಸೀತೆಯ ದೇಹದ ಕತ್ತರಿಸಿದ ಎರಡು ತುಂಡುಗಳನ್ನು ಮಾಯಾಮಾನವೇಶ್ವರ ರಾಮನ ಬಳಿಗೆ ತಂದಿಟ್ಟನು. “ಅಯ್ಯಾ ಹನುಮಂತ, ಕೇಳು. ನಮ್ಮ ಯುದ್ಧದಿಂದಾದ ಕಾರ್ಯವೇ ಇದು ?” ಎಂದು ರಾಮನು ಶಕ್ತಿಗುಂದಿ ಮೂರ್ಛೆಹೋಗಿ ಮೆಲ್ಲಗೆ ನೆಲಕ್ಕೆ ಮೈಗೊಟ್ಟನು. ೫೦. ಕಣ್ಣುಗಳಲ್ಲಿ ನೀರು ತುಂಬಿಕೊಂಡು ಸುಗ್ರೀವನು ಮಮ್ಮಲ ಮರುಗಿದನು. ಮೆಚ್ಚಿನ ಕಪಿವೀರರು ಕಣ್ಣೀರನ್ನು ಬೆರಳಿಂದ ಮಿಡಿಯುತ್ತ ನಿಂತಿದ್ದರು. ‘ಇದಕ್ಕೇಕೆ ಚಿಂತೆ, ಔಷಧಿಯನ್ನು ಹುಡುಕಿ ತರುವೆ’ ಎಂದು ಹೊರಡುವ ಸನ್ನಾಹದಲ್ಲಿ ಹನುಮಂತನಿದ್ದ, ಕುಮಾರ, ಕೇಳು ಎಂದು ವಾಲ್ಮೀಕಿಗಳು ನುಡಿದರು. ೫೧. ಮನಮೆಚ್ಚಿನ ಮಡದಿಯ ನೆನಪು ಒಡನೆ ರಾಮನನ್ನು ಎಚ್ಚರಿಸಿ ಕಣ್ಣೆವೆಗಳನ್ನು ಬಿಡಿಸಿತು. ಸೀತೆಯ ಗುಣವು ರಾಮನ ನಾಲಗೆಯ ಮೇಲೆ ನಲಿದಾಡಿತು. ದೇಹದ ಮೇಲಿನ ಮೋಹವು ತಿಳಿವನ್ನು ಮುಚ್ಚಿಬಿಟ್ಟಿತು. ರಾಮನು ಮುಚ್ಚುಮರೆಯಿಲ್ಲದೆ ಹಲವು ವಿಧವಾಗಿ

ರಾಜವಂಶದೊಳಧಿಕ ನೃಪರುಷಿ । ರಾಜಪರಮೇಶ್ವರನ ನಿಮಿಕುಲ
ರಾಜರಾಜಾಧೀಶ್ವರನ ಸುಕುಮಾರಿಗಕಟಕಟ
ಈ ಜಿಗುಪ್ಸೆಯ ಮರಣವನು ವಿಧಿ । ಯೋಜಿಸಿದನೇ ಸೀತೆ ಹಾ ನಿಮಿ
ರಾಜನಂದನೆ ಹಾಯೆನುತ ಹೊರಳಿದನು ರಘುನಾಥ ೫೨

ತೆಗೆದು ತಕ್ಕೈಸಿದನು ಗುರುಕುಚ । ಯುಗದ ತುಂಡನು ನೋಡಿದನು ನಯ
ನಗಳ ಲವಲವಿಕೆಗಳಲಾನನವನು ನಿತಂಬಿನಿಯ
ಮಗುಳೆ ಮಗುಳಡಿಗಡಿಗೆ ತೆಳುಗದ । ಪುಗಳನಮಳಾಧರವ ಚುಂಬಿಸಿ
ನಗೆನುಡಿಯನೊಡರಿಚುತ ಕರೆಕರೆದಳಲಿದನು ರಾಮ ೫೩

ಸೀತೆ ಸೀತೆ ವಿದೇಹಸುತೆ ಭೂ । ಜಾತೆ ಭುವನಖ್ಯಾತೆ ಕೇಳಿ
ನ್ನೇತಕೆನ್ನೊಳು ನುಡಿಯೆ ಬಲ್ಲೆನು ನಿನ್ನ ಮನಮುನಿಸ
ಶಾತಕುಂಭದ ಮೃಗವ ತಾರದ । ಖಾತಿಯೋ ತಪ್ಪುಂಟು ತನ್ನಲಿ
ಮಾತು ಹುಸಿದುದು ಕೈಮುಗಿದೆವಾವಿನ್ನು ನುಡಿಯೆಂದ ೫೪

ಹಗೆಯ ಕೊಲಲರಿಯದೆ ಛಲೋಕ್ತಿಯ । ನಗಲಿಸಿದನೆಂದೆಂಬ ಮನಸಿನ
ಬಿಗುಹ ಬಿಡು ನಂಬುಗೆಯ ಕೋ ಕೊಲುವೆನು ದಶಾನನನ
ನಗೆಮುಸುಡ ಮಾಡಿನ್ನು ನುಡಿ ಮಾ । ತುಗಳು ಹೊಱವಡಲೆನ್ನ ಕೂಡಿನಿ
ತಗದುತನವೇಕಕಟ ಕೃಪೆ ನಿನಗಿಲ್ಲವೇಯೆಂದ ೫೫

ಜಾನಕಿಯನ್ನು ಕುರಿತು ದುಃಖಿಸಿದನು. ೫೨. 'ರಾಜವಂಶಶ್ರೇಷ್ಠನಾದ ರಾಜರ್ಷಿಯೆನ್ನಿಸಿಕೊಂಡ ರಾಜಾಧಿರಾಜ ನಿಮಿಕುಲ ಚಕ್ರವರ್ತಿಯ ಕೋಮಲೆಯಾದ ಕುಮಾರಿಗೆ ಈ ಅಸಹ್ಯ ಮರಣವನ್ನು ವಿಧಿ ಆಲೋಚಿಸಿದನೇ! ಹಾ ಸೀತೆ! ಹಾ ನಿಮಿರಾಜಕುಮಾರಿ!' ಎಂದು ಹಲುಬುತ್ತ ರಘುನಾಥನು ನೆಲದಮೇಲೆ ಹೊರಳಾಡಿದನು. ೫೩. ಸ್ತನಗಳಿದ್ದ ದೇಹದ ಭಾಗವನ್ನು ರಾಮನು ತೆಗೆದು ಅಪ್ಪಿಕೊಂಡನು. ಸೀತೆಯ ಮುಖವನ್ನು ಉತ್ಸಾಹಿತ ಕಣ್ಣುಗಳಿಂದ ನೋಡಿದನು. ನಯವಾದ ಕೆನ್ನೆ ಮತ್ತು ಚಂದದ ತುಟಿಗಳನ್ನು ಮತ್ತೆ ಮತ್ತೆ ಮುತ್ತಿಟ್ಟು ನಗುಮಾತುಗಳನ್ನಾಡುತ್ತ ಸೀತೆಯನ್ನು ಕರೆಕರೆದು ದುಃಖಿಸಿದನು. ೫೪. "ಸೀತೆ, ಸೀತೆ! ವೈದೇಹಿ! ಭೂಸುತೆ! ಭುವನಖ್ಯಾತೆ! ನನ್ನೊಡನೆ ಏತಕ್ಕೆ ಮಾತನಾಡುವುದಿಲ್ಲ. ನಿನ್ನ ಮನಸ್ಸಿನ ಮುನಿಸು ನನಗೆ ಗೊತ್ತು. ಚಿನ್ನದ ಜಿಂಕೆಯನ್ನು ತರಲಿಲ್ಲವೆಂಬ ಕೋಪವೇ? ನನದು ತಪ್ಪಾಯಿತು, ನನ ಮಾತು ಸುಳ್ಳಾಯಿತು. ಕೈಮುಗಿದೆ, ಮಾತನಾಡು" ಎಂದ ರಾಮ. ೫೫. ಶತ್ರುವನ್ನು ಕೊಲ್ಲಲು ತಿಳಿಯದೆ ಪ್ರತಿಜ್ಞೆಯನ್ನು ತಪ್ಪಿದೆ ಎಂಬ ಮನಸ್ಸಿನ ಕಾಠಿಣ್ಯವನ್ನು ಬಿಡು. ನಂಬಿಕೆ ಕೊಡುತ್ತೇನೆ, ಇಗೋ ದಶಮುಖನನ್ನು ಕೊಲ್ಲುವೆನು, ನಗುಮುಖ ಮಾಡು. ಇನ್ನು ಮಾತನಾಡು, ಮಾತುಗಳು ಬಾಯಿಂದ ಹೊರಡಲಿ. ನನ್ನೊಡನೆ ಇಷ್ಟೊಂದು

ಏಕಪತ್ನಿವ್ರತದ ನಿಷ್ಠೆಯ । ನೂಕಿದೆನೆ ನಡವಳಿಯುನವುಲಿ
ಕ್ಷ್ವಾಕುಕುಲಜರ ಕೀರ್ತಿಯನು ಕೆಡಿಸಿದೆನೆ ದುಷ್ಕೃತಿಗೆ
ಸೋಕಿದೆನೆ ಶ್ರುತಿಮತಕೆ ಸಲ್ಲದ । ಕಾಕರನು ಕೂಡಿದೆನೆ ತನ್ನೊಡ
ನೇಕೆ ನೀ ಮಾತಾಡೆ ನಿನಗಿದು ಗುಣವೆ ಹೇಳೆಂದ ೫೬

ಕಾಪುರುಷನನು ಕೈವಿಡಿದು ನಿನ । ಗೀಪರಿಯಲುಣಲಿರ್ದುದೇ ಹೀ
ನೋಪನನು ಹಿಡಿದಡವಿಗಯ್ತುವುದಾದುದೇಯಕಟ
ಪಾಪಕರ್ಮನ ಪಲಿತ ಶೌರ್ಯನ । ಕಾಪಥನ ಕಾರುಣ್ಯಹೀನನ
ವೈಪರೀತ್ಯನ ವರಿಸಿದುದಕಿನಿತಾಯ್ತೆ ನಿನಗೆಂದ ೫೭

ವನಕೆ ಬರಬೇಡೆಂದು ನುಡಿದಡೆ । ಮನಕೆ ತಾರದೆ ಬಂದೆ ನಿನ್ನಯ
ಜನಕ ಕೇಳಿದಡೇನ ಹೇಳುವೆ ಮತಿಯದೇನೆನಗೆ
ಜನನಿಯರಿಗೇನೆಂಬೆ ಭರತಂ । ಗನುಜ ಶತ್ರುಘ್ನರಿಗೆ ಸೀತೆಯ
ಲನುವರದ ರಣಬಲಿಗೆ ಚಾಚಿದೆನೆಂಬೆನೇಯೆಂದ ೫೮

ಇನ್ನು ಹಗೆಯನು ಕೊಂದು ಕಾಬ ಮ । ಹೋನ್ನತಿಕೆಯೆನಗಾವುದಕಟೆನ
ಗಿನ್ನು ನಿನ್ನಯ ಮರಣದಲಿ ಮರಳಿನ್ನು ಜೀವಿಸುವ
ಮನ್ನಣೆಯ ಬದುಕಾವುದೆಲೆ ಸಂ । ಪನ್ನ ಸೊಬಗಿನ ಕಣಿಯೆ ಕಾಮನ
ಕನ್ನಡಿಯೆ ರತಿಪತಿಯ ಮುಂಗೈಗಿಣಿಯೆ ಹೇಳೆಂದ ೫೯

ಹಟವೇತಕ್ಕೆ ? ನಿನ್ನಲ್ಲಿ ದಯೆಯಿಲ್ಲವೇ ?" ಎಂದ ರಾಮ. ೫೬. "ಏಕಪತ್ನಿವ್ರತವನ್ನು ನನ್ನ ನಡವಳಿಕೆಯಲ್ಲಿ ತ್ಯಜಿಸಿದೆನೆ ? ಪವಿತ್ರ ಇಕ್ಷ್ವಾಕುವಂಶದವರ ಹೆಸರನ್ನು ಕೆಡಿಸಿದೆನೆ ? ವೇದಗಳಿಗೆ ವಿರೋಧವಾದ ದುಷ್ಕಾರ್ಯಕ್ಕಿಳಿದೆನೆ ? ದುಷ್ಟರ ಜತೆಗೂಡಿದೆನೆ ? ನನ್ನೊಡನೆ ನೀನೇಕೆ ಮಾತಾಡುವುದಿಲ್ಲ. ನಿನಗಿದು ಭೂಷಣವೆ, ಹೇಳು" ಎಂದ ರಾಮ. ೫೭. "ಕ್ಷುದ್ರಮನುಷ್ಯನ ಕೈಹಿಡಿದು ನೀನು ಈ ರೀತಿಯಲ್ಲಿ ಕಷ್ಟವನ್ನು ಭೋಗಿಸಬೇಕಾಯಿತೇ ? ಈ ಕೀಳುವ್ಯಕ್ತಿಯ ಜತೆಗೂಡಿದುದರಿಂದ ಕಾಡಿಗೆ ಬರುವಂತಾಯಿತೇ ? ಅಯ್ಯೋ ಈ ಪಾಪಕರ್ಮಿಯನ್ನು, ಶೌರ್ಯ ಮುಪ್ಪಡಿಸಿದವನನ್ನು ದುರ್ಮಾರ್ಗಿಯನ್ನು, ಈ ಕರುಣೆಯಿಲ್ಲದವನನ್ನು, ಅಸಂಬದ್ಧನನ್ನು ಮದುವೆಯಾದುದಕ್ಕೆ ನಿನಗೆ ಇಷ್ಟಾಯಿತೇ ?" ಎಂದು ರಾಮ ಮರುಗಿದ. ೫೮. "ಅಡವಿಗೆ ಬರಬೇಡ ಎಂದು ಹೇಳಿದುದನ್ನು ಮನಸ್ಸಿಗೆ ತಂದುಕೊಳ್ಳದೆ ಬಂದೆ. ನಿನ್ನ ತಂದೆ ಕೇಳಿದರೆ ಏನು ಹೇಳಲಿ, ಏನು ಬುದ್ಧಿ ನನಗೆ ? ತಾಯಂದಿರಿಗೆ ಏನುತ್ತರ ಕೊಡಲಿ, ಸೀತೆಯನ್ನು ಕದನದಲ್ಲಿ ರಣಬಲಿ ಕೊಟ್ಟೆ ಎಂದು ಭರತ ಶತ್ರುಘ್ನರಿಗೆ ಹೇಳಲೇ" ಎಂದು ಮರುಗಿದ ರಾಮ. ೫೯. ಇನ್ನು ಶತ್ರುವನ್ನು ಕೊಂದು ಪಡೆಯುವ ಮಹೋನ್ನತಿ ಏನಿದೆ ? ನೀನು ಸತ್ತ ಬಳಿಕ ನಾನು ಬದುಕಿ ಗಳಿಸುವ ಗೌರವದ ಬಾಳು ಯಾವುದು ಹೇಳು, ನನ್ನ ಸೊಬಗಿನ ಗಣಿಯೆ. ಕಾಮನ ಕನ್ನಡಿಯೆ, ಮನ್ಮಥನ ಮುಂಗೈಮೇಲಾಡುವ ಗಿಣಿಯೆ !" ಎಂದ ರಾಮ.

ಸೇವೆಯಲಿ ತೊತ್ತಾಗಿಯಿಹೆ ವಿ । ಜ್ಞಾವಿಶೇಷಕೆ ಮಂತ್ರಿಯಾಗಿಹೆ
ಭಾವಿಸಲು ಸಖಿ ಮಾಳ್ಪ ಪರಮಸ್ನೇಹವನು ಮಾಳ್ಪೆ
ಶೀವಿದತಿಶಯ ರತಿಗೆ ವಿವಿಧ ಕ । ಲಾವಿಚಿತ್ರದ ಕುಶಲೆಯಾಗಿಹೆ
ಭೂವಧುವಿನಂತೆಮಗೆ ತೋಱುವೆ ಸೈರಣೆಯೊಳೆಂದ ೬೦

ಮಱೆವೆನಾನಿನ್ನಾವ ಪರಿಯಲಿ । ಮಱೆವ ತೆಱದಲಿ ಗುಣವ ನಿನ್ನಲಿ
ತೆಱಹನೆಳ್ಳನಿತುವನು ಕಾಣೆನು ಸೀತೆ ಹೇಳೆನುತ
ಮಱುಗಿದನು ಮನದಲಿ ಮನೋರಥ । ದುಱುವ ಕಲ್ಪಮಹೀಜವಕಟಾ
ಮುಱಿಯಿತೇಯಿಂದಿನಲಿ ತನಗೆನುತಳಲಿದನು ರಾಮ ೬೧

ರೂಪ ನೆನೆನೆನೆದೊಮ್ಮೆ ಸುರತಾ । ಳಾಪದಭಿನಯಕೊಮ್ಮೆ ಪತಿಸೇ
ವಾಪರಿಷ್ಕೃತಿಗೊಮ್ಮೆ ಸಚ್ಚರಿತಾನುರಂಜನೆಯ
ನೈಪುಣತೆಗೊಮ್ಮೊಮ್ಮೆ ಸಕಲ ಕ । ಲಾಪರಿಗ್ರಹಕೊಮ್ಮೆ ನಿರ್ಜಿತ
ಕೋಪಮುಖಕೊಮ್ಮೊಮ್ಮೆ ನೆನೆನೆನೆದಳಲಿದನು ರಾಮ ೬೨

ಬಂದನಾ ಸಮಯದಲಿ ಮಾನವ । ರಂದದಲಿ ಹಳವಿಸುವ ಹರಿಯೆಡೆ
ಗಿಂದುಧರನ ಸಮಾನನಘದೂಷಣ ವಿಭೀಷಣನು
ನಿಂದು ನೋಡಿದನುಭಯ ನಾಟಕ । ದಂದವನು ಸರ್ವಜ್ಞನಲ್ಲಾ
ಕಂದ ಕೇಳಾ ಶರಣಜನದಾಭರಣನಿಂತೆಂದ ೬೩

೬೦. "ನೀನು ಸೇವೆಯಲ್ಲಿ ದಾಸಿಯಂತಿರುವೆ ; ವಿಶೇಷ ಜ್ಞಾನದಿಂದ ಮಂತ್ರಿಯಾಗಿರುವೆ; ಸ್ನೇಹಿತನು ತೋರಿಸುವ ಅತಿಶಯ ಸ್ನೇಹವನ್ನು ನನ್ನಲ್ಲಿ ಇಟ್ಟಿರುವೆ, ಅತಿಶಯವಾದ ಮನ್ಮಥಕ್ರೀಡೆಯಲ್ಲಿ ವಿವಿಧ ಕಲಾಕುಶಲೆಯಾಗಿರುವೆ, ಭೂಮಿಯಂತೆ ಸೈರಣೆಯನ್ನು ತೋರಿಸುವೆ" ಎಂದ ರಾಮ. ೬೧. "ನಾನು ನಿನ್ನನ್ನು ಹೇಗೆ ಮರೆಯಲಿ ? ನಾನು ನಿನ್ನನ್ನು ಮರೆಯುವಂಥ ಗುಣಗಳ ಅಭಾವ ಯಾವುದನ್ನೂ ನಿನ್ನಲ್ಲಿ ಕಾಣೆ, ಸೀತೆ ಹೇಳು" ಎನ್ನುತ್ತ ರಾಮನು ಮನಸ್ಸಿನಲ್ಲಿ ಮರುಗಿದನು. ತನ್ನ ಮನೋರಥದ ಕಲ್ಪ ವೃಕ್ಷವು ಇಂದು ಮುರಿದುಹೋಯಿತೇ ಎಂದು ರಾಮನು ದುಃಖಿಸಿದನು. ೬೨. ಸೀತೆಯ ರೂಪವನ್ನು ನೆನೆಸಿಕೊಂಡು ಒಮ್ಮೆ, ರತಿಕ್ರೀಡೆಯ ಸಮಯದ ಸಂಭಾಷಣೆಯ ಹಾವಭಾವಗಳನ್ನು ಸ್ಮರಿಸಿಕೊಂಡು ಒಮ್ಮೆ, ಪತಿಸೇವೆಯ ಅಚ್ಚುಗಟ್ಟನ್ನು ನೆನೆಸಿಕೊಂಡು ಒಮ್ಮೆ, ಒಳ್ಳೆಯ ನಡತೆಯಿಂದ ಸಂತೋಷಪಡಿಸುತ್ತಿದ್ದ ನೈಪುಣ್ಯವನ್ನು ನೆನೆಸಿಕೊಂಡು ಒಮ್ಮೆ, ಸಮಸ್ತಕಲಾಕಾರ್ಯಚತುರತೆಗೆ ಒಮ್ಮೆ, ಕೋಪವನ್ನು ತ್ಯಜಿಸಿದ ಮುಖ ಸೌಂದರ್ಯಕ್ಕೆ ಒಮ್ಮೆ ಎಂಬಂತೆ ರಾಮನು ವಿಪುಲವಾಗಿ ಶೋಕಿಸಿದನು. ೬೩. ಆ ಹೊತ್ತಿಗೆ ಸಾಮಾನ್ಯ ಮನುಷ್ಯನಂತೆ ಪ್ರಲಾಪಿಸುತ್ತಿದ್ದ ವಿಷ್ಣುವಿನ ಬಳಿಗೆ ಚಂದ್ರಶೇಖರ ನಿಗೆ ಸಮಾನನಾದ ಪಾಪರಹಿತನಾದ ವಿಭೀಷಣನು ಬಂದನು. ಬಂದು ನಿಂತು ಎರಡೂ ಕಡೆಯ ನಾಟಕದ ರೀತಿಯನ್ನು ನೋಡಿದನು. ಸರ್ವಜ್ಞನಲ್ಲವೇ, ಕುಶ ಕೇಳು, ಭಕ್ತ

ದೇವ ನೀ ದಿಟ ನರನೆ ಸೀತಾ । ದೇವಿ ತಾ ಮಾನಿನಿಯೆ ದಿಟ ಮಾ
ಯಾವಿಲಾಸಕೆ ಮಱುಗುವರೆ ಸರ್ವಜ್ಞರಾದವರು
ಹಾವುಗಳ ಹಜ್ಜೆಯನು ಬಲ್ಲವು । ಹಾವು ನಮ್ಮಾಯಾಸುರಾಂಗವ
ನಾವು ಬಲ್ಲೆವು ಬಿಡು ವೃಥಾ ನಾಟಕವ ನೀನೆಂದ ೬೪

ಇದು ಕಣಾ ಮಾಯಾವಿಗಳು ಮಾ । ಡಿದ ಮಹಾ ಶಾಂಬರದ ಕೆಲಸದ
ಸುದತಿ ಸುಳಿದರೆ ಬಲ್ಲೆವಾವ್ ನಮ್ಮವರ ಮಾಯೆಗಳ
ಇದಕೆ ಚಿಂತಿಸಬೇಡ ಮೇಲಣ । ಹದಕೆ ಕಾರ್ಯವ ನೆನೆವುದೇ ತಾ
ವಿದಿತ ವಿಪ್ರಲಾಪವಿದು ತಾ ವ್ಯರ್ಥ ನಿಮಗೆಂದ ೬೫

ಕಳುಹು ಹನುಮನನೆನ್ನೊಳೊಬ್ಬನ । ಕಳುಹುವೆನು ನೀವ್ ನಂಬದಿರೆ ಮಂ
ಗಲಿಯ ಮನುಕುಲರಾಜಪತ್ನಿಯ ಪರಮ ಸುವ್ರತೆಯ
ಕುಲಯುತೆಯ ಕಲ್ಮಷವಿಹೀನೆಯ । ಕಲಿಮಲಪ್ರಧ್ವಂಸಿನಿಯ ನಿ
ರ್ಮಲೆಯನೀಕ್ಷಣ ನೋಡಿಬರಲೆಲೆ ದೇವ ಕೇಳೆಂದ ೬೬

ಅಲ್ಲಿ ಸೀತಾದೇವಿಯರು ಬಳಿ । ಕಿಲ್ಲದಿರೆ ನಿಮ್ಮಂಘ್ರಿಸೇವೆಗೆ
ಸಲ್ಲದವ ನಾನ್ನೆಸಲೇ ಬಿಡು ಮನದ ಸಂಶಯವ
ಕೆಲ್ಲಗೌಕಿ ವಿಲಾಪವನು ಹುಸಿ । ಯಿಲ್ಲ ತನ್ನಲಿ ಕಳುಹಿಯೆನೆ ಕರ
ಪಲ್ಲವದ ಸಂಜ್ಞೆಯಲಿ ಕಳುಹಿದನರಸನನಿಲಜನ ೬೭

ವಿಭೀಷಣನು ಮುಂದಿನಂತೆ ನುಡಿದ. ೬೪. ಸ್ವಾಮಿ ನೀನು ನಿಜವಾಗಿ ಮಾನವನೆ ? ಸೀತಾದೇವಿ ಮಾನವಸ್ತ್ರೀಯೆ ? ಸರ್ವಜ್ಞರಾದವರು ಮಾಯಾವಿಲಾಸಕ್ಕೆ ದುಃಖಿಸುತ್ತಾರೆಯೆ ? ಹಾವುಗಳ ಹೆಜ್ಜೆಯನ್ನು ಹಾವುಗಳು ಬಲ್ಲವು. ನಮ್ಮ ಈ ರಾಕ್ಷಸಕಾರ್ಯ ರೀತಿಯನ್ನು ನಾವು ಬಲ್ಲೆವು. ವ್ಯರ್ಥವಾದ ಈ ನಟನೆಯನ್ನು ಬಿಡು" ಎಂದ ವಿಭೀಷಣ. ೬೫. "ಇದು ಮಾಯಾವಿಗಳು ನಡೆಸಿರುವ ಇಂದ್ರಜಾಲದ ಕಾರ್ಯ. ಅದರಿಂದ ಸೃಷ್ಟಿಯಾದ ಮಾಯಸ್ತ್ರೀ ಇವಳು, ನೋಡಿದರೆ ಸಾಕು ನಮ್ಮವರ ಮಾಯೆಯನ್ನು ನಾವು ತಿಳಿಯುವೆವು. ಇದಕ್ಕಾಗಿ ಚಿಂತಿಸಬೇಡ. ಮುಂದಿನ ಫಲಿತಾಂಶಕ್ಕೆ ತಕ್ಕ ಕೆಲಸವನ್ನು ಯೋಚಿಸುವುದು ಯೋಗ್ಯವಾದುದು. ನೀವು ಸುಮ್ಮನೆ ಪ್ರಲಾಪಿಸುವುದು ವ್ಯರ್ಥ" ಎಂದ ವಿಭೀಷಣ. ೬೬. ಸ್ವಾಮಿ, ನನ್ನ ಮಾತನ್ನು ನೀವು ನಂಬದಿದ್ದರೆ ಹನುಮಂತನನ್ನು ಕಳಿಸಿ, ನಮ್ಮವರಲ್ಲಿ ಒಬ್ಬನನ್ನು ಜತೆಗೆ ಕಳುಹಿಸುತ್ತೇನೆ. ಅವರು ಹೋಗಿ ಮಂಗಳಕರಳಾದ ಮನುಕುಲರಾಜಪತ್ನಿಯನ್ನು, ಪರಮ ಸುವ್ರತೆಯೂ ಕುಲೀನಳೂ, ಕಳಂಕರಹಿತಳೂ, ಪಾಪನಿವಾರಕಳೂ ಆದ ನಿರ್ಮಲೆಯನ್ನು ಈ ಕ್ಷಣ ಕಂಡುಬರಲಿ" ಎಂದು ನುಡಿದ ವಿಭೀಷಣ. ೬೭. "ಅಲ್ಲಿ ಸೀತಾದೇವಿಯವರು ಇಲ್ಲದಿದ್ದ ಪಕ್ಷಕ್ಕೆ ನಾನು ನಿಮ್ಮ ಪಾದಸೇವೆಗೆ ಸಲ್ಲದವನಾಗುವೆನು. ಮನಸ್ಸಿನ ಸಂಶಯವನ್ನು ಬಿಡಿ. ನಿಮ್ಮ ಅಳುವನ್ನು ಪಕ್ಕಕ್ಕೆ ತಳ್ಳಿ. ನನ್ನಲ್ಲಿ ಸುಳ್ಳಿಲ್ಲ, ಕಳುಹಿಸಿಕೊಡಿ" ಎಂದು ವಿಭೀಷಣನು ಹೇಳಲು ರಾಮನು ಕೈಸಂಜ್ಞೆಯ ಮೂಲಕ ಹನುಮಂತನನ್ನು ಕಳುಹಿಸಿ

ಸಚಿಳನೆಲ್ಲಾ ಹನುಮ ಶರಣನ । ಸಚಿವ ಸಹ ನಡೆತಂದನಿಂದ್ರಿಯ
ಶುಚಿಯಶೋಕಾವನದಿ ಕಂಡನು ಲೋಕಪಾವನೆಯ
ಪ್ರಚುರ ಪುಣ್ಯಾಂಗನೆಯ ಜಯಜಯ । ವಚನದಲಿ ಕೈಮುಗಿದು ತಿರುಗಿದ
ನಚಲ ಧೀರೋದಾತ್ತನೆಡೆಗಪರಾಹ್ಣ ಸಮಯದಲಿ ೭೮

ದೇವಿಯರು ದೇವರ ಗುಣಸ್ತವ । ಸೇವೆಯಲಿ ಸಜ್ಜೀವಿಗಳು ಮಾ
ಯಾವಿಯೊಡ್ಡಿದ ಮಾಯೆಯಿದು ನಿಜಶರಣನೆಂದಂತೆ
ಆವ ಸಂಶಯವಿಲ್ಲ ಹೊಲ್ಲಹ । ಕೋಪದಿರಿಯೆನೆ ವರವಿಭೀಷಣ
ದೇವನನು ಕೊಂಡಾಡಿದರು ಕಮಲಜಸುತಾದಿಗಳು ೭೯

ಮುಟ್ಟಲಾ ಹರಿಶರಣನಾಕ್ಷಣ । ಬಟ್ಟಬಯಲಾಯ್ತಿಂದ್ರಜಿತು ಕರು
ವಿಟ್ಟ ಮಾಯಾರೂಪು ರಾಮಾದ್ಯಖಿಳ ಕಪಿಬಲದ
ದಿಟ್ಟ ಗಹಗಹಿಸಿದ ಗುಡಿಗಳ । ಕಟ್ಟಿದುದು ಸುರಸೇನೆ ದಿವಿಜರ
ಪಟ್ಟಣದಲೊದಜಿದವು ಬಹುವಿಧವಾದ್ಯಸಂದೋಹ ೮೦

ಪೊಡವಿಪನ ಸಹಭವನ ಹರುಷದ । ಹಡಗು ತಿರುಗಿತು ರಘುಪತಿಯ ಕೈ
ಯೆಡೆಯ ಶಿಶು ಹೋಗಿದನು ಹೊಂಪುಳಿಯೋದನಾ ನೀಲ
ಅಡಗಿದುದು ಬಳಿಕಭ್ರದಿಂ ನಡು । ಗಡಲೊಳಗೆ ರವಿಬಿಂಬ ರಘುಕುಲ
ದೊಡೆಯ ತೊರವೆಯರಾಯ ಹೊಕ್ಕನು ತನ್ನ ಪಾಳಯವ ೮೧

ಕೊಟ್ಟನು. ೭೮. ಹನುಮಂತನು ಚುರುಕಲ್ಲವೇ ! ವಿಭೀಷಣನ ಸಚಿವನೊಡನೆ ಬಂದು ಇಂದ್ರಿಯಶುಚಿಯಾದ ಅಶೋಕವನದಲ್ಲಿ ಲೋಕಪಾವನೆಯೂ ಪುಣ್ಯಸ್ತ್ರೀಯೂ ಆದ ಸೀತೆಯನ್ನು ಕಂಡನು. ಹನುಮಂತನು ಜಯ ಜಯ ಎಂದು ಸೀತೆಗೆ ಕೈಮುಗಿದು ದೃಢ ಚಿತ್ತನೂ ಉದಾತ್ತವೀರನೂ ಆದ ರಾಮನ ಬಳಿಗೆ ಮಧ್ಯಾಹ್ನದ ಸಮಯಕ್ಕೆ ಹಿಂದಿರುಗಿ ಬಂದನು. ೭೯. "ಸ್ವಾಮಿಯವರ ಗುಣಗಳನ್ನು ಸ್ತುತಿಸುತ್ತ ದೇವಿಯವರು ಬದುಕಿದ್ದಾರೆ. ನಿಮ್ಮ ಭಕ್ತ ವಿಭೀಷಣನು ಹೇಳಿದಂತೆ ಇದು ಮಾಯಾವಿ ಸೃಷ್ಟಿಸಿದ ಮಾಯೆ. ಇದರಲ್ಲಿ ಯಾವ ಸಂದೇಹವೂ ಇಲ್ಲ. ಯಾವ ಸಲ್ಲದ ಕೆಲಸಕ್ಕೂ ಮನಸ್ಸು ಕೊಡಬೇಡಿ" ಎಂದು ಹನುಮಂತನು ಹೇಳಲು ಜಾಂಬವನೇ ಮೊದಲಾದವರು ವಿಭೀಷಣನನ್ನು ಕೊಂಡಾಡಿ ದರು. ೮೦. ವಿಷ್ಣುಭಕ್ತ ವಿಭೀಷಣನು ಮುಟ್ಟಿದ ಒಡನೆ ಇಂದ್ರಜಿತು ಎರಕಹಾಕಿ ಸೃಷ್ಟಿಸಿದ ಮಾಯಾರೂಪವು ರಾಮನೇ ಮೊದಲಾದ ಸಮಸ್ತ ಸೈನ್ಯದ ಕಣ್ಣೆದುರು ಬಟ್ಟ ಬಯಲಾಯಿತು. ಗಹಗಹಸಿ ನಗುತ್ತ ದೇವತೆಗಳ ಸೈನ್ಯವು ರೋಮಾಂಚಗೊಂಡಿತು. ದೇವನಗರಿಯಲ್ಲಿ ಹಲವು ವಿಧದ ವಾದ್ಯಗಳು ಮೊರೆದವು. ೮೧. ರಾಮನ ಸಹೋದರ ಲಕ್ಷ್ಮಣನ ಹರ್ಷದ ಹಡಗು ತಿರುಗಿತು ; ರಘುಪತಿಯ ಪ್ರಿಯಮಗುವಾದ ಅಂಗದನು ಉಬ್ಬಿದನು ; ನೀಲನು ರೋಮಾಂಚಗೊಂಡನು. ಆ ಬಳಿಕ ಆಕಾಶದಿಂದ ಪಶ್ಚಿಮದ ನಡುಗಡಲಿನಲ್ಲಿ ಸೂರ್ಯಬಿಂಬವು ಮುಳುಗಿತು. ತೊರವೆಯೊಡೆಯನ ಅವತಾರಿ ರಘು ಕುಲದೊಡೆಯನು ತನ್ನ ಪಾಳಯವನ್ನು ಪ್ರವೇಶಿಸಿದನು,

412

# ನಲವತ್ತೆರಡನೆಯ ಸಂಧಿ

ಸೂಚನೆ॥ ರಾಯ ರಘುಜಾನುಜನು ರಕ್ಕಸ । ರಾಯದಳವನು ಮುರಿದು ನಿರ್ಜರ
ರಾಯಜಿತುವಿನ ಕ್ರತುವ ಕೆಡಿಸಿದನಂದಿನಿರುಳಿನಲಿ

ಕೇಳಿರೈ ಕಾಕುತ್ಸ್ಥವಂಶವಿ । ಶಾಲರಿರ ಬಲಭಂಜನಾರಿ ಮ
ಹೀಲತಾಂಗಿಯ ಮಗಳ ರೂಪಿನ ಕಪಟ ಕಾಮಿನಿಯ
ಬಾಳಿನಲಿ ಬಳಿಕೈದು ಬವರಕೆ । ತಾಳಲಾರದೆ ಹನುಮನಲಿ ಸೇ
ನಾಳಿ ಸಹಿತೋಸರಿಸಿ ನಿಂದನು ಪುರದ ಬಾಹೆಯಲಿ ೧

ಸೋಲಮುಖದಲಿ ಪುರವ ಹೊಗಲ । ಚ್ಚಾಳುತನಕೂಣಯವು ತನ್ನಯ
ಮೇಲೆ ಬೀಳದೆ ಮಾಣದಯ್ಯಂಗಿತ್ತ ಭಾಷಿತಕೆ
ಖೂಳನಹೆನೆಂದಿಂದ್ರಜಿತು ಹೀ । ಹಾಳಿಯಲಿ ತಮ್ಮನ್ವಯಾಗತ
ದೇಳಿಗೆಯ ಮನೆದೇವತೆಯನೋಲೈಸಲೈತಂದ ೨

ದಳವ ಮೇಳಯಿಸಿದನು ತತ್ಕುಂ । ಭಿಳಿಯ ಶೈಲದ ತಪ್ಪಲಲಿ ನೆಲೆ
ಗೊಳಿಸಿದನು ಸೈನಿಕವ ಸಪ್ತವ್ಯೂಹರಚನೆಯಲಿ
ಬಳಿಕ ಮಾರಣಹೋಮದುದ್ಯೋಗ । ದಳವಡಿಕೆಯಲಿ ರಾಕ್ಷಸದ್ವಿಜ
ಕುಲಸಹಿತ ಹೊಕ್ಕನು ನಿಕುಂಭಿಳೆಯಮಳಮಂಟಪವ ೩

ಸೂಚನೆ॥ ರಾಜಾರಾಮನ ತಮ್ಮ ಲಕ್ಷ್ಮಣನು ಅಂದಿನ ರಾತ್ರಿ ರಾಕ್ಷಸೇಶ್ವರನ ಸೈನ್ಯವನ್ನು ಮುರಿದು ಇಂದ್ರಜಿತುವಿನ ಯಾಗವನ್ನು ಕೆಡಿಸಿದನು. ೧. ಕಾಕುತ್ಸ್ಥವಂಶ ಶ್ರೇಷ್ಠರಾದ ಲವಕುಶಕುಮಾರರೇ ಕೇಳಿ. ಇಂದ್ರಜಿತು ಭೂಸುತೆಯ ರೂಪಿನ ಮಾಯಾ ಸ್ತ್ರೀಯನ್ನು ಕೊಂದು ಹನುಮಂತನೊಡನೆ ಯುದ್ಧಕ್ಕೆ ನಿಲ್ಲಲಾರದೆ ತನ್ನ ಸೈನ್ಯಸಮೇತ ವಾಗಿ ಹಿಂಜರಿದು ಲಂಕಾನಗರದ ಹೊರವಲಯದಲ್ಲಿ ನಿಂತನು ಎಂಬುದಾಗಿ ವಾಲ್ಮೀಕಿ ಮಹರ್ಷಿಗಳು ಕಥೆಯನ್ನು ಮುಂದುವರಿಸಿದರು. ೨. ಸೋತ ಮುಖದಿಂದ ನಗರ ವನ್ನು ಪ್ರವೇಶಿಸುವುದು ತನ್ನ ದಿಟ್ಟ ಶೌರ್ಯಕ್ಕೆ ಕುಂದುಂಟುಮಾಡುವುದು, ಅಲ್ಲದೆ ತಂದೆಗೆ ತಾನಿತ್ತ ಮಾತಿಗೆ ಮೂರ್ಖನಾಗುವೆ ಎಂದು ತಾನು ನಿಂದೆಗೊಳಗಾಗುವ ವಿಷಯ ವನ್ನು ಭಾವಿಸಿ ಇಂದ್ರಜಿತು ತಮ್ಮ ವಂಶಪರಂಪರೆಯ ಏಳಿಗೆಗೆ ಕಾರಣಳಾದ ಮನೆ ದೇವತೆಯನ್ನು ಒಲಿಸಿಕೊಳ್ಳುವ ಉದ್ದೇಶದಿಂದ ಬಂದನು. ೩. ತನ್ನ ಸೈನ್ಯವನ್ನು ಒಟ್ಟುಗೂಡಿಸಿ ಇಂದ್ರಜಿತು ಕುಂಭಿಳೆಯ ಪರ್ವತದ ತಪ್ಪಲಲ್ಲಿ ಸಪ್ತವ್ಯೂಹ ರಚನೆ ಯಿಂದ ನಿಲ್ಲಿಸಿದನು. ಅನಂತರ ಮಾರಣಹೋಮವನ್ನು ನಡೆಸುವ ಉದ್ದೇಶದಿಂದ ರಾಕ್ಷಸ ಬ್ರಾಹ್ಮಣರುಗಳೊಡಗೂಡಿ ನಿಕುಂಭಿಳೆಯ ದೇವಾಲಯದ ಪವಿತ್ರ ಮಂಟಪ

ಏಳುಸುತ್ತಿನಲೊಡ್ಡು ಮೆಚ್ಚಿದುದು । ಶೈಲದೊತ್ತಿನಲಾಜಿಯಿನ್ನೂ
ಜ್ಜೇಳಜಕ್ಷೋಹಿಣಿಯ ಸಂಖ್ಯೆಯ ಸಕಲ ಸೈನಿಕವ
ಭಾಳನೇತ್ರ ಸರೋಜಗರ್ಭರಿ । ಗೇಳುಯುಗ ಪರಿಯಂತ ಕಾದಲು
ಕೋಳುವೋಗದ ಪರಿಯಪೊಲು ಪಸರಿಸಿತು ರಾತ್ರಿಯಲಿ ೪

ಹೊಕ್ಕನಾ ಕ್ರಮುಮಂಟಪವನವ । ನೆಕ್ಕತುಳದಲಿ ನವವಿಧದಲಾ
ರಕ್ಕಸನ ಮನೆದೇವತೆಯನಗ್ಗಳ ನಿಕುಂಭಿಳೆಯ
ಎಕ್ಕಸರದಲಿ ಪೂಜಿಸಿದನೂಣ । ಲಿಕ್ಕಿದನು ನರಮಾಂಸವನು ಯ
ಜ್ಞಕ್ಕೆ ದೀಕ್ಷಿತನಾದನಲ್ಲಿಂ ಮೇಲೆ ಶಕ್ರಜಿತು ೫

ವೀರಬಾಹು ಸುಬಾಹು ದುರ್ಮದ । ಘೋರಬಲ ದುರ್ಜಯ ದುರಾಸ
ಕ್ರೂರದಂಷ್ಟ್ರ ಕರಾಳ ದೀರ್ಘವಿಕರ್ಣ ಶಶಕರ್ಣ
ಸಾರಮೇಯಾನನ ವೃಕಾನನ । ಸೈರಿಭಾನನ ಮುಖ್ಯರನು ಸುರ
ವೈರಿ ತನ್ನಿದಿರಿನಲಿ ನಿಲಿಸಿದನಂಗರಕ್ಷಣೆಗೆ ೬

ಅರುಣಸಲಿಲಾಜ್ಯಗಳನರುಣಾಂ । ಬರವನರುಣ ಸುಗಂಧಸಾರವ
ನರುಣ ಪುಷ್ಪಾಕ್ಷತೆಯನಾಯಸ್ಕಾಂತ ಪಾತ್ರೆಗಳ
ಕರಿಯ ಮೆಕ್ಕೆಯ ಕಾಳಸರ್ಪನ । ತರಿಸಿ ತಾರಿಯ ಸಮಿತೆಗಳ ಸಂ
ವರಿಸಿ ದೀಕ್ಷಿತನಾದನಾ ಖಳ ಮಾರಣಾಧ್ವರಕೆ ೭

ವನ್ನು ಪ್ರವೇಶಿಸಿದನು. ೪. ಕುಂಭಿಳೆಯ ಪರ್ವತದ ಬಳಿಯಲ್ಲಿ ಏಳುಸುತ್ತಿನಲ್ಲಿ ಸೈನ್ಯವು ಸಜ್ಜಾಗಿ ನಿಂತಿತು. ಏಳು ಅಕ್ಷೋಹಿಣಿ ಸೈನಿಕರು ಮುಕ್ಕಣ್ಣ ಮತ್ತು ಬ್ರಹ್ಮರುಗಳು ಏಳುಯುಗದವರೆಗೆ ಕಾದಿದರೂ ವಶವಾಗದ ರೀತಿಯಲ್ಲಿ ಅಂದಿನ ಇರುಳು ಸಿದ್ಧವಾಗಿ ನಿಂತರು. ೫. ಇಂದ್ರಜಿತು ಯಾಗಮಂಟಪವನ್ನು ದಿಟ್ಟತನದಿಂದ ಪ್ರವೇಶಿಸಿದನು. ತನ್ನ ಮನೆದೇವತೆ ನಿಕುಂಭಿಳೆಯನ್ನು ಒಂಬತ್ತುವಿಧದ ಅರ್ಚನೆಯಿಂದ ಸತತವಾಗಿ ಪೂಜಿಸಿದನು. ನರಮಾಂಸವನ್ನು ನೈವೇದ್ಯಮಾಡಿದನು. ಅನಂತರ ಇಂದ್ರಜಿತು ಯಜ್ಞದ ವ್ರತವನ್ನು ಕೈಗೊಂಡನು. ೬. ವೀರಬಾಹು, ಸುಬಾಹು, ದುರ್ಮದ, ಘೋರಬಲ, ದುರ್ಜಯ, ದುರಾಸ, ಕ್ರೂರದಂಷ್ಟ್ರ, ಕರಾಳ, ದೀರ್ಘವಿಕರ್ಣ, ಶಶಕರ್ಣ (ಮೊಲದಂತೆ ಕಿವಿಯುಳ್ಳವನು), ಸಾರಮೇಯಾನನ (ನಾಯಿಯಂತೆ ಮುಖವುಳ್ಳವನು) ವೃಕಾನನ (ತೋಳದಂತೆ ಮುಖವುಳ್ಳವನು), ಸೈರಿಭಾನನ (ಕೋಣದಂತೆ ಮುಖವುಳ್ಳವನು) ಮೊದಲಾದ ಮುಖ್ಯ ರಾಕ್ಷಸವೀರರನ್ನು ತನ್ನ ಅಂಗರಕ್ಷಣೆಗಾಗಿ ನಿಲ್ಲಿಸಿದನು. ೭. ರಕ್ತದ ತುಪ್ಪ, ಕೆಂಪುವಸ್ತ್ರ, ಕೆಂಪು ಸುಗಂಧದ್ರವ್ಯ, ಕೆಂಪು ಹೂವು ಅಕ್ಷತೆ, ಸೂಜಿಗಲ್ಲಿನ ಪಾತ್ರೆಗಳು, ಕರಿಯಮೆಕ್ಕೆ, ಕಾಲ ಸರ್ಪ—ಮೊದಲಾದುವುಗಳನ್ನು ತರಿಸಿ ತಾರಿಯಮರದ ಸಮಿತ್ತುಗಳನ್ನು ಸಿದ್ಧಪಡಿಸಿ

ಬಸುಱ ಬಗಿದನು ತೆಗೆದನುದರದ । ವಿಷಮವಹ್ನಿಯನಸುರನೆಲುವಿನ
ಹಸರಗಳ ಸಮಿತೆಯಲಿ ಕೋಣತ್ರಯದ ಕುಂಡದಲಿ
ಅಸುರ ವಿಪ್ರಾವಳಿಯಥರ್ವಣ । ದೆಸೆವ ಮಂತ್ರಾಗಮದಿ ಸಂಸ್ಥಾ
ಪಿಸಿದನಸ್ತ್ರಾವಳಿ ಪರಿಸ್ತರಣದಲಿ ಹುತವಹನ ೮

ಆಗಲಾಸುರಕರ್ಮ ವಿಧಿವಿಹಿ । ತಾಗಮದಲುದರಾಮಿಷದಲಾ
ಭಾಗಗಳ ಸಲಿಲದಲಿ ಕೃಷ್ಣೋರಗನ ಮಾಂಸದಲಿ
ಮೇಗೆ ತಿರ್ಯಗ್ಜಾತಿಗಳ ಸಂ । ಯೋಗಗಳ ನೆಣಗಳಲಿ ನೆತ್ತರ
ನೋಗರದ ಚರುವಿನಲಿ ಪುಟಗೊಳಿಸಿದನು ಹುತವಹನ ೯

ಬೇಳಿದನು ಬಳಿಕಾಹುತಿಗಳ ವಿ । ತಾಳಿಸಿತು ಹೋಮಾಗ್ನಿ ಧೂಮ
ಜ್ವಾಲೆಯಲಿ ಪಸರಿಸಿತು ಪಶುಮಾಂಸದ ಮಹಾಗಂಧ
ಗಾಳಿ ನೆಗಹಿದುದಭ್ರಧಮರರ । ಪಾಳಯಕೆ ಬೆದಱಾಯ್ತು ರಘುಭೂ
ಪಾಲಬಲದಲಿ ಹೊಗೆಯ ಹೊರಳಿಯ ಹೊದಱ ಹೊಯ್ಲಿನಲಿ ೧೦

ಕಡಲು ಕುದಿದುಕ್ಕಿದುದು ತಾರಕಿ । ಸಿಡಿದವವನಿಗೆ ಧರಣಿ ಕಂಪಿಸಿ
ನಡುಗುತಿರ್ದುದು ಸುರರ ನಗರಾವಳಿಯಲಖಿಳಜನ
ಮಿಡುಕುತಿರ್ದುದು ತಾಪದಲಿ ಸಿಡಿ । ಹೊಡೆವುತಿರ್ದುದು ದೆಸೆಗಳಲಿ ಮನ
ನಡುಗಿ ರಘುರಾಜೇಂದ್ರ ಬೆಸಗೊಂಡನು ವಿಭೀಷಣನ ೧೧

ಕೊಂಡು ಮಾರಣಹೋಮಕ್ಕೆ ಇಂದ್ರಜಿತು ದೀಕ್ಷೆವಹಿಸಿದನು. ೮. ಹೊಟ್ಟೆಯನ್ನು ಬಗೆದು ಒಳಗಿನ ಉದರಾಗ್ನಿಯನ್ನು ಹೊರತೆಗೆದನು. ಮೂಳೆಗಳನ್ನು ಸಮಿತ್ತಾಗಿ ಜೋಡಿಸಿಕೊಂಡನು. ಮೂರು ಕೋಣಗಳ ನಡುವೆ ಅಗ್ನಿಕುಂಡವನ್ನೇರ್ಪಡಿಸಿದನು. ಅಸುರ ಬ್ರಾಹ್ಮಣರು ಶಾಸ್ತ್ರಾನುಸಾರವಾಗಿ ಅಥರ್ವಣವೇದದ ಮಂತ್ರಗಳನ್ನು ಉಚ್ಚರಿಸುತ್ತಿರಲು ಅಸ್ತ್ರಗಳನ್ನು ಹೋಮಕುಂಡದ ಸುತ್ತ ಪರಿಸ್ತರಣವಾಗಿ ಇರಿಸಿ ಇಂದ್ರಜಿತು ಕುಂಡದಲ್ಲಿ ಅಗ್ನಿಯನ್ನು ಪ್ರತಿಷ್ಠಿಸಿದನು. ೯. ಆಗ ಘೋರಕರ್ಮದ ಮೂಲಕ ಶಾಸ್ತ್ರಗಳಲ್ಲಿ ಹೇಳಿರುವ ಪ್ರಕಾರದಲ್ಲಿ ಹೊಟ್ಟೆಯ ಮಾಂಸ, ಹೋತಗಳ ರಕ್ತ, ಕೃಷ್ಣಸರ್ಪದ ಮಾಂಸ. ಪಶುಪಕ್ಷಿ ಮೊದಲಾದ ಪ್ರಾಣಿಗಳ ಕೊಬ್ಬು, ರಕ್ತದ ಅನ್ನದ ಚರು–ಮೊದಲಾದುವುಗಳಿಂದ ಅಗ್ನಿಯನ್ನು ಪುಟಗೊಳಿಸಿದನು. ೧೦. ಅನಂತರ ಇಂದ್ರಜಿತು ಆಹುತಿಗಳನ್ನು ಕೊಟ್ಟು ಹೋಮಮಾಡಿದನು. ಹೋಮಾಗ್ನಿಯ ಉರಿ ಹೆಚ್ಚಾಯಿತು. ಹೊಗೆಯ ಸಮೂಹದೊಡನೆ ಮೃಗಮಾಂಸದ ಸುವಾಸನೆಯನ್ನು ಹೊತ್ತ ಗಾಳಿ ಹರಡಿತು ಮತ್ತು ಅಲ್ಲಿಂದ ಆಕಾಶದಲ್ಲಿದ್ದ ದೇವತೆಗಳ ಪಾಳಯಕ್ಕೆ ಏರಿತು. ಹೊಗೆಯು ದಟ್ಟವಾಗಿ ಹರಡಿದುದನ್ನು ಕಂಡ ರಘುರಾಮನ ಸೈನ್ಯದಲ್ಲಿ ಹೆದರಿಕೆ ವಿಸ್ತರಿಸಿತು. ೧೧. ಸಮುದ್ರ ಕುದಿದು ಉಕ್ಕಿತು. ನಕ್ಷತ್ರಗಳು ಭೂಮಿಗೆ ಸಿಡಿದುಬಿದ್ದವು. ಭೂಮಿ ನಡುಗಿತು. ದೇವತೆಗಳ ನಗರಗಳಲ್ಲಿ ಸಮಸ್ತರೂ ತಾಪದಿಂದ ಸಂಕಟಪಟ್ಟರು. ದಿಕ್ಕುದಿಕ್ಕುಗಳಲ್ಲಿ ಸೆಕೆ ಒಡೆಯುತ್ತಿತ್ತು. ಮನಸ್ಸಿನಲ್ಲಿ ನಡುಗಿ ರಘುರಾಜೇಂದ್ರನು ವಿಭೀಷಣನನ್ನು

ಏನಿದದ್ಭುತ ತಾಪ ಶಿಖಿ ಜಠ । ರಾನುಗತವಾಗಿದೆ ನಿಶಾಚರ
ರೇನ ನೆನೆದರೊ ನಮಗೆ ದುಷ್ಕೃತಿಕಾರ ಸಾಧನವ
ನೀನು ಬಲ್ಲೈ ನಿನ್ನ ಮನದನು । ಮಾನವಾವುದು ಹೇಳು ನಮಗೆನ
ಲಾ ನರೇಂದ್ರಂಗಾ ವಿಭೀಷಣದೇವನಿಂತೆಂದ ೧೨

ರಾಮ ಚಿತ್ತೈಸಾಭಿಚಾರದ । ಹೋಮವಿದು ರಾವಣಿಯದಿಂದಿನ
ತಾಮಸಿಯನಿವ ಕಳಿದನಾದಡೆ ಹಾನಿವು ಬಳಿಕೆಮಗೆ
ಆ ಮಹೇಂದ್ರವಿರೋಧಿಯೆಡೆಗೆ ಸ । ನಾಮರನು ಬೀಳ್ಕೊಡು ತದೀಯ ಮ
ಹಾಮದದ್ವಿಪನಳಿಯೆ ಬಳಿಕಿದಿರಾರು ನಿಮಗೆಂದ ೧೩

ನಿನ್ನ ಸೇನೆಯಲುಂಟೆ ವತ್ಸರ । ಪನ್ನೆರಡಉಪವಾಸದವರು ವಿ
ಭಿನ್ನ ನಿದ್ರಾವಶರು ವನಿತಾಸಂಗವರ್ಜಿತರು
ಉನ್ನತಾಹವ ವೀರರುಳ್ಳಡೆ । ತನ್ನ ಬಳಿಯಲಿ ಕಳುಹು ತಡವೇ
ಕಿನ್ನು ಬೇಗ ವಿಚಾರಿಸೆಂದು ವಿಭೀಷಣನು ನುಡಿದ ೧೪

ಕರವ ಮುಗಿದಿದಿರಾಗಿ ನಿಂದಿ । ರ್ದರಿದಿಶಾಪಟ ವೀರಲಕ್ಷ್ಮಣ
ನರಸಗೆಂದನು ಭಟರ ಬೇಱಿನ್ನರಸಲೇಕೆನುತ
ನಿರವಿಸಹಿತನ ವಧೆಗೆ ವೈರಿಯ । ಶಿರವ ತಂದಿಳುಹುವೆನು ದೇವರ
ಚರಣದಡಿಯಲಿ ಚಿಂತೆ ಬೇಡಿದಕೆಂದು ಕೈಮುಗಿದ ೧೫

ಕುರಿತು ಕಾರಣವನ್ನು ಕೇಳಿದನು. ೧೨. "ಏನೀ ಅದ್ಭುತವಾದ ತಾಪ, ಬೆಂಕಿಯು ಹೊಟ್ಟೆಯೊಳಹೊಕ್ಕಿದೆ. ರಾಕ್ಷಸರು ನಮಗೆ ಕೆಟ್ಟದ್ದಾಗುವ ಕಾರ್ಯವನ್ನೇನನ್ನು ಮಾಡಲು ತೊಡಗಿದ್ದಾರೋ ನಿನಗೆ ಗೊತ್ತೆ ? ನಿನ್ನ ಊಹೆಯೇನು ? ನಮಗೆ ಹೇಳು" ಎಂದು ಕೇಳಲು ವಿಭೀಷಣನು ರಾಮನನ್ನು ಕುರಿತು ಮುಂದಿನಂತೆ ನುಡಿದನು. ೧೩. "ರಾಮ ಆಲಿಸು, ಇಂದ್ರಜಿತು ಆಚರಿಸುತ್ತಿರುವ ಮಾಟದ ಹೋಮವಿದು. ಇಂದಿನ ರಾತ್ರಿಯನ್ನು ಇವನು ಕಳೆದನಾದರೆ ನಮಗೆ ನಾಶ ಖಂಡಿತ. ಆದುದರಿಂದ ಇಂದ್ರಜಿತುವಿನ ಬಳಿಗೆ ಹೆಸರಾಂತ ವೀರರನ್ನು ಕಳುಹಿಸಿಕೊಡು. ಆ ಸೊಕ್ಕಿನ ಶತ್ರು ನಾಶವಾದರೆ ಅನಂತರ ನಿಮಗೆ ಯಾರು ಎದುರು" ಎಂದ ವಿಭೀಷಣ. ೧೪. "ಹನ್ನೆರಡು ವರ್ಷಗಳ ಕಾಲ ಉಪವಾಸ ಮಾಡಿದವರು, ನಿದ್ದೆ ಮಾಡದವರು ಹಾಗೂ ಸ್ತ್ರೀಸಹವಾಸವಿಲ್ಲದವರು ನಿನ್ನ ಸೈನ್ಯದಲ್ಲಿದ್ದಾರೆಯೇ ? ಇಂಥ ಉತ್ಕೃಷ್ಟ ಯುದ್ಧವೀರರಿದ್ದರೆ ನನ್ನ ಜತೆಯಲ್ಲಿ ಕಳುಹಿಸು. ಇನ್ನು ತಡವೇಕೆ, ಬೇಗ ವಿಚಾರಿಸು" ಎಂದ ವಿಭೀಷಣ. ೧೫. ಕೈಮುಗಿದುಕೊಂಡು ಎದುರಿಗಿದ್ದ, ಶತ್ರುಗಳನ್ನು ದಿಕ್ಕುದಿಕ್ಕುಗಳಿಗೆ ಚೆದುರಿಸುವ ವೀರಲಕ್ಷ್ಮಣನು ರಾಮನನ್ನು ಕುರಿತು, "ಬೇರೆ ವೀರರನ್ನೇಕೆ ಹುಡುಕಬೇಕು. ಶತ್ರುವಧೆಗೆ ಅಪ್ಪಣೆ ಕೊಡು, ವೈರಿಯ ತಲೆಯನ್ನು ಸ್ವಾಮಿಯವರ ಪಾದದಡಿಗೆ ತಂದುಹಾಕುವೆನು,

ನಿನಗಿನಿತು ಗುಣವುಂಟೆಯೆಂನಲೊಡ । ನನಿಮಿಷಾರಿಯು ಗೆಲಿದ ಗೆಲವಿನ
ಕೊನೆಯಲುಸುರುವೆನೀಗ ಬೆಸಸೆನಗೆನುತ ನಿಂದಿರ್ದ
ಧನುತನುತ್ರ ಶರಾವಳಿಯು ಕೊಂ । ಡನುವರಕೆ ಹೊಱವಂಟನಾ ಯಾ
ಮಿನಿಯೊಳಾಹವಧೀರ ಶೌರ್ಯೋದಾರ ಸೌಮಿತ್ರಿ ೧೬

ಕಳುಹಿದನು ಬೆಂಬಳಿಯು ತಮ್ಮನ । ಕೊಳುಗುಳದ ಹದಕಂಜುತಾಖಿಂ
ಡಲನ ಮೊಮ್ಮನನಂಜನಾನಂದನನನಗ್ನಿಜನ
ಬಳಿಕವರ ಸಂರಕ್ಷಣೆಗೆ ಕೈ । ಗೊಳಿಸಿದನು ಜಾಂಬವರ ಹರಿದುದು
ಬಲಿಮುಖರ ಬಲುಧಾಳಿ ನಿರ್ಬುದ ಖರ್ವಸಂಖ್ಯೆಯಲಿ ೧೭

ಮುತ್ತಿದರು ಬಳಿಕಾ ಶಿಲೋಚ್ಚಯ । ಕೊತ್ತಲಿಕ್ಕಿದ ಬಲದ ಬೊಬ್ಬೆಗೆ
ಕಿತ್ತು ಹಾಱಿದವದ್ರಿ ನಿದ್ರ್ರುಮವಾಗಲಭ್ರದಲಿ
ಹತ್ತಿದುದು ಕೆಂಧೂಳಿ ಮಲೆತವ । ರೊತ್ತಿದರು ಬಲುಗಡಿತದಲಿ ನೊರೆ
ನೆತ್ತರೋಕುಳಿಯಾಯ್ತು ಶಾಕಿನಿ ಡಾಕಿನೀಜನಕೆ ೧೮

ನಾಕು ವೈಯಲಿ ನಿಂದು ಕಪಿಬಲ । ವೌಕಿ ಹೊಕ್ಕುದು ಹೊಯ್ದು ಮರದಲಿ
ನೂಕುವೆಟ್ಟುಂಗಳ ಕರೋಗ್ರ ಸಮಗ್ರ ಘಾತದಲಿ
ಆ ಕಪಿಗಳುಬ್ಬಟೆಯ ಕೊಲೆಯು ಸ । ಮಾಕದಂಗದ ರಿಂಗಣದ ಲೋ
ಕೈಕವೀರರ ಮುಂಡ ಕುಣಿದವು ಕೋಟಿಸಂಖ್ಯೆಯಲಿ ೧೯

ಇದಕ್ಕಾಗಿ ಚಿಂತಿಸಬೇಡ" ಎಂದು ಕೇಳಿಕೊಂಡ. ೧೬. "ವಿಭೀಷಣನು ಹೇಳಿದಷ್ಟು ಗುಣಗಳು ನಿನ್ನಲ್ಲಿವೆಯೆ ?" ಎಂದು ಪ್ರಶ್ನಿಸಲು, ಇಂದ್ರಜಿತುವನ್ನು ಗೆದ್ದ ವಿಜಯದ ಅನಂತರ ಹೇಳುವೆನು. ಈಗ ಅಪ್ಪಣೆಕೊಡು" ಎಂದು ಹೇಳಿ ಲಕ್ಷ್ಮಣ ನಿಂತುಕೊಂಡ. ಬಿಲ್ಲು, ಬಾಣ, ಕವಚಗಳನ್ನು ತೆಗೆದುಕೊಂಡು ಅಂದಿನಿರುಳಿನಲ್ಲಿ ಕದನವೀರ ವಿಶಾಲಪರಾಕ್ರಮಿ ಲಕ್ಷ್ಮಣನು ಯುದ್ಧಕ್ಕೆ ಹೊರಟನು. ೧೭. ಮುಂದೆ ಯುದ್ಧವೇನಾಗುವುದೋ ಎಂದು ಹೆದರಿದ ರಾಮನು ತಮ್ಮನಿಗೆ ಬೆಂಬಲವಾಗಿ ಅಂಗದ ಆಂಜನೇಯ ನೀಲರುಗಳನ್ನು ಕಳುಹಿಸಿದನು. ಬಳಿಕ ಅವರ ರಕ್ಷಣೆಗೆ ಜಾಂಬವರನ್ನು ಒಪ್ಪಿಸಿದನು. ನಿರ್ಬುದ ಖರ್ವಸಂಖ್ಯೆಯಲ್ಲಿ ವಾನರಸೈನ್ಯವು ಮುತ್ತಿಗೆಗೆ ಮುನ್ನುಗ್ಗಿತು. ೧೮. ವಾನರರು ಅಸುರರ ಮೇಲೆ ಮುತ್ತಿಗೆ ಹಾಕಿದರು. ಬೆಟ್ಟಗಳಿಂದ ಹೊಡೆದು ಪಕ್ಕಕ್ಕೆ ತಳ್ಳಿದ ಬೊಬ್ಬೆಗೆ ಬೆಟ್ಟಗಳು ಕಿತ್ತುಹಾರಿದವು. ಅವುಗಳ ಮೇಲಿನ ಮರಗಳು ಮುರಿದು ಬಿದ್ದವು. ಆಕಾಶವನ್ನು ಕೆಂಪು ಧೂಳು ವ್ಯಾಪಿಸಿತು. ಸೊಕ್ಕಿದ ರಾಕ್ಷಸರು ಭಾರಿ ಕೊಲೆಮಾಡುತ್ತ ಮೇಲೆಬಿದ್ದರು. ಆಗ ಶಾಕಿನಿ ಡಾಕಿನಿಗಳಿಗೆ ನೊರೆರಕ್ತದ ಓಕುಳಿಯಾಯಿತು. ೧೯. ಕೈಯಲ್ಲಿನ ಮರಗಳಿಂದಲೂ ಬೆಟ್ಟಗಳಿಂದಲೂ ಭಯಂಕರವಾಗಿ ಹೊಡೆದು ಪೆಟ್ಟು ಕೊಡುತ್ತ ನಾಲ್ಕು ಕಡೆಗಳಿಂದಲೂ ಕಪಿಸೈನ್ಯವು ಮುತ್ತಿಗೆಹಾಕಿ ನುಗ್ಗಿತು. ಆ ಕಪಿಭಟರಿಂದ ಉಗ್ರಕೊಲೆಯಾದ ರಾಕ್ಷಸವೀರರ ಮುಂಡಗಳು

ಏಱುವರು ತದ್ಗಿರಿಯನಿವರವ । ರೇಱಗೊಡದಿಳಿಗೆಡಹುವರು ಮಗು
ಳೇಱಿ ಹತ್ತುವರಿವರು ತಲೆಮುಟ್ಟುವರು ಹೊಡಕರಿಸಿ
ಜಾಱುಗುಟ್ಟುವರೀ ಪರಿಯಲಿ । ನ್ನೂಱು ಕಣೆಯದ ಕದನದಲಿ ಕಲಿ
ಯೋಱಿ ಕಾದಿತು ಸೇನೆ ಸೇನೆಯೊಳಣುಗ ಕೇಳೆಂದ ೨೦

ಎಂತುಟೋ ಸುಗ್ರೀವನಾಜ್ಞಾ । ಮಂತ್ರಶಕ್ತಿ ಮಹಾಧನವ ಸಾ
ರ್ವಂತೆ ದೇಶವನಿತ್ತು ಮನ್ನಣೆಯಲಿ ಮಹಾಭಟರ
ಸಂತವಿಟ್ಟವರೊದಗುವುದು ತಾ । ನೆಂತು ದುರ್ಲಭವಖಿಳದೆಸೆಯ ವ
ನಾಂತರದ ಸ್ವೇಚ್ಛಾವಿಹಾರಿಗಳೊದಗಿತಾಜಿಯಲಿ ೨೧

ಪಡಿಬರಿಸಿ ತಲೆಯೊತ್ತಿ ಕರಿಗಳ । ಕೆಡಹಿದರು ಕುದುರೆಗಳ ಜೀವವ
ಕೊಡಹಿದರು ಕವಿದೆಸುವ ರಥಿಕರ ರಥದ ಜೋಡಣೆಯ
ಹುಡಿಬಡಿದರೊಳಹೊಗುವ ಪದಚರ । ಪಡೆಯ ಪದ್ಮಜಪುರವರದ ಹೊಱ
ಕಡೆಯ ಹೊಸ ಪಾಳೆಯದ ತುದಿಯಲಿ ಕಾಣಲೈತಂದ ೨೨

ಹಱಿಯದೀಪರಿ ಕೊಂದಡೆಯು ನೇ । ಸಱಿನ ಜನನಕೆ ಜಾವದರ್ಧದ
ತೆಱಹಿನಂತರವಿರ್ದುದಧ್ವರ ನಡೆದುದಾ ಖಳನ
ತೆಱನಿದಲ್ಲವು ಸುಮ್ಮನಿರ್ದಡೆ । ಹಱಿಯದೆನುತ ವಿಭೀಷಣನು ರಣ
ಕುಱುವ ಘನ ಭೀಷಣ ಗದಾದಂಡವನು ಗಲ್ಲಿಸಿದ ೨೩

ಓಡಾಡುತ್ತ ಕೋಟಿಸಂಖ್ಯೆಯಲ್ಲಿ ಕುಣಿದಾಡಿದವು. ೨೦. ಆ ಕುಂಭಿಳಿಯ ಬೆಟ್ಟವನ್ನು ವಾನರರು ಏರುವರು, ಅವರು ಏರದಂತೆ ರಾಕ್ಷಸರು ವಾನರರನ್ನು ನೆಲಕ್ಕೆ ಬೀಳಿಸುವರು, ಪುನಃ ವಾನರರು ತುದಿಯವರೆಗೆ ಹತ್ತುವರು ; ವಾನರರು ಕೋಟೆಯ ತುದಿಯಲ್ಲಿ ಕಾಣಿಸಿಕೊಂಡೊಡನೆ ಅವರು ಜಾರಿಬೀಳುವಂತೆ ರಾಕ್ಷಸರು ಕುಟ್ಟುವರು, ಈ ರೀತಿಯಲ್ಲಿ ಇನ್ನೂರು ಬಾರಿ ವಾನರ ರಾಕ್ಷಸಸೈನ್ಯಗಳು ಪರಾಕ್ರಮದಿಂದ ಪರಸ್ಪರ ಕಾದಾಡಿದವು. ೨೧. ಸುಗ್ರೀವನ ಆಜ್ಞೆಯೆಂಬ ಮಂತ್ರಶಕ್ತಿಯು ಎಂಥದೋ ! ಬಹಳ ಹಣ ಕೈ ಸೇರುವಂತೆ ಜಹಗೀರುಗಳನ್ನು ಕೊಟ್ಟು ಗೌರವಿಸಿ ಮಹಾವೀರರನ್ನು ಸಂತೋಷಪಡಿಸಿದರೂ ಅವರು ಈ ರೀತಿಯಲ್ಲಿ ಯುದ್ಧಕ್ಕೆ ಒದಗುವುದು ದುರ್ಲಭ. ಸಮಸ್ತ ದಿಕ್ಕುಗಳ ಕಾಡುಗಳೊಳಗೆ ಸ್ವೇಚ್ಛೆಯಿಂದ ವಿಹರಿಸುತ್ತಿದ್ದ ವಾನರರು ಯುದ್ಧಕ್ಕೆ ಒದಗಿಬಂದುದು ಆಶ್ಚರ್ಯ. ೨೨. ವಾನರಭಟರು ಎದುರಿಸಿ ತಲೆಯನ್ನು ಅಮುಕಿ ಆನೆಗಳನ್ನು ಕೆಡವಿದರು ; ಕುದುರೆಗಳ ಜೀವಗಳನ್ನು ಕೊಡವಿಬಿಟ್ಟರು ; ಮುತ್ತಿ ಬಾಣಬಿಡುವ ರಥಿಕರ ರಥಗಳ ಸಾಲನ್ನು ಪುಡಿಪುಡಿ ಮಾಡಿದರು ; ಒಳಹೊಕ್ಕು ಕಾದಾಡುವ ಕಾಲಾಳು ಸೈನ್ಯಕ್ಕೆ ಬ್ರಹ್ಮನ ಪಟ್ಟಣದ ಹೊರಗಡೆಯ ಹೊಸ ಪಾಳೆಯದ ತುದಿಯನ್ನು ಕಾಣಿಸಿದರು. ೨೩. ಈ ರೀತಿ ಯುದ್ಧದಲ್ಲಿ ಕೊಲೆ ನಡೆದರೆ ಸಾಗುವುದಿಲ್ಲ. ಸೂರ್ಯೋದಯಕ್ಕೆ ಅರ್ಧಜಾವ ಹೊತ್ತಿದೆ. ಇಂದ್ರಜಿತುವಿನ ಯಾಗವು ಅಡ್ಡಿಯಿಲ್ಲದೆ ನಡೆಯುತ್ತಿದೆ. ಇದು ಕ್ರಮವಲ್ಲ. ಸುಮ್ಮನಿದ್ದರೆ ಆಗದು' ಎನ್ನುತ್ತ ವಿಭೀಷಣನು

ಬಟ್ಟೆಯನು ಸವರುವೆನು ಬೆನ್ನನು । ಮೆಟ್ಟಿ ಬಾ ಸೌಮಿತ್ರಿ ಕವಿವಿ
ತ್ತಟ್ಟನಸುರರನೆಸುತ ಹಾರದೆ ಬೆಂಬಲದ ಭಟರ
ಮುಟ್ಟೈವಿಸಿದುದು ಹೊತ್ತು ರಥವನು । ಕೊಟ್ಟು ಕಳುಹದೆ ಮಾಣನಜ ಜಯ
ತಟ್ಟದೈಸಜಿ ಮೇಲೆನುತ ನಡೆಗೊಂಡನಸುರೇಂದ್ರ ೨೪

ಆರಿ ಬೊಬ್ಬಿರಿದಸುರಪತಿ ರಣ । ಭಾರದಲಿ ನಡೆಗೊಂಡು ತೆಗೆದನು
ದಾರಿಯನು ಸೌಮಿತ್ರಿ ಬರುವಾಸುರಚತುರ್ಬಲವ
ಸೇರಿಸಿದನಂಬಿನಲಿ ಹಿಂದೆ ಸ । ಮೀರಸುತನೌಕುವ ನಿಶಾಟರ
ತೀರಬಡಿದನು ಹೊಕ್ಕರೀ ಮೂವರು ಮಖಾಲಯವ ೨೫

ಈತನೀಗಮರೇಂದ್ರಜಿತು ಮಾ । ಯಾತಿಶಯಕೌಶಲನು ಮಾಯಾ
ಸೀತೆಯನು ಕಡಿದಂಜಿಸಿದ ಕರ್ಕಶ ನಿಶಾಚರನು
ಈತನೀಗನುಸಾರಿ ತನ್ನಯ । ತಾತಗವನಿಂದವನು ಬಲ್ಲಿದ
ಸೀತೆಯನು ಬಿಡದಿಹ ಛಲೋಕ್ತಿಯನೆಂದನಸುರೇಂದ್ರ ೨೬

ಇತ್ತ ನೋಡತಿಕಾಯವೈರಿ ವಿ । ಯತ್ತಳದೊಳೈತಹ ಸರೋಜಜ
ದತ್ತ ದಿವ್ಯವರೂಥವನು ದಿವ್ಯಾಶ್ವವನು ಸರಳ
ಬತ್ತಳಿಕೆಯನು ಬವರಕಿವು ಕೈ । ವರ್ತಿಸಲು ಕಡೆಗಾಲವೆಮಗಿ
ನ್ನುತ್ತರವದೇನಿದಕುಪಾಯವ ಕಾಣಬೇಕೆಂದ ೨೭

ಕಾದಾಟಕ್ಕಿಳಿದು ಭಯಂಕರ ಗದೆಯಿಂದ ಆಕ್ರಮಿಸಿದನು. ೨೪. "ಎದುರಿನ ಶತ್ರುಗಳನ್ನು ಕೊಂದು ನಡುವೆ ದಾರಿ ಮಾಡುತ್ತೇನೆ. ಲಕ್ಷ್ಮಣ, ಬೆಂಬಲದ ಕಪಿಯೋಧರನ್ನು ನಿರೀಕ್ಷಿಸದೆ ಮೇಲೆ ಬೀಳುವ ಈ ಕಡೆಯ ರಾಕ್ಷಸರ ಮೇಲೆ ಬಾಣ ಬಿಡುತ್ತ, ನನ್ನ ಬೆನ್ನ ಹಿಂದೆಯೇ ಬಾ. ಹೊತ್ತು ಹತ್ತಿರ ಬರುತ್ತಿದೆ. ಬ್ರಹ್ಮನು ಶತ್ರುವಿಗೆ ರಥವನ್ನು ಕೊಟ್ಟು ಕಳುಹಿಸದೆ ಇರನು. ಅಷ್ಟಾದ ಮೇಲೆ ನಮಗೆ ಜಯ ಲಭಿಸದು" ಎನ್ನುತ್ತ ವಿಭೀಷಣ ಮುಂದುವರಿದ. ೨೫. ವಿಭೀಷಣನು ಗರ್ಜಿಸಿ ಬೊಬ್ಬೆಹಾಕಿ ಕಾದುತ್ತ ಮುನ್ನಡೆದು ಶತ್ರುಸೈನ್ಯದ ನಡುವೆ ದಾರಿಮಾಡಿದನು. ತಮ್ಮ ಮೇಲೆ ಬೀಳಲು ಬರುವ ರಾಕ್ಷಸರ ಚತುರಂಗಬಲದ ಮೇಲೆ ಲಕ್ಷ್ಮಣನು ಬಾಣ ಬಿಟ್ಟು ಕೊಂದನು. ಹಿಂದುಗಡೆಯಲ್ಲಿ ಮೇಲೆ ನುಗ್ಗುವ ರಾಕ್ಷಸರನ್ನು ಹನುಮಂತನು ಬಡಿದು ಕೊಂದನು. ಹೀಗೆ ವಿಭೀಷಣ, ಲಕ್ಷಣ, ಹನುಮಂತ ಈ ಮೂವರು ಇಂದ್ರಜಿತುವಿನ ಯಾಗಮಂಟಪವನ್ನು ಪ್ರವೇಶಿಸಿದರು. ೨೬. "ಇವನೇ ಇಂದ್ರಜಿತು, ಮಾಯಾವಿದ್ಯೆಯಲ್ಲಿ ಕುಶಲ. ಇವನೇ ಮಾಯಾಸೀತೆಯನ್ನು ಕತ್ತರಿಸಿ ನಮ್ಮನ್ನು ಹೆದರಿಸಿದ ಕ್ರೂರ ರಾಕ್ಷಸ. ಇವನು ತನ್ನ ತಂದೆಗೆ ಬೆಂಬಲವಾಗಿರುವನು. ಆದುದರಿಂದಲೇ ಇವನ ತಂದೆ ರಾವಣನು ಸೀತೆಯನ್ನು ಬಿಡದೆ ಇರುವ ಹಟವನ್ನು ಸಾಧಿಸುತ್ತಿದ್ದಾನೆ" ಎಂದ ವಿಭೀಷಣ. ೨೭. "ಅತಿಕಾಯನನ್ನು ಕೊಂದ ಲಕ್ಷ್ಮಣ, ಆಕಾಶದಲ್ಲಿ ಬರುತ್ತಿರುವ ಬ್ರಹ್ಮನು ಕೊಟ್ಟ ದಿವ್ಯರಥ, ದಿವ್ಯಾಶ್ವ, ಬಾಣ, ಬತ್ತಳಿಕೆಗಳನ್ನು ಇಲ್ಲಿ ನೋಡು, ಯುದ್ಧಕ್ಕೆ ಇವು

ಕೋಪ ಕಿಡಿಯಿಡೆ ಸಮರಮುಖದಾ । ಟೋಪ ಕುಡಿಯಿಡೆ ವೀರರಸದಾ
ಳಾಪ ಕಡಲಿಡೆ ಕಲಿಮನದ ಕದನಪ್ರತಾಪಕದ
ರೂಪು ರಂಜಿಸೆ ರಾಮದೂತಾ । ಲಾಪ ರಾಗಿಸಲೊದೆದನೈ ಬಳಿ
ಕಾ ಪುರಂದರಜಿತುವಿನಾಹುತಿ ಹಿಡಿಯೆ ಸೌಮಿತ್ರಿ ೨೮

ತಿರುಗಿತಜ ಕಳುಹಿದ ಮಹಾರಥ । ಮರಳಿ ಮಾರುತಮಾರ್ಗದಲಿ ಕ
ಣ್ದೆರೆದು ನೋಡಿದನವನಿವರನುಕ್ಕಿದಿವ ರೋಷದಲಿ
ಧುರಕೆ ಬಾರೆಲೊ ಖೂಳ ಮರಣಾ । ಧ್ವರದ ಹಂಬಲ ಬಿಸುಡೆನುತ ನಿಜ
ಚರಣದಿಂದೆಬ್ಬಿಸಿದನಾಹವಕಮರದಲ್ಲಣನ ೨೯

ಏಳು ದೈವದ್ರೋಹಿ ಭೂದಿವಿ । ಜಾಳಿನಿಂದಕ ನಿಂದಿರಸುರರ
ಕಾಲಕರ್ಮದ ಮೃತ್ಯು ಬಂದಿದೆ ನೋಡು ಕಣ್ದೆರೆದು
ಕಾಳಗವ ಕೊಡು ಹಿಡಿ ನಿಜಾಯುಧ । ಬೇಳುವೆಯು ಬೇಳಂಬ ಸಾಕಿ
ನ್ನೇಳೆನುತ ಕಟವಾಯನೊದೆದನು ಮತ್ತೆ ರಾವಣಿಯ ೩೦

ಪರಸತಿದ್ರೋಹಾನುಕೂಲತೆ । ನರಕಕೊಯ್ಯದೆ ಬಿಡುವುದೇ ಸುಜ
ನರ ಮನಃಖೇದಾಗ್ನಿ ಸುಡದಿಹುದೇ ಖಳಾಟವಿಯ
ಹರಣರಕ್ಷನಿಮಿತ್ತ ಮರಣಾ । ಧ್ವರದ ಕೃತಕವನೊಡ್ಡಿದರೆ ಹಿತ
ಕರವಹುದೆ ಬಿಡು ಬೇಗ ಕಲಿಯಾಗೇಳು ರಣಕೆಂದ ೩೧

ಇಂದ್ರಜಿತುವಿನ ಕೈಸೇರಿದರೆ ನಮಗೆ ಕಡೆಗಾಲ ಬಂದಂತೆ. ಇದಕ್ಕೇನು ಹೇಳುತ್ತೀಯೆ ? ಇದಕ್ಕೆ ಏನಾದರೂ ಉಪಾಯವನ್ನು ಹುಡುಕಬೇಕು" ಎಂದ ವಿಭೀಷಣ. ೨೮. ಕೋಪವು ಕಿಡಿಗೆದರಲು, ಯುದ್ಧದಾವೇಶ ಹೆಚ್ಚಲು, ವೀರರಸದ ಮಾತು ಉಕ್ಕಲು, ಶೂರಮನಸ್ಸಿನ ಯುದ್ಧಪರಾಕ್ರಮದ ಉಗ್ರರೂಪ ಶೋಭಿಸಲು, ರಾಮದೂತ ಹನುಮಂತ ಸಂತೋಷದಿಂದ ಮೆಚ್ಚಿ ಹೊಗಳಲು ಇಂದ್ರಜಿತುವಿನ ಆಹುತಿಯು ಹಿಡಿದು ಹೋಗುವಂತೆ ಲಕ್ಷ್ಮಣನು ಅವನನ್ನು ಒದ್ದನು. ೨೯. ಬ್ರಹ್ಮನು ಕಳುಹಿಸಿದ ದಿವ್ಯ ರಥವು ಆಕಾಶಮಾರ್ಗದಿಂದ ಹಿಂದಿರುಗಿತು. ಇಂದ್ರಜಿತು ಉಕ್ಕೇರುವ ಮಹಾಕೋಪ ದಿಂದ ಕಣ್ದೆರೆದು ಇವರನ್ನು ನೋಡಿದನು. "ಯುದ್ಧಕ್ಕೆ ಬಾರೋ ನೀಚ. ಮರಣ ಹೋಮದ ಆಸೆಯನ್ನು ಬಿಡು" ಎನ್ನುತ್ತ ಲಕ್ಷ್ಮಣನು ದೇವತೆಗಳನ್ನು ಸೀಳಿದ ಇಂದ್ರ ಜಿತುವನ್ನು ಕಾಲಿನಿಂದ ತಿವಿದು ಯುದ್ಧಕ್ಕೆಬ್ಬಿಸಿದನು. ೩೦. "ದೈವದ್ರೋಹಿ, ಏಳು. ಬ್ರಾಹ್ಮಣನಿಂದಕ ಎದ್ದು ನಿಲ್ಲು. ರಾಕ್ಷಸರ ಸಾವಿನ ಮೃತ್ಯು ಬಂದಿದೆ ಕಣ್ತೆರೆದು ನೋಡು. ಯುದ್ಧವನ್ನು ಕೊಡು, ಬಾ. ನಿನ್ನ ಆಯುಧವನ್ನು ತೆಗೆದುಕೋ. ಹೋಮದ ಆಸೆ ಸಾಕು. ಇನ್ನು ಏಳು" ಎನ್ನುತ್ತ ಲಕ್ಷ್ಮಣನು ಪುನಃ ಇಂದ್ರಜಿತುವಿನ ಕಟಬಾಯನ್ನೊದೆದನು. ೩೧. "ಪರಸ್ತ್ರೀದ್ರೋಹಕ್ಕೆ ಸಹಾಯಕನಾದರೆ ಅವನನ್ನು ನರಕಕ್ಕೆ ಕೊಂಡೊಯ್ಯದೆ ಬಿಡುವುದೆ ? ಸಜ್ಜನರ ಮನಸ್ಸಿನ ದುಃಖದ ಬೆಂಕಿಯು ರಾಕ್ಷಸರೆಂಬ ಅರಣ್ಯವನ್ನು ಸುಡದೆ ಇರುವುದೆ ? ಪ್ರಾಣ ರಕ್ಷಿಸಿಕೊಳ್ಳುವ ಉದ್ದೇಶ

ಎದ್ದನವ ಕೆದಱಿದ ಬಣಂಬೆಯೊ । ಳೆದ್ದ ಕಾಳ್ಗಿಚ್ಚಿನವೊಲುಱೆ ಹೊದ
ಱೆದ್ದ ಕಂಗಳ ಕಿಡಿಯ ನಾಸಾಪುಟದ ಕಬ್ಬೊಗೆಯ
ಎದ್ದ ರೋಷದಿ ಮೂಱುಲೋಕವ । ನುದ್ದಿ ನುಂಗುವ ಹರನ ಖತಿಯನು
ಕದ್ದನೆನೆ ಘಲಿಕ್ಕಿದನು ನಿಜರಥದೊಳಿಂದ್ರಜಿತು ೩೨

ಕೊಂದು ಬಂದನೆ ನಿನ್ನನೀ ಮೂ । ಸುಂಡಿರಕ್ಕಸನಿವನ ರಕ್ತವ
ಹಿಂಡಿ ನಿನ್ನ ಪರಾಕ್ರಮಾಗ್ನಿಯ ಕೆಡಿಸಿ ಕಪಿಬಲದ
ಇಂಡೆಗರುಳನು ತಿಂಬೆ ಹಿಡಿ ಕೋ । ದಂಡವನು ಬಿಡು ಬಾಣವನು ಭಯ
ಗೊಂಡು ಹಿಂಗುವ ವೀರನೇ ತಾನೆನುತ ತೆಗೆದೆಚ್ಚ ೩೩

ಎಚ್ಚ ಬಾಣವನೀತನೆಡೆಯಲಿ । ಕೊಚ್ಚಿ ಕಣೆಗಳಲಭ್ರತಳವನು
ಬೆಚ್ಚನೈ ಬೆಳಗಾದುದನು ಜಗವಱಿಯದಾದುದೆನೆ
ಎಚ್ಚನಾತನನೀತನೀತನ । ನೆಚ್ಚನವನುಭಯಾಸ್ತ್ರದೆಸೆಗಳು
ಮುಚ್ಚಿದವು ಚುಂಬಿಸಿದವಂಬರದಮರಸಂತತಿಯ ೩೪

ಕೂಡಿತಸುರನ ಬಳಿಯ ನಾಯಕ । ವಾಡಿಗಳು ಬಳಿಸಲಿಸಿ ಕಪಿಬಲ
ಜೋಡಿಸಿತು ಜಾಹ್ನವಿಯ ತಂದೆಯ ತಮ್ಮನೊತ್ತಿನಲಿ
ಆಡಲೇನದನಸಮ ಸಮರಸ । ಗಾಢವನು ಬಳಿಕಿಬ್ಬರಲಿ ಕಿಡಿ
ಯಾಡಿದವು ಕಣೆಕಣೆಯ ಹೊಯ್ಲಿನಲಭ್ರದಳತೆಯಲಿ ೩೫

ದಿಂದ ಮಾರಣಹೋಮದ ಮೋಸವನ್ನೊಡ್ಡಿದರೆ ಅದರಿಂದ ಒಳ್ಳೆಯದಾಗುವುದೆ ? ಯಾಗವನ್ನು ತಕ್ಷಣ ಬಿಡು, ಯುದ್ಧಕ್ಕೆ ಕಲಿಯಾಗು ಏಳು" ಎಂದ ಲಕ್ಷ್ಮಣ. ೩೨. ಹುಲ್ಲುಮೆದೆಯಿಂದೆದ್ದ ಕಾಳ್ಗಿಚ್ಚಿನಂತೆ ಕಣ್ಣುಗಳಿಂದ ಕಿಡಿಗಳ ರಾಶಿಯನ್ನು ಕಾರುತ್ತ ಮೂಗಿನಿಂದ ಕಪ್ಪುಹೊಗೆಯನ್ನುಗುಳುತ್ತ ಇಂದ್ರಜಿತು ಎದ್ದನು. ರೋಷ ಕೆದರಿದಾಗ ಮೂರು ಲೋಕಗಳನ್ನೂ ತೇದು ನುಂಗುವ ಈಶ್ವರನ ಕ್ರೋಧವನ್ನು ಕದ್ದುಕೊಂಡು ಬಂದನೋ ಎನ್ನುವಂತೆ ಕೆರಳಿ ಇಂದ್ರಜಿತು ತನ್ನ ರಥವನ್ನೇರಿದನು. ೩೩. "ಈ ಮೂಸಂಡಿ ರಾಕ್ಷಸನು ನಿನ್ನನ್ನು ಕರೆದುಕೊಂಡು ಬಂದನೆ ? ಇವನ ರಕ್ತವನ್ನು ಹಿಂಡಿ ನಿನ್ನ ಪರಾಕ್ರಮಾಗ್ನಿಯನ್ನು ನಂದಿಸಿ ಕಪಿಸೈನ್ಯದ ದಂಡೆಗರುಳನ್ನು ತಿಂದುಹಾಕುತ್ತೇನೆ. ನಿನ್ನ ಧನುಸ್ಸನ್ನು ತೆಗೆದುಕೋ, ಬಾಣವನ್ನು ಬಿಡು. ಭಯಗೊಂಡು ಹಿಂದೆಗೆಯುವ ವೀರನೇ ನಾನು ?" ಎನ್ನುತ್ತ ಇಂದ್ರಜಿತು ಬಾಣಬಿಟ್ಟ. ೩೪. ಇಂದ್ರಜಿತು ಬಿಟ್ಟ ಬಾಣವನ್ನು ಲಕ್ಷ್ಮಣನು ನಡುವೆ ಕತ್ತರಿಸಿ ಬಾಣಗಳಿಂದ ಆಕಾಶವನ್ನು ಬೆಸೆದು ಬಿಟ್ಟನು, ಆಕಾಶ ಮುಚ್ಚಿಕೊಂಡುದರಿಂದ ಬೆಳಗಾದುದು ಜಗತ್ತಿಗೆ ಗೊತ್ತಾಗಲಿಲ್ಲ. ಇಂದ್ರಜಿತು ಲಕ್ಷ್ಮಣನ ಮೇಲೆ ಬಾಣಬಿಟ್ಟನು. ಲಕ್ಷ್ಮಣನು ಇಂದ್ರಜಿತುವಿನ ಮೇಲೆ ಬಾಣಬಿಟ್ಟನು. ಈ ಇಬ್ಬರು ವೀರರು ಪ್ರಯೋಗಿಸಿದ ಬಾಣಗಳು ದಿಕ್ಕುಗಳನ್ನು ಮುಚ್ಚಿದವು, ಗಗನದಲ್ಲಿದ್ದ ದೇವತೆಗಳನ್ನು ಚುಂಬಿಸಿದವು. ೩೫. ಇಂದ್ರಜಿತುವಿನ ಸೈನ್ಯದ ಮುಖಂಡರು ಅವನನ್ನು ಅನುಸರಿಸಿ ಬಂದು ಸೇರಿದರು. ಕಪಿಸೈನ್ಯವೂ ಗಂಗೆಯ ತಂದೆಯಾದ ವಿಷ್ಣುವಿನ ಅವತಾರಿ ರಾಮನ ತಮ್ಮ ಲಕ್ಷ್ಮಣನ

ಖಣಖಣತ್ಪಣ ಖಣಿಲುಖಣಿಲೆಂ । ದಣೆದವಂಬಂಬುಗಳಲಿಬ್ಬರ
ಕಣೆಯ ಕಡಿತದಲೆದ್ದ ಕಿಡಿಯುಡರಿದವು ಮೇಲ್ಜಗವ
ಎಣಿಸಲಾ ಯುಗವೀ ಯುಗದ ಸುರ । ಗಣದ ರಕ್ಕಸಗಣದ ಸುಭಟರ
ಲೆಣೆಯ ಕಾಣೆನು ಲಕ್ಷ್ಮಣಂಗವಮರೇಂದ್ರಜಿತುವಿಂಗೆ ೩೬

ಮೊಳಗಿದವು ರಣವಾದ್ಯವಾಚೆಯು । ಲೊಲಿದುದಬ್ಬರವೀಚೆಯುಲಿ ಕೈ
ಲುಳಿಯ ಶರಸಂಧಾನದೆಸುಗೆಯ ಚಳಚಮತ್ಕೃತಿಯ
ಹಿಳುಕು ಹಿಳುಕಿನ ಸಂದಣಿಯ ಸರ । ಗೊಳಿಸಿದಸ್ತ್ರಾನೀಕದುಬ್ಬಿನ
ವಿಲಸದಬ್ಬರ ತುಂಬಿದುದು ಸಂಗ್ರಾಮಭೂಮಿಯುಲಿ ೩೭

ಕಡಿದ ಕಣೆವಿಂಡುಗಳಲೂರ್ವರೆ । ಝುಡಿದುದಾಶಾಭಿತ್ತಿ ಕಣೆಯಿಂ
ದಿಡಿದುದಂಬರ ತುಂಬಿದುದು ಬಾಣಾಂಬುರಾಶಿಯುಲಿ
ಹಿಡಿದ ಹರಿಗೆಯನೊಡ್ಡಿ ತಲೆಗಳ । ಮುಡಗಿದುದು ರಕ್ಕಸರ ಬಲ ಮುಱಿ
ವಿಡಿದು ಗಿರಿಗಳನೊಡ್ಡಿ ನಿಂದುದು ಸೇನೆ ವಾನರರ ೩೮

ಏಱಿಸಿದ ಹುಬ್ಬುಗಳ ಮಿಗೆ ಕೆಂ । ಪೇಱಿ ಕೆದಱಿದ ದೃಷ್ಟಿಗಳ ನಲ
ವೇಱಿ ನಿಲುಕದ ಕಾಯುಗಳ ಕರ್ಣಾಂತ ಮುಷ್ಟಿಗಳ
ತೂಱುಗಣೆಗಳ ತೋಱಿಕೆಯ ಸರ । ಳೇಱ ಬಾಯ್ಗಳಲೊಗುವ ನೆತ್ತರ
ಜೋಱುಗಳ ಜೋಡಣೆಯ ಭಟರೊದಗಿದರು ಸರಿಸದಲಿ ೩೯

ಬಳಿಯಲ್ಲಿ ಬಂದು ನಿಂತಿತು. ಇಂದ್ರಜಿತು ಲಕ್ಷ್ಮಣರ ನಡುವಿನ ಉಗ್ರ ಕದನವನ್ನು ಏನೆಂದು ವರ್ಣಿಸಲಿ. ಇಬ್ಬರೂ ಪ್ರಯೋಗಿಸಿದ ಬಾಣಗಳು ಆಕಾಶದಲ್ಲಿ ಒಂದಕ್ಕೊಂದು ತಗುಲಿ ಕಿಡಿಗಳನ್ನು ಸುರಿಸಿದವು. ೩೬. ಇಂದ್ರಜಿತು ಲಕ್ಷ್ಮಣರು ಬಿಟ್ಟ ಬಾಣಗಳು ಒಂದಕ್ಕೊಂದು ತಗುಲಿ ಖಣ ಖಣ ಖಣಿಲು ಖಣಿಲು ಎಂದು ಶಬ್ದಮಾಡಿದವು. ಇಬ್ಬರ ಬಾಣಗಳು ಒಂದನ್ನೊಂದು ಕತ್ತರಿಸಿದಾಗ ಎದ್ದ ಕಿಡಿಗಳು ಮೇಲು ಲೋಕಕ್ಕೆ ಹಾರಿದವು. ಯೋಚಿಸಿ ನೋಡಿದರೆ ಲಕ್ಷ್ಮಣ ಇಂದ್ರಜಿತುಗಳಿಗೆ ಹಿಂದಿನ ಯುಗದ ದೇವತೆಗಳು ರಾಕ್ಷಸರು ಸಮಾನರಲ್ಲ. ೩೭. ಅತ್ತ ರಾಕ್ಷಸಸೈನ್ಯದಲ್ಲಿ ರಣವಾದ್ಯಗಳು ಭೋರ್ಗರೆದವು ; ಇತ್ತ ಕೈಚುರುಕಿನಿಂದ ಬಿಲ್ವಿದ್ಯಾಕೌಶಲದೊಡನೆ ಬಾಣಬಿಡುವ ಅಬ್ಬರ ಮೊರೆಯಿತು. ಗರಿಗಳ ಬಾಣಗಳನ್ನು ಬಿಲ್ಲಿಗೆ ಹೂಡಿ ಏಕಪ್ರಕಾರವಾಗಿ ಅಸ್ತ್ರಗಳನ್ನು ಬಿಡುವ ಬೊಬ್ಬೆಯು ಯುದ್ಧರಂಗವನ್ನು ವ್ಯಾಪಿಸಿತು. ೩೮. ಕತ್ತರಿಸಿದ ಬಾಣಗಳ ರಾಶಿಯಿಂದ ಭೂಮಿ ತುಂಬಿಹೋಯಿತು. ದಿಕ್ಕುಗಳನ್ನು ಬಾಣಗಳು ವ್ಯಾಪಿಸಿದವು. ಬಾಣಗಳ ಸಮೂಹವು ಆಕಾಶವನ್ನು ಮುಚ್ಚಿತು. ರಾಕ್ಷಸಸೈನ್ಯವು ಬಾಣಗಳು ಬೀಳದಂತೆ ಗುರಾಣಿಗಳನ್ನು ಎತ್ತಿಹಿಡಿದು ಅದರಡಿಯಲ್ಲಿ ತಲೆಮರೆಸಿಕೊಂಡಿತು ; ವಾನರ ಸೈನ್ಯವು ಬಾಣಗಳಿಗೆ ಮರೆಯಾಗಿ ಬೆಟ್ಟಗಳನ್ನು ತಲೆಯ ಮೇಲೆ ಎತ್ತಿ ಹಿಡಿದು ನಿಂತಿತು. ೩೯. ಹುಬ್ಬುಗಳನ್ನೇರಿಸಿದ, ಕೆಂಗಣ್ಣುಗಳ ದೃಷ್ಟಿಯ, ಉತ್ಸಾಹದಿಂದ ನೆಟ್ಟಗೆ ನಿಂತ, ಕಿವಿಯವರೆಗೆ ತೂರುಬಾಣಗಳನ್ನು ಹಿಡಿದೆಳೆದ ಮುಷ್ಟಿಗಳ, ಬಾಣಗಳು ಚುಚ್ಚಿದುದರಿಂದಾದ ಗಾಯಗಳ ಬಾಯಿಂದ ಜೋರಾಗಿ ರಕ್ತ ಸುರಿಯುತ್ತಿರುವ ವೀರರು ಸಮಸಮ

ಎಸುಗೆಯಲಿ ಸೌಮಿತ್ರಿ ಕೌತುಕ । ದೆಸುಗೆಯನು ಸುರಸೈನಿಕಕೆ ತೋ
ಱಿಸಿದನೊಂದೇ ಸರಳಿನಲಿ ರಿಪುಹಯಚತುಷ್ಟಯವ
ದೆಸೆಚತುಷ್ಟಯಕೆಚ್ಚು ಸೂತನ । ನುಸುರುಗೆಡಿಸಿ ವರೂಥಚಕ್ರವ
ವಸುಧೆಗೊಱಗಿಸಿ ಪದಚರನ ಮಾಡಿದನು ಪ್ರತಿಭಟನ ೪೦

ಎಲವೊ ರಾವಣಿ ಮಾದುದೇ ಕ । ತ್ತಲೆಯ ಕಟಕವನೊಡ್ಡಿ ಗಗನ
ಸ್ಥಳದೊಳಗೆ ಮೈದೋಱದೆಸುವುಬ್ಬಾಳುತನವಿಂದು
ಕಲಿಗಳಿಗೆ ಗುಣವಿದು ಕಣಾ ದು । ರ್ಬಲದ ರಣಗಳ್ಳರಿಗಿದೇ ಗುಣ
ವಳಿದಡೆಯು ಜೀವಿಸಿದಡೆಯು ರಣನಿಂದೆಯಲ್ಲೆಂದ ೪೧

ಕಾಯವನು ಬೈಚಿಡದೆ ಬಿಡು ನಿಜ । ಸಾಯಕವ ಸಮಗಲಹವೀಗಿದು
ಮಾಯೆಯನು ಮಱೆಗೊಂಬುದನುಚಿತ ಜಗದ ವೀರರಿಗೆ
ರಾಯಕಟಕದ ಭಟರು ರಣ ಕ । ಟ್ಟಾಯತಿಕೆಯನು ನೋಡಲಮರನಿ
ಕಾಯವೆನುತೊಂದಂಬಿನಲಿ ಕಡಿದಿಳುಹಿದನು ಧನುವ ೪೨

ಪೂತುರೇ ಬಿಲ್ಲಾಳು ಮಾವಾ । ಭೂತನಾಥಂಗಿಲ್ಲವೀ ವಿ
ದ್ಯಾತಿಶಯ ಮಝು ಭಾಪು ಲೇಸೆಂದೊಲೆದನವಯವವ
ವಾತಸುತನಾಹವ ಜಗದ್ವಿ । ಖ್ಯಾತನೈ ರಾಮಂಗೆ ಸರಿಯೆಂ
ದಾತ ಹೊಗಳಿದನಾ ವಿಭೀಷಣನಾ ನೃಪಾನುಜನ ೪೩

ವಾಗಿ ಕಾದಾಡಿದರು. ೪೦. ಲಕ್ಷ್ಮಣನು ತನ್ನ ಬಾಣಪ್ರಯೋಗದಿಂದ ದೇವತೆಗಳ ಸೈನಿಕರಿಗೆ ಕುತೂಹಲವನ್ನುಂಟುಮಾಡಿದನು. ಒಂದೇ ಬಾಣದಿಂದ ಶತ್ರುವಿನ ನಾಲ್ಕು ಕುದುರೆಗಳನ್ನು ನಾಲ್ಕು ದಿಕ್ಕುಗಳಿಗೆ ಹಾರಿಸಿ ಸಾರಥಿಯನ್ನು ಕೊಂದು ರಥದ ಚಕ್ರವನ್ನು ನೆಲಕ್ಕುರುಳಿಸಿ ಇಂದ್ರಜಿತು ನೆಲದಮೇಲೆ ನಿಲ್ಲುವಂತೆ ಮಾಡಿದನು. ೪೧. “ಲೋ, ರಾವಣನ ಮಗನೇ, ಕತ್ತಲೆಯ ರಾಶಿಯನ್ನೊಡ್ಡಿ ಅದೃಶ್ಯನಾಗಿ ಆಕಾಶದಿಂದ ಬಾಣ ಬಿಡುವ ದರ್ಪವು ಮುಗಿಯಿತೇ ? ಬದುಕಲಿ ಸಾಯಲಿ, ಹೀಗೆ ಯುದ್ಧಮಾಡುವುದು ವೀರರಿಗೆ ಲಕ್ಷಣ, ಬಲಹೀನರಾದ ರಣಗಳ್ಳರಿಗೂ ಇದೇ ಲಕ್ಷಣ. ಇದು ರಣನಿಂದೆಯಲ್ಲ” ಎಂದ ಲಕ್ಷ್ಮಣ, ೪೨. “ನಿನ್ನ ದೇಹವನ್ನು ಮರೆಮಾಡದೆ ನಿನ್ನ ಅಸ್ತ್ರಗಳನ್ನು ಪ್ರಯೋಗಿಸು. ಇದು ಸಮಯುದ್ಧ. ಜಗತ್ತಿನ ವೀರರು ಮಾಯೆಯನ್ನು ಆಶ್ರಯಿಸುವುದು ಅನುಚಿತ. ನಿನ್ನ ತಂದೆಯ ಸೈನ್ಯದ ವೀರರು ಮತ್ತು ದೇವತೆಗಳು ನಿನ್ನ ಕದನಪರಾಕ್ರಮವನ್ನು ನೋಡಲಿ” ಎಂದು ಹೇಳುತ್ತ ಲಕ್ಷ್ಮಣನು ಒಂದು ಬಾಣದಿಂದ ಇಂದ್ರಜಿತುವಿನ ಬಿಲ್ಲನ್ನು ಕತ್ತರಿಸಿಹಾಕಿದನು. ೪೩. “ಶಹಬಾಸ್ ಬಿಲ್ವಿದ್ಯಾಶೂರ, ಭಲಾ! ಭೂತನಾಥ ಶಿವನಿಗೆ ಈ ಬಿಲ್ವಿದ್ಯಾಕೌಶಲ್ಯವಿಲ್ಲ. ಮಝು ಭಾಪು, ಲೇಸು!” ಎಂದು ಮಾರುತಿ ಮೈಮುರಿದನು, “ಬಿಲ್ವಿದ್ಯೆಯಲ್ಲಿ ಜಗದ್ವಿಖ್ಯಾತನಯ್ಯ, ರಾಮನಿಗೆ ಸರಿಸಮ” ಎಂದು

ಕೊಲ್ಲೆನಸ್ತ್ರಾಳಿಗಳು ಕೈಗಳ । ಲಿಲ್ಲದನ ಗತರಥನ ಬವರಕೆ
ಬಿಲ್ಲ ಕೋ ಹೊಸರಥವ ನೀ ನಿಜವಾಗಿ ಮೇಳೈಸು
ಕುಳ್ಳಿರಿಸು ಕೂಬರದ ಮಣೆಯಲಿ । ಬಲ್ಲ ಸೂತನ ನೂತನದ ರಣ
ಮಲ್ಲನಾಗೆಂದಭಯವಿತ್ತನು ನಗುತ ಸೌಮಿತ್ರಿ ೪೪

ಆ ನಿಮಿಷದಲಿ ಚಾಚಿತಸಮ ನ । ವೀನರಥ ಹಾಯ್ದುದರುತಂಬಿನ
ಸೋನೆಯನು ಸೈಗಱೆದನಾ ಕಾರ್ಮುಗಿಲ ಮಳೆಯಂತೆ
ಏನ ಹೇಳುವೆನೀತನಹಿತನ । ನೂನ ಶಿರಸಂತತಿಯ ಸವರಿ ಸ
ಮಾನ ರಚನೆಯ ರಣವ ಮೆಱೆದುಬ್ಬೆಱೆದನಿದಿರಿನಲಿ ೪೫

ಎಚ್ಚನಿಂದ್ರಾರಾತಿ ಮಾಯೆಯ । ಮುಚ್ಚಿಕೆಯನಿದಿರೊಡ್ಡಿ ಲಕ್ಷ್ಮಣ
ನೆಚ್ಚನಾ ಮಾಯಾವಿಕಾರಿಯ ಬಾಣಪಂಜರವ
ಮುಚ್ಚುಮಱೆಯಲಿ ಹದ್ದು ಹಾವುಗ । ಳೆಚ್ಚಱೆಸೆ ನೀವುಳಿದೆನೆಂದೇ
ನಚ್ಚಿದಿರಲಾಯೆನುತ ಬೊಬ್ಬೆಱೆದೆಚ್ಚನಿಂದ್ರಾರಿ ೪೬

ಆರು ಬಲ್ಲಾ ಬೊಮ್ಮ ಹರಸುವ । ಹಾರುವನು ಜವಕಿಂಕರನು ಕಾ
ಮಾರಿ ಭಿಕ್ಷುಕನೆಮಗೆ ತೊತ್ತಿರು ಮೃತ್ಯುಮಾಸಣಿಗಳು
ಹಾರವಿಸದಿರು ಹಿಂದಣವದಿರು । ತೀರಿದರು ರಣಕೆಂದು ಕದನಕ
ಠೋರಗತಿ ಬೇಱೆದೆಯೆನುತ ಬೊಬ್ಬೆಱೆದನಿಂದ್ರಾರಿ ೪೭

ವಿಭೀಷಣನು ಲಕ್ಷ್ಮಣನನ್ನು ಹೊಗಳಿದನು. ೪೪. "ಕೈಗಳಲ್ಲಿ ಅಸ್ತ್ರಗಳಿಲ್ಲದವನನ್ನು ರಥವಿಲ್ಲದವನನ್ನು ನಾನು ಕೊಲ್ಲುವುದಿಲ್ಲ. ಯುದ್ಧಕ್ಕೆ ಬಿಲ್ಲನ್ನು ತೆಗೆದುಕೋ, ಹೊಸರಥವನ್ನು ಸಜ್ಜುಗೊಳಿಸಿಕೋ. ನುರಿತ ಸಾರಥಿಯನ್ನು ಇರ್ಚಿಮರದ ಮಣೆಯ ಮೇಲೆ ಕೂರಿಸು. ಹೊಸ ಕದನಧೀರನಾಗು" ಎಂದು ಲಕ್ಷ್ಮಣ ನಗುತ್ತ ಇಂದ್ರಜಿತುವಿಗೆ ಅಭಯವಿತ್ತನು. ೪೫. ಆ ಕ್ಷಣವಲ್ಲಿ ಅಸಮಾನವಾದ ಹೊಸರಥವು ಇಂದ್ರಜಿತುವಿನ ಬಳಿಗೆ ಬಂದು ನಿಂತಿತು. ಇಂದ್ರಜಿತು ರಥವನ್ನೇರಿ ಕಾರ್ಮೋಡದ ಮಳೆಯಂತೆ ಬಾಣಗಳ ಮಳೆಯನ್ನು ಸುರಿಸಿದನು. ಲಕ್ಷ್ಮಣನು ಶತ್ರುವಿನ ಅಮೋಘಬಾಣಗಳ ಸಮೂಹವನ್ನು ಕತ್ತರಿಸಿ ಅವನಿಗೆ ಸರಿಸಮಾನ ಯುದ್ಧಕೊಟ್ಟು ಗರ್ಜಿಸಿದನು. ೪೬. ಇಂದ್ರಜಿತು ಎದುರಿಗೆ ಮಾಯೆಯ ಮರೆಯನ್ನೊಡ್ಡಿ ಲಕ್ಷ್ಮಣನ ಮೇಲೆ ಬಾಣಬಿಟ್ಟನು. ಲಕ್ಷ್ಮಣನು ಆ ಮಾಯಾವಿಯ ಬಾಣಗಳ ಪಂಜರದ ಮೇಲೆ ಬಾಣಬಿಟ್ಟನು. "ಮುಚ್ಚುಮರೆಯಲ್ಲಿ ಹದ್ದು ಹಾವುಗಳು ನಿಮ್ಮನ್ನು ಎಚ್ಚರಿಸಲು ನೀವು ಬದುಕಿದೆವು ಎಂದೇ ನಂಬಿಕೊಂಡಿರಲ್ಲವೇ-?" ಎನ್ನುತ್ತ ಗರ್ಜನೆಮಾಡುತ್ತ ಇಂದ್ರಜಿತು ಬಾಣಬಿಟ್ಟನು. ೪೭. "ನಾವು ಯಾರು ಗೊತ್ತೋ ? ಬ್ರಹ್ಮನು ನಮ್ಮನ್ನು ನಿತ್ಯ ಆಶೀರ್ವದಿಸುವ ಬ್ರಾಹ್ಮಣ ; ಯಮ ನಮ್ಮ ಸೇವಕ ; ಶಿವ ಭಿಕ್ಷುಕ ; ಮೃತ್ಯುಮಸಣಿಗಳು ದಾಸಿಯರು. ಈ ಹಿಂದೆ ಯುದ್ಧವಲ್ಲಿ ನಮ್ಮ ಕಡೆಯ ವೀರರು ನಿಮ್ಮ ಕೈಯಿಂದ ಸತ್ತರೆಂದು ಆಸೆಯಿಂದಿರಬೇಡ. ಮುಂದಿನ ಕಠೋರವಾದ ಯುದ್ಧಕ್ರಮವೇ ಬೇರೆ" ಎಂದು ಇಂದ್ರಜಿತು ಕೂಗು

ಮತ್ತೆ ಮಾಣಿರಿ ಮೂಗು ಹೋದರೆ । ಹತ್ತಿಸಿದನೇ ಕಮಲಭವ ನಿ
ಮ್ಮತ್ತೆಗಳೆದಸುರರನು ಜವ ತಂದಿತ್ತನೇ ನಿಮಗೆ
ಮೃತ್ಯುವನು ಗೆದ್ದಾತ ಜೀವವ । ನಿತ್ತಿದನೆ ನಿಮ್ಮಯ್ಯನನುಜನ
ಕತ್ತೆಯೋ ರಕ್ಕಸನೊ ನೀನೆನುತೆಚ್ಚನಾ ಖಳನ ೪೮

ಸರಳನವ ಕತ್ತರಿಸಿ ರಘುಜಾ । ವರಜಗೆಂದನು ಮುಂದಣಾಜಿಯ
ಹರುಹ ನೋಡಾ ತೋಱಿದಡೆ ತಱಿದಿಳುಹುವೆನು ತಲೆಯ
ಮರುಳುಗಳು ನರರಕಟ ನೆಱೆ ಕೆ । ಟ್ಟರಿ ವಿಭೀಷಣನೆಂಬ ಬಲು ಬೋ
ಸರಿಗನನು ನೆಱೆನಂಬಿ ನಮ್ಮ ವಿರೋಧದಲಿಯೆಂದ ೪೯

ಕೊಲಿಸಿ ನಮ್ಮನು ನಿಮ್ಮ ಕೈಯಲಿ । ಗೆಲವ ತೋಱಿಸಿ ನಿಮಗೆ ತುದಿಯಲಿ
ಕೊಲುವ ನಿಮ್ಮನು ಕೊಂಬನೆಮ್ಮಯ ನಿಮ್ಮ ಧರಣಿಗಳ
ಇಳೆಯಮಗಳಿಗೆ ಮನವ ಮಾಡಿದು । ತೊಳಸಿ ತಂದ ಕುಮಂತ್ರವಿದು ನಿಮ
ಗೊಳಗು ತಿಳಿಯದೆ ಕೆಟ್ಟಿರಕಟಕಟೆಂದನಿಂದ್ರಾರಿ ೫೦

ಆವ ಪರಿಯಲಿ ಹೊಕ್ಕನಿವನೆಂ । ಬೀ ವಿಚಾರವನಱಿಯದಾದಿರಿ
ದೇವನಿವ ವಿಶ್ವಾಸಘಾತಕ ಕುಟಿಲಕುಹಕರಿಗೆ
ಹಾವುಮೆಕ್ಕೆಯ ಹಣ್ಣನಂದದ । ಜೀವಿಯಿವ ಮಿತ್ರತ್ವ ಹದ್ದಿಗೆ
ಹಾವಿಗುಂಟೇ ತುದಿಗೆ ನಿಮ್ಮಯ ವಿಧಿಯ ನೋಡೆಂದ ೫೧

ಹಾಕಿದ. ೪೮. "ಪುನಃ ನಿಮ್ಮ ಚಾಲನ್ನು ಬಿಡುವುದಿಲ್ಲ. ನಿಮ್ಮತ್ತೆ ಶೂರ್ಪಣಖಿಯ ಕತ್ತರಿಸಿದ ಮೂಗನ್ನು ಬ್ರಹ್ಮ ಬಂದು ಅಂಟಿಸಿದನೇ ? ಅವಳಿಗಾಗಿ ಹೋರಾಡಿದ ಖರ ದೂಷಣ ಮೊದಲಾದವರನ್ನು ಯಮನು ಬದುಕಿಸಿ ನಿಮಗೆ ತಂದುಕೊಟ್ಟನೇ ? ಮೃತ್ಯುಂಜಯ ಶಿವನು ನಿಮ್ಮಪ್ಪನ ತಮ್ಮನ ಪ್ರಾಣವನ್ನುಳಿಸಿದನೇ ? ನೀನೇನು ಕತ್ತೆಯೋ ರಾಕ್ಷಸನೋ ?" ಎಂದು ಹಂಗಿಸಿ ಲಕ್ಷ್ಮಣ ಇಂದ್ರಜಿತುವಿನ ಮೇಲೆ ಬಾಣ ಬಿಟ್ಟ. ೪೯. ಇಂದ್ರಜಿತು ಲಕ್ಷ್ಮಣನು ಬಿಟ್ಟ ಸರಳನ್ನು ಕತ್ತರಿಸಿ ಲಕ್ಷ್ಮಣನನ್ನು ಕುರಿತು "ಮುಂದಿನ ಕದನದ ವಿಸ್ತಾರವನ್ನು ನೋಡು. ತೋರಿಸಿದರೆ ಸಾಕು ತಲೆಯನ್ನು ಕತ್ತರಿಸಿ ಕೆಡವುತ್ತೇನೆ. ನರರು ಮೂಢರು. ವಿಭೀಷಣನೆಂಬ ಭಾರಿ ಮೋಸಗಾರನನ್ನು ನಂಬಿ ನಮ್ಮೊಡನೆ ದ್ವೇಷಕಟ್ಟಿಕೊಂಡು ಕೆಟ್ಟಿರಿ" ಎಂದು ನುಡಿದನು. ೫೦. "ವಿಭೀಷಣನು ನಮ್ಮನ್ನು ನಿಮ್ಮ ಕೈಯಿಂದ ಕೊಲ್ಲಿಸಿ ನಿಮಗೆ ಗೆಲುವನ್ನು ತೋರಿಸಿಕೊಟ್ಟು ಕೊನೆಗೆ ನಿಮ್ಮನ್ನು ಕೊಂದು ನಿಮ್ಮ ಮತ್ತು ನಮ್ಮ ರಾಜ್ಯಗಳನ್ನು ವಶಪಡಿಸಿಕೊಳ್ಳುವನು. ಸೀತೆಯ ಮೇಲೆ ಮನಸ್ಸಿಟ್ಟು ಗೊಂದಲವುಂಟುಮಾಡಿ ತಂದ ಕುತಂತ್ರವಿದು. ಅಯ್ಯೋ, ನಿಮಗೆ ಒಳಗಿನ ಗುಟ್ಟು ತಿಳಿಯದೆ ಕೆಟ್ಟಿರಿ" ಎಂದ ಇಂದ್ರಜಿತು. ೫೧. "ಯಾವ ರೀತಿಯಲ್ಲಿ ಇವನು ಬಂದು ನಿಮ್ಮ ಮರೆಹೊಕ್ಕನೆಂಬ ವಿಚಾರವನ್ನು ನೀವು ತಿಳಿಯದೆ ಹೋದಿರಿ. ಈ ವಿಭೀಷಣದೇವನು ಕಪಟಿಗಳಿಗೂ ವಂಚಕರಿಗೂ ಮೀರಿದ ವಿಶ್ವಾಸ ಘಾತಕ. ಹಾವುಮೆಕ್ಕೆ ಹಣ್ಣಿನಂಥ ಬದುಕಿನವನಿವನು. ಹದ್ದಿಗೂ ಹಾವಿಗೂ ಎಂದಾ

ಎಲವೊ ಸುಭಟಾಧಮನೆ ಕದನದೊ । ಳಳವಡದ ಮಾಯೆಯನು ಮಾತಿನ
ಬಳಕೆಯಲಿ ಬೆದಱಿಸಲು ಬೆದಱುವರೆಂದು ಬಗೆದೆಯಲ
ಕಲುಮುಶದ ಚಿಪ್ಪಿನಲಿ ಮುಕ್ತಾ । ಫಲವು ಹುಟ್ಟಲು ಕೊಱತೆಯೇ ನಿ
ರ್ಮಲ ವಿಭೀಷಣನೆಂಬುದನು ನಾವಱಿಯೆವೇಯೆಂದ ೫೨

ಸಾಕು ಬಗುಳದಿರಿನ್ನು ಹಯವನು । ನೂಕು ಕಣೆಗಳ ಕಳುಹು ಮಾಯಾ
ವ್ಯಾಕರಣ ಪಾಂಡಿತ್ಯವನು ನಮ್ಮೊಡನೆ ಮೆಱೆಯದಿರು
ಸೋಕಿದೀ ಪಾತಕವು ನಿಮ್ಮನು । ಸಾಕಬಲ್ಲುದೆ ಬೇಗ ಮಾಡು ಸ
ಮೀಕವಿದು ನಿನ್ನಸುವಿಗಂತವೆನುತ್ತ ತೆಗೆದೆಚ್ಚ ೫೩

ಮುಸುಕಿದಂಬಿನ ಬಂಬಲನು ನಿ । ಷ್ಪಸರದಲಿ ತಱಿದೊಟ್ಟಿ ರಾವಣಿ
ಮುಸುಕಿದನು ಮಾಗಧಿಯ ಮಗನನು ಮಾರ್ಗಣಂಗಳಲಿ
ಎಸುವ ಕಳಚುವ ಕಣೆಯ ಕದನದ । ಕೊಸರ ತೋಟಿಯಲವನಿತಳ ಬಾ
ಱಿಸಿತು ತೊರವೆಯರಾಯ ಚಿಂತಿಸುತಿರ್ದನನುಜಂಗೆ ೫೪

ದರೂ ಸ್ನೇಹವುಂಟೇ ? ಕೊನೆಗೆ ನಿಮ್ಮ ಗತಿಯೇನಾಗುವುದೋ ನೋಡಿ" ಎಂದ ಇಂದ್ರಜಿತು. ೫೨. "ಲೋ ಸೀಚವೀರನೇ, ಯುದ್ಧದಲ್ಲಿ ಸಾಧಿಸಲಾಗದ ಮಾಯೆಯನ್ನು ಮಾತಿನ ಮೂಲಕ ವಿಸ್ತರಿಸಿ ಬೆದರಿಸಿದರೆ ಹೆದರಿಬಿಡುತ್ತಾರೆ ಎಂದು ಯೋಚಿಸಿದೆಯಲ್ಲವೆ ? ಕೊಳಕು ಮುತ್ತಿನಚಿಪ್ಪಿನಲ್ಲಿ ಮುತ್ತು ಹುಟ್ಟಿದರೆ ಅದಕ್ಕೆ ದೋಷವೇ ? ವಿಭೀಷಣನು ಪರಿಶುದ್ಧನೆಂಬುದು ನಮಗೆ ತಿಳಿಯದೇ ?" ಎಂದ ಲಕ್ಷ್ಮಣ. ೫೩. "ಸಾಕು, ಇನ್ನು ಹೆಚ್ಚು ಬೊಗಳಬೇಡ. ಕುದುರೆಯನ್ನು ಮುಂದಕ್ಕೆ ನಡೆಸು, ಬಾಣಗಳನ್ನು ಕಳುಹಿಸು. ನಮ್ಮೊಡನೆ ನಿನ್ನ ಮಾಯಾವ್ಯಾಕರಣಪಾಂಡಿತ್ಯವನ್ನು ಪ್ರದರ್ಶಿಸಬೇಡ. ನಿಮಗೆ ತಟ್ಟಿದ ಪಾಪವು ನಿಮ್ಮನ್ನು ರಕ್ಷಿಸಬಲ್ಲುದೇ ? ಬೇಗ ಮಾಡು. ಈ ಯುದ್ಧವು ನಿನ್ನ ಪ್ರಾಣಕ್ಕೆ ಮುಕ್ತಾಯಹಾಡುವುದು" ಎನ್ನುತ್ತ ಲಕ್ಷ್ಮಣ ಬಾಣಗಳನ್ನು ಬಿಟ್ಟ. ೫೪. ಮುಸುಕಿದ ಬಾಣದ ಹೊದೆಯನ್ನು ನಿಷ್ಠುರವಾಗಿ ಕತ್ತರಿಸಿ ರಾಶಿಹಾಕಿದ ಇಂದ್ರಜಿತು ಬಾಣಗಳಿಂದ ಲಕ್ಷ್ಮಣನನ್ನು ಮುಚ್ಚಿಬಿಟ್ಟನು: ಅಂಬನ್ನು ಬಿಡುವ ಮತ್ತು ಅಂಬನ್ನು ಕತ್ತರಿಸುವ ಬಾಣಗಳ ಅತಿಶಯದ ಹೋರಾಟದಿಂದ ಭೂಮಿಯು ಕಂಪಿಸಿತು. ಶ್ರೀರಾಮನು ತಮ್ಮನ ಬಗ್ಗೆ ಚಿಂತೆಮಾಡುತ್ತಿದ್ದನು.

# ನಲವತ್ತುಮೂರನೆಯ ಸಂಧಿ

ಸೂಚನೆ॥ ಅಮಮ ವೀರಹಿರಣ್ಯಕನ ವಿ । ಕ್ರಮ ನೃಕಂಠೀರವನ ರಣಸಂ
ಭ್ರಮಕೆ ಶತಗುಣವೆನಲು ಕಾದಿದರುಭಯ ಪಟುಭಟರು

ವಸುಮತೀಪತಿಸೂನು ಕೇಳ್ ರ । ಕ್ಕಸನ ರಣರಂಜಕವ ನಾವೇ
ನಸುರ ಸುರ ಮಾನವ ಭುಜಂಗರೊಳಿಲ್ಲ ಹೇಳುವಡೆ
ಹೆಸರುಗೊಳಲಂಭೋಜಭವ ನಿ । ರ್ಮಿಸಿದ ಸೃಷ್ಟಿಯಲಾದಿಮಧ್ಯದ
ವಿಷಮ ವೀರರೊಳಿಂದ್ರಜಿತುವಿಂಗಾರು ಸರಿಯೆಂದ ೧

ಬಹಳ ಬಲ ಬಲರಿಪುವಿರೋಧಿಯ । ವಹಣೆ ಬೇಱೆಸುಗೆಯಲಿ ತೋಱಿದ
ಸಹಿತನಂಗದಲೇಳುಸಾವಿರ ಬಾಣವೊಂದಱಲಿ
ಗ್ರಹಿಸುವಂದಿಂದ್ರಾರಿಯೊಳು ವಿ । ಗ್ರಹಕೆ ನಿಂದಮರೇಂದ್ರನುಱು ವಿ
ಗ್ರಹದ ಕೋಪದ ಕಂಗಳವೊಲತಿಕಾಯಹರನೆಸೆದ ೨

ಮುಗುಳೆ ಸರಳೊಂದಱಲಿ ಹೃದಯವ । ಹುಗಿಲುಗೊಱೆದನು ನೈರುತಾಸ್ತ್ರದ
ಲಗುಳದೆಱೆದರುಣಾಂಬುವನು ಕುಂಭಿನಿಯ ಮೈನನೆಯೆ
ತೆಗೆದೆಸುವ ಕೈಲುಳಿಯ ಬಲುಹಿನ । ಬಿಗುಹು ಬಟ್ಟುದು ಬಳಲಿಕೆಯ ಮೈ
ದೆಗಹಿನೊಡೆಯನ ಕಂಡು ಕವಿದುದು ಕಪಿಭಟವ್ರಾತ ೩

ಸೂಚನೆ॥ ಅಬ್ಬಬ್ಬ ವೀರಹಿರಣ್ಯಕಶಿಪು ಮತ್ತು ಪರಾಕ್ರಮಿ ನರಸಿಂಹರ ನಡುವಿನ ಯುದ್ಧವೈಭವಕ್ಕೆ ನೂರುಮಡಿ ಹೆಚ್ಚು ಎನ್ನುವಂತೆ ಇಬ್ಬರು ವೀರರಾದ ಇಂದ್ರಜಿತು ಲಕ್ಷ್ಮಣರು ಕಾದಾಡಿದರು. ೧. ರಾಜಕುಮಾರ, ಇಂದ್ರಜಿತು ರಾಕ್ಷಸನ ಯುದ್ಧದ ಸೊಗಸನ್ನು ಆಲಿಸು ; ರಾಕ್ಷಸರು, ದೇವತೆಗಳು, ಮನುಷ್ಯರು ಮತ್ತು ನಾಗರುಗಳಲ್ಲಿ ಹೆಸರು ಹೇಳಲು ಅವನಿಗೆ ಸಮಾನರಿಲ್ಲ. ಬ್ರಹ್ಮಸೃಷ್ಟಿಯ ಆದಿ ಮತ್ತು ಮಧ್ಯ ಕಾಲಗಳಲ್ಲಿ ವೀರ ಇಂದ್ರಜಿತುವಿಗೆ ಯಾರು ಸರಿ–ಎಂದು ವಾಲ್ಮೀಕಿಮಹರ್ಷಿಗಳು ಲವಕುಶ ಕುಮಾರರಿಗೆ ತಿಳಿಸಿದರು. ೨. ಬಹಳ ಬಲಶಾಲಿ ಇಂದ್ರಜಿತುವಿನ ಕದನದ ವಿಲಾಸವೇ ಬೇರೆ ; ಒಂದು ಬಾಣವೆಂದು ಗ್ರಹಿಸುವಷ್ಟರಲ್ಲಿ ಏಳುಸಾವಿರ ಬಾಣಗಳು ಶತ್ರುವಿನ ಅಂಗದ ಮೇಲೆ ಬೀಳುವಂತೆ ಇಂದ್ರಜಿತು ಬಾಣಪ್ರಯೋಗಮಾಡಿದ. ಹಿಂದೆ ಇಂದ್ರಜಿತುವಿನೊಡನೆ ಯುದ್ಧಕ್ಕೆ ನಿಂತ ಇಂದ್ರನು ಕೆರಳಿದನೋ ಎಂಬಂತೆ ಅತಿಕಾಯನನ್ನು ಕೊಂದ ಲಕ್ಷ್ಮಣನು ಕೆರಳಿದನು. ೩. ಪುನಃ ಇಂದ್ರಜಿತು ಒಂದು ಬಾಣದಿಂದ ಲಕ್ಷ್ಮಣನ ಹೃದಯದಲ್ಲಿ ತೂತು ಕೊರೆದನು; ನೈರುತಾಸ್ತ್ರದ ಬಾಣವು ಲಕ್ಷ್ಮಣನ ಎದೆಗೆ ನಾಟಿತು. ಅದನ್ನು ಕೀಳಲು ನೆಲದ ಮೈ ನೆನೆಯುವಂತೆ ರಕ್ತ ಹರಿಯಿತು. ಬಾಣಬಿಡುವ ಲಕ್ಷ್ಮಣನ ಚುರುಕಿನ ಕೈಯ ಬಿಗಿ ತಪ್ಪಿತು ; ಬಳಲಿಕೆಯಿಂದ ಮೈತೆಗೆದು ನಿಂತ ಲಕ್ಷ್ಮಣನನ್ನು

ಕವಿದ ನೀಲನನಿಕ್ಕಿದನು ಮುಂ । ಚೂವ ಮರುದ್ಗಣರಾಜಪುತ್ರನ
ಪವಡಿಸಲು ಸೆಕ್ಕಿದನು ಶರಿಸದಲೊದಗುವಬುಜಜನ
ಭವನ ಬೀಳಲು ಕುಕ್ಕಿದನು ರಿಪು । ಬವರಕಂಗೈಸಿದ ಗವಾಕ್ಷನ
ಗವಿಯ ಹರಣವ ಹಿಕ್ಕಿದನು ಸೊಕ್ಕಿದನು ಸಮರದಲಿ ೪

ನಳನನಳಿಸಿದನಾ ಸುಷೇಣನ । ಹಲುಗಿರಿಸಿದನು ಗಜನ ಗವಯನ
ನೆಲಕೆ ಬೀಳಿಸಿ ತೀರಿಸಿದನವರವರ ಸೈನಿಕವ
ಮಲೆತ ಹನುಮನ ಹೂಳಿದನು ಹೊಂ । ಬೆಳಕುಗಳ ಹೊಸ ಸರಳಿನಲಿ ಕೈ
ಲುಳಿಯ ತೋಱಿದನಯ್ಯನನುಜಂಗಾರ್ದು ಶಕ್ರಜಿತು ೫

ಜಾರಿವರಿವರಿದಟ್ಟನೊದಗಿದ । ವೀರ ಕಪಿನಾಯಕರ ಮರಳಿದು
ಮಾರುತಿಯ ನೋಯಿಸಿದ ಮುಂದಣ ಮಾಗಧೀಸುತನ
ಕೂರಲಗಿನಲಿ ಮುಸುಕಿ ಬೊಬ್ಬಿಱಿ । ದಾರಿ ತೇರನು ತಿರುಹಿ ನಿಂದು ಪ
ಚಾರಿಸುತ ಕೈಯಿಕ್ಕಿದನು ಕದನಕೆ ವಿಭೀಷಣನ ೬

ಬಗೆವನೇ ಬವರವನು ಮುಳಿದಡೆ । ಎಂಗೆ ವಿಭೀಷಣದೇವ ದೇವಾ
ದಿಗಳು ಭೋಯೆನೆ ಕೊಂಡನಗ್ಗದ ವಿಗ್ರಹದ ಗದೆಯ
ನೆಗೆದು ಹೊಯ್ದನು ರಾವಣಿಯ ರಥ । ದಗಡುತನ ನುಗ್ಗಾಗೆ ನೆಲ ಬಾ
ಯ್ದೆಗೆಯಲೂಳೆ ಫಣೀಂದ್ರ ಬೀಳೆ ದಿಶೇಭಸಂದೋಹ ೭

ಕಂಡು ಕಪಿವೀರರ ಸಮೂಹವು ಇಂದ್ರಜಿತುವನ್ನು ಮುತ್ತಿತು. ೪. ತನ್ನನ್ನು ಮುತ್ತಿದ ನೀಲನನ್ನು ಕೆಡವಿದನು ; ಮುನ್ನುಗ್ಗುವ ವಾಲಿಕುಮಾರ ಅಂಗದನನ್ನು ಮಲಗುವಂತೆ ಬಾಣದಿಂದ ನೆಲಕ್ಕೆ ಸಿಕ್ಕಿಸಿದನು ; ಯುದ್ಧ ಬಯಸಿ ಬಂದ ಗವಾಕ್ಷನನ್ನು ಬ್ರಹ್ಮನ ಮನೆಯು ಬೀಳುವಂತೆ ಕುಕ್ಕಿದನು ; ಗವಿಯ (?) ಪ್ರಾಣವನ್ನು ತೀಡಿದನು. ಹೀಗೆ ಇಂದ್ರಜಿತು ಯುದ್ಧದಲ್ಲಿ ಸೊಕ್ಕಿದನು. ೫. ಇಂದ್ರಜಿತು ನಳನನ್ನು ಅಳಿಸಿಬಿಟ್ಟನು ; ಸುಷೇಣನು ಹಲ್ಲುಕಿರಿಯುವಂತೆ ಮಾಡಿದನು ; ಗಜ ಗವಯರುಗಳನ್ನು ನೆಲಕ್ಕೆ ಬೀಳಿಸಿ ಅವರುಗಳ ಸೈನಿಕರನ್ನು ಕೊಂದುಹಾಕಿದನು ; ಮದಿಸಿ ಬಂದ ಹನುಮಂತನನ್ನು ಹುಗಿದು ಬಿಟ್ಟನು : ತನ್ನ ತಂದೆಯ ತಮ್ಮ ವಿಭೀಷಣನ ಮೇಲೆ ಹೊಂಬೆಳಕು ಬೀರುವ ಹೊಸ ಬಾಣಗಳನ್ನು ಬಿಟ್ಟು ಅರ್ಭಟಿಸಿ ತನ್ನ ಕೈಚಳಕವನ್ನು ತೋರಿಸಿದನು. ೬. ಕೌಶಲ್ಯದಿಂದ ಮುನ್ನಡೆ ನಡೆದು ಇಂದ್ರಜಿತು ಯುದ್ಧಕ್ಕೆ ಬಂದ ಕಪಿನಾಯಕರನ್ನು ಬಾಣದಿಂದ ಹೊಡೆದನು ; ಪುನಃ ಹನುಮಂತನನ್ನು ನೋಯಿಸಿದನು, ಎದುರುಗಡೆಯಲ್ಲಿದ್ದ ಲಕ್ಷ್ಮಣನನ್ನು ಹರಿತವಾದ ಬಾಣಗಳಿಂದ ಮುಚ್ಚಿ ಅರ್ಭಟಿಸಿದನು. ರಥವನ್ನು ತಿರುಗಿಸಿ ನಿಂತು ಹೀಯಾಳಿಸುತ್ತ ವಿಭೀಷಣನೊಡನೆ ಕಾಳಗದಲ್ಲಿ ತೊಡಗಿದನು. ೭. ಕೆರಳಿದರೆ ವಿಭೀಷಣನು ಯುದ್ಧವನ್ನು ಲಕ್ಷಿಸುತ್ತಾನೆಯೇ ? ದೇವತೆಗಳು ಭೋ ಎಂದು ಕೂಗಲು ವಿಭೀಷಣನು ತನ್ನ ಯುದ್ಧದ ಗದೆಯನ್ನು ತೆಗೆದುಕೊಂಡು ಇಂದ್ರಜಿತುವಿನ ರಥವನ್ನು ಹೊಡೆದನು. ರಥದ ಮೇರೆ ಮೀರಿದ ನುಗ್ಗಾಟ ನುಚ್ಚು ನೂರಾಯಿತು. ವಿಭೀಷಣನ ಗದೆಯ ಏಟಿಗೆ ನೆಲ ಬಾಯಿ ಬಿಟ್ಟಿತು, ಆದಿಶೇಷನು

ಗದೆಯ ಹಿಡಿದಾಕ್ಷಣ ವರೂಥವ । ನೊದೆದು ಚಿಮ್ಮಿದನಸುರನಯ್ಯನ
ಕದನದತಿ ಭೀಷಣವ ಬಲ್ಲವನಾಗಿ ಬಳಿರಥಕೆ
ಸದಕಿದನು ಬಳಿಕಾತ ರಣಕೊದ । ಗಿದ ಮಹಾರಥಮಂಡಳಿಯ ಮದ
ರದನಿಗಳ ಮಾವುತರ ರಾವುತರ ಹಯವ ಕಾಲಾಳ ೮

ಅನಿತಱೊಳು ಸಂತೈಸಿ ರಾಘವ । ನನುಜನಗ್ಗದ ಚಾಪವಮೌರ್ವೀ
ನಿನದವನು ನೆಗಹಿದನು ನಳಿನಭವಾಂಡ ಗುಮ್ಮಿಡಲು
ಹನುಮನುಬ್ಬಿಱಿದರಿಯ ತೇರಿನ । ತನಿವರಿಯ ತಡೆದಾರಿದನು ಸಂ
ಜನಿಸಿದುದು ಸಮರಾಭಿಮಾನಗಳುಭಯ ವೀರರಿಗೆ ೯

ಮಲೆತರಿಬ್ಬರು ಮತ್ತೆ ಮದಕರಿ । ಮಲೆನವೊಲು ಮದದುಬ್ಬುಗೊಬ್ಬಿನ
ಕಲಿತನದ ಕೈಮೆಗಳ ಮೆಱೆದರು ಕಣೆಯ ಕಡುಹಿನಲಿ
ಖಳಿಫಳಿಲು ಖಣಿಖಟಿಲು ಗರ್ಗರ । ಗಳ ಮಹಾ ಮಾರ್ಗಣಗಣಂಗಳ
ಬಲುಸಬುದ ಸಡಗರಿಸಲೆಚ್ಚಾಡಿದರು ಸರಿಸದಲಿ ೧೦

ಹಳಚಿದವು ಕಣೆ ಕಣೆಗಳನು ಖಂ । ಡಳಿಸಿದವು ಕಣೆ ಕಣೆಗಳನು ಸೀ
ಳ್ದುಳಿದು ಹಾಯ್ದುವು ಕಣೆ ಕಣೆಯ ಕಣೆ ಕಣೆಗಳೆಸುಗೆಯಲಿ
ಕಳುಗಿಡಿಯ ಕಾರ್ಬೊಗೆಯ ಬಲುಮಂ । ಡಳಿಯ ಬೀಱಿದವಭ್ರದಲಿ ಶಿಖಿ
ಸುಳಿದು ಸುರಲೋಕವನು ಸುಡಬಗೆದುದು ನಿಹಾರದಲಿ ೧೧

ಗಟ್ಟಿಯಾಗಿ ಕಿರುಚಿಕೊಂಡನು, ದಿಗ್ಗಜಗಳು ಕೆಳಕ್ಕೆ ಬಿದ್ದವು. ೮. ಚಿಕ್ಕಪ್ಪನ ಯುದ್ಧದ ಭೀಕರತೆಯನ್ನು ಬಲ್ಲ ಇಂದ್ರಜಿತು ಗದೆಯನ್ನು ವಿಭೀಷಣನು ಕೈಯಲ್ಲಿ ಹಿಡಿದಾಕ್ಷಣ ತನ್ನ ರಥವನ್ನು ಒದ್ದು ಇನ್ನೊಂದು ರಥದ ಮೇಲಕ್ಕೆ ನೆಗೆದನು. ಆಗ ವಿಭೀಷಣನು ಯುದ್ಧಕ್ಕೆ ಬಂದಿದ್ದ ಮಹಾರಥಿಕರುಗಳನ್ನೂ, ಮದಿಸಿದ ಆನೆಗಳ ಮೇಲಿದ್ದ ಮಾವುತರನ್ನೂ ಕುದುರೆಸವಾರರನ್ನೂ, ಕುದುರೆ ಮತ್ತು ಕಾಲಾಳುಗಳನ್ನೂ ತದುಕಿದನು. ೯. ಅಷ್ಟರಲ್ಲಿ ಲಕ್ಷ್ಮಣನು ಚೇತರಿಸಿಕೊಂಡು ಬಿಲ್ಲಿನ ಹಗ್ಗವನ್ನು ಮಿಡಿದು ಧನುಷ್ಟಂಕಾರ ಮಾಡಿದನು ; ಆ ಶಬ್ದವು ಬ್ರಹ್ಮಾಂಡವನ್ನು ವ್ಯಾಪಿಸಿತು. ಹನುಮಂತನು ಆವೇಶದಿಂದ ಶತ್ರುವಿನ ರಥದ ಮುನ್ನುಗ್ಗುವಿಕೆಯನ್ನು ತಡೆದು ಗರ್ಜಿಸಿದ. ಇಬ್ಬರು ವೀರರಲ್ಲಿ ಯುದ್ಧಾಭಿಮಾನವು ಮೂಡಿತು. ೧೦. ಮದಿಸಿದಾನೆಗಳು ಒಂದನ್ನೊಂದು ಎದುರಿಸುವಂತೆ ಇಬ್ಬರು ವೀರರೂ ಪ್ರತಿಭಟಿಸಿ - ಉಗ್ರ ಬಾಣಪ್ರಯೋಗದ ಮೂಲಕ ತಮ್ಮ ಅತಿಶಯ ಪರಾಕ್ರಮವನ್ನು ಪ್ರದರ್ಶಿಸಿದರು. ಖಳಿ ಫಳಿಲ್, ಖಣಿ ಖಟಿಲ್ ಎಂಬುದಾಗಿ ಶಬ್ದಮಾಡುವ ಮಹಾ ಬಾಣಗಳನ್ನು ಹೊಡೆದು ಸಮಸಮವಾಗಿ ಯುದ್ಧಮಾಡಿದರು. ೧೧. ಇಬ್ಬರು ವೀರರ ಬಾಣಗಳು ಪರಸ್ಪರ ಒಂದಕ್ಕೊಂದು ಅಪ್ಪಳಿಸಿದವು, ಒಂದನ್ನೊಂದು ಕತ್ತರಿಸಿದವು, ಸೀಳಿ ಮುಂದೋಡಿದವು. ಬಾಣಗಳು ಉರಿಗಿಡಿಗಳ ಮತ್ತು ದಟ್ಟವಾದ ಕಪ್ಪುಹೊಗೆಯ ರಾಶಿಯನ್ನು ಗಗನಕ್ಕೆಸೆದವು. ಬೆಂಕಿ ಹಬ್ಬಿ ಆಕಾಶದಲ್ಲಿ ದೇವ

ಬಳಿಕ ಲಘುಸಂಧಾನದೆಸುಗೆಯ । ಲುಳಿಯ ಮೆಱೆದರು ಚಿತ್ರಗತಿಗಳ
ಚಳಬಳಿಕೆಗಳ ಚಪಳ ಚಾಪ ವಿಮುಕ್ತ ಮಾರ್ಗಣವ
ಬಳಸಲಿಸಿದಂಬುಗಳು ಪಾಯ್ದು । ಚ್ಚಳಿಸಿದವು ಭಟರಂಗದಲಿ ಹೆ
ಕ್ಕಳಿಸಿದವು ಬಳಿಯಂಬು ಬೆಂಬಳಿಯಂಬು ಸಂದಣಿಸಿ ೧೨

ಜೋಡು ನನೆದವು ಜೋರುನೆತ್ತರ । ರಘಾಡಿಯಲಿ ಸಿಕ್ಕಿದವು ಘಾಯದ
ಬೀಡೆಗಳು ಬಳಿಸರಳ ಸಂದಣಿ ನಿಂದವಿಬ್ಬರಲಿ
ಪಾಡುಪಂಥದ ಸಮರ ಸಮಯದ । ಮೋಡಿ ಮುಱಿದವು ಮಱವೆಯಲಿ ಮೈ
ಗೂಡುಗೊಂಡಂತರಿಸಿದರು ಬಳಲಿಕೆಯ ಭಾರದಲಿ ೧೩

ತೆಗೆದರಿಬ್ಬರನಿಬ್ಬರಾಪ್ತರು । ತಗಹ ಬಿಡಿಸಿದರಂಗಮೂರ್ಛೆಯ
ರಗುತಗಳ ತೊಳೆದಂಬನುಗಿದೇಱುಗಳಲೌಷಧಿಯ
ಬಗೆಗೊಳಿಸಿ ಬೆಳುವಟ್ಟೆಗಳನು । ಟ್ಟಗರು ಕುಂಕುಮ ಗಂಧದನುಲೇ
ಪಗಳಲೆಸೆದರು ಕರ್ಪೂರದ ಹಳುಕುಗಳ ಕವಳದಲಿ ೧೪

ಬೊಬ್ಬಿಱಿದು ಬಳಿಕುಬ್ಬಿ ಬಿಲುಗಳ । ತೆಬ್ಬೆಗಳನಾರೈದು ಲುಳಿವಡೆ
ದಬ್ಬಿಸಿದರಂಬುಗಳಲಂಬರ ತುಂಬಲಗಲದಲಿ
ಮಬ್ಬಿಡುವ ನಿಡುಮುಗಿಲ ಮೋಹರ । ಕುಬ್ಬುವಂಬುಧಿಯಂತೆ ಕದನದ
ಕೊಬ್ಬಿನಲಿ ಕಲಿಯೋಱಿ ಬಳಿಕಿಂತೆಂದನಿಂದ್ರಾರಿ ೧೫

ಲೋಕವನ್ನು ಸುಡಬಯಸಿತು, ೧೨. ಆ ಇಬ್ಬರು ವೀರರು ಚಮತ್ಕಾರದ ಹೆಜ್ಜೆಯ ಗತಿಗಳಿಂದ ನಿರಂತರವಾಗಿ ತಮ್ಮ ತಮ್ಮ ಬಿಲ್ಲುಗಳಿಗೆ ಬಾಣಗಳನ್ನು ಹೂಡಿ ಲಘು ಸಂಧಾನದಿಂದ ಬಾಣಪ್ರಯೋಗದ ನೈಪುಣ್ಯವನ್ನು ಮೆರೆದರು. ಒಂದರ ಹಿಂದೆ ಒಂದರಂತೆ ಬಿಟ್ಟ ಬಾಣಗಳು ಚಿಮ್ಮಿ ಓಡಿದವು ; ಬಳಿಯಂಬು ಅದನ್ನು ಹಿಂಬಾಲಿಸಿದ ಬಾಣ ಹೀಗೆ ಬಾಣಗಳು ಒಂದನ್ನೊಂದು ಅಟ್ಟಿಸಿಕೊಂಡು ಬಂದು ಗುಂಪು ಗುಂಪಾಗಿ ವೀರರ ಮೈಗಳನ್ನು ಮುತ್ತಿದವು. ೧೩. ಇಬ್ಬರು ವೀರರ ಮೈಗಳಿಗೆ ಚುಚ್ಚಿದ ಬಾಣಗಳ ಗಾಯಗಳಿಂದ ಸುರಿವ ರಕ್ತದ ಧಾರೆ ಅವರ ಕವಚಗಳನ್ನು ನೆನೆಸಿದವು. ಇಬ್ಬರ ಸಾಲುಬಾಣಗಳ ಪ್ರಯೋಗವು ನಿಂತಿತು ; ಅವರ ಆಣೆ ಹಟಗಳ ಯುದ್ಧದ ಕೌಶಲವು ಭಂಗವಾಯಿತು, ಮೈಸೆಟೆದುಕೊಂಡು ಬಳಲಿಕೆಯ ಭಾರದಿಂದ ಮೂರ್ಛೆ ಹೋದರು, ೧೪. ಲಕ್ಷ್ಮಣ ಇಂದ್ರಜಿತುಗಳನ್ನು ಅವರ ಆಪ್ತರು ಎತ್ತಿಕೊಂಡು ಹೋಗಿ ಉಪಚರಿಸಿ ಅವರ ದೇಹವನ್ನು ಮುಸುಕಿದ್ದ ಮೂರ್ಛೆಯನ್ನು ನಿವಾರಿಸಿದರು ; ರಕ್ತವನ್ನು ತೊಳೆದು ಚುಚ್ಚಿದ ಬಾಣಗಳನ್ನು ಕಿತ್ತು ಗಾಯಗಳಿಗೆ ಮದ್ದನ್ನು ಹಾಕಿದರು. ಇಬ್ಬರು ವೀರರು ಹೊಸ ಬಿಳಿಬಟ್ಟೆಗಳನ್ನು ಧರಿಸಿ ಅಗರು, ಕುಂಕುಮ, ಗಂಧಗಳನ್ನು ಬಳಿದುಕೊಂಡು ಪಚ್ಚಕರ್ಪೂರದ ತಾಂಬೂಲವನ್ನು ಸೇವಿಸಿದರು. ೧೫. ಸಿಂಹನಾದ ಮಾಡಿ ಉತ್ಸಾಹದಿಂದ ಬಿಲ್ಲಿನ ಹಗ್ಗಗಳನ್ನು ಪರೀಕ್ಷಿಸಿ ಚುರುಕಿನಿಂದ ಬಾಣಗಳನ್ನು ಬಿಡಲು ಅವು ಆಕಾಶವನ್ನು ತುಂಬಿದವು. ವಿಸ್ತಾರವಾದ ಕಪ್ಪುಮೋಡದ ರಾಶಿಗೆ ಉಬ್ಬುವ ಸಾಗರದಂತೆ ಕಾಳಗದ ಆವೇಶದಿಂದ ಹುರುಪುಗೊಂಡು ಇಂದ್ರಜಿತು ಲಕ್ಷ್ಮಣ

ಕರೆಸಿಕೋ ನಿಮ್ಮಣ್ಣದೇವನ । ನಿರಲಿ ಹತ್ತಿರೆ ಭರತ ಶತ್ರು
ಘ್ನರಿಗೆ ಬರಸೋಲೆಗಳ ಬದುಕಿದರಿಲ್ಲಿಯೇ ನಿಮ್ಮ
ಶರಣುಹೊಕ್ಕನ ಕಳುಹು ದೇಶಾಂ । ತರಕೆ ಲಕ್ಷ್ಮಣ ಕೇಳು ಮುಂದಣ
ಪರಕೆ ನೆನೆ ನಿನ್ನಿಷ್ಟದೈವವನೆನುತ ತೆಗೆದೆಚ್ಚ ೧೬

ಕರೆಸುವೆನು ನಮ್ಮಣ್ಣನನು ದಶ । ಶಿರನ ವಧೆಗೋಲೆಯನಯೋಧ್ಯೆಗೆ
ಬರೆಸುವೆನು ರಿಪುವಿಜಯವಾರ್ತಾವಿಮಳ ಸಂಗತಿಗೆ
ಶರಣುಹೊಕ್ಕ ವಿಭೀಷಣನ ತಂ । ದಿರಿಸುವೆನು ಲಂಕಾಮಹಾಪುರ
ದರಸುತನಕಿಲೆ ಖೂಳ ಕೇಳೆನುತೆಚ್ಚನಾ ಖಳನ ೧೭

ಎಚ್ಚ ಬಾಣವನಸುರನೆಡೆಯಲಿ । ಕೊಚ್ಚಿ ಕಱಿದನು ಕಾಲಮೇಘದ
ಮುಚ್ಚಳನು ತೆಗೆದಂತೆ ಸರಳಿನ ವೃಷ್ಟಿ ಸರಗೊಳಿಸೆ
ಅಚ್ಚರಿಯಲಾ ಲಕ್ಷ್ಮಣನ ಕೈ । ನಚ್ಚಿನಂಬಿನ ಚಿತ್ರಗತಿ ರಥ
ದಚ್ಚ ರಥಿಕನ ಬಿಲ್ಲನುಡಿದುಪ್ಪರಿಸಿತಂಬರಕೆ ೧೮

ಎಲವೊ ರಾವಣಿ ಕೇಳು ರಾಕ್ಷಸ । ಕುಲದ ತಲೆ ಚೆಂಡಾಡುವಂಬಿನ
ಬಲುಹ ಕಂಡಾ ಕೊಲ್ಲೆನಂಜದಿರೇಱು ಹೊಸರಥವ
ಬಿಲುದುಡುಕು ಬಾಣಗಳ ಕಱೆ ಕೈ । ಲುಳಿಯ ನೋಡುವ ಬಳಿಕೆನುತ ಬಗೆ
ಗಳಚಲೆಚ್ಚನು ಕೊರಳುಗಳ ತೇಜಿಗಳ ಸಾರಥಿಯ ೧೯

ನನ್ನು ಕುರಿತು ಮುಂದಿನಂತೆ ನುಡಿದನು. ೧೬. "ನಿಮ್ಮಣ್ಣನನ್ನು ಕರೆಸಿಕೋ, ಅವನು ನಿನ್ನ ಹತ್ತಿರ ಇರಲಿ. ಭರತ ಶತ್ರುಘ್ನರಿಗೆ ಪತ್ರ ಬರೆಸು. ಬದುಕಿದ್ದರೆ ಇಲ್ಲಿಯೇ ನಿಮ್ಮ ಮರೆಹೊಕ್ಕ ವಿಭೀಷಣನನ್ನು ದೇಶಾಂತರ ಕಳುಹಿಸು. ಲಕ್ಷ್ಮಣ, ಪರಲೋಕಕ್ಕಾಗಿ ನಿನ್ನ ಇಷ್ಟದೈವವನ್ನು ಸ್ಮರಿಸು" ಎಂದು ನುಡಿದು ಇಂದ್ರಜಿತು ಬಾಣಬಿಟ್ಟ. ೧೭. "ದಶಕಂಠನನ್ನು ಕೊಲ್ಲಲು ನಮ್ಮಣ್ಣನನ್ನು ಕರೆಸುವೆನು. ಶತ್ರುಗಳನ್ನು ಗೆದ್ದ ಸಮಾಚಾರವನ್ನು ತಿಳಿಸಿ ಅಯೋಧ್ಯೆಗೆ ಪತ್ರ ಬರೆಸುವೆನು. ಮರೆಹೊಕ್ಕ ವಿಭೀಷಣನನ್ನು ಲಂಕಾನಗರದ ರಾಜನನ್ನಾಗಿ ಮಾಡುವೆನು, ಕೇಳು ದುಷ್ಟ" ಎಂದು ಹೇಳುತ್ತ ಲಕ್ಷ್ಮಣನು ಇಂದ್ರಜಿತುವಿನ ಮೇಲೆ ಬಾಣಬಿಟ್ಟನು. ೧೮. ಇಂದ್ರಜಿತು ಲಕ್ಷ್ಮಣನ ಬಾಣವನ್ನು ನಡುದಾರಿಯಲ್ಲಿ ಕತ್ತರಿಸಿ ಪ್ರಳಯಕಾಲದ ಮೋಡದ ಮುಚ್ಚಳವನ್ನು ತೆರೆದ ಹಾಗೆ ಒಂದೇ ಸಮನೆ ಬಾಣಗಳ ಮಳೆಯನ್ನು ಸುರಿಸಿದನು. ಲಕ್ಷ್ಮಣನ ಕೈಯ ನೆಚ್ಚಿನ ಬಾಣದ ಸಂಚಾರವು ಆಶ್ಚರ್ಯಕರವಾದುದು. ಅದು ಇಂದ್ರಜಿತುವಿನ ರಥದ ಅಚ್ಚನ್ನೂ ಬಿಲ್ಲನ್ನೂ ಮುರಿದು ಆಕಾಶಕ್ಕೆ ನೆಗೆಯಿತು. ೧೯. "ಲೋ, ರಾವಣಕುಮಾರ ಕೇಳು. ರಾಕ್ಷಸಕುಲದ ತಲೆಗಳನ್ನು ಚೆಂಡಾಡುವ ಬಾಣದ ಸಾಮರ್ಥ್ಯವನ್ನು ನೋಡಿದೆಯಾ ? ನಿನ್ನನ್ನು ಕೊಲ್ಲುವುದಿಲ್ಲ, ಹೆದರಬೇಡ. ಹೊಸ ರಥವನ್ನೇರು, ಬಿಲ್ಲನ್ನು ತೆಗೆದುಕೋ, ಬಾಣಗಳನ್ನು ಬಿಡು. ಅನಂತರ ನಿನ್ನ ಹಸ್ತಕೌಶಲ್ಯವನ್ನು ನೋಡೋಣ" ಎನ್ನುತ್ತ ಲಕ್ಷ್ಮಣನು ಇಂದ್ರಜಿತುವಿನ ಎದೆಗುಂದುವಂತೆ ಬಾಣ

ಕಳುಹಿದನು ಮಯನಾಕ್ಷಣದೊಳ । ಗ್ಗಳದ ರಥ ಸಾರಥಿಯು ತುರಗಾ
ವಳಿಯು ನಿಶಿತಾಕ್ಷಯ ಶರಂಗಳನುಗ್ರ ಕಾರ್ಮುಕವ
ತಳೆದುಕೊಳುತಾ ಚಾಪಮಾರ್ಗಣ । ಗಳನು ರಥದೊಳು ನಿಂದು ಬೊಬ್ಬಿಱಿ
ದಳವಿಗೊಂಡೀ ಮಾತನೆಂದನು ಮಾಗಧೀಸುತಗೆ ೨೦

ಕೇಳು ಲಕ್ಷ್ಮಣ ವತ್ಸರಗಳೀ । ರೇಳರುಪವಾಸದ ಸುನಿದ್ರಾ
ಲೋಲನಗ್ಗದ ಭಾಮಿನಿಯ ಸಂಭೋಗವರ್ಜಿತನ
ಮೇಲುಗೈಯುಹ ವೀರನಾದಡೆ । ಕೋಲ ಕಳುಹಲ್ಲದಡೆ ಹಿಂದಕೆ
ಬೀಳುಕೋ ಬಯಲಿಂಗೆ ದಾವತಿಗೊಳಲುಬೇಡೆಂದ ೨೧

ಇದಕೊ ಬರುತಿದೆ ಬಾಣವಿದ ಮ । ಧ್ಯದಲಿ ಸಡಿಲಿಪ ಶಕ್ತಿಯುಳ್ಳಡೆ
ತುದಿಗೊಳಿಸು ತೋಮರವ ತಿರುವಿನೊಳೆನುತ ಶಕ್ರಾರಿ
ತ್ರಿದಶಪತಿ ಹಿಡಿವಂಬ ನಾರಿಯು । ಲೊದಸಿ ಬೊಬ್ಬಿಱಿದಾರಿ ಶಕ್ರಾ
ಸ್ತ್ರದಲಿ ಸಂತೈಸಿದನು ಸುರಮಾರ್ಗಣದಿ ಸೌಮಿತ್ರಿ ೨೨

ಮಾತು ನಿನಗಿನ್ನೇಕೆಲವೊ ವರ । ಮೈಥಿಳೀಶನ ವಚನಮಾರ್ಗದ
ವೀಥಿಯುವರಾವೈನೆ ಮಾತೆರಡಿಲ್ಲ ನಮಗೆನುತ
ಪಾಥದುದ್ಭವ ಭೂತ ಸುಮನೋ । ನಾಥ ಮುಖ್ಯರು ಹೊಗಳೆ ಹಗೆಯು ವ
ರೂಥವನು ಪದಿನಾಱು ಯೋಜನಕೆಚ್ಚು ಬೊಬ್ಬಿಱಿದ ೨೩

ಬಿಟ್ಟು ರಥದ ಕುದುರೆಗಳ ಕತ್ತುಗಳನ್ನು ಕತ್ತರಿಸಿದನು. ೨೦. ಆಕ್ಷಣದಲ್ಲಿ ಮಯನು ಇಂದ್ರಜಿತುವಿಗೆ ಶ್ರೇಷ್ಠರಥ, ಸಾರಥಿ, ಕುದುರೆಗಳು, ಹರಿತವಾದ ಅಕ್ಷಯಬಾಣಗಳು ಮತ್ತು ಉಗ್ರ ಧನುಸ್ಸು ಮೊದಲಾದುವುಗಳನ್ನು ಕಳುಹಿಸಿಕೊಟ್ಟನು. ಇಂದ್ರಜಿತು ಆ ಬಿಲ್ಲು ಬಾಣಗಳನ್ನು ತೆಗೆದುಕೊಂಡು ರಥವನ್ನೇರಿ ನಿಂತು ಬೊಬ್ಬಿರಿದು ಆತ್ಮವಿಶ್ವಾಸದಿಂದ ಲಕ್ಷ್ಮಣನನ್ನು ಕುರಿತು ಮುಂದಿನ ಮಾತುಗಳನ್ನು ನುಡಿದನು. ೨೧. "ಕೇಳು ಲಕ್ಷ್ಮಣ, ಹದಿನಾಲ್ಕು ವರ್ಷಗಳು ಉಪವಾಸ ಮಾಡಿ ನಿದ್ದೆಯನ್ನು ಬಿಟ್ಟು ಸ್ತ್ರೀಸಂಗ ಮಾಡದ ಉತ್ತಮ ವೀರನಾಗಿದ್ದರೆ ಬಾಣಗಳನ್ನು ಕಳುಹಿಸು. ಇಲ್ಲದಿದ್ದರೆ ಹಿಂದಕ್ಕೆ ಹೋಗು. ಸುಮ್ಮನೆ ಶ್ರಮಪಡಬೇಡ" ಎಂದ ಇಂದ್ರಜಿತು. ೨೨. "ಇಗೋ ಈಗ ಬರುವ ಬಾಣವನ್ನು ಮಧ್ಯದಲ್ಲಿ ದುರ್ಬಲಗೊಳಿಸುವ ಶಕ್ತಿಯಿದ್ದರೆ ತೋಮರವನ್ನು ನಿನ್ನ ಬಿಲ್ಲಿನ ಹಗ್ಗಕ್ಕೆ ಹೂಡು" ಎಂದೆನ್ನುತ್ತ ಇಂದ್ರಜಿತು ದೇವೇಂದ್ರನ ಬಾಣವನ್ನು ಹೂಡಿ ಬಿಲ್ಲಿನ ಹಗ್ಗದಿಂದ ಒದೆದುಕೊಂಡು ಹೋಗುವಂತೆ ಚಿಮ್ಮಿಸಲು ಲಕ್ಷ್ಮಣನು ಬೊಬ್ಬಿರಿದು ಗರ್ಜಿಸಿ ಇಂದ್ರಾಸ್ತ್ರದಿಂದ ಅದನ್ನು ಶಾಂತಗೊಳಿಸಿದನು. ೨೩. "ನಿನಗೇಕೋ ಇನ್ನು ಮಾತು ? ಮೈಥಿಲೀಪತಿಯ ಮಾತಿನ ದಾರಿಯಲ್ಲಿ ನಾವು ನಡೆಯುವವರು ; ನಮಗೆ ಎರಡು ಮಾತಿಲ್ಲ" ಎನ್ನುತ್ತ ಲಕ್ಷ್ಮಣನು ಶತ್ರುವಿನ ರಥವನ್ನು ಹದಿನಾರು ಯೋಜನ ದೂರಕ್ಕೆ ಹಾರಿಸಿ ಬೊಬ್ಬಿರಿದ. ಆಗ ಬ್ರಹ್ಮ ಶಿವ ದೇವೇಂದ್ರರೇ ಮೊದ

ಆ ಮಹಾಮಾರ್ಗಣ ಸುವಿದ್ಯಾ । ವ್ಯೋಮಕೇಶಂಗೆಣೆಯೆನಲು ಬಹು
ದೈ ಮಹಾದೇವೆನುತ ಪೊಗಳದು ತಿರುಗಿ ನಿಜರಥತ
ಭೀಮಬಲನಸುರಾಸ್ತ್ರದಲಿ ನಿ । ಸ್ಸೀಮಬಲ ಲಕ್ಷ್ಮಣನ ಘನಸಂ
ಗ್ರಾಮಕೃತ ಲಕ್ಷ್ಮಣನ ವಕ್ಷವನೆಚ್ಚು ಬೊಬ್ಬಿರಿದ ೨೪

ಉಗಿದು ಹಾಯ್ದುದು ಬಾಣವೆದೆಯನು । ಬಗಿದು ಭೀಮಧ್ವಾನಗಾನದ
ಲುಗುಳುತರುಣಾಂಬುವನು ಬಳಿಕದ ಬಗೆಯದಬ್ಬರಿಸಿ
ಮಗಧಚಕ್ರೇಶ್ವರನ ಮೋಹದ । ಮಗಳ ಮಗನಮಳಾಸ್ತ್ರದಲಿ ಸುರ
ರಗಿಯೆ ಸುರವೈರಿಯ ಲಲಾಟವನೆಚ್ಚು ಬೊಬ್ಬಿರಿದ ೨೫

ಸರಳು ಸಮಗಣೆಯಾಗಿ ರಕುತವ । ನೆರಡು ಭಾಗದಲುಗುಳಿದುದುಯೆವೆ
ಮುರಿದವಂಗ ನಿಹಾರದಲಿ ಬಾರಿಸಿದ ಶೂಮ್ಮಿನಲಿ
ಕರದ ಬಿಲು ಕಳಚಿದುದು ಕಂಗಳು । ತಿರುಗಬಗೆದವು ತೇರಿನೊಳಗಂ
ತರಿಸುತಂತರಿಸುತ್ತ ಖಳ ನೆಮ್ಮಿದನು ಹಳವಿಗೆಯ ೨೬

ಹಾ ತ್ರಿವಿಷ್ಟಪರಾಯಜಿತು ಹಾ । ಹಾ ತ್ರಿಲೋಕೀಗಂಡಚಂಡ ವಿ
ಧಾತ್ರ ಬಾಣಸುಪಾಣಿ ಹಾಹಾಯೆನುತ ನಭದಿಂದ
ಧಾತ್ರಿಗಿಳಿವನು ಮಯನು ನಿಜ ದೌ । ಹಿತ್ರಮೋಹದಲಮಳತರ ಕರ
ಪಾತ್ರಜಲದಭಿಮಂತ್ರದಿಂದೆಬ್ಬಿಸಿದನಾ ಖಳನ ೨೭

ಲಾದವರು ಲಕ್ಷ್ಮಣನನ್ನು ಹೊಗಳಿದರು. ೨೪. "ಮಹಾದೇವ ! ಆ ಮಹಾಸ್ತ್ರ ವಿದ್ಯೆಯು ಶಿವನಿಗೆ ಸಮಾನವೆಂದು ಹೇಳಬಹುದು !" ಎಂದು ಹೊಗಳಿ ತನ್ನ ರಥವನ್ನು ಹಿಂದಿರುಗಿಸಿ ನಡೆಸಿಕೊಂಡು ಬಂದು ಭಯಂಕರ ಬಲಶಾಲಿ ಇಂದ್ರಜಿತುರಾಕ್ಷಸನು ಅಸುರಾಸ್ತ್ರದಿಂದ ಮಹಾಯುದ್ಧವಿಶಾರದ ಲಕ್ಷ್ಮಣನ ಎದೆಗೆ ಬಾಣಬಿಟ್ಟು ಬೊಬ್ಬಿರಿದನು. ೨೫. ಭಯಂಕರವಾಗಿ ಘೋರ್ಗರೆಯುತ್ತ ಇಂದ್ರಜಿತುವಿನ ಬಾಣವು ಲಕ್ಷ್ಮಣನ ಎದೆಯನ್ನು ಚುಚ್ಚಿ ರಕ್ತವನ್ನು ಚಿಮ್ಮಿಸಿತು. ಲಕ್ಷ್ಮಣನು ಅದನ್ನು ಲಕ್ಷಿಸದೆ ಮಗಧ ಚಕ್ರವರ್ತಿಯ ಮೋಹದ ಮಗಳಾದ ಸುಮಿತ್ರೆಯ ಮಗನು ಇಂದ್ರಜಿತುವಿನ ಹಣೆಗೆ ಬಾಣ ಹೊಡೆದು ಗರ್ಜಿಸಿದ. ಅದನ್ನು ಕಂಡ ದೇವತೆಗಳು ಹೆದರಿದರು. ೨೬. ಲಕ್ಷ್ಮಣನ ಬಾಣವು ಸಮಗಣೆಯಾಗಿ ಎರಡು ಕಡೆ ಗಾಯಮಾಡಿ ರಕ್ತವನ್ನು ಚಿಮ್ಮಿಸಿತು. ಇಂದ್ರಜಿತುವಿನ ರೆಪ್ಪೆ ಮುಚ್ಚಿತು. ಶೂನ್ಯಸ್ಥಿತಿಯುಂಟಾಗಿ ಮೈಮರೆತ ಅವನ ಕೈಯಿಂದ ಬಿಲ್ಲು ಜಾರಿ ಬಿದ್ದಿತು ; ಕಣ್ಣು ತೊಳಸಿತು ; ರಥದಲ್ಲಿ ತಡೆತಡೆದು ತತ್ತರಿಸಿ ಇಂದ್ರಜಿತು ಧ್ವಜಸ್ತಂಭವನ್ನು ಒರಗಿಕೊಂಡನು. ೨೭. 'ಅಯ್ಯೋ, ದೇವೇಂದ್ರನನ್ನು ಗೆದ್ದವನೇ ! ಮೂರು ಲೋಕಗಳ ವೀರರಿಗೆ ಕ್ರೂರವಿಧಿಸ್ವರೂಪನೇ, ಬಾಣಪ್ರಯೋಗ ಕುಶಲಹಸ್ತನೇ ! ಅಯ್ಯೋ, ಅಯ್ಯೋ !' ಎನ್ನುತ್ತ ಮಯನು ಆಕಾಶದಿಂದ ಭೂಮಿಗಿಳಿದುಬಂದನು. ಮಗಳ ಮಗನೆಂಬ ಮೋಹದಿಂದ ಕಮಂಡಲದ ನೀರಿನಿಂದ ಮಂತ್ರಿಸಿ

ತೆಗೆದು ತನ್ನಯ ದಿವ್ಯಕವಚವ । ಮಗಳಮಗನಂಗದಲಿ ತೊಡಿಸಿದು
ನೆಗಹಿ ನಿಂದಿರಿಸಿದನು ಕೊಟ್ಟನು ತನಗೆ ಪೂರ್ವದಲಿ
ಜಗದ ಪಿತನಿತ್ತುಗ್ರ ನಿಶಿತಾ । ಶುಗವನುಗ್ರ ಶರಾಸನವ ಕೈ
ಮುಗಿದ ಮೊಮ್ಮನ ಹರಸಿ ಹಾಯ್ದನು ಮಯನು ಮಾಯೆಯಲಿ ೨೮

ಆತ ಬಳಿಕುಬ್ಬೆಱೆದು ಕೊಂಡನು । ಮಾತೃಪಿತನಿತ್ತಂಬನದು ಲಯ
ವೀತಿಹೋತ್ರನನುಗುಳುತಿರ್ದುದು ಚಾಪಯಂತ್ರದಲಿ
ಕೌತುಕವಿದೇನೆನುತ ರಘುಸಂ । ಜಾತ ಚರಣಾರಾಧಕನು ಬಳಿ
ಕೀತಗೆಚ್ಚಱಿಸಿದನು ಮಾಯಾಮಯನ ಕೃತ್ರಿಮವ ೨೯

ಬೇಗ ತೊಡು ಪೈತಾಮಹಾಸ್ತ್ರವ । ನೀಗ ಗೆಲುವಡೆ ಸಮರದಲಿ ಶತ
ಯಾಗಜಿತು ತೊಡುವಸ್ತ್ರಭಂಗಕೆ ಮಱೆಯ ಮಾತೇನು
ತೂಗದವ ಮುಂಚಿದಡೆ ಕಮಲಜ । ಕೂಗಿದಡೆ ಕೇಳುಗ್ರ ನಿದ್ರಾ
ಯೋಗವಹುದೆಮಗಂದಿನವೊಲೆಂದಸುರಪತಿ ನುಡಿದ ೩೦

ಆ ವಚನವೀ ಭಟನ ಕರ್ಣವ । ನಾವರಿಸೆ ತಱಿದಿಳುಹಿದನು ಕಲಿ
ರಾವಣಿಯ ಕೋದಂಡಚಂಡ ಕಾಂಡಸಿಂಜಿನಿಯ
ದೇವತತಿ ಜೋಯೆಂದು ದುಂದುಭಿ । ರಾವದಲಿ ನಲವೇಱೆ ಬಳಿಯ ತ
ರಾಪಥಾನದಲರಿಯ ಮಕುಟವನೆಚ್ಚು ಬೊಬ್ಬಿಱಿದ ೩೧

ಇಂದ್ರಜಿತುವನ್ನು ಎಚ್ಚರಿಸಿದನು. ೨೮. ಮಯನು ತನ್ನ ದಿವ್ಯಕವಚವನ್ನು ತೆಗೆದು ಮಗಳಮಗನಾದ ಇಂದ್ರಜಿತುವಿಗೆ ತೊಡಿಸಿ ಅವನನ್ನು ಎತ್ತಿ ನಿಲ್ಲಿಸಿದನು. ಹಿಂದೆ ತನಗೆ ಬ್ರಹ್ಮನು ಕೊಟ್ಟಿದ್ದ ಹರಿತವಾದ ಬಾಣವನ್ನೂ ಮತ್ತು ಉಗ್ರ ಧನುಸ್ಸನ್ನೂ ಕೊಟ್ಟನು. ತನಗೆ ಕೈಮುಗಿದ ಮೊಮ್ಮಗನನ್ನು ಹರಸಿ ಮಯನು ಮಾಯೆಯಿಂದ ಅದೃಶ್ಯನಾದನು. ೨೯. ಬಳಿಕ ಇಂದ್ರಜಿತು ಹಿಗ್ಗಿ ತಾಯಿಯತಂದೆಯು ಕೊಟ್ಟ ಬಾಣವನ್ನು ತೆಗೆದುಕೊಂಡನು. ಅದು ಬಾಣಯಂತ್ರದಲ್ಲಿ ಪ್ರಳಯಾಗ್ನಿಯನ್ನು ಉಗುಳುತ್ತಿತ್ತು. ಇದೇನಾಶ್ಚರ್ಯವೆಂದು ನೋಡಿ ರಾಮಪಾದ ಆರಾಧಕನಾದ ವಿಭೀಷಣನು ಮಾಯಾವಿದನಾದ ಮಯನ ಕಪಟವನ್ನು ತಿಳಿಸಿ ಎಚ್ಚರಿಕೆ ಕೊಟ್ಟನು. ೩೦. "ಇಂದ್ರಜಿತು ಬಿಡುವ ಅಸ್ತ್ರವನ್ನು ಮುರಿದು ಈಗ ಯುದ್ಧದಲ್ಲಿ ಗೆಲ್ಲಬೇಕಾಗಿದ್ದರೆ ಬೇಗ ಬ್ರಹ್ಮಾಸ್ತ್ರವನ್ನು ಹೂಡು ; ಇದರಲ್ಲಿ ಮುಚ್ಚುಮರೆಯ ಮಾತಿಲ್ಲ. ಅವನು ಮುಂದಾಗಿ ಅಸ್ತ್ರಪ್ರಯೋಗ ಮಾಡಿದರೆ ನಮ್ಮ ಕೈ ನಡೆಯದು. ಆ ಅಸ್ತ್ರದ ಬ್ರಹ್ಮನು ಕೂಗಿದರೆ ಸಾಕು ಅಂದು ಆದಹಾಗೆ ನಮ್ಮನ್ನೆಲ್ಲ ಗಾಢನಿದ್ರೆಯು ಆವರಿಸಿಬಿಡುವುದು" ಎಂದು ವಿಭೀಷಣ ಲಕ್ಷ್ಮಣನಿಗೆ ಹೇಳಿದನು. ೩೧. ವಿಭೀಷಣನ ಮಾತು ಕಿವಿಗೆ ಬಿದ್ದೊಡನೆ ವೀರ ರಾವಣನ ಮಗನು ಬಿಲ್ಲಿನಲ್ಲಿ ಹೂಡಿದ್ದ ಭಯಂಕರ ಬಾಣದ ಹಗ್ಗವನ್ನು ಲಕ್ಷ್ಮಣನು ಕತ್ತರಿಸಿಹಾಕಿದನು. ಆಗ ದೇವತೆಗಳು ಜೋ ಎಂದು ಕೂಗುತ್ತ ದುಂದುಭಿಯನ್ನು ಬಾರಿಸಿ ಆನಂದಿಸಿದರು. ಲಕ್ಷ್ಮಣನು ಮರುಬಾಣದಿಂದ

ಕೆಡಿಸಿದನಲಾ ದ್ರೋಹಿ ಮರ್ಮವ । ನುಡಿದು ನಮ್ಮವನಲ್ಲದಿರ್ದಡೆ
ಬಿಡುವರೇ ಜೀವವನು ಜೀವಾಳದ ಮಹಾಭಟರು
ತೊಡೆವೆನಿವನ ಲಲಾಟಲಿಖಿತವ । ತಡೆಯದೀಕ್ಷಣ ಬಳಿಕ ಮೃತ್ಯುವಿ
ನೊಡಲ ಹೊಗಿಸುವೆ ಹಗೆಯನೆನುತೌಡಗಿದನಿಂದ್ರಾರಿ ೩೨

ಎತ್ತಿದನು ಕಿಱಿಯಯ್ಯಗಾ ಮಯ । ನಿತ್ತ ಶಕ್ತಿಯನೆಮ್ಮ ವಂಶಕೆ
ಮೃತ್ಯುವಾದಸುರಾಧಮನೆ ನೀ ನೋಡಿಕೋಯೆನುತ
ಒತ್ತಬರದುದ್ರೇಕದಿಂದಿದೆ । ಸತ್ತನಕಟಾ ಶರಣನೆಂದೊದ
ಱುತ್ತಲಿರೆ ಕಾಲಾಗ್ನಿತೇಜದಲೈದಿತಿದಿರಿನಲಿ ೩೩

ಹೆದಱಿದನು ಹನುಮಂತ ಜಾಂಬವ । ನುದರ ಕಳವಳಿಸಿತ್ತು ನಳನಂ
ಗದ ಸುಷೇಣ ಗವಾಕ್ಷ ನೀಲಾದ್ಯಖಿಳ ಕಪಿಭಟರ
ಹೃದಯ ಹಾತಕವಾಱಿದವು ಮಱು । ಗಿದುದು ಮರ್ಕಟಸೇನೆ ಹಾಯೆಂ
ದೊದಱಿದರು ನಭದಿಂದಲಾ ಪ್ರಹ್ಲಾದ ನಾರದರು ೩೪

ಏನು ದೈವಂಗಳಲಿ ಭಕ್ತಾ । ಧೀನರೋ ರಘುನಾಥ ಲಕ್ಷ್ಮಣ
ರಾ ನಿಮಿಷದೊಳಗಿದ್ದುದಿಕ್ಕಡಿಯಾಗಿ ಗಗನದಲಿ
ಆ ನಿಶಾಟ ಮಹಾಶಕುತಿಸಂ । ಧಾನ ವಿಶಿಖವ ಕಂಡುದಿಲ್ಲ ವಿ
ಮಾನಿಕರು ವಿಸ್ಮಯವಡೆನಲೆಸುಗೆಯಲಿ ಲಕ್ಷ್ಮಣನ ೩೫

ಶತ್ರುವಿನ ಕಿರೀಟವನ್ನು ಬಾಣದಿಂದ ಹೊಡೆದು ಆರ್ಭಟಿಸಿದ. ೩೨. "ಈ ವಿಶ್ವಾಸ ಘಾತಕನು ಗುಟ್ಟನ್ನು ಹೇಳಿಕೊಟ್ಟು ನಮ್ಮನ್ನು ಹಾಳುಮಾಡಿದ, ಇಲ್ಲದಿದ್ದರೆ ಸತ್ವಶಾಲಿಗಳಾದ ವೀರರು ಶತ್ರುಗಳ ಜೀವವನ್ನು ಸುಮ್ಮನೆ ಬಿಡುವರೇ. ಈ ಕ್ಷಣ ಈ ವಿಭೀಷಣನ ಹಣೆಯಬರಹವನ್ನು ಅಳಿಸಿಹಾಕುತ್ತೇನೆ. ಅನಂತರ ಶತ್ರುವನ್ನು ಮೃತ್ಯುವಿನ ಹೊಟ್ಟೆಗೆ ಹಾಕುತ್ತೇನೆ" ಎನ್ನುತ್ತ ಇಂದ್ರಜಿತು ಔಡುಗಚ್ಚಿದನು. ೩೩. ಮಯನು ಕೊಟ್ಟ ಮಹಾಸ್ತ್ರವನ್ನು ಇಂದ್ರಜಿತು ತನ್ನ ಚಿಕ್ಕಪ್ಪನ ಮೇಲೆತ್ತಿದನು. "ನಮ್ಮ ವಂಶಕ್ಕೆ ಮೃತ್ಯುವಾದ ನೀಚ ರಾಕ್ಷಸನೆ ನೀ ನೋಡಿಕೋ" ಎನ್ನುತ್ತ ಉದ್ರೇಕಾತಿಶಯದಿಂದ ಅಸ್ತ್ರವನ್ನು ಬಿಟ್ಟನು. 'ಅಯ್ಯೋ, ಶ್ರೀರಾಮಭಕ್ತನು ಸತ್ತನು !' ಎಂದು ಎಲ್ಲರೂ ಕೂಗಿಕೊಳ್ಳುತ್ತಿರುವಂತೆ ಅಸ್ತ್ರವು ಪ್ರಳಯಾಗ್ನಿಯ ತೇಜಸ್ಸಿನಿಂದ ವಿಭೀಷಣನ ಎದುರಿಗೆ ಬಂದಿತು. ೩೪. ಹನುಮಂತ ಹೆದರಿದನು ; ಜಾಂಬವಂತನ ಹೊಟ್ಟೆಯಲ್ಲಿ ಕಳವಳವೆದ್ದಿತು ; ನಳ, ಅಂಗದ, ಸುಷೇಣ, ಗವಾಕ್ಷ, ನೀಲನೇ ಮೊದಲಾದ ಸಮಸ್ತ ವಾನರನಾಯಕರ ಎದೆ ಬಡಿದುಕೊಂಡಿತು ; ವಾನರಸೈನ್ಯವು ದುಃಖಿಸಿತು; ಆಕಾಶದಿಂದ ಪ್ರಹ್ಲಾದ ನಾರದರು ಕಿರುಚಿಕೊಂಡರು. ೩೫. ದೇವರುಗಳಲ್ಲಿ ರಘುನಾಥ ಲಕ್ಷ್ಮಣರು ಅದೇನು ಭಕ್ತಾಧೀನರೋ ! ಆ ಅಸ್ತ್ರವು ಆಕಾಶದಲ್ಲಿ ಆ ಕ್ಷಣ ಎರಡು ತುಂಡಾಯಿತು. ಆ ರಾಕ್ಷಸ ಮಹಾಅಸ್ತ್ರಕ್ಕೆ ಗುರಿಮಾಡಿದ ಬಾಣವು ಕಣ್ಣಿಗೆ ಕಾಣಲಿಲ್ಲ. ಲಕ್ಷ್ಮಣನ ಅಸ್ತ್ರವಿದ್ಯಾಕೌಶಲವು ಆಶ್ಚರ್ಯಕರವೆಂದರು, ಆಕಾಶದಲ್ಲಿ ವಿಮಾನಗಳಲ್ಲಿದ್ದ ದೇವತೆ

ಗುಡಿವಿಡಿದು ಗುಹಿಲಿಜಿಸಿದು ನಾರದ । ಮೃಡರು ಕೊಂಡಾಡಿದರು ವೈಷ್ಣವ
ಗಡಣವಾನಂದಾಬ್ಧಿಯೊಳಗೋಲಾಡಿತಭ್ರದಲಿ
ಬಿಡುಮುಗುಳ ಮಲ್ಲಿಗೆಯ ಮಳೆ ಹೊನ । ಲಿಡಲು ಹರಿದುದು ರಾಯ ತೊರವೆಯ
ಕಡುಕೃಪಾಸಾಗರನ ತಮ್ಮನ ಶಿರದ ಸೀಮೆಯಲಿ ೩೬

ಗಳು. ೩೬. ನಾರದ ಮತ್ತು ಈಶ್ವರರು ರೋಮಾಂಚಗೊಂಡು ಕೇಕೆಹಾಕಿ ಲಕ್ಷ್ಮಣನನ್ನು ಕೊಂಡಾಡಿದರು. ವಿಷ್ಣುಭಕ್ತರ ಸಮೂಹವು ಆನಂತಸಾಗರದಲ್ಲಿ ಮುಳುಗಿತು. ಕರುಣಾಸಾಗರನಾದ ತೊರವೆಯ ನರಹರಿಯ ಅವತಾರಿ ಶ್ರೀರಾಮನ ತಮ್ಮನ ತಲೆಯ ಮೇಲೆ ಬಿಡಿಮಲ್ಲಿಗೆ ಮೊಗ್ಗುಗಳ ಮಳೆಯು ಆಕಾಶದಿಂದ ಸುರಿಯಿತು.

4೫

# ನಲವತ್ತುನಾಲ್ಕನೆಯ ಸಂಧಿ

ಸೂಚನೆ ॥ ವೀರ ವಿಜಯಾಹವನುದಾರ ಗ । ಭೀರಬಲ ಸೌಮಿತ್ರಿ ಗೋತ್ರಹ
ರಾರಿಯನು ಗೆಲಿದೊಲಿಸಿದನು ಭುಜವಿಜಯಭಾಮಿನಿಯ

ನಡೆದುದೀಪರಿ ನಾಲ್ಕುದಿನ ಬಿಡ । ದಡಸಿ ಸಂಗರವಿಬ್ಬರಿಗೆ ಕಪಿ
ಪಡೆಗೆ ಖಳಬಲಕಿರುಳುಹಗಲೆನ್ನದೆ ನಿರಂತದಲಿ
ಕಡೆಯದಿನ ಕಲಿಗಳಿಗೆ ಕಾಳಗ । ನಡೆದ ಪರಿಯನು ಕೇಳ್ವೆಯು
ಗ್ಗಡದ ರಾಜಕುಮಾರರಿರ ಚಿತ್ತಾವಧಾನದಲಿ ೧

ಶರಣನನು ತಲೆಗಾಯ್ದು ಭರತಾ । ವರಜ ಬಳಿಕಿಂತೆಂದನೆಲವೋ
ಧುರಪರಿಪೂರ್ತನಲ್ಲ ಸಾರ್ ಸುಡು ನಿನ್ನ ಸಾಹಸವ
ಅರಿಭಟರು ನಾವಿರಲು ನಮ್ಮನು । ಶರಣುಹೊಕ್ಕರಿಗಪಹತಿಯನಾ
ಚರಿಸಬಹುದೇ ಖೂಳ ನೀನೀ ದನುಜರೊಳಗೆಂದ ೨

ಏನೆಲವೊ ರಾವಣಿ ರಣಾಗಮ । ಹೀನನೇ ನೀನಕಟ ನಾವಿರೆ
ಮಾನಿಸರಿಗುಪಹತಿಯ ಬಗೆವರೆ ಬದುಕ ಸುಡು ನಿನ್ನ
ನೀನಿನಿತು ಪಾತಕದ ಪಯಣಕೆ । ಮಾನಸವ ಮಾಡುವರೆ ನೆಟಿ ಕೈ
ಬಾಗಿ ರಕ್ಕಸರಂಗಕಂಗೈಸುವರೆ ನೀನೆಂದ ೩

ಸೂಚನೆ॥ ಯುದ್ಧವಿಜಯಿ ಮಹಾಬಲಶಾಲಿ ವೀರಲಕ್ಷ್ಮಣನು ಇಂದ್ರಜಿತುವನ್ನು ಗೆದ್ದು ಬಾಹುವಿಜಯಲಕ್ಷ್ಮಿಯನ್ನು ಒಲಿಸಿಕೊಂಡನು. ೧. ಈ ರೀತಿಯಲ್ಲಿ ರಾತ್ರಿ ಹಗಲೆನ್ನದೆ ನಿರಂತರವಾಗಿ ನಾಲ್ಕು ದಿನಗಳು ಇಬ್ಬರು ವೀರರಿಗೂ ವಾನರ ಮತ್ತು ರಾಕ್ಷಸಸೈನ್ಯಕ್ಕೆ ಕಾಳಗವು ನಡೆಯಿತು. ಶ್ರೇಷ್ಠರಾಜಕುಮಾರರಾದ ಲವ ಕುಶರೇ, ಕಡೆಯದಿನ ಇಬ್ಬರು ವೀರರಿಗೆ ನಡೆದ ಕದನದ ರೀತಿಯನ್ನು ಮನಸ್ಸಿಟ್ಟು ಕೇಳಿ ಎಂದು ವಾಲ್ಮೀಕಿಗಳು ನುಡಿದರು. ೨. ಭಕ್ತ ವಿಭೀಷಣನ ತಲೆಯನ್ನು ರಕ್ಷಿಸಿ ಲಕ್ಷ್ಮಣನು ಇಂದ್ರಜಿತುವನ್ನು ಕುರಿತು, "ಲೋ ನೀನು ಯುದ್ಧದಲ್ಲಿ ಪರಿಪೂರ್ಣನೇನಲ್ಲ, ನಡೆ. ಸುಡು ನಿನ್ನ ಸಾಹಸವನ್ನು. ಶತ್ರುಭೀರರಾದ ನಾವು ಇರಬೇಕಾದರೆ ನಮ್ಮ ಮರೆ ಹೊಕ್ಕವರಿಗೆ ಅಪಾಯವನ್ನುಂಟುಮಾಡಬಹುದೇ ? ರಾಕ್ಷಸರಲ್ಲೆಲ್ಲ ನೀನು ನೀಚ" ಎಂದ. ೩. "ಏನೋ ರಾವಣಕುಮಾರ, ಯುದ್ಧನೀತಿಯನ್ನರಿಯದವನೇ ನೀನು, ನಾವು ಇರುವಾಗ ಮನುಷ್ಯರಿಗೆ ಕೇಡನ್ನು ಬಗೆಯಬಹುದೆ ? ಸುಡು ನಿನ್ನ ಬಾಳನ್ನು. ನೀನು ಇಂಥ ಪಾಪಮಾರ್ಗದಲ್ಲಿ ನಡೆಯಲು ಮನಸ್ಸು ಮಾಡಬಹುದೆ ? ರಾಕ್ಷಸನಾವ

ಸಂತವಿಸಿಕೋ ಕೋಪವನು ನ । ಮ್ಮಂತರಂಗದಲಸುವಿರಲು ಸಾ
ವೆಂತು ಸಂಘಟಿಸುವುದು ಹರಿಪದಭಕ್ತಿಯುಕ್ತರಿಗೆ
ಭ್ರಾಂತದೇಕಿನ್ನೆಲವೊ ಸಾರೆ ಕೃ । ತಾಂತಪುರ ನಿನಗಿನ್ನು ರಣವಿ
ಕ್ರಾಂತವಿಜಯಾಂಗನೆಯಲಭಯವ ಪಡೆದು ಬಾಯೆಂದ ೪

ಮನವ ಬಲುಹಿಡಿ ವೀರಲಕ್ಷ್ಮಿಯ । ಮನವ ಮೆಚ್ಚಿಸು ಲೋಕಹಾಸ್ಯಕೆ
ತನುವ ತೆಱದಿರು ತಿದ್ದಿಕೋ ಭವಭವದ ಕಿಲ್ಬಿಷವ
ಜನನ ಮರಣಗಳುಳ್ಳವೆಲ್ಲರಿ । ಗಿನಿತು ನಿಜವನ್ಯಾಯಮಾರ್ಗವ
ನೆನೆಯದೇಕೋಭಾವದಲಿ ಕಾದೆಮ್ಮ ಕೂಡೆಂದ ೫

ಬಲ್ಲೆವಾವ್ ಹೇಳದಿರು ನಿನ್ನಯ । ಬಲ್ಲವಿಕೆ ಸಾಕೆಮ್ಮ ಪರಿಯನು
ಗೆಲ್ಲದಲಿ ತೋಱಿಸುವೆ ತಡವೇಕೊಂದು ನಿಮಿಷದಲಿ
ಬಿಲ್ಲ ಬಲುಮೆಯನೀಕ್ಷಿಸೆನುತವೆ । ಬಲ್ಲಿದನ ಸಹಭವನ ಕರೆಸಿ
ನ್ನೆಲ್ಲವೇತಕೆಯೆನುತ ಹೂಳಿದನಂಬಿನಬುಧಿಯಲಿ ೬

ಕೆಣಕಿದರೆ ಕಣೆ ನಿಲುವವೇ ಲ । ಕ್ಷ್ಮಣನ ಶರಸಮಯ ಪ್ರಕೃತ ಲ
ಕ್ಷ್ಮಣನ ನೂತನ ಕೌತುಕಾಹವರಂಗರೂಕ್ಷಣನ
ಅಣೆದು ಚೆಲ್ಲಿದವರಿಭಟನ ಮಾ । ರ್ಗಣವ ಮುಗುಳ್ಚೆತಹ ಶರಾಳಿಯ
ಹಣೆದು ಹಮ್ಮಿದವಮು ಭೂವ್ಯಾಕಾಶಮಂಡಲವ ೭

ನೀನು ರಾಕ್ಷಸರ ಮೈಮೇಲೆ ಕೈಮಾಡಬಹುದೆ ?" ಎಂದ ಲಕ್ಷ್ಮಣ. ೪. "ಕೋಪವನ್ನು ಸಮಾಧಾನಕ್ಕೆ ತಂದುಕೋ. ನಮ್ಮ ಅಂತರಂಗದಲ್ಲಿ ಭಕ್ತರ ಪ್ರಾಣವಿರಲು ಹರಿಭಕ್ತರಿಗೆ ಸಾವು ಹೇಗೆ ಸಂಭವಿಸುವುದು ? ಯಮನಪಟ್ಟಣಕ್ಕೆ ಹೋಗುವ ನಿನಗೆ ಸುಮ್ಮನೆ ಭ್ರಾಂತಿಯೇಕೆ ? ಕದನಪರಾಕ್ರಮ ವಿಜಯಲಕ್ಷ್ಮಿಯಿಂದ ಅಭಯವನ್ನು ಪಡೆದು ಬಾ" ಎಂದ ಲಕ್ಷ್ಮಣ. ೫. "ಮನಸ್ಸನ್ನು ಬಿಗಿಹಿಡಿ. ವೀರಲಕ್ಷ್ಮಿಯ ಮನಸ್ಸನ್ನು ಮೆಚ್ಚಿಸು. ಜಗತ್ತಿನ ಜನರ ಹಾಸ್ಯಕ್ಕೀಡಾಗಬೇಡ. ಜನ್ಮಜನ್ಮಾಂತರದ ಪಾಪವನ್ನು ನಿವಾರಿಸಿಕೋ. ಹುಟ್ಟುಸಾವು ಇರುವ ಎಲ್ಲರಿಗೂ ಇದಿಷ್ಟು ಸತ್ಯ. ಅನ್ಯಾಯಮಾರ್ಗವನ್ನು ನೆನೆಯದೆ ಒಂದೇ ಮನಸ್ಸಿನಿಂದ ನಮ್ಮೊಡನೆ ಯುದ್ಧ ಮಾಡು" ಎಂದ ಲಕ್ಷ್ಮಣ. ೬. "ನಮಗೆಲ್ಲ ಗೊತ್ತಿದೆ, ಅದನ್ನೆಲ್ಲ ಹೇಳಬೇಡ. ನಿನ್ನ ಜ್ಞಾನ ಸಾಕು. ತಡವೇಕೆ, ಒಂದು ನಿಮಿಷದಲ್ಲಿ ನಮ್ಮ ರೀತಿಯನ್ನು ಗೆಲುವಿನಲ್ಲಿ ತೋರಿಸುವೆ. ನನ್ನ ಬಿಲ್ಲಿನ ಸಾಮರ್ಥ್ಯವನ್ನು ನೋಡು. ಬಲಶಾಲಿಯಾದ ನಿನ್ನ ಅಣ್ಣನನ್ನು ಕರೆಸು. ಇನ್ನುಳಿದುದೆಲ್ಲ ಏತಕ್ಕೆ" ಎನ್ನುತ್ತ ಇಂದ್ರಜಿತು ಬಾಣಗಳ ಸಮುದ್ರದಲ್ಲಿ ಲಕ್ಷ್ಮಣನನ್ನು ಮುಳುಗಿಸಿಬಿಟ್ಟನು. ೭. ಕೆಣಕಿದರೆ ಬಾಣಪ್ರಯೋಗವಿಧಿಯಲ್ಲಿ ಶುಭಲಕ್ಷಣನಾದ, ಯುದ್ಧದಲ್ಲಿ ಹೊಸ ಹೊಸ ಕುತೂಹಲಗಳನ್ನು ಹುಟ್ಟಿಸುವ ಕಠಿಣರೂಪಿ ಲಕ್ಷ್ಮಣನ ಬಾಣಗಳು ಸುಮ್ಮನೆ ನಿಲ್ಲುವವೇ ? ಶತ್ರುವೀರನ ಬಾಣಗಳನ್ನು ಹೊಡೆದು ಬೀಳಿಸಿದವು. ಪುನಃ ಬರುವ ಬಾಣಗಳನ್ನು ಹೊಡೆದು ಭೂವ್ಯಾಕಾಶಗಳನ್ನು ತುಂಬಿ,

ಎಸುವ ಗತಿಗಾಯೆಂದು ಕಸ್ತುರಿ । ರಸದೊಳದ್ದಿದ ಹೂಗಳಿನು ಸುಮ
ನಸರು ಸೂಸುವರಬ್ಬರಿಸುತತಿಕಾಯಮರ್ದನನ
ಸಸಿನವಲಿ ಸುರವೈರಿಗಳು ವಾ । ಸಿಸುವ ಬೆಳುವಟ್ಟೆಯ ನಿವಾಳಿಸಿ
ಬಿಸುಡುವರು ಬೊಬ್ಬಿರಿದು ಕರ್ಬುರಭಟನ ಸರಿಸದಲಿ ೮

ಬಿಸಿಬಿಸಿಯ ಬೋಳೆಗಳ ತಳಪದ । ರಸುಮೊಗಳ ಕವಲಂಬುಗಳ ಡಾ
ಳಿಸುವ ಕಣಲಿಗೆಯಲಗುಗಳ ಕುಪ್ಪಿಗೆಯ ಕೋಲುಗಳ
ಎಸಳಲಗು ಕವಲಂಬು ಕತ್ತರಿ । ವೆಸರ ಕಣೆಗಳ ದಾಳಿಗಳು ದ
ಟ್ಟಿಸಿದವೆರಡಂಕದ ನರಾಸುರವೀರರೆಸುಗೆಯಲಿ ೯

ಅಳವಿಯಲಿ ರಥಿಪದರಥಿಯ ಕ । ಟ್ಟಳೆಯ ಕಣೆಕಣೆಗಳಲಿ ಚಿತ್ರದ
ಚಳಚಮತ್ಕೃತಿಯಭಿನಯದ ಪಾದುಗಳ ಸೊಗಸುಗಳ
ಲುಳಿಯ ಮೆಱೆದರು ನೋಟಕರ ಕಂ । ಗಳಿಗೆ ಕೌತುಕವಾಗೆ ರಾವಣಿ
ಬಳಿಕ ರಾಮಸಹೋದರನ ಮೂದಲಿಸುತಿಂತೆಂದ ೧೦

ಹಿಡಿ ರಣದೊಳತಿಕಾಯವೀರನ । ಕೆಡಹಿದುತ್ಸವ ದರ್ಪಸಿರಿಗಿದೆ
ಸಿಡಿಲು ಶೂರ್ಪನಖಾಭಿಮಾನಚ್ಯುತಿಯ ಸಾಹಸದ
ಸೊಡರಿಗಿದೆ ಬಿಱುಗಾಳಿ ಪಿಸುಣರ । ನುಡಿಯ ಕೇಳಿದು ಕುಣಿವ ಕಡುದ
ಕ್ಕಡೆಯುತನಕಿದಕೋ ಕೃತಾಂತನಿವಾಸವೆನುತೆಚ್ಚ ೧೧

ದವು. ೮. ಲಕ್ಷ್ಮಣನು ಬಾಣಬಿಡುವ ಜಾಣ್ಮೆಯನ್ನು ಕಂಡು 'ಆ' ಎಂದು ಮೆಚ್ಚಿ ಕಸ್ತೂರಿಯ ನೀರಿನಲ್ಲಿ ಅದ್ದಿದ ಹೂವುಗಳನ್ನು ದೇವತೆಗಳು ಅಬ್ಬರಿಸುತ್ತ ಲಕ್ಷ್ಮಣನ ಬಳಿಗೆ ಎಸೆಯುವರು. ರಾಕ್ಷಸರು ಸುವಾಸನೆಯ ಬಿಳಿಯ ಬಟ್ಟೆಯನ್ನು ನಿವಾಳಿಸಿ ಆರ್ಭಟಿಸುತ್ತ ರಾಕ್ಷಸವೀರನ ಸಮೀಪಕ್ಕೆ ಬಿಸಾಡುವರು. ೯. ಬಿಸಿಬಿಸಿ ಬೋಳೆಯಂಬು, ಕಿರಣಗಳನ್ನು ಸೂಸುವ ಕವಲಂಬು, ಕಣ್ಣು ಕುಕ್ಕುವ ಕಣಲಿಗೆಬಾಣ, ಚೂಪಾದ ಮೊನೆಯಿರುವ ಕುಪ್ಪಿಗೆಬಾಣ, ಎಸಳುಬಾಣ, ಕವಲಂಬು, ಕತ್ತರಿಬಾಣ-ಮೊದಲಾದ ಬೇರೆಬೇರೆ ಹೆಸರಿನ ಬಾಣಗಳ ಮುತ್ತಿಗೆಯು ಲಕ್ಷ್ಮಣ ಇಂದ್ರಜಿತುಗಳ ಬಾಣಗಳ ಯುದ್ಧದಲ್ಲಿ ಎರಡೂ ಕಡೆಯನ್ನು ಗದರಿಸಿದವು. ೧೦. ಸಾಮರ್ಥ್ಯದಿಂದ ರಥವೇರಿದ ಇಂದ್ರಜಿತು, ಕಾಲುಗಳನ್ನೇ ರಥವಾಗಿ ಮಾಡಿಕೊಂಡ ಲಕ್ಷ್ಮಣ ಇವರುಗಳು ಬಿಡುವ ಬಾಣಗಳಲ್ಲಿ ಆಶ್ಚರ್ಯಕರವಾದ ಚಮತ್ಕಾರ, ನಟನೆ, ಪ್ರತಿಜ್ಞೆ, ಸೊಗಸು, ರಭಸ ಮೊದಲಾದುವು ನೋಡುವವರಿಗೆ ಕುತೂಹಲ ಹುಟ್ಟಿಸುವಂತೆ ಇಬ್ಬರು ವೀರರೂ ಬಾಣಗಳ ಕಾಳಗವನ್ನು ಪ್ರದರ್ಶಿಸಿದರು. ಅನಂತರ ಇಂದ್ರಜಿತು ಲಕ್ಷ್ಮಣನನ್ನು ಮೂದಲಿಸುತ್ತ ಮುಂದಿನಂತೆ ನುಡಿದ. ೧೧. "ಯುದ್ಧದಲ್ಲಿ ಅತಿಕಾಯವೀರನನ್ನು ಕೊಂದ ಉತ್ಸಾಹದ ಗರ್ವಕ್ಕೆ ಇದು ಸಿಡಿಲು ; ಶೂರ್ಪನಖಿಯ ಅಭಿಮಾನಭಂಗಮಾಡಿದ ಸಾಹಸದ ದೀಪಕ್ಕೆ ಇದು ಬಿರುಗಾಳಿ ; ಚಾಡಿಕೋರರ ಮಾತನ್ನು ಕೇಳಿಕೊಂಡು ಕುಣಿದ ಧೀರತನಕ್ಕೆ ಇಗೋ ಇದು

ಆ ಸುರೇಂದ್ರವಿರೋಧಿಯೆಚ್ಚ ಮ । ಹಾಶರೌಘವ ತರಿದು ಲಘುವಿ
ನ್ಯಾಸವೈಭವ ಬಾಣವಿದ್ಯಾಪ್ರೌಢ ನಸುನಗುತ
ವಾಸಿತನದಭಿಮಾನಗತಿಯು ವಿ । ಲಾಸವಹುದೋಯೆನುತ ನಿಶಿತ ಶ
ರಾಸನದ ಸಂಧಾನದಸ್ತ್ರದಲೆಂದನಸುರಂಗೆ ೧೨

ಹಿಗ್ಗಿ ಹಿಂದೆಮ್ಮವನು ಹಾವಿನ । ಹಗ್ಗದಲಿ ಹೆಡಗುಡಿಯ ಕಟ್ಟಿದ
ಬಗ್ಗಡೆಯತನಕಿದಕೊ ಬಹುಮಾಯಾವಿಲಾಸಕದ
ಕಗ್ಗನಿಯ ಕತ್ತಲೆಯೊಳೆಮ್ಮನು । ಮುಗ್ಗಿಸಿದ ಫಲಕಿದಕೊ ಸಾವಿನ
ಸುಗ್ಗಿ ನಿನಗೆನುತೆಚ್ಚನಿಂದ್ರಾರಿಯನು ಸೌಮಿತ್ರಿ ೧೩

ಎಚ್ಚ ಲಕ್ಷ್ಮಣನಂಬನಾ ಖಳ । ನೆಚ್ಚು ಮಗುಳೆ ಮಹಾಸ್ತ್ರದಲಿ ಬಿಡ
ದೆಚ್ಚನೆಚ್ಚವಿರೋಧಿಯಂಬಿನ ಹೊದಳಿ ಸೌಮಿತ್ರಿ
ಬಿಚ್ಚಿ ಬಿಸುಟಂಬೋಧಿನಾದದಿ । ನೆಚ್ಚಲುವದರಿದೆಂಬವೊಲು ತೆಗೆ
ದೆಚ್ಚನುಗ್ರಾವೋಘಬಾಣದಲುಲಿಯೆ ಕಪಿಸೇನೆ ೧೪

ನೂಕಿ ಹಾಯ್ದುವು ಲಕ್ಷ್ಮಣನ ಸರ । ಳೋಕರಿಸುತರುಣಾಂಬುವನು ಜಿತ
ಪಾಕಶಾಸನನುರವ ಬಗಿದಾಟೇಳು ಯೋಜನವ
ಸೋಕಿದಾಜ್ಯಾಹುತಿಯ ಶಿಖಿಯು । ದ್ರೇಕದವೊಲಿಂದ್ರಾರಿ ಕೋಪದೊ
ಳೀ ಕಕುತ್ಸ್ಥಾನ್ವಯನ ತಮ್ಮನನೆಚ್ಚು ಬೊಬ್ಬಿರಿದ ೧೫

ಯಮನ ಮನೆ ; ಹಿಡಿ" ಎನ್ನುತ್ತ ಇಂದ್ರಜಿತು ಬಾಣವನ್ನು ಬಿಟ್ಟ. ೧೨. ಇಂದ್ರಜಿತು ಬಿಟ್ಟ ಮಹಾಬಾಣಗಳನ್ನು ಕತ್ತರಿಸಿಹಾಕಿ ಚಮತ್ಕಾರದಿಂದ ಬಾಣಪ್ರಯೋಗಮಾಡುವ ವಿದ್ಯೆಯನ್ನು ಕರಗತಮಾಡಿಕೊಂಡ ಲಕ್ಷ್ಮಣನು ನಸುನಗುತ್ತ, "ನಿನ್ನ ದರ್ಪದ ಮಾತುಗಳು ಸುಂದರವಾಗಿವೆಯೋ" ಎನ್ನುತ್ತ ಹರಿತವಾದ ಬಾಣಗಳನ್ನು ಬಿಲ್ಲಿಗೆ ಹೂಡಿ ಇಂದ್ರಜಿತುವಿನ ಮೇಲೆ ಬಿಟ್ಟನು. ೧೩. "ಹಿಂದೆ ಹಿಗ್ಗಿನಿಂದ ನಮ್ಮನ್ನು ಸರ್ಪಾಸ್ತ್ರದಲ್ಲಿ ಹೆಡಮುರಿಗೆ ಕಟ್ಟಿದ ನಿನ್ನ ತಲೆಹರಟೆಗೆ ಇದನ್ನು ತೆಗೆದುಕೋ, ಮಾಯಾಬಾಹುಳ್ಯದಿಂದ ರೂಪಿಸಿದ ಕಗ್ಗತ್ತಲೆಯ ಕದನದಲ್ಲಿ ನಮ್ಮನ್ನು ಬಳಲಿಸಿದ ಫಲದ ಪ್ರತಿಯಾಗಿ ಇಗೋ ನಿನಗೆ ಸಾವಿನ ಸುಗ್ಗಿ" ಎನ್ನುತ್ತ ಲಕ್ಷ್ಮಣನು ಇಂದ್ರಜಿತುವಿನ ಮೇಲೆ ಬಾಣಬಿಟ್ಟ. ೧೪. ಲಕ್ಷ್ಮಣನ ಬಾಣವನ್ನು ಪ್ರತಿಬಾಣದಿಂದ ಹೊಡೆದು ಪುನಃ ಇಂದ್ರಜಿತು ಮಹಾಸ್ತ್ರವನ್ನು ಪ್ರಯೋಗಿಸಿದನು. ಶತ್ರುವಿನ ಬಾಣಗಳ ಸಮೂಹವನ್ನು ವ್ಯರ್ಥಗೊಳಿಸಿ ಗುಡುಗಿನಂತೆ ಆರ್ಭಟಿಸಿ ಲಕ್ಷ್ಮಣನು ಈ ಬಾಣದಿಂದ ಶತ್ರು ಇನ್ನು ಎಚ್ಚರಗೊಳ್ಳುವುದು ಅಸಾಧ್ಯವೆಂಬಂತೆ ಭಯಂಕರವಾದ ಮಹಾಸ್ತ್ರದಿಂದ ಇಂದ್ರಜಿತುವನ್ನು ಹೊಡೆದನು ; ಆಗ ಕಪಿಸೈನ್ಯವು ಹಿಗ್ಗಿನಿಂದ ಕೂಗುಹಾಕಿತು. ೧೫. ಲಕ್ಷ್ಮಣನ ಬಾಣಗಳು ಇಂದ್ರಜಿತುವಿನ ಎದೆಯನ್ನು ಬಗೆದು ರಕ್ತವನ್ನುಗುಳುತ್ತ ಆರೇಳು ಯೋಜನ ಓಡಿದವು ; ತುಪ್ಪದ ಆಹುತಿ ಬಿದ್ದೊಡನೆ ಭಗ್ಗನೆ ಹೊತ್ತಿಕೊಂಡು ಮೇಲೇರುವ ಉರಿಯಂತೆ ರಕ್ತವನ್ನುಗುಳುತ್ತ ಮೇಲೇರಿದ ಬಾಣಗಳು ಕಾಣಿಸಿದವು. ಆಗ ಇಂದ್ರಜಿತು ಗರ್ಜಿಸುತ್ತ

ಸರಗೊಳಿಸಿ ಬಳಿಕೀತನಾತನ । ಸರಳ ಸಾರದಲಾತನೀತನ
ತಿರುಗಿ ಕಟ್ಟಿಸುಗೆಗಳಲೀ ಸೌಮಿತ್ರಿ ರಾವಣಿಯು
ಹರಿವಿರೋಧಿ ವಿರಾಧ ಹಿಂಸಾ । ವರಜನನು ಸರಿಮಿಗಿಲೆನಲು ಸಂ
ಗರಜಯಾಂಗನೆ ಮೆಚ್ಚಲೆಚ್ಚಾಡಿದರು ಸರಿಸದಲಿ ೧೬

ಬಾಣವಿದ್ಯಾಭ್ಯಾಸದಲಿ ಕ । ಟ್ಟಾಣೆಗಳಲಾ ತ್ರೇತೆಯುಲಿ ಕಡು
ಜಾಣರಲ್ಲಾ ಜಡತೆ ಹುಗದಾಹವ ವಿಚಿತ್ರದಲಿ
ಸ್ಥಾಣು ಶೈಲೋದ್ಧರಣಸುತನಾ । ಸ್ಥಾಣುಚಾಪನಿಖಂಡನಾನುಜ
ರೂಣೆ ಹೊಗದೆಚ್ಚಾಡಿದರು ಮೆಚ್ಚಲು ಸುರವ್ರಾತ ೧೭

ತೆಗೆದು ಬಳಿಕಳವಿಯುಲಿ ನಿಂದುದು । ನಿಗುರಿ ನಿಲುಕುವ ರೋಷವಹ್ನಿಯ
ನುಗುಳಿಸಿದರಂಬುಂಬುಗಳ ನಂಬುಗೆಯ ಬಿಲುಗಳಲಿ
ಬಗೆಯ ಭಾರಿಯ ಬಾಣತತಿ ರೋ । ಮಗಳು ಕಾಣಿಸದಂತೆ ತನುಗಳ
ಹುಗಿಲಿಜಿದು ಹಮ್ಮಿದವು ಬಳಲಿಕೆದೋಱಿ ಭಟರುಗಳ ೧೮

ದಾರಿದೆಗೆದವು ರೋಷ ಬೆಸುಗೆಯು । ಭಾರಣೆಯು ಬಲುಹಂತರಿಸಿದವು
ವೀರತನದಾಳಾಪಕುಬ್ಬಸವಾದುದಿಬ್ಬರಿಗೆ
ಸೇರಿತಧಿಕಶ್ರಮವು ಮುಕ್ಕಿಶ । ರೀರರಾಗಲು ಬಗೆದರಿದ ಕಂ
ಡೋರಣಿಸಿ ಬಲವೆರಡು ನಿಂದವು ಬಿಸುಟು ಬವರಗಳ ೧೯

ಕೋಪದಿಂದ ಲಕ್ಷ್ಮಣನನ್ನು ಬಾಣದಿಂದ ಹೊಡೆದನು. ೧೬. ಲಕ್ಷ್ಮಣನು ಇಂದ್ರಜಿತುವಿನ ಮೇಲೆ ಬಾಣಗಳ ಮಾಲೆಯನ್ನೇ ಹೊರಡಿಸಲು ಇಂದ್ರಜಿತು ಬಾಣಗಳ ಸರಣಿಯನ್ನು ಲಕ್ಷ್ಮಣನಿಗೆ ಗುರಿಮಾಡಿ ಹೊಡೆದನು. ಪುನಃ ಲಕ್ಷ್ಮಣನು ಇಂದ್ರಜಿತುವಿನ ಮೇಲೆ ಬಾಣಬಿಟ್ಟನು. ಆಗ ರಾವಣಕುಮಾರನು ವಿರಾಧನನ್ನು ಕೊಂದವನಾದ ರಾಮನ ತಮ್ಮನ ಮೇಲೆ ಬಾಣಗಳನ್ನೆಸೆದನು. ಹೀಗೆ ಯುದ್ಧವಿಜಯಲಕ್ಷ್ಮಿಯು ಮೆಚ್ಚುವಂತೆ ಇಬ್ಬರು ವೀರರೂ ಸಮಸಮವಾಗಿ ಬಾಣಗಳ ಯುದ್ಧಮಾಡಿದರು. ೧೭. ತ್ರೇತಾಯುಗದ ಈ ವೀರರಿಬ್ಬರೂ ಬಿಲ್ವಿದ್ಯಾಭ್ಯಾಸದಲ್ಲಿ ಮಿಗಿಲಾದವರಲ್ಲವೇ ! ಉತ್ಸಾಹಶೀಲ ಕಾಳಗದಲ್ಲಿ ಬಹು ಚತುರರಲ್ಲವೇ ! ಶಿವನ ಕೈಲಾಸವನ್ನೆತ್ತಿದ ರಾವಣನ ಮಗನೂ ಶಿವಧನುಸ್ಸನ್ನು ಮುರಿದ ರಾಮನ ತಮ್ಮನೂ ದೇವತೆಗಳು ಮೆಚ್ಚಲು ಕುಂದಿಲ್ಲದ ಬಾಣಯುದ್ಧವನ್ನು ಮೆರೆದರು. ೧೮. ಕ್ರೋಧಾಗ್ನಿಯನ್ನೆಬ್ಬಿಸುತ್ತ ಇಬ್ಬರೂ ಸಮದೂರದಲ್ಲಿ ನಿಂತರು ; ತಮ್ಮ ನಂಬಿಕೆಯ ಬಿಲ್ಲುಗಳಿಂದ ಬಾಣಗಳನ್ನು ಸುರಿಸಿದರು. ಭಾರಿಬಾಣಗಳು ವೀರರ ದೇಹಗಳನ್ನು ಚುಚ್ಚಿ ಮೈಮೇಲಿನ ಕೂದಲುಗಳು ಕಾಣಿಸದಂತೆ ನಿಂತವು. ಈಗ ವೀರರುಗಳಿಗೆ ಆಯಾಸ ತಲೆದೋರಿತು. ೧೯. ಇಬ್ಬರು ವೀರರ ಕ್ರೋಧ ಬತ್ತಿತು. ಅವರನ್ನಂಟಿದ್ದ ಭಾರಿ ಪರಾಕ್ರಮವು ಮರೆಯಾಯಿತು ; ವೀರತನದ ಮಾತುಗಳಿಗೆ ತಡೆಯುಂಟಾಯಿತು. ಇಬ್ಬರಿಗೂ ತುಂಬ ಆಯಾಸವಾಯಿತು. ದೇಹವನ್ನು ತ್ಯಜಿಸಬೇಕೆಂಬಷ್ಟು ಕಷ್ಟವಾಯಿತು. ಇದನ್ನು ನೋಡಿ ಎರಡೂ ಕಡೆಯ

ಕಂಡರಿವರಿಬ್ಬರ ರಣಾಗಮು । ವೆಂದಿಸಿದ ಮಾರ್ಗಾಂತರವ ಮಾ
ರ್ತಾಂಡಪಥದಲಿ ಮೋಹವಳಿಯೆ ಸುರಾಸುರವ್ರಾತ
ಕಂಡು ಕಳುಹಿದರುಭಯ ಗುರುಗಳು । ಗುಂಡಿಗೆಯ ಸುಧೆಯೌಷಧಿಗಳನು
ಚಂಡಭುಜಬಲಭಟರು ಬಳಿಕಿಳಿತಂದರಾಕ್ಷಣಕೆ ೨೦

ಇಬ್ಬರಿಬ್ಬರನೌಷಧಿಗಳಿಂ । ದೆಬ್ಬಿಸಿದರಾಹವಕೆ ಹಿಂದಣ
ಹಬ್ಬುಗೆಯ ಹಗೆಪಾಡಿಗಿಮ್ಮಡಿಗಿಲೆನಲು ಸಂಗರಕೆ
ಉಬ್ಬರಿಸಿ ಬಿಲುದನಿಗಳಲಿ ಬಲು । ಬೊಬ್ಬೆಯಲಿ ಲಳಿಯೇಱ ನಿಂದಿರ
ಲಿಬ್ಬರಿಬ್ಬರಿಗಿತ್ತರುತ್ತಮ ದಿವ್ಯ ಕವಚಗಳ ೨೧

ಇತ್ತರಾ ಕೈಯೊಡನೆ ಸುಭಟರಿ । ಗುತ್ತಮದ ಮಂತ್ರಾಸ್ತ್ರವನು ದಿವ
ದತ್ತ ಹಾಯ್ದರು ಹಾಯ್ವ ಬಾಣದ ಹೊದಱಿಗುಱಿ ಬೆದಱಿ
ಕಿತ್ತಡದಲಮರೇಂದ್ರನಿನಿಪಂ । ಶೋತ್ತಮನ ಸಹಭವನ ಗೆಲವಿನ
ಹತ್ತುಗೆಯ ಹಂಬಲಿಸುತಿರ್ದನು ಹರಕೆಗಳ ಬಳೆಯ ೨೨

ಹೂಡಿದನು ಬಳಿಕಸುರನಸಮ ಸ । ಗಾಢ ಶಾಂಭವಶರವನಾಕ್ಷಣ
ಹೂಡಿದನು ಸೌಮಿತ್ರಿ ನಾರಾಯಣ ಮಹಾಶರವ
ಹೂಡಿತಳವಿಗೆ ಜಗವೆನುತೆ ಹೇ । ಡಾಡಿದನು ಚಿತ್ತದಲಿ ಜಗವನು
ಮಾಡಿದಜನುಳಿದಮರರಳ್ಳೆದೆಯೋದರಭ್ರದಲಿ ೨೩

ಸೈನ್ಯವು ಯುದ್ಧವನ್ನು ತ್ಯಜಿಸಿ ಶಿಸ್ತಿನಿಂದ ನಿಂತಿತು. ೨೦. ಈ ಇಬ್ಬರು ವೀರರಿಗೆ ಬಳಲಿಕೆಯಿಂದುಂಟಾದ ಬದಲಾದ ಪರಿಸ್ಥಿತಿಯನ್ನು ಆಕಾಶದಲ್ಲಿದ್ದ ದೇವತೆಗಳು ನೋಡಿದರು. ದೇವಾಸುರ ಗುರುಗಳಿಬ್ಬರೂ ಕಮಂಡಲುವಿನಲ್ಲಿದ್ದ ಅಮೃತದ ಔಷಧಿಗಳನ್ನು ಕಳುಹಿಸಿದರು. ಅದನ್ನು ತೆಗೆದುಕೊಂಡು ಪ್ರಚಂಡಬಲಶಾಲಿಗಳಿಬ್ಬರು ಆ ಕ್ಷಣ ಆಕಾಶದಿಂದ ಇಳಿದುಬಂದರು. ೨೧. ಮೇಲಿನಿಂದ ಬಂದ ಇಬ್ಬರೂ ಲಕ್ಷ್ಮಣ ಇಂದ್ರಜಿತುಗಳನ್ನು ಔಷಧಿಯಿಂದ ಯುದ್ಧಕ್ಕೆ ಎಬ್ಬಿಸಿದರು. ಮೊದಲಿನ ಹಗೆತನದ ಫಲಕ್ಕೆ ಎರಡು ಪಟ್ಟಾಗಿ ಯುದ್ಧಕ್ಕೆ ನಿಂತು ಬಿಲ್ಲಿನ ಧ್ವನಿಮಾಡಿ ಆರ್ಭಟಿಸುತ್ತ ಹುರುಪಿನಿಂದ ನಿಂತರು. ಆಗ ಗುರುಗಳ ಕಡೆಯಿಂದ ಬಂದ ಇಬ್ಬರೂ ಇಬ್ಬರು ವೀರರಿಗೂ ದಿವ್ಯಕವಚಗಳನ್ನು ಕೊಟ್ಟರು. ೨೨. ಅದರೊಡನೆ ಆ ವೀರರಿಗೆ ಉತ್ತಮ ಮಂತ್ರಾಸ್ತ್ರಗಳನ್ನು ಕೊಟ್ಟು ರಭಸದಿಂದ ಹಾರುವ ಬಾಣಗಳ ಸಮೂಹಕ್ಕೆ ಹೆದರಿ ಆಕಾಶಕ್ಕೆ ನೆಗೆದರು. ದೇವೇಂದ್ರನು ಧ್ಯಾನದಲ್ಲಿ ತೊಡಗಿ ಲಕ್ಷ್ಮಣನ ವಿಜಯವನ್ನು ಹಂಬಲಿಸುತ್ತ ಹರಕೆಯ ಬಳೆಯನ್ನು ತಿರುಗಿಸುತ್ತಿದ್ದನು. ೨೩. ಅನಂತರ ಇಂದ್ರಜಿತು ಅಮೋಘವಾದ ಶಾಂಭವಾಸ್ತ್ರವನ್ನು ಹೂಡಿದನು. ತಕ್ಷಣ ಲಕ್ಷ್ಮಣನು ನಾರಾಯಣ ಮಹಾಸ್ತ್ರವನ್ನು ಹೂಡಿದನು. ಜಗತ್ತು ನಾಶಕ್ಕೊಳಗಾಯಿತು ಎನ್ನುತ್ತ ಜಗತ್ತನ್ನು ಸೃಷ್ಟಿಸಿದ ಬ್ರಹ್ಮನು ಹೆದರಿದನು. ಗಗನದ

ಬಿಟ್ಟರಿಬ್ಬರು ಬಾಣಗಳ ತಲೆ । ಪಟ್ಟು ನಿಂದವು ಗಗನದಲಿ ಸರಿ
ಗಟ್ಟಿ ಹಳಚಿದವೆರಡು ಶರ ಸುರಲೋಕ ತಲ್ಲಣಿಸೆ
ತುಟ್ಟತುದಿಯಿದು ದೈವಧರ್ಮದ । ಬಟ್ಟೆಗರ ಕಡೆ ಧರ್ಮಹೀನರ
ಬಿಟ್ಟು ಕಳೆವುದು ಕೇಳಿದೈ ನೃಪಸೂನು ನೀನೆಂದ ೨೪

ಅಡಗಿತಾ ವೈಷ್ಣವದೊಳಗ್ಗದ । ಮೃಡಕಳಂಬಕವನಿತಱಲಿ ಖಳ
ನಡುಗಿದನು ಕಡೆಗಾಲ ತನಗಿನ್ನಾಗದಿಂದೆನುತ
ಮುಡುಹ ಚಪ್ಪರಿಸಿದರು ಭೇರಿಯ । ಹೊಡೆಸಿ ಸುರರಸುರೌಘ ಕೋಪದ
ಕಿಡಿಯುಲಿರ್ದುದು ಕದನ ತೊಡಗಿತು ಮತ್ತೆ ಕಲಿಗಳಿಗೆ ೨೫

ಆಯತಿಕೆ ಬಲಿದಸುರನಸ್ತ್ರನಿ । ಕಾಯವನು ಕೆದಱಿದನು ದಿಗುಸಮು
ದಾಯ ಶರಮಯವಾಗೆ ತೂಳುವ ವಾದ್ಯರಭಸದಲಿ
ಆಯತಾಸ್ತ್ರ ವಿಚಿತ್ರರಾಘವ । ರಾಯನನುಜನು ತಱಿದನಾ ವ
ಜ್ರಾಯುಧಾರಿಯ ಬಾಣಪಂಜರ ಪುಂಜದುಬ್ಬರವ ೨೬

ಮಸಗಿತಾ ಕೈಯೊಡನೆ ಕದನದ । ವಿಷಮ ವಿಗ್ರಹವಿಬ್ಬರಿಗೆ ನಿ
ಪ್ಪಸರದೆಸುಗೆಯ ನಿಶಿತ ಬಾಣಾವಳಿಯ ಬೆಂಬಳಿಯ
ಬಿಸಿಲುದೋಱಿದ ಬೆಳಗುಗಳ ಹೊಂ । ಬೆಸನ ಹಿಳುಕಿನ ನವಿಲಗಱಿಗಳ
ಗೆಹಸರಣೆಯ ಹಮ್ಮುಗಯಲಿಮ್ಮಿಗಿಲಾಯ್ತು ರಣರಭಸ ೨೭

ಉಳಿದ ದೇವತೆಗಳ ಎದೆ ನಡುಗಿತು. ೨೪. ಲಕ್ಷ್ಮಣ ಇಂದ್ರಜಿತುಗಳಿಬ್ಬರೂ ಅಸ್ತ್ರಗಳನ್ನು ಬಿಟ್ಟರು. ಎರಡು ಬಾಣಗಳೂ ಆಕಾಶದಲ್ಲಿ ತಲೆಗೆ ತಲೆ ಕೊಟ್ಟು ನಿಂತು ಸರಿಸಮಾನವಾಗಿ ಅಪ್ಪಳಿಸಿ ಹೋರಾಡಿದವು. ಆಗ ದೇವಲೋಕ ನಡುಗಿತು. ಇದು ತುತ್ತತುದಿ. ದೈವಧರ್ಮದ ಮಾರ್ಗ ಹಿಡಿದವರ ಪಕ್ಷವಿದು, ಧರ್ಮಹೀನರನ್ನು ಇದು ನಾಶಪಡಿಸುವುದು. ಕೇಳಿದೆಯಾ ರಾಜಕುಮಾರ ಲವ, ರಾಜಕುಮಾರ ಕುಶ. ಎಂದು ವಾಲ್ಮೀಕಿ ಮಹರ್ಷಿಗಳು ನುಡಿದರು. ೨೫. ಆ ವೈಷ್ಣವಾಸ್ತ್ರದಲ್ಲಿ ಶ್ರೇಷ್ಠಶಾಂಭವಾಸ್ತ್ರವು ಅಡಗಿತು. ಇಂದು ತನ್ನ ಕೊನೆಗಾಲ ಬರದಿರದು ಎಂದು ಇಂದ್ರಜಿತು ನಡುಗಿದನು. ದೇವತೆಗಳು ನಗಾರಿಯನ್ನು ಹೊಡೆಸಿ ಭುಜವನ್ನಪ್ಪಳಿಸಿದರು. ರಾಕ್ಷಸರು ಕೋಪದ ಕಿಡಿಕಾರಿದರು. ಪುನಃ ವೀರರಿಬ್ಬರಿಗೂ ಯುದ್ಧ ಆರಂಭವಾಯಿತು. ೨೬. ಸಾಹಸ ಬಿಗಿದ ಇಂದ್ರಜಿತು ಮೊಳಗುವ ವಾದ್ಯಗಳ ಶಬ್ದದೊಡನೆ ಅಸ್ತ್ರಗಳನ್ನು ಎಲ್ಲ ದಿಕ್ಕುಗಳಿಗೂ ಚೆಲ್ಲಿದನು. ಆಗ ದಿಕ್ಕುಗಳೆಲ್ಲ ಬಾಣಮಯವಾದವು. ಭಾರಿ ಅಸ್ತ್ರಸಂಪನ್ನನಾದ ಲಕ್ಷ್ಮಣನು ಇಂದ್ರಜಿತುವಿನ ಬಾಣಪಂಜರಸಮೂಹವನ್ನು ಕತ್ತರಿಸಿಹಾಕಿದನು. ೨೭. ಅದರೊಡನೆ ರಭಸದ ಬಾಣಪ್ರಯೋಗ ಮತ್ತು ಅವುಗಳನ್ನು ಬೆಂಬತ್ತುವ ಹರಿತವಾದ ಬಾಣಗಳ ಹೊಡೆತಗಳೊಡನೆ ಪ್ರಚಂಡಯುದ್ಧವು ಇಬ್ಬರ ನಡುವೆ ಕೆರಳಿತು. ಬಿಸಿಲನ್ನು ಮರೆಯಿಸುವ ಪ್ರಕಾಶದ, ಚಿನ್ನದ ಕೆಲಸದ ಹಿಡಿಯ ಮತ್ತು ನವಿಲುಗರಿಗಳ ಸಮೂಹದ ಬಾಣ

ಸೋಲಗೆಲವನು ಕಾಣದಿಬ್ಬರ । ಕೋಲಕದನದೊಳಮರತತಿ ರಣ
ದಾಲಸಿಕೆ ತೋಱಿದುದು ಭಟರಿಬ್ಬರಿಗೆ ಭಾರಣೆಯು
ತೋಳು ಬಳಲಿದವೆಡಬಲದ ಸಂ । ಭಾಳಿಗಳ ಸಬುದಗಳು ನಿಂದವು
ಬಾಲಯವ್ವನವಡಗಿ ತೋಱಿತು ಮುಪ್ಪು ದಿನಮಣಿಗೆ ೨೮

ಬಳಿಕ ಬಿಲುದಿರುಗಳನು ಹೊಯ್ದಡ । ಗಲಸಿ ನಿಂದಳವಿಗಳ ಕೊಂಡ
ಗ್ಗಳದ ವೀರಾಳಾಪದಲಿ ಮದವೇಱಿ ಬೊಬ್ಬಿಱಿದು
ಗೆಲವುಗಳನಭಿನೈಸಿ ಸುರಸಂ । ಕುಲಕೆ ಕೈಗಳ ನೆಗಹಿ ಬಿರುದಾ
ವಳಿಯ ಭಟ್ಟರನೀಕ್ಷಿಸುತ ಹೂಡಿದರು ಮಾರ್ಗಣವ ೨೯

ಹಿಂದಣೆಸುಗೆಯ ಕಣೆಯ ಕೌತುಕ । ದಿಂದ ಶತಗುಣವೆನಲು ಸರಳಿನ
ಸಂದಣಿಯು ತೋಱಿದರು ತೋಱಿದ ಮೊದಲ ಮೋಡದಲಿ
ಮುಂದವಿಸಿ ಬೊಬ್ಬಿಱಿವ ಶರನಿಧಿ । ಯಂದದಲಿ ಶರಸಬುದವೆಸೆದುದು
ಕಂದ ಕೀಳುತ್ತಾನಪಾದತನೂಜಮಂಡಲವ ೩೦

ಮುಱಿದ ಮೊಗವಾಯಲಗುಗಳ ಗಱಿ । ಹಱಿದ ಹಿಳುಕುಗಳುಡಿದು ಚಿಮ್ಮಿದ
ಮಿಱುಗುವಣಸಿನಲರೆಗಡಿದ ಸಮಗಣೆಯ ಸೀಳುಗಳ
ಬಿಱುಗಣೆಯ ಬಿಱುಬಿನಲಿ ಕಾಣೆನು । ತೆಱಹನಿಳೆಗೆನಲದ್ಭುತದ ರಣ
ನೆಱವಣಿಗೆಯುಳ್ಳವರೊ ರಾವಣಿ ರಾಘವಾನುಜರು ೩೧

ಗಳ ಹೊಡೆತದಿಂದ ಯುದ್ಧದ ರಭಸವು ಒಂದಕ್ಕೆರಡಾಯಿತು, ೨೮. ಲಕ್ಷ್ಮಣ ಇಂದ್ರಜಿತುಗಳ ಬಾಣಗಳ ಯುದ್ಧದಲ್ಲಿ ಸೋಲು ಗೆಲುವು ಯಾವುದನ್ನೂ ಕಾಣದೆ ಯುದ್ಧವನ್ನು ಈಕ್ಷಿಸುತ್ತಿದ್ದ ದೇವಗಣಗಳು ಬೇಸರಗೊಂಡರು. ಇಬ್ಬರು ವೀರರಿಗೂ ಕದನಶ್ರಮದಿಂದ ತೋಳುಗಳು ಬಳಲಿದವು. ಎಡಬಲದಲ್ಲಿದ್ದ ವೀರರ ಉಪಚಾರಕರ ಶಬ್ದಗಳು ನಿಂತವು. ಬಾಲ್ಯ ಮತ್ತು ಯೌವನ ಕಳೆದು ಸೂರ್ಯನಿಗೆ ಮುಪ್ಪು ತಲೆದೋರಿತು. ೨೯ ತರುವಾಯ ಬಿಲ್ಲಿನ ಹಗ್ಗಗಳನ್ನೆಳೆದು ಟಂಕಾರಶಬ್ದ ಮಾಡಿ ಪ್ರತಿಭಟಿಸಿ ನಿಂತರು. ಕಲಿತನದ ವೀರಾಲಾಪದಿಂದ ಮದವೇರಿ ಬೊಬ್ಬಿರಿದು ತಾವೇ ಗೆಲ್ಲುವರೆಂಬುದನ್ನು ಅಭಿನಯಿಸಿ ದೇವತೆಗಳಿಗೆ ಕೈಮುಗಿದು ಹೊಗಳುಭಟ್ಟರನ್ನು ಈಕ್ಷಿಸುತ್ತ ಇಂದ್ರಜಿತು ಲಕ್ಷ್ಮಣರು ಬಾಣಗಳನ್ನು ಹೂಡಿದರು. ೩೦. ಹಿಂದಿನ ಬಾಣಪ್ರಯೋಗದ ಕೌಶಲಕ್ಕಿಂತ ನೂರುಮಡಿ ಎನ್ನುವಂತೆ ವೀರರು ಬಾಣಗಳ ಸಮೂಹವನ್ನು ಹೊಡೆದು ಪ್ರದರ್ಶಿಸಿದರು. ಮಳೆಗಾಲದ ಮೊದಲ ಮೋಡವನ್ನು ಕಂಡು ಭೋರ್ಗರೆಯುವ ಸಮುದ್ರದಂತೆ ಧ್ರುವಮಂಡಲವನ್ನು ಬಾಣಗಳ ಅಬ್ಬರವು ವ್ಯಾಪಿಸಿತು. ೩೧. ಮೊನೆ ಮುರಿದ ಬಾಣಗಳು, ಗರಿಗಳು ಹರಿದ ಬಾಣದಬುಡಗಳು, ಮುರಿದು ಚಿಮ್ಮಿದ ಹೊಳೆಯುವ ಬಾಣದ ಹಿಳುಕುಗಳು, ಅರ್ಧ ತುಂಡಾದ ಸಮಬಾಣಗಳ ಸೀಳುಗಳು, ಬಿರಿಸಾದ ಬಾಣಗಳು ಮೊದಲಾದುವುಗಳು ತುಂಬಿ ನೆಲದಮೇಲೆ ತೆರಪಾದ ಸ್ಥಳವೇ ಕಾಣಿಸದು ಎಂದರೆ ಇಂದ್ರಜಿತು ಲಕ್ಷ್ಮಣರು

ಕೆರಳಿ ಬಳಿಕಿಂದ್ರಾರಿ ಯಮ ಶಿಖಿ । ನಿರುತಿ ಮೇಘ ತಮೋಘ ದರ್ವೀ
ಕರ ಮಹಾದ್ರಿ ಸಮುದ್ರ ಮೊದಲಾದಸ್ತ್ರಸಂಕುಲವ
ಸುರಿದನನಿತಕೆ ಲಕ್ಷ್ಮಣನು ಹರ । ವರುಣ ಹರಿ ಪವಮಾನ ಭಾಸ್ಕರ
ಗರುಡ ವಜ್ರಾಗ್ನೇಯಶರದಲಿ ಗೆಲಿದು ಬೊಬ್ಬಿರಿದ ೩೨

ಎಲೆಲೆ ಲಕ್ಷ್ಮಣ ದಿವ್ಯ ಬಾಣಾ । ವಳಿಯ ಜಯಿಸಿದೆನೆಂದು ದಿಟ ಹೆ
ಕ್ಕಳಿಸದಿರು ಹಿತಕಾರಿಗಳು ನಮಗಮರರಲ್ಲಾಗಿ
ತಲೆಯಬರಹವ ತೊಡೆವೆನೈ ಕುಂ । ಭಿಳಿಸುದತ್ತ ಮಹಾಸುರಾಸ್ತ್ರದ
ಬಲುಮೆಯನು ನೋಡೆನುತ ಹೂಡಿದನಾ ಮಹಾಶರವ ೩೩

ಪ್ರಾಣವಿರಲಿಕೆ ನೋಡಿಕೋ ಗೀ । ರ್ವಾಣನಿಕರದ ಕೊರಳ ಕತ್ತರಿ
ವಾಣಿ ಮಾನವ ವಿಮಾನಕುಲಗಳ ಗಾಣವಹಿಕುಲದ
ಪ್ರಾಣಹಿಂಸಾಸಮಯ ಸಮರ । ತ್ರಾಣವಿದಕೋ ನಿನ್ನ ಜಠರದ
ಶೋಣಿತವ ಸುರಿವಸ್ತ್ರವಿದೆ ನೋಡೆನುತ ಬೊಬ್ಬಿರಿದ ೩೪

ಮತ್ತೆ ನೋಡುಬಳಿಕ ಕಾಣೆನೆನಬೇ । ಡುತ್ತರಸ್ಥಿತಿ ಬಿಗಿಸು ತೋರಿಸು
ಹತ್ತಿರಿದ್ದ ವಿಭೀಷಣಾಂಗದ ಹನುಮ ಮೊದಲಾದ
ಉತ್ತಮದ ಭಟರೀಕ್ಷಿಸಲಿ ಭಯ । ಸುತ್ತಿಕೊಳ್ಳದ ಮುನ್ನ ಶರವಿದ
ನುತ್ತರಿಸಲಾಪರೆ ವಿಭೀಷಣಮತವನರಿಯೆಂದ ೩೫

ಯುದ್ಧವಿದ್ಯೆಯಲ್ಲಿ ಎಂಥ ಪರಿಪೂರ್ಣರೋ ! ೩೨. ಅನಂತರ ಇಂದ್ರಜಿತು ಕೆರಳಿ ಯಮ, ಅಗ್ನಿ, ನಿರ್ಋತಿ, ಮೇಘ, ತಮ (ಕತ್ತಲು), ಸರ್ಪ, ಪರ್ವತ, ಸಮುದ್ರ ಮೊದಲಾದ ಅಸ್ತ್ರಗಳನ್ನು ಬಿಟ್ಟನು ಲಕ್ಷ್ಮಣನು ಅವೆಲ್ಲವುಗಳಿಗೂ ಹರ, ವಾರುಣ, ಹರಿ, ವಾಯು, ಸೂರ್ಯ, ಗಾರುಡ, ವಜ್ರ, ಆಗ್ನೇಯ ಮೊದಲಾದ ಪ್ರತ್ಯಸ್ತ್ರಗಳನ್ನು ಬಿಟ್ಟು ಅವುಗಳನ್ನು ಗೆದ್ದು ಸಿಂಹನಾದ ಮಾಡಿದನು. ೩೩. "ಎಲೆಲೆ ಲಕ್ಷ್ಮಣ, ನಮಗೆ ದೇವತೆಗಳು ಹಿತಕಾರಿಗಳಲ್ಲವಾದುದರಿಂದ ಅವರ ಹೆಸರಿನ ದಿವ್ಯಾಸ್ತ್ರಗಳನ್ನು ಜಯಿಸಿದೆನೆಂದು ಗರ್ವಿಸಬೇಡ ; ನಿನ್ನ ಹಣೆಬರಹವನ್ನು ಒರೆಸಿಹಾಕುವೆನು. ಕುಂಭಿಳಿದೇವಿಯು ಕೊಟ್ಟಿರುವ ಮಹಾಭಯಂಕರ ಅಸ್ತ್ರದ ಸಾಮರ್ಥ್ಯವನ್ನು ನೋಡು" ಎನ್ನುತ್ತ ಆ ಮಹಾಅಸ್ತ್ರವನ್ನು ಬಿಲ್ಲಿಗೆ ಹೂಡಿದನು. ೩೪. "ಇನ್ನೂ ನಿನ್ನ ಪ್ರಾಣವಿರುವಾಗಲೇ ನೋಡಿಕೋ, ಈ ಅಸ್ತ್ರವು ದೇವತೆಗಳ ಕೊರಳನ್ನು ಸೋಕಿದರೆ ಕತ್ತರಿಸುವ ವಿಷೋದಕ. ಮಾನವವಿಮಾನುಗಳಿಗೆ ಗಾಳ, ಸರ್ಪಗಳ ಪ್ರಾಣವನ್ನು ಹಿಂಸಿಸುವ ಮಂತ್ರ; ಯುದ್ಧಸಮರ್ಥವಿದು, ನಿನ್ನ ಹೊಟ್ಟೆಯ ರಕ್ತವನ್ನು ಸುರಿಸುವ ಅಸ್ತ್ರವಿದು ನೋಡು" ಎನ್ನುತ್ತ ಇಂದ್ರಜಿತು ಗರ್ಜಿಸಿದ. ೩೫. "ಪುನಃ ಈಗಲೇ ನೋಡಿಕೋ, ಆಮೇಲೆ ನೋಡಲಿಲ್ಲ ಎನ್ನಬೇಡ. ಅನಂತರದ ಸ್ಥಿತಿ ಬಹಳ ಕಠಿಣವಾಗುವುದು, ಭಯ ಸುತ್ತಿಕೊಳ್ಳುವುದಕ್ಕೆ ಮೊದಲು ಹತ್ತಿರ ಇರುವ ವಿಭೀಷಣ, ಅಂಗದ, ಹನುಮಂತ ಮೊದಲಾದ ಉತ್ತಮ ವೀರರು ನೋಡಲಿ, ಅವರಿಗೆ ತೋರಿಸು. ಈ ಅಸ್ತ್ರವನ್ನು ಯಾರು ಜಯಿಸಬಲ್ಲವರು; ವಿಭೀಷಣನ ಅಭಿಪ್ರಾಯವನ್ನು ಕೇಳಿ ನೋಡು" ಎಂದ

ಕಾಣೆನೆನಬೇಡೆನುತಲಾಸುರ । ಬಾಣವನು ಬೊಬ್ಬಿಱಿದು ಸೀತಾ
ಪ್ರಾಣನಾಥಪ್ರಿಯ ಸಹೋದರನೆಡೆಗೆ ಬಿಡೆ ಬಳಿಕ
ಕ್ಷೋಣಿಯಾಗಲಕೆ ನೆರಹಿದುದು ಪರಿ । ವಾಣಗಟ್ಟಿಂದ್ರಾರಿಗಳನಾ
ಕ್ಷೀಣಬಲ ಭಟರುಗಳನಿಭ ಹಯ ರಥ ಪದಾತಿಗಳ ೩೭

ಎತ್ತ ನೋಡಿದಡಿಂದ್ರಜಿತುವಿನ । ಮೊತ್ತವಿರ್ದುದು ಕವಿದೆಸುವ ಖಳ
ಪತ್ತಿ ರಾವುತ ರಥಿಕರಿರ್ದುದು ಕೋಟಿಸಂಖ್ಯೆಯಲಿ
ಸುತ್ತವೇದೆಯುವಿಕ್ಕಿ ಹೊಳಕುವ । ಪೊತ್ತ ಗಿರಿಗಳ ಹೆಮ್ಮರನ ಸುಭ
ಟೋತ್ತಮರ ಸಂಹರಿಸುತಿರ್ದುದು ಸೇನೆ ರಾವಣಿಯ ೩೭

ಇಱಿವ ಕರಗಸವೆತ್ತಿ ಸೀಳುವ । ತಱಿವ ತಿವಿವೌಕುವ ತೆರಳುವ
ಕೊಱೆವ ಕೊಚ್ಚುವ ಕೊಲುವ ಚುಚ್ಚುವ ಕಾಳರಕ್ಕಸರ
ಬಿಱುಬುಗಾಳಗಕುರುಳುತಿರ್ದುದು । ಗಿಱುಕುಗುಟ್ಟುತ ಚೀಱಿ ಪಲುಗಿರಿ
ದಱೆಟಿ ಬೀಳುವ ಬಾಲದಣ್ಣಾಗಳವನಿಯಗಲದಲಿ ೩೮

ಮೇಲೆ ಬೀಳುವ ಮುಸಲ ಮುದ್ಗರ । ಶೂಲ ಸೆಲ್ಲೆಹ ಸಬಳ ಚಕ್ರ ಕ
ರಾಳ ಪರಿಘ ಪ್ರಾಸ ಖಡ್ಗಪ್ರಮುಖ ಕೈದುಗಳ
ತೂಳಲೀ ಹವಣಾಯ್ತು ಹಗೆವನ । ಕೀಲಣಗೆಗಱಿವಿಲ್ಲದಾಯ್ತು
ಬ್ಬಾಳುತನಕವಸಾನವಾಯ್ತುತಿಕಾಯರಿಪುವಿಂಗೆ ೩೯

ಇಂದ್ರಜಿತು. ೩೬. 'ನೋಡಲಿಲ್ಲ ಎನ್ನಬೇಡ' ಎನ್ನುತ್ತ ಭಯಂಕರ ಅಸ್ತ್ರವನ್ನು ಇಂದ್ರಜಿತು ಗರ್ಜಿಸುತ್ತ ಲಕ್ಷ್ಮಣನಿಗೆ ಗುರಿಮಾಡಿ ಬಿಟ್ಟನು. ಅನಂತರ ಭೂಮಿಯ ಮೇಲೆಲ್ಲ ಅಸಂಖ್ಯಾತ ಇಂದ್ರಜಿತುಗಳು, ಬಲಶಾಲಿ ವೀರರುಗಳು ತುಂಬಿಕೊಂಡರು ಮತ್ತು ಆನೆ ಕುದುರೆ ರಥ ಕಾಲಾಳುಗಳು ಹರಡಿಬಿಟ್ಟವು. ೩೭. ಎಲ್ಲೆಲ್ಲಿ ನೋಡಿದರೂ ಇಂದ್ರಜಿತುಗಳೇ ಕಾಣಿಸುತ್ತಿದ್ದರು. ಮುತ್ತಿ ಬಾಣಬಿಡುವ ರಾಕ್ಷಸಕಾಲುಬಲ, ರಾವುತರು ಮತ್ತು ರಥಿಕರು ಕೋಟಿಸಂಖ್ಯೆಯಲ್ಲಿದ್ದರು. ಬೆಟ್ಟಮರಗಳನ್ನು ಹೊತ್ತು ಸುತ್ತ ಆಕ್ರಮಿಸಿಬಂದ ವಾನರವೀರರನ್ನು ಇಂದ್ರಜಿತುವಿನ ಸೈನ್ಯವು ಸಂಹರಿಸುತ್ತಿತ್ತು. ೩೮. ಇರಿಯುವ, ಗರಗಸದಿಂದ ಸೀಳುವ, ಕತ್ತರಿಸುವ, ತಿವಿಯುವ, ಅಮುಕುವ, ಹಿಂದಕ್ಕೋಡಿಸುವ, ಕೊರೆಯುವ, ಕೊಚ್ಚುವ, ಕೊಲ್ಲುವ, ಚುಚ್ಚುವ ಕಾಳರಾಕ್ಷಸರ ಬಿರುಸಿನ ಕಾಳಗದಲ್ಲಿ ಗಿರುಕುಗುಟ್ಟುತ್ತ ಚೀರಿ ಹಲ್ಲುಗಿರಿದು ಅರಿಚಿಕೊಂಡು ಬಾಲದಣ್ಣಗಳಾದ ವಾನರರು ನೆಲದಷ್ಟಗಲದಲ್ಲೂ ಉರುಳುತ್ತಿದ್ದರು. ೩೯. ಮೇಲೆ ಬೀಳುವ ಮುಸಲ, ಮುದ್ಗರ, ಶೂಲ. ಈಟಿ, ಸಬಳ, ಚಕ್ರ, ಪರಿಘ, ಪ್ರಾಸ, ಖಡ್ಗ ಮೊದಲಾದ ಮುಖ್ಯ ಆಯುಧಗಳಿಂದ ಆಕ್ರಮಿಸಲು ಈ ಸ್ಥಿತಿಯಾಯಿತು. ಶತ್ರುವಿನ ತಂತ್ರಕ್ಕೆ ತಿಳಿವಿಲ್ಲವಾಯ್ತು,

ಮೊರೆದವಗಣಿತ ಸಿಡಿಲು ಸುಳಿಸುಳಿ । ದುರಿ ಚಡಾಳಿಸಿತುಬ್ಬಿದವು ಕೇ
ಸುರಿಗಳಾಸುರ ಮಸಗಿ ಮುಸುಕಿದವಖಿಳ ಭೂತಚಯ
ಗಿರಿಗಳಿಡೆಯಾಡಿದವು ಸೂಸಿದು । ದರುಣಮಯ ಜಲಧಾರೆ ನೆರೆದವು
ಹರಿ ಶರಭ ಶಾರ್ದೂಲ ಸೈರಿಭವಿದಿರಿನಲಿ ಭಟನ ೪೦

ಹೋದುದಿನ್ನೇನಕಟ ರಾಮಸ । ಹೋದರನ ಶೌರ್ಯಾತಿಶಯವೆಂ
ದಾ ದಿವೌಕಸರೊಱಲುತಿರ್ದರು ತರಣಿಮಾರ್ಗದಲಿ
ಐದಿತಧಿಕ ಭಯಾನಕದಲಜ । ನಾದರದಿಸುರು ವೈಷ್ಣವದ ಸಂ
ಪಾದದಸ್ತ್ರವನಿತ್ತು ಕಳುಹಿದನಾ ಸಮೀರಣನ ೪೧

ಇಳಿದನಂಭೋಜಜನ ಬಳಿಯಿಂ । ದಿಳೆಗೆ ಭುವನಪ್ರಾಣನಗ್ಗದ
ಕಲಿಲಲಾಟ ಲಲಾಮ ಲಘುಸಂಧಾನ ಲಕ್ಷ್ಮಣನ
ಲಲಿತ ವೈಷ್ಣವ ಮುದ್ರಿತಾಸ್ತ್ರವ । ತಿಳುಹಿಕೊಟ್ಟಾಕಾಶಮಾರ್ಗಕೆ
ನಿಲುಕಿದನು ಪವಮಾನ ಪವನಕುಮಾರನುಬ್ಬಿಱಿಯೆ ೪೨

ಕೊಟ್ಟ ಬಾಣವನೀತ ತಿರುವಿಗೆ । ತೊಟ್ಟು ಕುಬುಬಿಱಿದಬ್ಬರಿಸಿ ಬೊ
ಬ್ಬಿಟ್ಟು ಬಿಡೆ ಬೆರಸಿತು ಮಹಾಮಾಯಾಸುರಾಸ್ತ್ರದಲಿ
ಹುಟ್ಟಿದಿಂದ್ರಜಿತು ಪ್ರಮುಖ ರಣ । ಘಟ್ಟಣೆಯ ಚತುರಂಗಬಲವನು
ಬಟ್ಟಬಯಲನು ಮಾಡಿ ಝಾಡಿಸಿತಖಿಳ ಭೂತಗಳ ೪೩

ಲಕ್ಷ್ಮಣನ ಶೌರ್ಯಕ್ಕೆ ಅಂತ್ಯವು ಸಮೀಪಿಸಿತು. ೪೦. ಅಸಂಖ್ಯಾತ ಸಿಡಿಲುಗಳು
ಭೋರ್ಗರೆದವು, ಉರಿಯೆದ್ದು ಎಲ್ಲ ಕಡೆಗೂ ಹಬ್ಬಿತು, ಕೆಂಪಾದ ಜ್ವಾಲೆಗಳು
ಮೇಲೆದ್ದವು. ಸಮಸ್ತ ಭೂತಗಳು ಭಯಂಕರವಾಗಿ ಕೆರಳಿ ವಾನರವೀರರನ್ನು ಮುತ್ತಿ
ದವು. ಬೆಟ್ಟಗಳು ವಾನರಸೈನ್ಯದ ಮೇಲೆ ಅಡ್ಡಾಡಿದವು ; ಕೆನ್ನೀರಿನ ಪ್ರವಾಹ
ಹರಿಯಿತು ; ಸಿಂಹ, ಶರಭ, ಶಾರ್ದೂಲ, ಕೋಣಗಳು ಲಕ್ಷ್ಮಣನ ಎದುರಿಗೆ ಬಂದವು.
೪೧. 'ಇನ್ನೇನು ರಾಮಸಹೋದರನ ಶೌರ್ಯಾತಿಶಯವು ಹೋಯಿತು !' ಎಂದು
ಆಕಾಶದಲ್ಲಿ ದೇವತೆಗಳು ಕೂಗಿಟ್ಟರು. ಇಂದ್ರಜಿತುವಿನ ಅಸ್ತ್ರವು ಭಯಂಕರವಾಗಿ
ಬರುತ್ತಿದ್ದಿತು. ಆಗ ಬ್ರಹ್ಮನು ಪ್ರೀತಿಯಿಂದ ವೈಷ್ಣವಾಸ್ತ್ರವನ್ನು ಕೊಟ್ಟು ವಾಯು
ವನ್ನು ಕಳುಹಿಸಿದನು. ೪೨. ವಾಯುವು ಬ್ರಹ್ಮನ ಬಳಿಯಿಂದ ಬಾಣಪ್ರಯೋಗದಲ್ಲಿ
ನಿರತನಾಗಿದ್ದ ವೀರರ ಹಣೆಯತಿಲಕ ಲಕ್ಷ್ಮಣನ ಹತ್ತಿರಕ್ಕೆ ಇಳಿದುಬಂದನು. ವೈಷ್ಣ
ವಾಸ್ತ್ರವನ್ನು ಕೊಟ್ಟು ಅದರ ಸಂಧಾನ ಮೊದಲಾದುವನ್ನು ತಿಳಿಸಿ ವಾಯುವು ಆಕಾಶಕ್ಕೆ
ಹಾರಿದನು. ಆಗ ವಾಯುಕುಮಾರ ಹನುಮಂತನು ಹಿಗ್ಗಿಹೋದನು. ೪೩. ವಾಯುವು
ಕೊಟ್ಟ ವೈಷ್ಣವಾಸ್ತ್ರವನ್ನು ಲಕ್ಷ್ಮಣ ಬಿಲ್ಲಿನ ಹಗ್ಗಕ್ಕೆ ಹೂಡಿ ಕುಬುಬೆಂದು ಅಬ್ಬರಿ
ಸುತ್ತ ಬಿಡಲು ಅದು ಇಂದ್ರಜಿತು ಕಳುಹಿಸಿದ ಭಯಂಕರ ಮಾಯೆಯ ಅಸ್ತ್ರವನ್ನು
ತನ್ನಲ್ಲಿ ಅಡಗಿಸಿಕೊಂಡುಬಿಟ್ಟಿತು. ತರುವಾಯ ಯುದ್ಧದಲ್ಲಿ ಪೆಟ್ಟುಕೊಡುತ್ತಿದ್ದ
ಸಮಸ್ತ ಇಂದ್ರಜಿತುಗಳನ್ನೂ ಚತುರಂಗಸೈನ್ಯವನ್ನೂ ಬಟ್ಟಬಯಲುಮಾಡಿ ಸಮಸ್ತ

ಉಳಿದನೊಬ್ಬನೆ ಶಕ್ರಜಿತು ಬೆರ । ಳಳುಹಿ ಮೂಗಿನ ಮೇಲೆ ಮೂರ್ಧ್ನಿಯ
ನೊಲೆದು ಮಾಮರ್ಝು ಬಾಪು ವಿಧಿ ಬಲ್ಲಿದನಲಾಯೆನುತ
ಉಳಿವು ತಂದೆಗಸಾಧ್ಯ ಪಾಪದ । ಬಳಿಯ ಫಲ ತಪ್ಪುವುದೆ ತಾನಿ
ನ್ನಳಲಿ ಮಾಡುವುದೇನು ಸಾವುದೆ ಸಮಯ ತನಗೆಂದ ೪೪

ಈತಗಳು ನರರಲ್ಲ ನೆರೆದಿಹ । ಕೋತಿ ಕೋಡಗವಲ್ಲ ನಮ್ಮಯ
ತಾತ ಬಯಸಿದ ವನಿತೆ ಮಾನವಿಯಲ್ಲವಿದು ಸಿದ್ಧ
ಸೋತಡೆಯು ಸುಖ ದೈವದಲಿ ಧೈ । ರ್ಯಾತಿಶಯದಲಿ ಕಾದಿ ಕೀರ್ತಿಯ
ಬೈತಲೆಯನಪ್ಪುವುದೆ ಭಾವಜ್ಞರಿಗೆ ಗುಣವೆಂದ ೪೫

ಎನುತ ಮೇಘಧ್ವಾನಕೋಟಿಯ । ನಿನದದಲಿ ನೈರುತವ ಧನುಸಿಂ
ಜಿನಿಯಲುಜಿ ಸಡಗರಿಸಿ ಸಕಲ ದಿಗಂತ ದನಿದೋಜಿ
ವನಧಿ ತಲೆಕೆಳಗಾಗೆ ನೆಲ ಬಿ । ಕ್ಕನೆ ಬಿರಿಯೆ ಚಂದ್ರಾರ್ಕಬಿಂಬದ
ಘನಪದದ ಪಥ ಪಲ್ಲಟಿಸೆ ತೆಗೆದೆಚ್ಚನಿಂದ್ರಾರಿ ೪೬

ಏನು ಬಲ್ಲವಿಕೆಯೊ ನಿಧಾನಿಸೆ । ಮಾನವನೆ ಸೌಮಿತ್ರಿ ಶರಸಂ
ಧಾನಸಮಯೋಚಿತದೊಳಧಿಕನಲಾ ಜಗತ್ರಿನಲಿ
ಆ ನಿರುತಿ ಮಂತ್ರಾಸ್ತ್ರಮುಖಿಕೆ ಮ । ಹಾನಿಶಿತ ಸಿರಿಕಂಠಶರವ ವಿ
ಮಾನಿಕರು ತಲೆದೂಗೆ ಕಡಿದಿಳುಹಿದನು ರಿಪುಶರವ ೪೭

ಭೂತಗಣಗಳನ್ನು ತಳ್ಳಿಬಿಟ್ಟಿತು. ೪೪. ಇಂದ್ರಜಿತು ಒಬ್ಬನೆ ಉಳಿದುಕೊಂಡ. ಮೂಗಿನ ಮೇಲೆ ಬೆರಳಿಟ್ಟು ತಲೆದೂಗಿ 'ಮಾಮರ್ಝು. ಭಾಪು ! ವಿಧಿ ಬಲ್ಲಿದನಲ್ಲವೇ !' ಎನ್ನುತ್ತ 'ಇನ್ನು ತಂದೆ ಬದುಕುವುದು ಅಸಾಧ್ಯ. ಪಾಪಕೃತ್ಯದಿಂದುಂಟಾದ ಫಲವು ತಪ್ಪುವುದೇ ? ನಾನು ಇನ್ನು ದುಃಖಿಸಿ ಪ್ರಯೋಜನವೇನು ? ಇನ್ನು ಮರಣವೇ ನನಗೆ ಗತಿ' ಎಂದುಕೊಂಡ ಇಂದ್ರಜಿತು. ೪೫. 'ಇವರುಗಳು ಮಾನವರಲ್ಲ. ಇಲ್ಲಿ ಬಂದು ಸೇರಿರುವ ಕೋತಿಗಳು ಕೋಡಗಗಳಲ್ಲ. ನಮ್ಮಪ್ಪ ಬಯಸಿದ ಹೆಂಗಸು ಮಾನವಸ್ತ್ರೀ ಯಲ್ಲ ; ಇದು ನಿಜ. ಸೋತರೂ ದೇವರೊಡನೆ ಧೈರ್ಯದಿಂದ ಕಾದಾಡಿ ಕೀರ್ತಿ ಲಕ್ಷ್ಮಿಯ ಬೈತಲೆಯನ್ನು ಅಪ್ಪಿಕೊಳ್ಳುವುದೆ ಜ್ಞಾನಿಯಾದವನಿಗೆ ಲೇಸು' ಎಂದು ಆಲೋಚಿಸಿದ ಇಂದ್ರಜಿತು. ೪೬. ಮೇಲಿನಂತೆ ನಿಶ್ಚಯಿಸಿದ ಇಂದ್ರಜಿತು ಕೋಟಿ ಗುಡುಗುಗಳ ಅಬ್ಬರದಿಂದ ಧನುಸ್ಸಿನ ತಿರುವಿಗೆ ನೈರ್ಋತಾಸ್ತ್ರವನ್ನು ಹೂಡಿ ಸಮಸ್ತ ದಿಕ್ಕುಗಳೂ ಪ್ರತಿಧ್ವನಿಸಲು, ಸಮುದ್ರವು ತಲೆಕೆಳಗಾಗಲು, ಭೂಮಿ ಬಿರಿಯಲು, ಸೂರ್ಯಚಂದ್ರರ ಸಂಚಾರಮಾರ್ಗವು ವ್ಯತ್ಯಾಸವಾಗಲು ಅಸ್ತ್ರವನ್ನು ಬಿಟ್ಟನು. ೪೭. ಆಲೋಚಿಸಿ ನೋಡಿದರೆ ಲಕ್ಷ್ಮಣನದು ಏನು ಜ್ಞಾನವೋ ! ಸಮಯೋಚಿತವಾದ ಬಾಣಪ್ರಯೋಗದಲ್ಲಿ ಜಗತ್ತಿಗೇ ಶ್ರೇಷ್ಠನಲ್ಲವೇ ? ಆ ನೈರ್ಋತಾಸ್ತ್ರಕ್ಕೆ ಪ್ರತಿಯಾಗಿ ಹರಿತವಾದ ಶ್ರೀಕಂಠಾಸ್ತ್ರವನ್ನು ಕಳುಹಿಸಿ ಅದನ್ನು ಕಡಿದು ಕೆಡವಿದನು ; ಲಕ್ಷ್ಮಣನ

ಎತ್ತಿದನು ಬಳಿಕಬುಜಭವ ತನ । ಗಿತ್ತ ಪೂರ್ವದ ದಿವ್ಯಶಕ್ತಿಯ
ನೆತ್ತಲುರಿ ಭುಗುಭುಗಿಸಿ ಕಮಲಭವಾಂಡ ಖರ್ಪರವ
ಹೊತ್ತಿದವು ಜಗವಿದನರಿದು ರಘು । ಜೋತ್ತಮನ ನಿಜಶರಣನಾಕ್ಷಣ
ಹತ್ತಿರಕೆ ನಡೆತಂದು ಲಕ್ಷ್ಮಣದೇವಗಿಂತೆಂದ ೪೮

ಹೂಡು ತಿರುವಿನಲಜಮಹಾಸ್ತ್ರವ । ನಾಡಲಿಕೆ ತೆರಹಿಲ್ಲ ಹಿಳುಕಿನ
ಕೋಡಿನಲಿ ಕುಳ್ಳಿರಿಸು ಕಾಲನ ಮಂತ್ರಮುಖದಿಂದ
ಹೇಡಿಗೊಳುತದೆ ಸುರರ ಶೀಘ್ರವ । ಮಾಡು ಸುರವಲ್ಲಭನ ನಿಲಿಸು ನಿ
ರೂಢಿಸಿದ ಶರಮುಖದೊಳರಿಭಟವಿಜಯನಾಗೆಂದ ೪೯

ಈತನಾಕ್ಷಣ ಹೂಡಿದನು ಜಲ । ಜಾತಭವಬಾಣವನು ಲಯನಿ
ರ್ಘಾತತತಿ ಬೊಬ್ಬಿರಿದವಾ ಶರಮುಖದ ಮುಂಬಿನಲಿ
ಘಾತಿಸಿದನೆಣ್ದೆಸೆಯ ಮೇಘ । ವ್ರಾತಗಳ ಮಿಂಚುಗಳು ಹಿಗ್ಗಿತು
ವಾತಜನ ತನು ತವಕಿಸಿದುದತಿರಥನ ಸರಿಸದಲಿ ೫೦

ನೆನೆದನಾ ರಾಮಾಂಘ್ರಿಪಂಕಜ । ವನು ಮನೋಭಾವದಲಿ ಕೌಶಿಕ
ಮುನಿಗೆ ಶರಣೆಂದಭ್ರದಮರರಿಗಕ್ಷಿಯಲಿ ನಮಿಸಿ
ಧನುವ ವಾಮದ ಕರತಳದ ಬಿಗು । ಹಿನಲಿ ಬಲಿದಾಕರ್ಣ ಶರಸಂ
ಜನಿಯ ಸಂಧಾನದಲಿ ಲಕ್ಷ್ಮಣದೇವನಿಂತೆಂದ ೫೧

ಶರಸಂಧಾನವನ್ನು ನೋಡಿ ದೇವತೆಗಳು ತಲೆದೂಗಿದರು. ೪೮. ಅನಂತರ ಇಂದ್ರಜಿತು ಹಿಂದೆ ಬ್ರಹ್ಮನು ಕೊಟ್ಟಿದ್ದ ದಿವ್ಯಶಕ್ತಿಯನ್ನು ತೆಗೆದೆತ್ತಿಕೊಂಡನು. ದಿವ್ಯಶಕ್ತಿಯನ್ನು ಎತ್ತಿದನೋ ಇಲ್ಲವೋ ಉರಿ ಭುಗಿಲ್‌ಭುಗಿಲ್ ಎಂದು ಎದ್ದು ಬ್ರಹ್ಮಾಂಡದ ಚಿಪ್ಪನ್ನಾವರಿಸಿತು, ಲೋಕಗಳು ಹತ್ತಿಕೊಂಡವು. ಇದನ್ನು ತಿಳಿದು ರಘೂತ್ತಮನ ಶರಣ ವಿಭೀಷಣನು ತಕ್ಷಣ ಲಕ್ಷ್ಮಣನ ಹತ್ತಿರಕ್ಕೆ ಬಂದು ಮುಂದಿನಂತೆ ನುಡಿದನು. ೪೯. "ಬಿಲ್ಲಿನ ಹಗ್ಗಕ್ಕೆ ಬ್ರಹ್ಮಾಸ್ತ್ರವನ್ನು ಹೂಡು ಮಾತನಾಡಲು ಅವಕಾಶವಿಲ್ಲ. ಬಾಣದ ಬುಡದ ತುದಿಯಲ್ಲಿ ಯಮನನ್ನು ಮಂತ್ರದಿಂದ ಪ್ರತಿಷ್ಠಿಸು. ಇಂದ್ರಜಿತುವಿನ ಅಸ್ತ್ರವು ದೇವತೆಗಳನ್ನು ಹೆದರಿಸುತ್ತಿದೆ. ಬೇಗಮಾಡು. ಬಾಣದ ಬಾಯಲ್ಲಿ ದೇವೇಂದ್ರನನ್ನು ಪ್ರತಿಷ್ಠಿಸು. ಶತ್ರುವೀರನನ್ನು ಗೆಲ್ಲುವವನಾಗು" ಎಂದ ವಿಭೀಷಣ. ೫೦. ಆ ಕೂಡಲೇ ಲಕ್ಷ್ಮಣನು ಬ್ರಹ್ಮಾಸ್ತ್ರವನ್ನು ಹೂಡಿದನು. ಬಾಣದ ಮೊನೆಯ ಮುಂದೆ ಪ್ರಳಯದ ಸಿಡಿಲುಗಳು ಭೋರ್ಗರೆದವು. ಎಂಟು ದಿಕ್ಕುಗಳ ಮೋಡಗಳ ರಾಶಿಯನ್ನು ಒಂದೇ ಸಲ ಹೊಡೆಯುವಂತೆ ಮಿಂಚುಗಳು ಎದ್ದುವು, ಅತಿರಥ ರಾಮನೊಂದಿಗೆ ಹನುಮಂತನೂ ತವಕಗೊಂಡನು. ೫೧. ಲಕ್ಷ್ಮಣನು ರಾಮನ ಪಾದಕಮಲಗಳನ್ನು ಸ್ಮರಿಸಿಕೊಂಡು ಶುದ್ಧಮನಸ್ಸಿನಿಂದ ವಿಶ್ವಾಮಿತ್ರಮಹರ್ಷಿಗೆ ಶರಣು ಎಂದು ಹೇಳಿದನು. ಆಕಾಶದಲ್ಲಿರುವ ದೇವತೆಗಳನ್ನು ದೃಷ್ಟಿಯಿಂದ ವಂದಿಸಿ ಎಡಗೈಯಲ್ಲಿ ಧನುಸ್ಸನ್ನು ಬಿಗಿಯಾಗಿ

ಸುರಮಹೀಸುರ ಹವ್ಯಕವ್ಯಾ । ಧ್ವರ ವಿಘಾತರಿಗಿದಕೊ ದುರ್ಜನ
ಚರಿತ ಧರ್ಮದ್ರೋಹನಿರತರಿಗಿದಕೊ ಪರಸತಿಯ
ಪರಧನದ ಸೊಗಸಿಂಗೆ ಮನವನು । ಬೆರಸುವಧಮರಿಗಿದಕೊ ಶಿಕ್ಷಾ
ಪರಮಪ್ರಾಯಶ್ಚಿತ್ತವಿಧಿಯೆನುತೆಚ್ಚು ಬೊಬ್ಬಿಱಿದ ೫೨

ಅಬ್ಬರಿಸಿ ಬರೆ ಸರಳು ನಭದಲಿ । ಬೊಬ್ಬಿಱಿದುದಮರಾಳಿ ಹೊಡೆದವು
ಹೆಬ್ಬಱೆಗಳಲ್ಲಲ್ಲಿ ಮಾತಲಿ ಭುಜವನೊದಱಿಸಿದ
ಉಬ್ಬುಗೆಡೆದಿಂದ್ರಾರಿ ಕೈಯಿಂ । ದೆಬ್ಬಿಸಿದ ಶಕ್ತಿಯನು ಖಂಡಿಸು
ತುಬ್ಬಿನಲಿ ನಡೆತಂದು ನೆಗಹಿತು ನಭಕೆ ರಿಪುಶಿರವ ೫೩

ತೂಕಿಱಿದನಂತಕನು ಬೊಬ್ಬೆಯ । ತೋಕಿದನು ಶಿಖಿ ಹರುಷದಿಂದ ಪಿ
ನಾಕಿ ಹಾರಯಿಸಿದನು ಹೊಯ್ಸಿದನಖಿಳ ಭೇರಿಗಳ
ನಾಕಪತಿ ನಲಿದಾಡಿದನು ಮಕ । ರಾಕರೇಶ್ವರನನಿಲ ಧನದರ
ನೇಕ ಸುರರಬ್ಬರಿಸಿದರು ರಾವಣಿಯ ಮರಣದಲಿ ೫೪

ಹಾಯೆನುತ ಹಮ್ಮೈಸಿತಸುರನಿ । ಕಾಯವಭ್ರದ ಯಕ್ಷ ರಾಕ್ಷಸ
ರಾಯುಧವ ಬಿಸುಟುಗುರಲುಗಿಸಿದರಶ್ರುವಾರಿಗಳ
ಬಾಯ ಹೊಯ್ಲಿನ ಶೋಕಶಿಖಿಯ ಚ । ಡಾಯಮಾನದ ಮಱುಕದುಬ್ಬಿನ
ಕಾಯದುಪಲಂಕೇಶನಿಳೆಗೊಱಗಿದನು ಮೂರ್ಛೆಯಲಿ ೫೫

ಹಿಡಿದು ಕಿವಿಯವರೆಗೆ ತಿರುವನ್ನೆಳೆದು ಲಕ್ಷ್ಮಣನು ಮುಂದಿನಂತೆ ಹೇಳಿದನು. ೫೨. "ದೇವಬ್ರಾಹ್ಮಣರ ಹವ್ಯ, ಕವ್ಯ, ಯಾಗನಾಶಕರಿಗೆ ಇದು, ದುಷ್ಟನಡವಳಿಕೆಯಿಂದ ಧರ್ಮಕ್ಕೆ ಮೋಸಮಾಡುವವರಿಗೆ ಇದು, ಪರಸ್ತ್ರೀ ಪರಧನಗಳ ಸೊಗಸಿಗೆ ಆಸೆಪಡುವ ನೀಚರಿಗೆ ಇದು, ಪಾಪಕ್ಕೆ ಶಿಕ್ಷಾರೂಪವಾದ ಪ್ರಾಯಶ್ಚಿತ್ತದ ವಿಧಿಯಿದು, ತೆಗೆದುಕೋ" ಎನ್ನುತ್ತ ಆರ್ಭಟಿಸಿ ಲಕ್ಷ್ಮಣನು ಅಸ್ತ್ರವನ್ನು ಬಿಟ್ಟನು. ೫೩. ಲಕ್ಷ್ಮಣನು ಕಳುಹಿಸಿದ ಅಸ್ತ್ರವು ಅಬ್ಬರಿಸುತ್ತ ಬರಲು ಗಗನದಲ್ಲಿದ್ದ ದೇವತೆಗಳು ಬೊಬ್ಬೆಹಾಕಿದರು, ಅಲ್ಲಲ್ಲಿ ದೊಡ್ಡ ತಮಟೆಗಳು ಬಾರಿಸಿದವು, ದೇವೇಂದ್ರನ ಸಾರಥಿ ಮಾತಲಿಯು ಭುಜ ಹಾರಿಸಿದ, ದರ್ಪದಿಂದ ಲಕ್ಷ್ಮಣನು ಬಿಟ್ಟ ದಿವ್ಯಾಸ್ತ್ರವು ಇಂದ್ರಜಿತುವಿನ ದಿವ್ಯಶಕ್ತಿಯನ್ನು ಕತ್ತರಿಸಿ ಉತ್ಸಾಹದಿಂದ ಮುಂದೆ ಬಂದು ಇಂದ್ರಜಿತುವಿನ ತಲೆಯನ್ನು ಆಕಾಶಕ್ಕೆ ಹಾರಿಸಿತು. ೫೪. ಇಂದ್ರಜಿತು ಸತ್ತುದನ್ನು ಕಂಡು ಯಮನು ಕುಣಿದನು, ಅಗ್ನಿ ಬೊಬ್ಬೆ ಹಾಕಿದನು, ಪಿನಾಕಧರ ಶಿವನು ಸಂತೋಷದಿಂದ ಹೊಗಳಿದನು, ಸ್ವರ್ಗದೊಡೆಯ ದೇವೇಂದ್ರನು ಸಮಸ್ತ ಭೇರಿಗಳನ್ನು ಹೊಡೆಸಿದನು, ವರುಣ ನಲಿದಾಡಿದನು, ವಾಯು ಕುಬೇರ ಮೊದಲಾದ ಅನೇಕ ದೇವತೆಗಳು ಗಟ್ಟಿಯಾಗಿ ಕೂಗಿದರು. ೫೫. ರಾಕ್ಷಸ ಸಮೂಹವು 'ಹಾ' ಎಂದು ಹಂಬಲಿಸಿತು. ಆಕಾಶದ ಯಕ್ಷರಾಕ್ಷಸರು ಆಯುಧ ಗಳನ್ನೆಸೆದು ಉಗುರುಗಳಿಂದ ಕಣ್ಣೀರು ಮಿಡಿದರು. ಬಾಯಿಬಡಿದುಕೊಳ್ಳುತ್ತ ಶೋಕಾಗ್ನಿಯಿಂದ ಸಂತಪ್ತನಾಗಿ ದುಃಖ ತುಂಬಿದ ವಿಭೀಷಣನು ಮೂರ್ಛೆಹೋಗಿ

ಚಿಗಿದ ತಲೆ ಕೊಂಡಾಡೆ ಬವರದ । ಬಿಗುಹು ಬಳಚದೆ ಬಾಣಧಿಯ ಬಾ
ಣಗಳು ಸವೆವನ್ನಬರಲೆಚ್ಚುದು ಮುಂದ ರಾವಣಿಯ
ಮುಗುಳೆ ಕಿಗ್ಗಟ್ಟಿನ ಕಠಾರಿಯ । ನುಗಿದು ದಂಡೆಯನೊದ್ದಿ ತಿವಿದುದು
ಗಗನವನು ಹಳುವಾಯಿಯಲಿ ಹವಣಿಸುತ ರಥದೊಳಗೆ ೫೬

ಹೇಳಲಚ್ಚರಿ ವೀರಲಂಕಾ । ಪಾಲಕನ ಭುಜವಿಜಯಲಕ್ಷ್ಮಿಯ
ತೋಳ ಕನ್ನಡಿ ಕಳಚಿ ಬೀಳ್ವಂದದಲಿ ನಭದಿಂದ
ಥಾಳಿಸುವ ದಾಡೆಗಳ ಹೊಗರೊಗು । ವಾಲಿಗಳ ನಗೆಮೊಗದ ಕರ್ಣವಿ
ಲೋಲ ಕುಂಡಲದಸುರಶಿರ ಕೆಡೆದುದು ಮಹೀತಳಕೆ ೫೭

ಕೆಡೆದ ತಲೆಯನು ತಕ್ಕವಿಸಿ ಮೊಗ । ದಡವಿ ಮಕ್ಕಳ ಮಾಣಿಕವೆ ಕ
ನ್ನಡಿಯ ಕಲಿಗಳ ಕಂದ ಹಾಯೆನುತಾ ವಿಭೀಷಣನು
ಮಡಿದೆಯೈಯಲಿ ಮಗನೆ ತಂದೆಯ । ತೊಡಕುವೇಟದ ತೋಟಿಯಲಿ ನಗೆ
ಗೆಡೆಗೆ ಸಂದಿರೆಯೆಂದು ತಂದನು ಕಂಗಳಲಿ ಜಲವ ೫೮

ಆರ ಮಾತನು ಕೇಳದಕಟಾ । ಹೋರಿ ಕೆಟ್ಟಿರೆ ಮಕ್ಕಳಿರ ಕ
ಣ್ಣಾರೆ ಕಂಡೆನೆ ಪುತ್ರಮಿತ್ರಭ್ರಾತೃವಧೆಗಳನು
ವೀರ ಹಾ ವೈಚಿತ್ರಕದನಕ । ಠೋರ ಹಾ ಕಮನೀಯ ಸೌಂದರ
ಹಾರ ಹಾಹಾ ಕಂದ ಹಾಯೆಂದಸುರ ಶೋಕಿಸಿದ ೫೯

ನೆಲದ ಮೇಲೊರಗಿದನು. ೫೬. ಆಕಾಶಕ್ಕೆ ಚಿಮ್ಮಿದ ತಲೆಯು ರಾಮಲಕ್ಷ್ಮಣರನ್ನು ಕೊಂಡಾಡುತ್ತಿರಲು, ಇತ್ತ ಯುದ್ಧದ ಬಿಸಿ ಆರದ ಇಂದ್ರಜಿತುವಿನ ಮುಂಡವು ಬತ್ತಳಿಕೆಯ ಬಾಣಗಳು ಮುಗಿಯುವವರೆಗೂ ಬಾಣವನ್ನು ಹೊಡೆಯುತ್ತಲಿದ್ದಿತು ; ಅನಂತರ ಕೈಹಾಕಿ ಸೊಂಟಕ್ಕೆ ಸಿಕ್ಕಿಸಿದ್ದ ಕಠಾರಿಯನ್ನೆಳೆದುಕೊಂಡಿತು. ರಥದಲ್ಲಿ ಸರಿಪಡಿಸಿಕೊಳ್ಳುತ್ತ ರಾಗವಾಗಿ ಕಿರಿಚಿಕೊಳ್ಳುತ್ತ ತೋಳನ್ನು ನೀಡಿ ಶೂನ್ಯದಲ್ಲಿ ಕಠಾರಿಯನ್ನು ಬೀಸಿತು. ೫೭. ವರ್ಣಿಸಲಾಶ್ಚರ್ಯ, ವೀರಲಂಕಾಧಿಪತಿಯ ಭುಜವಿಜಯಲಕ್ಷ್ಮಿಯ ತೋಳಿನ ಕನ್ನಡಿ ಕಳಚಿಬೀಳುವಂತೆ ಹೊಳೆಯುವ ಕೋರೆಹಲ್ಲುಗಳ, ಕಾಂತಿಯುಕ್ತವಾದ ಕಣ್ಣುಗಳ, ನಗುಮುಖದ, ಕಿವಿಯಲ್ಲಿ ಹೊಳೆಯುವ ಕಡಕುಗಳ ಇಂದ್ರಜಿತುವಿನ ತಲೆಯು ಆಕಾಶದಿಂದ ಭೂಮಿಗೆ ಬಿದ್ದಿತು. ೫೮. ಕೆಳಕ್ಕೆಬಿದ್ದ ಇಂದ್ರಜಿತುವಿನ ತಲೆಯನ್ನು ಅಪ್ಪಿಕೊಂಡು ಮುಖಸವರಿ, "ಮಕ್ಕಳ ಮಾಣಿಕ್ಯವೇ, ಕನ್ನಡಿಯೇ ; ಕಲಿಗಳ ಕಂದ! ಅಯ್ಯೋ ! ತಂದೆಯ ಮೋಹದ ತೊಡಕಿನ ಯುದ್ಧದಲ್ಲಿ ಸತ್ತೆಯಲ್ಲ ಮಗನೇ ! ನಗೆಗೀಡಾದಿರಲ್ಲ" ಎಂದು ಹಲುಬುತ್ತ ವಿಭೀಷಣನು ಕಣ್ಣುಗಳಲ್ಲಿ ನೀರು ತಂದುಕೊಂಡನು. ೫೯. "ಯಾರ ಮಾತನ್ನೂ ಕೇಳದೆ ಹೋರಾಡಿ ಕೆಟ್ಟಿರಲ್ಲ, ಮಕ್ಕಳೇ. ಮಗ ಸ್ನೇಹಿತ ಸಹೋದರರ ಹತ್ಯೆಗಳನ್ನು ಕಣ್ಣಾರೆ ಕಂಡೆನಲ್ಲ ! ವಿಚಿತ್ರ ಯುದ್ಧದ ಕಟ್ಟಾಳೇ, ಮನೋಹರ ಸುಂದರ ಹಾರವೇ, ಅಯ್ಯೋ ಮಗು !" ಎಂದು ವಿಭೀಷಣ

ಸಂತವಿಸಿದನು ಬಳಿಕಲಾ ವಿ । ಕ್ರಾಂತಬಲ ಸೌಮಿತ್ರಿ ಕಲಿಹನು
ಮಂತ ಹುತವಹಸೂನು ಜಾಂಬವ ಮುಖ್ಯಭಟನಿಕರ
ಚಿಂತೆಯನು ಬಿಡಿಸಿದರು ಮಾಯಾ । ಭ್ರಾಂತಿ ಬೇಡೆಂದಮಲ ಲಕ್ಷ್ಮೀ
ಕಾಂತ ತೊರವೆಯರಾಯ ನರಕೇಸರಿಯ ಕಿಂಕರನ ೬೦

ದುಃಖಿಸಿದ. ೬೦. ಅನುಪಮ ಬಲಶಾಲಿ ಲಕ್ಷ್ಮಣನು ವಿಭೀಷಣನನ್ನು ಸಂತೈಸಿದನು. ಹನುಮಂತ, ನೀಲ, ಜಾಂಬವ ಮೊದಲಾದ ಮುಖ್ಯ ವಾನರನಾಯಕರು ಮಾಯಾ ಭ್ರಾಂತಿಯನ್ನು ತ್ಯಜಿಸೆಂದು ಹೇಳಿ ತೊರವೆಯ ನರಹರಿಯ ಅವತಾರಿ ಲಕ್ಷ್ಮೀಕಾಂತನ ಭಕ್ತನ ಚಿಂತೆಯನ್ನು ಹೋಗಲಾಡಿಸಿದರು.

45

# ನಲವತ್ತೈದನೆಯ ಸಂಧಿ

ಸೂಚನೆ ॥ ಕಾಳಗದ ಮುಖದಲ್ಲಿ ಶುಕ ಶಾ । ರ್ದೂಲ ಸಾರಣರಸುವ ಸಲಹಿ ಸು
ರಾಲಯಕೆ ಕಳುಹಿದನು ರಘುಪತಿ ಕಲಿಸುಪಾರ್ಶ್ವಕನ

ಕುಶಕುಮಾರಕ ಕೇಳು ನೆಲೆಗಾ । ಣಿಸಿದ ರಕ್ಕಸಜಲಧಿ ನೆಲೆಗಾ
ಣಿಸಿತಲ್ಲೈ ಕಲಿಕುಂಭಕರ್ಣಾಸುರನ ಮರಣದಲಿ
ಕುಶಸಹೋದರ ಕೇಳು ಶಕ್ರ । ದ್ವಿಷನ ಮರಣದಲುಗುಳು ನೀರಾ
ಯ್ತಸುರರಿಗೆ ಸುರನಿಕರಕಾಯ್ತೀ ಪರಿಯ ಭಯಜಲಧಿ ೧

ಸಾರಿದುದು ರವಿಬಿಂಬ ಪಡುವಣ । ವಾರಿಧಿಯ ಧಾರುಣಿಯ ಲಲಿತ
ಸ್ಮೇರ ಬಿಂಬಾಧರದ ರುಚಿ ಪರ್ಬಿದುದು ದಿಕ್ತಟವ
ಬಾರಿಸಿದ ಸಮರಶ್ರಮದ ಸಂ । ಪೂರಣದಲಿವರಿರುಳುಮುಖವಲಿ
ಸಾರಿದರು ಪದಪದ್ಮವನು ಪಂಕರುಹಲೋಚನನ ೨

ಎದ್ದು ತಮ್ಮನನಪ್ಪಿದನು ಹೊದ । ಱೆದ್ದ ಹರುಷದಲನುಜ ಕೇಳ್ನೀ
ನಿದ್ದ ಕಾರಣ ಕೀರ್ತಿ ಕೈವಶವಾದುದಭಿಗತದ
ಹೊದ್ದಿದಭಿಮಾನಾಂಗನೆಗೆ ನೆಱೆ । ಬದ್ದಿನರು ನಾವಾಗದಂತಿರೆ
ಗೆದ್ದ ಹಗೆವನನೆಂದು ಹೊಂಪುಳಿಯೋದನಾ ರಾಮ ೩

ಸೂಚನೆ॥ ಯುದ್ಧದಲ್ಲಿ ಶುಕ ಶಾರ್ದೂಲ ಸಾರಣರ ಪ್ರಾಣವನ್ನು ರಕ್ಷಿಸಿ ರಾಘವನು ಸುಪಾರ್ಶ್ವಕನನ್ನು ಸ್ವರ್ಗಕ್ಕೆ ಕಳುಹಿಸಿದನು. ೧. ಕುಶಕುಮಾರ ಕೇಳು, ತನ್ನ ತಳವನ್ನು ತೋರಿಸಿದ ರಾಕ್ಷಸಸಾಗರವು ವೀರ ಕುಂಭಕರ್ಣಾಸುರನ ಮರಣದಲ್ಲಿ ತನ್ನ ಆಳವನ್ನು ತೋರಿಸಿತು. ಕುಶಸಹೋದರ ಲವನೇ ಕೇಳು, ಇಂದ್ರಜಿತುವಿನ ಮರಣದಲ್ಲಿ ಅದು ಉಗುಳುನೀರಾಯಿತು. ಹೀಗೆ ಅದು ದೇವತೆಗಳಿಗೆ ಅಭಯ ಸಾಗರವಾಗಿ ಪರಿಣಮಿಸಿತು. ೨. ಸೂರ್ಯಬಿಂಬವು ಪಶ್ಚಿಮಸಾಗರಕ್ಕಿಳಿಯಿತು. ಮುಗುಳುನಗೆಯಿಂದ ಕೂಡಿ ತೊಂಡೆಯಹಣ್ಣಿನಂತೆ ಕೆಂಪಾದ ಭೂಲಕ್ಷ್ಮಿಯ ಸುಂದರ ತುಟಿಯ ಕಾಂತಿಯು ದಿಕ್ಕುಗಳನ್ನು ಆವರಿಸಿತು. ಯುದ್ಧಪರಿಶ್ರಮದಿಂದ ಬಳಲಿದ ಲಕ್ಷ್ಮಣ ವಿಭೀಷಣನೇ ಮೊದಲಾದವರು ಕಮಲನಯನ ರಾಮನ ಪಾದಕಮಲಗಳನ್ನು ಸಮೀಪಿಸಿದರು. ೩. ರಾಮನು ಆನಂದಾತಿರೇಕದಿಂದ ಎದ್ದು ತಮ್ಮನನ್ನು ಆಲಿಂಗಿಸಿ ಕೊಂಡನು. "ತಮ್ಮ, ನೀನಿದ್ದ ಕಾರಣ ಎದುರುಹೋದ ಕೀರ್ತಿಯು ನಮ್ಮ ಕೈವಶ ವಾಯಿತು. ಶತ್ರುಗಳನ್ನು ಕೂಡಿದ ಅಭಿಮಾನಶ್ರೀಯ ಅತಿಥಿಗಳು ನಾವಾಗದಂತೆ

ಬಳಲಿದನುಜನ ಮೈಯ ರಕ್ತವ । ಬಳಿದು ಘಾಯದೊಳಿದ್ದ ಶರಮುಖ
ದಲಗುಗಳನುಗಿದುಗಿದು ಕಂಗಳಲುಗಿಸಿದನು ಜಲವ
ಇಳೆಯೊಳೆನ್ನಂದದಲಿ ಬೇಱೆ । ನ್ನೊಳರೆ ದುಃಖಿಗಳೆಂದು ಮಿಕ್ಕಿನ
ಬಲಯುತರನುಪಚರಿಸಿದನು ಕಾರುಣ್ಯಭಾವದಲಿ ೪

ಅನುಜ ಕೇಳೀರಾಱು ವರುಷದ । ಲನಶನವ್ರತವೆಂತು ಘಟಿಸಿತು
ನಿನಗೆ ನಿದ್ರಾಭಂಗವೇತಱಿನಾಯ್ತು ಹೇಳೆನಲು
ವನಫಲಂಗಳ ತಂದು ನಾ ದಿನ । ದಿನಕೆ ದೇವರಿಗೀವೆ ದೇವರ
ನೆನಹು ಸಂಧಿಸದಿರಲು ನಿರಶನವಾದುದೆನಗೆಂದ ೫

ಇರುಳು ದುಷ್ಟಮೃಗೌಘ ರಜನೀ । ಚರರ ಬಾಧೆಗೆ ತೊಱೆದು ನಿದ್ರೆಯ
ಗರವಟಿಗೆ ಬರುತಿಹೆನು ನಿಮ್ಮಡಿಯಂಗರಕ್ಷಣೆಗೆ
ತರುಣಿಯರ ಸಂಭೋಗವೆಂತೂ । ದೊರಕದೆಂಬುದ ದೇವರಭ್ಯಂ
ತರದ ಚಿತ್ತವೆ ಬಲ್ಲುದೆನೆ ಮರುಗಿದನು ರಘುನಾಥ ೬

ಅಱಿಯದಾದೆನು ಕಂದ ಕಾನನ । ದುಱುವ ಕಂದಫಲಾಳಿಗಳ ನೀ
ಮಱೆಯದುದರಾಗ್ನಿಗೆ ನಿವೇದಿಪೆಯೆಂದು ಬಗೆದಿಹೆನು
ಒಱಗದಿಹೆ ನಿದ್ರೆಯಲಿಯೆಂದಾ । ನಱಿಯದಿಹೆಯೆಲೆ ತಮ್ಮನೆಂದು
ಕ್ಕಿಱುವ ಶೋಕದಲಂಬುಗಳನಂಬಕಕೆ ಸೇರಿಸಿದ ೭

ಶತ್ರುವನ್ನು ಗೆದ್ದೆಯಲ್ಲವೇ" ಎಂದು ರಾಮನು ರೋಮಾಂಚಗೊಂಡ. ೪. ರಾಮನು ಆಯಾಸಗೊಂಡ ತಮ್ಮನ ಮೈಯ ರಕ್ತವನ್ನು ಒರೆಸಿ ಗಾಯದೊಳಗೆ ನಾಟಿಕೊಂಡಿದ್ದ ಬಾಣದ ಮೊನೆಗಳನ್ನು ಕೀಳುತ್ತ ಕಣ್ಣುಗಳಲ್ಲಿ ನೀರು ಸುರಿಸಿದನು. ಜಗತ್ತಿನಲ್ಲಿ ನನಗಿಂತ ಹೆಚ್ಚು ದುಃಖಿಗಳಿರುವರೇ ಎಂದು ಚಿಂತಿಸುತ್ತ ಕರುಣೆಯಿಂದ ಇತರ ಬಲಶಾಲಿ ನಾಯಕರನ್ನು ಉಪಚರಿಸಿದನು. ೫. "ತಮ್ಮ, ಹನ್ನೆರಡುವರ್ಷಗಳ ನಿರಾಹಾರವ್ರತವು ನಿನಗೆ ಹೇಗೆ ಉಂಟಾಯಿತು ? ಹನ್ನೆರಡುವರ್ಷಗಳ ಕಾಲ ನೀನು ನಿದ್ದೆಯುಳಿದುದು ಏತರಿಂದ ? ಹೇಳು" ಎಂದು ರಾಮನು ಪ್ರಶ್ನಿಸಿದನು. "ಕಾಡಿನಿಂದ ಹಣ್ಣುಗಳನ್ನು ದಿನದಿನವೂ ತಂದು ನಾನು ಸ್ವಾಮಿಯವರಿಗೆ ಕೊಡುತ್ತಿದ್ದೆ. ಆದರೆ ತಮಗೆ ನನ್ನ ಯೋಚನೆಯು ಬಾರದಿರಲು ನನಗೆ ನಿರಾಹಾರವಾಯಿತು" ಎಂದ ಲಕ್ಷ್ಮಣ. ೬. "ರಾತ್ರಿಯ ಕಾಲದಲ್ಲಿ ದುಷ್ಟಮೃಗಗಳಿಂದ ಮತ್ತು ರಾಕ್ಷಸರಿಂದ ಆಗುವ ತೊಂದರೆಯನ್ನು ನಿವಾರಿಸಲು ನಿದ್ದೆಯನ್ನು ಬಿಟ್ಟು ತಮ್ಮ ಅಂಗರಕ್ಷಣೆಗಾಗಿ ಗಸ್ತು ತಿರುಗುತ್ತಿದ್ದೆ. ಸ್ತ್ರೀಯರೊಡನೆ ಕೂಟವು ಹೇಗೂ ಇರಲಿಲ್ಲ ಎಂಬ ಸತ್ಯವು ಸ್ವಾಮಿಯವರ ಅಂತರಂಗಕ್ಕೆ ತಿಳಿದಿದೆ" ಎಂದು ಲಕ್ಷ್ಮಣನು ಹೇಳಲು ರಾಘವನು ಮರುಗಿದನು. ೭. "ನನಗೆ ಗೊತ್ತಾಗದೆ ಹೋಯಿತು, ಕಂದ. ಕಾಡಿನ ಗೆಡ್ಡೆ ಮತ್ತು ಹಣ್ಣುಗಳನ್ನು ನೀನು ಮರೆಯದೆ ಹೊಟ್ಟೆಯೊಳಗಿನ ಅಗ್ನಿಗೆ ಸಮರ್ಪಿಸುತ್ತಿದ್ದೆ ಎಂದು ತಿಳಿದುಕೊಂಡಿದ್ದೆ. ನೀನು ನಿದ್ದೆಮಾಡಲು ಮಲಗಲಿಲ್ಲ ಎಂಬುದನ್ನು ತಿಳಿಯಲಿಲ್ಲ, ತಮ್ಮ" ಎಂದು

ಅರಸ ಕೇಳುಪವಾಸಗಳು ಜಾ । ಗರಗಳಮಲ ಬ್ರಹ್ಮಚರಿಯದ
ನಿರತಿಶಯ ಸುವ್ರತವು ದೊರಕಿತು ದೈವಸೂತ್ರದಲಿ
ಧುರದಲಜ ಶಂಕರ ಸುರೇಂದ್ರ । ದ್ಯರಿಗೆ ಸೋಲದ ಭಟನು ಮತ್ತೊ
ಬ್ಬರಿಗೆ ಮಣಿವನೆಯೆಂದು ಬಿನ್ನೈಸಿದನು ಸುಗ್ರೀವ ೮

ಎಂದ ರವಿನಂದನನನಹುದೈ । ಯೆಂದು ಜಾಂಬವ ಹೊಗಳಿ ಬಳಿಕರ
ವಿಂದನಯನನನುಪಚರಿಸಿ ಪರಿಹರಿಸಿದನು ಮನದ
ಸಂದಣಿಯ ಶೋಕವ್ಯಥೆಯನ । ಲ್ಲಿಂದ ಮೇಲಸುರಾರಿ ನಯನ
ಸ್ಪಂದದಲಿ ಬೀಡಿಕೆಗೆ ಬೀಳ್ಕೊಟ್ಟನು ಭಟಾವಳಿಯ ೯

ಕೇಳಿರೈಯೆಲೆ ನೃಪಕುವರಶಾ । ರ್ದೂಲರಿರ ಧರೆಗಿಳಿದನಾ ಸುರ
ಪಾಲಜಿತುವಿನ ಸೂತನತ್ತಲು ಶೋಕದಲಿ ರಥವ
ಆಲಿ ಮರಳಿದ್ದ ಮುಸುಡ ಮುಸುಕಿನ । ದೂಳುಗೆದರಿದ ತಲೆಯ ತೇರಿನ
ಮೇಲೆ ತಂದಿಳುಹಿದನು ರಥವನು ತಿರುಹಿದನು ಪುರಕೆ ೧೦

ಇಳುಹಿದನು ದಶಕಂಠನೋಲಗ । ದೊಳಗೆ ಸಾರಥಿ ಶಕ್ರಜಿತುವಿನ
ತಲೆಯನೊಸಗೆಯ ಹರಿಯ ಹೊಯ್ಸೀಳಿಂದಿನಾಹವದ
ಗೆಲವಿದೆಂಬೀ ಕೂರಿತದ ನುಡಿ । ಯಲಗು ನಾಂಟಿತು ಬೆನ್ನಿನಲಿ ಕಳ
ವಳಿಸಿ ಹಾ ಯುವರಾಜ ಹಾಯೆನುತೊರಗಿದನು ನೆಲಕೆ ೧೧

ನುಡಿಯುತ್ತ ರಾಮನು ಕಣ್ಣುಗಳಲ್ಲಿ ನೀರು ತುಂಬಿಕೊಂಡನು. ೮. "ರಾಜಾರಾಮ, ಕೇಳು. ಉಪವಾಸ, ಜಾಗರಣೆಗಳು ಮತ್ತು ಬ್ರಹ್ಮಚರ್ಯದ ವ್ರತ–ಇವುಗಳು ಲಕ್ಷ್ಮಣನಿಗೆ ದೈವನಿಯಮದಿಂದ ದೊರಕಿದವು. ಯುದ್ಧದಲ್ಲಿ ಬ್ರಹ್ಮ, ಈಶ್ವರ ಮತ್ತು ದೇವೇಂದ್ರರಿಗೆ ಸೋಲದ ವೀರನು ಇನ್ನೊಬ್ಬರಿಗೆ ಬಾಗುವನೆ" ಎಂದು ಸುಗ್ರೀವನು ವಿನಂತಿ ಮಾಡಿಕೊಂಡನು. ೯. ಸುಗ್ರೀವನ ಮಾತನ್ನು ಹೌದು ಎಂದು ಹೊಗಳಿ ಜಾಂಬವಂತನು ರಾಮನನ್ನು ಉಪಚರಿಸಿ ಅವನ ಮನಸ್ಸಿನ ಸಂತಾಪವನ್ನು ಹೋಗಲಾಡಿಸಿದನು. ಅನಂತರ ರಾಮನು ಕಣ್ಣುಸಂಜ್ಞೆಯಿಂದ ವೀರರನ್ನು ಅವರವರ ಬೀಡಿಗೆ ಕಳುಹಿಸಿಕೊಟ್ಟನು. ೧೦. ರಾಜಕುಮಾರಶಾರ್ದೂಲರಾದ ಕುಶಲವರೇ, ಕೇಳಿ. ಇಂದ್ರಜಿತುವಿನ ಸಾರಥಿಯು ದುಃಖದಿಂದ ರಥವನ್ನು ನೆಲದಮೇಲಿಳಿಸಿದನು. ದೃಷ್ಟಿಯನ್ನು ತಿರುಗಿಸಿದ ಮುಖ ಮತ್ತು ಧೂಳು ಆವರಿಸಿ ಕೆದರಿದ ಕೂದಲಿನ ಇಂದ್ರಜಿತುವಿನ ತಲೆಗೆ ಮುಸುಕುಹಾಕಿ ತೇರಿನ ಮೇಲಕ್ಕೆ ತಂದಿಟ್ಟು ರಥವನ್ನು ಲಂಕಾ ನಗರದ ಕಡೆಗೆ ತಿರುಗಿಸಿದನು. ೧೧. ಸಾರಥಿಯು ರಾವಣನ ಸಭೆಯಲ್ಲಿ ಇಂದ್ರಜಿತುವಿನ ತಲೆಯನ್ನು ತಂದಿಟ್ಟನು. 'ಮಂಗಳವಾದ್ಯಗಳನ್ನು ಹೊಡೆಸು. ಇಂದಿನ ಯುದ್ಧದ ವಿಜಯವಿದು' ಎಂಬ ಹರಿತವಾದ ಮಾತಿನ ಖಡ್ಗದ ಮೊನೆಯು ರಾವಣನ ಬೆನ್ನಿನಲ್ಲಿ ನಾಟಿತು. 'ಹಾ ಯುವರಾಜ, ಹಾ'! ಎನ್ನುತ್ತ ರಾವಣನು ನೆಲಕ್ಕೆ ಬಿದ್ದನು,

ತನ್ನ ದೆಸೆಯಿಂದಾದ ಬಾಧಿತ । ಭಿನ್ನಹೃದಯನು ಕನಸು ಕಳವಳ
ಗನ್ನದಲಿ ತಲೆ ಸಿಕ್ಕಿ ಸಿಡಿಮಿಡಿಯೋದನಡಿಗಡಿಗೆ
ಚೆನ್ನ ಹಾ ಚತುರಾಸ್ಯ ವರ ಸಂ । ಪನ್ನ ಹಾ ವಿಬುಧೇಂದ್ರದರ್ಪವಿ
ಭಿನ್ನ ಹಾಹಾ ಕಂದ ಗತಿಯಿನ್ನೇನು ತನಗೆಂದ ೧೨

ಮಗನೆ ನಿನ್ನಿಂದಾ ತ್ರಿವಿಷ್ಟಪ । ನಗರಿ ಕೈವಶವಾಯ್ತು ಹೆಸರಾ
ಯ್ತುಘವಿರೋಧಿ ಪ್ರಮುಖ ದಿವಿಜರ ಗಂಡನೆಂದೆಂಬ
ಬಗೆಯ ಬಿರುದಿನ ಕೀರ್ತಿಲತೆ ಮೂ । ಜಗವ ಪರ್ಬಿತು ನಿನ್ನ ದೆಸೆಯಿಂ
ಮಗನೆ ಕೇಳ್ನೀನಗಲಲಗಲಿದವೆಲ್ಲ ತನಗೆಂದ ೧೩

ಸಿರಿಯಿದೇಕಿನ್ನೀ ಜಗತ್ರಯ । ದರಸುತನವಿನ್ನೇಕೆ ಕಾಮಿನಿ
ಯರ ಕಟಾಕ್ಷಕಲಾಪ ಕೇಳೀವ್ಯಸನವಿನ್ನೇಕೆ
ತರುಣ ಕೇಳ್ನೀನಿಲ್ಲದೇಕೀ । ಹರಣವೆಲೆ ಸುಕುಮಾರ ನುಡಿಯೈ
ಕಿರಣವಿಲ್ಲದ ಶಶಿಯವೊಲು ನಾನಾದೆನೇಯೆಂದ ೧೪

ಹೇಳು ಬುದ್ಧಿಯ ಮಗನೆ ಮುಂದಕೆ । ಬಾಳಲೋ ಬೀಳಲೊ ಮಹಾಲಯ
ಬಾಲಕಿಯ ಬಲು ಜವ್ವನದ ನೆಲೆವೊಲೆಯು ನೆಮ್ಮನಲಿ
ಕಾಳ ಕವಿದಿದೆ ಕಣ್ಣ ಬೆಳಕಿಗೆ । ಕೇಳಿದೈಯೆಲೆ ಕಂದ ತನ್ನಯ
ನಾಲಗೆಗೆ ಮುಳುಮುಱಿದುದುತ್ತರವಾವುದೆನಗೆಂದ ೧೫

೧೨. ತನ್ನಿಂದ ಮಗನ ಮರಣವಾಯಿತಲ್ಲ ಎಂಬ ಯಾತನೆಯಿಂದ ಭಗ್ನಹೃದಯನಾದ ರಾವಣನು ಕನಸು ಕಳವಳಗಳ ಸುಳಿಯಲ್ಲಿ ಸಿಕ್ಕಿಕೊಂಡು ಮೇಲಿಂದಮೇಲೆ ಸಿಡಿಮಿಡಿಗೊಂಡನು. "ಚೆನ್ನ, ಬ್ರಹ್ಮನಿಂದ ವರ ಪಡೆದ ಶ್ರೀಮಂತ, ದೇವೇಂದ್ರನ ದರ್ಪವನ್ನು ಪುಡಿಪುಡಿ ಮಾಡಿದ ಕಂದ, ಅಯ್ಯೋ ! ನನಗೆ ಇನ್ನೇನು ಗತಿ ?" ಎಂದು ರಾವಣ ಪ್ರಲಾಪಿಸಿದ. ೧೩. "ಮಗನೆ, ನಿನ್ನಿಂದ ಅಮರಾವತಿಯು ನಮ್ಮ ಕೈವಶವಾಯಿತು ; ಅದರಿಂದ ಕೀರ್ತಿಯೂ ಬಂದಿತು. ನಿನ್ನಿಂದಾಗಿ ವಿಷ್ಣುವೇ ಮೊದಲಾದ ಪ್ರಮುಖ ದೇವತೆಗಳ ವೀರ ಎಂಬ ಹಲವು ರೀತಿಯ ಬಿರುದಿನ ಕೀರ್ತಿಲತೆಯು ಮೂರು ಲೋಕಗಳಿಗೂ ಹಬ್ಬಿತು. ನೀನು ಹೋದ ಬಳಿಕ ಇವೆಲ್ಲ ನನ್ನನ್ನು ಅಗಲಿದವು" ಎಂದ ರಾವಣ. ೧೪. "ಈ ಸಂಪತ್ತು ಇನ್ನೇಕೆ? ಈ ಮೂರು ಲೋಕಗಳ ಒಡೆತನವಿನ್ನೇಕೆ ? ತರುಣಿಯರ ಕಡೆಗಣ್‌ನೋಟಗಳಿನ್ನೇಕೆ ? ಅವರ ಕೂಡಾಡುವ ಚಿಂತೆಯೇಕೆ ? ತರುಣ ಕೇಳ್, ನೀನಲ್ಲದೆ ಈ ಪ್ರಾಣವೇಕೆ ? ಮಾತಾಡಯ್ಯ ಸುಕುಮಾರ. ಕಿರಣವಿಲ್ಲದ ಚಂದ್ರನಂತಾದೆ ನಾನು" ಎಂದು ರಾವಣ ಹಲುಬಿದ. ೧೫, "ನನಗೆ ತಿಳುವಳಿಕೆಯನ್ನು ಕೊಡು, ಕುಮಾರ. ಮುಂದಕ್ಕೆ ನಾನು ಬಾಳಲೋ ಅಥವಾ ವಿನಾಶವೆಂಬ ಯೌವನವತಿಯ ಎದೆಯ ಮೇಲೊರಗಲೋ ? ನನ್ನ ಕಣ್ಣಿಗೆ ಕತ್ತಲೆ ಕವಿದಿದೆ. ಕೇಳಪ್ಪಾ ಮಗು, ನನ್ನ ನಾಲಗೆಗೆ ಮುಳ್ಳು ಚುಚ್ಚಿಕೊಂಡಿದೆ. ನನಗೆ ನಿನ್ನ ಉತ್ತರವೇನು ?

ರತಿಕಲಾಸುಪ್ರೌಢೆಯಲ್ಲದ । ಸತಿಗೆ ರೂಪಿದ್ದೇನು ಫಲ ಸ
ನ್ನುತ ಗುಣಾಧಿಕನಲ್ಲದವನಾಕಾರವೇನು ಫಲ
ನುತ ರಸಾಲಂಕಾರವಿಲ್ಲದ । ಕೃತಿಯದೇನಿದ್ದೇನು ಫಲ ನಿಜ
ಸುತವಿಹೀನನ ಬದುಕು ಲೋಕದೊಳೇನು ಫಲವೆಂದ ೧೬

ತಾನಭಾಗ್ಯನು ಕಂದ ನಿನ್ನಿಂ । ದೇನು ಕೊಱತೆ ಮಹಾಹವದೊಳುಱೆ
ಹಾನಿ ಹೊದ್ದದೆ ಹಗೆಯ ಜಯಿಸಿದೆ ಜಿಹ್ಮಗಾಸ್ತ್ರದಲಿ
ಆನಿಸಿದೆ ಸಂವರ್ತ ಮೃತ್ಯುವಿ । ನಾನನಕೆ ಬಳಿಕಿವ್ವಿನಲಿ ಚತು
ರಾನನಾಸ್ತ್ರದಲಲ್ಪಪುಣ್ಯರು ನಾವಲೇಯೆಂದ ೧೭

ಪೀಡನಾಗದೆ ರೋಮದಲಿ ಭಯ । ಬೋಡಿಯಿಲ್ಲದೆ ಮಗನೆ ಖಾಡಾ
ಖಾಡಿಯಲಿ ನೆಱೆ ಕಾದಿಕೊಂಡೆ ಯಶೋವಿಲಾಸಕವ
ಆಡ ನಾಲಿಗೆಯಿಲ್ಲ ವಿಷಯದ । ಲಾಡಿ ಮಕ್ಕಳುಮಱಿಗಳನು ಹೋ
ಗಾಡಿದನು ಖಳನೆನ್ನದಿರದಿನ್ನೇನು ಗತಿಯೆಂದ ೧೮

ಕೇಳಿ ಬಂದಳು ಬಳಿಕ ಸೊಸೆಯರ । ಮೇಳದಲಿ ಮೊಱೆಯಿಡುತ ವದನವ
ಸೂಳವಿಸಿಕೊಳುತಸುರರಾಯನ ರಾಣಿ ಮಗನೆಡೆಗೆ
ಬಾಲ ಹಾ ಬರ್ಹಿರ್ಮುಖರ ಹೃ । ಚ್ಛೂಲ ಹಾ ರಣಭಾಮಿನೀರತಿ
ಲೋಲ ಹಾಯೆಲೆ ಕಂದ ಹಾಯೆಂದೊಱಗಿದಳು ಧರೆಗೆ ೧೯

೧೬. ರತಿಕಲೆಯಲ್ಲಿ ನಿಪುಣಳಲ್ಲದ ಸ್ತ್ರೀಗೆ ರೂಪವಿದ್ದೇನು ಫಲ ? ಉತ್ತಮ ಸದ್ಗುಣಗಳಿಲ್ಲದವನಿಗೆ ಸುಂದರವಾದ ಆಕಾರವಿದ್ದೇನು ಫಲ ? ರಸಾಲಂಕಾರಗಳಿಲ್ಲದ ಕಾವ್ಯವಿದ್ದೇನು ಫಲ ? ಜಗತ್ತಿನಲ್ಲಿ ಸ್ವಂತ ಮಗನಿಲ್ಲದವನ ಬದುಕಿನಿಂದೇನು ಫಲ ? " ಎಂದ ರಾವಣ. ೧೭. "ನಾನು ದುರದೃಷ್ಟಶಾಲಿ, ಕಂದ. ನಿನ್ನಲ್ಲಿ ದೋಷವೇನೂ ಇಲ್ಲ. ಭಾರಿಯುದ್ಧದಲ್ಲಿ ಹಾನಿಹೊಂದದೆ ಸರ್ಪಾಸ್ತ್ರದಿಂದ ಶತ್ರುಗಳನ್ನು ಗೆದ್ದೆ. ಬ್ರಹ್ಮಾಸ್ತ್ರದಿಂದ ಪ್ರಳಯ ಮೃತ್ಯುವಿನ ಬಾಯಿಗೆ ಶತ್ರುಗಳನ್ನೊಡ್ಡಿದೆ. ನಾವು ಅಲ್ಪಪುಣ್ಯಶಾಲಿಗಳು. ೧೮. ಕೂದಲಿನಷ್ಟೂ ಹೆದರದೆ ಒಂದಿಷ್ಟೂ ಕೊರತೆಯಿಲ್ಲದಂತೆ ನೀನು ಖಡಾಖಡಿ ಯುದ್ಧಮಾಡಿ ಕೀರ್ತಿಯನ್ನು ಪಡೆದುಕೊಂಡೆ. ನನಗೆ ಮಾತನಾಡಲು ನಾಲಿಗೆಯಿಲ್ಲ. ವಿಷಯಸುಖಕ್ಕಾಸೆಪಟ್ಟು ರಾವಣಾಸುರನು ಮಕ್ಕಳುಮರಿಗಳನ್ನು ನಾಶಮಾಡಿದನು ಎಂದು ಜನ ಹೇಳದೆ ಇರುವುದಿಲ್ಲ. ನನಗಿನ್ನೇನು ಗತಿ" ಎಂದು ದುಃಖಿಸಿದ ರಾವಣ. ೧೯, ಮಗನ ಮರಣವನ್ನು ಕೇಳಿ ರಾವಣನ ರಾಣಿಯು ಸೊಸೆಯರ ಜೊತೆಯಲ್ಲಿ ಬಾಯಿಬಡಿದುಕೊಳ್ಳುತ್ತ ಮಗನ ಬಳಿಗೆ ಬಂದಳು. "ಅಯ್ಯೋ ಕಂದ, ದೇವತೆಗಳ ಎದೆಯಶೂಲವೇ, ಯುದ್ಧಲಕ್ಷ್ಮಿಯೊಡನೆ ರತಿಕ್ರೀಡಾಸಕ್ತನೇ, ಅಯ್ಯೋ ಕಂದ"

ಅಸವಳಿದು ಬಸವಳಿದು ಸಡಿಲಿದ । ವಸನದುದರ ಲತಾಂತಲಂಬಿತ
ಲಸಿತ ಕೇಶದ ಕೆದರಿಕೆಯು ಕಂಕಣ ಝಣತ್ಕೃತಿಯ
ಬಸುರಬಿಹೊಯ್ಲಿನ ಕಾಂತೆ ಕಾಂತಾ । ವಿಸರದಕ್ಕೆಯಲುಕ್ಕಿರುವ ಕಡು
ರಸದ ಶೋಕೋದ್ರೇಕದಲಿ ಹೊರಳಿದಳು ಹುಡಿಯೊಳಗೆ ೨೦

ಬಳಲಿ ಬಳಿಕೆದ್ದಬಲೆ ಗಂಡನ । ಬಳಿಯ ರಾಕ್ಷಸರಾಜಮಂಡಳಿ
ಯೊಳಗೆ ಮೊರೆಯಿಟ್ಟಳಲಿದಳು ಬಹುವಿಧ ವಿಲಾಪದಲಿ
ಸೆಳೆದುಕೊಂಡರೊ ತನ್ನ ರನ್ನದ । ಕಲಶವನು ತನ್ನಯ ಮನೋರಥ
ವಿಲಸವನು ಮಾಂಗಲ್ಯದಾಳದ ಮೌಕ್ತಿಕದ ಮಣಿಯ ೨೧

ಎನ್ನ ಸೊಬಗಿನ ನೋಟದುತ್ತಮ । ಕನ್ನಡಿಯನೊಡೆಬಡಿದರೋ ಹಾ
ಯೆನ್ನ ಚಿಂತಾಮಣಿಯ ಕದ್ದರೊ ಕಾಣುತಕಟಕಟ
ಎನ್ನ ಭಾಗ್ಯದ ನಿಧಿಗೆ ಸವೆದರೊ । ಕಣ್ಣವನು ಮೊರೆಯಿಡುವ ಮಾತನು
ಮನ್ನಿಸುವರಿಲ್ಲಾ ವಿಚಾರಿಸಲೆಂದಳಾ ಕಾಂತೆ ೨೨

ಕಳುಹಿ ಬಂದಿರೆ ಮಗನ ಹಗೆಗಳ । ಕೊಲೆಗೆ ಗುರಿಮಾಡಿದಿರೆ ಬವರಕೆ
ಬಲಿಯ ಕೊಟ್ಟಿರೆ ಬಾಯಿಗಡಸಿದಿರೇ ಲಯಾಂಗನೆಯ
ಚಲುವನನು ಚನ್ನಿಗನ ಚದುರನ । ಛಲವ ಮೆರೆದಿರೆ ಕೇಡು ತನಗೊ
ಬ್ಬಳಿಗೆ ಬಂದುದಲಾಯೆನುತ ಬಾಯ್ಬಿಟ್ಟಳಾ ಕಾಂತೆ ೨೩

ಎಂದು ಮಂಡೋದರಿ ಬಿದ್ದುಬಿಟ್ಟಳು. ೨೦. ಆಯಾಸಗೊಂಡು ಬಳಲಿದ, ಮೈಮೇಲಿನ ವಸ್ತ್ರ ಸಡಿಲಿದ, ಹೂವು ನೇತುಬಿದ್ದು ಹೊಳೆಯುವ ಕೆದರಿದ ಕೂದಲಿನ, ಬಳೆಗಳ ಝಣ ಝಣ ಶಬ್ದದೊಡನೆ ಹೊಟ್ಟೆಹೊಡೆದು ಕೊಳ್ಳುವ ಮಂಡೋದರಿಯು ಹೆಂಗಸರ ಅಳುವಿನೊಡನೆ ಉಕ್ಕಿಹರಿಯುವ ಉತ್ಕಟವಾದ ಶೋಕರಸದಿಂದ ಧೂಳಿನಲ್ಲಿ ಹೊರಳಾಡಿದಳು. ೨೧. ರಾಕ್ಷಸರಾಜಗೋಷ್ಠಿಯಲ್ಲಿ ಬಹುವಿಧವಾಗಿ ಪ್ರಲಾಪಿಸುತ್ತ, "ನನ್ನ ರತ್ನಕಲಶವನ್ನು ಸೆಳೆದುಕೊಂಡರೋ ? ನನ್ನ ಬಯಕೆಯ ಸೊಬಗನ್ನು ಕಿತ್ತುಕೊಂಡರೋ ? ನನ್ನ ಮಾಗಲ್ಯದ ಹಣೆಯ ಮುತ್ತಿನ ಮಣಿಯನ್ನು ಎಳೆದುಕೊಂಡರೋ ?" ಎಂದು ಮೊರೆಯಿಟ್ಟಳು. ೨೨. "ನನ್ನ ಸೊಬಗಿನ ನೋಟದ ಶ್ರೇಷ್ಠ ಕನ್ನಡಿಯನ್ನು ಒಡೆದುಹಾಕಿದರೋ ! ಅಯ್ಯೋ. ನನ್ನ ಚಿಂತಾಮಣಿಯನ್ನು ಕದ್ದರೋ! ನನ್ನ ಭಾಗ್ಯದನಿಧಿಗೆ ಕನ್ನವನ್ನು ಕೊರೆದರೋ ! ನಾನು ಎಷ್ಟು ಗೋಳಾಡಿದರೂ ನನ್ನ ಮಾತಿಗೆ ಬೆಲೆ ಕೊಡುವವರಿಲ್ಲವಲ್ಲ !" ಎಂದಳು ಮಂಡೋದರಿ. ೨೩. "ಮಗನನ್ನು ಕಳುಹಿಸಿಬಂದಿರಾ ? ಶತ್ರುಗಳ ಕೈಯಲ್ಲಿ ಕೊಲೆಗೆ ಗುರಿಮಾಡಿದಿರಾ ? ಯುದ್ಧಕ್ಕೆ ಬಲಿ ಕೊಟ್ಟಿರಾ ? ಚಲುವ ಚನ್ನಿಗನನ್ನು ಜಾಣನನ್ನು ಪ್ರಳಯಾಂಗನೆಯ ಬಾಯಿಗೆ ತುರುಕಿದಿರಾ ? ನಿಮ್ಮ ಹಟವನ್ನು ಪೂರೈಸಿಕೊಂಡಿರಾ ? ನನಗೊಬ್ಬಳಿಗೆ ಕೇಡು ಬಂದಿತಲ್ಲ !"

ಆಸೆಗೊಡುವವರಿಲ್ಲವಕಟಾ । ದೇಸಿಗಿತಿ ತಾನಾದೆನೇ ನೆಱೆ
ದೋಷವಿಲ್ಲವೆ ನಿಮಗೆ ಕಂದನ ಕೊಂದವರು ನೀವೆ
ಲೇಸುಮಾಡಿದಿರಾಳ್ದನಿತ್ತಾ । ದೇಶವನು ನೀವ್ ಪಾಲಿಸಲುಬೇ
ಕೈಸಲೇಯೆಂದಬಲೆ ಮೊಱೆಯಿಟ್ಟಳು ಭಟಾವಳಿಗೆ ೨೪

ಬೆಳೆದ ಬೇಟಕೆ ಮಗನ ತೊತ್ತಳ । ದುಳಿಸಿ ತಾವನುಭವಿಸಲೇಸಾ
ಫಲವು ದೂರವೆ ದಿನಗಳಕಟಾ ತನ್ನ ಕಂಗಳಿಗೆ
ತೊಳಲುತಿರ್ದವ ಹೋದನುಱೆ ನಿ । ರ್ಮಳವು ನಿಮಗಿನ್ನಾಗಲೆಂದಾ
ಲಲನೆ ಕಾಂತನ ಕಟಕಿಯಲಿ ನುಡಿದಳು ಸರೋಷದಲಿ ೨೫

ಮೃತ್ಯುವಾದಳೆ ಮಗನೆ ಸೋದರ । ದತ್ತೆ ತಮ್ಮಣ್ಣನನು ಬೋಧಿಸಿ
ಕಿತ್ತು ಬಿಸುಟಳೆ ಬೇರನೆನ್ನಯ ಪುತ್ರಸಂತತಿಯ
ಹೆತ್ತೊಡಲು ಹಾಳಾಯ್ತು ಕಂಡಿರೆ । ಯೆತ್ತಿ ಸಲಹಿದ ತೋಳು ನೆಱೆಮುಱಿ
ಯಿತ್ತಲಾ ಹಾಯೆನುತ ಕೊರಳಿಗೆ ಹಾಯ್ದಳಬಲೆಯರ ೨೬

ಅರಿದ ಶಿರವನು ತೆಗೆದು ಮುಂಡದ । ಕೊರಳಿನಲಿ ಸೈತಿರಿಸಿ ಮುದ್ದಿಸಿ
ಮರಳಿ ಚೈಮುಂಡಾಡಿ ದಿಟ್ಟಿಸಿ ಲಲ್ಲೆವಾತಿನಲಿ
ಕರೆಕರೆದರೋಯೆನ್ನೆಯೇಕೈ । ತರುಣ ತಾಯ್ ನಿನಗಲ್ಲವೇ ತಾ
ಕರಗವೇ ಕರಣಗಳು ತನ್ನಲಿಯೆಂದಳಾ ಕಾಂತೆ ೨೭

ಎನ್ನುತ್ತ ಮಂಡೋದರಿ ಅತ್ತಳು. ೨೪. "ನನಗೆ ಯಾರೂ ಭರವಸೆಯನ್ನು ಕೊಡು ವವರಿಲ್ಲವಲ್ಲ ? ಅಯ್ಯೋ, ನಾನು ಪರದೇಸಿಯಾದೆನೇ ? ನಿಮ್ಮದು ತಪ್ಪಿಲ್ಲವೇ ? ನನ್ನ ಕಂದನನ್ನು ಕೊಂದವರು ನೀವೇ. ಬಹಳ ಒಳ್ಳೆಯ ಕೆಲಸ ಮಾಡಿದಿರಿ. ಒಡೆಯನ ಅಪ್ಪಣೆಯನ್ನು ನೀವು ಪಾಲಿಸಬೇಕಲ್ಲವೇ !" ಎಂದು ಮಂಡೋದರಿ ವೀರರನ್ನು ಆರ್ತತೆ ಯಿಂದ ಕೇಳಿಕೊಂಡಳು. ೨೫. "ಬೆಳೆದುನಿಂತ ಪರಸ್ತ್ರೀಮೋಹಕ್ಕೆ ಸಿಕ್ಕಿ ಮಗನನ್ನು ನುಗ್ಗುನುರಿಯಾಗುವಂತೆ ತುಳಿಸಿ ತಾವು ಸುಖವನ್ನು ಅನುಭವಿಸಲು ಬಯಸಿದರೆ ಆ ಫಲವು ಎಷ್ಟು ಕಾಲವಿರುತ್ತದೆ, ಆ ದಿನಗಳು ದೂರವೇನಲ್ಲ. ನನ್ನ ಕಣ್ಣುಗಳನ್ನು ತುಂಬಿ ಕೊಂಡಿದ್ದ ಮಗನು ಹೋದನು. ನಿಮಗೆ ನಿರಾಳವಾಗಲಿ" ಎಂದು ಕೋಪದಿಂದ ಮಂಡೋದರಿ ಪತಿಯ ಮನಸ್ಸಿಗೆ ಚುಚ್ಚುವಂತೆ ಮಾತಾಡಿದಳು. ೨೬. "ಮಗನೆ. ನಿನ್ನ ಸೋದರತ್ತೆಯು ನಿನಗೆ ಮೃತ್ಯುವಾಗಿ ಪರಿಣಮಿಸಿದಳೇ ! ತನ್ನ ಅಣ್ಣನಿಗೆ ಹೇಳಿ ಕೊಟ್ಟು ನನ್ನ ಪುತ್ರಸಂತತಿಯ ಬೇರನ್ನು ಕಿತ್ತೆಸೆದಳೆ ! ಹೆತ್ತ ಹೊಟ್ಟೆ ಹಾಳಾಯಿತು. ಕಂದನನ್ನು ಎತ್ತಿ ಆಡಿಸಿದ ತೋಳು ಮುರಿಯಿತೇ!" ಎಂದು ಹಲುಬುತ್ತ ತನ್ನ ಬಳಿಯಿದ್ದ ಸ್ತ್ರೀಯರ ಕತ್ತಿನ ಮೇಲೊರಗಿದಳು. ೨೭. ಮಂಡೋದರಿ ಕತ್ತರಿಸಿದ ಮಗನ ತಲೆ ಯನ್ನು ಮುಂಡಕ್ಕೆ ಸರಿಯಾಗಿ ಜೋಡಿಸಿ ಮುದ್ದಿಸಿದಳು. ಪುನಃ ತಲೆಸವರಿ, ಮುದ್ದಾಡಿ ದೃಷ್ಟಿಸಿ ನೋಡಿ ಮುದ್ದುಮಾತುಗಳಿಂದ ಮಾತನಾಡಿಸಿ, "ಕುಮಾರ, ಎಷ್ಟು ಕರೆದರೂ ಏತಕ್ಕೆ ಓ ಎನ್ನುವುದಿಲ್ಲ. ನಾನು ನಿನ್ನ ತಾಯಿಯಲ್ಲವೇ, ನನ್ನನ್ನು ಕಂಡು ನಿನ್ನ ಮನಸ್ಸು

ತಲೆಯ ತಕ್ಕಿಸಿಕೊಂಡು ಮೇಲುದ । ಕೆಲಕಡೆಗೆ ಮಱೆಮಾಡಿ ಮುದ್ದಿಸಿ
ಮೊಲೆಗೊಳಿಸಿ ತೂಪಿಱಿದು ಮಲಗೆಲೆ ಕಂದ ಮಲಗೆನುತ
ನೆಲನಮೇಲಿಳುಹಿದಳು ಕರೆದಳು । ಕೆಳದಿಯರ ಜೋಗುಳಕೆ ದಶಮುಖ
ನೊಳಗು ತಾಪಿಸೆ ಕೊಸರಿದಳು ನಂದನನ ನಿಜಗುಣವ ೨೮

ಸತಿಯ ಪುತ್ರ ವಿಲಾಪದಭ್ರ । ಪ್ರತತಿಯಬ್ಬರಕುಬ್ಬಿದುದು ಖಳ
ಪತಿಯ ಕರಣಾವಳಿಯನೊಡೆದುಱೆ ಶೋಕರಸಜಲಧಿ
ಖತಿಯ ಹಿಡಿದವ ಬಳಿಕಲಾ ರಘು । ಪತಿಯ ಪುಣ್ಯಸ್ತ್ರೀಯ ಕೊಲುವಾ
ಯತದಲೈದಿದನವನು ಬನವನು ಜನಕನಂದನೆಯ ೨೯

ಅಸುರನಧಿಕಕ್ರೋಧವಹ್ನಿಯ । ರಸುಮೆಯಲಿ ನನೆ ಮುರುಟಿದವು ಸಾ
ರಸದ ಸರಸಿಯ ಸಲಿಲ ಕುದಿದುಕ್ಕಿದುದು ಬನದೊಳಗೆ
ದೆಸೆದೆಸೆಗೆ ಹಾರಿದವು ನೃಪಖಗ । ರಸ ಮದಾಳಿ ಶುಕಾಳಿ ಸೀದವು
ಕಿಸಲಯಂಗಳಾಮ್ರಗಳಶೋಕೆಗಳಣುಗ ಕೇಳೆಂದ ೩೦

ಕೆಲಕೆ ಸಾರ್ದರು ಕಾಮಿನಿಯರು ಕಾ । ವಲಿನ ಕಾಂತೆಯರಂಜಿಕೆಯಲಾ
ಗಳು ನಿರೀಕ್ಷಿಸಿದಳು ಲತಾಂಗಿ ಕಟಾಕ್ಷದಲಿ ಖಳನ
ಕೊಲಲು ಬಂದನಲಾಯೆನುತ ತಳ । ವೆಳಗಿನಲಿ ತಲೆಮುಸುಕಿನಲಿ ರಘು
ಕುಲಶಿರೋಮಣಿ ರಾಮ ರಾಮೆನುತಿರ್ದಳಬುಜಾಕ್ಷಿ ೩೧

ಕರಗುವುದಿಲ್ಲವೇ ?" ಎಂದು ಪ್ರಶ್ನೆಮಾಡಿದಳು. ೨೮. ಮಂಡೋದರಿ ಮಗನ ತಲೆಯನ್ನು ತಬ್ಬಿಕೊಂಡು ಸೆರಗನ್ನು ಪಕ್ಕಕ್ಕೆಳೆದು ಮರೆಮಾಡಿಕೊಂಡು ಮುದ್ದಿಸಿ ಮೊಲೆಯೂಡಿಸಿ ಉಫ್ ಎಂದು ಊದಿ ದೃಷ್ಟಿತೆಗೆದು 'ಮಲಗು ಮಲಗೆಲೆ ಕಂದ !' ಎನ್ನುತ್ತ ನೆಲದಮೇಲಿಟ್ಟಳು. ಗೆಳತಿಯರನ್ನು ಕರೆದು ಜೋಗುಳ ಹಾಡಿಸುತ್ತ ಮಗನ ಗುಣಗಳನ್ನು ಅತಿಶಯವಾಗಿ ಹೊಗಳಿದಳು. ಇದನ್ನೆಲ್ಲ ನೋಡಿದ ರಾವಣನು ಮನಸ್ಸಿನಲ್ಲಿ ಸಂಕಟಪಟ್ಟನು. ೨೯. ಮಗನ ಮರಣಕ್ಕಾಗಿ ಶೋಕಿಸುವ ಹೆಂಡತಿಯ ಅಳುವೆಂಬ ಮೋಡಗಳ ಅಬ್ಬರಕ್ಕೆ ರಾಕ್ಷಸೇಶ್ವರನ ಮನಸ್ಸನ್ನು ಒಡೆದುಕೊಂಡು ಹೊರಬಂದ ಶೋಕರಸಸಾಗರವು ಉಕ್ಕಿತು. ಕ್ರೋಧವುಕ್ಕಿಬಂದ ರಾವಣನು ರಘುಪತಿಯ ಹೆಂಡತಿಯನ್ನು ಕೊಲ್ಲುವ ಭರದಿಂದ ಸೀತೆಯಿದ್ದ ಅಶೋಕವನಕ್ಕೆ ಬಂದನು. ೩೦. ರಾವಣನ ತೀವ್ರ ಕ್ರೋಧಾಗ್ನಿಯ ಶಾಖಕ್ಕೆ ಅಶೋಕ ವನದ ಮೊಗ್ಗುಗಳು ಸುರುಟಿಹೋದವು ; ಕಮಲಸರೋವರದ ನೀರು ಕುದಿದು ವನದೊಳಗೆ ಉಕ್ಕಿ ಹರಿಯಿತು, ರಾಜಹಂಸ, ತುಂಬಿ, ಗಿಳಿ ಮೊದಲಾದುವು ದಿಕ್ಕುದಿಕ್ಕಿಗೆ ಹಾರಿಹೋದವು ; ಮಾವು ಮತ್ತು ಅಶೋಕವೃಕ್ಷಗಳ ಚಿಗುರುಗಳು ಸೀದುಹೋದವು, ಕೇಳು ಕುಮಾರ" ಎಂದು ವಾಲ್ಮೀಕಿಮಹರ್ಷಿಗಳು ವರ್ಣಿಸಿದರು. ೩೧. ಸೀತೆಯ ಕಾವಲಿನ ರಾಕ್ಷಸಿಯರು ಹೆದರಿಕೆಯಿಂದ ಪಕ್ಕಕ್ಕೆ ಸರಿದರು. ಕಡೆಗಣ್ಣಿನಿಂದ ಸೀತೆ ರಾವಣನನ್ನು ನೋಡಿದಳು. "ನನ್ನನ್ನು ಕೊಲ್ಲಲು ಬಂದಿದ್ದಾನೆಯಲ್ಲವೇ" ಎನ್ನುತ್ತ ಕಳವಳಗೊಂಡು ತಲೆಗೆ ಮುಸುಕುಹಾಕಿಕೊಂಡು, 'ರಘುಕುಲಶಿರೋಮಣಿ ! ರಾಮ ರಾಮ !'

ಸತಿಯ ಕಾಣುತ ಖಂಡೆಯವನುಗಿ । ದತಿಮದದ ರಕ್ಕಸನು ಲಲನಾ
ಹತಿಗೊಡಂಬಟ್ಟೈದಿಗುವನಿತಜಿೀೞಳವನ ಮಂತ್ರಿಗಳು
ಮತವಿದಲ್ಲೆಂದಡ್ಡವಿಸಿ ದೂ । ಹತಿಯ ಹಸ್ತವ ಹಿಡಿದು ರಣನಿ
ಷ್ಕೃತಿಗೆ ರಂಜಕವಾವುದಿನಿತಜಿೀೞಳೆಂದರವರಂದು ೩೨

ಇವಳ ದೆಸೆಯಿಂದೈಸಲೇ ನ । ಮ್ಮವರು ನೆವ್ಮೃದರಂತಕನ ನಿಜ
ಭವನ ಭಿತ್ತಿಯನಿವಳ ತಲೆಯನು ಹೊಡೆದು ಬಳಿಕಿನಲಿ
ಇವಳ ಬಿಡಿಸಲು ಬಂದ ಮೃಗ ಮಾ । ನವ ಭಟಾಳಿಯ ಕೊಂದನೆಂದವ
ತವಕಿಸಲು ತಗ್ಗೊತ್ತಿ ಬಳಿಕ ಸುಪಾರ್ಶ್ವನಿಂತೆಂದ ೩೩

ಕೊಳುಗುಳದೊಳರಿಭಟನ ಬವರದೊ । ಳಳಿದರಧಿಕಸ್ವರ್ಗವಲ್ಲಿಯ
ಲಲನೆಯರು ನಿನ್ನವರಲಾ ನೀನಿಂದ್ರಚಂದ್ರರಿಗೆ
ಸಲೆ ಮಿಗಿಲು ಕೇಳರಿಯ ಗೆಲಿದರೆ । ಬಳಿಕ ತೋಱು ಸೀತೆಯನು ನಗೆ
ಗೊಳಗಹರೆ ನಡೆ ಕಷ್ಟವೃತ್ತಿಯನೆಣಿಸಬೇಡೆಂದ ೩೪

ಕೀರ್ತಿಯಹುದರಿಭಟನ ಸಮರದೊ । ಳಾರ್ತರಲಿ ಕಾದಿದರೆ ಸೇರದು
ಧೂರ್ತಜನ ನಗದಿಹುದೆ ರಾವಣನಧಿಕಬಲನೆಂದು
ವಾರ್ತೆ ಮುಂದಣ ಯುಗಗಳಲಿ ಸಂ । ಪೂರ್ತಿಯಹುದದಱಿಂದ ನೀನಪ
ಕೀರ್ತಿಯನು ಕೈವಿಡಿಯದಾಜಿಗೆ ಮನವ ಮಾಡೆಂದ ೩೫

ಎಂದು ರಾಮನಾಮಸ್ಮರಣೆ ಮಾಡಿದಳು. ೩೨. ಸೀತೆಯನ್ನು ಕಂಡು ಮದಿಸಿದ ರಾವಣನು ಕತ್ತಿಯನ್ನು ಹಿರಿದು ಸೀತೆಯನ್ನು ಕೊಲ್ಲಲು ಅವಳ ಮೇಲೆರಗುವಷ್ಟರಲ್ಲಿ ಅವನ ಮಂತ್ರಿಗಳು 'ಇದು ನೀತಿಯಲ್ಲ' ಎಂದು ಅಡ್ಡಬಂದರು. ಕತ್ತಿಯನ್ನು ಹಿಡಿದ ರಾವಣನ ಎರಡೂ ಕೈಗಳನ್ನು ಹಿಡಿದು, "ಇಷ್ಟರೊಳಗೆ ಯುದ್ಧವನ್ನು ದೂರಮಾಡಿ ಬಂದುದರಲ್ಲಿ ಏನು ಸೊಗಸು ?" ಎಂದು ಕೇಳಿದರು. ೩೩. "ಇವಳ ಕಾರಣದಿಂದಲ್ಲವೇ ನಮ್ಮವರು ಯಮಾಲಯದ ಗೋಡೆಯನ್ನು ಒರಗಿದರು ! ಇವಳ ತಲೆಯನ್ನು ಕತ್ತರಿಸಿ ಅನಂತರ ಇವಳನ್ನು ಬಿಡಿಸಿಕೊಂಡುಹೋಗಲು ಬಂದಿರುವ ಮೃಗಗಳನ್ನೂ ಮತ್ತು ಮಾನವವೀರರನ್ನೂ ಕೊಲ್ಲುವೆ" ಎಂದು ಸೀತೆಯನ್ನು ಕೊಲ್ಲಲು ಆತುರಪಡಲು ಅವನನ್ನು ಮಂತ್ರಿಗಳು ತಡೆಹಿಡಿದರು. ಬಳಿಕ ಸುಪಾರ್ಶ್ವನು ರಾವಣನನ್ನು ಕುರಿತು ಮುಂದಿನಂತೆ ನುಡಿದನು. ೩೪. "ಯುದ್ಧರಂಗದಲ್ಲಿ ಶತ್ರುವೀರನೊಡನೆ ಹೋರಾಡಿ ಸತ್ತರೆ ಉತ್ತಮ ಸ್ವರ್ಗ ದೊರಕುವುದು ; ಸ್ವರ್ಗದ ಸ್ತ್ರೀಯರು ನಿನ್ನವರಾಗುವರು. ನೀನು ಇಂದ್ರಚಂದ್ರರನ್ನು ಮೀರಿಸುವೆ. ಶತ್ರುವನ್ನು ಗೆದ್ದ ಬಳಿಕ ಸೀತೆಯನ್ನು ತೋರಿಸು. ಸುಮ್ಮನೆ ನಗೆಗೀಡಾಗುವರೆ ? ಈ ಕ್ರೂರಕಾರ್ಯವನ್ನು ಯೋಚಿಸಬೇಡ, ನಡೆ" ಎಂದ ಸುಪಾರ್ಶ್ವ. ೩೫. "ಶತ್ರುವೀರನೊಡನೆ ಯುದ್ಧಮಾಡಿದರೆ ಯಶಸ್ಸು ಲಭಿಸುವುದು, ಕಷ್ಟದಲ್ಲಿ ಸಿಕ್ಕಿದವರೊಡನೆ ಕಾದಿದರೆ ಕೀರ್ತಿ ಬರುವುದಿಲ್ಲ ; ಅದನ್ನು ಕಂಡು ದುಷ್ಟರು ನಗುವುದಿಲ್ಲವೇ ? ಶೌರ್ಯದಿಂದ ಹೋರಾಡಿದರೆ ರಾವಣನು ಅಧಿಕ ಬಲಶಾಲಿಯೆಂಬ ಸಮಾಚಾರವು ಮುಂದಿನ ಯುಗಗಳಲ್ಲಿ ಉಳಿಯುವುದು. ಆದುದರಿಂದ ನೀನು ಅಪಕೀರ್ತಿ

ಲೋಕದೂಷಣವನ್ಯನಾರಿಯು । ಸೋಕು ತಾಗಿದು ಹಗೆಯ ಜಯಿಸಿದು
ಸೋಕಿದಬಲೆಗೆ ಮನವ ಮಾಡುವುದೋಜೆ ರಾಯರಿಗೆ
ಸಾಕು ತಿರುಗೀ ಧೈರ್ಯ ಧರ್ಮವ । ಸಾಕಿಕೋ ಕಡುಖಳರಿರವಿಗ
ನೋಕಹದ ನೆಳಲಾಗದಿರು ನಡೆ ರಣಕೆ ನೀನೆಂದ ೩೬

ಚಾಚು ನಮ್ಮನು ನಮ್ಮ ಜೀವವಿ । ಮೋಚನದ ಮೇಲರಿಯ ಕೊರಳಿಗೆ
ಚಾಚು ಚಪಲ ಚಪೇಟಕವ ಚೂರಿಸುವ ಖಂಡೆಯವ
ಆ ಚಟುಳಬಲ ನಿನ್ನ ಬಲುಹನು । ಚಾಚಿದರೆ ಬಳಿಕಜಿದುಕೋ ಸಚ
ರಾಚರಾತ್ಮಕನೆಂದು ಸತ್ಯವಿದೆಮ್ಮ ನುಡಿಯೆಂದ ೩೭

ತಿರುಹಿದನು ಬಳಿಕಸುರರಾಯನ । ಹೊರದ ಕೋಪದ ತಾಪಶಿಖಿಯನು
ವರವಚೋವಿನ್ಯಾಸ ನಯವಿಸ್ತರದ ನೀತಿಯಲಿ
ಪರಿಹರಿಸಿ ಕೈವಿಡಿದುತಂದಾ । ಭರಿತ ಸುತಶೋಕಾಗ್ನಿದಾಹದ
ತರುಣಿ ಮಂಡೋದರಿಯನುಪಚರಿಸಿದನು ವಿನಯದಲಿ ೩೮

ಅಳಲದಿರು ಕೇಳಬಲೆ ರಣದೊಳ । ಗಳಿದ ನಿನ್ನ ಕುಮಾರವುಖ್ಯರ
ನಿಲಿಸುವೆನು ನಿನ್ನಿದಿರಿನಲಿ ನಿರೇಜಭವಹರರ
ಗಳಕೆ ಖಡುಗವನಿಕ್ಕಿ ಮುನ್ನಿನ । ಹಳವಿಗಿಮ್ಮಗಿಲಾಗಿ ಸುಖವುಯ
ದೊಳುಹ ನಿನ್ನ ಮನೋರಥಕೆ ಮಾಡುವೆನು ತಾನೆಂದ ೩೯

ಯನ್ನು ಕೈಹಿಡಿಯದೆ ಯುದ್ಧಕ್ಕೆ ಮನಸ್ಸು ಮಾಡು" ಎಂದ. ೩೬. "ಪರಸ್ತ್ರೀಸ್ಪರ್ಶ ದಿಂದ ಲೋಕನಿಂದೆ. ಯುದ್ಧಮಾಡಿ ಶತ್ರುವನ್ನು ಜಯಿಸಿ ತನ್ನನ್ನು ಬಯಸುವ ಸ್ತ್ರೀಯ ನ್ನಾಳಿಸುವುದು ರಾಜರಿಗೆ ಯುಕ್ತಕ್ರಮ. ಈ ಧೈರ್ಯ ಸಾಕು, ಹಿಂದಿರುಗು. ಧರ್ಮವನ್ನು ರಕ್ಷಿಸು. ದುಷ್ಟರಿಗೆ ಆಶ್ರಯ ನೀಡುವ ಮರದ ನೆಳಲಾಗಬೇಡ. ಯುದ್ಧಕ್ಕೆ ನಡೆ" ಎಂದ. ೩೭. "ನಮ್ಮನ್ನು ಯುದ್ಧಕ್ಕೆ ಕಳುಹಿಸು. ನಮ್ಮ ಪ್ರಾಣ ಹೋದ ಮೇಲೆ ಚಲಿಸುವ ಅಂಗೈಯನ್ನು ಚೂರು ಚೂರು ಮಾಡುವ ಖಡ್ಗದಿಂದ ಶತ್ರುವಿನ ಕತ್ತನ್ನು ಕತ್ತರಿಸು. ಆ ಬಲಶಾಲಿ ಶತ್ರುವು ನಿನ್ನ ಸಾಮರ್ಥ್ಯವನ್ನು ಮೀರಿಸಿದರೆ ಆಗ ಆತನು ಸಚರಾಚರಾ ತ್ಮಕನೆಂಬುದನ್ನು ತಿಳಿದುಕೋ. ನಮ್ಮ ಮಾತು ಸತ್ಯ" ಎಂದ ಸುಪಾರ್ಶ್ವ. ೩೮. ರಾಕ್ಷಸೇಶ್ವರನನ್ನು ಆವರಿಸಿದ್ದ ಕೋಪದ ಬೆಂಕಿಯ ತಾಪವನ್ನು ನೀತಿಯುಕ್ತವಾದ ಉಚಿತ ಮಾತಿನ ಸರಣಿಯಿಂದ ಹೋಗಲಾಡಿಸಿ ಸುಪಾರ್ಶ್ವನು ಕರೆದುಕೊಂಡುಬಂದನು. ಪುತ್ರಮರಣದ ಶೋಕಾಗ್ನಿಯಿಂದ ಬೇಯುತ್ತಿದ್ದ ಮಂಡೋದರಿಯನ್ನು ಸುಪಾರ್ಶ್ವನು ವಿನಯದಿಂದ ಉಪಚರಿಸಿದನು. ೩೯. "ರಾಣಿ, ದುಃಖಿಸಬೇಡ. ಬ್ರಹ್ಮ, ಈಶ್ವರರ ಕುತ್ತಿಗೆಗೆ ಕತ್ತಿ ಹಾಕಿ ಯುದ್ಧದಲ್ಲಿ ಸತ್ತ ನಿನ್ನ ಕುಮಾರರನ್ನು ಕರೆತಂದು ನಿನ್ನೆದುರಿಗೆ ನಿಲ್ಲಿಸುವೆನು. ನಿನ್ನ ಹಿಂದಿನ ವೈಭವಕ್ಕೆ ಇಮ್ಮಡಿಯಾದ ಸುಖ ಸಂತೋಷವಾಗುವಂತೆ ನಿನ್ನ ಬಯಕೆಯನ್ನು ಪೂರೈಸುವೆನು" ಎಂದು ಸಮಾಧಾನಪಡಿಸಿದ ಸುಪಾರ್ಶ್ವ.

ಬಳಿಕವರನಾ ಸಚಿವಪತಿ ನಿಜ । ನಿಳಯದೊಳಯಿಕೆ ಕಳುಹಿ ಕಡುಗ
ತ್ತಲೆಯೊಳಗೆ ಕೈದೀವಿಗೆಯ ಪಾಳೆಯದ ಪಸರದಲಿ
ಒಳುಭಟರನೊಳುದಂತಿಗಳನ । ಗ್ಗಳದ ತೇಜಿಯ ತಿಂತಿಣಿಯ ತೇ
ರ್ಗಳನು ಮೇಳೈಸಿದನು ಕೂಡಿಕ್ಕಿದನು ಕೈದುಗಳ ೪೦

ಒಡೆದು ಭಂಡಾರವನು ಮೊಗೆಮೊಗೆ । ದಿದುಕಿದನು ಮನದಣಿಯೆ ಮಣಿಮಯ
ದೊಡವುಗಳ ನೀಡಿದನು ಕರ್ಪುರವಳುಕುಗಳ ಮೊಗೆದು
ಕುಡಿತೆಯಲಿ ಚಾಚಿದನು ರಕ್ಕಸ । ಪಡೆಗೆ ನಾಳಿನ ಸಮರಮುಖದಲಿ
ಮಡಮುಱಿದರಿಹಪರಕೆ ಬಾಹಿರರಹಿರಿ ನೀವೆಂದ ೪೧

ವೀರಕಂಕಣವಿಕ್ಕುವುದು ನಿಜ । ನಾರಿಯರ ಮಕ್ಕಳ ಗೃಹಾಲಂ
ಕಾರಗಳ ಬೀಳ್ಕೊಂಬುದೊಂದೇ ಚಿತ್ತಶುದ್ಧಿಯಲಿ
ಸಾರಸಂಪದವಿತ್ತ ಸ್ವಾಮಿಯ । ಕಾರಿಯಕೆ ಪ್ರಾಣವನು ಕೊಡುವುದು
ದಾರಿಯಿದು ಸುಗತಿಗೆ ನಿದಾನವಿದೆಂದು ಸಾರಿಸಿದ ೪೨

ಮಣಿಯಲಾಗದು ವೀರ ಸುಭಟಾ । ಗ್ರಣಿಗಳಿದಿರಿನಲಿಱಿದು ಮೆಱೆವುದು
ಹಣೆಗಳಲಿ ತೋಱುವುದು ಕಂಗಳನಾಜಿರಂಗದಲಿ
ಜುಣುಗಿದಾಹವಸಿರಿಯ ಹಾರದ । ಕುಣಿಕೆಯನು ಸೆಕ್ಕುವುದು ಸ್ವಾಮಿಯ
ಋಣವ ತಿದ್ದುವುದೆಂದು ವೀರ ಸುಪಾರ್ಶ್ವ ಸಾರಿದನು ೪೩

೪೦. ಅನಂತರ ಆ ಸಚಿವಶ್ರೇಷ್ಠ ಸುಪಾರ್ಶ್ವನು ರಾವಣ ಮಂಡೋದರಿಯರನ್ನು ಅವರ ನಿವಾಸದೊಳಕ್ಕೆ ಕಳುಹಿಸಿದನು. ಆ ಕಗ್ಗತ್ತಲೆಯಲ್ಲಿ ಕೈದೀಪಗಳಿಂದ ಬೆಳಗುತ್ತಿದ್ದ ಪಾಳಯಕ್ಕೆ ಬಂದು ಸುಪಾರ್ಶ್ವನು ಉತ್ತಮ ಭಟರು, ಶ್ರೇಷ್ಠ ಆನೆ ಕುದುರೆ ಮತ್ತು ರಥಗಳನ್ನು ಒಟ್ಟುಗೂಡಿಸಿ ಆಯುಧಗಳನ್ನು ಕಲೆಹಾಕಿದನು. ೪೧. ಭಂಡಾರವನ್ನು ಒಡೆದು ಬಾಚಿ ಬಾಚಿ ತೆಗೆದು ರಾಶಿಹಾಕಿ ರತ್ನಾಭರಣಗಳನ್ನು ಮನಸ್ಸು ತೃಪ್ತಿಯಾಗುವಂತೆ ವೀರರಿಗೆ ಕೊಟ್ಟನು. ಕರ್ಪೂರದ ಹಳುಕುಗಳನ್ನು ಗೋರಿ ತೆಗೆದುಕೊಂಡು ಬೊಗಸೆಯಲ್ಲಿ ರಾಕ್ಷಸಸೈನಿಕರಿಗೆ ನೀಡಿದನು. 'ನಾಳೆ ನೀವು ಯುದ್ಧದಲ್ಲಿ ಹಿಮ್ಮೆಟ್ಟಿದರೆ ಇಹಲೋಕ ಪರಲೋಕಗಳೆರಡಕ್ಕೂ ಬಹಿಷ್ಕೃತರಾಗುತ್ತೀರಿ' ಎಂದು ಹುರಿದುಂಬಿಸಿದ ಸುಪಾರ್ಶ್ವ. ೪೨. 'ವೀರಕಂಕಣವನ್ನು ಧರಿಸಿ, ಹೆಂಡತಿ, ಮಕ್ಕಳು, ಮನೆಮಾರುಗಳನ್ನು ಶುದ್ಧ ಮನಸ್ಸಿನಿಂದ ಬೀಳ್ಕೊಡಿ. ನಿಮಗೆ ಸಂಪತ್ ಸಮೃದ್ಧಿಯನ್ನುಂಟುಮಾಡಿದ ಸ್ವಾಮಿ ಕಾರ್ಯಕ್ಕೆ ಪ್ರಾಣವನ್ನು ಒಪ್ಪಿಸುವುದು ಸರಿಯಾದ ಮಾರ್ಗ, ಇದು ಸದ್ಗತಿ ಸಾಧನ' ಎಂದು ಸುಪಾರ್ಶ್ವ ಡಂಗುರ ಹೊಡಿಸಿದ, ೪೩. 'ಮಹಾ ಪರಾಕ್ರಮಿಗಳ ಎದುರಿನಲ್ಲಿ ವೀರನಾದವನು ಬಾಗಬಾರದು, ಯುದ್ಧರಂಗದಲ್ಲಿ ನಿಂತು ಹೋರಾಡಿ ಶತ್ರುಗಳನ್ನಿರಿದು ಅವರ ಹಣೆಗಳಲ್ಲಿ ಕಣ್ಣುಗಳನ್ನು ಮೂಡಿಸಬೇಕು. ಯುದ್ಧಲಕ್ಷ್ಮಿಯು ಕೈಯಿಂದ ನುಣುಚಿಕೊಂಡು ಹೋಗಲು ಪ್ರಯತ್ನಿಸಿದರೆ ಹಾರದ ಕುಣಿಕೆಯನ್ನು ಕೊರಳಿಗೆ ಬೀರಿ ಒಡೆಯನ ಋಣವನ್ನು ತೀರಿಸಬೇಕು' ಎಂದು ವೀರಸುಪಾರ್ಶ್ವ ಘೋಷಿಸಿದ.

ಅಡರಿದನು ರವಿರಥವನಾ ಕೈ । ಹಿಡಿದು ಕಮಲವ ಹಾಯ್ಕಿ ವಜ್ರದ
ಖಡುಗವನು ಮಣಿಮಯದ ಹರಿಗೆಯ ಕೊಂಡು ರಕ್ಕಸರ
ತೊಡಕು ತೋಟಿಯ ವಿಲಗ ತನ್ನನು । ತೊಡಚಿಕೊಂಬುದೊಯೆಂಬ ಸಂಶಯ
ದೆಡಹಿನಲಿ ಮೈದೋಱಿದನು ಪೂರ್ವಾಚಲಾಗ್ರದಲಿ ೪೪

ಇನನ ಜನನದೊಳಾ ಸುಪಾರ್ಶ್ವಕ । ನನುವರಕೆ ಮೇಳೈಸಿದನು ವಾ
ಹಿನಿಯ ಹೊಱವಡಿಸಿದನು ಹೊರಿಗೆಯ ರಾಜಕಾರ್ಯದಲಿ
ಕನಕ ರತ್ನಾಭರಣದನುಲೇ । ಪನದಿನೊಪ್ಪಂಬಡೆದು ಖಳನರ
ಮನೆಗೆ ಬಂದಾಹವಕೆ ವೀಳಯಗೊಂಡು ಬೀಳ್ಕೊಂಡ ೪೫

ವೀರ ಶುಕ ಶಾರ್ದೂಲ ದುರ್ಮದ । ಸಾರಣರ ಗಡಣದಲಿ ಪಯಣದ
ಭೇರಿಗಳ ಬಿರುದನಿಯುಲಿಳಿದನು ದುರ್ಗವನು ಖಳನ
ಕೋರಯಿಪ ಮಣಿಮಕುಟ ನಿಕರದ । ಭೂರಿವೆಳಗಳ್ಳಿಱಿಯೆ ಸುಮನೋ
ನಾರಿಯರ ನಿಡುಗಂಗಳನು ನಡೆತಂದನಾಹವಕೆ ೪೬

ತೇಜಿಗಳ ತೆರೆಮಾಲೆಗಳ ರಥ । ರಾಜಿಗಳ ನೆಗಳುಗಳನಾಗಸ
ಮಾಜತತಿಯದ್ರಿಗಳ ಸಲೆ ಪದಚರರ ಜಲಚರರ
ರಾಜಿಸುವ ನಾನಾಯುಧಂಗಳ । ತೇಜದೌರ್ವಾನಳನ ಬಗೆಯಲಿ
ರಾಜರಾಜಾನುಜನ ಬಲಜಲರಾಶಿ ರಂಜಿಸಿತು ೪೭

೪೪. ಸೂರ್ಯನು ಕಮಲಕ್ಕೆ ಆಶ್ವಾಸನವಿತ್ತು ರಥವನ್ನೇರಿದನು ; ವಜ್ರದ ಖಡ್ಗವನ್ನಿಟ್ಟುಕೊಂಡನು ; ರತ್ನಗಳನ್ನು ಮೆಟ್ಟಿದ ಗುರಾಣಿಯನ್ನು ತೆಗೆದುಕೊಂಡನು. ರಾಕ್ಷಸರ ಹಿಂಸಾಯುದ್ಧದ ತೊಡಕು ತನ್ನನ್ನು ಎಲ್ಲಿ ಸಿಕ್ಕಿಸಿಕೊಳ್ಳುವುದೋ ಎಂಬ ಸಂಶಯದ ಪೇಚಿನಲ್ಲಿ ಸೂರ್ಯನು ಉದಯಪರ್ವತದ ತುದಿಯನ್ನೇರಿದನು. ೪೫. ಸೂರ್ಯೋದಯದಲ್ಲಿ ಸುಪಾರ್ಶ್ವನು ಯುದ್ಧಕ್ಕೆ ಸೈನ್ಯವನ್ನು ಒಟ್ಟುಗೂಡಿಸಿದನು. ಸ್ವಾಮಿಕಾರ್ಯವನ್ನು ನಿರ್ವಹಿಸಲು ಹೋರಾಟಕ್ಕೆ ಸೈನ್ಯವನ್ನು ಹೊರಡಿಸಿದನು. ಚಿನ್ನದ ಮತ್ತು ರತ್ನದ ಒಡವೆಗಳನ್ನು ಧರಿಸಿಕೊಂಡು, ಮೈಗೆ ಸುಗಂಧವನ್ನು ಲೇಪಿಸಿಕೊಂಡು ಒಪ್ಪವಾಗಿ ರಾಕ್ಷಸೇಶ್ವರನ ಅರಮನೆಗೆ ಬಂದನು. ಯುದ್ಧಕ್ಕೆ ವೀಳಯವನ್ನು ತೆಗೆದುಕೊಂಡು ಸುಪಾರ್ಶ್ವನು ರಾವಣನನ್ನು ಬೀಳ್ಕೊಂಡು ಬಂದನು. ೪೬. ವೀರ ಶುಕ, ಶಾರ್ದೂಲ, ದುರ್ಮದ, ಸಾರಣರ ಬಳಸಿನಲ್ಲಿ ಭೇರಿಗಳು ಭೋರ್ಗರೆಯುತ್ತಿರಲು ಸುಪಾರ್ಶ್ವನು ದುರ್ಗವನ್ನಿಳಿದುಬಂದನು. ಕೋರೈಸುವ ವಜ್ರಕಿರೀಟಗಳ ಪ್ರಕಾಶವು ದೇವಲೋಕದ ತರುಣಿಯರ ಕಣ್ಣುಕುಕ್ಕಲು ಸುಪಾರ್ಶ್ವನು ಯುದ್ಧಕ್ಕೆ ಬಂದನು. ೪೭. ಕುದುರೆಗಳು ಅಲೆಗಳಸಾಲು, ರಥಗಳು ಮೊಸಳೆಗಳು, ಆನೆಗಳ ಸಮೂಹ ಬೆಟ್ಟಗಳು, ಕಾಲುಬಲ ಜಲಚರಗಳು, ವಿವಿಧಾಯುಧಗಳ ತೇಜೋರಾಶಿ ಕಡಲ್ಗಿಚ್ಚು. ಹೀಗೆ ಕುಬೇರನ ತಮ್ಮ ರಾವಣನ ಸೈನ್ಯವು ಸಾಗರದಂತೆ ಶೋಭಿಸಿತು.

ಅಣುಗ ಕೇಳಾ ಬಲದ ಹಯ ಮಾ । ರಣ ವರೂಥ ಪದಾತಿಗಳ ಹೆ
ಲ್ಲಣೆಯು ಹೇಷಿತನಿನದ ಬೃಂಹಿತನಾದ ಚೀತ್ಕೃತಿಯು
ರಣಿತನಿಸ್ವನ ಸಿಂಹರವ ಮಿಗೆ । ಜುಣುಗಿಸಿತು ಸರಸಿಜಭವಾಂಡವ
ನಣೆದುದಾ ಮುಂಗುಡಿಯ ವಾದ್ಯದ ಕೂಗು ಕೂರುಮನ ೪೮

ಕಾಣುತಾ ಬಲದುಬ್ಬರದ ಪರಿ । ಮಾಣುವನು ಪದ್ಮಪ್ರಿಯನ ಮುಂ
ಗಾಣಿಕೆಯು ಮಗನುಭಯ ದಿಕ್ಕಿನ ಭಟರನೀಕ್ಷಿಸಲು
ಏಣವಿಂಡಿಗೆ ಮಲೆವ ಹುಲಿಗಳ । ಹೂಣಿಕೆಯುವೊಲು ಹೊಂಚಿ ಸುಭಟ
ಶ್ರೇಣಿ ನಿಂದುದು ನೀಲನಿಷದಾದ್ರಿಗಳ ನಿಲವಿನಲಿ ೪೯

ಹಿಮದ ಹೊಯ್ಲಿಗೆ ಹೊದಕೆಗೊಂಬನೆ । ತಮವಿರೋಧಿ ವಿಲೋಕಿಸದಲು
ಭ್ರಮಿಸೆ ಪಳಚಿತು ಹೊಕ್ಕು ದಡದುಡ ದೊಪ್ಪದಿಪ್ಪೆನಲು
ದ್ರುಮಮಹಾದ್ರಿಯ ಹೊಯ್ಲಿನಲಿ ರಣ । ವಿಮುಖರೇ ರಕ್ಕಸರು ಖಣಿಖಟಿ
ಲಮರೆ ಕಡಿದರು ಕೋಡಗವ ಮುಸು ಕರಡಿಗಳ ಪಡೆಯ ೫೦

ನಡೆವುತಿರ್ದುದು ಸಂಕುಲದ ರಣ । ವಡವಿಗರಿಗಡಬಳರಿಗವನಿಪ
ನುಡಿದನಿತ್ತಲು ತನ್ನ ಮೈನಂಬುಗೆಯ ಶರಣಂಗೆ
ಕಡೆಯ ಕಾಣೆನು ದಿನದಿನಕೆ ಹೊಬ । ಪಡುವ ಸೇನೆಗಿದೇನು ಸೋಜಿಗ
ಕಡೆಗವಧಿ ನಮಗಾವುದೆಂದನು ನಗುತ ರಘುನಾಥ ೫೧

೪೮. ಕುಮಾರ ಕುಶ, ಕೇಳು. ರಾಕ್ಷಸಸೈನ್ಯದ ಕುದುರೆಗಳ ಕೆನೆತ, ಆನೆಗಳ ಘೀಂಕಾರ, ರಥಗಳ ಚೀತ್ಕಾರ, ಪದಾತಿಸೈನ್ಯದ ರಣಧ್ವನಿ ಎಲ್ಲವೂ ಸೇರಿ ಸಿಂಹನಾದವನ್ನು ಮೀರಿಸಿ ಬ್ರಹ್ಮಾಂಡವನ್ನು ಕುಗ್ಗಿಸಿತು ; ಸೈನ್ಯದ ಮುಂಭಾಗದ ವಾದ್ಯಗಳ ಭೋರ್ಗರೆತ, ಕೂರ್ಮನನ್ನು ತಿವಿಯಿತು. ೪೯. ರಾಕ್ಷಸಸೈನ್ಯದ ಅಗಾಧ ಪ್ರಮಾಣವನ್ನು ನೋಡಿ ಸುಗ್ರೀವನು ತಮ್ಮ ಕಡೆಯ ಎರಡೂ ದಿಕ್ಕಿನ ಭಟರನ್ನು ನೋಡಲು ಜಿಂಕೆಯ ಗುಂಪಿನ ಮೇಲೆ ಬೀಳುವ ಹುಲಿಗಳ ಪರಾಕ್ರಮದಂತೆ ವಾನರವೀರರು ನೀಲ ನಿಷದಪರ್ವತಗಳ ಹಾಗೆ ಯುದ್ಧಕ್ಕೆ ಸಿದ್ಧವಾಗಿ ನಿಂತಿತು. ೫೦. ಹಿಮದ ಹೊಡೆತಕ್ಕೆ ಸೂರ್ಯನು ಹೆದರಿ ಮರೆಗೊಳ್ಳುವನೇ ? ನೋಟದಿಂದ ಭಯಗೊಳಿಸುತ್ತ ವಾನರವೀರರು ನುಗ್ಗಿ ದಡದುಡ ದೊಪ್ಪದಪ್ಪ ಎಂದು ಶಬ್ದವಾಗುತ್ತಿರಲು ಮರಗಳಿಂದಲೂ ಪರ್ವತ ಗಳಿಂದಲೂ ಹೊಡೆದರು. ರಾಕ್ಷಸರೇನು ಯುದ್ಧಕ್ಕೆ ಹೆದರಿ ಓಡಿಹೋಗುವವರೇ ? ಖಣಿಖಟಿಲು ಎಂಬ ಶಬ್ದದೊಡನೆ ಕಪಿ, ಕರಡಿ ಮತ್ತು ಮುಸುವಗಳನ್ನು ಕತ್ತರಿಸಿ ಹಾಕಿದರು. ೫೧. ವಾನರರಿಗೂ ರಾಕ್ಷಸರಿಗೂ ಸಮೂಹಯುದ್ಧ ನಡೆಯುತ್ತಿತ್ತು. ಇತ್ತ ರಾಮನು ನಂಬಿಕೆಯ ಭಕ್ತ ವಿಭೀಷಣನನ್ನು ಕುರಿತು "ದಿನದಿನವೂ ಯುದ್ಧಕ್ಕೆ ಬರುತ್ತಿರುವ ಈ ಸೈನ್ಯಕ್ಕೆ ಕೊನೆಯೇ ಕಾಣುವುದಿಲ್ಲ ; ಇದೇನಾಶ್ಚರ್ಯ ! ಕೊನೆಗೆ

ದಶಶಿರನ ದೆಸೆಗಂಜಿ ನಾಲುಕು । ಮುಸುಡಿನವನೀ ಸೇನೆಯನು ನಿ
ರ್ಮಿಸಿ ಕೊಡುತಿರನಲೇ ಮಹಾಂಭೋರಾಶಿ ಮಧ್ಯದಲಿ
ಎಸೆವ ಬುದ್ಬುದದಂತೆ ಸೇನಾ । ವಿಸರ ಬರುತಿದೆ ಬಂದ ಸುಭಟನ
ಪೆಸರದೇನೆಂದರಸ ಬೆಸಗೊಂಡನು ವಿಭೀಷಣನ ೫೨

ಇವರ ಬಲ್ಲಿರೆ ಜೀಯ ಬೇಹಿಂ । ಗಿವರು ಬಾರರೆ ಹಿಂದೆ ಶುಕನೆಂ
ಬವನು ಸಾರಣನೆಂಬವನು ಶಾರ್ದೂಲನೆಂಬವನು
ಇವರು ಮೂವರಿ ಹಿಂದೆಸೆಯ ತೋ । ರ್ಪವ ಸುಪಾರ್ಶ್ವಕನವನ ಬಳಿಯಲಿ
ಬವರಿಗರು ಹದಿನೆಂಟು ನಿರ್ಬುದ ವೀರರದೆಯೆಂದ ೫೩

ಅದೆ ಸಮುದ್ರದ ತೆರೆಯವೊಲು ದು । ರ್ಮದನ ಬಲ ದೀರ್ಘೋದರನ ಪಡೆ
ಪುದಿದ ಬಲುಗೈದುಗಳ ಭಾರಿಯ ಭೂರಿವೆಳಗಿನಲಿ
ಎದೆಯ ಕೆಚ್ಚಿನ ವೀರರವರಿವ । ರದುಭುತಾಹವಮಲ್ಲರಿವರಾ
ವದನ ಪತ್ತರ ರಕ್ಕಸನ ಮನ್ನಣೆಯ ಭಟರೆಂದ ೫೪

ಜೀಯ ಚಿತ್ತೈಸಿದುವೆ ರಕ್ಕಸ । ರಾಯ ಕಟಕದ ಮೂಲಬಲವಿ
ನ್ನಾಯಿತೈಸರ ಮೇಲೆ ಕೋಟಿಗೆ ತೆರಪು ದಿನದಿನಕೆ
ಬೀಯವಾದುದಕಗಳ ಬಾವಿಯ । ಬಾಯದಂಡೆಯ ಬೆಳೆಯ ಬಗೆಯವೊ
ಲಾಯಿತುಳಿದಿಹುದೇತವೊಂದೇ ದೇವ ಕೇಳೆಂದ ೫೫

ಇದಕ್ಕೆ ಕೊನೆಯೆಂದು ?" ಎಂದು ನಗುತ್ತ ನುಡಿದ. ೫೨. "ರಾವಣನಿಗೆ ಹೆದರಿ ನಾಲ್ಕು ಮುಖದ ಬ್ರಹ್ಮನು ಮಹಾಸಾಗರದ ಮಧ್ಯದಲ್ಲಿ ಈ ಸೈನ್ಯವನ್ನು ನಿರ್ಮಿಸಿ ಕೊಡುತ್ತಿಲ್ಲವಲ್ಲ ? ನೀರಿನ ಗುಳ್ಳೆಗಳಂತೆ ಸೈನ್ಯಸಮೂಹವು ಬರುತ್ತಿದೆ. ಈಗ ಬಂದಿರು ವವನ ಹೆಸರೇನು ?" ಎಂದು ರಾಮ ವಿಭೀಷಣನನ್ನು ಕೇಳಿದ. ೫೩. "ಇವರಂ ಗೊತ್ತಿಲ್ಲವೆ, ಸ್ವಾಮಿ. ಹಿಂದೆ ಗೂಢಚಾರರಾಗಿ ಬಂದಿರಲಿಲ್ಲವೆ ಇವರು ? ಶುಕ, ಸಾರಣ, ಶಾರ್ದೂಲ ಎಂಬುವರು ಮೂರು ಜನ. ಈ ಮೂವರ ಹಿಂದುಗಡೆಯಲ್ಲಿ ಕಾಣಿಸುವವನು ಸುಪಾರ್ಶ್ವ. ಅವನೊಡನೆ ಹದಿನೆಂಟು ನ್ಯರ್ಬುದ ಯುದ್ಧಮಾಡುವ ವೀರರಿದ್ದಾರೆ" ಎಂದ ವಿಭೀಷಣ. ೫೪. "ಅಗೋ ಅಲ್ಲಿ ಸಮುದ್ರದ ಅಲೆಯಂತೆ ಇರುವುದು ದುರ್ಮದನ ಸೈನ್ಯ. ಭಾರಿ ಆಯುಧಗಳ ಹೊಳಪಿನಲ್ಲಿ ತುಂಬಿರುವುದೇ ದೀರ್ಘೋದರನ ಸೈನ್ಯ. ಎದೆಗೆಚ್ಚಿನ ವೀರರು ಇವರು ; ಅದ್ಭುತ ರಣಮಲ್ಲರು ; ಆ ಹತ್ತು ತಲೆಯವನ ನೆಚ್ಚಿನ ವೀರರಿವರು" ಎಂದ ವಿಭೀಷಣ. ೫೫. "ದೇವ, ಆಲಿಸು. ರಾಕ್ಷಸೇಶ್ವರನ ಮೂಲಬಲ ಇದೇ ; ಇನ್ನಾಯಿತು. ದಿನದಿನಕ್ಕೆ ಒಂದೊಂದು ಕೋಟಿ ಯಂತೆ ಅವನ ಸೈನ್ಯ ಮುಗಿಯುತ್ತ ಬಂದಿದೆ. ನೀರು ಮುಗಿದ ಬಾವಿಯ ಬಾಯ ಬಳಿಯ ಸಸ್ಯದಂತೆ ಆಗಿದೆ ಅವನ ಸೈನ್ಯ. ಇನ್ನು ಉಳಿದಿರುವುದು ಏತವೊಂದೇ" ಎಂದ ವಿಭೀಷಣ.

ಆದಡಿವರೊಳಗೊಮ್ಮೆ ಸಮರವ । ನೈದಿ ನೋಡುವೆನೆನುತ ಸುಗ್ರೀ
ವಾದಿ ಸುಭಟರ ಸಾರಿಸುತ ಕೈಸನ್ನೆಯಲಿ ಕೆಲಕೆ
ಕೋದ ಕೊರಳಿನ ತಿರುವೆರಡನಾ । ರೈದು ಹಿಡಿವಂಬುಗಳ ಮಡಲಿಚಿ
ದಾದಿನರಕೇಸರಿಯವೊಲು ಹೊಕ್ಕನು ರಣಾಂಗಣವ ೫೬

ಹೊಕ್ಕ ಮೈಯಲಿ ಕೋಲುಕೋಲಿಗೆ । ಲಕ್ಕಸಂಖ್ಯೆಯ ಕರಿಘಟೆಯು ಕಾ
ಲಿಕ್ಕುವತಿಜವದಶ್ವಕೋಟಿಯು ಕೋಟಿಸಂಖ್ಯೆಗಳ
ಮಿಕ್ಕು ನೂಕುವ ತೇರುಗಳ ಕೈ । ಯಿಕ್ಕಿ ಕಾದುವ ಖಳಪದಾತಿಯ
ಮುಕ್ಕುಡಿಯ ಮಾಡಿದನು ರಣಮದದುಬ್ಬಿನಲಿ ರಾಮ ೫೭

ತೋಳ ಪೂಜಿಸಿಕೊಂಬ ಬಲುಮಾ । ಸಾಳು ತೊಲಗದ ಕಂಬವೆಂಬು
ಬ್ಬಾಳು ಬಿರುದಿನ ಹಗಲು ಕೈದೀವಿಗೆಯ ಹೆಚ್ಚಾಳ
ದೂಳುದೋಱಿತು ಕಾಣೆನೆಂಬ । ಚ್ಚಾಳು ನಡೆಸಂಕಲೆಯ ಬಿಂಕದ
ಕಾಳಗದ ಕಲಿಯಾಳ ಕಾರಮುಗಲಸಿದನು ರಾಮ ೫೮

ಪರಿಭವಿಸಿ ಕವಿವಾಳು ಕುದುರೆಯ । ನುರವಣಿಪ ತೇರುಗಳ ತವಕಿಸಿ
ತುಱುಗುವಿಭಸಂಕುಲದ ಸಂಕುಲವಾಗೆ ಸರಕಟಿಸಿ
ಸರಗೊಳಿಸಿದನು ಸರಳ ಸಾರದ । ಶರಧಿಯಲಿ ಸಂಗ್ರಾಮ ಚೌಪಟ
ರರಸ ರಿಪುಬಲವಿಜಯವನಿತಾನಾಥನಾಜಿಯಲಿ ೫೯

೫೬. 'ಹಾಗಿದ್ದರೆ ಹೋಗಿ ಇವರೊಡನೆ ಒಮ್ಮೆ ಕಾದಿ ನೋಡುವೆನು' ಎನ್ನುತ್ತ ರಾಮನು ಸುಗ್ರೀವನೇ ಮೊದಲಾದ ವೀರರನ್ನು ಕೈಸನ್ನೆಯಿಂದ ಪಕ್ಕಕ್ಕೆ ಕಳಿಸಿದನು. ಬಳಿಕ ಬಿಲ್ಲಿನ ಹಗ್ಗದ ಎರಡೂ ತುದಿಯ ಕುಣಿಕೆಗಳು ಸರಿಯಾಗಿ ಕುಳಿತಿವೆಯೋ ಎಂಬುದನ್ನು ಪರೀಕ್ಷಿಸಿ ಬಾಣಗಳನ್ನು ತುಂಬಿಕೊಂಡು ಆದಿನರಸಿಂಹನಂತೆ ಯುದ್ಧರಂಗವನ್ನು ಪ್ರವೇಶಿಸಿದನು. ೫೭. ರಾಮನು ರಾಕ್ಷಸಸೈನ್ಯವನ್ನು ಪ್ರವೇಶಿಸುತ್ತಿದ್ದಂತೆ ಒಂದೊಂದು ಬಾಣಕ್ಕೂ ಲಕ್ಷ ಆನೆಗಳನ್ನೂ, ಮೇಲೆಬೀಳುವ ವೇಗಶಾಲಿಗಳಾದ ಕೋಟಿ ಕುದುರೆಗಳನ್ನೂ, ಮೀರಿ ಬರುವ ಕೋಟಿ ಸಂಖ್ಯೆಯ ರಥಗಳನ್ನೂ ರಾಕ್ಷಸಕಾಲುಬಲವನ್ನೂ ಯುದ್ಧದ ಆವೇಶದಿಂದ ಅಪಘಾತಕ್ಕೀಡುಮಾಡಿದನು. ೫೮. ತೋಳನ್ನು ಪೂಜಿಸಿಕೊಳ್ಳುವ ಭಾರಿ ವೀರ, ತೊಲಗದ ಕಂಬವೆಂಬ ಬಿರುದಿನ ಉತ್ಸಾಹಿಶೂರ, ಹಗಲುದೀಪ ಹಿಡಿಸಿಕೊಳ್ಳುವ ಬಿರುದಿನ ಮಹಾವೀರ, ಧೂಳಿದ್ದಿದ್ದನ್ನೇ ಕಾಣೆ ಎಂಬ ದಿಟ್ಟಸೈನಿಕ, ಚಲಿಸುವ ಸರಪಣಿ ಎಂಬ ಗರ್ವದ ಯುದ್ಧದ ಕಡುಗಲಿ ಇವರನ್ನು ರಾಮನು ಮೋಡಗಳ ಲೋಕಕ್ಕೆ ಸೇರಿಸಿದನು. ೫೯. ಕಾಳಗಜಗಜಟ್ಟಿಯಾದ ಶತ್ರುಸೈನ್ಯವನ್ನು ಗೆದ್ದು ವಿಜಯಲಕ್ಷ್ಮಿಯ ಅರಸನಾಗುವ ರಾಮನು ಹೀಯಾಳಿಸುತ್ತ ಮುತ್ತುವ ಕುದುರೆಯ ಸೈನಿಕರನ್ನೂ, ಮುನ್ನುಗ್ಗುವ ರಥಗಳನ್ನೂ, ಕಾತರದಿಂದ ಒತ್ತಾಗಿ ಬರುವ ಆನೆಗಳ ಸಮೂಹವನ್ನೂ ಬಾಣಗಳ ಮಳೆಯನ್ನು

ಹಱಿದುಬೀಳುವ ತೋಳುಗಳ ಮಳೆ । ಗಱೆದುದೈ ರಣದಗಲದಲಿ ನಭ
ಉಱುಬಿ ಬೀಳುವ ತಲೆಯು ತಳಿತೊಗುವಾಲಿಕಲ್ಗಳಲಿ
ತುಱುಗಿತಿಳೆ ನಡುದೊಡೆಯ ತುಂಡಿನ । ಗುಱುಬಿನಲಿ ಗುಮ್ಮಿಕ್ಕಿದುದು ನಭ
ವಱಿಚುತಿರ್ದುದಜಾಂಡಬೊಬ್ಬೆಗೆ ರಾಮನೆಸುಗೆಯಲಿ ೬೦

ಕರುಳ ಕುಪ್ಪೆಳಿ ಕಾಳಿಜದ ಪೆ । ರ್ವೊರಡಿ ಕೆನ್ನೆತ್ತರಿನ ಮಡು ನಿಡು
ದೊರಳೆಗಳ ಹೇರಾಸಿ ಹೆಗ್ಗರಿ ನುಗ್ಗಿದಸ್ಥಿಗಳ
ಸರಿಬೆರಕೆಯಲಿ ಭೂತಕೋಟಿಯ । ನೆರವಿಗುಣಬಡಿಸಿದವೊಲಿರ್ದುದು
ಖರವಿರೋಧಿಯ ಕದನಕರ್ಕಶಬಾಣಪರ್ವದಲಿ ೬೧

ಒಪ್ಪೆಸರ ಖಳರಳಿಯೆ ಕೋಟಿಗೆ । ಚಪ್ಪಳೆಯ ಕೈಗಳಲಿ ಕುಣಿವುದು
ತಪ್ಪದೊಂದೇ ಮುಂಡ ರಣದಲಿ ಕೇಳದೈ ಕುಶನೆ
ತಪ್ಪ ನುಡಿದನು ಮುನಿಯೆನಲು ಬೇ । ಡಪ್ಪಗಳ ಮೇಲಾಣೆ ಕುಣಿದವು
ತಪ್ಪುದಲೆಗಳ ಮುಂಡಗಳು ಶತಕೋಟಿಸಂಖ್ಯೆಯಲಿ ೬೨

ಮಹಿಗಳಿಳುಹಿದವರರೆ ಸಂಗರ । ಮಹಿಯು ಸೀಮಾವಳಯದಲಿ ತಹ
ಬಹ ಕೃತಾಂತನ ದೂತರೆಣಿಕೆಯ ಕೋಲು ಪಿತೃಪತಿಯ
ಮಿಹಿರವಂಶೋದ್ಭವನ ರಿಪುವನ । ದಹನ ದಾವಾನಳನ ಸಂಗರ
ಮಹಿಳೆಯಭಿನವ ನಾಟಕನ ಕಗ್ಗೊಲೆಯ ಕವತೆಯಲಿ ೬೩

ಸುರಿಸಿ ಒಟ್ಟಿಗೆ ಪೋಣಿಸಿ ಹಾರವನ್ನಾಗಿ ಮಾಡಿದನು. ೬೦. ಯುದ್ಧಭೂಮಿಯ ಮೇಲೆಲ್ಲ ಕತ್ತರಿಸಿ ಹಾರಿದ ತೋಳುಗಳ ಮಳೆ ಸುರಿಯಿತು. ಕಡಿದು ಆಕಾಶಕ್ಕೆ ಚಿಮ್ಮಿದ ತಲೆಗಳು ಆಲಿಕಲ್ಲುಗಳಂತೆ ನೆಲದ ಮೇಲೆ ಒತ್ತಾಗಿ ಬಿದ್ದವು. ಕತ್ತರಿಸಿದ ಅರ್ಧತೊಡೆಗಳ ತುಂಡುಗಳು ತುಂಬಿಕೊಂಡ ಆಕಾಶವು ಭಯಂಕರವಾಯಿತು. ರಾಮನು ಬಾಣಬಿಡುತ್ತ ಗರ್ಜಿಸುತ್ತಿದ್ದ ಶಬ್ದಕ್ಕೆ ಬ್ರಹ್ಮಾಂಡವು ಅರಿಬಿಕೊಂಡಿತು. ೬೧. ದೊಡ್ಡಬೆಟ್ಟಗಳು ಪುಡಿಮಾಡಿದ ಮೂಳೆಗಳನ್ನು ಸಮನಾಗಿ ಬೆರಸಿದ ಕರುಳುಗಳ ಕುಪ್ಪೆ, ಪಿತ್ತಾಶಯದ ಭಾರಿಗುಡ್ಡೆ, ರಕ್ತದ ಮಡು, ಉದ್ದಗುಲ್ಮಗಳ ದೊಡ್ಡರಾಸಿ ಇವುಗಳನ್ನು ನೋಡಿದಾಗ ರಾಮನ ಬಾಣಗಳ ಬಿರುಸಿನ ಯುದ್ಧವೆಂಬ ಹಬ್ಬದಲ್ಲಿ ಭೂತಸಮೂಹಕ್ಕೆ ಊಟ ಬಡಿಸಿದ ಹಾಗೆ ತೋರುತ್ತಿತ್ತು. ೬೨. ಹೆಸರಾಂತ ರಾಕ್ಷಸವೀರರು ಯುದ್ಧದಲ್ಲಿ ಮರಣಹೊಂದಿದಮೇಲೆ ಅವರ ಒಂದೊಂದೇ ಮುಂಡವು ಕೋಟಿ ಕೈಗಳಿಗೆ ಚಪ್ಪಾಳೆ ಹೊಡೆಯುತ್ತ ಕುಣಿಯುವುದು. ಈ ಮಹರ್ಷಿ ಸುಳ್ಳು ಹೇಳಿದನೆನ್ನಬೇಡ, ಕೇಳು ಕುಶ. ನಿಮ್ಮಪ್ಪಂದಿರ ಆಣೆ. ಯಾರ ಯಾರವೋ ತಲೆಗಳು ಯಾವುಯಾವುದೋ ಮುಂಡಗಳ ಮೇಲೆ ಕುಳಿತು ನೂರುಕೋಟಿ ಸಂಖ್ಯೆಯಲ್ಲಿ ಕುಣಿದವು. ೬೩. ಶತ್ರುವನಗಳನ್ನು ಸುಡುವ ಕಾಳ್ಗಿಚ್ಚಾದ, ರಣಲಕ್ಷ್ಮಿಯಿಂದ ನವನವೀನವಾದ ನಾಟಕವನ್ನಾಡಿಸುವ ಸೂರ್ಯವಂಶಜ ರಾಮನ ಕಗ್ಗೊಲೆಯ ಸೂರೆಯಲ್ಲಿ ಯುದ್ಧರಂಗಕ್ಕೆ ಬಂದು ಪ್ರಾಣಗಳನ್ನು ತೆಗೆದುಕೊಂಡು ಹೋಗುವ ಯಮನ ದೂತರ ಲೆಕ್ಕವನ್ನು ಬರೆಯಲು

ಏನು ವೀರರೊ ರಕ್ಕಸರು ಕಡಿ । ದಾನೆಗಳ ಮಸ್ತಕದ ಮುಂಡದ
ಲಾನಿಸಿದರುದಿದಶ್ವನಿಕರದ ತಲೆಯ ತಲೆಹಱಿದ
ಆನೆಗಳ ಮುಂಡದಲಿ ಸೆಕ್ಕಿದ । ರಾ ನಿಶಾಟಾಶ್ವಗಳ ಮುಂಡದ
ಲೂನತಲೆಗಳ ತೊಡಿಸಿ ನಡೆಸಿದರಾಹವಕೆ ಬಲವ ೬೪

ಪಲ್ಲಟಿಸಿ ಕೆಲಕೆಲರ ಮುಂಡಗ । ಳಲ್ಲಿ ತಲೆಗಳ ಕಡಿದಲೆಗಳಲಿ
ಸೆಲ್ಲಹಗಳ ಗದಾಯುಧದಲಸಿ ಮುದ್ಗರಂಗಳಲಿ
ಬಲ್ಲೆಹದಲಿಡುಗುಂಡಿನಲಿ ಕಿಱು । ಗಲ್ಲುಗಳ ಕವಣೆಯಲಿ ಬಾಣದ
ಘಲ್ಲಣೆಯಲುಬ್ಬಿಱಿವ ಹೆಬ್ಬರೆಗಳಲಿ ಹಳಚಿದರು ೬೫

ಕಡಿದ ಕಾಲ್ಗಳ ಕರುಳ ಮುಂಡದ । ಹೆಡಕುಗಳ ಚಿಗಿದೇಱಿ ಚಿಮ್ಮಿದ
ರೆಡಬಲದಲಬ್ಬರಿಸಿ ರಾಮನ ಮೇಲೆ ಖಂಡೆಯವ
ತಡವರಿಸಿ ಬಿದ್ದಿರ್ದ ತಲೆಗಳ । ತೊಡಿಸಿ ಕರುಳನು ಕೆಲವ ಮುಂಡದ
ಲಡಸಿ ಹವಣಿಸಿ ತೆಗೆದು ಸುರಗಿಯಲಿಟ್ಟರಿನಕುಲನ ೬೬

ಅಬ್ಬರಿಸಿದುದು ವೀರರಸ ರಣ । ದುಬ್ಬರದ ರೌದ್ರಾದ್ಭುತದ ನೆಣ
ಗೊಬ್ಬಿನಲಿ ಕಲಿರಕ್ಕಸರ ಸೇನಾಸಮುದ್ರದಲಿ
ಒಬ್ಬನೇ ಬಳಿಕರಿಬಲಾಬ್ಧಿಯ । ನುಬ್ಬಲೀಸದೆ ಸರಳವಡಬನ
ಹಬ್ಬದಲಿ ನಿಱಿಸಿದನು ಧೀರೋದಾತ್ತ ರಘುನಾಥ ೬೭

ಯಮನ ಲೆಕ್ಕದ ಪುಸ್ತಕಗಳನ್ನು ಕದನಕ್ಷೇತ್ರದ ಎಲ್ಲೆಯಲ್ಲಿ ತಂದಿಟ್ಟರು. ೬೪ ಅದೆಂಥ ವೀರರೋ ರಾಕ್ಷಸರು ! ತಲೆ ಕತ್ತರಿಸಿದ ಆನೆಗಳ ಮುಂಡದ ಕತ್ತಿನಮೇಲೆ ಕುದುರೆಗಳ ತಲೆಗಳನ್ನು ಹತ್ತಿಸಿದರು ; ಕುದುರೆಗಳ ಮುಂಡಗಳ ಮೇಲೆ ಆನೆಗಳ ತಲೆಗಳನ್ನಂಟಿಸಿದರು. ರಾಕ್ಷಸರ ಮತ್ತು ಕುದುರೆಗಳ ಮುಂಡಕ್ಕೆ ಕೈಗೆಬಂದ ಕತ್ತರಿಸಿದ ತಲೆಗಳನ್ನಂಟಿಸಿದರು. ಹೀಗೆ ಯುದ್ಧಕ್ಕೆ ಸೈನ್ಯವನ್ನು ಮುನ್ನಡೆಸಿದರು. ೬೫. ರಾಕ್ಷಸರು ಕೆಲಕೆಲವರ ಮುಂಡಗಳಿಗೆ ಬೇರೆಯವರ ತಲೆಗಳನ್ನು ಸೇರಿಸಿದರು. ಕತ್ತರಿಸಿದ ತಲೆಗಳಿಗೆ ಶಲ್ಯಗಳನ್ನು ಸಿಕ್ಕಿಸಿದರು ; ಮುರಿದ ಗದೆಗಳ ತುದಿಗೆ ಕತ್ತಿಗಳನ್ನೂ ಮುದ್ಗರಗಳಿಗೆ ಭಲ್ಲೆಗಳನ್ನೂ ಇಡುಗುಂಡುಗಳಿಗೆ ಚಿಕ್ಕಕಲ್ಲುಗಳನ್ನೂ ಕವಣೆಗಳಿಗೆ ಬಾಣಗಳನ್ನೂ ಸೇರಿಸಿ ದೊಡ್ಡದೊಡ್ಡ ತಮಟೆಗಳ ಭೋರ್ಗರೆತದೊಡನೆ ವಾನರಸೈನ್ಯದ ಮೇಲೆ ಬಿದ್ದರು. ೬೬. ಕತ್ತರಿಸಿದ ಕಾಲುಗಳ ಕರುಳುಗಳ ಮುಂಡಗಳ ಹೆಕ್ಕತ್ತುಗಳ ರಾಶಿಯನ್ನು ನೆಗೆದು ಮೇಲೆ ಹತ್ತಿ ನಿಂತು ಅಬ್ಬರಿಸುತ್ತ ಎಡಬಲಗಳೆರಡೂ ಕಡೆಯಿಂದ ರಾಮನ ಮೇಲೆ ಕತ್ತಿಯನ್ನು ಎಸೆದರು. ಕೈಯಿಂದ ತಡವರಿಸಿ ಹುಡುಕಿ ನೆಲದಮೇಲೆ ಬಿದ್ದಿದ್ದ ತಲೆಗಳನ್ನೂ ಕರುಳನ್ನೂ ಕೆಲವು ಮುಂಡಗಳಿಗೆ ಕಟ್ಟಿ ಅವುಗಳನ್ನೂ ಸುರಗಿಗಳಿಗೆ ಸಿಕ್ಕಿಸಿ ಅವುಗಳಿಂದ ರಾಮನನ್ನು ಹೊಡೆದರು. ೬೭. ವೀರರಾಕ್ಷಸರ ಸೇನಾಸಮುದ್ರದಲ್ಲಿ ಭೀಕರವಾದ ಯುದ್ಧದ ನೆಣಗೊಬ್ಬಿನ ರಭಸ ಅಲೆಗಳಿಂದ ವೀರರಸವು ಭೋರ್ಗರೆಯಿತು. ಶತ್ರುಸೇನಾಸಮುದ್ರವು ಉಕ್ಕುವುದಕ್ಕೆ ಅವಕಾಶ ಕೊಡದೆ ಧೀರೋದಾತ್ತ ರಾಘವನೊಬ್ಬನೇ

ಏನು ಬಾಣಾಭ್ಯಾಸಿಯೋ ರಘು । ಸೂನು ಮೈಮುಸೆ ತೋಱಿತ್ತಿಲ್ಲರಿ
ಸೇನೆ ಸೂಸಿದ ಸಕಲ ಶಸ್ತ್ರಾಸ್ತ್ರಪ್ರಹಾರದಲಿ
ಭಾನುಮಂಡಲದಿದಿರಿನಲಿ ತೇ । ಜೋನಿಧಿಯೆ ತಾರಾಳಿ ನೋಡಲು
ಮಾನವನೆ ಮಹದಾದಿ ಮಾಯಾಮಹಿಮ ಹರಿಯೆಂದ ೧೮

ತರುಣ ಕೇಳಚ್ಚರಿಯನಪ್ಸರ । ತರುಣಿಯರ ಕಾಳಗವ ಕಿವಿಗಳು
ಹರಿಯೆ ಕೈಯಿಕ್ಕಿದರು ಹಿಡಿದರು ಹಾಯ್ದು ಮುಂದಲೆಯ
ಬರಸೆಳೆದು ಮೇಲುದನು ಬಾಯ್ಗಳ । ಕರತಳದಲಪ್ಪಳಿಸಿ ಬೊಜಗರ
ಬರಸೆಳೆದು ಬಿಗಿಯಪ್ಪುತಿರ್ದರು ಬೀದಿಗಲಹದಲಿ ೧೯

ಈತನೆನ್ನವನೀತ ತನ್ನವ । ನೀತನನು ವರಿಸಿದೆನು ಮೊದಲಿವ
ಳೀತಜಿವಳು ಶಿಖಂಡಿ ತೊತ್ತಿವಳಾವ ಹೆಣ್ಣವಳು
ಬೂತೆ ಹೋಗೆಲೆ ಲಜ್ಜೆಗೇಡಿಗೆ । ಮಾತು ತನಗೇಕೆನುತ ಬಲ್ಲಿದ
ರೀತಗಳನೆಳದೊಯ್ಯುತಿರ್ದರು ವೀರಭಟರುಗಳ ೨೦

ಅಳಿಯೆ ಸೇನೆ ಸುಪಾರ್ಶ್ವ ದುರ್ಮದ । ರಳವಿಗೊಟ್ಟರು ಶುಕನು ಸಮರಕೆ
ನಿಲುಕಿದನು ಸಾರಣನು ಸೈರಣೆಯಂಬಿನೆಸುಗೆಯಲಿ
ಹಳಚಿದನು ಶಾರ್ದೂಲ ಗರ್ಜಿಸಿ । ಸುಳಿದರಿದಿರಲಿ ಕರೆದರಂಬಿನ
ಮಳೆಯನಿವರಾ ರಾಮ ಸುಮನೋದ್ದಾಮ ಶಿಖರಿಯಲಿ ೨೧

ಬಾಣಗಳ ಬಡಬಾಗ್ನಿಯ ಆಧಿಕ್ಯದಿಂದ ಅದನ್ನು ತಡೆದು ನಿಲ್ಲಿಸಿದನು. ೧೮. ಬಾಣ ವಿದ್ಯೆಯಲ್ಲಿ ಎಂಥ ನಿಪುಣನೋ ರಾಮ ! ಶತ್ರುಸೈನ್ಯವು ಸುರಿಸಿದ ಸಮಸ್ತ ಅಸ್ತ್ರ ಶಸ್ತ್ರಗಳ ಏಟಿನಿಂದ ಅವನ ಮೈಯಲ್ಲಿ ಗಾಯವಾಗಲಿಲ್ಲ. ಸೂರ್ಯಬಿಂಬದ ಎದುರಿನಲ್ಲಿ ನಕ್ಷತ್ರಗಳ ತೇಜಸ್ಸು ನಿಲ್ಲುವುದೇ ! ವಿಚಾರಿಸಿ ನೋಡಿದರೆ ರಾಮನು ಮಾನವನೆ ? ಅವನು ಆದಿಮಾಯಾಮಹಿಮನಾದ ಶ್ರೀಹರಿ ! ಎಂದು ವಾಲ್ಮೀಕಿಗಳು ನುಡಿದರು. ೧೯. ವೀರರನ್ನು ನನಗೆ ತನಗೆಂದು ಬಯಸಿದ ಅಪ್ಸರೆಯರ ಆಶ್ಚರ್ಯಕರವಾದ ಬೀದಿ ಜಗಳವನ್ನು ಕೇಳು ತರುಣ ಕುಶ, ಕಿವಿಗಳು ಕಿತ್ತುಬರುವಂತೆ ಕೈಹಾಕಿ ಎಳೆದರು. ಮುನ್ನುಗ್ಗಿ ಮುಂದಲೆಗಳನ್ನು ಹಿಡಿದುಕೊಂಡರು. ಸೆರಗನ್ನು ಹಿಡಿದೆಳೆದು ಕೈಗಳಿಂದ ಬಾಯಿಗಳ ಮೇಲೆ ಹೊಡೆದರು, ಹೀಗೆ ಜಗಳವಾಡಿ ಅಪ್ಸರೆಯರು ತಮಗೆ ಬೇಕಾದ ವಿಟರನ್ನು ಎಳೆದು ಅಪ್ಪಿಕೊಂಡರು. ೨೦. 'ಇವನು ನನ್ನವನು, ಈತ ತನ್ನವನು, ಈತನನ್ನು ನಾನು ವರಿಸಿದೆ. ಮೊದಲಿನವಳು ಎಂಥವಳು, ಶಿಖಂಡಿ ತೊತ್ತು. ಇವಳು ಯಾವ ಹೆಣ್ಣು ! ಪಿಶಾಚಿ ಹೋಗು. ನಾಚಿಕೆ ಕೆಟ್ಟವಳೊಡನೆ ನನಗೇಕೆ ಮಾತು !' ಎಂದು ಹಂಗಿಸಿ ಸಮರ್ಥೆಯರಾದ ಅಪ್ಸರೆಯರು ತಮಗೆ ಬೇಕಾದ ವೀರಯೋಧರನ್ನು ಎಳೆದು ಕರೆದುಕೊಂಡು ಹೋಗುತ್ತಿದ್ದರು. ೨೧. ಅಸುರಸೈನ್ಯವು ನಾಶವಾಗಲು ಸುಪಾರ್ಶ್ವ ದುರ್ಮದರು ಯುದ್ಧಕೊಟ್ಟರು, ಶುಕನು ಕದನಕ್ಕೆ ನಿಂತನು. ಸಾರಣನು ಸಂಯಮದಿಂದ ಬಾಣಬಿಟ್ಟನು. ಶಾರ್ದೂಲ ಆರ್ಭಟಿಸಿ ರಾಮನನ್ನು ತಾಗಿದನು. ಎದುರಿಗೆ

ಅನಿಬರೊಳು ರಣಗಲಿ ಸುಪಾರ್ಶ್ವಕ । ನನಿಮಿಷರು ಬೆಜಗಾಗೆ ಮಕರಾ
ಕ್ಷನ ಮಹಾಕಲಿ ಕುಂಭಕರ್ಣನ ಕದನಕೌತುಕದ
ಘನತೆಗಿಮ್ಮಿಗಿಲೆನಿಸಿ ಕಾದಿದು । ಕನಸ ಕಂಡನು ಸುರಪುರದ ಬೀ
ಡಿನಲಿ ಮಲಗಿದು ಮಾರಣದ ಲಂಕಾಪುರಾಧಿಪನ ೭೨

ಹತ್ತಿತಾ ತಲೆ ಕೈಯೊಡನೆ ನಭ । ದತ್ತ ದುರ್ಮದನೆಂಬವನು ನಡೆ
ದೆತ್ತ ಹೋದುದೊ ಜೀವವಾ ದೀರ್ಘೋದರಾಸುರನ
ಹತ್ತಿಸಿದ ಹಿಳುಕುಗಳ ಹೊದೆಗಳ । ಲೊತ್ತಬರಿಸಿದರಿದಿರಿನಲಿ ನಗು
ತುತ್ತರಿಸಿದನು ರಾಮನಾ ಮೂವರ ಶರಾಸನವ ೭೩

ಅಂದು ನಮ್ಮ ಮನಜಿಯಲೋಸುಗ । ಬಂದ ಬೇಹಿನ ಭಟರಲಾ ನೀ
ವೆಂದರಹುದೆನೆ ಕೃಪೆಯ ನೋಟದಲಾ ನಿಶಾಟರಿಗೆ
ಎಂದು ನಮಗಿಲ್ಲೆರಡು ನುಡಿ ತಾ । ನೊಂದೆ ತಪ್ಪಿಸಿ ಕಾದು ಕಳುಹಿದೆ
ವಂದು ಹೋಗಿನ್ನೇಕೆ ಕಾಳಗವೆನುತ ಬೀಳ್ಕೊಟ್ಟ ೭೪

ಮೌಳಿಯಲಿ ಸಂಘಟಿತ ಕರಗಳ । ತಾಳಿ ಮೆಲ್ಲನೆ ಸರಿದರಾ ಶಾ
ರ್ದೂಲ ಶುಕ ಸಾರಣರು ಹೊಗಳುತ ರಾಘವೇಶ್ವರನ
ಮೇಲೆ ಕೇಳೈ ಕುಶನೆ ಲಂಕಾ । ಪಾಲನೊಬ್ಬ ನಿಶಾಚರನ ಭೂ
ಪಾಲನನು ಕೊಲಲೆಂದು ಕಳುಹಿದನಸ್ತಮಾನದಲಿ ೭೫

ಬಂದು ನಿಂತ ಈ ಅಸುರವೀರರು ದೇವೋತ್ತಮನಾದ ರಾಮನೆಂಬ ಪರ್ವತಶಿಖರದ ಮೇಲೆ ಬಾಣಗಳ ಮಳೆಗರೆದರು. ೭೨. ಅಸುರರಲ್ಲೆಲ್ಲ ಕದನಕಲಿ ಸುಪಾರ್ಶ್ವ, ದೇವತೆಗಳು ಬೆರಗಾಗುವಂತೆ ಮಕರಾಕ್ಷ, ಮಹಾವೀರ ಕುಂಭಕರ್ಣ ಇವರ ಯುದ್ಧದ ಘನತೆಗೆ ಎರಡರಷ್ಟು ಎನ್ನಿಸುವಂತೆ ಯುದ್ಧಮಾಡಿ ಅಮರಾವತಿಯ ಮನೆಯಲ್ಲಿ ಮಲಗಿ ಕೊಲ್ಲಲ್ಪಟ್ಟ ಲಂಕೇಶ್ವರನ ಕನಸನ್ನು ಕಂಡನು. ೭೩. ಸುಪಾರ್ಶ್ವನ ತಲೆ ಕತ್ತರಿಸಿ ಆಕಾಶಕ್ಕೇರಿತು. ಅವನ ಹಿಂದೆಯೇ ದುರ್ಮದನು ನಡೆದ. ದೀರ್ಘೋದರಾಸುರನ ಜೀವವು ಎಲ್ಲಿ ಹೋಯಿತೋ ! ಎದುರುಗಡೆಯಲ್ಲಿ ಶುಕ, ಸಾರಣ, ಶಾರ್ದೂಲರು ಬಾಣಗಳನ್ನು ಬಿಲ್ಲಿಗೇರಿಸಿ ಮುತ್ತಿದರು. ರಾಮನು ನಗುತ್ತ ಆ ಮೂವರ ಬಿಲ್ಲುಗಳನ್ನು ಕತ್ತರಿಸಿಹಾಕಿದನು. ೭೪. "ಹಿಂದೆ ನಮ್ಮನ್ನು ತಿಳಿದುಕೊಂಡು ಹೋಗಲು ಬಂದ ಗೂಢಾಚಾರರಲ್ಲವೇ ನೀವು ?" ಎಂದು ರಾಮನು ಪ್ರಶ್ನಿಸಿದನು. "ಹೌದು" ಎಂದು ಅವರು ಉತ್ತರ ಕೊಡಲು ಆ ರಾಕ್ಷಸರ ಮೇಲೆ ಕೃಪಾದೃಷ್ಟಿಯನ್ನು ಬೀರಿ "ನಮಗೆ ಎಂದೂ ಎರಡು ಮಾತಿಲ್ಲ ; ಒಂದೇ ಮಾತು. ಅಂದು ನಿಮ್ಮನ್ನು ರಕ್ಷಿಸಿ ಕಳುಹಿಸಿದೆವು. ಹೋಗಿ, ಇನ್ನೇಕೆ ಕಾಳಗ" ಎನ್ನುತ್ತ ರಾಮ ಅವರನ್ನು ಕಳುಹಿಸಿ ಕೊಟ್ಟ. ೭೫. ತಲೆಯ ಮೇಲೆ ಕೈಯಿಟ್ಟುಕೊಂಡು ಶಾರ್ದೂಲ, ಶುಕ, ಸಾರಣರು ರಾಘವೇಶ್ವರನನ್ನು ಹೊಗಳುತ್ತ ಮೆಲ್ಲನೆ ಅಲ್ಲಿಂದ ಹೊರಟುಹೋದರು.

ಆಡಗಿ ಮುಱಿಗೊಂಡಾ ನಿಶಾಚರ । ನಡಗುದಿನಿಹಿಗಳೊಳಗೆ ಮಿಂಚಿನ
ಮಿಡುಕಿನನ್ನೊಲೊಳಹೊಕ್ಕು ಬರುತಿರೆ ಕಂಡು ಹನುಮಂತ
ಘುಡುಘುಡಿಸಿ ಕೋಪದಲಿ ಕೊನೆಯನು । ಹಿಡಿದು ಹೆಮ್ಮರನಿಂದ ಹೊಯ್ದನು
ಹೆಡಕನವನಿಗೆ ಬೀಳೆ ವಿದ್ಯುತ್ಕೇಶಿಯೆಂಬವನ ೭೬

ಘಾಯವೊಂದಱಲಾ ನಿಶಾಟನ । ಬಾಯ ಬಾಗಿಲ ದಾಂಟಿ ಪರಣವು
ಹೋಯಿತಂತಕಪುರಿಗೆ ಹೊಂಪುಳಿಯೋಗೆ ಸುರಕಟಕ
ರಾಯ ತೊರವೆಯ ವೀರ ನರಹರಿ । ವಾಯುಜನ ಕೈವಿಡಿದು ವಾನರ
ರಾಯ ಸೈನ್ಯಸಮೇತ ಶಿಬಿರಕೆ ಬಂದನೊಲವಿನಲಿ ೭೭

ಅನಂತರ ಏನಾಯಿತೆಂಬುದನ್ನು ಕೇಳು ಕುಶ. ಲಂಕಾಧಿಪತಿಯು ರಾಮನನ್ನು ಕೊಲ್ಲಲು ಒಬ್ಬ ರಾಕ್ಷಸನನ್ನು ಹೊತ್ತು ಮುಳುಗಿದ ಸಮಯದಲ್ಲಿ ಕಳುಹಿಸಿದನು. ೭೬. ಆ ರಾಕ್ಷಸನು ರಣಪಿಶಾಚಿಗಳ ನಡುವೆ ತಲೆಮರೆಸಿಕೊಂಡು ಮಿಂಚಿನ ಹೊಳಪಿನಂತೆ ಒಳ ಹೊಕ್ಕು ಬರುತ್ತಿದ್ದನು. ಅವನನ್ನು ನೋಡಿದ ಹನುಮಂತನು ಕೋಪದಿಂದ ಘುಡುಘುಡಿಸುತ್ತ ಕೊಂಬೆಯನ್ನು ಹಿಡಿದುಕೊಂಡು ಭಾರಿ ಮರದಿಂದ ಹೆಕ್ಕತ್ತಿಗೆ ಹೊಡೆಯಲು ವಿದ್ಯುತ್ಕೇಶಿಯೆಂಬ ಆ ಅಸುರನು ಕೆಳಕ್ಕೆ ಬಿದ್ದನು. ೭೭. ಹನುಮಂತನ ಒಂದೇ ಏಟಿಗೆ ಬಾಯಿಯ ಮೂಲಕ ರಾಕ್ಷಸನ ಪ್ರಾಣವು ಯಮಪುರಕ್ಕೆ ಹೊರಟುಹೋಯಿತು, ದೇವತೆಗಳು ರೋಮಾಂಚಗೊಂಡರು. ತೊರವೆಯ ವೀರ ನರಸಿಂಹನ ಅವತಾರಿಯಾದ ಶ್ರೀರಾಮನು ಮಾರುತಿಯ ಕೈಹಿಡಿದುಕೊಂಡು ವಾನರರಾಜ ಸುಗ್ರೀವನ ಸೈನ್ಯದೊಡನೆ ಸಂತೋಷದಿಂದ ಪಾಳಯಕ್ಕೆ ಬಂದನು.

# ನಲವತ್ತಾರನೆಯ ಸಂಧಿ

ಸೂಚನೆ॥ ಸತಿಯ ಮಾತನು ಕೇಳದವನೀ । ಪತಿಯು ಕಲಹಕೆ ಬಂದು ಮೋಹದ
ಸುತ ವಿರೂಪಾಕ್ಷನನು ರಣಕಿಕ್ಕಿದನು ದಶಕಂಠ

ಹೋಗಿ ಹೇಳಿದರಿವರು ಮೂವರು । ತಾಗಿ ತಾವುಳಿದುದನು ಕಾಲನ
ಮಾರ್ಗಣೆಗೆ ಸಂದತುಳಬಲ ದುರ್ಮದ ಸುಪಾರ್ಶ್ವಕರ
ಆಗಲೀ ಬಲವಳಿದುದನು ಜಯ । ದಾಗು ರಾಮಂಗುಳಿದುದನು ಲೇ
ಸಾಗಿ ವಿಸ್ತರಿಸಿದರು ಖಳಕುಲಸಾರ್ವಭೌಮಂಗೆ ೧

ಬೆಱಗು ಬಾರಿಸಿ ಕರದ ಕದಪಿನ । ಹೊಱಿಗೆಯಲಿ ಹೆಂಪಳಿದ ಹೆಮ್ಮೆಯ
ನಿಱಿಗೆಯಲಿ ನಿಜಸಿಂಹಪೀಠವನಿಳಿದು ದುಗುಡದಲಿ
ಹಱಿಹಱಿದು ಕಿಱಿದಾಗಿ ಸಾವಿಗೆ । ತೆಱಪುಗೊಂಡಿಹ ಖಳರ ಕರದಿಂ
ದುಱುಬಿ ಮಂಡೋದರಿಯ ಭವನಕೆ ಬಂದನಸುರೇಂದ್ರ ೨

ಬಾಡಿದಾನನದಳವಳಿದುಯೆಡೆ । ಯಾಡಿ ಬಳಲುವ ಮನದ ಮಾತಿಗೆ
ತೋಡನಿಕ್ಕಿದ ನಾಲಗೆಯ ನಿಡುಸುಯ್ಲಲಸುರೇಂದ್ರ
ನೀಡಿದನು ನಿಜತನುವ ಮಲಗಿನ । ಮೂಡೆಯಲಿ ಬಳಿಕಂಜುತಂಜುತ
ಕೋಡುತಳುಕುತ ಬಂದಳಸುರನ ಬಳಿಗೆ ಮಯತನುಜೆ ೩

ಸೂಚನೆ॥ ಹೆಂಡತಿಯ ಮಾತನ್ನು ಕೇಳದೆ ರಾಮನೊಡನೆ ಯುದ್ಧಕ್ಕೆ ಬಂದ ರಾವಣನು ತನ್ನ ಪ್ರೀತಿಯ ಮಗ ವಿರೂಪಾಕ್ಷನನ್ನು ಯುದ್ಧಕ್ಕೆ ಬಲಿಕೊಟ್ಟನು. ೧. ಶಾರ್ದೂಲ, ಶುಕ, ಸಾರಣರು ರಾವಣನ ಬಳಿಗೆ ಹೋಗಿ ತಾವು ಬದುಕಿಬಂದ ಹಾಗೂ ರಾಮಬಾಣದಿಂದ ಅಸಂಖ್ಯಾತ ಸೈನ್ಯವೂ, ದುರ್ಮದ ಸುಪಾರ್ಶ್ವಕರೂ ಯಮನಿಗೆ ಬಲಿಯಾದ ವಿಚಾರವನ್ನು ತಿಳಿಸಿದರು. ಅಸುರಸೈನ್ಯವು ನಷ್ಟವಾದ ಬಗೆಯನ್ನೂ ಜಯವು ರಾಮನಿಗೆ ಲಭಿಸಿದುದನ್ನೂ ಅವರು ರಾಕ್ಷಸೇಶ್ವರನಿಗೆ ವಿವರಿಸಿದರು. ೨. ದಿಗ್ಭ್ರಮೆಗೊಂಡ ರಾವಣನು ಗಲ್ಲಕ್ಕೆ ಕೈಹಚ್ಚಿ ಘನತೆ ಕಳೆದುಕೊಂಡ ದರ್ಪದಿಂದ ಸಿಂಹಾಸನದಿಂದಿಳಿದುಬಂದನು. ನಾಶವಾಗುತ್ತ ದಿನದಿನಕ್ಕೆ ಕ್ಷೀಣಿಸುತ್ತ ಬಂದು ಸಾವಿಗೆ ಕಾಯುತ್ತಿರುವ ರಾಕ್ಷಸರನ್ನು ಕೈಯಿಂದ ತಳ್ಳಿ ಮಂಡೋದರಿಯ ಅರಮನೆಗೆ ರಾಕ್ಷಸಾಧಿಪ ರಾವಣನು ಬಂದನು. ೩. ಬಾಡಿದ ಮುಖ ಮತ್ತು ಬಳಲಿದ ಮನಸ್ಸುಗಳಿಂದ ಮಾತಿಗೆ ಮಿತಿ ಹಾಕಿದ ನಾಲಗೆಯ ರಾವಣನು ಆಯಾಸದಿಂದ ತೂಗಾಡುತ್ತ ಬಂದು ನಿಟ್ಟುಸಿರು ಬಿಡುತ್ತ ಸುಪ್ಪತ್ತಿಗೆಯಲ್ಲಿ ಮೈಚೆಲ್ಲಿದನು. ಆಗ ಹೆದರುತ್ತ ಅಳುಕುತ್ತ ಅಂಜುತ್ತ ಭಯಪಡುತ್ತ ಮಯಸುತೆ ಮಂಡೋದರಿ ರಾವಣನ ಬಳಿಗೆ

ಬರಲು ಕೈಸನ್ನೆಯಲಿ ಮಂಡೋ । ದರಿಯನೆಡದಲಿ ನಿಲಿಸಿ ಮೂಗಿನ
ಬೆರಳ ಬಿಗುಹಿನ ಮುಗಿಯದೆವೆಗಳ ಕಂಗಳಿಂದಿರಲು
ಅರಸನನುವಱಿದೊಯ್ಯನೊಯ್ಯನೆ । ಧುರದ ಮುಂದಣ ಕಾರ್ಯಕೇನು
ತ್ತರಣವನು ನೀವ್ ಕಂಡಿರೆಂದಳು ರಾಣಿ ರಾವಣನ ೪

ಉತ್ತರಣವೇನಿನ್ನು ಮಱುಗೆನು । ಸತ್ತ ಸೇನೆಗೆ ತನ್ನ ಸಾವಿಗೆ
ಹೆತ್ತ ಮಕ್ಕಳೊಳಧಿಕನಲ್ಲಾ ಮಗ ಸುರೇಂದ್ರಜಿತು
ಬತ್ತಿಗೆಣ್ಣೆಗೆ ಕೂಡಿ ಸರಿಯಾ । ಯಿತ್ತೆನಿಪ ಬಲುಬೇಗೆ ಘನ ಬೇ
ಸತ್ತುದಿಲ್ಲಾಹವಕೆ ಮನ ಮಱುಗುವುದು ಮಗಗೆಂದ ೫

ಹಗೆಯ ಗೆದ್ದೇನಿನ್ನು ಸೀತೆಯ । ಸೊಗಸು ಸಂದೇನಿನ್ನು ಸುರನರ
ಜಗತಿ ಸಾರ್ದೇನಿನ್ನು ತನ್ನಯ ಜೀವವಿದ್ದೇನು
ಮಗನಳಿದ ಬಳಿಕಬಲೆ ಕೇಳ್ಸಂ । ಯುಗವದೇಕಿನ್ನೆಂದು ಚಿಂತೆಯ
ಮೊಗವಡದ ಮಱುಕದಲಿ ಮಱುಗಿದನಾ ದಶಗ್ರೀವ ೬

ಮಱುಗಲೇಕಿನ್ನರಸ ಕೇಳಱಿ । ದಱಿದು ಪರವಧುವಿನಲಿ ಪಾತಕ
ಕುಱಿಸಿ ಮಾರಿಯ ಕರೆದುಕೊಂಡ ಬಳಿಕ್ಕ ಮಾತೇನು
ಅಱಿದು ಮೊದಲಲಿ ಮಾವ ಹೇಳಿದ । ತೆಱನ ಕೆಡಿಸಿದೆ ತಮ್ಮನುಚಿತವ
ನಱಿಯದಾದೆ ತರಳ್ತನವ ಮಾಡಿದೆ ನಿರರ್ಥದಲಿ ೭

ಬಂದಳು. ೪. ರಾವಣನು ಮಂಡೋದರಿಯನ್ನು ಕೈಸನ್ನೆಯಿಂದ ತನ್ನ ಎಡಭಾಗದಲ್ಲಿ ನಿಂತುಕೊಳ್ಳಹೇಳಿ ಮೂಗನ್ನು ಬೆರಳಿನಿಂದ ಹಿಡಿದು ರೆಪ್ಪೆಮುಚ್ಚದ ಕಣ್ಣುಗಳಿಂದಿರಲು ಪತಿಯ ಸ್ಥಿತಿಯನ್ನರಿತ ಮಂಡೋದರಿ ನಿಧಾನವಾಗಿ "ಯುದ್ಧವನ್ನು ಗೆದ್ದು ಪಾರಾಗಲು ಮುಂದಿನ ಕಾರ್ಯಕ್ಕೆ ಏನು ದಾರಿಯನ್ನು ಕಂಡಿರಿ" ಎಂದು ಕೇಳಿದಳು. ೫. "ಇನ್ನು ಪಾರಾಗುವುದೆಂದರೇನು ? ಯುದ್ಧದಲ್ಲಿ ಅಳಿದ ಸೈನ್ಯಕ್ಕಾಗಲಿ ನನ್ನ ಸಾವಿಗಾಗಲಿ ದುಃಖಿಸುವುದಿಲ್ಲ, ಹೆತ್ತ ಮಕ್ಕಳಲ್ಲೆಲ್ಲ ಇಂದ್ರಜಿತು ಶ್ರೇಷ್ಠನಲ್ಲವೇ ? ಬತ್ತಿಗೆ ಎಣ್ಣೆಗೆ ಎರಡಕ್ಕೂ ಸರಿಯಾಯಿತು ಎನ್ನುವ ಅತಿ ತಾಪವಾವರಿಸಿದೆ. ಯುದ್ಧಕ್ಕೆ ಬೇಸರವಿಲ್ಲ, ಮಗನಿಗಾಗಿ ಮನಸ್ಸು ಮರುಗುವುದು." ಎಂದ ರಾವಣ. ೬. "ಶತ್ರುವನ್ನು ಗೆದ್ದು ಇನ್ನು ಏನು ಫಲ ? ಸೀತೆಯ ಸೊಬಗು ಸೇರಿದರೆ ಏನು ಫಲ ? ದೇವ ಮಾನವಲೋಕಗಳು ಇನ್ನು ಕೈವಶವಾದರೆ ಏನು ? ನನ್ನ ಜೀವವಿದ್ದರೆ ತಾನೆ ಏನು ? ಮಗನು ಸತ್ತ ಮೇಲೆ ಇನ್ನು ಯುದ್ಧವೇತಕ್ಕೆ ?" ಎಂದು ಚಿಂತೆ ಮುಸುಕಿದ ರಾವಣನು ತೀವ್ರವಾಗಿ ಶೋಕಿಸಿದನು. ೭. "ಇನ್ನು ಕೊರಗಿ ಏನು ಪ್ರಯೋಜನ. ಅರಸ ಕೇಳು, ಪರಸ್ತ್ರೀಯಲ್ಲಿ ಪಾಪಕಾರ್ಯವನ್ನಾಶಿಸಿ ಮಾರಿಯನ್ನು ಮನೆಗೆ ಕರೆದುಕೊಂಡ ಬಳಿಕ ಇನ್ನು ಹೇಳಿ ತಾನೆ ಏನು ಪ್ರಯೋಜನ. ಹಿಂದೆ ಮಾವ ಮಾರೀಚನು ತಿಳಿದು ಹೇಳಿದುದನ್ನು ಒಪ್ಪಲಿಲ್ಲ. ತಮ್ಮ ವಿಭೀಷಣನು ಹೇಳಿದ ಯೋಗ್ಯಮಾತನ್ನು ತಿಳಿಯದೆಹೋದೆ. ವ್ಯರ್ಥವಾಗಿ ಹುಡುಗಾಟ

ತಾಯ ಮಾತಿನ ನೀತಿ ಕರ್ಣಕೆ । ಸಾಯಕದ ಮೊನೆಯಾಯ್ತು ನಿನ್ನಯ
ತಾಯಿತಂದೆಯ ವಚನವಚಲಿತ ಬೋಧೆ ಬೋಸರದ
ವಾಯುವಿನ ತೆಱನಾಯ್ತು ತಂಗಿಯ । ಮಾಯಕಾತಿಯ ಮಾತು ಕರ್ಣರ
ಸಾಯನವು ನಿನಗಾಯ್ತು ಸಾಕಿನ್ನೇಕೆ ಪರಿತಾಪ ೮

ಹೇಳಲಮ್ಮೆನು ಹೇಳಿದರೆ ನೀ । ಕೇಳುವೆಯೊ ಕೇಳೆಯೊ ಮಹಾ ಮು
ಟ್ಟಾಳವಾಗಿದೆ ನಿನ್ನ ಮಹದೈಶ್ವರ್ಯದಾಯುಷಕೆ
ಹೇಳದಿಹುದನುಚಿತವು ಮಾತನು । ಕೇಳು ಕೇಳದೆ ಮಾಣು ರಾಮನ
ಕಾಲ ಹಿಡಿ ಬಿಡು ಜಾನಕಿಯನಿಹಪರವ ಬಯಸುವಡೆ ೯

ಅಕ್ಷಯದ ಫಲವೊಲಿವಡಂಭೋ । ಜಾಕ್ಷಿಯನು ಬಿಡು ಮಗನಿವ ವಿರೂ
ಪಾಕ್ಷನೊಬ್ಬನೆ ಸಾಕು ಕರೆಸು ವಿಭೀಷಣನ ಮರಳಿ
ರಕ್ಷಿಸೀ ಪಟ್ಟಣವನಾ ಕಮ । ಲಾಕ್ಷನತಿ ಕರುಣಾಳು ನಮ್ಮನು
ಪೇಕ್ಷಿಸನು ಬಳಿಕಿನಿತಱಲಿ ಕೇಳೆಂದಳಾ ಕಾಂತೆ ೧೦

ರಾಮನೀ ಜಗದಯ್ಯನೆಂಬುದು । ಭೂಮಿಯಲಿ ತಾ ಸುಪ್ರಸಿದ್ಧ ಮ
ಹಾಮಹೀಸುತೆ ಲಕ್ಷ್ಮಿಯೆಂಬುದು ಸಕಲ ಜನಜನಿತ
ಆ ಮಗಧತನುಜಾತನಾಭವ । ನಾ ಮಹಾಶೇಷನು ಕಣಾ ರಿಪು
ಭೀಮಬಲ ಮರ್ಕಟರು ಸುರರೆಂದಱಿ ಮನಸ್ಸಿನಲಿ ೧೧

ವಾಡಿದೆ" ಎಂದಳು ಮಂಡೋದರಿ. ೮. "ತಾಯಿ ಹೇಳಿದ ನೀತಿಯ ಮಾತು ನಿಮ್ಮ ಕಿವಿಗಳಿಗೆ ಕತ್ತಿಯ ಮೊನೆಯಾಯಿತು. ನಿಮ್ಮ ತಾಯಿಯ ತಂದೆ ಹೇಳಿದ ಬುದ್ಧಿವಾದವು ಸುಳ್ಳುವಾಯುವಿನ ರೀತಿಯಾಯಿತು. ಮಾಯಕಾತಿಯಾದ ತಂಗಿ ಶೂರ್ಪಣಖಿಯ ಮಾತು ನಿಮಗೆ ಕರ್ಣರಸಾಯನವಾಯಿತು. ಸಾಕು, ಸುಮ್ಮನೆ ಕೊರಗುವುದೇಕೆ ?" ಎಂದಳು ಮಂಡೋದರಿ. ೯. "ಹೇಳಲಾರೆ ; ಹೇಳಿದರೆ ನೀವು ಕೇಳುವಿರೋ ಇಲ್ಲವೋ. ನಿಮ್ಮ ಮಹಾಸಂಪತ್ತೂ ಆಯುಸ್ಸೂ ಕರಗಿಹೋಗುವ ಸ್ಥಿತಿ ಬಂದಿದೆ. ಹೇಳದೆ ಇರುವುದೂ ಉಚಿತವಲ್ಲ. ನೀವು ಕೇಳಿದರೆ ಕೇಳಿ, ಬಿಟ್ಟರೆ ಬಿಡಿ. ನಾನು ಹೇಳುವುದನ್ನು ಹೇಳಲೇಬೇಕು. ಇಹಪರಗಳನ್ನು ಬಯಸುವುದಾದರೆ ಹೋಗಿ ರಾಮನ ಕಾಲನ್ನು ಹಿಡಿಯಿರಿ, ಜಾನಕಿಯನ್ನು ಬಿಟ್ಟುಬಿಡಿ. ೧೦. "ಅಕ್ಷಯಫಲವನ್ನು ಬಯಸುವುದಾದರೆ ಸೀತೆಯನ್ನು ಬಿಟ್ಟುಬಿಡಿ. ಈಗ ಉಳಿದಿರುವ ವಿರೂಪಾಕ್ಷನೊಬ್ಬನೆ ಸಾಕು. ವಿಭೀಷಣನನ್ನು ಪುನಃ ಕರೆಸಿ- ಈ ನಗರವನ್ನು ರಕ್ಷಿಸಿ. ಕಮಲಾಕ್ಷ ರಾಮನು ತುಂಬ ಕರುಣಾಳು. ನಮ್ಮನ್ನು ಉಪೇಕ್ಷಿಸುವುದಿಲ್ಲ" ಎಂದಳು ಮಂಡೋದರಿ. ೧೧. "ರಾಮನು ಈ ಜಗತ್ತಿನ ತಂದೆಯೆಂಬುದು ಭೂಲೋಕದಲ್ಲಿ ಸುಪ್ರಸಿದ್ಧ. ಭೂಮಿಜೆಯ ಲಕ್ಷ್ಮಿ ಎಂಬ ವಿಷಯವು ಸಮಸ್ತ ಜನರಲ್ಲೂ ಹಬ್ಬಿರುವ ವಿಷಯ. ಆ ಮಗಧರಾಜಕುಮಾರಿ ಸುಮಿತ್ರೆಯ ಮಗನು ಆದಿಶೇಷನು ; ಶತ್ರುಭಯಂಕರ ಬಲಶಾಲಿಗಳಾದ ವಾನರರು ದೇವತೆಗಳು ಎಂಬುದನ್ನು ಮನಸ್ಸಿನಲ್ಲಿ ತಿಳಿಯಿರಿ.

ಆದಱಿನೀ ಹದನಱಿದು ಮಱೆಯೊಗು । ವುದೆ ಮಹಾಸುಪ್ರೌಢಿ ನೀ ಬದು
ಕಿದಡೆ ನೆರೆಯದೆ ಪುತ್ರ ಮಿತ್ರ ಕಳತ್ರಸಂದೋಹ
ಹದುಳವಿರದೇ ನಿನ್ನ ಭಾಗ್ಯದ । ವಿದಿತ ವೈಭವ ಬೇಡ ಮೂರ್ಖರ
ಮದದ ಮುಂದಣಗರಸನಾಗದಿರೆಂದಳಾ ಕಾಂತೆ ೧೨

ಹರನ ಬಿಲ್ಲನು ಮುಱಿದು ಸೀತೆಯ । ವರಿಸಿದಂದೇನಱಿಯಬಾರದೆ
ಧುರವಿಜಯ ಮಾರೀಚ ವೀರ ಸುಬಾಹುಯೆಂಬವರ
ಹರಣಗೊಂಡಂದಱಿಯಬಾರದೆ । ಖರ ವಿರಾಧ ತ್ರಿಶಿರ ದೂಷಣ
ರರಿದ ಶಿರಗಳ ಕಂಡು ಕೆಣಕುವುದುಚಿತವೇ ನಿನಗೆ ೧೩

ಸುರರಿಗಲಗಣಸಲ್ಲವೇ ನೀ । ನರಸ ಕೇಳ್ ನಿನ್ನುವನು ಬಾಲದ
ಹುರಿಯ ನೇಣಲಿ ಗೋಣ ಬಿಗಿದಾ ವಾಲಿಯನು ಸುರರ
ತರುಣಿಯರ ತೋಳಿನಲಿ ಮೆಱೆಸಿದ । ಪರಿಯನಱಿಯಾ ಕಾಮುಕತ್ವದ
ಗರವು ಗಾಡಿಸಿತಕಟ ನಿನ್ನುವನೆಂದಳಾ ಕಾಂತೆ ೧೪

ಶರನಿಧಿಯ ಮುನ್ನಾವ ಕಾಲದ । ಲರಸುಗಳು ಕಟ್ಟಿದರು ಮುನ್ನಿನ
ಧರಣಿಪರ ಕದನಕ್ಕೆ ಕೈಗೂಟಕ್ಕೆ ಕೋಡಗದ
ನೆರವಿ ಕೂಡಿದುದಾವ ಮನ್ವಂ । ತರದಲಳಿದವರೆದ್ದು ಲಂಕೆಯ
ನುರಿಗೊಳಿಸಿದವರುಂಟೆ ಲೋಕದೊಳೆಂದಳಾ ಕಾಂತೆ ೧೫

೧೨. ಆದುದರಿಂದ ಈ ವಸ್ತುಸ್ಥಿತಿಯನ್ನರಿತುಕೊಂಡು ಶರಣುಹೋಗುವುದೇ ಬುದ್ಧಿವಂತಿಕೆ. ನೀವು ಬದುಕಿ ಉಳಿದರೆ ನಿಮ್ಮ ಹೆಂಡತಿ ಮಕ್ಕಳು ಸ್ನೇಹಿತರು ಎಲ್ಲರೂ ಬಂದು ನಿಮ್ಮನ್ನು ಸೇರುವರು. ಆಗ ನಿಮ್ಮ ಭಾಗ್ಯದ ವೈಭವವು ಸ್ಪಷ್ಟವಾಗಿ ಉಳಿದುಕೊಳ್ಳುವುದು. ಮದಿಸಿದ ಮೂರ್ಖರ ಮುಖಂಡರಾಗುವುದು ಬೇಡ" ಎಂದಳು ಮಂಡೋದರಿ. ೧೩. "ಶಿವಧನುಸ್ಸನ್ನು ಮುರಿದು ಸೀತೆಯನ್ನು ವರಿಸಿದಂದೇ ಗೊತ್ತಾಗಬಾರದೆ ? ಯುದ್ಧವಿಜಯಿಗಳಾದ ಮಾರೀಚ ಸುಬಾಹು ಎಂಬುವರ ಪ್ರಾಣವನ್ನು ತೆಗೆದುಕೊಂಡಾಗ ತಿಳಿಯಬಾರದೆ ? ಖರ, ವಿರಾಧ, ತ್ರಿಶಿರ, ದೂಷಣರುಗಳ ಕತ್ತರಿಸಿದ ತಲೆಗಳನ್ನು ನೋಡಿಯೂ ನೀವು ರಾಮನನ್ನು ಕೆಣಕುವುದುಚಿತವೇ ? ೧೪. "ಅರಸ, ನೀವು ದೇವತೆಗಳಿಗೆ ಕತ್ತಿಯ ಪೆಟ್ಟಾಗಿರಲಿಲ್ಲವೇ ? ಬಾಲದ ಹಗ್ಗದಿಂದ ನಿಮ್ಮ ಕೊರಳನ್ನು ಬಿಗಿದ ವಾಲಿಯನ್ನು ದೇವಲೋಕದ ತರುಣಿಯರ ತೋಳಿನ ಅಪ್ಪುಗೆಗೆ ಕಳುಹಿಸಿದ ರೀತಿಯನ್ನು ತಿಳಿಯಿರೇ ? ಅಯ್ಯೋ, ಕಾಮುಕತನದ ಗ್ರಹ ನಿಮ್ಮನ್ನು ಬಿಗಿಯಾಗಿ ಹಿಡಿದಿದೆ" ಎಂದಳು ಮಂಡೋದರಿ. ೧೫. "ಹಿಂದೆ ಯಾವ ಕಾಲದಲ್ಲಿ ರಾಜರು ಸಮುದ್ರಕ್ಕೆ ಸೇತುವೆಯನ್ನು ಕಟ್ಟಿದರು ? ಹಿಂದೆ ಯಾವ ಮನುಯುಗದಲ್ಲಿ ರಾಜರ ಯುದ್ಧಕ್ಕೆ ಮತ್ತು ನೆರವಿಗೆ ಕೋತಿಗಳ ಗುಂಪು ಬಂದು ಸೇರಿತು. ಅಲ್ಲದೆ ಯಾವ ಯುಗದಲ್ಲಿ ಸತ್ತವರು ಎದ್ದುಬಂದರು ? ಜಗತ್ತಿನಲ್ಲಿ ಲಂಕೆಗೆ ಬೆಂಕಿ ಹತ್ತಿಸಿದವರುಂಟೆ?"

ಸಾವವನೆ ಕಲಿಕುಂಭಕರ್ಣನ । ದಾವ ವೀರರ ಕೈಯು ಕೊಲುವವ
ನಾವನಮರರೊಳಿಂದ್ರಜಿತುವನು ಮಿಕ್ಕಿನತಿಬಲರ
ಜೀವವಾರಿಗೆ ಸಾಧ್ಯ ಕೇಳು ಕ । ಲಾವಿದನು ನೀನೆಂಬೆ ನಿನ್ನನು
ತೀವಿಕೊಂಡಿದೆ ತೀವ್ರತಾಮಸವೆಂದಳರಸಂಗೆ ೧೬

ಜಗದ ರಕ್ಷಣೆಗಾಗಿ ಹರಿ ಯುಗ । ಯುಗದೊಳವತರಿಸುವನು ಕೊಲುವನು
ಜಗಕೆ ಕಂಟಕರಾದವರನಿದು ವೇದಮಾರ್ಗ ಕಣ
ಮೊಗಸದಿರು ಮೂರ್ಖತೆಯ ಮಾರಿಯ । ಮೊಗಕೆ ನಿಲದಿರು ಮೂಱು ದಿವಸದ
ಹಗರಣಕೆ ಹಱಿಸದಿರು ಗಡ್ಡವನೆಂದಳಾ ಕಾಂತೆ ೧೭

ಮರಳಿ ದೈವಗಳುಂಟು ಜಗಕೆಂ । ದಿರಿಸದಿರು ಚಿತ್ತವನು ಚಿತ್ತಾ
ಕರುಷಣನು ಭಕ್ತರಿಗೆ ಭಾಗ್ಯೋದಯದ ಬೆಳಸು ಕಣ
ಶರಣಜನ ಸಂತತಿಗೆ ಸೌಖ್ಯದ । ಶರಧಿ ದುರ್ಜನ ದುರ್ವಿದಗ್ಧರಿ
ಗರಿವ ಮೂಗಿನ ಕತ್ತಿ ಕೇಳೆಂದಳು ನಿಜೇಶಂಗೆ ೧೮

ಬಲಿಗೆ ಬಲ್ಲಿದರಾರು ತಮನಿಂ । ದಳವ ಮೆಱೆದವರಾರು ಮಧುವಿನ
ಕಲಹದಲಿ ಕೈಮಿಗುವರಾರೀ ವರ್ತಮಾನದಲಿ
ಕಲಿ ಹಿರಣ್ಯಾಕ್ಷಕ ಹಿರಣ್ಯಕ । ರೊಳಗೆ ಸೆಣಸುವರಾರು ಜೀವದ
ಲುಳಿದರೇ ಹಗೆಗೊಂಡು ಹರಿಯೊಡನೆಂದಳಾ ಕಾಂತೆ ೧೯

ಎಂದಳು ಮಂಡೋದರಿ. ೧೬. "ಕಲಿ ಕುಂಭಕರ್ಣನು ಸಾಯುವಂಥವನೇ ? ದೇವತೆ ಗಳಲ್ಲಿ ವೀರ ಇಂದ್ರಜಿತುವನ್ನು ಕೈಯಿಂದ ಕೊಲ್ಲುವವನಾವನು ? ಉಳಿದ ಮಹಾಬಲ ಶಾಲಿಗಳ ಜೀವಗಳನ್ನು ತೆಗೆಯಲು ಯಾರಿಗೆ ಸಾಧ್ಯ ? ನೀವು ಜಾಣರು. ಆದರೂ ನಿಮ್ಮನ್ನು ಅಜ್ಞಾನದ ಕತ್ತಲೆಯಾವರಿಸಿದೆ. ೧೭. ಜಗತ್ತನ್ನು ರಕ್ಷಿಸುವುದಕ್ಕೋಸ್ಕರ ಯುಗ ಯುಗದಲ್ಲಿಯೂ ವಿಷ್ಣು ಅವತರಿಸುವನು ; ಜಗತ್ತಿಗೆ ಮುಳ್ಳಾದವರನ್ನು ಕೊಲ್ಲು ವನು. ಇದು ವೇದಮಾರ್ಗ. ಮೂರ್ಖತೆಯನ್ನು ಬಯಸಬೇಡಿ. ಮಾರಿಯ ಬಾಯೆದು ರಿಗೆ ನಿಲ್ಲದಿರಿ. ಮೂರು ದಿವಸದ ನಾಟಕಕ್ಕಾಗಿ ಗಡ್ಡವನ್ನು ಬೋಳಿಸಬೇಡಿ" ಎಂದಳು ಮಂಡೋದರಿ. ೧೮. "ಜಗತ್ತಿನಲ್ಲಿ ಅನ್ಯದೈವವುಂಟೆಂದು ಭಾವಿಸಬೇಡಿ. ಭಕ್ತರ ಮನಸ್ಸನ್ನು ಆಕರ್ಷಿಸುವವನೂ, ಭಕ್ತರ ಭಾಗ್ಯೋದಯದ ಬೆಳೆಯೂ ಅವನೇ. ಭಕ್ತ ಸಮೂಹಕ್ಕೆ ಸೌಖ್ಯಸಾಗರ ಅವನು. ದುಷ್ಟರ ಮತ್ತು ಮೂರ್ಖರ ಮೂಗನ್ನು ಕತ್ತರಿ ಸುವ ಖಡ್ಗ" ಎಂದು ಮಂಡೋದರಿ ತನ್ನ ಪತಿಗೆ ಹೇಳಿದಳು. ೧೯. "ಬಲಿಚಕ್ರವರ್ತಿ ಗಿಂತಲೂ ಸಮರ್ಥರು ಯಾರು ? ತಮಾಸುರನಿಗಿಂತ ಹೆಚ್ಚು ಬಲವನ್ನು ಮೆರೆದವರು ಯಾರಿದ್ದಾರೆ. ಮಧುರಾಕ್ಷಸನನ್ನು ಕಾಳಗದಲ್ಲಿ ಮೀರಿಸುವವರು ಈ ಕಾಲದಲ್ಲಿ ಯಾರಾ ದರೂ ಇದ್ದಾರೆಯೆ ? ಹಿರಣ್ಯಾಕ್ಷ ಹಿರಣ್ಯಕಶಿಪು ಇವರೊಡನೆ ಹೋರಾಡುವವರಾರಿ ದ್ದರು ? ಇವರುಗಳು ವಿಷ್ಣುವಿನೊಡನೆ ದ್ವೇಷಕಟ್ಟಿಕೊಂಡು ಜೀವದಿಂದ ಉಳಿದರೆ ?"

ಕೊಂದವರ ತೋಱು ಹಿರಣ್ಯಕ । ನಂದನನ ಮಱೆಯೊಕ್ಕ ಧ್ರುವನ ಪು
ರಂದರನಪೌತ್ರನ ಗಜೇಂದ್ರನ ಕಲಿವಿಭೀಷಣನ
ಇಂದು ನೀ ಹಗೆತನವ ಸಾಧಿಸಿ । ನಿಂದಿರಲು ಸಾಮರ್ಥ್ಯವೇ ಬಿಡು
ಮಂದಮತಿಯನುಭವವ ಮಱೆಯೊಗು ರಾಘವೇಶ್ವರನ ೨೦

ಕೇಳು ಮಂಡೋದರಿ ವಿಚಾರಿಸಿ । ಖೂಳನನು ಮಾಡೆನ್ನ ಜನ್ಮಗ
ಳೇಳನೊಲ್ಲದೆ ಬಂದೆವಾವ್ ಜನ್ಮತ್ರಯಂಗಳಲಿ
ಹೇಳಿಕೆಯಲಿನ್ನೊಂದು ಜನ್ಮದ । ಪಾಳಯವು ನಮಗುಂಟು ಕಳೆದರೆ
ಮೇಲೆ ಜಗದೊಳಗುತ್ತಮದ ಜಯ ವಿಜಯರಾವೆಂದ ೨೧

ಬಲ್ಲೆನೀ ರಘುನಾಥ ಲಕ್ಷ್ಮೀ । ವಲ್ಲಭನು ತಾನೆಂಬುದನು ನಾ
ಬಲ್ಲೆನವನಿಜೆ ಲಕ್ಷ್ಮಿಯೆಂಬುದನಾಹವಕೆ ನೆಱೆದ
ಭಲ್ಲುಕರು ಮರ್ಕಟರು ಸುರರೆಂ । ದೆಲ್ಲವೇತಕೆ ಕೇಳು ರಣಮುಖ
ದಲ್ಲಿ ರಾಮನ ಕೂಡುವುದು ಸಂಕಲ್ಪ ತನಗೆಂದ ೨೨

ಕಡೆಯ ಮಾತಿದು ನೀನು ಬೇಱೆ । ನ್ನೊಡಬಡಿಸಬೇಡೆನ್ನ ಹಿಂದಕೆ
ನಡೆದ ಕೆಲಸವಿದೆನ್ನ ಹಿಪ್ಪೆಯಮಾಡಿ ಹಿಂಡದಿರು
ತಡೆಯಬೇಡಿನ್ನೆನುತ ತರುಣಿಯ । ಮುಡಿಯನುಗುರಲಿ ತಿದ್ದಿ ಕಣ್ಣಲಿ
ಜಡಿವ ನೀರ್ಗಳನೊರಸಿ ನಂಬಿಸಿ ಕಳೆದನಾ ದಿನವ ೨೩

ಎಂದು ಕೇಳಿದಳು ಮಂಡೋದರಿ. ೨೦. "ಹಿರಣ್ಯಕಶಿಪುವಿನ ಮಗ ಪ್ರಹ್ಲಾದ, ಶರಣು ಬಂದ ಧ್ರುವ, ಇಂದ್ರನ ಮೊಮ್ಮಗ ಅರ್ಜುನ, ಗಜೇಂದ್ರ, ವಿಭೀಷಣ–ಇವರುಗಳನ್ನು ಕೊಂದವರನ್ನು ತೋರಿಸಿ. ಈಗ ನೀವು ಹಗೆತನವನ್ನು ಸಾಧಿಸಿ ನಿಂತರೆ ನಿಮ್ಮ ಶಕ್ತಿಯಲ್ಲಿದೆಯೇ ಗೆಲ್ಲುವುದು ? ಮಂದಬುದ್ಧಿಯನ್ನು ತ್ಯಜಿಸಿ ರಾಘವೇಶ್ವರನ ಶರಣು ಹೋಗಿ." ಎಂದು ಮಂಡೋದರಿ ಬುದ್ಧಿ ಹೇಳಿದಳು. ೨೧. "ಮಂಡೋದರಿ, ವಿಚಾರ ಮಾಡಿ ನನ್ನನ್ನು ಮೂರ್ಖನನ್ನಾಗಿ ಮಾಡು. ಹರಿಭಕ್ತರ ಏಳು ಜನ್ಮಗಳನ್ನೊಲ್ಲದೆ ಹರಿವಿರೋಧಿಗಳಾದ ಮೂರು ಜನ್ಮಗಳನ್ನು ಪಡೆದುಬಂದೆವು. ಮೂರು ಜನ್ಮಗಳಲ್ಲಿ ಇನ್ನೊಂದು ಜನ್ಮದ ಸರದಿಯುಂಟು. ಆ ಜನ್ಮವನ್ನು ಕಳೆದ ಬಳಿಕ ಪುನಃ ನಾವು ಜಗತ್ ಶ್ರೇಷ್ಠರಾದ ಜಯ ವಿಜಯರೇ ಆಗುತ್ತೇವೆ" ಎಂದು ರಾವಣ ಹೇಳಿದ. ೨೨. "ಈ ರಘುನಾಥನು ಲಕ್ಷ್ಮೀಪತಿಯೆಂಬುದನ್ನು ಬಲ್ಲೆ, ಸೀತೆ ಲಕ್ಷ್ಮಿಯೆಂಬುದನ್ನೂ ನಾ ಬಲ್ಲೆ. ಯುದ್ಧಕ್ಕೆ ಬಂದಿರುವ ಕರಡಿಗಳು ವಾನರರು ದೇವತೆಗಳೆಂಬುದು ಗೊತ್ತು. ಈ ಮಾತೆಲ್ಲ ಏತಕ್ಕೆ. ಕೇಳು ಮಂಡೋದರಿ; ಯುದ್ಧದ ಮೂಲಕ ರಾಮನನ್ನು ಸೇರಿಕೊಳ್ಳುವುದು ನನ್ನ ನಿಶ್ಚಯ" ಎಂದ ರಾವಣ. ೨೩. "ಇದೇ ನನ್ನ ಕೊನೆಯ ಮಾತು. ಇನ್ನು ನೀನು ಬೇರೆಯ ನಿರ್ಣಯಕ್ಕೆ ನನ್ನನ್ನು ಒಪ್ಪಿಸಬೇಡ. ಇದೆಲ್ಲ ಹಿಂದೆ ನಡೆದುಹೋದ ಕಾರ್ಯ. ಇದಕ್ಕಾಗಿ ನನ್ನನ್ನು ಹಿಂಡಿ ಹಿಪ್ಪೆಮಾಡಬೇಡ. ಇನ್ನು ನನ್ನನ್ನು ತಡೆಯಬೇಡ" ಎಂದು ನುಡಿದು ರಾವಣನು ಮಂಡೋದರಿಯ ತಲೆಗೂದಲನ್ನು ಉಗುರಿನಿಂದ ತಿದ್ದಿ, ಅವಳ

ಉದಯದಿಂದೊಳಗೆದ್ದು ಶೂಲಿಯ । ಪದವನೇಕಾಗ್ರದ ಮನೋಭಾ
ವದಲಿ ಭಜಿಸಿ ರಣೋತ್ಸವದ ಸುಮ್ಮಾನದುಬ್ಬಿನಲಿ
ಪದಕ ಕುಂಡಲ ಮಕುಟ ಕಟಕಾಂ । ಗದ ಕಡೆಯ ಪೆಂಡೆಯದ ಹಾರದ
ಸದಮಳಾಭರಣದಲಿ ಶೋಭಿಸಿದನು ದಶಗ್ರೀವ ೨೪

ಧೂಪಿಸಿದ ದಿವ್ಯಾಂಬರವನನು । ಲೇಪನಾದಿಯ ಪರಿಮಳಿಪ ಮಾ
ಲಾಪರಿಗ್ರಹನಾಗಿ ಕೈಯಲಿ ವೀರಕಂಕಣವ
ಸ್ಥಾಪನಂಗೈದಮರವಂದಿಜ । ನೋಪಚಾರದ ಬಿರಿದುಗಳ ಸ
ಲ್ಲಾಪದಲಿ ಸಭೆಗಾಗಿ ಬಂದನು ಸುಭಟಜನ ಸಹಿತ ೨೫

ಕರೆಸಿದನು ಭಂಡಾರಿಗಳನಾ । ಹರಿ ಹುತಾಶನ ಯಮ ನಿಶಾಚರ
ವರುಣ ವಾಯು ಕುಬೇರ ಶಂಕರರಿತ್ತ ಕಪ್ಪಗಳ
ಹಿರಿದು ಕಾಲದ ಹಳೆಯ ಟಂಕದ । ಪರಿಪರಿಯ ನಾಣ್ಯವನೆಲ್ಲವ
ತರಿಸಿ ಸೂಸಿದನಖಿಳ ಯಾಚಕಜನದ ಸಂದಣಿಗೆ ೨೬

ಹೊರಿಸಿ ಸುಭಟರ ಸತಿ ಸುತರ ಮಂ । ದಿರಗಳಿಗೆ ಕಳುಹಿದನು ನಗರದ
ಪರದ ಹಾರುವ ಬಿನುಗು ಬಿಚ್ಚಟಿ ಬಡವು ಬಗ್ಗುಗಳ
ಕರೆಕರೆದು ಕೈಹಾರದಲಿ ಮನ । ವೆರಸಿ ಸೂಱೆಯ ಬಿಟ್ಟು ತೆರಿಗೆಯ
ಬರಹಗಳ ನೆಱೆ ತೊಡಿಸಿ ಸಂತಸವಡಿಸಿದನು ಜನವ ೨೭

ಕಣ್ಣುಗಳಿಂದ ಹೊರಟ ನೀರನ್ನು ಒರೆಸಿ, ಅವಳನ್ನು ನಂಬಿಸಿ ಆ ದಿವಸವನ್ನು ಕಳೆದ. ೨೪. ಹೊತ್ತು ಹುಟ್ಟುವುದಕ್ಕೆ ಮೊದಲೇ ಎದ್ದು ರಾವಣನು ಶಿವನಪಾದಗಳನ್ನು ಒಂದೇ ಮನಸ್ಸಿನ ಶುದ್ಧ ಭಕ್ತಿಭಾವದಿಂದ ಪೂಜಿಸಿದನು. ಬಳಿಕ ಯುದ್ಧಕ್ಕೆ ಹೊರಡುವ ಉತ್ಸಾಹದ ಆನಂದದಿಂದ ರಾವಣನು ಪದಕ, ಕುಂಡಲ, ಕಿರೀಟ, ಬಳೆ, ತೋಳಿನಬಳೆ, ಕಾಲ್ಕಡಗ, ಬಿರುದಿನ ಬಳೆ–ಮೊದಲಾದ ಆಭರಣಗಳನ್ನು ಅಲಂಕರಿಸಿಕೊಂಡನು. ೨೫. ಸುವಾಸಿತ ದಿವ್ಯವಸ್ತ್ರಗಳನ್ನು ಧರಿಸಿ ಸುಗಂಧದ್ರವ್ಯಗಳನ್ನು ಪೂಸಿ ಪರಿಮಳ ಬೀರುವ ಹೂವಿನ ಹಾರವನ್ನು ಹಾಕಿಕೊಂಡು ರಾವಣನು ಕೈಗೆ ವೀರಕಂಕಣ ಕಟ್ಟಿಕೊಂಡನು. ದೇವಲೋಕದ ಹೊಗಳುಭಟರು ಹೊಗಳುತ್ತಿದ್ದ ಬಿರುದಾವಳಿಗಳನ್ನು ಸ್ವೀಕರಿಸುತ್ತ ಜತೆಯಲ್ಲಿದ್ದವರೊಡನೆ ಸರಸವಾಗಿ ಮಾತನಾಡುತ್ತ ವೀರಯೋಧರೊಡನೆ ಸಭೆಗೆ ಬಂದನು. ೨೬. ರಾವಣನು ಭಂಡಾರಿಗಳನ್ನು ಕರೆಸಿ ದೇವೇಂದ್ರ, ಅಗ್ನಿ, ಯಮ, ವರುಣ, ವಾಯು, ಕುಬೇರ, ನೈರ್ಋತಿ, ಶಂಕರರು ಕೊಟ್ಟಿದ್ದ ಕಪ್ಪಗಳನ್ನೂ ಬಹಳಕಾಲದಿಂದಿದ್ದ ಹಳೆಯ ಮುದ್ರೆಯ ನಾಣ್ಯಗಳನ್ನೂ ತರಿಸಿ ಭಿಕ್ಷುಕ ಜನಸಮೂಹಕ್ಕೆ ಎಸೆದನು. ೨೭. ಯೋಧರ ಹೆಂಡತಿ ಮಕ್ಕಳ ಮನೆಗಳಿಗೆ ದಿವ್ಯಾಭರಣ ಮೊದಲಾದುವನ್ನು ರಾವಣನು ಹೊರಿಸಿ ಕಳುಹಿಸಿದನು. ನಗರದ ವರ್ತಕ, ಬ್ರಾಹ್ಮಣ, ಕೀಳುಮನುಷ್ಯರು, ಭಿಕ್ಷುಕರು ಮತ್ತು ಬಡಬಗ್ಗರನ್ನು ಕರೆಕರೆದು ಉದಾರ ಮನಸ್ಸಿನಿಂದ ಅವರೇ ಬೇಕಾದಷ್ಟನ್ನು ತೆಗೆದುಕೊಳ್ಳುವಂತೆ ಹೇಳಿ ಅವರಿಗೆ ತೆರಿಗೆಯಿಂದ ಮುಕ್ತಗೊಳಿಸಿದ ಬರೆಹಗಳನ್ನು ಕೊಡಿಸಿ

ಸೆಱೆವನೆಯೊಳಿರ್ದಖಿಳ ದಾನವ । ಸುರನರೋರಗಜನವ ಮನ್ನಿಸಿ
ಪೊಱವಡಿಸಿದನು ಪುರವನಾಪ್ತರ ಬಂಧುವರ್ಗಗಳ
ಕರೆದು ರಣದೊಳಗಳಿದೆನಾದರೆ । ವರ ವಿಭೀಷಣದೇವನನು ಪರಿ
ಚರಿಯದಿಂದುಪಚರಿಸಿಕೊಂಡಿಹುದೆಂದು ನೇಮಿಸಿದ ೨೮

ಬಳಿಕ ತನ್ನಯ ಬಳಿಯ ಬಹ ರಣ । ಗಲಿಗಳನು ವಿಂಗಡಿಸಿದನು ಕೊಳು
ಗುಳಕೆ ನಿಲುವ ಮತಂಗಜವನುತ್ತಮದ ತೇಜಿಗಳ
ಹೊಳೆವ ಹೊಂದೇರುಗಳ ರಥಿಕಾ । ವಳಿಯ ರಾವ್ತರ ಜೋದರನು ಬಗೆ
ಗೊಳಿಸಿ ಬಲುಗೈದುಗಳನನಿಬರಿಗಿತ್ತು ಮನ್ನಿಸಿದ ೨೯

ನಿಯುತಮತಿ ಕುಶ ಕೇಳು ರಣದೀ । ಕ್ಷೆಯನು ಕೈಕೊಂಡಮರರಿಪು ನಿ
ರ್ಭಯ ಮನೋಭಾವದಲಿ ಬಂದೇಱಿದನು ಮಣಿರಥವ
ನಯವಿದನೆ ಲವ ಕೇಳು ಬಂದಳು । ಮಯನಸುತೆ ಮಣಿಭೂಷಣದ ಕೆಳ
ದಿಯರ ಕರ್ಪೂರದಾರತಿಯ ಕೆಂಜೊಡರ ಸೊಂಪಿನಲಿ ೩೦

ಹರಸಿ ಮುತ್ತಿನ ಸೇಸೆಯನು ದಶ । ಶಿರನ ಶಿರದಲಿ ತಳಿದು ಹಣೆಯಲಿ
ಧುರವ ಜಯಿಸೆಂದಿಟ್ಟಳಕ್ಷತೆಯನು ಸುಕುಂಕುಮದ
ತಿರುಹಿ ಕರ್ಪೂರದಾರತಿಯನು । ಪ್ಪರದ ಬಳುವೆಯ ಬಿಸುಟು ದುಗುಡವ
ಧರಿಸಿ ಮುರಿದಳು ಮಂದಿರಕೆ ಮಾನಿನಿಯ:ರೊಗ್ಗಿನಲಿ ೩೧

ಸಂತೋಷಪಡಿಸಿದನು. ೨೮. ಸೆರೆಮನೆಯಲ್ಲಿ ಬಂಧಿತರಾಗಿದ್ದ ಸಮಸ್ತ ರಾಕ್ಷಸರು, ದೇವತೆಗಳು, ಮಾನವರು ಮತ್ತು ನಾಗರುಗಳನ್ನು ಮನ್ನಿಸಿ ಸೆರೆಯಿಂದ ಬಿಡುಗಡೆಮಾಡಿ ನಗರದಿಂದ ಕಳುಹಿಸಿದನು. ಆಪ್ತರನ್ನೂ ಬಂಧುಗಳನ್ನೂ ಕರೆದು 'ಯುದ್ಧದಲ್ಲಿ ನಾನು ಸತ್ತರೆ ವಿಭೀಷಣದೇವನನ್ನು ಸತ್ಕರಿಸಿ ಅವನ ಸೇವೆ ಸಲ್ಲಿಸುತ್ತಿರಬೇಕು' ಎಂದು ರಾವಣನು ಅಪ್ಪಣೆಮಾಡಿದನು. ೨೯. ಅನಂತರ ರಾವಣನು ತನ್ನ ಜತೆಯಲ್ಲಿ ಬರುವ ರಣಗಲಿಗಳನ್ನು ವಿಂಗಡಿಸಿದನು. ಯುದ್ಧಕ್ಕೆ ನಿಲ್ಲುವ ಆನೆಗಳು, ಉತ್ತಮವಾದ ಕುದುರೆಗಳು ಮತ್ತು ಹೊಳೆಯುವ ಚಿನ್ನದ ರಥಗಳನ್ನೂ ರಥಿಕರು, ರಾವುತರು ಮತ್ತು ಯೋಧರುಗಳನ್ನೂ ವೀಕ್ಷಿಸಿ ಹೇರಳವಾಗಿ ಉತ್ಕೃಷ್ಟ ಆಯುಧಗಳನ್ನು ಎಲ್ಲರಿಗೂ ಕೊಟ್ಟು ಅವರನ್ನು ಮನ್ನಿಸಿದನು. ೩೦. ಸ್ಥಿರಬುದ್ಧಿಯ ಕುಶ, ಕೇಳು. ರಣದೀಕ್ಷೆಯನ್ನು ಕೈಕೊಂಡ ರಾವಣನು ನಿರ್ಭೀತ ಭಾವದಿಂದ ರತ್ನರಥವನ್ನು ಹತ್ತಿದನು. ನೀತಿವಂತ ಲವ, ಕೇಳು. ಕರ್ಪೂರದಾರತಿಯನ್ನೂ ದೀಪಗಳನ್ನೂ ಹಿಡಿದ ದಿವ್ಯಾಭರಣಗಳನ್ನು ಧರಿಸಿದ ಸಖಿಯರ ಜತೆಯಲ್ಲಿ ಮಯನ ಮಗಳು ಮಂಡೋದರಿ ಬಂದಳು. ೩೧. ಮಂಡೋದರಿ ಹರಸಿ ಮುತ್ತಿನ ಅಕ್ಷತೆಯನ್ನು ರಾವಣನ ತಲೆಯ ಮೇಲೆ ತಳಿದಳು ; ಯುದ್ಧವನ್ನು ಜಯಿಸು ಎಂದು ಕುಂಕುಮಾಕ್ಷತೆಯನ್ನು ಹಣೆಗಿಟ್ಟಳು. ಕರ್ಪೂರದಾರತಿಯನ್ನು ಎತ್ತಿ ದೃಷ್ಟಿತೆಗೆದು ನಿವಾಳಿಯನ್ನೆಸೆದು ದುಃಖ ಹೊತ್ತ ಮಂಡೋದರಿ

ವಸುಮತೀಪತಿಸೂನು ಕೇಳಳಿ । ದಸುರರಲ್ಲದೆ ಕೂಡಿದುದು ತೆ
ಕ್ಕಿಸಲಿಕಷ್ಟಾದಶ ಮಹಾಕ್ಷೋಹಿಣಿಯು ಬಲ ಬಳಿಕ
ಕೊಸರುಗಹಳೆಯು ಕೊಂಬು ಚಂಬಕ । ದುಸುರಿನುಬ್ಬರಕಬುಜಜಾಂಡದ
ಬಸುಱು ಬಿಱಿಯಲು ಬಂದು ಹೊಕ್ಕರು ಕಾಳಗದ ಕಳನ ೩೨

ಸಾಱಿದವು ಕಹಳೆಗಳು ಸುರಕುಲ । ಸೂಱೆಕಾಱನ ಸುಪ್ರತಾಪನ
ಮೂಱುಲೋಕದ ಗಂಡನಾಹವಚಂಡವಿಕ್ರಮನ
ಮಾಱುಮಲೆವರಿಭಟರ ಜೀವವ । ತೂಱಿ ಬಿಸುಡುವ ಭೀಮಬಲ ಕೊಲೆ
ಗಾಱ ರಕ್ಕಸರಾಯ ವೀರನ ತೋಟಿ ಬೇಡೆನುತ ೩೩

ಸುರಪನಸುದಲ್ಲಣನ ವೈಶ್ವಾ । ನರನ ಹೃಚ್ಛೂಲನ ಕೃತಾಂತನ
ಶಿರವಿದಳನ ಗದಾದಿಘಾತನ ನಿರುತಿ ನಿರ್ಭಯನ
ವರುಣಖಂಡನ ಮಂಡಲಾಗ್ರನ । ಮರುತಘೋರನ ಧನಪನಖಿಳೈ
ಶ್ವರಿಯ ಸರ್ವಸ್ವಾಪಹಾರನ ತೋಟಿ ಬೇಡೆನುತ ೩೪

ಕೈಟಭಾರಿಯ ಸತಿಯ ತಂದನ । ತೋಟಿ ಸುಖವಲ್ಲಮಮ ಹಿಮಕರ
ಜೂಟನದ್ರಿಯ ಕಿತ್ತವನ ಜಜ್ಝಾರ ಲೇಸಲ್ಲ
ನಾಟಿಸುವ ಜಗದವನನಣುವಿಗೆ । ಪಾಟಮಾಡದ ಸುಪ್ರಸಿದ್ಧನ
ಘಾಟರಣ ಸುಖವಲ್ಲನುತಲೊದಱಿದವು ಕಹಳೆಗಳು ೩೫

ಕೆಳದಿಯರ ಬಳಸಿನಲ್ಲಿ ತನ್ನ ಅರಮನೆಗೆ ಹಿಂದಿರುಗಿದಳು. ೩೨. ರಾಜಕುಮಾರ, ಕೇಳು: ಯುದ್ಧದಲ್ಲಿ ನಾಶವಾದ ರಾಕ್ಷಸಸೈನಿಕರನ್ನು ಬಿಟ್ಟೂಕೂಡ ಹದಿನೆಂಟು ಅಕ್ಷೋಹಿಣಿ ಸೈನ್ಯವು ಬಂದು ಸೇರಿತು. ಭೋರಿಡುವ ಕಹಳೆ, ಕೊಂಬು, ಚಂಬಕಗಳ ಭೋರ್ಗರೆತಕ್ಕೆ ಬ್ರಹ್ಮಾಂಡದ ಹೊಟ್ಟೆ ಬಿರಿಯಲು ರಾವಣನು ಸೈನ್ಯದೊಡನೆ ರಣರಂಗವನ್ನು ಹೊಕ್ಕನು. ೩೩. 'ಸುರಕುಲಸೂರೆಕಾರ, ಸುಪ್ರತಾಪ, ಮೂರುಲೋಕದ ಗಂಡ, ಯುದ್ಧಪ್ರಚಂಡ, ಪ್ರತಿಭಟಿಸುವ ಶತ್ರುಯೋಧರ ಜೀವಗಳನ್ನು ತೂರಿಬಿಡುವ ಭಯಂಕರ ಬಲಶಾಲಿ ಕೊಲೆಗಾರ ರಾಕ್ಷಸರಾಜನೊಡನೆ ಯುದ್ಧಬೇಡ' ಎನ್ನುತ್ತ ಕಹಳೆಗಳು ಸಾರಿದವು. ೩೪. ದೇವೇಂದ್ರನ ಪ್ರಾಣವನ್ನು ನಡುಗಿಸಿದ, ಅಗ್ನಿಯ ಎದೆಗೆ ಶೂಲವಾದ, ಯಮನ ತಲೆಯನ್ನು ಸೀಳಿದ, ನಿರ್ಭಯನಾದ ನಿರ್ಋತಿಯನ್ನು ಗದೆಯಿಂದ ಹೊಡೆದ, ವರುಣನನ್ನು ಕತ್ತಿಯಿಂದ ಕತ್ತರಿಸಿದ, ಮರುತ ಮತ್ತು ಕುಬೇರರ ಸಕಲೈಶ್ವರ್ಯವನ್ನೂ ಅಪಹರಿಸಿದ ರಾವಣನ ಮೇಲೆ ಯುದ್ಧ ಬೇಡ—ಎನ್ನುತ್ತ ಕಹಳೆಗಳು ಸಾರಿ ಹೇಳಿದವು. ೩೫. ವಿಷ್ಣುಸತಿಯನ್ನು ತಂದವನೊಡನೆ ಕಾಳಗವು ಸುಖವಲ್ಲ; ಚಂದ್ರಶೇಖರನ ಕೈಲಾಸವನ್ನು ಕಿತ್ತವನೊಡನೆ ಕದನ ಒಳ್ಳೆಯದಲ್ಲ. ಜಗತ್ಸೃಷ್ಟಿಮಾಡುವವನನ್ನು ಅಣುವಿಗೂ ಸಮಾನವಾಗಿ ಲಕ್ಷಿಸದ ಸುಪ್ರಸಿದ್ಧನೊಡನೆ ಅದ್ಭುತರಣವು ಹಿತವಲ್ಲ—ಎನ್ನುತ್ತ ಕಹಳೆ

ಒದಱುತಿರ್ದವು ಕಹಳೆಗಳು ತೃಣ । ಕದನು ತಾರದೆ ತರಣಿಸುತ ರಣ
ಕಭಟರನು ನಿಂದಿರಿಸಿದನು ತುದಿವಾಲದೊವ್ಮೊಳಕೆ
ತ್ರಿದಶಲೋಕಕೆ ಬಿಜೆಯುವೆನಲಾ । ತ್ರಿದಶಶೈಲಸಮಾನರನು ಕೈ
ದುದಿಯ ಗಿರಿಕೂಟಗಳ ಗರ್ವಿತ ವೀರಭಟರುಗಳ ೩೬

ಬಂದನಾಹವಕಾ ದಶಾನನ । ನೆಂದು ಕೇಳಿದು ಕರುಣದುಬ್ಬಿನ
ಮಂದಹಾಸದ ರಣದ ಲವಲವಿಕೆಯ ಮಹೋತ್ಸವದ
ಸಂದಣಿಯ ಸೌರಂಭದಮರರಿ । ವೃಂದವನು ಜಾಂಬವ ವಿಭೀಷಣ
ರಿಂದ ಹೊಗಳಿಸಿಕೊಳುತ ಹೊಕ್ಕನು ಪಗೆಯ ರಣಕಾಗಿ ೩೭

ಅತ್ತಲಾ ಸುರವೈರಿ ಮುತ್ತಿನ । ಸತ್ತಿಗೆಯ ನೆಳಲಿನಲಿ ಕೈಗಳ
ನೆತ್ತಿ ಗರ್ಜಿಪ ಕುಪಿತ ಕಂಠೀರವನ ಪಳವಿಗೆಯ
ನರ್ತಿಸುವ ರಥವಾಜಿಗಳಲಸು । ರೋತ್ತಮನ ರಥ ನಿಂದುದಾ ನಡು
ಹೊತ್ತಿನಂಬರಮಣಿಯವೊಲು ಚುಂಬಿಸುವ ತೇಜದಲಿ ೩೮

ಅಂಜಿದನು ಸುರರಾಜನೊಡನೆ ಧ । ನಂಜಯನು ನಡುಗಿದನು ಭಯದಿಂ
ದಂಜನಾನಂದನನಪಿತ ಸಾಜಿದನು ಕಿಲಕದೆಗೆ
ಮುಂಜೆರಿಗ ಸಂವರಿಸಿದನು ಯಮ । ನಂಜುಳಿಯ ಕರಕಂಪದಲಿ ಮನ
ದಂಜಿಕೆಯಲಂತರಿಸಿ ನಿಂದಿದರುಳಿದ ಧಿಗಧಿಪರು ೩೯

ಗಳು ಗಟ್ಟಿಯಾಗಿ ಕೂಗಿ ಹೇಳಿದವು. ೩೬. ರಾಕ್ಷಸಸೈನ್ಯದ ಕಹಳೆಗಳು ಅರಿಚುತ್ತಿದ್ದರೂ ಅದನ್ನು ಹುಲ್ಲಿಗೂ ಲಕ್ಷಿಸದೆ ಸುಗ್ರೀವನು ತುದಿಬಾಲದ ಒಂದು ಮೊಳ ಅಳತೆಯಲ್ಲಿ ಯುದ್ಧಕ್ಕೆ ವೀರರನ್ನು ನಿಲ್ಲಿಸಿದನು. ದೇವಲೋಕಕ್ಕೆ ಸ್ಪರ್ಧೆಯೋ ಎನ್ನುವಂತೆ ಮೇರುಪರ್ವತ ಸಮಾನರಾದ ಕೈಗಳಲ್ಲಿ ಬೆಟ್ಟಗಳನ್ನು ಹಿಡಿದ ಗರ್ವಿತ ವೀರ ಯೋಧರನ್ನು ನಿಲ್ಲಿಸಿದನು. ೩೭. ದಶಕಂಠನು ಯುದ್ಧಕ್ಕೆ ಬಂದನೆಂಬುದನ್ನು ಕೇಳಿ ಮಂದಹಾಸ ಬೀರುತ್ತ ಕದನೋತ್ಸಾಹದ ಲವಲವಿಕೆಯಿಂದ ಅಸುರಾರಿಯಾದ ರಾಮನು ಜಾಂಬವ ವಿಭೀಷಣರಿಂದ ಹೊಗಳಿಸಿಕೊಳ್ಳುತ್ತ ಶತ್ರುವಿನೊಡನೆ ಹೋರಾಡಲು ರಣರಂಗವನ್ನು ಹೊಕ್ಕನು. ೩೮. ಅತ್ತ ಕೋಪಗೊಂಡು ಕೈಗಳನ್ನೆತ್ತಿ ಗರ್ಜಿಸುವ ಸಿಂಹದ ಧ್ವಜ ಹಾರಾಡುತ್ತಿರಲು, ರಥದ ಕುದುರೆಗಳು ಕುಣಿಯುತ್ತಿರಲು ಮಧ್ಯಾಹ್ನದ ಸೂರ್ಯನಂತೆ ತೇಜಸ್ಸನ್ನು ಬೀರುತ್ತ ರಾವಣನ ರಥವು ಬಂದು ನಿಂತಿತು. ಮುತ್ತಿನ ಕೊಡೆಯ ನೆರಳಿನಲ್ಲಿ ರಾವಣನು ಶೋಭಿಸಿದನು. ೩೯. ದೇವೇಂದ್ರನು ಅಂಜಿದನು, ಅಗ್ನಿ ನಡುಗಿದನು, ಭಯದಿಂದ ವಾಯು ಪಕ್ಕಕ್ಕೆ ಸರಿದನು, ಯಮನು ಮುಂದಿನ ಪಂಚೆಯ ಸೆರಗನ್ನು ಕಟ್ಟಿದನು, ಕೈಮುಗಿದುಕೊಂಡು ನಡುಗುತ್ತ ಮನಸ್ಸಿನಲ್ಲಿ ಹೆದರುತ್ತ ಮರೆಯಾಗಿ ನಿಂತರು

ಬಡಬಡಕರನು ಹೇಳದಿರು ಮನ । ನಡುಗುತಿರ್ದುದು ಮದನಹರನೆದೆ
ಮಿಡುಕುತಿರ್ದುದು ಮರಳಿ ಮಾತೇನಂಬುಜಾಸನನ
ಹಿಡಿದ ವೀಣೆಯಲಂಕಮಾಲೆಯ । ನುಡಿಸುತಿರ್ದನು ನಾರದನು ಖಳ
ನೆಡೆಗೆ ಮೆಲ್ಲನೆ ದೇವಗುರು ಬೆದರಂಜುತೈತಂದ ೪೦

ಸುಲಭವಿಂದಿನ ದಿವಸ ತಾರಾ । ಬಲದ ಪರಿಕರ ಲೇಸು ಚಂದ್ರಮ
ನೊಲುಮೆ ಮಿಗಿಲುಳಿದ ಗ್ರಹಂಗಳು ಸುಪ್ರಸನ್ನರಲೆ
ಗೆಲವು ನಿಮಗಹುದೆಡದ ಯೋಗಿಣಿ । ಬಲದಲಗ್ಗದ ಕಾಳರಾಹುಗ
ಳೊಲವು ದೇವರ ಮೇಲೆ ಮೇಲಣ ಕಾರ್ಯ ಲೇಸೆಂದ ೪೧

ಜೀಯ ಬಿನ್ನಹ ಸಕಲ ಸುರಸಮು । ದಾಯವದೆ ಬರಲಂಜಿಯಭಯವ
ನೀಯಬೇಕೀಕ್ಷಿಸಲು ಭವದಾಜಿಯ ಮಹೋತ್ಸವವ
ಜೀಯಯೆನೆ ಬರಲೆಂದು ರಕ್ಕಸ । ರಾಯ ನೇಮಿಸೆ ನೆರೆದುದಮರರು
ವಾಯುಪಥದಲಿ ವರವಿಮಾನಂಗಳ ವಿಲಾಸದಲಿ ೪೨

ವೀರರಾವಣನಂಬರದ ವ್ಯಂ । ದಾರಕರನೀಕ್ಷಿಸುತ ನೂಕಿದ
ನಾರುಭಟೆಯಲಿ ರಥವನೆಡಬಲದಸುರಬಲಸಹಿತ
ಭೇರಿಗಳು ಮೊಳಗಿದವು ತಂಬಟ । ವಾರುಭಟಿಸಿದವಟ್ಟಿಗಹಳೆಗ
ಳೋರಣದಲೊದಱಿದವು ದಿಕ್ಕುಗಳೊದಱೆ ಚೂಣಿಯಲಿ ೪೩

ಉಳಿದ ದಿಕ್ಕಿನ ಒಡೆಯರುಗಳು. ೪೦. ಉಳಿದ ಬಡಬಡಕರ ಮಾತೇಕೆ. ಶಿವನ ಮನಸ್ಸು ನಡುಗುತ್ತಿತ್ತು; ಬ್ರಹ್ಮನ ಎದೆ ನಡುಗುತ್ತಿತ್ತು. ನಾರದನು ವೀಣೆಯಲ್ಲಿ ರಾವಣನ ಬಿರುದಾವಳಿಗಳ ಹಾಡನ್ನು ನುಡಿಸುತ್ತಿದ್ದನು. ದೇವಗುರು ಬೃಹಸ್ಪತಿಯು ಹೆದರುತ್ತ ಮೆಲ್ಲಗೆ ರಾವಣನ ಬಳಿಗೆ ಬಂದ. ೪೧. "ಈ ದಿವಸ ನಿಮಗೆ ಸುಲಭವಾಗಿದೆ; ತಾರಾಬಲ ಚೆನ್ನಾಗಿ ಕೂಡಿದೆ; ಚಂದ್ರನ ಮೈತ್ರಿ ಅಧಿಕ; ಉಳಿದ ಗ್ರಹಗಳು ಸುಪ್ರಸನ್ನರು. ನಿಮಗೆ ಗೆಲವಾಗುವುದು. ಎಡದಲ್ಲಿ ಯೋಗಿಣಿ ಬಲದಲ್ಲಿ ಕಾಳರಾಹುಗಳ ಪ್ರೀತಿ ತಮ್ಮ ಮೇಲಿದೆ. ಮುಂದಿನ ಕಾರ್ಯ ಒಳ್ಳೆಯದಾಗುವುದು" ಎಂದ ಗುರು. ೪೨. "ಸ್ವಾಮಿ, ವಿಜ್ಞಾಪನೆಗಳು. ಸಮಸ್ತದೇವಸಮೂಹವು ಬರಲು ಹೆದರಿಕೊಂಡಿದೆ. ತಮ್ಮ ಯುದ್ಧದ ವೈಭವವನ್ನು ನೋಡಲು ಅವರಿಗೆ ಅಭಯವನ್ನೀಯಬೇಕು" ಎಂದು ದೇವಗುರು ಹೇಳಿದನು. ರಾಕ್ಷಸರಾಜ ರಾವಣನು ಬರಲಿ ಎಂದು ಅಪ್ಪಣೆಮಾಡಲು ದೇವತೆಗಳು ತಮ್ಮ ವಿಮಾನಗಳಲ್ಲಿ ಕುಳಿತು ಆಕಾಶದಲ್ಲಿ ಬಂದು ಸೇರಿದರು. ೪೩. ಆಕಾಶದ ದೇವತೆಗಳನ್ನು ನೋಡುತ್ತ ವೀರರಾವಣನು ಆರ್ಭಟಿಸುತ್ತ ಎಡಬಲದ ರಾಕ್ಷಸಸೈನ್ಯದೊಡನೆ ರಥವನ್ನು ಮುಂದಕ್ಕೆ ಬಿಟ್ಟನು. ಭೇರಿಗಳು ಬಾರಿಸಿದವು, ತಮಟೆಗಳು ಅಬ್ಬರಿಸಿದವು, ದಿಕ್ಕುಗಳು ಪ್ರತಿಧ್ವನಿಸುವಂತೆ ಸೈನ್ಯದ ಮುಂದಿನ ಸಾಲಿನ ಅಟ್ಟುಗಹಳೆಗಳು ಮುನ್ನುಗ್ಗಲು ಮುನ್ಸೂಚನೆ

ಬಿರಿಯಲರಿಭಟ ಗರ್ವಗಿರಿಯು । ಬ್ಬರಿಸಿತೀ ಬಲವಮಮ ಲಯದಿನ
ದುರಿಗಳೆರಡಿಟ್ಟವುಗುವವೊಲೌಕಿದವು ಬಲವೆರಡು
ವರುಷಕಾಲದ ಮಿಂಚು ಮಿಂಚಿನೊ । ಳುರವಣಿಸುವಂದದಲಿ ಕಿಡಿಯು
ಪ್ಪರದ ಮಾಲೆಗಳುಪ್ಪರಿಸಿ ಹೊಯ್ದಾಡಿತುಭಯಬಲ ೪೪

ಎದ್ದುದಂಬರದುದಿಗೆ ರಜವದ । ನದ್ದಿಸಿತು ರಕ್ತಾಂಬುನಿಧಿ ಬಲು
ಹೆದ್ದೊರೆಯು ಹೊಯ್ದೂರನಣೆದವು ರಾವಣಾಸುರನ
ಬಿದ್ದ ಬಲ ಸುಪ್ರಳಯದಿವಸದೊ । ಳೆದ್ದ ಗಾಳಿಯು ತೆಱದವೊಲು ಮುಳಿ
ದೆದ್ದು ನಡೆದುದು ನಳಿನಗರ್ಭನ ರಾಜಮಂದಿರಕೆ ೪೫

ಒತ್ತಬರಿಸಿತು ಬಳಿಕ ವಾನರ । ಪತ್ತಿ ವಾನರ ಯೂಥನಾಥರ
ವೊತ್ತ ವಾನರವೀರಸೇನಾಧೀಶರೊಗ್ಗಿನಲಿ
ಕುತ್ತುದಲೆಗಳ ಹೆಮ್ಮರದ ಹೊ । ಯ್ಲೊತ್ತುಗಳ ಬೆಟ್ಟಗಳ ಬಿಱುಬಿನ
ಹತ್ತುಗೆಯುಲೊಳಹೊಕ್ಕು ಸದೆದರು ಸಕಲ ರಿಪುಬಲವ ೪೬

ಆವ ವೀರನೊ ವೀರವರ್ಗದ । ದೇವದೇವಾಧೀಶದಲ್ಲಣ
ರಾವಣನ ಮಗನಾ ವಿರೂಪಾಕ್ಷನು ವಿಚಿತ್ರದಲಿ
ತೀವಿ ತೆಗೆದಂಬಿನಲಿ ಸಿಂಹವಿ । ರಾವದಲಿ ತಱಿದೊಟ್ಟಿದನು ಸು
ಗ್ರೀವಸೈನ್ಯವ ಸಕಲ ಸುರಕುಲವಲ್ಲ ಬೆಱಗಾಗೆ ೪೭

ಕೊಡುತ್ತ ಸಾಲಾಗಿ ಧ್ವನಿಮಾಡಿದವು. ೪೪. ಶತ್ರುವೀರರ ಗರ್ವಗಿರಿಯು ಬಿರಿಯುವಂತೆ ವಾನರಸೈನ್ಯವು ಅಬ್ಬರಿಸಿತು. ಪ್ರಳಯದ ಎರಡು ಉರಿಗಳು ಒಂದರ ಮೇಲೊಂದು ನುಗ್ಗುವಂತೆ ರಾಕ್ಷಸ ವಾನರಸೈನ್ಯಗಳೆರಡೂ ಮೇಲೆ ಬಿದ್ದವು. ಮಳೆಗಾಲದಲ್ಲಿ ಮಿಂಚು ಮಿಂಚಿನ ಮೇಲೆ ರಭಸದಿಂದ ಬೀಳುವಂತೆ ಆಯುಧಗಳ ಕಿಡಿಗಳು ಮೇಲೆ ಹಾರುತ್ತಿರಲು ಎರಡು ಸೈನ್ಯಗಳೂ ನೆಗೆನೆಗೆದು ಹೊಡೆದಾಡಿದವು. ೪೫. ಆಕಾಶದ ತುದಿಗೆ ಧೂಳೆದ್ದಿತು : ರಕ್ತದ ಕಡಲು ಅದನ್ನು ನೆನೆಸಿತು. ರಕ್ತದ ದೊಡ್ಡ ಪ್ರವಾಹಗಳು ರಾವಣನ ನಗರವನ್ನು ಅಪ್ಪಳಿಸಿದವು. ಯುದ್ಧದಲ್ಲಿ ಸತ್ತು ಬಿದ್ದ ಸೈನ್ಯವು ಪ್ರಳಯದ ದಿವಸ ಎದ್ದ ಗಾಳಿಯಂತೆ ವಿಷ್ಣುವಿನ ಅರಮನೆಗೆ ಎದ್ದೋಡಿತು. ೪೬. ವಾನರ ಕಾಲುಬಲ, ವಾನರ ದಳಪತಿಗಳ ಸಮೂಹ ಮತ್ತು ವಾನರ ವೀರಸೇನಾನಾಯಕರು ಒಟ್ಟಾಗಿ ರಾಕ್ಷಸಸೈನ್ಯವನ್ನು ಮುತ್ತಿತು. ವಾನರಯೋಧರು ತಲೆಕುಸಿಯುವಂತೆ ಭಾರಿ ಮರಗಳಿಂದ ಹೊಡೆಯುತ್ತ ಬೆಟ್ಟಗಳಿಂದ ಅದುಮಿಹಾಕುತ್ತ ಬಿರುಸಾದ ಆಕ್ರಮಣ ಮಾಡಿ ಶತ್ರುಸೈನ್ಯದ ಒಳಹೊಕ್ಕು ಹೊಡೆದರು. ೪೭. ದೇವದೇವಾಧೀಶರನ್ನು ನಡುಗಿಸುವ ರಾವಣನ ಮಗ ವಿರೂಪಾಕ್ಷನು ಎಂಥ ವೀರನೋ ! ಸಿಂಹನಾದ ಮಾಡುತ್ತ ಸಮಸ್ತ ದೇವತೆಗಳೂ ಬೆರಗಾಗುವಂತೆ ಆಶ್ಚರ್ಯಕರವಾದ ಬಾಣಗಳಿಂದ ಸುಗ್ರೀವನ

ಮೀಱಿದನು ಸುರರಾಜಜಿತುವಿನ । ತಾಱುತಟ್ಟಿನ ಕದನವನು ಕೈ
ಮೀಱಿದನು ಕಲಿಕುಂಭಕರ್ಣನ ಕದನಕೌತುಕವ
ನೂಱುಮಡಿಯಾದನು ನರಾಂತಕ । ನೇಱಿದಿಱಿತದ ರಣಕೆ ಮನವನು
ಮಾಱುಗೊಂಡನು ಚಂಡಬಲ ಲಂಕಾಪುರಾಧಿಪನ ೪೮

ಓಡಿದಂಬಿನ ಮೊನೆಗಳಲಿ ಕಡಿ । ಯಾಡಿದವು ಕಪಿಬಲದ ಕಣೆಯೆಡೆ
ಯಾಡಿದೆಡೆಯಲಿ ತೆಕ್ಕಿವೆಣನೊಟ್ಟಿದವು ತೇರೈಸಿ
ಹೂಡುವಲಗೆಸುವಲಗುಗಳಲೆಡೆ । ಯಾಡುತಿರ್ದವು ಜೀವ ದಿವಿಜರ
ಬೀಡಿನಲಿ ಬಱಿಕೈದನೀಪರಿ ಕಪಿಭಟಾವಳಿಯ ೪೯

ಆವನವನೊಡನಾಂಪವನು ಸು । ಗ್ರೀವನಲ್ಲದೆ ವಿಲಯಕಾಲ
ಗ್ರೀವನವೊಲಾರ್ಭಟಿಸುತಡಗಟ್ಟಿದನು ರಕ್ಕಸನ
ಸಾವವಂಗಿನಿತೇಕೆ ಹುಲ್ಲುರಿ । ದಾವರದ ಡೊಂಬಿಂಗೆ ನೀರಹು
ದೇ ವಿಚಾರಿಸಲುಕ್ಕಿ ಸೊಕ್ಕದಿರೆಲವೊ ನೀನೆಂದ ೫೦

ಹಿಡಿದ ಹೆಗ್ಗಿರಿದುದಿಯಲಗ್ಗದ । ಮಿಡುಕುವಸುರನ ತೇರು ತೇಜಿಯು
ನಡಿಮುಗುಚಲಪ್ಪಳಿಸಲಾಚೆಗೆ ಚಿಗಿದನವ ಬಳಿಕ
ತುಡುಕಿ ಕುಂತದಲಾ ವನೌಕಸ । ರೊಡೆಯನುರು ವಕ್ಷಪ್ರದೇಶವ
ನೊಡೆತಿವಿದು ಕೆಡೆಯೆನುತ ಬೊಬ್ಬಿಱಿದನು ವಿರೂಪಾಕ್ಷ ೫೧

ಸೈನ್ಯವನ್ನು ಕತ್ತರಿಸಿ ರಾಶಿ ಹಾಕಿದನು. ೪೮. ಶತ್ರುಗಳನ್ನು ಅವ್ಯವಸ್ಥೆಗೊಳಿಸುವ ಇಂದ್ರಜಿತುವಿನ ಯುದ್ಧಕ್ಕೆ ಮಿಗಿಲೆನಿಸಿದನು ವಿರೂಪಾಕ್ಷ ; ಕಲಿಕುಂಭಕರ್ಣನ ಕುತೂಹಲಕರವಾದ ಯುದ್ಧವನ್ನು ಮೀರಿಸಿದನು ; ನರಾಂತಕನ ಕಗ್ಗೊಲೆಯ ಯುದ್ಧಕ್ಕೆ ನೂರುಮಡಿ ಎನಿಸಿದನು. ಹೀಗೆ ತನ್ನ ಯುದ್ಧದಿಂದ ವಿರೂಪಾಕ್ಷನು ಲಂಕೇಶ್ವರನ ಮನಸ್ಸನ್ನು ಗೆದ್ದುಕೊಂಡನು. ೪೯. ವಿರೂಪಾಕ್ಷನು ಬಿಟ್ಟ ಬಾಣಗಳ ಮೊನೆಗಳು ಕಪಿಸೈನ್ಯದಲ್ಲಿ ಓಡಾಡುತ್ತ ಕತ್ತರಿಸಿಹಾಕಿದವು ; ಬಾಣಗಳು ಸಂಚಾರಮಾಡಿದ ಕಡೆಗಳಲ್ಲೆಲ್ಲ ಹೆಣಗಳು ರಾಶಿರಾಶಿಯಾಗಿ ಗುಡ್ಡೆಬಿದ್ದವು. ಹೂಡುಬಾಣ ಮತ್ತು ಎಸೆಬಾಣಗಳು ಹೋದೆಡೆಯಲ್ಲೆಲ್ಲ ಕಪಿಗಳ ಜೀವವು ದೇವತೆಗಳ ನಗರಕ್ಕೆ ನಡೆದು ಹೋಗುತ್ತಿದ್ದವು. ವಿರೂಪಾಕ್ಷನು ಈ ರೀತಿಯಲ್ಲಿ ಕಪಿಯೋಧರನ್ನು ಖಾಲಿ ಮಾಡಿದನು. ೫೦. ಸುಗ್ರೀವನನ್ನು ಬಿಟ್ಟರೆ ವಿರೂಪಾಕ್ಷನನ್ನು ಎದುರಿಸಿ ನಿಲ್ಲುವವನು ಯಾರು ? ಸುಗ್ರೀವನು ಪ್ರಳಯರುದ್ರನಂತೆ ಆರ್ಭಟಿಸುತ್ತ ರಾಕ್ಷಸನನ್ನು ಅಡ್ಡಗಟ್ಟಿದನು. ಸಾಯುವವನಿಗೆ ಇಷ್ಟೇಕೆ ದರ್ಪ ? ಉರಿಯುವ ಹುಲ್ಲು ದಗೆಯ ಬೂಟಾಟಿಕೆಗೆ ಹೆದರಿ ನೀರಾಗುವುದೇ ? ಸುಮ್ಮನೆ ಉತ್ಸಾಹದಿಂದ ಗರ್ವಿಸಬೇಡ" ಎಂದ ಸುಗ್ರೀವ. ೫೧. ಸುಗ್ರೀವನು ಕೈಯಲ್ಲಿ ಹಿಡಿದಿದ್ದ ದೊಡ್ಡಬೆಟ್ಟದ ತುಂದಿಯಿಂದ ಚಲಿಸುತ್ತಿದ್ದ ವಿರೂಪಾಕ್ಷನ ರಥ ಮತ್ತು ಕುದುರೆಗಳನ್ನು ತಲೆಕೆಳಕಾಗುವಂತೆ ಹೊಡೆದನು. ವಿರೂಪಾಕ್ಷನು ರಥದಿಂದ ಹೊರಕ್ಕೆ ಹಾರಿ ಕುಂತವನ್ನು ತೆಗೆದುಕೊಂಡು ವಾನರ

ತಿವಿದ ಕುಂತವನುಱುಬಿ ಮದಕರಿ । ಕವಿದುಬೀಳಲು ಮುಷ್ಟಿಯಲಿ ಹೊಱ
ದಿವಿಗಳಿಂದಪ್ಪಳಿಸಿದನು ಮೇಲ್ವಾಯ್ದು ರಕ್ಕಸನ
ನವರುಧಿರಜಲಧಾರೆ ರಾವಣ । ಯುವಯುವದಿನುಪ್ಪರಿಸಿ ನಿಮಿಷದಿ
ಜವನವರು ನಗುತವನ ಕೊಂಡೊಯ್ದರು ಸರಾಗದಲಿ ೫೨

ಅಸಮಬಲ ದೀರ್ಘೋದರನು ಕಿಡಿ । ಮಸಗಿ ಕೋಪಿಸುತೇಱಿದನು ರಾ
ಕ್ಷಸವಿರೋಧಿಯ ರಾಜಕಾರ್ಯಕೆ ನಿಂದ ರವಿಸುತನ
ಮುಸುಕುತಂಬಿನ ಮಳೆಯಲೌಕುವ । ವಿಷಮ ಕಪಿನಾಯಕರ ವಾನರ
ರಸುವನುಚ್ಚುತ ಮುಟ್ಟಿವಿಸಿದನು ಮರ್ಕಟಾಧಿಪನ ೫೩

ಐದಿದಗ್ಗದ ವಿಗ್ರಹದ ದೀ । ರ್ಘೋದರನ ರಥ ಕೆಡೆಯಲೊದೆದನು
ಪಾದದಲಿ ಪರಿಭವಿಸಿ ಕೊಂಡನು ಖಳನ ಕಿಬ್ಬದಿಯ
ಊದಲುದುರಿದ ತೃಣದವೊಲು ಹರಿ । ಪಾದಹತಿಯಲಿ ಬಿದ್ದ ಖಳ ಮೇ
ಲ್ವಾಯ್ದು ದೊಕ್ಕರಿಸಿದನು ತೆಕ್ಕೆಯಲರ್ಕಸಂಭವನ ೫೪

ಹೋರಿದರು ಹಣೆಯೊತ್ತುಗಳ ಕೈ । ಹಾರಗಳ ತಳುಕುಗಳ ಬಲನೆಡ
ನೋರೆಗಳ ನೂಕುಗಳ ತರತರಿಕೆಗಳ ತರಹರದ
ವೀರರಿಬ್ಬರು ಹೆಣಗಿ ಕೆಡೆದರು । ಧಾರುಣಿಗೆ ಧರೆ ಬಿರಿಯೆ ಸಮರದ
ಸೈರಣೆಗಳಡಿಮೇಲು ಮೇಲಡಿಯಾಗಿ ಕಣನೊಳಗೆ ೫೫

ರಾಜ ಸುಗ್ರೀವನ ಎದೆಯನ್ನು ತಿವಿದು 'ಬೀಳು !' ಎನ್ನುತ್ತ ಗರ್ಜಿಸಿದ. ೫೨. ವಿರೂಪಾಕ್ಷನು ಹೊಡೆದ ಕುಂತವನ್ನು ಬಾಯಿಂದ ಊದಿಹಾರಿಸಿ ಮದಿಸಿದ ಆನೆ ಮೇಲೆ ಬೀಳುವಂತೆ ಸುಗ್ರೀವನು ರಾಕ್ಷಸನ ಮೇಲೆ ಬಿದ್ದು ಹೊರಗುದ್ದುಗಳಿಂದ ಅಪ್ಪಳಿಸಿದನು. ವಿರೂಪಾಕ್ಷನ ದೇಹದಿಂದ ಬಿಸಿರಕ್ತಧಾರೆಯು ಮೇಲಕ್ಕೆ ಚಿಮ್ಮಿತು. ಕೂಡಲೆ ಯಮನ ದೂತರು ಬಂದು ನಗುತ್ತ ಸಂತೋಷದಿಂದ ವಿರೂಪಾಕ್ಷನ ಜೀವವನ್ನು ತೆಗೆದುಕೊಂಡು ಹೋದರು. ೫೩. ಅಸಮಾನ ಬಲಶಾಲಿ ದೀರ್ಘೋದರನು ಕೋಪದಿಂದ ಕಿಡಿಕಾರುತ್ತ ರಾಮನ ರಾಜಕಾರ್ಯಕ್ಕೆ ನಿಂತ ಸುಗ್ರೀವನ ಮೇಲೇರಿಬಂದನು. ತನ್ನನ್ನು ಮುತ್ತಿದ ಕಪಿನಾಯಕರನ್ನು ಬಾಣಗಳ ಮಳೆಯಿಂದ ಮುಚ್ಚುತ್ತ ಅಡ್ಡಬಂದ ವಾನರರ ಪ್ರಾಣಗಳನ್ನು ಸೆಳೆಯುತ್ತ ದೀರ್ಘೋದರನು ಸುಗ್ರೀವನ ಸಮೀಪಕ್ಕೆ ಬಂದನು. ೫೪. ಹತ್ತಿರಕ್ಕೆ ಬಂದ ಭಾರಿದೇಹದ ದೀರ್ಘೋದರನ ರಥ ಕೆಳಗೆ ಬೀಳುವಂತೆ ಸುಗ್ರೀವ ಒದ್ದನು ; ಅಸುರನ ಪಕ್ಕೆಯನ್ನು ಕಾಲಿನಿಂದ ತಿವಿದು ಅವಮಾನಗೊಳಿಸಿದನು. ಹುಲ್ಲು ಊದಿದರೆ ಉದುರಿಹೋಗುವಂತೆ ಸುಗ್ರೀವನ ಒದೆತಕ್ಕೆ ಕೆಳಗೆ ಬಿದ್ದ ದೀರ್ಘೋದರ ಮುನ್ನುಗ್ಗಿ ಸುಗ್ರೀವನೊಡನೆ ತೆಕ್ಕೆಬಿದ್ದು ಗುದ್ದಿದನು. ೫೫. ಹಣೆ ಹಣೆ ಹತ್ತಿ, ಕೈ ಕೈ ಮಿಲಾಯಿಸಿ ಹೆಣೆದು, ಬಲ ಎಡಪಕ್ಕಗಳಿಂದ ತಳ್ಳಿ ಒಂದೊಂದು ಸಲ ಸೈರಿಸಿಕೊಂಡು ನಿಲ್ಲುತ್ತ ದೀರ್ಘೋದರ ಸುಗ್ರೀವರು ಹೋರಾಡಿದರು. ಇಬ್ಬರು ವೀರರೂ ಹೋರಾಡುತ್ತ ಭೂಮಿ ಬಿರಿಯುವಂತೆ ನೆಲಕ್ಕೆ ಬಿದ್ದರು. ನೆಲದ ಮೇಲೆ ಒಬ್ಬರಿಗೊಬ್ಬರು ತೆಕ್ಕೆಬಿದ್ದು ಒಂದು ಸಲ ಒಬ್ಬ ಮೇಲು ಇನ್ನೊಬ್ಬ ಇನ್ನೊಂದು ಸಲ ಮೇಲು,

ಅಡಸಿ ದಂತಾದಂತಿಯಲಿ ಕೈ । ದುಡುಕಿ ಕೇಶಾಕೇಶಿಯಲಿ ಜವ
ಗೆಡದೆ ಜಾನುಪ್ರಹರಣದ ಪಾದಾಭಿಘಾತದಲಿ
ಬಿಡದೆ ದೆಖ್ಖಾದೆಖ್ಖಿಯಲಿ ಧೃತಿ । ಗೆಡದೆ ಧಾಳಾಧೂಳಿಯಲಿ ಬಲು
ಗಡಿಯ ಖಾಡಾಖಾಡಿಯಲಿ ಕಾದಿದರು ಕಡುಹಿನಲಿ ೫೬

ಸುರಪಜಂಭನ ಗುಹನ ತಾರಕ । ನುರುನೃಸಿಂಹ ಹಿರಣ್ಯಕರ ಶಂ
ಕರ ಗಜಾಸುರನಾದಿನಾರಾಯಣನ ಕೈಭಟನ
ಪರಶುರಾಮನ ಕಾರ್ತವೀರ್ಯನ । ಹರಿಸುತನ ರಾವಣನ ರಣದಂ
ತರಕೆ ನಾಲ್ಮಡಿಯೆನಲು ಕಾದಿದರಸಮ ಸಮರದಲಿ ೫೭

ವೀರ ಹನುಮನ ಹೊಗಳಿಕೆಯಲಿ ಕ । ಠೋರ ಸಾಹಸಮಲ್ಲ ಬಿಗಿದನು
ಭಾರಿ ಭುಜಪಾಶದಲಿ ದೀರ್ಘೋದರ ಶಿರೋಧರವ
ಚಾರುತರ ಮುಖವೇಪದುಸುರಿನ । ದಾರಿಯನು ಬಿಗಿದಂತೆ ರಕ್ಕಸ
ವೀರನಸು ತಾನಾವ ರಂಧ್ರದಿ ನುಸುಳಿತೋಯೆಂದ ೫೮

ತೆಕ್ಕೆ ಸಡಿಲಿದ ತೋಳ ಬಿಗುಹಿನ । ರಕ್ಕಸನ ಮುಖಚೇಷ್ಟೆಯನು ಕಂ
ಡಕ್ಕಟಾ ಕಡುಗೇಡದಾಯಿತೆ ರಾವಣಂಗೆನುತ
ಮಕ್ಕಳನು ಮನೆನೇಟರನು ಮೊ । ಮ್ಮಕ್ಕಳನು ಪರವಾನಿನಿಗೆ ಮನ
ವಿಕ್ಕಿ ಕೊಲಿಸಿದನೆನುತ ತಿರುಗಿದನಬುಜಸಖಸೂನು ೫೯

ಒಬ್ಬ ಒಂದು ಸಲ ಕೆಳಗು ಇನ್ನೊಬ್ಬ ಇನ್ನೊಂದು ಸಲ ಕೆಳಗು ಆಗುತ್ತ ಪರಸ್ಪರ ಹೋರಾಡಿದರು. ೫೬. ಇಬ್ಬರು ವೀರರೂ ಮೇಲೆಬಿದ್ದು ಹಲ್ಲುಹಲ್ಲಿನಿಂದ ಕಚ್ಚುತ್ತ, ಕೂದಲುಗಳನ್ನು ಹಿಡಿದು ಎಳೆಯುತ್ತ, ಮೊಳಕಾಲು ಪಾದಗಳಿಂದ ಚುರುಕಿನ ಪೆಟ್ಟು ಕೊಡುತ್ತ ಹೋರಾಟ ಮಾಡಿದರು. ಬಿಡದೆ ದೃಷ್ಟಿಯುದ್ಧದ ಮೂಲಕ ಹಾಗೂ ಧೈರ್ಯಗೆಡದೆ ದಾಳಾದೂಳಿಯಿಂದ ಉಗ್ರವಾದ ಖಡಾಖಡಿ ಯುದ್ಧಮಾಡಿದರು. ೫೭. ಇಂದ್ರ ಜಂಭಾಸುರ, ಷಣ್ಮುಖ ತಾರಕಾಸುರ, ನರಸಿಂಹ ಹಿರಣ್ಯಕಶಿಪು, ಶಿವ ಗಜಾಸುರ, ನಾರಾಯಣ ಕೈಟಭಾಸುರ, ಪರಶುರಾಮ ಕಾರ್ತವೀರ್ಯ, ವಾಲಿ ರಾವಣ–ಇವರುಗಳ ಯುದ್ಧಕ್ಕೆ ನಾಲ್ಕರಷ್ಟು ಎನ್ನುವಂತೆ ಸುಗ್ರೀವ ದೀರ್ಘೋದರರು ವಿಷಮ ಯುದ್ಧದಲ್ಲಿ ಸೆಣಸಿದರು. ೫೮. ಹನುಮಂತನು ಹೊಗಳಿ ಉಬ್ಬಿಸಲು ಮಹಾವೀರ ಸುಗ್ರೀವನು ದೀರ್ಘೋದರನ ತಲೆಯ ಕೆಳಗಡೆ ಮುಖವನ್ನು ತೋಳಿನಿಂದ ಬಿಗಿಯಾಗಿ ಹಿಡಿದು ಅಮುಕಿದನು. ಮುಖದಲ್ಲಿ ಉಸುರು ಹೋಗುವ ದಾರಿಯು ಕಡಿದುಹೋಯಿತು. ಆಗ ದೀರ್ಘೋದರನ ಪ್ರಾಣವು ಯಾವ ರಂಧ್ರದ ಮೂಲಕ ನುಸುಳಿಕೊಂಡು ಹೋಯಿತೋ ಎಂದು ವಾಲ್ಮೀಕಿ ಈ ಆಶ್ಚರ್ಯವನ್ನು ಕುಶಲವಕುಮಾರರಿಗೆ ಹೇಳಿದನು. ೫೯. ಸುಗ್ರೀವನು ತೋಳ ಬಿಗಿತವನ್ನು ಸಡಿಲಿಸಲು ರಾಕ್ಷಸನ ಮುಖಲಕ್ಷಣವನ್ನು ಕಂಡು, 'ಅಯ್ಯೋ, ರಾವಣನಿಗೆ ಬಹಳ ಕೇಡಾಯಿತೇ ? ಪರಸ್ತ್ರೀಯ ಮೇಲೆ ಮನಸ್ಸಿಟ್ಟು ಮಕ್ಕಳು, ಮನೆಯ ನೆಂಟರು ಮತ್ತು ಮೊಮ್ಮಕ್ಕಳನ್ನು ಕೊಲ್ಲಿಸಿದನು !' ಎನ್ನುತ್ತ ಸುಗ್ರೀವನು ಹಿಂದಕ್ಕೆ ತಿರುಗಿದನು.

ಆರಿದುದು ಕಪಿಸೇನೆ ಸೂರ್ಯಜಕು । ವೊರನಧಿಕ ಪರಾಕ್ರಮಕೆ ವೃಂ
ದಾರಕರು ಘುಲ್ಲವಿಸಿದರು ರವಿತನುಜಗುತ್ತಮದ
ಹಾರವನು ಕಳುಹಿದರು ಕಂಡಿದ । ಸೈರಿಸುವನೇ ಭುವನ ಮೂಱಱ
ವೀರರಕ್ಕಸರಾಯನೆಲೆ ನೃಪಸೂನು ಕೇಳೆಂದ ೬೦

ಹಬ್ಬಿದುದು ಸುತಶೋಕಶಿಖಿ ಮುಱಿ । ದುಬ್ಬರಿಸಿದುದು ರೋಷಪಾವಕ
ನುಬ್ಬಟೆಯು ಬಾಹುಪ್ರತಾಪಾನಲನ ನಾಲಗೆಯು
ಅಬ್ಬರಿನ ಕಿಚ್ಚೊಂದು ಹುರಿಗೊಂ । ಡೆಬ್ಬಿಸಿದುದುದ್ರೇಕವನು ಜಗ
ದೊಬ್ಬವೀರನು ನೂಕಿದನು ಬಳಿಕವರ ಮೋಹರಕೆ ೬೧

ಒಬ್ಬ ರಾವಣ ಹತ್ತುಬಿಲ್ಲಿಂ । ದೆಬ್ಬಿಸುವ ಬಾಣದಲಿ ಬೀಳದ
ರೊಬ್ಬರನು ನಾ ಕಾಣೆ ಕೋಲಳವಿಯಲಿ ಕಪಿಭಟರ
ಕಬ್ಬುದೋಟದ ಕರಿಯ ಕಾಲ್ದುಳಿ । ಯಬ್ಬರವೊ ನಾನಱಿಯೆನಱಿಯೆನು
ತಬ್ಬಿದಮರೀಜನದ ತೋಳಿನ ಭಟರ ತಿಂತಿಣಿಯ ೬೨

ಹೊಕ್ಕನವನೆಡಬಲದ ಕಪಿಗಳ । ಹಿಕ್ಕಿ ಹಿಂಡುತ ಹರಿಕುಲೇಂದ್ರನ
ಹೊಕ್ಕಱಿವ ತವಕದಲಿ ತಳ್ಳಂಕಿಸೆ ಕಪಿವ್ರಾತ
ಸಿಕ್ಕದಿರನೀ ಖಳಗೆ ಕಪಿಕುಲ । ಚಕ್ರಿ ತಡೆಯಲುಬೇಕೆನುತ ರಿಪು
ರಕ್ಕಸನ ರಥದಿದಿರಿನಲಿ ಸೌಮಿತ್ರಿ ಮಾಱಾಂತ ೬೩

೬೦. ಸುಗ್ರೀವನ ಮಹಾಪರಾಕ್ರಮವನ್ನು ಕಂಡು ಕಪಿಸೈನ್ಯವು ಆರ್ಭಟಿಸಿ ಕೂಗಿತು ; ದೇವತೆಗಳು ಸಂತೋಷದಿಂದ ಉಬ್ಬಿ ಸುಗ್ರೀವನಿಗೆ ಶ್ರೇಷ್ಠವಾದ ಹಾರವನ್ನು ಕಳುಹಿಸಿದರು. ಮಗನ ಸಾವನ್ನು ಕಂಡು ತ್ರಿಲೋಕವೀರ ರಾಕ್ಷಸೇಶ್ವರ ರಾವಣನು ಸೈರಿಸುವನೇ, ಕೇಳು ರಾಜಕುಮಾರ ಕುಶ–ಎಂದರು ವಾಲ್ಮೀಕಿಗಳು. ೬೧. ಮಗನು ಸತ್ತ ದುಃಖದ ಬೆಂಕಿ ಹಬ್ಬಿತು, ಕೋಪಾಗ್ನಿಯು ಭುಗಿಲೆಂದು ಮೇಲೆದ್ದಿತು, ತೋಳಪರಾಕ್ರಮದ ಬೆಂಕಿಯ ನಾಲಗೆಯ ಭಾರಿ ಉರಿಯು ರಾವಣನನ್ನು ಉದ್ರೇಕಗೊಳಿಸಿತು. ಹೀಗೆ ಕೆರಳಿದ ಜಗದೇಕವೀರ ರಾವಣನು ಸುಗ್ರೀವನ ಮೇಲೆ ಯುದ್ಧಕ್ಕೆ ಬಂದನು. ೬೨. ಒಬ್ಬ ರಾವಣನು ಹತ್ತು ಬಿಲ್ಲುಗಳಿಂದ ಒಂದೇಸಲ ಬಿಡುವ ಬಾಣಗಳಿಂದ ಬಾಣದ ವ್ಯಾಪ್ತಿಯಲ್ಲಿ ಬಂದ ಕಪಿಯೋಧರಲ್ಲಿ ಉರುಳಿ ಬೀಳದವರನ್ನು ಒಬ್ಬರನ್ನೂ ನಾನು ಕಾಣೆ. ಕಬ್ಬಿನ ಗದ್ದೆಯನ್ನು ಕಾಲಿನಿಂದ ತುಳಿದುಹಾಕುವ ಆನೆಯ ಅಬ್ಬರವೊ, ನಾನು ತಿಳಿಯೆ, ದೇವಲೋಕದ ಅಪ್ಸರೆಯರ ಆಲಿಂಗನಕ್ಕೆ ಸಿಕ್ಕಿದ ಕಪಿಭಟರ ಲೆಕ್ಕವನ್ನೂ ನಾನು ತಿಳಿಯೆ–ಎಂದರು ವಾಲ್ಮೀಕಿಗಳು. ೬೩. ರಾವಣನು ಒಳಹೊಕ್ಕು ಎಡಬಲದ ಕಪಿಗಳ ಗುಂಪನ್ನು ಉಜ್ಜಿ ಹಿಂಡಿಹಾಕುತ್ತ ಸುಗ್ರೀವನನ್ನು ಮುತ್ತಿ ಇರಿಯುವ ಆತುರದಿಂದ ಬಂದನು. ಇದನ್ನು ಕಂಡು ವಾನರರು ಹೆದರಿಕೊಂಡರು. ಆಗ 'ಕಪಿಕುಲಚಕ್ರವರ್ತಿಯು ಈ ರಾಕ್ಷಸನ ಕೈಗೆ ಸಿಕ್ಕಿಹಾಕಿಕೊಳ್ಳದೆ ಇರನು. ಇವನನ್ನು ತಡೆಯಬೇಕು' ಎನ್ನುತ್ತ ಲಕ್ಷ್ಮಣನು ರಾವಣನ ರಥದ ಎದುರಿಗೆ ಬಂದನು.

# ನಲವತ್ತೇಳನೆಯ ಸಂಧಿ

ಸೂಚನೆ॥ ಅಂತವಿಲ್ಲದ ನರರ ರೂಪಿನ । ನಂತನನು ಕೃತಸಮರಜಯುವಿ
ಕ್ರಾಂತನನು ರಾವಣನು ಗೆಲಿದನು ಘೋರಶಕ್ತಿಯಲಿ

ಮೋಹರಿಸಿತಳಿದುಳಿದ ಬಲವಾ । ಸಾಹಸನ ಸುರಲೋಕದಲ್ಲಣ
ನಾಹವಕೆ ಪಡಿಯಾಗಿ ಲಕ್ಷ್ಮಣದೇವನಿದಿರಿನಲಿ
ಕಾಹುರವದೇಕೆಲವೊ ಮಾಣೆಯು । ಲಾ ಹರಾದ್ಯರ ಬಗೆಗೊಳದ ನ
ಮ್ಮಾ ಹರೀಶ್ವರನೊಡನೆ ಹಳಚುವ ಚಾವಟೆಯತನವ ೧

ನಿನಗೆ ದೊಡ್ಡಿತು ನಿನ್ನ ಹರಿಪತಿ । ಮನುಜಪತಿಗಳು ತೃಣ ಕಣಾ ಕೇ
ಳೆನಗೆ ನೀ ತಾ ಸಹಿತ ಸವೆದುದು ಸಕಲಬಲವೆಂದು
ಮನಕೆ ತೋಱಿತಲಾ ಕ್ಷಣಾರ್ಧದೊ । ಳನಲನಾಡಿದ ಬೇಸಗೆಯ ತೃಣ
ವನದವೊಲು ನಿಮ್ಮವನು ಗೆಲದಿರಲಸುರನಲ್ಲೆಂದ ೨

ಅಱಿಯಬಹುದಿದಱುಬ್ಬುಗೊಬ್ಬಿನ । ತೆಱಹಿನಂತರ ಬೇಗವೆಮಗೇ
ಕಱಿಕೆಯುಳ್ಳಡೆ ತೋಱು ರಣದಾಗಮಪರಿಶ್ರಮವ
ಕಱೆ ಕಣಾಯೆನುತ ಬೊಬ್ಬೆಯ । ಬಿಱುಬಿನಲಿ ಬಿಲುದನಿಯನಹಿತಗೆ
ಹೊಱಿಸುತೊತ್ತಂಬರಿಸಿದನು ಕಿವಿಗುಗಿದ ಕೋಲಿನಲಿ ೩

ಸೂಚನೆ॥ ಯುದ್ಧವಿಜಯದಲ್ಲಿ ಪರಾಕ್ರಮಶಾಲಿಯಾದ ಅಳಿವಿಲ್ಲದ ಮಾನವ ರೂಪಿನ ಆದಿಶೇಷ ಲಕ್ಷ್ಮಣನನ್ನು ಘೋರ ಶಕ್ತ್ಯಾಯುಧದಿಂದ ರಾವಣನು ಗೆದ್ದನು. ೧. ಅಳಿದುಳಿದ ವಾನರಸೈನ್ಯವು ಸಾಹಸಿ ರಾವಣನ ಮೇಲಿನ ಯುದ್ಧಕ್ಕೆ ಲಕ್ಷ್ಮಣದೇವನ ಮುಂದುಗಡೆ ಬಂದು ಸೇರಿತು. "ಲೋ, ಕಾತುರವೇಕೋ? ಶಿವನೇ ಮೊದಲಾದವರನ್ನು ಲಕ್ಷಿಸದ ನಮ್ಮ ಈ ಹರೀಶ್ವರನೊಡನೆ ಸೆಣಸುವ ಉದ್ಧಟತನವನ್ನು ಬಿಡುವುದಿಲ್ಲವೇ?" ಎಂದು ಲಕ್ಷ್ಮಣ ರಾವಣನನ್ನು ಕೇಳಿದನು. ೨. "ನಿನ್ನ ಹರಿಪತಿ ಮಾನವಪತಿಗಳು ನಿನಗೆ ದೊಡ್ಡವರು. ನೀನೂ ಅವನೂ ನನಗೆ ಹುಲ್ಲಿಗೆ ಸಮಾನ, ಕಾಣೋ. ನಮ್ಮ ಸಮಸ್ತಸೈನ್ಯವೂ ನಾಶವಾಯಿತೆಂದು ನಿನ್ನ ಮನಸ್ಸಿಗೆ ತೋರಿತಲ್ಲವೇ ? ಬೆಂಕಿ ಹಬ್ಬಿದ ಬೇಸಗೆಯ ಹುಲ್ಲಿನ ಮೈದಾನದಂತೆ ಕ್ಷಣಾರ್ಧದಲ್ಲಿ ನಿಮ್ಮನ್ನು ಗೆಲ್ಲದಿದ್ದರೆ ನಾನು ಅಸುರನಲ್ಲ" ಎಂದು ಲಕ್ಷ್ಮಣನಿಗೆ ರಾವಣ ಉತ್ತರಕೊಟ್ಟ. ೩. "ನಿನ್ನ ಅತಿ ಸೊಕ್ಕಿನ ಮಾತಿನ ಸಾಮರ್ಥ್ಯವನ್ನು ಬೇಗನೆ ತಿಳಿಯಬಹುದು. ಈ ಮಾತು ನಮಗೇಕೆ, ಯುದ್ಧನೈಪುಣ್ಯವನ್ನು ತೋರಿಸುವುದರ ಮೂಲಕ ಉತ್ತರಕೊಡು, ಬಾಣಗಳನ್ನು ಬಿಡು" ಎನ್ನುತ್ತ ಆರ್ಭಟಿಸಿ ಧನುಷ್ಟಂಕಾರಮಾಡಿ ಕಿವಿಯವರೆಗೆ ಬಾಣವನ್ನು ಎಳೆದು ರಾವಣನನ್ನು ಮುತ್ತಿದನು.

ಹಸುಳೆ ಹೊಕ್ಕನು ಹಗೆಯ ಸಮರ । ವ್ಯಸನಕೆಲೆ ಹನುಮಂತ ನಡೆ ಕೈ
ಕಸೆಯ ಕಡೆಮುಗ ಹೋಗು ಪೊಳಕು ಸುಷೇಣ ಪಡಿಬಲಕೆ
ಸಸಿನವಾಗಿರದೇನು ಮನಕತಿ । ವಿಷಮನವನೆಲೆ ಜಾಂಬವರೆ ನೀ
ವೆಸಗಿ ತಮ್ಮನ ಹಾನಿಹರಿಬಕೆ ಬೇಗ ನೀವೆಂದ ೪

ಈತನದಟಿಂದೊಳಗೆ ಶರಸಂ । ಘಾತದಲಿ ರಾವಣನ ತನುವನು
ತೂತುಗೊಟಿದುಗುಳಿಸಿದನರುಣಾಂಬುವನು ತೇರಿನಲಿ
ಸೂತನನು ಸುರಜಾತದಬಲಾ । ಜಾತದಲಿ ನಿಂದಿರಿಸಿ ಕಡಿದನು
ಕೇತುದಂಡವನುಳುಹಿದನು ರಾವಣನ ರಾಮಂಗೆ ೫

ತೊಲಗಗಡಿದನು ಹತ್ತು ಬಿಲುಗಳ । ನಿಳಿಯಲೆಚ್ಚನು ಹತ್ತು ಮುಕುಟವ
ತಲೆಗೆ ತೊಟ್ಟೇ ಮಾತನೆಂದನು ಮಧುರವಚನದಲಿ
ಎಲೆ ದಶಾನನ ಕೇಳು ರಾಮಂ । ಗೊಲುಮೆ ಘನ ನಿನ್ನವನ ಮೇಲಾ
ಬಳಿಯಲನುಸರಿಸುವುದು ಚಿತ್ತಕೆ ತೋಱುತಿದೆಯೆಂದ ೬

ಬೇಡ ಚಲಪದವಿನ್ನು ಕೈಗಳು । ಬೇಡಿಕೊಳಲಿ ಭವಾಬ್ಧಿಪೋತನ
ನಾಡಿ ಕೆಡದೆ ಯಶೋವಿಲಾಸನ ಬಾಯದಂಬುಲವ
ಕೂಡಿಕೊಂಡಿರುಪೇಕ್ಷಿಸದೆ ಸಿರಿ । ಗಾಡಿಕಾತಿಯನನುಜಸಹ ಗತಿ
ಗೇಡುಗರ ನಗರಿಯಲಿ ನಾಯಕನಾಗಬೇಡೆಂದ ೭

೪. "ಶತ್ರುವಿನೊಡನೆ ಹೋರಾಟಕ್ಕೆ ಮುಗ್ಧ ತಮ್ಮನು ಹೋಗಿದ್ದಾನೆ. ಆದುದರಿಂದ ಹನುಮಂತ ನೀನು ಹೋಗು, ಕೈಕಸೆಯ ಕೊನೆಮಗ ರಾವಣನು ಸಾಹಸಿ. ಸುಷೇಣ ನೀನು ಬೆಂಬಲವಾಗಿ ಸೈನ್ಯದೊಡನೆ ಹೋಗು. ಈ ಯುದ್ಧವು ಕ್ಷೇಮವಾಗಿರುವಂತೆ ಕಾಣುವುದಿಲ್ಲ, ರಾವಣನು ಮಹಾ ಭಯಂಕರ, ಜಾಂಬವಂತರೇ ತಮ್ಮನ ಆಪತ್ತಿಗೆ ನೀವು ಸಹಾಯಕರಾಗಿ ಹೋಗಿ" ಎಂದ ರಾಮ. ೫. ಅಷ್ಟರಲ್ಲಿ ಲಕ್ಷ್ಮಣನು ಬಾಣಗಳನ್ನು ಬಿಟ್ಟು ರಾವಣನ ದೇಹವನ್ನು ತೂತು ಮಾಡಿ ರಥದೊಳಕ್ಕೆ ರಕ್ತವನ್ನು ಚಿಮ್ಮಿಸಿದನು; ರಥದ ಸಾರಥಿಯನ್ನು ಕೊಂದು ದೇವಲೋಕದ ತರುಣಿಯರ ಬಳಿಗೆ ಕಳುಹಿಸಿ ಧ್ವಜದಂಡವನ್ನು ಕತ್ತರಿಸಿಹಾಕಿದನು. ರಾವಣನನ್ನು ರಾಮನಿಗಾಗಿ ಉಳಿಸಿದನು. ೬. ಲಕ್ಷ್ಮಣನು ರಾವಣನ ಹತ್ತು ಬಿಲ್ಲುಗಳನ್ನೂ ಕತ್ತರಿಸಿ ಬೀಳಿಸಿದನು; ಅವನ ಹತ್ತು ಕಿರೀಟಗಳನ್ನೂ ಬಾಣದಿಂದ ಹಾರಿಸಿದನು. ಬಳಿಕ ತಲೆಗೆ ಬಾಣವನ್ನು ಗುರಿಹಿಡಿದು ಮಧುರವಾದ ಮಾತಿನಿಂದ ರಾವಣನನ್ನು ಕುರಿತು, "ಲೋ, ದಶಾನನ, ಕೇಳು. ನಿನ್ನ ಮೇಲೆ ರಾಮನಿಗೆ ಬಹಳ ಪ್ರೀತಿ. ಅವನನ್ನು ನೀನು ಅನುಸರಿಸುವುದೊಳ್ಳೆಯದು ಎಂಬುದು ಮನಸ್ಸಿಗೆ ತೋರುತ್ತಿದೆ" ಎಂದು ನುಡಿದ, ೭. "ನಿನ್ನ ಹಟದ ನಿಲುಮೆಯನ್ನು ಬಿಡು. ಸಂಸಾರಸಾಗರವನ್ನು ದಾಟಿಸುವ ದೋಣಿ ರಾಮ. ಅವನನ್ನು ಕೈ ಮುಗಿದು ಬೇಡಿಕೋ. ನಿಂದಿಸಿ ಹಾಳಾಗದೆ ಕೀರ್ತಿಶಾಲಿಯಾದ ಅವನ ಸೇವೆ ಮಾಡಿಕೊಂಡಿರು, ಚೆಲುವೆ ಲಕ್ಷ್ಮಿಯನ್ನು ಉಪೇಕ್ಷಿಸದೆ ತಮ್ಮನನ್ನು ಕೂಡಿಕೊಂಡಿರು, ಗತಿಗೆಟ್ಟ

ಒಲ್ಲೆಯಾ ಮನಕೆಮ್ಮ ಮಾತಿದು । ಸಲ್ಲದಿರೆ ಕರೆ ಸಾರಥಿಯ ಹಿಡಿ
ಬಿಲ್ಲ ನಡಸು ವರೂಥವನು ಪಳವಿಗೆಯ ಕೈಮಾಡು
ಕೊಲ್ಲೆವಾವ್ ನಿನ್ನುವನು ನೀನೆ । ಮ್ಮಲ್ಲಿ ಮೆಱೆ ನಿನಗುಳ್ಳ ಶಕ್ತಿಯ
ಕಲ್ಲು ಮರನವರೌಕರನ್ನಬರಂಜಬೇಡೆಂದ ೮

ಅಸುರನವನಾಸುರ ವಿಕರ್ಮದ । ವಿಷಮ ಕಾಳನು ನುಡಿಗಳಿವ ಸೈ
ರಿಸುವನೇ ಬಳಿಕವನು ಕೊಂಡನು ಕಮಲಭವನಿತ್ತ
ಹೊಸಮಸೆಯ ಹೊಗರಲಗುಗಳು ತೆ । ತ್ತಿಸಿದ ಶಕುತಿಯಲುರಿ ಛಡಾಳಿಸಿ
ಮುಸುಕೆ ಮಾರುತಪಥವನಮರವ್ರಾತ ಕಳವಳಿಸೆ ೯

ಜಡಿವ ಶಕ್ತಿಯ ಕಿಚ್ಚು ವಾನರ । ಪಡೆಯನಟ್ಟಲು ಕಂಡು ಬಂದನು
ಝಡಿತೆಯಲಿ ಜಾಹ್ನವಿಯ ತಂದೆಯ ಪಾದಪಂಕಜವ
ಹಿಡಿದು ಬದುಕಿದ ಶರಣ ಲಕ್ಷ್ಮಣ । ನೆಡೆಗೆ ತೂಗುತ ಗದೆಯನದ ಕಂ
ಡಿಡಿದನಂಬಿನಲಸುರ ಮಿಕ್ಕಿನ ಕೈಗಳೆಸುಗೆಯಲಿ ೧೦

ನಸಿದುದಾತನ ಮರ್ಮ ಕರ್ಮವ । ನುಸುರ್ವ ಬಲುಗೊಂಡೆಯತನವು ನಿ
ಪ್ಪಸರದಲಿ ಜಡಿದಿಟ್ಟನೀತನನಾತುಕೋಯೆನುತ
ವಸುಧೆ ಮೊಳಗಿದುದಱಿಚಿತಂಬರ । ದೆಸೆದೆಸೆಗಳೊದಱಿದವು ಕುದಿದು
ಬ್ಬಸದಲುಕ್ಕಿತು ಶರಧಿ ಬಿಕ್ಕಿದನಳುಕಿ ಫಣಿರಾಯ ೧೧

ವರ ಪಟ್ಟಣದ ನಾಯಕನಾಗಬೇಡ" ಎಂದ ಲಕ್ಷ್ಮಣ. ೮. "ನೀನು ಒಪ್ಪುವುದಿಲ್ಲವೇ ? ನಮ್ಮ ಮಾತು ನಿನ್ನ ಮನಸ್ಸಿಗೆ ಹಿಡಿಸದಿದ್ದರೆ ಸಾರಥಿಯನ್ನು ಕರೆ. ಬಿಲ್ಲನ್ನು ಹಿಡಿ, ರಥವನ್ನು ನಡೆಸು, ಬಾವುಟದಿಂದ ಸನ್ನೆಮಾಡು. ನಾವು ನಿನ್ನನ್ನು ಕೊಲ್ಲುವುದಿಲ್ಲ. ನಿನ್ನ ಸಾಮರ್ಥ್ಯವನ್ನು ನಮ್ಮ ಮೇಲೆ ತೋರಿಸು. ಅಲ್ಲಿಯವರೆಗೂ ಕಲ್ಲುಮರಗಳನ್ನು ಹಿಡಿದ ವಾನರಯೋಧರು ನಿನ್ನನ್ನು ಮುತ್ತುವುದಿಲ್ಲ, ಅಂಜಬೇಡ" ಎಂದ ಲಕ್ಷ್ಮಣ. ೯. ಭಯಂಕರ ದುಷ್ಕರ್ಮದ ಕ್ರೂರ ರಾಕ್ಷಸನು ಈ ಮಾತುಗಳನ್ನು ಸಹಿಸುವನೇ ? ಬ್ರಹ್ಮನು ಕೊಟ್ಟ ಹೊಸದಾಗಿ ಮಸೆದ ಹೊಳೆಯುವ ಮೊನೆಗಳ ಶಕ್ತ್ಯಾಯುಧವನ್ನು ರಾವಣನು ತೆಗೆದುಕೊಂಡನು. ಶಕ್ತ್ಯಾಯುಧದಿಂದ ಹೊರಟ ಉರಿ ಆಕಾಶವನ್ನು ಮುತ್ತಲು ದೇವತೆಗಳು ಕಳವಳಗೊಂಡರು. ೧೦. ಶಕ್ತ್ಯಾಯುಧದಿಂದೆದ್ದ ಬೆಂಕಿ ವಾನರಸೈನ್ಯವನ್ನು ಹೊಡೆದಟ್ಟುತ್ತಿರುವುದನ್ನು ಕಂಡು ಗಂಗೆಯ ತಂದೆ ವಿಷ್ಣುವಿನ ಪಾದಕಮಲಗಳನ್ನು ಹಿಡಿದು ಬದುಕಿದ ವಿಭೀಷಣನು ಅತಿಶೀಘ್ರವಾಗಿ ಗದೆಯನ್ನು ತೂಗುತ್ತ ಲಕ್ಷ್ಮಣನ ಬಳಿಗೆ ಬಂದನು. ಅದನ್ನು ಕಂಡ ರಾವಣನು ಉಳಿದ ಕೈಗಳಿಂದ ವಿಭೀಷಣನ ಮೇಲೆ ಬಾಣ ಬಿಟ್ಟನು. ೧೧. ರಹಸ್ಯವನ್ನು ಬಯಲುಮಾಡುವ ವಿಭೀಷಣನ ಅತಿ ಚಾಡಿಕೋರತನವು ನಶಿಸಿತು. ರಭಸದಿಂದ ಅಬ್ಬರಿಸಿ 'ಆತುಕೋ' ಎನ್ನುತ್ತ ರಾವಣನು ಶಕ್ತ್ಯಾಯುಧವನ್ನು ಬಿಟ್ಟನು. ಆಗ ಭೂಮಿ ಗುಡುಗಿತು, ಆಕಾಶ ಅರಿಚಿಕೊಂಡಿತು, ದಿಕ್ಕುಗಳು ಕೂಗಿಕೊಂಡವು, ಸಮುದ್ರ ಕುದಿದು ಮೇಲುಸಿರಿಕ್ಕುತ್ತ ಉಕ್ಕಿತು,

ಘಣಘಣತ್ಕೃತಿಗೊಡುವ ಘಂಟಾ । ರಣಿತರವದುಬ್ಬರದ ಬೆಳಗಿನ
ಮಣಿನಿಬಂಧಕದಣಸಿನುರು ಬೊಂಬಾಳ ಚೌರಿಗಳ
ಸೆಣಸಿನಾಯುಧವೈದಿತಸುರಾ । ಗ್ರಣಿಯ ಬೊಬ್ಬೆಯ ಹಬ್ಬುಗೆಯಲರಿ
ಗಣಭಯಂಕರ ಭೀಮಬಲ ಶತ್ರುಘ್ನನಗ್ರಜನ ೧೨

ಮಾನನಿಧಿ ಕುಶ ಕೇಳ್ಸುಮಿತ್ರಾ । ಸೂನುವಿನ ಸಿಂಜಿನಿಯ ಶರಸಂ
ಧಾನದೆಸುಗೆಯ ಸರಳ ಬಗೆಯದೆ ಬಂದು ವಕ್ಷದಲಿ
ಭಾನುಬಿಂಬವ ನುಂಗುವ ಸ್ವ । ರ್ಭಾನುಮಂಡಲದಂತೆ ಮಂಡಿಸ
ಲಾನೆ ಹರಿಕರಹತಿಗೆ ಕೆಡೆದವೊಲೊಱಗಿದನು ಧರೆಗೆ ೧೩

ಸುರಪನಂಕುಶವಿಕ್ಕಿದನು ಮದ । ಕರಿಗೆ ಕರಹತ್ತಳದಲಶ್ವದ
ಬರಿಯನಣದೋಡಿದನು ಧನಪತಿ ಮಱೆಯ ಮೇಘದಲಿ
ಸರಿದನಾ ಮಕರೇಶ ಮಾರುತ । ನಿರವ ಹೇಳದಿರಂತಕನ ಬಾಯ್
ಕರಿಸ ಸುತ್ತಲು ಸುಳಿವ ಕಾಣೆನು ನಿರುತಿಹುತವಹರ ೧೪

ಈಶ ನಡುಗಿದನಂಜೆಯಿಂದಬು । ಜಾಸನನು ನಿಂದಲ್ಲಿ ನಿಲ್ಲದೆ
ಬಾಸರದ ಬಿಡುಮಂಡೆಯಲಿ ಹಾಯಿದನು ನಿಜಪುರಿಗೆ
ಲೇಸು ನಮಗಿನ್ನಿಲ್ಲವೆನುತಭಿ । ಲಾಷೆಯನು ಬಿಟ್ಟಖಿಳ ಮುನಿಜನ
ಪೈಸರಿಸಿತಂಬರವಳಯ ಹಾಳಾಯ್ತು ನಿಮಿಷದಲಿ ೧೫

ಆದಿಶೇಷನು ಹೆದರಿಕೆಯಿಂದ ಬಿಕ್ಕಿದನು. ೧೨. ಬಾಣಕ್ಕೆ ಕಟ್ಟಿದ ಗಂಟೆಗಳು ಗಣಗಣ ಶಬ್ದಮಾಡುತ್ತಿರಲು, ಹಿಳುಕಿಗೆ ಮೆಟ್ಟಿದ ರತ್ನಗಳು ಫಳಫಳ ಹೊಳೆಯುತ್ತಿರಲು, ಪ್ರಕಾಶಮಾನವಾದ ಕುಚ್ಚುಗಳನ್ನು ಕಟ್ಟಿದ ಎದುರುಬಂದವರನ್ನು ಪ್ರತಿಭಟಿಸುವ ಶಕ್ತ್ಯಾಯುಧವು ರಾಕ್ಷಸೇಶ್ವರನ ಅಬ್ಬರದೊಡನೆ ಶತ್ರುಭಯಂಕರನಾದ ಭೀಮಬಲ ಲಕ್ಷ್ಮಣನ ಬಳಿಗೆ ಬಂದಿತು. ೧೩. ಮಾನನಿಧಿ ಕುಶ, ಕೇಳು. ಲಕ್ಷ್ಮಣನ ಬಿಲ್ಲಿನಿಂದ ಹೊರಟ ಬಾಣವನ್ನು ಲಕ್ಷಿಸದೆ ಶಕ್ತ್ಯಾಯುಧವು ಸೂರ್ಯಬಿಂಬವನ್ನು ನುಂಗುವ ರಾಹುವಿನಂತೆ ಲಕ್ಷ್ಮಣನ ಎದೆಯಲ್ಲಿ ಕುಳಿತುಕೊಂಡಿತು. ಸಿಂಹದ ಪಂಜದೇಟಿಗೆ ಆನೆ ಬೀಳುವಂತೆ ಲಕ್ಷ್ಮಣನು ನೆಲಕ್ಕುರುಳಿದನು. ೧೪. ದೇವೇಂದ್ರನು ತನ್ನ ಐರಾವತ ವನ್ನು ಅಂಕುಶದಿಂದ ತಿವಿದು ಅಲ್ಲಿಂದ ಹೊರಟನು. ಕುದುರೆಯ ಪಕ್ಕೆಯನ್ನು ಅಂಗೈ ಯಿಂದ ತಟ್ಟಿ ಕುಬೇರನು ಓಡಿಹೋದನು. ವರುಣನು ಮೋಡದ ಮರೆಯಲ್ಲಿ ಜಾರಿ ಕೊಂಡನು. ವಾಯುವಿನ ಸ್ಥಿತಿಯನ್ನು ಏನೂ ಹೇಳಬೇಕಾಗಿಲ್ಲ. ಯಮನ ಬಾಯಲ್ಲಿ ನೊರೆ ಹೊರಟುಕೊಂಡಿತು. ನೈರುತಿ ಅಗ್ನಿಗಳ ಸುಳಿವು ಸುತ್ತಲೆಲ್ಲೂ ಕಾಣಲಿಲ್ಲ. ೧೫. ಈಶ್ವರನು ನಡುಗಿದನು, ಬ್ರಹ್ಮ ಹಂಸದ ಮೇಲೆ ನಿಂತಲ್ಲಿ ನಿಲ್ಲದೆ ಕೂಗುತ್ತ ಬರಿದಲೆಯಲ್ಲಿ ತನ್ನ ಪಟ್ಟಣಕ್ಕೆ ಓಡಿದನು. ಇನ್ನು ಶ್ರೇಯಸ್ಸು ನಮಗಿಲ್ಲ ಎನ್ನುತ್ತ ಆಸೆಯನ್ನು ಬಿಟ್ಟು ಸಮಸ್ತ ಋಷಿಮುನಿಗಳು ಹಿಂಜರಿದರು. ಗಗನಮಂಡಲವು ಒಂದು

ಅಕಟ ಲಕ್ಷ್ಮಣದೇವನರಿಭಟ । ಶಕುತಿಯಲಿ ಸೈಗೆಡೆದನೇ ರಣ
ದುಕುತಿ ತಪ್ಪಿತಲಾಯೆನುತ ಸುಗ್ರೀವ ಪವನಜರು
ಭ್ರುಕುಟಿಬದ್ಧ ಸರೋಷದಲಿ ಗಿರಿ । ನಿಕರದಲಿ ಹೊಳಿದರು ಕಪಿನಾ
ಯಕರು ಕೈಯೊಡನೇಱಿ ಕವಿಸಿದರದ್ರಿಕುಜತತಿಯು ೧೬

ಚಾಚಿದನು ಹೊಸತೇರನಾಗ ನಿ । ಶಾಚರೇಂದ್ರಂಗಾ ರಣದೊಳು ವಿ
ರೋಚನನ ಕುಲದಸುರ ವಿದ್ಯುನ್ಮಾಲಿಯೆಂಬವನು
ನಾಚಿ ಬೆರಸಿದ ಜಯಸಿರಿಗೆ ಖಳ । ನಾ ಚಟುಳರಥವೇಱಿ ಕವಿವ ವ
ನೇಚರರ ಬಿಡದೆಸುತ ಬಿಟ್ಟನು ರಥವ ಸೂಟಿಯಲಿ ೧೭

ಹರಿಸಿ ರಥವನು ಹರಿತನೂಜನ । ಹರಣ ಹಿಂಗಲು ಕೆಡಹಿ ಮುಂದಣ
ಹರಿಚಮೂಪತಿ ನೀಲ ನಳ ಗಜ ಗಂಧಮಾದನರ
ಕೊರಳ ಟಳಿಗಳ ಕಳಚಿ ಕಪಿಕೇ । ಸರಿ ಗವಾಕ್ಷ ದ್ವಿವಿದ ಮೈಂದರ
ಹೊರಳಲೆಚ್ಚು ಸುಗೊಂಡು ಕೊಂದನು ಕೋಟಿಸಂಖ್ಯೆಯಲಿ ೧೮

ತಿರುಹಿ ರಥವನು ಜಾಂಬವಂಗಜ । ಪುರದ ಪಥವನು ತೋಱಿ ಹನುಮನ
ಸರಳ ಶರಧಿಯೊಳದ್ದಿ ಕನಕಾಂಗದನನಂಗದನ
ಸುರಪುರಕೆ ಪಯಣವನು ಮಾಡಿಸಿ । ಪರಮವೈದ್ಯ ಸುಷೇಣಕನನು
ತ್ವರಿಸಲೀಸದೆ ಕಳುಹಿ ಕೆಣಕಿದನಾ ಖರಾಂತಕನ ೧೯

ನಿಮಿಷದಲ್ಲಿ ಪಾಳುಬಿದ್ದಿತು. ೧೬. 'ಅಯ್ಯೋ, ಲಕ್ಷ್ಮಣದೇವನು ಶತ್ರುವೀರನ ಶಕ್ತ್ಯಾಯುಧದಿಂದ ಕುಸಿದುಬಿದ್ದನಲ್ಲ, ಯುದ್ಧದ ತೂಕ ತಪ್ಪಿತಲ್ಲ!' ಎನ್ನುತ್ತ ಸುಗ್ರೀವ ಹನುಮಂತರು ಹುಬ್ಬುಗಂಟಿಕ್ಕಿ ಮಹಾಕ್ರೋಧದಿಂದ ಬೆಟ್ಟಗಳನ್ನೆಸೆದು ಶತ್ರುವನ್ನು ಮುಚ್ಚಿಬಿಟ್ಟರು. ವಾನರನಾಯಕರು ಜತೆಯಲ್ಲಿ ನುಗ್ಗಿ ಮರ ಮತ್ತು ಬೆಟ್ಟಗಳಿಂದ ಹೊಡೆದರು. ೧೭. ವಿರೋಚನನ ವಂಶದ ವಿದ್ಯುನ್ಮಾಲಿಯೆಂಬ ಅಸುರನು ಯುದ್ಧದಲ್ಲಿ ರಾಕ್ಷಸೇಶ್ವರನಿಗೆ ಹೊಸರಥವನ್ನು ತಂದುಕೊಟ್ಟನು. ತಾನು ಜಯವನ್ನು ಪಡೆದುದಕ್ಕೆ ನಾಚಿಕೊಂಡು ರಾವಣನು ವೇಗವಾಗಿ ಹರಿಯುವ ರಥವನ್ನೇರಿ ತನ್ನನ್ನು ಮುತ್ತಿದ ವಾನರರ ಮೇಲೆ ಬಾಣಬಿಡುತ್ತ ರಥವನ್ನು ರಭಸದಿಂದ ಮುಂದೆ ಬಿಟ್ಟನು. ೧೮. ರಾವಣನು ರಥವನ್ನು ಮುಂದಕ್ಕೆ ಓಡಿಸಿ ಸುಗ್ರೀವನ ಪ್ರಾಣ ಬತ್ತುವಂತೆ ಅವನನ್ನು ಕೆಳಕ್ಕೆ ಕೆಡವಿ, ವಾನರಸೇನಾನಾಯಕರಾದ ನೀಲ, ನಳ, ಗಜ, ಗಂಧಮಾದನರ ಗಂಟಲ ಮೂಳೆಯನ್ನು ಕಳಚಿ, ಕಪಿಕೇಸರಿ ಗವಾಕ್ಷ, ದ್ವಿವಿದ, ಮೈಂದರು ಹಿಂದಿರುಗುವಂತೆ ಬಾಣ ಹೊಡೆದು ಪ್ರಾಣ ತೆಗೆದು ಕೋಟಿಸಂಖ್ಯೆಯಲ್ಲಿ ಕಪಿಗಳನ್ನು ಕೊಂದನು. ೧೯. ರಾವಣನು ರಥವನ್ನು ತಿರುಗಿಸಿ ಜಾಂಬವನಿಗೆ ಬ್ರಹ್ಮಪುರದ ದಾರಿಯನ್ನು ತೋರಿಸಿ, ಹನುಮಂತನನ್ನು ಬಾಣಗಳ ಕಡಲಿನಲ್ಲಿ ಮುಳುಗಿಸಿ ಕನಕಾಂಗದ ಅಂಗದರನ್ನು ದೇವಲೋಕಕ್ಕೆ ಪ್ರಯಾಣ ಮಾಡಿಸಿ ವೈದ್ಯ ಸುಷೇಣಕನಿಗೆ ಉತ್ತರಕೊಡಲು

ಖೂಳನೈ ನೀ ರಣದೊಳಗೆ ಕಡು । ಖೂಳರಸುರರೊಳಾರು ಮಿಗೆ ರಣ
ಕೇಳಿ ಯಾರದು ಗೆಲವ ತೋಱಾ ನಿನ್ನ ಪರಿಜನದ
ಕಾಳಗದ ಕಾಮಿನಿ ವಿಚಾರಿಸೆ । ಸೂಳೆಯೋ ಸಾಧ್ವಿಯೊ ಸಮೀಕದ
ಸೋಲವಿಂದಿನಲಾರದೆಂಬುದ ನೋಡಿಕೋಯೆಂದ ೨೦

ನೋಡಿದೆವು ಲೇಸಾಗಿ ನಾವ್ ನೀ । ನೋಡಿಕೋ ಸಾಕಗ್ರದಲಿ ದಿಟ
ಜೋಡೆಯೋ ಜಾತ್ಯಂಗನೆಯೊ ಜಯವನಿತೆಯೆಮ್ಮೆಡೆಗೆ
ನಾಡನಾಡದೆ ಕಣೆಗಳಲಿ ಮಾ । ತಾಡು ಗರುವರಿಗಂಗವಿದು ಗತಿ
ಗೇಡುಗರ ಬಱಿಚೋಕೆಗಂಜುವ ಭಟನೆ ತಾನೆಂದ ೨೧

ಕಾಕತನವನು ವರುಣ ಯಮ ಶಿಖಿ । ಪಾಕಶಾಸನರೊಳಗೆ ಮೆಱೆವುದು
ಕೊಯ್ಕರಲಿ ಹೆಂಗಳ್ಳರಲಿ ಕಳುಗುಡುಹಿ ಕಟ್ಟೆಯಲಿ
ಮೂಕೊಱೆಯರಲಿ ನಿನ್ನ ಮಹಿಮೆಯ । ನಾಕುಮಡಿಯಲಿ ಬಗುಳುವುದು ನಿನ
ಗೇಕೆ ಸಾತ್ವಿಕ ಸಮರಶೌರ್ಯದ ಸುಭಟತನವೆಂದ ೨೨

ಆರು ತರಬಹುದಕಟ ಹೆಂಗುಸ । ಚೋರವಿದ್ಯೆಯಲನೃತಮುಖದಿಂ
ದಾರು ಗೆಲಬಹುದೈ ನಿದಾನಿಸಲರುಣನಂದನನ
ಆರು ಸಂಪಾತಿಯ ತನೂಭವ । ನೂರುವಿನ ಸಂಧಿಯಲಿ ನುಸುಳುವ
ವೀರತನ ನಿನಗಲ್ಲದಾರಿಗೆ ಸುಲಭವಹುದೆಂದ ೨೩

ಅವಕಾಶ ಕೊಡದೆ ಕಳುಹಿಸಿ ರಾಮನನ್ನು ಕೆಣಕಿದನು. ೨೦. "ಯುದ್ಧದಲ್ಲಿ ನೀನು ಮೂರ್ಖನೇ ಸರಿ. ರಾಕ್ಷಸರಲ್ಲಿ ಮಹಾಮೂರ್ಖರು ಯಾರು ? ಯುದ್ಧದಾಟ ಯಾರದು ? ನಿನ್ನ ಪರಿವಾರದ ಗೆಲವನ್ನು ತೋರಿಸು ನೋಡೋಣ. ವಿಚಾರಿಸಿ ನೋಡಿದರೆ ಯುದ್ಧನಾರಿಯು ಸೂಳೆಯೋ ಸಾಧ್ವಿಯೋ ? ಯುದ್ಧದಲ್ಲಿ ಇಂದಿನ ಸೋಲು ಯಾರದು ಎಂಬುದನ್ನು ನೋಡಿಕೋ " ಎಂದ ರಾಮ. ೨೧. "ನಾವು ಚೆನ್ನಾಗಿ ನೋಡಿದೆವು. ಕೊನೆಗೆ ನಮ್ಮ ಬಳಿಯ ವಿಜಯಲಕ್ಷ್ಮಿಯು ವ್ಯಭಿಚಾರಿಣಿಯೋ ಜಾತ್ಯಂಗನೆಯೋ ಎಂಬುದನ್ನು ನೀನು ನೋಡಿಕೋ ಸಾಕು. ಬಾಯಿಗೆ ಬಂದಂತೆ ಆಡದೆ ಬಾಣಗಳ ಮೂಲಕ ಉತ್ತರಕೊಡು. ಶೂರರ ಲಕ್ಷಣವಿದು. ಗತಿಗೇಡಿಗಳ ತಿರುಳಿಲ್ಲದ ನಟನೆಗೆ ಅಂಜುವ ಯೋಧನೆ ನಾನು?" ಎಂದು ರಾವಣ ಉತ್ತರಕೊಟ್ಟ. ೨೨. "ನಿನ್ನ ಒಣಜಂಬವನ್ನು ವರುಣ, ಯಮ, ಅಗ್ನಿ, ಇಂದ್ರರ ಎದುರಿಗೆ ಪ್ರದರ್ಶಿಸು. ವಂಚಕರಲ್ಲಿ, ಹೆಂಗಳ್ಳರಲ್ಲಿ, ಹೆಂಡಕುಡುಕರ ಕಟ್ಟೆಯಲ್ಲಿ, ಮೂಗುಹರುಕರಲ್ಲಿ ನಿನ್ನ ಮಹಿಮೆಯನ್ನು ನಾಕರಷ್ಟು ಹೆಚ್ಚಿಸಿ ಬೊಗಳು. ನಿನಗೇಕೆ ಸಾತ್ವಿಕಯುದ್ಧದ ಶೌರ್ಯ" ಎಂದ ರಾಮ. ೨೩. "ಕಳ್ಳತನದಲ್ಲಿ ಹೆಂಗಸನ್ನು ಯಾರು ಕದ್ದು ತರಬಹುದು ? ಸುಳ್ಳು ಹೇಳಿ ಜಟಾಯುವನ್ನು ಯಾರು ಗೆಲ್ಲಬಹುದು ? ಸಂಪಾತಿಯ ಮಗನ ತೊಡೆಯ ಸಂದಿಯಲ್ಲಿ ನುಸುಳುವ ಪರಾಕ್ರಮ ನಿನಗಲ್ಲದೆ ಯಾರಿಗೆ ತಾನೆ

ಅಲಿಗಳು ಕಂಡಱಿಯದಿರ್ದಡೆ । ಕೇಳಿದಱಿಯವೆ ಕಿವಿಗಳುರೆ ಕ
ಟ್ಟಾಳು ನೀನೆಂಬುದನು ನಾವಿದಕಾಣೆಯಿಡಲೇಕೆ
ಕಾಳಗದ ಕೌತುಕದ ಕುಶಲದ । ಚಾಳಿಯುಳ್ಳಡೆ ಚಾಚು ಕಣೆಗಳ
ಕಾಳನಾಡದೆ ಬೇಗೆನುತ ಬಿಲುದುಡುಕಿದನು ರಾಮ ೨೪

ಆದಡಿದಕೊಳ್ಳೆನುತ ದಿಗು ಧರ । ಣೀದಿಶಾಂಗಣವೈದೆ ಬಾಣವು
ಹೋದಧಿಯುಲೊಳಬಿದ್ದುದೆನೆ ಕವಿದೆಚ್ಚನಿನಕುಲನ
ಆದಿನಾರಾಯಣನಲಾ ವಿಲ । ಯೋದಧಿಯ ತೆರೆ ಸೋಕದಿದ್ದೋ
ಪಾದಿಯಲಿ ಹಗೆಯಂಬು ಚುಂಬಿಸದಿರ್ದುದಾ ನೃಪನ ೨೫

ತುಱುಗಿ ತಾರಕಿ ತಾಮಸಿಯೊಳೊಡೆ । ದೆಱಿಹುದೋಱದೆ ಬೆಳಗಲಾ ನೇ
ಸಱಿನ ತಲೆದೋಱಿಕೆಯುಲುಂಟೇ ತಮದ ಮಹಿಮೆಗಳು
ಮೆಱೆವವೇ ರಘುನಾಥನಿದಿರಿನ । ಲಿಱಿತಕಾಱನ ಚಾಪವಿದ್ಯೆಯು
ನೆಱವಣಿಗೆ ನೆಳಲಂಚೆಯುಪೋಲಾಯ್ತರಿಯ ಶರಜಾಲ ೨೬

ಅರರೆ ರಾಮನ ಬಾಣವೊಂದೇ । ತಿರುವನೊದವಾಗಂತರದಲು
ಬರದ ತೆಱಹನು ಕಾಣೆ ಕಾಣೆನು ಕದನದರಿಭಟನ
ಸರಳ ಖಂಡಿಸುವಲ್ಲಿ ಗಣನೆಯು । ಗುರುಲಘುತ್ವದಮೋಘತರ ಸಂ
ಗರದ ಧಾರಾಪಾತದಲಿ ನೃಪಗಾರು ಸರಿಯೆಂದ ೨೭

ಸುಲಭ ?" ಎಂದ ರಾಮ. ೨೪. "ನೀನು ಕಡುಗಲಿಯೆಂಬುದನ್ನು ಕಣ್ಣಾರೆ ಕಾಣದಿದ್ದರೂ ಕಿವಿಗಳು ಕೇಳಿ ತಿಳಿಯವೆ ? ನಾವು ಇದಕ್ಕೆ ಆಣೆಯೇಕೆ ಇಡಬೇಕು. ಕಾಳಗದಲ್ಲಿ ನೈಪುಣ್ಯವನ್ನು ಮೆರೆಯುವ ಹಟವಿದ್ದರೆ ವೃಥಾ ಹರಟದೆ ಬೇಗ ಬಾಣಗಳನ್ನು ಬಿಡು" ಎನ್ನುತ್ತ ರಾಮನು ಬಿಲ್ಲನ್ನು ಕೈಗೆತ್ತಿಕೊಂಡನು. ೨೫. "ಹಾಗಿದ್ದರೆ ಇದನ್ನು ತೆಗೆದುಕೋ" ಎನ್ನುತ್ತ ರಾವಣನು ದಿಕ್ಕು ಭೂಮಿ ಆಕಾಶಗಳು ಬಾಣಗಳ ಸಮುದ್ರದಲ್ಲಿ ಮುಳುಗಿದುವೋ ಎನ್ನುವಂತೆ ರಾಮನ ಮೇಲೆ ಬಾಣಬಿಟ್ಟನು. ಶ್ರೀರಾಮನು ಆದಿನಾರಾಯಣನಲ್ಲವೇ ? ಪ್ರಳಯಸಾಗರದ ಅಲೆಗಳು ಅವನನ್ನು ಹೇಗೆ ಸ್ಪರ್ಶಿಸಲಿಲ್ಲವೋ ಹಾಗೆ ರಾವಣನ ಬಾಣಗಳು ರಾಮನನ್ನು ಮುಟ್ಟಲಿಲ್ಲ. ೨೬. ನಕ್ಷತ್ರಮಂಡಲವು ಇರುಳಿನಲ್ಲಿ ನಿರಂತರವಾಗಿ ಬೆಳಗಿ ರಾತ್ರಿಯ ಶೋಭೆಯನ್ನು ಹೆಚ್ಚಿಸುವುದು. ಆದರೆ ಸೂರ್ಯನು ಹುಟ್ಟಿದ ಮೇಲೆ ರಾತ್ರಿಗೆ ಆ ಮಹಿಮೆ ನಿಲ್ಲುವುದೇ ? ರಘುನಾಥನ ಎದುರಿನಲ್ಲಿ ರಾವಣನ ಬಿಲ್ವಿದ್ಯಾಪರಿಪೂರ್ಣತೆಯು ಮೆರೆಯುವುದೇ ? ಶತ್ರುವಿನ ಬಾಣಗಳ ಸಮೂಹವು ನೆಳಲಿನ ಹಂಸದಂತಾಯಿತು. ? ೨೭. ಅಬ್ಬಬ್ಬ, ರಾಮನ ಒಂದೇ ಬಾಣ ಬಿಲ್ಲಿನ ಹಗ್ಗದಿಂದ ಚಿಮ್ಮಿ ಹೊರಟಾಗ ನಡುವೆ ಆಕಾಶದಲ್ಲಿ ಬಿಡುವಿನ ಸ್ಥಳವನ್ನೇ ಕಾಣೆ. ಶತ್ರುವೀರನ ಬಾಣಗಳನ್ನು ಕತ್ತರಿಸುವುದಕ್ಕೆ ಲೆಕ್ಕವನ್ನೇ ಕಾಣೆ. ಗುರು ಲಘುತ್ವದ ಅಮೋಘ ಸಂಧಾನದಿಂದ ಯುದ್ಧದಲ್ಲಿ ಬಾಣಗಳ ಮಳೆಗರೆಯುವಲ್ಲಿ ರಾಮನಿಗೆ ಯಾರು ಸರಿ – ಎಂದು ರಾಮನ ಬಿಲ್ವಿದ್ಯಾಕೌಶಲವನ್ನು

ಎಲೆ ಕುಮಾರಕ ಕೇಳು ರಾಮನ । ಬಲುಮೆಗವ ಸರಿಯೆನಲು ಬಹುದಾ
ಕಲಿಗಳಿಬ್ಬರಿಗಿಬ್ಬರೇ ಪ್ರತಿಕಣೆಯು ಕುಶಲದಲಿ
ಹಿಳುಕು ಹಿಳುಕಿನಲಲಗಲಗಿನಲಿ । ಮಲೆತು ಕಣೆಕಣೆಗಳಲಿ ಗರಿಗರಿ
ಗಳಲಿ ಘಾತಿಸಿ ಗಾಢಬಲರೊದಗಿದರು ಸರಿಸದಲಿ ೨೮

ಕಾದಿದರು ಮಧುಕೈಟಭರು ಮೊದ । ಲಾದಿನಾರಾಯಣನೊಳಿತ್ತಲು
ಕಾದಿದರು ತಮನಾ ಹಿರಣ್ಯಾಕ್ಷಕ ಹಿರಣ್ಯಕರು
ಆದಿಮತ್ಸ್ಯ ವರಾಹ ನರಹರಿ । ಯಾದಿವಿಷ್ಣುವಿನೊಡನೆ ಹೋಲಿಸ
ಲೈದುವವು ಹೊಗಳುವಡೆ ಶೇಷಂಗರಿದಲೇಯೆಂದ ೨೯

ನಡೆದುದಗ್ಗದ ಸಮರ ಸರಳಿನ । ಕಡಿತದಲಿ ಕುಂಭಿನಿಯು ಕೊರಳಿನ
ಹೆಡಕು ಬಾರಿಸಿತಿಬ್ಬರೆಸುಗೆಗೆ ಕಾಣೆನವಧಿಗಳ
ಕಡುಗಲಿಗಳಂಗದಲಿ ಕಣೆಗಳು । ತುಡುಕಿತಿಲ್ಲೆಸುಗೆಗಳಲೇನು
ಗ್ಗಡದ ವೀರರೊ ಬಾಣತಂತ್ರದ ಬಹಳ ವಿದ್ಯೆಯಲಿ ೩೦

ಆದಡೆಯು ಮಿಗಿಲಾದುದೇ ಖರ । ಸೂದನನ ಕಟ್ಟೆಸುಗೆ ಮೊದಲಂ
ದಾದ ರಣನಾಟಕವ ಬಲ್ಲೈ ಜಾನಕೀಸುತನೆ
ಆದುದಾ ವಿಧಿ ರಾವಣಂಗೊಂ । ದಾದುದಿಲ್ಲ ದಿಗಂಬರತ್ವ ವಿ
ನೋದವಿಭವವನಲಾ ವಿಕರ್ತನ ವಂಶದರಸೆಂದ ೩೧

ವಾಲ್ಮೀಕಿಗಳು ವರ್ಣಿಸಿದರು. ೨೮. ಅಯ್ಯಾ ಕುಶಕುಮಾರ ಕೇಳು. ರಾಮನ ಸಾಮರ್ಥ್ಯಕ್ಕೆ ರಾವಣನು ಸರಿ ಎನ್ನಬಹುದು. ಬಾಣಕ್ಕೆ ತಕ್ಕ ಪ್ರತಿಬಾಣವನ್ನು ಬಿಡುವ ಕೌಶಲ್ಯದಲ್ಲಿ ರಾಮ ರಾವಣರಿಗೆ ಅವರಿಬ್ಬರೇ ಸಮ. ಬಾಣದ ಹಿಳುಕು ಹಿಳುಕನ್ನೂ, ಹರಿತವಾದ ಮೊನೆ ಮೊನೆಯನ್ನೂ, ಬಾಣ ಬಾಣವನ್ನೂ, ಗರಿ ಗರಿಯನ್ನೂ ಕತ್ತರಿಸುವಂತೆ ಆ ಬಲಶಾಲಿಗಳು ಸಮಸಮವಾಗಿ ಯುದ್ಧಮಾಡಿದರು. ೨೯. ಪೂರ್ವದಲ್ಲಿ ಮಧುಕೈಟಭಾಸುರರು ಆದಿನಾರಾಯಣನೊಡನೆ ಕಾದಿದರು. ಇತ್ತ ತಮಾಸುರ, ಹಿರಣ್ಯಾಕ್ಷ, ಹಿರಣ್ಯಕಶಿಪುಗಳು ಆದಿಮತ್ಸ್ಯ, ವರಾಹ, ನರಸಿಂಹ ಮೊದಲಾದ ವಿಷ್ಣುವಿನ ಅವತಾರದೊಡನೆ ಯುದ್ಧಮಾಡಿದರು. ಆ ಯುದ್ಧಗಳಿಗೆ ರಾವಣ ರಾಮ ಇವರ ಕಾಳಗವನ್ನು ಹೋಲಿಸಬಹುದು. ಇವರ ಯುದ್ಧವನ್ನು ಹೊಗಳಲು ಸಾವಿರಹೆಡೆಯ ಆದಿಶೇಷನಿಗೂ ಅಸಾಧ್ಯವಲ್ಲವೇ – ಎಂದರು ವಾಲ್ಮೀಕಿಮಹರ್ಷಿಗಳು. ೩೦. ರಾಮ ರಾವಣರ ನಡುವೆ ಬಾಣ ಬಾಣಗಳನ್ನು ಕತ್ತರಿಸುವ ಅಮೋಘಯುದ್ಧವು ನಡೆಯಿತು. ಬಾಣಗಳ ಏಟಿನಿಂದ ಭೂಮಿಯು ಕೊರಳಿನ ಹಿಂಭಾಗಕ್ಕೆ ನೋವಾಯಿತು. ಇಬ್ಬರ ಬಾಣಪ್ರಯೋಗಕ್ಕೆ ಎಲ್ಲೆಯನ್ನು ಕಾಣೆ. ಆ ಮಹಾವೀರರ ಮೈಗಳಿಗೆ ಮಾತ್ರ ಬಾಣಗಳು ತಗುಲಲಿಲ್ಲ. ಬಾಣವಿದ್ಯಾಚಾತುರ್ಯದಲ್ಲಿ ಅದೆಂಥ ಶ್ರೇಷ್ಠ ವೀರರೋ ರಾಮ ರಾವಣರು! ೩೧. ಆದರೂ ರಾಮನ ತೀವ್ರಬಾಣಪ್ರಯೋಗವು ಮಿಗಿಲಾದುದೇ ಸರಿ. ಅಂದು ನಡೆದ ಕದನನಾಟಕವನ್ನು ಬಲ್ಲೆಯಾ ಜಾನಕೀಸುತನೇ? ಹಿಂದೆ ರಾವಣನ ಗತಿಯೇನಾಯಿತೆಂಬುದನ್ನು ನೀನು ಬಲ್ಲೆಯಲ್ಲವೇ? ಬೆತ್ತಲೆಯಾಗುವ

ರಥ ರಥಾಶ್ವಧ್ವಜಕುಲವ ಸಾ । ರಥಿ ಶರಾಸನ ಬಾಣ ಕನಸಿನ
ಕಥೆಯವೊಲು ತೋಱಿದವು ರಾಕ್ಷಸಸಾರ್ವಭೌಮಂಗೆ
ಶಿಥಿಲವಾಯ್ತುದ್ರೇಕ ರಣದತಿ । ಮಥನ ಮೈಲಿಗೆಯಾಯ್ತು ಚಿತ್ತ
ವ್ಯಥೆಯಲಿರ್ದನು ಮಣಿದ ಮೌಳಿಯ ನಟ್ಟ ಬೆಱಗಿನಲಿ ೩೨

ಏನೆಲವೊ ದುಮ್ಮಾನ ರಣಸು । ಮ್ಮಾನವೆಲ್ಲಿಗೆ ಹೋಯ್ತು ಶರಸಂ
ಧಾನವೆಮ್ಮದು ಕೊರಳ ಕೊಟ್ಟಾ ನಮ್ಮ ಮಾರ್ಗಣಕೆ
ಮಾನಸದೊಳಂಜದಿರು ಶಸ್ತ್ರವಿ । ಹೀನನನು ವಿರಥನನು ರಘುಕುಲ
ಮಾನನಿಧಿಗಳು ಕೊಲ್ಲರಂಜಿಕೆಬೇಡ ನಿನಗೆಂದ ೩೩

ಬಿಡೆಯ ಘನವೆಮಗೀಚೆಯಲಿ ನಿ । ನ್ನೊಡನೆ ಹುಟ್ಟಿದ ಕಲಿವಿಭೀಷಣ
ನೊಡಲು ಮುಱುಗುವುದಿಂದು ಕೊಂದರೆ ಮೂಱುಬಾರಿಯಲಿ
ತಡಿಗೆ ಚಾಚುವುದಬುಧಿಯದು ನಾ । ಣ್ನುಡಿ ಜಗತ್ತಿನೊಳಿಂದು ನಿನ್ನನು
ಕೊಡೆ ಕೃತಾಂತಗೆ ಹೋಗೆನುತ ತೆಗೆದೆಚ್ಚನಾ ರಾಮ ೩೪

ಕೊಂಡು ಹೋದುದು ಬಾಣವಾ ರಣ । ಭಂಡ ರಕ್ಕಸರಾಯನನು ಪುರ
ಕಂಡುದೆಂಬೊಂದಱಿಕೆಯನು ಹುಟ್ಟಿಸಿದೆ ಮಾರ್ಗದಲಿ
ಹಿಂಡುಗಳ ಮುಸುಕಿನಲಿ ಪಟ್ಟದ । ಹೆಂಡತಿಯ ನಿಳಯದಲಿ ಹಾಯ್ಕಿತು
ಕಂಡುದೈತಂದಸ್ತ್ರಶಿಕ್ಷಾಚಾರ್ಯ ರಾಘವನ ೩೫

ದೊಂದು ನಿಂತಿತು. ಸೂರ್ಯವಂಶದರಸ ರಾಮನು ವಿನೋದಪರನೆಂಬುದು ಸಿದ್ಧಿಸಿತು. ೩೨. ರಾಮನ ಬಾಣಗಳಿಂದ ನಾಶವಾದ ರಥ, ರಥದ ಕುದುರೆಗಳು, ಬಾವುಟ, ಸಾರಥಿ, ಬಾಣ ಮೊದಲಾದವು ರಾಕ್ಷಸಚಕ್ರವರ್ತಿಗೆ ಕನಸಿನಂತಾದವು. ಅವನ ಆವೇಶ ಇಳಿಯಿತು ; ಯುದ್ಧ ಮಾಡಬೇಕೆಂಬ ಛಲ ಮೈಲಿಗೆಯಾಯಿತು. ರಾವಣನು ತಲೆತಗ್ಗಿಸಿ ಚಿಂತೆಯಲ್ಲಿ ಮುಳುಗಿದನು. ೩೩. "ನಿನ್ನ ಮನಸ್ಸಿನ ದುಗುಡ ವೇನು ? ನಿನ್ನ ಯುದ್ಧೋತ್ಸಾಹವೆಲ್ಲಿಗೆ ಹೋಯಿತು ? ನಾವು ಬಾಣಬಿಡುವವರು. ನಮ್ಮ ಬಾಣಕ್ಕೆ ಕೊರಳನ್ನು ಒಪ್ಪಿಸಿದೆಯಾ ? ಮನಸ್ಸಿನಲ್ಲಿ ಅಂಜಬೇಡ, ಶಸ್ತ್ರವಿಹೀ ನನ್ನೂ ರಥ ಕಳೆದುಕೊಂಡವನನ್ನೂ-ರಘುವಂಶದ ಮಾನನಿಧಿಗಳು ಕೊಲ್ಲುವುದಿಲ್ಲ, ನಿನಗೆ ಭಯ ಬೇಡ" ಎಂದ ರಾಮ. ೩೪. "ನಮ್ಮ ಕಡೆಯವರಲ್ಲಿ ನನಗೆ ದಾಕ್ಷಿಣ್ಯ ಹೆಚ್ಚು. ನಿನ್ನ ಒಡಹುಟ್ಟಿದವನಾದ ಕಲಿವಿಭೀಷಣನ ಕರುಳು ಕೊರಗುವುದು ನಾವು ಇಂದು ನಿನ್ನನ್ನು ಕೊಂದರೆ. ಮುಳುಗುವವನನ್ನು ಮೂರು ಬಾರಿ ಕಡಲು ದಡಕ್ಕೆ ತಳ್ಳು ವುದು ಎಂಬ ಗಾದೆಯಿದೆ. ಇಂದು ನಿನ್ನನ್ನು ಯಮನಿಗೆ ಒಪ್ಪಿಸಿಕೊಡುವುದಿಲ್ಲ, ಹೋಗು" ಎಂದು ನುಡಿದು ರಾಮನು ರಾವಣನ ಮೇಲೆ ಬಾಣವನ್ನು ಬಿಟ್ಟ. ೩೫. ರಣದಲ್ಲಿ ಲಜ್ಜೆಗೇಡಿಯಾದ ರಾವಣನನ್ನು ಬಾಣವು ಎತ್ತಿಕೊಂಡು ಹೋಯಿತು. ದಾರಿಯಲ್ಲಿ ಲಂಕಾಪಟ್ಟಣವು ಕಣ್ಣಿಗೆ ಕಾಣಿಸಿತೆಂಬ ಅರಿವನ್ನು ರಾವ ಣನಿಗೆ ಉಂಟುಮಾಡಿ ಬಾಣಗಳ ಸಮೂಹದ ಮುಸುಕಿನಲ್ಲಿ ರಾವಣನ ಪಟ್ಟದ ರಾಣಿಯ ಅರಮನೆಯಲ್ಲಿ ಹಾಕಿ ಅಸ್ತ್ರವಿದ್ಯಾವಿಶಾರದ ರಾಮನ ಬಳಿಗೆ ಹಿಂದಿರುಗಿ

ಆಯೆನುತ ನೋಡಿದನು ತುರಗನಿ । ಕಾಯುವನು ಗರುಡಾಗ್ರಜನು ರಘು
ರಾಯ ಮಝಭಾಪೆನುತ ಪಡುವಣ ಕಡಲ ತಡಿಗಾಗಿ
ಆಯತಾಂಬಕನಂಬಕದ ಪಾ । ನೀಯ ಪತನದಲೈದಿ ಬಂದನು
ವಾಯುಜನ ಕೈವಿಡಿದು ಲಕ್ಷ್ಮಣದೇವನಿದ್ದೆಡೆಗೆ ೩೬

ಹಾಸಿ ಹರಹಿದ ತೋಳುಗಳ ಹೊಱ । ಸೂಸಿದಂಬಿನ ಕರತಳದ ಬಿಡ
ಬೀಸಿದಂಗದ ಜೀವಪವನನ ಪಥದ ನಾಸಿಕದ
ಆ ಸರೋಜಜ ಶಕ್ತಿಮುಖದಲಿ । ಬಾಸಣಿಸುವರುಣಾಂಬುವಿನ ಬಿಡು
ಗೇಶದನುಜನ ಕಂಡು ದೊಪ್ಪನೆ ಕೆಡೆದನವನಿಯಲಿ ೩೭

ಉಕ್ಕಿದುದು ಕಡುಶೋಕರಸ ಕಾ । ಲಿಕ್ಕಿತಗ್ಗದ ಮಱವೆ ಮಱವೆಯ
ನೊಕ್ಕು ಹಲವಂಗದಲಿ ಹಳವಳಿಸಿದ ನಿಜಾನುಜನ
ಅಕ್ಕಿತೇ ದುಷ್ಕೀರ್ತಿ ತಮ್ಮನ । ನಿಕ್ಕಿದೆನಲಾ ರಣಕೆ ಮಾಯೆಯ
ಠಕ್ಕಿನಬಲೆಯ ಮೋಹಕದಲೆಂದರಸನಳವಳಿದ ೩೮

ಅಡವಿ ಸಲ್ಲದು ನಿನಗೆ ಬೇಡೆಂ । ದಡಟಿ ಬಿದ್ದೆನಲಾ ವಿಪತ್ತುಗ
ಳೆಡೆಯನೆಣಿಸದೆ ಸೇವೆಗಲಸದೆ ತನ್ನ ಬೆಂಬಳಿಯ
ಬಿಡದೆ ಬಂದೈ ತಮ್ಮ ನಿರಶನ । ಕೊಡಲನಿತ್ತೈ ತಾಯ್ ತನಗೆ ಕೈ
ಯೆಡೆಯ ಶಿಶುವೆಂದಿತ್ತಳಿನ್ನೇನೆಂಬುದಾನೆಂದ ೩೯

ಬಂದು ಅವನಿಗೆ ಕಾಣಿಸಿಕೊಂಡಿತು. ೩೬. 'ರಘುರಾಯ ! ಭಲಾ, ಶಹಬಾಸ್ !' ಎಂದು ವಿಸ್ಮಿತನಾದ ಸೂರ್ಯನು ಪಶ್ಚಿಮಸಮುದ್ರದ ದಡಕ್ಕೆ ರಥವನ್ನು ನಡೆಸಿಕೊಂಡು ಹೋದನು. ವಿಶಾಲಲೋಚನ ರಾಮನು ಕಣ್ಣುಗಳಲ್ಲಿ ನೀರು ಸುರಿಸುತ್ತ ಹನುಮಂತನ ಕೈಹಿಡಿದು ಲಕ್ಷ್ಮಣನಿದ್ದ ಬಳಿಗೆ ಬಂದನು. ೩೭. ನೆಲದ ಮೇಲೆ ಹರಡಿದ ತೋಳುಗಳು, ಅಂಗೈಯಿಂದ ಹೊರತೆಗೆದ ಬಾಣ, ಬಿಡುಬೀಸಾಗಿ ನೆಲದ ಮೇಲೊರಗಿದ ದೇಹ, ಮೂಗಿನಲ್ಲಾಡುವ ಜೀವದುಸಿರು, ಬ್ರಹ್ಮನ ಶಕ್ತ್ಯಾಯುಧವನ್ನು ಮುಚ್ಚಿದ ರಕ್ತ, ಬಿಚ್ಚಿದ ಕೂದಲು—ಈ ಸ್ಥಿತಿಯಲ್ಲಿದ್ದ ತಮ್ಮನನ್ನು ಕಂಡು ರಾಮನು ಧೊಪ್ಪನೆ ನೆಲದ ಮೇಲೆ ಕುಸಿದು ಬಿದ್ದನು. ೩೮. ರಾಮನಿಗೆ ಕಡುದುಃಖ ಉಕ್ಕಿತು; ಮೈಮರೆವು ಮನೆಮಾಡಿಕೊಂಡಿತು; ಮೈಮರೆವಿನಿಂದ ಚೇತರಿಸಿಕೊಂಡು ತಮ್ಮನನ್ನು ಕುರಿತು ಹಲವು ರೀತಿಯಲ್ಲಿ ಶೋಕಿಸಿದನು." ದುಷ್ಕೀರ್ತಿ ನಮ್ಮನ್ನು ಹಿಡಿಯಿತೇ. ವಂಚಕಳಾದ ಮಾಯಾಸ್ತ್ರೀಯ ಮೋಹಕ್ಕೆ ಸಿಕ್ಕಿ ತಮ್ಮನನ್ನು ಯುದ್ಧಕ್ಕೆ ಬಲಿಕೊಟ್ಟೆನಲ್ಲ ೩೯. ಕಾಡಿಗೆ ಬರುವುದು ಬೇಡ ಎಂದು ಎದ್ದು ಬಿದ್ದೆನಲ್ಲ. ಆದರೆ ವಿಪತ್ತುಗಳನ್ನು ನಿರ್ಲಕ್ಷಿಸಿ ಸೇವೆಯ ಕಷ್ಟಕ್ಕೆ ಬೇಸರವಿಲ್ಲದೆ ನನ್ನನ್ನು ಬಿಡದೆ ಹಿಂಬಾಲಿಸಿ ಬಂದೆಯಲ್ಲ. ತಮ್ಮ, ಉಪವಾಸಕ್ಕೆ ದೇಹವನ್ನು ತೆತ್ತೆಯಲ್ಲ. ತಾಯಿ ನಿನ್ನನ್ನು ನನ್ನ ರಕ್ಷಣೆಯ ಮಗುವೆಂದು ಒಪ್ಪಿಸಿ ಕೊಟ್ಟಳಲ್ಲ. ನಾನು ಇನ್ನು ಅವಳಿಗೆ ಏನು ಉತ್ತರ ಕೊಡಲಿ" ಎಂದು ರಾಮ ದುಃಖಿ

ಸುಳಿದ ಮಾಯಾಮೃಗವ ತರಲೆಂ । ದೆಳಸುವೆನ್ನೊಳು ಬೇಡ ಬೇಡೆಂ
ದೊಳಗಱಿದು ನುಡಿವುದನು ಕೇಳದೆ ನಡೆದೆನಡವಿಯಲಿ
ಖಳನು ಸೀತೆಯನೊಯ್ಯೆ ನಿನ್ನೊಳು । ಮುಳಿದೆನತಿ ನಿಷ್ಠುರತೆಯಲಿ ಕೈ
ಕೊಳದೆ ಕಷ್ಟವ ಬಿಟ್ಟು ಹೋದೈ ತಮ್ಮ ನೀನೆಂದ ೪೦

ಪಿತನ ಮರಣವನನುಜರಿಬ್ಬರ । ವಿತತ ವಿರಹವನುರು ಸುಮಾತಾ
ತ್ರಿತಯದಧಿಕ ವಿಯೋಗವನು ಕಾನನಪರಿಭ್ರಮದ
ಅತಿಶಯದ ದುಃಖವನು ನಿನ್ನಾ । ಯತಿಕೆಯಲಿ ಮಱೆದಿರ್ದೆನಕಟಾ
ಗತಿಯದಾರೈ ತನಗೆ ಹೇಳೆಂದರಸನಳವಳಿದ ೪೧

ಎಂಬೆನೇನನು ತಮ್ಮ ತನ್ನನು । ನಂಬಿ ನಿನ್ನನು ಕಳುಹಿದೆರಡನೆ
ಯಂಬಿಕೆಗೆ ಮಗನೆಲ್ಲಿ ತೋಱೆಂದೆನ್ನ ಬೆಸಗೊಳಲು
ಎಂಬ ಮಾತಿನ್ನಾವುದೈ ಸತಿ । ಯೆಂಬಪಳಿಗೋಸುಗವೆ ಮಡುಹಿದೆ
ನೆಂಬೆನೇ ಮತಿಯೇನು ಹೇಳೈ ತಮ್ಮ ತನಗೆಂದ ೪೨

ಜನಕನಂದದಲೆನ್ನ ರಕ್ಷಿಸಿ । ಮನವ ಹಿಡಿದೈತಂದೆ ಗುರುಭಾ
ವನೆಯ ಭಕ್ತಿಯಲೇನ ಹೇಳಿತ ಮಾಡಿದೈ ಕಂದ
ಅನುವರದೊಳಗ್ಗಳದ ಭುಜವೆನ । ಗೆನಿಸಿ ಮೆಱೆದೈಯಣುಗ ತನ್ನಯ
ತನುವಿಗಿನ್ನಾರಾಪ್ತರೆಂದಳಲಿದನು ರಘುನಾಥ ೪೩

ಸಿದ. ೪೦. "ಎದುರಿನಲ್ಲಿ ಸುಳಿದ ಮಾಯಾಜಿಂಕೆಯನ್ನು ತರಬೇಕೆಂದು ಬಯಸಿದ ನನ್ನನ್ನು ಬೇಡ ಬೇಡ ಎಂದು ಅದರ ಒಳಗುಟ್ಟನ್ನು ಅರಿತ ನೀನು ಹೇಳಿದುದನ್ನು ಕೇಳದೆ ನಾನು ಜಿಂಕೆಯನ್ನು ಹಿಡಿದುತರಲು ವನದೊಳಕ್ಕೆ ಹೋದೆ. ದುಷ್ಟ ರಾವಣನು ಸೀತೆಯನ್ನು ಕದ್ದೊಯ್ದಾಗ ಅತ್ಯಂತ ನಿಷ್ಠುರವಾಗಿ ನಿನ್ನ ಮೇಲೆ ನಾನು ಕೋಪಿಸಿಕೊಂಡೆ. ಎಷ್ಟೇ ಕಷ್ಟವಾದರೂ ಅದನ್ನು ಮನಸ್ಸಿಗೆ ತಂದುಕೊಳ್ಳದೆ ಸೀತೆಯನ್ನು ಹುಡುಕಿಕೊಂಡುಹೋದೆ ನೀನು" ಎಂದ ರಾಮ. ೪೧. "ತಂದೆಯ ಸಾವು, ತಮ್ಮಂದಿರಿಬ್ಬರ ಅಗಲಿಕೆ, ಮೂರುಜನ ತಾಯಂದಿರ ವಿಯೋಗ ಮತ್ತು ಕಾಡಿನ ಅಲೆದಾಟದ ಕಷ್ಟಗಳನ್ನು ನಿನ್ನ ಶ್ರದ್ಧಾಸಾಮರ್ಥ್ಯಗಳಿಂದಾಗಿ ಮರೆತಿದ್ದೆ. ಅಯ್ಯೋ, ಇನ್ನು ನನಗೆ ಗತಿಯಾರು?" ಎಂದು ರಾಮನು ಕುಸಿದ. ೪೨. "ಏನು ಹೇಳಲಿ ತಮ್ಮ. ನನ್ನನ್ನು ನಂಬಿ ನಿನ್ನನ್ನು ಕಳುಹಿಸಿದ ನನ್ನ ಎರಡನೆಯ ತಾಯಿ 'ಮಗನೆಲ್ಲಿ ತೋರಿಸು ?' ಎಂದು ನನ್ನನ್ನು ಕೇಳಿದರೆ ಏನು ಉತ್ತರ ಕೊಡಲಿ ? ನನ್ನ ಹೆಂಡತಿಗಾಗಿ ನಿನ್ನ ಪ್ರಾಣವನ್ನು ಬಲಿಕೊಟ್ಟೆನೆಂದು ಹೇಳಲೇ ? ನನಗೆ ದಾರಿ ಯಾವುದು ಹೇಳು ತಮ್ಮ ?" ಎಂದ ರಾಮ. ೪೩. "ತಂದೆಯಂತೆ ಭಾವಿಸಿ ನನ್ನನ್ನು ರಕ್ಷಿಸಿ ಸಂಯಮದಿಂದ ನನ್ನೊಡನೆ ಬಂದೆ. ಗುರುವೆಂಬ ಭಕ್ತಿಭಾವದಿಂದ ನಾನೇನು ಹೇಳಿದರೂ ಅದನ್ನೆಲ್ಲ ಮಾಡಿದೆ, ಕಂದ. ಯುದ್ಧದಲ್ಲಿ ನನ್ನ ಬಲತೋಳಾಗಿ ಮೆರೆದೆ,

ರಾವಣನ ಕೊಂದೇನು ಫಲ ಸೀ । ತಾವನಿತೆಯಿಂದೇನು ಫಲ ಸು
ಗ್ರೀವ ದೇವ ವಿಭೀಷಣರ ಮಿತ್ರತ್ವವೇನು ಫಲ
ಜೀವವಿದು ತಾನಿದ್ದು ಫಲವೇ । ನೈ ವರಾನುಜನಿಲ್ಲದಕಟಾ
ಹಾ ವಿಧಾತ್ರ ವಿಧಾತ್ರಯೆಂದಳಲಿದನು ರಘುನಾಥ ೪೪

ಜೀಯ ಸಾಕಿನ್ನೇಕೆ ಮಾನವ । ಮಾಯೆ ಬಿಡು ಶೋಕವನು ಹಿಂದಣ
ಪಾಯಕಿಂತಿದು ಘನವೆ ಬೆಸಸಂಜನೆಯ ತನುಜಂಗೆ
ವಾಯುಸುತ ನಿಮ್ಮಂತರಂಗ । ಸ್ಥಾಯಿಯಲ್ಲಾ ದಿಟ ವಿಚಾರಿಸ
ಲಾಯಸಂಬಡಬೇಡೆನುತ ಜಾಂಬವನು ಕೈಮುಗಿದ ೪೫

ಮುರಿದು ಬಿಡುಗಂಬನಿಗಳಲಿ ದಶ । ಶಿರನ ದರ್ಪಧ್ವಂಸಕನ ವನ
ಚರಕಟಕರಕ್ಷಕನನೀಕ್ಷಿಸಿದನು ರಘುಪ್ರಭವ
ಇರವ ಕಂಡೈ ನಮ್ಮ ತಮ್ಮನ । ಪರಿಯ ಕಂಡೈ ಹನುಮ ನಮ್ಮಿ
ಬ್ಬರ ಗತಪ್ರಾಣಾಭಿಮಾನವು ನಿನ್ನದಲೆಯೆಂದ ೪೬

ರಾಮನಾಡಿದ ಮಾತಿಗಿಂ ಮು । ನ್ನಾ ಮಹಾಬಲ ಹನುಮನೆದ್ದನು
ನೇಮಗೊಡಲೌಷಧಿಯ ತಹೆನೆಂದೆಂಬ ಶೀಘ್ರದಲಿ
ರಾಮವಚನಾನುಗ್ರಹವು ವಿ । ಶ್ರಾಮಿಸಲು ಕರ್ಣದಲಿ ನೃಪಪದ
ತಾಮರಸಕಭಿನಮಿಸಿ ಬೀಳ್ಕೊಂಡನು ಸರಾಗದಲಿ ೪೭

ಇನ್ನು ನನಗೆ ಹತ್ತಿರದ ಆಪ್ತರಾರು ?" ಎಂದು ರಘುನಾಥ ದುಃಖಿಸಿದನು. ೪೪. "ನನ್ನ ನೆಚ್ಚಿನ ತಮ್ಮನಿಲ್ಲದ ಮೇಲೆ ರಾವಣನನ್ನು ಕೊಂದೇನು ಫಲ ? ಸೀತೆಯನ್ನು ಪಡೆದುಕೊಳ್ಳುವುದರಿಂದೇನುಪಯೋಗ ? ಸುಗ್ರೀವ ವಿಭೀಷಣರ ಸ್ನೇಹದಿಂದೇನು ಪ್ರಯೋಜನ ? ಈ ನನ್ನ ಪ್ರಾಣವಿದ್ದು ಫಲವೇನು? ಅಯ್ಯೋ ವಿಧಿಯೇ, ವಿಧಿಯೇ!" ಎಂದು ವ್ಯಥೆಪಟ್ಟನು. ೪೫. "ಸ್ವಾಮಿ, ಇನ್ನೇಕೆ ಮಾನವಜನ್ಮದ ಮಾಯೆ ? ಸಾಕು, ದುಃಖವನ್ನು ಬಿಡಿ. ಹಿಂದೆ ಸಂಭವಿಸಿದ ಅಪಾಯಕ್ಕಿಂತ ಇದು ದೊಡ್ಡದೆ ? ಆಂಜನೇಯನಿಗೆ ಅಪ್ಪಣೆಮಾಡಿ. ವಾಯುಸುತ ನಿಮ್ಮ ಅಂತರಂಗದಲ್ಲಿ ನೆಲಸಿರುವನಲ್ಲವೇ, ವಿಚಾರಮಾಡಿ ನೋಡಿ. ನೀವು ಕೊರಗಿ ಆಯಾಸಮಾಡಿಕೊಳ್ಳಬೇಡಿ" ಎಂದು ಜಾಂಬವನು ಕೈಮುಗಿದುಕೊಂಡು ರಾಮನಿಗೆ ಹೇಳಿದ. ೪೬. ದಶಕಂಠನ ದರ್ಪವನ್ನು ಮುರಿದ ವಾನರಸೈನ್ಯರಕ್ಷಕ ಹನುಮಂತನ ಕಡೆಗೆ ಕಣ್ಣೀರು ಸುರಿಸುತ್ತ ತಿರುಗಿನೋಡಿದ ರಾಮ. "ನನ್ನ ತಮ್ಮನ ಸ್ಥಿತಿಯನ್ನೂ ಅವನಿರುವ ರೀತಿಯನ್ನೂ ನೋಡಿದೆಯಾ, ಹನುಮಂತ. ನಮ್ಮಿಬ್ಬರ ಪ್ರಾಣಗೌರವಗಳು ನಿನಗೆ ಸೇರಿದ್ದು" ಎಂದ. ೪೭. ರಾಮನಾಡಿದ ಮಾತಿಗಿಂತ ಮುಂಚೆಯೇ ಮಹಾಬಲಶಾಲಿ ಹನುಮಂತನು ಅಪ್ಪಣೆಯಾದರೆ ಔಷಧಿಯನ್ನು ತರುವೆನೆಂಬ ಆತುರದಿಂದ ಮೇಲೆದ್ದನು. ರಾಮನ ಅನುಗ್ರಹದ ಮಾತು ಕಿವಿಯನ್ನು ತುಂಬಿತು. ಒಡನೆ ಹನುಮಂತನು ರಾಮನ ಪಾದಕಮಲಗಳಿಗೆ ವಂದಿಸಿ

ಕರೆದು ಜಾಂಬವ ಕಲಿಸುಷೇಣಕ । ರೊರೆದರೀತಂಗಂದಿನಂದದಿ
ಗಿರಿಯ ತರಬೇಡೌಷಧಿಯ ನೀ ಬಲ್ಲ ಮೂಲಿಕೆಯ
ತಿಱಿದು ತಾ ಹೋಗೆಂಬ ನುಡಿಯಿಂ । ದಿರವು ವಾಯುಸ್ಕಂದದಲಿ ಗೋ
ಚರಿಸಿತಱಿದಿಹ ಬಟ್ಟೆಯೊಳು ಧಾಳಿಟ್ಟನಾ ಗಿರಿಗೆ ೪೮

ತಡೆದನೆಡೆಯಲಿ ಮೇರುವಿನ ಮುಂ । ಗಡೆಯಲೀ ಸುದ್ದಿಯನು ಕೇಳ್ದಾ
ದಡಿಗ ರಕ್ಕಸರಾಯ ಕಳುಹಿದ ಕಾಲನೇಮಿಖಳ
ಮೃಡನ ವೇಷದಲಭ್ರದಲಿ ಬಗೆ । ವಡೆದ ಕೃತಕ ಸರೋವರದ ಕೆಲ
ಕಡೆಯಲಿದ್ದೆಲ್ಲಿ ಗಮನೋದ್ಯಮವೆಂದು ಕಪಿವರನ ೪೯

ಕೇಳಿದೈ ನೃಪಸೂನು ಬಳಿಕಾ । ಕಾಲನೇಮಿಯೆನಿಪ್ಪನೆಸಗಿದ
ಕಾಲಕಂಟಕ ಕೃತಕಸರಸಿಯನಾ ನಿಶಾಚರನ
ಕಾಲಲಿಳೆಗೊದೆದನು ನಭೋಗ್ರದ । ಮೇಲುವಚನವನಱಿದು ಜಯಿಸಿದು
ಲೀಲೆಯಲಿ ಶೈಲವನು ಸಾರ್ದನು ಚಂದ್ರನಾಮಕದ ೫೦

ಅಂದಿನಗ್ಗದ ವೀರ ಮತ್ತೈ । ತಂದನೆಂದಾ ಗಿರಿಯ ಕಾಪಿನ
ಮಂದಿ ತಮತಮಗಱಿಸಿ ಕಿತ್ತಿತ್ತರು ಮಹೌಷಧಿಯ
ಅಂದು ಬಾಲದಲಗ್ನಿದೇವರ । ನಿಂದಿರಿಸಿದವೊಲೌಷಧಿಯ ಹೊಱೆ
ಯಿಂದ ಹೊಳೆಹೊಳೆವುತ್ತ ಬಂದನು ರಾಮನಿದ್ದೆಡೆಗೆ ೫೧

ಸಂತೋಷದಿಂದ ಅಪ್ಪಣೆಪಡೆದು ಹೊರಟ. ೪೮. ಜಾಂಬವ ಸುಷೇಣರು ಹನುಮಂತನನ್ನು ಕರೆದು, "ಅಂದಿನಂತೆ ಬೆಟ್ಟವನ್ನು ಹೊತ್ತು ತರಬೇಡ. ನಿನಗಾಗಲೆ ಗೊತ್ತಿರುವ ಬೇಕಾದ ಔಷಧಿಯ ಮೂಲಿಕೆಯನ್ನು ಅರಿಸಿಕೊಂಡು ಬಾ ಹೋಗು" ಎಂದು ನುಡಿಯುತ್ತಿರುವಂತೆಯೇ ಅವನ ದೇಹವು ವಾಯುಮಾರ್ಗದಲ್ಲಿ ಗೋಚರಿಸಿತು. ಹನುಮಂತನು ಪರಿಚಿತ ಮಾರ್ಗವನ್ನು ಹಿಡಿದು ಸಂಜೀವಿನೀಪರ್ವತಕ್ಕೆ ದಾಳಿಯಿಟ್ಟನು. ೪೯. ಹನುಮಂತನು ಮೇರುಗಿರಿಯ ಮುಂದುಗಡೆಯಲ್ಲಿ ಸ್ವಲ್ಪ ತಡೆದನು. ಹನುಮಂತನು ಸಂಜೀವಿನಿಪರ್ವತಕ್ಕೆ ಹೋಗುತ್ತಿರುವ ಸುದ್ದಿಯನ್ನು ಕೇಳಿ ರಾಕ್ಷಸರಾಜ ರಾವಣನು ಕಾಲನೇಮಿ ಎಂಬ ರಾಕ್ಷಸನನ್ನು ಕಳುಹಿಸಿದನು. ಅವನು ತಪಸ್ವಿಯಂತೆ ಶಿವನ ವೇಷಧರಿಸಿ ಆಕಾಶದಲ್ಲಿ ಸುಂದರವಾದ ಮಾಯಾಸರೋವರವನ್ನು ನಿರ್ಮಿಸಿ ಅದರ ಪಕ್ಕದಲ್ಲಿದ್ದನು. ಹನುಮಂತನನ್ನು ಕಂಡು "ನಿನ್ನ ಉದ್ದೇಶಿತ ಕಾರ್ಯವೇನು ?" ಎಂದು ಕೇಳಿದನು. ೫೦. ಕಾಲನೇಮಿ ಎಂಬ ಅಸುರನು ನಿರ್ಮಿಸಿದ ಮೃತ್ಯುಕಾರಕವಾದ ಮಾಯಾಸರೋರವರದ ವಿಷಯವನ್ನು ಕೇಳಿದಿರಾ ರಾಜಕುಮಾರರೇ. ಆಕಾಶವಾಣಿಯನ್ನು ಕೇಳಿ ಅರಿತುಕೊಂಡ ಹನುಮಂತನು ಕಾಲಿನಿಂದ ಒದ್ದು ಸರೋವರವನ್ನು ಭೂಮಿಗೆ ಬೀಳಿಸಿ ಸುಲಭವಾಗಿ ಜಯಪಡೆದು ಚಂದ್ರವೆಂಬ ಪರ್ವತದ ಬಳಿ ಸೇರಿದನು. ೫೧. ಅಂದು ಬಂದಿದ್ದ ಉತ್ತಮವೀರನು ಮತ್ತೆ ಬಂದಿದ್ದಾನೆ ಎಂದು ಬೆಟ್ಟದ ಕಾವಲಿನ ಜನ ತಾವುತಾವೇ ಮಹಾ ಔಷಧಿಯನ್ನು ಹುಡುಕಿ ಕಿತ್ತು ಹನುಮಂತನಿಗೆ ಕೊಟ್ಟರು. ಹಿಂದೆ ಲಂಕಾದಹನದ ಕಾಲದಲ್ಲಿ ಬಾಲದ ತುದಿಯಲ್ಲಿ ಅಗ್ನಿದೇವರು

ಅಱಿಸಿ ನಾಲ್ಕೌಷಧಿಯ ಕೊನೆಗಳ । ತಿಱಿದು ತೀಡಿ ಸುಷೇಣ ಮೂಗಿನ
ಲೆಱಿದು ನಿಲಿಸಿದನಾ ಸುಮಿತ್ರಾಸುತ ವಿಭೀಷಣರ
ಅಱಿಸಿ ಸುಗ್ರೀವಾದಿ ಸುಭಟರ । ಮಱವೆಗಳ ಮಾಣಿಸಿದನಂಬುಧಿ
ಯುಱುಬಿನವೊಲುಬ್ಬರಿಸುತೆದ್ದುದು ಕೂಡೆ ಕಪಿಸೇನೆ ೫೨

ಉಕ್ಕಿದುದು ಹರುಷಾಬ್ಧಿ ಮಾಯೆಯ । ಠಕ್ಕಿನಿಂದೀವರದಳಾಕ್ಷಂ
ಗಕ್ಕಜದ ಬೆಱಗಿನಲಿ ಬರ್ಹಿರ್ಮುಖರು ಗಗನದಲಿ
ಒಕ್ಕರಂಬುಜದಲರನಪ್ಪಿದ । ನೆಕ್ಕತುಳದಲಿ ಭೂಮಿಪತಿ ಮುಂ
ದಕ್ಕೆ ಕಮಲಜನಹ ಸುಮಿತ್ರಾಸುತನ ರಕ್ಷಕನ ೫೩

ಆದುದಿಲ್ಲಾ ದಿವಸದಲಿ ಸಂ । ವಾದವಿತ್ತಂಡದಲಿ ತರಣಿಗೆ
ಹೋದ ಮನದನುರಾಗ ಹಬ್ಬಿದುದಿರುಳಿನಗ್ರದಲಿ
ಆ ದಯಾಂಬುಧಿ ರಾಮ ಬಳಿಕಾ । ಹ್ಲಾದದಲಿ ಸುಗ್ರೀವ ಸಹಿತ ಸ
ಹೋದರನ ಕೈವಿಡಿದು ಹೊಕ್ಕನು ತನ್ನ ಪಾಳಯವ ೫೪

ಜ್ವಲಿಸಿದಂತೆ ಹನುಮಂತನು ಬಾಲದ ತುದಿಯಲ್ಲಿ ಹೊಳೆಹೊಳೆಯುವ ಔಷಧಿಯನ್ನು ಹೊತ್ತುತಂದನು. ೫೨. ಸುಷೇಣನು ಬೇಕಾದ ನಾಲ್ಕು ಅಮೂಲ್ಯ ಔಷಧಿಗಳನ್ನು ಹುಡುಕಿ ತೆಗೆದುಕೊಂಡು ಅವುಗಳನ್ನು ಉಜ್ಜಿ ರಸವನ್ನು ಲಕ್ಷ್ಮಣ ವಿಭೀಷಣರ ಮೂಗಿನಲ್ಲಿ ಹಿಂಡಿ ಅವರನ್ನೆಬ್ಬಿಸಿದನು. ಸುಗ್ರೀವನೇ ಮೊದಲಾದ ವೀರರನ್ನು ಹುಡುಕಿ ಅವರ ಮೂರ್ಛೆಯನ್ನು ತಿಳಿಸಿದನು. ಔಷಧಿಯ ಪ್ರಭಾವದಿಂದ ಸಮುದ್ರದ ಉಬ್ಬರದಂತೆ ಕಪಿ ಸೈನ್ಯವು ಮೇಲಕ್ಕೆದ್ದಿತು. ೫೩. ಮಾಯೆಯ ನಟನೆಗೊಳಗಾಗಿದ್ದ ಕಮಲಾಕ್ಷನು ಸಂತೋಷಸಾಗರದಲ್ಲಿ ಮುಳುಗಿದನು. ವಿಸ್ಮಿತರಾದ ದೇವತೆಗಳು ಆಕಾಶದಿಂದ ಕಮಲದ ಹೂವನ್ನು ಸುರಿಸಿದರು. ಲಕ್ಷ್ಮಣನ ಪ್ರಾಣವನ್ನು ರಕ್ಷಿಸಿದ ಮುಂದೆ ಬ್ರಹ್ಮಪದವಿಯನ್ನು ಪಡೆಯುವ ಹನುಮಂತನನ್ನು ರಾಮನು ಅತ್ಯುತ್ಸಾಹದಿಂದ ಅಪ್ಪಿಕೊಂಡನು. ೫೪. ಆ ದಿವಸ ಎರಡು ತಂಡಗಳ ನಡುವೆ ಯಾವ ಹೋರಾಟವೂ ಸಂಭವಿಸಲಿಲ್ಲ. ಉಲ್ಲಾಸ ರಹಿತನಾಗಿದ್ದ ಸೂರ್ಯನು ಇರುಳು ಪ್ರಾರಂಭವಾಗುತ್ತಿದ್ದಂತೆ ಪುನಃ ಹರ್ಷಮನಸ್ಕನಾದನು. ಅನಂತರ ಕರುಣಾಸಾಗರ ಶ್ರೀರಾಮನು ಉತ್ಸಾಹದಿಂದ ತಮ್ಮನ ಕೈಹಿಡಿದುಕೊಂಡು ಸುಗ್ರೀವನೊಡನೆ ಪಾಳಯಕ್ಕೆ ಬಂದನು.

48

# ನಲವತ್ತೆಂಟನೆಯ ಸಂಧಿ

ಸೂಚನೆ॥ ರಣಪರಾಜಿತನಾಗಿ ಕಲಿರಾ । ವಣನು ರಣದಾಯತಿಕೆಯಲಿ ಮಾ
ರಣ ಮಹಾಯಜ್ಞವನುಪಕ್ರಮಿಸಿದನು ರಜನಿಯಲಿ

ವಸುಮತೀಪತಿಸೂನು ಕೇಳಾ । ದಶಶಿರನು ಮುಖಭಂಗದಲಿ ತಲೆ
ಮುಸುಕಿನಲಿ ಸಾರಿದನು ಶಯ್ಯಾಗೃಹವನಿರುಳಿನಲಿ
ಬಿಸುಗುದಿಯ ಬಿಱುಸುಯ್ಲ ಸೂಳಿನ । ಮಸುಳಿದಾನನಮಂಡಲದ ಬೇ
ವಸದ ಕರಣೇಂದ್ರಿಯದ ಖಳನೊಱಗಿದನು ಮಂಚದಲಿ ೧

ಮಾಣದಾದೆನು ಮಾವನಾಡಿದ । ವಾಣಿಯನು ಕಾಮುಕತನದಿ ತಾ
ಕಾಣದಾದೆನು ಕಲಿ ವಿಭೀಷಣನುಚಿತಭಾಷಿತವ
ಪ್ರಾಣಮಿತ್ರನಲಾ ಪ್ರಹಸ್ತನ । ಲೂಣಯವ ತಾಳಿದೆನು ಜನನಿಯ
ಜಾಣಿಕೆಯ ಜಾತ್ಯುತ್ತರವನತಿಗಳೆದೆನಕಟೆಂದ ೨

ಏನುಪಾಯವು ತನ್ನ ಕಟ್ಟಭಿ । ಮಾನಭಂಗಸ್ಥಿತಿಗೆ ಹರಣವ
ನಾ ನರೇಶ್ವರನಿತ್ತನಿಂದಿಗೆ ಮೂಱು ಬಾರಿಯಲಿ
ಹೀನತನವಾಯ್ತುಕಟ ಜಗದೊಳ । ನೂನಕೀರ್ತಿಗೆ ಮರಳಿ ಕಾಳಗ
ವೇ ನಿದಾನಿಸೆ ರಾಘವೇಂದ್ರನೊಳೆಂದನಸುರೇಂದ್ರ ೩

ಸೂಚನೆ॥ ಯುದ್ಧದಲ್ಲಿ ಸೋಲನ್ನನುಭವಿಸಿದ ಕಲಿರಾವಣನು ಮುಂದಿನ ಕದನದ ಸಾಮರ್ಥ್ಯವನ್ನು ಹೆಚ್ಚಿಸಿಕೊಳ್ಳುವುದಕ್ಕಾಗಿ ಆ ರಾತ್ರಿ ಮಾರಣಮಹಾಯಜ್ಞವನ್ನು ಪ್ರಾರಂಭಿಸಿದನು. ೧. ರಾಜಕುಮಾರರೇ, ಕೇಳಿ. ಮುಖಭಂಗಹೊಂದಿದ ದಶಕಂಠನು ತಲೆಯ ಮೇಲೆ ಮುಸುಕುಹಾಕಿಕೊಂಡು ಇರುಳಿನಲ್ಲಿ ಶಯ್ಯಾಗೃಹಕ್ಕೆ ಹೋದನು. ಬೇಗುದಿಯಿಂದ ನಿಟ್ಟುಸಿರು ಬಿಡುತ್ತ ಕಂದಿದ ಮುಖದ ರಾವಣನು ಚಿಂತೆಯಿಂದ ಮಂಚದಲ್ಲಿ ಮಲಗಿದನು. ೨. "ಮಾವ ಮಾರೀಚನ ಮಾತನ್ನು ಒಪ್ಪಲಿಲ್ಲ. ವೀರ ವಿಭೀಷಣನ ಉಚಿತವಾಣಿಯನ್ನು ಕಾಮುಕತನದಿಂದ ನಾನು ಅರ್ಥಮಾಡಿಕೊಳ್ಳಲಾರದೆ ಹೋದೆ. ಪ್ರಾಣಮಿತ್ರ ಪ್ರಹಸ್ತನ ಮೇಲೆ ದೋಷಾರೋಪಣೆ ಮಾಡಿದೆ. ತಾಯಿಯ ಬುದ್ಧಿವಾದವನ್ನು ನಿರಾಕರಿಸಿದೆ" ಎಂದು ರಾವಣ ಚಿಂತೆಗೊಳಗಾದ. ೩. 'ನನ್ನ ಆತ್ಮಗೌರವಕ್ಕೆ ಧಕ್ಕೆಯುಂಟಾದುದಕ್ಕೆ ಏನುಪಾಯ ? ಈ ದಿವಸ ಮೂರು ಬಾರಿಯ ಅವಧಿಯನ್ನಿಟ್ಟು ನನ್ನ ಪ್ರಾಣವುಳಿಸಿದ ಆ ಮಾನವರರಸನು. ಅಯ್ಯೋ, ಕೆಟ್ಟಕೆಲಸವಾಯಿತು ! ಜಗತ್ತಿನಲ್ಲಿ ನಿಷ್ಕಳಂಕ ಕೀರ್ತಿಯನ್ನು ಸಂಪಾದಿಸಬೇಕಾದರೆ ರಾಘವೇಂದ್ರನೊಡನೆ ಪುನಃ ಯುದ್ಧ

ತಲೆಯ ಬೋಳಿಸಿಕೊಂಡು ಭವಗೋ । ಟಲೆಯ ಕೊಡಹಿ ಸಮಸ್ತ ಭೂಮಂ
ಡಲವ ತೊಳಲುವುದೊಂದು ಮತವಿನ್ನೊಂದು ಮತ ಬೇಱೆ
ಉಳಿದ ಬಯಕೆಯ ಬಿಸುಟು ಹಾಲಾ । ಹಲವನಂಗೀಕರಿಸುವುದು ಹಗೆ
ಗಲಹವಿನ್ನಕಟಕಟ ಕಷ್ಟದ ಕಡೆಯ ಮಾತೆಂದ ೪

ಮನದೊಳೀಪರಿ ಹಲುಬುತಾ ಖಳ । ನೆನೆದುಕೊಂಡನು ಮೆಚ್ಚಿಸುವೆನಾ
ವನಜಪೀಠನ ನಿಗಮಜೂಟನ ಕೋಟಿ ಹೋಮದಲಿ
ತನಗೆ ನೂರ್ಮಡಿ ವಿಕ್ರಮದ ಹೆಂ । ಪಿನ ಮಹಾಭಟಕೋಟಿ ರಾವಣ
ರನು ಮಹಾಕ್ರತುಕುಂಡದಲಿ ಹೊಱವಡಿಸುವೆನುಯೆಂದ ೫

ಅಳಿದ ಧೂಮ್ರಾಕ್ಷಾದಿ ಸುಭಟಾ । ವಳಿಯನೆಬ್ಬಿಸುವೆನು ಜಯಾಹವ
ಲಲನೆಯನು ಸೆಱೆವಿಡಿವೆ ಗಡಣಕೆ ಗಹ್ವರೀಸುತೆಯ
ಹಲುಬಿ ಮಾಡುವುದೇನೆನುತ ನಿಜ । ಲಲನೆ ಮಂಡೋದರಿಯ ಕರೆದ
ಗ್ಗಳದ ಯಜ್ಞಾರಂಭವನು ಕೈಕೊಂಡನಸುರೇಂದ್ರ ೬

ಕರೆಸಿ ಖಳ ವಿಪ್ರರನು ಮಖಪರಿ । ಕರವ ಸಂಪಾದಿಸಿದು ಮೂಢರ
ಗುರು ನಿಜಾಂಗನೆ ಸಹಿತ ಬಂದೇಱಿದನು ಪುಷ್ಪಕವ
ಧುರದ ಕಟ್ಟಾದಿಯಲಿ ಲಂಕಾ । ಪುರವ ಹೊಱವಂಟಸುರವಿಪ್ರರ
ನೆರವಿ ಸಹಿತ ನಿಕುಂಭಿಳೆಯ ನಿಳಯಕ್ಕೆ ನಡೆತಂದ ೭

ಮಾಡುವುದು ಮಾರ್ಗ'ವೆಂದು ರಾವಣ ಯೋಚಿಸಿದನು. ೪. ತಲೆಯನ್ನು ಬೋಳಿಸಿಕೊಂಡು ಸಂಸಾರದ ಕಾಟವನ್ನು ಕೊಡವಿ ಭೂಮಂಡಲವನ್ನು ಸುತ್ತುವುದು ಒಂದು ಅಭಿಪ್ರಾಯ. ಉಳಿದೆಲ್ಲ ಬಯಕೆಯನ್ನೂ ತ್ಯಜಿಸಿ ವಿಷ ತೆಗೆದುಕೊಳ್ಳುವುದು ಇನ್ನೊಂದು ಅಭಿಪ್ರಾಯ. ಶತ್ರುವಿನೊಡನೆ ಯುದ್ಧಮಾಡುವುದು ಕಷ್ಟದ ಅಂತಿಮಮಾರ್ಗ ಎಂದು ರಾವಣ ಯೋಚಿಸಿದ. ೫. ಮನಸ್ಸಿನಲ್ಲಿ ಈ ರೀತಿಯಾಗಿ ಚಿಂತಿಸುತ್ತ ರಾವಣನು 'ಕೋಟಿ ಹೋಮದ ಮೂಲಕ ವೇದಶಿರನಾದ ಬ್ರಹ್ಮನನ್ನು ಮೆಚ್ಚಿಸುವೆನು ; ನನಗಿಂತ ನೂರು ಪಟ್ಟು ಪರಾಕ್ರಮದ ಕೋಟಿ ಮಹಾ ರಾವಣರನ್ನು ಮಹಾಯಾಗದ ಅಗ್ನಿಕುಂಡದಿಂದ ಹೊರಡಿಸುವೆನು' ಎಂದು ನಿಶ್ಚಯಿಸಿದ. ೬. 'ಸತ್ತ ಧೂಮ್ರಾಕ್ಷನೇ ಮೊದಲಾದ ವೀರರನ್ನು ಎಬ್ಬಿಸುವೆನು. ಯುದ್ಧದ ವಿಜಯಲಕ್ಷ್ಮಿಯನ್ನು ಸೆರೆಹಿಡಿದು ಭೂಸುತೆ ಸೀತೆಯ ಜತೆಗೆ ಸೇರಿಸುವೆನು. ಇನ್ನು ಕೊರಗಿ ಪ್ರಯೋಜನವೇನು' ಎಂದು ನಿರ್ಧರಿಸಿದನು. ಬಳಿಕ ರಾಣಿ ಮಂಡೋದರಿಯನ್ನು ಕರೆದು ಅತಿಶಯವಾದ ಯಜ್ಞಾರಂಭವನ್ನು ಕೈಗೊಂಡನು. ೭. ರಾವಣನು ಬ್ರಾಹ್ಮಣರನ್ನು ಕರೆಸಿ ಯಾಗ ಸಲಕರಣೆಗಳನ್ನು ಸಂಗ್ರಹಿಸಿದನು. ಮೂಢರ ಗುರು ರಾವಣ ತನ್ನ ಪತ್ನಿಯೊಡನೆ ಪುಷ್ಪಕವಿಮಾನವನ್ನೇರಿದನು. ಭಾರಿಯುದ್ಧವನ್ನಾರಂಭಿಸುವ ಮೊದಲು ಲಂಕಾನಗರದಿಂದ ಹೊರಟು ಅಸುರಬ್ರಾಹ್ಮಣರೊಡನೆ ನಿಕುಂಭಿಳಾದೇವಿಯ ಮಂದಿರಕ್ಕೆ ಬಂದನು.

ಇಳಿದು ಧನಪವಿಮಾನವನು ನಿಜ । ಕುಲದ ಮನೆದೇವತೆಯು ನಿಕುಂ
ಭಿಳೆಯ ನಿಳಯವ ಹೊಕ್ಕನೊದಱುವ ವಾದ್ಯಘೋಷದಲಿ
ಹಲವು ಪೂಜಾವಿಧದಿ ದೇವಿಯ । ನೊಲಿಸಿ ಹೊಕ್ಕನು ಮಯವಿನಿರ್ಮಿತ
ಬಿಲಮುಖದ ವಿತಳಪ್ರದೇಶದ ಯಜ್ಞಮಂಟಪವ ೮

ಅರಿಗಳೈತರದಂತೆ ಕಾವಲ । ನಿರಿಸಿದನು ಬೇತಾಳಜಟ್ಟಿಗ
ನಿರುತಿ ಭೈರವ ಭೂತನಾಥಪ್ರಮುಖ ಭುಜಬಲರ
ಕರದ ಕತ್ತಿ ಕಪಾಲಪಾತ್ರೆಯ । ಶಿರದ ಮಾಲೆಯ ಕಾಳಮೇಘದ
ಹೊರದ ಕಾಂತಿಯ ಭೂತಗಣ ಬಳಸಿದುದು ಮಂಟಪವ ೯

ಕಾಳಿ ದುರ್ಗಿ ವರಾಹಿ ಭೈರವಿ । ಶೂಲಪಾಣಿನಿ ಚಂಡಿ ಚಂಡಕ
ರಾಳಿ ಕಾಪಾಲಿನಿ ಮಹೋದರಿ ಮುಕ್ತಕೇಶಿಗಳು
ಕಾಳರಾತ್ರಿ ಜ್ವಲನಮುಖಿ ಘಂ । ಟಾಳಿ ಶಾಕಂಬರಿ ತಪಸ್ವಿನಿ
ಖೀಳದಂಷ್ಟ್ರಪ್ರಭೃತಿಯಿದ್ದುದು ಕರದಕತ್ತಿಯಲಿ ೧೦

ಮಾರಿ ಮಾಲಿನಿ ದಂಡಪಾಣಿನಿ । ವಾರುಣೀಶ್ವರಿ ಧೂಮ್ರಮುಖಿ ಕೌ
ಬೇರಿ ಶಾಕಿನಿ ಡಾಕಿನಿ ಪ್ರಳಯಿನಿ ಮಹೇಂದ್ರಾಣಿ
ಘೋರಪೂತಿನಿ ರೌದ್ರಮುಖಿ ಕೌ । ಮಾರಿ ವೈಷ್ಣವಿ ಮುಖ್ಯ ಬಹಳತ
ಘೋರಶಕ್ತಿಯರಿರ್ದರೆತ್ತಿದ ಶೂಲಹಸ್ತದಲಿ ೧೧

೮. ಪುಷ್ಪಕವಿಮಾನದಿಂದ ಇಳಿದು ರಾವಣನು ವಾದ್ಯಗಳ ಘೋಷದ ನಡುವೆ ತಮ್ಮ ಕುಲದ ಮನೆದೇವತೆಯಾದ ನಿಕುಂಭಿಳೆಯ ದೇವಾಲಯವನ್ನು ಪ್ರವೇಶಿಸಿದನು. ಹಲವು ಪೂಜಾಕ್ರಮಗಳಿಂದ ದೇವಿಯನ್ನು ಒಲಿಸಿ ವಿತಳವೆಂಬ ಅಧೋಲೋಕದಲ್ಲಿ ಮಯನು ನಿರ್ಮಿಸಿದ ಬಿಲದ ಬಾಗಿಲಿನ ಯಜ್ಞಮಂಟಪವನ್ನು ರಾವಣನು ಹೊಕ್ಕನು. ೯. ಭೇತಾಳಜಟ್ಟಿಗಳು, ರಾಕ್ಷಸರು, ಭೈರವರು ಮತ್ತು ಭೂತನಾಥರೇ ಮೊದಲಾದ ಪ್ರಮುಖ ವೀರರನ್ನು ಶತ್ರುಗಳು ಬರದಂತೆ ಕಾವಲು ಹಾಕಿದನು. ಕೈಯಲ್ಲಿ ಕತ್ತಿಹಿಡಿದು ತಲೆಬುರುಡೆಗಳ ಮಾಲೆಯನ್ನು ತಲೆಯಲ್ಲಿ ಧರಿಸಿದ ಕಾಲಮೇಘದ ದೇಹಕಾಂತಿಯ ಭೂತಗಣಗಳು ಮಂಟಪದ ಸುತ್ತ ಕಾವಲು ನಿಂತರು. ೧೦. ಕಾಳಿ, ದುರ್ಗಿ, ವರಾಹಿ, ಭೈರವಿ, ಶೂಲಪಾಣಿನಿ, ಚಂಡಿ, ಚಂಡಕರಾಳಿ, ಕಾಪಾಲಿನಿ, ಮಹೋದರಿ, ಮುಕ್ತಕೇಶಿ, ಕಾಳರಾತ್ರಿ, ಜ್ವಲನಮುಖಿ, ಘಂಟಾಳಿ, ಶಾಕಂಬರಿ, ತಪಸ್ವಿನಿ, ಖೀಳದಂಷ್ಟ್ರ–ಮೊದಲಾದ ಪ್ರಮುಖರು ಕೈಯಲ್ಲಿ ಕತ್ತಿಹಿಡಿದು ನಿಂತರು. ೧೧. ಮಾರಿ, ಮಾಲಿನಿ, ದಂಡಪಾಣಿನಿ, ವಾರುಣೀಶ್ವರಿ, ಧೂಮ್ರಮುಖಿ, ಕೌಬೇರಿ, ಶಾಕಿನಿ, ಡಾಕಿನಿ, ಪ್ರಳಯಿನಿ, ಮಹೇಂದ್ರಾಣಿ, ಘೋರಪೂತಿನಿ, ರೌದ್ರಮುಖಿ, ಕೌಮಾರಿ, ವೈಷ್ಣವಿ ಮೊದಲಾದ ಮುಖ್ಯ ಘೋರಶಕ್ತಿದೇವತೆಯರು ಶೂಲಗಳನ್ನೆತ್ತಿಹಿಡಿದುಕೊಂಡು ನಿಂತರು.

ಕರೆಸಿದನು ಮಯನನು ನಿಶಾಚರ । ಗುರುವನವರನುಮತದಿನಧ್ವರ
ವಿರಚಿಸಿದುದಾಸುರ ವಿಕರ್ಮ ಮಹಾಭಿಚಾರದಲಿ
ತರುಣ ಕೇಳ್ಳಿ ಕೋಟಿಹೋಮದ । ಪರಿಕರದ್ರವ್ಯಂಗಳಲಿ ಕ
ರ್ಬುರ ಮಹೀಸುರನಿಕರ ಬಳಸಿತು ಕುಂಡವನು ಮುಖದ ೧೨

ಕರಿಯ ಚರ್ಮದ ಹೊದಕೆಗಳ ನಿಡು । ಗರುಳ ಸವ್ಯ ಪವಿತ್ರಸೂತ್ರದ
ನರರುಧಿರದನುಲೇಪನದ ದಾಸಣದ ದಂಡೆಗಳ
ಶಿರದ ಬಿಡುಗೂದಲಿನ ದಕ್ಷಿಣ । ಕರದ ಕತ್ತಿಯುಲಾಭಿಚಾರಾ
ಧ್ವರದ ದೀಕ್ಷಿತತನವ ಕೈಕೊಂಡನು ದಶಗ್ರೀವ ೧೩

ಅರಿದು ತನ್ನಯ ತಲೆಯ ಮಿದುಳನು । ಕೆರೆದು ಸ್ರುಕ್ಸ್ರುವ ಮುಖ್ಯ ನಾನಾ
ಪರಿಯ ಪಾತ್ರಿಯವಮಾಡಿ ಮಾಂಸದ ಚರುವನಳವಡಿಸಿ
ನೊರೆಮಿದುಳ ಪರಮಾನ್ನವನು ವಿ । ಸ್ತರಿಸಿ ಶೋಣಿತದಾಜ್ಯಪಾತ್ರೋ
ತ್ಕರವ ಸಂಪಾದಿಸಿದನಾಹವನೀಯ ವಳಯದಲಿ ೧೪

ಬಗಿದು ಜಠರಾಗ್ನಿಯನಥರ್ವಣ । ನಿಗಮ ಮಂತ್ರಂಗಳಲಿ ನಿಲಿಸಿದ
ನುಗಿದು ಬದಿಯಸ್ಥಿಗಳ ಶುಷ್ಕಂಗಳಲಿ ಪುಟಗೊಳಿಸಿ
ಅಗಲಿಸಿದ ತೋಳ್ಗಳ ಪರಿಸ್ತರ । ಣಗಳ ವಿರಚಿಸಿ ನರದ ದರ್ಭೆಯ
ಬಗಿದು ಬೆರಳಲಿ ಬೇಡಿಕೊಂಡನು ಹವ್ಯವಾಹನನ ೧೫

೧೨. ರಾವಣನು ಮಯನನ್ನೂ ರಾಕ್ಷಸಗುರು ಶುಕ್ರಾಚಾರ್ಯನನ್ನೂ ಕರೆಸಿ ಅವರ ಅಭಿಪ್ರಾಯದಂತೆ ಮಹಾ ಭಯಂಕರ ಅಭಿಚಾರಕರ್ಮದ ಯಾಗವನ್ನು ಆರಂಭಿಸಿದನು. ತರುಣ ಕುಶ ಕೇಳು. ಕೋಟಿ ಹೋಮಗಳಿಗೆ ಬೇಕಾದ ಸಲಕರಣೆ ಮತ್ತು ಸಾಮಗ್ರಿಗಳಿಂದ ರಾಕ್ಷಸಬ್ರಾಹ್ಮಣರು ಯಾಗಕುಂಡದ ಸುತ್ತ ಸೇರಿದರು. ೧೩. ಕರಿಯ ಚರ್ಮವನ್ನು ಹೊದೆದುಕೊಂಡು, ಉದ್ದವಾದ ಕರುಳಿನ ಜನಿವಾರವನ್ನು ಎಡಗಡೆಗೆ ಹಾಕಿಕೊಂಡು, ಮಾನವರಕ್ತವನ್ನು ಮೈಗೆ ಪೂಸಿಕೊಂಡು, ದಾಸವಾಳದ ದಂಡೆಗಳನ್ನು ಧರಿಸಿದ ರಾವಣನು ತಲೆಗೂದಲನ್ನು ಬಿಚ್ಚಿಕೊಂಡು ಬಲಗೈಯಲ್ಲಿ ಖಡ್ಗ ವನ್ನು ಹಿಡಿದು ಅಭಿಚಾರಯಾಗದ ದೀಕ್ಷೆಯನ್ನು ಕೈಗೊಂಡನು. ೧೪. ರಾವಣನು ತನ್ನ ತಲೆಯನ್ನು ಕತ್ತರಿಸಿ ಮಿದುಳನ್ನು ಕೆರೆದು ತೆಗೆದು ತಲೆಯ ಓಡನ್ನು ಸ್ರುಕ್ಸ್ರುವ ಮೊದಲಾದ ಮುಖ್ಯವಾದ ನಾನಾರೀತಿಯ ಪಾತ್ರೆಗಳನ್ನಾಗಿ ಮಾಡಿದನು. ಆ ತಲೆಯ ಪಾತ್ರೆಯಲ್ಲಿ ಮಾಂಸದ ಚರುವನ್ನು ಹಾಕಿ ನೊರೆಮಿದುಳಿನ ಅನ್ನವನ್ನು ತಯಾರಿಸಿ ರಕ್ತದ ತುಪ್ಪದ ಪಾತ್ರೆಯನ್ನು ಆಹವನೀಯಾಗ್ನಿಯ ಬಳಿಯಲ್ಲಿ ಸಿದ್ಧಪಡಿಸಿಟ್ಟು ಕೊಂಡನು. ೧೫. ಜಠರಾಗ್ನಿಯನ್ನು ಬಗೆದು ಹೊರತೆಗೆದು ಪಕ್ಕೆಎಲುಬುಗಳ ಒಣ ಕಟ್ಟಿಗೆಯನ್ನು ಹತ್ತಿಸಿ ಅಥರ್ವಣವೇದಮಂತ್ರಗಳಿಂದ ಅಗ್ನಿಯನ್ನು ಪುಟಗೊಳಿಸಿದನು. ತೋಳುಗಳನ್ನು ಕತ್ತರಿಸಿ ಹೋಮಕುಂಡದ ಸುತ್ತ ಪರಿಸ್ತರಣವನ್ನಾಗಿ ಮಾಡಿ ನರದ

ಅರುಣಗಂಧಾಕ್ಷತೆಯ ಪುಷ್ಪೋ । ತ್ಕರದಲಾ ಹುತವಹನನರ್ಚಿಸಿ
ಸರಸಿರುಹಸಂಭವನನಾಹ್ವಾನಿಸಿ ಮಹೇಶ್ವರನ
ಸ್ಮರಿಸಿ ಭಾರ್ಗವಮಂತ್ರಮುಖದು । ಚ್ಚರಣೆಯಲಿ ಕಡಿಕಡಿದು ಚಿಗುರುವ
ಶಿರವನಾಹುತಿಯಾಗಿ ಕೊಡುತಿರ್ದನು ದಶಗ್ರೀವ ೧೬

ಮೇಲೆಮೇಲೆ ತಿಲಾಜ್ಯ ಚರು ಸಮಿ । ಧಾಳಿ ಮಾಂಸಾಹುತಿಗಳಲಿ ಜಂ
ಹಾಳಿಗಳು ನಿಲುಕಿದವು ನಿಗುರಿದವಾ ಧನಂಜಯನ
ತೂಳಿದುದು ದುರ್ಗಂಧದುರು ಧೂ । ಮಾಳಿ ದಿಗ್ಮಂಡಲವನುಱೆ ಪಾ
ತಾಳಗವದುದು ಥಳಪಳನೆ ಕುದಿದುಕ್ಕಿತಂಬುನಿಧಿ ೧೭

ಚೀಱಿತಿಳೆ ತಾರಾಳಿ ನಭದಲಿ । ಕಾಱಿದಲು ಕುಲಶೈಲ ದಳ್ಳುರಿ
ದೋಱಿದವು ಧಗಧಗಿಸಿದವು ದಿಕ್ಕುಗಳು ಸುರಭುವನ
ಓಱುಂಗುಡಿಸಿದುದಮರತತಿ ಬಾ । ಯಾಱಿದುದು ಮುಱುಕದಲಿ ಕಪಿಬಲ
ತಾಱುಥಟ್ಟಾಯ್ತುಮಮ ಕೋಟಿದಶಾಸ್ಯರುದಯದಲಿ ೧೮

ಏನಿದೀಯುತ್ಪಾತಜನಿತ ಕೃ । ಶಾನು ಕಲ್ಪವ್ಯಾಪ್ತಿಯೋ ಲಂ
ಕಾನಗರದಧಿನಾಥನುದ್ಯಮದಾಭಿಚಾರಕವೊ
ನೀನು ಬಲ್ಲೈ ಹದನನೆನೆ ಮಣಿ । ದಾನನವನೆಲೆ ದೇವ ತಪ್ಪದು
ಮಾನುಷಾರಿಯ ಕೋಟಿ ಹೋಮವಿದೆಂದನಸುರೇಂದ್ರ ೧೯

ದರ್ಭೆಯನ್ನು ಬೆರಳಿಗೆ ಕಟ್ಟಿಕೊಂಡು ರಾವಣನು ಅಗ್ನಿಯನ್ನು ಪ್ರಾರ್ಥಿಸಿದನು. ೧೬. ಕೆಂಪುಗಂಧ ಅಕ್ಷತೆ ಹೂವುಗಳಿಂದ ಅಗ್ನಿಯನ್ನು ಪೂಜಿಸಿ ಬ್ರಹ್ಮನನ್ನು ಆಹ್ವಾನಿಸಿ ಮಹೇಶ್ವರನನ್ನು ಸ್ಮರಿಸಿ ಶುಕ್ರಾಚಾರ್ಯರು ಮಂತ್ರಗಳನ್ನು ಉಚ್ಚರಿಸುತ್ತಿರಲು ರಾವಣನು ಪುನಃ ಪುನಃ ಚಿಗುರುವ ತನ್ನ ತಲೆಗಳನ್ನು ಕತ್ತರಿಸಿ ಕತ್ತರಿಸಿ ಹೋಮ ಮಾಡುತ್ತಿದ್ದನು. ೧೭. ಮೇಲೆ ಮೇಲೆ ಕೊಡುತ್ತಿರುವ ಎಳ್ಳು, ತುಪ್ಪ, ಚರು, ಸಮಿತ್ತು, ಮಾಂಸಗಳ ಆಹುತಿಗಳಿಂದ ಅಗ್ನಿಯು ಉರಿನಾಲಗೆಗಳನ್ನು ಮೇಲೆ ಮೇಲಕ್ಕೆ ಚಾಚಿತು. ದುರ್ವಾಸನೆಯ ಹೊಗೆಯ ಸಮೂಹವು ದಿಕ್ಕುಗಳನ್ನು ಆಕ್ರಮಿಸಿತು, ಪಾತಾಳವನ್ನು ಆವರಿಸಿತು. ಯಾಗಾಗ್ನಿಯಿಂದ ಥಳಪಳನೆ ಸಮುದ್ರ ಕುದಿದು ಉಕ್ಕಿತು. ೧೮. ಅಬ್ಬಬ್ಬ, ಕೋಟಿರಾವಣರು ಹುಟ್ಟಿದುದನ್ನು ಕಂಡು ಭೂಮಿ ಕಿರುಚಿಕೊಂಡಿತು, ಆಕಾಶವು ನಕ್ಷತ್ರಗಳನ್ನು ಕಕ್ಕಿತು, ಕುಲಪರ್ವತಗಳ ಮೇಲೆ ದಳ್ಳುರಿ ಎದ್ದಿತು, ದಿಕ್ಕುಗಳು ಧಗಧಗನೆ ಉರಿದವು, ದೇವಲೋಕ ಮುಗ್ಗರಿಸಿತು, ದೇವತೆಗಳು ಬಾಯಾರಿದರು, ದುಃಖದಿಂದ ಕಪಿಸೈನ್ಯವು ಚೆಲ್ಲಾಪಿಲ್ಲಿಯಾಯಿತು. ೧೯. "ಏನಿದು, ಈ ಅಪಶಕುನಗಳೊಡನೆ ಬೆಂಕಿಯು ಹಬ್ಬಿದೆ ? ಇದೇನು ಪ್ರಳಯವೋ ? ಲಂಕಾ ನಗರೇಶ್ವರನು ಪ್ರಾರಂಭಿಸಿರುವ ಅಭಿಚಾರವೋ ? ಇದೇನೆಂಬುದನ್ನು ನೀನು ಬಲ್ಲೆಯಾ ?" ಎಂದು ರಾಮನು ಪ್ರಶ್ನಿಸಲು ವಿಭೀಷಣನು ಮುಖವನ್ನು ತಗ್ಗಿಸಿ, "ದೇವ, ನೀವು ಹೇಳಿದ್ದು ತಪ್ಪಲ್ಲ, ರಾವಣನ ಕೋಟಿಹೋಮವಿದು" ಎಂದ.

ಅರಸ ಕೇಳಿಂದಿಂದ್ರಜಿತು ವಿ । ಸ್ತರಿಸಿದಧ್ವರಕುಂಡದಲಿ ಕ
ರ್ಬುರಕುಲೇಂದ್ರನ ಕೋಟಿಹೋಮವು ನಡೆವುತಿದೆ ಬೇಗ
ಹರಿಸು ಹರಿನಂದನನನಗ್ಗದ । ಹರಿತನೂಭವನಂದನನನಾ
ಹರಿಸಖನ ನಂದನನನೆಂದಸುರೇಂದ್ರ ಕೈಮುಗಿದ ೨೦

ಬಲ್ಲರಿವರಾ ಸ್ಥಳವನೀತಗ । ಳಲ್ಲದಾರಿಗೆ ನೂಕದೆನೆ ರಣ
ಮಲ್ಲರೆದ್ದರು ಬೇಗ ಬೆಸಸೆನುತದ್ರಿಕುಜ ಸಹಿತ
ಎಲ್ಲವೇಕಿನ್ನೆಮ್ಮ ಹರಿಬದ । ಗೆಲ್ಲ ನಿಮ್ಮದು ಮೇಲೆ ನೀವೇ
ಬಲ್ಲಿರೆನೆ ಧಾಳಿಟ್ಟರರ್ಬುದ ಕೀಶಬಲ ಸಹಿತ ೨೧

ಮುಟ್ಟಿವಿಸಿದುದು ಧಾಳಿ ಧಾಳಿಯು । ದಿಟ್ಟರನು ಭೂತಾಳಿ ಹೊಗಗೊಡ
ದಟ್ಟಿಹೊಯ್ದುವು ಹೊಡೆದು ಕೆಡಹಿದವಖಿಳ ದೆಸೆಗಳಲಿ
ಅಟ್ಟುಗಾಜಿನಲಾ ಜಗಂಗಳ । ಪಟ್ಟಣದಲಂಜನೆಯಸುತನಾ
ಜಟ್ಟಿಗರ ಜಂಗುಳಿಯನೊರಸಿದನೊಂದು ನಿಮಿಷದಲಿ ೨೨

ಅರಸಿದನು ದಶಶಿರಸನಾ ಗಿರಿ । ಶಿರದ ಶಕ್ತಿ ನಿಕುಂಭಿಳೆಯ ಮುಂ
ದಿರದ ಮುಂಭಾಗದಲಿ ಕಾಣದೆ ಕಲಿತ ರೋಷದಲಿ
ಧರೆ ಬಿರಿಯಲುರಿ ನೆಗೆಯಲೊದೆದನು । ಚರಣದಲಿ ಬಳಿಕಲ್ಲಿ ಕಂಡನು
ಸುರವಿರೋಧಿಯ ಹೋಮದೆಡೆಯನು ಹೊಕ್ಕನುರವಣಿಸಿ ೨೩

೨೦. "ರಾಮ, ಕೇಳು. ಹಿಂದೆ ಇಂದ್ರಜಿತು ನಡೆಸಿದ ಯಾಗದ ಕುಂಡದಲ್ಲಿ ರಾಕ್ಷಸೇಶ್ವರನ ಕೋಟಿಹೋಮ ನಡೆಯುತ್ತಿದೆ. ಸುಗ್ರೀವ, ಅಂಗದ, ನೀಲರನ್ನು ಬೇಗ ಕಳುಹಿಸು" ಎಂದು ವಿಭೀಷಣ ಕೈಮುಗಿದ. ೨೧. "ಇವರು ಆ ಯಾಗದ ಸ್ಥಳವನ್ನು ಬಲ್ಲರು. ಇವರಿಗಲ್ಲದೆ ಇನ್ನಾರಿಂದಲೂ ಸಾಧ್ಯವಿಲ್ಲ" ಎಂದು ವಿಭೀಷಣನು ಹೇಳಲು, ಕೂಡಲೆ 'ಅಪ್ಪಣೆ ಕೊಡಿ' ಎಂದು ಬೆಟ್ಟ ಮರಗಳನ್ನು ತೆಗೆದುಕೊಂಡು ಯುದ್ಧವೀರರು ಮೇಲೆದ್ದರು. "ಇನ್ನು ಹೇಳಬೇಕಾದುದೇನು ? ನಮ್ಮ ಕಾರ್ಯವನ್ನು ಗೆದ್ದುಕೊಡುವುದು ನಿಮ್ಮ ಹೊಣೆ. ಮೇಲಿನದು ನಿಮಗೇ ಗೊತ್ತಿದೆ" ಎಂದು ರಾಮನು ಹೇಳಲು ಕಪಿವೀರರು ಅರ್ಬುದ ವಾನರಸೈನ್ಯದೊಡನೆ ದಾಳಿಯಿಟ್ಟರು. ೨೨. ಕಪಿಸೈನ್ಯವು ಯಾಗ ಪ್ರದೇಶದ ಬಳಿ ಮುತ್ತಿಗೆಹಾಕಿತು. ಮುತ್ತಿಗೆಹಾಕಿದ ವೀರರನ್ನು ಮುಂದೆ ಬರಲು ಅವಕಾಶಕೊಡದೆ ಭೂತಗಣವು ಹೊಡೆದಟ್ಟಿತು ಮತ್ತು ಸುತ್ತ ವಾನರರನ್ನು ಹೊಡೆದು ಕೆಡವಿತು. ಜಗತ್ತಿನ ಪಟ್ಟಣಗಳಲ್ಲಿ ಆಂಜನೇಯನು ಹೊಡೆದೋಡಿಸುವ ವೀರನಲ್ಲವೇ ? ಆ ಭೂತಗಳ ಗುಂಪನ್ನು ಒಂದು ನಿಮಿಷದಲ್ಲಿ ಮುಗಿಸಿಬಿಟ್ಟನು. ೨೩. ಆ ಬೆಟ್ಟದ ಶಿಖರದಲ್ಲಿದ್ದ ನಿಕುಂಭಿಳಾದೇವಿಯ ದೇವಾಲಯದ ಮುಂದುಗಡೆಯಲ್ಲಿ ರಾವಣನನ್ನು ಹುಡುಕಿದನು. ಅಲ್ಲಿ ರಾವಣನನ್ನು ಕಾಣದೆ ಕೋಪಗೊಂಡು ಪಾದದಿಂದ ನೆಲವನ್ನೊದೆಯಲು ನೆಲ ಬಿರುಕುಬಿಟ್ಟು ಉರಿ ಮೇಲಕ್ಕೆದ್ದಿತು. ಆಗ ಅಲ್ಲಿ ರಾವಣನು ಹೋಮ

ಏಸು ಕಾವಲ ಭೂತಗಣವದ । ರೈಸುರೂಪಿನಲೊಬ್ಬರದಱೊಳು
ಸೂಸಿ ಸಿಡಿದೋಗದವೊಲುರಿಯಲಿ ಬಿಸುಟನವರುಗಳ
ಈಶನಿಗೆ ಕೈಮುಗಿದು ಭೃಗು ಮ । ಯಾಸುರರ ಹೊಱವಡಿಸಿ ದಶಮುಖ
ನಾಸುರಕ್ರತುಮುಖದ ಪೂರ್ಣಾಹುತಿಯ ನೆಲಕೊದೆದ ೨೪

ತುಳಿದನನಿತಱಲನಿಲಸುತ ಹೊಳ । ಹೊಳಕಿ ರೂಪಾದಸುರಕೋಟಿಯ
ನುಳುಹದಾ ಮಹದಗ್ನಿಕುಂಡದೊಳಿಂದ್ರಸುತಸೂನು
ಖಳಶಿರೋಮಣಿಯಂಗನೆಯ ಮುಂ । ದಲೆಯ ಹಿಡಿದೆಳೆದುಟ್ಟ ಸೀರೆಯ
ಸೆಳೆಯಲೊದಱಿದಳಬಲೆ ಹಾಹಾರವದಲಸುರಂಗೆ ೨೫

ಅಕಟ ಲೋಗರ ಹೆಂಡತಿಯನ । ಪ್ರಕಟದಲಿ ನೀ ತಂದೆ ಲೋಕ
ಪ್ರಕಟದಲಿ ನಿನ್ನಂಗನೆಯ ನಿನ್ನಯ ಸಮಕ್ಷದಲಿ
ಚಿಕುರಕಲಿತಾಕರುಷಣದ ವಿಟ । ನಿಕರವೆಳದೊಯ್ಯುತ್ತಲಿದೆ ನೀ
ಶಕುತನಾದಡೆ ಸಲಹು ಲಜ್ಜೆಯನೆಂದಳಾ ಕಾಂತೆ ೨೬

ಎಂಬ ನುಡಿ ರಕ್ಕಸನ ಕರ್ಣದೊ । ಳಿಂಬುಗೊಳೆ ಸಕ್ರೋಧಶಿಖಿಮುಖ
ದಂಬಕತ್ರಯನಿತ್ತ ಹಿಮಕರಹಾಸವನು ಸೆಳೆದು
ಡೊಂಬಿ ಮಾಡುವ ವಾಲಿತನುಜನ । ಸಂಬರಿಸಿ ಹನುಮಂತದೇವಗೆ
ಝೊಂಬಿಸಲು ಮುಱಿದಿಕ್ಕಿದನು ಸೆಳೆದಾ ಮಹಾಯುಧವ ೨೭

ಮಾಡುತ್ತಿದ್ದ ಸ್ಥಳವನ್ನು ಕಂಡು ರಭಸದಿಂದ ಅಲ್ಲಿಗೆ ನುಗ್ಗಿದನು. ೨೪. ಎಷ್ಟು ಜನ ಕಾವಲಿನ ಭೂತಗಳು ಎಷ್ಟೆಷ್ಟು ರೂಪಿನಲ್ಲಿದ್ದರೋ ಅವರನ್ನೆಲ್ಲ ಒಬ್ಬರೂ ತಪ್ಪಿಸಿಕೊಂಡು ಸಿಡಿದುಹೋಗದಂತೆ ಹನುಮಂತನು ಅಗ್ನಿಕುಂಡದ ಉರಿಗೆ ಎಸೆದನು. ಈಶ್ವರನಿಗೆ ಕೈಮುಗಿದು ಶುಕ್ರಾಚಾರ್ಯ ಮತ್ತು ಮಯಾಸುರರನ್ನು ಅಲ್ಲಿಂದ ಓಡಿಸಿ ರಾವಣನ ಉಗ್ರ್ರಯಾಗದ ಪೂರ್ಣಾಹುತಿಯನ್ನು ನೆಲಕ್ಕೆ ಹಾಕಿ ತುಳಿದನು. ೨೫. ಅಷ್ಟರಲ್ಲಿ ಹನುಮಂತನು ಕಣ್ಣಿಗೆ ಬಿದ್ದ ರಾಕ್ಷಸಸಮೂಹವನ್ನು ಬಿಡದೆ ಅಗ್ನಿಕುಂಡದೊಳಕ್ಕೆ ತುಳಿದುಹಾಕಿದನು. ಅಂಗದನು ರಾಕ್ಷಸಾಧಿಪತಿಯ ಹೆಂಡತಿ ಮಂಡೋದರಿಯ ಮುಂದಲೆಯನ್ನು ಹಿಡಿದೆಳೆದು ಅವಳುಟ್ಟ ಸೀರೆಯನ್ನು ಸೆಳೆಯಲು ಅವಳು 'ಅಯ್ಯೋ ಅಯ್ಯೋ !' ಎಂದು ಕಿರುಚಿಕೊಂಡು ರಾವಣನನ್ನು ಕೂಗಿದಳು. ೨೬. "ಅಯ್ಯೋ ಪರರ ಪತ್ನಿಯನ್ನು ನೀನು ಗುಟ್ಟಾಗಿ ಕದ್ದುತಂದೆ. ಈಗ ನಿನ್ನ ಹೆಂಡತಿಯನ್ನು ಜಗತ್ತಿನ ಕಣ್ಣೆದುರಿಗೇ ನಿನ್ನ ಮುಂದುಗಡೆಯೇ ಕೂದಲನ್ನು ಹಿಡಿದೆಳೆದು ಕೊಂಡೊಯ್ಯುತ್ತಿದೆ ಕಾಮುಕರ ಗುಂಪು. ನೀನು ಸಮರ್ಥನಾದರೆ ನಿನ್ನ ಹೆಂಡತಿಯ ಮರ್ಯಾದೆಯನ್ನು ಕಾಪಾಡು" ಎಂದಳು ಮಂಡೋದರಿ. ೨೭. ಮಂಡೋದರಿಯ ಕೂಗು ರಾವಣನ ಕಿವಿಯಮೇಲೆ ಬೀಳಲು ಕೋಪಾಗ್ನಿಯಿಂದ ಭುಗಿಲೆನ್ನುತ್ತ ಮುಕ್ಕಣ್ಣನಂತೆ ಚಂದ್ರಹಾಸವೆಂಬ ಖಡ್ಗವನ್ನು ಸೆಳೆದು ಕೋಲಾಹಲವುಂಟುಮಾಡುತ್ತಿದ್ದ ಅಂಗದನನ್ನು ಕೊಂದು ಹನುಮಂತನ ಮುಂದೆ ನುಗ್ಗಲು ಹನುಮಂತನು ಆ ಮಹಾಯುಧವನ್ನು

ಕೇಳೆಲವೊ ದಶಮುಖ ವಿಕರ್ಮದ । ಬೇಳುವೆಯು ಬೇಳಂಬ ಬೂದಿಯೊ
ಳಾಳುವುದು ಕಕ್ಕುಲಿತೆ ಸಾಕಿನ್ನೇಕೆ ಜಯಮುಖದ
ಕಾಳಗದೊಳಣು ಚರಿಸದೊದಗಿದ । ಡೇಳುವುದು ಕಡಿದುಡಿದ ಕೀರ್ತಿಲ
ತಾಳಿ ಕವಲೊಡೆದಜನ ಲಯತನಕೆಂದನಾ ಹನುಮ ೨೮

ತಪ್ಪದೀ ನುಡಿಯೆನುತ ಹನುಮನ । ನೊಪ್ಪವಿಟ್ಟಸುರೇಂದ್ರನಾಹವ
ದರ್ಪದಲಿ ಕಾಲಿಕ್ಕಿದನು ಕಮಲಜವರೂಥದಲಿ
ಚಪ್ಪರಿಸಿದನು ಹಯವನದ ನಿ । ಮ್ಮಪ್ಪನೆಡೆಗೀ ಹನುಮನಂಗದ
ನಿಪ್ಪೆಣನ ಕೊಂಡಗ್ನಿಸುತ ಸಹಿತೈದಿದನು ನೃಪನ ೨೯

ತಂದು ಮುಂದಿಳುಹಿದನು ತಾರಾ । ನಂದನನ ಕಡಿಯೆರಡನರಸಂ
ಗೆಂದನೀತನ ದೆಸೆಯಲಳಿದುದು ಹೋಮ ರಾವಣನ
ಎಂದೆನಲು ಮನಮಱಗಿ ಕಂಬನಿ । ದಂದು ಕೆಡಿಸಿದೆಯಕಟ ಕೈಯೆಡೆ
ಕಂದನನು ಹಗೆಗಿಕ್ಕಿ ಮಾಡಿದೆ ನಗೆಯ ನಮಗೆಂದ ೩೦

ಎನಲು ಜಾಂಬವದೇವ ಕೈಮುಗಿ । ದಿನಕುಲೇಂದ್ರಂಗೆಂದನಿದಕೇ
ನಿನಿತು ಚಿಂತೆ ಮಹೌಷಧಿಗಳಿದೆಲಾ ಸುಷೇಣನಲಿ
ಮನುಜನೇ ನೀ ನಿನ್ನ ಕೃಪೆ ಸಂ । ಜನಿಸಲೇಳುವುದಱಿದೆ ಕೊಱತೆಯ
ಹನುಮನಲಿ ಹಾಯ್ಕಲಿಕಾವುದಸಾಧ್ಯ ನಿಮಗೆಂದ ೩೧

ಕಿತ್ತುಕೊಂಡು ಮುರಿದುಹಾಕಿದನು. ೨೮. "ಕೇಳೋ ದಶಕಂಠ, ದುಷ್ಕರ್ಮದ ಈ ಹೋಮದ ಆಹುತಿಯು ಬೂದಿಯಲ್ಲಿ ಕಲಸಿಹೋಗುವುದು. ಗೆಲುವೆನೆನ್ನುವ ಮೋಹ ಸಾಕು. ಸ್ವಲ್ಪವಾದರೂ ಹಿಂಜರಿಯದೆ ಯುದ್ಧಕ್ಕೊದಗಿದ ಪಕ್ಷದಲ್ಲಿ ಬ್ರಹ್ಮನಿರುವ ತನಕ ನಿನ್ನ ಕೀರ್ತಿ ಕವಲೊಡೆದು ಬೆಳೆಯುವುದು" ಎಂದ ಹನುಮಂತ. ೨೯. "ನೀನು ಹೇಳಿದ ಮಾತು ತಪ್ಪಲ್ಲ" ಎಂದು ನುಡಿದು ರಾವಣನು ಹನುಮಂತನನ್ನು ಉಚಿತ ಸ್ಥಾನದಲ್ಲಿರಿಸಿ ಯುದ್ಧಮದದಿಂದ ಬ್ರಹ್ಮರಥವನ್ನೇರಿ ಕುದುರೆಯ ಬೆನ್ನು ಚಪ್ಪರಿಸಿ ನಿಮ್ಮಪ್ಪ ರಾಮನ ಬಳಿಗೆ ನಡೆಸಿದನು. ಇತ್ತ ಹನುಮಂತನು ಅಂಗದನ ದೇಹವನ್ನು ತೆಗೆದುಕೊಂಡು ಅಗ್ನಿಕುಮಾರ ನೀಲನೊಡನೆ ರಾಮನ ಸಮೀಪಕ್ಕೆ ಬಂದನು. ೩೦. ಅಂಗದನ ದೇಹದ ಎರಡು ತುಂಡುಗಳನ್ನು ತಂದು ರಾಮನ ಮುಂದಿಟ್ಟು. "ಈತನ ಸಾಹಸದಿಂದ ರಾವಣನ ಹೋಮ ನಾಶವಾಯಿತು" ಎಂದು ಹನುಮಂತ ಹೇಳಿದನು. ಆ ಮಾತನ್ನು ಕೇಳಿ ರಾಮನ ಮನಸ್ಸಿನಲ್ಲಿ ದುಃಖವುಕ್ಕಿಬಂದಿತು. ಕಣ್ಣೀರು ಹಾಕುತ್ತ, "ಅಯ್ಯೋ, ಕೆಡಿಸಿಬಿಟ್ಟೆಯಲ್ಲ. ನಮ್ಮ ಕೈಗೆ ಒಪ್ಪಿಸಿದ್ದ ಕಂದನನ್ನು ಶತ್ರುವಿಗೆ ಬಲಿಕೊಟ್ಟು ನಮ್ಮನ್ನು ನಗೆಗೀಡುಮಾಡಿದೆ" ಎಂದ ರಾಮ. ೩೧. ಆಗ ಜಾಂಬವದೇವನು ಕೈಮುಗಿದು ರವಿವಂಶದರಸನನ್ನು ಕುರಿತು, "ಇದಕ್ಕೇಕೆ ಇಷ್ಟು ಚಿಂತೆ ? ಸುಷೇಣನ ಬಳಿಯಲ್ಲಿ ಮಹೌಷಧಿಗಳಿವೆಯಲ್ಲವೇ. ನೀನು ಸಾಮಾನ್ಯ ಮಾನವನೆ ? ನಿನ್ನ ದಯೆಗೂಡಿದರೆ ಬದುಕಿಸುವುದು ಅಸಾಧ್ಯವೆ ? ಹನುಮಂತನ ಮೇಲೆ ದೋಷವನ್ನು ಹೊರಿಸಬೇಕೆ ? ನಿಮಗೆ ಅಸಾಧ್ಯವಾದುದಾವುದು" ಎಂದು

ಬಾ ಸುಷೇಣ ಹಸಾದ ನಿಮ್ಮಯ । ವಾಸವನ ಮೊಮ್ಮಗನನೈದೆ ಮ
ಹೌಷಧಿಗಳುಂಟಾದಡೆಬ್ಬಿಸು ಜೀಯಯೆಂದೆನಲು
ಆ ಸುಮಿತ್ರಾಸುತನನೆಬ್ಬಿಸಿ । ದೌಷಧಾರ್ಧದಲೆತ್ತಿದನು ಸಂ
ತೋಷದಿಂದಪ್ಪಿದನು ರಾಘವರಾಯನಂಗದನ ೩೨

ಎಲೆ ಸಮೀರಜ ದುಗುಡವೇಕ । ಗ್ಗಳ ಬಲಾನ್ವಿತ ಭಟರಿಗೆಮ್ಮಾ
ಬಲವನೆತ್ತಿದ ವೀರರಾರೆಮ್ಮಯ ಸಹೋದರನ
ಉಳುಹಿದವರಾರೇನಸಾಧ್ಯವು । ಸಲೆ ವಿಚಾರಿಸೆ ನಿನಗೆ ನಿನ್ನಿಂ
ದೊಳರೆ ಜಗದೊಳು ವೀರರೆಂದುಪಚರಿಸಿದನು ರಾಮ ೩೩

ಅವಧರಿಸು ರಾಜೇಂದ್ರ ಲೋಕ । ವ್ಯವಹರಣೆಯಿದು ಸೇವೆಯೆಂಬುದು
ಭುವನದಲಿ ಕರಕಷ್ಟ ದೇವರಿಗೆಂದ ಮಾತಲ್ಲ
ಜವನ ಗೆಲಬಹುದಾ ಲಯಾಗ್ನಿಯ । ತವಿಸಬಹುದಾ ಪ್ರಳಯರುದ್ರನ
ಬವರಕಾನಲು ಬಹುದು ಸೇವಿಸಬಾರದಕಟೆಂದ ೩೪

ಗರಳವನು ಕುಡಿದಕ್ಕಿಸಲು ಬಹು । ದುರಿಯ ನುಂಗಲು ಬಹುದು ಮಾರಿಯ
ಸರಸವಾಡಲು ಬಹುದು ಚುಂಬಿಸಬಹುದು ಫಣಿಮುಖವ
ಹರಿಯನಪ್ಪಲು ಬಹುದು ಸೀಳುವ । ಕರಗಸಕೆ ಕೊರಳೊಡ್ಡಬಹುದು
ತ್ವರಿಸಬಾರದು ಸೇವೆಯೆಂಬುದನೆಂದನಾ ಹನುಮ ೩೫

ಹೇಳಿದನು. ೩೨. "ಬಾ ಸುಷೇಣ, ನಿಮ್ಮ ಇಂದ್ರನ ಮೊಮ್ಮಗನಾದ ಅಂಗದನನ್ನು ಅನುಗ್ರಹಿಸು. ಮಹೌಷಧಿಗಳು ನಿನ್ನ ಬಳಿ ಇದ್ದುದಾದರೆ ಇವನನ್ನು ಬದುಕಿಸು" ಎಂದು ಹೇಳಲು ಲಕ್ಷ್ಮಣನನ್ನು ಬದುಕಿಸಿದ ಆ ಮಹೌಷಧಿಯಲ್ಲಿ ಉಳಿದಿದ್ದ ಅರ್ಧ ದಿಂದ ಅಂಗದನನ್ನು ಬದುಕಿಸಿದನು. ರಾಘವರಾಯನು ಸಂತೋಷದಿಂದ ಅಂಗದನನ್ನು ಅಪ್ಪಿಕೊಂಡನು. ೩೩. "ಅಪ್ಪ ಮಾರುತಿ, ನಿನಗೆ ವ್ಯಸನವೇತಕ್ಕೆ ? ನೀನು ನಮ್ಮ ವೀರರಲ್ಲಿ ಮಹಾಬಲಶಾಲಿ. ನಮ್ಮ ಸೈನ್ಯವನ್ನು ಬದುಕಿಸಿದ ಶೂರರಾರು ? ನನ್ನ ತಮ್ಮನನ್ನು ಉಳಿಸಿದವರಾರು ? ಯೋಚಿಸಿನೋಡಿದರೆ ನಿನ್ನಿಂದ ಯಾವುದು ತಾನೆ ಅಸಾಧ್ಯ ? ಜಗತ್ತಿನಲ್ಲಿ ನಿನಗಿಂತ ಹೆಚ್ಚಿನ ಕಲಿಗಳಿದ್ದಾರೆಯೆ ?" ಎಂದು ರಾಮ ಹನುಮಂತನನ್ನು ಉಪಚರಿಸಿದನು. ೩೪. "ರಾಜೇಂದ್ರ, ಆಲಿಸು. ಇದು ಜಗತ್ತಿನ ನಡೆವಳಿಕೆ. ಸೇವೆಯೆನ್ನುವುದು ಲೋಕದಲ್ಲಿ ಬಹಳ ಕಷ್ಟ. ಸ್ವಾಮಿಯವರಿಗೆ ಮಾತ್ರ ಹೇಳಿದ ಮಾತಲ್ಲ. ಯಮನನ್ನು ಗೆಲ್ಲಬಹುದು, ಪ್ರಳಯಾಗ್ನಿಯನ್ನು ನಂದಿಸಬಹುದು, ಪ್ರಳಯರುದ್ರನೊಡನೆ ಯುದ್ಧಮಾಡಬಹುದು. ಆದರೆ ಸೇವೆಮಾಡಬಾರದು" ಎಂದ ಹನುಮಂತ. ೩೫. "ವಿಷವನ್ನು ಕುಡಿದು ಅರಗಿಸಿಕೊಳ್ಳಬಹುದು, ಉರಿಯನ್ನು ನುಂಗ ಬಹುದು, ಮಾರಿಯೊಡನೆ ಸರಸವಾಡಬಹುದು, ಸರ್ಪದ ಬಾಯಿಗೆ ಮುತ್ತಿಡ ಬಹುದು, ಸಿಂಹವನ್ನು ಅಪ್ಪಿಕೊಳ್ಳಬಹುದು, ಸೀಳುವ ಗರಗಸಕ್ಕೆ ಕತ್ತನ್ನು

ಸೇವೆ ಸಾವಿನ ಸಂಗಡದ ಮನೆ । ಸೇವೆ ದುಷ್ಪ್ರಚಾರದಾಗರ
ಸೇವೆ ಸತ್ಯವನೊತ್ತಿಯಾಳುವ ಸತ್ಯದಾಗರವು
ಸೇವೆಯಪಮಾನಕ್ಕೆ ಚಾವಡಿ । ಸೇವೆ ಪಾಪದ ಪುಂಜವಿದು ದಿಟ
ಸೇವೆಯಿಂದತಿಕಷ್ಟವಿನ್ನೊಂದಿಲ್ಲ ರಘುನಾಥ ೩೬

ಮಾನಭಂಗವ ಮಾಡುವುದು ನೆರೆ । ಹೀನವೃತ್ತಿಗೆ ನಿಲಿಸುವುದು ದು
ಮ್ಮಾನದಾಗರವೆನಿಸುವುದು ತನುವಿರಲು ಮೃತಮುಖದ
ಜ್ಞಾನಗೊಳಿಸುವುದಿತಱ ಜಗದಭ । ಮಾನಗೇಡುಗನೆನಿಸುವುದು ರಘು
ಸೂನು ಚಿತ್ತೈಸರಸುಸೇವೆಗಳಿಂದನಾ ಹನುಮ ೩೭

ಸಾವುದೇ ಸುಖ ಸೇವೆಯಿಂದವೆ । ಜೀವವನು ಸಲಹುವದಱಿಂದೆನ
ಲಾ ವಿಭಾಕರಕುಲಜನತಿಕರುಣದಲಿ ಕೈನೀಡಿ
ಪಾವಮಾನಿಯ ಬರಸೆಳೆದು ಸಂ । ಭಾವನೋಕ್ತಿಗಳಿಂದ ಜಾಂಬವ
ದೇವ ಹೊಗಳಲು ತೆಗೆದು ಬಿಗಿಯಪ್ಪಿದನು ನೇಹದಲಿ ೩೮

ಮಗನೆ ನೀ ಸೇವಕನೆ ಸೇವೆಯ । ಸೊಗಸುಗೊಂಬವರಾವೆ ಮಾತಿದು
ನಿಗರ ನಿನಗಲ್ಲೆಮ್ಮ ಹೃದ್ಗತ ಮರುತ ನೀನೀಗ
ಜಗದೊಳಗೆ ನಿನ್ನಿಂದ ಪೂಜ್ಯರು । ಬಗೆಯಲುಂಟೇ ಕಂದ ಕೇಳೆಂ
ದಗಲದಧಿಕಸ್ನೇಹದಲಿ ಮೈದಡವಿದನು ರಾಮ ೩೯

ಒಡ್ಡಬಹುದು, ಆದರೆ ಸೇವೆಯೆಂಬುದನ್ನು ನಿರ್ವಹಿಸುವುದು ಕಷ್ಟ. ೩೬. "ಸೇವೆ ಸಾವಿನ ಸಂಗಡದ ಮನೆ, ಸೇವೆ ಕೆಟ್ಟನಡವಳಿಕೆಯ ನಿವಾಸ, ಸೇವೆ ಸತ್ಯವನ್ನು ಮೆಟ್ಟಿ ಆಳುವ ಅಸತ್ಯದ ನೆಲೆ, ಸೇವೆ ಅಪಮಾನದ ಆಶ್ರಯಸ್ಥಾನ, ಸೇವೆ ಪಾಪದ ರಾಶಿ. ಇದು ನಿಜ. ಸೇವೆಯಿಂದ ಅತಿ ಕಷ್ಟಕರವಾದುದು ಬೇರೆ ಇನ್ನೊಂದಿಲ್ಲ, ರಘುನಾಥ. ೩೭. ರಾಜರ ಸೇವೆಗಳು ಮಾನಭಂಗ ಮಾಡುವುದು, ನೀಚ ಕಸುಬಿಗೆ ಇಳಿಸುವವು, ದುಃಖದ ನೆಲೆ ಎನ್ನಿಸುವವು, ದೇಹದಿಂದ ಬದುಕಿದ್ದರೂ ಸತ್ತವರೆಂಬ ಭಾವನೆಯನ್ನು ತಂದುಕೊಡುವವು, ಜಗತ್ತಿನಲ್ಲಿ ಆತ್ಮಗೌರವ ಕಳೆದುಕೊಂಡವನೆನ್ನಿಸುವವು, ಆಲಿಸು ರಘುನಾಥ" ಎಂದ ಹನುಮಂತ. ೩೮. "ಸೇವೆಯಿಂದ ಜೀವನವನ್ನು ಸಾಗಿಸುವುದಕ್ಕಿಂತ ಸಾಯುವುದೇ ಸುಖ" ಎಂದು ಹನುಮಂತನು ಹೇಳಲು ರವಿವಂಶಜ ರಾಮನು ಕರುಣೆಯಿಂದ ಕೈನೀಡಿ ಮಾರುತಿಯನ್ನು ಸೆಳೆದು ಪ್ರೀತಿಯಿಂದ ಅಪ್ಪಿಕೊಂಡನು. ಜಾಂಬವಂತನು ಮನ್ನಣೆಯ ಮಾತುಗಳಿಂದ ಹನುಮಂತನನ್ನು ಹೊಗಳಿದನು. ೩೯. "ಮಗನೆ, ನೀನು ಸೇವಕನೆ? ಸೇವೆಯ ಸೊಗಸನ್ನು ಬಯಸುವವರು ನಾವೆ ? ಈ ನಿನ್ನ ಮಾತು ಮನೋಹರವಾದುದು. ಆದರೆ ನಿನಗಲ್ಲ. ನೀನು ನನ್ನ ಹೃದಯದಲ್ಲಿ ನೆಲಸಿದ್ದೀಯೆ. ಜಗತ್ತಿನಲ್ಲಿ ನಿನಗಿಂತ ಹೆಚ್ಚಿನ ಪೂಜ್ಯರುಂಟೇ, ಕೇಳು ಕಂದ" ಎಂದು ರಾಮನು ಅತಿಪ್ರೀತಿಯಿಂದ ಬಿಡದೆ ಹನುಮಂತನ

ತೆಗೆದ ಲಜ್ಜೆಯಲಸುರಪತಿ ನಿಜ । ನಗರಕಭಿಮುಖನಾದನತ್ತಲು
ಗಗನದಮರಿಯರೊಲಿದು ಸಂತೋಷದಲಿ ಸಂಪಿಗೆಯ
ಮುಗುಳ ಸುರಿದರು ಮೊಱೆವ ಸುರಭೇ । ರಿಗಳ ರವದಲಿ ರಾಯ ತೊರವೆಯ
ನಗರದಧಿಪತಿ ವೀರ ನರಕೇಸರಿಯ ಕಟಕದಲಿ ೪೦

ಮೈದಡವಿದನು. ೪೦. ಇತ್ತ ಅಪಮಾನಗೊಂಡ ರಾಕ್ಷಸೇಶ್ವರನು ಲಂಕಾಪುರಕ್ಕೆ ತಿರುಗಿದನು. ಅತ್ತ ಆಕಾಶದಲ್ಲಿದ್ದ ದೇವತಾಸ್ತ್ರೀಯರು ದೇವತೆಗಳ ನಗಾರಿಗಳ ಶಬ್ದದೊಡನೆ ತೊರವೆಯಧಿಪತಿ ವೀರ ನರಹರಿಯ ಅವತಾರಿಯಾದ ಶ್ರೀರಾಮನ ಸೈನ್ಯದ ಮೇಲೆ ಸಂತೋಷದಿಂದ ಸಂಪಿಗೆಮೊಗ್ಗುಗಳನ್ನು ಸುರಿದರು.

# ನಲವತ್ತೊಂಬತ್ತನೆಯ ಸಂಧಿ

ಸೂಚನೆ॥ ರಾಯ ರಘುರಾಜೇಂದ್ರ ನಿರ್ಜರ । ರಾಯ ರಥದಲಿ ಹಳಚಿದನು ಖಳ
ರಾಯ ರಾವಣನೊಡನೆ ಸಕಲ ಸುರೌಘ ನಲಿದಾಡೆ

ಎಲೆ ಕುಶಾನುಜ ಕೇಳು ಕುಶ ಕೇ । ಳಳಿದ ಲಜ್ಜೆಯಲಸುರಪತಿ ನಿಜ
ಲಲನೆಯನು ಬೋಳೈಸಿ ರಿಪುವಿಜಯಪ್ರತಾಪಕದ
ಛಲಪದೋಕ್ತಿಯನುಸುರಿ ರಜನಿಯ । ಕಳೆದು ರಣದೀಕ್ಷೆಯನು ಕೈಕೊಂ
ಡಳಿದುಳಿದ ಬಲಸಹಿತ ನಡೆತಂದನು ರಣಾಂಗಣಕೆ ೧

ಬಿರುದಿನುಬ್ಬರಗಹಳೆ ಜಜಿದವು । ನರಪತಿಯನಬ್ಬರಿಸಿದವು ಕಾ
ಹುರಶೆಯಲಿ ಕದನವನು ಕಿಣಕುವ ಭೂರಿಭೇರಿಗಳು
ತುರಗ ಕುಣಿದವು ಕುಬುಬಜಿಂದನಿಳೆ । ಬಿರಿಯೆ ಸಾರಥಿ ಬಿಲ್ಲ ಬೊಬ್ಬೆಯ
ಸರಳ ಸೌರಂಭದಲಿ ಖಳ ಹೊಕ್ಕನು ರಣಾಂಗಣವ ೨

ಅರಿಯ ಬರವನು ಕಾಣುತುರು ಸಂ । ಗರ ಧುರೀಣ ಧನುರ್ಧರನು ರಣ
ಕುರವಣಿಪ ಕಪಿಭಟರ ಕೈಸನ್ನೆಯಲಿ ಸಂತೈಸಿ
ಧುರಕೆ ನಾವಿನ್ನುತ್ತರಸ್ಥಿತಿ । ಗರಸಲಾ ದಶಶಿರನು ಧರ್ಮದ
ನಿರುತರಾವೈಸಿನ್ನು ಗಾವಳಿ ಬೇಡ ನಿಮಗೆಂದ ೩

ಸೂಚನೆ॥ ರಾಘವರಾಯನು ದೇವೇಂದ್ರನ ರಥವನ್ನೇರಿ ಸಮಸ್ತ ದೇವತೆಗಳೂ ಹರ್ಷಿಸುತ್ತಿರುವಂತೆ ರಾಕ್ಷಸರಾಜ ರಾವಣನೊಡನೆ ಕಾಳಗವಾಡಿದನು. ೧. ಲವ ಕೇಳು, ಕುಶನೇ ಕೇಳು. ಅಪಮಾನಗೊಂಡ ರಾಕ್ಷಸೇಶ್ವರನು ಪತ್ನಿಯನ್ನು ಸಮಾಧಾನ ಪಡಿಸಲು ಶತ್ರುವನ್ನು ಗೆದ್ದೆನೆಂದು ಪರಾಕ್ರಮದ ಹೊಗಳಿಕೆಯ ಮಾತುಗಳನ್ನಾಡಿ ರಾತ್ರಿಯನ್ನು ಕಳೆದನು. ಮಾರನೆಯ ದಿನ ರಾವಣನು ಯುದ್ಧದೀಕ್ಷೆಯನ್ನು ಪಡೆದು ಅಳಿದುಳಿದ ಸೈನ್ಯದೊಡನೆ ಯುದ್ಧರಂಗಕ್ಕೆ ಬಂದನು-ಎಂಬುದಾಗಿ ವಾಲ್ಮೀಕಿಗಳು ಕಥೆಯನ್ನು ಮುಂದುವರಿಸಿದರು. ೨. ಬಿರುದಿನ ದೊಡ್ಡ ಕಹಳೆಗಳು ರಾಮನನ್ನು ಜರೆದವು ; ಯುದ್ಧಕ್ಕೆ ಆಹ್ವಾನಿಸಿ ಕೆಣಕುವ ಭಾರಿ ನಗಾರಿಗಳು ರಭಸದಿಂದ ಅಬ್ಬರಿಸಿದವು ; ಕುದುರೆಗಳು ಕುಣಿದವು ; ಸಾರಥಿಯು ಭೂಮಿ ಬಿರುಕುಬಿಡುವಂತೆ ಕುಬುಬೆಂದು ಆರ್ಭಟಿಸಿದನು ; ಧನುಷ್ಟಂಕಾರ ಶಬ್ದ ಮಾಡುತ್ತ ಸಂಭ್ರಮದಿಂದ ರಾವಣನು ಯುದ್ಧರಂಗವನ್ನು ಹೊಕ್ಕನು. ೩. ಶತ್ರು ಬಂದುದನ್ನು ಕಾಣುತ್ತ ಯುದ್ಧವೀರ ಧನುರ್ಧಾರಿ ಶ್ರೀರಾಮನು ಯುದ್ಧಕ್ಕೆ ಕಾತುರರಾದ ಕಪಿವೀರರನ್ನು ಕೈಸನ್ನೆಯಿಂದ ಸಮಾಧಾನಗೊಳಿಸಿ, "ಈ ಯುದ್ಧ ನಮ್ಮದು, ದಶಕಂಠನು ಮುಂದಿನ ಆಗುಹೋಗುಗಳಿಗೆ ಹೊಣೆಗಾರನು. ನಾವು ಧರ್ಮದಲ್ಲಿ ಶ್ರದ್ಧೆಯುಳ್ಳವರು, ಇನ್ನು ನಿಮಗೆ

ಎಂದು ಪೀತಪಟಾಗ್ರವನು ರಣ । ಕಂದ ಮಿಗೆ ಬಿಗಿದುಟ್ಟು ಕಟಿಯಲಿ
ಸಂಧಿಸುತ ಸುರಗಿಯನು ನಿಶಿತಾಕ್ಷಯದ ಬಾಣಧಿಯ
ಕಂಧಕೇಱಿಸಿ ಹರೆದ ಜಡೆಗಳ । ನೊಂದುಗೂಡಿ ನಿಜೋಗ್ರನಾರಿ
ದ್ವಂದ್ವದಿಷ್ವಾಸನವ ದನಿದೋಱಿದನು ರಘುನಾಥ ೪

ಬಿಸುಟು ಭಯವನು ಬಳಿಕ ದೇವ । ಪ್ರಸರ ದಿವ್ಯವಿಮಾನವೀಥಿಯ
ಲೆಸೆದುದೈ ಗಗನದಲಿ ಶಕ್ತಿಶರಾಸನಂಗಳಲಿ
ನಿಶಿತ ಶಸ್ತ್ರಂಗಳಲಿ ರಣ ಕ । ರ್ಕಶ ಪರಿಗ್ರಹ ನಿಕರದಲಿ ಯಮ
ಪಶುಪತಿ ಬ್ರಹ್ಮಾಮರೇಂದ್ರಾದ್ಯಖಿಳ ಸುರನಿಕರ ೫

ಸನಕ ನಾರದ ಭೃಗು ಪರಾಶರ । ಮುನಿ ಭರದ್ವಾಜಾತ್ರಿ ವರ ಜೈ
ಮಿನಿ ಮರೀಚಿ ಮತಂಗ ಮೈತ್ರಾವರುಣಿ ಮೊದಲಾದ
ಮುನಿಗಳಭ್ರವ ತೀವಿದುದು ನಿಮಿ । ಮನು ಪುರೂರವ ಮುಖ್ಯಷೋಡಶ
ಜನಪರೈದಿದರೀಕ್ಷಿಸಲು ನೃಪರಾಕ್ಷಸರ ರಣವ ೬

ನಿಕಷೆ ದಿತಿತನುಸೂನುಗಳು ನಾ । ಯಕರು ನಾಕಜರಿದುರಿನಲಿ ಪು
ಷ್ಪಕ ರಥಾಶ್ವ ಸುವಾಹನಂಗಳಲೆಸೆದರಭ್ರದಲಿ
ಪ್ರಕಟಿಸಿತು ಬಳಿಕಿತ್ತ ಸಮರೋ । ದ್ಯುತ ಸಾಹಸರಬ್ಬರಣೆ ನೋ
ಟಕರ ಕಳಕಳವಡಗಿಸಿತು ಮೇಲುದಧಿಘೋಷದಲಿ ೭

ತೊಂದರೆಬೇಡ" ಎಂದು ನುಡಿದ. ೪. ಹೀಗೆ ಹೇಳಿದ ರಾಮನು ಹಳದಿಯ ವಸ್ತ್ರವನ್ನು ಕಾದಾಟಕ್ಕೆ ಅರ್ಹವಾದ ರೀತಿಯಲ್ಲಿ ಬಿಗಿದುಟ್ಟನು ; ಕಠಾರಿಯನ್ನು ಸೊಂಟಕ್ಕೆ ಕಟ್ಟಿಕೊಂಡನು ; ಅಕ್ಷಯತೂಣೀರವನ್ನು ಹೆಗಲಿಗೆ ಏರಿಸಿಕೊಂಡನು. ಚದುರಿದ ಕೂದಲುಗಳನ್ನು ಒಂದುಗೂಡಿಸಿ ಕಟ್ಟಿಕೊಂಡನು. ಅನಂತರ ಎರಡು ಹಗ್ಗಗಳ ಉಗ್ರಧನುಸ್ಸನ್ನು ಮಿಡಿದು ಶಬ್ದಮಾಡಿದನು. ೫. ದೇವತೆಗಳು ಭಯವನ್ನು ಬಿಟ್ಟು ಗಗನದಲ್ಲಿ ದಿವ್ಯವಾದ ವಿಮಾನಗಳಲ್ಲಿ ನೆರೆದರು. ಶಕ್ತ್ಯಾಯುಧ, ಬಿಲ್ಲು ಮತ್ತು ಹರಿತವಾದ ಶಸ್ತ್ರಗಳನ್ನಿಟ್ಟುಕೊಂಡು ಯುದ್ಧಸಾಹಸಿ ಪರಿವಾರದೊಡನೆ ಯಮ, ಶಿವ, ಬ್ರಹ್ಮ, ದೇವೇಂದ್ರರೇ ಮೊದಲಾದ ದೇವತೆಗಳ ಸಮೂಹವು ಪ್ರಕಾಶಿಸಿತು. ೬. ಸನಕ, ನಾರದ, ಭೃಗು, ಪರಾಶರ, ಭರದ್ವಾಜ, ಅತ್ರಿ, ಜೈಮಿನಿ, ಮರೀಚಿ, ಮತಂಗ, ಮೈತ್ರಾವರುಣಿ–ಮೊದಲಾದ ಋಷಿಗಳು ಆಕಾಶದಲ್ಲಿ ಗುಂಪುಕೂಡಿದರು. ನಿಮಿ, ಮನು, ಪುರೂರವ–ಮೊದಲಾದ ಹದಿನಾರು ಜನ ರಾಜರು ರಾಮ ರಾವಣರ ಯುದ್ಧವನ್ನು ನೋಡಲು ಬಂದರು. ೭. ನಿಕಷೆಯ ಮಕ್ಕಳು ಮತ್ತು ದಿತಿಯ ಮಕ್ಕಳಾದ ದೈತ್ಯರು ಮರುತ್ತುಗಳು, ನಾಯಕರು ದೇವತೆಗಳ ಎದುರುಗಡೆಯಲ್ಲಿ ಪುಷ್ಪಕ, ರಥ, ಕುದುರೆ ಮೊದಲಾದ ವಾಹನಗಳಲ್ಲಿ ಕುಳಿತು ಆಕಾಶದಲ್ಲಿ ಗೋಚರಿಸಿದರು. ಇತ್ತ ಯುದ್ಧದಲ್ಲಿ ತೊಡಗಿದ ಇಬ್ಬರು ಸಾಹಸಿಗಳ ಆರ್ಭಟ ಸಮುದ್ರದ ಅಬ್ಬರದಂತೆ

ಖುರದ ಕುಣಿಹದ ಕುಸಿದ ಪಚ್ಚಳ । ದರಳ್ದ ನಾಸಾಪುಟದ ನಲಿದು
ಪ್ಪುರಿಸಿದಾನನದೊಸರ್ವ ನೊರೆಯುಲಿ ಘಣಘಣಸ್ವನದ
ತುರಗ ತುದಿಗಾಲಿನಲಿ ಮಿಗೆ ಖೊ । ಪ್ಪುರಿಸಿ ನೆಲನನು ನಿಗುರಿ ರಾಮನ
ಸರಿಸದಲಿ ಸಡಗರಿಸಿ ಗೆಲಿದವು ಕಡುಹಿನಲಿ ಖಳನ ೮

ಘುಡುಘುಡಿಸಿ ಹನುಮಂತನಧರವ । ನೊಡೆಯುಗಿದು ಮಲೆತಿರ್ದನಾ ಗಡ
ಬಡೆಯು ತೇರಿನ ತುರಗದಿದಿರಲಿ ನೀಲ ವಾಲಿಜರು
ತಡೆವ ತವಕದಲಿದ್ದರೆಡೆಯಲಿ । ಕಡಿದು ಬಿಸುಡುವೆ ರಥವನೆಂದವ
ಗಡೆಯು ಲಕ್ಷ್ಮಣನಿದ್ದನಂಬನು ಹೂಡಿ ಬಿಲ್ಲಿನಲಿ ೯

ಕಂಡನಿವರನುಮಾನಚೇಷ್ಟೆಯ । ದಂಡಿಯನು ಸಾಕುಭ್ರಮಿಸದಿರಿ
ಕಂಡದೈಶ್ವರ್ಯಕ್ಕೆ ಪಣಮಿಸುವುದು ಚಿತ್ತದಲಿ
ಖಂಡಿತ ಕ್ಷ್ಮಾಪಾಲವೈಭವ । ಮಂಡನರು ನಾವೀ ಹುತಿಗೆ ಪದ
ಪಂಡಿತತ್ವವೆ ಸಾಕು ಸಮರವ ನೋಡಿ ನೀವೆಂದ ೧೦

ಅಱಿಯರೇ ದೇವತೆಗಳಾ ನೇ । ಸಱಿನ ವಂಶದಲಾದಿಪುರುಷನು
ಮೆಱೆದನೆಂಬುದನಂಜಿಕೆಯದೇಕಿನ್ನು ನಮಗೆಂದು
ಹೊಱಿಸಿ ಕರಸಂಪುಟವ ನೊಸಲಿನೊ । ಳೊಱಲದೊಯ್ಯನೆ ಮಧುರವಚನದಿ
ನುಱಿಸುವವೊಲಿಂದ್ರಂಗೆ ಬಿನ್ನಹ ಮಾಡಿತಮರಗಣ ೧೧

ವ್ಯಾಪಿಸಿ ಪ್ರೇಕ್ಷಕರ ಗದ್ದಲವನ್ನು ಅಡಗಿಸಿತು. ೮. ಕುಣಿಯುವ ಗೊರಸು, ಕುಸಿದ ನಿತಂಬ, ಅರಳಿದ ಮೂಗಿನ ಹೊಳ್ಳೆ, ಮೇಲಕ್ಕೆತ್ತಿದ ಮುಖ, ಬಾಯಿಂದ ಒಸರುವ ನೊರೆಗೂಡಿದ ಕುದುರೆಗಳು ಘಣಘಣ ಶಬ್ದಮಾಡುತ್ತ, ತುದಿಗಾಲಿನಿಂದ ನೆಲವನ್ನು ತಿವಿಯುತ್ತ ರಾಮನ ಎದುರಿಗೆ ನೆಟ್ಟಗೆ ನಿಂತುಕೊಂಡು ತಮ್ಮ ಪರಾಕ್ರಮದಿಂದ ರಾವಣನನ್ನು ಮೆಚ್ಚಿಸಿದವು. ೯. ರೋಷದಿಂದ ಘುಡು ಘುಡು ಶಬ್ದಮಾಡುತ್ತ ಹನುಮಂತನ ತುಟಿಯನ್ನು ಸೊಕ್ಕಿದ ರಾವಣನ ರಥದ ಕುದುರೆ ಕಚ್ಚಿತು. ಆಗ ನೀಲ ಅಂಗದರು ತಡೆಯುವ ಆತುರದಿಂದ ಎದುರುಗಡೆಯಲ್ಲಿದ್ದರು ; ರಥವನ್ನು ಕಡಿದು ಬಿಸಾಡುವೆನೆಂದು ಲಕ್ಷ್ಮಣನು ಬಿಲ್ಲಿಗೆ ಬಾಣವನ್ನು ಹೂಡಿ ಉಗ್ರನಾಗಿ ನಿಂತನು. ೧೦. ಇವರು ಉದ್ವೇಶಿಸಿದ ಕಾರ್ಯದ ಹವಣನ್ನು ಕಂಡು ರಾಮನು, "ಸಾಕು, ಸುಮ್ಮನೆ ಭ್ರಾಂತಿಗೊಳ್ಳಬೇಡಿ, ಸಂಪತ್ತನ್ನು ಕಂಡರೆ ಮನಸ್ಸು ಹರ್ಷಗೊಳ್ಳುವುದು ಸಹಜ, ಶತ್ರುವಿನ ವಿರೋಧವನ್ನು ಸಂಪಾದಿಸಿದ ರಾಜವೈಭವವುಳ್ಳವರು ನಾವು. ಈ ಶತ್ರುವಿನ ಹೋಮಕ್ಕೆ ನೀವು ಸುಮ್ಮನೆ ನಿಂತಿರುವುದೇ ಸಾಕು, ಯುದ್ಧವನ್ನು ನೀವು ನೋಡಿ" ಎಂದ ರಾಮ. ೧೧. ಆದಿನಾರಾಯಣನು ಶ್ರೀರಾಮನೆಂಬ ಹೆಸರಿನಿಂದ ಸೂರ್ಯವಂಶದಲ್ಲಿ ಜನಿಸಿದನೆಂಬುದನ್ನು ದೇವತೆಗಳು ಅರಿಯರೇ ? ಇನ್ನು ನಮಗೇಕೆ ಅಂಜಿಕೆ ಎಂದು ಹಣೆಯ ಮೇಲೆ ಕೈಯಿಟ್ಟುಕೊಂಡು ಕೂಗಿಕೊಳ್ಳದೆ ಮಧುರವಾದ ಮಾತುಗಳಿಂದ ಮನಮುಟ್ಟುವಂತೆ ದೇವತೆಗಳು ಇಂದ್ರನಿಗೆ ವಿನಂತಿ ಮಾಡಿಕೊಂಡರು.

ದೇವ ಬಿನ್ನಹ ಸಕಲ ದೇವರ । ದೇವನಿರವನು ನೋಡು ಪದರಾ
ಜೀವವೇ ಸಂಚರಿಸುತವೆ ರವಕುಳದ ಮಧ್ಯದಲಿ
ರಾವಣನ ನೋಡುರು ವರೂಥ ಸ । ರಾವ ಸಮರಪ್ರೌಢಿಯನು ನಿಮ
ಗಾವುದುಚಿತಪ್ರೀಯವೀ ಹುತಿಗೆಂದುದಮರಗಣ ೧೨

ಕೇಳಿದನು ಬಳಿಕಿಂದ್ರನೊಯ್ಯನೆ । ಮೌಳಿಯನು ಮಣಿದಬುಜಸಂಭವ
ಶೂಲಿಗಳಿಗವರನುಮತಾನುಜ್ಞೆಯಲಿ ನಿಜರಥವ
ಮೇಳವಿಸಿ ಮಾತಳಿಯ ಕರೆದು ನೃ । ಪಾಲಚೂಡಾಮಣಿಗೆ ರಣಜಯ
ಶೀಲ ಶೂರಾಗ್ರಣಿಗೆ ಸಾರಥಿಯಾಗು ಹೋಗೆಂದ ೧೩

ಇದಕೊ ಶಾರ್ಙ್ಗಮಹಾಶರಾಸನ । ವಿದನು ಕೊಡು ಕೊಳ್ಳಮೃತಕಲಶವ
ಕುದುರೆಗಳಿಗೆಅ ನೊಂದಡೆಂದಮರೇಂದ್ರ ಮಾತಳಿಯ
ಕದನಕರ್ಕಶ ಭೈರವನ ರಿಪು । ಹೃದಯವಿದಳನ ಭೈರವನ ದಶ
ವದನ ರಣಭೈರವ ಬಳಿಗಾಗಿಂದ್ರ ಬೀಳ್ಕೊಟ್ಟ ೧೪

ಪಳಹರದ ಘಂಟಾರವದ ಪದಿ । ತಳದ ಕದಳಿಕೆಗಳ ಸುಮುಕ್ತಾ
ಫಲದ ಪಲ್ಲವ ಸತ್ತಿಗೆಯ ಮಣಿಖಚಿತ ಕಾಂಚನದ
ಹೊಳೆವ ಚಕ್ರದ ಚೀತ್ಕೃತಿಯ ಚಾ । ಪಳದ ತೇಜಿಯ ಹೇಪಿತದ ಹೆ
ಕ್ಕಳದ ದಿವ್ಯ ವರೂಥ ಹೊಳೆಹೊಳೆದಿಳಿದುದಿಳೆಗಾಗಿ ೧೫

೧೨. "ಸ್ವಾಮಿ, ವಿಜ್ಞಾಪನೆಗಳು. ಸಮಸ್ತ ದೇವರುಗಳ ದೇವನ ಸ್ಥಿತಿಯನ್ನು ನೋಡು. ಬೊಬ್ಬೆಯ ರಣಭೂಮಿಯ ಮಧ್ಯದಲ್ಲಿ ರಾಮದೇವರು ಸ್ವಂತ ಪಾದಕಮಲಗಳಲ್ಲಿ ನಡೆದಾಡುತ್ತಿದ್ದಾರೆ. ರಾವಣನು ಆರ್ಭಟಿಸುತ್ತ ರಥದ ಮೇಲೆ ನಿಂತು ಕದನಕೌಶಲ ವನ್ನು ಮೆರೆಯುತ್ತಿರುವುದನ್ನು ನೋಡು. ಈ ಯುದ್ಧದಲ್ಲಿ ಯಾವುದು ನಿನಗೆ ಉಚಿತ ವಾಗಿ ಕಾಣುವುದು ?" ಎಂದು ದೇವತೆಗಳು ವಿನಂತಿ ಮಾಡಿಕೊಂಡರು. ೧೩. ದೇವತೆಗಳ ಮಾತನ್ನು ಕೇಳಿದ ಇಂದ್ರನು ತಲೆಯನ್ನು ಬಾಗಿ ವಂದಿಸಿ ಬ್ರಹ್ಮ ಮಹೇಶ್ವರರ ಒಪ್ಪಿಗೆಯನ್ನು ಪಡೆದು ಅವರ ಅಪ್ಪಣೆಯಂತೆ ತನ್ನ ರಥವನ್ನು ಹೂಡಿ ಮಾತಲಿಯನ್ನು ಕರೆದು, "ಯುದ್ಧವಿಜಯಿ ಕದನಕಲಿ ರಾಜಶ್ರೇಷ್ಠ ರಾಮನಿಗೆ ಸಾರಥಿಯಾಗು, ಹೋಗು" ಎಂದ. ೧೪. "ಇದು ಶಾರ್ಙ್ಗವೆಂಬ ವಿಷ್ಣುವಿನ ಬಿಲ್ಲು ; ಇದನ್ನು ರಾಮನಿಗೆ ಕೊಡು. ಈ ಅಮೃತಕಲಶವನ್ನು ತೆಗೆದುಕೋ, ಕುದುರೆಗಳಿಗೆ ಗಾಯವಾದರೆ ಇದನ್ನು ಅವುಗಳಿಗೆ ಕುಡಿಸು" ಎಂದು ಹೇಳಿ ದೇವೇಂದ್ರನು ಶತ್ರುಗಳ ಹೃದಯವನ್ನು ಸೀಳಿಹಾಕುವ, ಕದನಕರ್ಕಶಭೈರವನಾದ, ರಾವಣನಿಗೆ ರಣಭೈರವನಾದ ರಾಮನ ಬಳಿಗೆ ಮಾತಲಿಯನ್ನು ಕಳುಹಿಸಿಕೊಟ್ಟ. ೧೫. ಗಂಟೆಗಳ ಶಬ್ದದಿಂದಲೂ ಉತ್ಸಾಹದಿಂದ ಹಾರಾಡುತ್ತಿರುವ ಧ್ವಜದಿಂದಲೂ ಮುತ್ತುರತ್ನಗಳ ಕೊಡೆಯಿಂದಲೂ ಶೋಭಾಯಮಾನವಾದ ಅತಿಶಯವಾದ ದಿವ್ಯರಥವು ರತ್ನಗಳನ್ನು ಮೆಟ್ಟಿದ ಚಿನ್ನದ ಚಕ್ರಗಳ ಚೀತ್ಕಾರ ಮತ್ತು ಚುರುಕಿನ ಕುದುರೆಗಳ ಕೆನೆತಗಳೊಂದಿಗೆ ಹೊಳೆಹೊಳೆ

ನಿಗುರಿದಶ್ವದ ಖುರಪುಟದಲುಜಿ । ನೆಗೆವ ಧೂಳಿಯು ಶಕ್ರಸೂತನ
ಹೊಗಳಿಕೆಯು ಚಪ್ಪರಣೆಯುಬ್ಬರದಶ್ವ ರಘುಪತಿಯ
ಮೊಗದ ಮುಂಭಾಗದಲಿ ನರ್ತಿಸಿ । ಹಗೆಯ ಹರಿಬದ ಕಣನ ಗೆಲಿದವು
ತೆಗೆದು ನಿಂದುದು ತೇರು ನಸುಭಯದಲಿ ದಶಾನನನ ೧೬

ಅಣೆದು ಚಮ್ಮಟಿಗೆಯಲಿ ತುರಗವ । ಕುಣಿಸಿ ಸೂತಾಭ್ಯಾಸ ರಚನೆಯ
ರಣಿಯ ಮೆಚ್ಚಿದಿಳಿದವನಿಗಸುರಾರಾತಿಯಂಘ್ರಿಯಲಿ
ಮಣಿದು ಮೌಳಿಯುನಮರವಂಶಾ । ಗ್ರಣಿಯ ಸೇವೆಯ ಚಿತ್ತವಿಸು ಸುರ
ಗಣದ ಬಿನ್ನಹವಿದು ವರೂಥಕೆ ಬಿಜಯಮಾಡೆಂದ ೧೭

ಇಂದು ಪರಿಯಂತರವು ಸಮರ । ಸ್ಯಂದನದ ಸತ್ವದಲಿ ರಿಪುಗಳ
ಕೊಂದುದಿಲ್ಲೀ ನಲೆಗೆ ಹಂಗೇಕಮರವಲ್ಲಭನ
ಬಂದುದೆಲೆ ಸುರಸೂತ ಕೇಳು ಪು । ರಂದರನ ಪುರುಷಾರ್ಥವಾ ಸಂ
ಕ್ರಂದನನ ಮೆಚ್ಚಿಸುವೆನಾಜಿಯಲಂಘ್ರಿಚಲನೆಯಲಿ ೧೮

ತಿರುಗು ನೀನಲ್ಲದಡೆ ಕೆಲಸಾ । ರ್ದಿರು ಮದೀಯ ಮಹಾರಣವ ವಿ
ಸ್ತರಿಸು ಬಳಿಕಮರರಿಗೆ ಹೇಳೆಲೆ ಸೂತ ನೀನೆನುತ
ತಿರುವನುದ್ದಕೆ ನೀವಿ ಕೊಪ್ಪಿನ । ಕೊರಳನಾರೈದಿಷುಧಿಯಲಿ ಬಲು
ಸರಳ ಕೀಳುವ ಸಮಯದಲಿ ನಾರದನು ನಡೆತಂದ ೧೯

ಯುತ್ತ ಭೂಮಿಗೆ ಇಳಿದುಬಂದಿತು. ೧೬. ನೆಗೆಯುತ್ತಿರುವ ಕುದುರೆಗಳ ಗೊರಸಿನ ತುದಿಯಿಂದ ಧೂಳು ಮೇಲೇಳುತ್ತಿರಲು ಇಂದ್ರನ ಸಾರಥಿ ಮಾತಲಿಯು ಹೊಗಳಿ ಹುರಿದುಂಬಿಸಿ ಬೆನ್ನು ಚಪ್ಪರಿಸಲು ದಿವ್ಯರಥಾಶ್ವಗಳು ರಘುಪತಿಯ ಮುಂದುಗಡೆಯಲ್ಲಿ ನರ್ತಿಸಿ ಶತ್ರುವನ್ನು ಗೆಲ್ಲುವ ರಣರಂಗಕ್ಕೆ ಶೋಭೆಯನ್ನುಂಟುಮಾಡಿದವು. ಅನಂತರ ರಥವು ದಶಕಂಠನ ಹೆದರಿಕೆಯಿಂದ ಸ್ವಲ್ಪ ಹಿಂದಕ್ಕೆ ಸರಿದು ನಿಂತಿತು. ೧೭. ಮಾತಲಿಯು ಚಾವಟಿಯಿಂದ ತಿವಿದು ಕುದುರೆಗಳನ್ನು ಕುಣಿಸಿ ಸಾರಥಿಯ ಯುದ್ಧಚಮತ್ಕಾರ ವನ್ನು ಪ್ರದರ್ಶಿಸಿ ಭೂಮಿಗೆ ರಥವನ್ನಿಳಿಸಿದನು. ಬಳಿಕ ಸಾರಥಿಯು ಅಸುರರ ಶತ್ರುವಾದ ರಾಮನ ಪಾದಗಳಿಗೆ ತಲೆಬಾಗಿ ವಂದಿಸಿ, "ದೇವೇಂದ್ರನ ಸೇವೆಯನ್ನು ಸ್ವೀಕರಿಸು. ಇದು ದೇವತೆಗಳ ವಿಜ್ಞಾಪನೆಯಾಗಿದೆ, ರಥಕ್ಕೆ ದಯಮಾಡಿಸು" ಎಂದ. ೧೮. "ಇದುವರೆಗೆ ರಥದ ಸಾಮರ್ಥ್ಯದಿಂದ ಯುದ್ಧದಲ್ಲಿ ಶತ್ರುಗಳನ್ನು ಕೊಂದುದಿಲ್ಲ. ಈ ಬಗ್ಗೆ ದೇವೇಂದ್ರನ ಹಂಗೇಕೆ ? ದೇವತೆಗಳ ಸಾರಥಿ, ಕೇಳು. ಇದರಿಂದ ದೇವೇಂದ್ರನ ಪುರುಷಾರ್ಥ ಸಿದ್ಧಿಸಿತು. ನಾನು ಕಾಲಮೇಲೆ ನಿಂತೇ ಯುದ್ಧಮಾಡಿ ಇಂದ್ರನನ್ನು ಮೆಚ್ಚಿಸುವೆನು" ಎಂದ ರಾಮ. ೧೯. "ನೀನು ಹಿಂದಿರುಗು ; ಇಲ್ಲದಿದ್ದರೆ ಪಕ್ಕಕ್ಕೆ ಸರಿದು ನಿಲ್ಲು. ಅನಂತರ ನನ್ನ ಮಹಾಯುದ್ಧವನ್ನು ದೇವತೆಗಳಿಗೆ ವಿವರಿಸಿ ಹೇಳು, ಮಾತಲಿ" ಎನ್ನುತ್ತ ಬಿಲ್ಲಿನ ಹಗ್ಗವನ್ನು ಕೈಯಿಂದ ಸೀವಿ, ಬಿಲ್ಲಿನ ತುದಿಯ ಹಗ್ಗದ ಕುಣಿಕೆಯನ್ನು ಪರೀಕ್ಷಿಸಿ ಬತ್ತಳಿಕೆಯಿಂದ ಮಹಾಬಾಣವನ್ನು ಎಳೆದುಕೊಳ್ಳುವ ಸಮ

ಎಲೆ ನೃಪೋತ್ತಮ ಚಿತ್ತವಿಸು ಹರ । ನಳಿನಭವ ಹರಿ ಶಿಖಿ ಯಮಾದ್ಯರು
ಬಳಿಗೆ ಬೀಳ್ಕೊಟ್ಟರು ಬಲಾತ್ಕಾರದಲಿ ನಿಮ್ಮಡಿಯ
ಕಳುಹಿದೀ ಸ್ಯಂದನದಲತಿರಥ । ನಳವ ಮೆಱೆದರೆ ನೋಡುವೆವು ಹಗೆ
ಯಳಿವನಲ್ಲದಡೊಲ್ಲೆವೆಂದರು ಹದನದೇನೆಂದ ೨೦

ನೋಡಿ ಮಾಡುವುದೇನು ನೋಡದೆ । ಮಾಡುವಪಕೃತವೇನು ಗೆಲವಿನ
ಪಾಡು ನಮ್ಮನು ನೆಮ್ಮುವುದು ಕರ್ತವ್ಯವಲೆ ನಿಮಗೆ
ಕಾಡದಿರಿ ನೀವೆನೆ ವಿಭೀಷಣ । ಬೇಡಿಕೊಂಡನು ಚರಣಯುಗಳಕೆ
ನೀಡಿದರು ಮಸ್ತಕವನಿನಸುತ ಜಾಂಬವಾದಿಗಳು ೨೧

ಐಸೆ ಮತ್ತೇನೆಮಗೆ ಪರಬಲ । ದಾಸೆಯಲಿ ಗೆಲವಾದಡಾಗಲಿ
ವಾಸಿಯೇಕೆನುತೇಱಿದನು ಸುರರುಲಿಯೆ ಘನರಥವ
ಆ ಸಮೀರಜನುಬ್ಬಿ ಬೊಬ್ಬಿಱಿ । ದಾ ಸುರಸ್ಯಂದನದ ರತ್ನವಿ
ಲಾಸದಮಲಧ್ವಜದ ಹಲಗೆಯ ಮೇಲೆ ಮಂಡಿಸಿದ ೨೨

ಖುರಕೆ ನಮಿಸಿ ರಘುಕ್ಷಿತೀಶನ । ಚರಣಕಾನತನಾಗಿ ರಥಕು
ಪ್ಪರಿಸಿ ವಾಘೆಯ ಕೊಂಡು ಹಯಕಂಧರವ ಬೋಳೈಸಿ
ಅರಿಯ ಸೂತನ ಮೂದಲಿಸಿ ಚ । ಪ್ಪರಿಸಿದನು ವಾಜಿಗಳ ಮಾತಳಿ
ಸುರರು ಕುಸುಮಾಂಜಲಿಗೆದಱೆ ಕೆದಱಿದವು ಹಯನಿಕರ ೨೩

ಯಕ್ಕೆ ಸರಿಯಾಗಿ ನಾರದನು ಅಲ್ಲಿಗೆ ಬಂದನು. ೨೦. "ಅಯ್ಯಾ ರಾಜಶ್ರೇಷ್ಠನೇ, ಆಲಿಸು. ಶಿವ, ಬ್ರಹ್ಮ, ಇಂದ್ರ, ಅಗ್ನಿ, ಯಮನೇ ಮೊದಲಾದವರು ನಿಮ್ಮ ಬಳಿಗೆ ಬಲವಂತವಾಗಿ ರಥವನ್ನು ಕಳುಹಿಸಿದ್ದಾರೆ. ನಿಮ್ಮ ಸೇವೆಗೆ ಕಳುಹಿಸಿದ ಈ ರಥದಲ್ಲಿ ಅತಿರಥನಾದ ರಾಮನು ತನ್ನ ಪರಾಕ್ರಮವನ್ನು ತೋರಿಸಿದರೆ ಶತ್ರುವಿನ ಸಾವನ್ನು ನೋಡುವೆವು, ಇಲ್ಲದಿದ್ದರೆ ಇಲ್ಲ ಎಂದರು ಇದು ಇರುವ ವಿಷಯ" ಎಂದ ನಾರದ. ೨೧. "ನೀವು ನೋಡಿ ಮಾಡುವುದೇನು ? ನೋಡದೆ ಮಾಡುವ ಅಪಕಾರವೇನು ? ಗೆಲ್ಲುವ ಪಾಡು ನಮ್ಮದು ; ನಮ್ಮನ್ನು ನಂಬಿಕೊಂಡಿರುವುದು ನಿಮ್ಮ ಕರ್ತವ್ಯ. ಸುಮ್ಮನೆ ಕಾಡಬೇಡಿ" ಎಂದು ರಾಮನು ಹೇಳಲು ವಿಭೀಷಣನು ರಥವನ್ನೇರಬೇಕೆಂದು ಬೇಡಿಕೊಂಡನು ; ಸುಗ್ರೀವ ಜಾಂಬವಾದಿಗಳು ರಾಮನ ಪಾದಗಳಲ್ಲಿ ತಲೆಯಿಟ್ಟು ಕೇಳಿಕೊಂಡರು. ೨೨. "ಓಹೋ, ಹಾಗಿದ್ದರೆ ಮತ್ತೇನು ? ಪರರ ಬೆಂಬಲದಿಂದ ಗೆಲುವಾಗುವುದಿದ್ದರೆ ಆಗಲಿ. ಸುಮ್ಮನೆ ಮಾತೇಕೆ ?" ಎನ್ನುತ್ತ ದೇವತೆಗಳು ಹರ್ಷಧ್ವನಿಮಾಡುತ್ತಿರಲು ರಾಮನು ದಿವ್ಯರಥವನ್ನೇರಿದನು. ಮಾರುತಿಯು ಹರ್ಷದಿಂದ ಬೊಬ್ಬೆಹಾಕಿ ಆ ದೇವರಥದ ರತ್ನಧ್ವಜದ ಹಲಗೆಯ ಮೇಲೆ ಹತ್ತಿ ಕುಳಿತನು. ೨೩. ಕುದುರೆಗಳ ಗೊರಸಿಗೆ ನಮಸ್ಕರಿಸಿ ರಘುನಾಥನ ಪಾದಗಳ ಮೇಲೆ ಬಿದ್ದು ಮಾತಲಿ ರಥದ ಮೇಲಕ್ಕೆ ನೆಗೆದನು. ಬಳಿಕ ಲಗಾಮನ್ನು ಕೈಗೆ ತೆಗೆದುಕೊಂಡು ಶತ್ರುವಿನ ರಥದ ಸಾರಥಿಯನ್ನು ಮೂದಲಿಸಿ ಕುದುರೆಗಳ ಬೆನ್ನು ಚಪ್ಪರಿಸಿದನು. ಕುದುರೆಗಳು ಹುರುಪಿನಿಂದ ಮುಂದಕ್ಕೆ ಚಲಿಸಿದವು ; ದೇವತೆಗಳು ಬೊಗಸೆಯಿಂದ

ಮೊಳಗಿದವು ನಿಸ್ಸಾಳತತಿ ದಿಗು । ವಳಯ ಗುಮ್ಮಿಡಲಭ್ರದಮರರ
ಲಿಳೆ ಬಿರಿಯಲೊದಱಿದವು ಭೇರಿಗಳಸುರಸೇನೆಯಲಿ
ಖಳನೃಪೋತ್ತಮ ಸಾರಥಿಗಳ । ಕ್ಕಲಿಸೆ ನೆಲನಾಯೆಂದು ತುರಗಾ
ವಳಿಯ ಬಿಟ್ಟರು ಪಡಿಮುಖಕೆ ರಾಘವ ದಶಾನನರು ೨೪

ಮನದ ಮತ್ಸರ ರೋಷದುಬ್ಬಿನ । ಮೊನೆಯೊಳುದುರುವ ಕಿಡಿಯ ಕಡುಹಿನ
ಕೊನರುವಾಯತಿಕೆಗಳ ವೀರಾಳಾಪದುಬ್ಬುಗಳ
ಘನಪರಾಕ್ರಮದಭಿನಯದ ಸಂ । ಜನಿತ ವೈರದಲುಬ್ಬಿ ಬೊಬ್ಬಿಱಿ
ದನಿಮಿಷಾಸುರ ನಿಕರ ಹೊಗಳಲು ಕಿದಱಿದರು ಕಣೆಯ ೨೫

ರಣಗಲಿಗಳಿಬ್ಬರ ಮಹಾ ಮಾ । ರ್ಗಣಕದಂಬದ ನೆಯ್ಗೆಯಲಿ ಧಾ
ರುಣಿಗೆ ಜಡಿದುದು ತಿಮಿರ ಶರಭೀಂಕೃತಿಯ ಸಬುದದಲಿ
ಹಣೆಗೆ ಬೇಸಱುದೋಱಿ ರಾಜಸ । ಗುಣದ ವಿಭು ಕರ್ಣದಲಿ ಬೆರಳಿನ
ಬೆಣೆಯನಿಕ್ಕಿದನೊದಱಿದವು ಪ್ರತಿಶಬ್ದಕಬುದಿಗಳು ೨೬

ಚಂಡಬಲರಿಬ್ಬರ ಮಹಾಕೋ । ದಂಡವಿದ್ದವು ಖರಮರೀಚಿಯ
ಮಂಡಲಾಕಾರದಲಿ ಶರಕಿರಣಂಗಳಂದದಲಿ
ಚಂಡಿಸಿರ್ದವು ಬಾಗಿದೊಡಲಿನ । ಮುಂಡಿಗಳ ಬಿಡುದಿಟ್ಟಿಗಳ ಹುರಿ
ಗೊಂಡ ಹೊಸ ಹೊಗರುಗಳ ಸುಭಟರು ಸಮರಕೇಳಿಯಲಿ ೨೭

ಹೂವನ್ನು ಚೆಲ್ಲಿದರು. ೨೪. ದಿಕ್ಕುಗಳು ಧ್ವನಿಸುವಂತೆ ಆಕಾಶದಲ್ಲಿ ದೇವತೆಗಳ ನಗಾರಿಗಳು ಶಬ್ದಮಾಡಿದವು ; ರಾಕ್ಷಸಸೈನ್ಯದಲ್ಲಿ ಭೂಮಿ ಬಿರಿಯುವಂತೆ ಭೇರಿಗಳು ಭೋರ್ಗರೆದವು. ರಾವಣ ರಾಮರ ಸಾರಥಿಗಳು ರಾಮ ರಾವಣರ ಎದುರಿಗೆ ಕುದುರೆಗಳನ್ನು ಬಿಟ್ಟರು. ಆ ರಭಸಕ್ಕೆ ನೆಲವು ಎರಡು ಭಾಗವಾಯಿತು. ೨೫. ಮನಸ್ಸಿನಲ್ಲಿ ಹಗೆತನ ಹುಟ್ಟಿ ಕೋಪೋದ್ರೇಕದಿಂದ ಕಿಡಿಕಾರುತ್ತ ಶೌರ್ಯದ ಕೆಚ್ಚು ಹೆಚ್ಚಲು ಪ್ರತಾಪದ ಮಾತುಗಳನ್ನಾಡಿ ಪರಾಕ್ರಮಪ್ರದರ್ಶನದಿಂದ ಅರ್ಭಟಿಸಿ ಮಹಾದ್ವೇಷಗೊಂಡು ರಾಮ ರಾವಣರು ಬಾಣಗಳನ್ನು ಬಿಡಲು ದೇವ ರಾಕ್ಷಸಸಮೂಹವು ಅವರನ್ನು ಹೊಗಳಿತು. ೨೬. ಇಬ್ಬರು ರಣಗಲಿಗಳ ಬಾಣಸಮೂಹವು ಆಕಾಶದಲ್ಲಿ ನೆಯ್ದುಕೊಂಡುದರಿಂದ ಭೂಮಿಯನ್ನು ಕತ್ತಲೆ ಆವರಿಸಿತು. ಬಾಣಗಳ ಭಯಂಕರ ಶಬ್ದದಿಂದ ಆದಿಶೇಷನ ತಲೆಗೆ ನೋವಾಯಿತು. ರಜೋಗುಣದ ಪ್ರಭು ಬ್ರಹ್ಮನು ಕಿವಿಗಳಿಗೆ ಬೆರಳನ್ನು ತುರುಕಿಕೊಂಡನು. ಪ್ರತಿಶಬ್ದಕ್ಕೆ ಸಮುದ್ರಗಳು ಭೋರ್ಗರೆದವು. ೨೭. ಪ್ರಚಂಡಬಲಶಾಲಿಗಳಾದ ರಾಮ ರಾವಣರ ಭಾರಿಬಿಲ್ಲುಗಳು ಸೂರ್ಯಬಿಂಬದಂತೆ ವರ್ತುಲಾಕಾರವಾಗಿ ರಂಜಿಸಿದವು ; ಬಾಣಗಳು ಸೂರ್ಯಕಿರಣಗಳಂತೆ ಉಗ್ರವಾಗಿದ್ದವು. ದೇಹ ಮತ್ತು ಮುಂಡಿಗಳನ್ನು ಬಾಗಿಸಿ ನೆಟ್ಟದೃಷ್ಟಿಯಿಂದ ನೋಡುತ್ತಿದ್ದ ಹುರುಪೇರಿದ ಹೊಸಕಾಂತಿಯ

ಆಯೆನುತ ಸುರರುಬ್ಬುವರು ರಘು । ರಾಯನೆಸುಗೆಗೆ ಪೂತುರೇ ಮಝು
ಮಾಯೆಯೆಂದಬ್ಬರಿಸುವರು ಖಳನೆಸುಗೆಗಸುರಗಣ
ಹೋಯಿತೀಪರಿ ದಿವಸವೊಂದು ಚ । ಡಾಯುವಾದುದು ಮಱುದಿವಸ ಬಲು
ಸಾಯಕದ ಸಂಗ್ರಾಮ ಹೊಗಳೆ ಸುರಾಸುರವ್ರಾತ ೨೮

ಮೂಱನೆಯ ದಿವಸದಲಿ ತರಣಿಯು । ತೋಱಿಕೆಯಲಿ ಭಟೋತ್ತಮರು ಕಣ
ನೇಱಿ ಕಾದಿದರಡಗೆ ಸೂರ್ಯನ ಬಿಂಬವಬುದಿಯಲಿ
ತೋಱಲಱಿಯದ ತಾಮಸಿಯ ಕಾ । ಲೂಱಿಕೆಯ ಕಾಣಿಕೆಯಲೊದಗಿದ
ಲಾಱಿಲುಪ್ಪ ದ್ವಾದಶಾತ್ಮನ ಪಥಪರಿಶ್ರಮದ ೨೯

ಕುಶನೆ ಕೇಳೈದನೆಯ ದಿನ ಬಾ । ಱಿಸಿತು ಬಿಂಕದ ಬವರ ಕಿಡಿಕಿಡಿ
ಮಸಗೆ ಕಣೆಕಣೆಗಳಲಿ ನೆಱೆ ಕೀಲಿಸಿದರಂಬರವ
ವಿಶಿಖ ವಿಹರಣದುಬ್ಬರಕೆ ದಿಗು । ವಿಸರ ಹೊಗೆದವು ಹರಿಹಯಾದಿಗ
ಳಸುರಪಥ ಪಲ್ಲಟಕೆ ನಿಂದವು ಲವನೆ ಕೇಳೆಂದ ೩೦

ರಣಭಯಂಕರರಮಿತಬಲ ಮಾ । ರ್ಗಣದ ಶಿಖಿಮುಖಕಾನಲಱಿಯದೆ
ಮುಣುಗಿದನು ಬಿಸುಟಂಬರವನಂಬುಧಿಯ ಮಧ್ಯದಲಿ
ತಣಿದು ಸಲಿಲದ ಶೈತ್ಯದಲಿ ವೈ । ಮಣದು ಮೂಡಣ ಕಡಲ ವಡಬನ
ಹಣೆಯ ಮೇಲೊಪ್ಪಿದನು ರವಿಯಾಱನೆಯ ದಿವಸದಲಿ ೩೧

ವೀರರು ರಣಕ್ರೀಡೆಯಲ್ಲಿ ನಿರತರಾದರು. ೨೮. ರಘುರಾಮನ ಬಾಣಕೌಶಲ್ಯವನ್ನು ನೋಡಿ 'ಆ' ಎನ್ನುತ್ತ ದೇವತೆಗಳು ಹಿಗ್ಗುವರು. ರಾವಣನು ಅಂಬುಗಳನ್ನು ಬಿಡುವ ಚಾತುರ್ಯವನ್ನು ಕಂಡು ರಾಕ್ಷಸಸಮೂಹವು 'ಮಝ ! ಪೂತು!' ಎಂದು ಕೂಗುಹಾಕುವುದು. ಈ ರೀತಿಯಲ್ಲಿ ಒಂದು ದಿವಸ ಕಳೆಯಿತು. ಮಾರನೆಯ ದಿವಸ ಮಹಾಬಾಣಗಳ ಯುದ್ಧ ಅತಿಶಯವಾಯಿತು. ರಾಮ ರಾವಣರ ಬಾಣಗಳ ಯುದ್ಧವನ್ನು ನೋಡಿ ದೇವತೆಗಳೂ ರಾಕ್ಷಸರೂ ಹೊಗಳಿದರು. ೨೯. ಮೂರನೆಯ ದಿವಸ ಸೂರ್ಯೋದಯವಾದ ಬಳಿಕ ರಾಮ ರಾವಣರು ರಣರಂಗಕ್ಕೆ ಬಂದು ಸೂರ್ಯನು ಮುಳುಗುವವರೆಗೆ ಕಾಳಗ ಮಾಡಿದರು. ರಾಮ ರಾವಣರ ಯುದ್ಧದಿಂದ ಕಣ್ಣು ಕಾಣಿಸಲಾರದಂಥ ಕತ್ತಲೆ ಆವರಿಸಿತು. ನಾಲ್ಕನೆಯ ದಿನದ ಸೂರ್ಯನ ಸಂಚಾರದ ಆಯಾಸದ ಬೇಗೆಯು ಆರಿತು. ೩೦. ಕುಶನೆ, ಕೇಳು. ಐದನೆಯದಿವಸ ಹೆಮ್ಮೆಯ ಯುದ್ಧ ನಡೆಯಿತು, ಕಿಡಿ ಕಾರುವ ಬಾಣಗಳಿಂದ ಆಕಾಶವನ್ನು ಮುಚ್ಚಿಬಿಟ್ಟರು. ಬಾಣಗಳ ತೀವ್ರ ಸಂಚಾರದಿಂದ ಆಕಾಶಗಳು ಹೊಗೆಯಾಡಿದವು, ಲವನೇ ಕೇಳು, ಇಂದ್ರನೇ ಮೊದಲಾದವರ ಉಸುರು ಕಟ್ಟಿತು. ೩೧. ಯುದ್ಧಭಯಂಕರರಾದ ರಾಮ ರಾವಣರ ಅಪರಿಮಿತ ಸಾಮರ್ಥ್ಯದ ಬಾಣಗಳಿಂದ ಹೊರಟ ಬೆಂಕಿಯನ್ನು ತಡೆದುಕೊಳ್ಳಲಾರದೆ ಸೂರ್ಯನು ಆಕಾಶವನ್ನು ಬಿಟ್ಟು ಸಮುದ್ರಮಧ್ಯದಲ್ಲಿ ಮುಳುಗಿದನು; ನೀರಿನ ತಂಪಿನಿಂದ ತೃಪ್ತಿಗೊಂಡ ಸೂರ್ಯನು ಆರನೆಯ ದಿವಸ ಬೆಳಗ್ಗೆ ದೇಹವನ್ನು ಬಾಗಿಸಿ ಪೂರ್ವಸಮು

ನಡೆದುದಾ ದಿವಸದಲಿ ಸಿಡಿಲೊಳು । ಸಿಡಿಲು ಸೀವರಿಸುವವೊಲೆಸುಗೆಯ
ಲಿಡಿಯಲಬುಜಭವಾಂಡಮಂಡಲ ಯುದ್ಧಕಾಂಡದಲಿ
ಮೃಡನ ವೀರಭಟಾಂಧಕನ ಬಲು । ಗಡಿಯು ಬವರಕೆ ಕುಶನೆ ಕೇಳಿ
ಮೃಡಿಯೆನಲು ಸಂಗ್ರಾಮು ತಲೆದೂಗಿಸಿತು ಸುರಗಣವ ೩೨

ವೀರ ರಾಮನ ಬಾಣವರ್ಷಾ । ಸಾರದಲಿ ನನೆದಸುರಪತಿ ಕೈ
ಹಾರವಕ್ಕುದವಾಗೆ ಕೈಯೊಡನುಬ್ಬಿ ಬೊಬ್ಬಿಱಿದ
ಭೂರಿಭುಜದಂಡದಲಿ ನೆಗಹಿದ । ನಾರುಭಟೆಯಲಿ ಸುರರು ಬೆದಱೆ ಪು
ರಾರಿದತ್ತ ಮಹೋಗ್ರಶಕ್ತಿಯಲಧಿಕ ರೋಷದಲಿ ೩೩

ಮೂಱು ಜಗದತಿಬಲರೊಳೋಲೆಯ । ಕಾಱನಲ್ಲಾ ದಶಮುಖನು ಹೊರೆ
ಯೇಱೆ ಹೊಸಹೊಗರೊಗುವ ತಳಪದ ಹೊದಱ ಹೊಳಹುಗಳ
ಮೂಱಲಗು ತೆತ್ತಿಸಿದ ಶೂಲವ । ನಾಱುಸಾವಿರ ಸೂರ್ಯಕಿರಣದ
ತೋಱಿಕೆಯ ಕೈದುವನು ಕೈಯಲಿ ನೆಗಹಿ ಬೊಬ್ಬಿಱಿದ ೩೪

ಮೆಱೆದುದಸುರನ ಹಸ್ತದಲಿ ಹೂ । ದುಱುಗಲಿನ ಗಂಧಾಕ್ಷತೆಯ ಬಲು
ಸಱಿಯ ರಕ್ತದ್ರವದ ತಳಪದ ಹೊದಱ ಹೊಳಹುಗಳ
ಜಱೆದು ಕಲ್ಪಾನಲನ ನಾಲಗೆ । ಯುಱುಬುಗಳ ಗುಮ್ಮುವ ಕಣಂಗಳ
ಗುಱುಬಿನಲಿ ಘೋರ್ಗರೆವ ಶೂಲ ಮಹೋಗ್ರತೇಜದಲಿ ೩೫

ದ್ರುವ ಬಾಡಬಾಗ್ನಿಯ ಹಣೆಯ ಮೇಲೆ ಶೋಭಿಸಿದನು. ೩೨. ಸಿಡಿಲ ಮೇಲೆ ಸಿಡಿಲು ಅರ್ಭಟಿಸುವಂತೆ ಆರನೆಯ ದಿವಸದ ಬಾಣಗಳ ಯುದ್ಧದಿಂದ ಬ್ರಹ್ಮಾಂಡವು ಬಿರಿಯಿತು. ಈಶ್ವರ ಅಂಧಕಾಸುರ ಇವರ ಉಗ್ರಕದನಕ್ಕೆ ಎರಡರಷ್ಟು ಎನ್ನಿಸುವಂತೆ ರಾಮ ರಾವಣರ ಯುದ್ಧವು ದೇವತೆಗಳನ್ನು ತಲೆದೂಗಿಸಿತು. ೩೩. ವೀರ ರಾಮನ ಬಾಣಗಳ ಬಿರುಮಳೆಯಲ್ಲಿ ನೆನೆದ ರಾಕ್ಷಸೇಶ್ವರನ ಕತ್ತಿಯು ನಿಸ್ಸತ್ವವಾಗಲು ಅವನು ಒಡನೆದ್ದು ಗರ್ಜಿಸಿದ. ರಾವಣನು ಆರ್ಭಟಿಸುತ್ತ ಮಹಾಕೋಪದಿಂದ ಶಿವನು ಕೊಟ್ಟ ಮಹಾ ಉಗ್ರ ಶಕ್ತ್ಯಾಯುಧವನ್ನು ತೋಳಿನಿಂದ ಮೇಲೆತ್ತಲು ದೇವತೆಗಳು ಬೆದರಿದರು. ೩೪. ಮೂರು ಲೋಕಗಳ ಮಹಾಬಲಶಾಲಿಗಳಲ್ಲಿ ದಶಮುಖನು ಭೂಷಣನಲ್ಲವೇ ? ಹೊಸಕಾಂತಿ ಬೀರುವ, ಹೊಳೆಹೊಳೆಯುವ, ಆರುಸಾವಿರ ಸೂರ್ಯಕಿರಣದ ಮೂರಲಗುಗಳ ಶೂಲವನ್ನು ಹುರುಪಿನಿಂದ ರಾವಣನು ಕೈಯಲ್ಲಿ ಎತ್ತಿಹಿಡಿದು ಗರ್ಜಿಸಿದ. ೩೫. ಹೂವಿನ ಗೊಂಚಲನ್ನು ಸಿಕ್ಕಿಸಿ ಗಂಧಾಕ್ಷತೆಯಿಂದ ಪೂಜಿಸಿ ರಕ್ತವನ್ನು ಸವರಿ ಕಾಂತಿಯಿಂದ ಹೊಳೆಯುವ ಶೂಲವು ರಾಕ್ಷಸೇಶ್ವರನ ಕೈಯಲ್ಲಿ ಶೋಭಿಸಿತು, ಪ್ರಳಯಾಗ್ನಿಯ ನಾಲಗೆಯನ್ನು ಮೀರಿಸುತ್ತ ಕಿಡಿಗಳ ರಾಶಿ

ರಾಮ ಕೇಳೀ ಮೂಱುಮುಖವಜ । ಸೋಮಶೇಖರ ವಿಷ್ಣುಗಳ ಲಯ
ನಾಮನಿರ್ಣಯದವು ಕಣಾ ಗುಣ ಮತ್ತೆ ಬೇಱುಂಟು
ಈ ಮನುಷ್ಯ ಮಹೋರಗಾಮರ । ಭೂಮಿಭಂಜನದವು ಕಣಾ ಹೊಱ
ಗೋಮದೀಯ ಮಹಾಸುಭಾಷಿತಕೊಳಗೊ ನೀನೆಂದ ೩೬

ಇದು ಕಣಾ ಹೋಮಾಗ್ನಿಮಧ್ಯದ । ಉದಿಸಿದಾಯುಧಮುಖದ ಶಿಖಿ ತವ
ಹೃದಯುದಾಮಿಷ ಹವಿಗೆ ಹದಿರಿಕ್ಕುವದ ನೋಡೆನುತ
ಹೊದಱುಗೈಗಳಲೆತ್ತಿ ಲಾವಣಿ । ಸಿದನು ಸೀತೆಗೆ ಹೇಳು ಹೇಳುವೆ
ನುಡಿಸಿದರೆ ಮಾತುಗಳ ಭಯಬೇಡೆಂದನಸುರೇಂದ್ರ ೩೭

ಶೂಲವನು ಸಭಕಿಟ್ಟು ಬಾಹಾ । ಸ್ಫಾಲನಂಗೈದೊದಱಿ ತಿರುಗುವ
ಶೂಲವನು ಹಿಡಿದಬ್ಬರಿಸಿ ಮಗುಳಭ್ರಮಂಡಲಕೆ
ಜ್ವಾಲೆ ದಳ್ಳಿಸಲಿಟ್ಟು ಬೊಬ್ಬೆಯ । ತಾಳಿ ಪುನರಪಿ ಪಿಡಿದು ಮಗುಳೆ ಸು
ರಾಳಿ ಬೆದಱಲಿಕಿಟ್ಟು ಬಲಗೈ ಹತ್ತ ಪಸರಿಸಿದ ೩೮

ಎಲೆಲೆ ರಾಘವ ಕೇಳು ಸೋಲದ । ಸುಲಭ ನಿಮಗಿಂದಿನಲಿ ಮುಂದಣ
ಗೆಲವ ನೋಡುವರಿಲ್ಲ ನೀನಿನ್ನೀ ಸಮಸ್ತಬಲ
ಉಳಿವುದೆಂಬುದಸಾಧ್ಯವೆನ್ನಯ । ಬಲುಹನಾರಲಿ ಮೆಱೆವೆನೆಂಬು
ಮ್ಮಳಿಕೆ ತೋಱದೆ ಬಿಡಲೊ ಬೇಡವೊ ಹೇಳು ನೀನೆಂದ ೩೯

ಯನ್ನು ಚಿಮ್ಮುತ್ತ ಭಯಂಕರ ತೇಜಸ್ಸಿನಿಂದ ಶೂಲವು ಮೆರೆಯಿತು. ೩೬. "ರಾಮ ಕೇಳು, ಶೂಲದ ಮೂರು ಬಾಯಿಗಳು ಬ್ರಹ್ಮ, ಈಶ್ವರ, ಮತ್ತು ವಿಷ್ಣುಗಳ ಹೆಸರಿನಿಂದ ವಿನಾಶಕರಗಳಾಗಿವೆ. ಅಲ್ಲದೆ ಈ ಆಯುಧದ ಮಹಿಮೆ ಬೇರುಂಟು. ಇದು ಮಾನವ, ಉರಗ, ಅಮರ, ಭೂಲೋಕದವರುಗಳನ್ನು ಮುರಿದುಹಾಕುವ ಸತ್ವವುಳ್ಳದು. ನೀನು ನನ್ನ ಮಾತನ್ನು ಒಪ್ಪಿಕೊಳ್ಳುವವನೋ ಅಥವಾ ಇಲ್ಲವೋ ?" ಎಂದ ರಾವಣ. ೩೭. "ಇದು ಹೋಮಾಗ್ನಿಯ ನಡುವೆ ಹುಟ್ಟಿದ ಆಯುಧ ರೂಪದ ಅಗ್ನಿ ; ನಿನ್ನ ಹೃದಯಮಾಂಸವನ್ನು ಆಹುತಿತೆಗೆದುಕೊಳ್ಳಲು ಹಸ್ತ ಚಾಚುವುದನ್ನು ನೋಡು" ಎನ್ನುತ್ತ ರಾವಣನು ಕೈಗಳ ಸಮೂಹವನ್ನೆತ್ತಿ ಆಯುಧಗಳನ್ನು ಒಟ್ಟಾಗಿ ಆಡಿಸಿದನು. "ಮಾತನಾಡಲು ಸಾಧ್ಯವಾದರೆ ಸೀತೆಗೆ ಏನು ಹೇಳಬೇಕೋ ಅದನ್ನು ಹೇಳಿಬಿಡು; ಅದನ್ನು ಅವಳಿಗೆ ಹೇಳುತ್ತೇನೆ, ಭಯಪಡಬೇಡ" ಎಂದ ರಾವಣ. ೩೮. ರಾವಣನು ಶೂಲವನ್ನು ತಿರುಗಿಸಿ ಮೇಲಕ್ಕೆಸೆದು ಭುಜತಟ್ಟಿ ಆರ್ಭಟಿಸಿದ. ಆಕಾಶದಲ್ಲಿ ತಿರುಗುತ್ತಿದ್ದ ಶೂಲವನ್ನು ಹಿಡಿದುಕೊಂಡು ಅಬ್ಬರಿಸಿ ಪುನಃ ಆಕಾಶಕ್ಕೆಸೆಯಲು ಶೂಲದಿಂದ ಭಗ್ಗನೆ ಉರಿಯೆದ್ದಿತು, ಗರ್ಜಿಸಿ ಶೂಲವನ್ನು ಅಂತು ಹಿಡಿದುಕೊಂಡು ದೇವತೆಗಳು ಬೆದರುತ್ತಿರಲು ಪುನಃ ಮೇಲಕ್ಕೆಸೆದು ಹತ್ತು ಕೈಗಳನ್ನೂ ಒಟ್ಟಿಗೆ ಮೇಲೆತ್ತಿದ. ೩೯. "ಎಲೆಲೆ ರಾಘವ, ಕೇಳು. ನಿಮಗೆ ಇಂದು ಸೋಲು ಸುಲಭ, ಮುಂದಕ್ಕೆ ಗೆಲುವು ನಿಮಗಿಲ್ಲ. ನೀನು ಮತ್ತು ನಿನ್ನ ಸಮಸ್ತ ಸೈನ್ಯ ಉಳಿಯುವುದು ಅಸಾಧ್ಯ. ನನ್ನ ಸಾಮರ್ಥ್ಯವನ್ನು ಯಾರಮೇಲೆ ತೋರಿಸಲಿ

ಕಾಯಲಾಪವರಿಲ್ಲ ಬೊಮ್ಮನು । ಬಾಯದೆಗೆಯಲಿ ನುಡಿಯಲೀಸೆನು
ನಾಯಿಗಳ ಹೇಳದಿರು ಹೇಡಿಗಳಾಳಿದ ಸುರನಿಕರ
ಕಾಯಬಲ್ಲವನೊಬ್ಬನೇ ತಾ । ನಾಯುವನು ನೀಗಾಡದಿರು ನಿ
ರ್ದಾಯದಲಿ ನುಡಿ ಬೇಗ ಭಯ.ಬೇಡೆಂದನಸುರೇಂದ್ರ ೪೦

ಖಳರೊಳಗೆ ಬಾಯ್‌ಬಡಿಕನಹೆ ತಲೆ । ಗಳಲಿ ನಾಲಗೆ ಹತ್ತಲಾ ದಿಟ
ಗಳಹುವಡೆ ಬಲ್ಲಿದನು ನಮಗೀ ಪರಿಯ ಮಾತುಗಳು
ಸುಳಿಯಲಱಿಯವು ನಾಲಗೆಗೆ ವೆ । ಗ್ಗಳ ಬಲಾನ್ವಿತರೊಳಗೆ ದುರ್ಬಲ
ರಳುಕುವರು ಕಕ್ಕುಲಿತೆ ನಮಗಿಲ್ಲಸಗು ಬೇಗೆಂದ ೪೧

ಆದಡಿದಕೋಯೆನುತ ಕರ್ಕಶ । ಗೈದುವನು ಕುಬುಬಿಱಿದು ಹವಣಿಸ
ಲಾ ದಿವಾಕರಸೂನು ನೀಲಾಂಗದ ನಳಾದಿಗಳು
ಕೈದುಡುಕಲನುವಾಯ್ತು ಲಕ್ಷ್ಮಣ । ಸೇದಿದಂಬಿನೊಳಿರ್ದನಾ ಕ್ರ
ವ್ಯಾದ ವೈಷ್ಣವರಾಯನಾಳ್ದಂಗೆಂದನೀ ಹದನ ೪೨

ಈ ಮಹಾಯುಧಕಂಬ ತೊಡು ಪೈ । ತಾಮಹದ ವೈಷ್ಣವದ ಶೈವದ
ತೋಮರತ್ರಯಕಲ್ಲದಿದು ನಿರ್ನಾಮವಾಗದೆನೆ
ರಾಮನದಱಿಂ ಮುನ್ನ ಹೂಡಿದ । ನಾ ಮಹಾಸ್ತ್ರಂಗಳನು ಜಗದ ಮ
ಹಾಮಹಿಮನೇನಱಿಯನೇ ಸಂಗರದ ಜಯಸಿರಿಯ ೪೩

ಎಂಬ ಚಿಂತೆಯುಂಟಾಗಿದೆ. ಈ ಶೂಲವನ್ನು ಬಿಡಲೋ ಬೇಡವೋ, ಹೇಳು" ಎಂದ ರಾವಣ. ೪೦. "ನಿನ್ನನ್ನು ರಕ್ಷಿಸಬಲ್ಲವರು ಯಾರೂ ಇಲ್ಲ. ಬ್ರಹ್ಮನು ಬಾಯಿ ಬಿಡಲಿ, ಅವನಿಗೆ ಮಾತಾಡಲು ಬಿಡುವುದಿಲ್ಲ. ಇನ್ನು ಉಳಿದ ನಾಯಿಗಳನ್ನು ಹೇಳಬೇಡ ; ದೇವತೆಗಳು ಹೇಡಿಗಳು. ಕಾಪಾಡಬಲ್ಲವನು ನಾನೊಬ್ಬನೇ. ನಿನ್ನ ಆಯುಸ್ಸನ್ನು ಸಂಪೂರ್ಣವಾಗಿ ಕಳೆದುಕೊಳ್ಳಬೇಡ ಬೇಗ ಹೇಳು, ಭಯಪಡಬೇಡ" ಎಂದ ರಾವಣ. ೪೧. "ರಾಕ್ಷಸರಲ್ಲಿ ನೀನು ಒಳ್ಳೆಯ ಬಾಯಿಬಡಿಕನಾಗಿದ್ದೀ. ನಿನ್ನ ತಲೆಗಳಲ್ಲಿ ಹತ್ತು ನಾಲಗೆಗಳಿವೆಯಲ್ಲವೇ. ಅಹುದು, ನೀನು ಹರಟುವುದರಲ್ಲಿ ಶೂರ. ನಮ್ಮ ನಾಲಗೆಗೆ ಈ ರೀತಿಯ ಮಾತುಗಳನ್ನಾಡಲು ಬರುವುದಿಲ್ಲ. ಅಧಿಕ ಬಲಿಷ್ಠರನ್ನು ಕಂಡರೆ ಬಲಹೀನರು ಅಂಜುತ್ತಾರೆ. ನಮಗೆ ಈ ಚಿಂತೆಯಿಲ್ಲ. ಶೂಲವನ್ನು ಬಿಡು ಬೇಗ" ಎಂದ ರಾಮ. ೪೨. "ಹಾಗಿದ್ದರೆ ಇದನ್ನು ತೆಗೆದುಕೋ" ಎನ್ನುತ್ತ ಆ ಯಮಾಯುಧವನ್ನು ಎಸೆಯಲು ರಾವಣನು ಆರ್ಭಟಿಸುತ್ತ ಸಿದ್ಧನಾದನು. ಆಗ ಸುಗ್ರೀವ, ನೀಲ, ಅಂಗದ, ನಳನೇ ಮೊದಲಾದವರು ಮುನ್ನುಗ್ಗಲು ಸಿದ್ಧವಾದರು. ಲಕ್ಷ್ಮಣನು ಬಾಣವನ್ನು ಹೂಡಿ ಎಳೆದು ಹಿಡಿದು ನಿಂತನು. ಆಗ ವಿಷ್ಣುಭಕ್ತ ವಿಭೀಷಣನು ರಾಮನಿಗೆ ಮುಂದಿನ ಮಾತುಗಳನ್ನು ನುಡಿದನು. ೪೩. "ಬ್ರಹ್ಮ, ವಿಷ್ಣು, ಶಿವಾಸ್ತ್ರಗಳನ್ನು ಪ್ರತಿಷ್ಠಿಸಿ ಈ ಮಹಾಯುಧದ ಮೇಲೆ ಬಿಡು. ಈ ಮೇಲಿನ ಮೂರು ಅಸ್ತ್ರಗಳಿಂದಲ್ಲದೆ ಈ ಶೂಲವು ನಾಶವಾಗದು" ಎಂದು ವಿಭೀಷಣನು ಹೇಳುವುದಕ್ಕಿಂತ ಮೊದಲೇ ರಾಮನು ಆ ಮಹಾಸ್ತ್ರಗಳನ್ನು ಹೂಡಿದನು. ಜಗತ್ತಿನ ಮಹಾ

ಎಡದಲನುಜನ ನಯನದಲಿ ಕೆಲ । ಕಡೆಗೆ ಸಾರಿಸಿ ಬಲದ ದೆಸೆಯಲಿ
ಜಡಿದು ಹುಬ್ಬಿನಲಿನಸುತಾದ್ಯರನಸುರವಲ್ಲಭನ
ಕಡುಹಿನಾಯುಧದತ್ತಲೆವೆಗಳ । ಮಿಡುಕಿಸದೆ ಸಂಧಿಸಿದ ಸರಳಿನ
ಸಡಗರದ ಸಂಗ್ರಾಮಲೋಲುಪನಿರ್ದನಿದಿರಿನಲಿ ೪೪

ಇಟ್ಟನವ ಬಳಿಕುಬ್ಬಿ ಬೊಬ್ಬೆಱ । ದಟ್ಟಿತುರಿ ವೈಮಾನಿಕರ ಭುಗಿ
ಲಿಟ್ಟುದಂಬರವಮಮ ಚಂಡಮರೀಚಿಮಂಡಲವ
ಕಟ್ಟಿತುರಿ ಕಪಿಸೇನೆಯಲಿ ಕಾ । ಲಿಟ್ಟುದುರಿ ಸೈರಿಸುವ ನೇಮನ
ಮುಟ್ಟಿ ಮನುಕುಲಸಾರ್ವಭೌಮನು ಮಗನೆ ಕೇಳೆಂದ ೪೫

ಆವ ಚಿತ್ರಶರಪ್ರಯೋಗವ । ದಾವ ಹಸ್ತಚಮತ್ಕೃತಿಯೊ ತಾ
ನಾವ ಕೋದಂಡ ಪ್ರಚಂಡಪ್ರೌಢಿಪೌರುಷವೊ
ದೇವ ರಾಮನ ಬಾಣಮುಖದಲಿ । ಮೂವರವತರಿಸಿದುದ ಕಂಡೆನು
ರಾವಣನ ಕೈದುವನು ಕಾಣೆನದೇನು ಬೆಱಗೆಂದ ೪೬

ಅಡಗಿತಾ ಮಹದಾಯುಧದ ಬೆಳ । ಗೊಡನೆ ತರಣಿಯಬಿಂಬ ಪಡುವಣ
ಕವಲೊಳಗೆ ಮುಳುಗಿದುದು ನೆಗೆದುದು ಮೂಡಣಬುದಿಯಲಿ
ಕಡುಬೆಱಗಿನಸುರೇಂದ್ರ ಬವರವ । ಹಿಡಿದು ಹೋರಿದನಿನಕುಲೇಂದ್ರನ
ಬಿಡುಸರಳ ಸಂಗರದೊಳೊಂಬತ್ತನೆಯ ದಿವಸದಲಿ ೪೭

ಮಹಿಮನು ಯುದ್ಧದ ಜಯಲಕ್ಷ್ಮಿಯನ್ನು ಅರಿಯನೇನು ? ೪೪. ರಾಮನು ಕಣ್ಣಿನ ಸಂಜ್ಞೆಯಿಂದ ಎಡಗಡೆಯಲ್ಲಿದ್ದ ತಮ್ಮನನ್ನು ಪಕ್ಕಕ್ಕೆ ಕಳುಹಿಸಿ ಬಲಗಡೆಯಲ್ಲಿ ಸುಗ್ರೀವನೇ ಮೊದಲಾದವರನ್ನು ಹುಬ್ಬಿನಿಂದ ಗದರಿಸಿ ಸುಮ್ಮನಾಗಿಸಿದನು. ರಾಕ್ಷಸೇಶ್ವರನ ಉಗ್ರಆಯುಧವನ್ನು ರೆಪ್ಪೆಹೊಡೆಯದೆ ದೃಷ್ಟಿಸುತ್ತ ಅಸ್ತ್ರವನ್ನು ಹೂಡಿ ಕದನಾಸಕ್ತಿಯಿಂದ ರಾಮನು ರಾವಣನ ಎದುರಿನಲ್ಲಿ ನಿಂತಿದ್ದನು. ೪೫. ರಾವಣನು ಹುರುಪಿನಿಂದ ಆರ್ಭಟಿಸಿ ಶೂಲವನ್ನೆಸೆದನು. ಶೂಲದಿಂದೆದ್ದ ಉರಿಯು ಆಕಾಶದಲ್ಲಿ ವಿಮಾನದಲ್ಲಿದ್ದವರನ್ನು ಓಡಿಸಿತು. ಉರಿಯು ಆಕಾಶವನ್ನು ಮುತ್ತಿ ಧಗಧಗಿಸಿತು. ಸೂರ್ಯಮಂಡಲವನ್ನು ಉರಿ ಕಟ್ಟಿಹಾಕಿತು. ತಾಳ್ಮೆಯ ನಿಯಮನಿಷ್ಠನನ್ನು ಮುಟ್ಟಿ, ಉರಿ ಕಪಿಸೇನೆಯ ಮೇಲೆ ನುಗ್ಗಿತು, ಮನುಕುಲಸಾರ್ವಭೌಮನ ಮಗನೆ ಕೇಳು- ಎಂದು ವಾಲ್ಮೀಕಿಗಳು ವರ್ಣಿಸಿದರು. ೪೬. ರಾಮನ ಅಸ್ತ್ರಪ್ರಯೋಗವು ಅದೆಂಥ ಆಶ್ಚರ್ಯಕರವೋ ! ಅದಾವ ಹಸ್ತಕೌಶಲವೋ ರಾಮನದು ! ಅದೆಂಥ ಪ್ರಚಂಡ ಬಿಲ್ವಿದ್ಯಾಪ್ರಾವೀಣ್ಯವೋ ! ಶ್ರೀರಾಮನ ಬಾಣದ ತುದಿಯಲ್ಲಿ ತ್ರಿಮೂರ್ತಿಗಳು ಅವತರಿಸಿದುದನ್ನು ಕಂಡೆ ; ರಾವಣನ ಅಸ್ತ್ರ ಕಾಣಲಿಲ್ಲ. ಅದೇನು ವಿಸ್ಮಯವೋ ! -ಎಂದು ವಾಲ್ಮೀಕಿಮಹರ್ಷಿಗಳು ನುಡಿದರು. ೪೭. ರಾವಣನ ಮಹಾಯುಧದ ಪ್ರಕಾಶವು ಅಡಗಿಹೋಯಿತು. ಕೂಡಲೆ ಸೂರ್ಯಬಿಂಬವು ಪಶ್ಚಿಮಸಮುದ್ರದಲ್ಲಿ ಮುಳುಗಿತು ಮತ್ತು ಅಲ್ಲಿಂದ ಪೂರ್ವಸಮುದ್ರದಿಂದ ಮೇಲೆದ್ದಿತು. ಚಕಿತನಾದ

ಹತ್ತನೆಯ ದಿನ ಹರಿ ಹಿರಣ್ಯಕ । ರೊತ್ತಬರದಾಹವಕೆ ನೂಱೆಪ್ಪ
ವತ್ತು ಮಡಿಯೆನೆ ಕಾದಿದರು ಕಳನೇಱಿ ಕಡುಹಿನಲಿ
ಕತ್ತಲೆಯು ಬೆಳಗುಗಳ ಬಲುದಲೆ । ಯೊತ್ತುಗಳ ದಿನವೈದು ಮುಂದಣೆ
ಗೊತ್ತಿದವು ಬಲಃಹಾಯ್ತು ಹದಿನಾಱನೆಯ ದಿವಸದಲಿ ೪೮

ರಾವಣನು ಒಂಬತ್ತನೆಯ ದಿವಸದ ರಾಮನ ಬಿಡಿಬಾಣಗಳ ಕದನದಲ್ಲಿ ಪಟ್ಟು ಹಿಡಿದು ಹೋರಾಡಿದನು. ೪೮. ವಿಷ್ಣುವಿನ ಅವತಾರಿಯಾದ ನರಸಿಂಹ ಮತ್ತು ಹಿರಣ್ಯಕಶಿಪು ಇವರ ತೀವ್ರವಾದ ಕದನಕ್ಕೆ ನೂರ್ಯವತ್ತರಷ್ಟು ಎನ್ನಿಸುವಂತೆ ಹತ್ತನೆಯ ದಿವಸ ರಾಮ ರಾವಣರು ಪರಾಕ್ರಮದಿಂದ ಕಾದಾಡಿದರು. ರಾತ್ರಿ ಬೆಳಗ್ಗೆಗಳು ಒಂದಾದ ಮೇಲೆ ಒಂದು ಬಂದುಹೋಗುತ್ತ ಐದು ದಿನಗಳ ಕಾಲ ಯುದ್ಧ ಮುಂದುವರಿಯಿತು, ಬಳಿಕ ಹದಿನಾರನೆಯ ದಿವಸದ ಯುದ್ಧವು ಬಹಳ ಬಿರುಸಾಗಿ ನಡೆಯಿತು.

# ಐವತ್ತನೆಯ ಸಂಧಿ

ಸೂಚನೆ॥ ಸಕಲ ಜಗವಲ್ಲಾಡೆ ದಿವಿಜ । ಪ್ರಕರ ಕಂಪಿಸೆ ಕಾದಿದರು ಸಾ
ಯಕದ ಸೌರಂಭದಲಿ ರಾವಣ ರಾಮರಾಜಿಯಲಿ

ಮತ್ತೆ ಮೋಹಿದವೆರಡು ರಥ ಕೆಂ । ಪೊತ್ತಿದಿನನುದಯದಲಿ ಸೂತರ
ಹತ್ತಳದ ಹೊಯ್ಲಿನಲಿ ಹೊಳಕಿದವಶ್ವವೆಡಬಲಕೆ
ಒತ್ತಬರಿಸಿತು ಸುರಕದಂಬ ವಿ । ಯತ್ತಳದ ವಳಯದಲಿ ವೀರ ಭ
ಟೋತ್ತಮರ ಸಂಗರವ ನೋಡಲು ಕುಶನೆ ಕೇಳೆಂದ ೧

ಲವನೆ ಕೇಳೈ ಹನುಮನಬ್ಬರ । ದಿವಿಜಸೂತನ ಬೊಬ್ಬೆ ರಘುಸಂ
ಭವನ ಚಾಪಧ್ವಾನವಾ ದಶಕಂಠನಬ್ಬರಣೆ
ಅವನ ರಥ ಹಯಸೂತನುಬ್ಬಿನ । ರವದ ರವಳಿಗಳೊಡವೆರಸಿ ಸುರ
ಭುವನವನು ಬೆದರಿಸಿದವಾ ಧ್ರುವಲೋಕ ಪರಿಯಂತ ೨

ಕುಣಿದವಿಬ್ಬರ ಕುದುರೆ ಸಮರಾಂ । ಗಣದ ಶೌರಂಭದ ಸಗಾಢದ
ಸೆಣಸುಗಾರರ ಸೂತರೋಜೆಯಲಾಜಿರಂಗದಲಿ
ಕಣೆದುಡುಕಿ ಕುಬುಬಿರಿದು ಕಲಿರಾ । ವಣ ಪಚಾರಿಸುತೆಚ್ಚನಾ ದಿನ
ಮಣಿಕುಲೇಂದ್ರನನಮಮ ಶರಮಯವಾಗೆ ದಿಗುಜಾಲ ೩

ಸೂಚನೆ॥ ರಾಮ ರಾವಣರು ಸಂಭ್ರಮದಿಂದ ಬಾಣಗಳ ಯುದ್ಧ ಮಾಡಲು ಸಕಲ ಜಗತ್ತುಗಳೂ ಅಲ್ಲಾಡಿದವು, ದೇವತೆಗಳು ನಡುಗಿದರು. ೧. ಸೂರ್ಯೋದಯದಲ್ಲಿ ಅರುಣಕಾಂತಿ ಹಬ್ಬಿರಲು ರಾಮ ರಾವಣರ ರಥಗಳು ಪುನಃ ಆಕ್ರಮಣ ಮಾಡಿದವು. ಸಾರಥಿಗಳು ಅಂಗೈಗಳಿಂದ ಹೊಡೆಯಲು ಕುದುರೆಗಳು ಎಡಬಲಗಳಲ್ಲಿ ಮಿಂಚಿದವು. ಇಬ್ಬರು ಮಹಾವೀರರ ಯುದ್ಧವನ್ನು ನೋಡಲು ದೇವತೆಗಳ ಸಮೂಹವು ಆಕಾಶದಲ್ಲಿ ಗಡಿಬಿಡಿ ಮಾಡುತ್ತ ಗುಂಪು ಸೇರಿತು, ಕೇಳು ಕುಶ–ಎಂದು ವರ್ಣಿಸಿದರು ವಾಲ್ಮೀಕಿಗಳು. ೨. ಲವನೆ ಕೇಳು, ಹನುಮಂತನ ಅಬ್ಬರ, ದೇವತೆಗಳ ಸಾರಥಿಯಾದ ಮಾತಲಿಯ ಬೊಬ್ಬೆ, ರಾಘವನ ಧನುಷ್ಟಂಕಾರ, ದಶಕಂಠನ ಗರ್ಜನೆ, ರಾವಣನ ರಥ, ಕುದುರೆ ಮತ್ತು ಸಾರಥಿಗಳ ಹುರುಪಿನ ಗದ್ದಲಗಳು ಒಟ್ಟಾಗಿ ಸೇರಿ ಧ್ರುವಲೋಕದವರೆಗೆ ದೇವ ಲೋಕಗಳನ್ನು ಬೆದರಿಸಿದವು. ೩. ಯುದ್ಧಸಂಭ್ರಮ ತುಂಬಿದ ಇಬ್ಬರು ಹೋರಾಟಗಾರರ ಸಾರಥಿಗಳ ವಶದಲ್ಲಿ ಇಬ್ಬರ ಕುದುರೆಗಳೂ ರಣರಂಗದಲ್ಲಿ ಕುಣಿದವು, ವೀರ ರಾವಣನು ಕುಬುಬೆಂದು ಕೂಗಿ ಶತ್ರುವನ್ನು ಹೀಯಾಳಿಸುತ್ತ ಸೂರ್ಯವಂಶದ ರಾಮನ ಮೇಲೆ ಬಾಣವನ್ನು ಬಿಟ್ಟನು. ಅಬ್ಬಬ್ಬ, ದಿಕ್ಕುಗಳು ಬಾಣಮಯವಾದವು!

ಸರಳೊ ಸಂವರ್ತದ ತಮೌಘದ । ತಿರುಳೊ ಹೇಳುವೆನೇನನಿಳೆಗಾ
ಯ್ತಿರುಳು ರಕ್ಕಸರಾಯನೆಚ್ಚ ಶರಾಂಧಕಾರದಲಿ
ಹೊರಳಿಯೊಡೆದುದು ಸುರರು ಘಾಯದ । ಉರುಳಿದುದು ವಾನರವರೂಥಿನಿ
ನರಳಿದರು ನೋವಿನಲಿ ರಾಘವ ರಾವಣಾನುಜರು ೪

ಹೆಣೆದುಕೊಂಡವು ಗಗನ ದಿಗು ಧಾ । ರುಣಿಗಳನು ದಟ್ಟಯಿಸಿ ರಿಪುಮಾ
ರ್ಗಣ ವಿತಾಳಿಸಿ ಮುಸುಕಿದುದು ರಘುನಂದನನ ರಥವ
ತೃಣದುರಿಯು ತೀವ್ರತೆ ಲಯಾಗ್ನಿಯ । ಸೆಣಸುವುದೆ ಸಮರದಲಿ ಬಳಿಕಾ
ಕ್ಷಣದೊಳರಿಮಾರ್ಗಣ ಕದಂಬವ ಕೆದಱಿದನು ರಾಮ ೫

ಬಳಿಕ ಹೇಳುವುದೇನನಿಬ್ಬರ । ಚಳಚಮತ್ಕೃತಿ ಚಾಪದಿಂದು
ಚ್ಚಳಿಸುವಸ್ತ್ರಾನೀಕ ಮುಸುಕಿತು ಲೋಕ ಹದಿನಾಲ್ಕ
ಹಳಚುವಂಬಂಬುಗಳಲುದಿಸುವ । ಖಳಪಳದ ಆಟ್ಟುಲುಹು ಮೂರ್ಛಾ
ಕುಳವನಿತ್ತವು ತರುಣ ಕೇಳ್ ತೆತ್ತೀಸ ದೇವರಿಗೆ ೬

ಹಳಚಿದಲಗಲಗುಗಳ ಧಾರೆಯು । ಕುಳುಗಿಡಿಗಳುಬ್ಬೆದ್ದು ತಾರಾ
ವಳಿಯನಣೆದವು ತಳಿತವಿನಮಂಡಲದ ವಳಯದಲಿ
ಬಳಸಲಿಸಿ ಬಗಿದೊಗುವ ಕಾರ್ಬೊಗೆ । ಬಳಸಿತಬುಜಭವಾಂಡಖರ್ಪರ
ದೊಳಕಡೆಯನೇನೆಂಬೆನಿಬ್ಬರ ಸಮರಸಂಭ್ರಮವ ೭

೪. ಬಾಣವೋ ಪ್ರಳಯಾಂಧಕಾರದ ತಿರುಳೋ, ಏನೆಂದು ಹೇಳಲಿ ! ರಾಕ್ಷಸರಾಜನು ಬಿಟ್ಟ ಬಾಣಗಳ ಅಂಧಕಾರದಿಂದ ಭೂಮಿಯ ಮೇಲೆ ಕತ್ತಲೆ ತುಂಬಿತು. ದೇವತೆಗಳು ಚದುರಿದರು; ವಾನರಸೈನ್ಯ ಗಾಯಗೊಂಡು ಉರುಳಿತು; ರಾಘವ ಮತ್ತು ವಿಭೀಷಣರು ನೋವಿನಿಂದ ನರಳಿದರು. ೫. ಶತ್ರುಬಾಣಗಳು ಆಕಾಶ, ದಿಕ್ಕು ಮತ್ತು ಭೂಮಿಗಳ ಮೇಲೆ ದಟ್ಟವಾಗಿ ಹೆಣೆದುಕೊಂಡವು; ಅವು ರಾಮನ ರಥವನ್ನು ಅತಿಶಯವಾಗಿ ಮುಚ್ಚಿ ಬಿಟ್ಟವು. ಹುಲ್ಲಿನ ಉರಿಯು ಎಷ್ಟೇ ತೀವ್ರವಾದರೂ ಪ್ರಳಯಾಗ್ನಿಯೊಡನೆ ಸ್ಪರ್ಧಿಸಬಲ್ಲುದೇ ? ಆ ಕ್ಷಣದಲ್ಲಿ ರಾಮನು ಬಾಣಗಳನ್ನು ಬಿಟ್ಟು ಶತ್ರುಬಾಣಗಳ ಸಮೂಹವನ್ನು ಚೆಲ್ಲಾಪಿಲ್ಲಿ ಮಾಡಿಬಿಟ್ಟನು. ೬. ಆಮೇಲಿನದನ್ನು ಏನೆಂದು ವರ್ಣಿಸುವುದು ! ಇಬ್ಬರು ವೀರರು ಬಿಲ್ಲಿನಿಂದ ಚಮತ್ಕಾರಪೂರ್ಣವಾಗಿ ಚಿಮ್ಮಿಸುವ ಅಸ್ತ್ರಗಳು ಹದಿನಾಲ್ಕು ಲೋಕಗಳನ್ನು ಆವರಿಸಿದವು. ರಭಸದಿಂದ ಒಂದಕ್ಕೊಂದು ಅಪ್ಪಳಿಸುವ ಬಾಣಗಳಿಂದ ಹೊರಡುವ ಖಳಪಳವೆಂಬ ತೀವ್ರತರ ಶಬ್ದವು ಮೂವತ್ತುಮೂರು ದೇವತೆಗಳನ್ನು ಮೂರ್ಛೆಯಿಂದ ಕಳವಳಗೊಳಿಸಿತು. ೭. ಬಾಣಗಳ ಮೊನೆಗಳು ಪರಸ್ಪರ ಅಪ್ಪಳಿಸಿ ಮೊನೆಗಳಿಂದೆದ್ದ ಉರಿಗಿಡಿಗಳು ಮೇಲ್ನೆಗೆದು ನಕ್ಷತ್ರಗಳಿಗೆ ಹೊಡೆದವು ಮತ್ತು ಸೂರ್ಯಮಂಡಲದ ಸುತ್ತ ತುಂಬಿಕೊಂಡವು. ಉರಿಯನ್ನು ಹಿಂಬಾಲಿಸಿ ನುಗ್ಗಿಬಂದ ಕಪ್ಪುಹೊಗೆ ಬ್ರಹ್ಮಾಂಡದ ಓಡಿನ ಒಳಗಡೆಯನ್ನಾವರಿಸಿತು. ಇಬ್ಬರು ವೀರರ ಸಮರ

ಬಾಣಮಯವಾಯ್ತಖಿಳ ಭುವನ । ಶ್ರೇಣಿ ಭೂವ್ಯೋಂಬರದ ವಿವರವ
ಕಾಣೆನಂಬುಧಿ ಹೂಳಿತಂಬಿನಲೇನನುಸುರುವೆನು
ಸ್ಥಾಣು ಕಮಲಭವಪ್ರಮುಖ ಗೀ । ರ್ವಾಣರಗ್ಗದ ದಿವ್ಯಗಾತ್ರ
ತ್ರಾಣಗಳ ಧರಿಸಿದರು ನಭದಲಿ ಹುಸಿಯಲೇನೆಂದ ೮

ಇಬ್ಬರೆಸುಗೆಯ ಬಾಣಕಂಬರ । ವಬ್ಬರಿಸುತಿರ್ದುದು ಧರಾತಳ
ಗಬ್ಬರಿಸುತಿರ್ದುದು ಸುರಾಚಲವಲುಗಿತೆಡಬಲಕೆ
ಗಬ್ಬ ಕಲಕಿದವಮರಿಯರ ಜಗ । ದುಬ್ಬಸವು ಬಲುಹಾಯ್ತು ಬಳಲಿಕೆ
ಯೊಬ್ಬಿಸಿತು ನಿರ್ಜರಪುರಂಗಳನಜನ ಪಟ್ಟಣಕೆ ೯

ಹತ್ತದೇನೀ ಬಲುಹು ಭಾರಿ ಭ । ಟೋತ್ತಮರಲಾ ಸಮರಧೀರೋ
ದಾತ್ತರಲ್ಲಾ ಹಿಂದುಮುಂದಣ ಯುಗದ ವೀರರಿಗೆ
ಎತ್ತಬಹುದೇ ಬೆರಳನೆಂದು ವಿ । ಯತ್ತಳದಲಾ ದೇವಮುನಿ ಪೊಗ
ಳುತ್ತಲಿರ್ದನು ಹೊಱದ ಹರುಷದ ಹೆಂಪಿನುಬ್ಬಿನಲಿ ೧೦

ಹೋಗಲದು ಕೇಳುಭಯ ಸುಭಟರ । ಮೇಗಣಾಹವವನು ಶರಾವಳಿ
ತಾಗಿ ತಮ್ಮೊಳು ಹಿಂಗಿ ಬಿನ್ನೈಸಿದವು ವೀರರಿಗೆ
ಆಗಮೋಕ್ತದ ದಿವ್ಯಮಂತ್ರದ । ಮೇಗೆ ಮೆಱೆವುದು ಬಱಿದೆ ಬಿಜಬೇ
ಡಾಗನೊಲಿವಡೆ ನೀವೆನುತ ಬೊಬ್ಬಿಱಿದವಿದ್ದೆಸೆಯ ೧೧

ಸಂಭ್ರಮವನ್ನು ಏನೆಂದು ವರ್ಣಿಸಲಿ? ೮. ಸಮಸ್ತ ಲೋಕಗಳು ಬಾಣಮಯವಾದವು. ಭೂಮಿ ಆಕಾಶಗಳ ನಡುವೆ ವ್ಯತ್ಯಾಸವೇ ಕಾಣುತ್ತಿರಲಿಲ್ಲ. ಸಮುದ್ರವು ಬಾಣಗಳಲ್ಲಿ ಮುಚ್ಚಿಹೋಯಿತು ; ಇದನ್ನು ಏನೆಂದು ಹೇಳಲಿ. ಆಕಾಶದಲ್ಲಿದ್ದ ಶಿವ ಬ್ರಹ್ಮರುಗಳೇ ಮೊದಲಾದ ಮುಖ್ಯ ದೇವತೆಗಳು ದಿವ್ಯದೇಹದಲ್ಲಿ ಪ್ರಾಣವನ್ನಿರಿಸಿ ಸಂರಕ್ಷಿಸಿಕೊಂಡರು. ಸುಳ್ಳನ್ನೇಕೆ ಹೇಳಬೇಕು—ಎಂದು ವಾಲ್ಮೀಕಿಗಳು ವಿವರಿಸಿದರು. ೯. ಇಬ್ಬರು ವೀರರ ಬಾಣಗಳಿಗೆ ಆಕಾಶವು ಅಬ್ಬರಿಸಿತು, ಭೂಮಿಯಲ್ಲಿ ಹಳ್ಳಬಿದ್ದಿತು, ಮೇರುಪರ್ವತವು ಎಡಬಲಗಳಿಗೆ ಅಲುಗಿತು, ದೇವತರುಣಿಯರ ಗರ್ಭಗಳು ಕಲಕಿದವು, ಜಗತ್ತು ಜೋರಾಗಿ ಮೇಲುಸಿರುಬಿಟ್ಟಿತು, ದೇವನಗರಗಳು ಬಳಲಿದವು, ಅವುಗಳನ್ನು ಬ್ರಹ್ಮನ ಪಟ್ಟಣಕ್ಕೆ ಅಟ್ಟಿತು. ೧೦. "ಇವರ ಸಾಮರ್ಥ್ಯ ಕಡಮೆಯಾದುದೇನು ? ಭಾರಿ ವೀರರಲ್ಲವೇ, ಹಿಂದೆ ಆಗಿಹೋದ ಮತ್ತು ಮುಂದೆ ಹುಟ್ಟಲಿರುವ ವೀರರುಗಳನ್ನು ಮೀರಿಸಿದ ದಿಟ್ಟ ಪರಾಕ್ರಮಿಗಳಲ್ಲವೇ ? ಇವರ ಮೇಲೆ ಯಾರಾದರೂ ಬೆರಳೆತ್ತಬಹುದೇ ?" ಎಂದು ಆಕಾಶದಲ್ಲಿ ನಾರದಮುನಿಯು ಹರ್ಷಾಧಿಕ್ಯದಿಂದ ಉಬ್ಬಿ ಹೊಗಳುತ್ತಿದ್ದನು. ೧೧. ಅದು ಹೋಗಲಿ, ಇಬ್ಬರು ವೀರರ ಮುಂದಿನ ಯುದ್ಧವನ್ನು ಆಲಿಸು. ಬಾಣಗಳು ತಗುಲಿದ ಎರಡೂ ಕಡೆಯ ಭಟರು ಹಿಂದೆಗೆದು, "ಉತ್ತಮ ಪರಿಣಾಮವನ್ನು ಬಯಸುವುದಾದರೆ ಶಾಸ್ತ್ರೋಕ್ತವಾದ ದಿವ್ಯಮಂತ್ರದ ಅಸ್ತ್ರಗಳನ್ನು ಪ್ರಯೋಗಿಸಿ: ಸುಮ್ಮನೆ

ಕೇಳುತಿಬ್ಬರು ಬಳಿಕ ಮಂತ್ರಶ । ರಾಳಿಗಳನಿಷುಧಿಗಳಲುಗಿದುರೆ
ಬೋಳವಿಸಿ ಬಿರಿದುಗಳ ಸಂಭಾವಿಸುವ ವಂದಿಗಳ
ಸೂಳುಮಾತಿನ ಹೆಂಬಳಿಯ ಹೀ । ಹಾಳಿಕೆಯ ಹೇವಗಳ ಮಸದು
ಬ್ಬಾಳಿನಿಂದೆಚ್ಚಾಡಿದರು ಮೆಚ್ಚಲು ಸುರವ್ರಾತ ೧೨

ದಿವಿಜರಿಪು ಕೇಳೆಲವೊ ಸರಸಿಜ । ಭವಭವಾದ್ಯರ ಬಗೆಯನೆಂಬೀ
ಹವಣನಂಗೀಕರಿಸಿದೆಯಲಾ ಖೂಳರಂದದಲಿ
ಧ್ರುವವು ನಿನಗಾಯುಷ್ಯವೆಂಬು । ತ್ಸವದಿ ನಮ್ಮನು ಕೆಣಕಿ ಲಯಮೃ
ತ್ಯುವಿನ ಕೈವಶವಾದೆ ನೀನೆಂದಸುರಹರ ನುಡಿದ ೧೩

ಎಲವೊ ಕೇಳಿನ್ನಾದಡೆಯು ಬಿಡು । ಛಲವ ಮಱೆಯೊಗು ಕಾವೆ ನಿನ್ನಯ
ತಲೆಯ ತರಣಿ ಹಿಮಾಂಶು ತಾರೆಗಳಿರವು ಪರಿಯಂತ
ತೊಲಗುವುದು ನಿನಗಪಯಶವು ನಿ । ರ್ಮಲನು ನೀನಹೆ ಲೋಕದಲಿ ನಿ
ನ್ನಳಬಳವದೇನೆಲವೊ ಬೇಗದಲುಸುರು ತನಗೆಂದ ೧೪

ಏಕೆ ನಿನಗೀ ಮಾತು ಮಱೆ ನಿನ । ಗೇಕೆ ಬಲ್ಲೆನು ನಿನ್ನ ಪರಿಯನು
ಕಾಕನೇ ತಾನಚ್ಚುಮೆಚ್ಚಿನ ಮಾತದಂತಿರಲಿ
ನೂಕು ಕಣೆಗಳ ಕದನಮುಖವೇ । ಸಾಕು ಸಾವಿಂಗಳುಕುವೆನೆ ಲೋ
ಕೈಕವೀರ ಕಣಾ ಕೃಪೋದಯವೇಕೆ ನಿನಗೆಂದ ೧೫

ಬೀಡಬೇಡಿ ನೀವು" ಎಂದು ಅಬ್ಬರಿಸಿ ಹೇಳಿದರು. ೧೨. ಈ ಮಾತುಗಳನ್ನು ಕೇಳಿದ ರಾಮ ರಾವಣರು ಬತ್ತಳಿಕೆಗಳಿಂದ ಮಂತ್ರಾಸ್ತ್ರಗಳನ್ನು ಎಳೆದುಕೊಂಡು ಅವುಗಳನ್ನು ಸಂಬಾಳಿಸಿದರು. ಹೊಗಳುಭಟರು ಬಿರುದುಗಳನ್ನು ಸ್ತುತಿಸುತ್ತಿರಲು ಇಬ್ಬರು ವೀರರೂ ಉತ್ತರ ಪ್ರತ್ಯುತ್ತರಗಳ ಮೂಲಕ ಪರಸ್ಪರ ಹೀಯಾಳಿಸುತ್ತ ಹಗೆತನದ ಹುರುಡಿನಿಂದ ದೇವತೆಗಳು ಮೆಚ್ಚುವಂತೆ ಅಸ್ತ್ರಗಳ ಹೋರಾಟ ನಡೆಸಿದರು. ೧೩. "ಕೇಳೋ ಅಸುರ, ಮೂರ್ಖನಂತೆ ಬ್ರಹ್ಮ ಮಹೇಶ್ವರ ಮೊದಲಾದವರನ್ನು ಲಕ್ಷಿಸುವುದಿಲ್ಲವೆಂಬ ನಿಲುವನ್ನು ಹೊಂದಿದೆಯಲ್ಲ ? ನಿನಗೆ ಆಯುಸ್ಸು ಸ್ಥಿರವಾದುದೆಂಬ ಸೊಕ್ಕಿನಿಂದ ನಮ್ಮನ್ನು ಕೆಣಕಿ ಪ್ರಳಯಮೃತ್ಯುವಿನ ಕೈವಶವಾದೆ" ಎಂದ ರಾಮ. ೧೪. "ಲೋ, ಇನ್ನಾದರೂ ಹಟವನ್ನು ಬಿಟ್ಟು ನನ್ನ ಶರಣು ಬಾ ; ನಿನ್ನ ತಲೆಗಾಯುವೆನು, ಸೂರ್ಯ ಚಂದ್ರರಿರುವವರೆಗೂ ನಿನ್ನ ಅಪಕೀರ್ತಿಯು ತೊಲಗಿ ನೀನು ಲೋಕದಲ್ಲಿ ನಿಷ್ಕಳಂಕನೆನ್ನಿಸಿಕೊಳ್ಳುವೆ. ನಿನ್ನ ಅಭಿಪ್ರಾಯವೇನೆಂಬುದನ್ನು ಬೇಗ ನುಡಿ" ಎಂದ ರಾಮ. ೧೫. "ಏಕೆ ನಿನಗೀ ಮಾತು, ಮರೆತುಬಿಡು. ನಿನ್ನ ರೀತಿಯನ್ನು ಬಲ್ಲೆ. ನಾನು ದುಷ್ಟನೇ ? ನಿನ್ನ ಅಚ್ಚುಮೆಚ್ಚಿನ ಮಾತು ಹಾಗಿರಲಿ, ಬಾಣಗಳನ್ನು ಬಿಡು. ನನಗೆ ಯುದ್ಧವೇ ಸಾಕು. ನಾನು ಸಾವಿಗೆ ಹೆದರುತ್ತೇನೆಯೆ ; ಲೋಕೈಕವೀರನಲ್ಲವೇ ? ನೀನೇಕೆ ನನ್ನ ಮೇಲೆ ಕೃಪೆ

ಇನ್ನು ನಿನ್ನ ಶುಭಾಶುಭವು ಸಲೆ । ಮನ್ನಿಸಿದ ಶರಣಾನುಮತವೆಂ
ದೆನ್ನದಿಹುದೀ ಲೋಕವದರಿಂದುಳುಹಬೇಕೆಂದು
ಸನ್ನಿಯಲಿ ನಾವ್ ನುಡಿದೆವದು ತಾ । ನಿನ್ನ ಚಿತ್ತಕೆ ಬಾರದಿರೆ ರಣ
ಸನ್ನಿಹಿತನಾಗೆನುತ ತೆಗೆದೆಚ್ಚನು ದಶಾನನನ ೧೬

ಎಚ್ಚ ಬಾಣವನಮರರಿಪು ಮುರಿ । ಯೆಚ್ಚು ಹೂಡಿದನೊಡನೆ ಲಯಸ
ಪ್ತಾರ್ಚಿಬಾಣವ ಬೊಬ್ಬಿರಿದು ಬಿರಿತೋಡೆ ಸುರನಿಕರ
ಕಿಚ್ಚು ನಿಲುಕಿತು ನಭಕೆ ರವಿರಥ । ದಚ್ಚುಪರಿಯಂತಮರರುಟ್ಟುದ
ನುಚ್ಚಿ ಬಿಸುಟರು ಬೀಳ್ವ ಬಂಬಲುಗಿಡಿಯ ಧಾಳಿಯಲಿ ೧೭

ಉರಿ ಛಡಾಳಿಸಿ ದಿಗುಗಣವ ಖೊ । ಪ್ಪರಿಸಿದುದು ಕಬ್ಬೊಗೆ ವಿತಾಳಿಸಿ
ಹೊರದುದಬುಜಭವಾಂಡಮಂಡಲ ಕಠಿಣ ಕರ್ಪರವ
ಶರಧಿ ಕೊಳ್ಗುದಿಗುದಿದುದಟವೀ । ಚರರ ಬಲ್ಲವರಾರು ಹೊಗೆದುದು
ಧರೆ ಧರಾಧಿಪನಂಜಿದನು ದಳ್ಳುರಿಯ ಧಾಳಿಯಲಿ ೧೮

ವೀರ ಕೇಳೈ ಬಳಿಕ ರಾವಣ । ವೀರ ಬೊಬ್ಬಿರಿದೆಚ್ಚನಾ ರಘು
ವೀರನನು ವೀರರಿಗೆ ವೀರನಲಾ ರಘುಪ್ರಭವ
ನೀರಮಯವಾಯ್ತಿಳೆ ದಿಗಂತ ಸ । ಮೀರಪಥ ನಿಮ್ಮಯ್ಯನೆಸುಗೆಯ
ವಾರುಣಾಸ್ತ್ರಕೆ ಸೇಡುಗೊಂಡುದು ಸಕಲ ಸುರನಿಕರ ೧೯

ತೋರುವೆ ?" ಎಂದು ರಾವಣ ಉತ್ತರಕೊಟ್ಟ. ೧೬. "ಇನ್ನು ನಿನ್ನ ಒಳ್ಳೆಯದೋ ಕೆಟ್ಟದೋ ನಾನು ಮನ್ನಿಸಿದ ಭಕ್ತನ ಒಪ್ಪಿಗೆಯಂತೆ ಎಂದೂ ಎನ್ನದೆ ಇರದು ಈ ಜಗತ್ತು. ಆದ್ದರಿಂದ ನಿನ್ನನ್ನು ಉಳಿಸಬೇಕೆಂದು ಸತ್ಯವನ್ನು ನಾವು ನುಡಿದೆವು. ಅದು ನಿನ್ನ ಮನಸ್ಸಿಗೆ ಬಾರದಿದ್ದರೆ ಯುದ್ಧಕ್ಕೆ ಸಿದ್ಧನಾಗು" ಎಂದು ನುಡಿಯುತ್ತ ರಾಮನು ರಾವಣನನ್ನು ಬಾಣಗಳಿಂದ ಹೊಡೆದನು. ೧೭. ರಾಮನ ಬಾಣವನ್ನು ಪ್ರತಿಬಾಣದಿಂದ ಕತ್ತರಿಸಿ ಹಾಕಿ ರಾವಣನು ಒಡನೆ ಪ್ರಳಯಾಗ್ನಿಯ ಅಸ್ತ್ರವನ್ನು ಹೂಡಿದನು ; ಅದನ್ನು ಕಂಡು ದೇವತೆಗಳು ದಿಗಿಲಿನಿಂದ ಓಡಿದರು. ಸೂರ್ಯನ ರಥದ ಇರಚಿಯವರೆಗೂ ಬೆಂಕಿ ಆಕಾಶಕ್ಕೆದ್ದಿತು. ರಾಶಿರಾಶಿ ಕಿಡಿಗಳು ಎರಚುತ್ತಿರಲು ದೇವತೆಗಳು ಉಟ್ಟ ಬಟ್ಟೆಗಳನ್ನು ಬಿಚ್ಚಿ ಎಸೆದರು. ೧೮. ಉರಿಯೆದ್ದು ದಿಕ್ಕುಗಳನ್ನು ತಿವಿಯಿತು. ಕಪ್ಪು ಹೊಗೆಯು ಮೇರೆಮೀರಿ ಬ್ರಹ್ಮಾಂಡದ ಗಟ್ಟಿಚಿಪ್ಪನ್ನು ಆವರಿಸಿತು. ಸಮುದ್ರವು ತಕಪಕನೆ ಕುದಿಯಿತು. ಇನ್ನು ವಾನರರೇನಾದರೋ ತಿಳಿದವರು ಯಾರು ? ಭೂಮಿಯು ಹೊಗೆಯಾಡಿತು. ದಳ್ಳುರಿಯ ದಾಳಿಗೆ ರಾಮನೂ ಹೆದರಿದನು. ೧೯. ವೀರಕುಮಾರರೇ ಕೇಳಿ. ರಾವಣವೀರನು ಆಗ್ನೇಯಾಸ್ತ್ರವನ್ನು ಆರ್ಭಟಿಸಿ ಬಿಟ್ಟನು. ರಘುವೀರನು ವೀರರಿಗೆ ವೀರನಲ್ಲವೇ ? ನಿಮ್ಮ ತಂದೆಯು ವಾರುಣಾಸ್ತ್ರವನ್ನು ಬಿಡಲು ಭೂಮಿ, ದಿಗಂತ ಮತ್ತು ಆಕಾಶಗಳು ಜಲಮಯವಾದವು. ಸಮಸ್ತ

ಒಡನೆ ಹೂಡಿದನಸುರಪತಿ ಕಂ । ಗೆಡೆ ಜಗತ್ರಯ ಕಲ್ಪತಮದು
ಗ್ಗಡದ ಬಾಣವ ಬಾರಿಸಿತು ಕತ್ತಲೆಯಲವನಿತಳ
ಮೃಡಸರೋಜಜರಂಜಿ ಪುಟ್ಟಿಸ । ಲೊಡರಿಸಿದರಂಭೋಜಮಿತ್ರನ
ನಡುಗಿ ಮಾತಳಿ ಧಾತುಗೆಟ್ಟನು ಕಾಣದರಿಭಟನ ೨೦

ಸೆಳೆದು ಮೂಡಿಗೆಯಿಂದ ರವಿಕುಲ । ತಿಲಕ ಹೂಡಿದನುಷ್ಣಕಿರಣಾ
ಕಲಿತ ರವಿಮಾರ್ಗಣವ ನೆರೆದವು ಬಿಂಬ ದಿನಮಣಿಯ
ತಲೆವಿಲುಗಳಿಂದಿಬ್ಬರೊಂದೇ । ಚಳಕದಲಿ ಸರಳುಗಳ ಬಿಡೆ ಬಲು
ಗಲಹ ನಡೆದುದು ಹಗಲಿರುಳು ಹೋರಟೆಗಳಭ್ರದಲಿ ೨೧

ಪ್ರಾಸ ಪಟ್ಟಿಸ ಪರಿಘ ಮುದ್ಗರ । ಪಾಶ ಖೇಟಕ ಖಡ್ಗಗಳ ಬಾ
ಣಾಸನಾದಿ ಸಮಸ್ತ ಕೈದುಗಳಿಂದ ಬೊಬ್ಬಿರಿದು
ವಾಸವಾದ್ಯರ ಬೆದರಿಸಲು ಭೂ । ವಿಳಾಶ ಬಳಿಕಾಕ್ಷಣದಿನುಗ್ರ ಮ
ಹೇಶಶರಸಂಧಾನದಲಿ ಬೊಬ್ಬಿರಿದನಿದಿರಿನಲಿ ೨೨

ತರಣಿವಂಶಜನಂಬು ರಜನೀ । ಚರಕದಂಬವ ಗೆಲಲು ಛಲಿಗಳು
ಗರುವಗಾಢಭುಜಪ್ರತಾಪ ಕಳಾಪ ಕೈಯೊಡನೆ
'ತಿರುವಿನಲಿ ನೆಲಿಗೊಳಿಸಿದನು ಭೀ । ಕರ ಯಮಾಸ್ತ್ರವನಮಮ ನಿಮಿಷಕೆ
ನೆರೆದುದಂತಕಕೋಟಿ ಹೊಗರಿಡುವಧಿಕ ರೋಷದಲಿ ೨೩

ದೇವತೆಗಳು ನೀರಿಗೆ ಹೆದರಿ ಮೈಮುದುಡಿಕೊಂಡರು. ೨೦. ಒಡನೆ ರಾಕ್ಷಸೇಶ್ವರನು ಪ್ರಳಯದ ಕತ್ತಲೆಯ ಅಸ್ತ್ರವನ್ನು ಹೂಡಿದನು. ಅದನ್ನು ನೋಡಿ ಮೂರು ಲೋಕಗಳೂ ಕಂಗೆಟ್ಟವು. ಭೂಮಂಡಲವನ್ನು ಕತ್ತಲೆ ಮುತ್ತಿತು. ಶಿವ ಬ್ರಹ್ಮರು ಹೆದರಿ ಸೂರ್ಯನು ಉದಿಸುವಂತೆ ಮಾಡಲು ಯತ್ನಿಸಿದರು. ದೇವೇಂದ್ರನ ಸಾರಥಿಯಾದ ಮಾತಲಿಯು ಶತ್ರುವೀರನನ್ನು ಕಾಣದೆ ಕಂಗೆಟ್ಟನು. ೨೧. ರವಿಕುಲತಿಲಕ ರಾಮನು ಬತ್ತಳಿಕೆಯಿಂದ ಎಳೆದುಕೊಂಡು ಉಷ್ಣಕಿರಣಗಳಿಂದ ತುಂಬಿದ ಸೂರ್ಯಾಸ್ತ್ರವನ್ನು ಹೂಡಿದನು ; ಆಗ ಆ ಅಸ್ತ್ರದಿಂದ ಸೂರ್ಯಬಿಂಬಗಳು ಹುಟ್ಟಿದವು. ಇಬ್ಬರು ವೀರರು ತಲೆಬಿಲ್ಲುಗಳಿಂದ ಒಂದೇ ರೀತಿಯ ಕೈಚಳಕದಿಂದ ಬಾಣಗಳನ್ನು ಬಿಡಲು ಹಗಲೂರಾತ್ರಿ ಆಕಾಶದಲ್ಲಿ ಭಾರಿ ಕಾಳಗ ನಡೆಯಿತು. ೨೨. ಪ್ರಾಸ, ಪಟ್ಟಿಸ, ಪರಿಘಾಯುಧ, ಮುದ್ಗರ, ಪಾಶ, ಗುರಾಣಿ, ಬಿಲ್ಲು—ಮೊದಲಾದ ಸಮಸ್ತ ಆಯುಧಗಳಿಂದ ರಾವಣನು ಆಕ್ರಮಿಸಲು ಇಂದ್ರನೇ ಮೊದಲಾದ ದೇವತೆಗಳು ಬೆದರಿದರು. ಆಕ್ಷಣ ರಾಮನು ಉಗ್ರವಾದ ಮಹೇಶ್ವರಾಸ್ತ್ರವನ್ನು ಪ್ರಯೋಗಿಸಿ ಆರ್ಭಟಿಸಿದನು. ೨೩. ರವಿಕುಲದ ರಾಮನ ಬಾಣವು ರಾಕ್ಷಸಸಮೂಹವನ್ನು ಗೆದ್ದಿತು. ಆಗ ದೃಢಚಿತ್ತನಾದ ರಾವಣನು ತೋಳ್ಬಲದ ಚತುರಸಂಧಾನದಿಂದ ಭಯಂಕರ ಯಮಾಸ್ತ್ರವನ್ನು ಬಿಲ್ಲಿನ ಹಗ್ಗಕ್ಕೆ ಹೂಡಿದನೋ ಇಲ್ಲವೋ ಆ ಅಸ್ತ್ರದಿಂದ ಅಬ್ಬಬ್ಬ ಒಂದು ನಿಮಿಷದಲ್ಲಿ ಗಾಢಕೋಪವನ್ನು ಪ್ರಕಟಿಸುತ್ತ

ಎಚ್ಚನವನಾ ಕೈಯೊಡನೆ ತೆಗೆ । ದೆಚ್ಚನವನಿಪನೇನ ಹೇಳುವೆ
ನಚ್ಚರಿಯನದ ನೆರೆದು ಮೊಱೆವ ಕೃತಾಂತಕೋಟಿಗಳ
ಬಿಚ್ಚಿಬಿಸುಟುದು ಭಾಳನೇತ್ರನ । ನಿಚ್ಚಟದ ನಿಶಿತಾಸ್ತ್ರ ಬಳಿಕಿದೆ
ಗಿಚ್ಚಿನಸುರಕುಲೇಂದ್ರ ಹೂಡಿದನದ್ರಿಮಾರ್ಗಣವ ೨೪

ಆರಿ ಬೊಬ್ಬಿಱಿದೆಚ್ಚನಾ ರಘು । ವೀರನನು ಮುಸುಕಿದವು ರಸವ್ಯಂ
ದಾರಕಾಧೀಶ್ವರನ ಮುಸುಕಿದ ಶೈಲಕುಲದಂತೆ
ಭಾರಿಭುಜಬಲ ನಸುನಗುತ ಶತ । ಧಾರಶರದಲಿ ಧೂಳಿಗೆದಱಿದ
ನಾರೆ ಕಪಿಬಲವಮರತತಿ ಕೊಂಡಾಡೆ ಗಗನದಲಿ ೨೫

ವಾಸಿಬಿಡದಸುರೇಂದ್ರ ಜಯದಭಿ । ಲಾಷೆಯಲಿ ಭುಜಗಾಸ್ತ್ರವನು ಬಾ
ಣಾಸನಕೆ ಬರಿಸಿದನು ಬರ್ಹಿರ್ಮುಖರು ಕಳವಳಿಸೆ
ಕೀಶಪಡೆ ಪಡಲಿಡೆ ಬಳಿಕ್ಕವ । ನಾಸುರದಿ ಬೊಬ್ಬಿಱಿದು ಸರ್ಪಾ
ಧೀಶಶಯನನ ಸಮ್ಮುಖಕೆ ಸುಳಿಸಿದನು ಮಾರ್ಗಣವ ೨೬

ನೆರೆದುದಂಬರವಳಯದಲಿ ರವಿ । ಗುರವಣಿಪ ರಾಹುವಿನವೊಲು ಫೂ
ತ್ಕರೆ ಫಣಾಳಿಯು ಕಿದಱಿಕೆಯು ಚೂರಿಸುವ ನಾಲಗೆಯ
ಉರಿಯನುಗುಳುವ ಘೋರವಿಷದು । ಬ್ಬರದ ಹಾವುಗಳೌಕಿದವು ನಿ
ಮ್ಮರಸನನು ಭುಜಗೇಂದ್ರಭೂಷಣ ಮುಖ್ಯ ಸುರಬಲವ ೨೭

ಕೋಟಿ ಯಮರು ಒಂದು ಸೇರಿದರು. ೨೪. ರಾವಣನು ಯಮಾಸ್ತ್ರವನ್ನು ಬಿಟ್ಟನೋ ಇಲ್ಲವೋ ಅದಕ್ಕೆ ಪ್ರತಿಯಾಗಿ ಮಹೇಶ್ವರಾಸ್ತ್ರವನ್ನು ರಾಮನು ಪ್ರಯೋಗಿಸಿದನು. ಆ ಆಶ್ಚರ್ಯವನ್ನು ಏನೆಂದು ಹೇಳೋಣ. ಯಮಾಸ್ತ್ರದಿಂದ ಕೋಟಿ ಯಮರು ಬಂದರು. ರಾಮನ ಮಹೇಶ್ವರಾಸ್ತ್ರವು ಯಮರನ್ನೆಲ್ಲ ಮುಗಿಸಿಬಿಟ್ಟಿತು. ಆಗ ರಾಕ್ಷಸೇಶ್ವರನು ಪರ್ವತಾಸ್ತ್ರವನ್ನು ಹೂಡಿದನು. ೨೫. ರಾವಣನು ಬೊಬ್ಬಿರಿದು ರಾಮನ ಮೇಲೆ ಪರ್ವತಾಸ್ತ್ರವನ್ನು ಬಿಟ್ಟನು. ಆ ಅಸ್ತ್ರವು ಇಂದ್ರನನ್ನು ಮುತ್ತಿದ ಪರ್ವತಗಳಂತೆ ರಘುವೀರನನ್ನು ಮುತ್ತಿತು. ಭಾರಿ ತೋಳ್ಬಲದ ರಾಮನು ನಸು ನಗುತ್ತ ವಜ್ರಾಸ್ತ್ರದಿಂದ ಪರ್ವತಾಸ್ತ್ರವನ್ನು ಹುಡಿಗೆದರಿದನು. ಆಗ ವಾನರಸೈನ್ಯವು ಗರ್ಜಿಸಿತು. ಆಕಾಶದಲ್ಲಿ ದೇವತೆಗಳು ರಾಮನನ್ನು ಕೊಂಡಾಡಿದರು. ೨೬. ಸ್ಪರ್ಧೆಯನ್ನು ಬಿಡದ ರಾಕ್ಷಸೇಶ್ವರನು ಗೆಲ್ಲುವ ಆಸೆಯಿಂದ ಸರ್ಪಾಸ್ತ್ರವನ್ನು ಬಿಲ್ಲಿಗೆ ಹೂಡಿದನು. ಅದನ್ನು ನೋಡಿ ದೇವತೆಗಳಿಗೆ ಕಳವಳವಾಯಿತು ; ವಾನರಸೈನ್ಯವು ಚೆಲ್ಲಾಪಿಲ್ಲಿಯಾಯಿತು. ಆಗ ಅವನು ಭಯಂಕರವಾಗಿ ಬೊಬ್ಬೆಹಾಕುತ್ತ ಸರ್ಪಾಸ್ತ್ರವನ್ನು ಸರ್ಪಗಳೊಡೆಯ ಆದಿಶೇಷಶಯನನಾದ ರಾಮನ ಮೇಲೆ ಬಿಟ್ಟನು. ೨೭ ಸೂರ್ಯನನ್ನು ನುಂಗಲು ನುಗ್ಗುವ ರಾಹುವಿನಂತೆ ಫೂತ್ಕಾರ ಮಾಡುತ್ತ ಹೆಡೆಯೆತ್ತಿ ನಾಲಗೆಯನ್ನು ನೀಡಿ ಉರಿಯನ್ನುಗುಳುವ ಘೋರವಿಷದ ಹಾವುಗಳು ಆಕಾಶದಲ್ಲಿ ದಟ್ಟೈಸಿದವು. ಅನಂತರ ಹಾವುಗಳು ನಿಮ್ಮ ರಾಜಾರಾಮ ಮತ್ತು ಸರ್ಪಭೂಷಣನೇ ಮೊದಲಾದ ದೇವತೆಗಳ

ಗಜಬಜಿಸುವನೆ ರಾಮ ಗರುಡ । ಧ್ವಜನಲಾ ಸ್ಮರಿಸಿದನು ವಿನತಾ
ತ್ಮಜನನಂಬಿನ ಮೊನೆಯಲುಬ್ಬಿಱಿದೆಚ್ಚನರಿಶರವ
ಭುಜಗತತಿಯೇನಾದುದೋ ಹರ । ಭುಜದ ಹಾವಿಗೆ ಹೊಂಚಿಹೊಳಕಿದು
ದಜನ ಕೈಸನ್ನೆಯಲಿ ತಿರುಗಿತು ಮೂಡಿಗೆಗೆ ನೃಪನ ೨೮

ಸರಳ ಹೂಡಿದನಸುರಪತಿ ಜಲ । ಧರದ ಮೊಳಗಿನ ಮೋಹರದೊಳ
ಬ್ಬರಿಸಿದವು ಗಬ್ಬರಿಸಿದವು ಸಿಡಿಲಭ್ರಮಂಡಲವ
ಬೆರಸಿದವು ಮಿಂಚುಗಳು ಸುರಿದುದು । ವರುಷಧಾರಾಸಾರವಗಲಕೆ
ಶಿರಗಳಿನಿತನಿತಱಲಿ ಬೊಬ್ಬಿಱಿದೆಚ್ಚನವನಿಪನ ೨೯

ಲಂಬಿಸಿದ ಸಂವರ್ತಮೇಘಾ । ಡಂಬರದ ಡೊಂಬಿಗೆ ಸಮೀರಕ
ಳಂಬವನು ಕಳುಹಿದನು ಕಲಿಗಳದೇವನೆಸುಗೆಯಲಿ
ಎಂಬೆನೇನನು ಬೀಸಿದುದು ಬಳಿ । ಕಂಬರದ ವಳಯದಲಿ ಭುವನ ಕ
ದಂಬ ಕಂಪಿತ ಕಲಿತ ಕಲ್ಪಾಭೀಳ ಪವಮಾನ ೩೦

ಮುಱಿದ ಮುಱುಹಿನ ಮೇಲೆ ಹೇವದ । ಹೊಱಗೆವಾಳರ ದೇವ ಹೂಡಿದ
ನೊಱಹು ಮಿಗೆ ಮಾರೀಚನಿತ್ತ ಮಹಾಸುದರುಶನವ
ಮಱೆಯದೇನಜಹರರ ಚಿತ್ತಕೆ । ಬೆಱಗ ಬೀರಿತು ಬಳಿಕ ಖಳ ಬೊ
ಬ್ಬಿಱಿದು ನೆನೆದನು ತನ್ನ ಮುನ್ನಿನ ಸಕಲ ಸೈನಿಕವ ೩೧

ಗುಂಪಿನ ಮೇಲೆ ಆಕ್ರಮಣ ಮಾಡಿದವು. ೨೮. ರಾಮನು ಗಲಿಬಿಲಿಗೊಳ್ಳುವನೆ ? ಅವನು ಗರುಡಧ್ವಜನಲ್ಲವೇ ? ಗರುಡನನ್ನು ಸ್ಮರಿಸಿ ಬಾಣದ ತುದಿಗೆ ಆಹ್ವಾನಿಸಿ ಶತ್ರುವಿನ ಸರ್ಪಾಸ್ತ್ರದ ಮೇಲೆ ಗರುಡಾಸ್ತ್ರವನ್ನು ಬಿಟ್ಟನು. ಸರ್ಪಾಸ್ತ್ರದ ಹಾವುಗಳೆಲ್ಲ ಏನಾದುವೋ ! ಗರುಡಾಸ್ತ್ರವು ತಿಳಿಯದೆ ಶಿವನ ಭುಜದ ಹಾವಿನ ಮೇಲೆ ಬೀಳಲು ಹೊಂಚುಹಾಕಿತು. ಇದನ್ನು ನೋಡಿದ ಬ್ರಹ್ಮನು ಕೈಸನ್ನೆ ಮಾಡಿದನು. ಆಗ ಗರುಡಾಸ್ತ್ರವು ಅಲ್ಲಿಂದ ಹೊರಟುಬಂದು ರಾಮನ ಬತ್ತಳಿಕೆಯಲ್ಲಿ ಸೇರಿಕೊಂಡಿತು. ೨೯. ರಾಕ್ಷಸರಾಜನು ಮೇಘಾಸ್ತ್ರವನ್ನು ಹೂಡಿದನು. ಮೋಡಗಳು ಗುಡುಗಿ ಅಬ್ಬರಿಸಿದವು, ಸಿಡಿಲುಗಳು ಆಕಾಶವನ್ನು ಮುತ್ತಿದವು, ಮಿಂಚುಗಳು ಹೊಳೆದವು. ವಾನರಸೈನ್ಯದ ಎಲ್ಲರ ತಲೆಯ ಮೇಲೆ ಧಾರಾಕಾರವಾದ ಮಳೆ ಸುರಿಯಿತು. ರಾವಣನು ಆರ್ಭಟಿಸಿ ರಾಮನ ಮೇಲೆ ಬಾಣಬಿಟ್ಟನು. ೩೦. ವಿಸ್ತರಿಸಿದ ಪ್ರಳಯ ಮೇಘಗಳ ಆಡಂಬರದ ಗದ್ದಲಕ್ಕೆ ವಾಯುಅಸ್ತ್ರವನ್ನು ರಾಮನು ಪ್ರಯೋಗಿಸಿದನು. ಆ ಅಸ್ತ್ರದ ಮಹಿಮೆಯನ್ನೇನು ಹೇಳಲಿ. ಆಕಾಶಮಂಡಲದಲ್ಲಿ ಲೋಕಗಳನ್ನು ನಡುಗಿಸುವ ಪ್ರಳಯಭಯಂಕರ ಮಾರುತವು ಬೀಸಿತು. ೩೧. ಗರ್ವ ಮುರಿದು ದ್ವೇಷದ ಭಾರ ಹೊತ್ತ ರಾವಣನು ಕೆಚ್ಚಿನಿಂದ ಮಾರೀಚನು ಕೊಟ್ಟಿದ್ದ ಮಹಾಸುದರ್ಶನಾಸ್ತ್ರವನ್ನು ಹೂಡಿದನು. ಅದನ್ನು ಕಂಡು ಬ್ರಹ್ಮ ಮಹೇಶ್ವರರ ಮನಸ್ಸು ವಿಸ್ಮಯಕ್ಕೊಳಗಾಯಿತು. ಬಳಿಕ ರಾಕ್ಷಸನು ಬೊಬ್ಬಿರಿದು ತನ್ನ ಹಿಂದಿನ ಸಮಸ್ತ ಸೈನ್ಯವನ್ನೂ ಸ್ಮರಿಸಿ

ವೀರ ಕೇಳ್ಕೆ ಕುಶನೆ ನೆರೆದುದು । ಭೂರಿಬಲ ಧೂಮ್ರಾಕ್ಷ ಕುಂಭ ನ
ರಾರಿ ಯುದ್ಧೋನ್ಮತ್ತ ವಿದ್ಯುಜ್ಜಿಹ್ವನತಿಕಾಯ
ಘೋರಬಲ ಮಕರಾಕ್ಷ ಕಲಿ ಜಂ । ಭಾರಿಜಿತು ಮಿತ್ರಘ್ನ ಮುಖ್ಯ ಮ
ಹಾರಥರು ಸಂದಣಿಸಿದರು ಶರಸನ್ನಿವೇಶದಲಿ ೩೨

ಕಲಿ ನಿಕುಂಭ ತ್ರಿಶಿರ ದುರ್ಮದ । ಕುಲಿಶದಂಷ್ಟ್ರ ಸುಪಾರ್ಶ್ವ ಖಳದೋ
ರ್ವಳ ಮಹೋದರ ವೀರ ದೇವಾಂತಕ ವಿರೂಪಾಕ್ಷ
ಪ್ರಳಯಮುಖ ದಶಮುಖ ಸಹೋದರ । ರಳವಿಗೊಂಡಬ್ಬರಿಸಿ ಚಾತು
ರ್ಬಲ ಸಹಿತ ವೇಢೈಸಿಕೊಂಡುದು ರಾಘವೇಶ್ವರನ ೩೩

ಕರಿ ಕರಡಿ ಕಾಡ್ಕೋಣ ಸೂಕರ । ಹರಿ ಶರಭ ಶಾರ್ದೂಲ ವೃಕ ಭೀ
ಕರ ಮಹೋರಗ ಕದಳಿ ಖಡ್ಗಪ್ರಮುಖ ಕ್ರೂರಮೃಗದ
ನೆರವಿಗಳ ವಾಹನದ ರಜನೀ । ಚರಕದಂಬಕ ಕೋಟಿಸಂಖ್ಯೆಯು
ಲುರವಣಿಸಿ ಕೆದಱಿದುದು ಕೈಕೊಂಡಟ್ಟಿ ಕಪಿಬಲವ ೩೪

ಪರಿಘ ಮುಸಲ ಮುಸುಂಡಿ ಮುದ್ಗರ । ಪರಶು ಪಟ್ಟಿಸ ಪಿಂಡಿವಾಳದ
ಲುರವಣಿಸಿತೊಂದೆಸೆಯಲಸಿ ಸೆಲ್ಲೆಹದ ಬಲ್ಲೆಯದ
ಶರ ಗದಾ ಚಕ್ರಾಭಿಘಾತದ । ಸುರವಿರೋಧಿಗಳೊಂದೆಸೆಯ ಮೋ
ಹರಿಸಿ ಮುಸುಕಿದುದಬ್ಬರಿಸುವಬ್ಬರದ ಹಱೆಗಳಲಿ ೩೫

ಕೊಂಡನು. ೩೨. ವೀರ ಕುಶ, ಕೇಳು. ಭಾರಿಬಲಶಾಲಿಗಳಾದ ಧೂಮ್ರಾಕ್ಷ, ಕುಂಭ, ನರಾಂತಕ, ಯುದ್ಧೋನ್ಮತ್ತ, ವಿದ್ಯುಜ್ಜಿಹ್ವ. ಅತಿಕಾಯ ಭಯಂಕರ, ಬಲಶಾಲಿ ಮಕರಾಕ್ಷ, ವೀರ ಇಂದ್ರಜಿತು, ಮಿತ್ರಘ್ನ–ಮೊದಲಾದ ಪ್ರಮುಖ ಮಹಾರಥಿಗಳು ಅಸ್ತ್ರದ ಪ್ರದೇಶದಲ್ಲಿ ಬಂದು ಗುಂಪುಗೂಡಿದರು. ೩೩. ಕಲಿ ನಿಕುಂಭ, ತ್ರಿಶಿರ, ದುರ್ಮದ, ವಜ್ರದಂಷ್ಟ್ರ, ಸುಪಾರ್ಶ್ವ, ಬಾಹುಬಲಶಾಲಿ ಮಹೋದರ, ವೀರದೇವಾಂತಕ, ವಿರೂಪಾಕ್ಷ, ಪ್ರಳಯಮುಖ ರಾವಣನ ತಮ್ಮ ಕುಂಭಕರ್ಣ–ಮೊದಲಾದವರು ಪರಾಕ್ರಮದಿಂದ ಅಬ್ಬರಿಸಿ ಚತುರಂಗಸೈನ್ಯ ಸಮೇತ ರಾಘವೇಶ್ವರನನ್ನು ಸುತ್ತುವರಿದರು. ೩೪. ಆನೆ, ಕರಡಿ, ಕಾಡುಕೋಣ, ಹಂದಿ, ಸಿಂಹ, ಶರಭ, ಶಾರ್ದೂಲ, ತೋಳ, ಭಯಂಕರ ಕಾಲಸರ್ಪ, ಕದಳಿ ಎಂಬ ಆನೆ, ಖಡ್ಗಮೃಗ ಮೊದಲಾದ ಮುಖ್ಯ ಕ್ರೂರಮೃಗಗಳನ್ನು ವಾಹನಗಳನ್ನಾಗಿ ಹೊಂದಿದ ರಾಕ್ಷಸಸಮೂಹವು ಕೋಟಿಸಂಖ್ಯೆಯಲ್ಲಿ ನುಗ್ಗಿಬಂದು ಕಪಿಸೈನ್ಯವನ್ನು ಹೊಡೆದಟ್ಟಿ ಚದುರಿಸಿತು. ೩೫. ಪರಿಘಾಯುಧ, ಒನಕೆ, ಮುಸುಂಡಿ, ಮುದ್ಗರ, ಪರಶು, ಪಟ್ಟಿಸ, ಪಿಂಡಿವಾಳಗಳನ್ನು ಹಿಡಿದ ರಾಕ್ಷಸರು ಒಂದು ಕಡೆಯಿಂದ ಆಕ್ರಮಿಸಿದರು. ಕತ್ತಿ, ಶಲ್ಯ, ಭಲ್ಲೆಯ, ಬಾಣ, ಗದೆಗಳ ಪೆಟ್ಟುಕೊಡುವ ರಾಕ್ಷಸರು ತಮಟೆಗಳ ಅಬ್ಬರದೊಡನೆ ಇನ್ನೊಂದು

ಆವ ಮುಖದಲಿ ನೋಡಿದರೆ ಕಲಿ । ರಾವಣನ ರಥವಿರ್ದುದವನ ಸ
ರಾವರೋಷಾವೇಶವಿರ್ದುದು ರಣದೊಳಗಲದಲಿ
ದೇವರಾಘವ ಕಂಡು ಶಂಕಾ । ಭಾವಭಾರದಲಾ ವಿಭೀಷಣ
ದೇವನಾನನವನು ನಿರೀಕ್ಷಿಸಿ ಶರಣಗಿಂತೆಂದ ೩೬

ಏನಿದದ್ಭುತ ಹಿಂದೆ ಹೊಂದಿದ । ಸೇನೆ ನೆರೆದಿದೆ ಹುಸಿಯೊ ನಮ್ಮಾ
ವಾನರರು ಕೊಂದುದು ದಶಾಸ್ಯನ ಕೋಟಿಹೋಮವನು
ಈ ನಿಶಿತಬಲ ಹನುಮನಳಿದುದು । ತಾನತಥ್ಯವೊ ಮೇಣು ಹರ ಚತು
ರಾನನರ ವರವೋ ವಿಭೀಷಣ ಹೇಳು ನಮಗೆಂದ ೩೭

ಎಲೆ ಜಗನ್ಮಯ ನಿನ್ನ ಮಾಯಾ । ವಿಲಸಕಿದು ವೆಗ್ಗಳವೆ ಕೇಳುವ
ಕೆಲಸವೇನಿದ್ದುದು ಮಹಾಮಾಯಾವಿನೋದಂಗೆ
ಬಳಕೆ ನರರಖಿಲೇಶನಲು ರಘು । ತಿಲಕ ವೈಷ್ಣವಮಂತ್ರಮುಖದ
ಗ್ಗಳದ ಬಾಣವ ಹೂಡಿದನು ಕೊಂಡಾಡೆ ದೇವಗಣ ೩೮

ಏನನೆಂಬೆನು ವೈಷ್ಣವದ ಮಹಿ । ಮಾನಿಸರ್ಗಪ್ರಭೆಯು ಶಂಖ
ಧ್ವಾನ ಜಡಿದುದು ಜಡಿತೆಬುಲಿ ಹೊಳಕಿದವು ಚಕ್ರಚಯ
ಭಾನುತೇಜದಲಸಿಗದಾದಿ ಮ । ಹಾ ನಿಶಿತ ಶಸ್ತ್ರಾಸ್ತ್ರವಾ ಮಾ
ಯಾ ನಿಶಾಟ ಕದಂಬಕದ ಕೆದಜಿಂದವು ಕಡಿತದಲಿ ೩೯

ಕಡೆಯಿಂದ ಮುತ್ತಿದರು. ೩೬. ಯಾವ ಕಡೆ ನೋಡಿದರೂ ರಾವಣನ ರಥ ಕಾಣಿಸುತ್ತಿದ್ದಿತು. ಯುದ್ಧರಂಗದ ಎಲ್ಲೆಡೆಯಲ್ಲೂ ಅವನ ಆರ್ಭಟ ಸಹಿತ ರೋಷಾವೇಷವಿದ್ದಿತು. ರಾಘವದೇವನು ಇದನ್ನು ಕಂಡು ಸಂದೇಹಗೊಂಡು ವಿಭೀಷಣದೇವನ ಮುಖವನ್ನು ನೋಡುತ್ತ ತನ್ನ ಭಕ್ತನನ್ನು ಕುರಿತು ಮುಂದಿನಂತೆ ನುಡಿದನು. ೩೭. "ಏನಿದು ಅದ್ಭುತ ? ಹಿಂದೆ ಸತ್ತುಹೋದ ಸೈನ್ಯ ಬಂದು ಸೇರಿದೆ. ನಮ್ಮ ಈ ವಾನರರು ಅವರುಗಳನ್ನು ಕೊಂದುದು ಸುಳ್ಳೋ ? ದಶಕಂಠನ ಕೋಟಿಹೋಮವನ್ನು ಈ ತೀಕ್ಷ್ಣಬಲಶಾಲಿ ಹನುಮಂತನು ನಾಶಮಾಡಿದುದು ಹುಸಿಯೋ ? ಅಥವ ಈಶ್ವರ, ಬ್ರಹ್ಮ ಇವರುಗಳ ವರವೋ ? ವಿಭೀಷಣ ನಿಜವನ್ನು ನಮಗೆ ಹೇಳು" ಎಂದ ರಾಮ. ೩೮. "ಅಯ್ಯ ಜಗದ್ವ್ಯಾಪಿಯೇ, ನಿನ್ನ ಮಾಯಾವಿಲಾಸಕ್ಕೆ ಇದು ದೊಡ್ಡದೇ? ಮಾಯಾವಿನೋದಿಯಾದ ನೀನು ಈ ಪ್ರಶ್ನೆಯನ್ನು ಕೇಳುವ ಕಾರ್ಯವೇನುಂಟಾಯಿತು ? ಸಾಮಾನ್ಯ ಮಾನವರಂತೆ ಏಕೆ ವ್ಯವಹರಿಸುವೆ ?" ಎಂದು ವಿಭೀಷಣನು ಹೇಳಲು ರಘುಕುಲಶ್ರೇಷ್ಠನು ವೈಷ್ಣವಮಂತ್ರದ ಅತಿಶಯವಾದ ಅಸ್ತ್ರವನ್ನು ಬಿಲ್ಲಿಗೆ ಹೂಡಿದನು. ಇದನ್ನು ನೋಡಿದ ದೇವತೆಗಳು ರಾಮನನ್ನು ಕೊಂಡಾಡಿದರು. ೩೯. ವೈಷ್ಣವ ಮಹಿಮೆಯ ಸಹಜ ತೇಜಸ್ಸನ್ನು ಏನೆಂದು ಹೇಳಲಿ. ಶಂಖಧ್ವನಿಯು ಮೊಳಗಿತು ; ತಕ್ಷಣ ಸೂರ್ಯನ ಪ್ರಕಾಶದಿಂದ ಹೊಳೆಯುತ್ತ ಅಸಂಖ್ಯಾತ ಚಕ್ರಗಳು ಗೋಚರಿಸಿದವು. ಖಡ್ಗ, ಗದೆ ಮೊದಲಾದ ಅಸುರರ ಹರಿತವಾದ ಮಹಾಶಸ್ತ್ರಾಸ್ತ್ರಗಳನ್ನೂ

ತರುಣ ಕೇಳಲ್ಲಿಂದ ಮೇಲವ । ಸುರುತರ ಕ್ರೋಧಾಗ್ನಿಯಲಿ ಸೀ
ವರಿಸಿ ಸೆಳೆದನು ಸರಸಿಜಾಸನ ತನಗೆ ಪೂರ್ವದಲಿ
ಶಿರವನರಿದರಿದಗ್ನಿಗಿತ್ತಾ । ಸುರದ ವರದಲಿ ಕೊಟ್ಟಮೋಘದ
ಶರವ ಹೂಡಿದನಾಗಲೇನಿಂದ್ರಾದಿಗಳು ಬೆದಱೆ ೪೦

ಇಳಿದನಜನದ ಕಂಡು ತಂದೆಯು । ಬಳಿಗೆ ವಿಪ್ರಾಕಾರದಲಿ ಕೇ
ಳೆಲೆ ಪಿತಾಮಹಪಿತನೆ ಪೈತಾಮಹ ಮಹಾಶರವ
ಕಳುಹುತಹನವನದಱ ಹೃದಯಾ । ನಲನ ನಂದಿಸುವರೆ ಚರಾಚರ
ಚಲಿಸಲಱಿಯದು ಚತುರತೆಯು ಚಾಪದಲಿ ಮೆಱೆಯೆಂದ ೪೧

ಸಾರಿ ನೀವ್ ಕೆಲಕೆನುತ ರಿಪುಭಟ । ನಾರಿ ಬೊಬ್ಬಿಱಿದೆಸುವ ಮುಷ್ಟಿಯು
ಪಾರಮೇಷ್ಠ್ಯಶರಾಭಿಮುಖಕೆಬ್ಬಿಸಿದನುರುಶರವ
ಘೋರತರ ಬಾಣಾಸನದ ಬಲು । ನಾರಿಯನು ಕಡಿದಡಸಿ ತೋಳ್ಗಳ
ತಾರೆಗಳ ಪಥಕೆತ್ತಿ ತಿರುಗಿತು ಮತ್ತೆ ಮೂಡಿಗೆಗೆ ೪೨

ಮೂಡಿದವು ಭುಜ ಭುಜಗ ಹುತ್ತಿನೊ । ಳೀಡಿಱಿದು ಪೊಱಮಡುವವೋಲು ಸ
ಗಾಢಬಲನಹೆ ಸಮರಸಮಯೋಚಿತವು ತಪ್ಪಲ್ಲ
ಖೋಡಿಗಾಣಿಸದೀತನನು ಕೊಂ । ಡಾಡಬಹುದೆನುತಸುರವಂಶವಿ
ಭಾಡ ಹೊಗಳಲು ಹೊಕ್ಕನಪರಾಂಬುಧಿಯನಿನ ಬಳಿಕ ೪೩

ಮಾಯಾರಾಕ್ಷಸಸಮೂಹವನ್ನೂ ವೈಷ್ಣವಾಸ್ತ್ರವು ಕತ್ತರಿಸಿ ಬೀಳಿಸಿತು. ೪೦. ತರುಣ ಕುಶ, ಕೇಳು. ಆನಂತರ ರಾವಣನು ಉಗ್ರಕೋಪಾಗ್ನಿಯಿಂದ ಆರ್ಭಟಿಸಿ ತಾನು ತಲೆಯನ್ನು ಕತ್ತರಿಸಿ ಕತ್ತರಿಸಿ ಅಗ್ನಿಗೆ ಹೋಮಮಾಡಿದಾಗ ಬ್ರಹ್ಮನು ತನಗೆ ವರವನ್ನಿತ್ತು ಅನುಗ್ರಹಿಸಿಕೊಟ್ಟ ಅಮೋಘವಾದ ಅಸ್ತ್ರವನ್ನು ಬಿಲ್ಲಿಗೆ ಹೂಡಿದನು. ಅದನ್ನು ಕಂಡು ಇಂದ್ರಾದಿ ದೇವತೆಗಳು ದಿಗಿಲುಗೊಂಡರು. ೪೧. ಇದನ್ನು ಕಂಡು ಬ್ರಹ್ಮನು ಬ್ರಾಹ್ಮಣರೂಪದಲ್ಲಿ ತಂದೆಯಾದ ವಿಷ್ಣುವಿನ ಅವತಾರಿ ರಾಮನ ಬಳಿಗೆ ಬಂದು, "ಕೇಳಯ್ಯಾ ಬ್ರಹ್ಮನ ತಂದೆಯೇ, ಬ್ರಹ್ಮಾಸ್ತ್ರವನ್ನು ರಾವಣನು ಕಳಿಸುವುದರಲ್ಲಿದ್ದಾನೆ. ಆ ಅಸ್ತ್ರದ ಹೃದಯದ ಅಗ್ನಿಯನ್ನು ಆರಿಸಲು ಚರಾಚರಗಳಲ್ಲಿ ಯಾರಿಗೂ ಸಾಧ್ಯವಿಲ್ಲ. ಆದುದರಿಂದ ಅವನ ಬಿಲ್ಲಿನ ಮೇಲೆ ನಿನ್ನ ಚಾತುರ್ಯವನ್ನು ತೋರಿಸು" ಎಂದು ಹೇಳಿದ. ೪೨. 'ನೀವು ಪಕ್ಕಕ್ಕೆ ನಡೆಯಿರಿ' ಎನ್ನುತ್ತ ಆರ್ಭಟಿಸಿ ಬೊಬ್ಬೆಹಾಕಿ ಮುಷ್ಟಿಯಿಂದೆಳೆದು ಹಿಡಿದಿದ್ದ ಬ್ರಹ್ಮಾಸ್ತ್ರಕ್ಕೆ ಎದುರಾಗಿ ರಾಮನು ಬಾಣವನ್ನು ಬಿಟ್ಟನು. ಆ ರಾಮಬಾಣವು ಭಯಂಕರವಾದ ರಾವಣನ ಬಿಲ್ಲಿನ ಹಗ್ಗವನ್ನು ಕತ್ತರಿಸಿ ತೋಳುಗಳನ್ನು ಆಕಾಶಕ್ಕೆ ಹಾರಿಸಿ ಪುನಃ ರಾಮನ ಬತ್ತಳಿಕೆಗೆ ಬಂದು ಸೇರಿಕೊಂಡಿತು. ೪೩. ಸರ್ಪವು ಹುತ್ತದಿಂದ ಚಿಮ್ಮಿ ಹೊರಬರುವಂತೆ ರಾವಣನ ಕಡಿದ ತೋಳುಗಳು ಪುನಃ ಹುಟ್ಟಿಕೊಂಡವು. "ನೀನು ಒಳ್ಳೆ ಬಲಶಾಲಿಯಾಗಿದ್ದೀಯೆ. ನಿನ್ನ ಸಮಯೋಚಿತವಾದ ಕಾಳಗವು ತಪ್ಪಲ್ಲ. ತಪ್ಪು ಹೊರಿಸದೆ ಇವನನ್ನು ಹೊಗಳಬಹುದು" ಎಂದು ರಾಕ್ಷಸಕುಲವಿನಾಶಕರನಾದ ರಾಮನು ಹೊಗಳುತ್ತಿರುವಂತೆ ಸೂರ್ಯನು ಪಶ್ಚಿಮ ಸಮುದ್ರ

ತೀರಿದವು ಹದಿನೇಳು ದಿನ ಜ । ಜ್ಝಾರ ನಡೆದುದು ಬಿಡದೆ ಕತ್ತಲೆ
ತೀರಿತಾ ದಿನಮಣಿಯು ಜನನದೊಳೊಡನೆ ಮಱುದಿವಸ
ವೀರ ತೊರವೆಯು ನರಹರಿಗೆ ರಣ । ಧೀರ ಲಂಕಾಪತಿಗೆ ನಡೆದುದು
ಭಾರಿಯಾಹವ ಬಣ್ಣಿಸಲು ತನಗರಿದಲೇಯೆಂದ ೪೪

ವನ್ನು ಹೊಕ್ಕನು. ೪೪. ರಾಮ ರಾವಣರ ಯುದ್ಧದ ಹದಿನೇಳು ದಿನಗಳು ಕಳೆದವು. ಕತ್ತಲೆ ಕಳೆದು ಸೂರ್ಯನು ಉದಯಿಸಿದನು. ಮಾರನೆಯದಿವಸ ವೀರ ತೊರವೆಯ ನರಸಿಂಹನ ಅವತಾರಿ ಶ್ರೀರಾಮನಿಗೂ ರಣಧೀರ ಲಂಕೇಶ್ವರ ರಾವಣನಿಗೂ ಭಾರಿ ಕಾಳಗ ನಡೆಯಿತು. ಅದನ್ನು ವರ್ಣಿಸಲು ನನಗೆ ಅಸಾಧ್ಯವೇ ಸರಿ ಎಂದು ವಾಲ್ಮೀಕಿಗಳು ನುಡಿದರು.

51

# ಐವತ್ತೊಂದನೆಯ ಸಂಧಿ

ಸೂಚನೆ॥ ರಾಯ ರಾಯರರಾಯ ರಾಘವ । ರಾಯ ರಣರಂಗದಲಿ ರಕ್ಕಸ
ರಾಯನನು ಗೆಲಿದೊಲಿಸಿ ಸಲಹಿದನಖಿಳ ಭುವನಗಳ

ಕೇಳಿದೈ ಕುಶ ನಿಮ್ಮ ರಘುಭೂ । ಪಾಲಕನ ಸಡಗರದ ಸಮರ ಸ
ಲೀಲೆಯನು ರಣಕೇಳಿಯನು ಲಂಕಾಪುರಾಧಿಪನ
ಮೇಳವಿಸಿದವು ರಥವೆರಡು ನಿ । ಸ್ಸಾಳದಬ್ಬರವಮರರಸುರರ
ಪಾಳಯದಲೊದಱಿದವು ಪರುಟವವಾಯ್ತು ಕಾಳಗದ ೧

ರಥಿಕರಿಬ್ಬರ ಬೊಬ್ಬೆ ಬಲು ಸಾ । ರಥಿಗಳಿಬ್ಬರ ಚಪ್ಪರಣೆ ಸು
ಪ್ರಥಿತಬಲರುದ್ದಂಡ ಕಾರ್ಮುಕದಂಡದಬ್ಬರಣೆ
ರಥವೆರಡಱುತ್ತಾಳ ಗಮನದ । ಪೃಥುಳ ಚೀತ್ಕೃತಿ ರಭಸ ತುಂಬಿತು
ಮಥನದಬುದಿಯ ಸಬುದಕಿಮ್ಮಿಗಿಲೆನೆ ಜಗತ್ರಯವ ೨

ಮಲೆತು ನಿಂದವು ತೇರು ತೇಜಿಯ । ಚಳಚಮತ್ಕೃತಿ ಖುರದ ಹೊಯ್ಲಿಗ
ಳೊಳಗೆ ಕಿಡಿ ಚೊಪ್ಪರಿಸಿದವು ಹಳವಿಗೆಯ ಹರಿಗಳಿಗೆ
ಕಲಹಗಳು ಕಡುಹಾಗೆ ಕದನಕೆ । ನಿಲುಕಿ ನಿಂದರು ರಾಘವನ ಮೂ
ದಲಿಸಿದನು ಮೂಲೋಕದಲ್ಲಣನುಗ್ರರೋಪದಲಿ ೩

ಸೂಚನೆ॥ ರಾಜಾಧಿರಾಜ ರಾಘವರಾಯನು ರಣರಂಗದಲ್ಲಿ ರಾಕ್ಷಸರಾಜ ರಾವಣನನ್ನು ಗೆದ್ದು ಎಲ್ಲರನ್ನೂ ಮೆಚ್ಚಿಸಿ ಸಮಸ್ತ ಲೋಕಗಳನ್ನು ರಕ್ಷಿಸಿದನು. ೧. ನಿಮ್ಮ ರಘುರಾಮನ ಸಂಭ್ರಮದ ಯುದ್ಧಲೀಲೆಯನ್ನೂ ಲಂಕೇಶ್ವರನ ಯುದ್ಧದಾಟವನ್ನೂ ಕೇಳಿದೆಯಾ ಕುಶ. ಇಬ್ಬರು ವೀರರ ರಥಗಳು ಯುದ್ಧಕ್ಕೆ ಸಿದ್ಧವಾಗಿ ಬಂದು ನಿಂತವು. ದೇವತೆಗಳ ಮತ್ತು ರಾಕ್ಷಸರ ಪಾಳಯಗಳಲ್ಲಿ ಭೇರಿಗಳು ಭೋರ್ಗರೆದವು. ರಾಮ ರಾವಣರ ನಡುವೆ ಯುದ್ಧವು ಮುನ್ನಡೆಯಿತು. ೨. ರಥವೇರಿದ ರಾಮ ರಾವಣರ ಬೊಬ್ಬೆ, ಇಬ್ಬರ ಸಾರಥಿಗಳು ಕುದುರೆಗಳ ಬೆನ್ನು ಚಪ್ಪರಿಸುವ ಶಬ್ದ, ಸುಪ್ರಸಿದ್ಧ ಪರಾಕ್ರಮಿಗಳ ಪ್ರಚಂಡಬಿಲ್ಲುಗಳ ಧನುಷ್ಟಂಕಾರದ ಶಬ್ದ, ಎರಡೂ ರಥಗಳ ವೇಗದೋಟದ ಭಾರಿ ಚೀತ್ಕಾರಶಬ್ದ—ಈ ಎಲ್ಲ ಶಬ್ದಗಳು ಸಮುದ್ರಮಥನದ ಶಬ್ದಕ್ಕೆ ಇಮ್ಮಡಿ ಎನ್ನಿಸುವಂತೆ ಮೂರುಲೋಕಗಳನ್ನೂ ತುಂಬಿದವು. ೩. ರಥಗಳು ಪ್ರತಿಭಟಿಸಿ ನಿಂತವು ; ಕುದುರೆಗಳ ಗೊರಸುಗಳ ಏಟಿಗೆ ಕಿಡಿಗಳು ಹಾರಿದವು. ಧ್ವಜದ ಕಪಿಗಳ ಮತ್ತು ಸಿಂಹಗಳ ನಡುವೆ ಕಲಹ ತೀವ್ರವಾಯಿತು. ರಾಮ ರಾವಣರು ಯುದ್ಧಕ್ಕೆ ಕಾತರರಾಗಿ ನಿಂತರು. ಮೂರು ಲೋಕಗಳನ್ನು ಅಂಜಿಸುವ ರಾವಣನು

ರಾಮ ಕೇಳಿನ್ನೇಕೆ ಸೀತೆಯು । ಕಾಮಿತವು ಕಡುಮರುಳಲಾ ಸು
ತ್ರಾಮ ಕಳುಹಿದ ತೇರ ಬಲುಹುಂಟೆಂದು ಬೆಱೆತೆಯಲ
ವ್ಯೋಮಕೇಶ ವಿರಿಂಚಿ ಮುಖ್ಯಮ । ಹಾಮಹಿಮ ಸುರಕೋಟಿಗಳು ಸಂ
ಗ್ರಾಮಕಭಿಮುಖರಾದರಣುವಿಗೆ ಬಗೆವನಲ್ಲೆಂದ ೪

ಎಲವೊ ರಾವಣ ಕೇಳು ಶಂಕರ । ಸಲಿಲಜೋದ್ಭವ ಮುಖ್ಯದಿವಿಜರ
ಬಲದ ಭಟನೇ ತಾನದಾರೆಂದಱಿದುದಿಲ್ಲವಲ
ಹಲವು ತಲೆಗಳ ಹೊತ್ತ ಕೊರಳಿನ । ಲಲಗ ಚಾಚಿದು ನಾಸಿಕಂಗಳ
ನಿಳುಹಿ ಸೀತೆಯ ತೆಗೆವ ಪರಿಯನು ನೋಡು ನೀನೆಂದ ೫

ಬಲ್ಲೆನೊಪ್ಪಚಿ ಕೇಳಿ ಹೆಂಗುಸಿ । ನಲ್ಲಿ ಮಾಡಿದ ಬಲುಹ ಹಳೆ ಹುಲು
ವಿಲ್ಲ ಮುಱಿದುದನಟ್ಟಿ ಬಡಹಾರುವನ ಬಟ್ಟೆಯಲಿ
ಬಿಲ್ಲ ಸೆಳೆದುದನನುಜ ನೂಕಲು । ಖುಲ್ಲರೊಳಗಾಡಿದುದ ಕಾಗೆಯ
ಹುಲ್ಲಿನಿಂದಂಜಿಸಿದ ಬಿರುದಿನ ಬಲುಹ ತಾನೆಂದ ೬

ಕಡುಗೋಪದಿಂದ ರಾಮನನ್ನು ಮೂದಲಿಸಿದನು. ೪. "ರಾಮ, ಕೇಳು. ನಿನಗೇಕೆ ಇನ್ನು ಸೀತೆಯ ಆಸೆ. ನಿನಗೆಲ್ಲೋ ಹುಚ್ಚು ಹಿಡಿದಿದೆ. ದೇವೇಂದ್ರನು ಕಳುಹಿಸಿದ ರಥದ ಬೆಂಬಲ ದೊರಕಿತೆಂಬ ಸೊಕ್ಕುಂಟಾಗಿದೆ ನಿನಗೆ. ಈಶ್ವರ, ಬ್ರಹ್ಮರುಗಳೇ ಮೊದಲಾದ ಮಹಾಮಹಿಮಾವಂತರಾದ ದೇವತೆಗಳು ನನ್ನ ಎದುರಿಗೆ ಯುದ್ಧಕ್ಕೆ ಬಂದರೆ ಅವರನ್ನು ಅಣುವಿಗಿಂತ ಕಡೆಯಾಗಿ ಕಾಣುವೆ ನಾನು" ಎಂದು ರಾವಣ ರಾಮನನ್ನು ಹಂಗಿಸಿದ. ೫. "ಲೋ ರಾವಣ, ಕೇಳು. ಶಿವ ಬ್ರಹ್ಮರುಗಳೇ ಮೊದಲಾದ ಮುಖ್ಯ ದೇವತೆಗಳ ಶಕ್ತಿಯ ಬೆಂಬಲದ ವೀರನೇ ನಾನು ? ನಾನು ಯಾರೆಂಬುದನ್ನು ನೀನು ಅರಿತುಕೊಳ್ಳಲಿಲ್ಲವಲ್ಲ. ಅನೇಕ ತಲೆಗಳನ್ನು ಹೊತ್ತ ನಿನ್ನ ಕೊರಳಿಗೆ ಖಡ್ಗವನ್ನು ಬೀಸಿ ಮೂಗುಗಳನ್ನು ಕತ್ತರಿಸಿ ಸೀತೆಯನ್ನು ಪಡೆಯುವ ಕ್ರಮವನ್ನು ನೀನು ನೋಡು" ಎಂದು ರಾಮ ರಾವಣನ ಮೂದಲಿಕೆಗೆ ಉತ್ತರಿಸಿದ. ೬. "ನಾನು ನಿನ್ನ ವಿಷಯವನ್ನು ಅಲ್ಪಸ್ವಲ್ಪ ಕೇಳಿಬಲ್ಲೆ. ಹೆಂಗಸಿನ (ತಾಟಕಿ) ಮೇಲೆ ಪರಾಕ್ರಮ ತೋರಿಸಿದುದನ್ನೂ, ಹಳೆಯ ಅಲ್ಪವಾದ ಬಿಲ್ಲನ್ನು ಮುರಿದುದನ್ನೂ, ಬಡಬ್ರಾಹ್ಮಣನಾದ ಪರಶುರಾಮನನ್ನು ದಾರಿಯಲ್ಲಿ ಅಡ್ಡಹಾಕಿ ಅವನ ಬಿಲ್ಲನ್ನು ಕಿತ್ತುಕೊಂಡುದನ್ನೂ, ತಮ್ಮನಾದ ಭರತನು ಕಾಡಿಗೆ ನೂಕಲು ನೀಚರೊಡನಾಡಿದುದನ್ನೂ, ಕಾಗೆಯನ್ನು ಹುಲ್ಲಿನಿಂದ ಬೆದರಿಸಿದುದನ್ನೂ—ಈ ನಿನ್ನ ಎಲ್ಲ ಪರಾಕ್ರಮದ ಬಿರುದನ್ನೂ

ಅರು ನಿನ್ನವೊಲೆಳೆಯ ಹರಿಣನ । ನಾರಚದಲೆಚ್ಚವರು ನಚ್ಚಿನ
ನಾರಿಯನು ನೀಗಾಡಿ ಪಕ್ಕಿಯ ನುಡಿಗೆ ನಡೆದಿವರ
ಸಾರಿ ಬಡಕೋಡಗನ ಕೊಂದೀ । ವೀರತನವಾರ್ಗುಂಟು ನಗರದ
ಕಾರಿಗೆಯ ಬಂಧಿಸಿದ ಬಲುಮೆಯದಾರಿಗುಂಟೆಂದ ೭

ಹಂದೆ ರಾವಣಿಯೊಬ್ಬ ನಿದ್ರೆಗೆ । ಸಂದ ಖಳನವನೊಬ್ಬ ನೆಱೆ ಕಾ
ಪಂದಿ ಮಿಕ್ಕಿನ ವೀರರವರು ಭ್ರಮಿಗಳುಳಿದವರು
ಮುಂದಱಿಯದವರಳಿದರಾ ಬಗೆ । ಯಿಂದ ನೀನುಬ್ಬಿದೆಯಲಾ ತ
ನ್ನಂದ ಬೇಱಿನುವಾಗೆನುತ ತೆಗೆದೆಚ್ಚನಸುರೇಂದ್ರ ೮

ಎಚ್ಚ ಶರವನು ಸವರಿ ಶಿವಶಿವ । ಮುಚ್ಚುಮಱೆಯೇಕಿದಕೆ ನೀ ಜಗ
ದಚ್ಚರಿಯ ಭಟನಲ್ಲವೇ ಬಲುಹೇಕಱಿದು ನಮಗೆ
ಅಚ್ಚ ಕೈಗಂಕಣಕೆ ಮಣಿಮಯ । ದಚ್ಚಗನ್ನಡಿಯೇಕೆ ನಮ್ಮಯ
ಮುಚ್ಚುಗಣೆಗಳ ಕಲಹವನು ನೀ ನೋಡು ಸಾಕೆಂದ ೯

ಅಳುಕಿದನಲಾ ಕಾರ್ತವೀರ್ಯನು । ಕಲಹದಲಿ ನಿನಗಂಜಿ ಬಾಲವ
ಬೆಳಸಲಮ್ಮದೆ ಬಾಲಿ ಬದುಕಿದನಮಮ ಪುರಹರನ
ಉಳುಹಿದೆಯಲಾ ರಜತಶೈಲದ । ತಲೆಕೆಳಗು ಮಾಡಿದೆ ವಿದೇಹನ
ಕುಲವ ಸಲಹಿದೆ ಬಿಲುದೆಗೆಯದತಿಸುಭಟನಹೆಯೆಂದ ೧೦

ಬಲ್ಲೆ ನಾನು" ಎಂದ ರಾವಣ. ೭. "ಎಳೆಯ ಜಿಂಕೆಯನ್ನು ಬಾಣದಿಂದ ಹೊಡೆದು ಕೊಂದವರು ನಿನ್ನಂತೆ ಯಾರಿದ್ದಾರೆ ? ನೆಚ್ಚಿನ ಹೆಂಡತಿಯನ್ನು ಕಳೆದುಕೊಂಡು ಹಕ್ಕಿಯ (ಜಟಾಯುವಿನ) ಮಾತನ್ನು ಕೇಳಿಕೊಂಡು ಇವರ (ಸುಗ್ರೀವಾದಿಗಳ) ಬಳಿಗೆ ಹೋಗಿ ಬಡಕೋಡಗ(ವಾಲಿ)ನನ್ನು ಕೊಂದ ಪರಾಕ್ರಮ ಯಾರಿಗುಂಟು ? ಲಂಕಾ ನಗರದ ಕಂದಕ(ಸಮುದ್ರ)ಕ್ಕೆ ಸೇತುವೆ ಕಟ್ಟಿದ ಸಾಮರ್ಥ್ಯ ಯಾರಿಗುಂಟು ?" ಎಂದು ಹಂಗಿಸಿದ ರಾವಣ. ೮. "ರಾವಣಿ(ಇಂದ್ರಜಿತು) ಒಬ್ಬ ಹೇಡಿ, ನಿದ್ದೆಯಲ್ಲಿ ಮುಳುಗಿದ ರಾಕ್ಷಸ (ಕುಂಭಕರ್ಣ) ಒಬ್ಬ. ಮಿಕ್ಕಿನ ವೀರರು ನಿಷ್ಪ್ರಯೋಜಕರು : ಉಳಿದವರು ಭ್ರಮಿಷ್ಟರು. ಮುಂದರಿಯದೆ ಅವರು ಸತ್ತರು. ಅದನ್ನು ಮನಸ್ಸಿಗೆ ತಂದುಕೊಂಡು ನೀನು ಉಬ್ಬಿಹೋಗಿದ್ದೀಯಲ್ಲವೇ ? ನನ್ನ ರೀತಿ ಬೇರೆ. ಯುದ್ಧಕ್ಕೆ ಸಿದ್ಧವಾಗು" ಎಂದು ರಾವಣ ಬಾಣಬಿಟ್ಟನು. ೯. ರಾವಣನು ಬಿಟ್ಟ ಬಾಣವನ್ನು ಕತ್ತರಿಸಿದ ರಾಮನು, "ಶಿವಶಿವ, ಮುಚ್ಚುಮರೆಯೇಕೆ ಇದಕ್ಕೆ ? ನೀನು ಜಗತ್ತಿಗೆ ಬೆರಗಿನ ಭಟನಲ್ಲವೇ ? ನಮಗೆಲ್ಲಿಯದು ಸಾಮರ್ಥ್ಯ ? ಉತ್ತಮವಾದ ಕೈಕಡಗಕ್ಕೆ ರತ್ನದ ಕನ್ನಡಿ ಏತಕ್ಕೆ ? ನಮ್ಮ ಮೆಚ್ಚಿನ ಬಾಣಗಳ ಕಾಳಗವನ್ನು ನೀನು ನೋಡು, ಸಾಕು" ಎಂದ. ೧೦. 'ಕಾರ್ತವೀರ್ಯಾರ್ಜುನನು ಯುದ್ಧದಲ್ಲಿ ನಿನಗೆ ಹೆದರಿದ ! ನಿನಗೆ ಭಯಪಟ್ಟು ಕೊಂಡು ನಿನ್ನೆದುರಿಗೆ ಬಾಲಬೆಳೆಸಲಾರದೆ ಬದುಕಿಕೊಂಡನು ! ಅಬ್ಬಬ್ಬ, ನೀನು ಈಶ್ವರನನ್ನು ಉಳಿಸಿದೆಯಲ್ಲವೇ ! ಕೈಲಾಸವನ್ನು ತಲೆಕೆಳಗು ಮಾಡಿದೆ. ಬಿಲ್ಲು ತೆಗೆಯದೆ ವಿದೇಹನ ಕುಲವನ್ನು ಕಾಪಾಡಿದೆ ! ನೀನು ಭಾರಿ ವೀರನೇ ಹೌದು" ಎಂದು

ಆದಡೆಯು ತೊಡಕುವುದು ತೋಟಿಯು । ನ್ನೈದೆ ನಗೆಗೆಡೆ ನಮಗೆ ನಿನ್ನೋ
ಪಾದಿಯವರಾವಲ್ಲವಾಗಿ ದಶಾಸ್ಯ ಕೇಳೆಲವೊ
ಆದಿಯಲಿ ನೀನೆಮ್ಮ ರಘುವಂ । ಶೋದಯದ ಪಾರ್ಥಿವಕುಲೇಂದ್ರನ
ಕಾದಿ ಕೊಂದುದಱಿಂದ ಸೆಣಸಿದೆವೈಸೆ ನಾವೆಂದ ೧೧

ಅದಱಿಂ ನೀನೆಮಗುರುವಿರೋಧಾ । ಸ್ಪದನು ನಾವಾ ಬಳಿಯ ಬವರದ
ಲೊದಗಿದೆವು ನಿನ್ನೊಡನೆ ಸಮರೋದ್ಯೋಗಕೇಳಿಯಲಿ
ಇದನು ನೀ ಕೈಕೊಂಬುದೆನುತ । ಗ್ಗದ ಮಹಾಮೋಘಾಸ್ತ್ರದಲಿ ತಲೆ
ಯುದುರಲೆಚ್ಚನು ಬೊಬ್ಬಿಱಿದು ರಘುಪತಿ ದಶಾನನನ ೧೨

ದಿವಿಜರಾಯೆಂದುಬ್ಬಿದರು ರಾ । ಘವನ ಮಹಿಮೆಗೆ ಕಮಲಭವಭವ
ರವಿರಳಾನಂದೈಕಸುಖಮಯರಾದರಭ್ರದಲಿ
ಅವತರಿಸಿದವು ಮತ್ತೆ ತಲೆಗಳು । ಖವಖವಿಸುತಟ್ಟೆಯಲಿ ಕಲಿ ರಾ
ಘವಮಹೀಪತಿ ಕಂಡು ಕೈಗಲ್ಲದಲಿ ಬೆಱಗಾದ ೧೩

ಕದಬದಿಸಿದನು ಸುರಪ ತಲೆ ಮು । ತ್ತುದಿಸಿದುದ ಕಂಡಕಟ ಮುಂದಱಿ
ಯದೆ ವರೂಥವ ಕಳುಹಿ ಕೆಟ್ಟೆವು ಕಲಹಕವನಿಪನ
ತುದಿಗೆ ಗೆಲವೀ ರಾಘವಂಗಿ । ಲ್ಲದಿರೆ ಕೈಹಾರದಲಿ ನಮ್ಮನು
ಸದೆಯದಿರನೆಂದಳ್ಕಿವಾಱಿತು ಸಕಲ ಸುರನಿಕರ ೧೪

ರಾವಣನನ್ನು ರಾಮ ಹಂಗಿಸಿದನು. ೧೧. "ನಾವು ನಿನ್ನಂಥವರಲ್ಲವಾದುದರಿಂದ ನಿನು ಜತೆ ಯುದ್ಧಮಾಡುವುದು ನಮಗೆ ನಗೆಗೇಡು. ಕೇಳೋ ದಶಮುಖ, ಹಿಂದೆ ನೀನ್ನ ನಮ್ಮ ರಘುವಂಶದಲ್ಲಿ ಉದಿಸಿದ ಅನರಣ್ಯರಾಜನನ್ನು ಯುದ್ಧದಲ್ಲಿ ಕೊಂದುದರಿಂದ ನಾವು ನಿನ್ನಮೇಲೆ ಯುದ್ಧಮಾಡಬೇಕಾಗಿದೆ" ಎಂದ ರಾಮ. ೧೨. "ಮೇಲೆ ಹೇಳಿದ ಕಾರಣದಿಂದ ನೀನು ನಮ್ಮ ಕಡುವಿರೋಧಕ್ಕೊಳಗಾದೆ. ವಿರೋಧಕ್ಕೊಳಗಾದುದ ರಿಂದಲೇ ನಾವು ನಿನ್ನೊಡನೆ ಯುದ್ಧದಲ್ಲಿ ತೊಡಗಿದೆವು. ಇದನ್ನು ತೆಗೆದುಕೋ" ಎನ್ನುತ್ತ ರಾಘವನು ಗರ್ಜಿಸುತ್ತ ರಾವಣನ ತಲೆಗಳು ಉದುರುವಂತೆ ಅಮೋಘಾಸ್ತ್ರವನ್ನು ಬಿಟ್ಟನು. ೧೩. ರಾಘವನ ಮಹಿಮೆಯನ್ನು ಕಂಡು ದೇವತೆಗಳು 'ಆ' ಎಂದು ಹರ್ಷಿ ಸಿದರು ; ಬ್ರಹ್ಮ ಮಹೇಶ್ವರರು ಆನಂದಸುಖಮಗ್ನರಾದರು. ರಾವಣನ ತಲೆಗಳು ಖವಖವಿಸುತ್ತ ಪುನಃ ಮುಂಡದ ಮೇಲೆ ಹುಟ್ಟಿಕೊಂಡವು. ವೀರ ರಾಘವರಾಯನು ಇದನ್ನು ಕಂಡು ಕೆನ್ನೆಗೆ ಕೈಹಚ್ಚಿ ಬೆರಗಾದನು. ೧೪. ತಲೆಗಳು ಪುನಃ ಹುಟ್ಟಿದುದನ್ನು ಕಂಡು ದೇವೇಂದ್ರನು ಕಳವಳಗೊಂಡನು. "ಅಯ್ಯೋ ಮುಂದಾಗುವುದನ್ನು ತಿಳಿಯದೆ ರಾಮನ ಕಾಳಗಕ್ಕೆ ರಥವನ್ನು ಕಳುಹಿಸಿ ಕೆಟ್ಟೆವು. ಅಂತಿಮವಾಗಿ ರಾಮನು ಗೆಲ್ಲದೆ ಹೋದರೆ ರಾವಣನು ನಮ್ಮನ್ನು ಕತ್ತಿಯಿಂದ ಕತ್ತರಿಸಿಹಾಕದೆ ಇರಲಾರ" ಎಂದು

ಬೊಬ್ಬಿಱಿದು ತಲೆ ಮತ್ತೆ ರಾಮನ । ನಬ್ಬರಿಸಿದವು ಕೈಗಳಸ್ತ್ರವ
ನೆಬ್ಬಿಸಿದವಂಭೋಜಸಂಭೂತಾಂಡಮಂಡಲವ
ಹಬ್ಬಿಸಿದವಂಬುಗಳು ರಕ್ತಗ । ಳುಬ್ಬಿದಂಗದ ಘಾಯವಿಲ್ಲದ
ರೊಬ್ಬರಿಲ್ಲೆನೆ ಕಾಣಿಸಿತು ಕಂಗಳಿಗೆ ನಾಕಜರ ೧೫

ಎಸುಗೆ ಬಲುಹೆಲೆ ದೇವ ಧುರದಾ । ಲಸಿಕೆ ರಘುಕುಲವೀರರಲಿ ರಂ
ಜಿಸುವುದೇ ತೊಡು ಬಾಣವನು ಕಡಿ ಖಳನ ಮಸ್ತಕವ
ವಿಶಿಖವೆಡೆಯಾಡಲಿ ಕೊರಳ್ಗಳ । ಹಸರದಲಿ ಕೈಗುಂದಬೇಡೆಂ
ದೆಸಗಿ ಮಾತಳಿ ದಾಯೆನುತ ನೂಕಿದನು ತೇಜಿಗಳ ೧೬

ಮಸಗಿ ಮಾತಳಿ ನುಡಿಯೆ ಶರ ಸಂ । ಧಿಸಿದವಸುರೇಶ್ವರನ ಕೊರಳಿನ
ಸಸಿನದಲಿ ಬಳಿಕಸವು ಸಂಗರರಂಗನರ್ತನದ
ಶಶಿಮುಖಿಯ ಕರತಳದ ಕಂತುಕ । ವಿಸರವೆನೆ ಕುಣಿದಾಡುತಿರ್ದವು
ಪಶುಪತಿ ಬ್ರಹ್ಮಾಮರರು ಬೆಱಗಾಗೆ ತಲೆ ಖಳನ ೧೭

ಒಂದೆರಡು ಮೂಱಿರಡು ಮೂಱಱೊ । ಳೊಂದಿದೆರಡಾಱೇಳು ಪರಿವಿಡಿ
ಯಿಂದಲೆಂಟೊಂಬತ್ತುಱಿಣಿಕೆಯ [ಹತ್ತು ಹನ್ನೊಂದು]
ಸಂದಣಿಸಲೆಂಟೇಳುಯೋಳಱೊ । ಳೊಂದುಳಿಯಲಾಱೈದು ನಾಲ್ಕ
ಲ್ಲಿಂದ ಮೂಱಿರಡೊಂದು ಶಿರದಲಿ ಶರಕೆ ಗುಱಿಯಾದ ೧೮

ಸಮಸ್ತದೇವತೆಗಳೂ ನಡುಗಿದರು. ೧೫. ರಾವಣನ ತಲೆಗಳು ಪುನಃ ಆರ್ಭಟಿಸಿ ರಾಮನನ್ನು ಗದರಿಸಿದವು ; ಅವನ ಕೈಗಳು ಅಸ್ತ್ರಗಳನ್ನು ಹಾರಿಸಿದವು, ಬ್ರಹ್ಮಾಂಡ ಮಂಡಲವನ್ನೆಲ್ಲ ಅವನ ಬಾಣಗಳು ತುಂಬಿದವು. ವಾನರಸೈನ್ಯದಲ್ಲಿ ರಕ್ತ ಸುರಿಯುತ್ತಿರುವ ಗಾಯವಿಲ್ಲದೆ ಇರುವ ದೇಹವುಳ್ಳವನು ಒಬ್ಬನೂ ಕೂಡ ದೇವತೆಗಳ ಕಣ್ಣಿಗೆ ಬೀಳಲಿಲ್ಲ. ೧೬. ರಾವಣನ ಬಾಣಪ್ರಯೋಗವು ಬಲವಾಗಿದೆ ದೇವ. ಯುದ್ಧದಲ್ಲಿ ಆಯಾಸಗೊಳ್ಳುವುದು ರಘುಕುಲದ ವೀರರಿಗೆ ಶೋಭಿಸುವುದೆ ? ಬಾಣವನ್ನು ಹೂಡು, ಅಸುರನ ತಲೆಯನ್ನು ಕತ್ತರಿಸು. ರಾವಣನ ಕತ್ತುಗಳ ಸಾಲಿನಲ್ಲಿ ನಿನ್ನ ಬಾಣಗಳು ಓಡಾಡಲಿ, ಕೈಗುಂದಬೇಡ" ಎಂದು ಹೇಳಿ ಮಾತಲಿಯು 'ದಾ' ಎಂದು ಅದ್ದಲಿಸಿ ಕುದುರೆಗಳನ್ನು ಮುಂದಕ್ಕೆ ಬಿಟ್ಟನು. ೧೭. ಕೆರಳಿ ಮಾತಲಿಯು ನುಡಿಯಲು ರಾಮನ ಬಾಣಗಳು ರಾಕ್ಷಸೇಶ್ವರನ ಕೊರಳಿಗೆ ನೇರವಾಗಿ ತಗುಲಿದವು. ಅಸಮಾನವಾದ ರಣರಂಗದಲ್ಲಿ ನರ್ತಿಸುವ ಹೆಂಗಸಿನ ಕೈಯ ಆಟದ ಚೆಂಡುಗಳೋ ಎನ್ನುವಂತೆ ರಾವಣನ ತಲೆಗಳು ಕುಣಿದಾಡುತ್ತಿದ್ದವು. ಈ ವೈಚಿತ್ರ್ಯವನ್ನು ಕಂಡು ಮಹೇಶ್ವರ ಬ್ರಹ್ಮನೇ-ಮೊದಲಾದ ದೇವತೆಗಳು ಬೆರಗಾದರು. ೧೮. ಒಂದು, ಎರಡು, ಮೂರು, ನಾಲ್ಕು, ಐದು, ಆರು, ಏಳು, ಎಂಟು, ಒಂಬತ್ತು, ಹತ್ತು, ಹನ್ನೊಂದು ಈ ಕ್ರಮದಲ್ಲಿ ರಾವಣನ ತಲೆಗಳು ರಾಮನ ಬಾಣಗಳಿಗೆ ಗುರಿಯಾದವು. ಅದೇ ರೀತಿಯಲ್ಲಿ ಎಂಟು, ಏಳು, ಆರು, ಐದು, ನಾಲ್ಕು, ಮೂರು, ಎರಡು, ಒಂದು-ಈ ಇಳಿಕೆಯ ಕ್ರಮದಲ್ಲಿ ರಾವಣನ ತಲೆಗಳನ್ನು

ಕಡಿತವಿಕ್ಕಿದವಿನಕುಲೇಂದ್ರನ । ಕಡುನಿಶಿತ ಶರವರಿಯು ಕಂಧರ
ದಡವಿಯಲಿ ತಲೆ ಬೀಳುತಿರ್ದವು ಕೋಟಿಸಂಖ್ಯೆಯಲಿ
ಕಿಡಿವ ತಲೆ ಖದ್ಯೋತ ಸರಣಿಗೆ । ಸಿಡಿವ ತಲೆ ಮಾರ್ಗಣದ ಮುಖದಿಂ
ದುಡಿವ ತಲೆಗೆಡೆದೆಜಿಹ ಕಾಣೆನು ಕಂದ ಕೇಳೆಂದ ೧೯

ಕೋಲಮಳೆಗಜಿ°ವಸುರರಾಯನ । ತೋಳುಗಳಿಗೊಮ್ಮೊಮ್ಮೆ ಮುಂಡದ
ಮೇಳುವಗಣಿತ ತಲೆಗಡಿತಕೊಮ್ಮೊಮ್ಮೆ ಮಾರ್ಗಣವ
ಬೀಳುಗೊಡುತಿರ್ದನು ಮಹೋಗ್ರ ಕ । ರಾಳ ಮಸ್ತಕಹಸ್ತ ಚಾಪ ಶ
ರಾಳಿ ಸಹಿತುದುಭವಿಸುತಿರ್ದವು ಕಾಯದಲಿ ಖಳನ ೨೦

ಗಮನದಲಿ ಹಜಿ°ದಿಕ್ಕಿ ಪುನರಾ । ಗಮನದಲಿ ತಜಿ°ದಿಕ್ಕಿ ಬಾಣವು
ಭ್ರಮಿಸಿದವು ಕಾಣದೆ ಶಿರಃಖಂಡನವ ರಕ್ಕಸನ
ಸಮರ ಸಾಕಿನ್ನೇಕೆ ಲಂಕಾ । ರಮಣನಾಯುಷ್ಯಾವಸಾನಕೆ
ಸಮಯವಿಲ್ಲೆಂದೊದಜಿ°ದವು ಕಿವಿಯಲಿ ಕಕುತ್ಸ್ಥಜನ ೨೧

ತುಂಬಿದವು ಕಡಿದಲೆಗಳಲಿ ಕಕು । ಭಾಂಬರಾವನಿ ಚಿಗಿದು ಸಿಡಿದರು
ಣಾಂಬುವಿನಲುಜಿ° ನನೆದು ಕೆಂಪಾಯ್ತು ಬ್ರಹ್ಮಾಂಡಘಟ
ಎಂಬೆನೇನನು ಬೇಸಜಿ°ಕೆ ಬಳಿ । ಕಂಬುಗಳಿಗಂಭೋಜನೇತ್ರಂ
ಗಿಂಬುಗೊಂಡುದು ಕಾಣೆನುದಿಸುವ ತಲೆಗಳಿಗೆ ಕಡೆಯ ೨೨

ರಾಮಬಾಣವು ಕತ್ತರಿಸಿತು. ೧೯. ರವಿವಂಶದೊಡೆಯನ ಹರಿತವಾದ ಬಾಣಗಳು ತಲೆಗಳನ್ನು ಕಡಿದುಹಾಕುತ್ತಿದ್ದವು. ಶತ್ರುವಿನ ಕೊರಳಕಾಡಿನಲ್ಲಿ ಕೋಟಿಸಂಖ್ಯೆಯ ತಲೆಗಳು ಬಂದು ಬೀಳುತ್ತಿದ್ದವು. ಕೆಳಕ್ಕುರುಳುವ ತಲೆ, ಸೂರ್ಯಪಥಕ್ಕೆ ಸಿಡಿಯುವ ತಲೆ, ಬಾಣದ ಮೊನೆಯಿಂದ ತುಂಡಾಗುವ ತಲೆ ಇವುಗಳಿಗೆ ಬಿಡುವನ್ನು ಕಾಣೆ, ಕಂದ ಕುಶ ಕೇಳು – ಎಂದು ವರ್ಣಿಸಿದರು ವಾಲ್ಮೀಕಿಋಷಿಗಳು. ೨೦. ಒಂದೊಂದು ಸಲ ಬಾಣಗಳ ಮಳೆಯನ್ನು ಸುರಿಸುವ ರಾಕ್ಷಸೇಶ್ವರನ ತೋಳುಗಳನ್ನು ಕತ್ತರಿಸಲು ಮತ್ತೆ ಒಂದೊಂದು ಸಲ ರಾವಣನ ಮುಂಡದ ಮೇಲೆ ಹುಟ್ಟಿಕೊಳ್ಳುವ ಅಸಂಖ್ಯಾತ ತಲೆಗಳನ್ನು ಕತ್ತರಿಸಲು ರಾಮನು ಬಾಣಗಳನ್ನು ಕಳುಹಿಸುತ್ತಿದ್ದನು. ಮಹಾಭಯಂಕರ ತಲೆಗಳು ಮತ್ತು ಬಿಲ್ಲುಬಾಣಗಳ ಸಹಿತವಾದ ತೋಳುಗಳು ರಾವಣನ ದೇಹದಲ್ಲಿ ಚಿಗುರುತ್ತಲೇ ಇದ್ದವು. ೨೧. ರಾಮನ ಬಾಣಗಳು ಹೋಗುತ್ತ ರಾವಣನ ತಲೆಗಳನ್ನು ಕತ್ತರಿಸಿಕೊಂಡು ಹೋಗಿ ಹಿಂದಿರುಗಿ ಬರುವಾಗಲೂ ತಲೆಗಳನ್ನು ಕಡಿದು ಹಾಕಿ ಪುನಃ ಕತ್ತರಿಸಲು ರಾವಣನ ತಲೆಗಳನ್ನು ಕಾಣದೆ ಅಲೆದಾಡಿದವು. 'ಈ ಯುದ್ಧ ಸಾಕು, ಲಂಕೇಶ್ವರನ ಆಯಸ್ಸು ಅಂತ್ಯವಾಗಲು ಸಮಯವಿಲ್ಲ' ಎಂದು ಬಾಣಗಳು ರಾಮನ ಕಿವಿಯಲ್ಲಿ ಕೂಗಿ ಹೇಳಿದವು. ೨೨. ದಿಕ್ಕು, ಆಕಾಶ, ಭೂಮಿಗಳು ಕತ್ತರಿಸಿದ ತಲೆಗಳಿಂದ ತುಂಬಿಹೋದವು. ಸಿಡಿದ ರಕ್ತದಿಂದ ನೆನೆದು ಬ್ರಹ್ಮಾಂಡಮಂಡಲವು ಕೆಂಪಾಯಿತು. ಮುಂದಿನದನ್ನು ಏನೆಂದು ಹೇಳಲಿ. ಬಾಣಗಳಿಗೂ ರಾಮನಿಗೂ

ಬೊಬ್ಬಿಱಿದವರಿದಲೆಗಳಭ್ರದ । ಹಬ್ಬುಗೆಯ ಸುರಕಟಕದಲಿ ಕಡಿ
ದುಬ್ಬುದಲೆ ನುಂಗಿದವು ತರಣಿಯ ತಾರಕಾವಳಿಯ
ಎಬ್ಬಿಸಿದ ಬಲುವಲೆಗಳವು ಬಂ । ದಬ್ಬರಿಸಿದವು ಸಾಕು ಸಂಗರ
ವುಬ್ಬದಿರು ನೀನಾರು ರಣವಾರೆಂದು ರಾಘವನ ೨೩

ಐಸೆ ಮತ್ತೇನೆಂದು ರಘುಭೂ । ವೀಶ ಬಾರಿಸಿದಧಿಕಚಿಂತೆಯ
ಲಾ ಶರಾಸನಕಂಬ ಹೂಡದೆ ರಿಪುಭಟೋತ್ತಮನ
ಆಸುರದ ಮಹದುಗ್ರತಪದಾ । ಯಾಸಮುಖದಲಿ ಪಡೆದ ವರದ ವಿ
ಲಾಸಕಚ್ಚರಿವಟ್ಟು ಬೆಱಗಾಗಿರ್ದನಿದಿರಿನಲಿ ೨೪

ಘಳಿಗೆಗಳು ಪದಿನಾಱು ನಡೆದವು । ಜಲಜಸಖನಭ್ಯುದಯವಿಡಿದ
ಗ್ಗಳಿಯ ರಾಮನ ಕದನಕಾಯ್ತವಸಾನವಸುರರಿಪು
ಇಳುಹಿದನು ಕೋದಂಡವನು ರಥ । ದೊಳಗೆ ಕೇತುಸ್ತಂಭಮಧ್ಯವ
ಬಳಲಿ ನೆಮ್ಮಿದು ಕರೆದು ನುಡಿದನು ಶಕ್ರಸಾರಥಿಗೆ ೨೫

ಮುರಿದು ನೋಡಿದನಿಂದ್ರಸಾರಥಿ । ಸರಳಗಮನವ ಕಾಣದೆಲೆ ರಘು
ವರನೆ ಚಿತ್ತೈಸಹಿತವಧೆಗೇಕಕಟ ಕೃಪೆ ನಿನಗೆ
ಉರವಣಿಸುತಿವೆ ತೇಜಿಗಳು ಮುಂ । ಬರಿದು ಬರುತಿದೆ ಬಾಣತತಿ ಕೊ
ಕ್ಕರಿಸುವವನಲ್ಲಿವನು ಕೊಲೆಗೆಲೆದೇವ ಕೇಳೆಂದ ೨೬

ಬೇಸರ ಹುಟ್ಟಿತು. ಪುನಃಪುನಃ ಹುಟ್ಟುವ ರಾವಣನ ತಲೆಗಳಿಗೆ ಕೊನೆಯೇ ಇರಲಿಲ್ಲ. ೨೩. ಆಕಾಶದಲ್ಲಿ ಸೇರಿದ್ದ ದೇವತೆಗಳ ಸಮೂಹದಲ್ಲಿ ಕಡಿದ ರಾಕ್ಷಸನ ತಲೆಗಳು ಬೊಬ್ಬೆ ಹಾಕಿದವು. ಉಬ್ಬಿದ ತಲೆಗಳು ಸೂರ್ಯನನ್ನೂ ಮತ್ತು ನಕ್ಷತ್ರಗಳನ್ನೂ ನುಂಗಿದವು. ಕತ್ತರಿಸಿ ಹಾರಿಸಿದ ದೊಡ್ಡ ತಲೆಗಳು ಬಂದು, "ಯುದ್ಧ ಸಾಕು, ಉಬ್ಬಿಹೋಗಬೇಡ. ನೀನೆಲ್ಲಿ ಯುದ್ಧವೆಲ್ಲಿ" ಎಂದು ರಾಘವನನ್ನು ಅಬ್ಬರಿಸಿದವು. ೨೪. "ಆಹಾ, ಇನ್ನೇನು !" ಎಂದು ರಘುರಾಮನು ಅಧಿಕ ಚಿಂತಾಭಾರದಿಂದ ಬಿಲ್ಲಿಗೆ ಬಾಣವನ್ನು ಹೂಡದೆ ಶತ್ರು ವೀರನು ಪ್ರಚಂಡ ತಪಸ್ಸಿನಿಂದ ಕಷ್ಟಪಟ್ಟು ಪಡೆದ ವರದ ಮಹಿಮೆಯನ್ನು ಕಂಡು ಆಶ್ಚರ್ಯದಿಂದ ಬೆರಗಾದನು. ೨೫. ಸೂರ್ಯೋದಯದಿಂದ ಹದಿನಾರು ಗಳಿಗೆಗಳು ಕಳೆದವು. ಶ್ರೇಷ್ಠನಾದ ರಾಮನ ಕಾಳಗಕ್ಕೆ ಮುಕ್ತಾಯವಾಯಿತು. ರಥದೊಳಗೆ ಬಿಲ್ಲನ್ನು ಇಟ್ಟುಬಿಟ್ಟನು. ಬಳಲಿಕೆಯಿಂದ ಧ್ವಜಸ್ತಂಭವನ್ನೊರಗಿ ಇಂದ್ರನ ಸಾರಥಿ ಮಾತಲಿಯನ್ನು ಕರೆದು ಮುಂದಿನಂತೆ ನುಡಿದನು. ೨೬. ಮಾತಲಿಯು ಹಿಂದಿರುಗಿ ನೋಡಿದನು. ರಾಮನಿಂದ ಬಾಣಗಳು ಹೊರಡುತ್ತಿರುವುದನ್ನು ಕಾಣದೆ, "ರಘುವರನೆ, ಆಲಿಸು. ಶತ್ರುವನ್ನು ಕೊಲ್ಲುವಲ್ಲಿ ನಿನಗೇಕೆ ದಯೆಹುಟ್ಟಿತು. ಕುದುರೆಗಳು ಕಾತುರ ವಾಗಿವೆ. ರಾವಣನ ಬಾಣಗಳು ಮುಂದುವರಿದು ಬರುತ್ತಿವೆ. ನಿನ್ನನ್ನು ಕೊಲ್ಲಲು

ಸಾಕು ಮಾತಳಿ ಮಾತು ನಾವು ಸ । ಮಾಕಬಾಹಿರರರಿಶಿರಂಗಳ
ನೂಕಿ ಬೇಸತ್ತವು ಶರಂಗಳು ಸೋಲವೆಮಗಾಯ್ತು
ಒಕರಿಸಿದಳು ಮೃತ್ಯುವೀ ಲೋ । ಕೈಕವೀರನ ನಮಗೆ ತಾನಿ
ನ್ನೇಕೆ ಜಯದಭಿಲಾಷೆ ತಿರುಗಿಸು ತೇರ ಕೆಲಕೆಂದ ೨೭

ತೆರಳು ನೀನಿನ್ನೇನ ಮಾಡುವೆ । ಹಿರಿದು ಬಳಲಿದೆ ಸಾರಥಿತ್ವದ
ಹರಹಿನಲಿ ರಿಪುವಿಜಯ ನಿಷ್ಪತಿಗಾವಭಾಗ್ಯರಲೆ
ವರ ವಿಭೀಷಣದೇವ ಬಾ ನಮ । ಗೆರಡು ನಾಲಗೆಯಾದುದೆಮ್ಮನು
ಶರಣುವೊಕ್ಕರಿಗಾದುದಪಶಯುವೆಂದನಾ ರಾಮ ೨೮

ಶರಣುವೊಗು ನಿಮ್ಮಣ್ಣದೇವನ । ಮರಳಿ ನಮ್ಮೊಡನಾಡಿ ಕೆಡಬೇ
ಡೆರಡು ಕಡೆಯಲಿ ಕಷ್ಟತರವೆಮಗಾಯ್ತು ಲೋಕದಲಿ
ಹಿರಿದು ಬಳಲಿದೆ ಹೋಗೆನುತ ನಿಜ । ಕರವ ಮುಗಿದು ದಿನೇಂದ್ರತನುಜನ
ಕರೆದು ನುಡಿದನು ಮನದ ದುಗುಡದ ಮಧುರವಚನದಲಿ ೨೯

ವನದೊಳಾಡಿದ ಭಾಷೆ ನಮಗಿಂ । ದಿನಲಿ ನಿಲುಕಡೆಯಾಯ್ತು ಕೊಲಿಸಿದೆ
ನನುವರದೊಳಳಿಯಾಸೆಯಲಿ ನಿನ್ನಯ ಸಹೋದರನ
ಮನದೊಳೆಮ್ಮನು ಬಯ್ಯದಗ್ರಜ । ತನುಜ ಸಹಿತ ಸಮಸ್ತ ಕಪಿವಾ
ಹಿನಿ ಸಹಿತ ಕಿಷ್ಕಿಂಧೆಗಭಿಮುಖನಾಗು ಹೋಗೆಂದ ೩೦

ಇವನು ಹೇಸುವವನಲ್ಲ" ಎಂದನು. ೨೭. "ಮಾತು ಸಾಕು ಮಾತಲಿ. ನಾವು ಯುದ್ಧದಿಂದ ಹೊರಗು. ನಮ್ಮ ಬಾಣಗಳು ಶತ್ರುವಿನ ತಲೆಗಳನ್ನು ಕತ್ತರಿಸಿ ಕತ್ತರಿಸಿ ಬೇಸತ್ತವು. ನಮಗೆ ಸೋಲು ಸಂಭವಿಸಿತು. ಮೃತ್ಯುವು ಈ ಲೋಕೈಕವೀರನನ್ನು ಹೇಸಿ ಬಿಟ್ಟುಹೋಯಿತು. ಇನ್ನು ವಿಜಯದಾಸೆಯೇಕೆ. ರಥವನ್ನು ಪಕ್ಕಕ್ಕೆ ತಿರುಗಿಸು" ಎಂದ ರಾಮ. ೨೮. "ಹೋಗು, ನೀನು ಇನ್ನೇನು ತಾನೆ ಮಾಡಬಲ್ಲೆ. ಸಾರಥಿಯ ಕೆಲಸದಲ್ಲಿ ತುಂಬ ಬಳಲಿದ್ದೀಯೆ. ಶತ್ರುವಿಜಯವನ್ನು ತಪ್ಪಿಸಲು ಆಗದ ದುರದೃಷ್ಟಶಾಲಿಗಳು ನಾವು. ವಿಭೀಷಣದೇವ, ಇಲ್ಲಿ ಬಾ. ನಮಗೆ ಎರಡು ನಾಲಗೆಯಾಯಿತು. ನಮ್ಮನ್ನು ಶರಣುಹೊಕ್ಕವರಿಗೆ ಅಪಕೀರ್ತಿಯಾಯಿತು" ಎಂದ ರಾಮ. ೨೯. "ನಿಮ್ಮಣ್ಣನನ್ನು ಮರೆಹೊಗು. ಪುನಃ ನಮ್ಮ ಸಹವಾಸಮಾಡಿ ಎರಡೂ ಕಡೆ ಕೆಡಬೇಡ. ಲೋಕದಲ್ಲಿ ನಮಗೆ ಬಹಳ ಕಷ್ಟವಾಯಿತು. ತುಂಬ ಆಯಾಸಪಟ್ಟಿದ್ದೀಯೆ ಹೋಗು" ಎಂದು ಹೇಳಿ ವಿಭೀಷಣನಿಗೆ ಕೈಮುಗಿದನು ರಾಮ. ಬಳಿಕ ಸುಗ್ರೀವನನ್ನು ಕರೆದು ಮಧುರವಾದ ಮಾತುಗಳಿಂದ ಮನಸ್ಸಿನ ದುಃಖವನ್ನು ತೋಡಿಕೊಂಡನು. ೩೦. "ಅಂದು ಕಾಡಿನಲ್ಲಿ ನಾವು ಕೊಟ್ಟ ಮಾತು ಇಂದಿಗೆ ಮುಗಿಯಿತು. ಅಲ್ಪವಾದ ಆಸೆಗಾಗಿ ನಿನ್ನ ಸಹೋದರನನ್ನು ಕೊಲ್ಲಿಸಿದೆ. ನಮ್ಮನ್ನು ಬಯ್ಯದೆ ನಿಮ್ಮಣ್ಣನ ಮಗನನ್ನು ಕರೆದುಕೊಂಡು ಸಮಸ್ತ

ಸೇವೆಯಲಿ ನಿನ್ನಿಂದ ಬಿಟ್ಟಿ । ನ್ನಾವನೈ ಹನುಮಂತ ಮಂತ್ರಿಕ
ಲಾವಿಶೇಷಜ್ಞರಲಿ ಜಗದೊಳಗಾರು ಸರಿ ನಿನಗೆ
ಭಾವಿಸಿದಿರೇ ಜಾಂಬವರೆ ಸ । ದ್ಭಾವದಲಿ ನೀವುತ್ತರಾಯಿಗ
ಳಾವು ದೈವವಿಹೀನರಾದೆವು ತೆರಳಿ ನೀವೆಂದ ೩೧

ತಮ್ಮ ಬಾ ಜಗವಱಿಯಲೂಣಯು । ನೆಮ್ಮಿತಮ್ಮನದಾವ ಮೋಱೆಯು
ಲಿಮ್ಮ ಮಾತೃತ್ರಯದ ಮುಸುಡನು ಗುರುಗಳಾನನವ
ತಮ್ಮದಿರ ವದನವನು ಕಾಬೆನು । ತಮ್ಮ ಕೇಳೈ ತೆರಳು ನೀನಿ
ನ್ನೆಮ್ಮೊಡನೆ ಬಳಲಿಕೆಯ ಬಳಸದೆ ಪುರಕೆ ತೆರಳೆಂದ ೩೨

ಸೀತೆಯನು ಹೋಗಾಡಿ ನೃಪನ । ಜ್ಞಾತವಾದನು ಕಾಣೆನೆಂಬೀ
ಮಾತ ಹೇಳಿದು ಕೂಡಿಕೊಂಡಿಹುದಗ್ರಜಾನುಜರ
ತಾತ ಹೋಗೆನ್ನಯ್ಯ ತನ್ನೊಳು । ಮಾತನಾಡದೆ ತೆರಳೆನಲು ಸುರ
ಸೂತ ನಗುತಿಂತೆಂದನಸುರಾರಾತಿಗುಚಿತದಲಿ ೩೩

ದೇವ ನೀನೀತಗಳೊಡನೆ ಮಾ । ಯಾವಿಲಾಸೋಕ್ತಿಗಳ ನುಡಿವೀ
ಭಾವಕವು ತನ್ನೊಡನೆ ಕೊಳ್ಳದು ಕಪಟವೇಕಿನ್ನು
ಆ ವಿರಿಂಚಿಪ್ರಮುಖ ಸಕಲ ಸು । ರಾವಳಿಗಳೊಡಗೂಡಿ ಪೌಲೋ
ಮೀವರನು ಬಿನ್ನೈಸಿದುದನಾನಱಿಯೆನೇಯೆಂದ ೩೪

ಕಪಿಸೈನ್ಯದೊಡನೆ ಕಿಷ್ಕಿಂಧೆಗೆ ತಿರುಗಿ, ಹೋಗು" ಎಂದ. ೩೧. ಸೇವೆಯಲ್ಲಿ ನಿನಗಿಂತ ಹೆಚ್ಚಿನವನು ಯಾರಪ್ಪ, ಹನುಮಂತ ? ಉತ್ತಮ ಆಲೋಚನೆಗಳನ್ನು ಸಲಹೆ ಮಾಡುವ ತಿಳುವಳಿಕಸ್ಥರಲ್ಲಿ ನಿನಗೆ ಯಾರು ಸರಿ ? ನೋಡಿದಿರಾ ಜಾಂಬವರೇ ? ಸದ್ಭಾವನೆಗೆ ನೀವು ಹಕ್ಕುದಾರರು, ನಾವು ದೈವಹೀನರಾದೆವು. ನೀವು ಹೊರಡಿ" ಎಂದ ರಾಮ. ೩೨. "ತಮ್ಮ, ಬಾ. ನಮ್ಮ ಕೊರತೆಯು ಜಗತ್ತಿಗೆಲ್ಲ ತಿಳಿದು ಹೋಯಿತು. ಯಾವ ಮುಖ ಹೊತ್ತುಕೊಂಡು ನಮ್ಮ ಮೂರು ಜನ ತಾಯಂದಿರ, ಗುರುಗಳ ಮತ್ತು ತಮ್ಮಂದಿರ ಮುಖವನ್ನು ನೋಡಲಿ. ತಮ್ಮ, ನಮ್ಮ ಜತೆಯಲ್ಲಿದ್ದು ಕೊಂಡು ಕಷ್ಟಪಡದೆ ಅಯೋಧ್ಯೆಗೆ ಹೋಗು" ಎಂದ. ೩೩. "ಸೀತೆಯನ್ನು ನೀಗಿ ಕೊಂಡು ರಾಮನು ಎಲ್ಲಿಗೋ ಕಾಣದಂತೆ ಹೊರಟುಹೋದನು ಎಂಬ ಮಾತನ್ನು ಹೇಳಿ ನಿನ್ನ ಅಣ್ಣತಮ್ಮಂದಿರನ್ನು ಕೂಡಿಕೊಂಡಿರು ಹೋಗಪ್ಪ, ನನ್ನಯ್ಯ. ನನ್ನ ಜತೆ ಮಾತನಾಡದೆ ಹೊರಡು" ಎಂದು ರಾಮನು ಹೇಳಲು ಮಾತಲಿಯು ನಗುತ್ತ ರಾಮ ನನ್ನು ಕುರಿತು ಉಚಿತವಾದ ಮಾತುಗಳನ್ನಾಡಿದನು. ೩೪. "ಸ್ವಾಮಿ, ನೀವು ಇವರುಗಳೊಡನೆ ಮಾಯಾವಿಲಾಸದ ಮಾತುಗಳನ್ನಾಡುವ ಪಾಂಡಿತ್ಯವು ನನ್ನಲ್ಲಿ ನಡೆ ಯದು, ಇದರಲ್ಲಿ ವಂಚನೆಯೇಕೆ. ಹಿಂದೆ ಆ ಬ್ರಹ್ಮನೇ ಮೊದಲಾದ ಸಮಸ್ತ ದೇವತೆ ಗಳ ಜತೆಗೂಡಿ ದೇವೇಂದ್ರನು ನಿಮ್ಮ ಬಳಿ ಬಂದು ವಿಜ್ಞಾಪಿಸಿಕೊಂಡುದು ನನಗೆ ತಿಳಿ

ಹೊಸಬ ನೀನಿವರ್ಗಳಿಗೆ ದಿಟ ನೀ । ಹೊಸಬನೇ ತನಗಿನಿತು ಮಿಗೆ ಮಾ
ನುಷಚರಿತ್ರ ವಿಧಾತೃಪಿತನೆಂದರಿಯೆನೇ ತಾನು
ಬಿಸುಟ ಚಾಪವ ತಳೆದುಕೋ ಸಂ । ಧಿಸು ಶರಾಳಿಯನಿನಿತರೊಳಗೀ
ಯಸುರನುಳಿದರೆ ಹೊಗುವೆನಗ್ನಿಯನೆಂದು ಗರ್ಜಿಸಿದ ೩೫

ಮರುಳಲಾ ಸುರಸೂತ ವಾಣೀ । ಶ್ವರನ ಪಿತ ತಾನಾದಡಿವನೀ
ಪರಿಯ ಜೀವಿಸುವನೆ ವಿವೇಕವಿಚಾರವಿನಿತಿಲ್ಲ
ನರರು ನಾವ್ ಸಾಕಿನ್ನು ನಮ್ಮನು । ಹಿರಿದು ಹೊಗಳಲು ಬೇಡವೆನುತೂ
ರ್ವರೆಗೆ ದುಮ್ಮಿಕ್ಕಿದನು ದುಗುಡವ ಹಿಡಿಯಲಖಿಳಜನ ೩೬

ಮನದೊಳಂಜದಿರೆಲೆ ರಘುಕ್ಷಿತಿ । ಜನಪ ತೊಡೆನಸ್ತ್ರವನು ಬಾಣಾ
ಸನ ಮಹಾಸ್ತ್ರ ವಿಮುಕ್ತಹಸ್ತರ ಕೂಡೆ ನಿನ್ನವರ
ಅನುವರವನನುಸರಿಸು ಬಳಿಕ । ಮ್ಮನುವರಕೆ ಕಲಿಯಾಗಿ ನಿಲು ನಿಲು
ವೆನು ಸುರಾವಳಿ ಮೆಚ್ಚಿ ನಿನ್ನೊಡನೆಂದನಸುರೇಂದ್ರ ೩೭

ಇಳಿಗೆ ರಥದಿಂದಿಳಿದ ರಘುಕುಲ । ತಿಲಕನನು ಕಾಣುತ್ತ ದಿವದಿಂ
ದಿಳಿದನಾ ಸಮಯದಲಿ ಸರಸಿಜಭವನನುಜ್ಞೆಯಲಿ
ಕಳಶಭವನಾ ಮನುಕುಲೇಂದ್ರನ । ಬಳಿಗೆ ನರನಾಟಕದ ನಟಣೆಯ
ಕೆಲಸ ಕರ ಲೇಸಾಯಿತೆಂದನು ಮಂದಹಾಸದಲಿ ೩೮

ಯದೇ ? ೩೫. "ನೀನು ಇವರುಗಳಿಗೆ ಹೊಸಬ ನಿಜ, ಆದರೆ ನನಗೆ ಹೊಸಬನೇ? ನೀನು ಮಾನವನಾಗಿ ಅವತರಿಸಿದ ಬ್ರಹ್ಮನ ಜನಕನೆಂದು ನಾನು ತಿಳಿಯೆನೇ ? ಬಿಸಾಡಿದ ಬಿಲ್ಲನ್ನು ಕೈಗೆ ತೆಗೆದುಕೋ : ಬಾಣಗಳನ್ನು ಹೂಡು. ಅಷ್ಟಾಗಿಯೂ ಈ ರಾಕ್ಷಸನು ಉಳಿದುಕೊಂಡರೆ ನಾನು ಅಗ್ನಿಪ್ರವೇಶ ಮಾಡುವೆ" ಎಂದು ಮಾತಲಿ ಅಬ್ಬರಿಸಿ ನುಡಿದ. ೩೬. "ದೇವೇಂದ್ರ ಸಾರಥಿ. ನಿನಗೆಲ್ಲೋ ಭ್ರಾಂತು. ನಾವು ಬ್ರಹ್ಮನ ತಂದೆ ಯಾದರೆ ಇವನು ಈ ರೀತಿ ಬದುಕಿರುತ್ತಿದ್ದನೆ. ನಿನ್ನ ಮಾತು ವಿವೇಕದಿಂದ ಕೂಡಿಲ್ಲ. ನಾವು ಮನುಷ್ಯರು. ಸಾಕು, ಸುಮ್ಮನೆ ನಮ್ಮನ್ನು ಅತಿಯಾಗಿ ಹೊಗಳಬೇಡ" ಎನ್ನುತ್ತ ರಾಮನು ರಥದಿಂದ ನೆಲಕ್ಕೆ ಧುಮುಕಲು ಸಮಸ್ತಜನರೂ ಖಿನ್ನಮನಸ್ಕ ರಾದರು ೩೭. "ಹೆದರಬೇಡ ರಘುರಾಮ. ಬಿಲ್ಲು ಬಾಣಗಳು ಕೈಯಲ್ಲಿ ಇಲ್ಲದವರ ಮೇಲೆ ನಾನು ಅಸ್ತ್ರಪ್ರಯೋಗ ಮಾಡುವುದಿಲ್ಲ. ಮೊದಲು ನಿನ್ನ ಕಡೆಯವರ ಜತೆಯ ಜಗಳವನ್ನು ಅನುಸರಿಸು. ಅನಂತರ ನಮ್ಮೊಡನೆ ಯುದ್ಧಕ್ಕೆ ವೀರನಾಗಿ ಬಂದು ನಿಲ್ಲು. ಆಗ ದೇವತೆಗಳು ಮೆಚ್ಚುವಂತೆ ನಿನ್ನೊಡನೆ ಯುದ್ಧಕ್ಕೆ ನಿಲ್ಲುತ್ತೇನೆ" ಎಂದ ರಾವಣ. ೩೮. ರಥದಿಂದ ನೆಲದ ಮೇಲಕ್ಕಿಳಿದ ರಘುಕುಲತಿಲಕನನ್ನು ಕಾಣುತ್ತ ಬ್ರಹ್ಮನ ಅಪ್ಪಣೆ ಯಿಂದ ಅಗಸ್ತ್ಯನು ಗಗನದಿಂದ ಇಳಿದು ಮನುಕುಲೇಂದ್ರ ರಾಮನ ಬಳಿಗೆ ಬಂದನು. 'ನರನಾಟಕದ ನಟನೆಯ ಕೆಲಸ ತುಂಬ ಚೆನ್ನಾಗಿ ನಡೆದಿದೆ !' ಎಂದು ಮಂದಹಾಸ

ಬಲ್ಲೆವಾವ್ ನಿನ್ನುವನು ಸಾಕಿ । ನ್ನೆಲ್ಲಿ ಪರಿಯಂತರ ಸುರಾಳಿಯು
ನಳ್ಳಿಬಾಜಿಸಬೇಡ ಬಿಡು ನರನಾಟಕಸ್ಥಿತಿಯ
ಸಲ್ಲಲಿತ ಸಲಿಲದಲಿ ಕೋಪದ । ಪಲ್ಲವವ ತೊಳೆಯಾಗವೋಕ್ತದ
ಬಲ್ಲವಿಕೆಯಿಂದಾಚಮನವಿಧಿವಿಹಿತನಾಗೆಂದ ೩೯

ನೆನೆ ಹರಿಬ್ರಹ್ಮಾಮಹೇಶ್ವರ । ರನು ಸದಾನಂದಾತ್ಮಕನ ನೆನೆ
ನೆನೆದನಾ ತ್ರಿಗುಣಾತ್ಮಕನ ನಿಜಭಾವಶುದ್ಧಿಯಲಿ
ತನುಜ ಕೇಳಿಳಿತಂದನಾ ರವಿ । ಮನುಕುಲೇಂದ್ರನ ಬಳಿಗೆ ಕೊಟ್ಟನು
ವನಜಭವಭವ ವಿಷ್ಣುಮಂತ್ರಿತ ದಿವ್ಯ ಮಾರ್ಗಣವ ೪೦

ಸರಿದನಿನನಂಬರಕೆ ಮುನಿಪತಿ । ತಿರುಗಿದನು ದಿವದತ್ತ ದಿವಿಜೇ
ಶ್ವರನ ಸಾರಥಿ ಶಾರ್ಙ್ಗವನು ಬಳಿಕಿತ್ತನರಸಂಗೆ
ಸುರರುಘೇಯೆನೆ ದಿವ್ಯರಥಕು । ಪ್ಪರಿಸಿದನು ಚಪ್ಪರಿಸಿ ಭುಜವನು
ಹರಿಕಟಕ ಹನುಮಂತದೇವನ ಬೆರಳ ಬೊಬ್ಬೆಯಲಿ ೪೧

ಲವನೆ ಕೇಳ್ಳೈ ಬಲದ ಭುಜದಲಿ । ಭವನು ವಾಮದ ಭುಜದಲಂಬುಜ
ಭವನು ಮುಖದಲಿ ಶಿಖಿ ಕೃತಾಂತನು ಕೋಪದುಱುಬೆಯಲಿ
ಪವನನುಚ್ಛ್ವಾಸದಲಿ ಶೌರ್ಯೋ । ತ್ಸವದಲಾದ್ಯಾಶಕ್ತಿ ಮಿಕ್ಕಿನ
ದಿವಿಜರಂಗೋಪಾಂಗದಲಿ ನೆಲಸಿದರು ರಾಘವನ ೪೨

ಬೀರುತ್ತ ಅಗಸ್ತ್ಯನು ನುಡಿದನು. ೩೯. "ನಾವು ನಿನ್ನನ್ನು ಬಲ್ಲೆವು ; ಸಾಕು, ಈ ನಟನೆ ಇನ್ನು ಎಲ್ಲಿಯವರೆಗೆ ? ದೇವತೆಗಳನ್ನು ನಡುಗುವಂತೆ ಮಾಡಬೇಡ. ಈ ನರಲೀಲಾ ವಿನೋದವನ್ನು ನಿಲ್ಲಿಸು. ಪರಿಶುದ್ಧವಾದ ನೀರಿನಿಂದ ಕೋಪವೆಂಬ ಪಾದಪಲ್ಲವವನ್ನು ತೊಳೆದುಕೋ. ಶಾಸ್ತ್ರೋಕ್ತವಾದ ತಿಳಿವಳಿಕೆಯಿಂದ ಆಚಮನವನ್ನು ಮಾಡಿ ಸಿದ್ಧನಾಗು" ಎಂದ ಅಗಸ್ತ್ಯ. ೪೦. ಬ್ರಹ್ಮ ವಿಷ್ಣು ಮಹೇಶ್ವರಸ್ವರೂಪನಾದ ಸದಾನಂದ ರೂಪಿಯನ್ನು ಸ್ಮರಿಸು' ಎನ್ನಲು ರಾಮನು ತ್ರಿಗುಣಾತ್ಮಕನನ್ನು ಪರಿಶುದ್ಧಭಾವದಿಂದ ಸ್ಮರಿಸಿಕೊಂಡನು. ಕುಶನೇ ಕೇಳು, ಆಗ ಸೂರ್ಯನು ಮನುವಂಶದೊಡೆಯನ ಬಳಿಗೆ ಇಳಿದುಬಂದು ಬ್ರಹ್ಮವಿಷ್ಣುಮಹೇಶ್ವರ ಮಂತ್ರದಿಂದ ಮಂತ್ರಿಸಿದ ದಿವ್ಯಾಸ್ತ್ರವನ್ನು ಕೊಟ್ಟನು. ೪೧. ಸೂರ್ಯನು ಅಸ್ತ್ರವನ್ನು ಕೊಟ್ಟ ಬಳಿಕ ಗಗನಕ್ಕೆ ಹಿಂದಿರುಗಿದನು. ಅಗಸ್ತ್ಯಮುನಿಯು ಆಕಾಶದ ಕಡೆಗೆ ತಿರುಗಿಹೊರಟನು. ದೇವೇಂದ್ರನ ಸಾರಥಿ ಮಾತಲಿಯು ರಾಮನಿಗೆ ಶಾರ್ಙ್ಗವೆಂಬ ದಿವ್ಯಧನುಸ್ಸನ್ನು ಕೊಟ್ಟನು. ದೇವತೆಗಳು 'ಉಘೇ' ಎನ್ನುತ್ತಿರಲು ವಾನರಸೈನ್ಯದೊಡನೆ ಹನುಮಂತನು ಚಪ್ಪಾಳೆಹೊಡೆಯಲು ರಾಮನು ಭುಜವನ್ನಪ್ಪಳಿಸಿ ದಿವ್ಯರಥದ ಮೇಲಕ್ಕೆ ನೆಗೆದನು. ೪೨. ಲವನೆ ಕೇಳು, ರಾಘವನ ಬಲಭುಜದಲ್ಲಿ ಈಶ್ವರ, ಎಡಭುಜದಲ್ಲಿ ಬ್ರಹ್ಮ, ಮುಖದಲ್ಲಿ ಅಗ್ನಿ, ಕೋಪದ ರಭಸದಲ್ಲಿ ಯಮ, ಉಚ್ಛ್ವಾಸದಲ್ಲಿ ವಾಯು, ಶೌರ್ಯೋತ್ಸಾಹದಲ್ಲಿ ಆದಿಶಕ್ತಿ, ಉಳಿದ

ಬಳಿಕ ಶಾರ್ಙ್ಗಮಹಾಧನುವನು । ಜ್ವಲಿತ ಮೌರ್ವಿಯ ನೀವಿ ಬೆರಳಲಿ
ಲುಳಿವಡದು ಬರಸೆಳೆದು ಹೂಡಿದನಾ ಮಹಾಶರವ
ಅಲಗಿನಲಿ ಲಯರುದ್ರನಂಬಿನ । ವಳಯದಲಿ ಪರಮೇಷ್ಠಿ ಬಾಣದ
ಹಿಳುಕಿನಲಿ ಹರಿಗರಿಯಲೆಸೆದರು ಯಮ ಸಮೀರಣರು ೪೩

ವಿಶ್ವತೋಮುಖನಾದನಮಲ ಸು । ವಿಶ್ವಲೋಚನನಾದನಗ್ಗದ
ವಿಶ್ವತೋಭುಜನಾದನೀಕ್ಷಿಸಿ ನೋಡಲಿದಿರಿನಲಿ
ವಿಶ್ವತಕ್ರಮನಾದನಾದನು । ವಿಶ್ವಮೂರುತಿ ಗಗನ ಶಿಖಿ ಪೃಷ
ದಶ್ವಜಲ ತತ್ವಾತ್ಮನಾಗಿರೆ ಕಂಡನಸುರೇಂದ್ರ ೪೪

ಕಮಲಭವಕೋಟಿಗಳು ಗಿರಿಜಾ । ರಮಣಕೋಟಿಗಳಿನ ಸುರೇಶ್ವರ
ಯಮ ಹುತಾಶನ ವರುಣ ವಾಯು ಕುಬೇರಕೋಟಿಗಳು
ಹಿಮಕಿರಣಕೋಟಿಗಳು ನಿಗಮಾ । ಗಮನಿಕರಕೋಟಿಗಳು ದೇವೋ
ತ್ತಮನ ಸಿರಿಯಂಗದಲಿ ನೆಲಸಿರೆ ಕಂಡನಸುರೇಂದ್ರ ೪೫

ಲೋಕಗಳು ಜನಪದ ಸುರೌಘಾ । ನೀಕಗಳು ಗಿರಿ ತರು ಸಮುದ್ರವ
ನೇಕ ವಿವಿಧ ದ್ವೀಪ ನಾನಾ ಜೀವರಾಶಿಗಳು
ಸೋಕಿಕೊಂಡಿರ್ದಮಲ ಪರಿಪೂ । ರ್ಣಾಕಲಿತ ಪರದೇವತೆಯ ಮಾ
ಯಾಕೃತಿಯ ವಿಗ್ರಹವನಿದಿರಲಿ ಕಂಡನಸುರೇಂದ್ರ ೪೬

ದೇವತೆಗಳು ರಾಮನ ಅಂಗೋಪಾಂಗಗಳಲ್ಲಿ ನೆಲಸಿದರು. ೪೩. ಅನಂತರ ರಾಮನು ಶಾರ್ಙ್ಗವೆಂಬ ಧನುಸ್ಸನ್ನು ತೆಗೆದುಕೊಂಡು ಅದರ ಪ್ರಜ್ವಲಿಸುವ ಹಗ್ಗವನ್ನು ನೀವಿ ಚುರುಕಿನಿಂದ ಬಾಣವನ್ನು ಬೆರಳಿನಲ್ಲಿ ಹಿಡಿದೆಳೆದು ದಿವ್ಯಾಸ್ತ್ರವನ್ನು ಹೂಡಿದನು. ಆ ಮಹಾಸ್ತ್ರದ ಅಲಗಿನಲ್ಲಿ ಪ್ರಳಯರುದ್ರ, ನಡುವಿನಲ್ಲಿ ಬ್ರಹ್ಮ, ಬಾಣದ ಬುಡದಲ್ಲಿ ವಿಷ್ಣು, ಗರಿಯಲ್ಲಿ ಯಮ ಮತ್ತು ವಾಯುಗಳು ನೆಲಸಿದರು. ೪೪. ಎದುರುಗಡೆ ಯಿಂದ ನೋಡಲು ರಾಮನು ಎಲ್ಲಕಡೆಗಳಲ್ಲೂ ಮುಖ, ಕಣ್ಣು, ಭುಜ, ಪಾದಗಳುಳ್ಳವ ನಾಗಿ ವಿಶ್ವತೋಮುಖ, ವಿಶ್ವಲೋಚನ, ವಿಶ್ವತೋಭುಜ ವಿಶ್ವತೋಪಾದನಾಗಿ ತೋರಿ ದನು. ವಿಶ್ವಮೂರ್ತಿಯಾಗಿ ಭೂಮಿ, ನೀರು, ಅಗ್ನಿ, ವಾಯು, ಆಕಾಶಗಳೆಂಬ ಪಂಚ ಭೂತಾತ್ಮಕನಾಗಿ ರಾವಣನಿಗೆ ಗೋಚರಿಸಿದನು. ೪೫. ಕೋಟಿ ಬ್ರಹ್ಮರು, ಕೋಟಿ ಮಹೇಶ್ವರರು, ಕೋಟಿ ಸೂರ್ಯರು, ಕೋಟಿಕೋಟಿ ಇಂದ್ರ, ಯಮ, ಅಗ್ನಿ, ವರುಣ, ವಾಯು, ಕುಬೇರರು, ಕೋಟಿ ಚಂದ್ರರು, ಕೋಟಿ ವೇದಶಾಸ್ತ್ರಗಳು ದೇವೋತ್ತಮನ ಸಂಪದ್ಯುಕ್ತವಾದ ಶರೀರದಲ್ಲಿ ನೆಲಸಿರುವುದನ್ನು ರಾವಣನು ಕಂಡನು. ೪೬. ಲೋಕ ಗಳು, ದೇಶಗಳು, ದೇವಗಣಗಳು, ಬೆಟ್ಟ, ಮರ, ಸಮುದ್ರ, ವಿವಿಧ ದ್ವೀಪಗಳು, ನಾನಾ ಜೀವರಾಶಿಗಳು ಸೋಕಿಕೊಂಡಿದ್ದ ಪರಿಶುದ್ಧ ಪರಿಪೂರ್ಣನಾದ ಉತ್ತಮೋತ್ತಮ ದೇವನ ಮಾಯೆಯ ಮಾನವರೂಪದ ದೇಹವನ್ನು ರಾವಣನು ತನ್ನ ಕಣ್ಣೆದುರಿಗೆ

ಷಡುವಿಕಾರವಿಹೀನನನು ಸಲೆ । ಷಡುವಿವರ್ಗನಿತಾಂತನನು ನಡು
ಕಡೆಗಳಿಲ್ಲದ ಜನನ ಮರಣಾದಿಗಳು ಸಂಧಿಸದ
ನುಡಿಗೆ ನಿಲ್ಲದ ನಿಗಮ ನಿಕರಗ । ಳೆಡಹಿ ಕಾಣದ ತತ್ವಮಯದು
ಗ್ಗಡದ ದೈವವ ಕಂಡನಿದಿರಿನಲಾ ದಶಗ್ರೀವ ೪೭

ಸುಖಮಯನ ಚಿನ್ಮಯನ ಬರ್ಹಿ । ರ್ಮುಖ ಕಿರೀಟಮಣಿಪ್ರಭಾಂಚಿತ
ನಖನ ಪರಮೇಶನ ಪರಾಪರಪರಪರಾತ್ಪರನ
ಶಿಖಿ ಸುಧಾಕರ ಸಲಿಲಸಂಭವ । ಸಖಿಮಯೂಖ ಸಹಸ್ರತೇಜೋ
ಮುಖನ ರಘುರಾಜೇಂದ್ರಚಂದ್ರನ ಕಂಡನಸುರೇಂದ್ರ ೪೮

ನಿರುಪಮನ ನಿರ್ಮತ್ಸರನ ನಿ । ರ್ಮರಣನನು ನಿಶ್ಚಿಂತನನು ನಿ
ರ್ಧರಿಸಬಾರದ ನಿಗಮತತ್ತ್ವರಹಸ್ಯಪಂಡಿತನ
ನಿರತಿಶಯನ ನಿಜೋನ್ನತೋನ್ನತ । ಭರಿತ ಬಹಳಬ್ರಹ್ಮಮಯನೀ
ಶ್ವರ ಘನಸ್ವಾತಂತ್ರ್ಯದೈವವ ಕಂಡನಸುರೇಂದ್ರ ೪೯

ಈತನೀಗಲಿ ಜನನ ಮರಣಾ । ತೀತ ಮಾಯಾಮಹಿಮ ಸಗುಣ ಸ
ನಾತನನು ಸಂದೇಹ ತಾನಿನ್ನೇಕೆ ಪೂರ್ವದಲಿ
ಈತನೊಡನೆ ವಿರೋಧವೆಮಗಭಿ । ಜಾತವಾದುದು ಜನ್ಮ ಮೂಱಱೊ
ಳೀತಕಂಜಕೆ ಮುಂದೆ ಮುಕ್ತಿಯ ಸೂಱೆ ತನಗೆಂದ ೫೦

ಕಂಡನು. ೪೭. ಆರು ಭಾವಗಳ ವಿಕಾರಗಳಿಲ್ಲದ, ಕಾಮಕ್ರೋಧಾದಿ ಅರಿಷಡ್ವರ್ಗಗಳಿಲ್ಲದ, ಮಧ್ಯ ಅಂತ್ಯಗಳಿಲ್ಲದ, ಹುಟ್ಟುಸಾವುಗಳು ಸಂಭವಿಸದ, ಮಾತಿಗೆ ಎಟುಕದ, ವೇದಗಳು ಎಡವಿಯೂ ಕಾಣದ, ತತ್ವಾತ್ಮಕನಾದ ಅತಿಶಯದ ಪರಮಾತ್ಮನನ್ನು ತನ್ನ ಎದುರಿನಲ್ಲಿ ರಾವಣನು ಕಂಡನು. ೪೮. ಸುಖಮಯನೂ, ಶುದ್ಧಜ್ಞಾನ ಸ್ವರೂಪಿಯೂ, ದೇವತೆಗಳ ತಲೆಯಮೇಲಿನ ಕಿರೀಟರತ್ನಗಳ ಕಾಂತಿಯಿಂದ ಹೊಳೆಯುವ ಪಾದದ ಉಗುರುಗಳುಳ್ಳವನೂ ಆದ ಪರಮಪ್ರಭು, ಶ್ರೇಷ್ಠಕ್ಕೆಶ್ರೇಷ್ಠ, ತನಗಿಂತ ಉನ್ನತವಾದುದು ಬೇರೊಂದಿಲ್ಲದ, ಸಾವಿರ ಅಗ್ನಿಚಂದ್ರಸೂರ್ಯರುಗಳ ಕಿರಣಗಳನ್ನು ಮೀರಿದ ತೇಜಸ್ಸಿನಿಂದ ಹೊಳೆಯುವ ಮುಖದ ರಘುರಾಜೇಂದ್ರಚಂದ್ರನನ್ನು ರಾಕ್ಷಸೇಶ್ವರನು ಕಂಡನು. ೪೯. ಹೋಲಿಕೆಗೆ ಸಿಗದ ದ್ವೇಷರಹಿತನನ್ನು, ಸಾವಿಲ್ಲದ ನಿಶ್ಚಿಂತನನ್ನು, ಸಾಮಾನ್ಯರು ನಿರ್ಧರಿಸಲಾಗದ ರಹಸ್ಯ ವೇದತತ್ವಗಳ ಜ್ಞಾನಿಯನ್ನು, ಅತಿಶಯವಿಲ್ಲದ ಆದರೆ ಉತ್ತಮಕ್ಕಿಂತಲೂ ಉತ್ತಮನಾದ ಬ್ರಹ್ಮಮಯನೂ ಈಶ್ವರನೂ ಆಗಿ ಸ್ವತಂತ್ರನಾಗಿರುವ ದೇವರನ್ನು ರಾವಣನು ಕಂಡನು. ೫೦. "ಈತನಾದರೋ ಹುಟ್ಟುಸಾವುಗಳನ್ನು ಮೀರಿದವನು, ಮಾಯಾಮಹಿಮನು, ಉತ್ತಮ ಗುಣಗಳುಳ್ಳವನು, ಪುರಾತನಪುರುಷನು. ಇನ್ನೇತಕ್ಕೆ ಸಂದೇಹ. ಹಿಂದೆ ಈತನೊಡನೆ ನಮಗೆ ವಿರೋಧವುಂಟಾಗಿ ಮೂರುಜನ್ಮಗಳನ್ನು ಕಳೆಯಬೇಕಾಗಿ ಬಂದಿತು. ಇನ್ನೇತಕ್ಕೆ ಹೆದರಿಕೆ.

ಘೋರತರ ನಾನಾ ಮುಖಂಗಳ । ನೈರಣೆಯ ಯೋನಿಗಳಲುದಿಸಿದು
ತೀರದಿಹ ಭವಭವದ ದುಃಖ ಪರಂಪರಾವೃತದ
ಪಾರವಿಲ್ಲದ ಕಷ್ಟತರ ಸಂ । ಸಾರಶರಧಿಯ ದಾಂಟಿಸುವ ಘನ
ತಾರಕಬ್ರಹ್ಮವನು ಮನದಲಿ ನೆನೆದನಸುರೇಂದ್ರ ೫೧

ತಾನದೆತ್ತಲು ಜನಕತನುಜಾ । ಮಾನಿನಿಯದೆತ್ತಲು ಚತುರ್ಮುಖ
ಸೂನು ಸನಕಾದಿಗಳನುಜ್ಞೆಯು ಫಲವಿದೀಗವಲ
ಶ್ರೀ ನೃಸಿಂಹ ನೃಸಿಂಹಮಾಯಾ । ಮಾನುಷವ್ಯಾಪಾರಸಾರ ಕೃ
ಪಾನಿಧಿಯೆ ಶರಣೆನುತ ಬಿಲುದನಿದೋಱಿ ಬೊಬ್ಬಿಱಿದ ೫೨

ನೋಡಿದನು ರಾವಣನನುಚಿತವ । ಕೂಡಿಕೊಂಡು ನಯೋಕ್ತಿಯಲಿ ಮಾ
ತಾಡಿದನು ಕೇಳೆಲೆ ದಶಾನನ ಮೂಱು ಲೋಕದಲಿ
ರೂಢಿಸಿದ ಭಟ ನೀನು ಕಾಮುಕ । ರಾಡಿಕೆಯು ಬಿಡು ನಿನ್ನ ತಮ್ಮನ
ಕೂಡಿ ಬದುಕಭಯವುಪ್ರದವು ನಿನಗೆಂದನಾ ರಾಮ ೫೩

ಕೊಡೆಯ ಕಡಿದಂದೊಮ್ಮೆ ನಾಚಿಕೆ । ಗೆಡಿಸಿದಾಜಿಯಲೊಮ್ಮೆ ನಗರವ
ಕೆಡೆಯಲೆಚ್ಚಂದೊಮ್ಮೆ ಕಾಯ್ದೆನು ಮೂಱು ಬಾರಿಯಲಿ
ಪೊಡವಿ ಮೆಚ್ಚಲು ನಮ್ಮ ಶರಣನ । ಬಿಡೆಯಕೋಸುಗ ಛಲದ ಬಲುಹನು
ಬಿಡು ವೃಥಾ ಯಮನಾಕರಣೆಗೊಳಗಾಗಬೇಡೆಂದ ೫೪

ಮುಂದೆ ನನಗೆ ಮೋಕ್ಷದ ಸೂರೆ ಕಾದಿದೆ" ಎಂದು ರಾವಣ ಯೋಚಿಸಿದ. ೫೧. ಘೋರವಾದ ನಾನಾ ರೂಪದ ಸ್ತ್ರೀಗರ್ಭದಿಂದ ಹುಟ್ಟಿ ತೀರದ ಜನ್ಮಜನ್ಮಗಳ ದುಃಖಪರಂಪರೆಯಿಂದ ಕೂಡಿದ ದಡವೇ ಕಾಣದ ಕಷ್ಟಕರವಾದ ಸಂಸಾರಸಾಗರವನ್ನು ದಾಟಿಸುವ ಮೋಕ್ಷದಾಯಕನಾದ ಪರಮಾತ್ಮಸ್ವರೂಪವನ್ನು ರಾವಣನು ಮನಸ್ಸಿನಲ್ಲೇ ಸ್ಮರಿಸಿಕೊಂಡನು. ೫೨. 'ತಾನೆಲ್ಲಿ, ಜಾನಕಿಯೆಲ್ಲಿ ? ಬ್ರಹ್ಮಪುತ್ರರಾದ ಸನಕಾದಿಗಳ ಅಪ್ಪಣೆಯ ಫಲ ಇದೀಗ ಫಲಿಸುತ್ತಿದೆಯಲ್ಲವೆ. ಶ್ರೀನರಸಿಂಹನ ಅವತಾರವಾಗಿ ಹುಟ್ಟಿ ಮಾಯಾಮಾನವಚರಿತ್ರೆಯನ್ನು ಅನುಕರಿಸುವ ಕರುಣಾನಿಧಿಯೆ ಶರಣು' ಎನ್ನುತ್ತ ಬಿಲ್ಲನ್ನು ಮಿಡಿದು ಧ್ವನಿಮಾಡಿ ಆರ್ಭಟಿಸಿದ. ೫೩. ರಾವಣನ ಯೋಗ್ಯವಲ್ಲದ ನಡೆವಳಿಕೆಯನ್ನು ನೋಡಿ ರಾಮನು ನಯವಾದ ಮಾತುಗಳನ್ನಾಡಿದನು. "ಕೇಳು ದಶಾನನ, ಮೂರು ಲೋಕಗಳಲ್ಲಿ ಹೆಸರುವಾಸಿಯಾದ ವೀರ ನೀನು. ಕಾಮುಕರ ನಡತೆಯನ್ನು ಬಿಡು. ನಿನ್ನ ತಮ್ಮನನ್ನು ಕೂಡಿಕೊಂಡು ಬಾಳು. ನಿನಗೆ ಅಭಯವನ್ನು ಕೊಡುತ್ತೇನೆ" ಎಂದ ರಾಮ. ೫೪. ನಿನ್ನ ಕೊಡೆಯನ್ನು ಕತ್ತರಿಸಿದಾಗ ಒಂದು ಸಲ, ಯುದ್ಧದಲ್ಲಿ ನಾಚಿಕೆಗೆಡಿಸಿದಾಗ ಒಂದು ಸಲ, ಲಂಕಾನಗರಕ್ಕೆ ಹೋಗಿಬೀಳುವಂತೆ ಬಾಣಬಿಟ್ಟಾಗ ಒಂದು ಸಲ–ಹೀಗೆ ನಮ್ಮ ಭಕ್ತನ ಮೇಲಿನ ದಾಕ್ಷಿಣ್ಯದಿಂದ ಜಗತ್ತು ಮೆಚ್ಚುವಂತೆ ನಿನ್ನನ್ನು ಮೂರು ಬಾರಿ ರಕ್ಷಿಸಿದೆ. ನಿನ್ನ ಬಲವಾದ ಹಟವನ್ನು ಬಿಡು. ಸುಮ್ಮನೆ

ಶರಣುಹೊಗು ಸಾಕೇತಪುರವರ । ದರಸುತನ ನಿನಗುತ್ತರದ ಕುರು
ಧರಣಿಪರಿಯಂತುಳಿಯೆ ಲಂಕಾರಾಜ್ಯದರಸುತನ
ಎರಡು ಮಾತೆಮಗಿಲ್ಲ ಸಂಧಿಗೆ । ಹರಿಯುವೊಮ್ಮನ ಕಳುಹಿದಾವು
ತ್ತರವು ತಪ್ಪದು ರಕ್ಷಿಸುವೆನಜನಳಿವು ಪರಿಯಂತ ೫೫

ಶರಣುವೊಗುವವನಲ್ಲ ಮುಂದಣ । ಸಿರಿಯ ಬಯಸುವನಲ್ಲ ಸೀತೆಯ
ತಿರುಗಿ ಬಿಡುವವನಲ್ಲ ಮತಿಬೇಱಿಲ್ಲ ಮಾನಸದ
ಕರುಣ ನಿನಗಿನ್ನೇಕೆ ನಿನ್ನಯ । ಪರಿಯ ಬಲ್ಲೆನು ಬಿಡು ಮಹಾಸ್ತ್ರವ
ಮರಣ ಕೊರಳಿನೊಳಾದಡೀಶ್ವರಭಜಕನಲ್ಲೆಂದ ೫೬

ಎಲೆ ವಿಭೀಷಣದೇವ ಮೂರ್ಖರ । ತಿಲಕನಿವ ನಿನ್ನಂತರಂಗದ
ನೆಲೆಯ ಹೇಳೈ ಕೊಲಲೊ ಕೊಲಬೇಡವೊ ತವಾಗ್ರಜನ
ತಿಳಿಯಲಿಬ್ಬರಿಗೊಬ್ಬಳೇ ತಾಯ್ । ಸಲೆ ಕರುಳ್ಗಳು ಮಱುಗಿದಿರದಳ
ಬಳವ ಹೇಳೆನ್ನಾಣೆ ಬಿಡೆಯುವ ನುಡಿಯಬೇಡೆಂದ ೫೭

ಮರಳಿ ಮರಳಿನ್ನೆಲ್ಲಿಪರಿಯಂ । ತರ ವಿಚಾರವು ಜೀಯ ಛಲದು
ಬ್ಬರದ ಪೌರುಷವಣ್ಣನದು ನಮ್ಮಣ್ಣನೆಂದೆಂಬ
ಕರುಣ ಬೇಡಗ್ರಜರು ಪಿತೃಗಳು । ಗುರುಗಳಾಗಿಯೆ ದೇವರಾವ್ ಡಿಂ
ಗರಿಗರನುಸರಣೆಯನು ಹಿಡಿಯದೆ ಬೇಗ ಮಾಡೆಂದ ೫೮

ಯಮನ ಕರೆಗೆ ಒಳಗಾಗಬೇಡ" ಎಂದು ರಾಮ ಹೇಳಿದ. ೫೫. "ನೀನು ನಮ್ಮ ಮರೆಹೊಗು. ಅಯೋಧ್ಯಾಪುರದ ಅರಸುತನವನ್ನು ಉತ್ತರ ಕುರುಭೂಮಿಯವರೆಗೆ ಬಿಟ್ಟು ಉಳಿದ ಲಂಕಾರಾಜ್ಯದ ಅರಸುತನ ನಿನಗೆ. ನಮ್ಮಲ್ಲಿ ಎರಡು ಮಾತಿಲ್ಲ. ಸಂಧಿಗೆ ನಿನ್ನ ಬಳಿಗೆ ಬಂದ ಅಂಗದನ ಮೂಲಕ ಹೇಳಿಕಳುಹಿಸಿದ ವಚನವನ್ನು ನಾವು ತಪ್ಪುವುದಿಲ್ಲ. ಬ್ರಹ್ಮನ ಅಂತ್ಯದವರೆಗೆ ನಿನ್ನನ್ನು ರಕ್ಷಿಸುವೆವು" ಎಂದ ರಾಮ. ೫೬. "ನಾನು ನಿನ್ನ ಮರೆಹೊಗುವವನಲ್ಲ ; ಮುಂದಿನ ಸಂಪತ್ತನ್ನು ಬಯಸುವವನೂ ಅಲ್ಲ. ಸೀತೆಯನ್ನು ತಿರುಗಿಬಿಡುವವನಲ್ಲ, ನನ್ನಲ್ಲಿ ಬೇರೆ ಯೋಚನೆಯೇ ಇಲ್ಲ. ನಿನಗೇಕೆ ನನ್ನಮೇಲೆ ಕರುಣೆ. ನಿನ್ನ ರೀತಿಯನ್ನು ನಾನು ಬಲ್ಲೆ. ಮಹಾಸ್ತ್ರವನ್ನು ಬಿಡು. ನನ್ನ ಕೊರಳಿನಲ್ಲಿ ಮರಣ ಸಂಭವಿಸಿದರೆ ನಾನು ಈಶ್ವರಭಕ್ತನಲ್ಲ" ಎಂದ ರಾವಣ. ೫೭. "ಅಯ್ಯಾ ವಿಭೀಷಣದೇವ, ಇವನು ಮೂರ್ಖರ ತಿಲಕ. ನಿನ್ನ ಮನಸ್ಸಿನಲ್ಲಿರುವುದನ್ನು ಹೇಳಯ್ಯ, ನಿಮ್ಮಣ್ಣನನ್ನು ಕೊಲ್ಲಲೋ ಕೊಲ್ಲಬೇಡವೋ. ತಿಳಿದು ನೋಡಿದರೆ ನಿಮ್ಮಿಬ್ಬರಿಗೂ ಒಬ್ಬಳೇ ತಾಯಿ ; ಅವರ ಕರುಳು ಮರುಗದೆ ಇರದು. ನಿನ್ನ ಅಭಿಪ್ರಾಯವನ್ನು ಹೇಳು, ನನ್ನಾಣೆ ದಾಕ್ಷಿಣ್ಯಬೇಡ" ಎಂದು ರಾಮ ವಿಭೀಷಣನನ್ನು ಕೇಳಿದ. ೫೮. "ಪುನಃ ಪುನಃ ಎಲ್ಲಿಯವರೆಗೆ ವಿಚಾರಮಾಡುತ್ತ ಕುಳಿತಿರುವುದು. ಸ್ವಾಮಿ ನಮ್ಮ ಅಣ್ಣನದು ಬಲುಹಟದ ಪೌರುಷ, ನಮ್ಮ ಅಣ್ಣ ಎಂಬ ಕರುಣೆ ಬೇಡ. ಅಣ್ಣಂದಿರು, ಪಿತೃಗಳು ಇವರು ಗುರುಗಳೆನಿಸಿದ್ದರೂ ನಾವು ದೇವರ ಸೇವಕರು, ನಮ್ಮನ್ನು

ಎನಲು ಶರಣನ ನಂಬುಗೆಯು ನಿಜ । ಮನದ ಮತಿಗತಿಪರಿಣಮಿಸಿಯಿ
ನ್ನೆನಗೆ ದೋಷವು ಬಾರದಲೆ ಸುಮನಸರ ಸಾಕ್ಷಿಯಲಿ
ಎನುತ ಚರಣಾಲೀಢದಲಿ ಹಿಂ । ಜನಿಗೆ ಸರಳನು ತೊಡಿಸಿ ಬರಸೆಳೆ
ದನಿಮಿಷಾಂತಕನಿದಿರಿನಲಿ ಬೊಬ್ಬಿರಿದನಾ ರಾಮ ೫೯

ಆವ ಭಟನೆಂದರಿಯಲಾ ಮೂ । ದೇವರೊಳಗಾದಖಿಳ ಲಯದಧಿ
ದೇವರುಗಳೊತ್ತಾಗಿ ಬರಲಿರಲಖಿಳ ಮಂತ್ರಾಸ್ತ್ರ
ಶೀವಿ ತೊಟ್ಟೆಸೆ ಕಲ್ಪಪರಿಯಂ । ತಾವ ಭಯಬೇಡೆಂಬ ವಚನವ
ನಾ ವಿಭೀಷಣದೇವನರಿದಿಂತೆಂದನರಸಂಗೆ ೬೦

ಅರಸ ಚಿತ್ತೈಸಂಬಿಕಾಪತಿ । ಯರಸನೋಲಗದೊಳಗೆ ನಂದೀ
ಶ್ವರನನಣಕಿಸುತಿಟ್ಟನಿವ ಜಂಭೀರಫಲದಿಂದ
ಉರವ ತಾಗಲು ಶಾಪವಿತ್ತನು । ಮರಣ ವಕ್ಷಸ್ಥಳದಲುರೆ ಗೋ
ಚರಿಸಲೆಂದದರಿಂದ ಬಾಣವನುರಕೆ ಬೆಸಸೆಂದ ೬೧

ಎಂಬ ಶರಣನ ನುಡಿಗೆ ಹೂಡಿದ । ನಂಬನುರಕರಿಭಟನ ರವಿಶಶಿ
ಬಿಂಬ ಹೊಕ್ಕಳಿಸಿದವು ಸುಳಿದನು ಮೇಲೆ ಪವಮಾನ
ಅಂಬುನಿಧಿ ಲಳಿಮಸಗಿತಮರನಿ । ತಂಬಿನಿಯರಾರತಿಯನಮರಕ
ದಂಬ ಕುಸುಮಾಂಜಲಿಯಲಿರ್ದುದು ಗಗನಮಾರ್ಗದಲಿ ೬೨

ಅನುಸರಿಸದೆ ನಿಮ್ಮ ಕಾರ್ಯವನ್ನು ಬೇಗ ಮಾಡಿ" ಎಂದ ವಿಭೀಷಣ. ೫೯. ವಿಭೀಷಣನ ಮಾತು ಕೇಳಿ ನೆಚ್ಚಿಕೆಯ ಭಕ್ತನ ಮನಸ್ಸಿನ ಧೃಡಭಾವನೆಯನ್ನು ಕಂಡು ಹರ್ಷಿಸಿದನು. 'ಇನ್ನು ನನಗೆ ದೋಷವು ತಟ್ಟುವುದಿಲ್ಲ, ಇದಕ್ಕೆ ದೇವತೆಗಳೇ ಸಾಕ್ಷಿ' ಎನ್ನುತ್ತ ರಾಮನು ಬಲಗಾಲನ್ನು ಮುಂದಕ್ಕಿಟ್ಟು ಎಡಮಂಡಿಯನ್ನೂರಿಕೊಂಡು ನಿಂತು ಬಿಲ್ಲಿನ ಹಗ್ಗಕ್ಕೆ ಅಸ್ತ್ರವನ್ನು ಹೂಡಿ ಎಳೆದು ರಾಕ್ಷಸೇಶ್ವರನ ಎದುರಿನಲ್ಲಿ ಬೊಬ್ಬಿರಿದ. ೬೦. ರಾವಣನು ಯಾವ ವೀರನೆಂದು ತಿಳಿದುನೋಡಿದರೆ ಆ ಬ್ರಹ್ಮ ವಿಷ್ಣು ಮಹೇಶ್ವರರುಗಳೂ ಸೇರಿದಂತೆ ಪ್ರಳಯದ ಅಭಿಮಾನಿದೇವತೆ ಎಲ್ಲರೂ ಒಟ್ಟಾಗಿ ಬಂದರೂ ಸಮಸ್ತ ಮಂತ್ರಾಸ್ತ್ರಗಳನ್ನು ಪ್ರಯೋಗಿಸಿದರೂ ಕಲ್ಪದವರೆಗೂ ಭಯಬೇಡ ಎಂಬುದಾಗಿ ರಾವಣನಿಗೆ ವರ ಬಂದಿರುವುದನ್ನು ತಿಳಿದ ವಿಭೀಷಣದೇವನು ರಾಮನನ್ನು ಕುರಿತು ಮುಂದಿನಂತೆ ನುಡಿದನು. ೬೧. "ಅರಸ, ಆಲಿಸು. ಪಾರ್ವತೀರಮಣನ ಸಭೆಯಲ್ಲಿ ರಾವಣನು ನಂದೀಶ್ವರನನ್ನು ಅಣಕಿಸಿ ನಿಂಬೆಹಣ್ಣಿನಿಂದ ಹೊಡೆದನು. ಅದು ಅವನ ಎದೆಗೆ ತಗುಲಲು 'ನಿನಗೆ ಮರಣ ಎದೆಯಲ್ಲಿ' ಎಂದು ಶಾಪವನ್ನು ಕೊಟ್ಟನು. ಆದುದರಿಂದ ಬಾಣವನ್ನು ಎದೆಗೆ ಗುರಿಯಿಡು" ಎಂದ ವಿಭೀಷಣ. ೬೨. ಭಕ್ತನ ಮಾತಿನಂತೆ ರಾಮನು ಶತ್ರುವೀರನ ಎದೆಗೆ ಅಸ್ತ್ರವನ್ನು ಗುರಿಯಿಟ್ಟನು. ಸೂರ್ಯ ಚಂದ್ರಬಿಂಬಗಳು ಹಿಗ್ಗಿದವು ; ಮೇಲೆ ವಾಯು ಸುಳಿದನು ; ಸಮುದ್ರ ರಭಸದಿಂದ ಉಬ್ಬಿತು. ಆಕಾಶದಲ್ಲಿ ದೇವತಾಸ್ತ್ರೀಯರು ಆರತಿಯನ್ನು ಹಿಡಿದು ನಿಂತುಕೊಂಡರು.

ಅಱಿದನನುಜನು ರಾಘವಂಗೆ । ಚ್ಚಱಿಸಿ ನುಡಿದಿಂಗಿತವ ತಪ್ಪದು
ಹಱಿವು ತನಗೆನುತಿರ್ದನಾತ್ಮಜ್ಞಾನದುದಯದಲಿ
ಮಱೆಯ ಮಾಯಾಮನುಜನನು ಕ । ಟ್ಟೆಱಕದಿಂದೆವೆಯಿಕ್ಕದಚ್ಯುತ
ನಱಿಕೆಯಿಂ ದಶಕಂಠನೀಕ್ಷಿಸುತಿರ್ದನಿದಿರಿನಲಿ ೬೩

ಹಳುವರದ ಮಂಡಿಯಲಿ ವಾಸುಗಿ । ಯುಳುಕದವೊಲಾಶಾಗಜಂಗಳು
ಬಳುಕದವೊಲಿಳೆ ನೋಯದವೊಲಂಬುಧಿಯು ತಳಮಳಲು
ತುಳುಕದವೊಲಸ್ತ್ರವನು ಕಿನ್ನಿಗೆ । ಸೆಳೆದು ಮತ್ತೀ ಮಾತನೆಂದನು
ಕೊಲೆಗೊಡಂಬಟ್ಟೈ ವಿಚಾರಿಸು ಮನವ ನೀನೆಂದ ೬೪

ಮನವ ನೆಱೆ ನಿರ್ಧರಿಸಿದೆನು ನೀ । ಮನುಜನಲ್ಲೆಂಬುದ ವಿವೇಕದ
ನೆನಹಿನಿಂದಾನಱಿದೆನಂಜೆನು ತನುಪರಿಚ್ಯುತಿಗೆ
ನಿನಗೆ ದಯಬೇಡಿನ್ನು ದಿಟ ರಂ । ಜನೆಯ ನುಡಿ ಸಾಕೆನಲು ತಪ್ಪದೆ
ಜನವಱಿಯೆ ಹೊಱಗಾವು ಪಾಪಕೆ ತಪ್ಪದೇಯೆಂದ ೬೫

ತಪ್ಪದೆಸು ಮಾತೇಕೆ ನಿನಗೆ । ನ್ನೊಪ್ಪಿಸಿದೆ ಛಲಪದವ ನೀ ದಿಟ
ತಪ್ಪವಾತನೆ ಕಳುಹು ನಮ್ಮೆಡೆಗಮ್ಮವರೆ ಶರವ
ಒಪ್ಪವನು ಬಳಿಕಿಟ್ಟುಕೋಯೆನೆ । ನಿಪ್ಪಸರದಲಿ ಬೊಬ್ಬಿಱಿದು ಬಿಡೆ
ಚಪ್ಪರಿಸಿದುದು ದೇವಗಣವತಿ ಹರುಷದುಬ್ಬಿನಲಿ ೬೬

ದೇವತೆಗಳು ಹೂವನ್ನು ಬೊಗಸೆಯಲ್ಲಿ ಹಿಡಿದು ನಿಂತರು. ೬೩. ತನ್ನ ತಮ್ಮ ವಿಭೀಷಣನು ರಾಘವನಿಗೆ ಎಚ್ಚರಿಸಿ ನುಡಿದ ಅಭಿಪ್ರಾಯವನ್ನು ರಾವಣನು ಅರ್ಥಮಾಡಿಕೊಂಡನು. ಮರಣ ತನಗೆ ತಪ್ಪದು ಎಂದು ಆತ್ಮಜ್ಞಾನೋದಯ ಹುಟ್ಟಿ ರಾವಣನು ತಿಳಿದುಕೊಂಡನು. ಮಾಯೆಯ ಮಾನವರೂಪದ ಪರಮಾತ್ಮನನ್ನು ರಾವಣನು ಪ್ರೀತಿಯಿಂದ ರೆಪ್ಪೆಹೊಡೆಯದೆ ಇವನು ಅಚ್ಯುತನೆಂಬ ಜ್ಞಾನದಿಂದ ನೋಡುತ್ತಿದ್ದನು. ೬೪. ನವುರಾಗಿ ಮಂಡಿಹೂಡಿ ವಾಸುಕಿ ಅಳುಕದ ಹಾಗೆ, ದಿಗ್ಗಜಗಳು ಬಳುಕದಂತೆ, ಭೂಮಿಗೆ ನೋವಾಗದ ರೀತಿಯಲ್ಲಿ, ಸಮುದ್ರದ ತಾಯ್ಮಳಲು ಮೇಲಕ್ಕೆ ಎರಚದಹಾಗೆ ರಾಮನು ಅಸ್ತ್ರವನ್ನು ಕಿನ್ನಿಯವರಿಗೆ ಎಳೆದು ಪುನಃ "ರಾವಣ ಸಾಯಲು ಒಪ್ಪಿಕೊಂಡೆಯಾ ? ಚೆನ್ನಾಗಿ ಯೋಚನೆ ಮಾಡಿ ಹೇಳು" ಎಂದು ಕೇಳಿದನು. ೬೫. "ನಾನು ಮನಸ್ಸಿನಲ್ಲಿ ನಿರ್ಧರಿಸಿಕೊಂಡಿದ್ದೇನೆ. ನೀನು ಮಾನವನಲ್ಲ ಎಂಬುದನ್ನು ನನ್ನ ವಿವೇಕದಿಂದ ತಿಳಿದುಕೊಂಡಿದ್ದೇನೆ. ದೇಹವನ್ನು ಕಳಚಿಹಾಕಲು ನಾನು ಹೆದರುವುದಿಲ್ಲ. ನೀನು ಇನ್ನು ನನ್ನ ಮೇಲೆ ದಯೆತೋರಿಸಬೇಡ. ವಿನೋದದ ಮಾತುಗಳು ಸಾಕು" ಎಂದು ರಾವಣನು ಹೇಳಲು, "ಇದು ತಪ್ಪುವುದಿಲ್ಲವೇ? ಜನಗಳಿಗೆಲ್ಲ ತಿಳಿದಂತೆ ನಾನು ಪಾಪಕ್ಕೆ ಒಳಗಾಗಿಲ್ಲ. ಇನ್ನು ನನ್ನ ತಪ್ಪಿಲ್ಲವಲ್ಲ" ಎಂದ ರಾಮ. ೬೬. "ತಪ್ಪುವುದಿಲ್ಲ, ಬಾಣವನ್ನು ಬಿಡು, ಇನ್ನು ಮಾತು ಏತಕ್ಕೆ. ನನ್ನ ದೃಢ ಹಟವನ್ನು ನಿನಗೆ ಒಪ್ಪಿಸಿ ಬಿಟ್ಟಿದ್ದೇನೆ. ನಿಜವಾಗಿ ತಪ್ಪಿನಡೆಯುವವನೇ ? ಸಾಮರ್ಥ್ಯವಿದ್ದರೆ ಬಾಣವನ್ನು ನಮ್ಮ ಬಳಿಗೆ ಕಳುಹಿಸು. ಅನಂತರ ಅಂಗೀಕಾರವನ್ನಿಟ್ಟುಕೋ" ಎನ್ನಲು ಜೋರಾಗಿ ಗರ್ಜಿಸಿ

ಸರಳಗಮನಕಚಾಂಡಮಂಡಲ । ಮೊರೆವುತಿರ್ದುದು ಸಕಲ ಸುರಮುನಿ
ವರ ಕದಂಬಕ ಜಯಜಯೆನುತಿರ್ದುದು ನಭೋಗ್ರದಲಿ
ನರಚರಿತ್ರದ ವಿಷ್ಣು ವಿಶ್ವಂ । ಭರ ನಮೋಯೆನುತಿರ್ದರಮರರು
ತರುಚರರು ಬೊಬ್ಬೆಗೆವುತಿರ್ದರು ಹರುಷದುಬ್ಬಿನಲಿ ೬೭

ಉರವಣಿಸುವ ಮಹಾಸ್ತ್ರಕಂಬಿನ । ಸರಿಯ ಸುರಿದನು ಮುಟ್ಟವಿಸಿ ಬರೆ
ಬೆರಸಿ ಹೊಯ್ದನು ಖಡ್ಗ ಖರ್ಪರ ಪರಶು ಪರಿಘದಲಿ
ಉರಕೆ ಮೋಹಲು ಮುಷ್ಟಿಯಿಂದ । ಬ್ಬರಿಸಿ ತಿವಿದನು ಸುರ ನರೋರಗ
ಧರಣಿಯಲಿ ದಶಶಿರನವೊಲು ಧುರಧೀರರಾರೆಂದ ೬೮

ತಡೆವವೇ ತಾರೆಗಳು ತರಣಿಯ । ನಡಸಿ ನುಂಗುವ ರಾಹುವನು ಕಡಿ
ದುಡಿದು ಹಾಯ್ಕಿತು ಶರಳುರಸ್ಥಳವನು ದಶಾನನನ
ಹೊಡೆದವಮರರ ಭೇರಿ ರಾಮನ । ಮುಡಿಯಲೊಕ್ಕವು ಕುಸುಮವಮರರ
ಮಡದಿಯರು ಸುಳಿದೆತ್ತಿದರು ಜಯಮಂಗಳಾರತಿಯ ೬೯

ಹರಿಗೆ ವಿಶ್ವಂಭರಗೆ ಸರ್ವೇ । ಶ್ವರಗೆ ಸನಕಾದ್ಯಖಿಳ ಮುನಿಹೃ
ತ್ಸರಸಿರುಹಪೀಠಗೆ ಸದಾನಂದೈಕರೂಪಂಗೆ
ಪರಮಮಂಗಳಮೂರ್ತಿಗಾನತ । ಸುರಕಿರೀಟಭೃತಾಂಘ್ರಿಕಮಲಗೆ
ಸುರಸತಿಯರೊಲಿದೆತ್ತಿದರು ಜಯಮಂಗಳಾರತಿಯ ೭೦

ಅಸ್ತ್ರವನ್ನು ಬಿಟ್ಟನು. ಆಗ ದೇವತೆಗಳ ಸಮೂಹ ಹರ್ಷದಿಂದ ಉಬ್ಬಿ ಬಾಯಿ ಚಪ್ಪರಿಸಿತು. ೬೭. ರಾಮನು ಬಾಣವನ್ನು ಬಿಡಲು ಬ್ರಹ್ಮಾಂಡವು ಭೋರ್ಗರೆಯಿತು. ಸಮಸ್ತ ದೇವಮುನಿಗಳ ಸಮೂಹವು ಗಗನದ ಮೇಲಿನಿಂದ 'ಜಯ ಜಯ' ಎನ್ನುತ್ತಿತ್ತು. "ಮಾನವಚರಿತೆಯ ವಿಷ್ಣು, ಜಗದ್ರಕ್ಷಕ, ನಮೋ" ಎನ್ನುತ್ತಿದ್ದರು ದೇವತೆಗಳು. ವಾನರರು ಆನಂದಾತಿಶಯದಿಂದ ಬೊಬ್ಬೆ ಹಾಕುತ್ತಿದ್ದರು. ೬೮. ತನ್ನ ಕಡೆಗೆ ರಭಸದಿಂದ ಬರುತ್ತಿದ್ದ ಮಹಾಸ್ತ್ರದ ಮೇಲಕ್ಕೆ ರಾವಣನು ಬಾಣಗಳ ಮಳೆಯನ್ನೇ ಸುರಿಸಿದನು. ಅಸ್ತ್ರವು ಲಕ್ಷಿಸದೆ ಸಮೀಪಕ್ಕೆ ಬರಲು ಖಡ್ಗ, ಖರ್ಪರ, ಪರಶು ಮತ್ತು ಪರಿಘಾಯುಧಗಳಿಂದ ಹೊಡೆದನು. ಅಸ್ತ್ರವು ರಾವಣನ ಎದೆಗೆ ಹೊಡೆಯಲು ರಾವಣನು ಅದನ್ನು ಮುಷ್ಟಿಯಿಂದ ಗುದ್ದಿದನು. ದೇವ, ಮಾನವ ಮತ್ತು ಉರಗ ಲೋಕಗಳಲ್ಲಿ ರಾವಣನಂತೆ ಯುದ್ಧವೀರನಾರು ಎಂದು ವಾಲ್ಮೀಕಿಗಳು ವಿವರಿಸಿದರು. ೬೯. ಮೇಲೆಬಿದ್ದು ಸೂರ್ಯನನ್ನು ನುಂಗುವ ರಾಹುವನ್ನು ನಕ್ಷತ್ರಗಳು ತಡೆಯ ಬಲ್ಲವೇ ? ಅಸ್ತ್ರವು ರಾವಣನ ಎದೆಯನ್ನು ಸೀಳಿ ಮುರಿದುಹಾಕಿತು. ದೇವತೆಗಳು ನಗಾರಿಯನ್ನು ಬಾರಿಸಿದರು ; ರಾಮನ ತಲೆಯ ಮೇಲೆ ಹೂವನ್ನು ಎರಚಿದರು ; ದೇವ ನಾರಿಯರು ಬಂದು ರಾಮನಿಗೆ ಜಯದ ಮಂಗಳಾರತಿಯನ್ನು ಎತ್ತಿದರು. ೭೦. ಹರಿಗೆ, ಜಗದ್ರಕ್ಷಕನಿಗೆ, ಸರ್ವೇಶ್ವರನಿಗೆ, ಸಮಸ್ತಮುನಿಗಳ ಹೃದಯಕಮಲದಲ್ಲಿ ಮಂಡಿಸಿರುವವನಿಗೆ, ಸದಾ ಆನಂದಸ್ವರೂಪಿಗೆ, ಪರಮಮಂಗಳಮೂರ್ತಿಗೆ, ನಮಸ್ಕರಿಸಿದ ದೇವತೆಗಳ ಕಿರೀಟಗಳನ್ನು ತನ್ನ ಪಾದಪದ್ಮಗಳಲ್ಲಿ ಧರಿಸಿದವನಿಗೆ ಜಯವಾಗಲಿ ಎಂದು

ಜಯು ಜಗತ್ಪತಿ ಜಯು ಜನಾರ್ದನ । ಜಯು ಜಗದ್ರಕ್ಷಕ ಜಯಾಚ್ಯುತ
ಜಯು ಜಯಾಸುರವಂಶಮದಮಾತಂಗ ಪಂಚಾಸ್ಯ
ಜಯು ಜಗತ್ರಯು ಸುರನರೋರಗ । ಭಯುವಿಭಂಜನಯೆನುತ ಸುರನಾ
ರಿಯರು ಸುಳಿಸಿದರಿದಿರಿನಲಿ ಜಯುಮಂಗಳಾರತಿಯು ೭೧

ಪಾಡಿದರು ಗಂಧರ್ವಯುವತಿಯು । ರಾಡಿದರು ಜಂಭಾರಿ ದಿವಿಜರ
ಗಾಡಿಕಾತಿಯರುದಿತ ತೂರ್ಯತ್ರಯು ನಿನಾದದಲಿ
ಕೂಡೆ ಸುರಮಾಗದೆಯರುಜಿ಼ ಕೊಂ । ಡಾಡಿದರು ಕಡೆಗಂಗಳಲಿ ಜಲ
ಮೂಡಿದವು ರಾಮಂಗೆ ರಾಮನ ಶರಣಾಗತಿಕಂಗೆ ೭೨

ಬಿಸಃಟಳವನೀದೇವಿ ನೆಱಿ಼ ಬಾ । ರಿಸಿದ ನೆತ್ತಿಯು ಹೊಱಿ಼ಯನುಸುರ್ಗಳು
ಪಸರಿಸಿದವಹಿರಾಯು ಕೂರುಮ ದಿಗ್ಗಜಾವಳಿಯು
ವಸು ಮರುದ್ಗಣ ರುದ್ರಗಣ ಮುನಿ । ವಿಸರ ಮುಖ್ಯ ಸಮಸ್ತ ದಿವಿಜ
ಪ್ರಸರವಿದ್ದುದು ನೊಸಲಕೈಗಳ ಜಯುನಿನಾದದಲಿ ೭೩

ದೇವ ಜಯುಜಯು ಸಕಲ ದೇವರ । ದೇವ ಜಯುಜಯು ದೇವರಕ್ಷಕ
ದೇವ ಜಯುಜಯು ಜಯು ಜನಾರ್ದನ ಜಯು ಜಗನ್ನಾಥ
ದೇವ ಲಕ್ಷ್ಮೀಕಾಂತ ವರರಾ । ಜೀವಲೋಚನ ರಾಘವೇಶ್ವರ
ರಾವಣಾಂತಕ ರಾಮ ಜಯುಜಯುಯೆಂದುದಮರಗಣ ೭೪

ದೇವತಾ ಸ್ತ್ರೀಯರು ಮಂಗಳಾರತಿ ಎತ್ತಿದರು. ೭೧. ಜಯ ಜಗತ್ಪತಿ, ಜಯ ಜನಾರ್ದನ, ಜಗದ್ರಕ್ಷಕ ಜಯ, ಅಚ್ಯುತ ಜಯ, ರಾಕ್ಷಸವಂಶವೆಂಬ ಮದ್ದಾನೆಯ ಸಿಂಹ ಜಯಜಯ, ಸ್ವರ್ಗ ಮರ್ತ್ಯ ಪಾತಾಳಗಳೆಂಬ ಮೂರು ಲೋಕಗಳ ಭಯವನ್ನು ನಾಶ ಮಾಡುವವನೆ ನಿನಗೆ ಜಯವಾಗಲಿ – ಎಂದು ದೇವಲೋಕದ ನಾರಿಯರು ರಾಮನ ಎದುರಿಗೆ ಮಂಗಳಾರತಿಯನ್ನೆತ್ತಿದರು. ೭೨. ಗಂಧರ್ವಸ್ತ್ರೀಯರು ಹಾಡಿದರು, ದೇವೇಂದ್ರನ ಸುರಸುಂದರಿಯರು ಗಾನ, ನೃತ್ಯ ಮತ್ತು ವಾದ್ಯಗಳ ಮೇಳದೊಡನೆ ನರ್ತಿಸಿದರು. ಜತೆಗೆ ದೇವಲೋಕದ ಸ್ತುತಿಪಾಠಕಿಯರು ರಾಮನ ಗುಣಗಳನ್ನು ಹೊಗಳಿದರು. ರಾಮನಿಗೂ ಅವನಿಗೆ ಶರಣಾಗತನಾದ ವಿಭೀಷಣನಿಗೂ ಕಡೆಗಣ್ಣುಗಳಲ್ಲಿ ನೀರು ಮೂಡಿತು. ೭೩. ಭೂದೇವಿ ಭಾರವಾಗಿದ್ದ ನೆತ್ತಿಯ ಮೇಲಿನ ಹೊರೆಯನ್ನಿಳಿಸಿದಳು. ಆದಿಶೇಷ, ಕೂರ್ಮ ಮತ್ತು ದಿಗ್ಗಜಗಳು ಉಸುರುಬಿಟ್ಟರು. ಅಷ್ಟವಸುಗಳು, ಮರುತ್ತುಗಳು, ಏಕಾದಶರುದ್ರರು, ಮುನಿಗಳು ಇವರುಗಳೆಲ್ಲರೂ ಸೇರಿದಂತೆ ಸಮಸ್ತ ದೇವತೆಗಳು ಹಣೆಯ ಮೇಲೆ ಕೈಯಿಟ್ಟುಕೊಂಡು 'ಜಯಜಯ' ಎನ್ನುತ್ತಿದ್ದರು. ೭೪. ದೇವ ಜಯ ಜಯ ! ಸಕಲ ದೇವರ ದೇವ ಜಯ ಜಯ ! ದೇವತೆಗಳನ್ನು ರಕ್ಷಿಸುವ ದೇವ ಜಯ ಜಯ ! ಜಯ ಜನಾರ್ದನ ! ಜಯ ಜಗನ್ನಾಥ ! ದೇವ ಲಕ್ಷ್ಮೀಕಾಂತ, ರಾಜೀವ ಲೋಚನ, ರಾಘವೇಶ್ವರ. ರಾವಣಾಂತಕ, ರಾಮ ಜಯ ಜಯ !–ಎಂದು ದೇವತೆಗಳು

ಕುಶನೆ ಕೇಳೈ ಮುಗುಳುನಗೆ ಲಂ । ಬಿಸಿದ ವದನದ ಹೊಗರು ಜಗುಳದ
ನಸುಮುಗಿದ ಲೋಚನದ ಥಳಥಳಿಸುವ ಕದಂಪುಗಳ
ಪಸರಿಸಿದ ತೋಳುಗಳ ವಕ್ತ್ರದ । ಲೊಸರ್ವ ಶೋಣಿತಲಿಪ್ತ ಕಾಯದ
ಲಸುರಪತಿ ರಂಜಿಸಿದನಾ ರಣರಂಗಮಧ್ಯದಲಿ ೭೫

ಸುರರ ಬಿರುದಿನ ಹಾಹೆಗಳ ಸುರು । ಚಿರದ ಮಣಿವ್ಯಾಕೀರ್ಣ ಚಾಮೀ
ಕರದ ಚರಣಾಭರಣ ಶೋಭೆಯ ಪಾದಪಲ್ಲವದ
ಸುರಗಿ ಸಂಭೃತ ಶೋಣಪಟಬಂ । ಧುರದ ಕಟಿತಟದರ್ಧತನು ಗೋ
ಚರಿಸಿತೋಲೈಸುವ ಮರುಳ್ಗಳು ಸುತ್ತುವಳಯದಲಿ ೭೬

ಲವನೆ ಕೇಳೈ ಭ್ರಾತೃಮೋಹದ । ಲವಲವಿಕೆಯೊಂದೆಸೆಯೊಳಾಳ್ದನ
ಹವಣನರಿಯದ ಭಯದ ಬಗೆಯುಂಜಿಕೆಯದೊಂದೆಸೆಯ
ಕವಲುಗೊಂಡಿರೆ ಚಿತ್ತದಲಿ ರಾ । ಘವಮಹೀಪತಿಯರಿದು ಕರಪ
ಲ್ಲವದ ಸಂಜ್ಞೆಯ ಮಾಡೆ ಮೂರ್ಛಿತನಾದನಸುರೇಂದ್ರ ೭೭

ಚೇತರಿಸಿಕೊಂಡೆದ್ದು ಜ್ಯೇಷ್ಠ । ಭ್ರಾತೃವಿನ ಶರಭಿನ್ನಕ್ಷತನು ಸಂ
ಭೂತ ಶೋಣಿತ ವಾರಿಯೊಳು ಹೊರಳಿದನು ಬಾಯ್ಬಿಡುತ
ಭೂತನಾಥ ವರಪ್ರಸಾದ । ಖ್ಯಾತ ಹಾ ಚತುರಾಸ್ಯ ನಿತ್ಯ ವಿ
ನೂತನಾಶೀರ್ವಚನ ರಚನೋತ್ತುಂಗ ಹಾಯೆಂದ ೭೮

ಜಯಘೋಷ ಮಾಡಿದರು. ೭೫. ಕುಶ, ಕೇಳು. ಮುಗುಳುನಗೆ ಬೀರುತ್ತ ಮುಖದ ಕಾಂತಿ ಮಾಸದ, ಅರ್ಧಮುಚ್ಚಿದ ಕಣ್ಣುಗಳ, ಹೊಳೆಯುವ ಕೆನ್ನೆಗಳ, ಬಾಯಿಂದ ಒಸರುತ್ತಿದ್ದ ರಕ್ತ ಮೈಗೆ ಬಳಿದ ರಾವಣನು ತೋಳುಗಳನ್ನು ನೀಡಿಕೊಂಡು ರಣರಂಗ ಮಧ್ಯದಲ್ಲಿ ಶೋಭಿಸಿದನು. ೭೬. ದೇವತೆಗಳ ಬಿರುದಿನ ಬೊಂಬೆಗಳನ್ನಲಂಕರಿಸಿಕೊಂಡು ರತ್ನಖಚಿತವಾದ ಚಿನ್ನದ ಕಾಲ್ಕಡಗಗಳಿಂದ ಶೋಭಿಸುತ್ತಿದ್ದ ಸುಂದರವಾದ ಪಾದಗಳ, ಕಠಾರಿಯನ್ನು ಸೇರಿಸಿ ಸೊಂಟಕ್ಕೆ ಬಿಗಿದುಟ್ಟಿದ್ದ ಕೆಂಪುವಸ್ತ್ರದ ರಾವಣನ ದೇಹದ ಅರ್ಧ ಭಾಗವನ್ನು ಭೂತಗಳು ಸುತ್ತುಗಟ್ಟಿ ಓಲೈಸುತ್ತಿದ್ದವು. ೭೭. ಲವ ಕೇಳು, ಸಹೋದರ ಪ್ರೀತಿಯ ಉತ್ಸಾಹವೊಂದು ಕಡೆ, ಪ್ರಭುವಿನ ಮನಸ್ಸಿನಲ್ಲಿರುವ ಅಭಿಪ್ರಾಯವನ್ನರಿಯದ ಭಯ ಒಂದು ಕಡೆ–ಹೀಗೆ ವಿಭೀಷಣನ ಮನಸ್ಸು ಇಬ್ಬಗೆಯಾಯಿತು, ಇದನ್ನು ತಿಳಿದ ರಾಘವರಾಯನು ಕೈಸನ್ನೆಮಾಡಲು ವಿಭೀಷಣನು ಮೂರ್ಛೆ ಹೋದನು. ೭೮. ಮೂರ್ಛೆ ತಿಳಿದೆದ್ದು ವಿಭೀಷಣನು ಬಾಣದಿಂದ ತುಂಡಾದ ಅಣ್ಣನ ದೇಹದಿಂದ ಹೊರಟ ರಕ್ತಜಲದಲ್ಲಿ ಅಳುತ್ತ ಹೊರಳಾಡಿದನು. ಪರಮೇಶ್ವರನ ವರದಿಂದ ಅನುಗ್ರಹೀತನಾದವನೇ, ನಿತ್ಯವೂ ಬ್ರಹ್ಮನಿಂದ ಆಶೀರ್ವಾದ ಪಡೆಯುತ್ತಿದ್ದ ಉನ್ನತಪುರುಷನೇ, ಅಯ್ಯೋ!"

ವಿತತ ಸಮರಭುಜಪ್ರತಾಪೋ । ನ್ನತ ಸದಾಗತಿಸಖನ ಝಳವಡ
ಗಿತೆ ವಿರೂಕ್ಷಣ ತೀಕ್ಷ್ಣತೇಜಸ್ಫೂರ್ತಿ ಮುದ್ರಿಸಿತೆ
ಕ್ಷಿತಿಪತಿತ್ವದ ವೈಭವಾಲಂ । ಕೃತಿಯು ನೆಗ್ಗಿತೆ ನಿಜಜಯಶ್ರೀ
ಸತಿಯು ಬೈತಲೆ ಹೋಯಿತೇ ಹಾಯೆಂದನಸುರೇಂದ್ರ ೭೯

ಅಣ್ಣ ನುಡಿಯೈ ಸಮರಜಯ ಮು । ಕ್ಕಣ್ಣ ನುಡಿಯೈ ಸಕಲ ಸುರರಳಿ
ವೆಣ್ಣುಗಳ ಕೇಕರವಿಲಾಸಪ್ರಥಿತ ಮಾತಾಡೈ
ಹಣ್ಣ ಕೆಟ್ಟೈ ಹಗೆತನವ ಪರ । ವೆಣ್ಣಗೋಸುಗ ಭಗಿನಿ ಬಿತ್ತಿದ
ಬಣ್ಣಗೆಯು ಬೇಳಂಬದಲಿ ಹಾಯೆಂದನಸುರೇಂದ್ರ ೮೦

ಕುಲಕೆ ಕಂಟಕನಾದೆನವನೀ । ತಳಕೆ ಭಾರಕನಾದೆ ನರಕದ
ಕುಳಿಗೆ ನಾಯಕನಾದೆ ಜಗದ ಜನಾಪವಾದಕದ
ಜ್ವಲನಕಧಿಕೃತನಾದೆ ಹೊತ್ತೆನು । ಜಲಜಸಂಭವ ಕಲ್ಪಪರಿಯಂ
ತಲಸದಪಕೀರ್ತಿಯನು ಗತಿಯೆನಗೇನು ಹೇಳೆಂದ ೮೧

ಸಿರಿಯ ಮೇಲಣ ಲೋಲುಪತೆಯಲಿ । ಧುರದ ಮುಖದಿಂದಗ್ರಜನ ಸಂ
ಹರಣವನು ಮಾಡಿಸಿದನೆಂಬೀ ಬಗೆ ಕಕುತ್ಸ್ಥಜನ
ಕರಣದಲಿ ಲೇಸಾಗಿ ನೆಲೆಗೊಳ । ದಿರದು ಕೆಟ್ಟೆನು ಕೆಟ್ಟೆನಿಹಪರ
ವೆರಡಲಿ ಗತಿಯಾವುದೆನಗೆಲೆಯಣ್ಣ ಹೇಳೆಂದ ೮೨

ಎಂದು ದುಃಖಿಸಿದ. ೭೯. ಅತಿಶಯವಾದ ಬಾಹುಬಲದ ಪರಾಕ್ರಮವನ್ನು ಯುದ್ಧದಲ್ಲಿ ಬೀರುತ್ತಿದ್ದ ಸದಾಕಾಲದ ಮಿತ್ರನ ಪ್ರತಾಪವಡಗಿತೆ ? ಉಗ್ರವಾದ ತೀಕ್ಷ್ಣತೇಜಸ್ಸಿನ ಪ್ರಕಾಶವು ಭೂಮಿಯೊಡೆತನದ ವೈಭವಾಲಂಕಾರವನ್ನು ಆಕ್ರಮಿಸಿಬಿಟ್ಟಿತೆ ? ಅಣ್ಣನ ವಿಜಯಲಕ್ಷ್ಮಿಯ ಬೈತಲೆ ಮಾಯವಾಯಿತೇ ? ಅಯ್ಯೊ !–ಎಂದು ವಿಭೀಷಣ ದುಃಖಿಸಿದ. ೮೦. "ಅಣ್ಣ, ನುಡಿ ; ಕದನವಿಜಯಿ ಮುಕ್ಕಣ್ಣ ಮಾತಾಡು. ಸಮಸ್ತ ದೇವತರುಣಿಯರ ಕಡೆಗಣ್ಣೋಟಕ್ಕೆ ಆಕರ್ಷಿತನಾಗುತ್ತಿದ್ದ ಪ್ರಖ್ಯಾತ ಉತ್ತರ ನೀಡು. ಪರಸ್ತ್ರೀಗೋಸ್ಕರ ತಂಗಿ ಬಿತ್ತಿದ ಬಣ್ಣದ ಮಾತಿಗೆ ಆಸೆಹೋಗಿ ದ್ವೇಷವನ್ನು ಕಟ್ಟಿಕೊಂಡು ಕೆಟ್ಟೆಯಲ್ಲ" ಎಂದ ವಿಭೀಷಣ. ೮೧. "ನಾನು ಕುಲಕ್ಕೆ ಮುಳ್ಳಾದೆ, ಭೂಮಿಗೆ ಭಾರವಾದೆ, ನರಕದ ಗುಂಡಿಗೆ ಬೀಳುವಲ್ಲಿ ಪ್ರಮುಖನಾದೆ, ಜಗತ್ತಿನ ಜನರ ಲೋಕಾಪವಾದದಗ್ನಿಗೆ ತುತ್ತಾದೆ, ಬ್ರಹ್ಮನಿರುವವರೆಗೂ ಕೆಟ್ಟ ಹೆಸರನ್ನು ಹೊತ್ತೆ. ಇನ್ನು ನನಗೆ ಗತಿಯೇನು ?" ಎಂದು ವಿಭೀಷಣ ಪ್ರಲಾಪಿಸಿದ. ೮೨. "ಸಂಪತ್ತಿನ ಮೇಲಿನ ಮೋಹದಿಂದ ಅಣ್ಣನನ್ನು ಯುದ್ಧದಲ್ಲಿ ಕೊಲ್ಲಿಸಿದೆ ಎಂಬ ಭಾವನೆ ರಾಮನ ಮನಸ್ಸಿನಲ್ಲಿ ಬೇರೂರದೆ ಇರದು. ಕೆಟ್ಟೆ ಕೆಟ್ಟೆ, ಇಹಪರಗಳೆರಡರಲ್ಲೂ ನನಗೇನು ಗತಿ, ಅಣ್ಣ ಹೇಳು"

ಮರುಳುತನ ನಿನಗುಂಟೆ ಕೇಳೈ । ವರವಿಭೀಷಣದೇವ ಜನನಕೆ
ಮರಣ ನಿಜಸೌಖ್ಯಕ್ಕೆ ದುಃಖವಿದೀಗಲನುಸಾರಿ
ತರುಣತನ ವಾರ್ಧಿಕಕೆ ಮಹದೈ । ಶ್ವರಿಯ ವಿಪದಾಶ್ರಯಕೆ ನೀನಿದ
ಕರುಹನಾಗೆಜ್ಞಿವಿಂಗೆನುತ ಸಂತೈಸಿದನು ರಾಮ ೭೩

ಆರು ನೀ ನಾವಾರು ನಮ್ಮಯ । ನಾರಿಯೆತ್ತಲು ವಿಪಿನವೆತ್ತ ಕು
ಬೇರಸಹಭವನೆತ್ತ ಹೊಮ್ಮೃಗವೆತ್ತ ವಾನರರ
ಸೇರುವಡಿ ತಾನೆತ್ತ ದೈವ । ಪ್ರೇರಣೆಯದೈಸಲ್ಲದಿದು ನಾ
ವಾರು ಮಾಡುವುದಲ್ಲವಂಗೀಕರಣವೇಕೆಂದ ೭೪

ಬಿಡುವೃಥಾ ಶೋಕಾಗ್ನಿದಾಹದೊ । ಳೊಡಲ ಬೀಳಿಸಬೇಡ ನವಿಸ್ಮಾ
ನುಡಿಯನನುವರ್ತಿಸು ಚಿದಾತ್ಮವಿವೇಕಬುದ್ಧಿಯಲಿ
ನಡಸು ಸಾಕಿನ್ನುತ್ತರಕ್ರಿಯೆ । ವಿಡಿವ ಕೃತ್ಯವನೆಂದು ಕಂಬನಿ
ದೊಡೆದು ಸಂತೈಸಿದನು ಶರಣಾಗತನನಾ ರಾಮ ೭೫

ಕೇಳಿರೈ ಕೋಸಲಧರಿತ್ರೀ । ಪಾಲಕನ ತನುಜರಿರ ಪುರದೊಳು
ಗಾಳುಮೇಳಾಯ್ತಿಕ್ಕಿದವು ಹೊಂಗದಗಳರಮನೆಯ
ಲಾಳವಿಂಡಿಗೆ ಹಾಯ್ಕಿದವು ಪುರ । ದೇಳುಸುತ್ತಿನ ಕೋಟೆಗಳ ಮುಖ
ಶಾಲೆಯಲಿ ಬೆದಱಾಯ್ತು ನಗರದ ಕೇರಿಕೇರಿಯಲಿ ೭೬

ಎಂದ ವಿಭೀಷಣ. ೭೩. "ನಿನಗೆಲ್ಲೋ ಭ್ರಾಂತು ವಿಭೀಷಣ. ನಾನು ಹೇಳುವುದನ್ನು ಕೇಳು. ಹುಟ್ಟಿದ ಮೇಲೆ ಮರಣ ಸತ್ಯ. ಸುಖವನ್ನು ಹಿಂಬಾಲಿಸುವುದು ದುಃಖ, ಯೌವನವು ಮುಪ್ಪಿಗೆ ದಾರಿ, ಅತುಳೈಶ್ವರ್ಯವು ವಿಪತ್ತಿಗೆ ಅವಕಾಶ, ನೀನು ಈ ಜ್ಞಾನವನ್ನು ಪಡೆಯಲು ಅರ್ಹನಾಗು" ಎಂದು ರಾಮ ವಿಭೀಷಣನನ್ನು ಸಮಾಧಾನ ಮಾಡಿದನು. ೭೪. "ನೀನು ಯಾರು, ನಾವು ಯಾರು ? ನಮ್ಮ ಪತ್ನಿಯೆಲ್ಲಿ, ಅರಣ್ಯವೆಲ್ಲಿ ? ರಾವಣನೆಲ್ಲಿ, ಚಿನ್ನದ ಜಿಂಕೆ ಎಲ್ಲಿ ? ವಾನರರೊಡನೆ ಸ್ನೇಹಸಂಬಂಧವೆಲ್ಲಿಯದು ? ಇದು ದೈವಪ್ರೇರಣೆಯಲ್ಲದೆ ನಾವು ಯಾರೂ ಏನೂ ಮಾಡುವುದಲ್ಲ, ಇದು ನನ್ನದು, ನನ್ನಿಂದಾಯಿತು ಎಂದು ನಾವೇಕೆ ಅಂಗೀಕರಿಸಬೇಕು" ಎಂದ ರಾಮ. ೭೫. ವ್ಯರ್ಥವಾಗಿ ದುಃಖದ ಬೆಂಕಿಗೆ ನಿನ್ನ ದೇಹವನ್ನು ಕೊಡಬೇಡ. ನಾವು ಹೇಳಿದಂತೆ ಆತ್ಮಜ್ಞಾನದ ವಿವೇಕಬುದ್ಧಿಯಿಂದ ನನ್ನ ಮಾತಿನಂತೆ ನಡೆ. ಇನ್ನು ನಿನ್ನ ಅಣ್ಣನಿಗೆ ಉತ್ತರಕ್ರಿಯಾಕರ್ಮವನ್ನು ನಡೆಸು" ಎಂದು ವಿಭೀಷಣನ ಕಣ್ಣೀರನ್ನು ಒರಸಿ ತನ್ನ ಭಕ್ತನನ್ನು ರಾಮನು ಸಮಾಧಾನಪಡಿಸಿದನು. ೭೬. ಕೋಸಲರಾಜನ ಮಕ್ಕಳೇ, ಕೇಳಿರಯ್ಯ, ಲಂಕಾನಗರದಲ್ಲಿ ಅಸ್ತವ್ಯಸ್ತತೆ ಕಾಲಿಕ್ಕಿತು ; ಅರಮನೆಯ ಚಿನ್ನದ ಬಾಗಿಲುಗಳನ್ನು ಹಾಕಲಾಯಿತು. ಲಂಕಾಪಟ್ಟಣದ ಏಳು ಸುತ್ತಿನ ಕೋಟೆಗಳ ಹೆಬ್ಬಾಗಿಲುಗಳಿಗೆ ಅಗುಳಿಗಳು

ಅಱಿಹಿದರು ದೂತರು ದಶಾಸ್ಯನ । ಮರಣವನು ಮಂಡೋದರಿಗೆ ಕಾ
ಹುರತೆ ಕೋಳಾಹಳಿಸಿತಂತಃಪುರದೊಳಗಲದಲಿ
ಸುರ ನರೋರಗ ದನುಜ ರಜನೀ । ಚರ ಯುವತಿಯರು ಲಕ್ಕಸಂಖ್ಯೆಯು
ನೆರವಿಯಲಿ ರಣಮಂಡಲಕೆ ನಡೆತಂದಳಾ ಕಾಂತೆ ೮೭

ಆವ ಘನಸಂಪದದಲಧಿಕನೊ । ರಾವಣನು ನೆರೆದಿರ್ದುದಹಿ ನರ
ದೇವ ನಾರಿಯರೆಣಿಸೆ ಷೋಡಶಲಕ್ಕ ಸಂಖ್ಯೆಯಲಿ
ಸಾವಿಗೋಸುಗ ಸೇರಿತೋ ಕೇ । ಳೈ ವಿಭಾಕರಕುಲಜ ಬಂದುದು
ತೀವಿ ನೆಲನಗಲದಲಿ ಮಂಡೋದರಿಯ ಬಳಸಿನಲಿ ೮೮

ಬಿಡುಮುಡಿಯ ಹಾಹಾರವದ ಬೆಳ । ಗಿಡುವ ಕಂಗಳಲುಗುವ ವಾರಿಯ
ನಿಡುಸರದ ರೋದನದ ಮಿಡುಕುವ ಪಲ್ಲವಾಧರದ
ಎಡಬಲಕೆ ಬಳುಕುವ ಕೊರಳ್ಗಳ । ಪೊಡರ್ವ ಪೀನಪಯೋಧರದ ಕೆಲ
ಸಿಡಿದ ಮೇಲುದಿನಖಿಳಯುವತಿಯರೈದಿದರು ರಣವ ೮೯

ಝಣರವದ ನೂಪುರದ ಮಣಿಕಂ । ಕಣದ ಹಾರದ ಕದಪನಣೆವಾ
ಮಣಿಯ ಮುತ್ತಿನ ತಿಲಕ ಬೈತಲೆಗಳ ವಿಲಾಸಗಳ
ಕುಣಿಕೆಗಳ ಮುಱಿದಿಡುತ ವೀರರ । ಕಣಿಯೆ ಹಾ ಸೌಭಾಗ್ಯಚೂಡಾ
ಮಣಿಯೆ ಹಾಯೆಂದೊದಱುತ್ತೈದಿದರಾತ್ಮವಲ್ಲಭನ ೯೦

ಬಿದ್ದುವು. ನಗರದ ಕೇರಿ ಕೇರಿಯಲ್ಲಿ ಗಾಬರಿ ಹಬ್ಬಿತು. ೮೭. ದೂತರು ರಾವಣನ ಮರಣವನ್ನು ಮಂಡೋದರಿಗೆ ತಿಳಿಸಿದರು. ಅಂತಃಪುರದಲ್ಲಿ ಎಲ್ಲೆಲ್ಲೂ ಉದ್ವೇಗದ ಕೋಲಾಹಲ ಎದ್ದಿತು. ಲಕ್ಷಸಂಖ್ಯೆಯ ದೇವ, ಮಾನವ, ಉರಗ, ದೈತ್ಯ, ರಾಕ್ಷಸ ಯುವತಿಯರ ಸಮೂಹದೊಡನೆ ಮಂಡೋದರಿ ರಣರಂಗಕ್ಕೆ ಬಂದಳು. ೮೮. ರಾವಣನು ಅದೆಂಥ ಭಾಗ್ಯಶಾಲಿಯೋ ! ಹದಿನಾರು ಲಕ್ಷ ಲೆಕ್ಕದ ನಾಗ, ಮಾನವ, ದೇವತಾಸ್ತ್ರೀಯರು ಬಂದು ಸೇರಿದರು. ಸಾವಿಗೋಸ್ಕರ ಬಂದಿತೋ ಎನ್ನುವಂತೆ ಮಂಡೋದರಿಯನ್ನು ಸುತ್ತುವರೆದ ಸ್ತ್ರೀಯರು ಅಷ್ಟಗಲಕ್ಕೂ ಹರಡಿಕೊಂಡು ಬಂದರು. ೮೯. ತಲೆಗೂದಲು ಬಿಚ್ಚಿ 'ಅಯ್ಯೋ ಅಯ್ಯೋ' ಎಂದು ಕೂಗುತ್ತ, ಕಾಂತಿ ಯುತವಾದ ಕಣ್ಣುಗಳಲ್ಲಿ ನೀರು ಸುರಿಸುತ್ತ, ರಾಗ ಎಳೆದು ದನಿಮಾಡಿ ಅಳುತ್ತ, ಅದುರುವ ತುಟಿಗಳ, ಎಡಬಲಗಳಿಗೆ ಬಳುಕುವ ಕೊರಳುಗಳ, ಏರಿಳಿಯುವ ಉಬ್ಬಿದ ಎದೆಯ, ಪಕ್ಕಕ್ಕೆ ಸರಿದ ಸೆರಗಿನ ಸಮಸ್ತ ಯುವತಿಯರು ರಣರಂಗಕ್ಕೆ ಬಂದರು. ೯೦. ಕಾಲಂದಿಗೆ ಝಣ ಝಣ ಶಬ್ದಮಾಡುತ್ತಿರಲು ರತ್ನದ ಬಳೆ, ಹಾರ, ಕೆನ್ನೆಗೆ ತಗಲುವ ಮಣಿ, ಮುತ್ತಿನ ತಿಲಕ ಮತ್ತು ಬೈತಲೆಗಳ ಲಾವಣ್ಯದಿಂದ ಶೋಭಿಸುತ್ತ ಕಡೆಗಣ್ ನೋಟವನ್ನು ತಿರುಗಿಸುತ್ತ "ಅಯ್ಯೋ, ವೀರರಕಣಿಯೆ ! ಅಯ್ಯೋ ಸೌಭಾಗ್ಯಚೂಡಾಮಣಿಯೆ !" ಎಂದು ಒರಲುತ್ತ ಆ ತರುಣಿಯರು ತಮ್ಮ ಪತಿಯ

ಬಿಸಿಲು ತಾಗದ ಗಾಳಿ ಸೋಂಕದ । ಘಸಣಿಕೆಯು ಕಾಲ್ನಡೆಗಳಿಲ್ಲದ
ಶಶಿಮುಖಿಯರೈದಿದರು ಗಾಡಿಯು ಗಾಳುಮೇಳಿನಲಿ
ಬಸುಱ ಬಾಯ್ಗಳ ಹೊಯ್ಲುಗಳಿನ ನಿ । ಪ್ಪಸರದಾಕ್ರಂದನದ ನಾರೀ
ವಿಸರ ಬಳಸಿತು ವೀರ ಧೀರೋದ್ಧತ ದಶಾನನನ ೯೧

ಸುರಪಜಿತು ಕಲಿ ಕುಂಭಕರ್ಣ । ಸುರ ನರಾಂತಕ ಕುಂಭ ದೀರ್ಘೋ
ದರ ಮಹೋದರ ಧೂಮ್ರನಯನ ನಿಕುಂಭರಾಕ್ಷಸರ
ತರುಣಿಯರು ಮಿತ್ರಜ್ಞನಂಗನೆ । ಯರು ವಿರೂಪಾಕ್ಷ ಪ್ರಮುಖ ಕುವ
ರರ ವಧೂಜನ ಬಳಸಿದುದು ತಮ್ಮತಮ್ಮ ವಲ್ಲಭರ ೯೨

ಹಱಿದು ಹಾರವ ಕರ್ಣಪೂರವ । ನುಱುಬಿ ಕಂಕಣ ಮುದ್ರಿಕೆಯು ಮುದಿ
ವೆಱಿಯು ಮುತ್ತಿನ ಬೈತಲೆಯು ಮೂಗುತಿಯನೀಡಾಡಿ
ಅಱಸಿದರು ಹರಿಹರಿದು ತಮ್ಮ । ಮ್ಮೈಱಿಯರನು ನಡೆತಂದು ತನುವಿನ
ಹಱುಕ ಸಂಧಿಸಿ ಮಯತನುಜೆ ತೆಗೆದಪ್ಪಿದಳು ಪತಿಯ ೯೩

ತೋಳುಗಳ ನಿಜಪತಿಯ ಬೆನ್ನಿನ । ಮೇಲೆ ಸೇರಿಸಿ ವಾಮದಂಗದ
ಮೇಲೆ ಕುಳ್ಳಿದು ದಿಟ್ಟಿಸಿದಳಾನನವ ನಿಜಪತಿಯ
ಥಾಳಿಸುವ ಗಂಡಸ್ಥಳದ ರಣ । ಧೂಳಿಯನು ತೊಡೆತೊಡೆದು ಸಂಗರ
ಕೇಳಿಯೇನಾಯ್ತೆಂದು ಬೆಸಗೊಂಡಳು ನಿಜೇಶ್ವರನ ೯೪

ಬಳಿಗೆ ಬಂದರು. ೯೧. ಬಿಸಿಲು ತಗುಲದ, ಗಾಳಿ ಸೋಕದ, ಬಿರುಸಿನ ನೆಲದಲ್ಲಿ ನಡೆಯದ ಚಂದ್ರಮುಖಿಯರು ಬೆಡಗಿನ ಸಂಭ್ರಮದಿಂದ ಹೊಟ್ಟೆ ಮತ್ತು ಬಾಯಿಗಳನ್ನು ಹೊಡೆದು ಕೊಳ್ಳುತ್ತ ಗಟ್ಟಿಯಾಗಿ ಅಳುತ್ತ ವೀರ ಧೀರ ಗರ್ವಿಷ್ಠ ರಾವಣನ ಬಳಿಗೆ ಬಂದರು. ೯೨. ಇಂದ್ರಜಿತು, ಕಲಿ ಕುಂಭಕರ್ಣ, ನರಾಂತಕ, ಕುಂಭ, ದೀರ್ಘೋದರ, ಮಹೋದರ, ಧೂಮ್ರನಯನ, ನಿಕುಂಭ ಮೊದಲಾದ ರಾಕ್ಷಸರ ಹೆಂಡತಿಯರು, ಮಿತ್ರಜ್ಞನ ಪತ್ನಿಯರು ಮತ್ತು ವಿರೂಪಾಕ್ಷನೇ ಮೊದಲಾದ ರಾವಣನ ಮಕ್ಕಳ ಸತಿಯರು ತಮ್ಮ ತಮ್ಮ ಗಂಡಂದಿರ ದೇಹವನ್ನು ಸುತ್ತುಗಟ್ಟಿ ನಿಂತರು. ೯೩. ಹಾರವನ್ನು ಕಿತ್ತುಹಾಕಿ, ಕಿವಿಯ ಆಭರಣವನ್ನೆಸೆದು, ಕೈಬಳೆ, ಉಂಗುರ, ತುರುಬಿನ ಚಂದ್ರಾಭರಣ, ಮುತ್ತಿನ ಬೈತಲೆಬೊಟ್ಟು ಮತ್ತು ಮೂಗುಬೊಟ್ಟುಗಳನ್ನು ಬಿಸಾಡಿ ಯುವತಿಯರು ಓಡೋಡಿ ಹೋಗಿ ತಮ್ಮ ತಮ್ಮ ಗಂಡಂದಿರನ್ನು ಹುಡುಕಿದರು. ಮಂಡೋದರಿ ಬಂದು ರಾವಣನ ದೇಹದ ಸೀಳುಗಳನ್ನು ಸೇರಿಸಿ ಪತಿಯನ್ನು ಅಪ್ಪಿಕೊಂಡಳು. ೯೪. ಪತಿಯ ಬೆನ್ನಿಗೆ ತೋಳುಗಳನ್ನು ಸುತ್ತಿ ಹಿಡಿದುಕೊಂಡು ಎಡ ತೊಡೆಯಮೇಲೆ ಕುಳಿತು ಮಂಡೋದರಿ ಗಂಡನ ಮುಖವನ್ನು ದೃಷ್ಟಿಸಿ ನೋಡಿದಳು. ಹೊಳೆಯುವ ಕೆನ್ನೆಗಳಿಗೆ ಅಂಟಿದ ಧೂಳನ್ನು ಒರೆಸಿ 'ಯುದ್ಧದಾಟ ಏನಾಯಿತು ?" ಎಂದು ಮಂಡೋದರಿ ಪತಿಯನ್ನು

ವೀರ ನುಡಿಯೈ ವಿಬುಧಕುಲಸಂ । ಹಾರ ನುಡಿಯೈ ಜಯವಧೂಮಣಿ
ಹಾರ ನುಡಿಯೈ ಹರಿ ಧನಂಜಯ ಯಮ ನಿಶಾಚರರ
ವಾರಿಧೀಶ್ವರ ವಾಯು ಧನದ ಪು । ರಾರಿ ಮುಖ್ಯ ಸುಪರ್ವರಾಜ್ಯ
ಶ್ರೀರಮಣ ನುಡಿಯೆಂದು ಮುಂಡಾಡಿದಳು ನಿಜಪತಿಯ ೯೫

ಕಡೆಗಣಿಸಿ ನೋಡಜನನಿದಿರಲಿ । ಮೃಡನನೀಕ್ಷಿಸು ಮುನಿಯ ವೀಣೆಯ
ನುಡಿಯನಾಲಿಸು ನೋಡು ಲಾಸ್ಯವನೂರ್ವಶೀಸತಿಯ
ಎಡಬಲದ ಶಕ್ರಾದಿದೇವರ । ಜಡಿವ ಕಂಚುಕಿಗಳ ನಿವಾರಿಸು
ಕೊಡು ಧನವ ಹೊಗಳಿಕೆಯವರಿಗೆಂದಬಲೆ ಹಲುಬಿದಳು ೯೬

ಕಳುಹು ವೀಳಯವಿತ್ತು ತಾರಾ । ಬಲವ ಹೇಳಿದ ಸುರಗುರುವನಂ
ಜುಳಿಯಲಸುರಾಚಾರ್ಯನನು ಮನ್ನಿಸು ಸುಧಾಕರನ
ಲಲಿತ ಕರದರ್ಪಣವನೀಕ್ಷಿಸು । ಮಲಯಪವನನ ಕೈಯ ಹೊಂಬ
ಟ್ಟಲಿನ ಗಂಧವ ಧರಿಸು ನೊಸಲಿನೊಳೆಂದಳಾ ಕಾಂತೆ ೯೭

ಕುಸುಮಬಾಣನ ಕಾವ್ಯದಭಿನವ । ರಸವನಾಲಿಸು ವರ ವಸಂತನ
ಕುಸುಮವನು ಮುಡಿ ರತಿಯ ನಯನಭ್ರೂವಿಲಾಸವನು
ಒಸೆದು ನೋಡು ಕಟಾಕ್ಷದಿಂದೀ । ಕ್ಷಿಸು ಜಯಂತನ ಧನಪತನಯನ
ವಿಸುಪ ರೂಪ ಕಳಾಪ ರಚನೆಗೆ ಮಾಡು ಮಾನಸವ ೯೮

ಕೇಳಿದಳು. ೯೫. "ವೀರ, ಮಾತಾಡು. ದೇವತೆಗಳನ್ನು ಸಂಹರಿಸಿದವನೇ ನುಡಿಯಯ್ಯ. ಜಯಲಕ್ಷ್ಮಿಯ ರತ್ನಹಾರವೇ ಮಾತಾಡು. ಇಂದ್ರ, ಅಗ್ನಿ, ಯಮ, ನೈರ್ಋತಿ, ವರುಣ, ವಾಯು, ಕುಬೇರ, ಈಶ್ವರ–ಮೊದಲಾದ ದೇವತೆಗಳ ರಾಜ್ಯಲಕ್ಷ್ಮಿಯರ ಪತಿಯೇ ನುಡಿ" ಎಂದು ಮಂಡೋದರಿ ಗಂಡನನ್ನು ಮುದ್ದಾಡಿದಳು. ೯೬. "ಬ್ರಹ್ಮನನ್ನು ಕಡೆ ಗಣಿಸಿ ನೋಡು. ಎದುರಿನಲ್ಲಿ ಶಿವನನ್ನು ಕಾಣು. ನಾರದನ ವೀಣೆಯಧ್ವನಿಯನ್ನು ಆಲಿಸು. ಊರ್ವಶಿಯ ಲಾಸ್ಯನೃತ್ಯವನ್ನು ನೋಡು. ಎಡಬಲದ ದೇವೇಂದ್ರನೇ ಮೊದಲಾದ ದೇವತೆಗಳನ್ನು ಗದರಿಸುವ ಕಂಚುಕಿಗಳನ್ನು ತಡೆದುನಿಲ್ಲಿಸು. ಹೊಗಳುಭಟರಿಗೆ ಹಣವನ್ನು ಕೊಡು" ಎಂದು ಮಂಡೋದರಿ ಪ್ರಲಾಪಿಸಿದಳು. ೯೭, "ನಿನ್ನ ತಾರಾಬಲವನ್ನು ತಿಳಿಸಿದ ದೇವಗುರು ಬೃಹಸ್ಪತ್ಯಾಚಾರ್ಯನನ್ನು ಕಳುಹಿಸಿಕೊಡು. ಅಸುರಗುರು ಶುಕ್ರಾಚಾರ್ಯನಿಗೆ ಕೈಮುಗಿದು ಗೌರವಿಸು. ಚಂದ್ರನ ಕೈಗಳಲ್ಲಿರುವ ಚಂದದ ಕನ್ನಡಿಯಲ್ಲಿ ನಿನ್ನ ಮುಖವನ್ನು ನೋಡಿಕೋ. ಮಲಯಮಾರುತನ ಕೈಯಲ್ಲಿರುವ ಚಿನ್ನದ ಬಟ್ಟಲಿನ ಗಂಧವನ್ನು ಹಣೆಯಲ್ಲಿ ಧರಿಸು" ಎಂದಳು ಮಂಡೋದರಿ. ೯೮. "ಮನ್ಮಥನ ಕಾವ್ಯದ ನವೀನರಸವನ್ನು ಆಲಿಸು. ವಸಂತನ ಹೂವನ್ನು ಮುಡಿದುಕೋ. ರತಿಯ ಕಣ್ಣು ಮತ್ತು ಹುಬ್ಬುಗಳ ಸೊಗಸನ್ನು ಪ್ರೀತಿಯಿಂದ ನೋಡು. ಇಂದ್ರನಮಗ ಜಯಂತ ಮತ್ತು ಕುಬೇರನ ಮಗ ನಳಕೂಬರ ಇವರ ಮೇಲೆ ನಿನ್ನ ಕಡೆಗಣ್ಣೋಟವನ್ನು

ಓಲಗಕೆ ಧೂಮ್ರಾಕ್ಷ ಕುಂಭ ಕ । ರಾಳ ದೇವಾಂತಕ ಸುಪಾರ್ಶ್ವಕ
ಮೇಲೆ ವಿದ್ಯುನ್ಮಾಲಿ ವಿದ್ಯುಜ್ಜಿಹ್ವ ಮಕರಾಕ್ಷ
ಕಾಲರಿಪು ಕಲಿಕುಂಭಕರ್ಣ ವಿ । ಶಾಲಬಲನತಿಕಾಯ ಮುಖ್ಯ ವಿ
ಲೋಲಕುಂಡಲ ಭಟರು ಬಂದಿಪರೀಕ್ಷಿಸೆಡಬಲನ ೯೯

ಬಂದಹನೆ ನೋಡರಸ ಮೋಹದ । ಕಂದನಿಂದ್ರಾರಾತಿ ಕೇಳ್ ನಡೆ
ತಂದಿಹನೆ ನಚ್ಚಿನ ನರಾಂತಕ ಕಲಿ ವಿರೂಪಾಕ್ಷ
ಇಂದಿವರನುಪಚರಿಸು ಬವರಕೆ । ಬಂದ ಭಟರಾಹವಕೆ ಬೆಸನೇ
ನೆಂದು ನುಡಿ ತನ್ನೊಡನೆ ಮಾತನುಯೆಂದು ಹಲುಬಿದಳು ೧೦೦

ಎಂದು ಗಂಡನನಬಲೆ ಬಹುವಿಧ । ದಿಂದ ಹಲುಬಿದ ಬಳಿಕ ಮೂರ್ಛೆಗೆ
ಸಂದು ಮೈಮರೆದಿರ್ದಳೊಂದರೆಘಳಿಗೆ ಪರಿಯಂತ
ಕಂದ ಕೇಳ್ಕೆ ಕಲಿ ವಿಭೀಷಣ । ನಿಂದು ನಿಲಲಾರದೆ ವಿಲೋಚನ
ದಿಂದ ಸುರಿವಶ್ರುಗಳಲೊಜಗಿದನಿಳೆಗೆ ಮೂರ್ಛೆಯಲಿ ೧೦೧

ಸತಿಯು ನೆವದಲಿ ದೇವ ನೀ ವಸು । ಮತಿಯು ಭಾರವ ಕಳೆದು ಶರಣಾ
ಗತನ ಸಲಹಿದೆ ಸಂದುದದು ಸುಲಭದಲಿ ನಿನಗೆನಗೆ
ಗತಿಯುದಾವುದು ದೇವ ಹೇಳೆಂ । ದತಿಶಯದ ಶೋಕದಲಿ ಸೀತಾ
ಪತಿಯು ಸಿರಿಚರಣಾರವಿಂದಕೆ ಚಾಚಿದಳು ಹಣೆಯು ೧೦೨

ಹರಿಸು. ನಿನ್ನ ಸುಂದರರೂಪವನ್ನು ಚಂದಗಾಣಿಸಲು ಮನಸ್ಸು ಮಾಡು. ೯೯. "ನಿನ್ನ ರಾಜಸಭೆಗೆ ಧೂಮ್ರಾಕ್ಷ, ಕುಂಭ, ಭಯಂಕರ ದೇವಾಂತಕ, ಸುಪಾರ್ಶ್ವ, ವಿದ್ಯುನ್ಮಾಲಿ ವಿದ್ಯುಜ್ಜಿಹ್ವ, ಮಕರಾಕ್ಷ, ಯಮನ ಶತ್ರು ವೀರ ಕುಂಭಕರ್ಣ, ವಿಶಾಲಬಲಶಾಲಿ ಅತಿಕಾಯ–ಇವರೇ ಮೊದಲಾದ ಅಧಿಕಾರ ಸಂಕೇತದ ಸುಂದರ ಕರ್ಣಕುಂಡಲಗಳನ್ನು ಧರಿಸಿದ ವೀರರು ಬಂದಿದ್ದಾರೆ. ಎಡಬಲಗಳಲ್ಲಿ ನಿಂತಿರುವ ಅವರನ್ನು ನೋಡು. ೧೦೦. ನಿನ್ನ ಮೋಹದ ಕಂದ ಇಂದ್ರಜಿತು ಬಂದಿದ್ದಾನೆ, ನೋಡು ಅರಸ. ನಿನ್ನ ಮೆಚ್ಚಿನ ಮಕ್ಕಳು ನರಾಂತಕ ವಿರೂಪಾಕ್ಷರು ಬಂದಿದ್ದಾರೆ. ಯುದ್ಧಕ್ಕೆಂದು ಬಂದ ವೀರರು ಅಪ್ಪಣೆಯೇನು ಎನ್ನುತ್ತಿದ್ದಾರೆ. ಅವರನ್ನು ಉಪಚರಿಸು, ನನ್ನೊಡನೆ ಮಾತನಾಡು" ಎಂದು ಮಂಡೋದರಿ ಅತ್ತಳು. ೧೦೧. ಹೀಗೆ ಗಂಡನನ್ನು ಕುರಿತು ಹೇಳಿಕೊಂಡು ಅತ್ತ ಬಳಿಕ ಮಂಡೋದರಿ ಮೂರ್ಛೆಹೋಗಿ ಒಂದರ್ಧಗಳಿಗೆವರೆಗೆ ಮೈಮರೆತಿದ್ದಳು. ಮಗು ಕುಶ, ಕೇಳು. ಕಲಿವಿಭೀಷಣನು ಇದನ್ನು ನೋಡಿ ಸಹಿಸಲಾರದೆ ಕಣ್ಣುಗಳಲ್ಲಿ ನೀರು ಸುರಿಸುತ್ತ ಮೂರ್ಛೆಹೋಗಿ ನೆಲಕ್ಕುರುಳಿದನು. ೧೦೨. "ಹೆಂಡತಿಯ ನೆಪದಿಂದ ನೀನು ಭೂಮಿಯ ಮೇಲಿನ ಭಾರವನ್ನು ಇಳಿಸಿ ಶರಣಾಗತನನ್ನು ರಕ್ಷಿಸಿದೆ. ಇದು ನಿನಗೆ ಸುಲಭವಾಗಿ ಕೈಗೂಡಿತು. ದೇವ, ನನ್ನ ಗತಿಯೇನು ಎಂಬುದನ್ನು ಹೇಳು" ಎಂದು ದುಃಖದಿಂದ ಸೀತಾಪತಿಯಾದ ಶ್ರೀರಾಮಚಂದ್ರನ ಪಾದಕಮಲಗಳ ಮೇಲೆ ತಲೆಯಿಟ್ಟು

ಎತ್ತಿ ಮಂಡೋದರಿಯ ಹಣೆಯನು । ದಾತ್ತ ಕರುಣಾಸಿಂಧು ನುಡಿದನು
ಹೊತ್ತುಕೊಂಡನು ಭಾರವನು ನಿನ್ನಾತನಪಶಯದ
ಸತ್ತನನ್ಯಾಯದಲಿ ನೀನದ । ಕತ್ತು ಮಾಡುವುದೇನು ಬಿಡು ನೆಲ
ಕೊತ್ತಿ ಕಳೆ ಚಿಂತೆಯನು ಚಿತ್ತದೊಳೆಂದನಾ ರಾಮ ೧೦೩

ನಿನಗೆ ಹೇಳುವುದೇನು ನಿನ್ನಯ । ನೆನಹು ತಾನಜ್ಞಾನಮೋಹಕ
ದನುಭವಕೆ ಬಲ್ಲಬಲೆಯೆಂಬುದು ತೋಱುತಿದೆ ಮನಕೆ
ತನುಪರಿಚ್ಯುತಿತನಕಲೀ ಮೈ । ದುನನ ನೀ ಮುಂದಿಟ್ಟುಕೊಂಡಿರು
ಮನದ ಮಱುಕವ ಬಿಟ್ಟುಕಳೆ ನೀನೆಂದನಾ ರಾಮ ೧೦೪

ಸಂತವಿಟ್ಟನು ಬಳಿಕ ಸೀತಾ । ಕಾಂತನಧಿಕ ವಿಲಾಪಶೋಕದ
ಕಾಂತೆಯನು ಕರುಣೋದಯದ ಮಾಧುರ್ಯವಚನದಲಿ
ಭ್ರಾಂತಿ ಬೇಡಿನ್ನೆಂದು ಶರಣನ । ಸಂತವಿಸಿ ಸೌರಂಭ ಮಿಗೆ ಭೂ
ಕಾಂತ ತೊರವೆಯರಾಯ ಹೊಕ್ಕನು ತನ್ನ ಪಾಳೆಯವ ೧೦೫

ಮಂಡೋದರಿ ಪ್ರಾರ್ಥಿಸಿದಳು. ೧೦೩. ಮಂಡೋದರಿಯ ಹಣೆಯನ್ನು ಮೇಲೆತ್ತಿ ಅಪಾರ ಕರುಣಾಸಾಗರ ರಾಮನು ಅಪಕೀರ್ತಿಯ ಭಾರವನ್ನು ತನ್ನ ಮೇಲೆ ಹೊತ್ತುಕೊಂಡನು. "ರಾವಣನು ಅನ್ಯಾಯಮಾಡಿ ಸತ್ತನು. ನೀನು ಅದಕ್ಕಾಗಿ ಅಳುವುದರಿಂದ ಏನು ಪ್ರಯೋಜನ. ನಿನ್ನ ಮನಸ್ಸಿನ ದುಃಖವನ್ನು ಬಿಟ್ಟುಬಿಡು" ಎಂದು ರಾಮಂ ಮಂಡೋದರಿಗೆ ಹೇಳಿದ. ೧೦೪. "ನಿನಗೆ ಹೇಳಬೇಕಾದುದೇನಿದೆ. ಅಜ್ಞಾನದಿಂದ ಮೋಹತುಂಬಿಕೊಂಡ ಅಬಲೆ ನೀನು ಎಂಬುದಾಗಿ ನನ್ನ ಮನಸ್ಸಿಗೆ ತೋರುತ್ತಿದೆ. ದೇಹವನ್ನು ಕಳಚಿಕೊಳ್ಳುವವರೆಗೆ ಈ ಮೈದುನನನ್ನು ಮುಂದಿಟ್ಟುಕೊಂಡಿರು. ಮನಸ್ಸಿನ ಕೊರಗನ್ನು ಬಿಟ್ಟುಬಿಡು" ಎಂದು ರಾಮನು ಹೇಳಿದನು. ೧೦೫. ಅನಂತರ ಸೀತಾಪತಿಯು ಕಡುದುಃಖದಿಂದ ಅಳುತ್ತಿದ್ದ ಮಂಡೋದರಿಯನ್ನು ಕರುಣೆತುಂಬಿದ ಸವಿಯಾದ ಮಾತುಗಳಿಂದ ಸಮಾಧಾನಪಡಿಸಿದನು. 'ಇನ್ನು ನಿನ್ನ ಭ್ರಾಂತಿಯನ್ನು ಬಿಡು' ಎಂದು ಭಕ್ತ ವಿಭೀಷಣನನ್ನು ಸಂತೈಸಿ ಸಂಭ್ರಮದಿಂದ ತೊರವೆಯ ನರಹರಿಯ ಅವತಾರಿಯಾದ ರಾಮನು ತನ್ನ ಪಾಳಯವನ್ನು ಸೇರಿಕೊಂಡನು.

# ಐವತ್ತೆರಡನೆಯ ಸಂಧಿ

ಸೂಚನೆ॥ ಪುರಕೆ ಹನುಮನ ಕಳುಹಿ ಬೆದರಿದ । ಪುರಜನವ ಸಂತೈಸಿ ಶರಣನ
ಸುರವಿರೋಧಿಯ ಸಂಸ್ಕೃತಿಗೆ ನೇಮಿಸಿದನಾ ರಾಮ

ಹನುಮ ಹೋಗೂರೊಳಗೆ ಗಾವಳಿ । ಎನುಗದಂತಿರೆ ಸಂತವಿಸು ಪುರ
ಜನವ ಶಿಕ್ಷಿಸು ಗಜಬಜದ ಗರ್ವಿತ ನಿಶಾಚರರ
ಬನದ ಸೀತೆಯ ಧಾತನರಿ ಹೋ । ಗೆನೆ ಪಸಾದವ ಹಾಯ್ಕಿ ವಾನರ
ಜನ ಸಹಿತ ಬೀಳ್ಕೊಂಡು ಲಂಕಾನಗರಿಗೈತಂದ ೧

ಪುರಜನವ ಸಂತೈಸಿ ಲಂಕಾ । ಪುರದರಸು ಸಿಂಹಾಸನಕೆ ಭೂ
ವರ ವಿಭೀಷಣದೇವನೆಂದೇ ಹೊಯ್ಸಿ ಡಂಗುರವ
ಇರಿಸಿ ಕಾವಲ ಕೇರಿಕೇರಿಗೆ । ಹರಿಚಮೂಪರನೈದಿದನು ಬಂ
ಧುರದಶೋಕಾವನದ ದೇವಿಯ ಕಂಡನಾ ಹನುಮ ೨

ಚರಣಕಾನತನಾಗಿ ಕೆಲಸಾ । ರ್ದರಿಭಯಂಕರನುಭಯ ಕರಸರ
ಸಿರುಹವನು ಮುಗಿದೊಯ್ಯನೊಸಗೆಯ ವಾರ್ತೆಯನು ಬಳಿಕ
ವಿರಚಿಸಿದನಾ ವೀರ ದಶಕಂ । ಧರಶಿರಃಕಂತುಕ ವಿನೋದದ
ಧುರಧುರಂಧರ ದುಷ್ಪದೋರ್ದಂಡಪ್ರತಾಪಕವ ೩

ಸೂಚನೆ॥ ಹನುಮಂತನನ್ನು ಲಂಕಾನಗರಕ್ಕೆ ಕಳುಹಿಸಿ ಬೆದರಿದ ಪುರಜನಗಳನ್ನು ಸಮಾಧಾನಪಡಿಸಿ ರಾವಣನ ಅಂತ್ಯಸಂಸ್ಕಾರಕಾರ್ಯವನ್ನು ನೆರವೇರಿಸುವಂತೆ ತನ್ನ ಭಕ್ತನಾದ ವಿಭೀಷಣನಿಗೆ ರಾಮನು ಅಪ್ಪಣೆ ಮಾಡಿದನು. ೧. "ಹನುಮಂತ ಲಂಕಾನಗರದೊಳಕ್ಕೆ ಹೋಗಿ ಗಲಾಟೆಯಾಗದಂತೆ ಪುರಜನಗಳನ್ನು ಸಮಾಧಾನಪಡಿಸು' ಗಲಿಬಿಲಿಯುಂಟುಮಾಡುವ ಸೊಕ್ಕಿದ ರಾಕ್ಷಸರನ್ನು ಶಿಕ್ಷಿಸು. ಅಶೋಕವನದಲ್ಲಿರುವ ಸೀತೆಯ ಸ್ಥಿತಿಯನ್ನು ತಿಳಿದುಬಾ, ಹೋಗು" ಎಂದು ರಾಮನು ಹೇಳಲು ಹನುಮಂತನು 'ಮಹಾಪ್ರಸಾದ' ಎಂದು ನಮಸ್ಕರಿಸಿ ವಾನರಜನರೊಡನೆ ಲಂಕಾಪುರಕ್ಕೆ ಬಂದ. ೨. ಹನುಮಂತನು ಲಂಕಾಪುರದ ಜನರನ್ನು ಸಮಾಧಾನಪಡಿಸಿ 'ವಿಭೀಷಣ ದೇವನು ಲಂಕಾನಗರದ ರಾಜ' ಎಂಬುದಾಗಿ ಡಂಗುರ ಹೊಡಿಸಿದನು. ವಾನರದಳಪತಿ ಗಳನ್ನು ಕೇರಿಕೇರಿಯಲ್ಲೂ ಕಾವಲುಹಾಕಿ ಸುಂದರವಾದ ಅಶೋಕವನಕ್ಕೆ ಬಂದು ಸೀತಾದೇವಿಯನ್ನು ಕಂಡನು. ೩. ಸೀತೆಯ ಪಾದಗಳಿಗೆ ನಮಸ್ಕರಿಸಿ ಪಕ್ಕಕ್ಕೆ ಸರಿದು ನಿಂತು ಶತ್ರುಭಯಂಕರ ಹನುಮಂತನು ಎರಡೂ ಕೈಗಳನ್ನು ಜೋಡಿಸಿ ಕೈಮುಗಿದುಕೊಂಡು ಶುಭಸಮಾಚಾರವನ್ನು ತಿಳಿಸಿದನು. ವೀರ ದಶಕಂಠನ ತಲೆಯನ್ನು ಚೆಂಡಾಡಿದ ಯುದ್ಧಧುರೀಣನಾದ ರಾಮನ ಬಾಹುಪ್ರತಾಪದ ವಿನೋದಪ್ರಸಂಗವನ್ನು ಹನುಮಂತ

ಲೋಕಕಂಟಕ ಕುಂಭಕರ್ಣನ । ನಾ ಕಠೋರ ಖರಾತ್ಮಜನ ಮೂ
ಲೋಕದಲ್ಲಣ ರಾವಣಾಸುರ ಮುಖ್ಯ ರಾಕ್ಷಸರ
ನೂಕಿದನು ಯಮಪುರಿಗೆ ರಣದೊಳ । ಗೇಕಪತ್ನೀವ್ರತನು ಸಮರ
ವ್ಯಾಕರಣಪಂಡಿತನು ಹರಕೋದಂಡಖಂಡಿತನು ೪

ಸಾಯಕದ ಮುಖದಲ್ಲಿ ಬಳಿಕತಿ । ಕಾಯನನು ಮಾಯಾಪ್ರಬಲ ವ
ಜ್ರಾಯುಧಾಂತಕ ಮುಖ್ಯವೀರರನಸಮ ಸಮರದಲಿ
ವಾಯುಪಥಕೇಱಿಸಿದನಾ ರಘು । ರಾಯನನುಜನು ಮಿಕ್ಕ ಕಪಿಭಟ
ನಾಯಕರು ಕೊಂದರು ಸಮಸ್ತ ನಿಶಾಟನಾಯಕರ ೫

ಎನೆ ಮನೋದ್ಗಮವಾದ ಹರುಷಾ । ನನದ ಹೊಂಪುಳಿಯೋದ ಹೆಂಪಿನ
ತನುವನಲಿದುಮ್ಮಳದಲಾನಂದಾಶ್ರುಪೂರದಲಿ
ಇನಿಯನಧಿಕ ಪರಾಕ್ರಮದ ಭಾ । ವನೆಯನಂಗೀಕರಿಸಿ ಹನುಮನ
ಮನಕೆ ಬಹ ಮಾತುಗಳ ನುಡಿದಳು ಮಧುರವಚನದಲಿ ೬

ಶ್ರೀಕರಿಸಿದುದು ಕೀರ್ತಿ ಸತ್ಕುಲ । ಶಾಖೆ ತಳಿತುದು ಸುಪ್ರತಾಪ ಮ
ಯೂಖಮಾಲೆಯು ಮೆಱೆಸಿದುದು ಕೇಳ್ ಹನುಮ ನಿನ್ನಿಂದ
ಆ ಖರಾರಿಗೆ ವಿಜಯವಿಭವವು । ಲೇಖವಾದುದುಯೆಂದು ಸಿಂಧು ಸ
ಮೇಖಲಾಲಂಕೃತೆಯ ಸುತೆ ಕೊಂಡಾಡಿದಳು ಕಪಿಯ ೭

ಸೀತೆಗೆ ವಿವರಿಸಿದ. ೪. "ಏಕಪತ್ನೀವ್ರತಸ್ಥನೂ ಯುದ್ಧವ್ಯಾಕರಣಪಂಡಿತನೂ ಶಿವಧನುಸ್ಸನ್ನು ಮುರಿದವನೂ ಆದ ರಾಮನು ಲೋಕಕಂಟಕನಾದ ಕುಂಭಕರ್ಣ, ಕಠೋರ ಖರನ ಮಗ ಮಕರಾಕ್ಷ, ಲೋಕವನ್ನು ನಡುಗಿಸಿದ ರಾವಣಾಸುರ ಮೊದಲಾದ ಮುಖ್ಯ ರಾಕ್ಷಸರನ್ನು ಯುದ್ಧದಲ್ಲಿ ಯಮನ ಪಟ್ಟಣಕ್ಕೆ ಕಳುಹಿಸಿದನು. ೫. ಅತಿ ಕಾಯ, ಮಹಾಬಲಶಾಲಿ ಇಂದ್ರಜಿತು ಮೊದಲಾದ ಪ್ರಮುಖವೀರರನ್ನು ಘೋರ ಯುದ್ಧದಲ್ಲಿ ರಘುರಾಮನ ತಮ್ಮ ಲಕ್ಷ್ಮಣನು ಆಕಾಶಕ್ಕೆ ಹಾರಿಸಿದನು. ಉಳಿದ ವೀರ ವಾನರನಾಯಕರು ಸಕಲ ರಾಕ್ಷಸನಾಯಕರನ್ನು ಕೊಂದರು" ಎಂದು ಹನುಮಂತ ಸೀತೆಗೆ ವಿವರಿಸಿದ. ೬. ರಾವಣನ ಮರಣವನ್ನು ಹನುಮಂತನಿಂದ ಕೇಳಿ ಹರ್ಷಮುಖ ದಿಂದ ಸೀತೆ ರೋಮಾಂಚಗೊಂಡು ದುಃಖವಿಂಗಿ ಸಂತೋಷದ ಕಣ್ಣೀರು ಸುರಿ ಸುತ್ತ ಪತಿಯ ಅತಿಶಯವಾದ ಪರಾಕ್ರಮವನ್ನು ಮನಸ್ಸಿನಲ್ಲಿ ಅನುಭವಿಸಿ ಹನುಮಂತನ ಮನಸ್ಸಿಗೆ ಹಿತವಾದ ಸವಿಮಾತುಗಳನ್ನಾಡಿದಳು ಸೀತೆ. ೭. "ಕೀರ್ತಿಯು ಏಳಿಗೆ ಹೊಂದಿತು. ಸತ್ಕುಲವೆಂಬ ಕೊಂಬೆಯು ಚಿಗುರಿತು. ಪರಾಕ್ರಮದ ಪ್ರಕಾಶದಲೆಯು ಮೆರೆಯಿತು. ಇದೆಲ್ಲ ನಿನ್ನಿಂದ, ಕೇಳು ಹನುಮಂತ. ಖರನನ್ನು ಕೊಂದವನಿಗೆ ವಿಜಯದ ವೈಭವವು ಚಿರಸ್ಥಾಯಿಯಾಯಿತು" ಎಂದು ಸಮುದ್ರವನ್ನು ಒಡ್ಯಾಣವಾಗಿ ಅಲಂಕರಿಸಿಕೊಂಡ ಭೂಮಿಯ ಮಗಳು ಹನುಮಂತನನ್ನು ಕೊಂಡಾಡಿದಳು.

ಇದುವೆ ನಿಮ್ಮ ಪತಿವ್ರತಾಸಂ । ಪದದ ಗುಣವಲ್ಲದಡೆ ಕಲ್ಲಿನ
ಲುದಧಿ ಕಟ್ಟಿಸಿಕೊಂಬುದೇ ಕಪಿಗಳು ನಿಶಾಚರರ
ಕದನದಲಿ ಜಯಿಸುವರೆ ಕಲಿದಶ । ವದನನಳಿವನೆ ತಾಯೆಯೆಂದಾ
ಮದನಮದಮುಖವೈರಿ ಮಹಿಜಾದೇವಿಗಿಂತೆಂದ ೮

ಬಿಡುವುದಿನ್ನುಮ್ಮಳವನಾಯಾಸ । ಸಡಿಲಲಿನಕುಲದವನಿಪಗೆ ನಿ
ಮ್ಮೆದೆಯಲಕ್ಕರು ಘನಮನಸ್ನೇಹ ಪ್ರಪಂಚಕದ
ಜಡತೆಯಿಲ್ಲೆನೆ ಹರುಷ ಹೊರೆದು । ಗ್ಗದದ ಕಂಬನಿಯಿಂದ ಜಾನಕಿ
ನುಡಿದಳರಸನ ಮನಸು ಬಿಜೆಸೆಲೆ ಹನುಮ ತನ್ನೆಡೆಗೆ ೯

ಕಳುಹಿದೆನು ಕಾಂಚನದ ಹರಿಣನ । ಬಳಿಯ ಬಯಕೆಯ ಭರದಲರಸನ
ಕಳುಹಿದೆನು ಕಡೆನುಡಿದು ಕಾಂತಾರದಲಿ ಮೈದುನನ
ಖಳನ ಕೈವಶವಾದೆನಿದು ಹಾ । ತಳಿಕೆಯಲ್ಲವೆ ಹೆಂಗುಸಿಗೆ ಮನ
ದೊಳಗೆ ರಘುಪತಿಯೇನ ಬಗೆವನೊಯೆಂದಳಬುಜಾಕ್ಷಿ ೧೦

ಮಾತನಾಡಿಸಿ ಕೇಳಿದಡೆ ನಾ । ನೇತೆಜಿದಿನುತ್ತರವ ಕೊಡುವೆನು
ಮಾತನಾಡದಡವನಿಪನನೇನೆಂದು ನುಡಿಸುವೆನು
ಓತಡೆನ್ನಯ ಭಾಗ್ಯವೊಲಿಯದ । ಡೇತಜಿವು ಬಳಕುಳಿವು ಹೊಗುವೆನು
ವೀತಿಹೋತ್ರನನೆಂದು ಕಂಬನಿದುಂಬಿದಳು ಸೀತೆ ೧೧

೮. "ಇದು ನಿಮ್ಮ ಪತಿವ್ರತಾಸಂಪತ್ತಿನ ಗುಣ. ಇಲ್ಲದಿದ್ದರೆ ಸಮುದ್ರವು ಕಲ್ಲಿನಿಂದ ಸೇತುವೆ ಕಟ್ಟಿಸಿಕೊಳ್ಳುವುದೇ, ಕಪಿಗಳು ರಾಕ್ಷಸರನ್ನು ಕದನದಲ್ಲಿ ಜಯಿಸುತ್ತಾರೆಯೆ, ವೀರ ದಶಮುಖನು ಸಾಯುವನೆ, ತಾಯೆ" ಎಂದು ಹನುಮಂತ ಸೀತಾದೇವಿಗೆ ಹೇಳಿದ.
೯. "ಇನ್ನು ಚಿಂತೆಯನ್ನು ಬಿಡಿ. ಯುದ್ಧದ ಆಯಾಸ ಕಡಮೆಯಾದ ಬಳಿಕ ರವಿಕುಲದರಸನಿಗೆ ನಿಮ್ಮಲ್ಲಿಯ ಪ್ರೀತಿ ಮತ್ತು ಮನಸ್ಸಿನ ಗೆಳೆತನದ ವಿಷಯದಲ್ಲಿ ಅನಾಸಕ್ತಿಯಿಲ್ಲ" ಎಂದು ಹನುಮಂತನು ನುಡಿಯಲು ಸಂತೋಷದಿಂದ ಕಣ್ಣೀರು ಉಕ್ಕಿಸುತ್ತ ಜಾನಕಿ, "ಹನುಮಂತ, ನನ್ನ ವಿಷಯದಲ್ಲಿ ಅರಸನ ಮನಸ್ಸು ಕಠಿಣ" ಎಂದಳು.
೧೦. "ಚಿನ್ನದ ಜಿಂಕೆಯ ಮೇಲಿನ ಉತ್ಕಟವಾದ ಆಸೆಯಿಂದ ಅರಸನನ್ನು ಕಳುಹಿಸಿದೆ. ಮೈದುನನನ್ನು ನಿಂದಿಸಿ ಕಾಡಿಗೆ ಕಳುಹಿಸಿದೆ. ಬಳಿಕ ರಾಕ್ಷಸನ ಕೈವಶವಾದೆ. ಇದು ಹೆಂಗಸಿಗೆ ದುಷ್ಟತನವಲ್ಲವೇ! ರಘುಪತಿ ಏನು ಯೋಚಿಸುವನೋ ?" ಎಂದಳು ಸೀತೆ.
೧೧. "ರಾಮನು ನನ್ನನ್ನು ಮಾತನಾಡಿಸಿ ಕೇಳಿದರೆ ನಾನು ಯಾವ ರೀತಿ ಉತ್ತರ ಕೊಡಲಿ. ಮಾತನಾಡದಿದ್ದರೆ ಅರಸನನ್ನು ನಾನು ಏನೆಂದು ಮಾತನಾಡಿಸಲಿ. ನನ್ನನ್ನು ಒಲಿದರೆ ನನ್ನ ಅದೃಷ್ಟ ; ಒಲಿಯದೆ ಇದ್ದರೆ ಬದುಕಿ ಏನು ಪ್ರಯೋಜನ. ಆಗ ಅಗ್ನಿಯನ್ನು ಪ್ರವೇಶಿಸುತ್ತೇನೆ" ಎಂದು ಕಣ್ಣುಗಳಲ್ಲಿ ನೀರು ತುಂಬಿಕೊಂಡಳು ಸೀತೆ.

ವಿಹಿತವಲ್ಲೀ ನುಡಿ ನಿಮಗೆ ನಿ । ಸ್ಪೃಹತೆಯುಳ್ಳಡೆ ಹಗೆಯ ಕೊಲಲೈ
ತಹನೆ ನಿಮ್ಮಯ ಜೀವಿತೇಶನು ನಿಮ್ಮ ನೆನಹಿನಲಿ
ಇಹ ಮನವ ನಾ ಬಲ್ಲೆ ನೀವು । ಮ್ಮಹದ ಚಿಂತೆಯ ಬಿಸುಡಿ ನೇಮವೆ
ಮಹಿಪನೆಡೆಗೆನೆ ಬೀಳುಕೊಟ್ಟಳು ಪವನನಂದನನ ೧೨

ನಮಿಸಿ ನಿಮಿಕುಲವಾರ್ಧಿವರ್ಧನ । ಕುಮುದಬಾಂಧವನಂಗನೆಗೆ ವಿ
ಕ್ರಮ ಮಹಾರ್ಣವನೈದಿದನು ರಘುರಾಮ ಚಂದ್ರಮನ
ನಮಿಸಿದನು ನರನಾಟಕದ ಮಾ । ರಮಣನಂಘ್ರಿ ಸರೋರುಹಕೆ ಸಂ
ಭ್ರಮವಿದೇನೈ ಹನುಮ ಹೇಳೆಂದರಸ ಬೆಸಗೊಂಡ ೧೩

ಪುರಜನವ ಸಂತೈಸಿದೈ ದಶ । ಶಿರನ ತಮ್ಮನ ಜೀಯ ಗಾವಳಿ
ಗರನು ಶಿಕ್ಷಿಸಿದೈ ಹಸಾದ ವಿಭೀಷಣನ ಗೃಹಕೆ
ಇರಿಸಿದೈ ಕಾವಲನು ಬಲ್ಲಿದ । ಪರಿಚಮೂಪರ ದೇವಿ ಸೀತೆಯ
ಪರಿಯನಱಿದೈಯೆನಲು ಬಿನ್ನಹ ಮಾಡಿದನು ಹನುಮ ೧೪

ಅಂದಿನಂದಿನ ದಿನಕೆ ತನುವತಿ । ಕಂದಿದುದು ದೇವಿಯರ ದೇವರ
ದೊಂದು ನಾಮಸ್ಮರಣೆ ತಪ್ಪಿಸಿ ಕಾಣೆನನ್ಯವನು
ಸಂದ ಸಂಗರದಲಿ ದಶಾಸ್ಯನ । ಕೊಂದ ಹದನನು ಹೇಳೆ ಹರುಷವ
ನೊಂದು ಭಾಗವ ಧರಿಸಿದುದು ಸಿರಿವದನವಂಬಿಕೆಯ ೧೫

೧೨. "ನಿಮಗೆ ಈ ಮಾತು ಯೋಗ್ಯವಲ್ಲ. ನಿಮ್ಮ ವಿಷಯದಲ್ಲಿ ನಿರಾಸಕ್ತಿಯಿದ್ದರೆ ರಾಮನು ಶತ್ರುವನ್ನು ಕೊಲ್ಲಲು ಬರುವನೆ ? ನಿಮ್ಮ ಪತಿಯು ನಿಮ್ಮ ನೆನಪಿನಲ್ಲಿ ಇರುವುದನ್ನು ನಾನು ಬಲ್ಲೆ. ನೀವು ಚಿಂತೆಯ ಕಾತುರತೆಯನ್ನು ಬಿಡಿ. ನಾನು ಅರಸನ ಬಳಿಗೆ ಹೋಗಲು ಅಪ್ಪಣೆಯೆ ?" ಎನ್ನಲು ಸೀತೆ ಹನುಮಂತನನ್ನು ಕಳುಹಿಸಿಕೊಟ್ಟಳು. ೧೩. ನಿಮಿವಂಶಸಾಗರವನುಕ್ಕಿಸುವ ಚಂದ್ರನಾದ ಶ್ರೀರಾಮಚಂದ್ರನ ಪತ್ನಿಗೆ ನಮಸ್ಕರಿಸಿ ಪರಾಕ್ರಮಸಾಗರ ಹನುಮಂತನು ರಘುರಾಮಚಂದ್ರನ ಬಳಿಗೆ ಬಂದನು. ನರನಾಟಕವಿನೋದದ ಲಕ್ಷ್ಮೀಪತಿಯ ಪಾದಕಮಲಗಳಿಗೆ ನಮಿಸಿದನು. "ಇದೇನು ಸಂಭ್ರಮ, ಹೇಳು ಹನುಮಂತ" ಎಂದು ರಾಮನು ಪ್ರಶ್ನಿಸಿದ. ೧೪. ರಾಮ–'ರಾವಣನ ತಮ್ಮನ ಪುರಜನರನ್ನು ಸಮಾಧಾನಪಡಿಸಿದೆಯಾ ?' ಹನುಮಂತ–'ಹೌದು ಸ್ವಾಮಿ'. ರಾಮ–'ಗಲಭೆಕೋರರನ್ನು ಶಿಕ್ಷಿಸಿದೆಯಾ ?' ಹನುಮಂತ-'ನಿಮ್ಮ ಅನುಗ್ರಹ ಪ್ರಭು.' 'ಸಮರ್ಥರಾದ ವಾನರದಳಪತಿಗಳನ್ನು ವಿಭೀಷಣನ ಮನೆಗೆ ಕಾವಲಿಟ್ಟೆಯಾ ? ಸೀತೆಯ ಸ್ಥಿತಿಯನ್ನು ತಿಳಿದೆಯಾ ?' ಎಂದು ರಾಮನು ಪ್ರಶ್ನಿಸಲು ಹನುಮಂತನು ಮುಂದಿನಂತೆ ವಿನಂತಿಮಾಡಿದನು. ೧೫. "ಅಂದು ನೋಡಿದಾಗಿನಿಂದ ಇಂದಿಗೆ ದೇವಿಯರ ದೇಹ ಕಂದಿದೆ. ಸ್ವಾಮಿಯವರ ನಾಮಸ್ಮರಣೆಯನ್ನು ಬಿಟ್ಟು ಇನ್ನೊಂದನ್ನು ಅವರಲ್ಲಿ ಕಾಣಲಿಲ್ಲ. ಈಗ ನಡೆದ ಯುದ್ಧದಲ್ಲಿ ದಶಕಂಠನನ್ನು ಕೊಂದ ವಿಚಾರವನ್ನು ತಿಳಿಸಲು ಸೀತಾಮಾತೆಯ ಶ್ರೀಮುಖದ ಒಂದು ಭಾಗದಲ್ಲಿ ಮಾತ್ರ ಹರ್ಷಮೂಡಿತು.

ದೇವಿಯುತ್ತರಕಾರಿಯುದ ಸಂ । ಭಾವನೆಯು ನೀಮಜೀಯುದುದೆ ಬಳಿ
ಕಾ ವಿದೇಹಕುಮಾರಿ ಕಳುಹಿದಳಶ್ರುಜಲ ಜಡಿಯೆ
ದೇವರಿದ್ದೆಡೆಗೆನ್ನ ನಿಮ್ಮ ಕೃ । ಪಾವಲಂಬನವೆಂತುಟೆಂಬುದ
ನಾವು ಬಲ್ಲೆವೆಯೆಂದು ಬಿನ್ನಹ ಮಾಡಿದನು ಹದನ ೧೬

ಸಾಕು ಬಳಲಿದೆ ಕುಳ್ಳಿರೆಮಗಿ । ನ್ನೇಕೆ ಗತಕಾರ್ಯಪ್ರಸಂಗ
ವ್ಯಾಕುಲತೆಯೆಂದೀಕ್ಷಿಸಿದನಾ ಶರಣನಾನನವ
ಶಾಕದಿರು ಚಿಂತೆಯನು ನಡೆ ನೀ । ಕೈಕಸೆಯ ನಂದನಗೆ ಮಾಡು ನಿ
ರಾಕುಲಿತೆಯಿಂದೂರ್ಧ್ವದೇಹಿಕ ವಿಹಿತ ಸಂಸ್ಕೃತಿಯ ೧೭

ಬೀಳುಕೊಂಡಸುರೇಂದ್ರ ಬಂದು ವಿ । ಶಾಲ ವೈದಿಕ ವಿಹಿತದಿಂ ದಶ
ಮೌಳಿಯನು ಸಂಸ್ಕರಿಸಿದನು ಬಳಿಕಾಹಿತಾಗ್ನಿಯಲಿ
ಬಾಲಕಿಯರೊಜಗಿದರು ವಹ್ನಿ । ಜ್ವಾಲೆಯಲಿ ಮಿಕ್ಕಸುರರಗ್ಗದ
ಬಾಲೆಯರು ಸಹಗಮನದಲಿ ನೀಗಿದರು ನಿಜತನುವ ೧೮

ಹೊತ್ತಿಸಿದರಗ್ನಿಯನು ಬಳಿಕಂ । ಬತ್ತು ಯೋಜನದಗಲದಿಳೆಯಲಿ
ಸತ್ತ ಸುಭಟರ ಮೇಲೆ ತಳಿಗಳನೊಟ್ಟಿ ನೀರಸದ
ಇತ್ತರುದಕಾಂಜಲಿಯನನಿಬರ । ಪುತ್ರಮಿತ್ರಜ್ಞಾತಿಗಳು ಸ
ದ್ವೃತ್ತ ವೀರ ವಿಭೀಷಣಾಸುರನೊಡನೆ ಬಳಿಕೆಂದ ೧೯

೧೬. ಮುಂದೆ ದೇವಿಯರ ವಿಷಯವಾಗಿ ಏನಂಮಾಡಬೇಕೆಂಬ ವಿಚಾರ ನಿಮಗೆ ತಿಳಿಯದುದೆ. ಕೊನೆಗೆ ವಿದೇಹರಾಜಕುಮಾರಿ ಕಣ್ಣೀರು ತುಂಬಿಕೊಂಡು ಸ್ವಾಮಿಯವರ ಬಳಿಗೆ ನನ್ನನ್ನು ಕಳುಹಿಸಿಕೊಟ್ಟರು. ನಿಮ್ಮ ಕರುಣೆ ಹೇಗಿರುವುದೆಂಬುದನ್ನು ನಾವು ಬಲ್ಲೆವೆ" ಎಂದು ಇದ್ದ ವಿಷಯವನ್ನು ಹನುಮಂತ ವಿಜ್ಞಾಪನೆಮಾಡಿದ. ೧೭. "ನೀನು ಆಯಾಸಪಟ್ಟೆ. ಸಾಕು ಕುಳಿತುಕೋ. ಕಳೆದುಹೋದ ಪ್ರಸಂಗದ ಬಗ್ಗೆ ನಮಗೇಕೆ ಚಿಂತೆ" ಎಂದು ನುಡಿದು ರಾಮನು ಭಕ್ತ ವಿಭೀಷಣನ ಮುಖವನ್ನು ನೋಡಿ, "ವ್ಯಥೆಯನ್ನು ಹೆಚ್ಚು ಮಾಡಿಕೊಳ್ಳಬೇಡ. ನೀನು ಹೋಗಿ ಕೈಕಸೆಯ ಮಗ ರಾವಣನಿಗೆ ಅಂತ್ಯಕ್ರಿಯಾಸಂಸ್ಕಾರಗಳನ್ನು ನಿಶ್ಚಿಂತೆಯಿಂದ ನಡೆಸು ಹೋಗು" ಎಂದ. ೧೮. ರಾಮನನ್ನು ಬೀಳ್ಕೊಂಡ ರಾಕ್ಷಸರರಸ ವಿಭೀಷಣನು ಬಂದು ವೈದಿಕಕ್ರಮದಿಂದ ದಶಕಂಠನಿಗೆ ಆಹಿತಾಗ್ನಿಯಲ್ಲಿ ಅಂತ್ಯಸಂಸ್ಕಾರವನ್ನು ನಡೆಸಿದನು. ರಾವಣನ ಪತ್ನಿಯರು ಅಗ್ನಿಜ್ವಾಲೆಯಲ್ಲಿ ಪ್ರಾಣ ನೀಗಿದರು. ಉಳಿದ ರಾಕ್ಷಸರ ಪತ್ನಿಯರು ಸಹಗಮನದ ಮೂಲಕ ತಮ್ಮ ದೇಹವನ್ನು ಒಪ್ಪಿಸಿದರು. ೧೯. ಸತ್ತ ವೀರರ ಮೇಲೆ ಒಣಗಿದ ಮರದ ಕೊರಡುಗಳನ್ನು ಒಟ್ಟಿ ಎಂಬತ್ತು ಯೋಜನ ಅಗಲ ಭೂಮಿಯಲ್ಲಿ ಬೆಂಕಿಯನ್ನು ಹತ್ತಿಸಿದರು. ಸತ್ತವರೆಲ್ಲರ ಮಕ್ಕಳು, ಸ್ನೇಹಿತರು, ಜ್ಞಾತಿಗಳು ಸಚ್ಚರಿತ ವಿಭೀಷಣಾಸುರನೊಡನೆ ಜಲದ ತರ್ಪಣವನ್ನು ಕೊಟ್ಟರು.

# ಐವತ್ತುಮೂರನೆಯ ಸಂಧಿ

ಸೂಚನೆ॥ ಶರಣನನು ಪತಿಕರಿಸಿ ಲಂಕಾ । ಪುರದ ಪಟ್ಟವ ಕಟ್ಟಿ ಸೀತೆಯ
ವರಿಸಿದನು ರಘುನಾಥನಭವಾದಿಗಳು ನಲಿದಾಡೆ

ಎಲೆ ಕುಶನೆ ಕೇಳಾದುದಲ್ಲಿಂ । ಬಳಿಕ ವೈದಿಕವಿಧಿಯಲಾ ದಶ
ಗಳ ಸುರೇಂದ್ರಜಿತು ಪ್ರಮುಖ ರಾಕ್ಷಸರ ಸಂಸ್ಕಾರ
ಬಲಿದ ಚಿಂತೆಯ ಮನದ ಬೆಜಿಗಿನ । ಬೆಳವಿಗೆಯ ಭಾರಣೆಯ ಕರಣದ
ಲಳುಕುತೈತಂದಾ ವಿಭೀಷಣನೆಜಗಿದನು ಪದಕೆ ೧

ಕಂಡ ಶರಣಾಗತನ ವಿಭವಾ । ಖಂಡಲನು ಕರುಣದಲಿ ಕಾಣಿಕೆ
ಗೊಂಡು ಪತಿಕರಿಸಿದನು ಪರಮಪ್ರಿಯತರೋಕ್ತಿಯಲಿ
ಚಂಡಬಲ ಸುಗ್ರೀವ ಜಾಂಬವ । ಗಂಡುಗಲಿ ಹನುಮಂತರನು ಮಾ
ರ್ತಾಂಡವಂಶಲಲಾಮ ಕರೆದಿಂತೆಂದು ನೇಮಿಸಿದ ೨

ಈತ ನಮ್ಮನು ಕಂಡ ದಿನದಲಿ । ಮಾತನಾಡಿದೆವಾವುದನು ನಾ
ವೀತಗಾ ಮರ್ಯಾದೆಯಲಿ ಪಟ್ಟಾಭಿಷೇಚನವ
ಖ್ಯಾತವಾಗಿಯೆ ಮಾಡುವುದು ವಿಭ । ವಾತಿಶಯ ವಿಗೆ ಹೋಗಿ ನೀವೆಂ
ದಾತಗಳ ಬೀಳ್ಕೊಡಲು ಕೈಮುಗಿದೆಂದನಸುರೇಂದ್ರ ೩

ಸೂಚನೆ॥ ಭಕ್ತ ವಿಭೀಷಣನನ್ನು ಗೌರವಿಸಿ ಅವನಿಗೆ ಲಂಕಾಪುರದ ಪಟ್ಟವನ್ನು ಕಟ್ಟಿ ರಘುನಾಥನು ಸೀತೆಯನ್ನು ವರಿಸಿದನು. ಆಗ ಈಶ್ವರನೇ ಮೊದಲಾದವರು ನಲಿದಾಡಿದರು. ೧. ಕುಶನೆ ಕೇಳು, ಅನಂತರ ವೇದದಲ್ಲಿ ಹೇಳಿರುವ ಪ್ರಕಾರ ದಶಕಂಠ, ಇಂದ್ರಜಿತು ಮೊದಲಾದ ಪ್ರಮುಖ ರಾಕ್ಷಸರ ಅಂತ್ಯಸಂಸ್ಕಾರವು ನಡೆಯಿತು. ಚಿಂತೆ ಹೊತ್ತು ಭಯದಿಂದ ಅಳುಕುತ್ತ ಬಂದ ವಿಭೀಷಣನು ರಾಮನ ಪಾದಗಳಿಗೆರಗಿದನು. ೨. ಶರಣಾಗತನನ್ನು ಕಂಡು ವೈಭವೇಂದ್ರ ರಾಮನು ಕರುಣದಿಂದ ಅವನಿತ್ತ ಕಾಣಿಕೆಯನ್ನು ಸ್ವೀಕರಿಸಿ ಅತ್ಯಂತ ಪ್ರೀತಿಯ ಮಾತುಗಳಿಂದ ಅನುಗ್ರಹಿಸಿದನು. ಬಳಿಕ ರವಿಕುಲತಿಲಕ ರಾಮನು ಭಯಂಕರ ಬಲಶಾಲಿ ಸುಗ್ರೀವ, ಜಾಂಬವ, ಗಂಡುಗಲಿ ಹನುಮಂತ ಇವರುಗಳನ್ನು ಕರೆದು ಮುಂದಿನಂತೆ ಅಪ್ಪಣೆಮಾಡಿದನು. ೩. "ಈತನು ಮೊದಲು ನಮ್ಮ ಬಳಿಗೆ ಬಂದು ನಮ್ಮನ್ನು ಕಂಡ ದಿವಸ ನಾವು ಏನು ಮಾತು ಹೇಳಿದ್ದೇವೆಯೋ ಅದರಂತೆ ಮರ್ಯಾದಾಪೂರ್ವಕವಾಗಿ ವೈಭವದಿಂದ ಪಟ್ಟಾಭಿಷೇಕವನ್ನು ನಡೆಸಿಕೊಡಿ, ಹೋಗಿ ನೀವು" ಎಂದು ನುಡಿದು ರಾಮನು ಅವರನ್ನು ಕಳುಹಿಸಿಕೊಟ್ಟನು. ಆಗ

ಅರಸುತನಕೋಸುಗವೆಯಣ್ಣನ । ಮರಣಕಿಂತ್ಯವ ಬಗೆದೆನೇ ನಾ
ನರಚರಿತ್ರದ ನಾಟಕವದಿನ್ನೇಕೆ ದೇವರಿಗೆ
ಪರವ ಪಡೆವವನೈಸೆ ತಾನಿಹ । ಕಿರವಿಗನಲಾ ದೇವರೀಪರಿ
ಕರುಣಿಸುವರೇ ಕಷ್ಟವೃತ್ತಿಯನೆಂದನಸುರೇಂದ್ರ ೪

ದೇವರೊಡೆಯರು ತೋಱುವೀ ಭುವ । ನಾವಳಿಗೆ ರಾಜ್ಯಾಭಿಲಾಷೆಯು
ಸೇವಕರಿಗೀವುದು ಭವತ್ಪದಭಕ್ತಿ ಭೂತಳಕೆ
ದೇವರೆನ್ನನು ನಿಲಿಸುವುದು ಮ । ತ್ತಾವ ಮಾತನು ಬೆಸಸಬೇಡೆಂ
ದಾ ವಿಭೀಷಣನೆಱಗಿದನು ಮಗುಳರಸನಂಘ್ರಿಯಲಿ ೫

ಎಲೆ ವಿಭೀಷಣ ಕೇಳಿದೈ ರಘು । ಕುಲದ ರಾಯರು ತಪ್ಪಿ ನುಡಿಯರು
ಹಳಿವು ಹೊಱದಿದು ಸಿದ್ಧ ನಿನಗಿನ್ನೇಕೆ ಮಱುಮಾತು
ಹೊಳಲಿಗಭಿಮುಖನಾಗು ಮನದಲಿ । ಹಲವನೆಣಿಸದೆ ಮರಳಿ ಮಾತನು
ಬಳಸಿದರೆ ನಮ್ಮಾಣೆ ಹೋಗೆಂದರಸ ಬೀಳ್ಕೊಟ್ಟ ೬

ನಗರ ಸಿಂಗಾರಿಸಿತು ಸುರಪನ । ನಗರಿಗಿಮ್ಮಿಗಿಲೆನಲು ಪಲ್ಲವ
ವಗಿದವೆತ್ತಿದವಗಲದಲಿ ಗುಡಿತೋರಣಾದಿಗಳು
ಅಗರು ಕುಂಕುಮ ಗಂಧದಲಿ ಮಘ । ಮಘಿಸಿದವು ಬೀದಿಗಳು ಪಟ್ಟದ
ಸೊಗಸಿನಖಿಳದ್ರವ್ಯ ಸಂಪಾದಿಸಿತು ನಿಮಿಷದಲಿ ೭

ವಿಭೀಷಣನು ಕೈಮುಗಿದು ಈ ರೀತಿ ಹೇಳಿದನು. ೪. "ನಾನು ರಾಜ್ಯಾಧಿಕಾರವನ್ನು ಪಡೆಯುವುದಕ್ಕೋಸ್ಕರವೇ ಅಣ್ಣನ ಮರಣವನ್ನು ಬಯಸಿದೆನೇ, ಸ್ವಾಮಿಯವರಿಗೆ ಮಾನವನ ನಡವಳಿಕೆಯ ನಾಟಕ ಇನ್ನೇತಕ್ಕೆ. ನಾನು ಮೋಕ್ಷವನ್ನು ಪಡೆಯತಕ್ಕವನು, ಇನ್ನು ಈ ಲೋಕಕ್ಕೆ ನಾನು ಹೊರಗಿನವನು. ದೇವರು ಈ ರೀತಿಯಲ್ಲಿ ನನಗೆ ಕಷ್ಟ ಕಾರ್ಯವನ್ನು ದಯಪಾಲಿಸುವುದೇ ?" ಎಂದ ವಿಭೀಷಣ. ೫. "ಇಲ್ಲಿ ಕಾಣಿಸುವ ಈ ಲೋಕಗಳಿಗೆ ಸ್ವಾಮಿಯವರು ಒಡೆಯರು. ರಾಜ್ಯದಲ್ಲಿ ಆಸೆಯಿರುವ ನಿಮ್ಮ ಸೇವಕರಿಗೆ ರಾಜ್ಯವನ್ನು ಕೊಡಿ. ತಮ್ಮ ಪಾದಗಳ ಭಕ್ತಿಸಾಮ್ರಾಜ್ಯದಲ್ಲಿ ಪ್ರಭುಗಳು ನನ್ನನ್ನು ನಿಲ್ಲಿಸಿ. ಮತ್ತಾವುದನ್ನೂ ಅಪ್ಪಣೆಮಾಡಬೇಡಿ" ಎಂದು ನುಡಿದು ವಿಭೀಷಣನು ಪುನಃ ರಾಮನ ಪಾದಗಳಿಗೆರಗಿದನು. ೬. "ಅಯ್ಯಾ ವಿಭೀಷಣ, ರಘುವಂಶದ ರಾಜರು ತಪ್ಪಿ ನುಡಿಯುವುದಿಲ್ಲ, ನಿಂದೆಯನ್ನು ಹೊತ್ತುಕೊಳ್ಳುವುದಿಲ್ಲ ಎಂಬುದನ್ನು ಕೇಳಿದ್ದೀಯಲ್ಲವೇ ? ಇದು ಸತ್ಯ, ಇನ್ನು ನೀನು ಉತ್ತರ ಕೊಡಬೇಡ. ಮನಸ್ಸಿನಲ್ಲಿ ಏನೇನೋ ಯೋಚಿಸದೆ ನಗರಕ್ಕೆ ತಿರುಗು. ಪುನಃ ಮಾತನಾಡಿದರೆ ನಮ್ಮಾಣೆ, ಹೋಗು" ಎಂದು ರಾಮ ವಿಭೀಷಣನನ್ನು ಕಳಿಸಿಕೊಟ್ಟ. ೭. ದೇವೇಂದ್ರನ ಅಮರಾವತಿಗೆ ಎರಡರಷ್ಟೆನ್ನುವಂತೆ ಲಂಕಾನಗರವನ್ನು ಅಲಂಕರಿಸಿದರು. ಚಿಗುರುಗಳನ್ನು ತೂಗುಬಿಟ್ಟರು, ನಗರದ ಎಲ್ಲೆಡೆ ಬಾವುಟಗಳನ್ನು ಹಾರಿಸಿ, ತೋರಣಗಳನ್ನು ಕಟ್ಟಿದರು. ಅಗರು, ಕುಂಕುಮ, ಸುಗಂಧಗಳಿಂದ ಬೀದಿಗಳು ಘಮಘಮಿಸಿದವು. ತಕ್ಷಣ ಪಟ್ಟಾಭಿಷೇಕದ

ಬಳಿಕ ಮಂಗಳವಾದ್ಯರಭಸದ । ಲಿಳಿಯ ವಿಬುಧರ ನಿಗಮಮಂತ್ರದ
ಕಳಕಳದಲಿನಸುತ ಸುಮಿತ್ರಾತ್ಮಜರ ಹರಕೆಯಲಿ
ಸುಲಭವಾದುದು ಪಟ್ಟ ಕಂಡುದು । ಹೊಳಲಜನ ಪರಿಜನ ಸುಹೃಜ್ಜನ
ನಳಿನನಯನಾರಾಧಕನನಾ ವರ ವಿಭೀಷಣನ ೮

ಹರುಷ ಮಿಗೆ ಮನ್ನಿಸಿದನಾ ರಘು । ವರನ ತಮ್ಮನ ಬ್ರಹ್ಮಪುತ್ರನ
ತರಣಿತನುಜನ ವಾಯು ವಹ್ನಿ ಸುರೇಂದ್ರಸುತ ಸುತರ
ಕರಿ ರಥಾಶ್ವಪದಾತಿ ಪುರಜನ । ವೆರಸಿ ಕನ್ನಡಿಕಲಶ ಸಹಿತೂ
ರ್ವರೆಯ ಪತಿಯೆಡೆಗಾ ವಿಭೀಷಣದೇವ ನಡೆತಂದ ೯

ಪರಿಪರಿಯ ರತ್ನಂಗಳನು ಪರಿ । ಪರಿಯ ದಿವ್ಯ ವಿಭೂಷಣಂಗಳ
ಪರಿಪರಿಯ ದಿವ್ಯಾಂಬರಾದಿ ಸಮಸ್ತವಸ್ತುಗಳ
ಕರಿ ವರೂಥ ಸುವಾಹನಂಗಳ । ತರುಣಿಯರ ಕಾಣಿಕೆಯನಿತ್ತನು
ಚರಣಕಾನತನಾಗಿ ರಘುಕುಲಸಾರ್ವಭೌಮಂಗೆ ೧೦

ಶಿರವ ಸಿರಿಹಸ್ತದಲಿ ಮೆಲ್ಲನೆ । ಬರಸೆಳೆದು ಬಿಗಿಯಪ್ಪಿ ನುಡಿದನು
ದರಹಸಿತ ಮುಖದಿಂದ ನಿಜಶರಣಂಗೆ ವಿನಯದಲಿ
ಧರೆಯ ವೈಭವ ಸಹಿತ ಲಂಕಾ । ಪುರವನಿತ್ತೆನು ನಿನಗೆ ನಿನುಪ
ಚರಣೆ ಬಂದುದು ಪುರಕೆ ಕಳುಹೀ ಕಾಣಿಕೆಯನೆಂದ ೧೧

ಸಮಸ್ತವಸ್ತುಗಳನ್ನು ಸಂಗ್ರಹಿಸಿದರು. ೮. ಅನಂತರ ಮಂಗಳವಾದ್ಯಗಳು ಭೋರ್ಗರೆಯುತ್ತಿರಲು ಬ್ರಾಹ್ಮಣರ ವೇದಮಂತ್ರಗಳ ಘೋಷದೊಡನೆ ಸುಗ್ರೀವ ಲಕ್ಷ್ಮಣರ ಆಶೀರ್ವಾದ ಸಮೇತ ವಿಭೀಷಣನಿಗೆ ಪಟ್ಟಾಭಿಷೇಕವಾಯಿತು. ಲಂಕಾನಗರದ ಜನರು, ಪರಿವಾರದವರು ಮತ್ತು ಸ್ನೇಹಿತರು ಬಂದು ಕಮಲಾಕ್ಷ ಶ್ರೀರಾಮನ ಭಕ್ತನಾದ ವಿಭೀಷಣನ ದರ್ಶನವನ್ನು ಪಡೆದರು. ೯. ವಿಭೀಷಣನು ಆನಂದದಿಂದ ಲಕ್ಷ್ಮಣ, ಜಾಂಬವ, ಸುಗ್ರೀವ, ಮಾರುತಿ, ನೀಲ, ಅಂಗದರುಗಳನ್ನು ಗೌರವಿಸಿದನು. ಆನೆ, ಕುದುರೆ, ರಥ, ಕಾಲುದಳ ಮತ್ತು ಪುರಜನರುಗಳೊಡನೆ ಕನ್ನಡಿ ಕಲಶ ಸಹಿತ ಪೃಥ್ವೀಪತಿ ರಾಮನ ಬಳಿಗೆ ವಿಭೀಷಣನು ಬಂದನು. ೧೦. ವಿಭೀಷಣನು ರಘುಕುಲ ಚಕ್ರವರ್ತಿಯ ಪಾದಗಳಿಗೆರಗಿ ವಿವಿಧ ರತ್ನಗಳು, ಅನೇಕ ರೀತಿಯ ದಿವ್ಯ ಆಭರಣಗಳು. ನಾನಾವಿಧದ ದಿವ್ಯ ವಸ್ತ್ರಗಳೇ ಮೊದಲಾದ ಸಮಸ್ತ ವಸ್ತುಗಳನ್ನೂ ಆನೆ, ರಥ ಮೊದಲಾದ ಉತ್ತಮ ವಾಹನಗಳನ್ನೂ. ತರುಣಿಯರನ್ನೂ ಕಾಣಿಕೆಕೊಟ್ಟನು. ೧೧. ರಾಮನು ತನ್ನ ಶ್ರೀಹಸ್ತದಿಂದ ಮೆಲ್ಲಗೆ ವಿಭೀಷಣನ ತಲೆಯನ್ನೆತ್ತಿ ಎಳೆದು ಅಪ್ಪಿಕೊಂಡು ಮುಗುಳುನಗುತ್ತ ತನ್ನ ಭಕ್ತನನ್ನು ಕುರಿತು, “ಈ ಭೂಮಿಯ ವೈಭವ ಸಮೇತ ಲಂಕಾಪುರವನ್ನು ನಿನಗೆ ಕೊಟ್ಟಿದ್ದೇನೆ. ನಿನ್ನ ಉಪಚಾರ ನನಗೆ ಸಂದಿತು.

ಹಲವು ಪರಿಯಲಿ ಬೇಡಿಕೊಳೆ ಕೈ । ಕೊಳದೆ ತಂದ ಸಮಸ್ತ ವಸ್ತುವ
ಕಳುಹಿ ನಗರಕೆ ಕೈಮುಗಿದು ಬಳಿಕೆಂದನರಸಂಗೆ
ಸಲಿಸಬೇಕೆನಗೊಂದು ವರವನು । ಸಲುವ ಸಲುಗೆಯ ಭೃತ್ಯನಾದೊಡೆ
ಸಲುಗೆಯಿದು ತನಗೆನಲು ನುಡಿ ಕೇಳುವೆವು ನಾವೆಂದ ೧೨

ಅವಕಾರ್ಯನಿಮಿತ್ತ ಬಿಜಯಂ । ಗೈವುದಾಯಿತು ಪುರಕೆ ದೇವರ
ದಾವ ಕಾರ್ಯನಿಮಿತ್ತ ಜಯಿಸಿದಿರೀ ದಶಾನನನ
ಈ ವಿವೇಕಸ್ಥಿತಿಯನಂತ । ರ್ಭಾವದಲಿ ಬಳಸಿದಿರಿ ಭೃತ್ಯನ
ಭಾವವೇನೆಂಬುದನು ಚಿತ್ತೈಸಿದಿರಿ ನೀವೆಂದ ೧೩

ಅಱಿದೆವಾವ್ ನಿನ್ನಂತರಂಗದ । ಮಱೆಯ ಬಿನ್ನಹವೇಕೆ ಲೋಗರು
ಮುಱಿದ ಮಾನಸ್ಥಿತಿಗೆ ಜಾಂಬವ ರವಿಸುತಾದಿಗಳು
ಉಱುವುದೇ ನಿನಗೆನುತ ಮಾನಸ । ದೆಱಕವಾದರೆ ಕೊಂಡುಬಾ ನಾ
ವಱಿವೆವಂಗೀಕರಣದಿಂಗಿತವನು ಮಹೀಸುತೆಯ ೧೪

ಎನೆ ಹಸಾದವೆನುತ್ತ ರಘುನಂ । ದನನ ಪದಕಭಿನಮಿಸಿ ಬೀಳ್ಕೊಂ
ಡನು ಮಹೋತ್ಸವದಿಂದ ಬಂದನು ತನ್ನ ಪಟ್ಟಣಕೆ
ಧನಪತಿಯ ದಂಡಿಗೆಯಲೆಡಬಲ । ದನುಚರರ ಚಾಮರದ ಛತ್ರದ
ಘನತರದ ಗಡಬಡೆಯ ಕಂಚುಕಿಗಳ ವಿಡಾಯಿಯಲಿ ೧೫

ಈ ಕಾಣಿಕೆಯನ್ನು ನಗರಕ್ಕೆ ಕಳುಹಿಸು" ಎಂದು ವಿನಯದಿಂದ ನುಡಿದ. ೧೨. ವಿಭೀಷಣನು ಅನೇಕ ವಿಧದಲ್ಲಿ ಬೇಡಿಕೊಂಡರೂ ರಾಮನು ಸ್ವೀಕರಿಸದೆ ಇರಲು ತಾನು ತಂದ ಸಮಸ್ತ ವಸ್ತುಗಳನ್ನೂ ಲಂಕಾಪಟ್ಟಣಕ್ಕೆ ಕಳುಹಿಸಿದನು. ಅನಂತರ ರಾಮನಿಗೆ ಕೈಮುಗಿದು, "ನಾನು ನಿಮಗೆ ಹತ್ತಿರದ ಸೇವಕನಾಗಿದ್ದ ಪಕ್ಷದಲ್ಲಿ ನನಗೆ ಒಂದು ವರವನ್ನು ದಯಪಾಲಿಸಬೇಕು. ಇದು ನನಗೆ ಸಲ್ಲಲ್ಲಿ" ಎಂದು ವಿಭೀಷಣನು ಕೇಳಿಕೊಂಡನು. ಆಗ ರಾಮನು "ಹೇಳು, ನಾವು ಕೇಳುತ್ತೇವೆ." ಎಂದ. ೧೩. "ಯಾವ ಕಾರ್ಯದ ಉದ್ದೇಶದಿಂದ ಈ ನಗರಕ್ಕೆ ದಯಮಾಡಿಸಿದಿರೋ, ಪ್ರಭುಗಳು ಯಾವ ಕಾರ್ಯದ ನೆಪದಿಂದ ಈ ರಾವಣನನ್ನು ಜಯಿಸಿದಿರೋ ಆ ಕಾರ್ಯಕಾರಣವನ್ನು ಕುರಿತು ಅಂತರಂಗದಲ್ಲಿ ಯುಕ್ತಾಯುಕ್ತ ವಿಚಾರಮಾಡಿದ್ದೀರಲ್ಲವೇ ? ಈ ಸೇವಕನ ಮನಸ್ಸಿನಲ್ಲಿರುವುದೇನೆಂಬುದನ್ನು ನೀವು ಗಮನಿಸಿದ್ದೀರಲ್ಲವೇ?" ಎಂದ ವಿಭೀಷಣ. ೧೪. "ನಮಗೆ ಅರ್ಥವಾಯಿತು. ನಿನ್ನ ಅಂತರಂಗದ ವಿಚಾರವನ್ನು ಗುಂಭವಾಗಿ ವಿನಂತಿಸಬೇಕೇ? ಅನ್ಯರು ಮಾಡಿರುವ ಮಾನಹಾನಿಗೆ ಜಾಂಬವ ಸುಗ್ರೀವರು ಸಹಮತಿಸುವರೆಂದು ನಿನ್ನ ಮನಸ್ಸಿಗೆ ಅನ್ನಿಸಿದರೆ ಕರೆದುಕೊಂಡುಬಾ. ಭೂಸುತೆಯನ್ನು ಅಂಗೀಕರಿಸುವ ಅಭಿಪ್ರಾಯದ ವಿಷಯವನ್ನು ನಾವು ಬಲ್ಲೆವು" ೧೫, 'ಮಹಾಪ್ರಸಾದ' ಎಂದು ನುಡಿದು ವಿಭೀಷಣನು ರಾಘವನ ಪಾದಗಳಿಗೆ ನಮಸ್ಕರಿಸಿ ರಾಮನ ಬಳಿಯಿಂದ ಹೊರಟು ಅತಿಸಂಭ್ರಮದಿಂದ ಕುಬೇರನ ಪಲ್ಲಕ್ಕಿಯಲ್ಲಿ ಕುಳಿತು ಎಡಬಲಗಳಲ್ಲಿ ಸೇವಕರು ಛತ್ರಿಹಿಡಿದು ಚಾಮರವನ್ನು ಬೀಸುತ್ತಿರಲು ಕಂಚುಕಿಗಳ ಗಡಿಬಿಡಿಯ ವೈಭವದೊಡನೆ

ಗುಡಿಗಳೆತ್ತಿದವಗಲದಲಿ ಕ । ನ್ನಡಿಯ ಕಳಸದ ತೋರಣದ ಮಂ
ಗಡಗಳೆಸೆದವು ಕೇರಿಕೇರಿಯಲಿಂದು ಭಾಸ್ಕರರ
ಕುಡುಹು ಕುಣಿದಾಡಿದವು ಹೇಮದ । ತೊಡಹದುರು ನಿಸ್ಸಾಳತತಿಯಲಿ
ನುಡಿವಡಚ್ಚರಿಯೆನಲು ಮಿಗೆ ಸಂಭ್ರಮಿಸಿತಾ ನಗರ ೧೬

ಕುಶನೆ ಕೇಳೈ ಬಳಿಕ ರಾಕ್ಷಸ । ವಸುಮತೀಶ್ವರನಖಿಳ ಭುವನ
ಪ್ರಸರದಧಿದೇವತೆಯನೊಲಿದಿದಿರ್ಗೊಂಬ ತವಕದಲಿ
ಒಸಗೆವಜ್ಜೆಯನು ಹೊಯ್ಸಿ ತನ್ನಯ । ಶಶಿಮುಖಿಯರೊಡಗೂಡಿ ಭೂಸುರ
ವಿಸರದೊಗ್ಗಿನಲೈದಿದನು ಬನವನು ಮಹೀಸುತೆಯ ೧೭

ಇಳಿದು ದಂಡಿಗೆಯನು ಸುಲಲನಾ । ವಳಿ ಸಹಿತ ಮೈಯಿಕ್ಕುತೈತಂ
ದಿಳೆಯ ತನುಜೆಯ ಲಲಿತ ಪಾದಪಯೋಜ ಯುಗಳದಲಿ
ಇಳುಹಿದನು ಮಸ್ತಕವ ಮಾಯಾ । ವಿಲಸದನುಪಮಲಕ್ಷ್ಮಿ ಭುವನಾ
ವಳಿಯ ಜನನಿ ಜನಾರ್ದನನ ವಲ್ಲಭೆ ನಮೋಯೆನುತ ೧೮

ಡಿಂಗರಿಗ ನಾ ನಿಮಗೆ ನಿಮ್ಮರ । ಸಂಗೆ ಕಿಂಕರನಾಗಿ ಕೃಪೆ ತ
ನ್ನಂಗದಲಿ ನೆಲೆಗೊಳಲಿ ಬಳಲದಿರೆಮ್ಮ ದೆಸೆಯಿಂದ
ಕಂಗಳಲಿ ಮುಂಗಾಣದಗ್ರಜ । ಹಿಂಗಿದನು ನಾವ್ ನಿಮ್ಮ ಪದಪ
ದ್ಮಂಗಳನು ಸಾರ್ದೆವು ಸಲಹುವುದಿನ್ನು ನೀವೆಂದ ೧೯

ಲಂಕಾನಗರಕ್ಕೆ ಬಂದನು. ೧೬. ನಗರದ ಎಲ್ಲ ಕಡೆಯಲ್ಲೂ ಬಾವುಟಗಳನ್ನು ಎತ್ತಿ ಕಟ್ಟಿದರು. ಸೂರ್ಯಚಂದ್ರಬೀದಿಗಳಲ್ಲಿ ಕನ್ನಡಿ, ಕಳಸ ಮತ್ತು ತೋರಣಗಳ ಮಾಲೆಗಳು ಶೋಭಿಸಿದವು. ಚಿನ್ನದ ಕಟ್ಟು ಹಾಕಿದ ಭೇರಿಗಳ ಚರ್ಮದ ಮೇಲೆ ವಾದನದಂಡಗಳು ಕುಣಿದಾಡಿದವು. ಹೇಳಲು ಆಶ್ಚರ್ಯವೆನ್ನುವಂತೆ ಲಂಕಾನಗರ ಸಡಗರದಿಂದ ತುಂಬಿ ಹೋಯಿತು. ೧೭. ಕುಶನೇ, ಕೇಳು. ಅನಂತರ ರಾಕ್ಷಸರಾಜ ವಿಭೀಷಣನು ಸಮಸ್ತ ಲೋಕಗಳ ಅಧಿದೇವತೆಯಾದ ಸೀತೆಯನ್ನು ಎದುರುಗೊಳ್ಳುವ ಕಾತುರತೆಯಿಂದ ಮಂಗಳವಾದ್ಯಗಳನ್ನು ಹೊಡೆಸಿ ತನ್ನ ಹೆಂಡತಿಯರೊಡನೆ ಬ್ರಾಹ್ಮಣಸಮೂಹದ ಸಂಗಡ ಸೀತೆಯಿದ್ದ ಅಶೋಕವನಕ್ಕೆ ಬಂದನು. ೧೮. ಪಲ್ಲಕ್ಕಿಯಿಂದಿಳಿದು ಪತ್ನಿಯ ರೊಡನೆ ನಮಸ್ಕರಿಸುತ್ತ ಬಂದು "ಮಾಯಾವಿಲಾಸದ ಲಕ್ಷ್ಮೀದೇವಿ ! ಸಮಸ್ತ ಲೋಕ ಗಳ ತಾಯಿ, ಜನಾರ್ದನನ ಪತ್ನಿ ! ನಮಸ್ಕಾರ" ಎನ್ನುತ್ತ ಭೂಸುತೆಯ ಸುಂದರ ಪಾದಕಮಲಗಳ ಮೇಲೆ ತಲೆಯನ್ನಿಟ್ಟನು. ೧೯. "ನಿಮ್ಮ ಪತಿಯ ಕಿಂಕರನಾದುದರಿಂದ ನಾನು ನಿಮ್ಮ ಸೇವಕನಾಗಿದ್ದೇನೆ. ನಮ್ಮ ಮೇಲೆ ನಿಮ್ಮ ದಯೆಯುಂಟಾಗಲಿ. ನಮ್ಮ ಕಾರಣದಿಂದಾಗಿ ದಣಿಯಬೇಡಿ, ನಮ್ಮ ಅಣ್ಣ ಮುಂದಾಗುವುದನ್ನು ಕಾಣದೆ ನಾಶವಾದನು. ನಾವು ನಿಮ್ಮ ಪಾದಕಮಲಗಳ ಮರೆಹೊಕ್ಕಿದ್ದೇವೆ. ನೀವು ನಮ್ಮನ್ನು ಕಾಪಾಡಬೇಕು" ಎಂದು ವಿಭೀಷಣನು ಸೀತೆಯನ್ನು ಪ್ರಾರ್ಥಿಸಿದನು.

ನವೆದಿರಾರಣ್ಯದಲಿ ಸೆಱೆಯಲಿ । ಸವೆದಿರನ್ನಬರೆಮ್ಮ ಪೂರ್ವಜ
ನವಗುಣಂಗಳ ಮಱೆದು ಮೆಱೆವುದು ನಿಮ್ಮ ಸದ್ಗುಣವ
ಭುವನದಲಿ ನಿಮ್ಮಿಂದ ಪುಣ್ಯ । ಶ್ರವಣರಾರೆಲೆ ದೇವಿ ಕೇಳ್ ನಿ
ಮ್ಮವನು ನೆನೆದವರೇನು ಧನ್ಯರೊ ಲೋಕದೊಳಗೆಂದ ೨೦

ಕರಸರೋಜದಿನಾ ನಿಜೇಶನ । ಚರಣಶರಣನ ಮಣಿಖಚಿತ ಬಂ
ಧುರ ಕಿರೀಟವನೆತ್ತಿ ಕೇಳೈ ಕಲಿ ವಿಭೀಷಣನೆ
ನರಪತಿಗೆ ನಿನ್ನಿಂದ ಜಯ ವಿ । ಸ್ತರಣವಾದುದು ನಿನ್ನವೊಲು ಭೃ
ತ್ಯರುಗಳಿನ್ನಾರುಂಟು ಜಗದೊಳಗೆಂದಳಿಂದುಮುಖಿ ೨೧

ಏತಱವ ನಾನೀ ಚರಾಚರ । ಚೇತನನ ಸೇವೆಗೆ ಸರೋರುಹ
ಜಾತ ಜನಕಂಗಪ್ರಮೇಯಂಗಂತರಹಿತಂಗೆ
ಆತಗಾರು ಸಹಾಯಿಗಳು ಸಂ । ಪ್ರೀತಿ ಭಕ್ತರ ಮೇಲೆ ನಿಮಗಿದು
ನೀತಿ ತಾನೆನುತೊಡನೆ ಕೈಮುಗಿದೆಂದನವನಿಜೆಗೆ ೨೨

ದೇವಿ ನಿಮ್ಮನು ತರಲು ನಿಮ್ಮಯ । ಜೀವಿತೇಶನು ಕರೆದು ಬೆಸಸಿದ
ನಾವ ಸಂಶಯಬೇಡ ತಾ ಹೋಗೆಂದು ಕರುಣದಲಿ
ನೀವು ಬಿಜಯಂಗೈಯಬೇಕೆಂ । ದಾ ವಿಭೀಷಣ ಕೈಮುಗಿಯೆ ರಾ
ಜೀವಮುಖಿ ನೆನೆದೆದ್ದಳಾ ರಘುರಾಮಚಂದ್ರಮನ ೨೩

೨೦. "ಅರಣ್ಯದಲ್ಲಿ ಸೊರಗಿದಿರಿ, ಇಲ್ಲಿ ಬಂಧನದಲ್ಲಿ ಬಡವಾದಿರಿ. ನಮ್ಮ ಅಣ್ಣನ ಅವಗುಣಗಳನ್ನು ಮರೆತು ನಿಮ್ಮ ಸದ್ಗುಣವನ್ನು ಮೆರೆಯಬೇಕು. ಲೋಕದಲ್ಲಿ ನಿಮಗಿಂತಲೂ ಪುಣ್ಯಶಾಲಿಗಳಾರು ? ದೇವಿ, ನಿಮ್ಮನ್ನು ಸ್ಮರಿಸಿದವರು ಲೋಕದಲ್ಲಿ ಅದೆಷ್ಟು ಧನ್ಯರೋ !" ಎಂದು ವಿಭೀಷಣ ಸೀತೆಯನ್ನು ಶ್ಲಾಘಿಸಿದನು. ೨೧. ತನ್ನ ಪ್ರಾಣಪ್ರಿಯನ ಭಕ್ತನ ರತ್ನಖಚಿತವಾದ ಮನೋಹರ ಕಿರೀಟವನ್ನು ಸೀತೆ ಕಮಲದಂಥ ಕೈಗಳಿಂದ ಮೇಲಕ್ಕೆತ್ತಿ, "ಕೇಳಯ್ಯ, ಕಲಿ ವಿಭೀಷಣ, ಅರಸನಿಗೆ ನಿನ್ನಿಂದ ಜಯವುಂಟಾಯಿತು. ನಿನ್ನಂಥ ಸೇವಕರು ಜಗತ್ತಿನಲ್ಲಿ ಯಾರಿದ್ದಾರೆ" ಎಂದಳು ಸೀತೆ. ೨೨. "ಚರಾಚರ ಚೈತನ್ಯಸ್ವರೂಪನೂ, ಬ್ರಹ್ಮನ ತಂದೆಯೂ, ಅಳತೆಗೆ ಸಿಗದವನೂ, ಅಂತ್ಯವಿಲ್ಲದವನೂ ಆದ ಶ್ರೀರಾಮನ ಸೇವೆಗೆ ನಾನು ಎಷ್ಟರವನು. ಆತನಿಗೆ ಸಹಾಯ ಮಾಡುತ್ತೇವೆ ಎನ್ನುವವರು ಯಾರಿದ್ದಾರೆ. ನಿಮಗೆ ಭಕ್ತನ ಮೇಲೆ ಪ್ರೇಮ. ಇದು ನಿಮ್ಮ ನೀತಿ" ಎಂದು ಕೈಮುಗಿದು ಪುನಃ ಸೀತೆಯನ್ನು ಕುರಿತು ಮುಂದಿನಂತೆ ನುಡಿದನು. ೨೩. "ದೇವಿಯವರೇ, ನಿಮ್ಮನ್ನು ಕರೆದುಕೊಂಡು ಬರುವಂತೆ ನಿಮ್ಮ ಪ್ರಾಣೇಶನು ಕರೆದು ನಮಗೆ ಅಪ್ಪಣೆ ಮಾಡಿದನು. ಯಾವ ಸಂದೇಹವೂ ಬೇಡ, ನೀವು ಕರೆತನ್ನಿ ಹೋಗಿ ಎಂದು ಕರುಣೆಯಿಂದ ತಿಳಿಸಿದನು. ನೀವು ದಯಮಾಡಿಸಬೇಕು" ಎಂದು ಹೇಳಿ ವಿಭೀಷಣನು ಕೈಮುಗಿದನು. ಆಗ ಚಂದ್ರಮುಖಿ ಸೀತೆಯು ರಾಮಚಂದ್ರ

ಕರದ ಕಂಬಿಯುಲಾ ವಿಭೀಷಣ । ನೆರವಿಗರನೆಡಬಲಕೆ ಸಾರಿಸ
ಲರಸಿಯರು ಕೈಗೊಟ್ಟು ತಂದರು ರಾಜಮಂದಿರಕೆ
ಕರವ ಮುಗಿದು ವಿಭೀಷಣನು ಮಾ । ಧುರಿಯ ವಚನದಲಂಜುತಳುಕುತ
ಶಿರವನೊಯ್ಯನೆ ಬಾಗಿ ಬಿನ್ನೈಸಿದನು ಜಾನಕಿಗೆ ೨೪

ಚಿತ್ತವಿಸಿದಿರೆ ದೇವಿಯರೆ ದೇ । ವೋತ್ತಮನಲಾ ದೇವರಲಿ ರಾ
ಜೋತ್ತಮನಲಾ ರಾಯರಲಿ ಪುರುಷರಲಿ ಜಗವಱಿಯೆ
ಉತ್ತಮನಲಾ ನಿಮ್ಮರಸ ನೀವ್ । ಹೊತ್ತ ಭಾರವಮಂಗಲವು ನೃಪ
ಮತ್ತಕಾಶಿನಿ ನೀವು ಶುಭಕರವಾಗಬೇಕೆಂದ ೨೫

ಬೇಡ ಜಗದಪಹಾಸ್ಯವದು ಮಾ । ತಾಡಿ ಕೆಡಿಸಲದೇಕೆ ಸಹಜದ
ಲಾಡಿದನು ರಘುನಾಥ ನಾನದ ಬಲ್ಲೆ ಪೂರ್ವದಲಿ
ಕೋಡದೀಯಂಗದಲಿ ವೈರಿವಿ । ಭಾಡನಂಘ್ರಿಯ ಕಾಬುದುಚಿತವು
ಬೇಡಿಕೊಂಬೆನು ನಿನ್ನ ಬಂದುದು ಮಾಡುವುಪಚಾರ ೨೬

ಹದನನಿದನಾನಱಿದು ಬಿನ್ನೈ । ಸಿದೆನು ದೇವರಿಗವರ ಕರುಣಾ
ಸ್ಪದದಲೇ ನೇಮವನು ಪಡೆದೆನು ದೇವಿ ಚಿತ್ತೈಸು
ಇದಱ ಕೊಱತೆಯ ನೆಱತೆ ತನ್ನದು । ವಿದಿತ ವೈದಿಕ ಲೌಕಿಕಕೆ ಜಗ
ವದುಹದಂತಿರೆ ಚಿತ್ತಗೊಡಬೇಕೆಂದು ಕೈಮುಗಿದ ೨೭

ನನ್ನು ಸ್ಮರಿಸಿಕೊಂಡು ಮೇಲೆದ್ದಳು. ೨೪. ವಿಭೀಷಣನು ಕೈಯ ದಂಡದಿಂದ ಜನರ ಗುಂಪನ್ನು ಎಡಬಲಕ್ಕೆ ತಳ್ಳಿ ದಾರಿಮಾಡಿಕೊಡಲು ವಿಭೀಷಣನ ರಾಣಿಯರು ಕೈಹಿಡಿದು ಸೀತೆಯನ್ನು ಅರಮನೆಗೆ ಕರೆತಂದರು. ವಿಭೀಷಣನು ಕೈಮುಗಿದು ಅಂಜುತ್ತ ಅಳುಕುತ್ತ ತಲೆಯನ್ನು ಬಗ್ಗಿಸಿಕೊಂಡು ಮಧುರವಾದ ಮಾತಿನಿಂದ ಸೀತೆಗೆ ವಿಜ್ಞಾಪನೆ ಮಾಡಿದನು. ೨೫. "ದೇವಿಯರೇ ಗಮನಿಸಿ, ನಿಮ್ಮ ಅರಸ ರಾಮನು ದೇವರುಗಳಲ್ಲಿ ದೇವೋತ್ತಮ, ರಾಜರಲ್ಲಿ ರಾಜಶ್ರೇಷ್ಠ, ಜಗತ್ತು ತಿಳಿದಂತೆ ಪುರುಷರಲ್ಲಿ ಉತ್ತಮ. ನೀವು ಅಮಂಗಳಕರವಾದ ಸ್ಥಿತಿಯಲ್ಲಿದ್ದೀರಿ. ಅರಸಿ, ಈಗ ನೀವು ಶುಭ್ರರಾಗಿ ಮಂಗಳ ಕರರಾಗಬೇಕು" ಎಂದ ವಿಭೀಷಣ. ೨೬. "ಬೇಡ. ನೀನು ಹೇಳಿದಂತೆ ಮಾಡಿದರೆ ಜಗತ್ತಿನ ಜನರ ಅಪಹಾಸ್ಯಕ್ಕೀಡಾಗುವೆನು. ಮಾತಾಡಿ ಏಕೆ ಕೆಡಿಸಬೇಕು. ರಾಘವನು ಸ್ವಾಭಾವಿಕವಾಗಿ ಹಾಗೆ ಮಾತನಾಡಿದ್ದಾನೆ. ನಾನು ಹಿಂದೆ ಅದನ್ನು ಕಂಡಿದ್ದೇನೆ. ಅಂಜದೆ ಈಗಿರುವ ರೀತಿಯಲ್ಲಿಯೇ ಶತ್ರುನಾಶಮಾಡಿದ ರಾಮನ ಪಾದದರ್ಶನ ಮಾಡುವುದು ಯೋಗ್ಯವು. ನಾನು ಬೇಡಿಕೊಳ್ಳುತ್ತೇನೆ. ನಿನ್ನ ಉಪಚಾರ ಸಂದಾಯ ವಾಯಿತು" ಎಂದಳು ಸೀತೆ. ೨೭. "ನಾನು ಈ ವಿಷಯವನ್ನು ತಿಳಿದೇ ಪ್ರಭುಗಳಿಗೆ ವಿಜ್ಞಾಪಿಸಿಕೊಂಡೆ. ಅವರ ದಯೆಯಿಂದಲೇ ಅಪ್ಪಣೆಯನ್ನು ಪಡೆದೆ, ದೇವಿ. ಇದರ ಕೊರತೆಯನ್ನು ಪೂರ್ಣಗೊಳಿಸುವ ಹೊಣೆ ನನ್ನದು. ಜಗತ್ತು ನಿಂದಿಸದಂತೆ ವೈದಿಕ ಲೌಕಿಕಕ್ರಮಕ್ಕೆ ಮನಸ್ಸುಕೊಡಬೇಕು" ಎಂದು ವಿಭೀಷಣ ಸೀತೆಯನ್ನು ಕೈಮುಗಿದು

ಬಿಸೆ ಮತ್ತೇನುಚಿತವಲ್ಲೆನ । ಗೀಸು ನಿರ್ಬಂಧದಲಿ ನೀ ಬಿ
ನ್ನೈಸಲೇಕನುಭವಿಸುವೆನು ಬಂದಾಯಸವನೆನಲು
ದೋಷವಿದಱಿಂ ಬಂದುದಾದಡೆ । ದಾಸನೇ ನಿಮಗಾನೆನುತ್ತ ವಿ
ಭೀಷಣನು ಕೈಮುಗಿದೊಡಂಬಡಿಸಿದನು ದೇವಿಯರ ೨೮

ತರಿಸಿ ಮಣಿಮಡಿವರ್ಗದಲಿ ಕು । ಳ್ಳಿರಿಸಿ ಪರಿಮಳತೈಲದಲಿ ನೇ
ವರಿಸಿದರು ಸಿರಿಮುಡಿಯ ಮಜ್ಜನವಾಯ್ತು ಮಂಗಲದ
ಸುರುಚಿರಾಂಬರ ಗಂಧಮಾಲ್ಯಾ । ಭರಣದಿಂದೊಪ್ಪಿದಳು ಪೂರ್ವದ
ಸಿರಿಯ ಸಡಗರದಲಿ ಸರಾಗದೊಳಾ ಸರೋಜಮುಖಿ ೨೯

ನೆರೆದರಾಕ್ಷಣ ಸಕಲ ಸೇವಾ । ತರುಣಿಯರು ರತುನಾರತಿಯ ವಿ
ಸ್ತರಿಸಿ ಬಿಜಯಂಗೈಸಿದರು ದಂಡಿಗೆಗೆ ದೇವಿಯರ
ಪರಿಪರಿಯ ಮಣಿಗಣದ ಚಿತ್ರೋ । ತ್ಕರದ ದಡ್ಡಿಯಲಾ ವಿಭೀಷಣ
ನರಮನೆಯ ಹೊಱವಂಟಳವನಿಜೆ ನಲಿಯೆ ಪೌರಜನ ೩೦

ತರುಣ ಕೇಳೈ ಕೂಡಿತಮರರ । ತರುಣಿಯರು ರೂಪಾತಿಶಯದು
ಬ್ಬರಕೆ ಶತಗುಣದಂಗನೆಯರು ಸಹಸ್ರಸಂಖ್ಯೆಯಲಿ
ಸ್ಮರನ ಕೂರ್ಗಣೆಯಲಗುಗಳು ದಾ । ವರಿಸಿದವೊ ಜನಮನವನೆನೆ ಕೇ
ಕರವಿಲಾಸದ ಮುಗುದೆಯರು ಬಳಸಿದರು ಭಾಮಿನಿಯ ೩೧

ಕೇಳಿಕೊಂಡ. ೨೮. "ಹಾಗಿದ್ದರೆ, ನಾನು ಬೇಡವೆನ್ನುವುದು ಉಚಿತವಾಗುವುದಿಲ್ಲ. ಇಷ್ಟು ಒತ್ತಾಯದಿಂದ ವಿಜ್ಞಾಪನೆಮಾಡಬೇಕೆ? ಬಂದ ಕಷ್ಟವನ್ನು ಅನುಭವಿಸುವೆನು" ಎಂದು ಸೀತೆ ಹೇಳಲು, "ಇದರಿಂದ ದೋಷವುಂಟಾದರೆ ನಾನು ನಿಮ್ಮ ಸೇವಕನೇ?" ಎನ್ನುತ್ತ ವಿಭೀಷಣನು ಕೈಮುಗಿದು ಸೀತೆಯನ್ನು ಒಪ್ಪಿಸಿದನು. ೨೯. ರತ್ನದ ಮಣೆಯ ಮೇಲೆ ಮಡಿವಸ್ತ್ರವನ್ನು ಹಾಸಿ ಅದರ ಮೇಲೆ ಸೀತೆಯನ್ನು ಕೂರಿಸಿ ಸುವಾಸನೆಯ ಎಣ್ಣೆಯನ್ನು ಕೂದಲಿಗೆ ಸವರಿದರು. ಸೀತೆಗೆ ಮಂಗಳಸ್ನಾನವಾಯಿತು. ಮನೋಹರವಾದ ವಸ್ತ್ರ, ಸುಗಂಧ, ಹಾರ, ಒಡವೆಗಳಿಂದ ಅಲಂಕೃತಳಾದ ಸೀತೆ ಹಿಂದೆ ಅರಮನೆಯಲ್ಲಿ ಸಂಪತ್ತಿನ ನಡುವೆ ವೈಭವದಿಂದ ಇದ್ದ ಹಾಗೆ ಸಂತೋಷದಿಂದ ಶೋಭಿಸಿದಳು. ೩೦. ಆ ಕೂಡಲೆ ಅರಮನೆಯ ಸಮಸ್ತ ಪರಿಚಾರಿಕೆಯರು ಬಂದು ರತ್ನದ ಆರತಿಯನ್ನೆತ್ತಿ ಸೀತಾದೇವಿಯನ್ನು ಪಲ್ಲಕ್ಕಿಯಲ್ಲಿ ಕೂರಿಸಿದರು. ನಾನಾ ವಿಧವಾದ ಬೆಲೆಬಾಳುವ ಹರಳುಗಳಿಂದ ಚಿತ್ರಕೆಲಸವನ್ನು ಮಾಡಿದ್ದ ತೆರೆಯೊಳಗಡೆ ಕುಳಿತು ಸೀತೆ ವಿಭೀಷಣನ ಅರಮನೆಯಿಂದ ಹೊರಟಳು. ಆಗ ಲಂಕಾಪುರದ ಜನರು ಇದನ್ನು ನೋಡಿ ನಲಿದರು. ೩೧. ತರುಣ ಕುಶ, ಕೇಳು. ದೇವಲೋಕದ ಸ್ತ್ರೀಯರು ಮತ್ತು ಅತ್ಯಂತ ಶ್ರೇಷ್ಠ ರೂಪವತಿಯರಿಗೆ ನೂರರಷ್ಟು ಹೆಚ್ಚು ಸುಂದರಿಯರು ಸಾವಿರಾರು ಸಂಖ್ಯೆಯಲ್ಲಿ ಬಂದು ಸೇರಿದರು. ಮನ್ಮಥನ ಹರಿತವಾದ ಬಾಣಗಳು ಜನಗಳ ಮನಸ್ಸನ್ನು ಚುಚ್ಚುತ್ತಿವೆಯೋ ಎಂಬಂತೆ ಕಡೆಗಣ್ಣೋಟದ ಸ್ತ್ರೀಯರು ಸೀತೆಯ ಸುತ್ತ

ಹೊಡಕರಿಸುವುದು ತಿಮಿರ ತಲೆವಿಣಿ । ಲೆಡೆಗಳಲಿ ತತ್ತಿಮಿರರಾಶಿಯ
ನಡಿಮಗುಚುವುದು ಬೆಳಗು ಬಿಡದಬಲೆಯರ ಲೋಚನದ
ತಡೆದುದಾ ಭುಜಪಾಶದೆಡೆಪೊಗ । ರಡಿಗಡಿಗೆ ವಿಟರುಗಳ ಕಂಗಳ
ನಡೆಯನೇವಣ್ಣಿಸುವೆನಾ ಮಹಿಳಾಕದಂಬಕದ ೩೨

ಉರುನಿತಂಬದ ಭಾರಕಹಿಪನ । ಕೊರಳು ಮಣಿದುದು ತೋರಪೊಲೆಗಳ
ಭರದ ಭಾರಕೆ ಬಳುಕಿದವು ದಿಗ್ದಂತಿ ಸೋರ್ಮುಡಿಯ
ಹೊರೆಗೆ ಹೊಡಕರಿಸಿದನು ಕೂರುಮ । ನರಲೆ ಮದನನ ಪರಿಜನದ ನಿ
ಬ್ಬರದ ನಿರ್ಗಮನವನು ಪೊಗಳುವೆನೇನನದ್ಭುತವ ೩೩

ಬರಿಸಿತನಿಲನನಂಗಲತೆಗಳ । ಪರಿಮಳವು ಬಿಡದಮಮ ತನುವಿ
ಸ್ಫುರಿತ ಲಾವಣ್ಯಾಂಬುರುಚಿ ಹಿಮರುಚಿಯ ವೈಸಿರಿಯ
ಬರಸೆಳೆದುದುರು ಭಾವವಮರರ । ತರುಣಿಯರ ನೀಕರಿಸಿತಾ ಬಂ
ಧುರದ ಸೊಬಗುಱ್ ಜಱಿದವಜ ಹರಿ ಹರರ ರಾಣಿಯರ ೩೪

ಹೊಳೆಹೊಳೆವ ಮಣಿಕರ್ಣಪೂರದ । ಬೆಳಗಿಡುವ ಮೂಗುತಿಯ ಮುತ್ತಿನ
ವಿಲಸದೇಕಾವಳಿಯ ಮಣಿಮುದ್ರಿಕೆಯ ಕಂಕಣದ
ಲಲಿತ ಚಿತ್ರಾಂಬರದ ವರಮೇ । ಖಲೆಯ ರಣಿತಸ್ವನದ ನೂಪುರ
ದುಲುಹುಗಳ ವರಯುವತಿಯರು ಬಳಸಿದರು ಜಾನಕಿಯ ೩೫

ಬಂದರು. ೩೨. ಸುಂದರಿಯರ ತಲೆಯ ಜಡೆಗಳ ಬಳಿ ಹರಡಿದ ಕತ್ತಲೆಯನ್ನು ಆ ಸುಂದರಿಯರ ಕಣ್ಣಿನ ಹೊಳಪು ಬುಡಮೇಲು ಮಾಡಿತು. ಕಾಮುಕರ ಕಣ್ಣುಗಳ ನೋಟವನ್ನು ಆ ಮಹಿಳೆಯರ ತೋಳಿನಬಳಿಯ ಕಾಂತಿಯು ತಡೆದು ನಿಲ್ಲಿಸಿತು. ಇದನ್ನೇನೆಂದು ವರ್ಣಿಸಲಿ. ೩೩. ತರುಣಿಯರ ತೊಡೆಗಳ ಭಾರಕ್ಕೆ ಆದಿಶೇಷನ ಕತ್ತು ಕೊಂಕಿತು, ಉಬ್ಬಿದ ಸ್ತನಗಳ ಭಾರಕ್ಕೆ ದಿಗ್ಗಜಗಳು ಬಳುಕಿದವು, ಇಳಿಬಿದ್ದ ತುರುಬಿನ ಹೊರೆಗೆ ಕೂರ್ಮನು ಅಲ್ಲಾಡಿದನು. ಅಬ್ಬಬ್ಬ ಮನ್ಮಥನ ಪರಿವಾರದವರ ಗಮನದ ಅದ್ಭುತವನ್ನು ಏನೆಂದು ಹೊಗಳಲಿ. ೩೪. ತರುಣಿಯರ ಕೋಮಲಾಂಗಗಳ ಪರಿಮಳವು ವಾಯುವನ್ನು ಬರುವಂತೆ ಮಾಡಿತು. ಹೊಳೆಯುವ ದೇಹದ ಸೊಬಗಿನ ಕಾಂತಿಯು ಚಂದ್ರಕಳೆಯನ್ನು ತನ್ನ ಕಡೆಗೆ ಆಕರ್ಷಿಸಿತು. ಅವರ ಒಯ್ಯಾರದ ಅಂಗಚಲನೆಯು ದೇವಲೋಕದ ತರುಣಿಯರನ್ನು ಧಿಕ್ಕರಿಸಿತು. ಅವರ ಮನೋಹರವಾದ ಬೆಡಗು ಬ್ರಹ್ಮವಿಷ್ಣುಮಹೇಶ್ವರರ ರಾಣಿಯರನ್ನು ಜರೆದವು. ೩೫. ಹೊಳೆಹೊಳೆಯುವ ವಜ್ರದ ಕಿವಿಯೋಲೆಯು, ಬೆಳಕು ಬೀರುವ ಮೂಗುತಿಯು, ಕಾಂತಿಬೀರುವ ಒಂದೆಳೆ ಮುತ್ತಿನ ಸರ, ವಜ್ರದುಂಗುರ ಮತ್ತು ಬಳೆಗಳ, ಮನೋಹರವಾದ ಬಣ್ಣ ಬಣ್ಣದ ವಸ್ತ್ರಗಳ, ಇಂಪಾಗಿ ಧ್ವನಿಸುವ ಒಡ್ಯಾಣದ, ಝಣ ಝಣ ಶಬ್ದ ಮಾಡುವ ಕಾಲಂದು

ತುರಗ ಪುಷ್ಪವರೂಥ ಮದಸಿಂ । ಧುರದಲಂದಣದಿಂದ ನಾರಿಯ
ರುರವಣಿಸಿದರು ಮಿಕ್ಕು ನಡೆದುದು ಮುಂದೆ ಕಾಲ್ನಡೆಯು
ಪರಿಪರಿಯ ಶೃಂಗಾರದಂಗನೆ । ಯರುಗಳೊಪ್ಪುವ ಕಲಶ ಕನ್ನಡಿ
ಮುರಜ ನರ್ತನ ರತುನದಾರತಿಗಳ ವಿಡಾಯಿಯಲಿ ೩೬

ಸಾರು ಸಾರ್ನಡೆಯೆಂಬ ಕಂಬಿಯ । ಭಾರಣೆಯಲಿ ವಿಭೀಷಣನು ಕೈ
ವಾರಿಗಳ ಗಡಣದಲಿ ಬಂದನು ಮುಂದೆ ದಂಡಿಗೆಯ
ಚಾರು ಚಾಮರದಾತಪತ್ರದ । ಲೋರಣೆವ ಸೀಗುರಿಯ ಹೊದಜಿನ
ಲೂರ ಹೊಜಿವೊಂಟಳು ಮಹೀಸುತೆ ಗುಜ್ಜುಗುಜುಕಿನಲಿ ೩೭

ಕುಶನೆ ಕೇಳೈ ನಿಮ್ಮ ಜನನಿಯ । ವಸುಮತೀಶ್ವರ ರಾಘವನ ಸರ
ಭಸದ ಸಂದರುಶನವ ನೋಳ್ಪುತ್ಸವದ ತವಕದಲಿ
ವೃಷವರೂಥದಿನುಮೆ ಸಹಿತ ಶೋ । ಭಿಸುವ ಪಂಚಬ್ರಹ್ಮವಕ್ತ್ರದ
ದಶಭುಜದ ಪರಮೇಶ ಬಂದನು ಪ್ರಮಥಗಣಸಹಿತ ೩೮

ಲಲಿತವದನಚತುಷ್ಟಯದ ಕೋ । ಮಲಿತ ಬಾಹುಚತುಷ್ಟಯದ ಸ
ಮ್ಮಿಳಿತ ಶ್ರುತಿಮಸ್ತಕದ ವಾಮದಲೆಸೆವ ಭಾರತಿಯ
ವಿಲಸದಂಚೆಯಲಮರಮುನಿಸಂ । ಕುಲದ ಸೌರಂಭಾತಿಶಯದಿಂ
ದಿಳಿದನಂಬುಜಗರ್ಭನನುಪಮ ರಾಜತೇಜದಲಿ ೩೯

ಗೆಯ ಯುವತಿಯರು ಸೀತೆಯ ಸುತ್ತ ಸೇರಿದರು. ೩೬. ಕುದುರೆ, ಪುಷ್ಪರಥ, ಮದಿಸಿದ ಆನೆ, ಪಲ್ಲಕ್ಕಿಗಳ ಮೇಲಿನಿಂದ ಸ್ತ್ರೀಯರು ಇಳಿದುಬಂದರು. ನಾನಾ ವಿಧವಾಗಿ ಸಿಂಗರಿಸಿಕೊಂಡು ಕಲಶ ಕನ್ನಡಿಗಳನ್ನು ಹಿಡಿದ ಹೆಂಗಸರು, ಮದ್ದಲೆಯನ್ನು ನುಡಿಸುತ್ತ ನರ್ತಿಸುವ ಯುವತಿಯರು ಮತ್ತು ರತ್ನದಾರತಿಗಳನ್ನು ಹಿಡಿದ ತರುಣಿಯರು ಬೆಡಗಿನಿಂದ ಮುಂದೆ ಕಾಲುನಡಿಗೆಯಲ್ಲಿ ಹೊರಟರು. ೩೭. ಹೋಗು, ಅತ್ತ ನಡೆ ಎಂಬುವಾಗಿ ಕೂಗುತ್ತ ದಂಡವನ್ನು ಹಿಡಿದ ವಿಭೀಷಣನು ಹೊಗಳುಭಟರ ಗುಂಪಿನೊಡನೆ ಸೀತೆಯ ಪಲ್ಲಕ್ಕಿಯ ಮುಂದುಗಡೆಯಲ್ಲಿ ಬಂದನು. ಬೀಸುವ ಚವರಿ ಚಾಮರಗಳ ಮತ್ತು ಹಿಡಿದ ಕೊಡೆಗಳ ಗುಂಪಿನ ಗುಜುಗುಜು ಶಬ್ದದೊಡನೆ ಸೀತೆ ಲಂಕಾನಗರವನ್ನು ಬಿಟ್ಟು ಹೊರಬಂದಳು. ೩೮. ಕುಶ, ಕೇಳಯ್ಯ. ನಿಮ್ಮ ತಾಯಿ ಹಾಗೂ ರಘುರಾಮಚಂದ್ರನ ಸಂಭ್ರಮದ ಸಂದರ್ಶನವನ್ನು ನೋಡುವ ಉತ್ಸಾಹದಿಂದ ವೃಷಭವಾಹನನಾಗಿ ಪಾರ್ವತಿ ಸಮೇತನಾಗಿ ಐದು ಮುಖಗಳ ಹಾಗೂ ಹತ್ತು ತೋಳುಗಳ ಪಂಚಬ್ರಹ್ಮಸ್ವರೂಪದ ಪರಮೇಶ್ವರನು ಪ್ರಮಥಗಣಗಳೊಡನೆ ಬಂದನು ಎಂದು ವಾಲ್ಮೀಕಿಮುನಿಗಳು ಕುಶಲವರಿಗೆ ವಿವರಿಸಿದರು. ೩೯. ಮನೋಹರವಾದ ನಾಲ್ಕು ಮುಖಗಳು ಮತ್ತು ನಾಲ್ಕು ತೋಳುಗಳಿಂದ ರಂಜಿಸುತ್ತ ವೇದಶಿರದ ಬ್ರಹ್ಮನು, ಎಡದಲ್ಲಿ ಸರಸ್ವತಿಯು ಶೋಭಿಸುತ್ತಿರಲು ಹಂಸದ ಮೇಲೆ ಕುಳಿತು ದೇವಮುನಿಗಳ ಸಮೂಹದೊಡನೆ ಅತಿಶಯ ರಾಜತೇಜಸ್ಸಿನಿಂದ ಸಡಗರಿಸಿ

ವರ ತಿಲೋತ್ತಮೆ ರಂಭೆ ಮೇನಕಿ । ಯರ ಸಮ್ಮೇಳದಲಮರಪತಿ ಚಾ
ಮರದ ಛತ್ರಧ್ವಜ ಪತಾಕಾನೀಕದುಬ್ಬರದ
ಕರಿಯ ಕಂಧರದಲ್ಲಿ ಶಚಿಸತಿ । ವೆರಸಿ ವಂದಿಜನಂಗಳೊಗ್ಗಿನ
ಬಿರುದಿನುಗ್ಗಡಣೆಯಲಿ ಬಂದನು ದೇವಗಣ ಸಹಿತ ೪೦

ಹೊರದ ಶೋಣಚ್ಛವಿಯ ಘನ ಸುರು । ಚಿರದ ಕಾಯದ ಸಪ್ತಜಿಹ್ವೆಯ
ವರ ಶಿರದ್ವಯದನುಪಮಾಂಘ್ರಿತ್ರಯದ ಕೇಸುರಿಯ
ಸ್ಫುರಿತ ವಕ್ತ್ರದ ವಾಮಭಾಗದ । ನಿರುಪಮ ಸ್ವಾಹಾಸತಿಯ ಬಂ
ಧುರದ ಹುತವಹನೈದಿದನು ವಸುಗಣದ ಗಡಣದಲಿ ೪೧

ಕಾಳಮೇಘದ ತನುರುಚಿಯ ದಂ । ಷ್ಟ್ರಾಳಿಗಳ ಬಾಹುದ್ವಯದ ಸಂ
ಸ್ಥೂಲಕಾಯದ ಕಠಿಣದಂಡದ ಕರದ ಭೀಷಣವ
ತೋಳಿಗೌಕಿದ ಯಮಿಯ ಘನ ವಿಕ । ರಾಳ ಸೈರಿಭದೇಱಿಕೆಯ ಲಯ
ಕಾಲನೈದಿದನಖಿಳದೂತ ಪರೇತಗಣ ಸಹಿತ ೪೨

ಘನಶರೀರದ ಕಾಳಿಕೆಯ ಕುಡಿ । ಮಿನುಗುಗಳ ದಾಡೆಗಳ ಕಡೆಗೆಂ
ಪಿನ ಮಹೋಗ್ರ ವಿಲೋಚನದ ಗುಜುರೆದ್ದ ತಲೆನವಿರ
ಮನುಜವಾಹನದಿಂದ ರಾಕ್ಷಸ । ವನಿತೆ ಸಹಿತ ಸಮಸ್ತ ರಾಕ್ಷಸ
ಜನ ಸಹಿತ ನಡೆತಂದನಾ ರಾಕ್ಷಸಕುಲಾಧೀಶ ೪೩

ಬಂದನು. ೪೦. ತಿಲೋತ್ತಮೆ, ರಂಭೆ, ಮೇನಕೆಯರ ಮೇಳದೊಡನೆ ಕೊಡೆ ಧ್ವಜ ಬಾವುಟಗಳ ನಡುವೆ ದೇವೇಂದ್ರನು ಹೆಂಡತಿ ಶಚಿಯ ಪಕ್ಕದಲ್ಲಿ ಐರಾವತದ ಮೇಲೆ ಕುಳಿತುಕೊಂಡು ಬಂದನು. ಮುಂದುಗಡೆಯಲ್ಲಿ ದೇವಲೋಕದ ಹೊಗಳುಭಟರು ಬಿರುದುಗಳನ್ನು ಗಟ್ಟಿಯಾಗಿ ಉಚ್ಚರಿಸುತ್ತಿದ್ದರು ; ದೇವಗಣಗಳು ದೇವೇಂದ್ರನನ್ನು ಬಳಸಿಬಂದರು. ೪೧. ಕೆಂಪುಕಾಂತಿಯ ಅಂದವಾದ ಶರೀರದ, ಏಳು ನಾಲಗೆಗಳ, ಎರಡು ತಲೆ ಮತ್ತು ಕೆಂಪಗೆ ಉರಿಯುತ್ತಿರುವ ಮುಖದ ಅಗ್ನಿಯು ಎಡಭಾಗದಲ್ಲಿ ಸತಿಸ್ವಾಹಾ ದೇವಿಯನ್ನು ಕರೆದುಕೊಂಡು ವಸುಗಣಗಳೊಡನೆ ಬಂದನು. ೪೨. ಕಪ್ಪುಮೋಡದ ದೇಹಕಾಂತಿಯ, ಕೋರೆದಾಡೆಗಳ, ಎರಡು ತೋಳುಗಳ, ದಪ್ಪದೇಹದ, ಕೈಯಲ್ಲಿ ಭಯಂಕರ ಯಮದಂಡವನ್ನು ಹಿಡಿದ ಯಮನು ಯಮಿಯನ್ನು ತೋಳಿನಲ್ಲಿ ಎತ್ತಿಕೊಂಡು ಕೋಣವನ್ನೇರಿ ಸಮಸ್ತ ದೂತ ಭೂತಗಣಗಳೊಡನೆ ಬಂದನು. ೪೩. ಕಪ್ಪು ಬಣ್ಣದ ಶರೀರದ, ಕುಡುಮಿಂಚಿನ ಕೋರೆದಾಡೆಗಳ, ಉಗ್ರವಾದ ಕೆಂಗಣ್ಣುಗಳ, ಜುಂಗು ಝುಂಗಾದ ಕೂದಲಿನ ರಾಕ್ಷಸಕುಲದೊಡೆಯ ನೈರ್ಋತಿಯು ಮನುಷ್ಯವಾಹನದ ಮೇಲೆ

ಭ್ರಮಿತ ಭಂಗವ್ಯಕ್ತ ಜಲಶೀ । ಕರ ಕದಂಬದ ಫೇನಪಿಂಡೋ
ತ್ಕರದ ಬಹಳಾವರ್ತ ಬುದ್ಬುದದುರು ಗಡಾವಣೆಯ
ವರ ಸರಿತ್ಸಾಗರದ ರತ್ನಾ । ಭರಣಶೋಭೆಯ ಪಾಶಧರನು
ಬ್ಬರದ ಗಮನದಲೈದಿದನು ಜಲಚರರ ಗಡಣದಲಿ ೪೪

ಕ್ಷಿಪ್ರಗತಿಯ ಕುರಂಗದುರು ನಿಗ । ಮಪ್ರಭಾವದ ಭೂರಿಚೈತ
ನ್ಯಪ್ರಕರದಗಣಿತ ಮರುದ್ಗಣದಿಷು ಶರಾಸನದ
ಸುಪ್ರತಾಪದ ಸಕಲ ಭುವನ ಗ । ತಿಪ್ರಸಿದ್ಧಿಯ ಪಂಚರೂಪಕ
ದಪ್ರಭಂಜನನೈದಿದನು ನಿಜಪತಿಯ ಗಡಣದಲಿ ೪೫

ವರ ಭುಜಂಗಮ ಸಿದ್ಧ ವಿದ್ಯಾ । ಧರ ನಿಶಾಚರ ಯಕ್ಷಕುಲ ಕಿಂ
ಪುರುಷ ಗುಹ್ಯಕ ಗರುಡ ಗಂಧರ್ವಾದಿ ಗಣಸಹಿತ
ತುರಗದುಪ್ಪರಗತಿಯ ಮಹದೈ । ಶ್ವರಿಯದತ್ಯಧಿಕ ಪ್ರತಾಪದ
ಭರದ ಭಾರವಣೆಯಲಿ ಬಂದನು ಸಖನುಮಾಪತಿಯ ೪೬

ತರುಣ ಕೇಳೈ ಕುಶನೆ ಹಿಂದಣ । ತರಣಿವಂಶದ ಸೋಮವಂಶದ
ನರಪತಿಗಳಿಟ್ಟಣಿಸಿತಮರವಿಮಾನವೀಥಿಯಲಿ
ಗುರು ವಸಿಷ್ಠನು ವಾಮದೇವಾ । ದ್ಯರುಗಳೊಪ್ಪಿದರಬುಜ ಕುವಲಯ
ಪರಮಸಖಿರಸೆದರು ಸುತಾರಾಗ್ರಹದ ಗಡಣದಲಿ ೪೭

ತನ್ನ ರಾಕ್ಷಸಸತಿಯೊಡನೆ ಕುಳಿತು ರಾಕ್ಷಸಜನರೊಡನೆ ಬಂದನು, ೪೪. ತುಂಬಿ ಒಡೆದು ಎರಚುವ ನೀರಿನ ಕಣಗಳ ಸಮೂಹದ, ನೊರೆಯುಂಡೆಗಳ, ಅಸಂಖ್ಯಸುಳಿ ಮತ್ತು ಗುಳ್ಳೆಗಳ ಬೊಬ್ಬೆಯಿಂದ ಕೂಡಿದ ನದಿ ಸಾಗರಗಳ ವರುಣನು ರತ್ನಾಭರಣಕಾಂತಿಯಿಂದ ಜಲಚರಗಳ ಸಮೂಹದೊಡನೆ ಬಂದನು. ೪೫. ಜಿಂಕೆಯ ತೀವ್ರವೇಗದ, ಸರ್ಪಗಳಿಗೆ ಚೈತ್ಯನ್ಯದಾಯಕನಾದ ವೇದಗಳ ಪ್ರಭಾವದ ಪ್ರತಾಪಶಾಲಿಯಾದ, ಸಕಲ ಲೋಕಗಳ ಚಲನೆಯ ಶಕ್ತಿಯಾದ ಪಂಚರೂಪಕದ ವಾಯುವು ಅತಿಶಯ ಸಮರ್ಥರಾದ ಮರುದ್ಗಣಗಳೊಡಗೂಡಿ ಬಿಲ್ಲುಬಾಣಗಳನ್ನು ಹಿಡಿದು ತನ್ನ ಒಡೆಯನಾದ ಇಂದ್ರನ ಕಡೆಯ ಸಮೂಹದಲ್ಲಿ ಬಂದನು. ೪೬. ನಾಗರು, ಸಿದ್ಧರು, ವಿದ್ಯಾಧರರು, ನಿಶಾಚರರು, ಯಕ್ಷರು, ಕಿಂಪುರುಷರು, ಗುಹ್ಯಕರು, ಗರುಡರು, ಗಂಧರ್ವರೇ ಮೊದಲಾದವರೊಡನೆ ಮಹದೈಶ್ವರ್ಯಕ್ಕೊಡೆಯನಾದ, ಅತಿಶಯ ಪರಾಕ್ರಮಶಾಲಿಯಾದ ಶಿವನ ಮಿತ್ರನಾದ ಕುಬೇರನು ಪುಟನೆಗೆಯುವ ಕುದುರೆಯ ಮೇಲೆ ಕುಳಿತುಕೊಂಡು ಬಂದನು. ೪೭. ತರುಣ ಕುಶ, ಕೇಳು. ಹಿಂದೆ ಆಗಿಹೋದ ಸೂರ್ಯ ಚಂದ್ರವಂಶಗಳ ರಾಜರುಗಳು ಸ್ವರ್ಗದಿಂದ ಬಂದು ದೇವತೆಗಳ ವಿಮಾನದ ಸಾಲಿನಲ್ಲಿ ಗುಂಪುಗೂಡಿದರು. ಗುರುವಸಿಷ್ಠ ವಾಮದೇವ ಮೊದಲಾದವರು, ಸೂರ್ಯಚಂದ್ರರು, ಶುಭನಕ್ಷತ್ರ ಮತ್ತು ಶುಭಗ್ರಹಗಳ

ತುಂಬಿತಂಬರ ಘನಪತಾಕಾ । ಡಂಬರದಿನನುಪಮ ವರೂಥಕ
ದಂಬ ವಾಹನನಿಕರ ದಿವ್ಯವಿಮಾನವೀಥಿಯಲಿ
ತುಂಬುರರ ನಾರದರ ದಿವಿಜನಿ । ತಂಬಿನಿಯರ ಸುಗೀತ ರಚನಾ
ಡಂಬರದ ದೆಖ್ಖಾಳ ಮಿಗೆ ರಂಜಿಸಿತು ಗಗನದಲಿ ೪೮

ಕಳಕಳದ ಕಾಹುರದ ಕಂಬಿಗ । ಳುಲುಹುಗಳ ಪಡಿಯರರ ದಿವಿಜಾ
ವಳಿಗಳೊತ್ತೊತ್ತೆಯಲಿ ಜಡಿದುದು ಕೊಡೆ ಗಗನತಳ
ಹಳುರೆ ಧಿರುಧಿರು ಭಾಪು ಮಝು ಮಂ । ಗಳೆ ಮಹಾಸತಿಯಾದಿಮಾಯಾ
ಲಲನೆಯವಧಾರೆಂಬ ದನಿ ಕೇಳಿಸಿತು ರಘುಪತಿಯ ೪೯

ಮುಸುಕಿಬೀಳುವ ಪುರವರದ ರಾ । ಕ್ಷಸರ ನೆರವಿಯನವನಿಜೆಯನೀ
ಕ್ಷಿಸುವ ತವಕದ ತರುಚರರನೆಡಬಲದ ಭಾಗದಲಿ
ಅಸಬಡಿವುತಸುರೇಂದ್ರನತಿ ಸರ । ಭಸದ ಸೌರಂಭದಲಿ ಬರೆ ಕಂ
ಡಸುರಹರ ಮೂಗಿನಲಿ ಬೆರಳಿಟ್ಟೊಲೆದನವಯವವ ೫೦

ತಮ್ಮ ನೋಡೀ ಬಹ ವಿಕಾರವಿ । ದೆಮ್ಮದಾಗಲುಬೇಕು ನಾಚಿಕೆ
ನಿಮ್ಮತ್ತ ಲೇಸಾಗಿ ನೋಡಚ್ಚರಿಯ ನೀನೆನುತ
ಚಿಮ್ಮುವಮರುಷದಗ್ನಿಕಣದಲಿ । ಬಿಮ್ಮನುದ್ರೇಕದಲಿ ಸುರಪನ
ಮೊಮ್ಮನನು ಕರೆದಿಳುಹಿ ತಾ ಹೋಗೆಂದು ನೇಮಿಸಿದ ೫೧

ಜತೆಯಲ್ಲಿ ಗೋಚರಿಸಿದರು. ೪೮. ಅಸಾಧಾರಣವಾದ ರಥಗಳು ಮತ್ತು ವಾಹನಗಳು, ದಿವ್ಯವಿಮಾನಗಳ ಪಂಕ್ತಿಗಳು ತಮ್ಮ ಬಾವುಟಗಳ ಆಡಂಬರದೊಡನೆ ಆಕಾಶವನ್ನು ತುಂಬಿದವು. ತುಂಬುರ, ನಾರದ ಮತ್ತು ದೇವಸ್ತ್ರೀಯರ ಅಮೋಘ ಸಂಗೀತದ ವೈಭವದ ಹೆಚ್ಚಳವು ಆಕಾಶದಲ್ಲಿ ಶೋಭಿಸಿತು. ೪೯. ಕಲಕಲ ಶಬ್ದಮಾಡುತ್ತ ಸಂಭ್ರಮದಿಂದ ಗದ್ದಲಮಾಡುವ ದ್ವಾರಪಾಲಕರ ಮತ್ತು ದೇವತೆಗಳ ಜನದಟ್ಟಣೆಯು ಆಕಾಶವನ್ನು ಬೆದರಿಸಿತು. 'ಹಳುರೆ ! ಧಿರುಧಿರು ! ಭಾಪು ! ಮಝು ! ಮಂಗಳೆ, ಮಹಾಸತಿ, ಆದಿ ಮಾಯಾಶಕ್ತಿ, ಅವಧಾರು !' ಎಂಬ ಧ್ವನಿಯು ರಘುಪತಿಗೆ ಕೇಳಿಸಿತು. ೫೦. ಮೇಲೆ ಬೀಳುವ ಲಂಕಾನಗರದ ರಾಕ್ಷಸರ ಗುಂಪನ್ನೂ, ಸೀತೆಯನ್ನು ನೋಡಲು ಕಾತರರಾದ ವಾನರರನ್ನೂ ಎಡಬಲಗಳಲ್ಲಿ ಹೊಡೆದು ತಳ್ಳುತ್ತ ವಿಭೀಷಣನು ಸಡಗರಿಸುತ್ತ ರಭಸದಿಂದ ಬರಲು ಕಂಡ ರಾಮನು ಮೂಗಿನ ಮೇಲೆ ಬೆರಳಿಟ್ಟು ದೇಹವನ್ನು ಒಲೆದನು. ೫೧. "ತಮ್ಮ ಲಕ್ಷ್ಮಣ, ಈಗ ಬರುತ್ತಿರುವ ವಿಕಾರವು ನಮ್ಮದೇ ಆಗಿದೆ. ನಾಚಿಕೆ ಹೇರಿಕೊಂಡಿತಯ್ಯ, ತಮ್ಮ, ನೋಡು ಆಶ್ಚರ್ಯವನ್ನು" ಎನ್ನುತ್ತ ಕೋಪಾಗ್ನಿಯ ಕಿಡಿಗಳನ್ನು ಕಾರುತ್ತ ಗರ್ವದ ಉದ್ರೇಕದಿಂದ ಅಂಗದನನ್ನು ಕರೆದು "ಸೀತೆಯನ್ನು ಇಳಿಸಿ ಕರೆದು

ಆರ ಸಿರಿಗಿವಳಿನಿತು ಕಡು ಸಿಂ । ಗಾರವನು ಕೈಕೊಂಡಳಿಂದಿವ
ಳಾರ ನೇಮದಲೇಱಿದಳು ಮಣಿಮಯದ ದಂಡಿಗೆಯ
ವೀರ ನೋಡೈ ತಮ್ಮ ನಮ್ಮವು । ದಾರನೀಯುಪಹಾಸ ಮನಕಿದು
ಸೇರುವುದೆ ಘಾತಾಳಿಯಂಗವ ನೋಡು ನೀನೆಂದ ೫೨

ಇವಳು ಕಳುಹದೆ ಬಿಡುವಳೇ ನಿ । ನ್ನುವನು ನಮ್ಮೆಡೆಗಡವಿಯಲಿ ಕಪ
ಟವನು ಕೈಕೊಂಡೆರಳೆಯಿದು ನೀನೆನಲು ಕಿಡೆನುಡಿದು
ವಿವಿಧ ಮಾಯಾರಚನೆಯಲಿ ನ । ಮ್ಮುವನು ಕಳುಹಿದಳೇ ವಿಚಾರದ
ಹವಣನಱಿಯದೆ ನಿನ್ನ ಜಱಿದೆನು ತಮ್ಮ ತಾನೆಂದ ೫೩

ಒಲ್ಲೆನೆನ್ನದೆ ಪರರ ವೈಭವ । ದಲ್ಲಿ ಚಿತ್ತವ ಬೆರಸಿ ಕಾಮುಕ
ವಲ್ಲಭೆಯರಂದವನು ಮೆಱೆದೆಮ್ಮೆಡೆಗೆ ನಡೆತಹುದು
ಒಳ್ಳಿತೇ ನಮ್ಮನ್ವಯಕೆ ಭಯ । ವಿಲ್ಲದಿಹ ಪರಿಯೆಂತುಟೋ ನಾ
ವೆಲ್ಲಿಯೀಪರಿ ಕಂಡುಕೇಳಿದ ಕಣೆಯವಿಲ್ಲೆಂದ ೫೪

ಪಗರಣವ ನೋಡನುಜ ದಡ್ಡಿಯ । ಬಿಗುಹನೀಕ್ಷಿಸು ಮೆಱೆದು ಬಹ ದಂ
ಡಿಗೆಯ ಕಂಡೈ ಕೇಳಿದೈ ಕಂಚುಕಿಗಳುಗ್ಗಡವ
ನಗೆಯ ಸುರಿದಳು ನಮಗೆನುತ ನೃಪ । ಮೊಗವ ತಿರುಹಿದನಿಂದ್ರತನುಜನ
ಮಗನು ನಡೆತಂದಾ ವಿಭೀಷಣದೇವಗಿಂತೆಂದ ೫೫

ಕೊಂಡು ಬಾ, ಹೋಗು" ಎಂದು ಅಪ್ಪಣೆಮಾಡಿದ. ೫೨. "ಯಾರ ಸಂಪತ್ತಿಗಾಗಿ ಇವಳು ಇಷ್ಟೊಂದು ಭಾರಿ ಅಲಂಕಾರವನ್ನು ಒಪ್ಪಿಕೊಂಡಳು ? ಇವಳು ಯಾರ ಅಪ್ಪಣೆಯಿಂದ ರತ್ನಖಚಿತ ಪಲ್ಲಕ್ಕಿಯನ್ನೇರಿದಳು ? ವೀರ ತಮ್ಮ, ಕೇಳಯ್ಯ. ಈ ಅಪಹಾಸ್ಯ ಯಾರ ಮೇಲೆ ಬರುವುದು ? ನಮ್ಮ ಮನಸ್ಸಿಗೆ ಇದು ಹಿಡಿಸುವುದೆ ? ಈ ಕೇಡಿಗಳ ನಡೆವಳಿಕೆಯನ್ನು ನೋಡು" ಎಂದ ರಾಮ. ೫೩. "ಇವಳು ನಿನ್ನನ್ನೂ ಕೂಡ ನಮ್ಮ ಬಳಿಗೆ ಕಾಡಿಗೆ ಕಳುಹಿಸದೆ ಬಿಟ್ಟಳೇ. ಇದು ಮಾಯಾಜಿಂಕೆಯೆಂದು ನೀನು ಹೇಳಲು ನಿನ್ನನ್ನು ನಿಂದಿಸಿದಳು. ನಮ್ಮನ್ನೂ ಕೂಡ ನಾನಾ ವಿಧವಾದ ಮಾಯೆಯಿಂದ ಕಳಿಸಿದಳು. ತಮ್ಮ ಲಕ್ಷ್ಮಣ, ಈ ವಿಚಾರವನ್ನರಿಯದೆ ನಾನು ನಿನ್ನನ್ನು ನಿಂದಿಸಿದೆ" ಎಂದ ರಾಮ. ೫೪. "ಒಲ್ಲೆ ಎನ್ನದೆ ಪರರ ವೈಭವಕ್ಕೆ ಮನಸೋತು ಕಾಮುಕಸ್ತ್ರೀಯರಂತೆ ನಡೆದು ನಮ್ಮ ಬಳಿಗೆ ಬರುವುದು ನಮ್ಮ ವಂಶಕ್ಕೆ ಒಳ್ಳೆಯದೇ ? ನಿರ್ಭಯವಾಗಿರುವ ರೀತಿ ಹೇಗೋ. ನಾವು ಎಲ್ಲೂ ಈ ರೀತಿಯ ಪ್ರಸಂಗ ಕಂಡುಕೇಳಿದುದಿಲ್ಲ. ೫೫. ತಮ್ಮ ಲಕ್ಷ್ಮಣ, ಈ ಪಗರಣವನ್ನು ನೋಡು. ಪಲ್ಲಕ್ಕಿಗೆ ತೆರೆಬಿಗಿದಿರುವುದನ್ನು ನೋಡು. ಮೆರೆದುಬರುತ್ತಿರುವ ಪಲ್ಲಕ್ಕಿಯನ್ನು ಕಂಡೆಯಾ. ಕಂಚುಕಿಗಳು ಮಾಡುತ್ತಿರುವ ಬಿರಂದಾವಳಿಗಳ ಹೊಗಳಿಕೆಯನ್ನು ಕೇಳಿದೆಯಾ ? ನಮ್ಮನ್ನು ನಗೇಡುಮಾಡಿದಳು" ಎಂದು ನುಡಿದು ರಾಮನು ಮುಖವನ್ನು ತಿರುಗಿಸಿಕೊಂಡನು. ಇತ್ತ ಅಂಗದನು ಬಂದು

ಎಲೆ ವಿಭೀಷಣದೇವ ರಘುಕುಲ । ತಿಲಕನಂದಣದಿಂದ ದೇವಿಯು
ರಿಳಿದುಬರಲೆಂದೆನ್ನ ಕಳುಹಿದರೆಂದು ಕರ್ಣದಲಿ
ತಿಳುಹಲೆದೆ ಝಲ್ಲೆಂದು ಚಿಂತೆಯು । ತಳೆದು ತಾನೈತಂದು ಕರಕು
ಟ್ಮಳದಿನಾ ನಿಜಶರಣ ಬಿನ್ನೈಸಿದನು ರಘುಪತಿಗೆ ೫೬

ದೇವ ತಾನಪರಾಧಿ ಭೃತ್ಯನ । ಸೇವೆಯೈಸಿದು ಹಲವು ಪರಿಯಲಿ
ದೇವಿಯರು ತಾವೊಲ್ಲೆವೆಂದರು ವೈಭವೋಚಿತವ
ದೇವರಲಿ ಮುಳಿಸಾದರೊಮ್ಮೆಗೆ । ಸಾವೆನೆಂದೊಡಬಡಿಸಿ ತಂದೆನು
ಕಾವುದೆನ್ನಪರಾಧಕೃತ್ಯವ ಮರೆದು ನೀವೆಂದ ೫೭

ಎಲೆ ವಿಭೀಷಣದೇವ ಲೋಕಾ । ವಳಿಯ ಮೆಚ್ಚಿಸಿ ನಡೆವುದೇ ಹೆಂ
ಗಳಿಗೆ ಲಕ್ಷಣ ಭುವನದಲಿ ಸುವ್ರತೆಯರವರೀಗ
ಹಳುವದಲಿ ಸೆರೆವಿಡಿದು ರಕ್ಕಸ । ನೆಳೆದುತಂದಂದಿನಿತು ಶೋಭಾ
ಕಲಿತ ವೈಭವವಿದ್ದುದೇ ನೀ ಹೇಳು ತನಗೆಂದ ೫೮

ಆರು ನೋಡರು ಕಂಗುರುಡನೇ । ವೀರ ರಾವಣನಂದಿನಿಂದೇ
ನೋರಣಿಸಿತೇ ಲಜ್ಜೆಯಂಗೀಕರಣವಂಗದಲಿ
ಹೋರದಿರು ನೀ ಹೋಗು ಡೊಂಬಿನ । ಕಾರಣವದೇನಿಳುಹಿ ತಾ ಪರಿ
ವಾರ ನೋಡಲಿ ಮರಳಿ ಬಿನ್ನಹ ಬೇಡ ನಿನಗೆಂದ ೫೯

ವಿಭೀಷಣದೇವನನ್ನು ಕುರಿತು ಮುಂದಿನಂತೆ ನುಡಿದನು. ೫೬. "ಅಯ್ಯಾ ವಿಭೀಷಣ, ದೇವಿಯರು ಪಲ್ಲಕ್ಕಿಯಿಂದ ಇಳಿದುಬರಲಿ ಎಂದು ರಘುತಿಲಕನು ಹೇಳಿಕಳುಹಿಸಿದನು" ಎಂದು ಅಂಗದನು ಕಿವಿಯಲ್ಲಿ ಹೇಳಿದನು, ಆಗ ವಿಭೀಷಣನ ಎದೆ ಝಲ್ಲೆಂದಿತು. ಚಿಂತೆ ತಾಳಿ ವಿಭೀಷಣನು ರಾಮನ ಬಳಿಗೆ ಬಂದು ಕೈಮುಗಿದುಕೊಂಡು ವಿಜ್ಞಾಪನೆ ಮಾಡಿಕೊಂಡನು. ೫೭. "ಸ್ವಾಮಿ, ನಾನು ತಪ್ಪಿತಸ್ಥ. ಇದು ಈ ನಿಮ್ಮ ಕಿಂಕರನಾದ ನನ್ನ ಸೇವೆ. ದೇವಿಯವರು ಹಲವು ರೀತಿಯಲ್ಲಿ ಈ ವೈಭವವನ್ನು ಬೇಡ ಎಂದು ಹೇಳಿದರು. ಸ್ವಾಮಿಯವರು ಕೋಪಿಸಿಕೊಂಡರೆ ಒಂದೇ ಸಲಕ್ಕೆ ಪ್ರಾಣಬಿಡುತ್ತೇನೆ ಎಂದು ದೇವಿಯವರನ್ನು ಒಪ್ಪಿಸಿ ಕರೆದುಕೊಂಡು ಬಂದೆ. ನನ್ನ ಅಪರಾಧಕೃತ್ಯವನ್ನು ಮರೆತು ಕಾಪಾಡಬೇಕು" ಎಂದು ವಿಭೀಷಣ ಬೇಡಿಕೊಂಡ. ೫೮. "ಅಯ್ಯಾ ವಿಭೀಷಣದೇವ, ಲೋಕಗಳನ್ನು ಮೆಚ್ಚಿಸಿ ನಡೆಯುವುದೇ ಹೆಂಗಸರಿಗೆ ಲಕ್ಷಣ. ಜಗತ್ತಿನಲ್ಲಿ ಅವರೇ ಪತಿವ್ರತೆಯರು. ಅರಣ್ಯದಲ್ಲಿ ಸೆರೆಹಿಡಿದು ರಾಕ್ಷಸನು ಎಳೆದುತಂದಾಗ ಇಷ್ಟೊಂದು ಚೆಲುವಿನ ವೈಭವವಿದ್ದಿತೇ, ನೀನು ನನಗೆ ಹೇಳು" ಎಂದ ರಾಮ. ೫೯. "ಯಾರು ತಾನೇ ನೋಡುವುದಿಲ್ಲ. ಅಂದಿನ ರಾವಣನು ಕಣ್ಣುಕುರುಡನೇ, ಇಂದೇನು ಅವಳನ್ನು ಲಜ್ಜೆಯಾವರಿಸಿಬಿಟ್ಟಿತು ? ಸುಮ್ಮನೆ ಹಟಮಾಡಬೇಡ, ಹೋಗು. ಸೋಗಿನ ಕಾರಣವೇನಿದೆ ? ಇಳಿಸಿ ಕರೆದುಕೊಂಡು ಬಾ, ಪರಿವಾರವೆಲ್ಲ ನೋಡಲಿ. ಪುನಃ ನಿನ್ನ

ಪರಿಕಿಸುವರೆ ಪತಿವ್ರತೆಯರಾ । ಚರಣೆ ಸುಜನರಿಗಱಿಯಬಹುದು
ವ್ಱರೆಯ ದುರ್ಜನರುಗಳ ಮೆಚ್ಚಿಸಬಾರದಿದು ಸಿದ್ಧ
ಇರಳೆ ಮಾಱಿಸಿಕೊಂಡು ಕಾಶಿಯ । ಪುರದೊಳೆಮ್ಮನ್ವಯದ ಪಾರ್ಥಿವ
ನರಸಿ ನೈಷಧನರಸಿಯಿರಳೇ ಚೈದ್ಯನಗರಿಯಲಿ ೬೦

ಬಂದುದೇಯವರಿಗೆ ಜನಂಗಳ । ನಿಂದೆ ದುಗುಡವದೇಕೆ ನಿನಗಿ
ನ್ನೊಂದು ನಿಮಿಷದೊಳಱಿಯಬಹುದಾಡಿಸಿದ ಮಾತಿನಲಿ
ಸಂದೆಗವ ಬಿಡು ಕಾಲುನಡೆಯಲಿ । ತಂದು ತೋಱಿಸು ಹಲವು ನುಡಿ ಬೇ
ಡೆಂದು ಬೀಳ್ಕೊಡಲಳ್ಕೆವಾಱುತ ಶರಣನೈತಂದ ೬೧

ತಾಯೆ ನಿಮ್ಮರಸನ ನಿರೂಪಕ । ವಾಯಿತಿಳಿಗವತರಿಸಿ ರಾಯರ
ರಾಯನಲ್ಲಾ ಮೇಲೆ ನಿಮ್ಮಯ ಜೀವಿತೇಶನಲ
ಆ ಯಶಃಕರನಾಜ್ಞೆ ನಿಮಗೆಮ । ಗಾಯತದ ಫಲಸಿದ್ಧಿಯೆನೆ ಜಲ
ಜಾಯತೇಕ್ಷಣೆ ಧರೆಗೆ ಧುಮ್ಮಿಕ್ಕಿದಳು ದುಗುಡದಲಿ ೬೨

ಜಯಜಯೆಂದುದು ಕುಟ್ಮಳಿತ ಪಾ । ಣಿಯಲಿ ಪರಮಸ್ತೋತ್ರವಚನದ
ನಿಯಮದಲಿ ಸನಕಾದಿ ಸಕಲ ಸುಪರ್ವ ಮುನಿನಿಕರ
ಭಯಭರಿತ ಭಕ್ತಿಯಲಿ ಸುರಸಮು । ದಯ ಸರಸ್ವತಿ ಮುಖ್ಯ ಸುರನಾ
ರಿಯರು ವಿನಮಿತರಾಯ್ತು ಸಂದರ್ಶನದಲವನಿಜೆಯ ೬೩

ವಿಜ್ಞಾಪನೆ ಬೇಡ" ಎಂದ ರಾಮ. ೬೦. "ವಿಚಾರಿಸಿನೋಡಿದರೆ ಪತಿವ್ರತೆಯರ ನಡೆವಳಿಕೆಯನ್ನು ಸಜ್ಜನರು ಅರ್ಥಮಾಡಿಕೊಳ್ಳಬಹುದು. ಆದರೆ ಭೂಮಿಯ ಮೇಲಿನ ದುರ್ಜನರನ್ನು ಮೆಚ್ಚಿಸುವುದು ಕಷ್ಟ. ಇದು ಸತ್ಯ. ನಮ್ಮ ವಂಶದ ಹರಿಶ್ಚಂದ್ರನ ರಾಣಿ ಕಾಶಿಪಟ್ಟಣದಲ್ಲಿ ಮಾರಿಸಿಕೊಂಡು ಇರಲಿಲ್ಲವೇ ? ನಳನ ರಾಣಿ ಚೈದ್ಯನಗರದಲ್ಲಿ ಪತಿಯನ್ನಗಲಿ ಇರಲಿಲ್ಲವೇ ? ೬೧. ಆವರುಗಳಿಗೆ ಜನಗಳ ನಿಂದೆ ಬಂದಿತೇ ? ನಿನಗೆ ದುಃಖವೇಕೆ ? ನಾವಾಡಿದ ಮಾತಿನಿಂದ ಏನಾಗುವುದೆಂಬುದನ್ನು ನಿಮಿಷದಲ್ಲಿ ತಿಳಿಯಬಹುದು. ಸಂದೇಹವನ್ನು ಬಿಡು. ಕಾಲುನಡಿಗೆಯಲ್ಲಿ ಕರೆದುಕೊಂಡು ಬಂದು ಸೀತೆಯನ್ನು ತೋರಿಸು. ಹಲವು ಮಾತುಬೇಡ" ಎಂದು ಹೇಳಿ ರಾಮನು ವಿಭೀಷಣನನ್ನು ಕಳುಹಿಸಿಕೊಡಲು ಭಕ್ತನು ನಡುಗುತ್ತ ಬಂದನು. ೬೨. "ತಾಯೆ, ನಿಮ್ಮ ಅರಸನ ಅಪ್ಪಣೆಯಾಗಿದೆ, ಪಲ್ಲಕ್ಕಿಯಿಂದಿಳಿಯಿರಿ. ರಾಜರ ರಾಜನಲ್ಲವೇ ರಾಮ, ಇದರ ಮೇಲೆ ನಿಮ್ಮ ಪ್ರಾಣೇಶನಲ್ಲವೇ ? ಆ ಕೀರ್ತಿಶಾಲಿಯ ಆಜ್ಞೆಯು ನಿಮಗೂ ನಮಗೂ ಅತಿಶಯ ಫಲದಾಯಕ" ಎಂದು ವಿಭೀಷಣನು ನುಡಿಯಲು ಸೀತೆ ದುಃಖದಿಂದ ನೆಲಕ್ಕೆ ಧುಮುಕಿದಳು. ೬೩. ಸನಕಾದಿ ಸಮಸ್ತ ದೇವಮುನಿಗಳು ಕೈಮುಗಿದುಕೊಂಡು 'ಜಯ ಜಯ !' ಎಂದು ಸ್ತೋತ್ರಮಾಡಿದರು. ಭಯಭರಿತ ಭಕ್ತಿಯಿಂದ ದೇವಸಮೂಹ ಮತ್ತು ಸರಸ್ವತಿಯೇ ಮೊದಲಾದ ಮುಖ್ಯ ದೇವನಾರಿಯರು ಸೀತೆಯ ದರ್ಶನಪಡೆದು

ಲೋಕಮಾತೆ ಸಮಸ್ತ ದಿವಿಜಾ । ನೀಕಪೂಜಿತೆ ಸುರನರೋರಗ
ಲೋಕವಂದಿತೆ ವಿಷ್ಣುವಲ್ಲಭೆ ಸಕಲಗುಣಭರಿತೆ
ಏಕನಾಥೆ ಪುರಾಣಪುಣ್ಯ । ಶ್ಲೋಕ ಪಾವನಚರಿತೆ ಮಾಯಾ
ಶ್ರೀಕಮಲೆ ನಮೋಯೆನುತ ವೈಯಿಕ್ಕಿತು ಸುರವ್ರಾತ ೭೪

ನೋವು ಮನದಲಿ ತಾಗಿದುದ ಕಂ । ಡೈ ವಿಭೀಷಣದೇವ ವರರಾ
ಜೀವನೇತ್ರನ ಬಗೆಯುಬಲ್ಲೆನು ನಿನ್ನ ದೆಸೆಯಿಂದ
ಈ ವಿಕಾರವನನುಕರಿಸಿದೆನು । ಭಾವ ಲೇಸಾಗಿರದು ತನಗಿ
ನ್ನಾವ ಹದನಿನ್ನೇನು ಗತಿಮತಿಯೆಂದಳಿಂದುಮುಖಿ ೭೫

ಪಲವ ಹಂಬಲಿಸುತ್ತ ಮನದೊಳ । ಗಳದು ಹೊಯ್ಯುವ ದುಗುಡಭಾರದ
ಲಳುಕುತಂಜುತ ಸಾರಿದಳು ಸಚರಾಚರಾತ್ಮಕನ
ಜಲಜಭವಸುತ ಜಲಜಸಖಸುತ । ಜಲಜನಯನಾವರಜರಿದಿರೆ
ದ್ದೆಳುಹಿದರು ಮಸ್ತಕವನಂಘ್ರಿಯೊಳಾ ಪತಿವ್ರತೆಯ ೭೬

ಹೆಂಪಳಿದ ತನುಲತೆಯ ಹರುಷದ । ಸೊಂಪು ಸಡಿಲಿದ ಮುಖದ ನೋಟದ
ಗುಂಪುದೆಗೆದಕ್ಷಿಗಳ ಕೋಡಿಯಲೊಗುವ ಕಿಜುವನಿಯ
ಕಂಪಿಸುವ ಕರಣಂಗಳಂಜಿಕೆ । ಜೊಂಪಿಸುವ ಮಾನಸದ ಲಜ್ಜೆಯ
ಲಂಪಿನಂಬುಜವದನೆ ವೈಯಿಕ್ಕಿದಳು ನಿಜಪತಿಗೆ ೭೭

ನಮಸ್ಕರಿಸಿದರು. ೭೪. "ಲೋಕಮಾತೆ, ಸಮಸ್ತ ದೇವಗಣಗಳಿಂದ ಪೂಜಿತಳಾ
ದವಳೇ, ದೇವ ಮಾನವ ಉರಗರಿಂದ ಪ್ರಣಾಮ ಪಡೆಯುವವಳೇ, ವಿಷ್ಣುಪತ್ನಿ, ಸಕಲ
ಗುಣಭರಿತೆ, ಏಕೈಕ ಒಡತಿ, ಪ್ರಾಚೀನಕಾಲದಿಂದಲೂ ಸ್ತುತಿಗೆ ಪಾತ್ರಳಾದವಳೇ,
ಪವಿತ್ರ ನಡೆವಳಿಕೆಯುವಳೇ, ಮಾಯಾಲಕ್ಷ್ಮಿ, ನಿನಗೆ ನಮಸ್ಕಾರ" ಎನ್ನುತ್ತ ದೇವತೆಗಳು
ನಮಸ್ಕರಿಸಿದರು. ೭೫. "ಮನಸ್ಸಿಗೆ ನೋವು ತಗುಲಿದುದನ್ನು ಕಂಡೆಯಾ, ವಿಭೀಷಣ
ದೇವ. ಕಮಲಲೋಚನ ಶ್ರೀರಾಮನ ಮನಸ್ಸನ್ನು ನಾನು ಬಲ್ಲೆ. ನಿನ್ನ ಕಾರಣದಿಂದ
ಈ ಅಲಂಕಾರದ ವಿಕಾರವನ್ನು ಪಡೆದೆ. ರಾಮನ ಅಂತರಂಗದ ಆಲೋಚನೆ ಚೆನ್ನಾಗಿರು
ವಂತೆ ಕಾಣುವುದಿಲ್ಲ. ನನ್ನ ಸ್ಥಿತಿ ಏನೋ ! ಇನ್ನೇನು ದಿಕ್ಕು ನನಗೆ" ಎಂದಳು ಸೀತೆ.
೭೬. ಹಲವು ರೀತಿಯಾಗಿ ಕೊರಗುತ್ತ ಮನಸ್ಸಿನಲ್ಲಿ ಅಳೆಯುತ್ತ ಸುರಿಯುತ್ತ ದುಃಖ
ಭಾರದಿಂದ ಅಳುಕುತ್ತ ಅಂಜುತ್ತ ಸೀತೆ ಸಚರಾಚರಾತ್ಮಕ ರಾಮನ ಬಳಿಗೆ ಬಂದಳು.
ಬ್ರಹ್ಮನಮಗ ಜಾಂಬವ, ರವಿಸುತ ಸುಗ್ರೀವ, ಕಮಲಾಕ್ಷನ ತಮ್ಮ ಲಕ್ಷ್ಮಣರುಗಳು
ಎದ್ದು ಸೀತೆಯ ಎದುರಿಗೆ ಬಂದು ಆ ಪತಿವ್ರತೆಯ ಪಾದಗಳ ಮೇಲೆ ತಲೆಗಳನ್ನಿಟ್ಟು
ನಮಸ್ಕರಿಸಿದರು. ೭೭. ಸೊಗಸು ಕುಂದಿದ ಕೋಮಲಶರೀರ, ಹರ್ಷದ ಸೊಬಗು
ಜಾರಿದ ಮುಖ, ಗಾಂಭೀರ್ಯವಳಿದ ಕಣ್ಣುಗಳ ಕೊನೆಯಿಂದ ಹೊರಸೂಸಿದ ಕಣ್ಣೀರಿನ
ಹನಿಗಳು, ನಡುಗುವ ದೇಹ, ಅಂಜಿಕೆ ಆವರಿಸಿದ ಮನಸ್ಸು–ಈ ಸ್ಥಿತಿಯಲ್ಲಿ ನಾಚಿಕೆಯ

ಬೀಳದನುಕಂಪವು ಕಟಾಕ್ಷದ । ಲೀಳದಧಿಕಸ್ನೇಹ ಕರುಣದೊ
ಳಾಳದಮುರುಷದಾನನದೊಳಭಿಮಾನ ಮಾನಸದ
ಬಾಳಿಕೆಯೊಳಡಮೊಗದಲನುಜನ । ಮೇಲುನೋಟದೊಳರ್ದನಾ ನೀ
ಲಾಳಕಿಯನೀಕ್ಷಿಸದೆ ನೃಪನರೆಗಳಿಗೆ ಪರಿಯಂತ ೬೮

ದೇವ ದೇವಾಧೀಶ ಸರ್ವಗು । ಣಾವಲಂಬನ ಪರ ಚರಾಚರ
ಜೀವರಕ್ಷಕ ಘನಕೃಪಾಕರ ಭಕ್ತಸುರಧೇನು
ದೇವ ನರನಾಟಕದ ಮಾಯಾ । ಶ್ರೀವರನೆ ಚಿತ್ತೈಸು ಸೀತಾ
ದೇವಿಯುರನುಪಚರಿಸಬೇಕೆಂದಜನು ಕೈಮುಗಿದ ೬೯

ನರನೆ ನೀ ನರಸತಿಯೆ ಜಾನಕಿ । ತರುಚರರು ಮರ್ಕಟರೆ ವಿಶ್ವಂ
ಭರೆಯ ಭಾರವ ತಿದ್ದಲೋಸುಗ ಜನನವಾಯ್ತೆಂಬ
ಪರಿಯ ನಾವೇನರಿಯೆವೇ ಪತಿ । ಕರಿಸು ಪರಮ ಪತಿವ್ರತೆಯ ನಿ
ಷ್ಠುರವಿದೇಕೆಲೆ ರಾಮ ನಿನಗೆಂದೀಶ ಕೈಮುಗಿದ ೭೦

ಧರೆಯ ಭಾರವ ಕಳೆದೆ ಧರಣೀ । ಸುರರ ಸಲಹಿದೆ ಹವ್ಯಕವ್ಯಾ
ಧ್ವರವ ನೆಱೆ ಪಾಲಿಸಿದೆ ದಿವಿಜಾವಳಿಯ ರಕ್ಷಿಸಿದೆ
ನರಚರಿತ್ರದ ನಾಟಕವ ವಿ । ಸ್ತರಿಸಿದುದು ಲೇಸಾಯಿತಂಗೀ
ಕರಿಸು ಸೀತೆಯನೆಂದು ಮೈಯಿಕ್ಕಿದನು ಸುರನಾಥ ೭೧

ಲಂಕರಿಸಿದ ಸೀತೆ ಪತಿಗೆ ನಮಸ್ಕಾರಮಾಡಿದಳು. ೬೮. ಸೀತೆಯ ಮೇಲೆ ರಾಮನ ಕರುಣೆ ಬೀಳಲಿಲ್ಲ. ಕಡೆಗಣ್ಣಿನಿಂದ ಗಾಢಮೈತ್ರಿಯು ಹೊರಚೆಲ್ಲಲಿಲ್ಲ. ಕರುಣೆಯನ್ನು ತ್ಯಜಿಸಿ ರೋಷತುಂಬಿದ ಮುಖ ಮತ್ತು ಗರ್ವತುಂಬಿದ ಮನಸ್ಸುಗಳಿಂದ ರಾಮನು ಅಡ್ಡ ಮುಖಮಾಡಿಕೊಂಡು ತಮ್ಮನ ಮೇಲುನೋಟದಲ್ಲಿ ನಿಂತು ಸೀತೆಯನ್ನು ನೋಡದೆ ಅರ್ಧಗಳಿಗೆಯವರೆಗೆ ಹಾಗೆಯೇ ಇದ್ದನು. ೬೯. "ದೇವ ! ದೇವಾಧೀಶ ! ಸಮಸ್ತ ಗುಣಗಳಿಗಾಧಾರ ! ಚರಾಚರಜೀವರಕ್ಷಕ ! ಕರುಣಾಕರ ! ಭಕ್ತಜನಕಾಮಧೇನು ! ದೇವ, ನರನಾಟಕದ ಮಾಯಾಲಕ್ಷ್ಮೀಪತಿಯೆ ! ಅನುಗ್ರಹಿಸು. ಸೀತಾದೇವಿಯರನ್ನು ಉಪಚರಿಸು" ಎಂದು ಬ್ರಹ್ಮನು ಕೈಮುಗಿದು ಕೇಳಿಕೊಂಡನು. ೭೦. "ನೀನು ಮಾನವನೆ, ಜಾನಕಿ ಮಾನವಸ್ತ್ರೀಯೆ ? ಕಪಿಗಳು ಮರ್ಕಟರೆ ? ಭೂಮಿಯ ಭಾರವನ್ನು ಇಳಿಸಲು ನಿನ್ನ ಅವತಾರವಾಯಿತೆಂಬ ಸತ್ಯವನ್ನು ನಾವೇನು ತಿಳಿಯೆವೆ ? ಪರಮಪತಿವ್ರತೆಯನ್ನು ಸ್ವೀಕರಿಸು. ಇದೇಕೆ ಇಷ್ಟು ಕಠಿಣನಾದೆ ?" ಎಂದು ಈಶ್ವರನು ಕೈಮುಗಿದನು. ೭೧. "ಭೂಮಿಯ ಭಾರವನ್ನು ಇಳಿಸಿದೆ. ಬ್ರಾಹ್ಮಣರನ್ನು ಕಾಪಾಡಿದೆ. ದೇವಯಜ್ಞ ಪಿತೃಯಜ್ಞಾದಿ ಯಾಗಗಳನ್ನು ರಕ್ಷಿಸಿದೆ. ದೇವತೆಗಳನ್ನು ಕಾದೆ. ಮಾನವ ನಡವಳಿಕೆಯ ನಾಟಕವನ್ನು ನಟಿಸಿದುದು ಒಳ್ಳೆಯದಾಯಿತು. ಸೀತೆಯನ್ನು ಅಂಗೀಕರಿಸು" ಎಂದು

ಉಳಿದ ದೇವವ್ರಾತ ಭಾಳ । ಸ್ಥಳದ ಮುಕುಳಿತ ಪಾಣಿಪಂಕಜ
ಗಳಲಿ ರಾಮನ ಬೇಡಿಕೊಂಡರು ಶರಧಿಘೋಷದಲಿ
ಪಳಿವು ಹೊದ್ದದ ಕಾಯದೂಷ್ಯಾ । ವಳಿಗಳೈದದ ನಿತ್ಯಶುದ್ಧೆಯು
ಲಲಿತ ಸಾಧ್ವಿಯು ವರಿಸಬೇಕೆಂದಭ್ರಮಾರ್ಗದಲಿ ೭೨

ಶ್ರುತಿಗಳೀಪರಿಯೊಱಲಿದವು ಕ್ರತು । ತತಿಗಳೀಪರಿ ವಾಚಿಸಿದವಾ
ಸ್ಮೃತಿಗಳಿಂತೆಂದೇ ನಿರಂತರ ನುಡಿದವೀಪರಿಯು
ವಿತತ ನಿಗಮಾಗಮ ಪುರಾಣ । ಪ್ರತತಿಗಳು ಮೊಱೆಯಿಟ್ಟವೀ ಸು
ವ್ರತೆಯನಧಿಕ ಪತಿವ್ರತೆಯ ವರಿಸೆಂದು ರಘುಪತಿಗೆ ೭೩

ಎಱಗಿದರು ಬಳಿಕಿದ್ದು ಜಾಂಬವ । ತರಣಿತನುಜ ವಿಭೀಷಣಾದ್ಯರು
ಮಱೆಯ ಬಿಡು ಮಣಿವೆಳಗಿನೊಳಗಡಗುವುದೆಯಾಕಾಶ
ಅಱಿಯದೇ ನಿನ್ನನು ಜಗವೆಲೆ । ಸಿರಿಯರಸ ಕೈವಿಡಿದು ತೆಗೆ ಸ
ಚ್ಚರಿತೆಯನು ಸುವ್ರತೆಯನೆಂದರು ಕರುಣಭಾವದಲಿ ೭೪

ಏಳಿರೈ ನೀವೆಮ್ಮ ದೈವದ । ಮೇಲೆ ಹಾಯಿಕಿ ಹೊಗಳದಿರಿ ಸಾ
ಕೇಳಿಲವ ಮಾಡದಿರಿ ನೀವುಚಿತೋಪಭಾಷಿತದ
ಮೇಲನೆಣಿಕೆಯನಱಿಯದೆಮ್ಮ ನೃ । ಪಾಲವಂಶಕೆ ಕುಂದ ಹೊಱಿಸುವು
ದೋಲಗಾರ್ತವೆ ನಿಮಗೆ ನಿಮ್ಮನುಮಾನವೇನೆಂದ ೭೫

ದೇವೇಂದ್ರನು ನಮಸ್ಕರಿಸಿದನು. ೭೨. ಆಕಾಶದಲ್ಲಿದ್ದ ಉಳಿದ ದೇವತೆಗಳು ಹಣೆಯ ಮೇಲೆ ಮುಗಿದ ಕೈಗಳನ್ನು ಹೊತ್ತುಕೊಂಡು ಸಮುದ್ರಘೋಷದಂಥ ಧ್ವನಿಯಿಂದ "ನಿಂದೆ ತಗುಲದ, ಕಳಂಕದ ಆರೋಪವಿಲ್ಲದ ದೇಹದ, ನಿತ್ಯಶುದ್ಧೆಯಾದ ಸಾಧ್ವಿಯನ್ನು ವರಿಸಬೇಕು" ಎಂದು ಬೇಡಿಕೊಂಡರು. ೭೩. ವೇದಗಳು ಈ ರೀತಿಯಲ್ಲಿ ಕೂಗಿ ಹೇಳಿದವು, ಯಜ್ಞಗಳು ಈ ಮುಂದಿನಂತೆ ಉಚ್ಚರಿಸಿದವು, ಆ ಧರ್ಮಶಾಸ್ತ್ರಗಳು ರಘುಪತಿಗೆ ಇದೇ ರೀತಿ ನುಡಿದವು, ವೇದಶಾಸ್ತ್ರಪುರಾಣಗಳು ಹೀಗೆ ಮೊರೆಯಿಟ್ಟವು : "ಈ ಸುವ್ರತೆಯನ್ನು, ಈ ಶ್ರೇಷ್ಠ ಪತಿವ್ರತೆಯನ್ನು ವರಿಸು" ಎಂದು. ೭೪. ಅನಂತರ ಜಾಂಬವ, ಸುಗ್ರೀವ, ವಿಭೀಷಣಾದಿಗಳು ಎದ್ದು ರಾಮನ ಕಾಲಿಗೆ ಬಿದ್ದು "ರಹಸ್ಯವನ್ನು ತ್ಯಜಿಸು. ರತ್ನದ ಬೆಳಕಿನಲ್ಲಿ ಆಕಾಶ ಅಡಗುವುದೇ. ನಿನ್ನನ್ನು ಜಗತ್ತು ತಿಳಿಯದೇ ? ಲಕ್ಷ್ಮೀಪತಿಯೆ, ಸಚ್ಚರಿತ್ರೆಯಾದ ಪತಿವ್ರತೆಯನ್ನು ಕರುಣೆಯಿಂದ ಕೈಹಿಡಿದು ಉದ್ಧರಿಸು" ಎಂದು ಪ್ರಾರ್ಥಿಸಿದರು. ೭೫. "ಏಳಿರಯ್ಯ, ನೀವು ನಮ್ಮನ್ನು ದೇವರಿಗಿಂತ ಮೇಲೇರಿಸಿ ಹೊಗಳಬೇಡಿ. ನೀವು ನಿಮ್ಮ ಭಾಷಣದಿಂದ ನಮ್ಮನ್ನು ಅವಮಾನ ಮಾಡಬೇಡಿ. ಮುಂದಿನ ಆಲೋಚನೆ ಏನೆಂಬುದನ್ನು ಅರಿಯದೆ ನಮ್ಮ ರಾಜವಂಶದ ಮೇಲೆ ದೋಷವನ್ನು ಹೊರಿಸುವುದು ನಿಮ್ಮ ಸೇವೆಗೆ ಅರ್ಹವಾದುದೆ ? ನಿಮ್ಮ

ಸ್ತ್ರೀಯೆ ಲೋಕದೊಳಿವಳು ಲೋಕದ । ಮಾಯಕಾತಿಯರಿವಳ ಶಿಷ್ಯರು
ನೋಯ ನುಡಿದಡವಿಯಲಿ ನೂಕಿದಳಿವಳು ಲಕ್ಷ್ಮಣನ
ಮಾಯದೆರಳೆಯ ನೆವದಲಸುರರ । ರಾಯನಲಿ ಸಂಕೇತ ನಡೆದುದು
ದಾಯ ತಪ್ಪಿತು ಕಡೆಯಲಿದ ನೀವಱಿಯಿರೈಯೆಂದ ೭೬

ಇವಳಿಗೋಸುಗ ಬಂದು ಹಗೆಯನು । ತವಿಸಿತಿಲ್ಲನರಣ್ಯನನು ತಾ
ನಿವನು ಕೊಂದನು ಪೂರ್ವದಲಿ ನಮ್ಮನ್ವಯಾಗತದ
ಇವನ ಕೊಲಲೈತಂದೆವಲ್ಲದೆ । ವಿವಶೆಯಾದೀ ಸತಿಯ ಹಂಬಲಿ
ನವರು ನಾವಲ್ಲೆಮ್ಮ ನಿರ್ಬಂಧಿಸಲುಬೇಡೆಂದ ೭೭

ತಪ್ಪು ಹೊಱದವೊಲಾವ ಶಪಥವ । ನೊಪ್ಪುಗೊಳಲದ ಮಾಡುವೆನು ದಿಟ
ತಪ್ಪು ಸಂಧಿಸಿತಾದಡಿಲ್ಲಿಯೆ ಬಿಸುಡುವೆನು ತನುವ
ಒಪ್ಪುವುದು ಬಿನ್ನಹವನಿದ ತಾ । ನಿಪ್ಪರಿಯ ಕಾಮಿನಿಯೆ ನಿನಗೆ ಸ
ಮರ್ಪಿಸಿದ ತನುವಾದಡೊಲಿ ಬಳಿಕೆಂದಳಬ್ಜಾಕ್ಷಿ ೭೮

ದೇವ ನೀನಲ್ಲದೆಯತಃಪರ । ವಾವುದನು ತಾ ಬಲ್ಲೆನಾದಡೆ
ದೇವತತಿಯಿದೆ ದಿವ್ಯ ಮುನಿಜನವಿದೆ ಸಮೀಪದಲಿ
ತಾವರೆಯ ನೈದಿಲಿನ ಸಖವಂ । ಶಾವಳಿಯ ನೃಪರಿದೆ ಪರೀಕ್ಷಿಸಿ
ಕಾವುದಲ್ಲಿಂ ಮೇಲೆನುತ ಬಿನ್ನೈಸಿದಳು ಸೀತೆ ೭೯

ಉದ್ದೇಶವೇನು ?” ಎಂದು ರಾಮ ಕೇಳಿದ. ೭೬. “ಭೂಮಿಯಮೇಲಿನ ಹೆಂಗಸೆ ಇವಳು ? ಲೋಕದ ಮಾಯಗಾತಿಯರು ಇವಳ ಶಿಷ್ಯರು. ಲಕ್ಷ್ಮಣನ ಮನಸ್ಸಿಗೆ ನೋಯುವಂತೆ ನುಡಿದು ಇವಳು ಅವನನ್ನು ಕಾಡಿಗೆ ಅಟ್ಟಿದಳು. ಮಾಯಾಜಿಂಕೆಯ ನೆಪದಿಂದ ರಾಕ್ಷಸರಾಜನೊಡನೆ ರಹಸ್ಯ ಹಂಚಿಕೆ ನಡೆಯಿತು. ಆದರೆ ಕಡೆಯಲ್ಲಿ ದಾಯ ತಪ್ಪಿತು. ಇದು ನಿಮಗೆ ತಿಳಿಯದು” ಎಂದ ರಾಮ. ೭೭. “ಇವಳಿಗೋಸ್ಕರ ಬಂದು ಶತ್ರುವನ್ನು ಕೊಲ್ಲಲಿಲ್ಲ. ಹಿಂದೆ ಇವನು ನಮ್ಮ ವಂಶದಲ್ಲಿ ಬಂದ ರಾಜನಾದ ಅನರಣ್ಯನನ್ನು ಕೊಂದನು. ಆದುದರಿಂದ ರಾವಣನನ್ನು ಕೊಲ್ಲಲು ಬಂದೆವಲ್ಲದೆ ಅಂಕೆ ತಪ್ಪಿದ ಇವಳ ಹಂಬಲಕ್ಕೊಳಗಾದವರು ನಾವಲ್ಲ. ನಮ್ಮನ್ನು ಒತ್ತಾಯಪಡಿಸಬೇಡಿ” ಎಂದ ರಾಮ. ೭೮. “ನನ್ನ ಮೇಲೆ ತಪ್ಪು ಹೊರದ ಹಾಗೆ ಒಪ್ಪಿಗೆಯಾಗುವ ಯಾವ ಪ್ರತಿಜ್ಞೆಯನ್ನಾದರೂ ನಾನು ಮಾಡುತ್ತೇನೆ ; ಇದು ಸತ್ಯ. ನನ್ನಲ್ಲಿ ತಪ್ಪಿದೆಯೆಂದಾದರೆ ಇಲ್ಲಿಯೆ ಪ್ರಾಣವನ್ನು ಒಪ್ಪಿಸುವೆ. ನನ್ನ ಈ ವಿನಂತಿಯನ್ನು ಅಂಗೀಕರಿಸಿ. ನಾನು ಎರಡು ನಡತೆಯ ಹೆಂಗಸೆ ? ನಿಮಗೆ ಸಮರ್ಪಿಸಿದ ದೇಹವಾದರೆ ಒಪ್ಪಿಕೊಳ್ಳಿ” ಎಂದು ಸೀತೆ ರಾಮನನ್ನು ಕುರಿತು ವಿಜ್ಞಾಪಿಸಿಕೊಂಡಳು. ೭೯. “ಸ್ವಾಮಿ ನೀವಲ್ಲದೆ ಬೇರೆ ಯಾರನ್ನಾದರೂ ನಾನು ಬಲ್ಲೆ ಎಂದರೆ ಇಲ್ಲಿ ಸಾಕ್ಷಿಯಾಗಿ ದೇವಗಣವಿದೆ, ಸಮೀಪದಲ್ಲಿ ದಿವ್ಯಮುನಿಗಳಿದ್ದಾರೆ, ಸೂರ್ಯವಂಶದ ರಾಜರಿದ್ದಾರೆ. ಪರೀಕ್ಷೆಮಾಡಿ ತಿಳಿದು ನನ್ನನ್ನು

ಆದಡಗ್ನಿಯು ಹೊಕ್ಕು ಹೊಱವಂ । ಟೀ ದಿವಿಜರನು ಮೆಚ್ಚಿಸಿದ ಮೇ
ಲಾದಡಾಗಲಿ ಮರಳಿ ಮಾತೆಮ್ಮೊಡನೆ ಬೇಡೆನಲು
ಆದಿಮಾಯಾಶಕ್ತಿ ಬಳಿಕ ಹ । ಸಾದವೆನೆ ಕೈಮುಗಿದು ಭರತನ
ಸೋದರನು ಬಿನ್ನಹವ ಮಾಡಿದನೆದ್ದು ರಘುಪತಿಗೆ ೮೦

ಅರಸ ಚಿತ್ತೈಸೊಟ್ಟಸಗ್ನಿಯು । ನರಸಿಗೋಸುಗ ಹೊಗುವೆನುರಿಯುಸು
ಬೆರಸಿದರೆ ಬಿಡಿ ದೇವಿಯರನುರಿಯೊಳಗೆ ಬೆರಸದಿರೆ
ವರಿಸಿ ನಿಮ್ಮ ಪತಿವ್ರತೆಯನಿದು । ನಿರುತ ಸತಿಗನ್ಯಾಯವುಳ್ಳಡೆ
ಯಱಿವರಿನ ಮೊದಲಾದ ಹದಿನಾಲ್ವರುಗಳಿವರೆಂದ ೮೧

ತುಂಗಬಲ ನೀನೊಟ್ಟಸಗ್ನಿಯು । ನುಂಗದಿದ್ದರೆ ಸಾಕು ನಿನಗಿದ
ನಂಗಸತಿ ತಾ ಶುದ್ಧೆಯೆಂಬುದನಱಿವೆವಾವಿಂದು
ಅಂಗವಿಸಲಾಪರೆ ಧನಂಜಯ । ನಂಗುಳಲಿ ತಾ ಹೊಕ್ಕು ಹೊಱವಡ
ಲಂಗವಿಸಿದಿರೆ ವನಕೆ ಬಿಜಯಂಗೈಯ ಹೇಳೆಂದ ೮೨

ದೇವ ಚಿತ್ತೈಸರಸಿ ಸೀತಾ । ದೇವಿಗೋಸುಗ ಬೇಱಿಬೇಱಾವ್
ಪಾವಕನನುತ್ತರಿಸುವೆವು ನಿಮ್ಮಡಿಗಳಿದಿರಿನಲಿ
ದೇವ ಬೆಸಸೆನುತೆದ್ದರಾ ಸು । ಗ್ರೀವ ಜಾಂಬವ ವಾಲಿಸುತನಾ
ಪಾವನಾನಿ ಸುಷೇಣ ನೀಲ ಗವಾದಿ ನಾಯಕರು ೮೩

ರಕ್ಷಿಸುವುದುತ್ತಮ" ಎಂದು ವಿನಂತಿಮಾಡಿದಳು. ೮೦. "ಹಾಗಿದ್ದರೆ ಅಗ್ನಿಯನ್ನು ಪ್ರವೇಶಿಸಿ ಹೊರಬಂದು ಈ ದೇವತೆಗಳನ್ನು ಮೆಚ್ಚಿಸಿದ ಮೇಲೆ ಆದರೆ ಆಗಲಿ, ಪುನಃ ನಮ್ಮ ಜತೆ ಮಾತು ಬೇಡ" ಎಂದು ರಾಮ ಹೇಳಿದ. ಆದಿಮಾಯಾಶಕ್ತಿ ಸೀತೆ 'ಅಪ್ಪಣೆ' ಎಂದಳು. ಆಗ ಲಕ್ಷ್ಮಣನು ಎದ್ದು ಕೈಮುಗಿದುಕೊಂಡು ರಘುಪತಿಗೆ ವಿನಂತಿ ಮಾಡಿಕೊಂಡನು. ೮೧. "ರಾಜಾರಾಮ, ಆಲಿಸು. ಬೆಂಕಿಯನ್ನು ಹಾಕಿಸು. ಸೀತೆ ಗೋಸ್ಕರ ನಾನು ಉರಿಯೊಳಕ್ಕೆ ಬೀಳುವೆನು. ಬೆಂಕಿಯು ನನ್ನನ್ನು ಸುಟ್ಟರೆ ದೇವಿಯು ರನ್ನು ಅಗ್ನಿಪ್ರವೇಶಮಾಡಲು ಬಿಡು. ಬೆಂಕಿಯು ನನ್ನನ್ನು ಸ್ಪರ್ಶಿಸದಿದ್ದರೆ ಪತಿವ್ರತೆ ಯನ್ನು ಸ್ವೀಕರಿಸು. ಇದು ಸತ್ಯ. ಸೀತಾಪತಿಗೆ ಅನ್ಯಾಯವಾದರೆ ಸೂರ್ಯ ಮತ್ತು ಹದಿನಾಲ್ಕುಜನ ಮನುಗಳು ತಿಳಿಯದೇ ಇರುವುದಿಲ್ಲ" ಎಂದ ಲಕ್ಷ್ಮಣ. ೮೨. "ಉನ್ನತ ಬಲಶಾಲಿ ಲಕ್ಷ್ಮಣ. ನೀನು ಅಗ್ನಿಯನ್ನು ಒಟ್ಟಿಸು. ಅಗ್ನಿಯು ಸೀತೆಯನ್ನು ನುಂಗದಿ ದ್ದರೆ ಸಾಕು, ನಮ್ಮ ಸತಿ ಪರಿಶುದ್ಧಳೆಂಬುದನ್ನು ನಾವು ಅರ್ಥಮಾಡಿಕೊಳ್ಳುವೆವು. ಇದನ್ನು ಒಪ್ಪಿಕೊಳ್ಳಲು ಸಮರ್ಥಳಾದರೆ ಅಗ್ನಿಯ ಬಾಯಿಯೊಳಹೊಕ್ಕು ಹೊರ ಬರಲಿ. ಹಾಗೆ ಒಪ್ಪದಿದ್ದರೆ ಕಾಡಿಗೆ ಹೋಗುವಂತೆ ಹೇಳು" ಎಂದ ರಾಮ. ೮೩. "ದೇವ, ಆಲಿಸು. ಅರಸಿ ಸೀತಾದೇವಿಗೋಸ್ಕರ ನಿಮ್ಮ ಎದುರಿನಲ್ಲಿ ಬೇರೆಬೇರೆಯಾಗಿ ನಾವು ಅಗ್ನಿಯನ್ನು ದಾಟಿಕೊಂಡು ಬರುವೆವು. ಅಪ್ಪಣೆಮಾಡಿ ಸ್ವಾಮಿ" ಎನ್ನುತ್ತ ಸುಗ್ರೀವ, ಜಾಂಬವ, ಅಂಗದ, ಮಾರುತಿ, ಸುಷೇಣ, ನೀಲ, ಗವನೇ ಮೊದಲಾದ

ಅಂಜುವೆವು ನಾವ್ ನಿಮಗೆ ನಿಮ್ಮಭಿ । ರಂಜಕವ ನಾ ಬಲ್ಲೆನೀ ಸತಿ
ಯಂಜುವಡೆ ಬಿಡಲಂಜದಿರ್ದಡೆ ಹೊಗಲಿ ಹುತವಹನ
ಕಂಜಭವಭವ ಮುಖ್ಯ ಸಕಲ ಸ । ಮಂಜಸರು ಕೂಗಿದರೆ ಸರಿ ಮರ
ಳೆಂಜಲಿನ ಮಾತಿಲ್ಲ ನಮಗೆಂದರಸ ನೇಮಿಸಿದ ೮೪

ಕೇಳಿದೈ ಸೌಮಿತ್ರಿ ಮಿತ್ರಕು । ಲಾಳಿಗುಪಹತಿ ಬಾರದಂತಿರೆ
ಬೀಳುವೆನು ಶುಚಿಯಾದರೇಳುವೆನಗ್ನಿಕುಂಡದಲಿ
ಮೇಲೆ ಮಾತಿನ್ನೇಕೆ ವಂಶವಿ । ಶಾಲ ವೈಭವವೆನ್ನದೈಸಲೆ
ತೂಳಿಸಗ್ನಿಯನೊಟ್ಟಲಿಂಧನವೆಂದಳಿಂದುಮುಖಿ ೮೫

ತಪ್ಪದೆಂದವನಿಜೆಯ ವಚನವ । ನೊಪ್ಪುಗೊಂಡನು ರಾಮ ನುಡಿಗಳು
ಸೊಪ್ಪುಳಾಗದೆ ಸುಮ್ಮನಿರ್ದರು ಸುರರು ವಾನರರು
ಅಪ್ಪು ಕಣದುಭಯಾಕ್ಷಿಗಳ ನಿ । ಮ್ಮಪ್ಪನನುಜನು ಕರೆದು ಬಳಿಕ ಸ
ಮರ್ಪಿಸಿದನೀ ಮಾತನಾ ಲಂಕಾಧಿನಾಥಂಗೆ ೮೬

ರಚಿಸು ಕುಂಡವನಗ್ನಿದೇವರ । ರುಚಿ ದಿಗಂತವ ಬೆಳಗಲೆಂಬೀ
ವಚನಮಾತ್ರಕೆ ಕೋಟಿಸಂಖ್ಯೆಯ ಸರಿಗ ರಕ್ಕಸರು
ಪ್ರಚುರತರವೆನೆ ಸೀಳಿದರು ಬಳಿ । ಕಚಲೆಯನು ಸಮಚೌಕದಲಿ ಶಶಿ
ರುಚಿಯ ಶಿಲೆಗಳ ಕಂಡರಿಸಿ ಕಟ್ಟಿದರು ಕುಂಡದಲಿ ೮೭

ವಾನರನಾಯಕರು ಮೇಲೆದ್ದರು. ೮೪. "ನಾವು ನಿಮಗೆ ಅಂಜುತ್ತೇವೆ. ನಿಮ್ಮ
ಮನೋಭಿಪ್ರಾಯವನ್ನು ನಾ ಬಲ್ಲೆ. ಈ ಸತಿ ಸೀತೆ ಅಂಜುವುದಾದರೆ ಅಗ್ನಿಪ್ರವೇಶ
ವನ್ನು ತ್ಯಜಿಸಲಿ. ಅವಳಿಗೆ ಹೆದರಿಕೆಯಿಲ್ಲದಿದ್ದರೆ ಅಗ್ನಿಯನ್ನು ಪ್ರವೇಶಿಸಲಿ. ಬ್ರಹ್ಮ,
ಶಿವ ಮೊದಲಾದ ಮುಖ್ಯ ಯೋಗ್ಯರು ಕೂಗಿ ಹೇಳಿದರೆ ಸರಿ, ಪುನಃ ಎಂಜಲಿನ ಮಾತು
ನಮ್ಮ ಬಳಿ ಇಲ್ಲ" ಎಂದ ರಾಮ. ೮೫. "ಕೇಳಿದೆಯಾ, ಲಕ್ಷ್ಮಣ. ರವಿವಂಶದರಸರಿಗೆ
ಕೆಟ್ಟ ಹೆಸರು ಬಾರದ ಹಾಗೆ ನಾನು ಅಗ್ನಿಕುಂಡದಲ್ಲಿ ಬೀಳುವೆನು. ಪರಿಶುದ್ಧಳಾಗಿದ್ದರೆ
ಹೊರಕ್ಕೆ ಎದ್ದುಬರುವೆನು. ಇದರ ಮೇಲೆ ಬೇರೆ ಮಾತೇಕೆ. ಶ್ರೇಷ್ಠವಂಶಗಳ ವೈಭವ
ನನಗೆ ಸೇರಿದ್ದು. ಬೆಂಕಿಯನ್ನು ಆರಂಭಿಸು, ಕಟ್ಟಿಗೆಯನ್ನು ಒಟ್ಟಲಿ" ಎಂದು ಸೀತೆ
ನುಡಿದಳು. ೮೬. 'ಇದು ಖಂಡಿತ' ಎಂದು ಸೀತೆಯ ಮಾತನ್ನು ರಾಮನು ಒಪ್ಪಿ
ಕೊಂಡನು. ದೇವತೆಗಳು, ವಾನರರು ಮಾತನಾಡದೆ ಮೌನವಾಗಿದ್ದರು. ಕಣ್ಣುಗಳಲ್ಲಿ
ನೀರಹನಿ ತುಂಬಿದ್ದ ನಿಮ್ಮ ತಂದೆಯ ತಮ್ಮ ಲಕ್ಷ್ಮಣನು ಲಂಕೆಯರಸ ವಿಭೀಷಣನನ್ನು
ಕರೆದು ಈ ಮುಂದಿನ ಮಾತನಾಡಿದನು. ೮೭. "ಕುಂಡವನ್ನು ಕಟ್ಟಿಸು, ಅಗ್ನಿದೇವರ
ಕಾಂತಿಯು ದಿಗಂತವನ್ನು ಬೆಳಗಲಿ" ಎಂಬುದಾಗಿ ಲಕ್ಷ್ಮಣನು ಹೇಳಿದ ತಕ್ಷಣ ಕೋಟಿ
ಸಂಖ್ಯೆಯ ಸರಿಸಮಾನ ರಾಕ್ಷಸರು ನೆಲವನ್ನು ಅಗಲವಾಗಿ ಅಗೆದು ಸಮಚೌಕಾಕಾರದಲ್ಲಿ

ತಂದು ಬಳಿಕೊಟ್ಟಿದರು ಪರಿಮಳ । ಚಂದನದ ನೀರಸ ಕುಜಂಗಳ
ನಂದವಿಗೆ ಮಧ್ಯದಲಿ ಸುರಿದರು ಭಾರಸಂಖ್ಯೆಯಲಿ
ಒಂದು ತಾಳುತ್ಸೇಧದಲಿ ಹಳು । ಕೊಂದಿದುತ್ತಮ ಕರ್ಪೂರವನ
ಲ್ಲಿಂದ ಮೇಲುರಿಗೊಳಿಸಿ ನಿಲಿಸಿದರನಿಲಬಾಂಧವನ ೮೮

ತುಡುಕಿತಂಬರದುದಿಯ ಶಿಖಿ ಹೊಗೆ । ಹೊಡೆದುದಭ್ರದ ತಾರೆಗಳು ಕೆಲ
ಸಿಡಿದು ಬಿದ್ದವು ಕೇಸುರಿಗಳುಸರದ ಕಿಡಿಸಹಿತ
ಮೃಡನ ವಧು ಕಣ್ಮುಚ್ಚಿದಳು ಬೆದ । ಱದಸಿ ಭಾರತಿ ವರ ವಿರಿಂಚಿಯ
ನಡುವನಪ್ಪಿದಳಂಜಿಸಿತು ಶಿಖಿ ಸುರವಧೂಜನವ ೮೯

ಅಳುಕುವರೆ ಸುವ್ರತೆಯರಗ್ನಿಗೆ । ಜಲಜಭವಭವ ಹರಿಗಳೆಱಗುವ
ರುಳಿದವರ ಪಾಡೇನು ಪತಿಭಜನಾನುಚರಿತರಿಗೆ
ಬಳಿಕ ಕೈಮುಗಿದೆಂದಳರಸಂ । ಗೆಲೆ ನೃಪೋತ್ತಮ ನಿನ್ನ ಸಿರಿಪದ
ನಳಿನವಲ್ಲದೆ ಬಲ್ಲಡೊಳಕೊಳಲಗ್ನಿ ನಿಜತನುವ ೯೦

ಅಲ್ಲದಿರ್ದಡೆ ನಿಮ್ಮ ಸಿರಿಪದ । ಪಲ್ಲವವ ಕಾಣಿಸಲಿ ಮುಡಿದೀ
ಮಲ್ಲಿಗೆಯ ಹೂ ಕಂದಿದರೆ ಕುಂದಿದರೆ ಮೂಗುತಿಯ
ಸಲ್ಲಲಿತ ಬೆಳಗುಟ್ಟ ಸೀರೆಯ । ಕೆಲ್ಲೆ ಶಿಖಿ ಸೋಂಕಿದರೆ ನಿನ್ನವ
ಳಲ್ಲ ಜನಕಂಗಿಳೆಯುಮಗಳಲ್ಲೆಂದಳಿಂದುಮುಖಿ ೯೧

ಚಂದ್ರಕಾಂತಶಿಲೆಗಳನ್ನು ಜೋಡಿಸಿ ಇಟ್ಟು ಕುಂಡವನ್ನು ಕಟ್ಟಿದರು. ೮೮. ಸುವಾಸನೆಯ ಶ್ರೀಗಂಧದ ಒಣಗಿದ ಮರಗಳನ್ನು ತಂದು ಕುಂಡದಲ್ಲಿ ಒಟ್ಟಿದರು. ಒಂದು ತಾಳೆಯಮರದ ಎತ್ತರಕ್ಕೆ ಹಲವು ತೂಕದ ಉತ್ತಮವಾದ ಕರ್ಪೂರದ ಹರಳುಗಳನ್ನು ಕುಂಡದ ಮಧ್ಯಕ್ಕೆ ಸುರಿದರು. ಅನಂತರ ಉರಿಕೊಟ್ಟು ಬೆಂಕಿಮಾಡಿದರು. ೮೯. ಉರಿಯು ಆಕಾಶದ ತುದಿಯನ್ನು ಮುಟ್ಟಿತು; ಹೊಗೆ ಆವರಿಸಿತು. ಕೆಂಪುಉರಿಯ ಭಯಂಕರ ಕಿಡಿಗಳ ಸಮೇತ ನಕ್ಷತ್ರಗಳು ಸಿಡಿದುಬಿದ್ದವು. ಶಿವನ ರಾಣಿ ಕಣ್ಣುಮುಚ್ಚಿಕೊಂಡಳು. ಗಾಬರಿಯಿಂದ ಸರಸ್ವತಿ ಬ್ರಹ್ಮನ ಸೊಂಟವನ್ನಪ್ಪಿಕೊಂಡಳು. ದೇವಲೋಕದ ಸ್ತ್ರೀಯರನ್ನು ಬೆಂಕಿ ಹೆದರಿಸಿತು. ೯೦. ಸುವ್ರತೆಯರು ಅಗ್ನಿಗೆ ಹೆದರುತ್ತಾರೆಯೆ ? ಬ್ರಹ್ಮ, ವಿಷ್ಣು, ಮಹೇಶ್ವರರು ಪತಿವ್ರತೆಯರಿಗೆ ನಮಸ್ಕರಿಸುವರು. ಇನ್ನು ಉಳಿದವರ ಪಾಡೇನು. ಬಳಿಕ ಸೀತೆ ಕೈಮುಗಿದು ರಾಮನನ್ನು ಕುರಿತು ಹೇಳಿದಳು. ರಾಜಶ್ರೇಷ್ಠ, ನಿನ್ನ ಶ್ರೀಪಾದಕಮಲವಲ್ಲದೆ ಬೇರೊಂದನ್ನು ತಿಳಿದಿದ್ದರೆ ಅಗ್ನಿ ನನ್ನ ದೇಹವನ್ನು ತನ್ನೊಳಗೆ ಅಡಕಮಾಡಿಕೊಳ್ಳಲಿ. ೯೧. ಹಾಗಿಲ್ಲದೆ ಇದ್ದರೆ ನಿಮ್ಮ ಶ್ರೀಪಾದಪಲ್ಲವವನ್ನು ಕಾಣುವಂತೆ ಮಾಡಲಿ. ನಾನು ಮುಡಿದ ಈ ಮಲ್ಲಿಗೆಯ ಹೂ ಕಂದಿದರೆ, ನನ್ನ ಮೂಗುತಿಯ ಹೊಳಪು ಕುಂದಿದರೆ, ಉಟ್ಟ ಸೀರೆಯ ಅಂಚಿಗೆ ಬೆಂಕಿ ಸೋಕಿದರೆ ನಿನ್ನ ಪತ್ನಿಯಲ್ಲ, ಜನಕನಿಗೆ ಭೂಮಿಯಂ

ಅವಧರಿಸು ರಾಜೇಂದ್ರ ಕೇಳಿ । ನ್ನವಳ ನಿರ್ಮಳ ಶುಚಿತನವನೆಂ
ದವನಿಸುತೆ ಬಲಬಂದಳಭ್ರವ ಚುಂಬಿಸುವ ಶಿಖಿಯ
ಎವೆಯುಲೀಶಂಗಜ ಸುರೇಶ್ವರ । ರವಿಗಳಿಗೆ ವಂದಿಸಿ ಧರಿತ್ರೀ
ಧವಗೆ ಕೈಮುಗಿದುರಿಯೊಳಗೆ ಧುಮ್ಮಿಕ್ಕಿದಳು ಸೀತೆ ೯೨

ಹಾಯೆನುತ ಹಮ್ಮೈಸಿದನು ರಘು । ರಾಯನನುಜನು ಪವನತನುಜನು
ಬಾಯ ಹೊಯ್ದುಕೊಳುತ್ತ ದೊಪ್ಪನೆ ಕೆಡೆದನವನಿಯಲಿ
ತೋಯಜಪ್ರಿಯಸೂನು ಸಹ ಕಪಿ । ನಾಯಕರು ಗೋಳಿಟ್ಟರಾ ಕಾ
ತ್ಯಾಯಿನೀ ಪ್ರಮುಖಾಮರಿಯರೊಱಲಿದರು ಗಗನದಲಿ ೯೩

ಸೂಸಿದರು ಕಂಬನಿಯನಂಬರ । ಕೇಶ ಮೊದಲಾದವರು ಭೋರ್ಗರೆ
ದಾಸುರದ ಶಿಖಿ ಧಗಧಗಿಸಿದುದು ಗಗನದಗ್ರದಲಿ
ದಾಶರಥಿಯಾಂದೋಳದಂತ । ಕ್ಲೇಶಭಾರದ ಮಣಿದ ಶಿರದನಿ
ಮೇಷದೃಷ್ಟಿಯಲಿರ್ದನೀಕ್ಷಿಸುತಾ ಧನಂಜಯನ ೯೪

ಕುಶನೆ ಕೇಳು ಪತಿವ್ರತೆಯರಿಗೆ । ವಿಷವಮೃತವಹುದುರಿ ಹಿಮಾನ್ವಿತ
ರಸವಹುದು ಬಲುಹಾವು ನೇವಳವಹುದು ಬೆಂಬಿಡದೆ
ಎಸಗಿದಪವಾದಂಗಳಿವು ತಾ । ಸಸಿನವಹುದಿದು ಸಿದ್ಧ ಸಾಕುವ
ಶಿಶುವಿನವೊಲಿರ್ದಳು ವಿದೇಹಜೆ ಕೈಗಳಲಿ ಶಿಖಿಯ ೯೫

ಮಗಳಲ್ಲ" ಎಂದು ಸೀತೆ ನುಡಿದಳು. ೯೨. "ರಾಜಶ್ರೇಷ್ಠನೇ, ಗಮನಿಸು. ಇನ್ನು ಈ ನನ್ನ ಪರಿಶುದ್ಧತೆಯನ್ನು ಗಮನಿಸು" ಎಂದು ಸೀತೆ ಆಕಾಶವನ್ನು ಮುತ್ತಿಕ್ಕುವ ಉರಿಗೆ ಪ್ರದಕ್ಷಿಣೆ ಮಾಡಿದಳು. ಕಣ್ಣೆವೆಯಲ್ಲೇ ಈಶ್ವರ, ಬ್ರಹ್ಮ, ದೇವೇಂದ್ರ, ಸೂರ್ಯರುಗಳಿಗೆ ವಂದಿಸಿ ಪೃಥ್ವೀಪತಿ ರಾಮನಿಗೆ ಕೈಮುಗಿದು ಸೀತೆ ಉರಿಗೆ ಧುಮುಕಿದಳು. ೯೩. 'ಹಾ !' ಎಂದು ಲಕ್ಷ್ಮಣ ಮೂರ್ಛೆಹೋದ. ಮಾರುತಿಯು ಬಾಯಿಬಡಿದುಕೊಳ್ಳುತ್ತ ದೊಪ್ಪನೆ ನೆಲಕ್ಕುರುಳಿದ. ಸೂರ್ಯಸುತ ಸುಗ್ರೀವನೂ ಕಪಿನಾಯಕರೂ ಗೋಳಾಡಿದರು. ಪಾರ್ವತಿ ಮೊದಲಾದ ದೇವನಾರಿಯರು ಆಕಾಶದಲ್ಲಿ ಹಲುಬಿದರು. ೯೪. ಪಾರ್ವತೀಪತಿಯೇ ಮೊದಲಾದವರು ಕಣ್ಣೀರು ಹರಿಸಿದರು. ಉರಿ ಆಕಾಶದೆತ್ತರಕ್ಕೇರಿ ಬೆಂಕಿ ಧಗಧಗಿಸಿತು. ದಾಶರಥಿ ಮನಸ್ಸಿನ ತುಯ್ದಾಟದಿಂದ ಸಂಕಟಪಡುತ್ತ ತಲೆಬಾಗಿಸಿ ರೆಪ್ಪೆ ಹೊಡೆಯದೆ ನೆಟ್ಟದೃಷ್ಟಿಯಿಂದ ಅಗ್ನಿಯನ್ನು ನೋಡುತ್ತಿದ್ದನು. ೯೫. ಕುಶ, ಕೇಳು. ಪತಿವ್ರತೆಯರಿಗೆ ವಿಷವು ಅಮೃತವಾಗುವುದು, ಉರಿ ಹಿಮದ ರಸವಾಗುವುದು, ದುಷ್ಟ ಸರ್ಪವು ಕಂಠಿಹಾರವಾಗುವುದು, ಮಾಡಿದ ಅಪರಾಧಗಳು ತೊಲಗಿ ಸುಖವಾಗುವುದು. ಇದು ಸತ್ಯ. ಸೀತೆ ಬೆಂಕಿಯ ಕೈಯಲ್ಲಿ ಸಾಕುವ ಮಗುವಿನಂತಿದ್ದಳು

ತೆರೆಗಳಬ್ಬರವಳಿದ ಘನಸಾ । ಗರದವೊಲು ಲವ ಕೇಳು ಸುರ ವಾ
ನರ ಕದಂಬಕವಿರ್ದುದೈ ಚಿತ್ರಿಸಿದ ಪುತ್ಥಳಿಯ
ಇರವಿನಂತಿರೆ ಬಳಿಕ ಮೆಲ್ಲನೆ । ಹರನ ತೊಡೆಯಿಂದಿಳಿದು ನೇಮವ
ಧರಿಸಿ ರಾಮನ ಬಳಿಗೆ ಬಂದಳು ಗೌರಿ ಹರುಷದಲಿ ೯೬

ನರಚರಿತ್ರದ ನಾಟಕದ ವಿ । ಸ್ತರಣವತಿಲೇಸಾಯ್ತು ಸಾಕ್ಷಾ
ತ್ಪರಮಪುರುಷನು ನೀನು ಜಾನಕಿ ಜಗದ ಜನನಿಯಲ
ಕರೆದುಕೋ ಸಾಕೆಲ್ಲಿಪರಿಯಂ । ತರ ಪರೀಕ್ಷಿಪೆ ಪುಣ್ಯಚರಿತೆಯ
ಪರಮಪಾತಿವ್ರತೆಯನೆಂದರು ಗೌರಿದೇವಿಯರು ೯೭

ಬೇಡಿಕೊಳಲೇಕಿನಿತು ನಿಮಗೆ ನಿ । ರೂಢಿ ಸತಿ ಶುಚಿಯಾದಡನಲನ
ಬೇಡಿಕೊಂಬುದು ಕಾಣಬಹುದಂತ್ಯದಲಿ ನೀವೆಮಗೆ
ಆಡಿದುಚಿತ ಸುಭಾಷಿತವು ನೆರೆ । ಕಾಡದಿರಿ ನೀವೆಮ್ಮನೆನೆ ಕೈ
ನೀಡಿ ಬಾರೌ ತಂಗಿ ಬಾಯೆಂದಳು ವಿದೇಹಜೆಯ ೯೮

ರವಿಕುಲೇಂದ್ರನ ಚಿತ್ತವೃತ್ತಿಯ । ಹವಣಱಿದು ಬಳಿಕ ಭವಾನಿಯ
ನಿವಡಿಸಿದ ನುಡಿಗಗ್ನಿದೇವರು ನಡುಗಿ ದೇವಿಯರ
ದಿವಿಜತತಿ ಜಯಯೆನಲು ತಂದರು । ನವಶರೀರೆಯ ಘನವಿಲಾಸ
ಪ್ರವರಲಾವಣ್ಯ ಪ್ರಪೂರೆಯ ಪೂರ್ಣಗೋಮಿನಿಯ ೯೯

ಎಂದು ವಾಲ್ಮೀಕಿಮುನಿಗಳು ವಿವರಿಸಿದರು. ೯೬. ಅಲೆಗಳ ಅಬ್ಬರ ನಿಂತ ಮೇಲಿನ ಮಹಾಸಾಗರದಂತೆ ದೇವ ವಾನರ ಸಮೂಹಗಳು ಬಣ್ಣಹಾಕಿದ ಬೊಂಬೆಗಳಂತೆ ನಿಂತಿದ್ದರು. ಬಳಿಕ ಗೌರಿ ಶಿವನ ತೊಡೆಯಿಂದಿಳಿದು ಅವನ ಅಪ್ಪಣೆ ಪಡೆದು ಮೆಲ್ಲಗೆ ರಾಮನ ಬಳಿಗೆ ಬಂದಳು. ೯೭. "ನಿನ್ನ ನರನಾಟಕದ ನಡೆವಳಿಕೆಯು ತುಂಬ ಸೊಗಸಾಯಿತು. ನೀನು ಸಾಕ್ಷಾತ್ಪರಮಪುರುಷ, ಜಾನಕಿ ಜಗತ್ತಿನ ಜನನಿಯಲ್ಲವೇ. ಪುಣ್ಯಚರಿತಳಾದ ಪರಮಪತಿವ್ರತೆಯನ್ನು ಎಲ್ಲಿಯವರೆಗೆ ಪರೀಕ್ಷಿಸುವೆ, ಸಾಕು ಕರೆದುಕೋ" ಎಂದು ಗೌರಿದೇವಿಯರು ರಾಮನಿಗೆ ಹೇಳಿದರು. ೯೮. "ನೀವೇಕೆ ಇಷ್ಟರಮಟ್ಟಿಗೆ ಬೇಡಿಕೊಳ್ಳಬೇಕು. ನಿಮ್ಮ ಮೆಚ್ಚಿನ ಸತಿಯು ಪವಿತ್ರಳಾಗಿದ್ದಲ್ಲಿ ಅಗ್ನಿಯನ್ನು ಬೇಡಿಕೊಳ್ಳಬಹುದು. ನೀವು ನಮಗೆ ಹೇಳಿದ ಒಳ್ಳೆಯ ಮಾತಿನ ಸತ್ಯತೆಯನ್ನು ಕೊನೆಯಲ್ಲಿ ಕಾಣಬಹುದು. ಸುಮ್ಮನೆ ನೀವು ನಮ್ಮನ್ನು ಕಾಡಬೇಡಿ" ಎಂದು ರಾಮನು ಹೇಳಲು ಗೌರಿದೇವಿ ಕೈನೀಡಿ, "ಬಾರಮ್ಮ ತಂಗಿ, ಬಾ !" ಎಂದು ವೈದೇಹಿಯನ್ನು ಕರೆದಳು. ೯೯. ರವಿಕುಲದೊಡೆಯನ ಮನೋಧರ್ಮವನ್ನು ತಿಳಿದು ಗೌರಿದೇವಿಯರು ನಿಶ್ಚಿತವಾಗಿ ನುಡಿದ ಮಾತಿಗೆ ಅಗ್ನಿದೇವನು ಹೆದರಿ ದೇವತೆಗಳು 'ಜಯ ಜಯ !' ಎಂದು ಘೋಷಿಸುತ್ತಿರಲು ನವೀನ ದೇಹಕಾಂತಿಯಿಂದ ತುಂಬಿ ತುಳುಕುತ್ತಿದ್ದ ಪರಿಪೂರ್ಣ

ಕುಶನೆ ಕೇಳ್ ಪುಟವಿಟ್ಟ ಮಿಸುನಿಯ । ರಸುಮೆಯಂತಿರೆ ತನುಪ್ರಕಾಶವು
ದೆಸೆದೆಸೆಗೆ ಪರ್ವಿದುದು ಪಸರಿಸಿತಧಿಕ ಸೌಭಾಗ್ಯ
ಹೊಸಪರಿಯ ಹೂದುರುಬಿನಲಿ ಥಾ । ಳಿಸುವ ಮೂಗುತಿ ಮೂಗಿನಲಿ ಬೆಳು
ವಸನದಂಗದಲೋಲೆ ಕಿವಿಯಲಿ ಮೆರೆದವಾಸತಿಯ ೧೦೦

ತಾಯೆ ಬಂದೌ ಬಳಲಿದೌ ಹಿರಿ । ದಾಯಸವನನುಭವಿಸಿದೌಯೆಂ
ದಾಯತಾಕ್ಷಿಯನಪ್ಪಿಕೊಂಡರು ಗೌರಿದೇವಿಯರು
ತಾಯೆ ನೀ ನರಸತಿಯೆ ಲೋಕದ । ತಾಯಲಾಯೆನುತಕ್ಷಿಗಳ ಪಾ
ನೀಯವನು ಪಾಣಿಯಲಿ ನೇವರಿಸಿದಳು ನೇಹದಲಿ ೧೦೧

ಇಳಿದು ವೃಷಭನನಖಿಳ ನಿಗಮಾ । ವಳಿ ಶಿರೋಮಣಿ ಶೀತಕರ ಸ
ಲ್ಲಲಿತ ಮಸ್ತಕಮಣಿ ನಭೋಮಣಿ ಕೋಟಿಸಂಕಾಶ
ಜಲಜಸಂಭವ ಮುಖ್ಯ ದಿವಿಜಾ । ವಳಿ ಶಿಖಾಮಣಿ ಜನನ ಲಯ ನಿ
ಷ್ಕಲಿತ ವಿಮಲಬ್ರಹ್ಮಚೂಡಾರತ್ನ ನಡೆತಂದ ೧೦೨

ಹೊಗಳುತಿದ್ದವು ವೇದಕೋಟಿಗ । ಳಗಣಿತಾಮರಕೋಟಿ ಕೈಗಳ
ಮುಗಿದು ಜಯಯೆನುತಿರ್ದುದೀಶನ ಸುತ್ತುವಳಯದಲಿ
ಯುಗಮಹಾಪ್ರಳಯಾದಿಕೋಟಿಗ । ಳಗಲಿಕೆಯ ಪರಮೇಶ ಪರತರ
ನಿಗಮ ನಿರ್ಮಲ ತಾರಕಬ್ರಹ್ಮವನು ಸಾರಿದರು ೧೦೩

ಲಕ್ಷ್ಮಿಯಾದ ಸೀತಾದೇವಿಯರನ್ನು ಕರೆದುಕೊಂಡು ಬಂದನು. ೧೦೦. ಕುಶ, ಕೇಳು. ಪುಟವಿಟ್ಟ ಚಿನ್ನದ ಕಾಂತಿಯಂತೆ ಸೀತೆಯ ದೇಹದ ಬೆಳಗು ದಿಕ್ಕುದಿಕ್ಕಿಗೆ ಹರಡಿತು; ಅಧಿಕ ಸೌಭಾಗ್ಯ ವಿಸ್ತರಿಸಿತು. ತುರುಬಿನಲ್ಲಿ ಹೊಸ ರೀತಿಯ ಹೂ, ಮೂಗಿನಲ್ಲಿ ಥಳಥಳಿಸುವ ಮೂಗುತಿ, ಮೈಮೇಲೆ ಬಿಳಿಯ ಸೀರೆ, ಕಿವಿಯಲ್ಲಿ ಓಲೆ–ಇವು ಗಳಿಂದ ಸೀತೆ ಶೋಭಿಸಿದಳು. ೧೦೧. "ಬಂದೆಯಾ ತಾಯಿ, ಬಳಲಿದೆಯಾ ? ಬಹಳ ಕಷ್ಟವನ್ನನುಭವಿಸಿದೆ" ಎಂದು ದೀರ್ಘಲೋಚನೆ ಸೀತೆಯನ್ನು ಗೌರಿ ದೇವಿಯರು ಅಪ್ಪಿಕೊಂಡರು. "ತಾಯೆ, ನೀನು ಮಾನವಸತಿಯೆ ? ಲೋಕದ ತಾಯಿಯಲ್ಲವೇ" ಎಂದು ನುಡಿದು ಗೌರಿದೇವಿ ಸೀತೆಯ ಕಣ್ಣೀರನ್ನು ಅಕ್ಕರೆ ಯಿಂದ ಕೈಯಿಂದ ಒರೆಸಿದರು. ೧೦೨. ಸಮಸ್ತ ವೇದಗಳ ತಲೆವಣಿ, ಚಂದ್ರ ನನ್ನು ತಲೆಯಲ್ಲಿ ಧರಿಸಿದವನು, ಕೋಟಿಸೂರ್ಯಪ್ರಕಾಶ, ಬ್ರಹ್ಮನೇ ಮೊದಲಾದ ಪ್ರಮುಖ ದೇವತೆಗಳ ಶಿರೋಮಣಿ–ಇಂಥ ಹುಟ್ಟು ಸಾವುಗಳಿಲ್ಲದ ಪರಬ್ರಹ್ಮಚೂಡಾ ಮಣಿಯಾದ ಶಿವನು ನಂದಿಯ ಹೆಗಲಿನಿಂದ ಇಳಿದುಬಂದನು. ೧೦೩. ವೇದಕೋಟಿಗಳು ಪರಬ್ರಹ್ಮಸ್ವರೂಪ ಶಿವನನ್ನು ಹೊಗಳುತ್ತಿದ್ದವು. ಶಿವನ ಸುತ್ತ ನಿಂತ ದೇವಸಮೂಹವು ಕೈಗಳನ್ನು ಮುಗಿದುಕೊಂಡು ಜಯ ಜಯ ಎನ್ನುತ್ತಿತ್ತು. ಎಲ್ಲರೂ ಕೋಟಿಕೋಟಿ ಯುಗ ಪ್ರಳಯಾದಿಗಳನ್ನು ಮೀರಿದ ಉತ್ತಮೋತ್ತಮ ವೇದಗೋಚರನೂ ಪರಿಶುಭ್ರ

ಸಾರಿದರು ಕೈಮುಗಿದು ಸೀತಾ । ಶ್ರೀ ರಮಣನನು ಕಮಲಭವ ವೃಂ
ದಾರಕೋತ್ತಮ ಮುಖ್ಯನಾನಾ ದೇವಕೋಟಿಗಳು
ವೀರ ಕೇಳೈ ಕುಶನೆ ನರರವ । ತಾರವಾದರದೇನು ಪೂರ್ವದ
ಗೌರವದ ಗರುವಾಯಿ ಬಿಡುವುದೆ ಲವನೆ ಕೇಳೆಂದ ೧೦೪

ಶಿರವ ನಸುಬಾಗಿದನು ನಗೆಮೊಗ । ವೆರಸಿ ಪರಮಪ್ರಿಯ ಮಹೇಶಂ
ಗುರುತರಪ್ರೇಮದಲಿ ಕುಳ್ಳಿರಿಯೆಂದನಬುಜಜನ
ಕರದ ಸನ್ನೆಯಲಮರಚಕ್ರೇ । ಶ್ವರನನುಪಚರಿಸಿದನು ಮಿಕ್ಕಿನ
ಸುರರನೀಕ್ಷಿಸಿ ಸುಮ್ಮನಿರ್ದನು ಸುಳಿಸದುತ್ತರವ ೧೦೫

ಏನಿ ಬಂದಿರಿಯೆಂಬ ಬುಧ ಸ । ನ್ಮಾನ ಸಂಭೃತವಿಹಿತ ವಿನಯ ಗು
ಣಾನುರಾಗೋಕ್ತಿಗಳು ನಮ್ಮಲಿ ತೋಱದಾದುದಲ
ಮಾನವೇಂದ್ರರಿಗುಚಿತವೇ ಲ । ಕ್ಷ್ಮೀನಿವಾಸಪ್ರಾರ್ಥಿಯೆಂದಗ
ಜಾನಿತಂಬಿನಿಯರಸ ಮೆಲ್ಲನೆ ನುಡಿದನರಸಂಗೆ ೧೦೬

ಬಂದ ಹದನನು ಬಲ್ಲೆನೊಪ್ಪಚಿ । ಸಂದಿಹುದು ಸಂದೇಹವದು ನಿ
ಮ್ಮಿಂದ ಹರಿಯದು ಮರಳಿ ನೀವೆಂಬುಕ್ತಿಯುದ ನಾವು
ಎಂದಪೆನು ನೀವ್ ಕೇಳಿ ನಾ ಹರಿ । ಯೆಂದು ಸೀತಾದೇವಿ ಸಿರಿ ತಾ
ನೆಂದು ಹೇಳುವಿರೈಸಲೇ ಮನ ಹೊಗದು ನಮಗೆಂದ ೧೦೭

ಮೋಕ್ಷದಾಯಕ ಬ್ರಹ್ಮನೂ ಆದ ರಾಮನನ್ನು ಸಮೀಪಿಸಿದರು. ೧೦೪. ಬ್ರಹ್ಮನೇ ಮೊದಲಾದ ಮುಖ್ಯ ನಾನಾ ದೇವತೆಗಳು ಕೈಮುಗಿದುಕೊಂಡು ಸೀತಾಪತಿಯ ಬಳಿಗೆ ಬಂದರು. ವೀರ ಕುಶ, ಕೇಳು. ಮಾನವ ಅವತಾರವಾಗಿದ್ದರೇನು, ಹಿಂದಿನ ಗೌರವದ ಘನತೆ ಎಲ್ಲಿ ಹೋಗುವುದು–ಎಂದರು ವಾಲ್ಮೀಕಿಮುನಿಗಳು. ೧೦೫. ರಾಮನು ನಗುಮುಖದಿಂದ ಪರಮಪ್ರಿಯ ಮಹೇಶ್ವರನ ಎದುರಿಗೆ ತಲೆಯನ್ನು ಸ್ವಲ್ಪವೇ ಬಾಗಿಸಿದನು ; ಬ್ರಹ್ಮನನ್ನು ಪ್ರೇಮಾತಿಶಯದಿಂದ ಕುಳಿತುಕೊಳ್ಳಿ ಎಂದನು. ಕೈಸನ್ನೆಯಿಂದ ದೇವೇಂದ್ರನನ್ನು ಆದರಿಸಿದನು. ಉಳಿದ ದೇವತೆಗಳನ್ನು ಕಣ್ಣುಗಳಿಂದ ನೋಡಿ ರಾಮನು ಏನೊಂದು ಉತ್ತರವನ್ನೂ ಕೊಡದೆ ಸುಮ್ಮನಿದ್ದನು. ೧೦೬. "ಕ್ಷೇಮವೇ? ಏನು ಬಂದಿರಿ ?" ಎಂಬುದಾಗಿ ಕುಶಲಪ್ರಶ್ನೆಮಾಡಿ ಗೌರವಿಸುವ ವಿನಯ ವಿಹಿತವಾದ ಪ್ರೀತಿಯ ಮಾತುಗಳನ್ನು ನಮ್ಮ ಬಗ್ಗೆ ನೀನು ತೋರಿಸಲಿಲ್ಲ. ಲಕ್ಷ್ಮೀನಿಲಯನೇ, ನರೇಂದ್ರರಿಗೆ ಇದು ಯೋಗ್ಯವೇ ?" ಎಂದು ಪಾರ್ವತೀರಮಣನು ಮೆಲ್ಲಗೆ ನುಡಿದನು. ೧೦೭. "ನೀವು ಬಂದ ಉದ್ದೇಶವನ್ನು ನಾನು ಬಲ್ಲೆ. ತುಸ ಸಂದೇಹವುಂಟಾಗಿದೆ ನನಗೆ. ಅದು ನಿಮ್ಮಿಂದ ಪರಿಹಾರವಾಗದು, ನೀವು ಹಿಂದಿರುಗಿ ಎಂದು ಹೇಗೆ ಹೇಳಲಿ. ಆದರೆ ನಾನು ಹೇಳುತ್ತೇನೆ ಕೇಳಿ. ನಾನು ಹರಿಯೆಂಬುದಾಗಿ ಸೀತಾದೇವಿ ಲಕ್ಷ್ಮಿ ಎಂಬುದಾಗಿ ನೀವು ಹೇಳುತ್ತಿರುವಿರಲ್ಲವೇ ? ಆದರೆ ನನ್ನ ಮನಸ್ಸು ಇದನ್ನು ಒಪ್ಪುತ್ತಿಲ್ಲ" ಎಂದ

ಕುಲಜರಾವ್ ರಘುವಂಶದಲಿ ನಿ । ಷ್ಕಲುಷರಾವ್ ಮಾರ್ಗದಲಿ ಲೋಕದ
ಹಳಿವಿಗೊಳಗಿಹರಲ್ಲ ನಗೆಗೆಡೆಯಹರು ನಾವಲ್ಲ
ಇಳೆಯಸುತೆ ನಿರ್ಮಳೆಯಕಲ್ಮಷ । ಲಲಿತಪುಣ್ಯಚರಿತ್ರೆ ಸುವ್ರತೆ
ಕುಲಯಶಸ್ವಿನಿಯೆಂಬರೈಸಲೆಯೆಂದನಾ ರಾಮ ೧೦೮

ಒಪ್ಪೆವಾವಾ ಮಾತ ಸೀತೆಯ । ನೊಪ್ಪುಗೊಳಿಸುವ ಬುದ್ಧಿ ಚಿತ್ತದೊ
ಳಿಪ್ಪುದಾದಡೆ ಕರೆದು ಕೊಡಿ ನಮ್ಮನ್ವಯದ ನೃಪರ
ತಪ್ಪದವರೆಮ್ಮನ್ವಯಕೆ ಹಳಿ । ವೊಪ್ಪುಗೈಯದುಯೆಂದು ನಿಮ್ಮೊಡ
ನಿಪ್ಪವರ ಸರಿಸದಲಿ ನುಡಿದಡೆ ಕೇಳ್ವೆವಾವೆಂದ ೧೦೯

ಎನಲು ನಸುನಗುತಾ ಮಹೇಶ್ವರ । ವನಜಭವನಾನನವನೀಕ್ಷಿಸ
ಲಿನಕುಲದ ಶಶಿಕುಲದ ರಾಯರ ಕರಸಿ ಕಮಲಭವ
ಮುನಿ ವಸಿಷ್ಠನ ಬರಿಸಿ ನಿಮ್ಮಯ । ಜನಪತಿಗೆ ಪೂರ್ವಕ್ಷಿತೀಶರ
ಮನುಪರಂಪರೆಯಿಂದ ತೋಱಿಸಿ ತಿಳುಹು ನೀನೆಂದ ೧೧೦

ನೆರೆದುದೈ ಬಳಿಕಾ ವಸಿಷ್ಠನ । ಕರದ ಸನ್ನೆಯಲುಭಯವಂಶದ
ನರಪತಿಗಳಿದ್ದೆಸೆಯಲಾ ರಘುರಾಮಚಂದ್ರಮನ
ಅರಸನಲ್ಲಿಗೆ ಬಳಿಕ ಮುನಿ ನಡೆ । ತರಲು ಧಿಮ್ಮನೆ ನಿಂದು ಗುರುವಿನ
ಚರಣಕಾನತನಾಗೆ ನಗುತಿಂತೆಂದನಾ ಮುನಿಪ ೧೧೧

ರಾಮ. ೧೦೮. "ನಾವು ರಘುವಂಶದ ಒಳ್ಳೆಯ ಕುಲದಲ್ಲಿ ಜನಿಸಿದವರು. ನಾವು ಕಳಂಕ ರಹಿತರು. ಲೋಕದ ನಡೆವಳಿಕೆಯಲ್ಲಿ ನಿಂದೆಗೊಳಗಾಗುವವರಲ್ಲ, ನಗೆಗೀಡಾಗುವವರೂ ಅಲ್ಲ. ಭೂಸುತೆ ಪರಿಶುದ್ಧಳು, ದೋಷವಿಲ್ಲದ ಪುಣ್ಯಾಚರಣೆಯುಳ್ಳವಳು, ಪತಿವ್ರತೆ, ಕುಲೀನಗಳು, ಕೀರ್ತಿಶಾಲಿ ಎಂಬುದಾಗಿ ಹೇಳುತ್ತಾರಲ್ಲವೇ ? ೧೦೯. ನಾವು ಆ ಮಾತನ್ನು ಒಪ್ಪುವುದಿಲ್ಲ. ಸೀತೆಯನ್ನು ಅಂಗೀಕರಿಸುವಂತೆ ಮಾಡಬೇಕೆಂಬ ಅಭಿಪ್ರಾಯ ನಿಮ್ಮ ಮನಸ್ಸಿನಲ್ಲಿರುವುದಾದರೆ ನಮ್ಮ ವಂಶದ ರಾಜರುಗಳನ್ನು ಕರೆಸಿ. ನಮ್ಮ ವಂಶಕ್ಕೆ ನಿಂದೆ ಬರುವುದಿಲ್ಲ ಎಂದು ನಿಮ್ಮ ಜತೆಯಲ್ಲಿರುವವರ ಎದುರಿಗೆ ಅವರು ತಪ್ಪದೆ ಹೇಳಿದರೆ ನಾವು ಕೇಳುವೆವು" ಎಂದ ರಾಮ. ೧೧೦. ರಾಮನ ಮಾತನ್ನು ಕೇಳಿ ಮಹೇಶ್ವರನು ಬ್ರಹ್ಮನ ಮುಖವನ್ನು ನೋಡಿದನು. ಆಗ ಬ್ರಹ್ಮನು ಸೂರ್ಯಚಂದ್ರವಂಶದ ರಾಜರನ್ನು ಕರೆಸಿದನು. ಅನಂತರ ವಸಿಷ್ಠಮುನಿಯನ್ನು ಬರಮಾಡಿಕೊಂಡು, "ಮನುವಿನಿಂದ ಆರಂಭಿಸಿ ಪರಂಪರೆಯಿಂದ ಬಂದ ಹಿಂದಿನ ರಾಜರುಗಳನ್ನು ನಿಮ್ಮ ರಾಜನಿಗೆ ತೋರಿಸಿ ತಿಳಿಸು" ಎಂದು ಹೇಳಿದ ಬ್ರಹ್ಮ. ೧೧೧. ವಸಿಷ್ಠನು ಕೈಯಿಂದ ಸಂಜ್ಞೆಮಾಡಲು ಎರಡೂ ವಂಶಗಳ ರಾಜರು ಬಂದು ರಾಮನ ಎರಡೂ ಕಡೆಗಳಲ್ಲಿ ನಿಂತುಕೊಂಡರು. ವಸಿಷ್ಠಮುನಿ ರಾಮನ ಬಳಿಗೆ ಬರಲು ರಾಮನು ಧಿಮ್ಮನೆ ಎದ್ದು ನಿಂತು ಗುರುವಿನ ಪಾದಗಳಿಗೆ ನಮಸ್ಕರಿಸಿದನು. ಆಗ ವಸಿಷ್ಠನು ರಾಮನನ್ನು ಕುರಿತು ಮುಂದಿನಂತೆ

ರಾಯ ಕೇಳ್ಳೈ ಸಕಲಲೋಕದ । ತಾಯುಲಾ ಭೂಜಾತೆ ಕೀರ್ತಿಯ
ತಾಯಿವನೆಯೆಂಬುದನುಮಾದೇವಿಯರ ಕೇಳೆನಲು
ಆಯಿತಾ ಮಾತಂತಿರಲಿ ಕುಲ । ದಾಯತಿಕೆಯವರಿವರವರ್ಗಳ
ಬಾಯ ವಕ್ಕಣೆಯುಳ್ಳದಾಗಲಿ ನುಡಿಸಿ ನೀವೆಂದ ೧೧೨

ನಿಂದಿರಾದಡೆ ತೋಱಿಸುವೆನೇ । ಳೆಂದು ಕೈಗೊಟ್ಟಾದಿಪುರುಷನ
ತಂದು ತೋಱಿಸಿದನು ಪುರಾತನ ಪಾರ್ಥಿವೋತ್ತಮರ
ಇಂದುಕುಲದ ಪುರೂರವನು ಬಳಿ । ಸಂದ ನೃಪನಾಯುಃಕುಮಾರಕ
ರಿಂದವರ ನುಡಿಗೇಳು ಸೀತೆಯ ಪರಿಯ ನೀನೆಂದ ೧೧೩

ಈತ ಕುರುರಾಜೇಂದ್ರನೀ ತೋ । ರ್ಪಾತ ಭರತನು ಯದುನೃಪೋತ್ತಮ
ನೀತ ನಹುಷನು ರಾಮ ನೋಡೀತನು ಯಯಾತಿ ಕಣ
ಈತ ನಳ ಮಾಂಧಾತನೃಪ ತಾ । ನೀತನಗ್ಗದ ಕಾರ್ತವೀರ್ಯ ಮ
ಹೀತಳಾಧಿಪರಿವರ ನುಡಿಗೇಳೆಂದನಾ ಮುನಿಪ ೧೧೪

ಇದೆ ಸುಧಾಕರವಂಶದವರವ । ರುದಿತ ವಚನವ ನಂಬದಿರೆ ನೋ
ಡಿದಕೊ ನಿಮ್ಮನ್ವಯದ ರಾಯರು ಕೋಟಿಸಂಖ್ಯೆಯಲಿ
ವಿದಿತವವರ ಸುವಾಕ್ಯಪದ್ಧತಿ । ಹೃದಯಕನುಮತವಹಡೆ ಕೈಕೊಂ
ಬುದು ಜಗನ್ಮಾತೆಯನು ಸೀತೆಯನೆಂದನಾ ಮುನಿಪ ೧೧೫

ನುಡಿದನು. ೧೧೨. "ರಾಜಾರಾಮ, ಕೇಳು, ಭೂಮಿಯ ಮಗಳಾದ ಸೀತೆ ಸಮಸ್ತ ಲೋಕಗಳ ತಾಯಿ ; ಕೀರ್ತಿಯ ತವರು ಎಂಬುದನ್ನು ಉಮಾದೇವಿಯವರಿಂದ ಕೇಳಿ ತಿಳಿದುಕೋ" ಎನ್ನಲು, ರಾಮನು "ಆಯಿತು, ಆ ಮಾತು ಹಾಗಿರಲಿ. ನಮ್ಮ ವಂಶದ ಮಹಿಮಾವಂತರು ಇಲ್ಲಿರುವ ಅರಸರು. ಇವರು ಬಾಯಾರ ವಿವರಿಸಿದರೆ ಆಗಲಿ. ಅವರಿಂದ ಹೇಳಿಸಿ ನೀವು" ಎಂದ ರಾಮ. ೧೧೩. 'ಹಾಗಿದ್ದರೆ ಸರಿ. ತೋರಿಸುತ್ತೇನೆ ಏಳು' ಎಂದು ಕೈಹಿಡಿದುಕೊಂಡು ಆದಿಪುರುಷ ರಾಮನನ್ನು ಕರೆದುಕೊಂಡು ಬಂದು ಪುರಾತನ ರಾಜಶ್ರೇಷ್ಠರನ್ನು ತೋರಿಸಿದನು. "ಇವನು ಚಂದ್ರವಂಶದ ಪುರೂರವ. ಅವನ ಪಕ್ಕದಲ್ಲಿ ನಿಂತವರು ಪೂರೂರವನ ಮಕ್ಕಳಾದ ಆಯುಕುಮಾರರು. ಸೀತೆಯ ವಿಚಾರದಲ್ಲಿ ಅವರ ಮಾತನ್ನು ಕೇಳು" ಎಂದ ವಸಿಷ್ಠ, ೧೧೪. "ಈತ ಕುರುರಾಜೇಂದ್ರ, ಇಲ್ಲಿ ಕಾಣುವಾತ ಭರತ, ಈತ ಯದುರಾಜ, ಈತ ನಹುಷ, ಈತ ಯಯಾತಿ. ಇವನು ನಳ, ಮಾಂಧಾತರಾಜನಿದ್ದಾನೆ. ಇಗೋ ಈತ ಶ್ರೇಷ್ಠ ಕಾರ್ತವೀರ್ಯ. ಈ ಪೃಥ್ವೀಪತಿಗಳ ಮಾತುಗಳನ್ನು ಕೇಳು" ಎಂದ ರಾಮ. ೧೧೫. "ಚಂದ್ರವಂಶದ ಅರಸರು ಹೇಳಿದ ಮಾತನ್ನು ನಂಬದೆ ಇದ್ದರೆ ಇಗೋ ಇಲ್ಲಿದ್ದಾರೆ ನಿಮ್ಮ ವಂಶದ ಅಸಂಖ್ಯಾತ ರಾಜರು. ಅವರು ಸದ್ವಚನದಿಂದ ಹಾಕಿಕೊಟ್ಟ ಮಾರ್ಗವು ಸುಪ್ರಸಿದ್ಧ. ಅವರ ಮಾತು ಒಪ್ಪಿಗೆಯಾಗುವುದಾದರೆ ಜಗನ್ಮಾತೆಯಾದ ಸೀತೆಯನ್ನು ಸ್ವೀಕರಿಸು" ಎಂದ ವಸಿಷ್ಠ

ಮನುಮಹೀಶ್ವರನೀತನೀತನ । ತನುಜ ಕುಕ್ಷಿವಿಕುಕ್ಷಿನೃಪನೀ
ತನು ನೃಪೋತ್ತಮನೀತನೀಗಿಕ್ಷ್ವಾಕುಭೂಪಾಲ
ಜನಪನೀತ ದಿಳೀಪ ರಘುವೀ । ತನು ಹರಿಶ್ಚಂದ್ರಕ್ಷಿತೀಶ್ವರ
ವಿನುತ ಸಗರ ಭಗೀರಥಾದಿಗಳಿವರ ಕೇಳೆಂದ ೧೧೬

ಈತ ಋತುಪರ್ಣನು ತ್ರಿಶಂಕು ಮ । ಹೀತಳಾಧಿಪನೀತನೀತ ಮ
ಹಾತಿಬಲನನರಣ್ಯನೀತ ಕಕುತ್ಸ್ಥಭೂಪಾಲ
ಈತ ನೋಡೀಗಂಬರೀಶ । ಖ್ಯಾತನಿವನಜನೀತ ದಶರಥ
ನೀತನಿವರನುಮತವನಂಗೀಕರಿಸು ನೀನೆಂದ ೧೧೭

ಬಳಿಕಲಾನಂದಾಶ್ರುಜಲ ಹೆ । ಕ್ಕಳಿಸಿ ವೈಯಿಕ್ಕಿದನು ಜನಕಂ
ಗಿಳಿದು ದಿವ್ಯವಿಮಾನವನು ದಶರಥಮಹೀಪಾಲ
ಜಲಜಬಾಂಧವವಂಶದವನಿಪ । ತಿಲಕ ಬಾ ರಘುರಾಜವಂಶಾ
ವಳಿ ಸರಿತ್ಪತಿ ಸೋಮ ಬಾಯೆಂದಪ್ಪಿದನು ಮಗನ ೧೧೮

ತರುಣ ಕೇಳ್ ಸಂತುಷ್ಟನಾದೆನು । ಪರಮಸತ್ಯದೃಢವ್ರತಕೆ ಸ
ದ್ಗುರು ಸುಮಾತಾಪಿತೃ ಸುಪರ್ವ ಮಹೀಸುರಾರ್ಚನೆಗೆ
ಅರಿವಿಜಯ ವಿಕ್ರಮಕೆ ನಿನ್ನಯ । ತರುಣಿಯಮಲ ಪತಿವ್ರತಾ ಸ
ಚ್ಚರಿತಮಾರ್ಗಕೆ ಲಕ್ಷ್ಮಣನ ಶುಶ್ರೂಷೆಗಾನೆಂದ ೧೧೯

ಮುನಿ. ೧೧೬. "ಈತ ಮನುಚಕ್ರವರ್ತಿ, ಈತನ ಮಗ ರಾಜಶ್ರೇಷ್ಠ ಇಕ್ಷ್ವಾಕು, ಈತ ಇಕ್ಷ್ವಾಕುವಿನ ಮಗ ಕುಕ್ಷಿ, ಈತ ಅವನ ಮಗ ವಿಕುಕ್ಷಿ. ಈ ರಾಜನು ದಿಲೀಪ, ಈತನು ರಘು, ಈತ ಹರಿಶ್ಚಂದ್ರ ಚಕ್ರವರ್ತಿ, ಸಗರ ಭಗೀರಥಾದಿಗಳು ಇವರು. ೧೧೭. ಈತ ಋತುಪರ್ಣ ರಾಜ, ಈತನು ತ್ರಿಶಂಕುರಾಜ, ಈತ ಮಹಾ ಬಲಶಾಲಿ ಅನರಣ್ಯ, ಈತ ಕಕುತ್ಸ್ಥಭೂಪಾಲ, ಈತನನ್ನು ನೋಡು ಅಂಬರೀಶ. ಈತನು ಪ್ರಖ್ಯಾತನಾದ ಅಜ, ಈತ ದಶರಥ. ಇವರ ಅಭಿಪ್ರಾಯವನ್ನು ಒಪ್ಪಿಕೋ. ೧೧೮. ಅನಂತರ ಸಂತೋಷದ ಕಣ್ಣೀರು ಹರಿಯುತ್ತಿರಲು ರಾಮನು ತಂದೆಗೆ ನಮಸ್ಕರಿಸಿದನು. ದಶರಥಮಹಾರಾಜನು ದಿವ್ಯವಿಮಾನದಿಂದ ಇಳಿದುಬಂದು 'ಸೂರ್ಯವಂಶದ ರಾಜಶ್ರೇಷ್ಠನೇ ಬಾ, ರಘುರಾಜ ವಂಶಾವಳಿಯೆಂಬ ಸಮುದ್ರಕ್ಕೆ ಚಂದ್ರನೇ ಬಾ' ಎಂದು ನುಡಿದು ಮಗನನ್ನು ಅಪ್ಪಿಕೊಂಡನು. ೧೧೯. "ತರುಣ ರಾಮ, ಕೇಳು. ನಿನ್ನ ಶ್ರೇಷ್ಠವಾದ ದೃಢಸತ್ಯವ್ರತಕ್ಕೆ, ಗುರು, ತಂದೆ, ತಾಯಿ, ದೇವತೆಗಳು ಮತ್ತು ಬ್ರಾಹ್ಮಣರ ಪೂಜೆಗೆ. ಶತ್ರುವನ್ನು ಗೆದ್ದ ಪರಾಕ್ರಮಕ್ಕೆ, ನಿನ್ನ ಸತಿಯ ಪರಿಶುದ್ಧವಾದ ಪತಿವ್ರತಾಚರಣೆಯ ನಡತೆಗೆ, ಲಕ್ಷ್ಮಣನ

ಮಗನೆ ನೀ ನರನೇ ಚತುರ್ದಶ । ಜಗದ ಜನಕನಲಾ ಪರೀಕ್ಷಿಸೆ
ನಿಗಮಸಿದ್ಧನಲಾ ವಿಚಾರಿಸೆ ಲೋಕರಕ್ಷಣೆಗೆ
ಯುಗಯುಗಂಗಳೊಳಿಳೆಯ ಭಾರವ । ನುಗಿಯಲೋಸುಗ ವೇಷವಲ್ಲದೆ
ಸೊಗಸೆ ನಿನಗಿದು ಪರಕೆ ಪರತರವಸ್ತು ನೀನೆಂದ ೧೨೦

ಆದರೆಯು ನರನಾಟಕದ ಸಂ । ಪಾದ ಕರ ಲೇಸಾಯ್ತು ಜನಕಜೆ
ಯಾದಿಲಕ್ಷ್ಮಿ ಕಣಾ ಪರಿಗ್ರಹಿಸೆನ್ನ ಮಾತಿನಲಿ
ವೇದವಚನವಿದೆಂದು ಬಗೆ ಹುಸಿ । ಯಾದಡೀ ನುಡಿ ನಿಮ್ಮ ರಘುವಂ
ಶೋದಯದಲುದ್ಭವಿಸಿದವನಲ್ಲೆಂದನಾ ಭೂಪ ೧೨೧

ತಾಯೆ ಬಾರೌ ತಂಗಿ ನೀ ಹಿರಿ । ದಾಯಸವನನುಭವಿಸಿ ನಲುಗಿದೆ
ರಾಯರಂಗನೆಯರಲಿ ನೀನುತ್ತಮೆಯಲಾ ಜಗಕೆ
ವಾಯುಸಖನುದರದಲಿ ಹೊಕ್ಕಬಃ । ಜಾಯತಾಕ್ಷಿಯರುಂಟೆ ನಿನ್ನವೊ
ಲಾಯಿತೀಸಱ ಮೇಲೆ ಜಗದಲಿ ಕೀರ್ತಿ ನಮಗೆಂದ ೧೨೨

ಬಿಕ್ಕ ಬಿರಿಬಿರಿದಳುತ ಸತಿ ವೈ । ಯಿಕ್ಕಲವನೀನಾಥ ಸೆಱಗಿನ
ಲುಕ್ಕುವಂಬಕಜಲವ ತೊಡೆದಪಸವ್ಯದಂಕದಲಿ
ಅಕ್ಕರಿನ ಮೋಹದಲಿ ಕಂಬನಿ । ಯಿಕ್ಕುತಿಬ್ಬರ ಕುಳ್ಳಿರಿಸಿ ಚರ
ಣಕ್ಕೆ ನಮಿಸಿದ ಲಕ್ಷ್ಮಣನ ತೆಗೆದಪ್ಪಿದನು ಭೂಪ ೧೨೩

ಶುಶ್ರೂಷೆಗೆ ನಾನು ಸಂತುಷ್ಟನಾಗಿದ್ದೇನೆ" ಎಂದ ದಶರಥ. ೧೨೦. "ಮಗನೇ ನೀನು ಮಾನವನೇ ? ಹದಿನಾಲ್ಕು ಲೋಕಗಳ ತಂದೆಯಲ್ಲವೇ. ವಿಚಾರಿಸಿ ನೋಡಿದರೆ ವೇದ ಸಿದ್ಧನಲ್ಲವೇ ನೀನು. ಯುಗ ಯುಗಗಳಲ್ಲಿ ಲೋಕರಕ್ಷಣೆಗಾಗಿ ಮತ್ತು ಭೂಭಾರವನ್ನು ಕಳೆಯುವುದಕ್ಕಾಗಿ ವೇಷವನ್ನು ಧರಿಸುವೆಯಲ್ಲದೆ ಇದು ನಿನಗೆ ಇಷ್ಟವೇ. ಶ್ರೇಷ್ಠಕ್ಕಿಂತಲೂ ಶ್ರೇಷ್ಠವಸ್ತು ನೀನು" ಎಂದ ದಶರಥ. ೧೨೧. "ಆದರೂ ನರನಾಟಕದ ಪ್ರಕಟನೆ ತುಂಬ ಚೆನ್ನಾಯಿತು. ಜಾನಕಿಯು ಆದಿಲಕ್ಷ್ಮಿ, ಅವಳನ್ನು ನನ್ನ ಮಾತಿನ ಮೇಲೆ ಸ್ವೀಕರಿಸು. ಇದು ವೇದವಾಕ್ಯವೆಂದು ಭಾವಿಸು. ನನ್ನ ಈ ಮಾತು ಸುಳ್ಳಾದರೆ ನಾನು ನಿಮ್ಮ ರಘುವಂಶದಲ್ಲಿ ಹುಟ್ಟಿದವನಲ್ಲ" ಎಂದ ದಶರಥ. ೧೨೨. "ಬಾಮ್ಮ ತಂಗಿ, ನೀನು ತುಂಬ ಕಷ್ಟವನ್ನನುಭವಿಸಿ ನಲುಗಿಹೋದೆ. ಜಗತ್ತಿನ ರಾಜರುಗಳ ಪತ್ನಿಯರಲ್ಲಿ ನೀನು ಶ್ರೇಷ್ಠಳು. ನಿನ್ನಹಾಗೆ ಅಗ್ನಿಯೊಳ ಹೊಕ್ಕುಬಂದ ಸ್ತ್ರೀಯರಿದ್ದಾರೆಯೆ ? ಇಷ್ಟರಮೇಲೆ ಜಗತ್ತಿನಲ್ಲಿ ನಿನ್ನಿಂದ ನಮ್ಮ ಕೀರ್ತಿ ಹೆಚ್ಚಿತು" ಎಂದ ದಶರಥ. ೧೨೩. ಬಿಕ್ಕಿ ಬಿಕ್ಕಿ ಅಳುತ್ತ ಸೀತೆ ನಮಸ್ಕರಿಸಲು ದಶರಥನು ವಸ್ತ್ರದ ಸೆರಗಿನಿಂದ ಕಣ್ಣೀರನ್ನು ತೊಡೆದು ಮೋಹಾತಿಶಯದಿಂದ ಕಣ್ಣೀರಿಡುತ್ತ ಅಕ್ಕರೆಯಿಂದ ಬಲತೊಡೆಯಮೇಲೆ ರಾಮ ಸೀತೆ ಇಬ್ಬರನ್ನೂ ಕೂರಿಸಿಕೊಂಡನು. ತನ್ನ ಪಾದಗಳಿಗೆ ನಮಸ್ಕರಿಸಿದ ಲಕ್ಷ್ಮಣನನ್ನು ದಶರಥನು ಮೇಲಕ್ಕೆತ್ತಿ ಆಲಿಂಗಿಸಿದನು.

ಎಡದ ತೊಡೆಯಲಿ ಕುಳ್ಳಿರಿಸಿ ಮೈ । ದಡವಿದನು ಲಕ್ಷ್ಮಣನ ಸೀತೆಯ
ಮುಡಿಯ ನೇವರಿಸಿದನು ಮುಂಡಾಡಿದನು ರಘುಪತಿಯ
ಬಿಡು ಮಗನೆ ಚಿತ್ತದ ಕಳಂಕನು । ಹಿಡಿಯದಿರು ಸಂಶಯವ ಸೀತೆಯ
ನಡವಳಿಗೆ ಸಂತುಷ್ಟಮಾನಸನಾದೆ ನಾನೆಂದ ೧೨೪

ಬಳಿಕುಮಾದೇವಿಯರು ಸೀತೆಯ । ಲಲಿತ ಹಸ್ತಾಂಬುಜವನಾ ರಘು
ಕುಲಶಿರೋಮಣಿಯಮಲಕರಕಮಲದೊಳು ಸಂಘಟಿಸಿ
ನಳಿನಭವಸತಿ ಸಹಿತ ಮುಕ್ತಾ । ಫಲದ ಸೇಸೆಯ ತಳಿದು ದೀಪಾ
ವಳಿಯ ಸುಳಿಸಿದರೊಲಿದು ಹೊಂದಳಿಗೆಗಳ ಹಂತಿಯಲಿ ೧೨೫

ಮೊರೆದವಾಕ್ಷಣ ದೇವದುಂದುಭಿ । ಪರಿಮಳದ ಕುಸುಮಂಗಳಾಕ್ಷಣ
ಸುರಿದವಂಗೀಕರಿಸಿದನು ರಘುನಾಥನವನಿಜೆಯ
ನರುವಧುಗಳೊಳಗಾರು ಸೀತಾ । ಸ್ಮರಣೆಯನು ಮಾಡಲು ಪತಿವ್ರತೆ
ಯರಿಗೆ ತಾಯ್ಮನೆಯಹರಲ್ಲೈ ಕುಶ ಕೇಳಿದೈಯೆಂದ ೧೨೬

ದೇವ ನೀನೆಮಗಿತ್ತ ವರವದು । ದೇವತಾ ವರವಾಯ್ತು ನೀ ಮನು
ಜಾವತಾರದ ಸೊಗಸನಂಗೀಕರಿಸಿ ನಡೆದುದಕೆ
ನಾವು ಕೊಡುವೆವು ವರವ ಬೇಡೆಂ । ದಾ ವಿರಿಂಚಿ ಪುರಾರಿ ಪೌಲೋ
ಮೀಪರರು ನುಡಿಯಲ್ಕೆ ಬಳಿಕಿಂತೆಂದನಾ ರಾಮ ೧೨೭

೧೨೪. ದಶರಥನು ಲಕ್ಷ್ಮಣನನ್ನು ಎಡತೊಡೆಯ ಮೇಲೆ ಕೂರಿಸಿಕೊಂಡು ಅವನ ಮೈದಡವಿದನು ; ಸೀತೆಯ ತಲೆಯನ್ನು ನೇವರಿಸಿದನು, ರಘುಪತಿಯನ್ನು ಮುದ್ದಾಡಿದನು. "ಮಗು, ಮನಸ್ಸಿನ ಕಳಂಕವನ್ನು ತ್ಯಜಿಸು, ಸಂಶಯ ಪಡಬೇಡ. ಸೀತೆಯ ನಡವಳಿಕೆಯಿಂದ ನನ್ನ ಮನಸ್ಸು ಸಂತೋಷಗೊಂಡಿದೆ" ಎಂದ ದಶರಥ. ೧೨೫. ಅನಂತರ ಪಾರ್ವತಿದೇವಿಯವರು ಸೀತೆಯ ಕೋಮಲಹಸ್ತವನ್ನು ರಘುಕುಲಶಿರೋಮಣಿಯ ಪರಿಶುದ್ಧ ಹಸ್ತದಲ್ಲಿಟ್ಟರು ; ಬಹ್ಮನ ರಾಣಿ ಸರಸ್ವತಿಯೊಡನೆ ಮುತ್ತಿನ ಅಕ್ಷತೆಯನ್ನು ತಳಿದು ಚಿನ್ನದ ತಟ್ಟೆಗಳಲ್ಲಿ ದೀಪಗಳನ್ನು ಇರಿಸಿ ಆರತಿಯೆತ್ತಿದರು. ೧೨೬. ಆಗ ದೇವತೆಗಳ ನಗಾರಿಗಳು ಭೋರ್ಗರೆದವು ; ಸುವಾಸನೆಯ ಹೂವುಗಳು ಸುರಿದವು. ರಘುನಾಥನು ಸೀತೆಯನ್ನು ಅಂಗೀಕರಿಸಿದನು. ಮಾನವಸ್ತ್ರೀಯರಲ್ಲಿ ಯಾರು ಸೀತೆಯನ್ನು ಸ್ಮರಿಸುವರೋ ಅವರು ಪತಿವ್ರತೆಯರಿಗೆ ತೌರುಮನೆಯಾಗುತ್ತಾರೆ. ಈ ಸತ್ಯವನ್ನು ಕೇಳಿದೆಯಾ ಕುಶ ಎಂದು ವಾಲ್ಮೀಕಿಮುನಿಗಳು ವಿವರಿಸಿದರು. ೧೨೭. "ಸ್ವಾಮಿ, ನೀನು ನಮಗೆ ಕೊಟ್ಟ ವರವು ದೇವತಾವರವಾಯಿತು. ನೀನು ಮನುಷ್ಯಾವತಾರವನ್ನು ಧರಿಸಿ ನಡೆದುಕೊಂಡುದಕ್ಕೆ ನಾವು ವರವನ್ನು ಕೊಡುತ್ತೇವೆ, ಬೇಡಿಕೊಳ್ಳಿ" ಎಂದು ಬ್ರಹ್ಮ, ಈಶ್ವರ, ದೇವೇಂದ್ರರು ನುಡಿಯಲು ಅವರನ್ನು ಕುರಿತು ರಾಮನು ಮುಂದಿನಂತೆ

ಕೊಡುವ ವರವುಂಟಾದರೇಳಲಿ । ಮಡಿದ ವಾನರರೆಲ್ಲರವರಿ
ದ್ದೆಡೆಯಲಿರಲಕ್ಷಯ ಫಲಾಳಿ ಸುಧೋಪಮಾನ್ವಿತದ
ಮಡುಗಳಿರಲಿ ನಿಜಾಂಗನಾಜನ । ದೊಡನೆ ಸುಖದಿಂದಿಪ್ಪ ವರವನು
ಕೊಡುವುದೆನೆ ಕೊಟ್ಟರು ಪರಬ್ರಹ್ಮಾಮರೇಶ್ವರರು ೧೨೮

ಬಳಿವಿಡಿದು ಬಂದೊಬ್ಬರಳಿವಿನ । ಉಳಿಯದಂತಿರೆ ಕಪಿಗಳೆದ್ದರು
ಕಳಕಳಿಕೆ ಮಿಗೆ ಬೇಡಿಕೊಂಡರು ದೇವಗಣ ನೃಪನ
ಕಳುಹಿದನು ಕೈಮುಗಿದು ಕೈರವ । ಜಲಜಸಖವಂಶದ ನೃಪಾಲಾ
ವಳಿಯನಯ್ಯನ ನಮಿಸಿ ಬೀಳ್ಕೊಟ್ಟನು ಮಹೀಪಾಲ ೧೨೯

ಬೆಳಗಿದುದು ನಭವಿಂದುಸೂರ್ಯರ । ಸುಳಿವು ಸುಲಭತೆಯಾಯ್ತು ದಿಙ್ಮಂ
ಡಲಗಳುತ್ಸಾಹಿಸಿದವವನೀದೇವಿ ಹರುಷತೆಯ
ತಳೆದಳಂಭೋರಾಶಿ ಮಿಗೆ ಹೆ । ಕ್ಕಳಿಸಿದುದು ನೆರೆ ಹೇಳಲೇನದ
ಕೆಳಗು ಮೇಲಣ ಜಗದ ಸುಮ್ಮಾನದ ಸಗಾಢಿಕೆಯ ೧೩೦

ಪರಮಪುಣ್ಯ ಪತಿವ್ರತೆಯ ಸತಿ । ಯರ ಶಿರೋಮಂಡನೆಯ ತೊರವೆಯ
ಪುರವರಾಧೀಶ್ವರ ನೃಕಂಠೀರವನು ಹರುಷದಲಿ
ವರಿಸಿದನು ಸುಗ್ರೀವ ಜಾಂಬವ । ಹರಿತನುಜ ನಳ ನೀಲ ಮೊದಲಾ
ದರಿಗೆ ನಲವಾಯ್ತಮಲ ದಂಪತಿಗಳ ನಿರೀಕ್ಷೆಯಲಿ ೧೩೧

ನುಡಿದನು. ೧೨೮. "ನೀವು ವರವನ್ನು ಕೊಡುವುದಾದರೆ ಯುದ್ಧದಲ್ಲಿ ಮಡಿದ ವಾನರರೆಲ್ಲ ಏಳಲಿ ; ಅವರಿದ್ದ ಕಡೆಯಲ್ಲಿ ಅಕ್ಷಯಫಲಗಳಿರಲಿ ; ಅಮೃತಸಮನವಾದ ನೀರಿನ ಮಡುಗಳಿರಲಿ. ಅವರು ತಮ್ಮ ತಮ್ಮ ಹೆಂಡತಿಯರೊಡನೆ ಸುಖವಾಗಿರಲಿ. ಇಂಥ ವರನ್ನು ಕೊಡಿ" ಎಂದು ರಾಮನು ಕೇಳಲು ಈಶ್ವರ ಬ್ರಹ್ಮ ದೇವೇಂದ್ರರು ಆ ವರವನ್ನು ಕೊಟ್ಟರು. ೧೨೯. ಸೈನ್ಯದೊಡನೆ ರಾಮನನ್ನು ಹಿಂಬಾಲಿಸಿ ಬಂದ ಒಬ್ಬರಾದರೂ ಸತ್ತರು ಎನ್ನದಂತೆ ಕಪಿಗಳು ಬದುಕಿ ಎದ್ದುಬಂದರು. ಅತ್ಯಾಸಕ್ತಿಯಿಂದ ದೇವತೆಗಳು ತಮಗೆ ಹೊರಡಲು ಅಪ್ಪಣೆಕೊಡುವಂತೆ ರಾಮನನ್ನು ಬೇಡಿಕೊಂಡರು. ರಾಮನು ಸೂರ್ಯವಂಶದ ರಾಜರುಗಳಿಗೆ ಕೈಮುಗಿದು ಅವರನ್ನು ಕಳುಹಿಸಿಕೊಟ್ಟನು ; ತಂದೆ ದಶರಥನಿಗೆ ನಮಸ್ಕರಿಸಿ ಅವನನ್ನು ಬೀಳ್ಕೊಟ್ಟನು. ೧೩೦. ಆಕಾಶವು ಬೆಳಗಿತು ; ಸೂರ್ಯಚಂದ್ರರ ಸಂಚಾರವು ಸುಗಮವಾಯಿತು ; ದಿಕ್ಕುಗಳು ಉತ್ಸಾಹಗೊಂಡವು ; ಭೂದೇವಿಯು ಹರ್ಷಗೊಂಡಳು ; ಸಮುದ್ರವು ಉಬ್ಬಿತು ; ಏನೆಂದು ವರ್ಣಿಸೋಣ, ಭೂಮಿಯ ಕೆಳಗಿನ ಪಾತಾಳಲೋಕಗಳಲ್ಲೂ ಮೇಲಿನ ಲೋಕಗಳಲ್ಲೂ ಸಂತೋಷ ಹರಡಿತು. ೧೩೧. ಪರಮಪುಣ್ಯಪತಿವ್ರತೆಯಾದ ಸತಿಯರ ಶಿರೋಭೂಷಣಳಾದ ಸೀತೆಯನ್ನು ತೊರವೆಯ ಪುರದಧಿಪತಿ ನರಸಿಂಹನ ಅವತಾರಿಯಾದ ಶ್ರೀರಾಮನು ಹರ್ಷದಿಂದ ಸ್ವೀಕರಿಸಿದನು. ಈ ಅನುಪಮ ದಂಪತಿಗಳ ದರ್ಶನದಿಂದ ಸುಗ್ರೀವ, ಜಾಂಬವ, ಅಂಗದ, ನಳ, ನೀಲ ಮೊದಲಾದವರಿಗೆ ಆನಂದವಾಯಿತು.

# ಐವತ್ತನಾಲ್ಕನೆಯ ಸಂಧಿ

ಸೂಚನೆ॥ ಭುವನಜನ ಝಲ್ಲವಿಸೆ ನಿರ್ಜರ । ನಿವಹವತಿ ಪರಿಣಮಿಸೆ ಸತಿಸಹ
ಭವನ ಸಹಿತಸುರಾರಿ ನಂದಿಗ್ರಾಮಕೈತಂದ

ಕೇಳಿದೈ ಕುಶ ಬಲಿದುದನಿತಱ । ಮೇಲೆ ಪರಮಸ್ನೇಹ ಸೀತೆಯ
ಮೇಲೆ ರಘುನಾಥಂಗೆ ಮೇಲಸುರೇಂದ್ರನೈತಂದು
ಶ್ರೀಲತಾಂಗಿಯ ರಮಣನಂಘ್ರಿಯ । ಮೇಲೆ ಮೌಳಿಯನಿಳುಹಿ ಕೈಮುಗಿ
ದೋಲಗಂಬಡದೊಯ್ಯನಿಂತೆಂದನು ನಯೋಕ್ತಿಯಲಿ ೧

ಪುರಕೆ ಬಿಜಯಂಗೈದು ತನ್ನುಪ । ಚರಣೆಯನು ಕೈಕೊಂಡು ಲಂಕಾ
ಪುರಜನವ ಸಂತೈಸಿ ಬಿಜಯಂಗೈಯಬೇಕೆನಲು
ಅರಸ ಬಳಿಕಿಂತೆಂದ ನಮ್ಮಯ । ಭರತಜನನಿಯ ನೇಮದವಧಿಯ
ವರುಷ ತುಂಬದ ಮುನ್ನ ನಗರನಿವಾಸವಿಲ್ಲೆಂದ ೨

ಇನಿತು ಸತ್ಕೃತಿ ಸಾಲದೇ ನ । ಮ್ಮನುಜ ಲಕ್ಷ್ಮಣದೇವ ಮಾಡದ
ಘನತರದ ಪರಿಚರಿಯ ನಡೆದುದು ನಮಗೆ ನಿನ್ನಿಂದ
ಜನನಿಯರು ಚಿಂತಿಸುವರುಮ್ಮಳ । ವನುಜರಿಗೆ ಬಾರಿಸುವುದಿಂದಿನ
ದಿನದಲೇ ನಾವ್ ತೆರಳಬೇಕೆಂದಸುರರಿಪು ನುಡಿದ ೩

ಸೂಚನೆ॥ ಜಗಜ್ಜನರು ಹಿಗ್ಗಲು ದೇವತೆಗಳ ಸಮೂಹವು ಹರ್ಷಿಸಲು ಹೆಂಡತಿ ಮತ್ತು ತಮ್ಮ ಇವರೊಡನೆ ರಾಮನು ನಂದಿಗ್ರಾಮಕ್ಕೆ ಬಂದನು. ೧. ಕೇಳಯ್ಯ, ಕುಶ. ಇದಾದ ಬಳಿಕ ರಘುನಾಥನಿಗೆ ಸೀತೆಯಮೇಲೆ ಪರಮಪ್ರೀತಿ ಹೆಚ್ಚಿತು. ಅನಂತರ ವಿಭೀಷಣನು ಬಂದು ಲಕ್ಷ್ಮೀರಮಣನ ಪಾದಗಳಮೇಲೆ ಕಿರೀಟವನ್ನು ಇಟ್ಟು ನಮಿಸಿ ಕೈಮುಗಿದು ರಾಜಸೇವೆಯ ಆಡಂಬರವಿಲ್ಲದೆ ನಯವಾದ ಮಾತುಗಳನ್ನಾಡಿದನು. ೨. "ಲಂಕಾನಗರಕ್ಕೆ ಪಾದಬೆಳಸಿ ನನ್ನ ಸತ್ಕಾರವನ್ನು ಸ್ವೀಕರಿಸಿ ಲಂಕಾಪುರಜನವನ್ನು ಸಮಾಧಾನಪಡಿಸಿ ಅನಂತರ ಹೊರಡಬೇಕು" ಎಂದು ವಿಭೀಷಣನು ಕೇಳಿಕೊಂಡನು. "ನಮ್ಮ ಭರತನ ತಾಯಿ ವಿಧಿಸಿರುವ ಅರಣ್ಯವಾಸದ ಅವಧಿಯ ವರ್ಷಗಳು ಮುಗಿಯುವುದಕ್ಕೆ ಮುಂಚೆ ನನಗೆ ನಗರವಾಸವಿಲ್ಲ" ಎಂದು ರಾಮ ಉತ್ತರ ಕೊಟ್ಟ. ೩. "ನೀನು ಮಾಡಿದ ಇಷ್ಟು ಸತ್ಕಾರ ಸಾಲದೇ ? ನಮ್ಮ ತಮ್ಮ ಲಕ್ಷ್ಮಣನು ಮಾಡದ ಉತ್ತಮವಾದ ಸೇವೆ ನಿನ್ನಿಂದ ನಮಗೆ ದೊರೆಯಿತು. ಅಯೋಧ್ಯಾನಗರದಲ್ಲಿ ನಮ್ಮ ತಾಯಿಯರು ನಮ್ಮನ್ನೇ ಕುರಿತು ಚಿಂತಿಸುತ್ತಿರುವರು ; ತಮ್ಮಂದಿರು ದುಃಖಿಸುವರು. ಈ

ತರಿಸಿದನು ಬಳಿಕಖಿಳ ಭೋಜ್ಯದ । ನಿರುಪಮಿತ ಸಾಧನ ಸಮಗ್ರವ
ವಿರಚಿಸಿತು ಮಣಿಮಂಟಪವು ಮಯನಿಂದ ಪಾಳಯದ
ವರ ಪುರೋಭಾಗದಲಿ ನಾನಾ । ಪರಿಯ ಸಂಭ್ರಮದಿಂದ ನೆಱೆ ವಿ
ಸ್ತರಣದಲಿ ಬದ್ದೂಟವಾದುದು ಸಕಲ ಕಪಿಬಲಕೆ ೪

ಅರಸನಾಜ್ಞೆಯಲಖಿಳ ದಿವ್ಯಾ । ಭರಣ ಸುಗಂಧಮಾಲ್ಯಾಂ
ಬರದಿನೊಪ್ಪಿದುದಿನಸುತಾದಿ ಸಮಸ್ತ ಕಪಿಸೇನೆ
ತರಿಸಿ ಧನಪನ ಪುಷ್ಪಕವ ಮುಂ । ದಿರಿಸಿ ಬಿಜಯಂಗೈವುದೆಂದನು
ನರಪತಿಗೆ ಕೈಮುಗಿದು ಲಂಕಾನಾಥನೊಲವಿನಲಿ ೫

ಗಜಗಲಿಸಿದುದು ಸೋಮಸೂರ್ಯರ । ನಿಜದ ನಿಱಿಗೆಯ ಲಹರಿಯಲಿ ನಾ
ಕಜರ ವಿಮಲ ವಿಮಾನವಗಣಿತಗುಣಕೆ ಮಿಗಲೆನಿಸಿ
ರಜತಶೈಲವೊ ಮೇಣ್ ಸುಧಾಬ್ಧಿಯ । ನಿಜನಿವಾಸಿಯ ನಿಳಯವೋ ನೀ
ರಜಭವನ ಭವನವೊ ಪರೀಕ್ಷಿಸಲಱಿಯೆ ನಾನೆಂದ ೬

ನಿಳಯವಿರ್ದವನಂತ ಸೌಧಾ । ವಳಿಗಳಿರ್ದವನಂತ ಕಾಮಿತ
ಫಲ ಸಮಗ್ರದ ಬಹಳ ನಂದನವಿರ್ದವೆಡೆಗೆಡೆಗೆ
ಜಲಭರಿತ ಕಾಸಾರವಿರ್ದವು । ಲಲಿತಭೋಜ್ಯ ಸುವಸ್ತುಲಲನಾ
ವಳಿ ಮಹೌಷಧವಿರ್ದವಮಲ ವಿಮಾನಮಧ್ಯದಲಿ ೭

ದಿವಸವೇ ನಾವು ಹೊರಡಬೇಕು" ಎಂದು ರಾಮ ಹೇಳಿದ. ೪. ಅನಂತರ ವಿಭೀಷಣನು ಸಮಸ್ತ ಊಟದ ವಸ್ತುಗಳನ್ನು ತರಿಸಿದನು. ಪಾಳಯದ ಮುಂಭಾಗದಲ್ಲಿ ರತ್ನಖಚಿತ ವಾದ ಮಂಟಪವು ಮಯನಿಂದ ನಿರ್ಮಿತವಾಯಿತು. ಸಂಭ್ರಮದಿಂದ ಸಕಲ ವಾನರ ಸೈನ್ಯಕ್ಕೆ ಭಾರಿ ಔತಣದೂಟವಾಯಿತು. ೫. ರಾಮನ ಅಪ್ಪಣೆಯಂತೆ ಸಕಲ ದಿವ್ಯಾ ಭರಣಗಳು, ದಿವ್ಯಸುಗಂಧ, ಹೂವಿನಹಾರ, ವಸ್ತ್ರ–ಇವುಗಳಿಂದ ಸುಗ್ರೀವನೇ ಆದಿಯಾಗಿ ಸಮಸ್ತ ಕಪಿಸೈನ್ಯವು ಶೋಭಿಸಿತು. ಕುಬೇರನ ಪುಷ್ಪಕವಿಮಾನವನ್ನು ಮುಂದೆ ನಿಲ್ಲಿಸಿ ವಿಭೀಷಣನು ಶ್ರೀರಾಮನಿಗೆ ಕೈಮುಗಿದು ದಯಮಾಡಿಸಬೇಕು ಎಂದು ಕೇಳಿಕೊಂಡನು. ೬. ಚಂದ್ರಸೂರ್ಯರು ನಿಜವಾಗಿ ಕಿರಣವನ್ನು ಬೀರಿ ಪ್ರಕಾಶಿಸುತ್ತಿದ್ದಾರೋ ಎನ್ನು ವಂತೆ ದೇವತೆಗಳ ಆ ಪುಷ್ಪಕವಿಮಾನವು ಸಮಸ್ತ ಗುಣಗಳಿಂದ ಹೊಳೆಯುತ್ತಿತ್ತು. ಬೆಳ್ಳಿಯಬೆಟ್ಟವೋ ಅಥವಾ ಕ್ಷೀರಸಾಗರದಲ್ಲಿ ಪವಡಿಸಿದ ಶ್ರೀಹರಿಯ ವೈಕುಂಠವೋ, ಬ್ರಹ್ಮನ ಭವನವೋ ಪರೀಕ್ಷಿಸಿ ತಿಳಿಯಲು ಸಾಧ್ಯವಿಲ್ಲ ಎನ್ನುವಂತೆ ಪುಷ್ಪಕವಿಮಾನವು ತೋರಿತು. ೭. ಪುಷ್ಪಕವಿಮಾನದ ಮಧ್ಯದಲ್ಲಿ ಅಸಂಖ್ಯಾತ ಮನೆಗಳಿದ್ದವು, ಉಪ್ಪರಿಗೆ ಗಳು ಅನಂತವಾಗಿದ್ದವು, ಬಯಸಿದ ಸಂಪೂರ್ಣ ಫಲಗಳನ್ನು ನೀಡುವ ನಂದನವನಗಳು ನಡುನಡುವೆ ಇದ್ದವು, ನೀರು ತುಂಬಿದ ಕೊಳಗಳಿದ್ದವು, ಸೊಗಸಾದ ಊಟದ ವಸ್ತು

ಕಟಕ ಸಹಿತವೆ ದೇವರೀ ವಿ । ಸ್ಫುಟ ವಿಮಾನಾರೋಹಣಕೆ ಸಂ
ಘಟಿಸುವುದು ಚಿತ್ತವನು ಸೇವೆಯಿದೀಗ ಕಿಂಕರನ
ನಟಿಸದಿರಲನ್ಯವನು ಮನವು । ತ್ಕಟದ ಕೃಪೆಯಿರಲೆನಗೆನುತ ಸಂ
ಪುಟದ ಕರದಲಿ ಬೇಡಿಕೊಂಡನು ಶರಣನಾಳುದನ ೮

ಐಸೆ ಮತ್ತೇನೆಂದು ನೃಪತಿ ಸು । ವಾಸಿನಿಯ ಕೈವಿಡಿದು ಲಂಕಾ
ಧೀಶನುಗ್ಗಡಣೆಯಲಿ ಬಂದೇಱಿದನು ಪುಷ್ಪಕವ
ಕೀಶಪತಿ ಜಾಂಬವ ಸುಷೇಣಕ । ಕೇಸರಿ ಪ್ರಮುಖಾದಿಬಲ ಭೂ
ವಿಾಶನಾಜ್ಞೆಯಲೇಱಿಯದು ಕೌಬೇರಪುಷ್ಪಕವ ೯

ತೆಱಪುಗೊಟ್ಟಿರ್ದುದು ಕುಬೇರನ । ಮಿಱುಪ ದಿವ್ಯವಿಮಾನವೈವರಿ
ಗಱಿಯಬಾರದು ಸಂದಣಿಸಿ ಕುಳ್ಳಿರ್ದ ಕಪಿಭಟರ
ಹೆಱಿಯಮೌಳಿಯದೇವ ಧನಪತಿ । ಮಱೆಯೊಗುವ ಕಾಲದಲಿ ಕರುಣದ
ಲಱಿಯೆ ಕೊಟ್ಟ ವಿಮಾನವದು ಸಾಮಾನ್ಯವಲ್ಲೆಂದ ೧೦

ಶರಣಜನಮಸ್ತಕಮಣಿಯ ನಿಜ । ಕರತಳದಲಾವಿಡಿದವಲ್ಲೆ ಚಾ
ಮರ ಚತುರ್ದಶಭುವನ ಭವನಶರೀರನಿರ್ದೆಸೆಯ
ಮೊರೆವ ದುಂದುಭಿ ರಭಸದಲಿ ಪು । ಷ್ಕರಕೆ ಪುಷ್ಪಕವಡರಿದುದು ಖೇ
ಚರರು ಜಯಜಯಯೆನಲು ರಘುಡಿತೆಯ ಜಯದ ಜೋಡಿಯಲಿ ೧೧

ಗಳಿದ್ದವು, ಸ್ತ್ರೀಯರಿದ್ದರು ಮತ್ತು ಮಹೌಷಧಿಗಳಿದ್ದವು. ೮. "ಸೀತಾಸಮೇತರಾಗಿ ಸ್ವಾಮಿಯವರು ವಿಮಾನವನ್ನೇರಲು ಮನಸ್ಸುಮಾಡಿ. ಇದು ಈ ಕಿಂಕರನಸೇವೆ. ಬೇರೆಯದನ್ನು ಮನಸ್ಸು ಯೋಚಿಸದಿರಲಿ. ನಮ್ಮ ಮೇಲೆ ಕರುಣೆಯಿರಲಿ" ಎಂದು ಕೈಮುಗಿದು ಭಕ್ತ ವಿಭೀಷಣನು ಒಡೆಯ ರಾಮನನ್ನು ಬೇಡಿಕೊಂಡನು. ೯. 'ಅಗಲಿ, ಮತ್ತೇನು!' ಎಂದು ರಾಮನು ಸುಮಂಗಲಿ ಸೀತೆಯ ಕೈಹಿಡಿದುಕೊಂಡು ಲಂಕೇಶ್ವರ ವಿಭೀಷಣನು ಬಿರುದುಗಳನ್ನು ಘೋಷಿಸುತ್ತಿರಲು ಪುಷ್ಪಕವಿಮಾನವನ್ನೇರಿದನು. ವಾನರಪತಿ ಸುಗ್ರೀವ, ಜಾಂಬವ, ಸುಷೇಣ, ಕೇಸರಿ ಮೊದಲಾದ ಮುಖ್ಯನಾಯಕರ ಸೈನ್ಯವು ರಾಮನ ಅಪ್ಪಣೆಯಂತೆ ಕುಬೇರನ ಪುಷ್ಪಕವನ್ನೇರಿತು. ೧೦. ಕುಬೇರನ ದಿವ್ಯವಿಮಾನವು ಐದು ಜನರಿಗೂ ಸ್ಥಳವನ್ನು ಕೊಟ್ಟಿತು. ಒತ್ತಾಗಿ ಕುಳಿತ ಕಪಿವೀರರೆಷ್ಟೆಂಬುದನ್ನು ತಿಳಿಯುವುದು ಕಷ್ಟವಾಗಿತ್ತು. ಕುಬೇರನು ಶರಣುಬಂದ ಕಾಲದಲ್ಲಿ ಚಂದ್ರಮೌಳಿ ಶಿವನು ಕರುಣೆಯಿಂದ ಕೊಟ್ಟ ವಿಮಾನ. ಅದು ಸಾಮಾನ್ಯವಲ್ಲ ಎಂದು ವಾಲ್ಮೀಕಿ ಮುನಿಗಳು ಲವಕುಶರಿಗೆ ತಿಳಿಸಿದರು. ೧೧. ಭಕ್ತಶಿರೋಮಣಿ ವಿಭೀಷಣನು ಹದಿನಾಲ್ಕು ಲೋಕಗಳು ಮನೆಯಾದ ಶ್ರೀರಾಮನ ಎರಡೂ ಕಡೆಗಳಲ್ಲಿ ಚಾಮರವನ್ನು ಬೀಸಿದನು. ನಗಾರಿಗಳು ಘೋರ್ಗರೆಯುತ್ತಿರುವಂತೆ ಪುಷ್ಪಕವಿಮಾನವು ರಭಸದಿಂದ ವೇಗವಾಗಿ

ಕಂಡುದಿಲ್ಲಲಿ ದೇವ ದೇವರ । ಕಂಡು ಬದುಕಿದ ಶರಣಜನಮಣಿ
ಮಂಡನನ ಪಟ್ಟಣವ ತೋಱಿಸಬೇಕು ತನಗೆನಲು
ಖಂಡಪರಶು ಮಹೋಗ್ರತರ ಕೋ । ದಂಡ ಚಂಡ ನಿಖಂಡ ಬಾಹೋ
ದ್ದಂಡ ಚಂಡ ಪರಾಕ್ರಮನು ವೈದೇಹಿಗಿಂತೆಂದ ೧೨

ಇದು ಕಣಾ ಪೂರ್ವದಲಿ ಮಯನಿಂ । ತ್ರಿದಶವರ್ಧಕಿಯಿಂದ ವಿಸ್ತರಿ
ಸಿದುದು ನಗರವಿದೀಗ ಸೇರಿತು ರಾಜರಾಜಂಗೆ
ಸುದತಿ ಕೇಳ್ ಬಳಿಕಾಯ್ತು ದಾಯಾ । ದ್ಯದ ವಿರೋಧದಲಾ ದಶಾಸ್ಯಂ
ಗಿದಱ ಮಹಿಮೆಯ ಹೊಗಳಲಸದಳವೆಂದನಾ ರಾಮ ೧೩

ಈ ಮಹಾಗಿರಿದುರ್ಗವಿದು ತಾ । ವ್ಯೋಮಕೇಶನು ಗೆಲಿದ ದುರ್ಗದ
ಕೈಮೆಗಿಮ್ಮಡಿ ಸಾಧ್ಯವಾದುದು ದೈವಘಟನೆಯಲಿ
ಈ ಮಹಾಶರಣಂಗೆ ಪರರನು । ಕಾಮಿಸದ ಕಮಲಜನ ಕಲ್ಪದ
ಸೀಮೆ ಪರಿಯಂತಬಲೆ ನೋಡೆಂದರಸ ತೋಱಿಸಿದ ೧೪

ವಳಯವೇಳಱ ಕೋಟಿಚಂದ್ರನ । ಬಳಸಿ ತೋಱುವ ಪರಿಧಿಯಂತದೆ
ನಿಳಯವವೆ ತಾರಾಗ್ರಹಂಗಳ ಬಹಳ ತೇಜದಲಿ
ಥಳಥಳಿಸುತಿದೆ ರಾಜಗೃಹ ತಿಂ । ಗಳ ಸುಧಾಕರನಂತೆ ಶೋಕಾ
ಕಲಿತ ನಂದನವದೆ ಕಳಂಕಿನ ಧಾತಿನಂದದಲಿ ೧೫

ಆಕಾಶಕ್ಕೇರಿತು. ದೇವತೆಗಳು ಜಯಜಯ ಎಂದು ಕೂಗಿದರು. ೧೨. "ಸ್ವಾಮಿ ನಾನು ಲಂಕಾನಗರವನ್ನು ನೋಡಲಿಲ್ಲ. ತಮ್ಮ ಮರೆಹೊಕ್ಕು ಬದುಕಿದ ಭಕ್ತಜನ ವಿಭೂಷಣ ವಿಭೀಷಣನ ಪಟ್ಟಣವನ್ನು ನನಗೆ ತೋರಿಸಬೇಕು" ಎಂದು ಸೀತೆ ಕೇಳಿ ಕೊಳ್ಳಲು ಶಿವನ ಮಹಾಭಯಂಕರ ಧನುಸ್ಸನ್ನು ಮುರಿದ ಪ್ರಚಂಡ ಬಾಹುಬಲದ ರಾಮನು ಸೀತೆಗೆ ಲಂಕಾಪಟ್ಟಣವನ್ನು ತೋರಿಸುತ್ತ ಮುಂದಿನಂತೆ ಹೇಳಿದನು. ೧೩ "ಹಿಂದೆ ದೇವತೆಗಳ ಬಡಗಿ ಮಯನು ನಿರ್ಮಿಸಿದ ನಗರ ಇದು. ಇದು ಕುಬೇರನಿಗೆ ಬಂದಿತು. ಸೀತೆ, ಕೇಳು. ಬಳಿಕ ದಾಯಾದಿಗಳ ವಿರೋಧದಿಂದ ಈ ಲಂಕಾನಗರ ರಾವಣನಿಗೆ ಸೇರಿತು. ಇದರ ಮಹಿಮೆಯನ್ನು ಹೊಗಳಲು ಸಾಧ್ಯವಿಲ್ಲ" ಎಂದು ಹೇಳಿದ ರಾಮ. ೧೪. "ಸೀತೆ, ನೋಡು ಈಶ್ವರನ ಕೈಲಾಸದ ರಚನೆಗೆ ಎರಡರಷ್ಟು ಕೌಶಲ್ಯವನ್ನು ಪಡೆದ ಇತರರಿಗೆ ಲಭಿಸದ ಈ ಮಹಾಗಿರಿದುರ್ಗವು ಬ್ರಹ್ಮನಯುಗದ ಕೊನೆಯವರೆಗೆ ಈ ಮಹಾಶಿವಭಕ್ತನಿಗೆ ದೊರಕಿದುದು ದೈವಸಂಘಟನೆಯೇ ಸರಿ" ಎಂದು ಲಂಕಾದುರ್ಗವನ್ನು ರಾಮನು ಸೀತೆಗೆ ತೋರಿಸಿದನು. ೧೫. "ಕೋಟಿಚಂದ್ರನ ಸುತ್ತಲಿನ ಕಾಂತಿಮಂಡಲದಂತೆ ಏಳುಸುತ್ತಿನ ಕೋಟೆಗಳಿವೆ. ನಕ್ಷತ್ರ ಮತ್ತು ಗ್ರಹಗಳ ತೇಜಸ್ಸಿನಿಂದ ಮನೆಗಳು ಶೋಭಿಸುತ್ತಿವೆ. ಪೌರ್ಣಿಮೆಯ ಚಂದ್ರನಂತೆ ಅರಮನೆ ಥಳಥಳಿಸುತ್ತಿದೆ. ಶೋಕತುಂಬಿದ ಅಶೋಕವನವು ಚಂದ್ರನಮೇಲಿನ ಕಪ್ಪುಕಲೆಯಂತೆ

ಅಗಲು ನೋಡೀಪುರಿಗೆ ಪೂರ್ವದ । ಸಗರರಿಂದಾದಬುಧಿ ಕಪಿಗಳು
ಬಿಗಿದರಿದನುಪ್ನರದ ಮಾಯಾಸೂತ್ರ ತಂತ್ರದಲಿ
ಮೃಗವಿಲೋಚನೆ ಕೇಳು ಲಂಕಾ । ನಗರದೆರಡನೆಯರಸು ನಮ್ಮಂ
ಘ್ರಿಗಳ ದರುಶನವಾದ ಠಾವಿದು ನೋಡು ನೀನೆಂದ ೧೬

ಎನೆ ವಿಭೀಷಣದೇವ ಕೈಮುಗಿ । ದಿನಕುಲೇಂದ್ರಗೆ ಬಿನ್ನವಿಸಿದನು
ವನಜಲೋಚನ ಚಿತ್ತವಿಸು ಮುಂದಣ ಯುಗಂಗಳಲಿ
ಮನುಜಗೋಚರವಾಗದವೊಲೀ । ವನನಿಧಿಯ ಸೇತುವ ವಿಭಾಗಿಪು
ದೆನಲು ಬಿಲುಗೊಪ್ಪಿಂದ ಮುಕ್ಕಡಿಯಾಗಿ ಖಂಡಿಸಿದ ೧೭

ನಡೆದುದುತ್ತರಕಾಗಿ ಗಗನದ । ಸೊಡರ ಸೊಬಗಿನವೊಲು ಪುಷ್ಪಕ
ವೆಡೆಯಲಿರ್ದುದು ಕಲಿಜಟಾಯುವಿನಗ್ರಜನ ವಿಪಿನ
ಮಡದಿ ನೋಡಿದು ಹಿಂದೆ ರಾವಣ । ನೊಡನೆ ಹಳಚಿದ ಸೂರ್ಯಸೂತನು
ಹಡೆದ ಮಗನಗ್ರಜನ ವನವಿದು ಕಾಂತೆ ಕೇಳೆಂದ ೧೮

ಮುಂದೆ ನೋಡು ಸ್ವಯಂಪ್ರಭೆಯ ನಿಜ । ಮಂದಿರದ ಮಾರ್ಗದ ಸರೋವರ
ವಿಂದುಮುಖಿ ಕೇಳಿದಱೊಳಿರ್ದುದು ಮೂಱುದಿನವುಳಿಯೆ
ಸಂದ ಮಾಸವನೆಮ್ಮಬಲ ಬಿಲ । ದಿಂದಿಳಿದು ನಿನಗೋಸುಗವೆ ನೋ
ಡೆಂದು ತೋಱಿಸೆ ಮುಂಚಿದುದು ಪುಷ್ಪಕ ಧನೇಶ್ವರನ ೧೯

ಕಾಣುತ್ತದೆ. ೧೬. ಹಿಂದೆ ಸಗರನ ಮಕ್ಕಳಿಂದಾದ ಸಮುದ್ರವು ಲಂಕಾನಗರದ ಅಗಳು. ಕಪಿಗಳು ಉನ್ನತವಾದ ಮಾಯಾಸೂತ್ರತಂತ್ರದಿಂದ ಈ ಸಮುದ್ರಕ್ಕೆ ಸೇತುವೆ ಕಟ್ಟಿದರು. ಸೀತೆ, ನೋಡು. ಲಂಕಾನಗರದ ಎರಡನೆಯ ರಾಜ ವಿಭೀಷಣನು ನಮ್ಮ ಪಾದದರ್ಶನ ಮಾಡಿದ ಸ್ಥಳವಿದು" ಎಂದು ರಾಮ ತೋರಿಸಿದ. ೧೭. ಆಗ ವಿಭೀಷಣದೇವನು ಕೈಮುಗಿದು, "ಕಮಲಾಕ್ಷ, ಆಲಿಸು. ಮುಂದಿನ ಯುಗಗಳಲ್ಲಿ ಮನುಷ್ಯರಿಗೆ ಗೋಚರವಾಗದಂತೆ ಈ ಸಮುದ್ರದ ಸೇತುವೆಯನ್ನು ಕತ್ತರಿಸು" ಎಂದು ವಿಜ್ಞಾಪಿಸಿಕೊಂಡನು. ಆಗ ರಾಮನು ಬಿಲ್ಲಿನ ತುದಿಯಿಂದ ಸೇತುವೆಯನ್ನು ಮೂರು ಭಾಗವಾಗಿ ಒಡೆಯುವಂತೆ ಕತ್ತರಿಸಿದನು. ೧೮. ಆಕಾಶದ ದೀಪದಂತೆ ಪುಷ್ಪಕವಿಮಾನವು ಉತ್ತರದಿಕ್ಕಿಗೆ ಯಾನಮಾಡಿತು. ಸಮೀಪದಲ್ಲಿ ಜಟಾಯುವಿನ ಅಣ್ಣ ಸಂಪಾತಿಯ ವನವು ಕಾಣಿಸಿತು. ಆಗ ರಾಮನು, "ಸೀತೆ, ಇಲ್ಲಿ ನೋಡು. ಹಿಂದೆ ರಾವಣನೊಡನೆ ಹೋರಾಡಿದ ಜಟಾಯುವಿನ ಅಣ್ಣನಾದ ಮತ್ತು ಸೂರ್ಯನ ಸಾರಥಿ ಅರುಣನ ಹಿರಿಯ ಮಗನಾದ ಸಂಪಾತಿಯ ವನ ಇದು" ಎಂದ ರಾಮ. ೧೯. "ಚಂದ್ರಮುಖಿ, ಮುಂದೆ ನೋಡು. ಸ್ವಯಂಪ್ರಭೆಯ ಅರಮನೆಗೆ ಹೋಗುವ ದಾರಿಯಾದ ಸರೋವರ ಇದು. ನಮ್ಮ ಸೈನ್ಯವು ನಿನ್ನನ್ನು ಹುಡುಕುತ್ತ ಬಂದು ಇದರೊಳಗೆ ಇಳಿದು ತಿಂಗಳಿನ ಅವಧಿಗೆ ಮೂರು ದಿನ ಉಳಿಯುವವರೆಗೆ ಅಲ್ಲಿ ಸಿಕ್ಕಿಕೊಂಡಿತ್ತು" ಎಂದು ರಾಮನು ತೋರಿಸಿದನು.

ಇದು ಕಣಾ ಕಿಷ್ಕಿಂಧವೆಂಬ । ಗ್ಗದ ಮಹಾಗಿರಿದುರ್ಗವಿದನಾ
ತ್ರಿದಶಪತಿಸುತನಾಳುತಿರ್ದನು ಹಲವು ವತ್ಸರವ
ಸುದತಿಯಭಿಲಾಷೆಯಲಿ ವೈರವ । ನಿದಿರುಗೊಂಡನು ತಮ್ಮನಲಿ ಸೇ
ರದೆ ಸಮಾಕದಲಳಿದೆವಾತನನರಸಿ ಕೇಳೆಂದ ೨೦

ಬಳಿಕ ಪರಮಸ್ನೇಹಭಾವವ । ಬಳಸಿದನು ನಮ್ಮೊಡೆಗೆ ವೈರಿಯ
ಕೊಲೆಗೆ ಕೈನೆರವಾದನೀ ಸುಗ್ರೀವನಾಜಿಯಲಿ
ಗೆಲವು ನಮಗಾಯ್ತೀತನಿಂ ಕೇ । ಳಿಲೆ ಮಹೀಸುತೆಯೆಂಬ ನುಡಿಯಿಂ
ದೊಳಗೆ ಬಂದಳು ರುಮೆ ಸಮಸ್ತ ವಧೂಕದಂಬದಲಿ ೨೧

ಕಲಶ ಕನ್ನಡಿ ಸಹಿತ ಶೋಭಾ । ಕಲಿತ ವೈಭವದಿಂದಿದಿರ್ಗೊಂ
ಡಳು ಮಹಾಸಂಭ್ರಮದಿನವನಿಜೆ ಸಹಿತ ರಾಘವನ
ಇಳಿದು ತೊಡೆಯಿಂದರಸನಾಜ್ಞೆಯ । ಲೊಲವು ಮಿಗೆ ವೈದೇಹಿ ರುಮೆಯನು
ಸೆಳೆದು ಬಿಗಿಯಪ್ಪಿದಳು ಪರಮಸ್ನೇಹಭಾವದಲಿ ೨೨

ಹಿಂದೆ ಸೀತಾದೇವಿಯರು ಬಿಸು । ಟಂದಿನಾಭರಣಗಳ ಧರಣೀ
ನಂದನೆಗೆ ಕಾಣಿಕೆಯನಿತ್ತಡಿಗೆಜಗಿದಳು ಬಳಿಕ
ಕಂದ ಕೇಳೈ ಕುಶನೆ ಪರಮಾ । ನಂದದಲಿ ರುಮೆ ತಾರೆಯರ ಮುದ
ದಿಂದ ಮನ್ನಿಸಿ ಸತ್ಕರಿಸಿದಳು ಸೀತೆ ಹರುಷದಲಿ ೨೩

ಅಷ್ಟರಲ್ಲಿ ಕುಬೇರನ ಪುಷ್ಪಕವಿಮಾನವು ಮುಂದಾಯಿತು. ೨೦. "ಇದು ಕಿಷ್ಕಿಂಧವೆಂಬ ಮಹಾಗಿರಿದುರ್ಗ. ಇದನ್ನು ಇಂದ್ರನಮಗ ವಾಲಿ ಹಲವು ವರ್ಷಗಳ ಕಾಲ ಆಳುತ್ತಿದ್ದನು. ವಾಲಿ ಹೆಂಗಸಿನ ಆಸೆಯಿಂದ ವೈರವನ್ನು ಸಾಧಿಸಿ ತಮ್ಮನನ್ನು ದೂರವಿರಿಸಿದ್ದ. ಹೋರಾಟದಲ್ಲಿ ನಾವು ಅವನನ್ನು ಕೊಂದೆವು, ಕೇಳು ಸೀತೆ" ಎಂದ ರಾಮ. ೨೧. "ಅನಂತರ ಸುಗ್ರೀವನು ನಮ್ಮೊಡನೆ ಪರಮಸ್ನೇಹವನ್ನು ಬೆಳೆಸಿದನು ಮತ್ತು ಯುದ್ಧಕ್ಕೆ ನೆರವಾದನು. ಕೇಳು ಜಾನಕಿ, ಈತನಿಂದ ನಮಗೆ ಗೆಲವು ಲಭಿಸಿತು" ಎಂದು ರಾಮನು ಹೇಳುತ್ತಿರುವಷ್ಟರಲ್ಲಿ ರುಮೆ ಸಮಸ್ತ ಸುಂದರಿಯರ ಜತೆಯಲ್ಲಿ ಶ್ರೀರಾಮ ಸೀತೆಯರ ಭೇಟಿಗಾಗಿ ಬಂದಳು. ೨೨. ಕಲಶ ಕನ್ನಡಿಗಳೊಡನೆ ರುಮೆ ವೈಭವ ಸಂಭ್ರಮಗಳಿಂದ ಸೀತಾಸಮೇತನಾದ ರಾಘವನನ್ನು ಎದುರುಗೊಂಡಳು. ರಾಮನ ಅಪ್ಪಣೆಪಡೆದು ಅವನ ತೊಡೆಯ ಮೇಲಿಂದಿಳಿದು ಸೀತೆ ಅತಿಶಯ ಸ್ನೇಹಭಾವದಿಂದ ರುಮೆಯನ್ನು ಆಲಿಂಗಿಸಿಕೊಂಡಳು. ೨೩. ಹಿಂದೆ ರಾವಣನ ವಿಮಾನದಿಂದ ಸೀತಾದೇವಿಯರು ಎಸೆದಿದ್ದ ಆಭರಣಗಳನ್ನು ಸೀತೆಗೆ ಕೊಟ್ಟು ರುಮೆ ಅವಳ ಪಾದಗಳಿಗೆರಗಿದಳು. ಮಗು ಕುಶ, ಕೇಳು. ಸೀತೆಯು ರುಮೆ ತಾರೆಯರನ್ನು ಗೌರವಿಸಿ ಹರ್ಷದಿಂದ ಸತ್ಕರಿಸಿದಳು.

ಪುರಕೆ ಬಿಜಯಂಗೈದು ನಮ್ಮಿ । ಬ್ಬರ ಕೃತಾರ್ಥರ ಮಾಡಿ ಭೃತ್ಯರ
ಪರಮಪೂಜೆಯನನುಕರಿಸಿ ನೀವ್ ನಾಳಿನುದಯದಲಿ
ತೆರಳುವುದು ಬಳಿಕೆಂದು ರವಿಸುತ । ಕರಯುಗಂಗಳ ಮುಗಿಯಲಾ ನೃಪ
ದರಹಸಿತ ವದನದಲಿ ನುಡಿದನು ಭಾನುತನುಜಂಗೆ ೨೪

ಆರು ನಿನ್ನವೊಲೀಪರಿಯ ಸ । ತ್ಕಾರಸೇವಾಲಂಬರೇನುಪ
ಚಾರವೇ ನಾವ್ ಮರೆಯಲಹುದೇ ಜನ್ಮಜನ್ಮದಲಿ
ಆರ ದೆಸೆಯಿಂದಳಿದ ಲಜ್ಜೆ ವಿ । ಹಾರಿಸಿತು ಕೊಂಡಾಡುವರೆ ಕೈ
ವಾರಿಗಳೆ ನಾವ್ ಸಾಕದೇಕಿನ್ನೆಂದನಾ ರಾಮ ೨೫

ಭರತನೀದಿನ ದಿನದೊಳಗೆ ಕೇ । ಸುರಿಯ ಸಪ್ತಾರ್ಚಿಯಲಿ ಕಾಯವ
ಬೆರಸದಿರನಿದು ಪೂರ್ವಸೂಚಿತ ಸುಪ್ರತಿಜ್ಞೆಯಲೆ
ಹಿರಿದು ತೃಪ್ತಿಯನೈದಿದೆವು ಪರಿ । ಚರಿಯದಲಿ ನಿನ್ನಿಂದಲೆಂದಾ
ದರಿಸಿ ಬಳಿಕ ವಿಮಾನ ನಡೆದುದು ಮುಂದೆ ವಹಿಲದಲಿ ೨೬

ಸೀತೆ ನೋಡೀ ಶೈಲವಿದು ರವಿ । ಸೂತ ತನುಜ ಜಟಾಯುವಿದ್ದ ನಿ
ಕೇತನಸ್ಥಳವಿದು ಕಣಾಯೆನೆ ನೋಡಿ ಕಂಬನಿಯ
ಆ ತರಳೆ ನಯನದಲಿ ಹೊಳಕಿಸಿ । ಮಾತನರಸಂಗೆಂದಳಮರವಿ
ಘಾತನಲಿ ನೊಂದದಟ ಮೇಲೇನಾಯ್ತು ಖಗಪತಿಗೆ ೨೭

೨೪. "ನಮ್ಮ ರಾಜಧಾನಿಗೆ ದಯಮಾಡಿಸಿ ನಮ್ಮಿಬ್ಬರನ್ನೂ ಕೃತಾರ್ಥರನ್ನಾಗಿ ಮಾಡಿ, ಈ ಸೇವಕರ ಪೂಜೆಯನ್ನಂಗೀಕರಿಸಿ ನಾಳೆ ಸೂರ್ಯೋದಯಕ್ಕೆ ನೀವು ಹೊರಡುವುದು !" ಎಂದು ಸುಗ್ರೀವನು ಕೈಗಳನ್ನು ಮುಗಿಯಲು, ರಾಮನು ಮುಖದಲ್ಲಿ ಮುಗುಳು ನಗೆಯನ್ನು ಬೀರಿ ಸುಗ್ರೀವನನ್ನು ಕುರಿತು ಮುಂದಿನಂತೆ ನುಡಿದನು. ೨೫. "ಯಾರು ನಿನ್ನಂತೆ ಈ ರೀತಿ ಸತ್ಕಾರ ಸೇವಾಪರರಿದ್ದಾರೆ. ಇದೇನು ಉಪಚಾರದ ಮಾತಲ್ಲ. ನಾವು ನಿನ್ನ ಸೇವೆಯನ್ನು ಜನ್ಮ ಜನ್ಮದಲ್ಲಿ ಮರೆಯಲು ಸಾಧ್ಯವೆ ? ಯಾರಿಂದ ನಮ್ಮ ಅಪಮಾನ ಕಳೆಯಿತು ? ಹೊಗಳಲು ನಾವೇನು ಹೊಗಳುಭಟರೆ ? ಸಾಕು, ಇದು ಬೇರೆ ಇನ್ನೇಕೆ ?" ಎಂದ ರಾಮ. ೨೬. "ಈ ದಿವಸದ ಒಳಗೆ ನಾವು ಹೋಗದಿದ್ದರೆ ಭರತನು ಕೆಂಪಾದ ಉರಿಯ ಬೆಂಕಿಗೆ ದೇಹವನ್ನೀಡಾಡದೆ ಇರನು. ಇದು ಅವನು ಹಿಂದೆಯೇ ಮಾಡಿದ ಪ್ರತಿಜ್ಞೆ. ನಿನ್ನ ಸೇವೆಯಿಂದ ಪೂರ್ಣ ತೃಪ್ತಿಯಾಯಿತು" ಎಂದು ರಾಮನು ಸುಗ್ರೀವನನ್ನು ಪ್ರೀತಿಯಿಂದ ಗೌರವಿಸಿದನು. ಬಳಿಕ ಪುಷ್ಪಕ ವಿಮಾನವು ವೇಗದಿಂದ ಮುಂದಕ್ಕೆ ಪ್ರಯಾಣ ಮಾಡಿತು. ೨೭. "ಸೀತೆ ನೋಡು. ಈ ಪರ್ವತವು ಅರುಣನ ಮಗ ಜಟಾಯುವಿದ್ದ ವಾಸಸ್ಥಳ" ಎಂದು ರಾಮನು ತೋರಿಸಲು, ನೋಡಿ ಸೀತೆಯು ಕಣ್ಣುಗಳಲ್ಲಿ ನೀರು ತುಂಬಿಕೊಂಡು "ರಾಕ್ಷಸನೊಡನೆ ಹೋರಾಟದಲ್ಲಿ ನೊಂದಮೇಲೆ ಜಟಾಯುವಿಗೆ ಏನಾಯಿತು ?" ಎಂದು ಪತಿಯನ್ನು

ಅರಸಿ ಕೇಳ್ ಘಾಯದಲಿ ಜೀವವ । ನಿರಿಸಿಕೊಂಡಿರ್ದನು ಕಣಾ ನಾವ್
ದರುಶನವ ಮಾಡಿದ ಬಳಿಕ್ಕಸುರೇಂದ್ರನುದ್ಯಮವ
ವಿರಚಿಸುತ ಹರಣವನು ಬಿಡೆ ಸಂ । ಸ್ಕರಿಸಿದೆವು ವೈದಿಕವಿಧಾನದ
ಲರಿಯು ಬವರಕೆ ಮೇಲೆ ಮನವನು ತಂದೆವಾವೆಂದ ೨೮

ಐಸೆ ಮತ್ತೇನೆನಲು ಬಂದುದು । ಭಾಸುರಾಂಬರಯಾನವಾ ವನ
ವಾಸದಿದಿರಿನ ಪಂಚವಟಿಯು ಪುರಾಣಪಲ್ಲವದ
ವಾಸದೆಡೆಯಿಂದೆ ನೋಡು ವಿಪಿನ ನಿ । ವೇಶನವು ನಾವಿದ್ದ ವಿಪುಳ ವಿ
ಲಾಸವಳಿದಿದೆ ಸೊಗಸು ಸಡಿಲಿದ ಸೋಮನಂದದಲಿ ೨೯

ಜನಕಸುತೆ ನೋಡೆಮ್ಮ ಮುನ್ನಿನ । ಮನೆಯ ಮುಂದಣ ಮಾರ್ಗವಿದೆ ಸ
ಜ್ಜನನಸೂಕ್ತಿಯ ಮುಸುಕಿಕೊಂಡಿಹ ಕುಜನಸಂತತಿಯ
ಘನವಚನ ನಿಷ್ಠುರದವೊಲು ಸಂ । ಜನಿತ ಕರ್ಕಶ ಕಂಟಕಂಗಳ
ವನವಿದೊತ್ತಂಬರಿಸಿಕೊಂಡಿದೆ ನೋಡು ನೀನೆಂದ ೩೦

ದಾನವಿಲ್ಲದ ಧನಪತಿಯ ಸು । ಮ್ಮಾನದಂತಿದೆ ವಿವಿಧ ವಿದ್ಯಾ
ದಾನವಿಲ್ಲದ ಗುರುವರನ ಗರುವಿಕೆಯಂತಿದೆ ನೋಡು
ನೀನು ಸಲಹಿದ ಸುರಭಿತರು ಸುಮ । ನೋನುಬದ್ಧ ಲತಾಳಿಗಳು ಧನ
ಹೀನನನ್ವೊಲಿವೆ ನಿಳಯವಿದು ನಳಿನಾಕ್ಷಿ ನೋಡೆಂದ ೩೧

ಕೇಳಿದಳು. ೨೮. "ರಾಣಿ, ಕೇಳು. ಗಾಯಗೊಂಡು ಜೀವ ಹಿಡಿದುಕೊಂಡಿದ್ದ ಜಟಾಯು ನಮ್ಮನ್ನು ಕಂಡೊಡನೆ ರಾಕ್ಷಸರೊಡೆಯನ ಕಾರ್ಯವನ್ನು ವಿವರಿಸಿ ಪ್ರಾಣವನ್ನು ಬಿಟ್ಟನು. ನಾವು ವೈದಿಕವಿಧಾನದಲ್ಲಿ ಜಟಾಯುವಿಗೆ ಅಂತ್ಯಸಂಸ್ಕಾರವನ್ನು ನಡೆಸಿದೆವು. ಅನಂತರ ಶತ್ರುವಿನ ಮೇಲೆ ಯುದ್ಧ ಮಾಡಲು ನಿಶ್ಚಯಿಸಿದೆವು" ಎಂದ ರಾಮ. ೨೯. 'ಐಸೆ ಮತ್ತೇನು!' ಎನ್ನುತ್ತಿರುವ ಹೊತ್ತಿಗೆ ಪುಷ್ಪಕವು ಮುಂದಕ್ಕೆ ಯಾನಮಾಡಿ ಬಂದಿತು. "ನಾವು ವನವಾಸ ಮಾಡುತ್ತಿದ್ದಾಗಿನ ನಮ್ಮ ಪಂಚವಟಿಯ ವಾಸದ ಗುಡಿಸಲು ಚಿಗುರುಗಳೆಲ್ಲ ಒಣಗಿ ನಿಂತಿರುವುದು ಗೋಚರಿಸುತ್ತಿದೆ, ನೋಡು. ಕಳಾಹೀನನಾದ ಚಂದ್ರನಂತೆ ಆ ವನಪ್ರದೇಶದ ಸೊಗಸು ನಷ್ಟವಾಗಿದೆ" ಎಂದ ರಾಮ. ೩೦. "ಜಾನಕಿ, ನೋಡು. ಸಜ್ಜನನ ಒಳ್ಳೆಯ ಮಾತನ್ನು ಮುಚ್ಚಿಕೊಂಡಿರುವ ದುರ್ಜನನ ನಿಷ್ಠುರ ಮಾತಿನಂತೆ ನಾವು ವಾಸವಾಗಿದ್ದ ಮನೆಯ ಮುಂದಿನ ದಾರಿಯು ಕಠಿಣವಾದ ಮುಳ್ಳುಗಳ ಪೊದೆಯಿಂದ ಮುಚ್ಚಿಕೊಂಡಿದೆ" ಎಂದ ರಾಮ. ೩೧. ಈ ನಿವಾಸದ ಮುಂದೆ ನೀನು ಪೋಷಿಸಿದ ಸುಂದರವೃಕ್ಷವು ದಾನಮಾಡದ ಧನಿಕನ ಹರ್ಷದಂತೆ ಮತ್ತು ಶಿಷ್ಯರಿಗೆ ವಿದ್ಯಾದಾನ ಮಾಡದ ಗುರುವಿನ ಹಿರಿಮೆಯಂತೆ ಕಾಣುತ್ತಿದೆ; ಹೂವು ಬಿಡುತ್ತಿದ್ದ ಹೂಬಳ್ಳಿಗಳು ನಿರ್ಗತಿಕನಂತೆ ಕಾಣುತ್ತಿವೆ, ನೋಡು ಕಮಲಾಕ್ಷಿ" ಎಂದ ರಾಮ.

ವನಿತೆ ನೋಡುತ್ತರದ ಭಾಗದ । ವನವಿದಂದಿನ ವರುಣಮಿತ್ರನ
ತನಯನಾಶ್ರಮವದಱನುತ್ತರದಟವಿ ತನ್ಮುನಿಯ
ಅನುಜನಾಶ್ರಮವದೆ ಸುತೀಕ್ಷ್ಣ । ಮುನಿಪನಾಶ್ರಮವದಱ ಮುಂದಣ
ವನವು ಶರಭಂಗಾಶ್ರಮವು ತರಳಾಕ್ಷಿ ನೋಡೆಂದ ೩೨

ಈ ಮಹಾಶ್ರಮವೀಗ ನೋಡಾ । ಸೋಮ ದತ್ತಾತ್ರೇಯ ವಿಗಡಮ
ಹಾಮುನಿಪ ದೂರ್ವಾಸನನು ಪಡೆದತ್ರಿಮುನಿವರನ
ಸೀಮೆಯಿದು ಮುಂಭಾಗದಲಿ ತೋ । ರ್ಪಾ ಮಹಾದ್ರಿಯಿದೀಗ ಧಾತು
ಸ್ತೋಮರಂಜಿತ ಚಿತ್ರಕೂಟವಿದೀಗ ನೋಡೆಂದ ೩೩

ಕಾಣಬಂದುದು ಬಳಿಕಲಾ ಗೀ । ರ್ವಾಣ ಪುಷ್ಪಕದಮಲರುಚಿ ಗೀ
ರ್ವಾಣಸ್ರೋತಸ್ವಿನಿಯ ಯಮುನಾನದಿಯ ಸಂಗಮದ
ವಾಣಿಯನುಪಮವನದ ಮಧ್ಯ । ಕ್ಷೋಣಿಯಭಿರಂಜಕದ ಮುನಿಪ
ಸ್ಥಾಣು ಸುಮನೋರಾಜ ಗುರುನಂದನನ ಕಂಗಳಿಗೆ ೩೪

ಪರಮಹರುಷದಲಖಿಳ ಮುನಿಸಂ । ತರುಗಳೊಗ್ಗಿನಲಿದಿರುಗೊಂಡರು
ಸುರನರೋರಗ ಲೋಕವಂದ್ಯನ ರಾಘವೇಶ್ವರನ
ಅರಸ ಚಿತ್ತೈಸಿಂದು ನಮ್ಮುಪ । ಚರಣೆಯನು ಕೈಕೊಂಡು ಕಾಬುದು
ಭರತನನು ಬಳಿಕೆಂದು ಭಾರದ್ವಾಜಮುನಿ ನುಡಿದ ೩೫

೩೨. "ಸೀತೆ, ನೋಡು. ಉತ್ತರಭಾಗದ ವನವು ಅಂದಿನ ಮಿತ್ರಾವರುಣನ ಮಗನಾದ ಅಗಸ್ತ್ಯನ ಆಶ್ರಮ. ಅದರ ಉತ್ತರಕ್ಕಿರುವ ಅರಣ್ಯವು ಅಗಸ್ತ್ಯಮುನಿಯ ತಮ್ಮನ ಆಶ್ರಮ. ಅದೋ ಅಲ್ಲಿ ಸುತೀಕ್ಷ್ಣ ಮುನಿಯ ಆಶ್ರಮ. ಅದರ ಮುಂದಿನ ವನವು ಶರಭಂಗನ ಆಶ್ರಮ, ನೋಡು" ಎಂದ ರಾಮ. ೩೩. "ಈ ಮಹಾಶ್ರಮವನ್ನು ನೋಡು. ಚಂದ್ರ, ದತ್ತಾತ್ರೇಯ ಮತ್ತು ಪ್ರಚಂಡಮುನಿ ದೂರ್ವಾಸರನ್ನು ಮಕ್ಕಳನ್ನಾಗಿ ಪಡೆದ ಅತ್ರಿಮಹರ್ಷಿಯ ಆಶ್ರಮಪ್ರದೇಶ. ಇದೋ ಮುಂದುಗಡೆಯಲ್ಲಿ ಕಾಣಿಸುವ ಮಹಾಪರ್ವತವು ಕಾವಿಬಣ್ಣದ ಶಿಲೆಗಳಿಂದ ಹೊಳೆಯುವ ಚಿತ್ರಕೂಟಪರ್ವತ, ನೋಡು" ಎಂದ ರಾಮ. ೩೪. ಅನಂತರ ಗಂಗಾನದಿ ಯಮುನಾನದಿಗಳ ಸಂಗಮದ. ಸರಸ್ವತಿನದಿಯ ನಡುವಿನ ಪ್ರದೇಶದಲ್ಲಿದ್ದ ಬೃಹಸ್ಪತ್ಯಾಚಾರ್ಯನ ಮಗನಾದ ಋಷಿಮಹೇಶ್ವರ ಭರಧ್ವಾಜನ ಕಣ್ಣುಗಳಿಗೆ ದೇವಲೋಕದ ಪುಷ್ಪಕ ವಿಮಾನದ ಪ್ರಕಾಶವು ಕಾಣಿಸಿತು. ೩೫. ಅಧಿಕ ಹರ್ಷದಿಂದ ಋಷಿಗಳ ಸಮೂಹದೊಡನೆ ಭರಧ್ವಾಜಮಹರ್ಷಿಗಳು ಸ್ವರ್ಗ ಮರ್ತ್ಯ ಪಾತಾಳಲೋಕಗಳು ವಂದಿಸುವ ರಾಘವೇಶ್ವರನನ್ನು ಎದುರುಗೊಂಡರು. "ಅರಸ, ಆಲಿಸು. ಇಂದು ನಮ್ಮ ಸತ್ಕಾರವನ್ನು ಸ್ವೀಕರಿಸಿದ ಅನಂತರ ಭರತನನ್ನು ಹೋಗಿ ಕಾಣವುದು" ಎಂದು ಭರದ್ವಾಜಮುನಿ

ಎಲೆ ಮುನೀಶ್ವರ ಭರತನನು ಕಾ । ಬೊಲುವೆಯಿಂದಿನ ದಿವಸ ಕಾಣದ
ಡಳಿವನಗ್ನಿಯೊಳಿರವು ಸಂಘಟಿಸುವುದೆ ನಮಗೆನಲು
ಕಳುಹು ಸಂಜೀವಿನಿಯ ಶೈಲವ । ತಳೆದು ತಂದ ಮಹಾತಿಶಯಭುಜ
ಬಲನನಲ್ಲಿಗೆಯಿಲ್ಲಿ ನೀವಿಂದಿರಲುಬೇಕೆಂದ ೩೬

ಆಗಲದಕೇನೆಂದು ನೃಪನನು । ರಾಗದಲಿ ಬೀಳ್ಕೊಟ್ಟನಗ್ಗದ
ಸಾಗರೋಲ್ಲಂಘನನ ಭರತನ ಬಳಿಗೆ ವಿನಯದಲಿ
ಆ ಗಗನಯಾನದಿನಿಳಾತಳ । ಕಾಗಿ ಬಿಜಯಂಗೈದು ಹೊಕ್ಕನು
ಯಾಗಮಂಟಪವನು ಸುರಾಚಾರಿಯನ ನಂದನನ ೩೭

ಸ್ಮರಿಸಿದನು ಬಳಿಕಾ ಮುನಿಪ ಸುರ । ಸುರಭಿಯನು ಸುಳಿದುದು ಸಮಸ್ತೈ
ಶ್ವರಿಯವಾದುದು ಕಟಕದಳತೆಗೆ ಸಕಲ ಕಡೆಗಟ್ಟು
ವರ ಸುಭೋಜನ ಗಂಧಮಾಲ್ಯಾಂ । ಬರ ವಿಭೂಷಣದಿಂದ ಮಿಗೆ ಸ
ತ್ಕರಿಸಿದನು ಮುನಿ ಸಕಲಸೇನೆಯನವನಿಪತಿ ಸಹಿತ ೩೮

ಅನಿತಱೊಳೆ ಬಳಿಕಂಜನಾನಂ । ದನನು ನಡೆತಂದಾ ಶುಶುಕ್ಷಣಿ
ಯ ನೃಪ ದಕ್ಷಿಣವಾಗಿ ಬಹ ಭರತಕ್ಷಿತೀಶ್ವರನ
ಮನದ ಭಕ್ತಿಯ ಕಂಡು ಲೇಸೆಂ । ದೆನುತ ಹಿಡಿದನು ಕಯ್ಯ ಹೊಗಬೇ
ಡನಲನನು ಬಂದನು ಭಗೀರಥವಂಶದರಸೆಂದ ೩೯

ಹೇಳಿದ. ೩೬. "ಅಯ್ಯಾ ಮಹರ್ಷಿ, ಭರತನು ಇಂದಿನ ದಿವಸ ನಮ್ಮನ್ನು ಕಾಣದಿದ್ದರೆ ಅಗ್ನಿಪ್ರವೇಶಮಾಡಿ ಸಾಯುವನು. ನಾವು ಇಲ್ಲಿ ಉಳಿಯುವುದು ಸಾಧ್ಯವೆ !" ಎಂದು ರಾಮನು ಕೇಳಿದನು. "ಸಂಜೀವಿನಿಪರ್ವತವನ್ನು ಹೊತ್ತು ತಂದ ಮಹಾಬಲಶಾಲಿಯನ್ನು ಅಲ್ಲಿಗೆ ಕಳುಹಿಸು. ಇಲ್ಲಿ ಈ ದಿವಸ ನೀವುಗಳು ಇರಬೇಕು" ಎಂದ ಭರದ್ವಾಜ. ೩೭. 'ಆಗಲಿ, ಅದಕ್ಕೇನು' ಎಂದು ಒಪ್ಪಿಕೊಂಡು ರಾಮನು ಸಾಗರವನ್ನು ಹಾರಿದ ಹನುಮಂತನನ್ನು ಭರತನ ಬಳಿಗೆ ಸಂತೋಷದಿಂದ ಕಳುಹಿಸಿಕೊಟ್ಟನು. ಅನಂತರ ರಾಮನು ಆಕಾಶದಲ್ಲಿದ್ದ ಪುಷ್ಪಕವಿಮಾನದಿಂದ ಭೂಮಿಗೆ ಇಳಿದು ಬೃಹಸ್ಪತ್ಯಾಚಾರ್ಯನ ಮಗ ಭರದ್ವಾಜನ ಯಾಗಮಂಟಪವನ್ನು ಪ್ರವೇಶಿಸಿದನು. ೩೮. ಅನಂತರ ಭರದ್ವಾಜಮುನಿಯು ದೇವಲೋಕದ ಕಾಮಧೇನುವನ್ನು ಸ್ಮರಿಸಿದನು. ಸಮಸ್ತ ಐಶ್ವರ್ಯ ಇಳಿದುಬಂದಿತು. ಸೈನ್ಯದ ಅಳತೆಗೆ ತಕ್ಕಂತೆ ಸಮಸ್ತರಿಗೂ ಪಾಳಯ ಏರ್ಪಟ್ಟಿತು. ಸೊಗಸಾದ ಊಟ, ಗಂಧ, ಹೂವು, ವಸ್ತ್ರ, ಒಡವೆಗಳಿಂದ ರಾಮನೂ ಸೇರಿದಂತೆ ಸಮಸ್ತಸೈನ್ಯವನ್ನು ಸತ್ಕರಿಸಿದನು. ೩೯. ಅಷ್ಟರಲ್ಲಿ ಆಂಜನೇಯನು ಬಂದು ಬೆಂಕಿಯನ್ನು ಪ್ರದಕ್ಷಿಣೆಮಾಡುತ್ತಿರುವ ಭರತರಾಜನ ಭಕ್ತಿಯನ್ನು ಕಂಡು ಚೆನ್ನಾಯಿತು ಎನ್ನುತ್ತ ಅವನ ಕೈಯನ್ನು ಹಿಡಿದುಕೊಂಡನು. "ಬೆಂಕಿಗೆ ಬೀಳಬೇಡ, ಭಗೀರಥ

ರಾಮ ಬಂದನು ಸಕಲ ಜಗದಭಿ । ರಾಮ ಬಂದನು ರಿಪುರಣೋತ್ಸವ
ಭೀಮ ಬಂದನು ಜಾನಕಿಯ ನಯನೋತ್ಪಲಾನಂದ
ಸೋಮ ಬಂದನು ಬಂಧುಜನಸು । ಪ್ರೇಮ ಬಂದನು ಸಕಲ ಗುಣಗಣ
ಧಾಮ ಬಂದನು ಭರತ ಚಿತ್ತೈಸೆಂದನಾ ಹನುಮ ೪೦

ಅದೆ ಕುಬೇರವಿಮಾನ ಕೈಲಾ । ಸದವೊಲೀಕ್ಷಿಸು ಪುಷ್ಪಕದ ಮ
ಧ್ಯದಲಿ ಬಹಳಚ್ಛತ್ರಚಾಮರ ಧ್ವಜಪತಾಕೆಗಳ
ಹೊದಜಿನಲಿ ಹೊಳೆಹೊಳೆವ ಮಣಿಪೀ । ಠದಲಿ ಕುಳ್ಳಿರ್ದಾತ ನಿನ್ನಯ
ಹೃದಯವಲ್ಲಭ ರಾಘವೇಶ್ವರನೀಗ ನೋಡೆಂದ ೪೧

ಹನುಮನೆಂಬಭಿಧಾನವೆನ್ನದು । ಮನದೊಳಳಿ ಸಂಶಯವನಕ್ಷಮ
ವನು ನಿವಾರಿಸು ನೋಡು ದಕ್ಷಿಣ ದಿಗುವಿಭಾಗವನು
ಎನೆ ನಿರೀಕ್ಷಿಸೆ ಮೇಘಗತಿಯಲಿ । ಘನಪಥದೊಳೈತಂದುದಾ ಪುರ
ಜನವು ಗುಡಿಗಟ್ಟಿದುದು ಗಮನಕೆ ರಾಘವೇಶ್ವರನ ೪೨

ಚಳಗತಿಯ ಚಾಪಳತುರಂಗಾ । ವಳಿಯ ಚಟುಳಧ್ವನಿಯ ಪಕ್ಷದ
ಲುಳಿಯ ಪವನನ ಮಣಿಮಯದ ಚಕ್ರಗಳ ಚೀತ್ಕೃತಿಯ
ಥಳಥಳಿಪ ಹೊಂಬೆಸದ ಸೌಧಾ । ವಳಿಯ ದಿವ್ಯವಿಮಾನ ಗಗನದಿ
ನಿಳಿದುದವನೀತಳಕೆ ನಂದಿಗ್ರಾಮ ಸೀಮೆಯಲಿ ೪೩

ವಂಶದ ಅರಸ ರಾಮನು ಬಂದನು" ಎಂದ ಹನುಮಂತ. ೪೦. "ರಾಮ ಬಂದ, ಸಕಲ ಲೋಕಸುಂದರ ರಾಮ ಬಂದ, ಶತ್ರುಗಳ ಯುದ್ಧದ ಉತ್ಸಾಹೀ ಬಲಶಾಲಿ ಬಂದ, ಜಾನಕಿಯ ಕಣ್ಣುಗಳೆಂಬ ನೈದಿಲೆಗೆ ಸಂತೋಷಕರನಾದ ಚಂದ್ರ ಬಂದ, ಬಂಧುಪ್ರಿಯ ಬಂದ, ಸಕಲಗುಣಗಳ ನಿವಾಸ ಬಂದ, ಭರತ ಆಲಿಸು" ಎಂದ ಹನುಮಂತ. ೪೧. "ಆಗೋ ಅದು ಕೈಲಾಸದಂತಿರುವ ಕುಬೇರನ ವಿಮಾನ. ಆ ಪುಷ್ಪಕವಿಮಾನದ ಮಧ್ಯದಲ್ಲಿ ಛತ್ರ ಚಾಮರ ಧ್ವಜ ಬಾವುಟಗಳ ಗುಂಪಿನ ನಡುವೆ ಹೊಳೆಯುವ ರತ್ನಪೀಠದಲ್ಲಿ ಕುಳಿತಿರುವವನು ನಿನ್ನ ಹೃದಯದ ಪ್ರಭು ರಾಘವೇಶ್ವರ. ಅವನನ್ನು ಈಗ ನೋಡು" ಎಂದ ಹನುಮಂತ. ೪೨. "ಹನುಮಂತನೆಂದು ನನ್ನ ಹೆಸರು. ಮನಸ್ಸಿನ ಸಂಶಯವನ್ನು ತೆಗೆದುಹಾಕು, ಸೈರಣೆಯನ್ನು ತಂದುಕೋ. ದಕ್ಷಿಣದಿಕ್ಕಿನ ಕಡೆಯನ್ನು ನೋಡು" ಎಂದು ಹನುಮಂತನು ಹೇಳಿದನು. ಆಗ ಭರತನು ನೋಡಲು ಮೋಡದ ವೇಗದಲ್ಲಿ ಆಕಾಶದ ಮೂಲಕ ವಿಮಾನವು ಬಂದಿತು. ರಾಘವೇಶ್ವರನ ಬರುವಿಕೆಯನ್ನು ಕಂಡು ಪುರಜನರು ಹರ್ಷಿಸಿದರು. ೪೩. ಚುರುಕುನಡೆಯ ಚಂಚಲ ಕುದುರೆಗಳ ಗೊರಸಂಗಳ ಧ್ವನಿ, ರೆಕ್ಕೆಗಳಿಂದೆದ್ದ ಬಿರುಸಿನ ಗಾಳಿ, ರತ್ನದ ಚಕ್ರಗಳ ಚೀತ್ಕಾರ ಶಬ್ದ, ಚಿನ್ನದ ಕುಸುರಿಕೆಲಸಮಾಡಿದ ಉಪ್ಪರಿಗೆ–ಇವುಗಳಿಂದ ಕೂಡಿದ ದಿವ್ಯವಿಮಾನವು ನಂದಿಗ್ರಾಮದ ಎಲ್ಲೆಯಲ್ಲಿ ಆಕಾಶದಿಂದ ಭೂಮಿಗಿಳಿಯಿತು.

# ಐವತ್ತೈದನೆಯ ಸಂಧಿ

ಸೂಚನೆ ॥ ರಾಜ ರಾಜಾಧೀಶ ರಘುಕುಲ । ರಾಜ ಪರಮೇಶ್ವರನು ನಿಮಿಕುಲ
ರಾಜನಂದನೆ ಸಹಿತ ರಾಜ್ಯಂಗೈದನೊಲವಿನಲಿ

ಮಣಿಖಚಿತ ಜಾಂಬೂನದ ಮರು । ದ್ಗಣದ ಕೋಟಾವಳಿಯುದುರು ಭಾ
ರಣೆಯ ಮುಖಶಾಲೆಗಳ ಮುಗಿಲಟ್ಟಳೆಯ ಗೋಪುರದ
ಘೃಣವಿಕೀರ್ಣ ಸುರತ್ನಮಯ ಕೇ । ವಣದ ಕಲಶವ್ರಜದ ಕೇತನ
ಗಣದ ವರ ಸಾಕೇತನಗರವ ಕಂಡುದಖಿಳಜನ ೧

ಸೀತೆ ನೋಡು ಮದೀಯನೃಪ ಸಾ । ಕೇತಪುರವನು ನಮ್ಮ ಮೂವರು
ಮಾತೆಯರ ಸಂದರುಶನವು ನಮಗಿಂದಲೇಯೆನುತ
ವೀತರಾಗದ್ವೇಷರಹಿತನ । ಜಾತಶತ್ರು ಬಳಿಕ್ಕ ಸತಿ ಸಹ
ಜಾತ ಸಹಿತಾ ವರವಿಮಾನವನಿಳಿದನೊಲವಿನಲಿ ೨

ಮನದ ಮಹದುತ್ಸವದಿ ಮೂವರು । ಜನನಿಯರು ಗುರುಮಂತ್ರಿಗಳು ಪುರ
ಜನವು ಬಾಂಧವಜನ ಸಹಿತ ಪರಿಜನದ ಗಡಣದಲಿ
ಕನಕದರ್ಪಣ ಕಲಶದಬಲಾ । ಜನದ ತೂರ್ಯತ್ರಯದ ನೃಪವಾ
ಹನದ ಸೌರಂಭದಲಿ ಭರತನೃಪಾಲನೈತಂದ ೩

ಸೂಚನೆ॥ ರಾಜ, ರಾಜಾಧಿರಾಜ, ರಘುಕುಲರಾಜ ಪರಮೇಶ್ವರನು ನಿಮಿಕುಲ ರಾಜಕುಮಾರಿಯೊಡನೆ ಸಂತೋಷದಿಂದ ರಾಜ್ಯಭಾರ ಮಾಡಿದನು. ೧. ರತ್ನಖಚಿತ ವಾದ ಚಿನ್ನದ ದೇವಾಲಯಗಳ, ಕೋಟೆಗಳ ಮೊಗಸಾಲೆಗಳ, ಮುಗಿಲಟ್ಟಣೆಯ ಗೋಪುರಗಳ, ಕಿರಣಗಳನ್ನೆರಚುವ ರತ್ನಗಳನ್ನು ಮೆಟ್ಟಿದ ಕಲಶಗಳ, ಬಾವುಟಗಳ ಸಾಕೇತನಗರವನ್ನು ಸಮಸ್ತಜನರೂ ಕಂಡರು. ೨. "ಸೀತೆ ನೋಡು, ನಮ್ಮ ರಾಜಧಾನಿ ಸಾಕೇತಪುರವನ್ನು ನಮ್ಮ ಮೂವರು ತಾಯಂದಿರ ದರ್ಶನ ನಮಗೆ ಇಂದು ದೊರೆಯು ವುದಲ್ಲವೇ" ಎನ್ನುತ್ತ ಪ್ರೀತಿದ್ವೇಷಗಳನ್ನು ತ್ಯಜಿಸಿದ ಅಜಾತಶತ್ರು ರಾಮನು ಹೆಂಡತಿ ಮತ್ತು ತಮ್ಮ ಇವರೊಡನೆ ಆನಂದದಿಂದ ವಿಮಾನವನ್ನಿಳಿದನು. ೩. ಮೂವರು ತಾಯಂದಿರು, ಗುರುಗಳು, ಮಂತ್ರಿಗಳು, ಪುರಜನರು ಮತ್ತು ಬಾಂಧವರುಗಳೊಡ ಗೂಡಿ ಪರಿವಾರದ ಜನರ ಗುಂಪಿನ ನಡುವೆ ಚಿನ್ನದ ಕನ್ನಡಿ ಕಲಶಗಳನ್ನು ಹಿಡಿದ ಸ್ತ್ರೀ ಯರು ಮತ್ತು ನೃತ್ಯ ಗೀತ ವಾದ್ಯಗಳ ಸಮೇತ ರಾಜಯೋಗ್ಯ ವಾಹನಗಳನ್ನು ತೆಗೆದು

ಜಲರುಹಾಕ್ಷನ ಮೂರ್ತಿಯನು ಕಂ । ಗಳಲಮರ್ಚೆ ನೃಪಾಲ ಪುಷ್ಪಾಂ
ಜಲಿಗೆದಱಿ ಮೈಯಿಕ್ಕಿದನು ಭಯಭರಿತ ಭಕ್ತಿಯಲಿ
ಬಳಿಕ ರಾಘವರಾಯನಾ ಕೌ । ಸಲೆ ಸುಮಿತ್ರಾದೇವಿ ಕೈಕಾ
ಲಲನೆಯರಿಗೆಱಗಿದನು ಕಾಣಿಕೆಯಿತ್ತು ಹರುಷದಲಿ ೪

ಗುರುವಸಿಷ್ಠನ ವಾಮದೇವನ । ವರಮುನಿಪ ಜಾಬಾಲಿಯಂಘ್ರಿಗೆ
ದರುಶನವ ನೀಡಿದನು ವಿನಮಿತನಾಗಿ ವಿನಯದಲಿ
ಭರತ ಶತ್ರುಘ್ನರನು ಕಂಗಳ । ಲುರುಳುವಶ್ರುಕಣಾಳಿಗಳ ಕಾ
ಹುರತೆಯಲಿ ಬಿಗಿಯಪ್ಪಿ ಬಳಿಕಿಂತೆಂದನಾ ರಾಮ ೫

ನಲುಗಿದಿರಿ ಹಿರಿದಾಗಿ ಜಡೆ ವ । ಲ್ಕಲ ಫಲಾಶನದಿಂದ ವಿಧಿ ಬೇ
ರುಳರೆ ತನ್ನಿಂದಾದುದೀಯಾಪತ್ತು ನಿಮಗೆಂದು
ತಲೆದಡವಿ ತನ್ನನುಜರಕ್ಷಿಯ । ಜಲವ ಸೆಱಗಿನೊಳೊರಸಿ ಸಚಿವರ
ಬಳಿಕ ಕಾಣಿಸಿಕೊಂಡು ಮನ್ನಿಸಿದನು ನಯೋಕ್ತಿಯಲಿ ೬

ಕೇಳಿದೈ ಕುಶ ನಿಮ್ಮ ಮಾತೆಯ । ಮೇಲಣಕ್ಕಱಿತನದಿ ಕೌಸಲೆ
ಬೀಳುವಂಬಕಜಲದಿನಂಘ್ರಿಗೆ ನಮಿಸಿದಂಗನೆಯ
ತೋಳುಗಳ ಹಿಡಿದೆತ್ತಿ ಘನಪುಳ । ಕಾಳಿಗಳಲಪ್ಪಿದಳು ಹರಸಿದ
ರೀಳೆಗೆಯ ಹರುಷದಲಿ ಮಾತೆಯರೂರ್ಮಿಳಾಪತಿಯ ೭

ಕೊಂಡು ಭರತರಾಜನು ಸಂಭ್ರಮದಿಂದ ಬಂದನು. ೪. ಕಮಲನಯನ ರಾಮನ ಮೂರ್ತಿಯನ್ನು ಕಣ್ಣುಗಳಿಂದ ಅಪ್ಪಿ ಭರತನು ಬೊಗಸೆಯಿಂದ ಹೂವನ್ನೆರಚಿ ಭಯಭರಿತ ಭಕ್ತಿಯಿಂದ ಕಾಲಿಗೆಬಿದ್ದನು. ಅನಂತರ ರಾಘವರಾಯನು ಕೌಸಲ್ಯೆ, ಸುಮಿತ್ರಾದೇವಿ, ಕೈಕೆಯರುಗಳ ಕಾಲಿಗೆ ನಮಸ್ಕರಿಸಿ ಹರ್ಷದಿಂದ ಕಾಣಿಕೆಯಿತ್ತನು. ೫. ರಾಮನು ಗುರುವಸಿಷ್ಠ, ವಾಮದೇವ, ಜಾಬಾಲಿಗಳನ್ನು ಕಂಡು ಅವರ ಪಾದಗಳಿಗೆ ವಂದಿಸಿದನು. ಕಣ್ಣುಗಳಿಂದ ಧಾರಾಕಾರವಾಗಿ ಕಣ್ಣೀರು ಸುರಿಸುತ್ತಿದ್ದ ಭರತ ಶತ್ರುಘ್ನರನ್ನು ಉದ್ವೇಗದಿಂದ ರಾಮನು ಅಪ್ಪಿಕೊಂಡನು. ಅನಂತರ ರಾಮನು ಮುಂದಿನಂತೆ ಅವರಿಗೆ ಹೇಳಿದನು. ೬. "ಜಡೆ, ನಾರುಬಟ್ಟೆ, ಹಣ್ಣುಗಳ ಆಹಾರ ಇವುಗಳಿಂದ ತುಂಬ ಸೊರಗಿದ್ದೀರಿ. ವಿಧಿ ಬೇರೆ ಇದ್ದರೂ ನನ್ನಿಂದ ನಿಮಗೆ ಈ ಆಪತ್ತಾಯಿತು" ಎಂದು ತಮ್ಮಂದಿರ ತಲೆ ದಡವಿ ಅವರ ಕಣ್ಣೀರನ್ನು ತನ್ನ ವಸ್ತ್ರದ ಸೆರಗಿನಿಂದ ಒರಸಿದನು. ಅನಂತರ ರಾಮನು ಮಂತ್ರಿಗಳಿಗೆ ದರ್ಶನ ಕೊಟ್ಟು ಅವರನ್ನು ನಯವಾದ ಮಾತುಗಳಿಂದ ಗೌರವಿಸಿದನು. ೭. ಕೇಳಿದೆಯಾ ಕುಶ, ಕಣ್ಣೀರು ಸುರಿಸುತ್ತ ಪಾದಗಳಿಗೆ ನಮಿಸಿದ ನಿಮ್ಮ ತಾಯಿಯ ಮೇಲಿನ ಅಕ್ಕರೆಯಿಂದ ಕೌಸಲ್ಯೆಯು ತೋಳುಗಳನ್ನು ಹಿಡಿದೆತ್ತಿ ರೋಮಾಂಚಗೊಳ್ಳುತ್ತ ಸೀತೆಯನ್ನು ಅಪ್ಪಿಕೊಂಡಳು. ಊರ್ಮಿಳೆಯ ಗಂಡನನ್ನು ತಾಯಂದಿರು ಆನಂದಾತಿ

ಲವನೆ ಕೇಳ್ಕೆ ಬಳಿಕಲಾ ನಾ । ಲ್ವರಿಗಾಯ್ತು ಜಟಾವಿಸರ್ಜನ
ವವಿರಳದ ಸಂಭ್ರಮದಿ ಮಜ್ಜನವಾಯ್ತು ಮಂಗಳದ
ವಿವಿಧ ರತ್ನಾಭರಣದಲಿ ನವ । ನಿವಸನದ ಲೇಪನದಲಮಳೋ
ತ್ಸವದ ತಾಳ್ದರು ಮುನಿಗಳಾಶೀರ್ವಾದ ಘೋಷದಲಿ ೮

ಬಂದುದಾಕ್ಷಣ ದಶವರೂಥ । ಸ್ಯಂದನವು ರಘುಪತಿಗೆ ದಿವಿಜರ
ದುಂದುಭಿಯ ನಿರ್ಘೋಷದಲಿ ಮುನಿಜನದ ಹರುಷದಲಿ
ಸಂದಣಿಯ ಸೌರಂಭದಲಿ ಪೂ । ರ್ಣೇಂದುಮುಖಿಸಹಿತೇಱಿದನು ಸುರ
ವೃಂದ ಜಯಜಯಯೆನಲು ಮೊಳಗುವ ವಾದ್ಯಘೋಷದಲಿ ೯

ಬಳಿಕ ರಾಘವರಾಯನಾಜ್ಞೆಯ । ಲಿಳಿದು ಸುಗ್ರೀವಾದಿ ಸುಭಟಾ
ವಳಿಗಳಡರಿದರಿಭ ವರೂಥ ಸುಘೋಟಕಾವಳಿಯ
ಉಳಿದು ಕಪಿರೂಪಕವನಮರಾ । ವಳಿಯ ಮುನ್ನಿನ ಮೂಲಮೂರ್ತಿಯ
ತಳೆದು ವೀರವಿಭೀಷಣಾಸುರ ಸಹಿತ ನಲವಿನಲಿ ೧೦

ವರ ಸುಮಂತಕ ತುರಗವನು ಚ । ಪ್ಪರಿಸಿದನು ಸೂತತ್ವದಲಿ ಚಾ
ಮರವನಿಕ್ಕಿದನಿದ್ದೆ ಸೆಯಲಾ ಭರತ ರಘುಪತಿಯ
ಧರಿಸಿದನು ಬೆಳುಗೊಡೆಯನೂರ್ಮಿಳೆ । ಯರಸನಾ ಶತ್ರುಘ್ನನುರು ಬಂ
ಧುರದ ಹಡಪದ ಹೆಗಲಲೆಸೆದನು ಕುಶನೆ ಕೇಳೆಂದ ೧೧

ಶಯದಿಂದ ಹರಸಿದರು. ೮. ಲವನೆ, ಕೇಳು. ಅನಂತರ ರಾಮ ಲಕ್ಷ್ಮಣ ಭರತ ಶತ್ರುಘ್ನರು ಜಟೆಯನ್ನು ವಿಸರ್ಜಿಸಿದರು. ನಿರಂತರ ಸಂಭ್ರಮದಿಂದ ನಾಲ್ವರಿಗೂ ಮಂಗಳಸ್ನಾನವಾಯಿತು. ವಿಧವಿಧವಾದ ರತ್ನಾಭರಣಗಳನ್ನು ಧರಿಸಿ ಹೊಸವಸ್ತ್ರಗಳನ್ನುಟ್ಟು ಮೈಗೆ ಗಂಧವನ್ನು ಪೂಸಿಕೊಂಡ ನಾಲ್ವರೂ ಮುನಿಗಳ ಆಶೀರ್ವಾದವಾಣಿಯಿಂದ ಹರ್ಷಗೊಂಡರು. ೯. ಆ ಕ್ಷಣದಲ್ಲಿ ದಶರಥನ ರಥವು ರಾಮನ ಬಳಿಗೆ ಬಂದಿತು. ದೇವತೆಗಳ ನಗಾರಿಯು ಭೋರ್ಗರೆಯುತ್ತಿರಲು ಋಷಿಮುನಿಗಳು ಹರ್ಷಿತರಾಗಿರಲು ಸಂಭ್ರಮದಿಂದ ಸೀತೆಯೊಡಗೆ ರಾಮನು ರಥವನ್ನೇರಿದನು. ವಾದ್ಯಗಳ ಶಬ್ದದೊಡನೆ ದೇವತೆಗಳು ಜಯಜಯ ಎಂದು ಘೋಷಿಸಿದರು. ೧೦. ಅನಂತರ ರಾಘವ ರಾಮನ ಆಜ್ಞೆಯಿಂದ ಸುಗ್ರೀವನೇ ಮೊದಲಾದ ವೀರರು ಪುಷ್ಪಕವಿಮಾನದಿಂದ ಇಳಿದುಬಂದ[illegible], ರಥ ಮತ್ತು ಉತ್ತಮ ಕುದುರೆಗಳನ್ನೇರಿದರು. ಕಪಿಗಳು ತಮ್ಮ ಕಪಿರೂಪವನ್ನು [illegible]ಜಿಸಿ ಮೊದಲಿನ ತಮ್ಮ ದೇವರೂಪವನ್ನು ತಳೆದು ವೀರವಿಭೀಷಣಾಸುರನೊಡನೆ [illegible]ಗ್ಗಿನಿಂದ ಬಂದರು. ೧೧. ಸುಮಂತ್ರನು ಕುದುರೆಯ ಬೆನ್ನು ಚಪ್ಪರಿಸಿ ಸಾರಥಿಯಾಗಿ ರಥವನ್ನು ನಡೆಸಿದನು. ಭರತನು ರಘುಪತಿಯ ಎರಡು ಕಡೆಗಳಲ್ಲೂ ಚಾಮರವನ್ನು ಬೀಸಿದನು. ಲಕ್ಷ್ಮಣನು ಬಿಳಿಯ ಕೊಡೆಯನ್ನು ಹಿಡಿದುಕೊಂಡನು. ಶತ್ರುಘ್ನನು ಸುಂದರವಾದ ಎಲೆ ಅಡಿಕೆ ಚೀಲವನ್ನು ಹೆಗಲಿಗೆ ನೇತುಹಾಕಿಕೊಂಡನು.

ಮುಂದೆ ಜೀಯವಧಾರು ಧಿರು ಭಾ । ಪೆಂದು ಕೈಗಂಬಿಗಳಲುಗ್ಘಡ
ದಿಂದ ಹನುಮಾಂಗದರು ಕೆಲಸಾರಿಸಿದರೆಡ ಬಲನ
ಮುಂದೆ ನರ್ತನ ವಾದ್ಯ ವಂದಿಗ । ಳಿಂದ ನೋಟಕಜನದ ಸಂದಣಿ
ಯಿಂದ ಬಿಜಯಂಗೈದು ಹೊಕ್ಕನು ಕೌಸಲಾವತಿಯ ೧೨

ಪರಿಮಳಿಸಿದವು ಬೀದಿ ಬೀದಿಗ । ಳರದೆ ಕುಂಕುಮ ಕಾರಣೆಯು ಕ
ಸ್ತುರಿಯ ನವಸಾರಣೆಯು ಘನಕರ್ಪುರದ ಮಾಲಿಕೆಯು
ಪರಿಮಳಿಪ ಪನ್ನೀರಚಳೆಯುದ । ಭರಿತ ಗುಗ್ಗುಳ ಧೂಪಧೂಮದ
ಲರರೆ ಪವನಾಕರುಷಣದ ಪರುಠವದ ಪಾಳಿಯಲಿ ೧೩

ಥಳಥಳಿಸಿದವು ಮಕರ ತೋರಣ । ಗಳಲಿ ರನ್ನದ ಕನ್ನಡಿಗಳು
ಜ್ವಲಿಸಿದವು ಹೊಂಗಳಶತತಿಯುಪ್ಪರಿಗೆಯಗ್ರದಲಿ
ತಳಿತವಗಲಕೆ ಗುಡಿಗಳುಜಿ[3] ಪದಿ । ತಳಿಸಿದವು ಮಣಿಮಯ ಪತಾಕಾ
ವಳಿ ಸವಿಸಾರ ವಿಹಾರದಲಿ ರಘುಪತಿಯ ಗಮನದಲಿ ೧೪

ಕೇರಿಕೇರಿಯ ತಳಿಗೆದಂಬುಲ । ದಾರತಿಯ ದೂರ್ವಾಕ್ಷತೆಯ ಸುರ
ನಾರಿಯರ ವಾರಾಂಗನೆಯರ ಸುನರ್ತನಾವಳಿಯ
ಭೇರಿ ಶಂಖ ಮೃದಂಗ ಘನ ಕಹ । ಳಾರವದಲೈತಂದು ಹೊಕ್ಕನು
ದಾರ ತೇಜೋಭದ್ರ ಮಣಿಮಯ ರಾಜಮಂದಿರವ ೧೫

೧೨. ಮುಂದುಗಡೆಯಲ್ಲಿ "ಜೀಯ ! ಅವಧಾರು ! ಧಿರು ! ಭಾಪು !" ಎಂದು ಸಾರುತ್ತ ಕೈಗಳಲ್ಲಿ ಕೋಲುಗಳನ್ನು ಹಿಡಿದ ಹನುಮಂತ ಅಂಗದರು ಜನಗಳ ಗುಂಪನ್ನು ಎಡಬಲಗಡೆಗಳಿಗೆ ಸರಿಸಿ ದಾರಿಮಾಡಿದರು. ಎದುರಿನಲ್ಲಿ ನರ್ತನ ನಡೆಯಿತು. ವಾದ್ಯಗಳು ಉಲಿದವು. ಹೊಗಳುಭಟರು ಬಿರುದುಗಳನ್ನು ಕೂಗಿದರು. ಪ್ರೇಕ್ಷಕರ ಗುಂಪಿನ ನಡುವಿನಿಂದ ಮೆರವಣಿಗೆಯಲ್ಲಿ ಬಂದು ರಾಮನು ಕೌಸಲಾವತಿನಗರವನ್ನು ಪ್ರವೇಶಿಸಿದನು. ೧೩. ಬೀದಿಬೀದಿಗಳಲ್ಲಿ ಕುಂಕುಮದ ಕಾರಣೆ ಬರೆದು, ಕಸ್ತೂರಿಯಿಂದ ಸಾರಿಸಿ, ಕರ್ಪೂರದ ರಂಗೋಲಿಯಿಂದ ಮಾಲೆಗಳನ್ನು ಚಿತ್ರಿಸಿ, ಸುವಾಸನೆಯ ಪನ್ನೀರನ್ನು ಚುಮುಕಿಸಿ, ಗುಗ್ಗುಳಧೂಪದ ಹೊಗೆ ಹಾಕಿದರು : ಈ ಎಲ್ಲ ಪರಿಮಳವನ್ನು ಹೊತ್ತ ಗಾಳಿಯು ಎಲ್ಲಕಡೆಗೂ ಬೀಸಿ ಸುವಾಸನೆಯನ್ನು ಬೀರಿತು. ೧೪. ರಾಮನು ಬಂದಾಗ ಕೌಸಲಾವತಿನಗರದ ಬೀದಿಗಳಲ್ಲಿ ಮೀನಿನಾಕೃತಿಯ ಮಕರತೋರಣಗಳಲ್ಲಿ ರತ್ನದ ಕನ್ನಡಿಗಳು ಥಳಥಳಿಸಿದವು ; ಉಪ್ಪರಿಗೆಗಳ ತುದಿಗಳಲ್ಲಿ ಚಿನ್ನದ ಕಲಶಗಳು ಹೊಳೆದುವು : ಬಾವುಟಗಳು ಎಲ್ಲೆಲ್ಲೂ ಶೋಭಿಸಿದವು. ರತ್ನದ ಧ್ವಜಗಳು ಗಾಳಿಗೆ ಹಾರಾಡಿದವು. ೧೫. ಬೀದಿ ಬೀದಿಗಳಲ್ಲಿ ತಟ್ಟೆಗಳ ಆರತಿಯನ್ನೂ ಗರಿಕೆ ಅಕ್ಷತೆಗಳನ್ನೂ ಸ್ವೀಕರಿಸುತ್ತ ರಾಮನು ಬಂದನು. ದೇವತಾಸ್ತ್ರೀಯರೂ ವೇಶ್ಯೆಯರೂ ನರ್ತನಮಾಡುತ್ತಲಿದ್ದರು. ಭೇರಿ, ಶಂಖ, ಮೃದಂಗ, ಕಹಳೆಗಳು ಧ್ವನಿಮಾಡುತ್ತಿದ್ದವು. ಹೀಗೆ ವೈಭವದಿಂದ ಉದಾರ ತೇಜಸ್ಸಿನಿಂದ ಹೊಳೆಯುತ್ತಿದ್ದ ಮಂಗಳಾಂಗ ರಾಮನು

ಸುಳಿದವಾರತಿ ಕರ್ಪುರದ ಪ್ರ । ಜ್ವಲಿಪ ಮಾಣಿಕದೀಪ್ತಿಗಳ ಪಸು
ಗಳವೆಗೂಳಿನ ಬಳುವೆಗಳಲುಪ್ಪುಗಳ ಸೂಸಿಕೆಯ
ಕಳಕಳದೊಳೊಪ್ಪಿದುದು ಪಾರ್ಥಿವ । ನಿಳಯವಲ್ಲಿಂ ಮೇಲೆ ಬೀಡಿಕೆ
ಗಳಿಗೆ ಸುಗ್ರೀವಾದಿ ಬಲ ಬೀಳ್ಕೊಂಡುದೊಲವಿನಲಿ ೧೬

ವಿಮಲಮತಿ ಕುಶ ಕೇಳಿದೈ ಸಂ । ಭ್ರಮಿಸಿದುದು ವೈಶಾಖ ಸಿತ ಸ
ಪ್ತಮಿಯ ದಿನ ಮೂರ್ಧಾಭಿಷೇಚನರಚನೆ ರಘುಪತಿಗೆ
ಅಮರತತಿ ನೆರೆದುದು ವಸಿಷ್ಠ । ಪ್ರಮುಖರೊಗ್ಗಾಯ್ತುದಧಿ ಸೀಮಾ
ಪ್ರಮಿತ ಪಾರ್ಥಿವನಿಕರ ಕೂಡಿತು ಪಟ್ಟಕವನಿಪನ ೧೭

ವರಶುಭೋದಯ ಲಗ್ನದಲಿ ಶಂ । ಕರ ವಿರಿಂಚಿ ಸುರೇಂದ್ರ ಮುಖ್ಯಾ
ಮರರ ಸಂದಣಿ ಮಿಗಿಲು ಸುರನಾರಿಯರ ಸಂಭ್ರಮದ
ಸುರಮುನೀಂದ್ರರ ವೇದಘೋಷದ । ಲರಸುತನದಭಿಷೇಕ ಮಿಗೆ ವಿ
ಸ್ತರಿಸಿದುದು ರಾಮಂಗೆ ಸುಗ್ರೀವಾದಿಗಳು ನಲಿಯೆ ೧೮

ಕಾಣಿಕೆಯ ಬಳಿಕಿತ್ತರಜಗವ । ಪಾಣಿ ವಾಣೀನಾಥರಾ ಗೀ
ರ್ವಾಣಪತಿ ಧನಪತಿ ಹುತಾಶನ ಮುಖ್ಯ ದಿಗಧಿಪರು
ಕ್ಷೋಣಿಯಳತೆಯ ಮಿಕ್ಕ ರಾಜ । ಶ್ರೇಣಿ ಪರಿಪುರಜನಗಳುತ್ತಮ
ನಾಣೆಯವ ನೀಡಿದರು ದರುಶನಕವನಿಜೇಶ್ವರನ ೧೯

ರತ್ನದ ಅರಮನೆಯನ್ನು ಪ್ರವೇಶಿಸಿದನು. ೧೬. ಎತ್ತುವ ಕರ್ಪೂರದಾರತಿಗಳ ಮತ್ತು ಬೆಳಗುವ ಮಾಣಿಕ್ಯದೀಪಗಳ ಕಾಂತಿಯಿಂದಲೂ ಹಸುರನ್ನದಿಂದ ನಿವಾಳಿಸುವ ಮತ್ತು ಉಪ್ಪನ್ನು ತಳಿಯುವ ಕಲ ಕಲ ಶಬ್ದದಿಂದಲೂ ಅರಮನೆಯು ರಂಜಿಸಿತು. ತರುವಾಯ ಸುಗ್ರೀವಾದಿ ವೀರರು ರಾಮನ ಅಪ್ಪಣೆ ಪಡೆದು ತಮ್ಮ ತಮ್ಮ ಬೀಡು ಗಳಿಗೆ ಹೋದರು. ೧೭. ಬುದ್ಧಿಶಾಲಿ ಕುಶ ಕೇಳಿದೆಯಾ, ವೈಶಾಖ ಶುಕ್ಲ ಸಪ್ತಮಿಯ ದಿವಸ ರಾಮನಿಗೆ ಪಟ್ಟಾಭಿಷೇಕ ಮಹೋತ್ಸವದ ಸಡಗರ ಆರಂಭ ವಾಯಿತು. ರಾಮನ ಪಟ್ಟಾಭಿಷೇಕೋತ್ಸವಕ್ಕೆ ದೇವತೆಗಳು ಬಂದು ಸೇರಿದರು, ವಸಿಷ್ಠನೇ ಮೊದಲಾದ ಪ್ರಮುಖರು ಬಂದರು, ರಾಜರ ಸಮೂಹ ಆಗಮಿಸಿತು. ೧೮. ಶುಭಲಗ್ನದಲ್ಲಿ ಶಿವ, ಬ್ರಹ್ಮ, ದೇವೇಂದ್ರ ಮೊದಲಾದ ಮುಖ್ಯ ದೇವತೆ ಗಳ ಎದುರಿನಲ್ಲಿ, ದೇವತಾಸ್ತ್ರೀಯರ ಸಂಭ್ರಮದ ನಡುವೆ, ದೇವ ಋಷಿಗಳ ವೇದಘೋಷದೊಡನೆ ರಾಮನಿಗೆ ರಾಜ್ಯಾಭಿಷೇಕವು ನೆರವೇರಿತು. ಸುಗ್ರೀವನೇ ಮೊದಲಾದವರು ಆನಂದಿಸಿದರು. ೧೯. ಬಳಿಕ ಪಿನಾಕಪಾಣಿ ಶಿವ ಬ್ರಹ್ಮರು ಮತ್ತು ದೇವೇಂದ್ರ, ಕುಬೇರ, ಅಗ್ನಿ ಮೊದಲಾದ ದಿಕ್ಕಿನ ಪ್ರಭುಗಳು ರಾಮನಿಗೆ ಕಾಣಿಕೆಯನ್ನು ಕೊಟ್ಟರು. ಭೂಮಂಡಲದ ರಾಜರುಗಳು, ಪರಿಜನ, ಪುರಜನರು

ಬಲದಲೀಶ್ವರನೆಡದಲಬ್ಜಜ । ರೊಲಿದು ಮಣಿಮಯ ಭದ್ರಪೀಠಂ
ಗಳಲಿ ಕುಳ್ಳಿದರುಭಯಪಾರ್ಶ್ವದ ಸಾಲ ವೀಥಿಯಲಿ
ಬಲವಮಥನ ಶಿಖಿ ಯಮ ನಿಶಾಚರ । ಜಲಧಿಪತಿ ಪವಮಾನ ಧನಪತಿ
ಜಲರುಹಪ್ರಿಯ ಸೋಮ ಭೌಮಾದಿಗಳು ರಂಜಿಸಿತು ೨೦

ಸನಕ ನಾರದ ಭೃಗು ಭರದ್ವಾ । ಜನು ಮರೀಚಿ ಮತಂಗ ದುರ್ವಾ
ಸನು ಪುಲಸ್ತ್ಯನು ವಿಶ್ವವಸು ಜಮದಗ್ನಿ ಜಾಬಾಲಿ
ವಿನುತ ವಿಶ್ವಾಮಿತ್ರಮುನಿ ಜೈ । ಮಿನಿಯಗಸ್ತ್ಯ ಮೃಕಂಡು ಕಶ್ಯಪ
ರೆನಿಪ ದಿವ್ಯ ಮುನೀಂದ್ರರೆಸೆದರು ಹಿಂದೆ ರಘುಪತಿಯ ೨೧

ಗುರುವಸಿಷ್ಠನು ವಾಮದೇವನು । ಮೆರೆದರುಭಯ ಸುಪಾರ್ಶ್ವದಲಿ ಕಿ
ನ್ನರರು ಸಿದ್ಧರು ಸಾಧ್ಯ ವಸು ಗಂಧರ್ವ ದೇವಗಣ
ಕರಯುಗಂಗಳ ಮುಗಿದು ದೇವನ । ಸರಿಸದಲಿ ದೂರದಲಿ ಜಯವಿ
ಸ್ತರಣ ವಚನಗಳಿಂದ ನಿಂದಿರ್ದರು ಸರಾಗದಲಿ ೨೨

ವೀರಭಟ ಸುಗ್ರೀವ ಜಾಂಬವ । ಮಾರುತಾತ್ಮಜ ವಾನರೇಂದ್ರ ಕು
ಮಾರ ನೀಲ ಸುಷೇಣ ನಳ ಗಜ ಗಂಧಮಾದನರು
ಸಾರತರ ಸಾಲೆಸೆದುದಾ ಸುರ । ಪಾರಿಕಾಂಕ್ಷಿಗಳುಭಯದಲಿ ರಘು
ವೀರನನುಜರು ಮೆರೆದರಿದಿರಲಿ ಕರದ ಕಂಬಿಯಲಿ ೨೩

ರಾಜಾರಾಮನಿಗೆ ಉತ್ತಮ ಕಾಣಿಕೆಗಳನ್ನು ಒಪ್ಪಿಸಿ ದರ್ಶನ ಪಡೆದರು. ೨೦. ರಾಜಾರಾಮನ ಬಲಗಡೆಯಲ್ಲಿ ಈಶ್ವರ ಎಡದಲ್ಲಿ ಬ್ರಹ್ಮ ಇವರು ಮಣಿಖಚಿತ ಮಂಗಳಪೀಠಗಳಲ್ಲಿ ಕುಳಿತರು. ಇಂದ್ರ, ಅಗ್ನಿ, ಯಮ, ನೈರ್ಋತಿ, ವರುಣ, ವಾಯು, ಕುಬೇರ, ಸೂರ್ಯ, ಚಂದ್ರ, ಕುಜ ಮೊದಲಾದವರು ಶ್ರೀರಾಮನ ಎರಡೂ ಪಕ್ಕಗಳಲ್ಲಿ ಸಾಲಾಗಿ ಕುಳಿತರು. ೨೧. ಸನಕ, ನಾರದ, ಭೃಗು, ಭರದ್ವಾಜ, ಮರೀಚಿ, ಮತಂಗ, ದುರ್ವಾಸ, ಪುಲಸ್ತ್ಯ, ವಿಶ್ವವಸು, ಜಮದಗ್ನಿ, ಜಾಬಾಲಿ, ವಿಶ್ವಾಮಿತ್ರ, ಜೈಮಿನಿ, ಅಗಸ್ತ್ಯ, ಮೃಕಂಡು, ಕಶ್ಯಪ ಮೊದಲಾದ ದಿವ್ಯ ಮಹರ್ಷಿಗಳು ರಘುಪತಿಯ ಹಿಂದೆ ಶೋಭಿಸಿದರು. ೨೨. ರಾಮನ ಎರಡು ಪಾರ್ಶ್ವಗಳಲ್ಲಿ ಗುರುವಸಿಷ್ಠ ಮತ್ತು ವಾಮದೇವ ಇವರು ನಿಂತರು. ಕಿನ್ನರರು, ಸಿದ್ಧರು, ಸಾಧ್ಯರು, ವಸುಗಳು, ಗಂಧರ್ವರು, ದೇವಗಣಗಳು ಕೈಗಳನ್ನು ಮುಗಿದುಕೊಂಡು ರಘುರಾಮನ ಎದುರಿಗೆ ದೂರದಲ್ಲಿ ನಿಂತುಕೊಂಡು ಸಂತೋಷದಿಂದ ಜಯಘೋಷ ಮಾಡುತ್ತಿದ್ದರು. ೨೩. ರಾಘವನ ಎರಡು ಬದಿಗಳಲ್ಲಿ ವೀರಸುಗ್ರೀವ, ಜಾಂಬವ, ಹನುಮಂತ, ಸುಗ್ರೀವ, ಅಂಗದ, ನೀಲ, ಸುಷೇಣ, ನಳ, ಗಜ, ಗಂಧಮಾದನರುಗಳು ಸಾಲಾಗಿ ನಿಂತರು. ದೇವಮುನಿಗಳು ಎರಡು ಕಡೆಯೂ ಇದ್ದರು. ರಘುವೀರನ ತಮ್ಮಂದಿರು ಕೈಗಳಲ್ಲಿ

ಚಾರು ಚಾಮರಗಳನು ಚಿಮ್ಮಿದ । ರಾ ರಮಾಧೀಶಂಗೆ ಲಲಿತ
ಸ್ಮೇರ ವದನದ ಥಾಳಿಸುವ ಕಂಗಳ ವಿಲಾಸದಲಿ
ತೋರವೊಲೆಗಳ ತೋಳ ಹೊಗರಿನ । ಭೂರಿಭೂಷಣದನುಪಮಾಂಬರ
ಸಾರ ಸೌರಭದೇಳ್ಗೆಯಲಿ ರಂಭಾದಿ ನಾರಿಯರು ೨೪

ಎಸೆದುದೋಲಗವಮಮ ಪೂರ್ವದ । ದೆಸಕಕಿಮ್ಮಿಗಿಲಾಗಿ ಬಳಿಕೂ
ರ್ವಶಿಯ ನರ್ತನ ಚಿತ್ರರಥನ ಮೃದಂಗ ಮೃದುಸಬುದ
ಹೊಸಪರಿಯ ಗೀತಗಳ ಗಂಧ । ರ್ವಸತಿಯರ ತುಂಬುರನ ವೀಣೆಯ
ಕೊಸರಿಕೆಯ ಕಳಕಳದಿ ರಂಜಿಸಿತಾ ಸಭಾಸ್ಥಾನ ೨೫

ವಾಮದಂಕದ ಮೇಲೆ ಸೀತಾ । ರಾಮೆ ರಂಜಿಸಿದಳು ದಿವೌಕಸ
ಭಾಮಿನಿಯರಾರತಿಯ ನಲಿದೆತ್ತಿದರು ಸರಿಸದಲಿ
ಭೂಮಿಜಾಸುತ ಕೇಳಗಸ್ತ್ಯಮ । ಹಾ ಮುನೀಶ್ವರನಖಿಳ ಸುಮನ
ಸ್ತೋಮ ಮಧ್ಯದಲೆದ್ದು ಬಿನ್ನೈಸಿದನು ರಾಮಂಗೆ ೨೬

ಆರು ಗೆಲಬಾರದ ಜಗತ್ರಯ । ವೀರನನು ವಿಬುಧಾರಿಯನು ಸ
ತ್ಕ್ರೂರನನು ದುಷ್ಟನ ದುರಾತ್ಮನ ಗೆಲಿದು ರಕ್ಷಿಸಿದೆ
ಧಾರುಣಿಯ ಶಿಷ್ಟರನು ಮುನಿವೃಂ । ದಾರಕಾಮ್ನಾಯವನು ನಿನಗಿ
ನ್ನಾರು ಸರಿ ಸುರನರಭುಜಂಗರೊಳೆಂದು ಮುನಿ ನುಡಿದ ೨೭

ದಂಡಗಳನ್ನು ಹಿಡಿದು ಎದುರುಗಡೆಯಲ್ಲಿ ಮೆರೆದರು. ೨೪. ಮಂದಹಾಸ ಬೀರುವ ಮನೋಹರ ಮುಖಗಳ, ಹೊಳೆಯುವ ಬೆಡಗಿನ ಕಣ್ಣುಗಳ, ಸ್ಥೂಲಸ್ತನಗಳ, ಕಾಂತಿಗಳನ್ನು ಚಿಮ್ಮುವ ತೋಳುಗಳ, ಚಿನ್ನದ ಒಡವೆಗಳನ್ನು ತೊಟ್ಟು ದಿವ್ಯವಸ್ತ್ರಗಳನ್ನುಟ್ಟುಕೊಂಡ ರಂಭೆಯೇ ಮೊದಲಾದ ಅಪ್ಸರೆಯರು ಸುಗಂಧವನ್ನು ಬೀರುತ್ತ ರಮಾಪತಿಗೆ ಚಾಮರಗಳನ್ನು ಬೀಸಿದರು. ೨೫. ಅಬ್ಬಬ್ಬ ! ಹಿಂದಿನ ವೈಭವಕ್ಕೆ ಎರಡರಷ್ಟು ಮಿಗಿಲಾಗಿ ರಾಜಾರಾಮನ ಆಸ್ಥಾನವು ರಂಜಿಸಿತು ! ಊರ್ವಶಿಯ ನರ್ತನ, ಚಿತ್ರರಥನ ಮೃದಂಗದ ಮೃದುಧ್ವನಿ, ಗಂಧರ್ವಸ್ತ್ರೀಯರ ಹೊಸ ಹಾಡುಗಳು, ತುಂಬುರನ ವೀಣಾವಾದನ–ಇವುಗಳ ಕಲ ಕಲ ಶಬ್ದದಿಂದ ಶ್ರೀರಾಮನ ಸಭಾಮಂಟಪವು ಮೆರೆಯಿತು. ೨೬. ಶ್ರೀರಾಮನ ಎಡತೊಡೆಯಮೇಲೆ ಲಕ್ಷ್ಮೀಸ್ವರೂಪಳಾದ ಸೀತೆಯು ರಂಜಿಸಿದಳು. ದೇವತಾಸ್ತ್ರೀಯರು ಶ್ರೀರಾಮ ಸೀತೆಯರಿಗೆ ಆರತಿಯೆತ್ತಿದರು. ಜಾನಕೀಪುತ್ರ ಕೇಳು, ಅಗಸ್ತ್ಯಮಹಾಮುನಿಯು ಸಮಸ್ತ ದೇವತೆಗಳ ನಡುವಿನಿಂದ ಎದ್ದುಬಂದು ಮುಂದಿನಂತೆ ರಾಮನಿಗೆ ವಿಜ್ಞಾಪಿಸಿದನು. ೨೭. "ಯಾರಿಂದಲೂ ಗೆಲ್ಲಲಾಗದ ದೇವತೆಗಳ ಶತ್ರುವಾದ ಕ್ರೂರನೂ ದುಷ್ಟನೂ ದುರಾತ್ಮನೂ ಆದ ತ್ರಿಲೋಕವೀರನನ್ನು ಗೆದ್ದೆ. ಭೂಲೋಕದ ಸಜ್ಜನರನ್ನೂ ಋಷಿಗಳು, ದೇವತೆಗಳು ಮತ್ತು ವೇದಗಳನ್ನೂ ರಕ್ಷಿಸಿದೆ. ಮಾನವರು, ದೇವತೆಗಳು ಮತ್ತು ನಾಗರುಗಳಲ್ಲಿ ನಿನಗೆ ಯಾರು ಸಮಾನರು ?" ಎಂದು ಅಗಸ್ತ್ಯ

ದೇವ ನೀನೀಗಖಿಳ ಲೋಕವ । ಕಾವ ಕರುಣೆಗಳರಸ ನೀನೀ
ಗೀ ವಿಬುಧರ ಸುರಕ್ಷಕನು ನೀನೀಗ ಶ್ರುತಿಸಿದ್ಧ
ದೇವ ದೇವರದೇವ ಲಕ್ಷ್ಮೀ । ದೇವಿಯರಸ ಮಹಾಮಹಿಮ ಕಲಿ
ರಾವಣಾಂತಕ ಜೀಯ ಬೀಳ್ಕೊಡು ಸುರರ ನೀನೆಂದ ೨೮

ತರಿಸಿ ದಿವ್ಯ ವಿಭೂಷಣಾಂಬರ । ವರ ಸುಕುಂಕುಮ ಯಕ್ಷಕರ್ದಮ
ದುರುತರಾತಿಥ್ಯಾದಿ ಸನ್ಮಾನೋಕ್ತಿಯಲಿ ಬಳಿಕ
ಹರನ ಪರಮೇಷ್ಠಿಯ ಪುರಂದರ । ವರುಣ ವಾಯು ಕುಬೇರ ಮುಖ್ಯರ
ನುರುತರಪ್ರೇಮದಲಿ ಕಳುಹಿದನಾ ರಘುಪ್ರಭವ ೨೯

ಹರೆದುದೋಲಗವಂದಿನಿರುಳಲಿ । ಕರೆಸಿ ಸುಗ್ರೀವಾದಿ ಭಟರಿಗೆ
ಶರಣಜನಸುರಧೇನು ಶ್ರುತಿಭೂಷಣ ವಿಭೀಷಣಗೆ
ತರಿಸಿದೌತಣದಕ್ಷತೆಯ ವಿ । ಸ್ತರಿಸಿ ಕಳುಹಿದನವರನಲ್ಲಿಂ
ದರಸುತನದತಿಶಯದ ಸೊಬಗನು ಕುಶನೆ ಕೇಳೆಂದ ೩೦

ಬಂದನಾಕ್ಷಣ ವಿಶ್ವಕರ್ಮನು । ನಿಂದಿರಿಸಿದನು ಸೌಧಗಳ ಮಣಿ
ಮಂದಿರಗಳ ಸುಪಾಕಶಾಲಾವಳಿಯ ವೀಥಿಗಳ
ಕಂದ ಕೇಳ್ ರಾವಣಗೆ ಸೇವೆಯ । ನಂದು ಮಾಡುವ ಸೇವಕರು ನಡೆ
ತಂದು ಮಾಡಿತು ಸೇವೆಗಳನಾಮಂತ್ರಣೋತ್ಸವದ ೩೧

ಮುನಿ ನುಡಿದ. ೨೮. "ದೇವ, ನೀನು ಈಗ ಸಮಸ್ತಲೋಕಗಳನ್ನೂ ಸಲಹುವ ಕರುಣೆಗಳರಸ, ನೀನು ಈಗ ದೇವತೆಗಳ ರಕ್ಷಕ, ನೀನು ವೇದ ಸಮರ್ಥ, ದೇವರ ದೇವ, ಲಕ್ಷ್ಮೀದೇವಿಯರಸ, ಮಹಾಮಹಿಮ, ವೀರ ರಾವಣಾಂತಕ. ಸ್ವಾಮಿ, ಇನ್ನು ದೇವತೆಗಳನ್ನು ಕಳುಹಿಸಿಕೊಡು" ಎಂದ ಅಗಸ್ತ್ಯ. ೨೯. ದಿವ್ಯವಾದ ಆಭರಣಗಳು, ದಿವ್ಯವಸ್ತ್ರ ಮತ್ತು ಕುಂಕುಮ, ಕರ್ಪೂರ ಕೇಸರಿಗಳಿಂದ ಮಾಡಿದ ಸುಗಂಧದ್ರವ್ಯಗಳಿಂದ ಅತಿಶಯವಾಗಿ ಸತ್ಕರಿಸಿ ಸನ್ಮಾನ ಮಾಡಿದ ಬಳಿಕ ರಾಮನು ಶಿವ, ಬ್ರಹ್ಮ, ದೇವೇಂದ್ರ, ವರುಣ, ವಾಯು, ಕುಬೇರ ಮೊದಲಾದವರನ್ನು ಪ್ರೀತಿಯಿಂದ ಕಳುಹಿಸಿಕೊಟ್ಟನು. ೩೦. ಅಂದಿನ ರಾತ್ರಿಯ ರಾಜಸಭೆಯು ಚದುರಿತು. ಸುಗ್ರೀವನೇ ಮೊದಲಾದ ವೀರರನ್ನೂ ಭಕ್ತಜನಕಾಮಧೇನು, ವೇದಭೂಷಣ ವಿಭೀಷಣನನ್ನೂ ಔತಣಕ್ಕೆ ಕರೆದು ಅಕ್ಷತೆಯನ್ನು ಕೊಟ್ಟು ಕಳುಹಿಸಿದನು. ಮುಂದೆ ರಾಮನ ರಾಜ್ಯಭಾರದ ಸೊಗಸನ್ನು ಕೇಳು ಕುಶ ಎಂದರು ವಾಲ್ಮೀಕಿಗಳು. ೩೧. ಆ ಕ್ಷಣದಲ್ಲಿ ವಿಶ್ವಕರ್ಮನು ಬಂದು ಉಪ್ಪರಿಗೆಮನೆಗಳು, ರತ್ನಭವನಗಳು, ಅಡಿಗೆಮನೆಗಳು ಮತ್ತು ಅವುಗಳ ನಡುವೆ ತಕ್ಕ ಬೀದಿಗಳು ಮೊದಲಾದುವನ್ನು ನಿರ್ಮಿಸಿದನು. ಮಗು ಕುಶ ಕೇಳು ರಾವಣನ ಊಳಿಗದಲ್ಲಿದ್ದ ಸೇವಕರು ಬಂದು ಔತಣ ಸಮಾರಂಭದ ಸೇವಾ

ಉದಯಮುಖಕಾಯ್ತಖಿಳ ಕಡೆಗ । ಟ್ಟದಧಿಶಯನನ ವೈಭವಕೆ ತಾ
ನಿದಿರಿದಾವುದು ಕಲ್ಪತರು ಸುರಧೇನು ಸುರಮಣಿಯ
ಸದಮಳದ ಸೌರಂಭದಲಿ ಸೊಂ । ಪೊದವಿತೋಯೆಂಬಂತೆ ಸೊಗಸಾ
ದುದು ಸಮಸ್ತ ಸುಭಕ್ಷ ಭೋಜ್ಯಾದಿಗಳ ಪರಿಕರವು ೩೨

ಸೊಗಸಿದವು ಸರಸಿಗಳು ಪಾಲ್ಮೊಸ । ರುಗಳ ಸದ್ಯೋಘೃತದ ರಂಜಣಿ
ಗೆಗಳ ಸಾಲಿಳುಹಿದವು ಪಾನರಸಾಯನಾದಿಗಳ
ಝಗಝಗಿಪ ಹೊಂಗೊಪ್ಪರಿಗೆಗಳ । ಬಗೆ ವಿರಾಜಿಸಿತೋಗರದ ರಾ
ಶಿಗಳು ರಂಜಿಸಿದವು ಸುಪಕ್ವದ ಭಕ್ಷ್ಯಭಾರದಲಿ ೩೩

ಶಾಕಗಳ ಹೊಂಬೆಸಳಿಗೆಗಳ ಸು । ಪಾಕಗಳ ಪರಮಾನ್ನಗಳ ನಾ
ನಾ ಕಟುಕ ಸಮ್ಮಿಶ್ರಗುಡ ಸಮ್ಮಿಳಿತ ಶಿಖರಣೆಯ
ಕೈಕರಣೆಗಳ ವಿವಿಧ ಫಲ ರಸ । ಪೈಕಗಳ ಪರಿಮಳಗಳಲಿ ಸುರ
ಲೋಕದಮರರ ಬಾಯನೊಜಿಸಿತು ಬಾಣಸಿನ ಭವನ ೩೪

ಆದುದೀಪರಿ ವಿವಿಧ ಸೌರಂ । ಭೋದಯದಿ ದಿವ್ಯಾನ್ನಪಾನ ಮ
ಹಾ ದಯಾಂಬುಧಿ ರಾಘವೇಂದ್ರನ ರಾಜಭವನದಲಿ
ಆದುದುದಯದ ಮೇಲೆ ಬಳಿಕೀ । ರೈದು ಗಳಿಗೆಯೊಳಗ್ನಿಹೋತ್ರಗ
ಳಾದಿಯಾದ ಸಮಸ್ತ ಸುರತರ್ಪಣದ ಸೌರಂಭ ೩೫

ಕಾರ್ಯವನ್ನು ನಡೆಸಿಕೊಟ್ಟರು. ೩೨. ಬೆಳಗಾಗುವ ಹೊತ್ತಿಗೆ ಸಮಸ್ತ ಬೀಡುಗಳು ಸಿದ್ಧವಾದುವು. ಕ್ಷೀರಸಾಗರನ ವೈಭವದ ಎದುರಿಗೆ ಯಾವುದು ತಾನೆ ನಿಲ್ಲುವುದು. ಕಲ್ಪವೃಕ್ಷ, ಕಾಮಧೇನು, ಸ್ಪರ್ಶಮಣಿಗಳ ಸಂಭ್ರಮದಿಂದ ಸಮೃದ್ಧಿಯಾಯಿತೋ ಎಂಬಂತೆ ಸಮಸ್ತ ಭಕ್ಷ್ಯ ಭೋಜ್ಯಗಳ ಸಾಮಗ್ರಿಗಳು ಬಂದೊದಗಿದವು. ೩೩. ಹಾಲು ಮೊಸರುಗಳ ಕೊಳಗಳು ರಂಜಿಸಿದವು. ಆಗತಾನೆ ಕಾಯಿಸಿದ ತುಪ್ಪದ ಗುಡಾಣ ಗಳನ್ನು ಸಾಲಾಗಿ ತಂದಿರಿಸಿದರು. ಪಾನೀಯಗಳ ಹಾಗೂ ರಸಾಯನಗಳ ಝಗ ಝಗಿಸುವ ಚಿನ್ನದ ಕೊಪ್ಪರಿಗೆಗಳು ಮನಸ್ಸನ್ನು ಮೋಹಿಸಿದವು. ಬಗೆ ಬಗೆಯ ಅನ್ನದ ರಾಶಿಗಳು ಪಾಕಮಾಡಿ ಸಿದ್ಧಪಡಿಸಿದ ಭಕ್ಷ್ಯಗಳ ಗುಡ್ಡೆಗಳೊಡನೆ ಕಣ್ಸೆಳೆದವು. ೩೪. ಚಿನ್ನದ ಬಾಣಲೆಗಳಲ್ಲಿಟ್ಟಿದ್ದ ಮೇಲೋಗರಗಳ, ಹದವಾಗಿ ಪಾಕಮಾಡಿದ ಪಾಯಸಗಳ, ನಾನಾ ವಿಧವಾದ ಖಾರ ಮತ್ತು ಬೆಲ್ಲಗಳನ್ನು ಸೇರಿಸಿ ತಯಾರಿಸಿದ ಸೀಕರಣೆಗಳ, ನೈಪುಣ್ಯದಿಂದ ತಯಾರಿಸಿದ ಹಣ್ಣುಗಳ ಅನೇಕ ರೀತಿಯ ರಸಾಯನಗಳ ಗಮಗಮಿಸುವ ವಾಸನೆಯು ಅಡಿಗೆಮನೆಯಿಂದೆದ್ದು ದೇವತೆಗಳ ಬಾಯಲ್ಲಿ ನೀರೂರಿಸಿದುವು. ೩೫. ದಯಾನಿಧಿ ರಾಘವೇಂದ್ರನ ರಾಜಭವನದಲ್ಲಿ ಈ ರೀತಿ ಸಂಭ್ರಮ ದಿಂದ ದಿವ್ಯವಾದ ಅನ್ನಪಾನಗಳು ಸಿದ್ಧವಾದವು. ಸೂರ್ಯೋದಯವಾದ ಬಳಿಕ ಹತ್ತು ಗಳಿಗೆಯವರೆಗೆ ದೇವತೆಗಳಿಗೆ ಹವಿಸ್ಸನ್ನು ಅರ್ಪಿಸುವ ಅಗ್ನಿಹೋತ್ರವೇ ಮೊದ

ಕರಸಿದನು ಬಳಿಕರಸನುಚಿತೋ । ತ್ಕರದಿನಾ ಸುಗ್ರೀವ ಜಾಂಬವ
ಮಾರುತಸುತ ನೀಲಾಂಗದಾದಿ ಸಮಸ್ತ ಕಪಿಭಟರ
ಶರಣು ಹೊಕ್ಕ ವಿಭೀಷಣಾದ್ಯರ । ನುರುತರಪ್ರೇಮದಲಿ ಮಣಿಮಯ
ನಿರತಿಶಯ ಭವನಾಂತರಾಳಕೆ ಭೂವಿಚಾರಮಣ ೩೬

ಬಲದಲೆಡೆಯಾಯ್ತಬ್ಜಕುಮಾರಗೆ । ಬಲಿಮುಖರ ವೈದ್ಯಂಗೆ ವಾಮದ
ವಳಯದಲಿ ಭರತಂಗೆ ಭರತಾನುಜರಿಗಿಬ್ಬರಿಗೆ
ಜಲಜಬಂಧುಸುತಂಗೆ ಲಂಕಾ । ಲಲನೆಯರಸಂಗಗ್ನಿಸುತ ಶತ
ಬಲಿ ಗವಾದ್ಯರಿಗಾದವೆಡೆಗಳು ಸಕಲಬಲ ಸಹಿತ ೩೭

ಹೊಳೆವ ಕಾಲದ್ದಣಿಗೆಗಳ ಥಳ । ಥಳಿಪ ಹೇಮದ ಸಾಲ ಹರಿಯಾಣ
ಗಳ ಸುವರ್ಣದ ತಟ್ಟೆ ಬಟ್ಟಲುಗಳ ವಿಲಾಸದಲಿ
ಕೆಲಸಗತಿಗಳ ಗಿಂಡಿ ಸಗ್ಗಳಿ । ಗಳಲಿ ದೀಪಸ್ತಂಭರಚನಾ
ವಳಿಗಳಲಿ ಸಾಲೆಸೆನವಾ ಭವನಾಂತರಾಳದಲಿ ೩೮

ಹಿರಿದು ಕಿಱಿದಿನ ಮಾನವನ್ನಱಿ । ಯಱಿದು ಲಕ್ಷ್ಮಣದೇವನುಚಿತೋ
ತ್ಕರಗಳಲಿ ಕುಳ್ಳಿರಿಸಿದನು ಕಪಿವಾಹಿನೀಶ್ವರರ
ತರುಣಿಯರು ಸುಳಿದರು ಸುಪಾಕೋ । ತ್ಕರದ ನಾನಾ ಭೋಜ್ಯ ವಸ್ತೂ
ತ್ಕರದ ಕರಭಾಂಡಗಳ ಭಾರದ ಬಳುಕು ನಡೆಗಳಲಿ ೩೯

ಲಾದ ಕೆಲಸ ನಡೆಯಿತು. ೩೬. ಸುಗ್ರೀವ, ಜಾಂಬವ, ಹನುಮಂತ, ನೀಲ, ಅಂಗದ ಮೊದಲಾದ ಸಮಸ್ತ ಕಪಿಭಟರನ್ನೂ ತನಗೆ ಶರಣು ಬಂದ ವಿಭೀಷಣನೇ ಮೊದಲಾದವರನ್ನೂ ಅತಿಶಯವಾದ ರತ್ನಭವನದೊಳಕ್ಕೆ ಕರೆಸಿದನು. ೩೭. ಬಲಗಡೆಯಲ್ಲಿ ಜಾಂಬವ, ವಾನರರ ವೈದ್ಯ ಸುಷೇಣರಿಗೆ ಊಟಕ್ಕೆ ಎಡೆಮಾಡಿದರು. ಎಡಭಾಗದಲ್ಲಿ ಭರತ, ಭರತನ ಇಬ್ಬರು ಸಹೋದರರಾದ ಲಕ್ಷ್ಮಣ ಶತ್ರುಘ್ನರಿಗೆ ಎಡೆಮಾಡಿದರು. ಸುಗ್ರೀವ. ವಿಭೀಷಣ, ನೀಲ, ಶತಬಲಿ, ಗವ ಮೊದಲಾದವರಿಗೆ ಅವರ ಸಕಲ ಸೈನ್ಯದೊಡನೆ ಊಟಕ್ಕೆ ಕೂರಿಸಿದರು. ೩೮. ಹೊಳೆಯುವ ಮೂರು ಕಾಲಿನ ಮಣೆಗಳ ಮೇಲೆ ಥಳಥಳಿಸುವ ಚಿನ್ನದ ಹರಿವಾಣಗಳನ್ನೂ ಬಂಗಾರದ ತಟ್ಟೆ ಬಟ್ಟಲುಗಳನ್ನೂ ಸಾಲಾಗಿ ಇಟ್ಟರು. ಬಡಿಸುವವರು ಓಡಾಡುವ ದಾರಿಯಲ್ಲಿ ಗಿಂಡಿ, ನೀರಿನ ದೊಡ್ಡ ಪಾತ್ರೆಗಳನ್ನಿರಿಸಿದರು. ದೀಪದ ಕಂಬಗಳನ್ನು ಸಾಲು ಸಾಲಾಗಿರಿಸಿದರು. ೩೯. ವಾನರ ನಾಯಕರಲ್ಲಿ ಚಿಕ್ಕವರು ದೊಡ್ಡವರು ಎಂಬುದನ್ನು ನೋಡಿಕೊಂಡು ಅವರ ಸ್ಥಾನಮಾನಗಳನ್ನರಿತು ಲಕ್ಷ್ಮಣನು ಅವರನ್ನು ಉಚಿತವಾದ ಸ್ಥಾನಗಳಲ್ಲಿ ಕೂರಿಸಿದನು. ಅಡಿಗೆಯ ನಾನಾ ಭೋಜ್ಯವಸ್ತುಗಳು ತುಂಬಿದ ಕೈಪಾತ್ರೆಗಳನ್ನು ಹಿಡಿದುಕೊಂಡು

ಇಟ್ಟ ಮುತ್ತಿನ ತಿಲಕಗಳ ಬೆಳು । ವಟ್ಟೆಗಳ ಸಿಂಗರದ ಮೈಗಳ
ವಟ್ಟ ರತ್ನಾಭರಣಗಳ ನೂಪುರದ ಝಣರವದ
ಬಟ್ಟವೊಲೆಗಳ ಥಳಿಸುವ ಕಡೆ । ದಿಟ್ಟೆಗಳ ಹಂಸೆಗಳ ನಡೆಗಳ
ಪೆಟ್ಟಗೆಯರುಣಬಡಿಸಿದರು ಬಹುವಿಧದ ಭಕ್ಷ್ಯಗಳ ೪೦

ಕೊನೆಮುಡಿಯ ಹೂದುಱುಬುಗಳ ಹೆಂ । ಪಿನ ವಿಲಾಸದ ಹಿಣಿಲ ತಿದ್ದಿದ
ಕೊನೆಯುಗುರ ಮಣಿಮುದ್ರಿಕೆಯ ಬೆರಳುಗಳ ಕಂಕಣದ
ಜನಿತ ಝಣರವದಂಗಲತೆಗಳ । ತನಿಹೊಗರು ಹೊಱಹೊಮ್ಮುವಬಲಾ
ಜನಗಳುಣಬಡಿಸಿದರು ನಾನಾ ಪರಿಯ ಪಾಯಸವ ೪೧

ಔಕಿ ನಿಱಿಗಳನಿಱುಕಿ ಮೇಲುದ । ಸೋಕುಮೆಳಗಿನ ಲಹರಿಗಳಲಿ ವ
ನೌಕಸರನೀಕ್ಷಿಸುತ ತೋಱಿಸುತಂಗವಿಭ್ರಮವ
ನಾಕದಬಲೆಯರಿವರ ಘನ ಬಿ । ಬ್ಬೋಕಕೆಣೆಯಿಲ್ಲೆಂಬ ಸತಿಯರು
ಶಾಕಗಳ ಬಡಿಸಿದರು ಷಡುರಸಭರಿತ ಭೋಜ್ಯಗಳ ೪೨

ಚೀನಿ ಚಿತ್ರಾಂಬರ ವಿಚಿತ್ರ ನ । ವೀನ ಪಳಿಗಳ ಜೀಬಗಳ ಪರಿ
ಧಾನಗಳ ಬೊಂಬೆಗಳ ಪಟ್ಟಾವಳಿಯ ಚಂದ್ರಿಕೆಯ
ಆನೆವೆಟ್ಟಿನ ಹಯ ಹರಿಣ ಪಂ । ಚಾನನಾಂಚಿತ ದಿವ್ಯವಸ್ತ್ರವ
ಮಾನಿನಿಯರುಟ್ಟುಣಬಡಿಸಿದರು ವಾನರೇಂದ್ರರಿಗೆ ೪೩

ತರುಣಿಯರು ಅವುಗಳ ಭಾರಕ್ಕೆ ಬಳುಕಿ ನಡೆಯುತ್ತ ಬಡಿಸಲು ಬಂದರು. ೪೦. ಹಣೆಗೆ ಮುತ್ತಿನ ತಿಲಕಗಳನ್ನಿಟ್ಟು, ಬಿಳಿಯ ವಸ್ತ್ರಗಳನ್ನುಟ್ಟು, ಚೆಲುವಿನ ಮೈಯನ್ನು ರತ್ನಾಭರಣಗಳಿಂದಲಂಕರಿಸಿಕೊಂಡ ದುಂಡುಮೊಲೆಗಳ ಸಖಿಯರು ಕಾಲಿನ ನೂಪುರವು ಝಣ ಝಣ ಶಬ್ದಮಾಡುತ್ತಿರಲು ಹಂಸಗಮನದಿಂದ ನಡೆಯುತ್ತ ಬಂದು ಬಹುವಿಧಧ ಭಕ್ಷ್ಯಗಳನ್ನು ಊಟಕ್ಕೆ ಬಡಿಸಿದರು. ೪೧. ಹೂವಿನ ದಂಡೆಗಳನ್ನು ಮುಡಿದುಕೊಂಡ ಬೆಡಗಿನ ಜಡೆಯ, ಉಗುರುಗಳನ್ನು ತಿದ್ದಿದ, ರತ್ನದುಂಗುರ ತೊಟ್ಟ ಬೆರಳುಗಳ, ಝಣ ಝಣ ಶಬ್ದ ಮಾಡುವ ಬಳೆಗಳ, ದೇಹದಿಂದ ಕಾಂತಿ ಹೊರಸೂಸುವ ಸುಂದರಿಯರು ನಾನಾ ವಿಧದ ಪಾಯಸಗಳನ್ನು ಉಣಬಡಿಸಿದರು. ೪೨. ಸೀರೆಯ ನೆರಿಗೆಗಳನ್ನು ಅಮುಕಿ ಹಿಡಿದು ಹೊದೆಯುವ ಸೆರಗನ್ನು ಎಳೆದು ಕಣ್ಣುಗಳ ನೋಟದಿಂದ ಸ್ಪರ್ಶಿಸುವಂತೆ ವಾನರರನ್ನು ನೋಡುತ್ತ ತಮ್ಮ ಅಂಗ ಸೌಂದರ್ಯವನ್ನು ಪ್ರದರ್ಶಿಸುತ್ತ ಇವರ ಬಿಂಕಕ್ಕೆ ಸಮವಲ್ಲ ಎಂಬಂಥ ಸ್ವರ್ಗದ ಸುಂದರಿಯರು ಷಡ್ರಸೋಪೇತವಾದ ಸವಿಯೂಟವನ್ನು ಬಡಿಸಿದರು. ೪೩. ಚೀನಿವಸ್ತ್ರ, ಬಣ್ಣ ಬಣ್ಣದ ವಸ್ತ್ರ, ನಾನಾ ಬಗೆಯ ಹೊಸ ರೇಷ್ಮೆವಸ್ತ್ರ, ಜೀಬಿವಸ್ತ್ರಗಳ, ಹೊದಕೆಗಳ ಮೇಲೆ ಬೊಂಬೆಗಳಿರುವ, ಪಟಪಟೆಯ, ಬೆಳುದಿಂಗಳಿನ ಬಣ್ಣದ, ಆನೆ, ಕುದುರೆ, ಜಿಂಕೆ ಸಿಂಹಗಳ ಚಿತ್ರದ ಹೊಳೆಯುವ ದಿವ್ಯವಸ್ತ್ರಗಳನ್ನುಟ್ಟ ಸ್ತ್ರೀಯರು ವಾನರನಾಯಕರಿಗೆ

ಅಗಲು ಹನುಮಂಗಿಲ್ಲದಿರೆ ಕೈ । ಮುಗಿದು ಮೆಲ್ಲನೆ ಮಗಧತನುಜೆಯ
ಮಗನು ಬಿನ್ನಹಮಾಡಿದನು ರಘುನೃಪನ ಕರ್ಣದಲಿ
ಅಗಲು ಬೇಱಿನ್ನೇಕೆ ಜೀವಾಂ । ಶಗನಲಾ ನಮ್ಮಂತರಂಗದ
ಲಗಲದಿಹ ನಾವಾತಗೇತಱಲುತ್ತರಾಯ್ ಯೆಂದ ೪೪

ತರಣಿಸುತ ತನ್ನಂಗನೆಗೆ ತ । ನ್ನರಸುತನಕೋಲೈಸಿದನು ದಶ
ಶಿರನ ತಮ್ಮನು ತನ್ನ ರಾಜ್ಯಶ್ರೀಗೆ ಸಾರಿದನು
ತರುಣ ಕೇಳ್ ಹನುಮಂತನೇತಱ । ಸಿರಿಯ ಬಯಸಿದನೇನ ಬೇಡಿದ
ನರವರಿಸದಾಯಸಕೆ ನಿಂದವನೊಬ್ಬನೇಯೆಂದ ೪೫

ಸತ್ತವರನೆಬ್ಬಿಸಿದನೆಮ್ಮುವ । ನೆತ್ತಿದನು ಮುದ್ರಿಕೆಯನವನಿಜೆ
ಗಿತ್ತನಂಜದೆ ಕೊಂದನಗಣಿತವಸುರನಂದನರ
ಕಿತ್ತನಗ್ಗದ ವನವನಾಹುತಿ । ಗಿತ್ತನಹಿತನ ಪುರವನಗ್ನಿಗೆ
ಹೊತ್ತ ಕೆಲಸಕ್ಕಲಸದವನಿವನೊಬ್ಬನೇಯೆಂದ ೪೬

ಹನುಮ ನೀನೆಮ್ಮೊಡನೆ ಸಹಭೋ । ಜನಿಗನೆಂದಿದಿರೆದ್ದು ಕರವನು
ವಿನುತ ಕರಪಲ್ಲವದಿ ಪಿಡಿತಂದಮಲ ವಿಷ್ಟರದ
ಕೊನೆಯಲೀತನ ನಿಲಿಸಿದನು ರವಿ । ತನುಜ ವೀರ ವಿಭೀಷಣಾದ್ಯರು
ಹನುಮ ಮಾಡಿದ ಸುಕೃತವೆಂತುಟೊಯೆನುತ ಬೆಱಗಾಯ್ತು ೪೭

ಊಟವನ್ನು ಬಡಿಸಿದರು. ೪೪. ಹನುಮಂತನಿಗೆ ಊಟದ ತಳಿಗೆ ಇಲ್ಲದೆ ಇರುವುದನ್ನು ಕಂಡ ಸುಮಿತ್ರಾಸುತ ಲಕ್ಷ್ಮಣನು ಕೈಮುಗಿದು ರಾಮನ ಕಿವಿಯಲ್ಲಿ ಮೆಲ್ಲಗೆ ತಿಳಿಸಿದನು. ಅದಕ್ಕೆ ರಾಮನು, ಹನುಮಂತನಿಗೆ ಬೇರೆ ತಳಿಗೆಯೇಕೆ ? ನಮ್ಮ ಪ್ರಾಣದ ಅಂಶವಲ್ಲವೇ ಅವನು. ನಮ್ಮ ಅಂತರಂಗದಲ್ಲಿ ಸ್ಥಿರವಾಗಿ ನೆಲಸಿರುವವನಿಗೆ ನಾವು ಯಾವುದರಲ್ಲಿ ಪರಕೀಯರು" ಎಂದು ಹೇಳಿದ. ೪೫. "ಸುಗ್ರೀವನು ತನ್ನ ಹೆಂಡತಿ ಮತ್ತು ತನ್ನ ರಾಜ್ಯಗಳಿಗೋಸ್ಕರ ನಮ್ಮ ಸೇವೆಗೆ ನಿಂತನು. ರಾವಣನ ತಮ್ಮ ವಿಭೀಷಣನು ರಾಜ್ಯವನ್ನು ಪಡೆಯುವುದಕ್ಕಾಗಿ ನಮಗೆ ಶರಣುಬಂದನು. ತಮ್ಮ ಕೇಳು, ಹನುಮಂತನು ಯಾವ ಸಂಪತ್ತನ್ನು ಬಯಸಿದನು ? ಏನನ್ನು ಬೇಡಿಕೊಂಡನು ? ಉಪೇಕ್ಷಿಸದೆ ನಮಗಾಗಿ ಆಯಾಸಪಟ್ಟವನು ಅವನೊಬ್ಬನೇ" ಎಂದ ರಾಮ. ೪೬. "ಹನುಮಂತನು ಸತ್ತವರನ್ನು ಎಬ್ಬಿಸಿದನು, ನಮ್ಮನ್ನು ಸಂಜೀವಿನಿಯಿಂದ ಬದುಕಿಸಿದನು. ನಮ್ಮ ಮುದ್ರೆಯುಂಗುರವನ್ನು ತೆಗೆದುಕೊಂಡು ಹೋಗಿ ಸೀತೆಗೆ ಕೊಟ್ಟನು. ಲೆಕ್ಕವಿಲ್ಲದಷ್ಟು ಜನ ರಾಕ್ಷಸರನ್ನೂ ರಾವಣನ ಮಕ್ಕಳನ್ನೂ ಕೊಂದನು. ಶ್ರೇಷ್ಠವಾದ ಅಶೋಕವನವನ್ನು ಮುರಿದನು. ಶತ್ರುವಿನ ರಾಜಧಾನಿಯನ್ನು ಅಗ್ನಿಗೆ ಆಹುತಿಕೊಟ್ಟನು. ವಹಿಸಿಕೊಂಡ ಕೆಲಸಕ್ಕೆ ಉದಾಸೀನ ಮಾಡದವನು ಇವನೊಬ್ಬನೇ" ಎಂದ ರಾಮ, ೪೭. "ಹನುಮಂತ, ನೀನು ನಮ್ಮ ಜತೆ ಒಂದೇ ಪಂಕ್ತಿಯಲ್ಲಿ ಕುಳಿತು ಊಟಮಾಡತಕ್ಕವನು" ಎಂದು ಎದ್ದುಹೋಗಿ ರಾಮನು ಹನುಮಂತನನ್ನು ತನ್ನ ಕೋಮಲ ಕೈಗಳಿಂದ ಹಿಡಿದು ಕರೆತಂದು ತನ್ನ ಪೀಠದ ಕೊನೆಯಲ್ಲಿ ಅವನನ್ನು ಕೂರಿಸಿದನು. ಸುಗ್ರೀವ, ವೀರ ವಿಭೀಷ

ಹನುಮನಿದ್ದನು ಸುಮ್ಮನಾಪೋ । ಶನದ ತುದಿಪರಿಯಂತ ಸಹಭೋ
ಜನಕುಪಕ್ರಮಿಸಿದರು ರಘುರಾಜೇಂದ್ರ ಮೊದಲಾದ
ವನಚರಾಧಿಪರಂತರದಲಾ । ಹನುಮನಾಳ್ದನ ಭುಕ್ತಶೇಷದ
ಕನಕಪಾತ್ರೆಯ ಕೊಂಡು ಹಾಯ್ದನು ಗಗನನದಿಗಾಗಿ ೪೮

ಸನಕನಪ್ಪಿದನಲ್ಲಿ ನಾರದ । ಮುನಿಪನಾಲಿಂಗಿಸಿದನಮರರ
ಜನಪ ಕೈಮುಗಿದೆಱಗಿದನು ಹೊಗಳಿದನು ಕಮಲಭವ
ವಿನುತ ವೈಷ್ಣವರೊಳಗೆ ನೀ ಮಿಗಿ । ಲೆನುತ ಹರ ಕೊಂಡಾಡಿದನು ಲಯ
ಜನಿಸದಮರತ್ವವನು ಪಡೆಯೆಂದತುಳ ಹರುಷದಲಿ ೪೯

ಉಂಡು ಕೈದೊಳೆದಿಳಿದನಾ ದೋ । ರ್ದಂಡಬಲ ಹನುಮಂತನಾ ಕೋ
ದಂಡ ದೀಕ್ಷಾಚಾರ್ಯ ರಘುಕುಲರಾಯನಿದ್ದೆಡೆಗೆ
ಕಂಡು ಬೆಱಗಾಯ್ತಖಿಳ ವಾನರ । ತಂಡವೀ ನಿಜಭಕ್ತಿಯನು ನಾವ್
ಕಂಡೆವೀ ಹನುಮಂತದೇವನಲೆಂದುದಖಿಳಜನ ೫೦

ಗುಣಭರಿತ ರಘುನಾಥನಾರೋ । ಗಣೆಯ ಮಾಡಿದನಖಿಳ ವಾನರ
ಗಣಸಹಿತ ಕೈದೊಳೆದು ಕೈಘಟಿಕೆಗಳ ಸಂದಣಿಸಿ
ಅಣುಗ ಕೇಳನುಲೇಪನದ ಸಾ । ರಣೆಗಳಲಿ ಹೂಮಾಲೆಗಳ ಭೂ
ಷಣಗಳಲಿ ಕರ್ಪೂರದ ವೀಳೆಯಗಳಲಿ ಮನ್ನಿಸಿದ ೫೧

ಣಾದಿಗಳು 'ಹನುಮಂತನು ಮಾಡಿದ ಪುಣ್ಯ ಎಷ್ಟುಮಟ್ಟಿನದೋ !' ಎಂದು ಆಶ್ಚರ್ಯ ಪಟ್ಟರು. ೪೮. ಹನುಮಂತನು ಎಲ್ಲರೂ ಆಪೋಶನ ತೆಗೆದುಕೊಳ್ಳುವವರೆಗೂ ಸುಮ್ಮನಿದ್ದನು. ಶ್ರೀರಾಮ ಮತ್ತು ವಾನರನಾಯಕರು ಜೊತೆಯಲ್ಲಿ ಊಟ ಮಾಡ ಲಾರಂಭಿಸಿದರು. ಊಟ ಮುಗಿದ ಮೇಲೆ ಹನುಮಂತನು ಒಡೆಯನಾದ ಶ್ರೀರಾಮನು ಊಟಮಾಡಿದನಂತರ ನಿಂತ ಎಂಜಲಿನ ಚಿನ್ನದ ಪಾತ್ರೆಯನ್ನು ತೆಗೆದುಕೊಂಡು ಆಕಾಶ ಗಂಗೆಯ ಬಳಿಗೆ ನೆಗೆದನು. ೪೯. ಸನಕನು ಹನುಮಂತನನ್ನು ಅಪ್ಪಿಕೊಂಡನು. ನಾರದ ಮುನಿ ಆಲಿಂಗಿಸಿದನು. ದೇವೇಂದ್ರನು ಕೈಮುಗಿದು ಹನುಮಂತನಿಗೆ ನಮಸ್ಕರಿಸಿದನು. ಬ್ರಹ್ಮನು ಹೊಗಳಿದನು. 'ವಿಷ್ಣುಭಕ್ತರಲ್ಲಿ ನೀನು ಶ್ರೇಷ್ಠ' ಎಂದು ಶಿವನು ಕೊಂಡಾ ಡಿದ. 'ಸಾವಿಲ್ಲದ ಅಮರತ್ವವನ್ನು ಪಡೆ' ಎಂದು ಆನಂದದಿಂದ ವರವನ್ನು ಕೊಟ್ಟನು. ೫೦. ತೋಳ್ಬಲದ ಹನುಮಂತನು ಊಟಮಾಡಿ ಕೈತೊಳೆದುಕೊಂಡು ಬಿಲ್ವಿದ್ಯಾವ್ರತ ನಿಷ್ಠನಾದ ರಘುಕುಲರಾಜ ರಾಮನ ಬಳಿಗೆ ಇಳಿದುಬಂದನು. ಇದನ್ನು ಕಂಡ ವಾನರ ಸಮೂಹವು ಆಶ್ಚರ್ಯಪಟ್ಟಿತು. 'ನಿಜವಾದ ಭಕ್ತಿಯನ್ನು ಈ ಹನುಮಂತದೇವನಲ್ಲಿ ಕಂಡೆವು' ಎಂದು ಸಮಸ್ತ ಜನರೂ ಹೇಳಿದರು. ೫೧. ಗುಣಭರಿತ ರಘುನಾಥನು ಸಮಸ್ತ ವಾನರರೊಡನೆ ಭೋಜನಮಾಡಿದನು. ಕೈ ತೊಳೆದು ಕೈಗೆ ಸವರಿಕೊಳ್ಳಲು ಸುಗಂಧವನ್ನು ಕೊಟ್ಟು ತೇದ ಶ್ರೀಗಂಧವನ್ನು ಮೈಗೆ ಬಳಿದುಕೊಳ್ಳಲು ಕೊಟ್ಟು ಹೂಮಾಲೆ ಮತ್ತು ಆಭರಣಗಳಿಂದ ಅಲಂಕರಿಸಿ ಕರ್ಪೂರ ಮಿಶ್ರಿತ ತಾಂಬೂಲವನ್ನಿತ್ತು

ಮನದಣಿಯೆ ಮಣಿಭೂಷಣಾಳಿಯ । ನಿನಸುತಾದ್ಯರಿಗಿತ್ತು ವಿಲಸಿತ
ವಿನುತ ದಿವ್ಯಾಂಬರಗಳಲಿ ಮನ್ನಿಸಿದನುಚಿತದಲಿ
ಎನಿತು ತನ್ನಯ ಬೆಂಬಳಿಯ ಬಂ । ದನಿತು ಕಪಿಸೇನೆಯನು ಸೇನಾ
ಜನವನುಱೆ ಮನ್ನಿಸಿದನುಡುಗೊಱೆಯುಚಿತವೃತ್ತಿಯಲಿ ೫೨

ಕಳುಹಿದನು ಕರುಣದಲಿ ಕಲಿಗಳ । ತಿಲಕ ಸುಗ್ರೀವಾದಿ ಸುಭಟಾ
ವಳಿಯನವರವರಿಹ ನಿವಾಸಂಗಳಿಗೆ ವಿನಯದಲಿ
ಬಳಲಿದಿರಿ ನಮ್ಮಿಂದ ಹಗೆಯನು । ಗೆಲಿದೆವಾವ್ ನಿಮ್ಮಿಂದ ಕೀರ್ತಿಯ
ಗಳಿಸಿದೆವು ಜಗದೊಳಗೆ ನಿಮ್ಮಿಂದಧಿಕರಾರೆಂದ ೫೩

ದೇವ ಬಳಿಕತಿ ಹರುಷಮುಖದಲಿ । ಪಾವಮಾನಿಯ ಕರೆದು ನಿನ್ನಯ
ಸೇವೆಗೇತಱಲುತ್ತರಾಯಿಗಳಾವು ಹೇಳೆನುತ
ಆ ವಿರಿಂಚಿಯ ವೈಭವವು ಕ । ಲ್ಪಾವಸಾನಕೆ ಸಲಲಿ ಭುವನಜ
ನಾವಳಿಗಳುಱೆ ವಂದಿಸಲಿ ಗುರುವಾಗು ಜಗಕೆಂದ ೫೪

ಇರು ಸುರೋರಗ ಮರ್ತ್ಯ ಭುವನಾಂ । ತರಗಳಲಿ ಮನಬಂದ ಠಾವಿನ
ಲಿರು ಸುರಾದ್ರಿ ಪ್ರಮುಖ ನಾನಾ ಪರ್ವತಂಗಳಲಿ
ಇರು ಮದೀಯ ಪುರಾಂತರದಲೆಂ । ದರಸ ಕರುಣಾಸ್ಪದದ ನೇಹದ
ನಿರತಿಶಯದಲಿ ಬೀಳುಕೊಟ್ಟನು ಬೇಹ ಕಿಂಕರನ ೫೫

ರಾಮನು ಎಲ್ಲರನ್ನೂ ಗೌರವಿಸಿದನು. ೫೨. ಸುಗ್ರೀವನೇ ಮೊದಲಾದವರಿಗೆ ರತ್ನದ ಒಡವೆಗಳನ್ನು ಕೊಟ್ಟು ಹೊಳೆಯುವ ದಿವ್ಯವಸ್ತ್ರಗಳಿಂದ ಯೋಗ್ಯರೀತಿಯಲ್ಲಿ ಮರ್ಯಾದೆ ಮಾಡಿದನು. ಅವರವರಿಗೆ ಉಚಿತವಾದ ರೀತಿಯಲ್ಲಿ ತನ್ನನ್ನು ಅನುಸರಿಸಿ ಬಂದ ಕಪಿಸೈನ್ಯವನ್ನು ಗೌರವಿಸಿದನು. ೫೩. "ನಮಗೋಸ್ಕರವಾಗಿ ಬಹಳ ಬಳಲಿದಿರಿ. ನಿಮ್ಮ ನೆರವಿನಿಂದ ಶತ್ರುವನ್ನು ನಾವು ಗೆದ್ದೆವು, ನಿಮ್ಮಿಂದ ಜಗತ್ತಿನಲ್ಲಿ ಕೀರ್ತಿಯನ್ನು ಗಳಿಸಿದೆವು" ಎಂದು ವಿನಯದಿಂದ ರಾಮನು ಸುಗ್ರೀವನೇ ಮೊದಲಾದ ವೀರರನ್ನು ಹೊಗಳಿ ಕರುಣೆಯಿಂದ ಅವರವರ ಮನೆಗಳಿಗೆ ಕಳುಹಿಸಿಕೊಟ್ಟನು. ೫೪. ಅನಂತರ ಶ್ರೀರಾಮನು ಸಂತೋಷದಿಂದ ಮಾರುತಿಯನ್ನು ಕರೆದು, "ನಿನ್ನ ಸೇವೆಗೆ ನಾವು ಯಾವ ರೀತಿ ಋಣವನ್ನು ತೀರಿಸಬಹುದು ಎಂಬುದನ್ನು ಹೇಳು, ಬ್ರಹ್ಮನ ವೈಭವವು ನಿನಗೆ ಯುಗದಂತ್ಯದವರೆಗೂ ಸಲ್ಲಲಿ. ಲೋಕದ ಜನರು ನಿನ್ನನ್ನು ವಂದಿಸಲಿ. ಜಗತ್ತಿಗೆ ಗುರುವಾಗು" ಎಂದು ಅನುಗ್ರಹಿಸಿದ. ೫೫. "ದೇವಲೋಕ ಪಾತಾಳಲೋಕ ಭೂಲೋಕಗಳಲ್ಲಿ ನಿನ್ನ ಮನಸ್ಸಿಗೆ ಬಂದ ಸ್ಥಳದಲ್ಲಿರು. ಮೇರುಪರ್ವತವೇ ಮೊದಲಾದ ಪ್ರಮುಖ ಪರ್ವತಗಳಲ್ಲಿರು. ನನ್ನ ಪಟ್ಟಣದಲ್ಲಿರು" ಎಂದು ಶ್ರೀರಾಮನು ಕರುಣೆಯಿಂದ ಕೊಡಿದ

ಜಲ ಜಡಿಯೆ ಕಂಗಳಲಿ ಕರುಣಾ । ಜಲಧಿಯಂಘ್ರಿಗೆ ನಮಿಸಿ ವಿಕ್ರಮ
ಜಲಧಿ ಕಳುಹಿಸಿಕೊಂಡನಾ ತರುವಾಯ ರಕ್ಕಸರ
ಕುಲಲಲಾಮನ ಕರೆದು ಕೈರವ । ಜಲಜಸಖರುಳ್ಳನ್ನಬರ ಬಿಡ
ದೊಲಿದು ಪಾಲಿಸು ಲಂಕೆಯನು ಸುಖಿಯಾಗು ಹೋಗೆಂದ ೫೬

ಜಡಿವ ಕಂಬನಿಗಳಲಿ ರಘುಪತಿ । ಯಡಿಗೆಱಗಿದಂಗದನ ಶಿರವನು
ತಡವರಿಸಿ ಬಾರೈ ಬಲೀಶನೆ ಬಲಿಮುಖಾಧೀಶ
ಪೊಡವಿ ನಿನಗುಳ್ಳನ್ನಬರ ಕೈ । ವಿಡಿದು ಸಲಹೆಮಗೊಪ್ಪಿಸಿದ ಕೈ
ಯೆಡೆಯ ಕಂದನನೆಂದು ರವಿನಂದನನ ಬೀಳ್ಕೊಟ್ಟ ೫೭

ಬೀಳುಕೊಂಡುದು ಸಕಲ ವೀರಭ । ಟಾಳಿ ವೊಳಗುವ ವಾದ್ಯರಭಸದ
ಲೇಳಿಗೆಯು ಹರುಷದಲಿ ತಮ್ಮತಮ್ಮಖಿಳ ಪುರವರಕೆ
ಮೇಲೆ ಮನು ಮೊದಲಾದ ಪೃಥ್ವೀ । ಪಾಲರಿಂದ ಸಹಸ್ರಮಡಿಯಲಿ
ಪಾಲಿಸಿದನುರ್ವರೆಯ ಜನವನು ಸಕಲ ವಿಭವದಲಿ ೫೮

ಎಲ್ಲಿ ನೋಡಿದಡಲ್ಲಿ ಸೌಖ್ಯದ । ಸಲ್ಲಲಿತ ಸಂಪದದಮಯ ಸಿರಿ
ಯೆಲ್ಲಿ ನೋಡಿದಡಲ್ಲಿ ಧರ್ಮ ಸುಕರ್ಮಮಾರ್ಗಮಯ
ಎಲ್ಲಿ ನೋಡಿದಡಲ್ಲಿ ಬೆಳಸಿನ । ಭುಲ್ಲವಣೆಯ ವಿಲಾಸಮಯ ರಘು
ವಲ್ಲಭನ ರಾಷ್ಟ್ರದಲಿ ಹೇಳುವುದೇನು ತಾನೆಂದ ೫೯

ಪರಮಪ್ರೀತಿಯಿಂದ ತನ್ನ ನೆಚ್ಚಿನ ಕಿಂಕರನನ್ನು ಕಳುಹಿಸಿಕೊಟ್ಟನು. ೫೬. ಕಣ್ಣುಗಳಲ್ಲಿ
ನೀರು ಸುರಿಸುತ್ತ ಪರಾಕ್ರಮಸಾಗರನಾದ ಹನುಮಂತನು ಕರುಣಾಸಾಗರನ ಪಾದಗಳಿಗೆ
ನಮಸ್ಕರಿಸಿ ಅವನ ಅಪ್ಪಣೆ ಪಡೆದು ಹೊರಟನು. ಆ ಬಳಿಕ ರಾಕ್ಷಸಕುಲತಿಲಕ ವಿಭೀಷಣ
ನನ್ನು ಕರೆದು "ಚಂದ್ರಸೂರ್ಯರಿರುವವರೆಗೂ ಲಂಕೆಯನ್ನು ಸಂತೋಷದಿಂದ ಪಾಲಿಸು,
ಸುಖಿಯಾಗು ಹೋಗು" ಎಂದು ರಾಮನು ಹೇಳಿದನು. ೫೭. ಕಣ್ಣೀರುದುರಿಸುತ್ತ
ತನ್ನ ಪಾದಗಳಿಗೆ ನಮಸ್ಕರಿಸಿದ ಅಂಗದನ ತಲೆಯನ್ನು ಸವರಿ ರಾಮನು "ಬಾರಯ್ಯ
ವಾನರರಾಜವೀರನೇ, ನೀನು ರಾಜ್ಯಭಾರಮಾಡುತ್ತಿರುವವರೆಗೆ ನಮ್ಮ ಕೈಗೊಪ್ಪಿಸಿದ
ಕಂದನನ್ನು ರಕ್ಷಿಸು" ಎಂದು ಸುಗ್ರೀವನಿಗೆ ಹೇಳಿ ಅವನನ್ನು ಕಳುಹಿಸಿಕೊಟ್ಟ. ೫೮.
ಭೋರ್ಗರೆಯುವ ವಾದ್ಯಗಳೊಡನೆ ಸಂತೋಷದಿಂದ ಸಮಸ್ತ ವೀರಯೋಧರು ತಂತಮ್ಮ
ಪಟ್ಟಣಗಳಿಗೆ ಪ್ರಯಾಣಮಾಡಿದರು. ಹಿಂದಿನ ಮನುವೇ ಮೊದಲಾದ ರಾಜರುಗಳಿಗಿಂತ
ಸಾವಿರಪಾಲು ಚೆನ್ನಾಗಿ ವೈಭವದಿಂದ ರಾಮನು ಭೂಮಿಯ ಪ್ರಜೆಗಳನ್ನು ಸಲಹಿದನು.
೫೯. ರಾಜಾರಾಮನ ರಾಜ್ಯದಲ್ಲಿ ಎಲ್ಲಿ ನೋಡಿದರೆ ಅಲ್ಲಿ ಸೌಖ್ಯದಿಂದ ಕೂಡಿದ ಸಂಪತ್ತಿನ
ಸಿರಿ, ಎಲ್ಲಿ ನೋಡಿದರೆ ಅಲ್ಲಿ ಧರ್ಮದಿಂದ ಸತ್ಕರ್ಮಮಾರ್ಗದಲ್ಲಿ ನಡೆಯುವ ಜನ, ಎಲ್ಲಿ
ನೋಡಿದರೆ ಅಲ್ಲಿ ಸಮೃದ್ಧ ಬೆಳೆಯ ಸೊಗಸು. ಇದನ್ನು ನಾನು ಏನೆಂದು ವರ್ಣಿಸಲಿ

ಕಳವನೃತವನ್ಯಾಯ ಕೊಲೆ ದಳ । ವುಳವು ದುರ್ಭಯ ಬಾಧೆ ವಂಚನೆ
ಹಳವು ಹಾದರ ಬಂದಿ ಸಂಕರ ಜಾತ್ಯಧರ್ಮಗಳು
ಸುಳಿಯಲಜಿಯವು ರಾಮರಾಜ್ಯದ । ಸುಲಭತೆಗೆ ಸರಿಯಾವುದೈ ಕೇ
ಳಿಲೆ ಕುಶಾನುಜ ಕೇಳು ಕುಶ ನೀನೆಂದು ಮುನಿ ನುಡಿದ ೬೦

ನದಿನದಿಯ ತೀರದಲಿ ಗೃಹಸಂ । ಪದವು ಸಹಿತ ಸಮಸ್ತವಿಭವಾ
ಸ್ಪದ ಸಹಿತ ಸುಕ್ಷೇತ್ರ ಕನ್ಯಾಧೇನುಗಳು ಸಹಿತ
ಮದನಹರ ಮಧುವೈರಿ ದುರ್ಗಾ । ಸದನಗಳು ಸಹಿತಗ್ರಹಾರವ
ಪುದಿದನಿಳೆಯಲಿ ರಾಮನನುಪಮ ನಾಮನೊಲವಿನಲಿ ೬೧

ಪಳುಕಿನಲಿ ಸವೆದಮಲಭಾಂಡದೊ । ಳೆಳುಹಿದುಜ್ವಲ ದೀಪಕದ ವೈ
ಖರಿಗಿನವೊಲಂಭೋಜಸಂಭೂತಾಂಡಮಂಡಲವ
ಒಳಗಡೆಯ ಹೊರಗಡೆಯಲಂಚಿ ಪ್ರ । ಜ್ವಲಿಸಿತಗ್ಗದ ಕೀರ್ತಿರುಚಿ ರಘು
ಕುಲಲಲಾಮನ ರಾಮಚಂದ್ರನ ರಾಜ್ಯದೇಳ್ಗೆಯಲಿ ೬೨

ಕಟ್ಟಿದನು ಯುವರಾಜರಾಜಿತ । ಪಟ್ಟವನು ಭರತಂಗೆ ಸೇನಾ
ಪಟ್ಟವನು ಶತ್ರುಘ್ನನಲಿ ಸಂಧಿಸಿದನುರ್ವರೆಯ
ಕಟ್ಟಳೆಯ ಪಾಲನೆಯ ಮಿಕ್ಕೊಡ । ಹುಟ್ಟಿದಗೆ ನೇಮಿಸಿ ನಿಶಾಟಘ
ರಟ್ಟ ತೊರವೆಯರಾಯ ನರಹರಿ ಸಲಹಿದನು ಜಗವ ೬೩

ಎಂದರು ವಾಲ್ಮೀಕಿಗಳು. ೬೦. ಕಳ್ಳತನ, ಸುಳ್ಳು, ಅನ್ಯಾಯ. ಕೊಲೆ, ಲೂಟಿ ದುಷ್ಪರಭಯ, ಹಿಂಸೆ, ಮೋಸ, ನಿಂದೆ, ವ್ಯಭಿಚಾರ, ಸೆರೆ, ಜಾತಿಸಂಕರ, ಜಾತಿಗೆ, ಸಂಬಂಧಿಸಿದ ಅಧರ್ಮಗಳು ರಾಮರಾಜ್ಯದಲ್ಲಿ ಕಾಣಿಸಿಕೊಳ್ಳಲು ತಿಳಿಯವು. ಲವ ಕುಶರೇ ಕೇಳಿ, ರಾಮರಾಜ್ಯದ ಸೊಗಸಿಗೆ ಯಾವುದು ಸಮ-ಎಂದು ವಾಲ್ಮೀಕಿ ಮುನಿಗಳು ನುಡಿದರು. ೬೧. ವಾಸಕ್ಕೆ ಪ್ರಶಸ್ತವಾದ ಮನೆಗಳು, ಫಲವತ್ತಾದ ಹೊಲಗದ್ದೆಗಳು, ಕರುಹಾಕುವ ಉತ್ತಮವಾದ ಹಸುಗಳೊಡನೆ ಸಮಸ್ತ ವೈಭವಗಳು ತುಂಬಿತುಳುಕುವಂತೆ ಶ್ರೀರಾಮನು ನದೀತೀರಗಳಲ್ಲಿ ಅಗ್ರಹಾರಗಳನ್ನು ನಿರ್ಮಿಸಿ ಶಿವ, ವಿಷ್ಣು, ದುರ್ಗಿಯರ ದೇವಾಲಯಗಳನ್ನು ಕಟ್ಟಿಸಿದನು. ೬೨. ರಘುಕುಲತಿಲಕ ಶ್ರೀರಾಮಚಂದ್ರನ ರಾಜ್ಯದೇಳಿಗೆಯಿಂದ ಹಬ್ಬಿದ ಕೀರ್ತಿಪ್ರಕಾಶವು ಸ್ಫಟಿಕದ ಪಾತ್ರೆಯೊಳಗಡೆ ಹತ್ತಿಸಿಟ್ಟ ಉಜ್ವಲವಾದ ದೀಪದ ಕಾಂತಿಯಂತೆ ಬ್ರಹ್ಮಾಂಡಮಂಡಲದ ಒಳ ಹೊರಗಡೆಗಳೆರಡರಲ್ಲೂ ಬೆಳಗಿತು. ೬೩. ಶ್ರೀರಾಮನು ಯುವರಾಜಪಟ್ಟವನ್ನು ಭರತನಿಗೆ ಕಟ್ಟಿದನು, ಸೇನಾಧಿಪತ್ಯವನ್ನು ಶತ್ರುಘ್ನನಿಗೆ ಕೊಟ್ಟನು, ರಾಜ್ಯದ ನಿಯಮಗಳ ರಕ್ಷಣೆಯ ಭಾರವನ್ನು ಲಕ್ಷ್ಮಣನಿಗೆ ವಹಿಸಿದನು. ಹೀಗೆ ರಾಕ್ಷಸರನ್ನರೆಯುವ ಬೀಸುವ ಕಲ್ಲಾದ ತೊರವೆಯ ನರಸಿಂಹನ ಅವತಾರಸ್ವರೂಪಿ ಶ್ರೀರಾಮನು ರಾಜ್ಯವಾಳಿದನು.

ಮಂಗಳವು ಜಗಕಾಯ್ತು ಸುರರಿಗೆ । ಮಂಗಳದ್ರುಮ ಫಲಿತವಾಯಿತು
ಮಂಗಳವು ನೆಲೆಗೊಂಡುದೋದುವ ಹೇಳ್ವ ಕೇಳ್ವರಿಗೆ
ಸಂಗಡಿಸಿದುದು ಸಕಲ ಭಕ್ತಜ । ನಂಗಳಿಗೆ ಸುಖ ರಾಯ ತೊರವೆಯ
ಮಂಗಳಶ್ರೀಮೂರ್ತಿ ನರಕೇಸರಿಯ ಕಾವ್ಯದಲಿ ೬೪

ಚಾರುತರ ಕವಿ ರಾಜಹಂಸ ಕು । ಮಾರವಾಲ್ಮೀಕಿ ಪ್ರಬಂಧದ
ಸಾರಮಯ ರಾಮಾಯಣವನಾದರಿಸಿ ಕೇಳ್ವರಿಗೆ
ಶ್ರೀರಮಣನಿಹಪರದ ಸುಖಸಂ । ಪೂರಣವನೊಲಿದೀವನೆಂಬುದು
ಧಾರುಣಿಯೊಳಿದು ಸಿದ್ಧ ನಂಬುವುದುಳಿದು ಸಂಶಯವ ೬೫

ಶಿವನ ನುಡಿಯಿದು ಸರಸಿರುಹಸಂ । ಭವನ ಮಾತಿದು ಸುರಮುನಿಪನನು
ಭವದ ವಿಶ್ರುತವಾಕ್ಯವಿದು ವಾಲ್ಮೀಕಿಮುನಿವರನ
ಸವಿಗೊಡುವ ಕಾವ್ಯಾಮೃತಾರ್ಣವ । ದವಿರಳದ ಪಾನೀಯವಿದು ತ್ರೈ
ಭುವನರಂಜಿತ ಪುಂಜವೀ ರಘುರಾಮಚಂದ್ರಕೃತಿ ೬೬

ಸರಸ ವರ್ಣಕ ಕವಿಗಳೊಳು ಭಾ । ಸುರ ಕುಮಾರವ್ಯಾಸನೊಬ್ಬನು
ಪರಿಕಿಸುವಡಾನೊಬ್ಬ ಮಗುಳೆಣಿಸುವರೆ ವರ್ಣಕಕೆ
ವರ ಕುಮಾರವ್ಯಾಸನೊಬ್ಬನು । ಯೆರಡನೆಯಲಾನೊಬ್ಬ ಮಿಕ್ಕಿನ
ಜರಡುಕವಿಗಳ ಲೆಕ್ಕಿಸುವನೆ ಕುಮಾರವಾಲ್ಮೀಕಿ ೬೭

೬೪. ಜಗತ್ತಿಗೆ ಮಂಗಳವಾಯಿತು. ಕಲ್ಪವೃಕ್ಷವು ದೇವತೆಗಳಿಗೆ ಬಯಸಿದ ಫಲವನ್ನಿತ್ತಿತು, ಶ್ರೀರಾಮನ ಚರಿತೆಯನ್ನು ಓದುವ, ಹೇಳುವ ಮತ್ತು ಕೇಳುವ ಜನರಿಗೆ ಮಂಗಳವಾಯಿತು. ತೊರವೆಯೊಡೆಯನಾದ ಮಂಗಳ ಶ್ರೀಮೂರ್ತಿ ನರಸಿಂಹನ ಕಾವ್ಯದಿಂದ ಸಮಸ್ತ ಭಕ್ತಜನರಿಗೆ ಮಂಗಳವು ಲಭಿಸಿತು. ೬೫. ಶ್ರೇಷ್ಠ ಕವಿರಾಜಹಂಸ ಕುಮಾರ ವಾಲ್ಮೀಕಿ ರಚಿಸಿದ ಸಾರವತ್ತಾದ ರಾಮಾಯಣವನ್ನು ಆದರದಿಂದ ಕೇಳುವವರಿಗೆ ಲಕ್ಷ್ಮೀಪತಿ ಶ್ರೀಹರಿಯು ಈ ಲೋಕ ಪರಲೋಕಗಳಲ್ಲಿ ಪೂರ್ಣಸುಖವನ್ನು ಸಂತೋಷದಿಂದ ಕೊಡುವನು ಎಂಬುದು ಜಗತ್ತಿನಲ್ಲಿ ಸತ್ಯವಾದ ಮಾತು. ಸಂಶಯವನ್ನು ದೂರಮಾಡಿ ಈ ಮಾತನ್ನು ನಂಬತಕ್ಕದ್ದು. ೬೬. ಇದು ಶಿವನ ನುಡಿ, ಬ್ರಹ್ಮನ ಮಾತು, ನಾರದನ ಅನುಭವಸಿದ್ಧವಾದ ವಾಕ್ಯ, ವಾಲ್ಮೀಕಿಮಹರ್ಷಿಯ ಕಾವ್ಯಾಮೃತಸಾಗರದ ಪರಿಶುದ್ಧವಾದ ಸಿಹಿಪಾನೀಯ, ಮೂರು ಲೋಕಗಳನ್ನು ಬೆಳಗುವ ಪ್ರಕಾಶ ಈ ರಘುರಾಮಚಂದ್ರನ ಕಾವ್ಯ. ೬೭. ವರ್ಣಕ ಕಾವ್ಯಗಳ ರಸಿಕಕವಿಗಳಲ್ಲಿ ಸಮರ್ಥನಾದ ಕವಿಕುಮಾರ ವ್ಯಾಸ ಒಬ್ಬ, ಪರೀಕ್ಷಿಸಿ ನೋಡಿದರೆ ನಾನೊಬ್ಬ. ವರ್ಣಕ ಕಾವ್ಯಕವಿಗಳನ್ನು ಪುನಃ ಎಣಿಸಿದರೆ ಮೊದಲಿನವನು ಕುಮಾರವ್ಯಾಸ ಒಬ್ಬನೇ, ಎರಡನೆಯವನು ನಾನೊಬ್ಬ.

ವರ ಕುಮಾರವ್ಯಾಸನೇ ಬಂ । ಧುರದ ಭಾರತಕೃತಿಗೆ ಕರ್ತನು
ನಿರುತ ರಾಮಾಯಣಕೆ ಸುಕವಿ ಕುಮಾರವಾಲ್ಮೀಕಿ
ದೊರೆ ವಿಚಾರವದೇನು ಪೇಳದಿ । ರೆರಡು ಕಾವ್ಯಕೆ ಮಿಕ್ಕ ಶಬ್ದಾ
ಕ್ಷರ ದರಿದ್ರರ ಬಂಧ ಬಂಧುರ ರಸವಿವರ್ಜಿತರ ೭೮

ಧರೆಯೊಳಗ್ಗದ ರಾಘವೇಂದ್ರನ । ಚರಿತ ಶತಕೋಟಿಪ್ರವಿಸ್ತರ
ವರ ಮಹಾಚಾರಿತ್ರರಚನಾ ಸುಪ್ರಬಂಧದಲಿ
ಪರಮಭಕ್ತಿಯೊಳಾವನೊಂದ । ಕ್ಷರವ ಕೇಳ್ದ ನರಂಗೆ ಪಾತಕ
ಹರೆವುದೆಂದು ಕುಮಾರರಿಗೆ ವಾಲ್ಮೀಕಿಮುನಿ ನುಡಿದ ೭೯

ಭವಭವಾರ್ಜಿತ ದುರಿತಕೋಟಿಯು । ತವಿಸುವಗ್ಗದ ನಾಮ ಸರಸಿಜ
ಭವಭವೇಂದ್ರಾದ್ಯಖಿಳ ಪದವಿಯನೀವ ಗುಣನಾಮ
ಶಿವನ ನಚ್ಚಿನ ನಾಮ ಗಿರಿಸಂ । ಭವೆಯು ನೇಮದ ನಾಮ ಸುರನರ
ಭುವನ ಪಾವನನಾಮ ಸೀತಾಪತಿಯ ಸಿರಿನಾಮ ೮೦

ಒದೆವುದಘಸಂಹತಿಯ ತಲೆದೋ । ರಿದಡೆ ದಹಿಸುವುದೆಡರನಾಕಿದ
ಡದುಹಿ ಬಿಸುಡುವುದುನ್ಮದ ಪ್ರಳಯಪ್ರಪಂಚಕವ
ಮುದವನಿಹದಲಿ ಕೊಡುವುದಚ್ಯುತ । ಪದವ ಪರದೊಳಗೀವುದಿದು ನಿಗ
ಮದ ರಹಸ್ಯ ಪುರಾಣಸಿದ್ಧವಿದೆಂದು ಮುನಿ ನುಡಿದ ೮೧

ಮಿಕ್ಕ ಜಳ್ಳುಕವಿಗಳನ್ನು ಕುಮಾರವಾಲ್ಮೀಕಿ ಎಣಿಸುವನೆ ? ೭೮. ಮನೋಹರವಾದ ಭಾರತ ಮಹಾಕಾವ್ಯಕ್ಕೆ ವರ ಕುಮಾರವ್ಯಾಸನೇ ಕರ್ತೃ. ಸತ್ಯನಿಷ್ಠವಾದ ರಾಮಾಯಣ ಕೃತಿಯ ಕರ್ತೃ ಸುಕವಿ ಕುಮಾರವಾಲ್ಮೀಕಿ ಅವನಿಗೆ ಸಮ. ಇನ್ನೇನು ವಿಚಾರಮಾಡುವುದಿದೆ ? ಈ ಎರಡು ಕಾವ್ಯಗಳ ಜತೆಗೆ ಉಳಿದ ಶಬ್ದಾಕ್ಷರದರಿದ್ರರ ಹಾಗೂ ಬಿಗಿಯಾದ ರಚನೆಯಿಲ್ಲದ ರಸಹೀನ ಕಾವ್ಯಕರ್ತೃಗಳ ವಿಚಾರವನ್ನೆತ್ತಬೇಡ. ೭೯. ಜಗತ್ತಿನಲ್ಲಿ ಶ್ರೇಷ್ಠವಾದ ರಾಘವೇಂದ್ರನ ಮಹಿಮೆಯನ್ನು ವರ್ಣಿಸುವ ವಿಸ್ತಾರವಾದ ಶತಕೋಟಿ ರಾಮಾಯಣಗಳ ಮಹಾ ಚಾರಿತ್ರಕಾವ್ಯಗಳಲ್ಲಿ ಒಂದಕ್ಷರವನ್ನಾದರೂ ಯಾವನು ಪರಮಭಕ್ತಿಯಿಂದ ಆಲಿಸುತ್ತಾನೋ ಅಂಥ ಮಾನವನ ಪಾಪವು ನಿಶ್ಶೇಷವಾಗುವುದು ಎಂದು ವಾಲ್ಮೀಕಿಮಹರ್ಷಿಗಳು ಕುಶಲವಕುಮಾರರಿಗೆ ರಾಮಾಯಣದ ಮಹಿಮೆಯನ್ನು ತಿಳಿಸಿದರು. ೮೦. ಸೀತಾಪತಿಯ ಸಂಪದ್ಭರಿತವಾದ ಹೆಸರು ಜನ್ಮಜನ್ಮಾಂತರಗಳಲ್ಲಿ ಕೂಡಿಹಾಕಿದ ಪಾಪಕೋಟಿಯನ್ನು ನಾಶಪಡಿಸುವ ಪವಿತ್ರನಾಮ, ಬ್ರಹ್ಮ ಶಿವ ದೇವೇಂದ್ರಾದಿ ಸಕಲ ಪದವಿಗಳನ್ನೀಯುವ ಗುಣಭರಿತನಾಮ, ಶಿವನಿಗೆ ಪ್ರೀತಿಪಾತ್ರವಾದ ಹೆಸರು, ಪಾರ್ವತಿಯು ವ್ರತದಲ್ಲಿ ಉಚ್ಚರಿಸುವ ಹೆಸರು ಮತ್ತು ಸುರನರಲೋಕಗಳನ್ನು ಪಾವನಗೊಳಿಸುವ ಹೆಸರು. ೮೧. ರಾಮನಾಮವು ಪಾಪಸಮೂಹವನ್ನು ಒದ್ದೋಡಿಸುತ್ತದೆ, ವಿಘ್ನಗಳು ತಲೆದೋರಿದರೆ ಭಸ್ಮಮಾಡಿಬಿಡುತ್ತದೆ, ಸೊಕ್ಕೇರಿದ ವಿನಾಶಕಾರ್ಯವನ್ನು ಅದುಮಿ ಬಿಸಾಡುವುದು, ಇಹಲೋಕದಲ್ಲಿ ಸಂತೋಷವನ್ನೂ ಪರಲೋಕದಲ್ಲಿ ವಿಷ್ಣುಪದವಿಯನ್ನೂ ಕೊಡುವುದು. ಇದು ವೇದರಹಸ್ಯ, ಇದು ಪುರಾಣಗಳಲ್ಲಿ ಪ್ರತಿಪಾದಿತವಾದ ಸಿದ್ಧಾಂತ—ಎಂಬುದಾಗಿ ವಾಲ್ಮೀಕಿಮಹರ್ಷಿಗಳು ನುಡಿದರು.

# ೧. ಟಿಪ್ಪಣಿಗಳು

## ಯುದ್ಧಕಾಂಡ

ಸಂಧಿ ೨ : ೨೮ : **ಮಧುಕೈಟಭರು** : ಕಲ್ಪಾದಿಯಲ್ಲಿ ವಿಷ್ಣು ಆಲದೆಲೆಯ ಮೇಲೆ ಮಲಗಿದ್ದಾಗ ಆತನ ಕಿವಿಯ ಮಲದಿಂದ ಇಬ್ಬರು ರಾಕ್ಷಸರು ಹುಟ್ಟಿದರು. ಇವರು ನಾಭಿಕಮಲದಲ್ಲಿದ್ದ ಚತುರ್ಮುಖ ಬ್ರಹ್ಮನನ್ನು ಪೀಡಿಸತೊಡಗಿದರು. ಆಗ ವಿಷ್ಣು ಮಧುಕೈಟಭರ ಸಂಗಡ ಯುದ್ಧಮಾಡಿದ. ಮಧು ಕೈಟಭರು ಸ್ವಲ್ಪವೂ ಜಗ್ಗದೆ ಇರಲು ವಿಷ್ಣು ಪರಾಶಕ್ತಿಯನ್ನು ಹೊಗಳಿ ಆಕೆಯ ವರಪ್ರಭಾವದಿಂದ ಪುನಃ ಯುದ್ಧ ಮಾಡಿದನು. ಆ ರಾಕ್ಷಸರು, "ನಿನ್ನ ಸಾಮರ್ಥ್ಯಕ್ಕೆ ಮೆಚ್ಚಿದೆವು. ಬೇಕಾದ ವರವನ್ನು ಬೇಡು" ಎಂದರು. ಆಗ ವಿಷ್ಣು ನೀವು ನನ್ನಿಂದ ವಧ್ಯರಾಗುವ ವರವನ್ನು ಕೊಡಿ ಎನ್ನಲು ಮೋಸಹೋದ ಮಧುಕೈಟಭರು ಎಲ್ಲೆಲ್ಲಿಯೂ ನೀರು ಆವರಿಸಿಕೊಂಡಿದ್ದುದನ್ನು ನೋಡಿ "ಎಲ್ಲಿ ನೀರು ಆವರಿಸಿಕೊಂಡಿಲ್ಲವೋ ಅಲ್ಲಿ ಸಂಹರಿಸು" ಎಂದರು. ಆಗ ವಿಷ್ಣು ಅವರಿಬ್ಬರನ್ನೂ ತನ್ನ ತೊಡೆಯ ಮೇಲೆ ಕೊಂದ.

ಸಂಧಿ ೨ : ೩೦ : **ಮತ್ಸ್ಯಾವತಾರ** : ವಿಷ್ಣುವಿನ ಹತ್ತು ಅವತಾರಗಳಲ್ಲಿ ಮೊದಲನೆಯದು. ಸೋಮಕನೆಂಬ ರಾಕ್ಷಸ ವೇದಗಳನ್ನು ಅಪಹರಿಸಿದನು. ಆಗ ವಿಷ್ಣು ಮೀನಿನ ರೂಪವನ್ನು ಧರಿಸಿ ರಾಕ್ಷಸನನ್ನು ಕೊಂದು ವೇದಗಳನ್ನು ತಂದನು.

**ಕೂರ್ಮಾವತಾರ** : ವಿಷ್ಣುವಿನ ಅವತಾರಗಳಲ್ಲಿ ಎರಡನೆಯದು. ದೇವತೆಗಳೂ ರಾಕ್ಷಸರೂ ಕೂಡಿ ಮಂದರಪರ್ವತವನ್ನು ಕಡೆಗೋಲಾಗಿ ಮಾಡಿಕೊಂಡು ವಾಸುಕಿ ಯನ್ನು ಹಗ್ಗವಾಗಿ ಮಾಡಿಕೊಂಡು ಕ್ಷೀರಸಾಗರವನ್ನು ಅಮೃತಕ್ಕಾಗಿ ಕಡೆದರು. ರಾಕ್ಷಸರು ತಲೆಯನ್ನು ಹಿಡಿದುಕೊಳ್ಳುವಂತೆಯೂ ದೇವತೆಗಳು ಬಾಲವನ್ನು ಹಿಡಿದು ಕೊಳ್ಳುವಂತೆಯೂ ವಿಷ್ಣು ಏರ್ಪಡಿಸಿದ. ಕ್ಷೀರಸಾಗರವನ್ನು ಕಡೆಯುತ್ತಿರುವಲ್ಲಿ ಮಂದರ ಪರ್ವತವು ಸಮುದ್ರದ ಅಡಿಯಲ್ಲಿ ಕುಳಿತುಬಿಟ್ಟಿತು. ಆಗ ದೇವತೆಗಳೂ ದಾನವರೂ ವಿಷ್ಣುವನ್ನು ಪ್ರಾರ್ಥಿಸಲಾಗಿ ವಿಷ್ಣು ತನ್ನ ಒಂದು ಅಂಶದಿಂದ ಕೂರ್ಮ (ಆಮೆ) ರೂಪ ವನ್ನು ತಾಳಿ ತನ್ನ ಬೆನ್ನಮೇಲೆ ಮಂದರಪರ್ವತವನ್ನು ನಿಲ್ಲಿಸಿಕೊಂಡು ಕ್ಷೀರಸಾಗರವನ್ನು ಕಡೆಯಲು ಪ್ರೋತ್ಸಾಹಿಸಿದ.

**ವರಾಹಾವತಾರ** : (ಕ್ರೋಡ) ವಿಷ್ಣುವಿನ ಮೂರನೆಯ ಅವತಾರ. ಹಿರಣ್ಯಾ ಕ್ಷನು ಬ್ರಹ್ಮನನ್ನು ತಪಸ್ಸಿನಿಂದ ಮೆಚ್ಚಿಸಿ ಅನೇಕ ವರಗಳನ್ನು ಪಡೆದು ಲೋಕಕಂಟಕ ನಾದನು. ಆಗ ವಿಷ್ಣು ವರಹಾವತಾರ (ಹಂದಿಯರೂಪ)ವನ್ನು ಧರಿಸಿ ಅಸುರ ಹಿರಾಣ್ಯಾಕ್ಷನನ್ನು ಕೊಂದ.

ಸಂಧಿ ೩ : ೨೫ : **ನಾರದ** : ಒಮ್ಮೆ ಪರ್ವತನಾರದರು ವಿಷ್ಣುಭಕ್ತನಾದ ಅಂಬರೀಷನ ಮಗಳಾದ ಶ್ರೀಮತಿಯನ್ನು ಮೋಹಿಸಿದರು. ವಿಷ್ಣು ಮಾಯೆಯಿಂದ ಇವರು ಕಪಿಕೋಡಗಗಳಾಗಿ ಕಾಣಿಸಿದರು. ಇವರ ನಡುವೆ ಕಾಣಿಸಿಕೊಂಡ ವಿಷ್ಣುವಿಗೆ ಶ್ರೀಮತಿ ಮಾಲೆಯನ್ನು ಹಾಕಿದಳು. ಆಗ ಕೋಪಗೊಂಡ ಋಷಿಗಳು ಅಂಬರೀಷನನ್ನು ಶಪಿಸಹೋಗಿ ಚಕ್ರಾಯುಧದಿಂದ ತೇಜೋಭಂಗ ಹೊಂದಿದರು. ಕೊನೆಗೆ ವಿಷ್ಣುವಿಗೆ ಶರಣಾಗಿ ಬದುಕಿದರು.

**ಮಾರ್ಕಂಡೇಯ** : ಸ್ವಾಯಂಭುವ ಮನ್ವಂತರದಲ್ಲಿ ಬ್ರಹ್ಮಮಾನಸಪುತ್ರನಾದ ಭೃಗುಮಹರ್ಷಿಯ ಸಂತತಿಯಲ್ಲಿ ಜನಿಸಿದ ಮೃಕಂಡುಮುನಿಯ ಮಗ ಮಾರ್ಕಂಡೇಯ ಶಿವನನ್ನು ಮೆಚ್ಚಿಸಿ ವರ ಪಡೆದ ಕಥೆ ಪ್ರಸಿದ್ಧವಾಗಿದೆ. ಇಲ್ಲಿ ವಿಷ್ಣು ಮಾರ್ಕಂಡೇಯ ನನ್ನು ರಕ್ಷಿಸಿದನೆಂದು ತಿಳಿಸಿದೆ.

ಸಂಧಿ ೩ : ೨೬ : **ಗಜೇಂದ್ರ** : ಇಂದ್ರದ್ಯುಮ್ನನೆಂಬ ಪಾಂಡ್ಯದೇಶದ ರಾಜನು ವಿಷ್ಣುಭಕ್ತನಾಗಿದ್ದ. ಒಂದು ಸಲ ಈತನು ತ್ರಿಕೂಟಾಚಲದ ಕಣಿವೆಯಲ್ಲಿ ಮೌನತಪಸ್ಸಿನಲ್ಲಿದ್ದಾಗ ಅಗಸ್ತ್ಯಮಹರ್ಷಿಯನ್ನು ಗೌರವಿಸದ ಕಾರಣ ಶಾಪಕ್ಕೀಡಾಗಿ ಆನೆಯ ಜನ್ಮವನ್ನು ಪಡೆದ. ಒಂದು ಕೊಳದಲ್ಲಿ ನೀರು ಕುಡಿಯುತ್ತಿದ್ದಾಗ ಒಂದು ಮೊಸಳೆ ಬಂದು ಅದರ ಕಾಲನ್ನು ಹಿಡಿಯಿತು. ಪೂರ್ವಜನ್ಮಸ್ಮರಣೆಯಿಂದ ವಿಷ್ಣುವನ್ನು ಪ್ರಾರ್ಥಿಸಲು ವಿಷ್ಣು ಪ್ರತ್ಯಕ್ಷನಾಗಿ ಬಂದು ಮೊಸಳೆಯನ್ನು ಕೊಂದು ಇಂದ್ರದ್ಯುಮ್ನ ನನ್ನು ಶಾಪದಿಂದ ಬಿಡುಗಡೆಮಾಡಿದನು.

ಸಂಧಿ ೩ : ೨೬ : **ಅಜಾಮಿಳ** : ಕನ್ಯಾಕುಬ್ಜದ ಒಬ್ಬ ಬ್ರಾಹ್ಮಣ. ಶೂದ್ರಸ್ತ್ರೀ ಸಂಪರ್ಕ ಹೊಂದಿ ತಂದೆ ತಾಯಿಗಳನ್ನೂ ಧರ್ಮಪತ್ನಿಯನ್ನೂ ತ್ಯಾಗಮಾಡಿ ದುರಾ ಚಾರಗಳಿಂದ ಪತಿತನಾಗಿದ್ದ. ಸಾಯುವ ಕಾಲದಲ್ಲಿ ನಾರಾಯಣನೆಂಬ ತನ್ನ ಮಗನನ್ನು ಕೂಗಿ ಕರೆದನು. ಹೀಗೆ ನಾರಾಯಣ ಸ್ಮರಣೆಯಾದುದರ ಮಹಿಮೆಯಿಂದ ದಿವ್ಯಗತಿ ಯನ್ನು ಪಡೆದ.

**ಅಂಬರೀಷ** : ಅಂಬರೀಷನು ವಿಷ್ಣುಭಕ್ತಾಗ್ರೇಸರ. ಏಕಾದಶೀವ್ರತ ಪರಾಯಣ ನಾಗಿದ್ದ ಇವನ ನಿಯಮಕ್ಕೆ ಭಂಗ ಉಂಟುಮಾಡಲು ದುರ್ವಾಸಮುನಿ ಇವನ ಮನೆಗೆ ಬಂದ. ಸ್ನಾನಕ್ಕಾಗಿ ಹೋದ ದುರ್ವಾಸಋಷಿ ಪಾರಣೆಯಕಾಲಕ್ಕೆ ಭೋಜನಕ್ಕೆ ಬರ ಲಿಲ್ಲ. ಆಗ ಪಾರಾಯಣ ಕಾಲ ಮೀರುವುದೆಂದು ಹೆದರಿ ಋಷಿಗಳ ಮಾತಿನಂತೆ ಪಾರ ಣೆಗೆ ಬದಲಾಗಿ ನೀರನ್ನು ಕುಡಿದ. ಕೂಡಲೇ ಅಲ್ಲಿಗೆ ಬಂದು ದುರ್ವಾಸ ಅಂಬರೀಷನಿಗೆ ಶಾಪಕೊಟ್ಟ. ವಿಷ್ಣುವಿನ ಚಕ್ರಾಯುಧಕ್ಕೆ ಸಿಕ್ಕಿ ಅದರಿಂದ ತಪ್ಪಿಸಿಕೊಳ್ಳಲಾರದೆ ಅಂಬರೀಷನನ್ನೇ ಮರೆಹೊಕ್ಕು ಪಾರಾದ.

ಸಂಧಿ ೪ : ೬೨ : ಸಾಗರನ ಮೇಲೆತ್ತಿದ ರಾಮನ ಅಮೋಘ ಬಾಣವು ವ್ಯರ್ಥ ವಾಗತಕ್ಕದ್ದಲ್ಲ. ಆದುದರಿಂದ ಈ ಮಹಾಬಾಣವನ್ನು ಯಾವ ದೇಶದ ಮೇಲೆ ಬೀಳಿಸಲಿ

ಎಂದು ರಾಮನು ಸಮುದ್ರನನ್ನು ಪ್ರಶ್ನಿಸಿದನು. ಉತ್ತರದಲ್ಲಿ ದ್ರುಮಕುಲ್ಯ ಎಂಬ ಪ್ರದೇಶವಿದೆ. ಅಲ್ಲಿ ಉಗ್ರದರ್ಶನರೂ, ಪಾಪಕರ್ಮಿಗಳೂ ಆದ ದಸ್ಯುಗಳಿದ್ದಾರೆ. ಅವರು ನನ್ನ ನೀರನ್ನು ಕುಡಿಯುತ್ತಾರೆ. ಆ ಪಾಪಿಗಳ ಸ್ಪರ್ಶವನ್ನು ನಾನು ಸಹಿಸಲಾರೆ' ಎಂದನು ಸಮುದ್ರ. ಅಲ್ಲಿಗೆ ರಾಮನು ಬಾಣವನ್ನು ಬಿಡಲು ಬಾಣ ಚುಚ್ಚಿದ ಸ್ಥಳದಲ್ಲಿ ನೆಲಕ್ಕಾದ ಗಾಯದಿಂದ ಪಾತಾಳದ ನೀರು ಎದ್ದಿತು. ಆ ಬಾವಿಗೆ ವ್ರಣ ಎಂದು ಹೆಸರಾಯಿತು. ಬಾವಿಯಿಂದ ಎದ್ದ ನೀರು ಸಮುದ್ರದಂತೆ ಆಗಲು ರಾಮನು ಅದನ್ನು ಬತ್ತಿಸಿದ. ಅನಂತರ ರಾಮನು ಕೊಟ್ಟ ವರದಿಂದ ಅದು ಫಲಭರಿತವಾಗಿ ಹಾಗೂ ಹಾಲುತುಂಬಿದ ಅಸುಗಳಿಂದ ತುಂಬಿ ಮರುಕಾಂತಾರವೆಂದು ಪ್ರಸಿದ್ಧವಾಯಿತು.

ಸಂಧಿ ೬ : ೩೪ : **ಅನರಣ್ಯ :** ರಾವಣನು ಯುದ್ಧಕಾಂಕ್ಷಿಯಾಗಿ ರಾಜರುಗಳ ಬಳಿ ಹೋಗಿ ಯುದ್ಧವನ್ನು ಕೊಡಿ ಎಂದು ಕೇಳುತ್ತ ಬಂದನು. ಹೆದರಿದ ರಾಜರು ನಾವು ಸೋತೆವು ಎಂದು ಹೇಳಿ ಬದುಕಿಕೊಂಡರು. ಹೀಗೆ ರಾವಣನು ಅಯೋಧ್ಯಾಧಿಪತಿ ಅನರಣ್ಯನ ಬಳಿಗೆ ಬಂದು ನಾನು ಸೋತೆ ಎಂದು ಹೇಳು ಎಂದನು. ಕ್ರುದ್ಧನಾದ ಅನರಣ್ಯನು ರಾವಣನನ್ನು ದ್ವಂದ್ವಯುದ್ಧಕ್ಕೆ ಕರೆದನು. ಅನರಣ್ಯ ರಾವಣರ ನಡುವೆ ಅದ್ಭುತವಾದ ಯುದ್ಧ ನಡೆಯಿತು. ರಾಕ್ಷಸರಾಜನು ಅನರಣ್ಯನ ತಲೆಗೆ ಹೊಡೆಯಲು ಅವನು ರಥದಿಂದ ಕೆಳಕ್ಕೆ ಬಿದ್ದನು. ಅನರಣ್ಯನನ್ನು ರಾವಣನು ಹಾಸ್ಯ ಮಾಡಲು, "ಇಹಲೋಕದಲ್ಲಿ ಯಾರುತಾನೆ ಏನುಮಾಡಬಲ್ಲರು. ಕಾಲನನ್ನು ಯಾರೂ ಮೀರಲಾರರು. ಮಹಾತ್ಮರುಗಳಾದ ಇಕ್ಷ್ವಾಕುವಂಶದಲ್ಲಿ ಮುಂದೆ ದಶರಥನ ಮಗ ರಾಮನೆಂಬುವನು ಜನಿಸುತ್ತಾನೆ. ಅವನು ನಿನ್ನ ಪ್ರಾಣಗಳನ್ನು ತೆಗೆಯುವನು" ಎಂದು ಹೇಳಿ ಅಸುನೀಗಿದನು.

ಸಂಧಿ ೧೦ : ೪೫ : ದಿಗ್ವಿಜಯ ಮಾಡಿಕೊಂಡು ಬಂದ ರಾವಣನು ಬಲಿಚಕ್ರವರ್ತಿಯ ಅರಮನೆಗೆ ಬಂದನು. ಪ್ರಹಸ್ತನನ್ನು ಕಳುಹಿಸಿ ಮನೆ ಯಾರದೆಂದು ನೋಡಿಕೊಂಡು ಬಾ ಎಂದ ರಾವಣ. ಏಳು ಅಂಗಳಗಳನ್ನು ದಾಟಿಕೊಂಡು ಹೋದಾಗ ಸೂರ್ಯನಂತೆ ನೋಡಲು ಅಸಾಧ್ಯನಾದ ಯಮನಂಥ ವ್ಯಕ್ತಿಯನ್ನು ನೋಡಿ ಹಿಂದಿರುಗಿ ಬಂದು ರಾವಣನಿಗೆ ವಿಷಯವನ್ನು ತಿಳಿಸಿದನು. ರಾವಣನು ಪುಷ್ಪಕವನ್ನು ಇಳಿದುಬಂದು ಆ ಮಹಾತೇಜಸ್ವಿಯನ್ನು ಕಂಡು ತಾನು ಬಲಿಚಕ್ರವರ್ತಿಯೊಡನೆ ಯುದ್ಧ ಮಾಡಬೇಕೆಂಬುದಾಗಿ ಹೇಳುತ್ತಾನೆ. ಅನಂತರ ಬಲಿಚಕ್ರವರ್ತಿ ಬಂದು ನಿನಗೆ ನನ್ನಿಂದೇನಾಗಬೇಕು ಎಂದು ಕೇಳುತ್ತಾನೆ, ಆಗ ರಾವಣನು ತಾನು ವಿಷ್ಣುವಿನಿಂದ ಬಲಿಯನ್ನು ಬಿಡಿಸಲು ಬಂದಿರುವುದಾಗಿ ಹೇಳುತ್ತಾನೆ. ಬಾಗಿಲಿನಲ್ಲಿ ನಿಂತಿದ್ದವನು ಸಮಸ್ತ ಲೋಕಗಳ ಸೃಷ್ಟಿಕರ್ತನೂ ಸರ್ವಭೂತಾಪಹಾರಕನೂ ಆಗಿದ್ದಾನೆ. ಅವನನ್ನು ಮೀರಿ ಯಾರೂ ಏನೂ ಮಾಡಲಾರರು ಎಂದು ತಿಳಿಸಿದ ಬಲಿಚಕ್ರವರ್ತಿಯು ಇವನಿಂದಲೇ ದಾನವರೆಲ್ಲ ನಷ್ಟವಾದರು ಎಂದನು. ಇಲ್ಲಿ ಕಾಣುವ ಅಗ್ನಿಸದೃಶವಾದ ಪ್ರಜ್ವಲಿಸುವ ಚಕ್ರವನ್ನು ತೆಗೆದು

ಕೊಂಡು ಬಾ. ಅನಂತರ ನಿನಗೆ ಮುಕ್ತಿಕಾರಣವಾದ ವಿಷಯವನ್ನು ತಿಳಿಸುತ್ತೇನೆ ಎಂದ ಬಲಿ. ರಾವಣನಿಗೆ ಆ ಕುಂಡಲವನ್ನು ಅಲ್ಲಾಡಿಸಲೂ ಆಗಲಿಲ್ಲ, ಲಜ್ಜಿತನಾಗಿ ಪುನಃ ಪ್ರಯತ್ನಿಸಿ ಮೇಲಕ್ಕೆತ್ತಲು ರಾವಣನು ಕೆಳಗೆ ಬಿದ್ದುಬಿಟ್ಟನು. ಹೀಗೆ ರಾವಣನು ಬಲಿಯ ಮನೆಯಲ್ಲಿ ಅಪಮಾನಿತನಾದನು. ಅದು ಬಲಿಯ ಪೂರ್ವಜರ ಕರ್ಣಾಭರಣವಾಗಿತ್ತು. ಅನಂತರ ಬಲಿಯು ಮೋಕ್ಷದಾಯಕನಾದ ಶ್ರೀಹರಿಯ ಮಹಿಮೆಯನ್ನು ತಿಳಿಸುವನು.

ರಾ. ಉತ್ತರಕಾಂಡ. (ಪ್ರಕ್ಷಿಪ್ತ)

ಸಂಧಿ ೧೦ : ೪೯ : ಚಂದ್ರವಂಶದ ಕೃತವೀರ್ಯರಾಜನ ಮಗ ; ಕಾರ್ತವೀರ್ಯಾರ್ಜುನ ಎಂದು ಹೆಸರು. ವಿಂಧ್ಯಪರ್ವತಪ್ರಾಂತದಲ್ಲಿರುವ ಮಾಹಿಷ್ಮತೀ ನಗರಿಗೆ ಅರಸನಾಗಿದ್ದ, ಮಹಾಪರಾಕ್ರಮಿಯಾಗಿದ್ದ. ಒಮ್ಮೆ ರಾವಣನು ಇವನಲ್ಲಿಗೆ ಬಂದು ಯುದ್ಧ ಮಾಡಿ ಸೋತ. ಕಾರ್ತವೀರ್ಯ ರಾವಣನನ್ನು ಬಂಧನದಲ್ಲಿಟ್ಟ. ಆಗ ರಾವಣನ ತಂದೆ ಬಂದು ಕಾರ್ತವೀರ್ಯನನ್ನು ಪ್ರಾರ್ಥಿಸಿ ಮಗನನ್ನು ಬಿಡಿಸಿಕೊಂಡು ಬಂದ.

**ವೇದವತಿ :** ರಾವಣನು ಹಿಮತ್ಪರ್ವತದ ತಪ್ಪಲಿನಲ್ಲಿ ಸಂಚರಿಸುತ್ತ ಬಂದಾಗ ಜಟಾಧಾರಿಣಿಯಾಗಿ ತಪಸ್ಸು ಮಾಡುತ್ತಿದ್ದ ಕನ್ಯೆಯನ್ನು ಕಂಡನು. ರೂಪಸಂಪನ್ನಳಾದ ಅವಳನ್ನು ಕಂಡು ಕಾಮಮೋಹಿತನಾದ ರಾವಣನು ಅವಳ ಪೂರ್ವೋತ್ತರಗಳನ್ನು ವಿಚಾರಿಸಿದ. ತಾನು ಬ್ರಹ್ಮರ್ಷಿಯಾದ ಕುಶಧ್ವಜನ ಮಗಳು, ವೇದವತಿ ಎಂದು ಹೆಸರು ಎಂದು ತಿಳಿಸಿ ಅವನನ್ನು ಅತಿಥಿಸತ್ಕಾರದಿಂದ ಆದರಿಸಿದಳು. ದೈತ್ಯರು ಅವಳನ್ನು ವರಿಸಲು ಬಯಸಿದರು. ಅವಳು ನಾರಾಯಣನನ್ನು ಪಡೆಯಲು ತಪಸ್ಸುಮಾಡುತ್ತಿದ್ದಳು. ನನ್ನ ಹೆಂಡತಿಯಾಗು ಎಂದು ರಾವಣನು ಅವಳನ್ನು ಬಲಾತ್ಕರಿಸಿದನು; ಅವಳ ಮುಂದಲೆಯನ್ನು ಹಿಡಿದನು. ವೇದವತಿ ರಾವಣನಿಂದ ಬಿಡಿಸಿಕೊಂಡು ಕ್ರುದ್ಧಳಾಗಿ 'ಪಾಪಾತ್ಮನಾದ ನೀನು ನನ್ನನ್ನು ಅಪಮಾನಗೊಳಿಸಿದುದರಿಂದ ನಿನ್ನ ವಧಾರ್ಥವಾಗಿ ನಾನು ಮುಂದಿನ ಜನ್ಮದಲ್ಲಿ ಹುಟ್ಟುತ್ತೇನೆ' ಎಂದು ಹೇಳಿ ಅಗ್ನಿಪ್ರವೇಶಮಾಡಿದಳು. ಅವಳೇ ಸೀತೆಯಾಗಿ ಜನ್ಮ ತಳೆದಳು.

ಸಂಧಿ ೧೦ : ೫೦ : **ವಾಲಿ :** ರಾವಣನು ಪೃಥ್ವಿಯಲ್ಲಿ ಸಂಚರಿಸುತ್ತ ಯಾರಾದರೂ ಬಲಾಧಿಕರೆಂದು ತಿಳಿದುಬಂದರೆ ಅವರ ಬಳಿಗೆ ಹೋಗಿ ದರ್ಪದಿಂದ ಅವರನ್ನು ಯುದ್ಧಕ್ಕೆ ಆಹ್ವಾನಿಸುತ್ತಿದ್ದ. ಹೀಗಿರಲು ವಾಲಿ ರಾಜ್ಯವಾಳುತ್ತಿದ್ದ ಕಿಷ್ಕಿಂಧೆಗೆ ಬಂದು ವಾಲಿಯನ್ನು ಯುದ್ಧಕ್ಕೆ ಕರೆದ. ವಾಲಿಯು ಪ್ರತಿದಿನ ಚತುಸ್ಸಾಗರಗಳಿಗೆ ಹೋಗಿ ಸಂಧ್ಯಾವಂದನೆಯನ್ನು ಆಚರಿಸಿ ಬರುತ್ತಿದ್ದ. ಅವನು ದಕ್ಷಿಣ ಸಾಗರದ ಬಳಿ ಇದ್ದಾನೆಂಬುದನ್ನು ತಿಳಿದ ರಾವಣನು ಪುಷ್ಪಕವಿಮಾನವನ್ನೇರಿ ಅಲ್ಲಿಗೇ ಹೋದನು. ಸಂಧ್ಯೋಪಾಸನ ತತ್ಪರನಾದ ವಾಲಿಯನ್ನು ರಾವಣ ಕಂಡ. ರಾವಣನು ವಾಲಿಯನ್ನು ಹಿಡಿದು

ಕೊಳ್ಳಲು ಯೋಚಿಸುತ್ತಿರಲು ಅವನ ಪಾಪಕಾರ್ಯವನ್ನು ಗ್ರಹಿಸಿದ ವಾಲಿ ಮೌನದಿಂದ ರಾವಣನನ್ನು ಕಂಕುಳಲ್ಲಿ ಇರುಕಿಕೊಂಡನು. ಅಲ್ಲಿಂದ ಮೂರು ಸಾಗರಗಳಿಗೂ ವಾಲಿ ಹೋಗಿಬಂದನು. ರಾವಣನು ವಾಲಿಯ ಕಂಕುಳಲ್ಲಿ ಸಿಕ್ಕಿಕೊಂಡು ಬಿಡಿಸಿಕೊಳ್ಳಲಾರದೆ ಒದ್ದಾಡುತ್ತ ಕಿರುಚಿಕೊಂಡನು. ವಾಲಿಯು ಶಾಂತಮನನಾಗಿ ಮಂತ್ರಗಳನ್ನುಚ್ಚರಿಸುತ್ತ ಪೂರ್ವ ಪಶ್ಚಿಮ ಉತ್ತರ ಸಾಗರಗಳಲ್ಲಿ ಸಂಧ್ಯೋಪಾಸನೆಯನ್ನು ಮುಗಿಸಿಕೊಂಡು ಕಿಷ್ಕಿಂಧೆಗೆ ಬಂದ. ಅಲ್ಲಿ ರಾವಣನನ್ನು ವಾಲಿ ಕಂಕುಳಿಂದ ಕೆಳಗೆ ಬೀಳಿಸಿದನು. ವಾಲಿಯ ಅಗಾಧ ಪರಾಕ್ರಮವನ್ನು ಹೊಗಳಿ ರಾವಣನು ವಾಲಿಯೊಡನೆ ಸಖ್ಯವನ್ನು ಪ್ರಾರ್ಥಿಸಿದನು.

ಸಂಧಿ ೧೯ : ೩೨ : ಗರುಡ ಕಶ್ಯಪಮುನಿಯಿಂದ ವಿನತೆಯಲ್ಲಿ ಜನಿಸಿದವ. ವಿನತೆಯು ಸವತಿಯಾದ ಕದ್ರುವಿಗೆ ದಾಸಿಯಾಗಿದ್ದಳು. ದಾಸಿಯ ಮಗನಾದುದರಿಂದ ಗರುಡನು ಕದ್ರುವಿನ ಮಾತಿನಂತೆ ನಡೆಯಬೇಕಾಗಿತ್ತು. ಒಂದು ಸಲ ಕದ್ರು ತನ್ನ ಮಕ್ಕಳನ್ನು ಹೆಗಲಮೇಲೇರಿಸಿಕೊಂಡು ಸುತ್ತಾಡಿಸಿಕೊಂಡು ಬರಬೇಕೆಂದು ಗರುಡನಿಗೆ ಹೇಳಿದಳು. ಅದೇ ರೀತಿ ಗರುಡನು ಅವರನ್ನು ಬೆನ್ನ ಮೇಲೆ ಕೂರಿಸಿಕೊಂಡು ಆಕಾಶಕ್ಕೆ ಹಾರಿ ಬಹಳ ಹೊತ್ತಿನವರೆಗೆ ಹಾರಾಡುತ್ತಿದ್ದು ಕೆಳಕ್ಕೆ ಇಳಿದುಬಂದನು. ಅಷ್ಟರಲ್ಲಿ ಕದ್ರುವಿನ ಮಕ್ಕಳಲ್ಲಿ ಕೆಲವರು ಸೂರ್ಯನ ತಾಪವನ್ನು ಸಹಿಸಲಾರದೆ ಸತ್ತುಹೋಗಿದ್ದರು. ಇದನ್ನು ಕಂಡು ಕದ್ರು ಗರುಡನನ್ನು ಚೆನ್ನಾಗಿ ಬಯ್ದು ನಿಂದಿಸಿದಳು. ಗರುಡನಿಗೆ ತುಂಬ ದುಃಖವಾಯಿತು. ತನ್ನ ತಾಯಿ ಏತಕ್ಕೆ ದಾಸಿಯಾಗಿರಬೇಕು ಎಂದು ಅವಳನ್ನು ಪ್ರಶ್ನಿಸಿದನು. ಕದ್ರುವಿಗೂ ತನಗೂ ಉಂಟಾದ ವಿವಾದದಲ್ಲಿ ತಾನು ಸೋತುದರಿಂದ ತಾನು ದಾಸಿಯಾಗಬೇಕಾಯಿತು ಎಂದು ವಿನತೆ ತಿಳಿಸಿದಳು. ಆಗ ಗರುಡ ಕದ್ರುವಿನ ಬಳಿಗೆ ಹೋಗಿ ತನ್ನ ತಾಯಿ ದಾಸ್ಯದಿಂದ ಬಿಡುಗಡೆಯಾಗಬೇಕಾದರೆ ಏನುಮಾಡಬೇಕು ಎಂದು ಕೇಳಿದ. ಅಮೃತವನ್ನು ತಂದುಕೊಟ್ಟಲ್ಲಿ ವಿನತೆ ದಾಸ್ಯದಿಂದ ಬಿಡುಗಡೆ ಹೊಂದುವಳು ಎಂದು ಕದ್ರು ಹೇಳಿದಳು. ಆಗ ಗರುಡ ದೇವಲೋಕಕ್ಕೆ ಹೋಗಿ ಅಮೃತರಕ್ಷಕರನ್ನು ಕೊಂದು ಇಂದ್ರನ ವಜ್ರಾಯುಧದ ಏಟನ್ನು ಲೆಕ್ಕಿಸದೆ ಸೂಕ್ಷ್ಮರೂಪದಿಂದ ಒಳಹೊಕ್ಕು ಕಾವಲಿದ್ದ ಘಟಸರ್ಪಗಳನ್ನು ಕೊಂದು ಅಮೃತಕಲಶವನ್ನು ತರುತ್ತಿದ್ದ. ಇಂದ್ರ ಅವನ ಮೇಲೆ ವಜ್ರವನ್ನೆಸೆಯಲು ಅದಕ್ಕೆ ತನ್ನ ಒಂದು ಗರಿಯನ್ನು ಬಲಿಕೊಟ್ಟ. ಗರುಡನ ಪರಾಕ್ರಮವನ್ನೂ ಅವನು ಅಮೃತವನ್ನು ತೆಗೆದುಕೊಂಡು ಹೋಗುತ್ತಿರುವ ಉದ್ದೇಶವನ್ನೂ ಮೆಚ್ಚಿದ ಇಂದ್ರ ಸರ್ಪಗಳು ಗರುಡನಿಗೆ ಆಹಾರವಾಗುವಂತೆ ವರವನ್ನಿತ್ತು ಕಳುಹಿಸಿದ. ಗರುಡನು ಅಮೃತವನ್ನು ಕದ್ರುವಿಗೆ ಒಪ್ಪಿಸಲು ಅವಳು ವಿನತೆಯನ್ನು ದಾಸ್ಯದಿಂದ ಬಿಡುಗಡೆಮಾಡಿದಳು.

ಸಂಧಿ ೨೭ : ೧೧ : ಕುಂಭಕರ್ಣ ಪುಲಸ್ತ್ಯನ ಮಗನಾದ ವೈಶ್ರವಸನಿಂದ ಕೈಕಸಿಯಲ್ಲಿ ಜನಿಸಿದ ಎರಡನೆಯ ಮಗ. ಈತನು ಹುಟ್ಟಿದೊಡನೆ ಹೊಟ್ಟೆಹಸಿವಿನಿಂದ

ಸಾವಿರಾರು ಮಂದಿಯನ್ನು ಭಕ್ಷಿಸಿದ. ಪ್ರಜೆಗಳು ಭಯಪೀಡಿತರಾದರು. ಇಂದ್ರನ ಬಳಿಗೆ ಹೋಗಿ ಮೊರೆಯಿಡಲು ಇಂದ್ರನು ಕೋಪದಿಂದ ಬಂದು ವಜ್ರಾಯುಧದಿಂದ ಕುಂಭ ಕರ್ಣನನ್ನು ಹೊಡೆದ. ಕುಂಭಕರ್ಣನು ಅರಚಿಕೊಳ್ಳುತ್ತ ಇಂದ್ರನ ಐರಾವತದ ಒಂದು ದಂತವನ್ನು ಮುರಿದುಕೊಂಡು ಯುದ್ಧಮಾಡಲಾರಂಭಿಸಿದ. ಆಗ ಇಂದ್ರನು ಬ್ರಹ್ಮನ ಬಳಿಗೆ ಓಡಿಹೋಗಿ ವಿಷಯವನ್ನು ತಿಳಿಸಿದ. ಆ ಬ್ರಹ್ಮನು ವಿನಾಶಕಾರಿ ಕುಂಭಕರ್ಣ ನನ್ನು ಕಂಡು ಯಾವಾಗಲೂ ಗಾಢನಿದ್ರೆಯಲ್ಲಿರುವಂತೆ ಶಾಪಕೊಟ್ಟ. ಆಗ ರಾವಣನು ಬ್ರಹ್ಮನನ್ನು ಪ್ರಾರ್ಥಿಲಾಗಿ ಇವನು ಆರು ತಿಂಗಳಿಗೊಂದುಸಲ ಒಂದು ದಿನ ಎಚ್ಚರ ಗೊಳ್ಳುವಂತೆ ಅನುಗ್ರಹಿಸಿದ.

ಸಂಧಿ ೩೦ : ೨೮ : 'ದೇವಸ್ಥಾಪನಾಚಾರಿಯನ ಮಗನಲ್ಲಾ.' ದೇವದಾನವರು ಕ್ಷೀರಸಾಗರವನ್ನು ಕಡೆದಾಗ ವಾಲಿ ನೋಡುವುದಕ್ಕೆ ಹೋಗಿದ್ದ. ದೇವತೆಗಳು ಕಡಲನ್ನು ಕಡೆದು ದಣಿದಿದ್ದಾಗ ವಿಷ್ಣು ಇಂದ್ರನ ಮೂಲಕ ವಾಲಿಯನ್ನು ಬರಮಾಡಿಕೊಂಡು ಇವನಿಗೆ ಎದುರಾಗಿ ನಿಂತವನ ಸಾಮರ್ಥ್ಯದಲ್ಲಿ ಅರ್ಧಭಾಗ ಇವನಿಗೆ ಬರಲಿ ಎಂದು ವಿಷ್ಣು ವಾಲಿಗೆ ವರವನ್ನು ಕೊಟ್ಟನು. ಅನಂತರ ದಿವ್ಯವಾದ ಚಿನ್ನದ ಕಮಲಹಾರ ವನ್ನು ಕೊಟ್ಟನು. ಕ್ಷೀರಸಾಗರವನ್ನು ಕಡೆಯುವಲ್ಲಿ ದೇವತೆಗಳಿಗೆ ಸಹಾಯ ಮಾಡು ವಂತೆ ಹೇಳಿದನು. ಈ ರೀತಿ ಕ್ಷೀರಸಾಗರವನ್ನು ಕಡೆಯಲು ದೇವತೆಗಳಿಗೆ ಸಹಾಯ ಮಾಡಿದ ವಾಲಿಯನ್ನು ಇಲ್ಲಿ 'ದೇವಸ್ಥಾಪನಾಚಾರ್ಯ' ಎಂದು ಕರೆಯಲಾಗಿದೆ.

ಸಂಧಿ ೩೬ : ೫೬ : 'ಜೀವಾಳದಮಹೌಷಧಿಯ ನಾಲ್ಕಣಿ ಮೂಲಿಕೆ.' ಮೃತ ಸಂಜೀವಿನಿ, ವಿಶಲ್ಯಕರಣಿ, ಸಾವರ್ಣ್ಯಕರಣಿ, ಸಂಧಾನಕರಣಿ ಇವೇ ಆ ನಾಲ್ಕು ಮೂಲಿಕೆಗಳು.

ಸಂಧಿ ೩೯ : ೯ : 'ಶನಿಯ ಸಹೋದರನ ಕಿಂಕರರು.' ಯಮನ ಸೇವಕರು. ಸೂರ್ಯನು ತ್ವಷ್ಟ್ರುವಿನ ಮಗಳಾದ ಸಂಜ್ಞಾದೇವಿಯನ್ನು ಮದುವೆಯಾಗಿ ಅವಳಿಂದ ಯಮ, ಮನು, ಯಮುನೆ ಎಂಬ ಮೂವರು ಮಕ್ಕಳನ್ನು ಪಡೆದ. ಸಂಜ್ಞಾದೇವಿಯ ಪ್ರತಿಬಿಂಬಳಾದ ಛಾಯಾದೇವಿಯಲ್ಲಿ ಸಾವರ್ಣಿ, ಶನೈಶ್ಚರರೆಂಬ ಇಬ್ಬರು ಮಕ್ಕಳನ್ನು ಪಡೆದ. ಈ ರೀತಿಯಲ್ಲಿ ಯಮನು ಶನಿಯ ಸಹೋದರನಾದ.

# ೨. ಅರ್ಥಕೋಶ

ಪದ ಅರ್ಥ ಸಂಧಿ : ಪದ್ಯ

## ಅ

ಅಂಕಣಿ-ಸಂಪೂರ್ಣವಾಗಿ, ಲೆಕ್ಕಹಾಕಿ? ೨೬ ೧೫

ಅಂಕಣೆ-ರಿಕಾಪು ೨೯ ೧೯

ಅಂಕಮಾಲೆ-ಬಿರುದಿನಮಾಲೆ, ಬಿರುದಾವಳಿ ೨೦ ೧೯

ಅಂಗಡ-ಅಂಗಳ ೨೧ ೧೦

ಅಂಗದ-ತೋಳಿನಬಳೆ ೪೬ ೨೪

ಅಂಗವಿಸು-ಮೇಲೆಬೀಳು, ಮುತ್ತು ೧೪ ೨೭

ಅಂಚಿತ-ವಿಶದ, ಪ್ರಕಾಶ, ಸ್ಫುಟ, ಎದ್ದುಕಾಣು ೫೫ ೪೩

ಅಂಡು-ಸಮೀಪ, ಹತ್ತಿರ ೧೧ ೨೨

ಅಂಡುಗೊಳ್-ಸಮೀಪಿಸು, ಹತ್ತಿರಹೋಗು, ಹೋಗಿಸೇರು ೧೪ ೩೮

ಅಂಬರಕೇಶ-ವ್ಯೋಮಕೇಶ, ಈಶ್ವರ ೫೩ ೯೪

ಅಕಾರಮ-ವಿಕಾರ ? ೨೪ ೩೧

ಅಕ್ಕಜ-ಹೊಟ್ಟೆಕಿಚ್ಚು, ಅಸೂಯೆ ೨೬ ೬

ಅಕ್ಕಿಸು-ಅರಗಿಸಿಕೋ, ಜೀರ್ಣಿಸಿಕೋ ೪೮ ೩೫

ಅಕ್ಕು-1 ಹಿಡಿ, ಅಪ್ಪು ೧೯ ೨

2 ಜೀರ್ಣಿಸಿಕೊ, ಏಳಿಗೆ, ಲಾಭ ೨೨ ೭

ಅಕ್ಕುಡ-ಸತ್ವಹೀನ, ನಿಸ್ಸಾರ, ಕುಗ್ಗು ೪೦ ೪೪

ಅಕ್ಕುಡಿಸು-ಕುಸಿ, ಕುಗ್ಗು ೧ ೧೨

ಅಕ್ಷಮ-ತಾಳ್ಮೆಯಿಲ್ಲದ, ಸಹಿಸಿಕೊಳ್ಳಲಾರದ ೫೪ ೪೨

ಅಕ್ಷರ-ನಾಶವಿಲ್ಲದ, ಮರಣವಿಲ್ಲದ ೧೬ ೩೭

ಅಗಲು-ಊಟದತಟ್ಟೆ, ತಳಿಗೆ ೫೫ ೪೪

ಅಗಿ-ತೊನೆದಾಡು ೫೩ ೭

ಅಗುಳಿವನೆ-ಅಗುಳಿಯಮನೆ, ರಕ್ಷಾಗೃಹ ? ೩೬ ೨

ಅಘವಿರೋಧಿ-ಕೃಷ್ಣ, ವಿಷ್ಣು ೪೫ ೧೩

ಅಘಾಟ-ಅದ್ಭುತ, ಅತಿಶಯ, ಲೋಕೋತ್ತರ ೩೧ ೨೩

ಅಘೋರ-ಅತಿಭಯಂಕರ ೨೦ ೬೪

ಅಚ್ಚಬಲ-ಶೂರಸೈನ್ಯ, ದಿಟ್ಟಸೇನೆ ೧೯ ೩೫

ಅಚ್ಚಾಳು-ಶ್ರೇಷ್ಠಆಳು, ದಿಟ್ಟಸೈನಿಕ ೪೫ ೫೮

ಅಚ್ಚಾಳುತನ-ದಿಟ್ಟ ಶೌರ್ಯ, ದಿಟ್ಟ ಸೈನಿಕತನ ೪೨ ೨

ಅಚ್ಚು-ನಡುಗೂಟ, ಕೀಲು ೨೧ ೩೩

ಅಜಗವಪಾಣಿ-ಪಿನಾಕಪಾಣಿ, ಶಿವ ೫೫ ೧೯

ಅಟಮಟಿಸು-ಸುಳ್ಳುಹೇಳು, ಮೋಸಮಾಡು, ವಂಚಿಸು ೩೪ ೧೫

ಅಟವೀಚರ-ಕಪಿ ೪ ೧

ಅಟ್ಟೆಳವಾರು-ಮೇಲಕ್ಕೆ ಹಾರು ೧೯ ೩೦

ಅಟ್ಟಿಸು-೧ ಕಾಯಿಸು, ಕುದಿಸು ೧೫ ೩

೨ ಸ್ವಾಧೀನಪಡಿಸಿಕೋ, ವಶಪಡಿಸಿಕೋ ೨೨ ೧೦

ಅಟ್ಟುಗಹಳೆ-ಮುನ್ನುಗ್ಗುವ ಸೂಚನೆಯನ್ನು ಕೊಡುವ ಕಹಳೆ ೫ ೨೪

ಅಟ್ಟುಗಾಜಿ-ಹೊಡೆದೋಡಿಸುವವನು ೪೮ ೨೨

ಅಟ್ಟುಳಿ-ಕಿರುಕುಳ, ಕಾಟ, ಪೀಡೆ, ಹಿಂಸೆ ೩೦ ೩

ಅಡಗಲಸು-ತಡೆಗಟ್ಟು, ಎದುರಿಸು, ಪ್ರತಿಭಟಿಸು ? ೪೪ ೨೯

ಅಡಪು–ಆಸರೆ, ಆಶ್ರಯ ೧೬ ೨

ಅಡಬಳರ್–(ಅಡಬಳ–ಮಾಂಸ) ರಾಕ್ಷಸರು ೪೫ ೫೦

ಅಡಲಿ–ಕೆಸರು, ಅಟ್ಟು ೭ ೧೧

ಅಡವೊಯ್ಲು–ಅಡ್ಡವಾಗಿ ಹೊಡೆಯುವುದು ೧೭ ೪೪

ಅಡ್ಡಣ–ಗುರಾಣಿ ೩೧ ೨೦

ಅಡ್ಡಣಿಗೆ–ಊಟಕ್ಕೆ ತಟ್ಟೆಬಟ್ಟಲುಗಳನ್ನಿಡುವ ಮೂರು ಕಾಲಿನ ಮಣೆ ೫೫ ೩೮

ಅಣಕಸಣಕ–ಕುಚೋದ್ಯ, ಅಪಹಾಸ್ಯ ೧೦ ೫೭

ಅಣದಾಡು–ಹೊಡೆ, ಅಪ್ಪಳಿಸು, ತಿವಿದಾಡು ೫ ೩

ಅಣಲ್–ದವಡೆ ೬ ೩೬

ಅಣಸು–ಬಾಣದಬುಡ, ಬುಡಕ್ಕೆ ಹಾಕಿದ ಲೋಹದ ಕಟ್ಟು ೨೭ ೪೬

ಅಣಹು–(ಅಣವು) ತಾಗು, ತಿವಿ ೬ ೧೨

ಅಣೆ–1 ವ್ಯಾಪಿಸು ೪ ೩೨

2 ತಿವಿ, ಚುಚ್ಚು ೭ ೧೭

3 ಗುಣಾಕಾರಮಾಡು ೨೬ ೧೦

ಅದುಹು–ಗದರಿಸು, ನಿಂದಿಸು, ಧಿಕ್ಕರಿಸು ೫ ೨೨

ಅದ್ದಳ–ಅಬ್ಬರ, ಬೊಬ್ಬೆ, ಘೋಷ ೧೯ ೫೬

ಅದ್ದಿಸು–ಅಡಗಿಸು, ಮರ್ದಿಸು, ಹಿಂಸಿಸು, ನೋಯಿಸು ೨೭ ೧೨

ಅದ್ರಿಸಾರ–ಕಬ್ಬಿಣ ೧೯ ೧೮

ಅದ್ವಯ–ಭೇದರಹಿತ, ಎರಡಿಲ್ಲದ ೪ ೪೮

ಅನಘ–ದೋಷರಹಿತ, ಪರಿಶುದ್ಧ ೪ ೪೨

ಅನವಸಾನ ಸಾವಿಲ್ಲದವನು ೪ ೪೮

ಅನಿಮೇಷ–ರೆಪ್ಪೆಹೊಡೆಯದ ೫೩ ೯೪

ಅನುಜಾತ–ತಮ್ಮ, ಒಡಹುಟ್ಟಿದವನು ೨೬ ೪೨

ಅಪಕೃತ–ಅಪಕಾರ, ಕೇಡು, ಅಹಿತ ೪೯ ೨೧

ಅಪಯಾನ–ಹಿಂದಿರುಗು, ಪಲಾಯನ ೨೪ ೨೭

ಅಪರಾಂಗ–ಹಿಂದುಗಡೆ ೧೦ ೧೧

ಅಪವರ್ತಿಸು–ವಿಭಾಗಿಸು, ನೋಡು ೮ ೪೭

ಅಪಶಯ–ಅಪಯಶ, ಅಪಕೀರ್ತಿ ೨ ೪೬

ಅಪಸರಣೆ–ತಪ್ಪಿನಡೆ ೪ ೫೭

ಅಪ್ರಬುದ್ಧಿಕೆ–ತಿಳಿಗೇಡಿತನ ೨೬ ೯

ಅಬುಧ–ಮೋಡ ೩೪ ೪

ಅಬ್ಬಳಿಕೆ–ಉಬ್ಬಳಿಕೆ ? ಗರ್ವ ? ೨೯ ೯

ಅಭವ–ಹುಟ್ಟು ಇಲ್ಲದವನು ೧೬ ೩೭

ಅಭಿಗತ–ಎದುರಾಗಿ ಹೋಗು ೪೫ ೩

ಅಭಿಭಾವ–ಸೋಲಿಸು, ತಿರಸ್ಕರಿಸು, ಅಪಮಾನಗೊಳಿಸು ೬ ೨೯

ಅಭಿಯೋಗ–ಆಸಕ್ತಿ, ಅಭಿಲಾಷೆ ೧ ೭

ಅಭಿರಂಜನೆ–ಪ್ರಕಾಶಗೊಳಿಸು ೫ ೫೯

ಅಭಿವಿನ್ಯಾಸ–ಅಭಿನಯ, ನಟನೆ ೧೦ ೩೬

ಅಭಿಸಂಧಿ–ಉದ್ದೇಶ, ಗುರಿ, ಧ್ಯೇಯ ೧೯ ೨೮

ಅಭಿಸಾರ–ಯುದ್ಧಕ್ಕೆ ಹೋಗುವುದು ೧೯ ೩೫

ಅಭ್ಯಾಗಮಿಕ–ಹಗೆ, ದ್ವೇಷಿ ೨ ೪೯

ಅಭ್ರ–ಮೋಡ ೪೫ ೨೯

ಅಮರಗಿರಿ–ಮೇರುಪರ್ವತ ೧ ೧೩

ಅಮರುಷ, ಅಮರ್ಷ–ಕೋಪ, ರೋಷ ೨೭ ೪೫

ಅಮರ್ಚು–ಅಪ್ಪು, ಆಲಿಂಗಿಸು ೫೫ ೪

ಅಮಿತ–ಅಳತೆಗೆ ಮೀರಿದ ೧೬ ೩೭

ಅರಕೆ–ಬಾಯಾರಿಕೆ, ಬಯಕೆ ೨೫ ೩೪

ಅರವರಿಸು–ಉಪೇಕ್ಷಿಸು, ಕಡೆಗಣಿಸು ೫೫ ೪೫

ಅರಿಗಡಗ–ಕುದುರೆ ಬಾಯಿಗೆ ಕಟ್ಟುವ ಕಬ್ಬಿಣದ ಬಳೆ ? ೨೯ ೧೪

ಅರಿಯಮ–ಅರ್ಯಮ, ಸೂರ್ಯ ೩೪ ೭೯

ಅರುಠಾಳ–ಅಂಟುವಾಳ ೧೮ ೧೮

ಅರುಹಿಸು–ಬತ್ತು ? ೫ ೧೬

ಅಱುಕಿಸು–ಬದಿಗೊತ್ತು ೧೯ ೬

ಅಜೆಁಗಲ್ಲು–ಅರೆಯುವಕಲ್ಲು, ಮಸೆಯುವ ಕಲ್ಲು ೭ ೧೦

ಅಲಗಣಸು–1 ಅಲಗಿನ ಸ್ಪರ್ಶ, ಏಟು, ಹೊಡೆತ, ಮೇರೆವಿಾರು ೩೨ ೩೫
2 ಸಮಾನ, ಪ್ರತಿಸ್ಪರ್ಧೆ ೧೭ ೪೧

ಅವಕಳಿ–ತೇಜೋಭಂಗಮಾಡು, ಹೀಯಾಳಿಸು ೧೯ ೫

ಅವಗಡಿಸು-ಹೀಯಾಳಿಸು, ಧಿಕ್ಕರಿಸು ೧೯ ೫

ಅವಗಾಹಿಸು–ನುಗ್ಗು ೪೦ ೯

ಅವಘಟೆಯ–ಸಾಹಸಿ ೪೦ ೪೫

ಅವಿಲಣ-ಕಡಿವಾಣದ ಕಬ್ಬಿಣದ ಮೊಳೆ ೨೯ ೧೨

ಅವ್ಯಯ–ನಾಶವಿಲ್ಲದವನು ೪ ೪೮

ಅವ್ವಳಿಸು-ಆಕ್ರಮಿಸು, ಮುಂದೆನುಗ್ಗು ೩೩ ೧೪

ಅಸವಳಿ–ಶಕ್ತಿಗುಂದು, ಆಯಾಸಗೊಳ್ಳು ೪೫ ೨೦

ಅಸಿಧೇನು–ಸಣ್ಣಕತ್ತಿ, ಕಿಗ್ಗತ್ತಿ ೧೦ ೨೯

ಅಳಬಳ–1 ಶಕ್ತಿ, ಸಾಮರ್ಥ್ಯ ೨ ೪೧
2 ಅಂತರಂಗ, ಅಭಿಪ್ರಾಯ, ಉದ್ದೇಶ ೫೦ ೧೪

ಅಳವಿಗೊಳ್–ವಿಶ್ವಾಸಗೊಳ್, ನಂಬಿಕೆ ಹೊಂದು, ಸಾಮರ್ಥ್ಯಹೊಂದು ೪೩ ೨೦

ಅಳಿಗೊಂಬು–ಮುರಿಯುವ ಸಣ್ಣಕೊಂಬೆ ೧೪ ೩೧

ಅಳಿಜುಳುಕು–ಹೀನಾಯವಾಗಿ ಹಿಮ್ಮೆಟ್ಟು, ಹಿಂದೆಗೆ ೬ ೬೪

ಅಳಿವು–ಅಳಿಪು, ಅತ್ಯಾಸೆ ೧೦ ೪೨

ಅಳುಜುಳುಕು-ಹೆದರಿ ನುಣುಚಿಕೋ ? ೩೫ ೯

ಅಳ್ಳಿಗುಕ್ಕು–ಪಕ್ಕೆಯನ್ನು ತಿವಿ ೨೬ ೨೮

ಅಳ್ಳೆವಾಜು–ಪಕ್ಕೆ ಹೊಡೆದುಕೋ, ನಡುಗು ೨೭ ೩೯

ಅಳ್ಳೆವೊಯ್–ಪಕ್ಕೆ ಹೊಡೆದುಕೋ ೫ ೧೬

## ಆ

ಆಕರಣೆ–ಕರೆ, ಆಹ್ವಾನ ೫೧ ೫೪

ಆಖಂಡಲ-ಇಂದ್ರ ೫೩ ೨

ಆಖಂಡಲ ದಿಗಂತ–ಇಂದ್ರದಿಕ್ಕು, ಪೂರ್ವ ದಿಕ್ಕು ೧೩ ೨

ಆಗಮ–ಜ್ಞಾನ, ತಿಳಿವಳಿಕೆ ೧೦ ೫೨

ಆಟವಿಕ–ಧೂರ್ತ ೩೧ ೨೩

ಆದಿಗೊಂಡು–ಹಿಂಸೆಕೊಟ್ಟು ೧೩ ೪೭

ಆನಕ–ಭೇರಿ, ನಗಾರಿ ೭ ೧೫

ಆನೆವರಿ–ಆನೆಯಂತೆ ಮುಂದೆ ನುಗ್ಗು ೩೦ ೬

ಆಪಗಾಪತಿ–ಸಮುದ್ರ ೨೩ ೧೮

ಆಪೋಶನ–ಊಟದ ಮೊದಲೂ, ಊಟದ ನಂತರವೂ ಮಂತ್ರಪೂರ್ವಕವಾಗಿ ಬೊಗಸೆಯಿಂದ ಹೀರುವ ನೀರು ೫೫ ೪೮

ಆಭಿಚಾರ–ಮಾಟ, ಮೋಡಿ ೪೨ ೧೩

ಆಭೀಳ–ಭಯಂಕರ ೫೦ ೩೦

ಆಮಿಷ–ಮಾಂಸ ೧೯ ೩೮

ಆಮ್ನಾಯ-ವೇದ, ಪರಂಪರಾಗತ ಪದ್ಧತಿ, ಸಂಪ್ರದಾಯ ೬ ೨೬

ಆಯತಿಕೆ–ಮಹಿಮೆ ೫೩ ೧೧೨

ಆರಟೆ–ಹಿಂಸೆ, ಸೂರೆ ೧೨ ೪೦

ಆರಿಕೆ–ಶಕ್ತಿ, ಸಾಮರ್ಥ್ಯ ೨೦ ೬೨

ಆಲ್-ಗಟ್ಟಿಯಾಗಿ ಕೂಗು, ಕಿರಿಚು ೨೩ ೨೨

ಆಲೀಢ–ಬಾಣಬಿಡಲು ನಿಲ್ಲುವ ರೀತಿ, ಬಲಗಾಲನ್ನು ಮುಂದಿಟ್ಟು ಎಡಮಂಡಿಯನ್ನು ಊರಿಕೊಂಡು ನಿಲ್ಲುವ ಬಗೆ ೧೫ ೧೬

ಆವರ್ತ–ಸುಳಿ ೧ ೧೭

ಆಶುಗ–1 ಗಾಳಿ ೨೪ ೩೫
2 ಬಾಣ ೯ ೧೫

ಆಶುಶುಕ್ಷಣಿ–ಬೆಂಕಿ ೫೪ ೩೯

ಆಶ್ರಯಭಕ್ಷಣ–ಅಗ್ನಿ ೨ ೧೮

ಆಳಿ–ಆಲಿ, ಆರ್ಭಟಿಸು ೩೦ ೪೧

ಆಳಿಕಾಟಿ–1 ಛಲಗಾರ ೨೦ ೮೯

2 ಮೋಸಗಾರ, ವಂಚಕ ೨ ೫೫

ಆಳಿಗೊಳ್-ಅಪಮಾನಿಸು, ಧಿಕ್ಕರಿಸು ೨೬ ೨

ಆಳುವೇರಿ–ಕೋಟೆಯ ಸುತ್ತಣ ಗೋಡೆ, ಕೋಟೆಯ ತೆನೆಯ ಹಿಂಬದಿಯಲ್ಲಿ ಸುತ್ತಲೂ ಓಡಾಡಲು ಮಾಡಿರುವ ದಾರಿ ೧೧ ೬

ಆಸ್ತರಣ-ಹಾಸುವುದು, ಹರಡುವುದು ೪ ೨೧

**ಇ**

ಇಂಡೆ-ಹೂವಿನಹಾರ, ದಂಡೆ, ಮಾಲೆ ೪೨ ೩೩

ಇಂದ್ರಾರಿ–ರಾಕ್ಷಸ, ರಾವಣ ೩೭ ೧೦

ಇಂಬು–ಎಡೆ, ಆಶ್ರಯ ೪ ೫೭

ಇಕ್ಕಲಿಸು–1 ನಡುಗು ೧೩ ೨೨

2 ಎರಡು ಭಾಗವಾಗು ೧೯ ೬೨

ಇಟ್ಟಣಿಸು–ಗುಂಪಾಗಿ ಸೇರು, ಒತ್ತಾಗಿ ಸೇರು ೫ ೨೨

ಇಟ್ಟಣಿ–ಇಟ್ಟಣಿ, ಸಮೂಹ ೭ ೧೨

ಇಟ್ಟೆಡೆ–ಇಕ್ಕಟ್ಟು ೧೩ ೧೮

ಇಡಿಕು_ಬಲವಾಗಿ ಎಸೆ ೨೨ ೨೩

ಇಡುಕು–ಬಲವಾಗಿ ಎಸೆ, ಚಿಮ್ಮಿಸು ೧೭ ೬

ಇಡುಹು-ಬೀಸಿ ಹೊಡೆ ೧೮ ೧೦

ಇಪ್ಪುರಿ-ಎರಡು ಹುರಿ, ಎರಡು ನಡತೆ ೫೩ ೭೮

ಇಬ್ಬಡಲೆ-ಬೀಟೆಮರ ೧೮ ೧೮

ಇಮ್ಮು–ಸೊಗಸು, ಚಂದ ೪೫ ೧೭

ಇರುಬು–ಇಕ್ಕಟ್ಟು, ಸಂದು ೬ ೫೨

**ಈ**

ಈಡಿಜು–ಚಿಮ್ಮು, ವ್ಯಾಪಿಸು, ತುಂಬು ೫೦ ೪೩

ಈನಿಸು–ಒದಗಿಸು ೨೦ ೫೩

**ಉ**

ಉಂಬಳಿ–ಮಾನ್ಯವಾಗಿ ಕೊಡುವ ಭೂಮಿ ಗ್ರಾಮ ಮೊದಲಾದವು ೬ ೩೭

ಉಕ್ಕಂದ-ತುಂಬಿತುಳುಕಾಡು, ಉಕ್ಕು ೧೦ ೭೦

ಉಗ್ಗಟ–ಉತ್ಕಟ, ಅತಿಶಯ ೧ ೧೫

ಉಗ್ಘಡಣೆ ಬಿರುದಾವಳಿಯ ಹೊಗಳಿಕೆ ೬ ೧೦

ಉಚ್ಛೇದ–ಕತ್ತರಿಸು ೧೩ ೪೨

ಉತಾವುರಿ–ರಭಸ, ತೀವ್ರತೆ ೧೪ ೨೨

ಉತ್ತರಣ-ದಾಟು, ಪಾರಾಗು ೪೬ ೪

ಉತ್ತರಾಯ್–1 ಅಧಿಕ, ಮೀರಿದುದು? ೫ ೫

2 ಪರಕೀಯ ೫೫ ೪೪

ಉತ್ತರಾಯಿ–1. ಹಕ್ಕುದಾರ ೫೧ ೩೧

2. ಹಂಗುಕಳೆ, ಋಣ ತೀರಿಸು ೫೫ ೫೪

ಉತ್ತಾನಪಾದಜ-ಧ್ರುವ ೮ ೩೭

ಉತ್ತಾಳ-ವೇಗ, ಚುರುಕಾದ ನಡಿಗೆ, ಎತ್ತರ, ಔನತ್ಯ ೬ ೧೨

ಉತ್ಸೇಧ_ಎತ್ತರ ೩೬ ೪೨

ಉದಗ್ರ-ವೀರ ೧೩ ೫

ಉದಿತ-ಏಳಿಗೆ, ಅಭಿವೃದ್ಧಿ ೮ ೮

ಉದುಗಲಿಸು-ಹೊರಚೆಲ್ಲು, ಗತಿಸು, ನಾಶಪಡಿಸು ೩೬ ೭೧

ಉದ್ದಂಡ–ದರ್ಪ, ಗರ್ವ, ಅಹಂಕಾರದ ಮಾತು ೪ ೫೧

ಉದ್ದಂಡಿಸು–ಮೀರು ೫ ೩೫

ಉದ್ದಿಗೆ-ಬಂಡಿಯ ಮುಂಭಾಗದ ಈಚು, ಈಸುಮರ ೩೮ ೯

ಉದ್ದು–ಉಜ್ಜು, ತೇಯು ೫ ೨೮

ಉದ್ಭ್ರಮಿಸು–ಹೆದರು, ಭಯಗೊಳ್ಳು ೪೫-೫೦

ಉಪಲ- ಕಲ್ಲು, ಶಿಲೆ ೪ ೨೪

ಉಪಹತಿ–ಕೇಡು, ಅಪಾಯ ೪೪ ೨

ಉಪ್ಪರ-ಅತಿಶಯ ೧೪ ೨೦

ಉಬ್ಬಟೆ_ಸಾಹಸ ೫ ೩೪

ಒತ್ತಂಬರಿಸು-ಮುತ್ತು, ಆವರಿಸು,
ಆಕ್ರಮಿಸು ೬ ೧೭
ಒಪ್ಪಚಿ-ಒಮ್ಮೆ, ಒಂದು ಸಲ, ಸ್ವಲ್ಪ,
ತುಸು ೧೦ ೩೮
ಒಬ್ಬುಳಿ-ಒಟ್ಟುಗೂಡು, ಸಮೂಹ,
ಗುಂಪು, ಸಾಲು ೬ ೧೯
ಒಬ್ಬುಳಿಗರು-ಗುಂಪಾದವರು,
ಒಟ್ಟಾದವರು ೧೫ ೬
ಒಱಹು-ಕೆಟ್ಟು ೫೦ ೩೧
ಒರ್ವುಳಿ-1 ಗುಂಪು, ಬಟ್ಟಲು ೧೯ ೩೩
2 ಒಟ್ಟುಗೂಡಿಸು, ಹದಕ್ಕೆತರು,
ಸಮಾಧಾನಕ್ಕೆ ತಂದುಕೊ ೨೬ ೧೧

ಓ

ಓರರ-ಓರೆಯಾಗು, ಅರುಗಾಗು ೧೧ ೨೦
ಓರೆಪೋರೆ-ಅಂಕುಡೊಂಕು ೨೮ ೪೮
ಓಱುಗುಡಿಸು-ಕುಸಿ, ಮುಗ್ಗರಿಸು ೪೮ ೧೮
ಓಲಗಾರ್ಹ-ಓಲಗಕ್ಕೆ ಅಥವಾ
ಸೇವೆಗೆ ಯೋಗ್ಯವಾದುದು ೫೩ ೭೫
ಓಸರಿ-ಧಾರೆ ? ೨೭ ೧೫
ಓಳಿ-ಆಳಿ ? ಸಱಿ ೨೦ ೮೪

ಕ

ಕಂಡಳ-ಕಡೆಯುವುದು, ಕೊರೆಯು
ವುದು ೩೪ ೬೩
ಕಂಡೆಳೆ-ಮುರಿತ ? ೪೦ ೩೪
ಕಂಬುಗೆ-ರಥಗುಪ್ತಿ, ರಥದ ರಕ್ಷಣೆಗಾಗಿ
ಸುತ್ತಲೂ ಹಾಕಿದ ಕಬ್ಬಿಣದ
ಅಥವಾ ಮರದ ಕಟಾಂಜನ ೨೨ ೨೨
ಕಕುಭ-ದಿಕ್ಕು ೧೩ ೨೭
ಕಕ್ಕಡೆ ಒಂದು ವಿಧವಾದ ಕಠಾರಿ ೭ ೭
ಕಕ್ಕುಲಿತೆ-ಬಯಕೆ, ಹಂಬಲ, ಪ್ರೀತಿ,
ಮೋಹ ೬ ೫೯

ಕಕ್ಷ-ಕಂಕುಳು ೩೬ ೨೮
ಕಟಕ-1 ಸೈನ್ಯ 2 ಬೆಟ್ಟದ ತಪ್ಪಲು ೧ ೧೫
3 ಬಳೆ ೪೬ ೨೪
ಕಟಕಾಯ-ದೊಡ್ಡ ಸೈನ್ಯ, ವಿಸ್ತಾರ
ವಾದ ಸೈನ್ಯ ೧ ೨೦
ಕಟಾಹ-ಕೊಪ್ಪರಿಗೆ ೭ ೨೩
ಕಟುಕ-ಖಾರ ೫೫ ೩೪
ಕಡುದುರು-ಕಣಜ ೭ ೧೧
ಕಡುಹು-1 ಉತ್ಸಾಹ, ಹುರುಪು,
ತೀವ್ರತೆ, ರಭಸ ೧ ೨
2 ಉಂಡೆ ೪ ೫೩
ಕಡೆಗಟ್ಟು-ಪಾಳಯ, ಬೀಡು ? ೭ ಸೂ
ಕಡೆಯ-ಕಾಲಿನ ಬಳೆ, ಕಾಲುಕಡಗ ೨ ೬
ಕಣಲಿಗೆ-ಕಣಗಿಲೆ ೩೦ ೪೩
ಕಣಲಿಗೆಯಲಗು-ಒಂದು ರೀತಿಯ
ಬಾಣ ೪೪ ೯
ಕಣೆಯ-1 ರೀತಿ, ಪದ್ಧತಿ, ನ್ಯಾಯ ೨ ೫೩
2 ಬಾರಿ, ಸರತಿ, ಸಲ ೨೬ ೧೬
3 ಕಥೆ, ಪ್ರಸಂಗ ೧೦ ೩೬
ಕತ್ತರಿವಾಣಿ-ಸೋಕಿದರೆ ಕತ್ತರಿಸುವ
ನೀರು, ವಿಷೋದಕ ೭ ೧೬
ಕದ್ದಿ-ಆತುರ, ಉತ್ಸಾಹ ೧ ೮
ಕದಬದಿಸು-ಕಳವಳಗೊಳ್ಳು, ಭ್ರಾಂತಿಗೊಳ್ಳು
೨೨ ೨೦
ಕದಲಿಕೆ-ಚಲನೆ ೨೯ ೨೧
ಕದಳಿಕೆ-ಧ್ವಜ, ಬಾವುಟ ೪೯ ೧೫
ಕದುಕಿಱಿ-ಕುಕ್ಕು, ಚುಚ್ಚು ೨೯ ೧೭
ಕದ್ದಿಕಾಱ-ಉತ್ಸಾಹಶಾಲಿ ೨೨ ೩೨
ಕನಕಾಂಗದ-ರುಕ್ಮಾಂಗದ ೩ ೨೬
ಕಪಾಲ-ತಲೆಬುರುಡೆ ೧೭ ೨೫
ಕಬ್ಬಿ-ಉಕ್ಕಿನಕಡಿ, ಕುದುರೆಯ ಬಾಯಲ್ಲಿ

ಸೇರಿಸಿ ಕಟ್ಟುವ ಕಬ್ಬಿಣದ ತುಂಡು ೨೯ ೧೨
ಕರಂಜಿ–ಹುಲಿಗಿಲಮರ ೧೮ ೧೮
ಕರಕರಿಸು–ಕಾಡು, ಹಿಂಸಿಸು ೧೨ ೧೬
ಕರಕರೆ–ಹಿಂಸೆ, ಕಾಟ ೧೨ ೪
ಕರಡಗೆ–ಭರಣಿ ೪ ೩೩
ಕರಣ–ಲೇಖಕ, ಗುಮಾಸ್ತ ೧೩ ೩೫
ಕರಪಾತ್ರ–ಕಮಂಡಲು, ಕೈಪಾತ್ರೆ ೪೩ ೨೬
ಕರಬೋನ–ಅಗಲಬಾಯುಳ್ಳ ಚಿಕ್ಕನೀರಿನ ಪಾತ್ರೆ ೨೦ ೮೪
ಕರಿಸ–ನೊರೆ ೪೭ ೧೪
ಕರಿಸೆ–ಜೊಲ್ಲು ೭ ೨೯
ಕರುವಿಡು–ಎರಕಹೊಯ್ ೧೪ ೧೧
ಕರೋಟಿಮಾಲಿ–ಶಿವ ೪೦ ೪೪
ಕರ್ಕಶ–ಯಮ ೧೦ ೩೭
ಕರ್ಣಪತ್ರ–ಕಿವಿಯ ಆಭರಣ ೪ ೩೯
ಕರ್ಣಪೂರ– ,, ೫೧ ೯೩
ಕರ್ಬುರ–ರಾಕ್ಷಸ ೪೪ ೮
ಕಲಶಭವ–ಅಗಸ್ತ್ಯ ೫೧ ೩೮
ಕಲಾಪ–ಯುದ್ಧ ೩೧ ೨೭
ಕಲಾವಿದ-ಜಾಣ ೪೬ ೧೬
ಕವತೆ–1 ಸುಲಿಗೆ, ಸೂರೆ, ಲೂಟಿ 2 ಪೀಡೆ, ಹಿಂಸೆ ೧೩ ೪೦
ಕವಲಂಬು-ಅರ್ಧಚಂದ್ರಾಕೃತಿಯ ತುದಿಯುಳ್ಳ ಬಾಣ ೮ ೪೬
ಕಳಲಿಸು–ಬೀಳಿಸು, ಅಲ್ಲಾಡಿಸು ೧೧ ೧೧
ಕಳಲು–ಬೀಳು, ಕುಸಿ ೫ ೧೩
ಕಳವಲಿ-ರಣಬಲಿ ೨೭ ೩೩
ಕಳಿವರಿ–ಮಿತಿಮೀರು ೯ ೬
ಕಳುಗುಡುಹಿ-ಹೆಂಡ ಕುಡಿಯುವವನು ೩೩ ೨೨
ಕಳ್ಳೇರು-ಕಪಟಯುದ್ಧ ೬ ೮
ಕಾಂಡ-ಬಾಣ ೨೦ ೭೪
ಕಾಪೇಯ ಕಪಿಗಳ ತಂತ್ರದ ಕೆಲಸ ೮ ೪೩
ಕಾಮುಂದಿ-ನಿಷ್ಪ್ರಯೋಜಕರು, ಕೆಟ್ಟಜನ ೫೧ ೮
ಕಾರಗಲಸು-ನೆಲಸಮಮಾಡು, ಧ್ವಂಸ ಮಾಡು ೩೨ ೨೦
ಕಾರಮುಗಲಸು–ಮೋಡಗಳ ಲೋಕಕ್ಕೆ ಸೇರಿಸು, ಕೊಲ್ಲು ? ೪೫ ೫೮
ಕಾರಿಗೆ–ಕಂದಕ, ಅಗಳು ೫೧ ೭
ಕಾರ್ಪಣ್ಯ–ದೈನ್ಯ, ದಯೆ, ಮರುಕ ೫ ೫೮
ಕಾರ್ಪಾಸ-ಹತ್ತಿ ೨೯ ೧೬
ಕಾಲಕರ್ಮ–ಸಾವು ೪೨ ೩೦
ಕಾಲಾಟ–ನರ್ತನ ೩೧ ೨೩
ಕಾಲುಗಾಹು-ಹಿಂದಿನಿಂದ ಮಾಡುವ ರಕ್ಷಣೆ, ಬೆಂಗಾವಲು ೨೯ ೨೦
ಕಾಲ್ದುಳಿ-ಕಾಲಾಟ, ಕಾಲ್ತುಳಿತ ೧೩ ೪೦
ಕಾಲ್ದುಳುಕು-ಕಾಲುಗಳನ್ನು ತೊಡರಿಸು ೩೨ ೪೫
ಕಾಶ್ಯಪಿ-ಭೂಮಿ ೩೬ ೭೫
ಕಾಹುರ-1 ಕೋಪ, ಉದ್ವೇಗ, ಕಾತರ ೪೭ ೧
2 ಕಾವರ, ಸೊಕ್ಕು, ರಭಸ, ಸಂಭ್ರಮ ೫ ೧೬
ಕಾಳಮೂಳ–ದುಷ್ಟ, ತಿಳಿಗೇಡಿ ೨ ೪೪
ಕಾಳಿಕೆ-ಕಪ್ಪು ೫೩ ೪೩
ಕಾಳಿಜ–ಕಳಿಜ, ಪಿತ್ತಾಶಯ ೧೩ ೩೮
ಕಿಂಶುಕ–ಮುತ್ತುಗದ ಮರ ೧೭ ೩೩
ಕಿತ್ತಡ-ತಪಸ್ಸು, ಧ್ಯಾನ ೪೪ ೨೨
ಕಿನ್ನರಪತಿ–ಕುಬೇರ ೨೦ ೬೨
ಕಿಬ್ಬದಿ-ಪಕ್ಕೆ, ಆಳ್ಳೆ ೨೭ ೫೨
ಕಿವಿಗಡಿ–ಕಿವಿದುದಿ, ಕಿವಿಯಕೊನೆ ೩೫ ೫೯
ಕೀಲಣ–ಕೀಲಿಸು, ಬೆಸುಗೆ ೨೦ ೭
ಕೀಲಣಿಗೆ–ತಂತ್ರ ೪೪ ೩೯
ಕೀಲಾಲ–1 ನೆತ್ತರು, ರಕ್ತ ೨೪ ೧೭

2 ನೀರು ೧೨ ೧೩

ಕುಂಡಲ–ಕುಣಿಕೆ ೭ ೨೩

ಕುಂಡಲಭಟ–ಅಧಿಕಾರದ ಸಂಕೇತವಾದ ಕಿವಿಯ ಆಭರಣ, (ಉಂಗುರ) ಧರಿಸಿದ ವೀರ ೫೧ ೯೯

ಕುಂತ–ಈಟಿ, ಭರ್ಜಿ ೭ ೭

ಕುಂಬಿಕ್ಕು–ಕುಸಿ ೩೬ ೭೫

ಕುಂಭಿನಿ–ಭೂಮಿ ೧೧ ೧

ಕುಟ್ಮಳಿತ–ಮುಗಿದ (ಮೊಗ್ಗೆಯಂತೆ ಮಾಡಿದ) ೫೩ ೬೩

ಕುತ್ತುದಲೆ–ಕುಸಿದ ತಲೆ ೪೬ ೪೬

ಕುತ್ತುಱ್–ಪೊದರು ೬ ೧೭

ಕುದುಕುಳಿ–ಉತ್ಸಾಹ ೧೬ ೪೦

ಕುಪ್ಪಳಿ–ಕುಪ್ಪೆ, ಗುಡ್ಡೆ ೪೫ ೬೧

ಕುಪ್ಪಿಗೆಯಕೋಲು–ತುದಿಯಲ್ಲಿ ಚೂಪಾದ ಮೊನೆಯ ಲೋಹದ ಹೊದಿಕೆಯಿರುವ ಬಾಣ ೪೪ ೯

ಕುರುಪಟ–(ಕುರುಪಾಟ) ಗುರಿ ತಾಗುವಿಕೆ ೩೨ ೨೬

ಕುಸುರಿ–ಚೂರು, ಕೊಚ್ಚು ೧೦ ೮

ಕುಸ್ತರಿಸು 1 ಆಲುಗಾಡಿಸು, ಉಪಚರಿಸು, ಆದರಿಸು ೩೫ ೩೮

2 ಸಮಾಧಾನಪಡಿಸು, ಸಂತೈಸು ೨೮ ೬೭

ಕುಳುಗಿಡಿ–ಉರಿಗಿಡಿ, ಸಲಾಕಿಯಂಥ ಕಿಡಿ ೧೯ ೫೭

ಕೂಚಿ–ದಂಡಿನ ರವಾನೆ, ಸೈನ್ಯದ ಚಲನೆ ೨೫ ೩೦

ಕೂಬರ–ರಥದ ಈಸು, ಇರ್ಚಿಮರ ೨೧ ೩೩

ಕೂರುಗೊಳ್–ಪ್ರೀತಿಸು, ಮೋಹಿಸು ೩೪ ೮

ಕೂಳ್ಗುದಿ–ಅನ್ನದಂತೆ ತಕಪಕನೆ ಕುದಿ ೫೦ ೧೮

ಕೃತಮುಖ–ಕಾರ್ಯಸಾಧಕ ೪ ೫೯

ಕೆಂಗಲಗೆಲೆ–ಕೇಕೆಹಾಕು ೩೩ ೧೨

ಕೆಕ್ಕಳಿಸು–1 ನಿಮಿರಿಸು, ನೆಟ್ಟಗೆಮಾಡು ೩೨ ೪೦

2 ಕೋಪದಿಂದ ದುರುಗುಟ್ಟಿಕೊಂಡು ನೋಡು ೩೨ ೧೯

ಕೆಯ್ದೊಳಸು–ಕೈಯಿಂದ ಕಲಕು, ಸೆಳೆ ೩೬ ೧೧

ಕೆಲ್ಲಯಿಸು–ಕೆರಳು, ಉದ್ರೇಕಗೊಳ್ಳು ೬೪ ೬೯

ಕೆಲ್ಲೆ–ಪಕ್ಕ, ಬದಿ, ಪಾರ್ಶ್ವ, ಅಂಚು, ತುದಿ ೪೧ ೬೭

ಕೇತುಮಾಲಿ–ಜಗತ್ತಿನ ಒಂಬತ್ತು ದ್ವೀಪಗಳಲ್ಲಿ ಒಂದು ೧೦ ೧೩

ಕೇವಟಿ–? ೨೨ ೧೯

ಕೇವಣ–ಹರಳು ಮೊದಲಾದುವನ್ನು ಕೂಡಿಸುವುದು, ಕುಂದಣ ೫೫ ೧

ಕೈಕರಣೆ–ಹಸ್ತಕೌಶಲ, ಕೈಚಳಕ ೫೫ ೩೪

ಕೈಗಾಡಿಕೆ–ಕೈಚಳಕ, ಹಸ್ತಕೌಶಲ ೨೮ ೨೨

ಕೈಗೂಟ–ಸೇರುವಿಕೆ, ಹೊಂದಿಕೆ ೪೬ ೧೫

ಕೈಘಟಿಕೆ–ಕೈಗಟ್ಟ, ಊಟವಾದ ಬಳಿಕ ಕೈಗೆ ಸವರಿಕೊಳ್ಳುವ ಸುಗಂಧ ೫೫ ೫೧

ಕೈಟಭಾರಿ–ವಿಷ್ಣು ೪೬ ೩೫

ಕೈದೊಳಸು–ಕೈಯಿಂದ ಮಾಡುವ ಯುದ್ಧ, ದ್ವಂದ್ವಯುದ್ಧ ೧೭ ೧೦

ಕೈದೊಳಸುಕಾಜ–ಕೈಯಿಂದ ಹೋರಾಡುವವನು ೩೭ ೬

ಕೈಪೊಡೆ–ಬಾಣದ ಗರಿ, ಪುಂಖ ೮ ೪೫

ಕೈಮಱ್–1 ಬಿಗಿನಡತೆ ೬ ೬೨

2 ಶಕ್ತಿಗುಂದು, ಹಸ್ತಕೌಶಲವನ್ನು ಕಳೆದುಕೊಳ್ ೩೨ ೪೪

ಕೈಮಾಡು–ಕೈಸನ್ನೆಮಾಡು ೪೭ ೮

ಕೈಮೆ–ಮಾಟ, ಕೌಶಲ್ಯ ೫೪ ೧೪

ಕೈಯಾಜು-ಕೈಸೇರಿಸು ೨೭ ೪೪
ಕೈಯೆಡೆ-ರಕ್ಷಣೆಗೆ ಒಪ್ಪಿಸು ೧೦ ೬೫
ಕೈಲಾಗು-ಕೈಚಳಕ, ಕೌಶಲ್ಯ ೫ ೬೨
ಕೈಪಸ-ಕೈವಶಮಾಡಿಕೊ, ಹಿಡಿದುಕೋ ೧೩ ೩೬
ಕೈಹಾರ-1 ಸೌಲಭ್ಯ, ಸೌಕರ್ಯ, ಅನುಕೂಲತೆ ೪೬ ೨೭
2 ಕತ್ತಿ ೪೯ ೩೩
ಕೈಹೊಡೆ-ಬಿಲ್ಲಿನ ಹೆದೆ ತಾಗದಂತೆ ಮುಂಗೈಗೆ ಕಟ್ಟಿದ ರಕ್ಷಾಕವಚ ೧೫ ೧೨
ಕೊಟ್ಟಿಗೆ-ಉಗ್ರಾಣ, ಧಾನ್ಯಾಗಾರ ೧ ೧೧
ಕೊಡಕೆ-ಕಿವಿ ೨೬ ೩೨
ಕೊಪ್ಪರಿಸು-ತಿವಿ, ಹೊಡೆ ೫ ೧೯
ಕೊಯ್ಕುತನ-ಕುಹಕತನ ೩೮ ೬
ಕೊಸರಿಕೆ-1 ಮೋಹ, ಅತ್ಯಾಸೆ ೧೨ ೩೦
2 ವಾದನ, ನುಡಿಸು ? ೫೫ ೨೫
ಕೊಸರು-ಅತಿಯಾಗಿ ಹೇಳು, ಹೆಚ್ಚಾಗಿ ಹೇಳು ೪೫ ೨೮
ಕೊಸರುಗಹಳೆ-ಭೋರಿಡುವ ಕಹಳೆ ೩೨ ೧
ಕೋಕನದಸಂಭವ-ಬ್ರಹ್ಮ ೨೦ ೭೪
ಕೋಟೆ-ಉಗ್ರಾಣ, ಧಾನ್ಯಾಗಾರ ೧೧ ೧೪
ಕೋಟೀರ-ಕಿರೀಟ ೨ ೫
ಕೋಡಿ-ತುದಿ, ಕೊನೆ, ಕುಡಿ ೫೩ ೬೭
ಕೋಹು-1 ಮೂಲೆ, ಸಂದು ೧೧ ೧
2 ಪೆಟ್ಟು, ಇರಿತ ೨೧ ೩೮
ಕೋಳುವೋಗು-ವಶವಾಗು, ಸೂರೆಯಾಗು ೪೨ ೪
ಕೌಂಕ್ಷೇಯಕ-ಕತ್ತಿ, ಖಡ್ಗ ೨೦ ೨೨
ಕೌಣಪ-ರಾಕ್ಷಸ ೩೬ ೬೭
ಕೌಸಳ-ಕಂಸಾಳೆ, ಕಂಚಿನ ಕಹಳೆ ೨೬ ೨೬
ಕ್ರತುಭುಜ-ದೇವತೆ ೨ ೩೦
ಕ್ರವ್ಯಾದ-ರಾಕ್ಷಸ ೨೦ ೩೮
ಕ್ರೋಡ-ಹಂದಿ ೨ ೩೦
ಕ್ಷಣರೋಚಿ-ಮಿಂಚು ೩೧ ೨೦
ಕ್ಷರ-ನಶ್ವರ, ನಾಶವಾಗುವ ೧೬ ೩೭
ಕ್ಷಣಿಸು-ಕರೆಯಿಸಿಕೋ ೩೬ ೪೭
ಕ್ಷ್ಮಾಪಾಲ-ಭೂಮಿಯನ್ನು ಪಾಲಿಸುವವನು, ರಾಜ ೪೯ ೧೦

## ಖ

ಖಂಡಳಿಸು-ತುಂಡುಮಾಡು, ಕತ್ತರಿಸು ೪೩ ೧೧
ಖಂಡೆಯ-ಕತ್ತಿ ೮ ೪೬
ಖದ್ದಿಕಾಱ-ಉತ್ಸಾಹಿ, ಆತುರವುಳ್ಳವನು ೩೮ ೧೫
ಖದ್ಯೋತ-1 ಮಿಂಚುಹುಳು, ಮಿಣುಕು ಹುಳು ೮ ೪೬
2 ಸೂರ್ಯ ೫೧ ೧೯
ಖರ್ಪಣ-ಕರ್ಪಣ, ಒಂದು ಬಗೆಯ ಆಯುಧ ೩೫ ೨೫
ಖರ್ಪರ-1 ಓಡು, ಚಿಪ್ಪು ೭ ೨೩
2 ತಲೆಬುರುಡೆ ೧೭ ೩೧
ಖರ್ವ-ಹದಿಮೂರು ಅಂಕಿಗಳಿರುವ ಸಂಖ್ಯೆ, ಒಂದು ಸಾವಿರಕೋಟಿ ೪೨ ೧೭
ಖರ್ವಡ-ನಗರ ಮತ್ತು ಹಳ್ಳಿಗಳ ಮಧ್ಯ ಸ್ಥಿತಿಯಲ್ಲಿದ್ದು ಬೆಟ್ಟಗಳಿಂದ ಸುತ್ತುವರಿದ ಊರು - ೬ ೨೨
ಖವಖವಿಸು-ತಳತಳಿಸು ೬ ೨೪
ಖಾಡಾಖಾಡಿ-ಕಟ್ಟುನಿಟ್ಟಾದ ಯುದ್ಧ, ಕಠಿಣವಾದ ಪರಸ್ಪರ ಕಾದಾಟ ೩೮ ೩
ಖೇಟ-ಚಿಕ್ಕಹಳ್ಳಿ, ಗ್ರಾಮ ೬ ೨೨
ಖೇಡತನ-ಅಂಜಿಕೆ ೬ ೪೬
ಖೇಳಮೇಳ-ಆಟಪಾಟ, ವಿನೋದಗೋಷ್ಠಿ

೩ ೩೪

ಖೊಪ್ಪರ–ಮೊಳಕಾಲು ೯ ೧೧

ಖೋಡಿ–ದೋಷ, ಕೊರತೆ ೬ ೪೬

ಗ

ಗಂಗಸ–(ಪಾಠಾಂತರ : ಗೊಂಗಸ) ಕೋಟೆ ಯುದ್ಧದಲ್ಲಿ ಉಪಯೋಗಿಸುತ್ತಿದ್ದ ಒಂದು ಸಾಧನ ಅಥವಾ ಆಯುಧ ೭ ೧೦

ಗಂಡ-ಕಪೋಲ, ಕೆನ್ನೆ, ಆನೆಯ ಗಂಡಸ್ಥಳ ೩೨ ೨

ಗಂಡಶೈಲ–ಬೆಟ್ಟದಿಂದ ಬಿದ್ದ ಬಂಡೆ ೨೧ ೧೬

ಗಂಧಗಾಳಿ–ಸುವಾಸನೆಯನ್ನು ಹೊತ್ತ ಗಾಳಿ ೪೨ ೧೦

ಗಜಗಲಿಸು–ಪ್ರಕಾಶಿಸು, ಹೊಳೆ ೬ ೬

ಗಜರು–ಆರ್ಭಟಿಸು, ಗರ್ಜಿಸು. ದೊಡ್ಡಧ್ವನಿ ಮಾಡು ೯ ೩೧

ಗಣೆ-ಗಳು ೭ ೧೦

ಗಬಲಿಕ್ಕು–ನುಂಗು, ಕಬಳಿಸು ೪೦ ೨೪

ಗಬ್ಬರಿಸು–1 ವ್ಯಾಪಿಸು ಆಕ್ರಮಿಸು, ೪೦ ೨೪
2 ಹಳ್ಳಬೀಳು ೫೦ ೯

ಗಮಕ–ಠೀವಿ, ಗಾಂಭೀರ್ಯ ೧೦ ೨೪

ಗಲ್ಲಿಸು–ಆಕ್ರಮಿಸು, ಬೀಸು ೪೨ ೨೩
2 ತಿವಿ, ಚುಚ್ಚು ೩೫ ೫೯

ಗರವಟಿಗೆ–ಗಸ್ತು, ಕಾವಲು ೪೫ ೬

ಗರ್ಭೀಕರ–ಒಳಗಿರಿಸು, ಹುದುಗಿಸು ೧೫ ೪

ಗವಲಿಕಾಜಿ–ಯಮಭಟ ೮ ೧೫

ಗವಲು–ದುರ್ವಾಸನೆ, ನಾತ ೧೬ ೩೧

ಗವಸಣಿಗೆ–ಗವುಸು, ಚೀಲ ೯ ೧೫

ಗಪ್ಪರಿ–ಭೂಮಿ ೮ ೪೧

ಗಾಣ–ಗಾಳ, ಮೀನು ಹಿಡಿಯುವ ಕೊಕ್ಕೆ ೭ ೧೦

ಗಾಜುಗೆಡೆ–ಧಿಕ್ಕರಿಸು, ನಿಂದಿಸು, ತುಚ್ಛವಾಗಿ ಆಡು ೨ ೨೬

ಗಾವಳಿ–ತೊಂದರೆ, ಕಷ್ಟ ೪೯ ೩

ಗಾಳುಮೇಳು–1. ಅವ್ಯವಸ್ಥೆ, ಅಸ್ತವ್ಯಸ್ತತೆ ೪ ೩೬
2. ಸಂಭ್ರಮ, ಆತುರ ೫೧ ೯೧

ಗುಂಡಿತಗೊಳ್–ಎದೆಗುಂದು, ಕುಂಠಿತವಾಗು ೮ ೨೫

ಗುಂಪುದೆಗೆ–ಗುಣ್ಪುದೆಗೆ, ಗಾಂಭೀರ್ಯವಳಿ ೫೩ ೬೭

ಗುಗ್ಗುರಿ–ಒಂದು ತಿನಿಸು, ಉಸಳಿ ೨೬ ೫೦

ಗುಜ್ಜುಗುಜುಕು–ಗುಜುಗುಂಪಲು, ಗುಜುಗುಜು ಶಬ್ದ ೫೩ ೩೭

ಗುಜುರು-ಜುಂಗು ೫೩ ೪೩

ಗುಡಿ–1 ಗುಡಿಸಲು, ಕುಟೀರ ೧ ೧೯
2 ಧ್ವಜ, ಬಾವುಟ ೧ ೧೭

ಗುಡಿಗಟ್ಟು–ರೋಮಾಂಚನಗೊಳ್ಳು, ಸಂತೋಷಿಸು ೩ ೮

ಗುಡುಗಾಡು–ಓಡಾಡು, ಚಲಿಸು ೨೬ ೩೦

ಗುತ್ತು–ಸ್ಥಳ ೮ ೩೬

ಗುಪ್ತಿಗ–ಗುಪ್ತಚಾರ ೧ ೩೦

ಗುಮ್ಮತನ–ಹೊಡೆದಾಟ ೪೧ ೩

ಗುಮ್ಮಿಡು–ವ್ಯಾಪಿಸು, ಆವರಿಸು ೧೩ ೧೫

ಗುಮ್ಮು–ಒತ್ತರಿಸು, ನುಗ್ಗಿಬರು ೫ ೨೦

ಗುಜುಬು–ಭಯಂಕರತೆ, ಭಯಾನಕ ಆಕಾರ, ಬೆರಗಪ್ಪ ಭಾವ, ತಳವೆಳಗು ೬ ೧೨

ಗುಹಿಲಿಕ್ಕು–ಕೇಕೆಹಾಕು ೨೨ ೨೫

ಗುಳ–ಆನೆಯಮೇಲೆ ಹೊದಿಸುವ ಹಾಸು ೨೯ ೨೩

ಗೂರಿಡು–ಚೆಲ್ಲಾಪಿಲ್ಲಿಯಾಗು, ಚೆಲ್ಲು ೧೭ ೪೨

ಗೂಜು–ಉಬ್ಬಸ ೨೩ ೧೭

ಗೇರೆ-ಬೇಲಿ, ಆವರಣ ೧೧ ೨೨
ಗೊಂಗಲಗೊಳಿಸು-ಕಂಗಾಲುಮಾಡು, ಕಂಗೆಡಿಸು ? ೨೨ ೨೩
ಗೋಟುಗೊಳಿಸು-ಪೀಡಿಸು, ಕಷ್ಟಕ್ಕೀಡುಪಡಿಸು ೮ ೩೫
ಗೋತ್ರಹರ-ಇಂದ್ರ ೪೪ ಸೂ
ಗೋಪ-ದೇವೇಂದ್ರ ೨೩ ೧೮
ಗೋಪಮಂಡಲ-ಸೂರ್ಯಬಿಂಬ ೩೧ ೨೭
ಗೋಮಿನಿ-ಲಕ್ಷ್ಮಿ ೫ ೩೮
ಗೋಮೂತ್ರಿಕ-ಹಸುಗಂಜಲ ಹುಯಿದಹಾಗೆ, ಆದರ ದಾರಿ ೧೪ ೧೬
ಗೋರಿಗಲ್ಲು-ಬೆಣಚುಕಲ್ಲು ೨೨ ೫
ಗೋಷ್ಪದ-ಹಸುವಿನ ಹೆಜ್ಜೆ ೧೨ ೧೩

**ಘ**

ಘಟೆ-ಸೈನ್ಯ, ಗುಂಪು ೩೨ ೨
ಘನ-ತೂಕ, ಶಕ್ತಿ, ಮಹತ್ವ ೪ ೪೮
ಘಲ್ಲಣೆ-ಧ್ವನಿ, ಶಬ್ದ ೧೪ ೧೬
ಘನ-ಮೋಡ ೩೨ ೨
ಘಸಣಿಕೆ-ಘರ್ಷಣೆ, ಅಡ್ಡಿ, ಕಷ್ಟ ೫೧ ೬೧
ಘಾತಾಳಿಕೆ-ದುಷ್ಟತನ ೫೨ ೧೦
ಘೂಕ-ಗೂಬೆ ೭ ೧೩
ಘೃಣಿ-ಕಿರಣ ೫೫ ೧

**ಚ**

ಚಂಬಕ-ಒಂದು ಬಗೆಯ ಚರ್ಮವಾದ್ಯ ೨೦ ೪೪
ಚಟ್ಟೆರಿ-ಸುಗಂಧಲೇಪನ, ಚಟ್ಟುಬಡಿ ೭ ೧೨
ಚಪೇಟ-ಬಿಚ್ಚಿದ ಅಂಗೈಯಿಂದ ಕೊಡುವ ಏಟು, ಬೆರಳುಗಳನ್ನು ಬಿಚ್ಚಿ ಹಿಡಿದ ಅಂಗೈ ೩೯ ೨೧
ಚಪ್ಪರಣೆ-ಹುರಿದುಂಬಿಸು, ಕುದುರೆ ಮೊದಲಾದುವನ್ನು ಹುರಿದುಂಬಿಸಲು ಮಾಡುವ ಶಬ್ದ ೧೪ ೧೫
ಚಪ್ಪಳಿ-ಬಾಯಿ ಚಪ್ಪರಿಸು ೭ ೧೨
ಚಮ್ಮಟ-ಚರ್ಮದ ಹೊದಿಕೆಯುಳ್ಳ ಗುರಾಣಿ ೩೦ ೧೧
ಚರ್ವಣ-ಚರ್ಮಣ, ಕೇಳಿದ ಕೂಡಲೇ ಉತ್ತರ ಕೊಡಬಲ್ಲವನು, ವಾಗ್ಮಿ ೮ ೨೫
ಚೆಲ್ಲಬಡಿ-ಎಲ್ಲಕಡೆಗೂ ಚದುರುವಂತೆ ಹೊಡೆ ೧೦ ೫೮
ಚಳಬಳಕೆ-ತ್ವರೆ, ನಿರಂತರತೆ ೨೦ ೫೧
ಚಳಿಯ-ಸಿಂಪಡಿಸು, ಚಿಮುಕಿಸು ೫೫ ೧೩
ಚಾರಣ-ತಿರುಗಾಡುವಿಕೆ, ಸುತ್ತಾಡುವಿಕೆ, ಸಂಚಾರ ೩೦ ೧೧
ಚಾರಿವರಿ-ಯುಕ್ತಿಯಿಂದ ಮುಂದೆ ನುಗ್ಗು, ನಡೆ ೧೧ ೮
ಚಾವಟೆಯ-ಮಲೆತವನು, ಉದ್ಧಟ ೨೨ ೧೯
ಚಾವಟೆಯತನ-ಉದ್ಧಟತನ ೩೪ ೧೫
ಚಿಕುರ-ತಲೆಗೂದಲು.. ೪೮ ೨೬
ಚಿಟ್ಟುಮುರಿ-ಒಂದು ವಿಧದ ಆಟ ೩೫ ೪೬
ಚಿತ್ರಾಂಬರ-ಬಣ್ಣಬಣ್ಣದ ಬಟ್ಟೆ ೫೩ ೩೫
ಚಿನ್ಮಯ-ಶುದ್ಧ ಜ್ಞಾನಸ್ವರೂಪಿ ೫೧ ೪೮
ಚೀನಿ-ಚೀನಾದೇಶದ ಬಟ್ಟೆ, ರೇಷ್ಮೆವಸ್ತ್ರ ೫೫ ೪೩
ಚೀಲಾಯ-ಸಣ್ಣ ಕತ್ತಿ ೨೨ ೧೬
ಚುಬುಕಿಜ಼್-1. ಮೇಲೇಳು ೪ ೭
2. ಆವೇಶಗೊಳ್ ೨೦ ೮೭
ಚೂಣಿ-ಸೈನ್ಯದ ಮುಂಭಾಗ, ಮುಂದಳ ೧೩ ೪೪
ಚೂರಣ-ಒಂದು ಪಟ್ಟು ? ೧೪ ೧೫
ಚೂರಿಸು-ಚಾಚು, ಉರಿಯನ್ನು ಕಾರು ೧೩ ೩೩
2. ಝುಳಪಿಸು, ತಿರುಗಿಸು ೧೦ ೬

ಚೂಳಿಕೆ-ಬೆಟ್ಟದತುದಿ, ಶಿಖರ ೧೦ ೫೮

ಚೌಪಟಮಲ್ಲ-ನಾಲ್ಕು ದಿಕ್ಕುಗಳಲ್ಲಿಯೂ ಯುದ್ಧ ಮಾಡುವ ಜಟ್ಟಿ, ಪ್ರಸಿದ್ಧವೀರ ೨೭ ೩೬

### ಛ

ಛಾಗ-ಹೋತ ೪೨ ೯

### ಜ

ಜಂಗುಳ-ಜಂಗುಳಿ, ಮೊತ್ತ, ಗುಂಪು, ಅಧಿಕ, ಅತಿಶಯ ೪ ೮

ಜಂಭಭೇದಿದಿಶಾಂಗನಾ-ಪೂರ್ವದಿಕ್ಕೆಂಬ ಸ್ತ್ರೀ ೨೬ ೧೯

ಜಂಭರಿಪು- | ಇಂದ್ರ ೨೦ ೭೧

ಜಂಭಾರಿ- | ೫ ೨೮

ಜಜ್ಝಾರ-ವೀರ ೧೩ ಸೂ

ಜಪಾಕುಸುಮ-ಕೆಂಪು ದಾಸವಾಳದ ಹೂವು ೨೧ ೧೮

ಜನಾಬಿ-ಕುದುರೆಯ ಒಂದು ಅಲಂಕಾರ ? ೨೯ ೧೨

ಜಜ್ಝರಿ-ಬೋರ್ಗರೆತ ೨೧ ೮

ಜಜ್ಝಾರ-1 ಕಾಳಗ 2 ಶೂರ ೧೭ ೩೪

ಜಡ-1 ಮಂದಬುದ್ಧಿಯವ 2 ನೀರು ೪ ೫೬

ಜತ್ತರಟ್ಟ-ಕೋಟೆ ಕಾಳಗದ ಒಂದು ರೀತಿಯ ಯಂತ್ರ ೭ ೭

ಜತ್ತರದಬಂಡಿ-ಪಾ. ಜತ್ತರಟಬಂಡಿ, ಕೋಟೆ ಕಾಳಗದ ಯಂತ್ರದ ಬಂಡಿ ೧೯ ೨೭

ಜಬ್ಬದುಳಿಸು-ತುಳಿದು ಹಿಪ್ಪೆಮಾಡಿಸು ೨೬ ೧೧

ಜಬ್ಬು-ಗದರಿಸು ೮ ೩೪

ಜಬ್ಬುದುಳಿ-ಜಬ್ಬಿಹೋಗುವಂತೆ ತುಳಿ ೨೩ ೩೯

ಜಬ್ಬೆ-ದುರ್ಬಲ, ನಿಸ್ಸತ್ವ ೧೩ ೧೧

ಜರುಹು-ಜರುಗಿಸು ೫ ೨೦

ಜವಾಯ್ಲ-ಚುರುಕುತನ ೩೫ ೫೬

ಜಾಂಬೂನದ-ಚಿನ್ನದಿಂದ ಮಾಡಿದ ೫೫ ೧

ಜಾಳಿಸು-1 ಚಲಿಸು, ನೀಗು ೧೩ ೧
2 ಕಂಪಿಸು, ನಾಶವಾಗು, ಸೋಸಿ ಹೋಗು ೧೩ ೩೬

ಜಾಳುಗ-ಪೊಳ್ಳುಗ, ನಿಸ್ಸತ್ವ, ಹುರುಳಿಲ್ಲದವನು ೩೨ ೩೪

ಜಿಂಪಾಳಿ-ನಾಲಗೆಗಳು ೪೮ ೧೭

ಜಿನುಗು-ಕ್ಲೇಶ, ತೊಂದರೆ ೬ ೪೬

ಜಿಹ್ಮಗ-ಸರ್ಪ ೪೫ ೧೭

ಜೀಬಿ-ಒಂದು ಬಗೆಯ ವಸ್ತ್ರ ೫೫ ೪೩

ಜುಣುಗು-ಕುಗ್ಗು, ವಿಕಾರಗೊಳ್ಳು ೧೩ ೩೫

ಜೂಳೆಯ-ಸರ ೨೯ ೧೩

ಜೊತ್ತಗೆ-ನೊಗಕ್ಕೆ ಕಟ್ಟುವ ಹಗ್ಗ, ಜೊತಿಗೆ ೨೯ ೧೯

ಜೋರು-ಸೋರು, ಒಸರು, ಸುರಿ ೪೩ ೧೩

ಜೋಹ-ವೇಷ ೩೯ ೨೩

### ಝ

ಝಡಪು-ಹೆಚ್ಚಾದ ವೇಗ, ತ್ವರೆ, 2 ಎರಗುವಿಕೆ ೧೪ ೧೬

ಝಡಿ-ತುಂಬು, ಹರಡು ೧೧ ೯

ಝಮ್ಮಿಡಿಸು-ನಡುಗಿಸು ೧೧ ೩

ಝಲ್ಲರಿ-ಗೊಂಚಲು, ಕುಚ್ಚು, ಗೊಂಡೆ ೭ ೧೭

ಝಳತಳಪ-ಪ್ರಕಾಶ, ಕಾಂತಿ ೩೧ ೨೨

ಝಾಡಣೆ-ಕೊಡವು, ಅಲುಗಾಡಿಸು, ಅಲ್ಲಾಡಿಸು, ಝಳಪಿಸು ೮ ೪೬

ಝಾಡಿ-ದಟ್ಟಣೆ, ಸಂದಣೆ, ಗುಂಪು ೧೪ ೧೬

ಝೊಂಬಿಸು-1ಬಯಸು, ಹಂಬಲಿಸು ೬ ೨೪
2 ಮುಂದೆ ಬರು, ಆವರಿಸು ೪೮ ೨೭

## ಠ

ಠೌಳಿ-ಶಿರಸ್ತ್ರಾಣ ೨೯ ೧೩

## ಡ

ಡಂಗುವಾಹಳು-ಕುಸ್ತಿಯಲ್ಲಿ ಒಂದುಪಟ್ಟು ಅಥವಾ ಗತಿ ? ೩೦ ೧೨

ಡಂಬರ-ಆಟೋಪ ೧೯ ೯

ಡಬ್ಬುಕ-ಕೋಟೆ ಕಾಳಗದ ಒಂದು ಆಯುಧ ಅಥವಾ ಸಾಧನ ೭ ೭

ಡಾಣೆ-ದೊಣ್ಣೆ ೭ ೧೨

ಡಾವರ-ದಗೆ, ತಾಪ ೪೬ ೫೦

ಡಾವರಿಸು ಹಬ್ಬು, ಆವರಿಸು ೪ ೩೩

ಡಿಂಡಿಮ ಒಂದು ಬಗೆಯ ಚರ್ಮವಾದ್ಯ ೧೩ ೨೬

ಡೆಂಕಣಿ-1 ಕೋಟೆಕಾಳಗದಲ್ಲಿ ಬಳಸುತ್ತಿದ್ದ ಒಂದು ಯಂತ್ರ, ಸಾಧನ ೭ ೭
2 ಕೋಟೆಯ ಮೇಲೆ ಧ್ವಜಸ್ತಂಭವಿರುವ ಸ್ಥಳ ೭ ೧೭

ಡೊಂಕಣಿ-ಒಂದು ಬಗೆಯ ಆಯುಧ ೩೫ ೨೫

ಡೊಂಬಿ-ಕೋಲಾಹಲ, ಬೊಬ್ಬೆ ೪೮ ೨೭

ಡೊಂಬಿಗ-ದೊಂಬರಾಟದವನು ೧೯ ೫೧

ಡೊಕ್ಕರ-ಗುದ್ದು ೧೮ ೧೦

ಡೋಚು-ಡೊಗರು, ಪೊಟರೆ ೨೦ ೬೧

## ತ

ತಂಡಸು-ಒಂದು ಜಾತಿಯ ಮುಳ್ಳಿನ ಗಿಡ ೧೮ ೧೮

ತಂದ್ರಿ-ನಿದ್ದೆ ೨೬ ೨೫

ತಕ್ಕಿಸು-ಅಪ್ಪು, ಆಲಿಂಗಿಸು ೪೫ ೨೮

ತಗಹು 1 ಅಡ್ಡಿ, ತಡೆ, ಪ್ರತಿಬಂಧಿಸು ೧೭ ೧೪
2 ಕ್ರಮ, ಪಂಕ್ತಿ ೧೩ ೬
3 ಆವರಿಸು, ಮುಸುಕು ೪೩ ೧೪
4 ಬಿಗ, ಬಿಗುಹು ೪೦ ೩

ತಟ-1 ದಡ 2 ಬೆಟ್ಟದ ತಪ್ಪಲು ೧ ೧೫

ತಟಕುವನಿ-ತೊಟ್ಟಿಕ್ಕುವ ಹನಿ ೪೦ ೪೫

ತಟ್ಟು-ಕತ್ತಿಯ ಅಲಗು ೪೧ ೨೭

ತದಿಕು-ತದಕು, ಒಂದು ಜಾತಿಯ ಮರ, ಆನೆಚೀಲ ೧೮ ೧೮

ತನುತ್ರ-ಕವಚ ೨೮ ೩೪

ತಮಾನ-ಒಂದು ಆಯುಧ ? ೨೯ ೧೬

ತರತರಿಕೆ-ನಡುಗು ೪೬ ೫೫

ತಜಿಚುಗೆಡೆ-ಅತಿಯಾಗಿ ಹರಟು, ಕೆಟ್ಟದಾಗಿ ಹರಟು ೨೩ ೬

ತಜಿತಜಿಸು-ದಿಗ್ಭ್ರಮೆ, ಕಕ್ಕಾಬಿಕ್ಕಿ ೩೨ ೪೪

ತಲೆಪಟ್ಟು-ತಲೆಗೆ ತಲೆಕೊಟ್ಟು ೪೪ ೨೪

ತಲೆಮಡು-ಕಾದಾಟದಲ್ಲಿ ತಲೆಗೆ ತಲೆಕೊಡು ೩೩ ೧೨

ತಲೆಮುಟ್ಟು-ತಲೆ ತಲೆ ಸೇರಿ ಯುದ್ಧ ೩೮ ೧

ತಲೆಮುಟ್ಟುಗೈ-ಕೋಟೆಯುದ್ಧದ ಒಂದು ಯಂತ್ರ ೧೧ ೭
(ತಲೆಗೆ ಹೊಡೆಯುವ ತಿರುಗು ಸಾಧನ?)

ತಲೆವರಿಗೆ-ತಲೆಯನ್ನು ರಕ್ಷಿಸುವ ಗುರಾಣಿ ೧೭ ೨೧

ತವಗಸಭೆ-ಆಸ್ಥಾನಮಂಟಪ ೯ ೩೦

ತಳತಂತ್ರ-ಕಾಲಾಳುಗಳ ಪಡೆ, ಪದಾತಿ ಸೈನ್ಯ, ಕೈಕೆಳಗಿನ ಸೈನ್ಯ ೨೦ ೧೦

ತಳಪಟ-1 ರಣರಂಗ ೧ ೧೫
2 ಬಯಲು, ಪಾಳುಭೂಮಿ ೬ ೨೨

ತಳವೆಳಗು-ಬೆರಗು, ವಿಸ್ಮಯ ೧೬ ೩

ತಳವೆಳಗಾಗು-ದಿಗ್ಭ್ರಮೆಗೊಳ್ಳು, ಬೆರಗಾಗು, ದಿಗಿಲುಗೊಳ್ಳು ೧೦ ೨೬

ತಳಿ-ಮರದ ಕೊರಡು, ದಿಮ್ಮಿ ೫೨ ೧೯

ತಳಿಸು-ಬಡಿ, ಹೊಡೆ ೨೩ ೧೦

ತಳುಕು-1 (ತಡವು) ಹೊಡೆ ೭ ೧೦

ತೌಕಲು–ನಾಶ ೧೬ ೧೪
ತ್ರಿವಿಷ್ಟಪ–ಸ್ವರ್ಗ ೪೫ ೧೩
ತ್ರಿವಿಕ್ರಮ–ಮೂರು ಹೆಜ್ಜೆಗಳಿಂದ ಭೂಮ್ಯಾಕಾಶ ಪಾತಾಳಗಳನ್ನು ಅಳೆದ ವಾಮನಾವತಾರದ ವಿಷ್ಣು ೧೬ ೧೦

## ದ

ದಂಡಿಗೆ– ಪಲ್ಲಕ್ಕಿ ೫೩ ೧೫
ದಂಡಿಸರ–ಚಾಪಲ್ಯ ೫ ೫೩
ದಂಡೆ–ಮೊಣಕಾಲನ್ನು ನೆಲದ ಮೇಲೆ ಊರಿ ಇಡುವ ಸ್ಥಿತಿ ೩೩ ೧೪
ದಂತಾವಳ–ಆನೆ ೧೮ ೪
ದಂದಶೂಕ–ಸರ್ಪ ೧೦ ೩
ದಂಭೋಳಿ–ವಜ್ರಾಯುಧ ೩೦ ೩
ದಡಿ–ದಂಡ, ಕೋಲು ೨೦ ೨೦
ದಡ್ಡಿ–ತೆರೆ, ಜವನಿಕೆ ೫೩ ೩೦
ದಳುಕು–ತೊಡಕಿಸು ? ೧೮ ೧೦
ದಾಣೆ–ಹಗ್ಗ ೭ ೧೦
ದಾಣೆದಡಿ–ದಪ್ಪ ದೊಣ್ಣೆ ೧೧ ೮
ದಾತುದೋಳು-ಕುಸ್ತಿಯಲ್ಲಿನ ಒಂದು ಪಟ್ಟು ಅಥವಾ ಗತಿ ೩೦ ೧೨
ದಾವತಿ–ಶ್ರಮ, ಬಳಲಿಕೆ ೪೩ ೨೧
ದಾಳಾದೂಳಿ–ಪರಸ್ಪರ ಮೇಲೆ ಬಿದ್ದು ಮಾಡುವ ಯುದ್ಧ ೩೮ ೩
ದಿತಿಸಂಭವ–ಪ್ರಹ್ಲಾದ ೩ ೨೫
ದಿವಮುಖಿ–ಹಗಲಿನ ಆರಂಭ, ಬೆಳಗ್ಗೆ ೬ ೧
ದಿವಾ–ಆಕಾಶ ೮ ೪೪
ದಿವೌಕಸವೈದ್ಯಸುತ–ದೇವತೆಗಳ ವೈದ್ಯನ ಮಗ ಸುಷೇಣ ೧೩ ೪೭
ದಿಶಾಪಟ–ಶತ್ರುಗಳನ್ನು ದಿಕ್ಕುದಿಕ್ಕಿಗೆ ಚದುರಿಸುವವನು ೫ ೬೧
ದೀವಸಿಗ–ವೀರ, ಸಾಹಸಿ ೨೦ ೫೬
ದೀವಸಿ ,, ೩೩ ೫
ದುಕ್ಕಡಿ–ಎರಡು ಪೆಟ್ಟು, ಎರಡು ತುಂಡು ? ೨೬ ೨
ದುಪ್ಪಾಳಿ–ವೇಗ, ಶೀಘ್ರ, ತ್ವರೆ ೧೭ ೧
ದುಹಿತೆ–ಮಗಳು ೧೦ ೪೩
ದೂಟು–ಎಗರಿಸು, ಚಿಮ್ಮು ೮ ೩೫
ದೂಹತ್ತಿ-ಎರಡು ಕೈಗಳಲ್ಲಿ ಹಿಡಿದ ಕತ್ತಿ ೪೧ ೪೨
ದೆಕ್ಕಾಳ-ದೆಖ್ಖಾಳ, ಆಡಂಬರ, ವೈಭವ ೨೧ ೩೦
ದೆಖ್ಖಾದೆಖ್ಖಿ–ದೃಷ್ಟಿ ದೃಷ್ಟಿಯಿಂದ ಯುದ್ಧ ಮಾಡು ೪೬ ೫೬
ದೊದ್ದೆವಾಯ–ಗುಂಪಿನವನು ೨೪ ೨೧
ದೋಸ್ತಂಭ–ತೋಳುಗಳು ೨೬ ೧೯
ದೌಹಿತ್ರ–ಮಗಳ ಮಗ, ಮೊಮ್ಮಗ ೩ ೩೧
ದ್ವಾದಶಾತ್ಮ–ಸೂರ್ಯ ೪೯ ೨೯
ದ್ವಿಪ–ಶತ್ರು, ಹಗೆ ೪೨ ೧೩

## ಧ

ಧನಂಜಯ–ಅಗ್ನಿ ೫೧ ೯೫
ಧರಧುರ–ಆಧಿಕ್ಯ, ಅತಿಶಯ ೧೩ ಸೂ
ಧೀರೋದ್ಧತ–ಅಹಂಕಾರ ಮತ್ತು ಶೌರ್ಯ ವೀರ್ಯಗಳಿಂದ ಕೂಡಿ ಆತ್ಮಪ್ರಶಂಸೆಯಲ್ಲಿ ನಿರತನಾದವನು ೨೦ ಸೂ
ಧುರ–ನಡುಗು, ಕಂಪಿಸು ೩೬ ೨೮
ಧುರಂದರಿಕೆ–ನಾಯಕತ್ವ ೨೦ ೬
ಧೂಳಿಗೋಟೆ–ಮಣ್ಣಿನಕೋಟೆ ೧೧ ೪
ಧ್ವಾಂಕ್ಷ–ಕಾಗೆ ೭ ೧೩

## ನ

ನಗಾಯತ–ಪರ್ವತಸದೃಶ ೩ ೨೨
ನಟ್ಟೆ–ಒಂದು ಆಯುಧ ೩ ೧೨
ನಡೆಸರ–ಚಲಿಸುವ ಸಾರುವೆ ೧೧ ೧೪

ನದುಳು–ಆಶ್ಚರ್ಯ, ವಿಸ್ಮಯ ೧೬ ೯
ನಳಿನರಿಪು–ಚಂದ್ರ ೫ ೧
ನಾಟಿಸು–ಸೃಷ್ಟಿಸು ೪೬ ೩೫
ನಾಮದ್ವಾರಕ–ಪ್ರಸಿದ್ಧ ೫ ೧
ನಾಯಕವಾಡಿ–ಪಂಗಡದ ಮುಖಂಡ ೧ ೧೯
ನಾರಚ, ನಾರಾಚ–ಬಾಣ ೫೧ ೭
ನಾಳಿಯಂಬು–ದುಂಡುಕೋಲಿನ ಬಾಣ ೩೨ ೮
ನಿಕರುಷಣ–ಸೆಳೆಯುವಿಕೆ ೨ ೨
ನಿಕಷಾಸೂನು–ರಾಕ್ಷಸ ೧೪ ೧೭
ನಿಕಷೆ–ರಾಕ್ಷಸರ ತಾಯಿ ೪೯ ೭
ನಿಗಮ–ಸರ್ಪ ೫೩ ೪೫
ನಿಗರ–ಉತ್ತಮವಾದುದು, ಮನೋಹರ ೪೮ ೩೯
ನಿಗಳ–ಆನೆಯ ಕಾಲಿನ ಸರಪಳಿ, ಸಂಕೋಲೆ ೨೯ ೧೯
ನಿಗ್ಗರ–ನಿಗ್ರಹ, ಹಿಂಸೆ, ಪೀಡೆ ೩೪ ೩೯
ನಿಘಾತ–ಹೊಡೆತ, ಪೆಟ್ಟು ೧೪ ೧೫
ನಿಟ್ಟೆಲು–ಬೆನ್ನುಮೂಳೆ ೩೯ ೮
ನಿಡಿಯಗ್ಗರಣೆ–ಉದ್ದವಾದ ಹಗ್ಗ ೨೯ ೧೯
ನಿತಾಂತ–ಅಧಿಕ ೫೧ ೪೭
ನಿಪ್ಪಸರ–ಕಾಠಿಣ್ಯ, ನಿಷ್ಠುರ ೧೩ ೩೨
ನಿಬ್ಬಗಿ–(ನಿಡಿದು + ಆಗಿ) ಅಧಿಕವಾಗಿ ಹೆದರು ೩೦ ೨೬
ನಿಭೃತ–ಮರೆಯಾದ ೧೫ ೧೭
ನಿಯತ–ನಿಯುತ, ಅಧಿಕ ಸಂಖ್ಯೆ, ಬಹು ದೊಡ್ಡಸಂಖ್ಯೆ ೧ ೧೬
ನಿಯೋಗಿ–ಒಂದು ವಿಶೇಷ ಕಾರ್ಯಕ್ಕಾಗಿ ನಿಯೋಜಿಸಲ್ಪಟ್ಟ ಅಧಿಕಾರಿ ೧೦ ೧೪
ನಿರುತಿ–ರಾಕ್ಷಸ ೪೮ ೯
ನಿರೂಢಿ–ಬಳಕೆಯ, ಮೆಚ್ಚಿನ ೫೩ ೯೮
ನಿರೂಪಕ–ಅಪ್ಪಣೆ, ಆಜ್ಞೆ ೫೩ ೭೨
ನಿಱಿಸು–ಕ್ರಮ ೫ ೪೮
ನಿರ್ಗಳಿತ–ಜೋತುಬಿದ್ದ, ಇಳಿಬಿದ್ದ ೩೨ ೪೫
ನಿರ್ಘಾತ–ಸಿಡಿಲು ೧೪ ೯
ನಿರ್ದಾಯ–ಸಂಪೂರ್ಣ, ಅಖಂಡ ೪೯ ೪೦
ನಿರ್ಧೂತ–ನಾಶಪಡಿಸು ೬ ೨೯
ನಿರ್ಬಂಧ–ಬಲಾತ್ಕಾರ, ಒತ್ತಾಯ ೫೩ ೨೮
ನಿರ್ಬುದ–ನ್ಯರ್ಬುದ, ಹತ್ತುಕೋಟಿ ೧೧ ೨೫
ನಿರ್ವಾಪಣ–ಕೊಲ್ಲು, ನಾಶಪಡಿಸು ೩೨ ೪೭
ನಿರ್ಹ್ರಾದ–ಶಬ್ದ ೨೦ ೭೮
ನಿವಡಿಸು–ನಿಶ್ಚಯಿಸು, ಅರಿಸು ೩ ೩೯
ನಿವಸನ–ಉಟ್ಟಬಟ್ಟೆ ೧೪ ೧೮
ನಿಶಾತ–ಹರಿತ ೪ ೪೧
ನಿಶ್ಶಿಥಿಲ–ಬಿಗಿಯಾದ ೪ ೧೯
ನಿಷ್ಕಲಿತ–ರಹಿತ, ಇಲ್ಲದ ೫೩ ೧೨
ನಿಷ್ಕೃತಿ–ದೂರಮಾಡು, ತ್ಯಜಿಸು ೪೫ ೩೨
ನಿಸ್ತ್ರಿಂಶಕ–ಕತ್ತಿ, ಖಡ್ಗ ೨೪ ೨೭
ನಿಸ್ಸಪತ್ನ–ಶತ್ರುರಹಿತ ೩೭ ೧
ನಿಹಾರ–ಯುದ್ಧ ೫ ೨೮
ನೀಕರಿಸು–ತಿರಸ್ಕರಿಸು, ಧಿಕ್ಕರಿಸು ೬ ೪೪
ನೆಗಳಿಕೆ–ಕೀರ್ತಿ, ಪ್ರಸಿದ್ಧಿ ೬ ೧೪
ನೆಗಳು–ಮೊಸಳೆ ೫ ೮
ನೆಱತೆ–ಪರಿಪೂರ್ಣತೆ ೫೩ ೨೭
ನೆಱವಣಿಗೆ–ಪರಿಪೂರ್ಣತೆ, ಅಚ್ಚುಕಟ್ಟು ೨೩ ೬
ನೆಲವು–ಪಾತ್ರೆಗಳನ್ನು ಇಡುವುದಕ್ಕೆ ಇಳಿಬಿಡುವ ಹಗ್ಗದ ಜಾಳಿಗೆ ೧೪ ೩೩
ನೊರಜು–ಸಣ್ಣಜಾತಿಯ ಸೊಳ್ಳೆ ೨೬ ೩೦

**ಪ**

ಪಂಟಿಸು–ಬೀಳಿಸು, ಕೆಡವು ೯ ೧೬
ಪಂಥ–ಪ್ರತಿಜ್ಞೆ, ಶಪಥ, ಸ್ಪರ್ಧೆ, ಜಿದ್ದು ೧೪ ೧೬

ಪಕ್ಕಲೆ-ಒಂದು ಬಗೆಯ ಪಾತ್ರೆ, ಪಕಾಲಿ,
ನೀರು ಸಾಗಿಸುವ ಚರ್ಮದ ಚೀಲ ೧೮ ೧೨
ಪಗರಣ-1 ಪ್ರಕರಣ, ನಾಟಕಗಳಲ್ಲಿ ಒಂದು
ಭೇದ 2 ನಟನೆ, ಸೋಗು ೩ ೧೭
ಪಚಾರಿಸು-ಹೀಯಾಳಿಸು, ನಿಂದಿಸು,
ಮೂದಲಿಸು ೧೪ ೨೩
ಪಚ್ಚಳ—1 ನಿತಂಬ, ಅಂಡು ೧೩ ೩೯
2 ಅಲ್ಲಾಡು ೩೦ ೩೩
ಪಟಹ-ಒಂದು ಬಗೆಯ ಚರ್ಮವಾದ್ಯ,
ನಗಾರಿ ೭ ೧೫
ಪಟ್ಟಸ-ಒಂದು ಬಗೆಯ ಆಯುಧ,
ಮೊನಚಾದ ಈಟಿ ೭ ೭
ಪಟ್ಟಾವಳಿ-ಪಟ್ಟೆಗಳನ್ನುಳ್ಳ ರೇಷ್ಮೆವಸ್ತ್ರ
೫೫ ೪೩
ಪಡಲಿಡು-ಅಲ್ಲಲ್ಲಿ ಮೇಲೆಬೀಳು ೩೨ ೫
ಪಡಿಗಟ್ಟು-ತೂಕಕ್ಕೆ ಪೇರಿಸು ೩೨ ೧೪
ಪಡಿಗೋಟೆ-ಪ್ರತಿಕೋಟೆ, ಮರುಕೋಟೆ
೭ ೫
ಪಡಿತಳ-1 ಪ್ರಯತ್ನ, ಉತ್ಸಾಹ ೯ ೨೫
2 ಎದ್ದುಕಾಣು ೨೦ ೮
3 ಆಕ್ರಮಣ ೩೧ ೨೨
ಪಡಿತಾಳ-ಪಡಿತಳ, ಉತ್ಸಾಹ, ಹುರುಪು
೨೯ ೨೦
ಪಡಿಬರಿಸು-1 ಪುನಃ ಬರು ೧೪ ೨೨
2 ಪ್ರತಿಭಟಿಸು ೩೯ ೨೨
ಪಡಿಭವಿಸು-ಪ್ರತಿಭಟಿಸು ? ೨೮ ೫೮
ಪಡಿಮುಖಿ-ಪ್ರತಿಮುಖಿ, ಎದುರಿನ ೧೭ ೬
ಪಡಿಯ-ಬಾಗಿಲು ೭ ೧೬
ಪಡಿಯಜ-ಪ್ರತೀಹಾರಿ, ದ್ವಾರಪಾಲಕ ೫೩ ೪೯
ಪಡೆ-ಪೊಟರೆ ೬ ೩೬
ಪಣವ-ಒಂದು ಬಗೆಯ ಚರ್ಮವಾದ್ಯ

೧೩ ೨೬
ಪತತ್ರಿಯ-ಬಾಣ ೧೯ ೫೬
ಪತ್ತಿ-ಕಾಲಾಳು ೪೪ ೩೭
ಪಯಗತಿ-ಹೆಜ್ಜೆಯಿಡುವ ರೀತಿ, ನಡೆ
ಯುವ ರೀತಿ ೨೮ ೪೮
ಪಯಪಾಡು-ನಡೆಯುವ ರೀತಿ, ಭಂಗಿ
೧೪ ೧೭
ಪರಂತಪ-ಶತ್ರುಗಳಿಗೆ ತಾಪವುಂಟುಮಾಡು
ವವನು ೧೦ ೪೮
ಪರ-ಮಹತ್ತಮ, ಅತ್ಯುಚ್ಚ ೧೬ ೩೭
ಪರಶ್ವತ-ಕೈಗೊಡಲಿ ೭ ೨೨
ಪರಿಗ್ರಹ-1 ಪ್ರತಿಜ್ಞೆ, ಶಪಥ ೪ ೧೦
2 ಪರಿವಾರ, ಸುತ್ತಮುತ್ತಲಿನ
ಜನ . ೪೯ ೫
ಪರಿಘ-1 ಅಗಳಿ, ಲಾಳವಿಂಡಿಗೆ 2 ಒಂದು
ಆಯುಧ ೭ ೭
ಪರಿಧಾನ } ಹೊದಿಕೆ, ವಸ್ತ್ರ, ೩೨ ೨೦
ಪರಿಧಾನಕ } ಉಡುಪು ೨೯ ೧೬
ಪರಿಧಿ-1 ಸೂರ್ಯ ಅಥವಾ ಚಂದ್ರನನ್ನು
ಬಳಸಿರುವ ಮಂಡಲ 2 ಬೇಲಿ ೫೪ ೧೫
3 ನೀರು
ಪರಿಪಾಡು-ಸಂಪೂರ್ಣ ಸಮಾನ ೯ ೨೦
ಪರಿಭ್ರಮಣ-ಸುತ್ತುವಿಕೆ ೧೪ ೧೬
ಪರಿಮಂಡಲ-ಚಕ್ರಾಕಾರವಾಗಿ ಸುತ್ತು ೧೪ ೧೫
ಪರಮಾನ್ನ-ಪಾಯಸ ೫೫ ೩೪
ಪರಿಮಿತನಿಳಯ-ಕೆಲವು ಜನರು ಸೇರುವ
ಮನೆ, ಏಕಾಂತಗೃಹ ೧ ೨೪
ಪರಿಯಾಯದಂಬಿಕೆ-ಚಿಕ್ಕಮ್ಮ ೨೪ ೪೯
ಪರಿರಂಭಣ-ಅಪ್ಪುಗೆ, ಆಲಿಂಗನ ೨೧ ೭
ಪರಿಸ್ತರಣ-ಯಾಗಕುಂಡದ ಸುತ್ತ ದರ್ಭೆ

ಯನ್ನು ಹಾಕುವುದು ೪೨ ೮
ಪರುಟವ–ವಿಸ್ತಾರ, ಹರಹು ೫ ೧೨
ಪರೇತ–ಭೂತ ೫೩ ೪೨
ಪರ್ಯಂಕ–ಮೆತ್ತೆ, ಹಾಸಿಗೆ ೨ ೨
ಪಟಿ–ಕೃಶ, ದುರ್ಬಲ ೨೩ ೬
ಪಲಾಲ–ಗರಿಕೆ ಹುಲ್ಲು ೨೬ ೫೦
ಪಲಿತ–ಮುಪ್ಪುಹಿಡಿದ, ಮುದಿಯಾದ ೪೧ ೫೭
ಪಲ್ಲವ–ಹವಳ, ಮುತ್ತು ೪೯ ೧೫
ಪಸರ-ಗುಂಪು, ಸಮೂಹ ೧೪ ೧೬
ಪಸುರ್ಗಳವೆಗೂಳು–ನೆಲ್ಲಿನ ಹಸುರು ಅನ್ನ ೫೫ ೧೬
ಪಳಹರ– ಬಾವುಟ, ಧ್ವಜ ೨೦ ೮
ಪಳಿ–ರೇಷ್ಮೆಬಟ್ಟೆ ೫೫ ೪೩
ಪಾಂಡುರ–ಹಳದಿಮಿಶ್ರಿತ ಬಿಳಿ ಬಣ್ಣ ೧೩ ೧೪
ಪಾಟಿ–1 ಹೋಲಿಕೆ, ಸಾಟಿ, ಅತಿಶಯ ೩೩ ೨
2 ವಿಸ್ತೃತ, ದೊಡ್ಡದಾಗಿ ನಿರ್ಮಿಸಿದ ೮ ೩೫
ಪಾಠಕ–ಓದುವವನು, ವಾಚಿಸುವವನು ೨೦ ೧೧
ಪಾಥದುದ್ಭವ-(ಪಾಥಸ್ = ನೀರು) ಬ್ರಹ್ಮ ? ೪೩ ೨೩
ಪಾನಿ–ಕುಡುಕ ೧೪ ೭
ಪಾರ–ದಡ ೫೧ ೫೧
ಪಾರಾವಾರ–ಸಮುದ್ರ ೫ ೧೦
ಪಾರಿಕಾಂಕ್ಷಿ–ಮುನಿ ೫೫ ೨೩
ಪಾರಿಯ–ಒಂದು ಬಗೆಯ ಬಣ್ಣದ ಬಟ್ಟೆ, ಪಾರಿವಾಳದ ಬಣ್ಣ ೨೦ ೮
ಪಾಲಾಶ-ಮುಳ್ಳುಮುತ್ತುಗದ ಮರ ೧೭ ೩೩
ಪಾಶಧರ–ಯಮ, ವರುಣ ೬ ೫
ಪಾಶಧರಶರ-ವರುಣಾಸ್ತ್ರ, ಯಮಾಸ್ತ್ರ ೧೫ ೧೮
ಪಾಶಪಾಣಿ–ವರುಣ ೭ ೨೨
ಪಿಂಗಲಿ-ಹಿಂಭಾಗ ೬ ೮
ಪಿತೃಪತಿ–ಯಮ ೪೫ ೬೩
ಪಿಪೀಲಿಕ–ಇರುವೆ ೧೨ ೧೩
ಪುಷ್ಕರ–1 ಆನೆಯ ಸೊಂಡಿಲು 2 ಆಕಾಶ 3 ನೀರು ೩೨ ೨೮
ಪುಷ್ಕರಿಣಿ–ಕೊಳ ೩೨ ೨೮
ಪೂತುವೇಡ-ಹೊಗಳಿಕೆಯ ಮಾತು ೩೦ ೧೨
ಪೂರಕ–ಪ್ರಾಣಾಯಾಮದಲ್ಲಿ ಉಸಿರನ್ನು ಒಳಕ್ಕೆ ಎಳೆದುಕೊಳ್ಳುವುದು ೪ ೨೨
ಪೃಥುಳ-ದೊಡ್ಡ, ವಿಸ್ತಾರವಾದ ೪ ೧೯
ಪೃಷದಶ್ವ–ವಾಯು ೫೧ ೪೪
ಪೆಂಡೆಯ-ಬಿರುದಿನ ಬಳೆ ೪೬ ೨೪
ಪೇತುಗ–ಹುಚ್ಚ, ದೆವ್ವಹಿಡಿದವನು ೧೨ ೧೬
ಪೈಕ–ವರ್ಗ, ಗುಂಪು ೧೪ ೧
ಪೈಜೆಗ-ಜಿದ್ದುಗಾರ, ಆಣೆಗಾರ ೧೩ ೫೦
ಪೈಸರ–ಹಿಮ್ಮೆಟ್ಟು, ಹಿಂದೆಸರಿ ೧೧ ೨೦
ಪೊದಕುಳಿ–ಸಂತಾಪ, ವ್ಯಥೆ, ದುಃಖ, ನೋವು ೧೯ ೪೦
ಪೋತ–ನಾವೆ ೨೬ ೧
ಪೋತನ-ದೋಣಿ ೪೭ ೭
ಪೌಲೋಮಿವರ–ಇಂದ್ರ ೫೦ ೩೪
ಪ್ರಜ್ಞತೆ-ತಿಳುವಳಿಕೆ, ಬುದ್ಧಿ, ಜ್ಞಾನ ೪ ೧೦
ಪ್ರಣವ-ಓಂಕಾರ ಮಂತ್ರ ೪ ೪೭
ಪ್ರತಿಮಾನ-ಆನೆಯದಂತಗಳ ನಡುವಿನ ಪ್ರದೇಶ ೩೨ ೩೭
ಪ್ರತ್ಯೂಷ-ಮುಂಜಾವ, ಬೆಳಗ್ಗೆ ೧ ೧
ಪ್ರತ್ಯೂಹ-ಅಡ್ಡಿ, ವಿಘ್ನ ೫ ೧೨
ಪ್ರಥಿತ–ಪ್ರಸಿದ್ಧ ೨೦ ೩೨
ಪ್ರಥುಳ-ಪೃಥುಲ, ಹಿರಿಯ, ದೊಡ್ಡ, ಅಸಂಖ್ಯ ೨೦ ೩೨

ಪ್ರಭಂಜನ–ವಾಯು, ಬಿರುಗಾಳಿ ೧೯ ೪೩
ಪ್ರವಿಕ್ಷೇಪಣ-ಎಸೆಯುವಿಕೆ, ಪಕ್ಕಕ್ಕೆ ಸರಿಯುವಿಕೆ ೧೪ ೧೬
ಪ್ರಹಸ್ತ-ನಿಡುಬೆರಳುಗಳ ಹಸ್ತವುಳ್ಳವನು ೧೯ ೨೩
ಪ್ರಾಯೋಪವೇಶ-ಉಪವಾಸದಿಂದ ಮರಣ ಹೊಂದುವ ವ್ರತ ೪ ೨೦
ಪ್ರಾಸ_ಒಂದು ಬಗೆಯ ಆಯುಧ ೨೯ ೨೨

ಬ

ಬಗೆಗೊಳ್-ನೋಡು, ವೀಕ್ಷಿಸು ೪೬ ೨೯
ಬಗರಗೆ-ಕುಳಿ, ಹಳ್ಳ ೨೬ ೩೪
ಬಗ್ಗಡೆಯುತನ–ಅತಿಯಾಗಿ ಹರಟುವಿಕೆ ೪೪ ೧೩
ಬಗ್ಗಿಸು_ಗದರಿಸು ೨೨ ೨೧
ಬಚ್ಚರಣೆ-ವಜ್ರದ ಕೆತ್ತನೆ ೧೦ ೫೦
ಬದ್ದರ-1 ಆನೆ, ಗೂಳಿ ೭ ೬
2 ವಜ್ರ, ಬಜ್ಜರ ೯ ೧೮
ಬದ್ಧರ-ಆನೆ, ಎತ್ತು ೧೧ ೬
ಬದ್ದುಗೆ_ಅಂಬು ೨೮ ೧೬
ಬಜಡ-ಕೆಲಸಕ್ಕೆ ಬಾರದವನು, ಅಪ್ರಯೋಜಕ ೨ ೨೪
ಬರ್ಹಿರ್ಮುಖ_ದೇವತೆ, ಸುರ ೧೭ ೧೩
ಬಲಮಥನ_ಇಂದ್ರ ೩೪ ೮೧
ಬಲಾರಿ-ಇಂದ್ರ ೮ ೧
ಬಲಾರಿದಿಗ್ಭಾಗ-ಇಂದ್ರದಿಕ್ಕು, ಪೂರ್ವದಿಕ್ಕು ೯ ೩೨
ಬಲಿಭುಕ್-ಬಲಿಯನ್ನು ತಿನ್ನುವುದು, ಕಾಗೆ ೩೬ ೫೧
ಬಲುಕಣೆ-ಭಾರಿ ಅಡ್ಡಿ, ಅಡಚಣೆ ೧೭ ೩೯
ಬಲುಗೊಂಡೆಯುತನ-ಅತಿ ಚಾಡಿಕೋರತನ ೪೭ ೧೧
ಬಲುಜಜ಼್-ದೊಡ್ಡ ಬಂಡೆ ೧೮ ೧೯
ಬಲ್ಲವಿಕೆ-ತಿಳುವಳಿಕೆ, ಜ್ಞಾನ ೨ ೩೫
ಬಲ್ಲಹ-ವಲ್ಲಭ, ಒಡೆಯ, ಸ್ವಾಮಿ ೫ ೫೪
ಬಲ್ಲೆಯ-ಈಟಿ ೨೬ ೧೩
ಬವರಿ-ತಿರುಗುವಿಕೆ ೨೮ ೪೮
ಬಸಿದ_ಚೂಪಾದ, ಹರಿತವಾದ ೭ ೯
ಬಳಚು–ಕತ್ತರಿಸು, ತುಂಡರಿಸು ೨೧ ೬
ಬಳಿಸಲ್-ಬೆನ್ನಟ್ಟು ೩೭ ೮
ಬಳಿಸಲಿಸು-ಒಂದಾದ ಮೇಲೆ ಒಂದು ಬರು, ಹಿಂಬಾಲಿಸು ೫ ೨೨
ಬಳುವೆ-ಸೋಂಕು ತೆಗೆಯುವ ವಿಧಿ, ನಿವಾಳಿಸು ೧೬ ೩
ಬಳ್ಳುಗೆಡು–ಬಳ್ಳುಗೆಡೆ, ನರಿಯಂತೆ ಕೂಗು, ಊಳಿಡು ೨ ೩೫
ಬಾಣಸವನೆ_ಅಡಿಗೆಮನೆ ೧೩ ೪೩
ಬಾದಣ-ತೂತು, ರಂಧ್ರ ೨೦ ೬೦
ಬಾಯಾಜ಼್-ಗಟ್ಟಿಯಾಗಿ ಬಾಯಿಂದ ಕೂಗು ೧೦ ೬೫
ಬಾಯ್ದೆರೆ-ತುಟಿ ೪ ೩೯
ಬಾರಿಸು-ನಡುಗಿಸು ೭ ೧೪
ಬಾಸಣ_ಆವರಣ, ಮುಸುಕು ೧೬ ೨೧
ಬಾಸಣಿಸು_ಮುಚ್ಚು, ಆವರಿಸು ೩ ೪೦
ಬಾಸರ-ಕೂಗು ೪೭ ೧೫
ಬಾಸುಳು-ಬಾಸುಂಡೆ ೪ ೩೬
ಬಾಳ್ದಲೆ_ಜೀವಸಹಿತವಾದ ತಲೆ ೭ ೧೨
ಬಿಗುಹು_ಗಂಭೀರ, ಗತ್ತು ೧೩ ೬
ಬಿಚ್ಚಟೆ-ಭಿಕ್ಷಾಟನೆ ೪೬ ೨೨
ಬಿಟ್ಟೇಱು_ಒಂದು ರೀತಿಯ ಈಟಿ, ಆಯುಧ ೧೧ ೧೦
ಬಿಡಯ-1 ದಾಕ್ಷಿಣ್ಯ ೨ ೪೬
2 ಸೆಣಸಾಟ, ಸ್ಪರ್ಧೆ ೪ ೨

ಬಿಡೆಯ-ಕರುಣ, ದಾಕ್ಷಿಣ್ಯ ೧೦ ೪೪
ಬಿದು-ಆನೆಯ ಕುಂಭಸ್ಥಳ ೩೫ ೪೦
ಬಿದುರ್-ಬಿಚ್ಚು, ಸಡಿಲಿಸು ೩೨ ೩೮
ಬಿದ್ದಿನ-ಅತಿಥಿ, ಸಂಬಂಧಿ ೪೫ ೩
ಬಿದ್ದೂಟ-ಔತಣದ ಊಟ ೫೪ ೫
ಬಿನುಗು-ಹೀನವ್ಯಕ್ತಿ, ಅಲ್ಪ, ಕ್ಷುದ್ರ ೪೬ ೨೭
ಬಿಬ್ಬೋಕ-ಬಿಂಕ ೫೫ ೪೨
ಬಿಜೌತು-ಕಂಗೆಟ್ಟು, ದಿಗ್ಭ್ರಮೆಗೊಂಡು ೩೨ ೯
ಬಿಲುಗೊಲೆ-ಬಿಲ್ಲಿನ ಹಗ್ಗ ಸಿಕ್ಕಿಸುವ ತುದಿ ೨೦ ೮೫
ಬಿಲೇಶಯ-ಬಿಲದಲ್ಲಿ ವಾಸಿಸುವ ಪ್ರಾಣಿ, ಸರ್ಪ ೧೬ ೩೦
ಬೀಡೆ-ಬಿರುಕು, ಸೀಳು ೪೩ ೧೩
ಬೀದಿವರಿ-ಸ್ವೇಚ್ಛೆಯಾಗಿ ಓಡಾಡು, ಸಂಚರಿಸು ೫ ೧೩
ಬೀಯಗ-ಬೀಗ, ನೆಂಟ ೩೬ ೪೮
ಬುದ್ಬುದ-ನೀರಿನ ಗುಳ್ಳೆ ೫೩ ೪೪
ಬೆಗಡು-ಅಂಜು, ಹಿಂದೆಗೆ ೧ ೨
ಬೆಜ್ಜರ-ಭೀತಿ, ತಬ್ಬಿಬ್ಬು ೨೪ ೨೬
ಬೆಟ್ಟು-ನಾಟು, ಚುಚ್ಚು ೭ ೧೨
ಬೆಬ್ಬಳ-ಗಾಬರಿ ೩೭ ೯
ಬೆಜಿ-ಗರ್ವ, ಸೊಕ್ಕು ೫೧ ೪
ಬೆಸಲ್-ಹೆರಿಗೆ, ಪ್ರಸೂತಿ ೧೭ ೧೧
ಬೆಸು-ಜೋಡಿಸು, ಕೂಡಿಸು ೧೩ ೩೬
ಬೆಳೆಗೈ-ಧಾನ್ಯದ ಹೊಲ ೧೩ ೪೩
ಬೇಳಂಬ-1 ಬಯಕೆ, ಇಚ್ಛೆ, ಆಲೋಚನೆ ೪೨ ೩೦
2 ಹೋಮದಲ್ಲಿ ಅರ್ಪಿಸುವ ಆಹುತಿ ೪೮ ೨೯
ಬೇಳುವೆ-ಹೋಮ ೪೮ ೨೯

ಬೊಂಬಾಳ-ಪ್ರಜ್ವಲಿಸು ೪೭ ೧೨
ಬೊಂಬುಳಿ-ಒಂದು ವಾದ್ಯವಿಶೇಷ, ಡೋಲು ೨೦ ೪೫
ಬೊಗರಿ-ಬುಗುರಿ ೧೭ ೩೫
ಬೊಗ್ಗು-ಒಂದು ಬಗೆಯ ವಾದ್ಯ ೭ ೧೭
ಬೋಸರಿಗ-ವಂಚಕ, ಮೋಸಗಾರ ೪೨ ೪೯
ಬೋಳೆ-ಒಂದು ಬಗೆಯ ಬಾಣ ೧೮ ೧೦
ಬೋಳೆಯ-ದೇವರು ೩ ೧೬
ಬ್ರುವ-ಹೆಸರಿನ, ಕರೆಯುವ ೧೩ ೧೦

## ಭ

ಭಂಡಾರಿಸು-ಮುಚ್ಚಿಡು ೬ ೫೯
ಭಣಿತೆ-ಮಾತು, ಧ್ವನಿ ೭ ೨೦
ಭದ್ರಮದದಂತಿ-ಶುಭಲಕ್ಷಣಗಳಿಂದ ಕೂಡಿದ ಮದದಾನೆ ೩೨ ೧೬
ಭರವಸ-1 ಉತ್ಸಾಹ ೮ ೩೭
2 ರಭಸ, ವೇಗ ೨೦ ೨೩
ಭರಿಕೈ-ಆನೆಯ ಸೊಂಡಿಲು ೨೬ ೭
ಭರ್ತೃ-ಪೋಷಕ, ಕಾಪಾಡುವವನು ೮ ೪೭
ಭವ-ಹುಟ್ಟುಳ್ಳವನು ೧೬ ೩೭
ಭವಗತ-ಮನೆಬಿಟ್ಟು ಬಂದವನು ೩ ೨೨
ಭವಭವನ್-ಶಿವನಮಗ, ಷಣ್ಮುಖ ೧೦ ೪
ಭವಾಬ್ಧಿಪೋತ-ಸಂಸಾರಸಾಗರವನ್ನು ದಾಟಿಸುವ ನಾವೆ ೩೪ ೨೬
ಭಾರ-ತೂಕ, ಹೊರೆ ೫೩ ೮೮
ಭಾರಂಕ-ಭಾರಿ ಜಟ್ಟಿ ೧೦ ೬
ಭಾವಕ-ಹಿತಚಿಂತಕ ೩೪ ೧೮
ಭಾಷ್ಕಳಗೆಡು-ಅಸಂಬದ್ಧವಾಗಿ ಮಾತನಾಡು ೧೦ ೪೩
ಭಾಸ-ಹದ್ದು ೯ ೨೭
ಭೈತ್ರ-ದೋಣಿ, ಹಡಗು, ನಾವೆ ೨೧ ೨೩
ಭೌಮ-ಕುಜ, ಮಂಗಳ ೫೫ ೨೦

ಭೃಗುಜ-ಶುಕ್ರಾಚಾರ್ಯ ೨೪ ೩೦
ಭುಕ್ತಶೇಷ-ಊಟಮಾಡಿದ ಅನಂತರ
ಉಳಿಯುವ ಅನ್ನ, ಎಂಜಲು,
ಉಚ್ಛಿಷ್ಟ ೫೫ ೪೮
ಭುಲ್ಲವಿಸು-ಉಬ್ಬು, ಉತ್ಸಾಹಗೊಳ್ಳು
೫೪ ಸೂ

## ಮ

ಮಂಡಲಾಗ್ರ-ಒಂದು ಬಗೆಯ ಆಯುಧ
೧೦ ೪೬
ಮಂದನೆ-ಒಂದು ಜಾತಿಯ ಆನೆ ೩೯ ೭
ಮಂದೇಹ-ಸೂರ್ಯನ ಶತ್ರುವಾದ ಒಬ್ಬ
ರಾಕ್ಷಸ ೨೮ ೫೭
ಮಕರಬ್ಬಿ-ಮಕರದಿಬ್ಬಿ, ಕೋಟೆ ಯುದ್ಧದಲ್ಲಿ
ಉಪಯೋಗಿಸುವ ಸಣ್ಣ ಫಿರಂಗಿ ೧೧ ೩
ಮಕರಿಸು-ಮುಚ್ಚು, ವ್ಯಾಪಿಸು ೪೧ ೫೧
ಮಕರೇಶ-ವರುಣ ೪೭ ೧೪
ಮಡಂಬ-ಐನೂರು ಹಳ್ಳಿಗಳಿಗೆ ಮುಖ್ಯವಾದ
ನಗರ ೬ ೨೨
ಮಡಲಿಱು-ಬೆಳೆ, ಹಬ್ಬು, ಹರಡು ೪೫ ೫೬
ಮಡಪು-ಹಿಮ್ಮಡಿ ೨೭ ೩೫
ಮಡಿವರ್ಗ-ಒಗೆದ ವಸ್ತ್ರಗಳ ರಾಶಿ, ರೇಷ್ಮೆ
ಬಟ್ಟೆಗಳ ರಾಶಿ ೫೩ ೨೯
ಮಣಿಹ-ಕಾರ್ಯಭಾರ ೬ ೬೨
ಮತ್ತಕಾಶಿನಿ-ಸುಂದರಿ ೫೩ ೨೫
ಮದನಮದಮುಖವೈರಿ-ಮನ್ಮಥನ
ಅಹಂಕಾರಕ್ಕೆ ವೈರಿಯಾದ ಬ್ರಹ್ಮಚಾರಿ
ಹನುಮಂತ ೫೨ ೮
ಮಧುಪ-ಮದ್ಯಪಾಯಿ, ಕುಡುಕ ೨೩ ೭
ಮಱಿಯಾದೆ-ಮರ್ಯಾದೆ, ಶಿಷ್ಟಾಚಾರ
೧ ೪
ಮರುದ್ಗಣ-ದೇವತೆಗಳು. ೫೫ ೧
ಮರುದ್ಗಣರಾಜ-ಇಂದ್ರ ೧ ೯
ಮರುಳುಕೈ-ಕೋಟೆಯ ಕಾಳಗದಲ್ಲಿ ಉಪ
ಯೋಗಿಸುತ್ತಿದ್ದ ಒಂದು ಆಯುಧ
ಅಥವಾ ಸಾಧನ ೭ ೭
ಮಲಗು-ದಿಂಬು ೨೪ ೧೭
ಮರ್ಷಿಸು-ಸಹಿಸು ೩೪ ೭೩
ಮಸಕು-ಕೆರಳು, ಕೋಪಗೊಳ್ಳು ೩೨ ೧೯
ಮಸೆ-ಗಾಯ ೨೪ ೧೨
ಮಾಗದೆ (ಧೆ)-ಸ್ತುತಿ ಮಾಡುವವಳು ೫೧ ೭೩
ಮಾಗಧ-ಸ್ತುತಿಪಾತಕ, ಹೊಗಳುಭಟ ೨೦ ೧೧
ಮಾತಾಮಹ-ತಾಯಿಯ ತಂದೆ ೧೨ ೨
ಮಾರ್ಗ-ರೂಢಿ, ಸಂಪ್ರದಾಯ ೬ ೨೨
ಮಾರ್ಗಾಂತರ-ಬದಲಿದ ಸ್ಥಿತಿ ೪೪ ೨೦
ಮಾಸಾಳು-ಸಾಹಸಿ, ವೀರ ೩೩ ೨
ಮುಕ್ಕುಡಿ-ಅವಗಡ, ಅಪಘಾತ ೪೫ ೫೭
ಮುಗ್ಗು-ಕುಸಿ, ತಗ್ಗು, ಬಾಗು ೧೬ ೩೦
ಮುಟ್ಟಳ-? ೧೮ ೨೯
ಮುಟ್ಟಾಳ-ಮುದುರು, ಕರಗು ೪೬ ೯
ಮುಡಿವೆಱು-ತುರುಬಿನ ಚಂದ್ರಾಭರಣ
೫೧ ೯೩
ಮುಡುಹು-ಭುಜ ೨ ೬
ಮುದ್ಗರ-ಒಂದು ಆಯುಧ, ಗದೆ ೭ ೭
ಮುಮ್ಮೞಿ-ರೂಪಳಿದ ಸಾವು, ವಿಕಾರ ಸಾವು
೮ ೬೦
ಮುಮ್ಮುೞಿಗೊಳ್-ಅತಿಶಯ ನೋವನ್ನನು
ಭವಿಸು, ವ್ಯಥೆಪಡು ೪೧ ೪೪
ಮುಱಿಯಾಣ-ನುಲಿದ, ಹೊಸೆದ ೩೬ ೨೮
ಮುಱುಕ-ವೈಯಾರ, ಬೆಡಗು ೫ ೫೧
ಮುಱುಹು-ಗರ್ವ ? ವಕ್ರಬುದ್ಧಿ ೫೦ ೩೧
ಮುಸು-ಕಪ್ಪುಮುಖದ ಕೋತಿ ೧ ೧೦
ಮುಸುಂಡಿ-ಒಂದು ಬಗೆಯ ಆಯುಧ ೭ ೭

ಮೂಕೊಂಜೆಯ–ಮೂಗಿಲ್ಲದವ, ಮರ್ಯಾದೆ ಇಲ್ಲದವ ೩೮ ೬
ಮೂಗುಬ್ಬಸ–ತ್ರಾಸ, ತೊಂದರೆ ೮ ೧೫
ಮೂಡೆ–ಹಾಸಿಗೆ, ಮೆತ್ತೆ ೪೬ ೩
ಮೂಸುಂಡಿ–ಮುಖ ಹೇಡಿ ೪೨ ೩೩
ಮೃಗಮದ–ಕಸ್ತೂರಿ ೨೦ ೧೫
ಮೆಕ್ಕೆ–ಒಂದು ಜಾತಿಯ ಹಬ್ಬುವ ಬಳ್ಳಿ ೪೨ ೭
ಮೇಖಲಾ–ಒಡ್ಯಾಣ ೫೨ ೭
ಮೇಚಕ–ಕಡುನೀಲಿ ೯ ೮
ಮೇದಿನೀಧರ–ಪರ್ವತ ೧೬ ೨೬
ಮೇಳಿಯ–ಗುಂಪು, ಸಮೂಹ ೭ ೧೩
ಮೈವಳಿ–ಅಧೀನ, ವಶ, ಸ್ವಾಧೀನ ೪ ೩೧
ಮೈಹಸ–ಮೈವಶ, ಮೈಯಿಂದ ಹಿಡಿ ೧೩ ೩೬
ಮೊಗ್ಗರ–ದಂಡು, ಸೈನ್ಯ ೨೦ ೫೦
ಮೊದಲು–ಬಂಡವಾಳ ೫ ೫೬
ಮೋಚಿನ–ಕತ್ತರಿಸಿದ, ಬೋಳಾದ ೨೮ ೬
ಮೋಡಾಮೋಡಿ–ಚಮತ್ಕಾರವಾದ ರೀತಿಯ ಯುದ್ಧ ೩೮ ೩
ಮೋಹರದೆಗೆ–ಒಟ್ಟಾಗು, ಗುಂಪು ಕೂಡು ೬ ೧೪
ಮೋಹು–ಹೊಡೆ, ಗುರಿಯಿಡು ೭ ೧೪
ಮೌರ್ವಜ–ಮುರಜ, ಒಂದು ಬಗೆಯ ಚರ್ಮ ವಾದ್ಯ, ಮದ್ದಲೆ ೧೩ ೨೬
ಮೌರಿ–ಒಂದು ವಾದ್ಯ ವಿಶೇಷ ೧೩ ೨೬

**ಯ**

ಯಕ್ಷಕರ್ದಮ–ಕರ್ಪೂರ, ಕಸ್ತೂರಿ ಮುಂತಾದ ಸುಗಂಧದ್ರವ್ಯಗಳಿಂದ ಮಾಡಿದ ಒಂದು ಬಗೆಯ ಲೇಪನದ್ರವ್ಯ ೨೦ ೧೫
ಯಾದಸಕುಲಾಧಿಪ–(ಯಾದಸಕುಲ–ಜಲಚರ ಪ್ರಾಣಿಗಳ ಸಮೂಹ) ವರುಣ, ಸಮುದ್ರ
ಯುಗಂಧರ–ಮೂಕಿ ೬ ೪
ಯೂಥನಾಥ–ಸೈನ್ಯದ ನಾಯಕ ೯ ೨೪

**ರ**

ರಂಭಣ–ಆಲಿಂಗನ ೨೬ ೧೯
ರಂಭಾವಿಟ–ದೇವೇಂದ್ರ ೫ ೩೭
ರಕ್ಷೋಘ್ನಸೂಕ್ತ–ರಾಕ್ಷಸರ ನಾಶಕ್ಕಾಗಿ ಪಠಿಸುವ ಮಂತ್ರ ೨೦ ೨೯
ರಜನೀಚಾರಿ–ಚಂದ್ರ, ರಾಕ್ಷಸ, ಕಳ್ಳ ೯ ೩೨
ರಜನೀಮುಖ–ಕತ್ತಲೆಯ ಆರಂಭದ ಕಾಲ, ಸಂಜೆ ೧೦ ೩೨
ರಣೆ–ಯುದ್ಧಚಮತ್ಕಾರ ? ೪೯ ೧೭
ರಣಗನ್ನ–ಯುದ್ಧವಂಚನೆ ೩೪ ೧೭
ರದನಿ–ಆನೆ ೩೭ ೭
ರವಕುಳ–ಬೊಬ್ಬೆ ? ೪೯ ೧೨
ರವಳಿ–ಗದ್ದಲ, ಬೊಬ್ಬೆ ೧೯ ೪೩
ರವಿತನಯ–ಯಮ ೧೦ ೧೦
ರವುಕುಳ–ಆಧಿಕ್ಯ, ಹೆಚ್ಚಳ ೧೩ ೪೩
ರಸಪೈಕ–ರಸಪಾಕ, ವಿವಿಧ ರಸಗಳ ತಯಾರಿಕೆ ೫೫ ೩೪
ರಸಾಳ–ರಸದಾಳಿ ಕಬ್ಬು ೨೬ ೫೦
ರಹ–ಗುಟ್ಟು, ರಹಸ್ಯ ೧ ೩೦
ರಹಿ–ರೀತಿ, ಸೊಗಸು ೪೦ ೫೫
ರಿಂಗಣ–ನರ್ತಿಸು, ಕುಣಿ, ಹರಿದಾಡು ೪೨ ೧೯
ರಾಕ್ಷಸಕುಲಾಧೀಶ–ನೈರ್ಋತಿ ೫೩ ೪೩
ರಾಜರಾಜ–ಕುಬೇರ ೫೪ ೧೩
ರಾಜರಾಜಾನುಜ–ಕುಬೇರನ ತಮ್ಮ, ರಾವಣ ೪೫ ೪೭
ರಾಟಾಳ–ರಾಟೆ ೭ ೫
ರಾಯಿ–ಗುಂಡು ೧೧ ೧೪
ರಾವಣಿ–ರಾವಣನ ಮಗ, ಇಂದ್ರಜಿತು ೧೦ ೬
ರುಂಹರಿ–ಪೃಥ್ವಿ, ಭೂಮಿ ೧೦ ೪೩

